

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ನಾರದ ಮಹಾಪುರಾಣ

ಅನುವಾದ-ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತರು

–: ಪ್ರಕಾಶಕರು :–

**ಭೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 22956505, 22956573

ಫ್ಯಾಕ್ಸ್ : 0091-80-22956570

NAARADA MAHAAPURAANA of Bhagavan Sri Vedavyasa Maharshi, edited and translated in to Kannada by Rajyaprashasti, Rashtraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveshwara Nagara, Shanthi Colony, Hubli-580032 Ph : (0836) 2250250

First Edition : 1967

Second Edition : 2006

No. of Pages : xii + 672

No. of Copies : 1,000



Price : Rs. 190 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

## ಪೂರ್ವ ಪೀಠಿಕೆ

ಶ್ರೀವೇದವ್ಯಾಸರಿಂದ ರಚಿತವಾದ ಹದಿನೆಂಟು ಪುರಾಣಗಳಲ್ಲಿ ನಾರದ ಪುರಾಣ ಅಥವಾ ಬೃಹನ್ನಾರದ ಪುರಾಣವು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವೂ, ಅನೇಕ ಸಂದಿಗ್ಧ ವಿಷಯಗಳ ನಿರ್ಣಾಯಕವೂ, ಅನೇಕ ಪೌರಾಣಿಕ ಸಮಸ್ಯೆಗಳಿಗೆ ಸಮಂಜಸ ಪರಿಹಾರ ಸೂಚಕವೂ ಆಗಿದೆ. ವೇದವ್ಯಾಸರ ಹದಿನೆಂಟು ಪುರಾಣಗಳ ಅಧಿಕೃತ ವಿಷಯ ಸೂಚಿಕೆ ಅಧ್ಯಾಯ ಸಂಖ್ಯೆ ಹಾಗೂ ಪದ್ಯ ಸಂಖ್ಯೆಗಳ ಯಥಾವತ್ತಾದ ನಿರೂಪಣೆಯೂ ಈ ನಾರದ ಪುರಾಣದಲ್ಲಿ ದೊರಕುತ್ತದೆ. ಆದುದರಿಂದ ಯಾವ ಪುರಾಣ ಎಷ್ಟು ಪ್ರಮಾಣ ಪರಿಮಿತಿಯುಳ್ಳದೆಂಬುದನ್ನು ಖಚಿತವಾಗಿ ತಿಳಿಯಲು ಇದರಿಂದ ಶಕ್ಯವಾಗುವುದು. ನಾರದ ಪುರಾಣವು ಇಪ್ಪತ್ತೈದು ಸಾವಿರ ಪದ್ಯ ಸಂಖ್ಯೆಯುಳ್ಳದ್ದೆಂದು ಮತ್ಸ್ಯಪುರಾಣ ದಲ್ಲಿಯೂ ನಾರದ ಪುರಾಣದಲ್ಲಿಯೂ ಕೆಳಗಿನ

**"ಶೃಣಂ ವಿಪ್ರ ಪ್ರವಕ್ಷ್ಯಾಮಿ ಪುರಾಣಂ ನಾರದೀಯಕಂ**
**ಪಂಚವಿಂಶತಿ ಸಾಹಸ್ರಂ ಬೃಹತ್ಕಲ್ಪಕಥಾಶ್ರಯಮ್ ॥**
**ಯತ್ರಾಹ ನಾರದೋ ಧರ್ಮಾನ್ ಬೃಹತ್ಕಲ್ಪಸಮಾಶ್ರಯಾನ್**
**ನಾರದ ಪು. ೯೭**

**ಪಂಚವಿಂಶತ್ಸಹಸ್ರಾಣಿ ನಾರದೀಯಂ ತದುಚ್ಯತೇ**
**ಮತ್ಸ್ಯ ಪು. ೫೩/೨೩**

ಈ ಪದ್ಯಗಳಿಂದ ತಿಳಿಸಿದ್ದಾರೆ.

ಆದರೆ ಈಗ ದೊರಕಿರುವ ನಾರದ ಪುರಾಣದ ಯಾವ ಮುದ್ರಿತ ಪ್ರತಿಗಳಲ್ಲಿಯೂ ಇಪ್ಪತ್ತೈದುಸಾವಿರ ಪದ್ಯಗಳಿಲ್ಲ. ಈಗ ಉಪಲಬ್ಧವಿದ್ದ ನಾರದ ಪುರಾಣದಲ್ಲಿ ಪೂರ್ವಭಾಗ, ಉತ್ತರಭಾಗ ಎಂಬ ಎರಡು ಭಾಗಗಳಿದ್ದು, ಪೂರ್ವ ಭಾಗದಲ್ಲಿ ೧೨೮೦೯ ಪದ್ಯಗಳೂ ಉತ್ತರ ಭಾಗದಲ್ಲಿ ೫೪೧೧ ಪದ್ಯಗಳೂ ಒಟ್ಟು ಸೇರಿ ೧೮೨೨೦ ಪದ್ಯಗಳು ಕಂಡುಬರುತ್ತವೆ.

ಪೂರ್ವಾರ್ಧದಲ್ಲಿ ನಾಲ್ಕು ಪಾದಗಳಿದ್ದು ಒಂದುನೂರಇಪ್ಪತ್ತೈದು ಅಧ್ಯಾಯಗಳಿವೆ. ಪ್ರಥಮಪಾದದಲ್ಲಿ ನಾರದರ ಪ್ರಶ್ನೆ ಸನಕಮುನಿಯ ಉತ್ತರ. ದ್ವಿತೀಯಪಾದದಲ್ಲಿ ನಾರದರ ಪ್ರಶ್ನೆ ಸನಂದನರ ಉತ್ತರ, ತೃತೀಯ ಪಾದದಲ್ಲಿ ನಾರದರ ಪ್ರಶ್ನೆ ಸನತ್ಕುಮಾರರ ಉತ್ತರ, ನಾಲ್ಕನೆಯ ಪಾದದಲ್ಲಿ ನಾರದ ಪ್ರಶ್ನೆ ಸನಾತನರ ಉತ್ತರ. ಹೀಗೆ ಬ್ರಹ್ಮ ದೇವರ ಆದಿ ಮಾನಸಪುತ್ರರಾದ ಸನಕ, ಸನಂದನ, ಸನತ್ಕುಮಾರ ಮತ್ತು ಸನಾತನ ಎಂಬ ನಾಲ್ಕು ನೈಷ್ಠಿಕ ಬ್ರಹ್ಮಚಾರಿಗಳಾದ ಬ್ರಹ್ಮಜ್ಞಾನಿ ಯತಿವರೇಣ್ಯರು ನಾರದರಿಗೆ ಉಪದೇಶಿಸಿದ, ತತ್ವ ಸಿದ್ಧಾಂತ ಕಥಾ, ಪ್ರಮೇಯ, ಅಖ್ಯಾನೋಪಾಖ್ಯಾನ, ಶಾಸ್ತ್ರ, ಸಿದ್ಧಾಂತಗಳೇ ನಾರದಪುರಾಣ ಆದರೆ ಇದರ ಉತ್ತರಾರ್ಧದಲ್ಲಿ ಮಾತ್ರ ಎಂಭತ್ತೈದು ಅಧ್ಯಾಯಗಳಿದ್ದು ನಾರದರ ವಿಷಯ-ಪ್ರಸ್ತಾಪನೆಯೇ ಇರುವುದಿಲ್ಲ. ಈ ಉತ್ತರಾರ್ಧವೆಲ್ಲವು ಮಾಂಧಾತೃ ಮಹಾರಾಜ ಹಾಗೂ ವಸಿಷ್ಠ ಮಹಾಮುನಿಗಳ ನಡುವಿನ ಸಂಭಾಷಣಾರೂಪವಾಗಿದೆ.

ಪಾಶ್ಚಾತ್ಯದೇಶದ ಮಹಾಸಂಸ್ಕೃತ ಸಂಶೋಧಕರೂ ಇತಿಹಾಸಜ್ಞರೂ ಪಂಡಿತರೂ ಗ್ರಂಥಲೇಖಕರೂ ಎನಿಸಿದ ಡಾ॥ ಎಚ್.ಎಚ್. ವಿಲ್ಸನ್ ಮುಂತಾದ ವಿಮರ್ಶಕರು ನಾರದ

ಪುರಾಣವು ಕೇವಲ ಮೂರು ಸಾವಿರ ಶ್ಲೋಕಗಳಿದ್ದು ಗಾತ್ರದಲ್ಲಿ ಇದೊಂದು ಚಿಕ್ಕ ಪುರಾಣ. ಇದು ಮಹಾಪುರಾಣ ಅಲ್ಲವೇಅಲ್ಲ ಎಂದು ನಿರ್ಣಯಿಸಿದ್ದಾರೆ. ಮತ್ತು ಇದು ಅತಿ ಇತ್ತೀಚಿನದ್ದು ಎಂದರೆ ಕ್ರಿಸ್ತಶಕ ಹದಿನಾರು ಅಥವಾ ಹದಿನೇಳನೆಯ ಶತಮಾನದಲ್ಲಿ ಹುಟ್ಟಿಕೊಂಡದ್ದು ಎಂದು ಅಭಿಪ್ರಾಯಪಡುತ್ತಾರೆ. ಆದರೆ ಕ್ರಿಸ್ತಶಕದ ಹನ್ನೊಂದನೆಯ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ **'ಅಲ್ಬೇರುಣಿ'** ಎಂಬ ಯವನಯಾತ್ರಿಕನು ತನ್ನ ಗ್ರಂಥದಲ್ಲಿ ನಾರದಪುರಾಣದ ಬಗೆಗೆ ಉಲ್ಲೇಖ ಮಾಡಿದ್ದಾರೆ. ಮತ್ತು ಅನೇಕ ಪ್ರಾಚೀನ ಧರ್ಮಶಾಸ್ತ್ರ ಗ್ರಂಥಕಾರರು ತಮ್ಮ ನಿಬಂಧನಾಗ್ರಂಥಗಳಲ್ಲಿ ನಾರದಪುರಾಣದ ಪದ್ಯಗಳನ್ನು ಪ್ರಮಾಣ ಭೂತವಾಗಿ ಉದಾಹರಿಸಿದ್ದು ಕಂಡುಬರುತ್ತದೆ.

ಗೋಪಾಲಭಟ್ಟನು ತನ್ನ **'ಹರಿಭಕ್ತಿವಿಲಾಸದಲ್ಲಿಯೂ'**, ಗೋವಿಂದಾನಂದನು **'ಶುದ್ಧಿಕ್ರಿಯಾಕೌಮುದಿ' ಶ್ರಾದ್ಧಕ್ರಿಯಾಕೌಮುದಿ 'ವರ್ಷಕ್ರಿಯಾಕೌಮುದಿ'** ಎಂಬ ಗ್ರಂಥಗಳಲ್ಲಿಯೂ, ರಘುನಂದನಭಟ್ಟನು **'ಸ್ಮೃತಿತತ್ವ'**ದಲ್ಲಿಯೂ, ಶೂಲಪಾಣಿಯು **'ವ್ರತಕಲಾವಿವೇಕ'**ದಲ್ಲಿಯೂ, ಗಧಾಧರನು **'ಕಲಾಸಾರ'**ದಲ್ಲಿಯೂ, ವಾಚಸ್ಪತಿಮಿಶ್ರನು **'ತೀರ್ಥಚಿಂತಾಮಣಿಯಲ್ಲಿಯೂ'** ಮದನಪಾಲನು ತನ್ನ **'ಮದನಪಾರಿಜಾತ'**ದಲ್ಲಿಯೂ, ಮಾಧವಾಚಾರ್ಯರು **'ಪರಾಶರಸ್ಮೃತಿವ್ಯಾಖ್ಯಾನ'**ದಲ್ಲಿಯೂ, ಹೇಮಾದ್ರಿಯು **'ಚತುವರ್ಗ ಚಿಂತಾಮಣಿಯಲ್ಲಿಯೂ'** ದೇವಣಭಟ್ಟನು **ಸ್ಮೃತಿಚಂದ್ರಿಕೆಯಲ್ಲಿಯೂ** ನಾರದ ಪುರಾಣದ ಪದ್ಯಗಳನ್ನು ಹೇರಳವಾಗಿ ಉದಾಹರಿಸಿರುವುದರಿಂದ ಡಾ॥ ವಿಲ್ಸನ್ನರು ಹೇಳಿದಂತೆ ನಾರದ ಪುರಾಣದ ಕಾಲವನ್ನು ಕ್ರಿಸ್ತಾಬ್ದದ ಹದಿನಾರು-ಹದಿನೇಳನೆಯ ಶತಮಾನದವರೆಗೆ ಎಳೆದುತರುವುದು ಪ್ರಮಾಣವಿರುದ್ಧವೆನಿಸುವುದು.

ಪ್ರಾಯಶಃ ವಿಲ್ಸನ್ನರ ಅಭಿಪ್ರಾಯಕ್ಕೆ ಅವರ ಕಣ್ಣಿಗೆ ಪೂರ್ವ ನಾರದ ಪುರಾಣವು ಬೀಳದೇಇದ್ದುದೇ ಕಾರಣವಿರಬೇಕು. ಮುರಾದಾಬಾದದಲ್ಲಿ ೬-೩-೧೯೪೭ನೇ ಇಸ್ವಿಯಲ್ಲಿ ಋಷಿಕುಮಾರ ರಾಮಚಂದ್ರಶರ್ಮರಿಂದ ನಾರದ ಪುರಾಣದ ೪೨ ಅಧ್ಯಾಯಗಳು ಮಾತ್ರ ಮುದ್ರಿತವಾಗಿವೆ. ಅದನ್ನುನೋಡಿ ಅದೇ ನಾರದಪುರಾಣ ಎಂದು ಅವರು ಭ್ರಮಿಸಿರುವರೋ ಏನೋ! ಮತ್ತು ಕಲ್ಕತ್ತದ ವಂಗವಾಸಿ ಪ್ರೆಸ್ಸಿನ ಆವೃತ್ತಿಯಲ್ಲಿಯೂ ಏಷಿಯಾಟಿಕ್ ಸೋಸಾಯಿಟಿ ಆಫ್ ಬೆಂಗಾಲದ ಸಂಸ್ಕರಣದ ನಾರದ ಪುರಾಣದಲ್ಲಿಯೂ ಮೂವತ್ತೆಂಟು ಅಧ್ಯಾಯ ಹಾಗೂ ಮೂರುಸಾವಿರ ಪದ್ಯಗಳು ಮಾತ್ರ ಇದ್ದುದು ಅವರ ಹೇಳಿಕೆಗೆ ಕಾರಣ ಇರಬಹುದು. ಆದರೆ ಮುಂಬೈಯ ವೆಂಕಟೇಶ್ವರ ಮುದ್ರಣಾಲಯದ ಪ್ರತಿ ಹಾಗೂ ಕಲ್ಕತ್ತದ ಮನಸುಖರಾವಮೋರರ ಪ್ರತಿಯಲ್ಲಯೂ ಅಧ್ಯಾಯ ಪಾದಗಳು ನಾರದ ಮತ್ಸ್ಯಾದಿ ಪುರಾಣಗಳಲ್ಲಿ ಹೇಳಿದ ನಾರದ ಪುರಾಣದ ಪ್ರಮಾಣಕ್ಕೆ ಅನುಗುಣವಾಗಿಯೇ ಇರುತ್ತವೆ. ಆದುದರಿಂದ ಈಗ ಮುದ್ರಿತವಾದ ಮುಂಬೈ ಕಲ್ಕತ್ತದ ನಾರದ ಪುರಾಣದ ಆವೃತ್ತಿಗಳು ಅಧಿಕೃತ ಎಂದೂ ಉಳಿದ ಹದಿನೆಂಟು ಪುರಾಣಗಳಷ್ಟೇ ಸಹಸ್ರಾರು ವರ್ಷ ಪ್ರಾಚೀನವೆಂದೂ ನಿರ್ಣಯವಾಗಿದೆ.

ನಾರದಪುರಾಣ, ಬೃಹನ್ನಾರದಪುರಾಣ ಎಂದು ಎರಡು ಬೇರೆ ಬೇರೆ ಪುರಾಣಗಳಿರುವುದೆಂದು ಕೆಲವರು ಸಂದೇಹಿಸುವರು, ಆದರೆ ಹೆಸರು ಎರಡಾದರೂ ಅವೆರಡೂ ಒಂದೇ ಪುರಾಣವಾಗಿವೆ. ಕಲ್ಕತ್ತಾದಲ್ಲಿ ಮುದ್ರಿತವಾದ ಬೃಹನ್ನಾರದೀಯ

ಪುರಾಣವು, ಪ್ರಸಿದ್ಧ ನಾರದ ಪುರಾಣದ ಪೂರ್ವಭಾಗದ ಪ್ರಥಮ ಪಾದವೇ ಆಗಿದೆ. ಪ್ರಥಮ ಪಾದದ ಪ್ರತಿಯೊಂದು ಅಧ್ಯಾಯದ ಕೊನೆಗೆ "ಇತಿ ಶ್ರೀ ಬೃಹನ್ನಾರದೀಯ ಪುರಾಣೇ'ಎಂದು ಬರೆಯಲಾಗಿದೆ. ಆದರೆ ಅದರಲ್ಲಿ ನಾರದರು ಸನಕಾದಿ ಮುನಿಗಳಿಗೆ ಉಪದೇಶಿಸುತ್ತಾರೆ. ಪ್ರಕೃತ ನಾರದ ಪುರಾಣದಲ್ಲಿ ಸನಕಾದಿಮುನಿಗಳು ನಾರದರಿಗೆ ಉಪದೇಶಿಸುತ್ತಾರೆ. ಇಷ್ಟು ಮಾತ್ರ ವ್ಯತ್ಯಾಸವಿದೆ ಎಂದು ಪಂಡಿತರಾದ ವೈದ್ಯವಾಚಸ್ಪತಿ ಶ್ರೀ ದೊಡ್ಡಬಳ್ಳಾಪುರ ವಾಸುದೇವಾಚಾರ್ಯರು ತಾವು ರೂಪಾಂತರಿಸಿದ ನಾರದ ಪುರಾಣ ಪೀಠಿಕೆಯಲ್ಲಿ ಹೇಳಿದ್ದಾರೆ. ನಾರದ ಪುರಾಣವನ್ನು ನಮ್ಮ ಸಿದ್ಧಾಂತಕ್ಕೆ ಬಾಧಕಬಾರದಂತೆ ಭಾಷಾಂತರಿಸುವಲ್ಲಿ ಅವರು ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ. ಚತುಶ್ಶಾಸ್ತ್ರ ವಿದ್ವಾಂಸರೂ ಪಂಡಿತ ಕುಲದ ಚಕ್ರವರ್ತಿಗಳೂ ಆದ ವೈದವಾಚಸ್ಪತಿ ಶ್ರೀ ವಾಸುದೇವಾಚಾರ್ಯರನ್ನು ನಾವು ಈ ಅನುವಾದದಲ್ಲಿ ಹೆಜ್ಜೆಹೆಜ್ಜೆಗೂ ನೆನೆಯುತ್ತೇವೆ. ಅವರ ಮಾರ್ಗದರ್ಶನ ದಲ್ಲಿಯೇ ಮುಂದುವರಿದಿದ್ದೇವೆ.

ಇದರಂತೆ ಇತ್ತೀಚೆಗೆ ಕಾಶಿಯ ಕಾಶಿರಾಜಪುರಾಣ ಟ್ರಸ್ಟಿನ ಮುಖಪತ್ರವಾದ **'ಪುರಾಣಂ'** ಎಂಬ ಷಾಣ್ಮಾಸಿಕ ಪತ್ರಿಕೆಯಲ್ಲಿ ಬನಾರಸದ ಕೈ.ವಾ. ಅನಂತಶಾಸ್ತ್ರಿ ಫಡಕೆ ಎಂಬ ವಿದ್ವಾಂಸರು ನಾರದ ಪುರಾಣದ ಮೇಲೆಯೇ ಕಾಶೀಕ್ಷೇತ್ರದಲ್ಲಿ ನಡೆದ ಒಂದು ವಿದ್ವದ್ವಿಚಾರಸಂಕೀರಣದಲ್ಲಿ ನಿರ್ಣೀತವಾದ ನಾರದ ಪುರಾಣದ ವಿಷಯವನ್ನು ತಿಳಿಸುತ್ತಾ ನಾರದ ಮತ್ತು ಬೃಹನ್ನಾರದ ಎರಡೂ ಪುರಾಣಗಳಲ್ಲಿ ಹಲಕೆಲವು ಪದ್ಯಮಾತ್ರ ವ್ಯತ್ಯಾಸವಿದ್ದು ಹೆಚ್ಚಿನ ಅಂತರವಿಲ್ಲವೆಂದೂ ತಿಳಿಸಿದ್ದಾರೆ. ಆರ್.ಸಿ. ಹಜರಾರವರು ಬೃಹನ್ನಾರದ ಪುರಾಣವೆಲ್ಲವೂ ನಾರದ ಪುರಾಣದ ಪೂರ್ವಭಾಗದ ಪ್ರಥಮ ಪಾದವೇ ಆಗಿದೆ ಎಂದು ಹೇಳಿ ಮುಂದೆ ಈ ಬೃಹನ್ನಾರದವನ್ನೇ ಬೆಳಸಿ ನಾರದ ಪುರಾಣವನ್ನಾಗಿ ಆಧುನಿಕರು ಮಾಡಿದ್ದಾರೆಂದು ಪ್ರತಿಪಾದಿಸಿದ್ದಾರೆ. ಮತ್ತು ಈ ಎರಡೂ ನಾರದ ಪುರಾಣದ ಭಾಗಗಳು ಕ್ರಿಸ್ತಶಕದ ೯ನೇ ಶತಮಾನದಿಂದ ೧೬ನೇ ಶತಮಾನದ ಅವಧಿಯಲ್ಲಿ ನಿರ್ಮಿತವಾಗಿವೆಯೆಂದು ನಿರ್ಧರಿಸಿದ್ದಾರೆ.

ಆದರೆ ಅನೇಕ ನಿಬಂಧಕಾರರ ಉದಾಹರಣೆ ಹಾಗೂ ಮತ್ಸ್ಯಪುರಾಣ, ಅಗ್ನಿಪುರಾಣ, ಸ್ಕಂದಪುರಾಣ ಮುಂತಾದ ಅನೇಕ ಪ್ರಾಚೀನ ಪುರಾಣಗಳಲ್ಲಿ ಇದರ ಉಲ್ಲೇಖ ಮತ್ತು ವಾಚಸ್ಪತಿಮಿಶ್ರ, ಶ್ರೀಮನ್ಮಧ್ವಾಚಾರ್ಯರು ಮುಂತಾದ ಪ್ರಾಚೀನ ಆಚಾರ್ಯರ ಗ್ರಂಥಗಳಲ್ಲಿ ನಾರದ ಪುರಾಣದಲ್ಲಿಯ ವಚನಗಳ ಉದಾಹರಣೆ ಮುಂತಾದವುಗಳಿಂದ ಈ ಪುರಾಣವೂ ದ್ವಾಪರಾಂತಿಮ ಭಾಗದಲ್ಲಿಯೇ ಶ್ರೀಭಗವಾನ್‌ಬಾದರಾಯಣರಿಂದ ರಚಿತವಾಗಿದೆ ಎಂದು ತಿಳಿಯಬಹುದಾಗಿದೆ. ಉಳಿದ ಪುರಾಣಗಳಂತೆ ಈ ಪುರಾಣ ದಲ್ಲಿಯೂ ಕ್ರಿಸ್ತಪೂರ್ವ ಮೂರನೆ ಶತಕದಿಂದ ಕ್ರಿಸ್ತೋತ್ತರ ಹನ್ನೆರಡು ಹದಿಮೂರನೆಯ ಶತಕದವರೆಗೂ ಆವಾಪ ಉದ್ವಾಪ ಪ್ರಕ್ಷೇಪ ನಿಕ್ಷೇಪಗಳು ನಡೆದಿರಲಿಕ್ಕೆ ಸಾಕು.

ಈ ಬೃಹನ್ನಾರದೀಯ ಪುರಾಣವು ಭಾರತೀಯ ಸಾಹಿತ್ಯ, ಸಂಸ್ಕೃತಿ, ಧರ್ಮ, ಆಚಾರ, ವಿಚಾರ ವ್ಯವಹಾರಗಳ ಒಂದು ವಿಶ್ವಕೋಶದಂತಿದೆ. ಇದರಲ್ಲಿ ಧರ್ಮಶಾಸ್ತ್ರ, ಸಾಹಿತ್ಯ, ಇತಿಹಾಸ, ಮಂತ್ರಗಳಲ್ಲದೇ ಶಿಕ್ಷಾಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ ಮುಂತಾದ ವೇದಾಂಗಗಳ ಸಾಂಗೋಪಾಂಗ ವಿವೇಚನೆಬಂದಿದೆ, ಈಗ ಮುದ್ರಿತ

ಪುಸ್ತಕಗಳಲ್ಲದೆ ನಮಗೆ ನಾಲ್ಕು ದಾಕ್ಷಿಣಾತ್ಯ ಪಾಠಗಳು ಪೋಥಿರೂಪದಲ್ಲಿ ದೊರೆತದ್ದರಿಂದ ಸರಿಯಾದ ಮೂಲ ಪ್ರತಿಯ ಸಂಶೋಧನೆಯ ಕಾರ್ಯಕ್ಕೆ ಸಹಾಯವಾಯಿತು. ಮದ್ರಾಸಿನ ವೇದವಾಚಸ್ಪತಿ ಕೈವಾರುನಾರಾಯಣರಾವ್, ಚತುರ್ವೇದಿ ನಾರಾಯಣಾಚಾರ್ಯ ಪಂಡಿತ್, ಕೇಶವಾಚಾರ್ಯ ಕುಂದರಗಿ, ಪಂಡಿತ್ ಶ್ರೀಸುಬ್ರಹ್ಮಣ್ಯಾಚಾರ್ಯ ಕುಂಪಣಪುರ ಈ ನಾಲ್ಕೂ ಮಹನೀಯರು ತಮ್ಮಲ್ಲಿರುವ ನಾರದಪುರಾಣದ ಹಸ್ತಪ್ರತಿಗಳನ್ನು ಪೂರ್ವದಲ್ಲಿಯೇ ಕೊಟ್ಟು ಉಪಕರಿಸಿದ್ದಾರೆ.

ಈ ನಾಲ್ಕು ಹಸ್ತಪ್ರತಿಗಳೊಂದಿಗೆ ಈಗಾಗಲೇ ಮುದ್ರಿತವಾದ ಎಲ್ಲಾ ನಾರದ ಹಾಗೂ ಬೃಹನ್ನಾರದ ಪುರಾಣಗಳ ಪ್ರತಿಗಳನ್ನಿಟ್ಟುಕೊಂಡು ಪಂಡಿತತರ್ಕಚೂಡಾಮಣಿ ಧ್ರುವಾಚಾರ್ಯ ಗಲಗಲಿ, ಗ. ಸು. ನಾರಾಯಣಾಚಾರ್ಯ, ಮು. ಗಃ ಬಾಬಾಚಾರ್ಯ, ಗ. ಮು. ಶುಕಾಚಾರ್ಯ, ಮಳಗಿ ವಸಂತಾಚಾರ್ಯ, ಜಿ.ಕೆ. ಗುರಾಚಾರ್ಯ, ಎಮ್.ಕೆ. ಆಚಾರ್ಯ ಇವರೆಲ್ಲರ ಸಹಾಯದಿಂದ ಪರಿಶೋಧನೆಗೈದು ಮೂಲ ಪ್ರತಿಯನ್ನು ಸಿದ್ಧಪಡಿಸಿ ಭಾಷಾಂತರ ಕಾರ್ಯವನ್ನೂ ಪೂರೈಸಲಾಯಿತು. ದೀರ್ಘಪರಿಶ್ರಮದಿಂದ ಅತ್ಯಂತ ಹಳತಾದ ತಾಡವಾಲೆ ಗ್ರಂಥಗಳ ಪಾಠಾಂತರ-ರೂಪಾಂತರಗಳನ್ನು ಪರೀಕ್ಷಿಸಿ ಕ್ಲಿಷ್ಟಪದ್ಯಗಳನ್ನೆಲ್ಲ ಸರಿಯಾಗಿ ಕೋಶಪುರಾಣಾಂತರ ಸಂದರ್ಭಗಳಿಂದ ಅರ್ಥೈಸಿ ಅನುವಾದ ಕಾರ್ಯವನ್ನು ಪೂರ್ಣಮಾಡಿಕೊಡುವ ಹೊಣೆಗಾರಿಕೆಹೊತ್ತ ಈ ಎಲ್ಲ ವಿದ್ವನ್ಮಂಡಳಿಗೆ ನಾನೆಷ್ಟು ಕೃತಜ್ಞತೆಗಳನ್ನು ಅರ್ಪಿಸಿದರೂ ಸಾಲದು.

''ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂ ಹರೇ'' ॥

ಶ್ರೀಹರಿಯ ಮಹಿಮೆ ಹಾಗೂ ಪಾರಮ್ಯವನ್ನು ಹೇಳುವುದೇ ಸಾತ್ವಿಕ ಪುರಾಣಗಳ ಲಕ್ಷಣವಾಗಿದೆ. ಈ ದೃಷ್ಟಿಯಿಂದ ಮೊದಲಿನಿಂದ ಕೊನೆಯವರೆಗೂ ವಿಷ್ಣುವಿನ ಮಹಿಮೆ ಭಗವದ್ಭಕ್ತರ ಮಹಿಮೆ, ವಿಷ್ಣುವನ್ನು ಉದ್ದೇಶಿಸಿ ಮಾಡಬೇಕಾದ ಏಕಾದಶಿಯೇ ಮೊದಲಾದ ವ್ರತ, ಉಪವಾಸ, ದೇವಪೂಜಾ ಪದ್ಧತಿ ಹಾಗೂ ಶಾಸ್ತ್ರೋಕ್ತವಾದ ಶ್ರೀಹರಿಯ ಪೂಜಾ ಪದ್ಧತಿ ಮತ್ತು ತೀರ್ಥಕ್ಷೇತ್ರ, ಯಾತ್ರಾವಿವರಣಾದಿಗಳನ್ನು ಮೊದಲಿನಿಂದ ಕೊನೆಯವರೆಗೂ ಇದರಲ್ಲಿ ನಿರೂಪಿಸಿರುವುದರಿಂದ ಭಾಗವತ ವಿಷ್ಣುಪುರಾಣಾದಿಗಳಂತೆ ಈ ನಾರದಮಹಾಪುರಾಣವೂ ಅಪ್ಪಟ ಸಾತ್ವಿಕ ಪುರಾಣವೆನಿಸಿದೆ.

ಕಾಶಿ, ಗೋಕರ್ಣ ಮುಂತಾದ ಅನೇಕ ಕ್ಷೇತ್ರಗಳ ವರ್ಣನೆ ಇಲ್ಲಿ ಉದ್ಬೋಧಕವಾಗಿ ಬಂದಿದೆ. ಮತ್ತು ಇದರಲ್ಲಿ ಬಂದ ವೇದಪಾದ ಶಿವಸ್ತೋತ್ರವು ಭಕ್ತರಿಗೆ ಅತ್ಯಂತ ಮನನೀಯವೂ ಮಾನನೀಯವೂ ಆಗಿದೆ.

ಜ್ಞಾನಾನಂದರೂಪಿಯಾದ ಶ್ರೀಹರಿಯ ಧ್ಯಾನೋಪಾಸನೆಯೇ (ಭಕ್ತಿಯುಕ್ತಿ) ಮೋಕ್ಷಕ್ಕೆ ಮುಖ್ಯ ಸಾಧನ ಎಂದು ಹಲವಾರು ಬಗೆಯಿಂದ ಹೇಳಿದ ಈ ಪುರಾಣದಲ್ಲಿ ಭಕ್ತಿಯ ಜೊತೆಗೆ ಸದಾಚಾರವೂ ಅಷ್ಟೇ ಅತ್ಯಾವಶ್ಯಕ ಎಂಬುದನ್ನು ಒತ್ತಿ ಹೇಳಲಾಗಿದೆ.

ಹರಿಭಕ್ತಿ ಪರೋವಾಪಿ ಹರಿಧ್ಯಾನ ರತೋಪಿವಾ ।
ಭ್ರಷ್ಟೋಯಃ ಸ್ವಂಶ್ರಮಾಚಾರಾತ್ ಪತಿತಃಸೋ-ಭಿಧೀಯತೇ ॥

ತನಗೆ ಹೇಳಿದ ವರ್ಣ ಹಾಗೂ ಆಶ್ರಮಗಳಿಗೆ ವಿಹಿತವಾದ ಆಚಾರ ಕರ್ಮಾಚಾರ ಗಳನ್ನು ಮಾಡದ ಮನುಷ್ಯನು ಹರಿಯ ಧ್ಯಾನ ಭಕ್ತಿ ಮಾಡಿದರೂ ಅವನು ಪತಿತನೇ ಸರಿ.

**ವೇದೋವಾ ಹರಿಭಕ್ತಿರ್ವಾ ಭಕ್ತಿರ್ವಾಪಿ ಮಹೇಶ್ವರೇ**
**ಆಚಾರಾತ್ ಪತಿತಂ ಮೂಢಂ ನ ಪುನಾತಿ ದ್ವಿಜೋತ್ತಮ ॥**

ಸದಾಚಾರ ಮತ್ತು ತನಗೆ ವಿಹಿತವಾದ ಸತ್ಕರ್ಮಾನುಗಳನ್ನು ಮಾಡದಿರುವ ಆಚಾರಭ್ರಷ್ಟನನ್ನು ವೇದವಾಗಲಿ ಹರಭಕ್ತಿಗಳಾಗಲಿ ಉದ್ಧರಿಸಲಾರವು.

ಎಂದು ಸ್ಪಷ್ಟವಾಗಿಯೇ ಪುರಾಣಗಳಲ್ಲಿ ಹೇಳಲಾಗಿದೆ.

ಹೀಗೆ ಸದಾಚಾರದ ಮೂಲಕ ಜನರಲ್ಲಿ ನೀತಿ, ನ್ಯಾಯ, ಸತ್ಯನಿಷ್ಠೆ, ಧರ್ಮಶ್ರದ್ಧೆ ಪರೋಪಕಾರ ಮುಂತಾದ ಸದ್ಗುಣಗಳು ಬೆಳೆದುಬಂದು ಆದರ್ಶ ಜನಾಂಗ ನಿರ್ಮಾಣವಾಗಬೇಕೆಂಬುದೇ ಈ ಪುರಾಣದ ಗುರಿಯಾಗಿದೆ. ಅದಕ್ಕಾಗಿ ಧರ್ಮಶಾಸ್ತ್ರ, ನೀತಿಶಾಸ್ತ್ರ, ಸಮಾಜಶಾಸ್ತ್ರ, ವೇದಾಂತಶಾಸ್ತ್ರದ ಅನೇಕ ವಿಷಯಗಳನ್ನು ಅನುಷಂಗಿಕ ವಾಗಿಯೂ ಪ್ರಧಾನವಾಗಿಯೂ ಅಲ್ಲಲ್ಲಿ ನಿರೂಪಿಸುವ ಈ ಪುರಾಣದಲ್ಲಿ ಜನಜೀವನದಲ್ಲಿ ನಿತ್ಯ ನೈಮಿತ್ತಿಕ ಕಾರ್ಯಕಲಾಪಗಳಿಗೆ ಅತ್ಯುಪಯುಕ್ತವಾದ ಫಲಜೋತಿಷ್ಯ, ಗಣಿತ ಜೋತಿಷ್ಯ, ಜಾತಕ, ವ್ಯಾಕರಣ, ವೈದ್ಯಕ ನಿರುಕ್ತ ಛಂದಸ್ಸು, ಲೋಕವ್ಯವಹಾರ ಮುಂತಾದ ಅನೇಕಾನೇಕ ವಿಷಯಗಳನ್ನು ವಿವರವಾಗಿ ವರ್ಣಿಸಲಾಗಿದೆ ಮತ್ತು ಹದಿನೆಂಟು ಪುರಾಣಗಳ ವಿಷಯ ವ್ಯಾಪ್ತಿ ವಿಸ್ತಾರ ಮುಂತಾದವುಗಳನ್ನು ಅಧಿಕೃತವಾಗಿ ವಿವರಿಸಲಾಗಿದೆ.

ಈ ಎಲ್ಲ ದೃಷ್ಟಿಯಿಂದ ಈ ನಾರದ ಮಹಾಪುರಾಣವು ಒಂದು ಭಾರತೀಯ ಸಾಹಿತ್ಯ ಸಂಸ್ಕೃತಿಗಳ ವಿಶ್ವಕೋಶದಂತಿದೆ. ಇದರ ಕಾಲ, ದೇಶ, ವಿಷಯ, ಶೈಲಿ, ವ್ಯಾಪ್ತಿ, ಪ್ರಮಾಣ, ಪರಿಮಾಣ, ಪರಿಣಾಮ, ಮೇಲ್ಮೆ, ಬಗ್ಗೆ ನಾವು ನಾರದ ಮಹಾಪುರಾಣದ ಪ್ರಥಮ ಸಂಪುಟ ದಲ್ಲಿ ಸಾಂಗೋಪಾಂಗ ವಿವೇಚನೆ ಮಾಡಿರುವುದರಿಂದ ಇಲ್ಲಿ ಹೆಚ್ಚಿಗೆ ಬರೆಯುವುದಿಲ್ಲ.

ನಮ್ಮ ಈ ಎಲ್ಲಾ ಪುರಾಣ ಸಂಶೋಧನೆಗೆ ಪ್ರೇರಕ ಶಕ್ತಿ ಶ್ರೀ ೧೦೮ ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರು, ಹೆಜ್ಜೆ ಹೆಜ್ಜೆಗೂ ಮಾರ್ಗದರ್ಶನ ಮಾಡಿ ಜ್ಞಾನಕಾರ್ಯ ನೆರವೇರುವಂತೆ ಮಾಡುತ್ತಿರುವ ಸದ್ಗುರುವಿನ ಅಡಿದಾವರೆಗಳಿಗೆ ಭಕ್ತಿಯಿಂದ ನಮಿಸುತ್ತೇನೆ.

ಮಹಾಮಹೋಪಾಧ್ಯಾಯ
27 – 8 – 2006 **ಪಂಢರೀನಾಥಾಚಾರ್ಯ ಗಲಗಲಿ**
ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032**

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಶ್ರೀ ವೇದವ್ಯಾಸಮಹರ್ಷಿಗಳಿಂದ ರಚಿತವಾದ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ನಾರದಮಹಾಪುರಾಣ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-4 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಮೊಬೈಲ್ : 9342889827 ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಚಿತ್ರಿಸಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ
27 – 8 – 2006 **ಪಂಢರೀನಾಥಾಚಾರ್ಯ ಗಲಗಲಿ**
ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032**

# ನಾರದ ಮಹಾಪುರಾಣ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

## ನಾರದ ಮಹಾಪುರಾಣದಲ್ಲಿ ತೃತೀಯ ಪಾದ



## ನಾರದ ಮಹಾಪುರಾಣದಲ್ಲಿ ನಾಲ್ಕನೆಯ ಪಾದ

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟ ವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚು ಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆದ ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ಧಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾತಃಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿ ಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

**ಎಲ್. ಶ್ರೀಹರಿ ಖೋಡೆ**
ಪ್ರಕಾಶಕರು, ಖೋಡೆ ಫೌಂಡೇಶನ್,
ಗ್ರಂಥಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ,
ಶೇಷಾದ್ರಿ ರಸ್ತೆ, ಗಾಂಧಿನಗರ,
ಬೆಂಗಳೂರು-560 009

# ನಾರದ ಮಹಾಪುರಾಣ

ಮಹರ್ಷಿಗಳು ಸಭೆಯಲ್ಲಿ ಶೌನಕರ ಪ್ರಶ್ನೆ ನಂತರ ಉತ್ತರ

## ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥**

ಸಕಲ ಸದ್ಗುಣ ಪರಿಪೂರ್ಣನೂ, ಶ್ರೀದೇವಿಗೆ ಆಶ್ರಯಸ್ಥಾನನೂ, ಸಕಲ ದೋಷ ರಹಿತನೂ, ಮಾನವರಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ನೀಡುವವನೂ, ಸಮುದ್ರಶಾಯಿಯೂ ಆದ ಶ್ರೀ ಹರಿಯನ್ನು ಮೊದಲು ನಮಸ್ಕರಿಸಬೇಕು. ಅನಂತರ ಶೇಷದೇವರನ್ನೂ ಜೀವೋತ್ತಮರಾದ ವಾಯುದೇವರನ್ನು ಭಾಗ್ಯಕ್ಕೆ ಅಧಿದೇವತೆಯಾದ ಲಕ್ಷ್ಮೀದೇವಿಯನ್ನೂ ವಿದ್ಯಾಭಿಮಾನಿಯಾದ ಸರಸ್ವತೀದೇವಿಯನ್ನೂ ನಮಸ್ಕರಿಸಬೇಕು. ಅನಂತರ ಮಹಾಭಾರತ, ಪುರಾಣಾದಿ ಗ್ರಂಥಗಳನ್ನು ಪಠಿಸಬೇಕು.

**ವಂದೇ ವೃಂದಾವನಾಸೀನಮಿಂದಿರಾನಂದಮಂದಿರಂ ।**
**ಉಪೇಂದ್ರಂ ಸಾಂದ್ರಕಾರುಣ್ಯಂ ಪರಾನಂದಂ ಪರಾತ್ಪರಂ ॥**

ವೃಂದಾವನದಲ್ಲಿ ಇರುವ ಉಪೇಂದ್ರ ಎಂಬ ಹೆಸರುಳ್ಳ ಶ್ರೀ ಕೃಷ್ಣನನ್ನು ವಂದಿಸುತ್ತೇನೆ. ಈ ಮುಕುಂದನು ಇಂದಿರಾ ದೇವಿಯ ಆನಂದದ ನೆಲೆಯಾಗಿದ್ದಾನೆ. ಅವನು ಸ್ವಯಂ ಆನಂದ ಪೂರ್ಣನೂ ಅಹುದು. ಕರುಣಾಘನನಾದ ಆ ಗೋವಿಂದನು ಶ್ರೇಷ್ಠರಾದ ಬ್ರಹ್ಮಾದಿ ದೇವತೆಗಳಿಗಿಂದ ಅತ್ಯಂತ ಶ್ರೇಷ್ಠನಾಗಿದ್ದಾನೆ. ಬ್ರಹ್ಮ ವಿಷ್ಣು ಮಹೇಶ್ವರ ಎಂಬ ಹೆಸರಿನಿಂದ ಅದೇ ಭಗವಂತನು ಜಗತ್ತಿನ ಹಿತವನ್ನು ಸಾಧಿಸುತ್ತಾನೆ. ಎಲ್ಲ ದೇವತೆಗಳಿಗೂ ಅವನೇ ಮೂಲ ಪುರುಷ. ಅವನಲ್ಲಿ ಯಾವ ದೋಷವೂ ಇಲ್ಲ. ಜ್ಞಾನ ಸ್ವರೂಪಿಯಾದ ಅಂತಹ ಪರಮಾತ್ಮನನ್ನು ನಾನು ಭಜಿಸುತ್ತೇನೆ.

ಹಿಂದೆ ಶೌನಕ ಮೊದಲಾದ ಮಹಾತ್ಮರಾದ ಋಷಿಗಳಿದ್ದರು. ಅವರೆಲ್ಲರೂ ಬ್ರಹ್ಮವಾದಿಗಳೇ. ಮೋಕ್ಷವನ್ನು ಹೊಂದಬೇಕೆನ್ನುವದೇ ಅವರ ಹೆಬ್ಬಯಕೆ. ಅದಕ್ಕಾಗಿ ಅವರು ತೀವ್ರವಾದ ತಪಸ್ಸನ್ನು ಆಚರಿಸಿದರು. ತಮ್ಮ ತಪೋನುಷ್ಠಾನಕ್ಕಾಗಿ ಆ ಬ್ರಹ್ಮಜ್ಞಾನಿಗಳು ಆರಿಸಿಕೊಂಡ ತಾಣವೇ-ನೈಮಿಷಾರಣ್ಯ. ಅವರೆಲ್ಲರೂ ಇಂದ್ರಿಯಗಳನ್ನು ಗೆದ್ದವರು. ಆಹಾರ, ಮಿತ, ಯಾವಾಗಲೂ ಸತ್ಯದ ವ್ರತ. ಸರ್ವಲೋಕಾಧಾರನಾದ ವಿಷ್ಣುವನ್ನು ಪರಮ ಭಕ್ತಿಯಿಂದ ಅವರು ಆರಾಧಿಸುತ್ತಿದ್ದರು. ಅದೇ ಅವರ ದೊಡ್ಡ ಯಜ್ಞ. ಅಸೂಯೆ ಇಲ್ಲ. ಅಹಂಕಾರವಿಲ್ಲ, ಸ್ವಾರ್ಥವಿಲ್ಲ. ಆ ಮಹಾಮುನಿಗಳಲ್ಲಿ. ಅವರ ಚಿತ್ತ ಯಾವಾಗಲೂ ದೇವರತ್ತ. ಎಲ್ಲ ಧರ್ಮಗಳನ್ನು ಬಲ್ಲರು ಆ ಮಹಾಮುನಿಗಳು. ಅವರ ಆಸಕ್ತಿ ಲೋಕಾನುಗ್ರಹದಲ್ಲಿ. ಪಾಪ ಎನ್ನುವುದರ ಲೇಪ ಅವರಿಗೆ ಎಂದಿಗೂ ಆಗಲೇ ಇಲ್ಲ. ಶಮ,

ದಮ, ಮುಂತಾದ ಗುಣಗಳ ತವರು ಮನೆಯಂತಿದ್ದ ಅವರಲ್ಲಿ ಯಾವ ದೋಷ ತಾನೇ ಬಂದೀತು? ಹಗಲಿರುಳೂ ಜಗತ್ತಿನ ಕಣ್ಣಾದ ಭಗವಂತನನ್ನು ಧ್ಯಾನ ಮಾಡುವುದು, ಗಾನ ಮಾಡುವುದು, ಧರ್ಮಶಾಸ್ತ್ರಗಳನ್ನು ವಿಚಾರಿಸುವುದು, ತತ್ವಜ್ಞಾನವನ್ನು ತಿಳಿದು ಮನನ ಮಾಡವುದು, ಶಾಸ್ತ್ರ ರಹಸ್ಯವನ್ನು ಜಿಜ್ಞಾಸುಗಳಿಗೆ ಉಪದೇಶಿಸುವುದು. ಇದೇ ಅವರು ಮಾಡುತ್ತಿರುವ ತಪಸ್ಸು ಆ ನೈಮಿಷಾರಣ್ಯದಲ್ಲಿ. ಅವರಲ್ಲಿ ಕೆಲವರು ಯಜ್ಞಪತಿಯಾದ ವಿಷ್ಣುವನ್ನು ಯಜ್ಞಗಳಿಂದ ಆರಾಧಿಸಿದರೆ ಹಲವು ಜ್ಞಾನಯೋಗಿಗಳು ಜ್ಞಾನೋಪಾಸನೆಯಿಂದಲೇ ಆ ಪರಮಾತ್ಮನನ್ನು ಅರ್ಚಿಸುತ್ತಿದ್ದರು. ಇನ್ನು ಕೆಲವರು ಪರಮಭಕ್ತಿಯಿಂದ ಭಗವಂತನನ್ನು ಪೂಜಿಸುತ್ತಿದ್ದರು. ತದೈಕತಾನ ಮಾನಸರಾಗಿ.

ಒಂದು ದಿನ ಆ ಮಹಾತ್ಮರು ತಮ್ಮದೇ ಆದ ಒಂದು ಪಂಡಿತರ ಪರಿಷತ್ತನ್ನು ಏರ್ಪಡಿಸಿದರು. ಧರ್ಮ, ಅರ್ಥ, ಕಾಮ ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಹೊಂದುವ ಬಗೆ ಯಾವುದು? ಎಂಬುದನ್ನು ಅವರಿಗೆ ಮೊದಲು ತಿಳಿಯಬೇಕಾಗಿದ್ದಿತು. ಅದಕ್ಕಾಗಿ ಈ ವಿದ್ವತ್ ಸಭೆಯ ಏರ್ಪಾಡು. ಅಲ್ಲಿ ನೆರೆದ ಮುಖ್ಯ ಮುಖ್ಯ ಮುನಿಮಹರ್ಷಿಗಳು ಇಪ್ಪತ್ತಾರು ಸಾವಿರ. ಅವರೆಲ್ಲರೂ ನೈಷ್ಠಿಕ ಬ್ರಹ್ಮಚಾರಿಗಳೇ. ರಾಗ ದ್ವೇಷಗಳು ಅವರಲ್ಲಿ ಇರಲಿಲ್ಲ. ಅಸೂಯೆ ಅವರಿಗೆ ಅಪರಿಚಿತ. ಜನರ ಮೇಲೆ ಅನುಗ್ರಹ ಗೈಯುವದೇ ಅವರ ಜೀವನದ ಗುರಿ. ಇಂತಹ ಮಹಾನುಭಾವರು ಆ ನೈಮಿಷಾರಣ್ಯದಲ್ಲಿ ನಡೆದ ಮಹರ್ಷಿ ಸಭೆಗೆ ತಮ್ಮ ಶಿಷ್ಯರೊಂದಿಗೆ ಆಗಮಿಸಿದರು. ಆ ಎಲ್ಲ ಶಿಷ್ಯರ ಲೆಕ್ಕ ಇಷ್ಟು ಎಂದು ಹೇಳಲು ಯಾರಿಗೂ ಶಕ್ಯವಿಲ್ಲ.

ವೀತರಾಗ ಪೂತಾತ್ಮರಾದ ಆ ಎಲ್ಲ ಮುನಿ ಮನುಜ ಮಹಾನುಭಾವರು ಎಲ್ಲರೂ ಕೂಡಿ, ಏರ್ಪಡಿಸಿದ ಆ ವಿಚಾರ ಸಂಕಿರಣದಲ್ಲಿ ಈ ಕೆಲವು ಪ್ರಶ್ನೆಗಳನ್ನು ಆಲೋಚಿಸಿದರು. ಈ ಲೋಕದಲ್ಲಿ ಪುಣ್ಯಕರವಾದ ಕ್ಷೇತ್ರಗಳು ಯಾವುವು? ತೀರ್ಥಗಳು ಯಾವವು? ಭವತಾಪದಿಂದ ಬಳಲುವ ಈ ಜೀವರಿಗೆ ಮುಕ್ತಿ ದೊರಕುವ ಉಪಾಯವೇನು? ವಿಷ್ಣುವಿನಲ್ಲಿ ಭಕ್ತಿ ಉಂಟಾಗುವದು ಹೇಗೆ? ಪ್ರಾರಬ್ಧ, ಸಂಚಿತ, ಆಗಾಮಿ ಎಂಬ ಮೂರು ವಿಧ ಕರ್ಮಗಳಿಗೆ ಯಾವ ಯಾವ ಫಲ ಲಭಿಸುವದು? ಮುಂತಾದ ಪ್ರಶ್ನೆಗಳು ಅಲ್ಲಿ ವಿಚಾರಣೆಗೆ ಬಂದವು. ಆದರೆ ಯಾವದೂ ಅಲ್ಲಿ ನಿರ್ಣಯವಾಗಲಿಲ್ಲ. ಇದನ್ನು ಶೌನಕರು ತಿಳಿದುಕೊಂಡರು. ವಿಷಯಗಳನ್ನು ತಿಳಿದುಕೊಳ್ಳಲು ಉತ್ಸುಕತೆಯಿಂದ ಕುಳಿತುಕೊಂಡ ಆ ಮುನಿಮಂಡಲದ ಸದಸ್ಯರ ಜಿಜ್ಞಾಸಾವೃತ್ತಿಯನ್ನು ಕಂಡು ಶೌನಕರಿಗೆ ಅವರ ಬಗ್ಗೆ ಗೌರವಭಾವ ಉದಿಸಿತು. ಅವರು ಆ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ ಮುನಿಮಹರ್ಷಿಗಳಿಗೆಲ್ಲ ವಂದಿಸಿದರು, ತಲೆಬಾಗಿದರು. ಕೈ ಜೋಡಿಸಿದರು. ವಿನಯದಿಂದ ಕೇಳಿಕೊಂಡರು.

**ಶೌನಕ :-** ಮಹಾನುಭಾವರೆ, ನಿಮ್ಮ ಈ ಎಲ್ಲ ಪ್ರಶ್ನೆಗಳು ಇಲ್ಲಿಯೇ ಕುಳಿತು ನೀವು ಎಷ್ಟು ವಿಚಾರಿಸಿದರೂ ಬಗೆಹರಿಯುವದಿಲ್ಲ. ಅವುಗಳಿಗೆ ಸಮಾಧಾನಕರ ಉತ್ತರವೂ ದೊರಕುವುದಿಲ್ಲ. ಅದಕ್ಕಾಗಿ ನಾನೊಂದು ಉಪಾಯವನ್ನು ಸೂಚಿಸುತ್ತೇನೆ. ಪುಣ್ಯಾಶ್ರಮವಾದ ಸಿದ್ಧಾಶ್ರಮದಲ್ಲಿ ಪುರಾಣ ಹೇಳುವುದರಲ್ಲಿ ಪರಿಣಿತರಾದ ಸೂತರು ಇರುತ್ತಾರೆ. ಅವರು ವೇದವ್ಯಾಸರ ಸಾಕ್ಷಾತ್ ಶಿಷ್ಯರು. ಲೋಮ ಹರ್ಷಣ ಎಂದು ಅವರ ಹೆಸರು. ವ್ಯಾಸರಿಂದಲೇ ಅವರು ಎಲ್ಲ ಕಲಿತದ್ದು. ಪುರಾಣ ಹೇಳುವದರಲ್ಲಿ ಪಳಗಿದ ವ್ಯಕ್ತಿ-

ಆ ಸೂತ ಪುರಾಣಿಕರು. ಈಗ ಈ ಪರಿಷತ್ತಿನಲ್ಲಿ ನಮ್ಮ ನಿಮ್ಮೆಲ್ಲರ ತಲೆತಿನ್ನುತ್ತಿರುವ ಪ್ರಶ್ನೆಗಳಿಗೆಲ್ಲ ಸಮುಚಿತ ಹಾಗೂ ಸಮಂಜಸವಾದ ಉತ್ತರವನ್ನು ಬಲ್ಲ ಹಾಗೂ ನೀಡಬಲ್ಲ ಬುದ್ಧಿವಂತ ಮಹಾನುಭಾವನೆಂದರೆ - ಆ ವ್ಯಾಸ ಶಿಷ್ಯ ಲೋಮಹರ್ಷಣ ಒಬ್ಬನೇ. ಇದು ನನ್ನ ನಿಶ್ಚಿತ ಅಭಿಪ್ರಾಯ.

ಯುಗಯುಗದಲ್ಲಿ ಅದರಲ್ಲೂ ಪ್ರತಿಯೊಂದು ದ್ವಾಪರಯುಗದಲ್ಲಿ ಧರ್ಮಹ್ರಾಸ ಆಗುವದನ್ನು ಕಂಡು, ಭಗವಂತನು ವೇದೋದ್ಧಾರ ಹಾಗೂ ಧರ್ಮೋದ್ಧಾರದ ಕಾರ್ಯಕ್ಕಾಗಿ ವೇದವ್ಯಾಸ, ರೂಪದಿಂದ ಅವತರಿಸಿ ವೇದಗಳನ್ನು ವಿಭಜಿಸುವನು. ವೇದಾಂತ ಶಾಸ್ತ್ರಾದಿಗಳನ್ನೆಲ್ಲ ಸೂತ್ರೀಕರಿಸುವನು. ಪುರಾಣರಾಶಿಯನ್ನೆಲ್ಲ ಒಂದು ವ್ಯವಸ್ಥಿತ ಕಟ್ಟುಪಾಡಿಗೆ ಒಳಪಡಿಸುವ ಈ ವೇದವ್ಯಾಸರು ಬೇರೆ ಯಾರೂ ಅಲ್ಲ. ಸಾಕ್ಷಾತ್ ನಾರಾಯಣನೇ ವ್ಯಾಸರೂಪದಿಂದ ಅವತರಿಸಿ ವೇದ್ಧೋದ್ಧಾರ ಹಾಗೂ ಜಗದೋದ್ಧಾರ ಮಾಡುವನು. ಅಂಥ ಭಗವದ್ರೂಪಿಯಾದ ಬಾದರಾಯಣರಿಂದಲೇ ಸೂತ ಪುರಾಣಿಕರು ಸರ್ವಶಾಸ್ತ್ರಗಳನ್ನು ಓದಿ ತಿಳಿದಿದ್ದಾರೆ. ಈಗ ಈ ಪ್ರಪಂಚದಲ್ಲಿ ನಿಜವಾದ ಪುರಾಣಗಳ ಮರ್ಮವನ್ನು ಯಥಾರ್ಥವಾಗಿ ತಿಳಿದ ಪ್ರಾಜ್ಞಪುಂಗವರೆಂದರೆ ಆ ಸೂತ ಪುರಾಣಿಕರೊಬ್ಬರೇ. ಮೋಕ್ಷ ಧರ್ಮವನ್ನೂ ಕರ್ಮ ಕಲಾಪವನ್ನೂ ಅವರಂತೆ ಚೆನ್ನಾಗಿ ಬಲ್ಲವರು ಬೇರಾರೂ ಇಲ್ಲ. ಮಹಾಪ್ರಭುವಾದ ವ್ಯಾಸರೂಪಿ ಪರಮಾತ್ಮನು ಹದಿನೆಂಟು ಪುರಾಣಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ನಾಲ್ಕು ವೇದ, ಆರು ಶಾಸ್ತ್ರ, ಹದಿನೆಂಟು ಪುರಾಣ ಹಾಗೂ ವೇದಗಳ ಸಾರವನ್ನೇ ಎರಕ ಹಾಕಿದ್ದಾನೆ. ಇಂಥ ಸರ್ವಪುರಾಣಗಳ ಸಾರವನ್ನು ಚೆನ್ನಾಗಿ ಅರಿತ ಸೂತರು ಜ್ಞಾನದ ತವನಿಧಿಯೇ ಆಗಿದ್ದಾರೆ. ಎಲ್ಲ ತತ್ವಾರ್ಥಗಳಲ್ಲಿ ಪಂಡಿತರೂ ಆಗಿದ್ದಾರೆ. ಆದುದರಿಂದ ನಾವೆಲ್ಲರೂ ನಮ್ಮ ಸಂಶಯಗಳ ಪರಿಹಾರಕ್ಕಾಗಿ ಆ ಸೂತ ಪುರಾಣಿಕರನ್ನೇ ಕೇಳೋಣ.''

ಶೌನಕರ ಈ ಸಮಯೋಚಿತ ನುಡಿ ಎಲ್ಲರಿಗೂ ಹಿಡಿಸಿತು. ಅವರ ಸಲಹೆ ಎಲ್ಲರಿಗೂ ಒಪ್ಪಿಗೆ ಆಯಿತು. ಪ್ರೀತಿಯಿಂದ ಶೌನಕರನ್ನು ಆಲಂಗಿಸಿದರು. 'ಭಲಾ! ಭಾಪು. ' ಎಂದು ಹೊಗಳಿದರು. ಅನಂತರ ಆ ಎಲ್ಲ ಸಭೆಯ ಸದಸ್ಯರು ಸೂತ ಪುರಾಣಿಕರ ಸಿದ್ಧಾಶ್ರಮಕ್ಕೆ ಹೊರಟರು. ಆ ಆಶ್ರಮದ ಆಚೀಚೆ ಚಪಲವಾದ ಚಿಗರೆಗಳು ಓಡಾಡುತ್ತಿದ್ದವು. ಅಲ್ಲಲ್ಲಿ ಮುನಿಗಳು ಕುಳಿತು ತಪಂಗೈಯುತ್ತಿದ್ದರು. ಅಲ್ಲಿಯ ಗಿಡಗಳು ಸುಂದರಬಳ್ಳಿಗಳು ಹೂ, ಹಣ್ಣುಗಳ ಭಾರದಿಂದ ಬಾಗಿದ್ದವು. ಅಕ್ಕಪಕ್ಕಗಳಲ್ಲಿ ತಿಳಿನೀರ ಕೊಳಗಳು. ಇಂಥ ಪವಿತ್ರ ಆಶ್ರಮದಲ್ಲಿ ಲೋಮಹರ್ಷಣ ಎಂಬ ಹೆಸರಿನ ಸೂತರು ಅಗ್ನಿನಾರಾಯಣನನ್ನು ಅರ್ಚಿಸುತ್ತಿದ್ದಾರೆ. 'ಅಗ್ನಿಷ್ಟೋಮ' ಎಂಬ ಯಾಗ ಮಾಡುತ್ತಿದ್ದಾರೆ. ದೂರದಿಂದಲೇ ಅವರು ಕಂಡರು- ಆಶ್ರಮದತ್ತ ಬರುವ ಋಷಿಗಳ ಬಳಗವನ್ನು. ಸಂಭ್ರಮದಿಂದ ಸ್ವಾಗತ ನೀಡಿದರು. ಆದರೋಪಚಾರ ಮಾಡಿದರು. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಉಚ್ಚಾಸನದಲ್ಲಿ ಕೂಡಿಸಿದರು. ಅನಂತರ ಆ 'ಅಗ್ನಿಷ್ಟೋಮ' ಯಾಗದ ಪರಿಸಮಾಪ್ತಿ ಯಾಯಿತು. ಎಲ್ಲರೂ ಅವಭೃಥ ಸ್ನಾನ ಮಾಡಿದರು. ಆ ಮಹೋತ್ಸವವನ್ನು ನೋಡಿ ಆನಂದಿಸಿದರು.

ಯಜ್ಞಕಾರ್ಯ ಮುಗಿಯಿತು. ನಿರ್ವಿಘ್ನವಾಗಿ ಸೂತ ಪುರಾಣಿಕರು ಸುಖಾಸನದಲ್ಲಿ ಕುಳಿತುಕೊಂಡಿದ್ದರು. ಆಗ ನೈಮಿಷಾರಣ್ಯದ ನಿವಾಸಿಗಳಾದ ಶೌನಕಾದಿ ಮಹರ್ಷಿಗಳು ಮುಂದೆ ಬಂದು ವಿನಯದಿಂದ ಇಂತೆಂದರು.

**ಶೌನಕ** :- ಒಳ್ಳೆ ವ್ರತಾನುಷ್ಠಾನ ಮಾಡುವ ಸೂತರೆ, ನಾವು ಈಗ ನಿಮ್ಮ ಆಶ್ರಮಕ್ಕೆ ಅತಿಥಿಗಳಾಗಿ ಬಂದಿದ್ದೇವೆ. ನಾವು ಊಟದ ಅತಿಥಿಗಳಲ್ಲ, ನಮಗೆ ನೀವು ಜ್ಞಾನಾನ್ನದ ಭೋಜನದಿಂದ ಆತಿಥ್ಯ ನೀಡಬೇಕು. ಜ್ಞಾನದಾನವೇ ನೀವು ನಮಗೆ ನೀಡಬೇಕಾದ ಅತಿಥಿ ಪೂಜೆ. ದೇವತೆಗಳು ಚಂದ್ರನ ಕಲೆಗಳ ಅಮೃತಪಾನ ಮಾಡಿ ಬದುಕುತ್ತಾರೆ. ನಮ್ಮಂತಹ ಬ್ರಾಹ್ಮಣರು ನಿಮ್ಮ ಮುಖದಿಂದ ಬರುವ ಜ್ಞಾನಾಮೃತ ಪಾನಮಾಡಿ ಜೀವಿಸುತ್ತೇವೆ. ಆದ್ದರಿಂದ ನೀವು ನಮಗೆ ಉಪದೇಶ ಮಾಡಿರಿ. ನಮ್ಮ ಎಲ್ಲ ಪ್ರಶ್ನೆಗಳಿಗೂ ಸಮುಚಿತ ಸಮಾಧಾನ ನೀಡಿರಿ. ಈ ಜಗತ್ತೆಲ್ಲವೂ ಯಾರಿಂದ ಜನಿಸಿತು? ಯಾರನ್ನು ಆಧರಿಸಿ ಇರುತ್ತದೆ? ಎಲ್ಲಿ ಪ್ರತಿಷ್ಠಿತವಾಗಿದೆ? ಕೊನೆಗೆ ಯಾರಲ್ಲಿ ಲಯವನ್ನು ಹೊಂದುವದು? ಶ್ರೀ ವಿಷ್ಣುವು ಹೇಗೆ ಪ್ರಸನ್ನನಾಗುವನು? ಅವನನ್ನು ಪೂಜಿಸುವ ಕ್ರಮ ಯಾವುದು? ವರ್ಣ ಧರ್ಮ, ಆಶ್ರಮಧರ್ಮ, ಸದಾಚಾರ, ಅತಿಥಿ ಪೂಜೆ ಮುಂತಾದವುಗಳ ರೀತಿ ಹೇಗೆ? ಮಾನವರು ಮಾಡುವ ಕರ್ಮ ಕಲಾಪಗಳು ಸಫಲವಾಗುವದೆಂತು? ಮಾನವರು ಮೋಕ್ಷವನ್ನು ಪಡೆಯದೇಕಾದರೆ ಏನು ಉಪಾಯ? ಭಕ್ತಿ ಎಂದರೆ ಏನು? ಅದರ ಸ್ವರೂಪವೇನು? ಅಂತಹ ಭಕ್ತಿಯಿಂದ ದೊರಕುವ ಫಲವೇನು? ಇದೆಲ್ಲವನ್ನು ನೀವು ನಮಗೆ ಹೇಳಿ ನಮ್ಮ ಸಂಶಯ ಪರಿಹರಿಸಿರಿ. ನಿಮ್ಮ ಮಾತೆಂದರೆ ಅಮೃತವಿದ್ದಂತೆ. ನಿಮ್ಮಂಥವರವಚನಾಮೃತವನ್ನು ಸವಿಯಬೇಕೆಂಬ ಹಂಬಲ ಯಾರಲ್ಲಿ ತಾನೇಹುಟ್ಟಲಿಕ್ಕಿಲ್ಲ!

**ಸೂತ** :- ಋಷಿಗಳೇ, ಹಾಗಿದ್ದರೆ ಕೇಳಿರಿ. ನೀವು ಬಯಸಿದ್ದನ್ನು ತಿಳಿಸುತ್ತೇನೆ. ಈ ವಿಷಯವನ್ನು ಪೂರ್ವಕಾಲದಲ್ಲಿ ಸನಕಾದಿ ಮಹರ್ಷಿಗಳು ನಾರದರಿಗೆ ಉಪದೇಶಿಸಿದರು. ಅವರು ಪೂತಾತ್ಮರು; ಇವರು ಮಹಾತ್ಮರು. ಅವರಿಬ್ಬರ ಸಂವಾದ ರೂಪವಾದುದರಿಂದ ಇದಕ್ಕೆ 'ನಾರದ ಪುರಾಣ' ವೆಂದು ಹೆಸರು ಬಂದಿದೆ. ಇದು ವೇದಕ್ಕೆ ಸಮಾನ. ಸರ್ವ ಪಾಪಗಳಿಗೂ ಇದರಿಂದ ಪರಿಹಾರ. ದುಷ್ಟ ಗ್ರಹಗಳಿಗೆಲ್ಲ ಇದರಿಂದಲೇ ನಿವಾರಣೆ. ಇದನ್ನು ಓದಿದವರಿಗೆ ಎಂದೂ ಕೆಟ್ಟ ಕನಸು ಬೀಳುವುದಿಲ್ಲ. ಇದು ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿ ಕೊಡುವ ದಿವ್ಯ ಪುರಾಣ. ಈ ಪುರಾಣದ ತುಂಬ ತುಂಬಿ ತುಳುಕುವದು ಬರಿ ನಾರಾಯಣನ ಕಥೆಗಳೇ. ಅಲ್ಲಲ್ಲಿ ಹರಿಭಕ್ತರ ಆಖ್ಯಾನ ಉಪನ್ಯಾಸಗಳು. ಅವೆಲ್ಲವೂ ಪರಂಪರೆಯಿಂದ ಭಗವತ್ಕಥೆಗಳೇ. ಒಂದೊಂದೂ ಕಲ್ಯಾಣಕಾರಕ. ಪ್ರತಿಯೊಂದೂ ಭವತಾರಕ. ಪುರುಷಾರ್ಥಗಳು ನಾಲ್ಕು ವಿಧವಲ್ಲವೆ! ಧರ್ಮ, ಅರ್ಥ, ಕಾಮ, ಮೋಕ್ಷವೆಂದು. ಇವೆಲ್ಲವೂ ಸಾಧಿಸುವದು ಈ ಪುರಾಣ ಪಠಣದಿಂದ. ಅಪೂರ್ವ ಪುಣ್ಯ ಫಲ ನೀಡುವ ಈ ನಾರದ ಪುರಾಣವನ್ನು ಸಮಾಧಾನದಿಂದ ಕೇಳಿರಿ.

ಈ ಪುರಾಣದ ಒಂದು ಅಧ್ಯಾಯವನ್ನು ಪಠಿಸಿದರೂ ಸಾಕು. ಒಂದು ಅಶ್ವಮೇಧ ಯಜ್ಞ ಮಾಡಿದ ಫಲ ಲಭಿಸುವದು. ಹೆಚ್ಚು ಅಧ್ಯಾಯಗಳ ಪಠಣದಿಂದ ರಾಜಸೂಯ ಯಾಗದ ಫಲ, ಜ್ಯೇಷ್ಠ ಪೌರ್ಣಿಮೆ ದಿನ ಮೂಲಾ ನಕ್ಷತ್ರದಲ್ಲಿ ಯಮುನಾನದಿಯಲ್ಲಿ ಸ್ನಾನ ಮಾಡಿ, ಉಪವಾಸವಿದ್ದು, ಮಧುರಾಪಟ್ಟಣದಲ್ಲಿ ಶ್ರೀಕೃಷ್ಣನನ್ನು ವಿಧಿ ಪೂರ್ವಕವಾಗಿ ಪೂಜೆ ಮಾಡಿದರೆ ಬರುವಷ್ಟು ಪುಣ್ಯ ಫಲವು ಈ ನಾರದ ಪುರಾಣದ ಮೂರು ಅಧ್ಯಾಯ ಪಠಣದಿಂದ ಬರುವುದು. ಇದರ ಒಂದು ಪದ್ಯ ಅಥವಾ ಅರ್ಧ ಪದ್ಯವನ್ನಾದರೂ ಭಕ್ತಿಯಿಂದ ಪಠಿಸಬೇಕು. ಪ್ರಯತ್ನದಿಂದ ಕೇಳಬೇಕು. ಕೂಡಲೇ ಪಾಪರಾಶಿಯೆಲ್ಲ ನಾಶವಾಗಿ ಹೋಗುವದು. ಇದನ್ನು ಪುಣ್ಯಕ್ಷೇತ್ರದಲ್ಲಿ ದೇವರ ಮೂರ್ತಿಯ ಮುಂದೆ ದ್ವಿಜರ

ಎದುರು ಓದಬೇಕು. ಡಂಭಾಚಾರಿಗಳ, ಕಪಟಿಗಳ, ಬ್ರಹ್ಮದ್ರೋಹಿಗಳ ಮುಂದೆ ಇದನ್ನು ಓದಬಾರದು. ಈ ಪುರಾಣದ ಶ್ರವಣ, ಪಠಣ, ಸ್ಮರಣ, ವಾಚನ ಎಲ್ಲವೂ ಪುಣ್ಯಪ್ರದ, ಫಲಪ್ರದ. ಇದನ್ನು ಶ್ರದ್ಧೆಯುಳ್ಳ ಧಾರ್ಮಿಕರಿಗೆ ಮಾತ್ರ ಹೇಳಬೇಕು. ಸಭಾಮಂಟಪ, ದೇವರ ಮನೆ, ಪುಣ್ಯಕರ ಕ್ಷೇತ್ರ ಹಾಗೂ ತೀರ್ಥ ಮುಂತಾದ ಪವಿತ್ರ ಸ್ಥಾನಗಳಲ್ಲಿ ಮುಮುಕ್ಷುಗಳಿಗೂ, ಜಿಜ್ಞಾಸುಗಳಿಗೂ ಈ ಪುರಾಣವನ್ನು ಕೇಳಿಸಬೇಕು. ಅಶುದ್ಧ ದೇಶದಲ್ಲಿ ಅಯೋಗ್ಯರಿಗೆ, ಅಶುಚಿಯಾಗಿ ಇದನ್ನು ಹೇಳಿದರೆ ಘೋರ ನರಕ. ಭಕ್ತಿಯಿಲ್ಲದೆ ಡಂಭಾಚಾರಕ್ಕಾಗಿ ಇದನ್ನು ಕೇಳಿದವನಿಗೂ ನರಕ ತಪ್ಪಿದ್ದಲ್ಲ. ಆದುದರಿಂದ ಏಕಾಗ್ರಚಿತ್ತರಾಗಿ ಭಕ್ತಿಯಿಂದ ಕಾಮಕ್ರೋಧಗಳನ್ನು ತ್ಯಜಿಸಿ ಶಾಂತ ಮನಸ್ಸಿನಿಂದ ಈ ಪುರಾಣವನ್ನು ಕೇಳಬೇಕು ಕೇಳಿ, ಅನಂತರ ಭಗವಂತನನ್ನು ನಿರಂತರವಾಗಿ ಚಿಂತಿಸಬೇಕು. ಶ್ರೀಹರಿಯ ಧ್ಯಾನ ಮಾಡಬೇಕು. ಅಂದರೆ ಮಾತ್ರ ಈ ಪುರಾಣ ಶ್ರವಣವು ಸಫಲವಾಗುವದು. ಜನ್ಮಸಾರ್ಥಕವಾಗುವದು. ಮೋಕ್ಷವು ಅಂಗೈಯಲ್ಲಿಯ ನೆಲ್ಲಿಕಾಯಿ ಯಂತಾಗುವದು. ಶ್ರೀ ಹರಿಯ ಭಕ್ತರಾದವರಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧ. ಪುರುಷಾರ್ಥಗಳು ಸಿದ್ಧಿಸುತ್ತವೆ. ಇದರಲ್ಲಿ ಏನಾದರೂ ಸಂಶಯ ಉಂಟೆ?

*ನಾರದ ಮಹಾಪುರಾಣದಲ್ಲಿ ಮೊದಲನೆ ಅಧ್ಯಾಯ ಮುಗಿದುದು*



## ಸನಕಮುನಿ ಹೇಳಿದ ಪುರುಷೋತ್ತಮಸ್ತೋತ್ರ | ಅಧ್ಯಾಯ - ೨

**ಋಷಿಗಳು:-** ಸೂತರೆ, ಸನತ್ಕುಮಾರರು ನಾರದರಿಗೆ ನಿರೂಪಿಸಿಸಿದ್ದೇ ನಾರದ ಪುರಾಣವೆಂದು ತಾವು ತಿಳಿಸಿದಿರಿ. ಆದರೆ ಅವರಿಬ್ಬರೂ ಕೂಡಿದ್ದು ಎಲ್ಲಿ? ಎಂದು ಆ ಇಬ್ಬರು ಮಹಾನುಭಾವರು ಮಿಳಿತರಾಗಿದ್ದರು? ಅವರ ಮಿಲನದ ಸ್ಥಾನವು ಯಾವುದು? ಬ್ರಹ್ಮವಾದಿಗಳಾದ ಆ ಇಬ್ಬರೂ ಮಹಾನುಭಾವರು ಎಂದು ಎಲ್ಲಿ ಹೇಗೆ ಎಂತು ಭಕ್ತಿಯಿಂದ ಹರಿಗಾನವನ್ನು ಮಾಡಿದರು? ಇದೆಲ್ಲವನ್ನು ನಮಗೆ ತಿಳಿಸಿರಿ.

**ಸೂತ:-** ಸನಕ, ಸನಂದನ, ಸನತ್ಕುಮಾರ ಮೊದಲಾದ ಮಹರ್ಷಿಗಳು ನಿಜವಾಗಿಯೂ ಮಹಾತ್ಮರು, ಬ್ರಹ್ಮದೇವರ ಮಾನಸ ಪುತ್ರರು. ಅವರಿಗೆ 'ನಾನು ಎಂಬ ಅಹಂಕಾರವಿಲ್ಲ. 'ನನ್ನದು' ಎಂಬ ಮಮಕಾರವಿಲ್ಲ. ಅವರು ಯಾವಾಗಲೂ ಊರ್ಧ್ವರೇತಸ್ಕರು. ಸನಕ, ಸನಂದನ, ಸನಾತನ, ಸನತ್ಕುಮಾರ ಎಂದು ಆ ನಾಲ್ಕು ಬ್ರಹ್ಮಮಾನಸ ಪುತ್ರರ ಮಂಗಳ ನಾಮಗಳು. ವಿಷ್ಣುವಿನಲ್ಲಿ ಭಕ್ತಿ ಬ್ರಹ್ಮಧ್ಯಾನದಲ್ಲಿ ಆಸಕ್ತಿ ಇವೇ ಆ ಮುಮುಕ್ಷುಗಳ ಲಕ್ಷಣ. ಸಾವಿರ ಸೂರ್ಯರಷ್ಟು ದೇದೀಪ್ಯಮಾನವಾಗಿದೆ. ಅವರ ದೇಹಕಾಂತಿ. ಅವರು ಯಾವಾಗಲೂ ಸತ್ಯಸಂಧರು ಅನಿರ್ಬಂಧರು. ಇಂಥ ಈ ಮಹಾಪುರುಷರು ಹಿಂದೊಮ್ಮೆ ಮೇರು ಪರ್ವತದ ಶೃಂಗಾಂಗಣದಲ್ಲಿ ನಡೆದ ಬ್ರಹ್ಮಸಭೆಗೆ ಹೊರಟಿದ್ದರು. ದಾರಿಯಲ್ಲಿ ಗಂಗಾನದಿ ಶ್ರೀ ಹರಿಯ ಅಡಿದಾವರೆಯಿಂದ ಹರಿದುಬಂದ ಆ ಹೊಳೆಯನ್ನು ಕಂಡು ಭಕ್ತಿ ಉದ್ರೇಕವಾಯಿತು- ಅವರ ಮನಸ್ಸಿನಲ್ಲಿ. ಕೂಡಲೇ ಅವರು ಸ್ನಾನಕ್ಕೆ ಇಳಿದರು. ಅದೇ ಸಮಯದಲ್ಲಿ ದೇವರ್ಷಿನಾರದರು ಅಲ್ಲಿಗೆ ಆಗಮಿಸಿದರು. ನಾಲ್ವರೂ ಸೋದರರೂ ನದಿ ನೀರಿನಲ್ಲಿ ನಿಂತಿದ್ದಾರೆ. ಅವರನ್ನು ಕಂಡ

ಕೂಡಲೇ ಸಾಷ್ಟಾಂಗ ಹಾಕಿದರು ನಾರದರು. ಕೈ ಜೋಡಿಸಿದರು. ಉಚ್ಚಕಂಠದಿಂದ ಭಗವಂತನ ಅನಂತ ನಾಮಗಳನ್ನು ಉಚ್ಚರಿಸಿದರು.

**ನಾರಾಯಣಾಚ್ಯುತಾನಂತ ವಾಸುದೇವ ಜನಾರ್ದನ,**
**ಯಜ್ಞೇಶ ಯಜ್ಞಪುರುಷ ಕೃಷ್ಣ ವಿಷ್ಣೋ ನಮೋಽಸ್ತುತೇ ॥**

**ಪದ್ಮಾಕ್ಷ ಕಮಲಾಕಾಂತ ಗಂಗಾಜನಕ ಕೇಶವ ।**
**ಕ್ಷೀರೋದಶಾಯಿನ್ ದೇವೇಶ ದಾಮೋದರ ನಮೋಽಸ್ತುತೇ ॥**

**ಶ್ರೀ ರಾಮ ವಿಷ್ಣೋ ನೃಹರೇ ಮುರಾರೇ ।**
**ಪ್ರದ್ಯುಮ್ನ ಸಂಕರ್ಷಣ ವಾಸುದೇವ ॥**

**ಅಜಾಽನಿರುದ್ಧಾಽಚ್ಯುತ ವಿಶ್ವರೂಪ**
**ತ್ವಂ ಪಾಹಿ ನಃ ಸರ್ವಭಯಾದಜಸ್ರಂ ॥**

ಎಂದು ಹರಿನಾಮವನ್ನು ಗಾನಪೂರ್ವಕವಾಗಿ ಮೊದಲು ಉಚ್ಚರಿಸಿ ಧ್ಯಾನ ಮಾಡಿದರು. ಅನಂತರ ತನಗಿಂತ ಮೊದಲೇ ಬ್ರಹ್ಮದೇವರಿಂದ ಉದಿಸಿ ಬಂದ ಆ ಮಹಾಮುನಿಗಳನ್ನು ನಮಿಸಿದರು. ಅನಂತರ ಅವರೊಂದಿಗೆ ಆ ಜಾಹ್ನವೀ ಜಲದಲ್ಲಿ ಸ್ನಾನ ಮಾಡಿದರು - ನಾರದರು. ಆ ಅಪರೋಕ್ಷ ಜ್ಞಾನಿಗಳೊಂದಿಗೆ ಗಂಗೆಯಲ್ಲಿ ಅವಗಾಹನ ಮಾಡುವ ಸಂದರ್ಭ ದೊರೆತದ್ದಕ್ಕಾಗಿ ಭಾರಿ ಹಿಗ್ಗಾಗಿತ್ತು ಆ ದೇವ ಮುನಿಗೆ. ಎಲ್ಲರೂ ಸ್ನಾನ ಮಾಡಿ ಮೇಲೆದ್ದು ದೇವತೆಗಳನ್ನು, ಋಷಿಗಳನ್ನು ಪಿತೃಗಳನ್ನು ಉದ್ದೇಶಿಸಿ ತರ್ಪಣ ನೀಡಿದರು. ಅನಂತರ ಸಂಧ್ಯಾವಂದನೆ, ದೇವಪೂಜೆ, ಜಪ, ಪಾರಾಯಣ ಮುಂತಾದ ಆಹ್ನೀಕಗಳನ್ನು ಮಾಡಿ ಮುಗಿಸಿದರು. ಆ ಬಳಿಕ ನಾರಾಯಣನ ಗುಣಗಾನ ಮಾಡಿದರು. ನಾಮಧ್ಯಾನವನ್ನು ಆಚರಿಸಿದರು. ಇದೆಲ್ಲವೂ ಅವರ ನಿತ್ಯಾಹ್ನಿಕದಲ್ಲಿಯೇ ಸೇರಿದ್ದಿತು. ಅವರ ಈ ಎಲ್ಲ ದೈನಂದಿನ ಜಪ ತಪೋನುಷ್ಠಾನಗಳೂ ಪೂಜಾ ಪರ್ಯುಪಾಸನೆಗಳೂ ಮುಗಿದ ಬಳಿಕ ಎಲ್ಲರೂ ಗಂಗೆಯ ತಡಿಯಲ್ಲಿ ಪುಲಿನ ಪೀಠದ ಮೇಲೆ ಕುಳಿತುಕೊಂಡರು. ಬಹಳ ಮನೋಹರವಾಗಿದ್ದಿತು ಗಂಗೆಯ ತೀರದ ಆ ಮಳಲರಾಶಿ. ಹೀಗೆ ಅವರೆಲ್ಲರೂ ಸುಖಾಸೀನರಾದಾಗ ನಾರದರು ಪ್ರಶ್ನೆ ಮಾಡಿದರು.

**ನಾರದ**:- ಮಹಾಮುನಿಗಳೇ, ನೀವೆಲ್ಲರೂ ಸರ್ವಜ್ಞರಷ್ಟೆ! ಅರ್ಥಾತ್ ಅರಿಯ ಬೇಕಾದುದನ್ನೆಲ್ಲ ಅರಿತಿರುವಿರಿ. ತಿಳಿಯ ಬೇಕಾದುದನ್ನು ತಿಳಿದಿರುವಿರಿ. ಭಗವಂತನ ಕರುಣೆಯ ಕಿರಣವು ನಿಮ್ಮಲ್ಲಿ ಸ್ಫುರಣಗೊಂಡಿದೆ. ಆತ್ಮೋದ್ಧಾರಕ್ಕಿಂತ ಲೋಕೋದ್ಧಾರವೇ ನಿಮಗೆ ಹೆಚ್ಚಿನದು. ದೀನ ದರಿದ್ರರಲ್ಲಿ ನಿಮಗೆ ಅಪಾರ ಅನುಕಂಪ. ನಮ್ಮಂಥವರು ಆ ದೇವ ದೇವನನ್ನು ಕಾಣುವದೂ ನಿಮ್ಮ ಮುಖಾಂತರವೇ. ಅದಕ್ಕಾಗಿ ನಿಮ್ಮನ್ನು ಕೇಳುತ್ತಿದ್ದೇನೆ. ಭಗವಂತನ ಲಕ್ಷಣವೇನು ? ಹೇಳಿರಿ. ಈ ಚರಾಚರ ಪ್ರಪಂಚವೆಲ್ಲವೂ ಅವನಿಂದಲೇ ಜನಿಸಿತಷ್ಟೇ! ಅವನ ಜ್ಞಾನವು ನಮಗೆ ಆಗುವ ಬಗೆಯೆಂತು ? ನಾವು ನೀವು ಇದೀಗ ಸ್ನಾನ ಮಾಡಿದ ಈ ದೇವಗಂಗೆ ಅವನ ಪಾದವನ್ನು ತೊಳೆದು ತೀರ್ಥಳಾಗಿರುವಳು. ಇಂಥ ಭಗವಂತನನ್ನು ನನಗೆ ತಿಳಿಸಿಕೊಡಿರಿ. ಮಾನವರು ಮಾಡುವ ಮೂರು ವಿಧವಾದ ಕರ್ಮಗಳ ಫಲಿತಾಂಶವೇನು? ಕೈಯಿಂದ ಮಾಡುವ, ಬಾಯಿಂದ ನುಡಿಯುವ, ಮನಸ್ಸಿನಲ್ಲಿ

ಮೂಡುವ ಆ ತ್ರಿವಿಧ ಕರ್ಮಗಳ ಸಾಫಲ್ಯ ಸಿದ್ಧಿಯ ಬಗೆಏನು? ಜ್ಞಾನ ಮತ್ತು ತಪಸ್ಸುಗಳ ಲಕ್ಷಣಗಳನ್ನು ಹೇಳಿರಿ. ಅತಿಥಿ ಸತ್ಕಾರ ಮುಂತಾದ ಪುಣ್ಯಕರ್ಮಗಳ ಫಲ, ಪ್ರಯೋಜನ, ವಿಧಿ ವಿಧಾನಗಳನ್ನು ತಿಳಿಸಿರಿ. ಒಟ್ಟಾರೆ, ಹರಿಯ ಪ್ರೀತಿ ಯಾವ ಕರ್ಮಗಳಿಂದ, ಯಾವ ವಿಧಗಳಿಂದ ಆಗುವುದು ಎಂಬುದನ್ನು ತಿಳಿಸಿರಿ. ನನ್ನ ಮೇಲೆ ಅನುಗ್ರಹ ಮಾಡಿರಿ. ಇದೆಲ್ಲವನ್ನು ಸರಿಯಾಗಿ ಸೂಕ್ತವಾಗಿ ತಿಳಿಸಿ ಹೇಳಲು ತಕ್ಕ ವ್ಯಕ್ತಿ ನೀವೊಬ್ಬರೆ.

**॥ ಸನಕ ಉವಾಚ ॥**

**ನಮಃ ಪರಾಯ ದೇವಾಯ ಪರಸ್ಮಾತ್ಪರಮಾಯ ಚ ।**
**ಪರಾವರ ನಿವಾಸಾಯ ಸಗುಣಾಯಾಗುಣಾಯ ಚ ॥**

ಸರ್ವೋತ್ತಮನಾದ ಶ್ರೀಹರಿಗೆ ನನ್ನ ನಮಸ್ಕಾರ. ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಅವನಿಗೊಂದು ಆಟ. ಈ ಪ್ರಪಂಚದಲ್ಲಿ ದೊಡ್ಡವರೆಂದರೆ ಬ್ರಹ್ಮ, ವಾಯು, ಲಕ್ಷ್ಮೀ ಮೊದಲಾದ ದೇವೋತ್ತಮರೇ ಸರಿ. ಅವರೆಲ್ಲರಿಗಿಂತ ಸರ್ವೋತ್ತಮ - ಈ ಶ್ರೀಮನ್ನಾರಾಯಣ, ಆದುದರಿಂದಲೇ ಅವನಿಗೆ ' ಪರಾತ್ಪರ ' ನೆಂದು ಹೆಸರು. ಶ್ರೇಷ್ಠ, ಕನಿಷ್ಠ ವಸ್ತುಗಳೆಲ್ಲದರಲ್ಲಿಯೂ ಅವನ ನಿವಾಸ. ಅವನು ಸಗುಣನೂ ಅಹುದು, ನಿರ್ಗುಣನೂ ಅಹುದು. ಜ್ಞಾನ, ಆನಂದ ಮೊದಲಾದ ಒಳ್ಳೊಳ್ಳೆ ಗುಣಗಳಿಂದ ತುಂಬಿರುವದರಿಂದ ಸಗುಣ. ನಮ್ಮಂತೆ ಸತ್ವಾದಿ ಪ್ರಾಕೃತ ಗುಣಗಳಿಲ್ಲದಿರುವದರಿಂದ ನಿರ್ಗುಣ. ಇಂಥ ಸರ್ವೋತ್ತಮ ದೇವನಾದ ಶ್ರೀ ವಿಷ್ಣುವಿಗೆ ನನ್ನ ವಂದನೆ.

**ಯೋ ಬ್ರಹ್ಮಶಾಯೀ ಜಗತಾಂ ವಿಧಾತಾ**
**ಸ ಏವ ಪಾತಾ ದ್ವಿಜ ವಿಷ್ಣುರೂಪೀ ॥**

**ಕಲ್ಪಾಂತರುದ್ರಾಖ್ಯವಿಭುಶ್ಚ ವಿಶ್ವಂ**
**ಸಂಗೃಹ್ಯ ಶೇತೇ ತಮಜಂ ನಮಾಮಿ ॥**

ಈ ವಿಷ್ಣು ರೂಪಿಯಾದ ಪರಬ್ರಹ್ಮ ಚತುರ್ಮುಖ ಬ್ರಹ್ಮನಲ್ಲಿದ್ದುಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆ. ಸ್ವಯಂ ವಿಷ್ಣು ರೂಪದಿಂದ ಎಲ್ಲ ಪ್ರಾಣಿಗಳನ್ನು ರಕ್ಷಿಸುತ್ತಾನೆ. ಪ್ರಳಯ ಕಾಲದಲ್ಲಿ ರುದ್ರದೇವರ ರೂಪವನ್ನು ಧರಿಸಿ ಎಲ್ಲವನ್ನೂ ಸಂಹರಿಸುತ್ತಾನೆ. ಕೊನೆಗೆ ಎಲ್ಲ ಜೀವರಾಶಿಗಳನ್ನು ತನ್ನ ಉದರದಲ್ಲಿಟ್ಟುಕೊಂಡು ಪ್ರಳಯ ಕಾಲದಲ್ಲಿ ಸಮುದ್ರದಲ್ಲಿ ಶಯನ ಮಾಡುತ್ತಾನೆ. ಹುಟ್ಟು ಸಾವು ಇಲ್ಲದ ಅಂಥ ನಾರಾಯಣನನ್ನು ನಮಿಸುತ್ತೇನೆ.

**ಯನ್ನಾಮ ಸಂಕೀರ್ತನತೋ ಗಜೇಂದ್ರೋ**
**ಗ್ರಾಹೋಗ್ರಬಂಧಾನ್ಮುಮುಚೇ ಸ ದೇವಃ ।**
**ವಿರಾಜಮಾನಃ ಸ್ವಪದೇ ಪರಾಖ್ಯೇ**
**ತಂ ವಿಷ್ಣುಮಾದ್ಯಂ ಶರಣಂ ಪ್ರಪದ್ಯೇ ॥**

ಗಜೇಂದ್ರ ಮಹಾಬಲಿಷ್ಠವಾದ ಆನೆ. ಅದನ್ನು ಕೊಳದಲ್ಲಿದ್ದ ಮೊಸಳೆ ಹಿಡಿಯಿತು. ಎಷ್ಟು ಕೊಸರಾಡಿದರೂ ಮೊಸಳೆಯ ಹಿಡಿತ ಸಡಿಲಾಗಲಿಲ್ಲ. ಕೊನೆಗೆ ಸಾಯುವ ಪ್ರಸಂಗ ಬಂದಾಗ ಆ ಆನೆ ನಾರಾಯಣನಿಗೆ ಮೊರೆ ಇಟ್ಟಿತು. ಅವನ ನಾಮಸ್ಮರಣೆ ಮಾಡಿತು.

ನಾಮವನ್ನು ನೆನೆಯುವದೊಂದೇ ತಡ, ನಾರಾಯಣ ಬಂದೇ ಬಿಟ್ಟ ವೈಕುಂಠದಿಂದ. ಗ್ರಾಹವನ್ನು ಕೊಂದ, ಗಜೇಂದ್ರನನ್ನು ಬಿಡಿಸಿದ. ನಾರಾಯಣನ ನಾಮಸ್ಮರಣೆಯ ಮಹಿಮೆಯಿಂದ ಸಾವಿನ ಬಾಯಿಯಿಂದ ಆನೆ ಮೋಕ್ಷ ಪಡೆಯಿತು. ಇಂಥ ವೈಕುಂಠದಲ್ಲಿ ವಿರಾಜಮಾನನಾದ ವಿಷ್ಣುವಿಗೆ ನಾನು ಶರಣು ಹೋಗುತ್ತೇನೆ.

**ಯಃ ಕೇಶಿ ಹಂತಾ ನರಕಾಂತಕಶ್ಚ**
**ಬಾಲೋ ಭುಜಾಗ್ರೇಣ ದಧಾರ ಗೋತ್ರಂ ।**
**ದೇವಂ ಚ ಭೂಭಾರ ವಿನಾಶಶೀಲಂ**
**ತಂ ವಾಸುದೇವಂ ಸತತಂ ನತೋಽಸ್ಮಿ ॥**

ಕೇಶಿ, ನರಕಾಸುರ ಎಂಬ ದೈತ್ಯರನ್ನು ಬಾಲ್ಯದಲ್ಲಿಯೇ ಸಂಹರಿಸಿ, ಬೆರಳಿನ ತುದಿಯಲ್ಲಿ ಬೆಟ್ಟವನ್ನು ಧರಿಸಿದ, ಭೂಮಿಯ ಭಾರವನ್ನು ಇಳಿಸಿದ ವಾಸುದೇವನನ್ನು ವಂದಿಸುವೆ.

**ಸ್ತಂಭೇಽವತೀರ್ಯೋಗ್ರನೃಸಿಂಹರೂಪೀ**
**ಯೋ ದೈತ್ಯವಕ್ಷಃ ಕಠಿಣಂ ಶಿಲಾವತ್ ।**
**ವಿದಾರ್ಯ ಸಂರಕ್ಷಿತವಾನ್ ಸ್ವಭಕ್ತಂ**
**ಪ್ರಲ್ಹಾದಮೀಶಂ ತಮಜಂ ನಮಾಮಿ ॥**

ಅತ್ಯಂತ ಉಗ್ರವಾದ ನರಸಿಂಹರೂಪದಿಂದ ಕಂಬದಲ್ಲಿ ಅವತರಿಸಿ ಕಲ್ಲಿನಂತೆ ಕಠೋರವಾದ ಹಿರಣ್ಯಾಕ್ಷನ ಎದೆಯನ್ನು ಸೀಳಿ, ತನ್ನ ಭಕ್ತ ಪ್ರಲ್ಹಾದನನ್ನು ರಕ್ಷಿಸಿದ ನರಹರಿಯನ್ನು ನಮಿಸುತ್ತೇನೆ.

**ವ್ಯೋಮಾದಿಭಿನ್ನಂ ಪರಮಾತ್ಮ ಸಂಜ್ಞಂ**
**ನಿರಂಜನಂ ನಿತ್ಯಮಮೇಯತತ್ವಂ ।**
**ಜಗದ್ವಿಧಾತಾರಮಕರ್ಮಕಂ ಚ ।**
**ಪರಂ ಪುರಾಣಂ ಪುರುಷಂ ನತೋಽಸ್ಮಿ ॥**

ಈ ಭೂಮ್ಯಾಕಾಶಾದಿ, ಪ್ರಪಂಚವೆಲ್ಲವೂ ಪರಮಾತ್ಮನಿಂದ ಅತ್ಯಂತ ಭಿನ್ನವಾಗಿದೆ. ಅವನಿಂದಲೇ ಹುಟ್ಟಿ, ಅವನಿಂದಲೇ ರಕ್ಷಿತವಾಗಿ, ಕೊನೆಗೆ ಅವನಿಂದಲೇ ವಿಲಯ ಹೊಂದುವದು ಈ ಎಲ್ಲ ಜಗತ್ತು. ಇಂಥ ದೋಷರಹಿತನೂ, ಸಾಕಲ್ಯೇನ ತಿಳಿಯಲು ಶಕ್ಯವಿಲ್ಲದವನೂ ಕರ್ಮಲೇಪನಲವಿಲ್ಲದವನೂ ಪೂರ್ಣಪುರುಷನೂ ಆದ ಆ ಸರ್ವ ಸಮರ್ಥನಾದ ಶ್ರೀ ಹರಿಯನ್ನು ಶರಣುಹೊಂದಿದ್ದೇನೆ.

**ಹೃದಿ ಸ್ಥಿತೋಽಪಿ ಯೋ ದೇವೋ ಮಯಾಯಾ ಮೋಹಿತಾತ್ಮನಾಂ**
**ನ ಜ್ಞಾಯತೇ ಪರಃ ಶುದ್ಧಸ್ತಮಸ್ಮಿ ಶರಣಂ ಗತಃ ॥**

ಹೃದಯದಲ್ಲಿಯೇ ಇದ್ದರೂ ಅಜ್ಞಾನದಿಂದ ಮೋಹಿತರಾಗಿರುವರಿಗೆ ತಿಳಿಯದಿರುವ, ಪರಿಶುದ್ಧನೂ, ಪರಾತ್ಪರನೂ ಆದ ಪರಮಾತ್ಮನನ್ನು ಮೊರೆ ಹೊಕ್ಕಿದ್ದೇನೆ.

**ದಧಾರ ಮಂದರಂ ಪೃಷ್ಠೇ ಕ್ಷೀರೋದೇಽಮೃತಮಂಥನೇ ।**
**ದೇವತಾನಾಂ ಹಿತಾರ್ಥಾಯ ತಂ ಕೂರ್ಮಂ ಶರಣಂ ಗತಃ ॥**

ಅಮೃತ ಮಂಥನ ಕಾಲದಲ್ಲಿ ದೇವತೆಗಳ ಹಿತಕ್ಕಾಗಿ ಹಾಲಗಡಲಲ್ಲಿ ಮುಳುಗುವ ಮಂದರ ಬೆಟ್ಟವನ್ನು ಬೆನ್ನ ಮೇಲೆ ಹೊತ್ತ ಕೂರ್ಮನಿಗೆ ಶರಣು.

**ದಂಷ್ಟ್ರಾಂಕುರೇಣ ಯೋಽನಂತಃ ಸಮುದ್ಧೃತ್ಯಾರ್ಣವಾದ್ಧರಾಂ ।**
**ತಸ್ಥಾವಿದಂ ಜಗತ್ಕೃತ್ಸ್ನಂ ವಾರಾಹಂ ತಂ ನತೋಽಸ್ಮ್ಯಹಂ ॥**

ಸಾಗರದ ನೀರಿನಲ್ಲಿ ಮುಳುಗಿ ಹೋದ ಧರಣೀ ಮಂಡಲವನ್ನು ಕೋರೆದಾಡೆಯಿಂದ ಎತ್ತಿ ಹಿಡಿದು, ಈ ಜಗತ್ತನ್ನೆಲ್ಲ ಸ್ವಸ್ಥಾನದಲ್ಲಿ ಮತ್ತೆ ಸ್ಥಾಪಿಸಿದ ವರಾಹರೂಪಿ ವಿಷ್ಣುವಿಗೆ ನಮಸ್ಕಾರ.

**ಲಬ್ಧ್ವಾ ವೈರೋಚನಾದ್ಭೂಮಿಂ ದ್ವಾಭ್ಯಾಂ ಪದ್ಭ್ಯಾಮತೀತ್ಯ ಯಃ ।**
**ಆ ಬ್ರಹ್ಮಭುವನಂ ಪ್ರಾದಾತ್ಸುರೇಭ್ಯಸ್ತಂ ನಮಾಮ್ಯಹಂ ॥**

ಬಲಿಚಕ್ರವರ್ತಿಯಿಂದ ಮೂರುಪಾದ ಭೂಮಿ ಪಡೆದು, ಎರಡುಪಾದಗಳಿಂದಲೇ ಬ್ರಹ್ಮಲೋಕದವರೆಗೆ ಎಲ್ಲ ಜಗತ್ತನ್ನು ಅಳೆದು, ಆಕ್ರಮಿಸಿ ದೇವತೆಗಳಿಗೆ ದಯಮಾಡಿದ ವಾಮನನನ್ನು ವಂದಿಸುವೆನು.

**ಹೈಹಯಸ್ಯಾಪರಾಧೇನ ಹ್ಯೇಕವಿಂಶತಿಸಂಖ್ಯಯಾ ।**
**ಕ್ಷತ್ರಿಯಾನ್ವಯಭೇತ್ತಾ ಯೋ ಜಾಮದಗ್ನ್ಯಂ ನತೋಽಸ್ಮಿ ತಂ ॥**

ಕಾರ್ತವೀರ್ಯಾರ್ಜುನನ ಅಪರಾಧದಿಂದ ಎಲ್ಲ ಕ್ಷತ್ರಿಯರನ್ನು ಸಂಹರಿಸಿ ಇಪ್ಪತ್ತೊಂದು ಸಲ ಭೂಮಂಡಲವನ್ನು ಸುತ್ತಿ ನಿಃಕ್ಷತ್ರಿಯ ಸೃಷ್ಟಿಯನ್ನು ಮಾಡಿದ ಪರಶುರಾಮನನ್ನು ನಮಿಸುತ್ತೇನೆ.

**ಯುಗಾಂತೇ ಪಾಪಿನೋಽಶುದ್ಧಾನ್ಹತ್ವಾ ತೀಕ್ಷ್ಣಾಸಿಧಾರಯಾ ।**
**ಸ್ಥಾಪಯಾಮಾಸ ಯೋ ಧರ್ಮಂ ಕೃತಾದೌ ತಂ ನಮಾಮ್ಯಹಂ ॥**

ಯುಗದ ಕೊನೆಯಲ್ಲಿ, ದುಷ್ಟರಾದ ಪಾಪಿಗಳನ್ನು ತನ್ನ ತೀಕ್ಷ್ಣವಾದ ಖಡ್ಗದಿಂದ ಸಂಹರಿಸಿ, ಕೃತಯುಗದ ಪ್ರಾರಂಭದಲ್ಲಿ ಧರ್ಮವನ್ನು ಪುನಃ ಸ್ಥಾಪನೆ ಮಾಡಿದ ಆ ಕಲ್ಕಿ ದೇವನನ್ನು ವಂದಿಸುತ್ತೇನೆ.

**ಕುವಮಾದೀನ್ಯಕಾನಿ ರೂಪಾಣ್ಯಸ್ಯ ಮಹಾತ್ಮನಃ ।**
**ತೇಷಾಂ ನಾಮಾನಿ ಸಂಖ್ಯಾತುಂ ಶಕ್ಯಂತು ನಾಬ್ದಕೋಭಿಃ ॥**

ಪರಾತ್ಪರನಾದ ಆ ಭಗವಂತನಿಗೆ ಇವೇ ಮೊದಲಾಗಿ ಅನಂತಾನಂತ ರೂಪಗಳೂ, ಅವತಾರಗಳೂ ಉಂಟು. ಅವುಗಳ ಹೆಸರುಗಳನ್ನೂ, ಗಣನೆಯನ್ನೂ, ಕೋಟಿವರ್ಷಗಳಿಂದಲೂ ಮಾಡಲಾಗುವುದಿಲ್ಲ.

**ಆತ್ಮನ್ಯಾತ್ಮಾನಮಾಧಾಯ ಯೋಗಿನೋ ಗತಕಲ್ಮಷಾಃ ।**
**ಪಶ್ಯಂತಿ ಯಂ ಜ್ಞಾನರೂಪಂ ತಮಸ್ಮಿ ಶರಣಂ ಗತಃ ॥**

**ಯಥಾ ಕಥಂಚಿದ್ಯನ್ನಾಮ್ನಿ ಕೀರ್ತಿತೇ ವಾ ಶ್ರುತೇಽಪಿ ವಾ ।**
**ಪಾಪಿನಸ್ತು ವಿಶುದ್ಧಾಃ ಸ್ಯುಃ ಶುದ್ಧಾ ಮೋಕ್ಷಮವಾಪ್ನುಯುಃ ॥**

ಹೇಗೇ ಆಗಲಿ ಯಾವ ಭಗವಂತನ ನಾಮವನ್ನು ನೆನೆದರೆ, ಗುಣಗಳನ್ನು ಕೊಂಡಾಡಿದರೆ, ಅಥವಾ ಶ್ರವಣ ಮಾಡಿದರೆ ಮಹಾಪಾಪಿಗಳು ಕೂಡ ಪರಿಶುದ್ಧರಾಗಿ ಮೋಕ್ಷವನ್ನು ಹೊಂದುವರೋ, ಪಾಪಲೇಪವಿಲ್ಲದ ಯೋಗಿಗಳು ಯಾವ ಪರಮಾತ್ಮ

ನನ್ನು ತಮ್ಮ ಹೃದಯದಲ್ಲಿಟ್ಟು ಧ್ಯಾನಮಾಡಿ ಅಪರೋಕ್ಷ ಜ್ಞಾನವನ್ನು ಪಡೆಯುವರೊ ಅಂತಹ ಜ್ಞಾನರೂಪಿಯಾದ ಶ್ರೀಮನ್ ನಾರಾಯಣನಿಗೆ ಶರಣು ಹೋಗುತ್ತೇನೆ.

**ಅಣೋರಣೀಯಾಂಸಮಜಂ ಮಹತಶ್ಚ ಮಹತ್ತರಂ**
**ಗುಹ್ಯಾದ್ಗುಹ್ಯತಮಂ ದೇವಂ ಪ್ರಣಮಾಮಿ ಪುನಃ ಪುನಃ ॥**

ಚಿಕ್ಕ ಪದಾರ್ಥಗಳಲ್ಲಿ ಅದಕ್ಕಿಂತ ಚಿಕ್ಕದಾಗಿಯೂ, ದೊಡ್ಡ ಪದಾರ್ಥಗಳಲ್ಲಿ ಅದಕ್ಕಿಂತ ದೊಡ್ಡದಾಗಿಯೂ ಇರುವ ರೂಪಗಳಿಂದ ಅಂತರ್ಯಾಮಿಯಾಗಿರುವ, ಉತ್ಪತ್ತಿರಹಿತನಾದ, ಎಲ್ಲಾ ಗೋಪ್ಯ ವಸ್ತುಗಳಿಗಿಂತಲೂ ಅತ್ಯಂತ ಗೋಪ್ಯನಾದ ಆ ಸ್ವಾಮಿಯನ್ನು ಪುನಃ ಪುನಃ ನಮಸ್ಕರಿಸುತ್ತೇನೆ.

**ಧ್ಯಾತಃ ಸ್ಮೃತಃ ಪೂಜಿತೋ ವಾ ಶ್ರುತಃ ಪ್ರಣಮಿತೋಽಪಿ ವಾ ।**
**ಸ್ವಪದಂ ಯೋ ದದಾತೀಶಸ್ತಂ ವಂದೇ ಪುರುಷೋತ್ತಮಂ ॥**

ಆ ಭಗವಂತ ನಿಜವಾಗಿಯೂ ಪುರುಷೋತ್ತಮ. ಯಾಕೆಂದರೆ ಅವನನ್ನು ಧ್ಯಾನಿಸಲಿ, ಸ್ಮರಿಸಲಿ, ಪೂಜಿಸಲಿ, ಶ್ರವಣಮಾಡಲಿ, ನಮಸ್ಕರಿಸಲಿ. ಭಕ್ತಿಯಿಂದ ಏನೇ ಮಾಡಲಿ ಅವರೆಲ್ಲರಿಗೂ ತನ್ನ ಘನವಾದ ವೈಕುಂಠವನ್ನು ಕೊಟ್ಟು ಕರುಣೆಯಿಂದ ಕಾಪಾಡುವನು. ಇಂತಹ ಪುರುಷೋತ್ತಮನನ್ನು ವಂದಿಸುತ್ತೇನೆ.

ಹೀಗೆ ಪರಾತ್ಪರನಾದ ಶ್ರೀ ಹರಿಯನ್ನು ಆ ಸನಕ ಸನಂದನ ಸನತ್ಕುಮಾರ ಸನಾತನ ಮೊದಲಾದ ನಾಲ್ಕು ಮಹರ್ಷಿಗಳು ಪರವಶರಾಗಿ ಸ್ತೋತ್ರ ಮಾಡತೊಡಗಿದರು. ಆಗ ಅವರ ಮನಸ್ಸಿನಲ್ಲಿ ಭಕ್ತಿಯ ಉದ್ರೇಕ, ಕಂಗಳಲ್ಲಿ ಆನಂದ ಭಾಷ್ಪ, ಕಂಠ ಗದ್ಗದ, ದೇಹ ಪುಲಕಿತ, ಏಕ ಪ್ರಕಾರವಾಗಿ ಪರಮಾತ್ಮನ ನಾಮ ಸಂಕೀರ್ತನ. ಮುನೀಶ್ವರರ ಆ ಮೌನ ಧ್ಯಾನದಲ್ಲಿ ನಾರದರೂ ಪಾಲುಗೊಂಡರು. ಅದರಿಂದ ಆ ಮಹಾಮುನೀಶ್ವರರ ಧ್ಯಾನ, ಗಾನಗಳಿಗೆ ಇನ್ನೂ ಕಳೆಕಟ್ಟಿತು. - ಆ ಬ್ರಹ್ಮಾನಂದದಲ್ಲಿ ಅವರೆಲ್ಲರೂ ಮೈಮರೆತರು. ಪ್ರಾತಃಕಾಲದಲ್ಲಿ ಎದ್ದು ಈ ಪುರುಷೋತ್ತಮನ ಸ್ತೋತ್ರವನ್ನು ಪಠಣ ಮಾಡಿದವರು ತಮ್ಮ ಎಲ್ಲ ಪಾಪವನ್ನು ತೊಳೆದುಕೊಂಡು, ಕೊನೆಗೆ ವಿಷ್ಣು ಲೋಕವನ್ನು ಪಡೆಯುವರು.

ನಾರದ ಮಹಾಪುರಾಣದಲ್ಲಿ ಎರಡನೇ ಅಧ್ಯಾಯ ಮುಗಿದುದು

—o—

## ಸೃಷ್ಟಿ ಖಂಡದಲ್ಲಿ ಭೂಗೋಲ ವರ್ಣನೆ, ಭಾರತದೇಶದ ಪ್ರಾಶಸ್ತ್ಯ

**ಅಧ್ಯಾಯ - ೩**

**ನಾರದ:-** ಸನಕನೆ, ಆದಿದೇವನಾದ ಆ ವಿಷ್ಣು ಪ್ರಭುವು ಬ್ರಹ್ಮಾದಿದೇವತೆಗಳನ್ನು ಹೇಗೆ ಸೃಷ್ಟಿ ಮಾಡಿದನು? ಹೇಗೂ ನೀನು ಸರ್ವಜ್ಞನಿರುವಿ. ಅದೆಲ್ಲವೂ ನಿನಗೆ ಚೆನ್ನಾಗಿ ಗೊತ್ತು. ಆದುದರಿಂದ ಅದೆಲ್ಲವನ್ನೂ ನೀನು ನನಗೆ ಹೇಳು.

**॥ ಸನಾಚ ಉವಾಚ ॥**

**ನಾರಾಯಣೋಽಕ್ಷರೋಽನಂತಃ ಸರ್ವವ್ಯಾಪೀ ನಿರಂಜನಃ ।**
**ತೇನೇದಮುಖಿಲಂ ವ್ಯಾಪ್ತಂ ಜಗತ್‌ಸ್ಥಾವರ ಜಂಗಮಂ ।**
**ಆದಿಸರ್ಗೇ ಮಹಾವಿಷ್ಣುಃ ಸ್ವಪ್ರಕಾಶೋ ಜಗನ್ಮಯಃ ।**
**ಗುಣಭೇದಮಧಿಷ್ಠಾಯ ಮೂರ್ತಿತ್ರಿಕಮವಾಸೃಜತ್ ।**
**ಸೃಷ್ಟ್ಯರ್ಥಮಸೃಜದ್ದೇವೋ ದಕ್ಷಿಣಾಂಗಾತ್ಪ್ರಜಾಪತಿಂ ।**
**ಮಧ್ಯೇ ರುದ್ರಾಖ್ಯಮೀಶಾನಂ ಜಗದಂತಕರಂ ಮುನೇ ॥**

ಶ್ರೀಮನ್ ನಾರಾಯಣನಿಗೆ ನಾಶವಿಲ್ಲ. ಅಂತಪಾರವಿಲ್ಲ. ಆದುದರಿಂದ ಅವನು ಅನಾದಿ, ಅನಂತ, ಅಕ್ಷರ ಎಂದು ಕರೆಯಲ್ಪಡುತ್ತಾನೆ. ಅವನು ವಿಶ್ವವ್ಯಾಪಿ. ಅವನು ಇಲ್ಲದ ಸ್ಥಳವೇ ಇಲ್ಲ. ಯಾವ ದೋಷವೂ ಅವನಲ್ಲಿ ಇಲ್ಲ. ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲ ಅವನು ವ್ಯಾಪಿಸಿ ನಿಂತಿದ್ದಾನೆ. ಆ ಪರಮಾತ್ಮ ಸ್ವಯಂಪ್ರಕಾಶ. ಜಗದಂತರ್ಯಾಮಿಯೂ ಆಗಿದ್ದಾನೆ ಆ ಸ್ವಾಮಿ. ಸತ್ವ, ರಜ, ತಮ ಎಂಬ ಮೂರು ಗುಣಗಳನ್ನು ಆಧಾರವಾಗಿಟ್ಟುಕೊಂಡು ತ್ರಿಮೂರ್ತಿಗಳ ಸೃಷ್ಟಿ ಮಾಡಿದ ಅದೇ ಪರಮಾತ್ಮ. ತನ್ನ ಬಲ ಪಾರ್ಶ್ವದ ಅವಯವಗಳಿಂದ ಬ್ರಹ್ಮದೇವರನ್ನು ಮೊದಲು ಸೃಷ್ಟಿಸಿದ ಆ ಶ್ರೀಹರಿ, ಪ್ರಪಂಚವನ್ನೆಲ್ಲ ಸೃಷ್ಟಿಮಾಡಬೇಕಾಗಿತ್ತಲ್ಲವೆ ಅವನಿಗೆ ಮೊದಲು! ಅದಕ್ಕಾಗಿ ಸೃಷ್ಟಿಕರ್ತೃತ್ವರೂಪವಾದ ತನ್ನ ವಿಚಿತ್ರ ಸಾಮರ್ಥ್ಯವನ್ನು ಅವನಲ್ಲಿಟ್ಟು ಚತುರ್ಮುಖನನ್ನು ಸೃಷ್ಟಿಸಿದ. ಮಧ್ಯಭಾಗದಿಂದ ಜಗತ್ತನ್ನು ಸಂಹರಿಸುವ ರುದ್ರದೇವರನ್ನು ನಿರ್ಮಿಸಿದನು. ಈ ಚರಾಚರ ಪ್ರಪಂಚವನ್ನು ಪಾಲನೆ ಮಾಡುವದಕ್ಕಾಗಿ ಸ್ವಯಂ ತಾನೇ ವಿಷ್ಣು ರೂಪದಿಂದ ಆವಿರ್ಭೂತನಾದ. ಇದೇ ದೇವನಾದ ಶ್ರೀ ಹರಿಯನ್ನು ಕೆಲವರು ಮಹಾದೇವ, ವಿಷ್ಣು, ಬ್ರಹ್ಮನೆಂದು ಹೇಳುತ್ತಾರೆ. ವಾಸ್ತವಿಕವಾಗಿ ಇದೆಲ್ಲವೂ ಆ ವಿಷ್ಣುವಿನದೇ ಮೂಲ ಶಕ್ತಿಯ ವಿವಿಧ ಆವಿಷ್ಕಾರವಾಗಿದೆ. ಭಗವಂತನ ಈ ವಿಲಕ್ಷಣವಾದ ಇಚ್ಛಾಶಕ್ತಿಯೇ ಜಗತ್ ಚಕ್ರದ ಸಂಚಾಲಕ ಶಕ್ತಿಯಾಗಿದೆ. ಭಗವಂತನ ಇಚ್ಛಾರೂಪವಾದ ಈ ಶಕ್ತಿಯನ್ನು ಮಾಯಾ ಎಂದೂ ಕರೆಯುತ್ತಾರೆ. ಪರಮಾತ್ಮನ ಈ ಶಕ್ತಿಗೂ ಪರಮಾತ್ಮನಿಗೂ ಭೇದವಿಲ್ಲ. ಅದನ್ನು- ಭಗವಂತನ ಆ ಶಕ್ತಿಯನ್ನು ಭಗವಂತನಿಂದ ಭಿನ್ನವೆಂದು ತಿಳಿದರೆ ಸಂಸಾರಬಂಧನ. ಅಭಿನ್ನವೆಂದರೆ ಸಂಸಾರದಿಂದ ಮುಕ್ತಿ. ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಆ ವಿಷ್ಣುವಿನಿಂದಲೇ ಉದ್ಭೂತವಾಗಿದೆ. ಶ್ರೀ ಹರಿಯಂತೆ ಅವನ ಶಕ್ತಿಯೂ ಜಗದ್ವ್ಯಾಪಿ

ಯಾಗಿದೆ. ಈ ಶಕ್ತಿಯನ್ನೇ ಕೆಲವರು ಲಕ್ಷ್ಮೀ ಎಂದೂ, 'ಭಾರತೀ' ಎಂದೂ, 'ಅಂಬಿಕಾ', 'ದುರ್ಗಾ', 'ಭದ್ರಕಾಳೀ', 'ಕೌಮಾರಿ', 'ವೈಷ್ಣವೀ', 'ಮಾಯಾ' 'ವಿದ್ಯಾ', ಎಂಬ ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ.

**'ಸ್ವಯಂ ಶಕ್ತಿ: ಪರಾ ವಿಷ್ಣೋಃ ಜಗತ್ ಸರ್ಗಾದಿಕಾರಿಣೀ ॥**

ವಿಷ್ಣುವಿನ ಈ ಪರಾಶಕ್ತಿಯೇ ಜಗತ್ತಿನ ಸೃಷ್ಟಿ, ಸ್ಥಿತಿ ಸಂಹಾರಾದಿಗಳನ್ನು ಮಾಡುತ್ತದೆ. ಪ್ರಪಂಚದ ಉತ್ಪತ್ತಿಗೆ ಕಾರಣವಾಗಿರುವದರಿಂದ ಪರಮಾತ್ಮನ ಆ ಪರಾಶಕ್ತಿಯನ್ನು ಜ್ಞಾನಿಗಳು ಪ್ರಕೃತಿ ಎಂದೂ ಕರೆಯುತ್ತಾರೆ. ಜಗದ್ಗುರುವಾದ ಆ ಮಹಾವಿಷ್ಣುವು ಸೃಷ್ಟಿಯನ್ನು ಮಾಡಲು ಉದ್ಯುಕ್ತನಾಗಿ ಪ್ರಕೃತಿ, ಪುರುಷ ಕಾಲವೆಂದು ತಾನೇ ಮೂರು ಬಗೆಯಾದ ಆ ಭಗವಂತನು ಸೃಷ್ಟಿ ಮಾಡಲು ಬಯಸಿದ ಕೂಡಲೇ ಆ ಬಗೆ ಜಡಪ್ರಕೃತಿಯು ಬದಲಾವಣೆ ಹೊಂದಿತು. ಅದರ ಪರಿಣಾಮವೇ 'ಬುದ್ಧಿ' ಎಂಬ ಮಹತ್ ತತ್ವವಾಯಿತು. ಆ ಮಹತ್ ತತ್ವದಿಂದ ಅಹಂಕಾರ ಜನಿಸಿತು. ಅಹಂಕಾರದಿಂದ ಸೂಕ್ಷ್ಮವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ತನ್ಮಾತ್ರಗಳೂ ಮತ್ತು ಕಣ್ಣು, ಕಿವಿ, ನಾಲಿಗೆ, ಮೂಗು, ತೊಗಲು ಎಂದು ಐದು ಇಂದ್ರಿಯಗಳೂ ಹುಟ್ಟಿದವು. ಈ ಪಂಚ ತನ್ಮಾತ್ರಗಳಲ್ಲಿ ಶಬ್ದ ತನ್ಮಾತ್ರದಿಂದ ಆಕಾಶ, ಸ್ಪರ್ಶದಿಂದ ವಾಯು, ರೂಪದಿಂದ ತೇಜಸ್ಸು, ರಸದಿಂದ ಜಲ, ಗಂಧದಿಂದ ಪೃಥ್ವಿ ಎಂಬ ಪಂಚ ಮಹಾಭೂತಗಳು ನಿರ್ಮಿತವಾದವು. ಈ ಪಂಚ ಮಹಾಭೂತಗಳೇ ಕ್ರಮವಾಗಿ ಪ್ರಪಂಚದ ಪ್ರತಿಯೊಂದು ಪದಾರ್ಥಕ್ಕೆ ಕಾರಣೀಭೂತವಾಗಿವೆ. ಅನಂತರ ಸೃಷ್ಟಿ ಮಾಡಲಿಕ್ಕೆ ವಿಷ್ಣುವಿನಿಂದ ಚತುರ್ಮುಖನು ತಮೋಗುಣಮಯವಾದ ಪದಾರ್ಥಗಳನ್ನು ಸೃಷ್ಟಿಸಿದನು. ಇದೇ ತಾಮಸ ಸೃಷ್ಟಿ.

ಅನಂತರ ಆ ಬ್ರಹ್ಮದೇವನು ಪಶುಪಕ್ಷಿ ಮೃಗ ಮುಂತಾದ ನಾನಾ ಜಂತು ಸೃಷ್ಟಿಸಿ ಅಷ್ಟು ಮಾತ್ರ ಸಾಲದೆಂದು ತಿಳಿದು ದೇವತೆಗಳನ್ನು ಸೃಷ್ಟಿಸಿದನು. ಆ ಬಳಿಕ ಪರಮಾತ್ಮನ ಹೊಕ್ಕಳದಲ್ಲಿ ಹುಟ್ಟಿದ ಕಮಲದ ಕೂಸಾದ ಆ ಬ್ರಹ್ಮದೇವನು ಮನುಷ್ಯ ಸೃಷ್ಟಿಯನ್ನು ಪ್ರಾರಂಭಿಸಿದನು. ಈ ಸೃಷ್ಟಿಯ ವಿಶೇಷ ಅಭಿವೃದ್ಧಿಗಾಗಿ ದಕ್ಷ ಪ್ರಜಾಪತಿ ಮೊದಲಾದ ಪುತ್ರರನ್ನು ಹುಟ್ಟಿಸಿದನು. ಆ ಬ್ರಹ್ಮಕುಮಾರರೂ ಅವರಿಂದ ನಿರ್ಮಿತವಾದ ದೇವ, ದೈತ್ಯ, ಮನುಷ್ಯರೇ ಮೊದಲಾದವರೂ ಈ ಪ್ರಪಂಚವನ್ನೆಲ್ಲ ವ್ಯಾಪಿಸಿದರು. ಬ್ರಹ್ಮದೇವರಿಂದ ಸೃಷ್ಟರಾದ ಈ ದೇವ, ಮಾನವ, ದಾನವ, ಹಾಗೂ ಪಶು, ಪಕ್ಷಿ, ಕ್ರಿಮಿ ಕೀಟಾದಿಗಳಿಗೆ ನೆಲೆಸಲು ನೆಲೆಯಾಗಿ ಹದಿನಾಲ್ಕು ಲೋಕಗಳು ಭಗವಂತನಿಂದ ಸೃಷ್ಟವಾದವು. ಭೂಲೋಕ, ಅಂತರಿಕ್ಷ ಸ್ವರ್ಗಲೋಕ, ಮಹರ್ಲೋಕ, ತಪೋಲೋಕ ಜನೋಲೋಕ ಮತ್ತು ಸತ್ಯಲೋಕ ಎಂದು ಮೇಲೆ ಏಳು ಲೋಕಗಳು, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ, ಎಂಬ ಏಳು ಕೆಳಗೆ ಲೋಕಗಳು. ಹೀಗೆ ಒಟ್ಟು ಹದಿನಾಲ್ಕು ಲೋಕಗಳು. ಈ ಹದಿನಾಲ್ಕು ಲೋಕಗಳ ರಕ್ಷಣೆಗಾಗಿ ಲೋಕಪಾಲಕರನ್ನು ಆ ಪರಮಾತ್ಮನು ಕಲ್ಪಿಸಿದನು. ಆಯಾ ಲೋಕಗಳ ಹಾಗೂ ಭೂಖಂಡಗಳ ಧಾರಣೆಗೆ ಅವಶ್ಯಕವಾದ ಪರ್ವತ, ನದಿ, ನಾಲೆ, ವೃಕ್ಷ ಹಾಗೂ ಉಪಜೀವನ ಸಾಧನೆಗಳನ್ನು ಆ ಪರಮಾತ್ಮನೇ ಕಲ್ಪಿಸಿದನು. ಈಗ ನಾವು ವಾಸಿಸುವ ಈ ಭೂಲೋಕದ ಮಧ್ಯಭಾಗದಲ್ಲಿ ಮೇರು ಪರ್ವತವಿದೆ. ಇದು ಎಲ್ಲ ದೇವತೆಗಳಿಗೂ ಆಧಾರ ಮತ್ತು ಆಶ್ರಯ. ಇದರ ಅಂತ್ಯ

ಭಾಗದಲ್ಲಿ ಲೋಕಾಲೋಕ ಪರ್ವತ. ಇವೆರಡರ ನಡುವೆ ಭೋರ್ಗರೆಯುವ ಏಳುಕಡಲುಗಳು, ಅವುಗಳ ನಡುವೆ ಏಳು ದ್ವೀಪಗಳು. ಪತಿಯೊಂದು ದ್ವೀಪದಲ್ಲಿ ಕುಲ ಪರ್ವತಗಳು. ತುಂಬಿಸೂಸುವ ನದಿಗಳು. ದೇವತೆಗಳಂತೆ ದೇದೀಪ್ಯಮಾನರಾದ ಜನರು ಈ ದ್ವೀಪಗಳಲ್ಲಿ ವಾಸಿಸುವರು. ಜಂಬು, ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂದು ಆ ಏಳು ದ್ವೀಪಗಳಿಗೆ ಹೆಸರು. ಈ ಏಳು ದ್ವೀಪಗಳು ಏಳು ವಿಧವಾದ ಬೇರೆ ಬೇರೆ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿವೆ. ಉಪ್ಪು ನೀರಿನ ಸಮುದ್ರದಿಂದ ಜಂಬೂ ದ್ವೀಪವು, ಕಬ್ಬಿನರಸದ ಸಾಗರದಿಂದ ಪ್ಲಕ್ಷದ್ವೀಪವು, ಸುರಾ ಸಮುದ್ರದಿಂದ ಶಾಲ್ಮಲಾ ದ್ವೀಪವು ತುಪ್ಪದ ಸಾಗರದಿಂದ ಕುಶ ದ್ವೀಪವು ಮೊಸರಿನ ಮಹೋದಧಿಯಿಂದ ಕ್ರೌಂಚ ದ್ವೀಪವು, ಹಾಲಿನ ಸಮುದ್ರದಿಂದ ಶಾಕ ದ್ವೀಪವು, ನೀರಿನ ಸಮುದ್ರದಿಂದ ಪುಷ್ಕರ ದ್ವೀಪವು ಸುತ್ತುವರಿಯಲ್ಪಟ್ಟಿದೆ. ಲೋಕಾಲೋಕ ಪರ್ವತ ಮತ್ತು ಕ್ಷೀರ ಸಾಗರಕ್ಕೆ ಉತ್ತರ ಭಾಗದಲ್ಲಿಯೂ ಹಿಮವತ್ ಪರ್ವತದ ದಕ್ಷಿಣ ಭಾಗದಲ್ಲಿಯೂ ಇರುವ ದೇಶ ಭರತಖಂಡವೆಂದೂ ತಿಳಿಯಬೇಕು.

ಜೀವಿಗಳು ಮಾಡಿದ ಎಲ್ಲ ವಿಧವಾದ ಕರ್ಮಗಳಿಗೂ ಫಲ ದೊರಕುವದು ಈ ಭರತಖಂಡದಲ್ಲಿ ಮಾಡುವ ಅನುಷ್ಠಾನದಿಂದ ಮಾತ್ರ. ಪ್ರಾರಬ್ಧ, ಸಂಚಿತ, ಆಗಾಮಿ ಎಂದು ಕರ್ಮವು ಮೂರು ವಿಧವಾಗಿದೆ. ಕಾಯಿಕ, ವಾಚಿಕ ಮಾನಸಿಕ ಎಂದೂ ಕರ್ಮವನ್ನು ವಿಭಾಗಿಸುವರು. ಶುಭ, ಅಶುಭ, ಉದಾಸೀನವೆಂದೂ ಈ ಕರ್ಮದಲ್ಲಿ ವೈವಿಧ್ಯ ಉಂಟು. ಈ ಎಲ್ಲ ವಿಧವಾದ ಕರ್ಮಗಳನ್ನು ಆಚರಿಸುವ ಸಾಧನ ಭೂಮಿ ಅಥವಾ ಕರ್ಮಕ್ಷೇತ್ರವೆಂದರೆ ಈ ಭಾರತವರ್ಷವೇ.

ಜ್ಞೇಯಂ ತದ್ಭಾರತಂ ವರ್ಷಂ ಸರ್ವಕರ್ಮ ಫಲಪ್ರದಂ ॥
ಅತ್ರ ಕರ್ಮಾಣಿ ಕುರ್ವಂತಿ ತ್ರಿವಿಧಾನಿ ತು ನಾರದ ॥
ತತ್ಫಲಂ ಭುಜ್ಯತೇ ಚೈವ ಭೋಗಭೂಮಿಷ್ವನುಕ್ರಮಾತ್ ॥
ಭಾರತೇ ತು ಕೃತಂ ಕರ್ಮ ಶುಭಂ ವಾಽಶುಭಮೇವಚ ॥

ಈ ಭರತಖಂಡದಲ್ಲಿ ಮಾಡಿದ ಕರ್ಮಗಳ ಫಲವನ್ನು ಬೇರೆ ಬೇರೆ ಭೋಗ ಭೂಮಿಗಳಲ್ಲಿ ಪ್ರಾಣಿಗಳು ಅನುಭವಿಸುತ್ತವೆ. ಆದುದರಿಂದ

'ಅದ್ಯಾಪಿ ದೇವಾ ಇಚ್ಛಂತಿ ಜನ್ಮ ಭಾರತ ಭೂತಲೇ ॥

ಇಂದಿಗೂ ದೇವತೆಗಳು ಭರತಖಂಡದಲ್ಲಿ ಹುಟ್ಟಬರಬೇಕೆಂದು ಹಂಬಲಿಸುತ್ತಾರೆ.

'ಕದಾ ವಯಂ ಹಿ ಲಪ್ಸ್ಯಾಮೋ ಜನ್ಮ ಭಾರತ ಭೂತಲೇ ॥
ಕದಾ ಪುಣ್ಯೇನ ಮಹತಾ ಯಾಸ್ಯಾಮಃ ಪರಮಂ ಪದಮ್ ॥

ಈ ಭರತಭೂಮಿಯಲ್ಲಿ ನಾವು ಎಂದು ಜನ್ಮವನ್ನು ಪಡೆಯುತ್ತೇವೆ. ಪುಣ್ಯಾನುಷ್ಠಾನವನ್ನು ಮಾಡಿ ಪರಮ ಪದವನ್ನು ಎಂದು ಹೊಂದುತ್ತೇವೆ.

ದಾನೈರ್ವಾ ವಿವಿಧೈರ್ಯಜ್ಞೈಃ ತಪೋಭಿರ್ವಾ ಪರಂ ಹರಿಂ!
ಜಗದೀಶಂ ಸಮೇಷ್ಯಾಮೋ ನಿತ್ಯಾನಂದಮನಾಮಯಂ ॥

ಬಗೆ ಬಗೆಯ ದಾನ, ತಪಸ್ಸುಗಳಿಂದಲೂ ಪರಮಾತ್ಮನನ್ನು ಭರತ ಖಂಡದಲ್ಲಿ ಆರಾಧಿಸಿ, ಮೆಚ್ಚಿಸಿ ಆನಂದ ಮಯನಾದ, ದುಃಖರಹಿತನಾದ, ಜಗದೀಶ್ವರನಾದ ಆ ವಿಷ್ಣುವನ್ನು ನಾವು ಎಂದು ಹೊಂದುವೆವು? ಹೀಗೆ ಭರತಖಂಡದಲ್ಲಿ ಜನಿಸಿ ಭಗವದಾರಾಧನೆಯನ್ನು ಮಾಡಲು ತವಕಿಸುತ್ತಾರೆ - ದೇವಾಧಿದೇವತೆಗಳು.

**ಯೋ ಭಾರತಭುವಂ ಪ್ರಾಪ್ಯ ವಿಷ್ಣುಪೂಜಾಪರೋ ಭವೇತ್ ।**
**ನ ತಸ್ಯ ಸದೃಶೋಽನ್ಯೋಽಸ್ತಿ ತ್ರಿಷು ಲೋಕೇಷು ನಾರದ ।**
**ಹರಿಕೀರ್ತನಶೀಲೋ ವಾ ತದ್ಭಕ್ತಾನಾಂ ಪ್ರಿಯೋಽಪಿ ವಾ ॥**
**ಶುಶ್ರೂಷುರ್ವಾಪಿ ಮಹತಃ ಸ ವಂದ್ಯೋ ದಿವಿಜೈರಪಿ ॥**

ಭರತಖಂಡದಲ್ಲಿ ಜನಿಸಿ ವಿಷ್ಣು ಪೂಜೆಯಲ್ಲಿ ಆಸಕ್ತನಾದ ಭಕ್ತನಿಗೆ ಸಮಾನರಾದವರು ಮೂರು ಲೋಕದಲ್ಲಿಯೇ ಯಾರೂ ಇಲ್ಲ. ಹರಿಯ ನಾಮವನ್ನು ಧ್ಯಾನ ಮಾಡುವವನೂ, ಅದನ್ನು ಕೇಳುವವನೂ ಶ್ರೀ ಹರಿಯ ಭಕ್ತನೂ, ಆ ಭಕ್ತರಿಗೆ ಪ್ರಿಯವಾದ ಮನುಷ್ಯನೂ ಕೂಡ ದೇವತೆಗಳಿಗೂ ವಂದ್ಯನಾಗುವನು.

**ನಾರಾಯಣೇತಿ ಕೃಷ್ಣೇತಿ ವಾಸುದೇವೇತಿ ಯೋ ವದೇತ್**
**ಅಹಿಂಸಾದಿಪರಃ ಶಾಂತಃ ಸೋಽಪಿ ವಂದ್ಯಃ ಸುರೋತ್ತಮೈಃ ॥**
**ಶಿವೇತಿ ನೀಲಕಂಠೇತಿ ಶಂಕರೇತಿ ಚ ಯಃ ಸ್ಮರೇತ್**
**ಸರ್ವಭೂತಹಿತೋ ನಿತ್ಯಂ ಸೋಽಭ್ಯರ್ಚ್ಯೋ ದಿವಿಜೈಃ ಸ್ಮೃತಃ ॥**

ನಾರಾಯಣ, ಕೃಷ್ಣ ವಾಸುದೇವ ಎಂದು ಹೇಳುತ್ತ ಭಕ್ತಿಯಿಂದ ಭಗವಂತನನ್ನು ನೆನೆಯುವ, ಅಹಿಂಸಾ, ಸತ್ಯಾದಿ ಧರ್ಮಾಚರಣೆಯಲ್ಲಿ ಆಸಕ್ತನಾದ, ಶಾಂತಿ ಸಂಪನ್ನನಾದ ಮನುಷ್ಯನು ದೇವಾಧಿದೇವತೆಗಳಿಂದಲೂ ವಂದಿತನಾಗುತ್ತಾನೆ. ಶಿವ, ನೀಲಕಂಠ, ಶಂಕರ ಎಂದು ಮುಂತಾದ ನಾಮಗಳಿಂದ ಅವನನ್ನು ಧ್ಯಾನ ಮಾಡುವ ಸರ್ವಪ್ರಾಣಿಗಳಿಗೂ ಹಿತವನ್ನು ಗೈಯುವ ಮಾನವನು ಸುರವಂದ್ಯನಾಗುತ್ತಾನೆ.

ಈ ತರಹದ ಭಗವಂತನ ನಾಮಸ್ಮರಣಾದಿ, ಅನೇಕ ಪುಣ್ಯಕರ್ಮಗಳನ್ನು ಭರತ ಭೂಮಿಯಲ್ಲಿ ಜನಿಸಿ ಗೈಯುವವನು ನಮಗೂ ಕೂಡ ವಂದ್ಯನಾಗಿದ್ದಾನೆ.

**ಸ ಏವ ದುಷ್ಕೃತಿರ್ಮೂಢಃ ಕೋಽನ್ಯಸ್ತಸ್ಮಾದಚೇತನಃ ।**
**ಸಂಪ್ರಾಪ್ಯ ಭಾರತೇ ಜನ್ಮ ಸತ್ಕರ್ಮಸು ಪರಾಙ್ಮುಖಃ ॥**
**ಪೀಯೂಷಕಲಶಂ ಮುಕ್ತ್ವಾ ವಿಷಭಂಡಮುಪಾಶ್ರಿತಃ ॥**

ಇಂಥ ಪುಣ್ಯಭೂಮಿಯಾದ ಭರತ ಖಂಡದಲ್ಲಿ ಜನ್ಮವನ್ನು ತಾಳಿಯೂ ಸತ್ಕರ್ಮ ಮಾಡದೆ ಸದಾಚಾರದಿಂದ ಪರಾಙ್ಮುಖನಾದ ಮನುಷ್ಯನು ಮಹಾ ಮೂರ್ಖನೇ ಸರಿ. ಅಂತಹ ಪಾಪಿಯು ಬದುಕಿಯೂ ಸತ್ತಂತೆ! ಸಮೀಪದಲ್ಲಿರುವ ಅಮೃತ ಕಲಶವನ್ನು ಬಿಟ್ಟು ವಿಷಪಾತ್ರೆಯನ್ನು ಎತ್ತಿಕೊಂಡಂತೆ.

**ಶುಭಂ ಕರ್ಮ ಸಮುತ್ಸೃಜ್ಯ ದುಷ್ಕರ್ಮಾಣಿ ಕರೋತಿ ಯಃ ॥**
**ಕಾಮಧೇನುಂ ಪರಿತ್ಯಜ್ಯ ಅರ್ಕಕ್ಷೀರಂ ಸ ಮಾರ್ಗತಿ ॥**

ಈ ಭಾರತ ಭೂಮಿಯಲ್ಲಿ ಜನಿಸಿ ಶ್ರುತಿ, ಸ್ಮೃತಿಗಳಲ್ಲಿ ಹೇಳಿದ ಶುಭಕರ್ಮ ಮಾಡುವದನ್ನು ಬಿಟ್ಟು, ದುಷ್ಕರ್ಮಗಳನ್ನು ಆಚರಿಸುವವನು ಕಾಮಧೇನುವನ್ನು ಬಿಟ್ಟು ಎಕ್ಕದ ಹಾಲನ್ನು ಹುಡುಕುವಂತೆ ಮೂರ್ಖನೆನಿಸುವನು. ಹೀಗೆ ಬ್ರಹ್ಮಾದಿ ದೇವತೆಗಳೂ ಕೂಡ ಭಾರತ ಭೂಮಿಯನ್ನು ಹೊಗಳಿದ್ದಾರೆ. ಹೃದಯ ತುಂಬಿ ಹಾಡಿದ್ದಾರೆ.

**ತಸ್ಮಾತ್ ಪುಣ್ಯತಮಂ ಜ್ಞೇಯಂ ಭಾರತಂ ವರ್ಷಮುತ್ತಮಂ ।**

ಆದುದರಿಂದ ಈ ಭಾರತವರ್ಷವು ಪುಣ್ಯಭೂಮಿ ಎಂದು ತಿಳಿಯಬೇಕು. ಇದೇ ಅತ್ಯುತ್ತಮ ಭೂಖಂಡವೆಂದು ಭಾವಿಸಬೇಕು. ಸುದೈವದಿಂದ ಈ ನಮ್ಮ ಭಾರತ ದೇಶದಲ್ಲಿ ಉದಿಸಿ ಬಂದವರು ವೇದೋಕ್ತವಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಕೇವಲ ಹರಿಯ ಪ್ರೀತಿಗಾಗಿ ಮಾಡಬೇಕು. ತಮ್ಮ ವರ್ಣಾಶ್ರಮಕ್ಕೆ ಉಚಿತವಾದ ಆಚಾರವನ್ನು ಎಂದೂಬಿಡಬಾರದು. ತನ್ನ ವರ್ಣಾಶ್ರಮಕ್ಕೆ ಉಚಿತವಾದ ಆಚಾರದಿಂದ ಶೂನ್ಯನಾದ ಅನಾಚಾರಿ ಮನುಷ್ಯನು ಪತಿತನಾಗುತ್ತಾನೆ.

**'ಸದಾಚಾರ ಪರೋ ವಿಪ್ರೋ ವರ್ಧತೇ ಬ್ರಹ್ಮತೇಜಸಾ'**

ಸದಾಚಾರ ಸಂಪನ್ನನಾದ ವಿಪ್ರನು ತನ್ನ ಬ್ರಹ್ಮತೇಜದಿಂದ ಯಾವಾಗಲೂ ಅಭಿವೃದ್ಧಿಯನ್ನು ಹೊಂದುತ್ತಲೇ ಇರುತ್ತಾನೆ, ವಿಷ್ಣು ಪ್ರೀತಿಗಾಗಿ, ವಿಷ್ಣು ಪ್ರೇರಣೆಯಿಂದಲೇ ಎಲ್ಲ ಕಾರ್ಯಗಳನ್ನು ಭಕ್ತಿಯುಕ್ತನಾಗಿ ಆಚರಿಸಬೇಕು.

**ವಾಸುದೇವ ಪರೋ ಧರ್ಮೋ ವಾಸುದೇವ ಪರಂ ತಪಃ ।**
**ವಾಸುದೇವ ಪರಂ ಜ್ಞಾನಂ ವಾಸುದೇವ ಪರಾ ಗತಿಃ**
**ವಾಸುದೇವಾತ್ಮಕಂ ಸರ್ವಂ ಜಗತ್ಸ್ಥಾವರ ಜಂಗಮಂ ।**
**ಆ ಬ್ರಹ್ಮಸ್ತಂಬಪರ್ಯಂತಂ ತಸ್ಮಾದನ್ಯನ್ನ ವಿದ್ಯತೆ ॥**

ವಾಸುದೇವ ವಿಷಯಕವಾದುದೇ ಧರ್ಮವು ಎಂದರೆ ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಅನುಷ್ಠಾನಮಾಡುವದೇ ಧರ್ಮವೆನಿಸುವುದು ಎಂದು ತಾತ್ಪರ್ಯ. ವಾಸುದೇವನನ್ನು ಧ್ಯಾನಿಸುವದೇ ತಪಸ್ಸು. ವಾಸುದೇವನ ಮಹಿಮೆಯನ್ನು ತಿಳಿಯುವದೇ ಜ್ಞಾನವು. ಈ ಸಾಧನೆಗಳಿಂದ ಹೊಂದಬೇಕಾದ ಸ್ಥಾನವೂ ವಾಸುದೇವನೇ ಆಗಿರುತ್ತಾನೆ.

ನಾರದ ಮಹಾಪುರಾಣದಲ್ಲಿ ಮೂರನೇ ಅಧ್ಯಾಯ ಮುಗಿದುದು

—○—

**ಶೌನಕ:-** ಯಾವದೇ ಧರ್ಮ ಕರ್ಮಾನುಷ್ಠಾನವು ಸಫಲವಾಗಬೇಕಾದರೆ ಶ್ರದ್ಧೆಯು ಮುಖ್ಯ. ಶ್ರದ್ಧೆಯಿಂದ ಸರ್ವವೂ ಸಾಧ್ಯ. ಶ್ರೀಹರಿಯೂ ಶ್ರದ್ಧೆಯಿಂದ ಸಂತುಷ್ಟನಾಗುತ್ತಾನೆ. ಶ್ರದ್ಧೆಯೆಂದರೆ ಭಗವಂತನಲ್ಲಿ ಭಕ್ತಿ. ಆ ಭಕ್ತಿಯಿಂದಲೇ ಯಾವ ಕರ್ಮವೂ ಸಫಲವಾಗುವದಿಲ್ಲ. ಪ್ರಾಣಿಗಳ ಸಕಲಕಾರ್ಯಗಳಿಗೆ ಬೆಳಕು ಬೇಕಷ್ಟೇ! ಹಾಗೇ ಸರ್ವಸಿದ್ಧಿಗಳಿಗೂ ಭಕ್ತಿಯೇ ಮುಖ್ಯ ಕಾರಣ. ಈ ಭಕ್ತಿಯೆನ್ನುವದು ಸರ್ವಸಿದ್ಧಿಕರ. ಜೀವನ ಸರ್ವಸ್ವವಾಗಿದೆ.

**ಶ್ರದ್ಧಾವಾನ್ ಲಭತೇ ಧರ್ಮಂ ಶ್ರದ್ಧಾವಾನರ್ಥಮಾಪ್ನುಯಾತ್ ।**
**ಶ್ರದ್ಧಯಾ ಸಾಧ್ಯತೇ ಕಾಮಃ ಶ್ರದ್ಧಾವಾನ್ ಮೋಕ್ಷಮಾಪ್ನುಯಾತ್ ॥**

ಶ್ರದ್ಧೆಯುಳ್ಳವನೇ ಧರ್ಮವನ್ನೂ, ಅರ್ಥವನ್ನೂ, ಕಾಮವನ್ನೂ, ಮೋಕ್ಷವನ್ನೂ ಪಡೆಯುತ್ತಾನೆ. ಇಂಥ ಶ್ರದ್ಧೆ ಅಥವಾ ಭಕ್ತಿ ಇಲ್ಲದ ದಾನ, ತಪಸ್ಸು ಯಜ್ಞ ವಿಪುಲದಕ್ಷಿಣೆ ಯಾವುದರಿಂದಲೂ ಭಗವಂತನು ಪ್ರೀತನಾಗುವದಿಲ್ಲ. ಭಕ್ತಿಯಿಲ್ಲದ ಮನುಷ್ಯನು ಮೇರುಪರ್ವತದಷ್ಟು ಬಂಗಾರ ಕೊಟ್ಟರೂ ಫಲವಿಲ್ಲ. ತನ್ನ ಹಣವನ್ನು ಮಾತ್ರ ಹಾಳುಮಾಡಿಕೊಂಡಂತೆ. ಭಕ್ತಿರಹಿತವಾಗಿ ಮಾಡಿದ ತಪಸ್ಸು ಬರೀ ದೇಹದಂಡನೆ. ಭಕ್ತಿಯಿಲ್ಲದೆ ಮಾಡಿದ ಹೋಮವು ಬೂದಿಯಲ್ಲಿ ಹೋಮ ಮಾಡಿದಂತೆ. ಸಾವಿರ ಅಶ್ವಮೇಧ ಮಾಡಿದರೂ ಭಕ್ತಿಯಿಲ್ಲದಿದ್ದರೆ ಎಲ್ಲವೂ ವ್ಯರ್ಥ. ಆದುದರಿಂದ ಹರಿಯಲ್ಲಿ ಭಕ್ತಿಯನ್ನಿಟ್ಟು ವೇದೋಕ್ತವಾದ ಧರ್ಮಗಳನ್ನೂ ಸ್ವಾಶ್ರಮೋಚಿತವಾದ ಕರ್ಮಗಳನ್ನೂ ತಪ್ಪದೇ ಮಾಡಬೇಕು.

**ಆಚಾರ ಪ್ರಭವೋ ಧರ್ಮಃ ಧರ್ಮಸ್ಯ ಪ್ರಭುರಚ್ಯುತಃ ।**
**ಆಶ್ರಮಾಚಾರಯುಕ್ತೇನ ಪೂಜಿತಃ ಸರ್ವದಾ ಹರಿಃ ॥**

ಸದಾಚಾರದ ಮೂಲವು ಧರ್ಮವೇ. ವಿಹಿತ ಕರ್ಮಾಚರಣೆಯಿಂದ ಧರ್ಮವು ಲಭಿಸುತ್ತದೆ. ಇಂತಹ ಧರ್ಮಕ್ಕೆ ಶ್ರೀಹರಿಯೇ ನಿಯಾಮಕನು. ತನ್ನ ವರ್ಣ ಹಾಗೂ ಆಶ್ರಮಗಳಿಗೆ ವಿಹಿತವಾದ ಧರ್ಮಾನುಷ್ಠಾನ ಹಾಗೂ ಸದಾಚಾರಗಳು ಸರ್ವದಾ ಶ್ರೀಹರಿಯ ಪೂಜೆ ಎನಿಸುತ್ತವೆ. ಆಚಾರ ರಹಿತನಾದವನು ವೇದ ವೇದಾಂತಗಳನ್ನು ಓದಿ ಮಹಾ ಪಂಡಿತನಾಗಿದ್ದರೂ ವಿಹಿತ ಕರ್ಮಗಳನ್ನು ತ್ಯಜಿಸಿದ್ದರಿಂದ ಪತಿತನೆಂದೇ ತಿಳಿಯಬೇಕು.ವೇದೋಕ್ತ ಕರ್ಮಾನುಷ್ಠಾನ ಮಾಡದ ಮನುಷ್ಯನು ಎಷ್ಟೇ ಹರಿಯ ಧ್ಯಾನ ಮಾಡಲಿ, ಹರಿಭಕ್ತಿ ತೋರಿಸಲಿ ಅವನು ಭ್ರಷ್ಟನೇ ಸರಿ. ಪತಿತನೆಂದೇ ಅವನನ್ನು ಕರೆಯುತ್ತಾರೆ. ಆಚಾರ ಭ್ರಷ್ಟನಾದ ಮೂಢನನ್ನು ವೇದವು ಉದ್ಧರಿಸಲಾರದು. ಹರಿಭಕ್ತಿಯು ಕಾಪಾಡಲಾರದು. ಶಿವಭಕ್ತಿಯು ರಕ್ಷಿಸಲಾರದು. ಆಚಾರವೇ ಮುಖ್ಯ.

**ಆಚಾರಾತ್ ಪ್ರಾಪ್ಯತೇ ಸ್ವರ್ಗಃ ಆಚಾರಾತ್ ಪ್ರಾಪ್ಯತೇ ಸುಖಂ ।**
**ಆಚಾರಾತ್ಪ್ರಾಪ್ಯತೇ ಮೋಕ್ಷ ಆಚಾರಾತ್ಕಿಂ ನ ಲಭ್ಯತೇ ॥**

ಸ್ವರ್ಗ, ಸುಖ, ಮೋಕ್ಷ ಇವುಗಳೆಲ್ಲವೂ ಸದಾಚಾರದಿಂದ ಲಭಿಸುತ್ತದೆ. ಸದಾಚಾರದಿಂದ ಏನುತಾನೇ ಲಭಿಸಲಾರದು? ಅರ್ಥಾತ್ ಎಲ್ಲವೂ ಸಿದ್ಧಿಸುತ್ತದೆ.

**ಸ್ವಾಶ್ರಮಾಚಾರಯುಕ್ತಸ್ಯ ಹರಿಭಕ್ತಿರ್ಯದಾ ಭವೇತ್ ।**
**ನ ತಸ್ಯತ್ರಿಷು ಲೋಕೇಷು ಸದೃಶೋಽಸ್ತ್ಯಜನಂದನ ॥**

ತನಗೆ ವಿಹಿತವಾದ ಕರ್ಮ ಮತ್ತು ಸದಾಚಾರಯುಕ್ತನಾದ ಮನುಷ್ಯನಲ್ಲಿ ಹರಿಭಕ್ತಿಯು ಅತಿಶಯವಾಗಿದ್ದರೆ ಅವನಿಗೆ ಸಮಾನರಾದ ಮಾನವರು ಮೂರು ಲೋಕದಲ್ಲಿಯೇ ಯಾರೂ ಇರುವದಿಲ್ಲ. ಮಾನವ ಮಾತ್ರರಲ್ಲಿ ಇಂಥ ಸ್ವವಿಹಿತ ಕರ್ಮಾಚಾರಗಳಲ್ಲಿ ನಿಷ್ಠೆ ಬರಬೇಕಾದರೆ ಹರಿಭಕ್ತಿಯೇ ಮೂಲಕಾರಣ. ಭಕ್ತಿಯಿಂದ ಮಾನವನು ವೇದೋಕ್ತಕರ್ಮಗಳನ್ನು ಮಾಡುತ್ತಾನೆ. ಆ ಕರ್ಮಗಳಿಂದ ಶ್ರೀ ಹರಿಯು ಸುಪ್ರೀತನಾಗುತ್ತಾನೆ. ಆ ಹರಿ ಪ್ರೀತಿಯಿಂದ ಅವನ ಪ್ರಸಾದವಾಗಿ ಅಪರೋಕ್ಷಜ್ಞಾನವಾಗುತ್ತದೆ. ಆ ಅಪರೋಕ್ಷ ಜ್ಞಾನದಿಂದ ಮಾನವನು ಮೋಕ್ಷ ಪಡೆಯುತ್ತಾನೆ. ಈ ಮಾತನ್ನು ಹಿರಿಯರು ಪದ್ಯದಿಂದ ಹೀಗೆ ಹೇಳಿದ್ದಾರೆ.

**ಭಕ್ತ್ಯಾ ಸಿದ್ಧ್ಯಂತಿ ಕರ್ಮಾಣಿ ಕರ್ಮಭಿಸ್ತುಷ್ಯತೇ ಹರಿಃ ।**
**ತಸ್ಮಿನ್ ತುಷ್ಟೇ ಭವೇದ್ ಜ್ಞಾನಂ ಜ್ಞಾನಾನ್ಮೋಕ್ಷಮವಾಪ್ನುಯಾತ್॥**

ಈ ಎಲ್ಲ ವಚನಗಳ ಮೇಲಿಂದ ಸರ್ವರಿಂದಲೂ ಅಪೇಕ್ಷಿತವಾದ ಮೋಕ್ಷಕ್ಕೆ ಭಗವಂತನ ಪ್ರಸಾದ ಕಾರಣ. ಆ ಪ್ರಸಾದಕ್ಕೆ ಅವನ ಸಾಕ್ಷಾತ್ಕಾರ. ಅರ್ಥಾತ್ ಅಪರೋಕ್ಷ ಜ್ಞಾನ. ಆ ಅಪರೋಕ್ಷ ಜ್ಞಾನಕ್ಕೆ ಹರಿಯ ಪ್ರೀತಿ. ಆ ಹರಿಯ ಪ್ರೀತಿಗೆ ವಿಹಿತ ಕರ್ಮ. ಆ ವಿಹಿತ ಕರ್ಮಾಚರಣೆಗೆ ಹರಿಭಕ್ತಿಯು ಕಾರಣ ಎಂದು ಸಿದ್ಧವಾದಂತಾಯಿತು. ಅಂತೂ ಎಲ್ಲದಕ್ಕೂ ಮುಖ್ಯ ಹಾಗೂ ಮೂಲ ಕಾರಣ ಹರಿಭಕ್ತಿ. ಅಂಥ ಹರಿಭಕ್ತಿಯು ದೊರಕಬೇಕಾದರೆ ದೊಡ್ಡವರ ಅರ್ಥಾತ್ ಭಗವದ್ಭಕ್ತರ ಸಹವಾಸ ಮಾಡಬೇಕು.

**ಭಕ್ತಿಸ್ತು ಭಗವದ್ಭಕ್ತಸಂಗೇನ ಖಲು ಜಾಯತೇ ।**
**ತತ್ಸಂಗಃ ಪ್ರಾಪ್ಯತೇ ಪುಂಭಿಃ ಸುಕೃತೈಃ ಪೂರ್ವಸಂಚಿತೈಃ ॥**

ಭಗವದ್ಭಕ್ತರ ಸಹವಾಸದಿಂದ ಶ್ರೀ ಹರಿಯಲ್ಲಿ ಭಕ್ತಿಯು ಉಂಟಾಗುತ್ತದೆ. ಅಂಥ ಹರಿಭಕ್ತರ ಸಹವಾಸವು ಮಾತ್ರ ಪೂರ್ವ ಪುಣ್ಯದಿಂದಲೇ ದೊರಕುವದು. ಆ ಭಗವದ್ಭಕ್ತರು ಯಾರು ಅಂದರೆ -

**ವರ್ಣಾಶ್ರಮಾಚಾರರತಾ ಭಗವದ್ಭಕ್ತಿಲಾಲಸಾಃ ।**
**ಕಾಮಾದಿದೋಷನಿರ್ಮುಕ್ತಾಸ್ತೇ ಸಂತೋ ಲೋಕಶಿಕ್ಷಕಾಃ ॥**

ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಅನೂಚಾನವಾಗಿ ಆಚರಿಸುತ್ತ, ಸದಾಚಾರ ಸಂಪನ್ನರಾಗಿ ಭಗವಂತನಲ್ಲಿ ನಿಷ್ಠೆಯಿಂದ ಭಕ್ತಿಯನ್ನು ಮಾಡುತ್ತಲಿರುವ, ಕಾಮ ಕ್ರೋಧಾದಿ ದೋಷಗಳಿಂದ ರಹಿತವಾಗಿ, ಮತ್ತು ಜನರಿಗೆಲ್ಲ ಜ್ಞಾನೋಪದೇಶ ಮಾಡುವ ಮಹಾನುಭಾವರಿಗೆ ಸಂತರು ಅಥವಾ ಸಜ್ಜನರು, ಅಥವಾ ಭಗವದ್ಭಕ್ತರೆಂದು ಕರೆಯುವರು. ಇಂಥ ಸತ್ಸಂಗವು ಪಾಪಿಗಳಿಗೆ ದೊರಕುವದಿಲ್ಲ. ಪುಣ್ಯವಂತರಿಗೆ ಮಾತ್ರ ಜನ್ಮಾಂತರದ ಸುಕೃತದಿಂದ ಇಂಥ ಸಜ್ಜನರ ಸಂಗವು ದೊರಕುವದು.

**ರವಿರ್ಹಿ ರಶ್ಮಿಜಾಲೇನ ದಿವಾ ಹಂತಿ ಬಹಿಸ್ತಮಃ ।**
**ತೇಷಾಂ ಸಂಗೋ ಭವೇದ್ಯಸ್ಯ ತಸ್ಯ ಶಾಂತಿರ್ಹಿ ಶಾಶ್ವತೀ ॥**

ಸೂರ್ಯನು ತನ್ನ ಕಿರಣ ಜಾಲದಿಂದ ಹಗಲು ಹೊತ್ತಿನಲ್ಲಿ ಹೊರಗಿನ ಕತ್ತಲೆಯನ್ನು ನಾಶಪಡಿಸುತ್ತಾನೆ. ಆದರೆ ಸಜ್ಜನರು ಮಾತ್ರ ತಮ್ಮ ಸದುಪದೇಶದ ಹೊಂಬೆಳಕಿನಿಂದ ಮಾನವರ ಮನಸ್ಸಿನಲ್ಲಿ ತುಂಬಿರುವ ಕತ್ತಲೆಯನ್ನು ಯಾವಾಗಲೂ ನಾಶಪಡಿಸುತ್ತಾರೆ.

**ದುರ್ಲಭಾಃ ಪುರುಷಾ ಲೋಕೇ ಭಗವದ್ಭಕ್ತಿಲಾಲಸಾಃ ।**
**ತೇಷಾಂ ಸಂಗೋ ಭವೇದ್ಯಸ್ಯ ತಸ್ಯ ಶಾಂತಿರ್ಹಿ ಶಾಶ್ವತೀ ॥**

ಈ ಲೋಕದಲ್ಲಿ ಭಗವಂತನಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡಿ ಅದರಲ್ಲಿಯೇ ಆನಂದಪಡುತ್ತಿರುವ ಸಜ್ಜನರು ಪರಮ ದುರ್ಲಭರೇ ಸರಿ. ಅಂಥ ಸತ್ಪುರುಷರ ಸಂಗವಾದರೆ ಮಾನವನಿಗೆ ಶಾಶ್ವತವಾದ ಶಾಂತಿಯು ದೊರಕುವದು.

**ನಾರದ:-** ಇಂಥ ಭಗವದ್ಭಕ್ತರ ಲಕ್ಷಣವೇನು? ಅವರು ಯಾವ ಕರ್ಮ ಮಾಡುತ್ತಾರೆ? ಅವರು ವಾಸ ಮಾಡುವ ಲೋಕ ಎಂತಹುದು? ಇದೆಲ್ಲವನ್ನು ಯಥಾವತ್ತಾಗಿ ಉಪದೇಶ ಮಾಡಿರಿ.

**ಸನಕ:-** ಯಾರಿಗೆ ಭಾಗವತ ಅಥವಾ ಭಗವದ್ಭಕ್ತ ಎನ್ನಬೇಕು? ಅವರ ಲಕ್ಷಣವೇನು? ಎಂದು ಕೇಳಿದೆಯಷ್ಟೆ! ಅದಕ್ಕೆ ನಿದರ್ಶನರೂಪವಾಗಿ ರಹಸ್ಯವಾದ ಮಾರ್ಕಂಡೇಯ ಮುನಿಯ ಚರಿತ್ರೆಯನ್ನು ಹೇಳುತ್ತೇನೆ ಕೇಳು.

ಶಾಲಿಗ್ರಾಮ ತೀರ್ಥದಲ್ಲಿ ಪೂರ್ವಕಾಲದಲ್ಲಿ ಮೃಕಂಡು ಎಂಬ ಮಹರ್ಷಿಯು ನೆಲಸಿದ್ದನು. ಅವನು ಮಹಾ ಭಗವದ್ಭಕ್ತ. ಅವನು ಆ ಪುಣ್ಯ ಕ್ಷೇತ್ರದ ಪವಿತ್ರ ತೀರ್ಥದ ದಂಡೆಯಲ್ಲಿ ನಿಂತು ತಪಸ್ಸನ್ನು ಮಾಡಿದ. ಅದು ಸಾಮಾನ್ಯ ತಪಸ್ಸಲ್ಲ. ಅತ್ಯುಗ್ರವಾದ ಮಹಾತಪಸ್ಸು. ಸಾವಿರಾರು ಯುಗಗಳೇ ತಿರುಗಿ ಹೋದವು ಅವನ ತಪೋನುಷ್ಠಾನದಲ್ಲಿ, ಊಟವಿಲ್ಲ, ನಿದ್ರೆಯಿಲ್ಲ. ಅಂದಬಳಿಕ ಜಿತೇಂದ್ರಿಯ ಎಂದು ಬೇರೆ ಹೇಳುವ ಕಾರಣವಿಲ್ಲ. ಹಗಳಿರುಳೂ ಬ್ರಹ್ಮಚಿಂತನ. ಸತತವೂ ಅನಂತನ ನಾಮಸ್ಮರಣೆ. ಇಷ್ಟಾದರೂ ಶಾಂತಿ, ದಾಂತಿ, ಕ್ಷಾಂತಿ ಅವನ ಸ್ವತ್ತಾಗಿದ್ದವು. ಯಾವ ವಿಷಯಾಶೆಯೂ ಅವನಿಗೆ ಉಳಿದಿರಲಿಲ್ಲ. ಆ ಮಹಾಮುನಿಯ ಈ ಅದ್ಭುತ ತಪಸ್ಸನ್ನು ಕಂಡು ದೇವತೆಗಳು ಹೆದರಿಹೋದರು. ಅದರಲ್ಲಿಯೂ ದೇವೇಂದ್ರನಿಗೆ ಬಹಳ ಚಿಂತೆ. ಎಲ್ಲಿ ಆ ಮಹಾಮುನಿ ನನ್ನ ಇಂದ್ರ ಪದವಿಗೆ ಹೊಂಚು ಹಾಕಿರುವನೋ ಎಂದು. ಸಂಭ್ರಾಂತರಾದ ಸುರರೆಲ್ಲರೂ ಕೂಡಿದರು. ಹಾಲ್ಗಡಲಿನತ್ತ ಓಡಿದರು. ಆ ಕ್ಷೀರ ಸಾಗರದ ತೀರದಲ್ಲಿ ನಿಂತು ಶ್ರೀ ಹರಿಯನ್ನು ಸ್ತುತಿಸಿದರು. ಭಕ್ತಿಯಿಂದ ಪ್ರಾರ್ಥಿಸಿದರು.

**॥ ದೇವಾ ಊಚುಃ ॥**

**ನಾರಾಯಣಾಽಕ್ಷರಾಽನಂತ ಶರಣಾಗತಪಾಲಕ**
**ಮೃಕಂಡುತಪಸಾ ತ್ರಸ್ತಾನ್ ಪಾಹಿ ನಃ ಶರಣಾಗತಾನ್ ॥**

ನಾರಾಯಣಾ ನಿನಗೆ ಶರಣು, ಶರಣು ಬಂದವರನ್ನು ಪೊರೆವ ಪ್ರಭುವಲ್ಲವೆ ನೀನು! ನಾವು ನಿನ್ನನ್ನು ಶರಣು ಹೊಕ್ಕಿದ್ದೇವೆ. ಮೃಕಂಡು ಮುನಿ ಮಾಡುವ ಅಖಂಡ ತಪಸ್ಸು ನಮ್ಮನ್ನು ತೊಂದರೆಗೀಡು ಮಾಡಿದೆ. ನಮ್ಮನ್ನು ರಕ್ಷಿಸು.

ಜಯ ದೇವಾದಿದೇವೇಶ ಜಯ ಶಂಖ ಗಧಾಧರ ।
ಜಯ ಲೋಕ ಸ್ವರೂಪಾಯ ಜಯ ಬ್ರಹ್ಮಾಂಡಹೇತವೇ ॥

ನಮಸ್ತೇ ದೇವದೇವೇಶ ನಮಸ್ತೇ ಲೋಕಪಾವನ ।
ನಮಸ್ತೇ ಲೋಕನಾಥಾಯ ನಮಸ್ತೇ ಲೋಕಸಾಕ್ಷಿಣೇ ॥

ನಮಸ್ತೇ ಧ್ಯಾನಗಮ್ಯಾಯ ನಮಸ್ತೇ ಧ್ಯಾನಹೇತವೇ ।
ನಮಸ್ತೇ ಧ್ಯಾನರೂಪಾಯ ನಮಸ್ತೇ ಧ್ಯಾನಸಾಕ್ಷಿಣೇ ॥

ಕೇಶಿಹಂತ್ರೇ ನಮಸ್ತುಭ್ಯಂ ಮಧುಹಂತ್ರೇ ಪರಮಾತ್ಮನೇ ।
ನಮೋ ಭೂಮ್ಯಾದಿರೂಪಾಯ ನಮಶ್ಚೈತನ್ಯರೂಪಿಣೇ ॥

ನಮೋ ಜ್ಯೇಷ್ಠಾಯ ಶುದ್ಧಾಯ ನಿರ್ಗುಣಾಯ ಗುಣಾತ್ಮನೇ ।
ಅಪರೂಪಾಯ ಸುರೂಪಾಯ ಬಹುರೂಪಾಯ ತೇ ನಮಃ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥

ನಮೋ ಹಿರಣ್ಯಗರ್ಭಾಯ ನಮೋ ಬ್ರಹ್ಮಾದಿರೂಪಿಣೇ ।
ನಮಃ ಸೂರ್ಯಾದಿರೂಪಾಯ ಹವ್ಯಕವ್ಯಭುಜೇ ನಮಃ ॥

ನಮೋ ನಿತ್ಯಾಯ ವಂದ್ಯಾಯ ಸದಾನಂದೈಕರೂಪಿಣೇ ।
ನಮಃ ಸ್ಮೃತಾರ್ತಿನಾಶಾಯ ಭೂಯೋ ಭೂಯೋ ನಮೋ ನಮಃ ॥

ದೇವಾಧಿದೇವನೂ, ಸರ್ವ ನಿಯಾಮಕನೂ, ಶಂಖ, ಚಕ್ರ ಗದಾಧಾರಿಯೂ ಆದ ನಾರಾಯಣನೇ, ನಿನಗೆ ಜಯವಾಗಲಿ. ಜ್ಞಾನಸ್ವರೂಪಿಯೂ, ಬ್ರಹ್ಮಾಂಡಕ್ಕೆ ಕಾರಣೀಭೂತನೂ ಆದ ನಿನಗೆ ಗೆಲುವಾಗಲಿ. ದೇವತೆಗಳಿಗೆ ಪೂಜ್ಯರಾದ ಬ್ರಹ್ಮಾದಿ ದೇವತೆಗಳಿಗೂ ನಿಯಾಮಕನಾದ ದೇವನೇ, ನಿನಗೆ ನಮಸ್ಕಾರ. ಜಗತ್ತನ್ನೆಲ್ಲ ಪವಿತ್ರಗೊಳಿಸುವ ಪ್ರಪಂಚಕ್ಕೆ ಒಡೆಯನಾದ ಜನರ ಕರ್ಮಗಳಿಗೆಲ್ಲ ಸಾಕ್ಷಿಭೂತನಾದ ದೇವನೇ, ನಿನಗೆ ನಮೋನಮಃ ಯೋಗಿಗಳ ಧ್ಯಾನಕ್ಕೆ ವಿಷಯನೂ. ಧ್ಯಾನದ ಹೇತುವೂ ಧ್ಯಾನದ ಫಲ ಸ್ವರೂಪಿಯೂ ಆದ ನಿನಗೆ ನಮಸ್ಕಾರ. ಕೇಶಿ, ಮಧು ಮುಂತಾದ ದೈತ್ಯರನ್ನು ಸಂಹರಿಸಿ, ಭೂಮಿ ಮೊದಲಾದ ಸರ್ವಲೋಕಗಳಲ್ಲಿ ಅಂತರ್ಗತನಾದ, ಜ್ಞಾನಸ್ವರೂಪಿಯಾದ ನಿರ್ದೋಷನೂ, ಶ್ರೇಷ್ಠನೂ, ಸತ್ವಾದಿಗುಣರಹಿತನೂ, ಅಪ್ರಾಕೃತ ಶರೀರ ಉಳ್ಳವನೂ, ಅನೇಕ ಅವತಾರ ರೂಪವುಳ್ಳವನೂ, ಬ್ರಹ್ಮಜ್ಞಾನಿಗಳಿಗೂ ಗೋವುಗಳಿಗೂ ಹಿತವನ್ನುಂಟು ಮಾಡುವ ಎಲ್ಲ ಜಗತ್ತಿಗೂ ಕಲ್ಯಾಣಕಾರಣನಾದ ಜನರ ಪಾಪಗಳನ್ನು ಪರಿಹರಿಸುವ ಗೋವಿಂದನಿಗೆ ನಮೋನಮಃ.

ಹಿರಣ್ಯಗರ್ಭ ಪದದ ಮುಖ್ಯ ವಾಚ್ಯನಾದ, ಸೂರ್ಯ ಬ್ರಹ್ಮ ಮುಂತಾದ ದೇವತೆಗಳಲ್ಲಿದ್ದು ಅವರಿಂದ ಕಾರ್ಯ ಮಾಡಿಸಿ, ಸೂರ್ಯ, ಬ್ರಹ್ಮಾದಿ ಶಬ್ದ ವಾಚ್ಯನಾದ, ಹವ್ಯಕವ್ಯಗಳ ಸಾರ ಭೋಕ್ತ ಆದ, ನಿತ್ಯನೂ ಜಗದ್ವಂದ್ಯನೂ, ಸದಾನಂದ ಸ್ವರೂಪಿಯೂ, ಸ್ಮರಣೆ ಮಾಡಿದವರ ಪಾಪ ಪರಿಹರಿಸುವವನೂ ಆದ ಪರಮಾತ್ಮನಿಗೆ ನಮ್ಮೆಲ್ಲರ ನಮಸ್ಕಾರ. ಪುನರಪಿ ನಮೋನಮಃ'' ಹೀಗೆ ಕೊಂಡಾಡಿದರು ಆ ದೇವತಾ ಧುರೀಣರು

ಶ್ರೀಕೃಷ್ಣನನ್ನು. ಅವರ ಸ್ತೋತ್ರಕ್ಕೆ ತುಷ್ಟನಾದ ಸ್ವಾಮಿ ಪ್ರತ್ಯಕ್ಷನಾದ. ಶಂಖ, ಚಕ್ರ, ಗದಾ, ಪದ್ಮ, ಧರಿಸಿದ್ದ ತನ್ನ ನಾಲ್ಕೂ ಕೈಗಳಲ್ಲಿ. ಕಣ್ಣು ಅರಳಿದ ತಾವರೆ. ಕೋಟಿ ಸೂರ್ಯರಿಗಿಂತ ಮಿಗಿಲಾಗಿತ್ತು ಅವನ ಕಾಯಕಾಂತಿ. ವೃಕ್ಷ ಸ್ಥಳದಲ್ಲಿ ಲಕ್ಷ್ಮಿಯ ಲಾಂಛನ - ಶ್ರೀವತ್ಸ. ಎಲ್ಲ ಅಲಂಕಾರಗಳೂ ಝಗಝಗಿಸುತ್ತಿದ್ದವು. ಅಂಗಾಂಗಗಳಲ್ಲಿ. ಉಟ್ಟದ್ದು ಪೀತಾಂಬರ. ಧರಿಸಿದ್ದು ಬಂಗಾರದ ಜನಿವಾರ. ಸೌಮ್ಯಕಾಂತಿ, ಶಾಂತಮೂರ್ತಿ, ಅಕ್ಕಪಕ್ಕದಲ್ಲಿ ಹೊಗಳುವ ಮುನಿವರ್ಯರು. ಇಂಥ ಭಗವಂತನನ್ನು ದೇವತೆಗಳು ನೋಡಿದರು. ಅವನ ತೇಜೋದೀಪ್ತಿಯಿಂದ ಕಣ್ಣು ಕುಕ್ಕಿಹೋದವು -ದೇವತೆಗಳಿಗೆ. ಅವನ ಬೆಳಕಿನ ಮುಂದೆ ತೇಜೋಹೀನರಾಗಿ ಕುಳಿತರು ಆ ಸುರ ಸತ್ತಮರೆಲ್ಲ. ಭಗವಾನ್ ಬಂದದ್ದೇ ಆನಂದ ಆ ವೃಂದಾರಕರಿಗೆ, ಕೂಡಲೆ ಕೈಮುಗಿದು ಮೈಮಣಿಸಿದರು. ಎಂಟು ಅಂಗಗಳನ್ನು ನೆಲಕ್ಕೆ ಹಚ್ಚಿ ದಂಡಪ್ರಣಾಮ ಮಾಡಿದರು, ಭಗವಂತ ಸುಪ್ರಸನ್ನ. ಮೇಘ ಧ್ವನಿಯಿಂದ ಎದುರು ನಿಂದ ಇಂದ್ರಾದಿ ದೇವತೆಗಳನ್ನು ಕುರಿತು ಮಾತನಾಡಿದ. ದೇವತೆಗಳಿಗೆಲ್ಲ ಹಿಗ್ಗೋ ಹಿಗ್ಗು! ಸ್ವತಃ ಭಗವಂತನೇ ಮುಖಾಮುಖಿ ಮಾತನಾಡುತ್ತಿದ್ದಾನೆ.

**ನಾರಾಯಣ:-** ದೇವತೆಗಳೇ, ನನಗೆ ಗೊತ್ತು ನಿಮ್ಮ ದುಃಖ ಏನು ಎಂಬುದು. ಮೃಕಂಡು ಮುನಿ ತಪಸ್ಸು ನಡೆಸಿದ್ದಾನೆ. ಅದರಿಂದ ಹೆದರಿ ಹೌಹಾರಿದ್ದೀರಿ. ನಿಮಗೆ ಗಾಬರಿಯಾಗಿದೆ, ಚಿಂತೆಯಾಗಿದೆ. ಆದರೆ ನೀವು ಭಯಪಡುವ ಕಾರಣವಿಲ್ಲ. ಆ ಮೃಕಂಡು ಮುನಿ ಎಷ್ಟೇ ತಪವನ್ನು ಮಾಡಲಿ ನಿಮಗೆ ಏನೂ ಬಾಧಕವಾಗದು. ಆ ಮಹರ್ಷಿಯು ನಿಜವಾಗಿಯೂ ಸಜ್ಜನ. ಸಜ್ಜನರಾದವರು ಎಂದಿಗೂ ಬೇರೊಬ್ಬರನ್ನು ಬಾಧಿಸುವದಿಲ್ಲ. ಸಂಪತ್ತು ಅಧಿಕಾರ ಏನೇ ಬರಲಿ, ಎಂಥ ಶಕ್ತಿಸಂಪನ್ನರೇ ಆಗಲಿ. ಅವರು ಹೆರವರಿಗೆ ಉಪದ್ರವವನ್ನು ಯಾವ ಕಾಲಕ್ಕೂ ಕೊಡಲಾರರು. ವಿಪತ್ತು ಬಂದಾಗಲೂ ಅವರು ಅಷ್ಟೇ ಪರರಿಗೆ ಕನಸಿನಲ್ಲಿಯೂ ಕೇಡು ಬಯಸದವರೇ ನಿಜವಾದ ಸಜ್ಜನರು. ವಿಷಯಗಳೆಂಬ ವೈರಿಗಳಿಂದ ಮಾನವನಿಗೆ ಸತತವೂ ತೊಂದರೆಯೇ. ಅವರಿಂದ ತನ್ನ ರಕ್ಷಣೆ ಮಾಡಿಕೊಳ್ಳುವದು ಬಿಟ್ಟು ಪ್ರಾಜ್ಞನು ಹೇಗೆ ಪರರಿಗೆ ಕೇಡು ಬಯಸುವನು?

ಕರ್ಮಣಾ ಮನಸಾ ವಾಚಾ ಬಾಧತೇ ಯಸ್ಸದಾ ಪರಾನ್ ।
ನಿತ್ಯಂ ಕಾಮಾದಿಭಿರ್ಯುಕ್ತೋ ಮೂಢಧೀಃ ಪ್ರೋಚ್ಯತೇ ತು ಸಃ ॥

ಯಾವ ಮನುಷ್ಯನು ಪರರನ್ನು ತನ್ನ ಕೃತಿಯಿಂದಲೂ, ಮನಸ್ಸಿನಿಂದಲೂ, ಬಾಯ್ಮಾತಿನಿಂದಲೂ ತೊಂದರೆಗೆ ಒಳಪಡಿಸುವನೊ, ನೋಯಿಸುವನೋ, ಅಂಥ ಕಾಮ ಕ್ರೋಧಾದಿಗಳಿಂದ ಕೂಡಿದ ಮನುಷ್ಯನು ಮೂರ್ಖನೆಂದು ಕರೆಯಲ್ಪಡುತ್ತಾನೆ.

ಯೋ ಲೋಕಹಿತಕೃನ್ಮರ್ತ್ಯೋ ಗತಾಸೂಯೊ ವಿಮತ್ಸರಃ!
ನಿಶಂಕಃ ಪ್ರೋಚ್ಯತೇ ಸದ್ಭಿರಿಹಾಮುತ್ರ ಚ ಸತ್ತಮಃ ॥

ಯಾವ ಮನುಷ್ಯನು ಅಸೂಯೆ ಮತ್ಸರಾದಿ ದೋಷಗಳಿಲ್ಲದೆ ಜನರಿಗೆಲ್ಲ ಹಿತವನ್ನುಂಟು ಮಾಡುವನೋ, ಅಂಥ ಮನುಷ್ಯನನ್ನು ಸಜ್ಜನ ಎಂದು ಹಿರಿಯರು ಕರೆಯುತ್ತಾರೆ. ಮೃಕಂಡು ಮುನಿಯು ಲೋಕಕ್ಕೆ ಹಿತವನ್ನುಂಟು ಮಾಡುವವನು. ಯಾರ ಮೇಲೆಯೂ ಅಸೂಯೆ, ಮತ್ಸರ ಮಾಡದ ಆದರ್ಶ ಸಜ್ಜನ. ಅವನಿಂದ ನಿಮಗೆ ಯಾವ ಭಯಾಪಾಯವೂ ಬಾರದು. ಸುಮ್ಮನೆ ಸಂದೇಹ ಪಡಬೇಡಿ. ' ಸಂಶಯಾತ್ಮಾ ವಿನಶ್ಯತಿ ' ಎಂದು ಹೇಳಿಲ್ಲವೇ!

**ಸಶಂಕಃ ಸರ್ವದಾ ದುಃಖೀ ನಿಃಶಂಕಃ ಸುಖಮಾಪ್ನುಯಾತ್ ।**
**ಗಚ್ಛದ್ವಂ ಸ್ವಾಲಯಂ ಸ್ವಸ್ಥಾಃ ಪೀಡಯಿಷ್ಯತಿ ವೋ ನ ಸಃ ॥**

ಎಲ್ಲವನ್ನೂ ಸಂಶಯದಿಂದಲೇ ನೋಡುವ ಸಾಶಂಕ ಸ್ವಭಾವದ ಮನುಷ್ಯನಿಗೆ ಸುಖವಿಲ್ಲ. ಸಂಶಯ ಸ್ವಭಾವದವನು ಸದಾ ದುಃಖಿ. ನಿಶ್ಶಂಕ ಮನುಷ್ಯನು ನಿಶ್ಚಿಂತ ಮನುಷ್ಯ. ಸಂದೇಹವಿಲ್ಲದವನು ಸಂತಸದಿಂದಿರುತ್ತಾನೆ. ಮೃಕಂಡುವಿನಿಂದ ನಿಮಗೆ ಎಂದೂ ಪೀಡೆಯಾಗುವದಿಲ್ಲ. ಇದನ್ನು ನಾನು ಹೇಳುತ್ತೇನೆ. ಸಾಕಲ್ಲವೇ ! ನಿಶ್ಚಿಂತೆ ಯಿಂದ ನೀವು ಮನೆಗೆ ಹೋಗಿರಿ. ನಿಮ್ಮ ರಕ್ಷಕನಾದ ನಾನು ಇಲ್ಲವೆ! ನಿಮ್ಮ ನಿರಂತರ ರಕ್ಷಣೆಯ ಹೊಣೆಯನ್ನು ನಾನು ಹೊತ್ತುಕೊಂಡಿರುವಾಗ ನೀವೇಕೆ ಚಿಂತಿಸುವಿರಿ! ಸುಖವಾಗಿ ಮನೆಗೆ ಹೋಗಿರಿ. ಸಂತೋಷದಿಂದ ವಿರಮಿಸಿರಿ. ಹೀಗೆ ಭಗವಂತನು ಅಭಯವಿತ್ತ ಆ ಅಮರರಿಗೆಲ್ಲ. ಅನಂತರ ದೇವತೆಗಳು ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನ ಹೊಂದಿದ, ಸಂತೋಷದಿಂದ ಕುಣದಾಡಿದರು ದೇವತೆಗಳು. ಚಿಂತೆ ಹೊತ್ತು ಬಂದವರು ಸಂತೋಷಭರಿತರಾಗಿ ಹೊರಟರು. ಇತ್ತ ಶ್ರೀ ಹರಿಯು ಮೃಕಂಡು ಮುನಿಯ ಎದುರು ಪ್ರತ್ಯಕ್ಷನಾದ. ಆ ಮೃಕಂಡುವಿನ ಅಖಂಡ ತಪಸ್ಸು ಕಂಡೇ ಸಂತೋಷವಾಗಿದ್ದಿತು ಶ್ರೀಹರಿಗೆ. ಅದರ ಫಲರೂಪವಾಗಿ ತನ್ನ ಸಾಕ್ಷಾತ್ಕಾರವನ್ನು ಅವನಿಗೆ ಕರುಣಿಸಿದ. ಸ್ವಪ್ರಕಾಶನಾದ ಶ್ರೀ ಹರಿ. ಕರುಣೆಯಿಂದ ಆ ಮಹಾಮುನಿಗೆ ಕಾಣಿಸಿಕೊಂಡಿದ್ದ. ಆಗಸೆಯ ಹೂವಿನಂತೆ ಕಪ್ಪು ಬಣ್ಣ. ಬಂಗಾರದಂತೆ ಹೊಳೆಯುವ ಪೀತಾಂಬರ, ಕೈಯಲ್ಲಿ ದಿವ್ಯವಾದ ಆಯುಧಗಳು, ಪ್ರಸನ್ನವದನ, ಶಾಂತರೂಪ, ಕಂಡಕೂಡಲೆ ಮೃಕಂಡುವಿನ ಮೈತುಂಬ ಹಿಗ್ಗಿನ ಮುಳ್ಳು. ಧ್ಯಾನದಲ್ಲಿ ಮುಚ್ಚಿದ ಕಂಗಳನ್ನು ತಾವರೆಯಂತೆ ಅರಳಿಸಿ ನೋಡಿದ. ಎದುರಿಗೆ ನಿಂತು ಕೊಂಡಿದ್ದಾನೆ ಧ್ಯಾನರೂಪದಿಂದ ತನ್ನ ತಪೋಗಮ್ಯನಾದ ಆ ಮಹಾಪ್ರಭು. ಹೃದಯದಲ್ಲಿ ತುಂಬಿದ ಸಂತಸ ಕಂಬನಿಯಾಗಿ ಕೋಡಿ ಹರಿಯಿತು. ಮೃಕಂಡು ದಂಡಪ್ರಣಾಮ ಗೈದ. ಹರ್ಷಾತಿರೇಕದಿಂದ ಭಗವಂತನ ಎರಡು ಕಾಲುಗಳನ್ನು ಆನಂದ ಬಾಷ್ಪದಿಂದ ತೊಳೆದ. ಕೈ ಜೋಡಿಸಿದ. ಬಾಯಿಂದ ಭಕ್ತಿಯು ಸ್ತೋತ್ರರೂಪವಾಗಿ ಹೊರಹೊಮ್ಮಿತು.

**॥ ಮೃಕಂಡುರುವಾಚ ॥**

**ನಮಃ ಪರೇಶಾಯ ಪರಾತ್ಮರೂಪಿಣೇ ।**
**ಪರಾತ್ಪರಸ್ಮಾತ್ಪರತಃ ಪರಾಯ ।**
**ಅಪಾರ ಪಾರಾಯ ಪರಾರ್ಥಕರ್ತ್ರೇ ।**
**ನಮಃ ಪರೇಭ್ಯಃ ಪರಪಾವನಾಯ ॥**

**ಯೋ ನಾಮಜಾತ್ಯಾದಿವಿಕಲ್ಪಹೀನಃ**
**ಶಬ್ದಾದಿದೋಷ ವ್ಯತಿರೇಕರೂಪಃ**
**ಬಹುಸ್ವರೂಪೋಽಪಿ ನಿರಂಜನೋ ಯಃ ।**
**ತಮೀಶಮೀಡ್ಯಂ ಪರಮಂ ಭಜಾಮಿ ॥**

**ವೇದಾಂತವೇದ್ಯಂ ಪುರುಷಂ ಪುರಾಣಂ ।**
**ಹಿರಣ್ಯಗರ್ಭಾದಿ ಜಗತ್ಸ್ವರೂಪಂ ।**

ಅನೂಪಮಂ ಭಕ್ತಜನಾನುಕಂಪಿನಂ ।
ಭಜಾಮಿ ಸರ್ವೇಶ್ವರಮಾದಿಮೀಡ್ಯಂ ॥

ಪಶ್ಯಂತಿ ಯಂ ವೀತಸಮಸ್ತದೋಷಾಃ
ಧ್ಯಾನೈಕನಿಷ್ಠಾ ವಿಗತಸ್ಪೃಹಾಶ್ಚ ।
ನಿವೃತ್ತಮೋಹಾಃ ಪರಮಂ ಪವಿತ್ರಂ
ನತೋಽಸ್ಮಿ ಸಂಸಾರನಿವರ್ತಕಂ ತಂ ॥

ಸ್ಮೃತಾರ್ತಿನಾಶನಂ ವಿಷ್ಣುಂ ಶರಣಾಗತಪಾಲಕಂ
ಜಗತ್ಸೇವ್ಯಂ ಜಗದ್ಧಾಮ ಪರೇಶಂ ಕರುಣಾಮಯಂ ॥
ಏವಂ ಸ್ತುತಃ ಸ ಭಗವಾನ್ವಿಷ್ಣುಸ್ತೇನ ಮಹರ್ಷಿಣಾ।
ಅವಾಪ ಪರಮಾಂ ತುಷ್ಟಿಂ ಶಂಖ ಚಕ್ರಗದಾಧರಃ ॥

ಅಥಾಲಿಂಗ್ಯ ಮುನಿಂ ದೇವಶ್ಚತುರ್ಭಿರ್ದೀರ್ಘ ಬಾಹುಭಿಃ ।
ಉವಾಚ ಪರಯಾ ಪ್ರೀತ್ಯಾ ವರಂ ವರಯ ಸುವ್ರತ ॥
ಪ್ರೀತೋಽಸ್ಮಿ ತಪಸಾಽನೇನ ಸ್ತೋತ್ರೇಣ ಚ ತವಾನಘ ।
ಮನಸಾ ಯದಭಿಪ್ರೇತಂ ವರಂ ವರಯ ಸುವ್ರತ ॥

ಸರ್ವನಿಯಾಮಕನೂ, ಸರ್ವೋತ್ಕೃಷ್ಟ ಸ್ವರೂಪಿಯೂ ಆದ ಶ್ರೀ ನಾರಾಯಣನಿಗೆ ನಮಸ್ಕಾರ. ಈ ಪ್ರಪಂಚದಲ್ಲಿ ಇಂದ್ರಾದಿಗಳು ದೊಡ್ಡವರು. ಅವರಿಗಿಂತ ಬ್ರಹ್ಮಾದಿಗಳು. ಅವರಿಗಿಂತ ಶ್ರೀ ಲಕ್ಷ್ಮಿಯು ದೊಡ್ಡವಳು. ಅವಳಿಗಿಂತ ಶ್ರೇಷ್ಠನಾಗಿರುವಿ ಶ್ರೀ ಹರಿಯೇ ನೀನು. ಅಪರಂಪಾರ ಸಂಸಾರದಿಂದ ಭಕ್ತರನ್ನು ಪಾರು ಮಾಡುವವನು ನೀನೊಬ್ಬನೇ. ನಿನ್ನ ಯಾವ ಕಾರ್ಯವೂ ಸ್ವಾರ್ಥಕ್ಕಾಗಿ ಇಲ್ಲ. ಜನರ ಉದ್ಧಾರಕ್ಕಾಗಿಯೇ ನಿನ್ನ ಸರ್ವ ವ್ಯಾಪಾರ ಗಳೂ ಇವೆ. ಇಂಥ ದೇವಾಧಿದೇವತೆಗಳನ್ನು ಪವಿತ್ರರನ್ನಾಗಿ ಮಾಡುವ ಶ್ರೀಮನ್ ನಾರಾಯಣನೇ ನಿನಗೆ ನನ್ನ ನಮಸ್ಕಾರ. ನಾಮ, ಜಾತಿ ಮುಂತಾದ ಧರ್ಮರಹಿತನೂ, ಶಬ್ದಾದಿ ದೋಷಗಳಿಲ್ಲದ ಅನಂತ ಶರೀರವುಳ್ಳವನೂ, ನಿರ್ದೋಷನೂ, ಸರ್ವಸ್ವಾಮಿಯೂ, ಬ್ರಹ್ಮಾದಿ ದೇವತೆಗಳಿಂದ ಸ್ತುತ್ಯನೂ ಆದ ಶ್ರೀ ಹರಿಯನ್ನು ನಾನು ಭಜಿಸುತ್ತೇನೆ.

ವೇದಶಾಸ್ತ್ರ ಪ್ರತಿಪಾದ್ಯನೂ, ಸನಾತನನೂ, ಬ್ರಹ್ಮನಿಂದ ಸೃಷ್ಟಿಯಾದ ಈ ಜಗತ್ತಿಗೆ ಆಧಾರನೂ, ಅಂತರ್ಯಾಮಿಯೂ ಆಗಿರುವ, ಸರ್ವರಿಗೂ ಒಡೆಯನಾದ ಅಸಾಧಾರಣ ನಾದ, ಸರ್ವವಂದ್ಯನಾದ ಆ ಶ್ರೀಮನ್ ನಾರಾಯಣನನ್ನು ನಾನು ವಂದಿಸುತ್ತೇನೆ. ಈ ಪರಮಾತ್ಮನನ್ನು ಕಾಮಕ್ರೋಧಾದಿ ದೋಷರಹಿತರೂ, ಧ್ಯಾನೈಕತಾನ ಮಾನಸರೂ, ವಿರಕ್ತರೂ, ಅಜ್ಞಾನ ಮೋಹಾದಿರಹಿತರೂ, ಆದ ಯೋಗಿಗಳು ಮಾತ್ರ ಸಾಕ್ಷಾತ್ಕರಿಸಿ ಕೊಳ್ಳಲು ಸಮರ್ಥರಾಗುವರು. ಅಂತಹ ಸಂಸಾರದಿಂದ ಪಾರು ಮಾಡುವ ಪರಮ ಪವಿತ್ರನಾದ ಆ ಪರಮಾತ್ಮನನ್ನು ನಾನು ನಮಸ್ಕರಿಸುತ್ತೇನೆ.

ಸ್ಮರಣ ಮಾತ್ರದಿಂದ ಜನರ ದುಃಖಗಳನ್ನೆಲ್ಲ ಪರಿಹರಿಸುವ, ಶರಣಾಗತರನ್ನು ರಕ್ಷಿಸುವ ಕರುಣಾಮಯನಾದ, ಜಗದಾಧಾರನಾದ, ಶ್ರೀವಿಷ್ಣುವನ್ನು ನಾನು ನಮಸ್ಕರಿಸುತ್ತೇನೆ.''

ಮೃಕಂಡು ಮುನಿಯ ಈ ಸ್ತೋತ್ರವನ್ನು ಕೇಳಿ ಸಂತೋಷವಾಯಿತು ಆ ಭಗವಂತನಿಗೆ. ಆನಂದದಿಂದ ಆಲಿಂಗಿಸಿಕೊಂಡ ತನ್ನ ನೀಳ್ದೋಳುಗಳಿಂದ ಆ ಮುನಿಯನ್ನು. ಪ್ರೀತಿಯಿಂದ

ಮಾತನಾಡಿಸಿದ. ಅಂತಃಕರಣದಿಂದ ಹೇಳಿದ. " ಒಳ್ಳೆಯ ವ್ರತವನ್ನು ಮಾಡುವ ಮುನಿಯೇ, ನಿನ್ನ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ಈ ನಿನ್ನ ಸ್ತೋತ್ರದಿಂದ ಇನ್ನೂ ಹೆಚ್ಚು ಆನಂದ ನನಗೆ. ನಿನಗೇನು ಬೇಕು ಹೇಳು, ನಿನ್ನ ಮನಸ್ಸಿನಲ್ಲಿದ್ದುದನ್ನು ಕೇಳು. ನೀನು ಬೇಡಿದ ವರಕೊಟ್ಟು ಕರುಣಿಸುತ್ತೇನೆ."

**ಮೃಕಂಡು**:- " ಜಗನ್ನಾಥಾ, ನಾನು ಕೃತಾರ್ಥನಾದೆ. ನಿನ್ನ ದರ್ಶನ ಪುಣ್ಯ ಮಾಡದವರಿಗೆ ದೊರಕೀತೇ! ಬ್ರಹ್ಮಾದಿ ದೇವತೆಗಳೂ ವ್ರತಾನುಷ್ಠಾನ ತತ್ಪರರಾದ ಮಹಾ ಯೋಗಿಗಳೂ, ಧರ್ಮಿಷ್ಠರಾದ ದೀಕ್ಷಿತರೂ, ಯಾರನ್ನು ನೋಡಲಾರರೋ ಅಂತಹ ಪರಂಜ್ಯೋತಿಯಾದ ನಿನ್ನನ್ನು ಈ ನನ್ನ ಚರ್ಮ ಚಕ್ಷುಸ್ಸಿನಿಂದ ಕಾಣುತ್ತಿರುವದು ಸಾಮಾನ್ಯವೇ! ಇಂತಹ ಭಗವದ್ ದರ್ಶನರೂಪವಾದ ಸೌಭಾಗ್ಯವು ದೊರಕಿರುವಾಗ ಇನ್ನು ಬೇರೆ ವರ ಏಕೆ ಬೇಕು ನನಗೆ! ಇಷ್ಟರಿಂದಲೇ ನಾನು ಕೃತಾರ್ಥ. ಜಗದ್ಗುರುವಾದ ಜನಾರ್ದನ, ನನಗೆ ಬೇರಾವ ಆಶೆಯೂ ಇಲ್ಲ. ನಿನ್ನ ನಾಮವನ್ನು ನೆನೆಯುವದರಿಂದಲೇ ಪಾಪಿ ಕರ್ಮ ಜಾಲವನ್ನು ಕಳೆದುಕೊಳ್ಳುತ್ತಾನೆ. ಅಂಥ ನಿನ್ನನ್ನು ಸಾಕ್ಷಾತ್ತಾಗಿ ಕಂಡಿದ್ದೇನೆ. ನನಗೆ ಇನ್ನೇನು ಬೇಕು!

**ಭಗವಂತ**:- ವಿಪ್ರೋತ್ತಮ, ನೀನು ನಿಜವನ್ನೇ ನುಡಿದೆ. ನಾನು ನಿನ್ನ ತಪಸ್ಸಿಗೆ ಪ್ರಸನ್ನನಾದರೆ, ನಿನ್ನ ಮಾತಿಗೆ ಪ್ರೀತನಾಗಿದ್ದೇನೆ. ನೀನು ತಪಸ್ವಿ ಇದ್ದಂತೆ ಪಂಡಿತನೂ ಇರುವಿ. ಆದರೆ ನನ್ನ ದರ್ಶನವು ವಿಫಲವಾಗಬಾರದಷ್ಟೆ! ನಾನು ಏನೂ ನಿನಗೆ ವರಕೊಡದಿದ್ದರೆ ನನ್ನ ದರ್ಶನವೂ ನಿಷ್ಫಲವಾದಂತಾಗುವದು. ಪಂಡಿತರು, ನನ್ನನ್ನು ಭಕ್ತಕುಟುಂಬಿಯಾದ ಭಗವಂತ ಎಂದು ಹೇಳುತ್ತಾರೆ. ಸಜ್ಜನರು ಸುಳ್ಳಾಡುವದುಂಟೆ! ಅವರು ನುಡಿದ ನುಡಿಯನ್ನು ನಿಜ ಮಾಡುತ್ತೇನೆ. ಅಂದರೆ ನಾನು ಭಕ್ತರ ಕುಟುಂಬದಲ್ಲಿ ಸೇರಿಬಿಡುತ್ತೇನೆ. ನೀನು ನನ್ನ ಭಕ್ತ. ನಿನ್ನ ತಪಸ್ಸಿನಿಂದ ನಾನು ಭಕ್ತರ ಕುಟುಂಬದಲ್ಲಿ ಸೇರಿಬಿಡುತ್ತೇನೆ. ನೀನು ನನ್ನ ಭಕ್ತ. ನಿನ್ನ ತಪಸ್ಸಿನಿಂದ ನಾನು ಸಂತುಷ್ಟ. ಆದುದರಿಂದ ನಿನ್ನ ಕುಟುಂಬದಲ್ಲಿ ನಾನು ಒಬ್ಬನಾಗುತ್ತೇನೆ. ಅರ್ಥಾತ್ ನಾನು ನಿನ್ನ ಮಗನಾಗುತ್ತೇನೆ. ಆಗಲೂ ನನ್ನ ಗುಣಗಳು ನನ್ನನ್ನು ಬಿಟ್ಟಿರುವದಿಲ್ಲ. ಸದ್ಗುಣಿಯಾಗಿ ಚಿರಂಜೀವಿಯಾಗಿ ಒಳ್ಳೇ ಸ್ಫುರದ್ರೂಪ ಉಳ್ಳವನಾಗಿ ಪುತ್ರರೂಪದಿಂದ ನಿನಗೆ ಸಂತೋಷವನ್ನುಂಟು ಮಾಡುತ್ತೇನೆ, ನಾನು ಯಾವ ಕುಲದಲ್ಲಿ ಜನಿಸಿರುವೆನೋ ಆ ಇಡೀ ಕುಲವೇ ಮೋಕ್ಷ ಮಾರ್ಗದಲ್ಲಿ ಮುಂದಾಗುವದು. ನಾನು ತುಷ್ಟನಾದ ಬಳಿಕ ಅಸಾಧ್ಯ ಯಾವದಿದೆ ಈ ಮೂರು ಲೋಕದಲ್ಲಿ! ಹೀಗೆ ಮಾತನಾಡುತ್ತಲೇ ಮರೆಯಾದ ಕಣ್ಣಿನ ಅಳವಿನಿಂದ- ಆ ದೇವ ದೇವೇಶ. ಭಗವಂತನು ಅಂತರ್ಧಾನ ಹೊಂದಿದ್ದನ್ನು ಕಂಡು ಮೃಕಂಡು ಮುನಿ ತನ್ನ ತಪಸ್ಸನ್ನು ಮುಂದುವರೆಸಿದ.

ನಾರದ ಮಹಾಪುರಾಣದಲ್ಲಿ ನಾಲ್ಕನೇಯ ಅಧ್ಯಾಯ ಮುಗಿದುದು

—o—

## ಮಾರ್ಕಂಡೇಯ ದೀರ್ಘಾಯುಷ್ಯದ ಗುಟ್ಟು

## ನಾರಾಯಣನಿಂದ ಭಾಗವತರಲಕ್ಷಣ ಕಥನ

ಅಧ್ಯಾಯ - ೫

**ನಾರದ:-** ಮಾನ್ಯರೆ, ಪರಮಾತ್ಮನು ಮೃಕಂಡು ಮುನಿಗೆ ಮಗನು ಹೇಗೆ ಆದ? ಅವನು ಭಾರ್ಗವ ಕುಲದಲ್ಲಿ ಜನಿಸಿದ್ದನಷ್ಟೆ! ಅಂಥ ಈ ಭಗವಂತನು ಮೃಕಂಡುವಿನ ಮಗನಾಗಿ ಮಾಡಿದ್ದಾದರೂ ಏನು? ಅದೆಲ್ಲವನ್ನೂ ಹೇಳಿರಿ.

**ಸನಕ:-** ಮೃಕಂಡು ಮುನಿಯ ತಪಸ್ಸು ಯಶಸ್ವಿಯಾಗಿ ಮುಗಿಯಿತು. ಅವನು ಮದುವೆ ಮಾಡಿಕೊಂಡ. ಒಳ್ಳೆಯ ಹೆಂಡತಿ, ಅನುರೂಪ ದಾಂಪತ್ಯ, ಸುಖಿ ಸಂಸಾರ, ಗೃಹಸ್ಥಾಶ್ರಮಿಯಾಗಿದ್ದರೂ ಶಮ, ದಮ, ಭಕ್ತಿ, ವೈರಾಗ್ಯ ಎಲ್ಲವೂ ಅಕ್ಷತವಾಗಿ ಸುರಕ್ಷಿತವಾಗಿದ್ದವು ಅವನಲ್ಲಿ. ಆದರಿಂದ ಅವನು ಕೃತಾರ್ಥನಾಗಿದ್ದ. ಅವನ ಹೆಂಡತಿಯು ಪರಮ ಪತಿವ್ರತೆ. ಗೃಹಕಾರ್ಯದಲ್ಲಿ ದಕ್ಷಳು. ಪತಿಸೇವೆಯಲ್ಲಿ ದೀಕ್ಷೆ ಅವಳಿಗೆ. ಅವಳು ದೇಹದಿಂದ ಮಾತ್ರ ಪತಿಪರಾಯಣೆಯಲ್ಲ. ಅವಳ ವಪುಸ್ಸಿನಂತೆ, ವಚಸ್ಸು, ವಚಸ್ಸಿನಂತೆ - ಮನಸ್ಸು.ಈ ಮೂರರಿಂದಲೂ ಪತಿಸೇವಾ ಪರಾಯಣೆ. ಆದುದರಿಂದಲೇ ಅವಳು ಪತಿವ್ರತೆಯರ ಮಸ್ತಕಮಣಿಯಾಗಿದ್ದಳು, ಇಂತಹ ಮಧುರ ದಾಂಪತ್ಯದಿಂದ ಆ ಮುನಿಗಳು ಕೆಲ ಕಾಲ ಕಳೆದರು. ಸಾಧ್ವಿಯು ಗರ್ಭ ಧರಿಸಿದಳು. ಶ್ರೀ ಹರಿಯ ತೇಜೋಂಶವೇ ಆ ಗರ್ಭದಲ್ಲಿ ಸಾಕ್ಷಾತ್ತಾಗಿ ಸನ್ನಿಹಿತವಾಗಿತ್ತು. ಹತ್ತು ತಿಂಗಳು ಕಳೆಯಿತು. ಉತ್ತಮವಾದ ಮಗನನ್ನು ಹೆತ್ತಳು. ಆ ಎಳೆಯ ಕಂದ ತೇಜಃಪುಂಜ. ಆ ಮಗನ ಮುಖದ ಮೇಲಿನ ಕಾಂತಿ ದೇಹದ ಲಕ್ಷಣಗಳನ್ನು ಕಂಡೇ ಮೃಕಂಡುವಿನ ಹೃದಯ ಹಿಗ್ಗಿ ಹೂವಾಯಿತು. ಚೆನ್ನಾಗಿಯೇ ಬೆಳೆಯಿತು ಮಗು. ಶುಕ್ಲ ಪಕ್ಷದಲ್ಲಿ ಚಂದ್ರನು ಬೆಳೆಯುವದಿಲ್ಲವೆ! ಹಾಗೆ. ಐದನೆಯ ವರ್ಷದಲ್ಲಿ ಆ ಮಗುವಿಗೆ ಉಪನಯನ ಮಾಡಿದ ಮೃಕಂಡುಮುನಿ. ಅವನಿಗೆ ವೇದ ಸಂಹಿತೆಗಳನ್ನೂ, ಧರ್ಮ ಸಂಹಿತೆಗಳನ್ನೂ, ವೇದಾಂಗ, ವೇದಾಂತಗಳನ್ನೂ ಆ ಮಹಾಮುನಿ ವಿಧಿ ಪ್ರಕಾರ ಕಲಿಸಿದ. ಪಂಡಿತನನ್ನಾಗಿ ಮಾಡಿದ. ಸರಿಯಾಗಿ ಜ್ಞಾನ ದಾನ ಮಾಡಿದ. ಸದಾಚಾರ ಹಾಗೂ, ವರ್ಣಾಶ್ರಮಕ್ಕೆ ಉಚಿತವಾದ ಧರ್ಮ ಕರ್ಮಾನುಷ್ಠಾನ ಗಳನ್ನು ಮಾಡುವ ವಿಧಿವಿಧಾನಗಳನ್ನೆಲ್ಲ ತಿಳಿಸಿ ಹೇಳಿದ. ಸದಾಚಾರದ ವಿಷಯದಲ್ಲಿ ಸದುಪದೇಶ ನೀಡಿದ - ಲೋಕ ಹಿತಾರ್ಥವಾಗಿ.

**ಮೃಕಂಡು:-** ಮಗನೇ, ಯೋಗ್ಯರಾದ ಭಗವದ್ಭಕ್ತರನ್ನು ಕಂಡರೆ ತಪ್ಪದೆ ನಮಸ್ಕಾರ ಮಾಡಬೇಕು. ಮುಂಜಾನೆ ಮಧ್ಯಾಹ್ನ ಹಾಗೂ ಸಾಯಂಕಾಲ - ತ್ರಿಕಾಲದಲ್ಲಿ ಸಂಧ್ಯಾವಂದನೆ ಆಚರಿಸಬೇಕು. ಸೂರ್ಯನಿಗೆ ಗಾಯತ್ರೀ ಮಂತ್ರದಿಂದ ಧ್ಯಾನ ಮಾಡಿ ಅರ್ಘ್ಯಾಂಜಲಿ ನೀಡಬೇಕು. ವೇದಾಧ್ಯಯನವನ್ನು ಮನಃಪೂರ್ವಕ ಮಾಡಬೇಕು. ವೇದೋಕ್ತವಾದ ಧರ್ಮಕರ್ಮಗಳನ್ನು ತಪ್ಪದೇ ಆಚರಿಸಬೇಕು. ಬ್ರಹ್ಮಚರ್ಯದಿಂದ ಇರಬೇಕು. ತಪಸ್ಸನ್ನು ಆಚರಿಸಬೇಕು. ಶ್ರೀ ಹರಿಯನ್ನು ಸದಾ ಸರ್ವದಾ ಭಕ್ತಿಯಿಂದ ಪೂಜಿಸಬೇಕು. ದೇವರ ಪೂಜೆಯನ್ನು ಎಂದೂ ಬಿಡಕೂಡದು. ಶಾಸ್ತ್ರನಿಷಿದ್ಧವಾದ ಪದಾರ್ಥಗಳನ್ನು ತಿನ್ನಬಾರದು. ನಿಷಿದ್ಧವಾದ ಪಾನೀಯವನ್ನು ಕುಡಿಯಬಾರದು. ಶಾಸ್ತ್ರಕಾರರು 'ಬೇಡ' ಎಂದ ಯಾವ

ಕಾರ್ಯವನ್ನೂ ಮಾಡಬಾರದು. ದುಷ್ಟರ ಜೊತೆಗೆ ಸಲಿಗೆ, ಸಂಭಾಷಣೆ ಮಾಡಬಾರದು. ಭಗವದ್ಭಕ್ತರ ಜೊತೆಗೆ ಸಹವಾಸ ಮಾಡಬೇಕು. ಯಾರ ಮೇಲೂ ದ್ವೇಷ ಸಾಧಿಸಬಾರದು. ಎಲ್ಲರಿಗೂ ತನ್ನ ಕೈಲಾದಷ್ಟು ಉಪಕಾರ ಮಾಡಬೇಕು. ಯಜ್ಞ, ಅಧ್ಯಯನ, ದಾನ ಈ ಮೂರು ಕಾರ್ಯಗಳನ್ನು ಸದಾ ಮಾಡುತ್ತಲೇ ಇರಬೇಕು.''

ತಂದೆ ಹೇಳಿದ ಮಾತುಗಳನ್ನೆಲ್ಲ ಭಕ್ತಿಯಿಂದ ಕೇಳಿದ ಆ ಮಾರ್ಕಂಡೇಯ, ತಂದೆಯ ಸಂದೇಶವನ್ನು ಅಕ್ಷರಶಃ ಪಾಲಿಸಿದ - ಆ ಮುನಿಕುಮಾರ, ದೇವಧ್ಯಾನ ದೇವ ಪೂಜೆ, ಸ್ನಾನ, ಸಂಧ್ಯೆ, ವಿಹಿತ ಕರ್ಮಾನುಷ್ಠಾನ ಯಾವುದರಲ್ಲೂ ತಪ್ಪಲಿಲ್ಲ. ತಂದೆಯ ಯಾವ ಮಾತನ್ನು ಮೀರಲಿಲ್ಲ. ಸ್ವಯಂ ಧರ್ಮನಿಷ್ಠನಾದ ಆ ಮಾರ್ಕಂಡೇಯನಿಗೆ ತಂದೆಯ ಮಾತಿನಿಂದ ಇನ್ನೂ ಧರ್ಮಶ್ರದ್ಧೆ ಹೆಚ್ಚಿತು. ಜ್ಞಾನ, ಭಕ್ತಿ, ವೈರಾಗ್ಯಗಳು ಇಮ್ಮಡಿಸಿದವು. ಅವನು ಮತ್ತಿಷ್ಟು ಭಗವನ್ನಿಷ್ಠನಾಗಿ ಧರ್ಮಕರ್ಮಾದಿಗಳನ್ನು ಆಚರಿಸಿ, ಬ್ರಹ್ಮ ವರ್ಚಸ್ಸಿನಿಂದ ಬೆಳಗಿದ. ಬೆಳಕಿನ ಬೆಟ್ಟವಾಗಿ ನಿಂತುಕೊಂಡ. ಅವನನ್ನು ಕಂಡರೆ ಮಾರ್ತಾಂಡ. ಮಾತಾಡಿದರೆ ಬೃಹಸ್ಪತಿ. ಉಪದೇಶ ನೀಡಿದರೆ ಮಹಾಜ್ಞಾನಿ. ಮೇಲಾಗಿ ಶಾಂತ, ದಾಂತ, ಸತ್ಯಸಂಧ, ತತ್ವಾರ್ಥಪಂಡಿತ 'ಏವಂಗುಣ ವಿಶೇಷಣವಿಶಿಷ್ಟ ಮಹಾಶಿಷ್ಟ.

ಇಂಥ ಮಹಾಯೋಗ್ಯತಾ ಸಂಪನ್ನರಾದ ಆ ಮಾರ್ಕಂಡೇಯ ಮುನೀಶ್ವರರು ಉಗ್ರತಪಸ್ಸನ್ನು ಆಚರಿಸಿದರು. ಹರಿ ಪ್ರೀತಿಯ ಹೊರತು ಬೇರಾವ ಕಾರಣವೂ ಇರಲಿಲ್ಲ ಅವರ ಆ ತಪಸ್ಸಿಗೆ. ಅವರ ಸರ್ವಕಾರ್ಯಗಳಿಗೂ ಶ್ರೀ ವಿಷ್ಣು ಪ್ರೇರಣಯಾ.... ವಿಷ್ಣುಂ ಪ್ರೀತ್ಯರ್ಥಂ ಎಂದೇ ಸಂಕಲ್ಪ. ಅವರ ತಪಸ್ಸಿನ ಬೆನ್ನ ಹಿಂದೆಯೇ ಯಶಸ್ಸು. ತಪಶ್ಚರ್ಯೆಯಿಂದ ಕೃಶನಾದ ಮಾರ್ಕಂಡೇಯನ ತಲೆಯಮೇಲೆ ಜಗನ್ನಾಥ ತನ್ನ ವರದ ಹಸ್ತವನ್ನಿಟ್ಟ. ''ಪುರಾಣ ಸಂಹಿತೆಗಳನ್ನೆಲ್ಲ ನೀನು ಮಾಡು'' ಎಂದು ಶ್ರೀ ಹರಿಯು ಮಾರ್ಕಂಡೇಯಮುನಿಗೆ ವರವನ್ನು ನೀಡಿದ. ವ್ಯಾಸರೂಪದಿಂದ ಮಾರ್ಕಂಡೇಯನಿಗೆ ಪುರಾಣ ಸಂಹಿತೆಯನ್ನು ಸ್ವಯಂ ನಾರಾಯಣನೇ ಉಪದೇಶ ಮಾಡಿದ. ಅವನಲ್ಲಿ ತಾನೇ ನಿಂತು ಪುರಾಣ ಸಂಹಿತೆಯನ್ನೆಲ್ಲ ಬರೆಸಿದ. ವ್ಯಾಸ ರೂಪಿಯಾದ ನಾರಾಯಣನು ಮಾರ್ಕಂಡೇಯ ಮುನಿಯಲ್ಲಿ ನಿಂತು ಈ ಎಲ್ಲ ಕಾರ್ಯ ಮಾಡಿದ್ದರಿಂದ ಆ ಮುನಿಯು ನಾರಾಯಣನೆಂದೇ ಜಗತ್ತಿನಲ್ಲಿ ಪ್ರಸಿದ್ಧನಾದ. (ಆದರೆ ಅವನೇ ನಿಜವಾದ ನಾರಾಯಣನಲ್ಲ. ಅವನು ನಾರಾಯಣನ ಭಕ್ತ ಎಂದು ಅದರ ಅರ್ಥ).

'ಚಿರಂಜೀವೀ ಮಹಾಭಕ್ತೋ ದೇವದೇವಸ್ಯ ಚಕ್ರಿಣಃ

ದೇವತೆಗಳಿಗೂ ದೇವರಾದ ಶ್ರೀ ವಿಷ್ಣುವಿನ ಮಹಾಭಕ್ತನಾದ ಆ ಮಾರ್ಕಂಡೇಯ ಮುನಿ ಈ ಲೋಕದಲ್ಲಿ ಚಿರಂಜೀವಿಯಾದ ಆ ಪರಮಾತ್ಮನ ದಯೆಯಿಂದ. ಈ ಭಕ್ತನ ಮೇಲೆ ಆ ಭಗವಂತನಿಗೆ ವಿಪರೀತ ವಾತ್ಸಲ್ಯ. ಮುಂದೆ ಕಾಲಾಂತರದಲ್ಲಿ ಜಗತ್‌ಪ್ರಳಯವಾಯಿತು. ಎಲ್ಲ ಪ್ರಾಣಿಗಳನ್ನು ಆ ಪರಮಾತ್ಮನು ಸಂಹರಿಸಿದ. ಆದರೆ ತನ್ನ ಭಕ್ತನಾದ ಆ ಮಾರ್ಕಂಡೇಯನನ್ನು ಮಾತ್ರ ಸಂಹರಿಸಲಿಲ್ಲ. ತನ್ನ ವಿಚಿತ್ರವಾದ ಸಾಮರ್ಥ್ಯವನ್ನು ಮಾರ್ಕಂಡೇಯನಿಗೆ ತೋರಿಸಲಿಕ್ಕಾಗಿ ಆ ಮಾರ್ಕಂಡೇಯನನ್ನು ಜೀವಂತ ಉಳಿಸಿದ್ದ. ಅದೊಂದು ಭಯಂಕರ ಪ್ರಸಂಗ. ಎಲ್ಲಿ ನೋಡಿದಲ್ಲೆಲ್ಲ ನೀರೇ ನೀರು. ಪ್ರಪಂಚವೆಲ್ಲವೂ ನೀರಿನಲ್ಲಿ ಮುಳುಗಿ ಹೋಗಿದೆ. ಎಲ್ಲ ಪ್ರಾಣಿಗಳೂ ವಿನಾಶ ಹೊಂದಿವೆ.

ಸಮುದ್ರಗಳೆಲ್ಲ ಉಕ್ಕೇರಿ ಜಗತ್ತೆಲ್ಲವೂ ಏಕಾರ್ಣವವಾಗಿ ನಿಂತುಕೊಂಡಿದೆ. ಬೆಟ್ಟದಂತಹ ತೆರೆಗಳು ಭೋರ್ಗರೆಯುತ್ತಲಿವೆ. ಇಂತಹ ಪ್ರಳಯ ತಾಂಡವದಲ್ಲಿಯೂ ಮಾರ್ಕಂಡೇಯನ ವಿಷ್ಣುಭಕ್ತಿಗೆ ಚ್ಯುತಿ ಬಂದಿರಲಿಲ್ಲ. ದೈತ್ಯಾಕಾರದ ತೆರೆಗಳ ಆಘಾತ ಪ್ರತ್ಯಾಘಾತಗಳಿಂದ ಆ ಮಹಾಮುನಿ ವಿಚಲಿತನಾಗಲಿಲ್ಲ. ಘೋರಾಕಾರವಾದ ತೆರೆಗಳ ಮಧ್ಯದಲ್ಲಿ ತರಗೆಲೆಯಂತೆ ತೇಲಾಡುತ್ತಿದ್ದರೂ ಆ ಮಹಾಮುನಿ ಶ್ರೀಹರಿಯ ಧ್ಯಾನ ಬಿಟ್ಟರಲಿಲ್ಲ. ಹರಿದ ಎಲೆಯ ಚೂರಿನಂತೆ ತೇಲಾಡುತ್ತ ಆ ಪ್ರಳಯ ಜಲರಾಶಿಯಲ್ಲಿ ಶ್ರೀ ಹರಿಯು ಶಯನ ಮಾಡುವವರೆಗೂ ಮಾರ್ಕಂಡೇಯ ಮುನಿಯ ಹರಿಧ್ಯಾನ ಗೈಯುತ್ತ ಹರಿದಾಡುತ್ತಲೇ ಇದ್ದ. ಆ ಪ್ರಳಯ ಜಲೋದಧಿಯಲ್ಲಿ ಶ್ರೀ ಹರಿಯು ಪವಡಿಸಿದ. ಯೋಗನಿದ್ರೆಯನ್ನು ಕೈಕೊಂಡ ಪ್ರಳಯ ಕಾಲದಲ್ಲಿ ಶ್ರೀ ಹರಿಯು ಸಮುದ್ರಶಯನ ಮಾಡಿದ ಕಾಲದ ಪರಿಮಿತಿ ಹೇಳುತ್ತೇನೆ, ಕೇಳು.

ಹದಿನೈದು ಸಾರೆ ಕಣ್ಣಿನ ರೆಪ್ಪೆ ಬಡೆಯುವಷ್ಟು ಕಾಲಕ್ಕೆ ಒಂದು 'ಕಾಷ್ಠಾ' ಎಂದು ಹೆಸರು. ಮೂವತ್ತು ಕಾಷ್ಠಾಗಳು ಒಂದು 'ಕಲೆ', ಮೂವತ್ತು ಕಲೆಗಳು ಸೇರಿ ಒಂದು 'ಕ್ಷಣ'. ಆರು ಕ್ಷಣಕೂಡಿ ಒಂದು 'ಗಳಿಗೆ', ಎರಡು ಗಳಿಗೆಗೆ ಒಂದು 'ಮುಹೂರ್ತ', ಮೂವತ್ತು ಮುಹೂರ್ತಗಳೆಂದರೆ ಒಂದು ದಿನ. ಮೂವತ್ತು ದಿನಕ್ಕೆ ಒಂದು ತಿಂಗಳು, ಒಂದು ತಿಂಗಳಲ್ಲಿ ಹದಿನೈದು ದಿನದ ಎರಡು ಪಕ್ಷಗಳು, ಎರಡು ತಿಂಗಳು ಕೂಡಿದರೆ ಒಂದು ಋತು, ಮೂರು ಋತು ಸೇರಿದರೆ ಒಂದು 'ಅಯನ', ಎರಡು ಅಯನ ಸೇರಿ ಒಂದು ವರ್ಷ, ಮಾನವ ಮಾನದ ಒಂದು ವರ್ಷ ದೇವ ಮಾನದ ಒಂದು ದಿನ. ದೇವತೆಗಳ ದಿನದಲ್ಲಿ ಹಗಲು ಉತ್ತರಾಯಣ, ರಾತ್ರಿ ದಕ್ಷಿಣಾಯನ ಎಂದು ಕರೆಯುತ್ತಾರೆ. ಮನುಷ್ಯರ ಒಂದು ತಿಂಗಳೂ ಪಿತೃಗಳಿಗೆ ಒಂದು ದಿವಸ. ದೇವಮಾನದ ಹನ್ನೆರಡು ಸಹಸ್ರ ವರ್ಷಗಳಿಗೆ ಒಂದು 'ದೇವ ಯುಗ' ವೆಂದು ಹೆಸರು. ದೇವತೆಗಳ ಎರಡು ಸಹಸ್ರಯುಗಗಳು ಬ್ರಹ್ಮನಿಗೆ ಒಂದು ದಿನ - ಅಂದರೆ ಒಂದು ಹಗಲು ಒಂದು ರಾತ್ರಿ. ಈ ಬ್ರಹ್ಮನ ಮನುಷ್ಯರಿಗೆ ಹಗಲು ರಾತ್ರಿಗಳು ಪ್ರಳಯ ಕಾಲ, ಎಂದರೆ ಬ್ರಹ್ಮದೇವರ ಹಗಲು ಜಗತ್ತಿಗೆ ಸ್ಥಿತಿಯೂ, ರಾತ್ರಿ ಕಾಲದಲ್ಲಿ ಪ್ರಳಯವೂ ಉಂಟಾಗುತ್ತದೆ. ದೇವತೆಗಳ ಎಪ್ಪತ್ತೊಂದು ಯುಗ ಒಂದು ಮನ್ವಂತರ ಎನಿಸುತ್ತದೆ. ಇಂತಹ ಹದಿನಾಲ್ಕು ಮನ್ವಂತರಗಳು ಬ್ರಹ್ಮನಿಗೆ ಒಂದು ದಿನ. ಈ ದಿನವು ಎಷ್ಟು ಪರಿಮಿತಿಯುಳ್ಳದ್ದೊ ಬ್ರಹ್ಮನ ರಾತ್ರಿಯೂ ಅಷ್ಟೇ ಪರಿಮಿತಿ ಉಳ್ಳದ್ದು. ಮನುಷ್ಯ ಮಾನದಿಂದ ಸಾವಿರ ಮಹಾಯುಗಗಳು ತಿರುಗಿದರೆ ಬ್ರಹ್ಮದೇವರಿಗೆ ಒಂದು ದಿನ. ಅಂತಹ ಮೂವತ್ತು ಯುಗಗಳು ತಿರುಗಿದರೆ ಬ್ರಹ್ಮದೇವರಿಗೆ ಒಂದು ದಿನ. ಅಂತಹ ಮೂವತ್ತು ಯುಗಗಳು ಕಳೆದರೆ ಬ್ರಹ್ಮದೇವರಿಗೆ ಒಂದು ಮಾಸ. ಇಂತಹ ಹನ್ನೆರಡು ಮಾಸಗಳು ಬ್ರಹ್ಮನಿಗೆ ಒಂದು ವರ್ಷ. ಬ್ರಹ್ಮನ ಎರಡು ಪರಾರ್ಧ ಕಾಲವು ವಿಷ್ಣುವಿಗೆ ಒಂದು ಹಗಲು. ಅಷ್ಟೇ ಪರಿಮಿತಕಾಲ ರಾತ್ರಿ. ಎಂಬುದಾಗಿ (ಔಪಚಾರಿಕವಾಗಿ) ತಿಳಿಯಬೇಕು. ಇಂತಹ ಘೋರವಾದ ಪ್ರಳಯೋದಕದಲ್ಲಿಯೂ ಮಾರ್ಕಂಡೇಯನು ಸುರಕ್ಷಿತನಾಗಿದ್ದುದು ಹೇಗೆ ಗೊತ್ತೆ?

'ತಸ್ಮಿನ್ ಘೋರೇ ಜಲಮಯೇ ವಿಷ್ಣು ಶಕ್ತ್ಯುಪಬೃಂಹಿತಃ ।
ಆತ್ಮಾನಂ ಪರಮಂ ಧ್ಯಾಯನ್ ಸ್ಥಿತವಾನ್ ಹರಿಸನ್ನಿಧೌ ॥

ಅಂತಹ ದಾರುಣ ಪ್ರಸಂಗದಲ್ಲಿಯೂ ಹರಿಯ ಧ್ಯಾನ ಮಾಡುತ್ತಲೇ ಇದ್ದುದರಿಂದ ಶ್ರೀ ಹರಿಯು ಅವನ ಮೇಲೆ ಪ್ರಸನ್ನನಾಗಿದ್ದ. ತನ್ನ ವಿಶೇಷ ಶಕ್ತಿಯಿಂದ ಆ ಪ್ರಳಯಕಾಲದ ಘೋರ ತರಂಗಗಳ ಆಘಾತದಿಂದ ಅವನು ನುಚ್ಚು ನೂರಾಗಿ ನಾಶವಾಗದಂತೆ ನೋಡಿಕೊಂಡಿದ್ದ. ವಿಷ್ಣುವಿನ ಶಕ್ತಿಯಿಂದ ಉಪಬೃಂಹಿತನಾದ ಆ ಮಾರ್ಕಂಡೇಯ ಮುನಿಯು ಆ ವಿಷ್ಣುವನ್ನು ಧ್ಯಾನ ಮಾಡುತ್ತಲೇ ಅವನ ಸಮೀಪದಲ್ಲಿ ಸುರಕ್ಷಿತವಾಗಿ ತೇಲಾಡುತ್ತಿದ್ದ.

ಮುಂದೆ ಪ್ರಳಯಕಾಲದ ಸಮಾಪ್ತಿ ಸಮಯ ಬಂದಿತು. ಭಗವಂತ ಯೋಗ ನಿದ್ರೆಯಿಂದ ಎಚ್ಚತ್ತ. ಬ್ರಹ್ಮರೂಪದಿಂದ ಚರಾಚರ ಪ್ರಪಂಚವನ್ನು ಮತ್ತೆ ಸೃಷ್ಟಿ ಮಾಡಿದ. ಜಗದಂಡ ಮಂಡಲದ ತುಂಬ ತುಂಬಿತುಳುಕಾಡುತ್ತಿದ್ದ ನೀರು ಶ್ರೀ ಹರಿಯ ಇಚ್ಛೆಯಿಂದ ಇಲ್ಲವಾಯಿತು. ವಿಶ್ವವು ವಿನೂತನವಾಗಿ ತಲೆ ಎತ್ತಿತ್ತು. ಇದನ್ನೆಲ್ಲ ಹರಿಯ ಅನುಗ್ರಹದಿಂದ ಸುರಕ್ಷಿತನಾಗಿ ಉಳಕೊಂಡ ಮಾರ್ಕಂಡೇಯ ಮುನಿ ಆಶ್ಚರ್ಯ ಚಕಿತನಾಗಿ ನೋಡಿದ. ಪರಮಾತ್ಮನ ವಿಚಿತ್ರ ಶಕ್ತಿಯನ್ನು ಕಂಡು ವಿಸ್ಮಯಗೊಂಡ, ಭಕ್ತಿಯಿಂದ ಪುಲಕಿತನಾದ, ತಲೆಬಾಗಿಸಿದ. ಶ್ರೀ ಹರಿಯ ಎರಡೂ ಚರಣಗಳನ್ನು ಹಿಡಿದು ವಂದಿಸಿದ. ತಲೆಯ ಮೇಲೆ ಕೈಜೋಡಿಸಿದ. ಛಂದೋಬಂಧ ಸುಂದರವಾದ ತನ್ನ ವಾಚೋ ವೈಖರಿಯಿಂದ ಆನಂದಮಯನಾದ ಆ ಮುಕುಂದನನ್ನು ಸ್ತೋತ್ರಗೈದ.

॥ಮಾರ್ಕಂಡೇ ಉವಾಚ॥

ಸಹಸ್ರಶಿರಸಂ ದೇವಂ ನಾರಾಯಣನಾಮಯಂ ।
ವಾಸುದೇವಮನಾಧಾರಂ ಪ್ರಣತೋಽಸ್ಮಿ ಜನಾರ್ದನಂ ।
ಅಮೇಯಮಜರಂ ನಿತ್ಯಂ ಸದಾನಂದೈಕ ವಿಗ್ರಹಂ ॥

ಅಪ್ರತರ್ಕ್ಯಮನಿರ್ದೇಶ್ಯಂ ಪ್ರಣತೋಽಸ್ಮಿ ಜನಾರ್ದನಂ ।
ಅಕ್ಷರಂ ಪರಮಂ ನಿತ್ಯಂ ವಿಶ್ವಾಕ್ಷಂ ವಿಶ್ವಸಂಭವಂ ॥

ಸರ್ವತತ್ವಮಯಂ ಶಾಂತಂ ಪ್ರಣತೋಽಸಿ ಜನಾರ್ದನಂ ।
ಪುರಾಣ ಪುರುಷಂ ಸಿದ್ಧಂ ಸರ್ವಜ್ಞಾನೈಕ ಭಾಜನಂ ॥

ಪರಾತ್ಪರತರಂ ರೂಪಂ ಪ್ರಣತೋಽಸ್ಮಿ ಜನಾರ್ದನಂ ।
ಪರಂಜ್ಯೋತಿಃ ಪರಂಧಾಮ ಪವಿತ್ರಂ ಪರಮಂಪದಂ ॥

ಸದೈಕರೂಪಂ ಪರಮಂ ಪ್ರಣತೋಽಸ್ಮಿ ಜನಾರ್ದನಂ ।
ತಂ ಸದಾನಂದ ಚಿನ್ಮಾತ್ರಂ ಪರಾಣಾಂ ಪರಮಂ ಪದಂ ॥

ಸರ್ವಂ ಸನಾತನಂ ಶ್ರೇಷ್ಠಂ ಪ್ರಣತೋಽಸ್ಮಿ ಜನಾರ್ದನಂ ।
ಸಗುಣಂ ನಿರ್ಗುಣಂ ಶಾಂತಂ ಮಾಯಾತೀತಂ ಸುಮಾಯಿನಂ ॥

ಅರೂಪಂ ಬಹುರೂಪಂ ತಂ ಪ್ರಣತೋಽಸ್ಮಿ ಜನಾರ್ದನಂ ।
ಯತ್ರ ತದ್ಭಗವಾನ್ವಿಶ್ವಂ ಸೃಜತ್ಯವತಿ ಹಂತಿ ಚ ॥

ತಮಾದಿದೇವಮೀಶಾನಂ ಪ್ರಣತೋಽಸ್ಮಿ ಜನಾರ್ದನಂ ।
ಪರೇಶಂ ಪರಮಾನಂದಂ ಶರಣಾಗತವತ್ಸಲಂ ॥
ತ್ರಾಹಿ ಮಾಂ ಕರುಣಾಸಿಂಧೋ ಮನೋಽತೀತ ನಮೋಽಸ್ತುತೇ ।

ಸಾವಿರ ತಲೆಗಳುಳ್ಳ, ದೋಷರಹಿತನಾದ, ಬೇರೆ ಯಾರನ್ನೂ ಆಶ್ರಯ ಮಾಡದ, ನಾಶವಿಲ್ಲದ, ಅಪ್ರಮೇಯನಾದ ಶ್ರೀ ನಾರಾಯಣನನ್ನು ನಮಸ್ಕರಿಸುತ್ತೇನೆ. ನಿತ್ಯ ಸತ್ಯ ಸ್ವರೂಪಿಯಾದ ಆ ನಾರಾಯಣನಿಗೆ ನಾಶವಿಲ್ಲ. ಜಗತ್ತೆಲ್ಲವೂ ಅವನಿಂದ ಹುಟ್ಟಿದೆ. ಅವನು ಜಗತ್ ಚಕ್ಷುವು. ಎಲ್ಲ ತತ್ವಗಳಲ್ಲಿಯೂ ಅಂತರ್ಯಾಮಿ. ಅವನೇ ಪುರಾಣ ಪುರುಷ. ಸರ್ವಜ್ಞ. ಪರಾತ್ಪರ ಪರಂಜ್ಯೋತಿ ಸ್ವರೂಪ, ಜ್ಞಾನಾನಂದ ರೂಪ, ಉತ್ತಮೋತ್ತಮ, ಸನಾತನ. ಪ್ರಾಕೃತಗುಣ ರಹಿತ, ಸರ್ವ ಸದ್ಗುಣ ಸಂಪನ್ನ, ಮಾಯೆಯನ್ನು ತನ್ನ ಅಂಕಿತದಲ್ಲಿಟ್ಟುಕೊಂಡವ. ಆದುದರಿಂದಲೇ ಅವನಿಗೆ ಮಾಯಿ ಎಂದು ಹೆಸರು. ಪ್ರಾಕೃತರೂಪವಿಲ್ಲ. ಅಪ್ರಾಕೃತವಾದ ಅನಂತರೂಪ ಉಳ್ಳವ. ಪ್ರಪಂಚದ ಸೃಷ್ಟಿ, ಸ್ಥಿತಿ ಸಂಹಾರ ಮಾಡುವವನು. ಬ್ರಹ್ಮಾದಿ ದೇವತೆಗಳ ನಿಯಾಮಕ, ಪರಮಾನಂದ ಪರಿಪೂರ್ಣ. ಶರಣಾಗತ ವತ್ಸಲ. ಇಂಥ ಶ್ರೀ ನಾರಾಯಣನಿಗೆ ನನ್ನ ಅನಂತ ಪ್ರಣಾಮ ನನ್ನನ್ನು ರಕ್ಷಿಸು. ಹೀಗೆ ತನ್ನನ್ನು ಸ್ತುತಿಸುತ್ತಿರುವ ಮಾರ್ಕಂಡೇಯನನ್ನು ಕುರಿತು ಶ್ರೀ ಹರಿಯು ಪರಮ ಪ್ರೀತಿಯಿಂದ ಮಾತನಾಡಿದನು.

**ನಾರಾಯಣ:-** ಈ ಜಗತ್ತಿನಲ್ಲಿ ಭಾಗವತರು ನನಗೆ ಅತ್ಯಂತ ಪ್ರೀತ್ಯಾಸ್ಪದರು. ಭಾಗವತ ಎಂದರೆ ಭಗವದ್ಭಕ್ತ ಎಂದು ಅರ್ಥ. ನನ್ನಲ್ಲಿಯೇ ಮನಸ್ಸಿಟ್ಟ ಆ ಭಾಗವತರಿಗೆ ನಾನು ಯಾವಾಗಲೂ ಸುಪ್ರಸನ್ನನಾಗಿ ಅವರನ್ನು ರಕ್ಷಿಸುತ್ತೇನೆ. ಇದಕ್ಕೆ ಸಂದೇಹವಿಲ್ಲ. ಭಗವದ್ಭಕ್ತರಲ್ಲಿ ನಾನೇ ನೆಲಿಸಿ ಭಕ್ತರ ರೂಪದಿಂದ ಲೋಕಗಳನ್ನು ರಕ್ಷಿಸುತ್ತೇನೆ.

**ಮಾರ್ಕಂಡೇಯ:-** ಭಾಗವತರ ಲಕ್ಷಣವೇನು? ಯಾವ ಕರ್ಮಗಳಿಂದ ಭಾಗವತನು ಮೋಕ್ಷ ಹೊಂದುವನು? ಎಂಬುದನ್ನು ತಿಳಿಸಿರಿ.

**॥ ಶ್ರೀ ಭಗವಾನ್ ಉವಾಚ ॥**

**ಯೇ ಹಿತಾ ಸ್ಸರ್ವಜಂತೂನಾಂ ಗತಾಸೂಯಾ ಅಮತ್ಸರಾಃ ।**
**ವಶಿನೋ ನಿಸಪ್ಪೃಹಾಃ ಶಾಂತಾಸ್ತೇ ವೈ ಭಾಗವತೋತ್ತಮಾ : ॥**

ಎಲ್ಲ ಪ್ರಾಣಿಗಳಿಗೆ ಹಿತವನ್ನು ಮಾಡುವವರು ಭಾಗವತ ಎನಿಸುತ್ತಾರೆ. ನಿಜವಾದ ಭಾಗವತರಲ್ಲಿ ಮತ್ಸರ, ಸ್ವಾರ್ಥ, ದುರಾಶೆ ಇವು ಯಾವವೂ ಇರುವದಿಲ್ಲ. ಸ್ವಭಾವದಿಂದ ಶಾಂತರಾಗಿ, ಇಂದ್ರಿಯಗಳನ್ನು ನಿಗ್ರಹಿಸಿ, ನಡೆ ನುಡಿ ಮನಸ್ಸು ಯಾವುದರಿಂದಲೂ ಪರರಿಗೆ ಪೀಡೆ ಮಾಡದೆ ಅಪರಿಗ್ರಹ ವೃತ್ತಿಯುಳ್ಳವರು ಭಾಗವತರು. ಭಾಗವತರ ಇನ್ನೂ ಕೆಲವು ಲಕ್ಷಣಗಳನ್ನು ಹೇಳುವೆನು ಕೇಳು. ಹರಿಕಥಾ ಶ್ರವಣ ಮಾಡುವದರಲ್ಲಿ ಔತ್ಸುಕ್ಯ. ಹರಿಭಕ್ತರಲ್ಲಿಯೂ ಭಕ್ತಿ. ನಿತ್ಯ ದೇವರ ಪೂಜೆ. ದೊಡ್ಡವರ ಸೇವೆ. ಸನ್ಯಾಸಿಗಳ ಪರಿಚಯ. ಪರನಿಂದಾತ್ಯಾಗ. ಮುಂತಾದ ಗುಣವುಳ್ಳವರು ಭಾಗವತೋತ್ತಮರೆನಿಸುತ್ತಾರೆ.

**ಮಾತಾಪಿತ್ರೋಶ್ಚ ಶುಶ್ರೂಷಾಂ ಕುರ್ವಂತಿ ಯೇ ನರೋತ್ತಮಾಃ ।**
**ಗಂಗಾವಿಶ್ವೇಶ್ವರಧಿಯಾ ತೇ ವೈ ಭಾಗವತೋತ್ತಮಾಃ ॥**

ತಾಯಿಯನ್ನು ಸಾಕ್ಷಾತ್ ಗಂಗೆಯೆಂದೂ, ತಂದೆಯನ್ನು ಮಹಾದೇವರೆಂದೂ ಯಾರು ಸೇವೆ ಮಾಡುವರೊ ಅವರು ಭಾಗವತೋತ್ತಮರು. ಮತ್ತು ಇದರಂತೆ ಎಲ್ಲರಿಗೂ ಹಿತಕರವಾದ ಮಾತನ್ನು ಆಡಿ, ಇನ್ನೊಬ್ಬರ ಗುಣಗ್ರಹಣ ಮಾಡುವವರೂ, ತನ್ನಂತೆ ಎಲ್ಲ

ಪ್ರಾಣಿಗಳನ್ನು ಸಮನಾಗಿ ನೋಡುವವರೂ, ಶತ್ರು, ಮಿತ್ರರಲ್ಲಿ ಸಮಾನಭಾವದಿಂದ ಇರುವವರೂ, ಧರ್ಮಶಾಸ್ತ್ರವನ್ನು ಹೇಳುವವರೂ, ಸತ್ಯ ಹೇಳುವವರೂ, ಸಜ್ಜನರನ್ನು ಸೇವಿಸುವರೂ, ಪುರಾಣ ಪ್ರವಚನ ಗೈಯ್ಯುವವರೂ, ಪುರಾಣ ಶ್ರವಣ ಮಾಡುವವರೂ, ಗೋಬ್ರಾಹ್ಮಣ ಸೇವೆ ಮಾಡುವವರೂ, ತೀರ್ಥಯಾತ್ರೆ ಮಾಡುವವರೂ, ಇನ್ನೊಬ್ಬರ ಪ್ರಗತಿ ಕಂಡು ಆನಂದಿಸುವವರೂ, ಹರಿಯ ನಾಮಸ್ಮರಣೆ ಮಾಡುವವರೂ, ಕೆರೆ ಕಾಲುವೆ, ಬಾವಿಗಳನ್ನು ಜನೋಪಕಾರಕ್ಕಾಗಿ ಕಟ್ಟಿಸುವವರೂ, ಗಿಡಗಳನ್ನು ಬೆಳೆಸಿ ತೋಟ ಮಾಡುವವರೂ, ಹರಿನಾಮಸ್ಮರಣೆಯನ್ನು ಮಾಡಿ, ಕೇಳಿ ಆನಂದಿಸುವವರೂ, ಮಾಡಿದವರನ್ನು ಅಭಿನಂದಿಸುವವರೂ, ತುಲಸೀ ವನ ಕಂಡು ನಮಸ್ಕಾರ ಮಾಡುವವರೂ, ತುಲಸೀ ದಳ, ನಿರ್ಮಾಲ್ಯ ಧರಿಸುವವರೂ, ತುಲಸೀ ಮೃತ್ತಿಕೆ ಧರಿಸುವವರೂ, ವರ್ಣಾಶ್ರಮ ಉಚಿತವಾದ ಸದಾಚಾರ ನಿರತರೂ, ಅತಿಥಿ ಪೂಜೆ ಮಾಡುವವರೂ, ವೇದಾರ್ಥ ಹೇಳುವವರೂ, ಶಿವಪೂಜೆ ಮಾಡುವವರೂ, ಗೋಪೀ ಚಂದನಾದಿ ನಾಮಧಾರಿಗಳೂ, ಮಹಾದೇವರ ನಾಮೋಚ್ಚಾರ ಮಾಡುವವರೂ, ಹರಿಹರರನ್ನು ಭಕ್ತಿಯಿಂದ ಯಜ್ಞಮಾಡಿ ಆರಾಧಿಸುವವರೂ, ತಮಗೆ ಗೊತ್ತಿದ್ದ ಶಾಸ್ತ್ರಾರ್ಥವನ್ನು ಪರರಿಗೆ ತಿಳಿಸುವವರೂ, ಸಂಧ್ಯಾ, ಅಗ್ನಿಕಾರ್ಯ, ಪಂಚಾಕ್ಷರೀ ಜಪ, ಶಿವಧ್ಯಾನ ಮೊದಲಾದವುಗಳನ್ನು ಮಾಡುವವರೂ, ಅನ್ನದಾನ, ಜಲದಾನ ಗೈಯುವವರೂ, ಏಕಾದಶೀ ವ್ರತ ಪಾಲಿಸುವವರೂ, ಗೋದಾನ ಕನ್ಯಾದಾನಗಳನ್ನು ವಿಧಿಪೂರ್ವಕವಾಗಿ ಮಾಡುವವರೂ ಭಾಗವತೋತ್ತಮರೆಂದು ಕರೆಯಿಸಿಕೊಳ್ಳುತ್ತಾರೆ. ಮಾರ್ಕಂಡೇಯ, ಇಲ್ಲಿ ನಾನು ನಿಜವಾದ ಭಾಗವತರ ಕೆಲವು ಲಕ್ಷಣ ಮಾತ್ರ ಹೇಳಿದ್ದೇನೆ. ಇದರಂತೆ ನೀನಾದರೂ ಕೂಡ ನನ್ನ ಧ್ಯಾನ ಮಾಡಿ ಮೊದಲು ಭಾಗವತನಾಗು, ಈ ಯುಗದ ಅಂತ್ಯಕಾಲದವರೆಗೂ ನಾನೂ ಹೇಳಿದಂತೆ ಧರ್ಮಕರ್ಮಾಸಕ್ತನಾಗಿ, ನನ್ನನ್ನು ಧ್ಯಾನಮಾಡುತ್ತ, ಜನರಿಗೆ ಧರ್ಮೋಪದೇಶ ಮಾಡುತ್ತ ಭಾಗವತನಾಗಿ ಈ ಭೂಲೋಕದಲ್ಲಿ ಇರು, ಅನಂತರ ನನ್ನ ದಯೆಯಿಂದ ನೀನು ಮೋಕ್ಷವನ್ನು ಪಡೆಯುವಿ.

ಹೀಗೆ ತನ್ನ ಭಕ್ತನಾದ ಮಾರ್ಕಂಡೇಯನಿಗೆ ವರವನ್ನು ಕರುಣಿಸಿ ಅಲ್ಲಿಯೇ ನಾರಾಯಣನು ಅಂತರ್ಧಾನ ಹೊಂದಿದ. ಆ ಮಾರ್ಕಂಡೇಯ ಮುನಿಯಾದರೂ ಭಗವಂತ ಹೇಳಿದಂತೆಯೇ ನಡೆದ. ಧರ್ಮ ಕರ್ಮಗಳನ್ನು ಆಚರಿಸಿದ. ಯಜ್ಞಯಾಗ ನಡೆಸಿದ. ದಿವ್ಯಕ್ಷೇತ್ರವೆನಿಸಿದ ಶಾಲಿಗ್ರಾಮ ಕ್ಷೇತ್ರದಲ್ಲಿ ನಿಂತು ಅದ್ಭುತ ತಪಸ್ಸು ಮಾಡಿದ. ಸಂಚಿತ ಹಾಗೂ ಪ್ರಾರಬ್ಧ ಕರ್ಮಗಳನ್ನು ಶ್ರೀಹರಿಯ ಧ್ಯಾನದಿಂದ, ತಪದಿಂದ, ಕಳೆದುಕೊಂಡು ಮೋಕ್ಷವನ್ನು ಹೊಂದಿದ. ಆದುದರಿಂದ ಸರ್ವಪ್ರಾಣಿಗಳಿಗೂ ಹಿತವನ್ನು ಉಂಟು ಮಾಡಿ ಶ್ರೀ ಹರಿಯನ್ನು ಪೂಜಿಸುವ ಭಗವದ್ಭಕ್ತನು ಮನಸ್ಸಿನಲ್ಲಿ ಬಯಸಿದ್ದೆಲ್ಲ ಪಡೆಯುತ್ತಾನೆ. ಇದರಲ್ಲಿ ಸಂದೇಹವಿಲ್ಲ.

**ಸನಕ:-** ನಾರದ, ನೀನು ಕೇಳಿದ ಪ್ರಶ್ನೆಗೆ ನಾನು ಉತ್ತರ ಕೊಟ್ಟಾಗಿದೆ. ಭಗವದ್ಭಕ್ತಿಯ ಮಹಿಮೆ ಮತ್ತು ಅದರ ಲಕ್ಷಣಗಳನ್ನೆಲ್ಲ ನಾನು ತಿಳಿಸಿದ್ದೇನೆ. ನೀನು ನನ್ನಿಂದ ಮತ್ತೆ ಏನು ಕೇಳಬೇಕೆಂದು ಬಯಸಿರುವಿ?

ನಾರದ ಮಹಾಪುರಾಣದಲ್ಲಿ ಐದನೇ ಅಧ್ಯಾಯ ಮುಗಿದುದು

—o—

## ಕಾಶಿ, ಪ್ರಯಾಗ, ಗಂಗಾದಿಗಳ ಮಹಾತ್ಮ್ಯ

**ಅಧ್ಯಾಯ - ೬**

**ಸೂತ:-** ಭಗವದ್ಭಕ್ತಿಯ ಮಹಾತ್ಮೆಯನ್ನು ಕೇಳಿ ಸಂತುಷ್ಟನಾದ ನಾರದ ಮತ್ತೆ ಸನಕನನ್ನು ಕುರಿತು ಪ್ರಶ್ನೆ ಮಾಡಿದ. ಜ್ಞಾನ ವಿಜ್ಞಾನಗಳಲ್ಲಿ ಪಾರಂಗತನಲ್ಲವೆ ಆ ಸನಕ!

**ನಾರದ:-** ಸರ್ವ ಶಾಸ್ತ್ರಗಳ ಪಾರದರ್ಶಿಯಾದ ಸನಕ ಮುನಿಯೇ, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರ ಯಾವುದು? ತೀರ್ಥಗಳಲ್ಲಿ ಉತ್ತಮ ತೀರ್ಥ ಯಾವುದು? ಇದನ್ನೆಲ್ಲ ದಯವಿಟ್ಟು ನನಗೆ ಹೇಳು!

**ಸನಕ:-** ಬ್ರಹ್ಮನೇ, ನೀನು ಕೇಳಿದ ವಿಷಯ ಅತ್ಯಂತ ರಹಸ್ಯವಾದದ್ದು. ಅದನ್ನು ತಿಳಿದವರಿಗೆ ಐಶ್ವರ್ಯಪ್ರಾಪ್ತಿ. ಪಾಪನಾಶ, ದುಃಸ್ವಪ್ನ ನಾಶವಾಗಿ ಪುಣ್ಯ ವಿಶೇಷವು ದೊರೆಯುವದು. ಋಷಿ ಮುನಿಗಳಿಗೂ ಶ್ರೋತವ್ಯವಾದ ಆ ರಹಸ್ಯ ವಿಷಯವನ್ನು ಹೇಳುತ್ತೇನೆ ಕೇಳು-ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರ ಹಾಗೂ ತೀರ್ಥಗಳಲ್ಲಿ ಉತ್ತಮ ವಾದದ್ದೆಂದರೆ ಗಂಗಾ ಯಮುನಾ ಸಂಗಮವಾದ ಪ್ರಯಾಗ ಕ್ಷೇತ್ರ. ಬೆಳ್ಳಗಿನ ನೀರುಳ್ಳ ಗಂಗೆ, ಕರಿನೀರುಳ್ಳ ಯಮುನೆ ಈ ಎರಡೂ ನದಿಗಳ ಶ್ವೇತ ಕೃಷ್ಣ ಸಲಿಲಗಳ ಮಿಲನ ಕ್ಷೇತ್ರವಾದ ಆ ಪ್ರಯಾಗ ತೀರ್ಥವನ್ನು ಬ್ರಹ್ಮಾದಿ ದೇವತೆಗಳೂ ಸೇವಿಸುತ್ತಾರೆ. ಮುನಿಗಳೂ, ಮನುಗಳೂ ಪುಣ್ಯ ಕಾಂಕ್ಷಿಗಳಾದ ಮಾನವರೂ ಕೂಡ ಸೇವಿಸುತ್ತಾರೆ. ಗಂಗೆ ಒಳ್ಳೇ ಪುಣ್ಯ ನದಿ. ಸಾಕ್ಷಾತ್ ಶ್ರೀ ವಿಷ್ಣುವಿನ ಪಾದದಿಂದಲೇ ಉದ್ಭೂತಳಾಗಿದ್ದಾಳೆ. ಅವಳ ಪುಣ್ಯಕ್ಕೆ ಎಣೆಯಲ್ಲಿ! ಸೂರ್ಯನಿಂದ ಸಮುತ್ಪನ್ನಳಾಗಿದ್ದಾಳೆ. ಯಮುನೆ. ಇಂಥ ಈ ಎರಡು ಪುಣ್ಯ ನದಿಗಳ ಸಂಗಮವು ಮಂಗಳಕರವಾಗಿದೆ. ಗಂಗಾನದಿಯನ್ನು ನೆನೆದರೂ ಸಾಕು. ಎಲ್ಲ ಪಾಪಗಳು ನಶಿಸುವವು. ಈ ಎಲ್ಲ ಅನಿಷ್ಟಗಳೂ ದೂರಾಗುವವು. ಆದುದರಿಂದಲೇ ನದಿಗಳಲ್ಲಿ ಗಂಗೆಯೇ ಸರ್ವಶ್ರೇಷ್ಠ. ಕ್ಷೇತ್ರಗಳಲ್ಲಿ ಪ್ರಯಾಗವು ಸರ್ವಶ್ರೇಷ್ಠ. ಕಡಲ ಕಿನಾರೆವರೆಗಿರುವ ಈ ಭೂಮಂಡಲದಲ್ಲಿ ಎಲ್ಲ ತೀರ್ಥಕ್ಷೇತ್ರಗಳಲ್ಲಿ ಪ್ರಯಾಗ ಕ್ಷೇತ್ರವು ಸರ್ವೋತ್ಕೃಷ್ಟ. ಈ ಗಂಗಾ-ಯಮುನೆಗಳ ಮಂಗಳ ಸಂಗಮ ಸ್ಥಾನದಲ್ಲಿ ಹಿಂದೆ ಬ್ರಹ್ಮದೇವನು ಶ್ರೀ ಹರಿಯನ್ನು ಕುರಿತು ಯಜ್ಞ ಮಾಡಿದ. ಅದರಂತೆ ಎಲ್ಲ ಮುನಿಗಳು ಬಗೆ ಬಗೆಯ ಹೋಮ ಹವನಗಳನ್ನು ಈ ಪವಿತ್ರ ಕ್ಷೇತ್ರಗಳಲ್ಲಿ ನೆರವೇರಿಸಿದರು. ಭೂಮಂಡಲದಲ್ಲಿರುವ ಎಲ್ಲ ತೀರ್ಥಗಳ ಸ್ನಾನದಿಂದ ಬರುವ ಒಟ್ಟು ಪುಣ್ಯವು ಗಂಗಾಜಲದ ಒಂದು ಹನಿ ತೀರ್ಥ ಪ್ರೋಕ್ಷಣ ಮಾಡುವದರಿಂದ ಬರುವ ಪುಣ್ಯದ ಹದಿನಾರನೆಯ ಅಂಶಕ್ಕೂ ಸರಿದೂಗಲಾರದು. ನೂರಾರು ಯೋಜನೆಗಳ ಆಚೆ ಇರುವ ಮಾನವನು 'ಗಂಗಾ ಗಂಗಾ' ಎಂದು ನುಡಿದರೆ ಸಾಕು ಎಲ್ಲಾ ಪಾಪಗಳಿಂದಲೂ ಅವನಿಗೆ ಮುಕ್ತಿ. ಸ್ವಯಂ ಗಂಗಾ ತೀರಕ್ಕೆ ಬಂದು ಆ ಪುಣ್ಯ ಜಲದಲ್ಲಿ ಮಿಂದು ನಿಂತವನ ಬಗ್ಗೆ ಹೇಳಬೇಕೆ! ಹರಿಯ ಅಡಿಯಿಂದ ಹುಟ್ಟಿ ಹರನ ಜಡೆಯಲ್ಲಿ ನೆಲಸಿದ ಈ ಗಂಗಾದೇವಿಯನ್ನು ಮುನಿಗಳು ಕೂಡ ಸೇವಿಸುತ್ತಾರೆ. ಪಾಮರರಾದ ಮಾನವರು ಸೇವಿಸುವುದೇನು ಅಚ್ಚರಿ! ಯಾವ ನೀರಲ್ಲಿ ಸ್ನಾನ ಮಾಡಿದ ಪಾಪಿಗಳು ಕೂಡ ಪಾಪರಹಿತರಾಗಿ ವಿಮಾನಗಳಲ್ಲಿ ಕುಳಿತು ಸ್ವರ್ಗ ಸೇರುವರೊ, ಎಲ್ಲಿ ಸ್ನಾನ

ಮಾಡುವದರಿಂದ ವಿಷ್ಣು ಸನ್ನಿಧಾನ ದೊರೆಯುವದೊ, ಎಲ್ಲಿ ಸ್ನಾನಮಾಡಿದ ಮಹಾತ್ಮರು ತಮ್ಮ ಹಿಂದಿನ ಪಿತೃಗಳನ್ನೂ, ಮಾತೃಗಳನ್ನೂ ಉದ್ಧರಿಸುವರೊ, ಎಲ್ಲಿ ಸ್ನಾನ ಮಾಡಿದ ಮನುಷ್ಯನನ್ನು ನೋಡಿದ ಮಾತ್ರದಿಂದಲೇ ಸ್ವರ್ಗವನ್ನು ಹೊಂದುವನೋ ಅಂಥ ಗಂಗೆಯ ಬಗ್ಗೆ ಹೆಚ್ಚಿಗೆ ಏನು ಹೇಳುವದಿದೆ! ತುಲಸೀ ಗಿಡದ ಬುಡದಲ್ಲಿಯ ಮಣ್ಣು, ಬ್ರಾಹ್ಮಣರ ಅಡಿದಾವರೆಯ ಹುಡಿ, ಗಂಗೆಯ ತೀರದ ಮೃತ್ತಿಕೆ ಇವುಗಳನ್ನು ಧರಿಸಿದವರು ದೇವನ ವಿಶೇಷ ಅನುಗ್ರಹ ಪಡೆಯುವರು. ಈ ಮನುಷ್ಯ ಲೋಕಧಲ್ಲಿ ಗಂಗಾ, ತುಲಸಿ, ಹಾಗೂ ಪ್ರವಚನ ಮಾಡುವವರಲ್ಲಿ ಹರಿಭಕ್ತಿ ಇವು ಮೂರು ದುರ್ಲಭವಾಗಿವೆ. 'ನಾನು ಎಂದು ಗಂಗಾ ತೀರಕ್ಕೆ ಹೋಗುವೆನು! ಗಂಗೆಯ ನೀರನ್ನು ನೋಡುವೆನು ಹಾಗೂ ಅದರಲ್ಲಿ ಎಂದು ಸ್ನಾನ ಮಾಡುವೆನು! ಎಂದು ಇಚ್ಛೆಯನ್ನು ಮಾಡಿದರೂ ಆ ಮನುಷ್ಯನು ವಿಷ್ಣು ಪದ ಹೊಂದುತ್ತಾನೆ. ಒಂದೇ ಸಲ 'ಗಂಗಾ' ಎಂಬ ಎರಡರಕ್ಷರ ಉಚ್ಚರಿಸಿದರೆ ಸಾಕು, ಎಲ್ಲ ಪಾಪಗಳ ಪರಿಹಾರ ಹಾಗೂ ವಿಷ್ಣು ಲೋಕ ಪ್ರಾಪ್ತಿ. ಇಂಥ ಈ ಗಂಗಾ ನದಿಯಲ್ಲಿ ಮೇಷ, ತುಲಾ, ಮಕರ, ಮೃಗಶಿರಾ ಮುಂತಾದ ಸಂಕ್ರಮಣ ಕಾಲಗಳಲ್ಲಿ ಭಕ್ತಿಯಿಂದ ಸ್ನಾನಮಾಡುವ ಜನರೆಲ್ಲರೂ ಪವಿತ್ರರಾಗುತ್ತಾರೆ. ತೀರ್ಥಗಳಲ್ಲಿ ಉತ್ತಮ ತೀರ್ಥ ಗಂಗಾ, ಕ್ಷೇತ್ರಗಳಲ್ಲಿ ಕಾಶಿ, ಇವೆರಡು ಸರ್ವ ದೇವತೆಗಳಿಂದಲೂ ಸೇವನೀಯವಾಗಿವೆ.

'ಕಾಶಿ' ಎಂಬ ಎರಡು ಅಕ್ಷರಗಳನ್ನು ಅನೇಕಬಾರಿ ಕೇಳಿದ ಕಿವಿಗಳೇ ಧನ್ಯ! ಅವಿಮುಕ್ತ ಕ್ಷೇತ್ರವೆಂದು ಪ್ರಸಿದ್ಧವಾದ ಆ ಕಾಶೀಕ್ಷೇತ್ರವನ್ನು ಸ್ಮರಣಮಾಡುವವರ ಸರ್ವಪಾಪಗಳು ವಿನಷ್ಟವಾಗಿ ಶಿವಲೋಕ ಐದುತ್ತಾರೆ- ಮರಣ ಕಾಲದಲ್ಲಿ ಈ ಅವಿಮುಕ್ತ ಕ್ಷೇತ್ರ ಕಾಶಿಯನ್ನು ನೆನೆದರೆ ಶೈವಸ್ಥಾನವನ್ನು ಪಾಪಮುಕ್ತ ಮನುಷ್ಯನು ಪಡೆಯುತ್ತಾನೆ.

ಆದರೆ ಈ ಕಾಶೀ ಕ್ಷೇತ್ರಕ್ಕಿಂತಲೂ ಗಂಗೆ ಯಮುನೆಯೊಡನೆ ಮಿಲನ ಹೊಂದಿ, ಒಂದು ನದಿಯಾಗಿ ಹರಿಯುವ ಪ್ರಯಾಗ ಕ್ಷೇತ್ರವು ಅತ್ಯಧಿಕವಾದದ್ದು. ಈ ಪ್ರಯಾಗ ಕ್ಷೇತ್ರದ ದರ್ಶನ ಮಾತ್ರದಿಂದ ಮಾನವನಿಗೆ ಪರಪದಪ್ರಾಪ್ತಿ. ಸೂರ್ಯನು ಮಕರ ರಾಶಿಗೆ ಬಂದಾಗ ಈ ಗಂಗಾದೇವಿಯು ಪ್ರಪಂಚದಲ್ಲಿಯ ಎಲ್ಲ ಕಡೆಯ ನೀರುಗಳಲ್ಲಿ ಸನ್ನಿಹಿತಳಾಗಿರುತ್ತಾಳೆ. ಆ ಕಾಲದಲ್ಲಿ ಸ್ನಾನ ಮಾಡಿದವರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾಳೆ. ಯಾವ ಗಂಗೆಯನ್ನು ಲೋಕಕ್ಕೆಲ್ಲ ಕ್ಷೇಮಕರನಾದ ಸಾಕ್ಷಾತ್ ಶ್ರೀ ಶಂಕರನೇ ತಲೆಯಲ್ಲಿ ಧರಿಸುವನೊ ಅಂಥ ಆ ಸುರನದಿಯ ಮಹಿಮೆಯನ್ನು ನಾನು ಎಷ್ಟೆಂದು ಹೇಳಲಿ! ಕಾಶಿಯಲ್ಲಿರುವ ವಿಶ್ವೇಶ್ವರನ ಲಿಂಗವು ಜ್ಯೋತಿರ್ಲಿಂಗವೆಂದು ಕರೆಯಲ್ಪಡುತ್ತದೆ. ಕಾಶಿಯ ಈ ವಿಶ್ವೇಶ್ವರಲಿಂಗ ದರ್ಶನ ಮಾತ್ರದಿಂದ ಮನುಷ್ಯನು ಪರಂಜ್ಯೋತಿಯಾದ ಪರಶಿವನ ಪರಮ ಪ್ರಸಾದವನ್ನು ಹೊಂದುತ್ತಾನೆ. ಮೂರು ಲೋಕಗಳಲ್ಲಿ ಅತ್ಯಂತ ಪವಿತ್ರವಾದ ಕಾಶೀಕ್ಷೇತ್ರವನ್ನು ಯಾರು ಪ್ರದಕ್ಷಿಣೆ ಹಾಕುವರೋ ಅವರು ಸಪ್ತದ್ವೀಪ, ಸಪ್ತಸಾಗರ, ಸರ್ವಪರ್ವತಗಳಿಂದ ಒಡಗೂಡಿದ ಅಖಂಡ ಭೂಮಂಡಲವನ್ನೇ ಪ್ರದಕ್ಷಿಣೆ ಹಾಕಿದಂತೆ. ಈ ಪ್ರಪಂಚದಲ್ಲಿ ಗಂಗಾಸ್ನಾನಕ್ಕೆ ಸಮಾನವಾದುದೆಂದರೆ ಪುರಾಣ ಪ್ರವಚನ. ಶ್ರೀವೇದವ್ಯಾಸರು ರಚಿಸಿದ ಪುರಾಣಗಳನ್ನು ಶ್ರವಣ ಮಾಡುವ ವಿಷಯದಲ್ಲಿ ಭಕ್ತಿ ಇದ್ದರೆ ಅದು ಗಂಗಾಸ್ನಾನಕ್ಕೆ ಸಮಾನವಾದುದು. ಆ ಪುರಾಣ ಪ್ರವಚನ ಮಾಡುವವರಲ್ಲಿ ಇಟ್ಟ ಭಕ್ತಿ ಪ್ರಯಾಗ ಕ್ಷೇತ್ರ ದರ್ಶನ ಸಮಾನವು. ಗಂಗೆಗೆ ಸಮಾನವಾದ ತೀರ್ಥವಿಲ್ಲ. ತಾಯಿಗೆ ಸಮನಾದ ಗುರುವಿಲ್ಲ. ವಿಷ್ಣುವಿಗೆ ಸಮವಾದ ದೇವರಿಲ್ಲ. ಗುರುವಿಗಿಂತ ಹೆಚ್ಚಿನ ತತ್ವವಿಲ್ಲ.

ವರ್ಣದಲ್ಲಿ ಬ್ರಾಹ್ಮಣ. ನಕ್ಷತ್ರದಲ್ಲಿ ಚಂದ್ರ. ಸಮುದ್ರದಲ್ಲಿ ಕ್ಷೀರ ಸಮುದ್ರ ಶ್ರೇಷ್ಠವಿದ್ದಂತೆ ಗಂಗೆಯು ತೀರ್ಥಗಳಲ್ಲಿ ಅತಿ ಶ್ರೇಷ್ಠವಾಗಿದ್ದಾಳೆ. ಶಾಂತಗುಣಕ್ಕೆ ಸಮಾನ ಬಂಧುವಿಲ್ಲ. ಸತ್ಯಕ್ಕೆ ಸಮಾನ ತಪಸ್ಸಿಲ್ಲ. ಗಂಗೆಗೆ ಸಮವಾದ ನದಿಯಿಲ್ಲ. ಗಂಗೆಯ ಪವಿತ್ರವಾದ ಹೆಸರು ಪಾಪವೆಂಬ ಅಡವಿಗೆ ಕಾಡ್ಗಿಚ್ಚು ಇದ್ದಂತೆ. ಗಂಗೆಯ ಸಂಸಾರವೆಂಬ ರೋಗವನ್ನೇ ಕಳೆಯುವಳು. ಆದುದರಿಂದ ಸರ್ವ ಪ್ರಯತ್ನದಿಂದ ಗಂಗಾನದಿಯನ್ನು ಸೇವಿಸಬೇಕು. ಗಾಯತ್ರಿಯು ಛಂದಸ್ಸುಗಳ ಮಾತೆ. ಗಂಗೆಯು ಲೋಕದ ಮಾತೆ. ಆದುದರಿಂದ ಅವರಿಬ್ಬರು ಸರ್ವ ಪಾಪಗಳ ನಾಶಕ್ಕೆ ಕಾರಣೀಭೂತರಾಗಿದ್ದಾರೆ. ಗಾಯತ್ರಿ, ಗಂಗಾ, ತುಳಸಿಯಲ್ಲಿ ಭಕ್ತಿ, ಹರಿಯಲ್ಲಿ ಭಕ್ತಿ ಇವು ನಾಲ್ಕು ನರರಿಗೆ ಅತ್ಯಂತ ದುರ್ಲಭವಾಗಿವೆ. ಗಂಗೆಯ ನೀರಿನ ಒಂದು ಕಣ, ಹನಿ, ಮೈಮೇಲೆ ಬಿದ್ದರೂ ಸರ್ವಪಾಪದಿಂದ ಮುಕ್ತನಾಗಿ ದಿವ್ಯ ಗತಿಯನ್ನು ಹೊಂದುತ್ತಾನೆ. ಸಗರ ವಂಶದಲ್ಲಿ ಹುಟ್ಟಿದ ಒಬ್ಬ ರಾಜನು ಗಂಗಾ ನದಿಯ ಒಂದು ಹನಿಯನ್ನು ತಲೆಯಲ್ಲಿ ಧರಿಸಿದ. ಅದರಿಂದ ಅವನಿಗೆ ಬಂದ ರಾಕ್ಷಸ ಭಾವವು ದೂರವಾಯಿತು. ಅವನು ಒಳ್ಳೇ ಗತಿಯನ್ನು ಭಗವಂತನ ಅನುಗ್ರಹದಿಂದ ಪಡೆದನು.

ನಾರದ ಮಹಾಪುರಾಣದಲ್ಲಿ ಆರನೆಯ ಅಧ್ಯಾಯ ಮುಗಿದುದು

—o—

## ಪಟ್ಟದರಸಿಯ ಸಹಗಮನವನ್ನು ತಡೆದು ನಿಲ್ಲಿಸಿದ ಔರ್ವಮುನಿ

**ಅಧ್ಯಾಯ - ೭**

**ನಾರದ:-** ಮುನಿಶ್ರೇಷ್ಠನಾದ ಸನಕ ಋಷಿಯೆ, ಸಗರ ವಂಶದ ಒಬ್ಬ ರಾಜನು ಗಂಗೋದಕದ ಮಹಿಮೆಯಿಂದ ರಾಕ್ಷಸ ಭಾವದಿಂದ ಮುಕ್ತನಾದ ಎಂದು ಹೇಳಿದೆ. ಆ ಸಗರನು ಯಾರು? ಅವರ ಮನೆತನದಲ್ಲಿ ಜನಿಸಿದ ಯಾವ ರಾಜನು ರಾಕ್ಷಸ ಭಾವದಿಂದ ಮುಕ್ತನಾದ? ಇದೆಲ್ಲವನ್ನು ನನಗೆ ತಿಳಿಸಿರಿ.

**ಸನಕ:-** ಮುನಿಪುಂಗವನೆ, ಗಂಗೆಯ ಮಹಿಮೆಯನ್ನು ಕೇಳು. ಆ ಗಂಗಾ ಜಲದ ಸ್ಪರ್ಶಮಾತ್ರದಿಂದಲೇ ಸಗರ ರಾಜನ ವಂಶ ಉದ್ಧೃತವಾಯಿತು. ಹಿಂದೆ ಸೂರ್ಯವಂಶದಲ್ಲಿ ಬಾಹು ಎಂಬ ದೊರೆ ಧರ್ಮದಿಂದ ರಾಜ್ಯವಾಳುತ್ತಿದ್ದನು. ಅಶ್ವಮೇಧ ಯಾಗಗಳನ್ನು ಮಾಡಿದನು ಆ ಮಹಾರಾಜ. ಗೋದಾನ, ಭೂದಾನ, ವಸ್ತ್ರದಾನಗಳಿಂದ ದ್ವಿಜರನ್ನು ಸಂತೋಷಪಡಿಸಿದನು. ನೀತಿಶಾಸ್ತ್ರಕ್ಕೆ ಅನುಸರಿಸಿ ರಾಜ್ಯವನ್ನು ಆಳಿದನು. ವೈರಿಗಳನ್ನು ದಂಡಿಸಿದನು, ಧರ್ಮನಿಷ್ಠನಾಗಿ ಹರಿ, ಗುರುಗಳನ್ನು ಆರಾಧಿಸಿದನು. ಇಂಥ ಪುಣ್ಯ ಕರ್ಮಗಳನ್ನು ಮಾಡಿ ತನ್ನನ್ನು ಕೃತಾರ್ಥನನ್ನಾಗಿ ಮಾಡಿಕೊಂಡನು. ಅವನ ರಾಜ್ಯದಲ್ಲಿ ಜನರೆಲ್ಲರೂ ಆನಂದದಿಂದ ಇದ್ದರು. ಉತ್ತದೆ ಬಿತ್ತದೆ ಭೂಮಿ ಬೆಳೆಯುತ್ತಿತ್ತು. ನೀರು ಹನಿಸದೇ ಗಿಡ ಬಳ್ಳಿಗಳು, ಹೂ, ಹಣ್ಣು, ಕಾಯಿಗಳನ್ನು ನೀಡುತ್ತಿದ್ದವು. ಸಕಾಲಕ್ಕೆ ಮಳೆಗರೆಯುತ್ತಿತ್ತು. ಜನರು ಧರ್ಮದಿಂದಿದ್ದು, ಪಾಪ ಕಾರ್ಯದಲ್ಲಿ ಪ್ರವರ್ತಿಸುತ್ತಿದ್ದಿಲ್ಲ ಇಂಥ ಪುಣ್ಯತಮವಾದ ರಾಜ್ಯದೊಳಗೆ ಒಂದಾನೊಂದು ದಿನ ರಾಜನ ಮನಸ್ಸಿನಲ್ಲಿ ಅಹಂಕಾರದ ಅಂಕುರಾರ್ಪಣವಾಯಿತು. ಎಲ್ಲ ದೇಶಗಳಿಗೆ ನಾನೇ ದೊರೆ. ಬಲಿಷ್ಠನಾದ

ದೇಶಪಾಲಕನೂ ನಾನೇ. ದೊಡ್ಡ ದೊಡ್ಡ ಯಜ್ಞಗಳಿಗೆಲ್ಲ ಕರ್ತ ಎಂದರೆ ನಾನೇ. ಅಂದಬಳಿಕ ನನಗಿಂತ ಪೂಜ್ಯನು ಈ ಭೂಮಿಯಲ್ಲಿ ಯಾರಿದ್ದಾರೆ? ಹೀಗೆ ಅಹಂಕಾರ ಬೆಳೆದ ಬಳಿಕ, ಮತ್ತೊಬ್ಬರ ಉತ್ಕರ್ಷ ಕಂಡು, ಅವನ ಹೃದಯದಲ್ಲಿ ಅಸೂಯೆ ಹೊತ್ತಿ ಕೊಂಡಿತು. ಆ ಅಸೂಯೆಯಿಂದ ಕಾಮ, ಕಾಮದಿಂದ ಕ್ರೋಧ, ಹೀಗೆ ಆ ದುರ್ಗುಣಗಳ ಪರಂಪರೆಯೇ ಮುಂದುವರಿಯಿತು.

**ಯೌವನಂ ಧನ ಸಂಪತ್ತಿಃ ಪ್ರಭುತ್ವಮವಿವೇಕಿತಾ ।**
**ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ॥**

ಯೌವನ, ಐಶ್ವರ್ಯ, ದೊರೆತನ, ಅವಿವೇಕ ಈ ನಾಲ್ಕರಲ್ಲಿ ಒಂದೊಂದೂ ಸಹ ಮಹಾ ಅನರ್ಥವನ್ನುಂಟು ಮಾಡುತ್ತವೆ. ಅಂದಬಳಿಕ ಯಾರಲ್ಲಿ ಮೇಲ್ಕಂಡ ನಾಲ್ಕೂ ಸೇರಿರುತ್ತವೆಯೋ ಅವರಿಗೆ ಅನರ್ಥ ಪರಂಪರೆ ಉಂಟಾಗುವದೆಂದು ಹೇಳತಕ್ಕದ್ದೇನು! ಅಸೂಯಾವಿಷ್ಟನಾದ ಮನುಷ್ಯನಿಗೆ ಸಂಪತ್ತು ಬಂದರೆ ಒಣಹುಲ್ಲಿಗೆ ಬೆಂಕಿ ತಗುಲಿದಂತೆ. ಅವರ ಸರ್ವಸ್ವವೂ ಹಾಳಾಗುವದರಲ್ಲಿ ಸಂದೇಹವಿಲ್ಲ. ಹೊಟ್ಟೆ ಕಿಚ್ಚಿನಿಂದ ರೊಚ್ಚಿಗೆದ್ದು ನಿಷ್ಠುರ ಮಾತನಾಡಿದ ಜನರಿಗೆ ಮಡದಿ ಮಕ್ಕಳು ಬಾಂಧವರು ಎಲ್ಲರೂ ಶತ್ರುಗಳಾಗುತ್ತಾರೆ. ಮಿತ್ರರು, ಮಕ್ಕಳು, ಮಡದಿ, ಮನೆ, ಹೊಲ, ಧನ, ಧಾನ್ಯ, ಪಶು, ಪರಿವಾರ ಎಲ್ಲವೂ ಹಾಳಾಗಬೇಕು ಎಂದು ಬಯಸುವ ನರನು ಅಸೂಯೆಯಿಂದ ವರ್ತಿಸಬೇಕು. ಅರ್ಥಾತ್ ಹೊಟ್ಟೆಕಿಚ್ಚಿನ ದೋಷದಿಂದ ಎಲ್ಲವೂ ವಿನಾಶ ಹೊಂದುವದರಿಂದ ಅಸೂಯೆಯನ್ನು ತ್ಯಜಿಸಬೇಕು. ಹೀಗೆ ಅಹಂಕಾರ, ಅಸೂಯೆ ಮುಂತಾದವುಗಳಿಂದ ಉನ್ಮತ್ತನಾದ ಆ ಬಾಹುರಾಜನಿಗೆ ಸುತ್ತು ಮುತ್ತಲೂ ಅನೇಕ ವೈರಿಗಳು ಹುಟ್ಟಿಕೊಂಡರು. ಹೈಯಯ, ತಾಳಜಂಘ ಮುಂತಾದ ರಾಜರು ಅವನ ವಿರುದ್ಧ ಸಿಡಿದೆದ್ದರು. ಲಕ್ಷ್ಮೀಪತಿಯಾದ ನಾರಾಯಣನು ಯಾವನಿಗೆ ಪ್ರಸನ್ನನಾಗಿರುವನೋ ಅವನ ಭಾಗ್ಯವು ವರ್ಧಿಸುತ್ತದೆ. ಭಗವಂತನು ವಿಮುಖನಾದರೆ ಅವನ ಸೌಭಾಗ್ಯ ಅಳಿದುಹೋಗುತ್ತದೆ. ಭಗವಂತನ ಕೃಪಾಕಟಾಕ್ಷಕ್ಕೆ ಎರವಾದ ಆ ಬಾಹುರಾಜನ ಮೇಲೆ ಅವನ ವೈರಿಗಳು ಏರಿಬಂದರು. ಹೈಯಯ, ತಾಳಜಂಘ ಮುಂತಾದ ವೈರಿಗಳೊಡನೆ ಘೋರ ಯುದ್ಧ ಮಾಡುವ ಪ್ರಸಂಗ ಬಂದಿತು. ಒಂದು ತಿಂಗಳವರೆಗೂ ನಡೆಯಿತು. - ಆ ದಾರುಣಸಂಗ್ರಾಮ. ಸಂಪೂರ್ಣ ಪರಾಜಿತನಾದ ಸೂರ್ಯ ಕುಲದಲ್ಲಿ ಉದ್ಭವಿಸಿದ ಬಾಹುರಾಜ. ಆ ಯುದ್ಧದಲ್ಲಿ ಕೊನೆಗೆ ದಿಕ್ಕುಗಾಣದೆ ಸಮರ ಭೂಮಿಯಿಂದ ಜೀವದಾಶೆ ಯಿಂದ ಕಾಲ್ತೆಗೆದ. ಗರ್ಭಿಣಿಯಾದ ತನ್ನ ಹೆಂಡತಿಯೊಡನೆ ತಲೆಮರೆಸಿ ಕೊಂಡು ಕಾಡಿಗೆ ಓಡಿಹೋದ. ಅಡವಿಯಲ್ಲಿ ನಡೆದಾಗ ದಾರಿಯಲ್ಲಿ ಒಂದು ಸ್ವಚ್ಛ ನೀರಿನ ಸರೋವರವು ಕಣ್ಣಿಗೆ ಬಿದ್ದಿತು. ಅದನ್ನು ಕಂಡ ಕೂಡಲೇ ಪರಮಾನಂದವಾಯಿತು ಆ ದುಃಖಿತ ದಂಪತಿಗಳಿಗೆ. ಆ ಸರೋವರದ ತೀರದಲ್ಲಿರುವ ಅನೇಕ ನಿಬಿಡ ಗಿಡಗಳಲ್ಲಿ ಬಗೆ ಬಗೆಯ ಪಕ್ಷಿಗಳು ಕುಳಿತು ಆನಂದರಿಂದ ಕಲಕಲ ನಿನಾದ ಮಾಡುತ್ತಿದ್ದವು. ಅವೆಲ್ಲವೂ ಅಲ್ಲಿಗೆ ಬಂದ ಬಾಹುರಾಜನನ್ನು ನೋಡಿದವು. ಈ ರಾಜನು ಹೊಟ್ಟೆ ಕಿಚ್ಚಿನವ ಎಂಬುದು ಅವುಗಳಿಗೆ ತಿಳಿದು ಹೋಯಿತು. ಕೂಡಲೇ ಗಿಡದ ಮೇಲಿನ ಹಕ್ಕಿಗಳು ಸರೋವರದಲ್ಲಿಯ ಹಂಸ, ಕಾರಂಡವ, ಬಕ, ಭ್ರಮರಾದಿ ಪಕ್ಷಿಗಳು ಒಮ್ಮೆಲೆ ಕಣ್ಮರೆಯಾಗಿ ಬಿಟ್ಟವು. 'ಅಯ್ಯೋ

ಬಹಳ ಕಷ್ಟಕಾಲ ಬಂದಿತು ಈ ಪಾಪಿರಾಜ ಬಂದ ನಮ್ಮ ಈ ಪುಣ್ಯ ಸರೋವರಕ್ಕೆ ಇನ್ನೇನು ಮಾಡುವದು? ' ಎಂದು ತಮ್ಮ ತಮ್ಮಲ್ಲಿ ನುಡಿದು ಅಲ್ಲಿಂದ ಅಂತರಿತವಾದವು. ಕೂಡಲೇ ಆ ರಾಜನು ತನ್ನ ಇಬ್ಬರು ಮಡದಿಯೊಡನೆ ಆ ಸರೋವರದಲ್ಲಿ ಮಧುರವಾದ ನೀರನ್ನು ಕುಡಿದನು.ಅಲ್ಲಿಯ ಗಿಡನ ಬುಡದಲ್ಲಿ ಕುಳಿತನು.ಆಗ ಸುಖವಾಗಿತ್ತು ಆ ತಣ್ಣೆಳಲು. ಹಿತವಾಗಿತ್ತು ಆ ತಂಗಾಳಿ.

ಇತ್ತ ಬಾಹುರಾಜನು ಅರಣ್ಯಕ್ಕೆ ಓಡಿಹೋದ ಬಳಿಕ ಅವನ ಪ್ರಜೆಗಳೆಲ್ಲರೂ 'ಧಿಕ್ಕಾರವಿರಲಿ ರಾಜನಿಗೆ' ಎಂದು ಆ ದೊರೆಯನ್ನು ನಿಂದಿಸಿದರು. ಅವರೆಲ್ಲರಿಗೂ ಗೊತ್ತು ಈ ಮಹಾರಾಜನ ದುರ್ಗುಣಗಳು. ಬಾಹು ಊರು ಬಿಟ್ಟು ಹೋದದ್ದು ನೋಡಿ ಪ್ರಜೆಗಳಿಗೆ ಪರಮಾನಂದವಾಯಿತು. ಹೀಗೆ ತನ್ನ ಪ್ರಜೆಗಳಿಂದಲೇ ನಿಂದಿತವಾಗಿ ಬಾಹುರಾಜನು ಕಾಡಿನಲ್ಲಿಯೇ ನೆಲೆಸಿದ. ಅವನು ಇದ್ದೂ ಸತ್ತಂತೆಯೇ ಇದ್ದ. ಅಪಕೀರ್ತಿಯು ಅವನನ್ನು ಕೊಂದಿತ್ತು. ಅಪಕೀರ್ತಿಗೆ ಸಮನಾದ ಸಾವಿಲ್ಲ.! ಕೋಪಕ್ಕೆ ಸಮನಾದ ವೈರಿಯಿಲ್ಲ! ನಿಂದೆಗೆ ಸಮವಾದ ಪಾಪವಿಲ್ಲ. ಕಾಮಕ್ಕೆ ಸಮವಾದ ಬೆಂಕಿ ಇಲ್ಲ. ಅನುರಾಗಕ್ಕೆ ಸಮವಾದ ಪಾಶವಿಲ್ಲ. ದುರ್ಜನರ ಸಹವಾಸಕ್ಕೆ ಸಮವಾದ ವಿಷವಿಲ್ಲ. ಇಂಥ ಅಪಕೀರ್ತಿಯು ತನಗೆ ಬಂದಿತಲ್ಲ! ಎಂದು ತಿಳಿದು ರೋದಿಸಿದ ಆ ಬಾಹುರಾಜ. ಅರಣ್ಯದಲ್ಲಿ ವಿಲಾಪಗೈಯುವ ಅವನ ರೋದನ ನಿಜವಾಗಿಯೂ ಅರಣ್ಯರೋದನವೇ ಆಯಿತು. ಮನಸ್ಸಿನ ತಾಪ, ವೈರಿಗಳಿಂದ ಅಪಮಾನ, ಪ್ರಜೆಗಳ ಭರ್ತ್ಸನೆ, ಅರಣ್ಯವಾಸ, ಪಶ್ಚಾತ್ತಾಪ ಮುಂತಾದವು ಗಳಿಂದ ಅವನಿಗೆ ಬೇಗ ಮುಪ್ಪು ಬಂದಿತು. ಕೆಲವೇ ದಿನಗಳಲ್ಲಿ ಔರ್ವಮುನಿಯ ಆಶ್ರಮ ಸಮೀಪದಲ್ಲಿ ನೆಲೆಸಿದ ಅವನು ರೋಗಗ್ರಸ್ತನಾದ. ಮತ್ತು ದುಃಖದಿಂದ ಮರಣ ಹೊಂದಿದ. ದೊರೆ ತೀರಿಕೊಂಡಾಗ ಗರ್ಭಿಣಿ ಇದ್ದಳು ಅವನ ಕಿರಿಯ ಹೆಂಡತಿ. ಅವಳು ಪತಿವ್ರತೆಯೂ, ದುಃಖತಪ್ತಳೂ ಆಗಿದ್ದಳು. ಪತಿಯ ವಿರಹವನ್ನು ತಾಳಲು ಆಗಲಿಲ್ಲ ಆ ಸಾಧ್ವಿಯಿಂದ. ಅವಳು ಬಹುವಿಧವಾಗಿ ವಿಲಾಪಗೈದಳು ಆ ವಿಜನ ವನಾಂತರದಲ್ಲಿ. ಕೊನೆಗೆ ಆತನ ಪತಿಯೊಡನೆ ಸಹಗಮನ ಮಾಡಲು ನಿರ್ಧರಿಸಿದಳು. ಕಷ್ಟಪಟ್ಟು ಒಣ ಕಟ್ಟಿಗೆ ಆಯ್ದು ಚಿತೆಯನ್ನು ಮಾಡಿದಳು. ತನ್ನ ಪತಿಯನ್ನು ಎತ್ತಿಕೊಂಡು ಚಿತೆಯನ್ನು ಏರಿದಳು. ಇಷ್ಟರಲ್ಲಿಯೇ ಅಲ್ಲಿಯೇ ಸಮೀಪದಲ್ಲಿ ನೆಲೆಸಿದ ಔರ್ವ ಮುನಿಯು ತನ್ನ ಅಂತರ್ ದೃಷ್ಟಿಯಿಂದ ವಿಚಾರಿಸಿದನು. ತ್ರಿಕಾಲಜ್ಞರಷ್ಟೇ ಇಂತಹ ಮಹಾಮುನಿಗಳು! ಹಿಂದಾದದ್ದು, ಇಂದಾಗುವದು, ಮುಂದೆ ನಡೆಯುವದು ಎಲ್ಲವೂ ಅವರಿಗೆ ಅಂಗೈಯ ನೆಲ್ಲಿಕಾಯಿಯಂತೆ ಸುಸ್ಪಷ್ಟ. ಆ ಔರ್ವಮುನಿ ಸಾಮಾನ್ಯನಲ್ಲ. ಮಹಾ ತಪಸ್ವಿ. ಅತ್ಯಂತ ತೇಜಸ್ವಿ. ತೇಜಸ್ಸಿನ ರಾಶಿಯೇ ಔರ್ವ ಮುನಿ ಎಂದರೆ ಯಥಾರ್ಥವೇ ಆದೀತು. ಇಂತಹ ಪುಣ್ಯ ಪ್ರಭಾವಿಯಾದ ಆ ಮಹರ್ಷಿಯು ಬಾಹುರಾಜನು ಮರಣ ಹೊಂದಿದ ಸ್ಥಳಕ್ಕೆ ಆಗಮಿಸಿದನು. ಚಿತೆಯ ಮೇಲೆ ರಾಜನ ಶವವನ್ನು ತನ್ನ ತೊಡೆಯ ಮೇಲೆ ಮಲಗಿಸಿ ಕಿರಿಯ ರಾಣಿ ಸಹಗಮನಕ್ಕೆ ಉದ್ಯುಕ್ತಳಾದದ್ದು ಕಂಡು, ಮುನಿಗೆ ಕೈ ಎತ್ತಿ ಅವಳಿಗೆ ತುಸು ತಡೆಯಲು ಹೇಳಿದನು. 'ಸಾಧ್ವಿಯಾದ ಮಹಾರಾಣಿ, ಇಂತಹ ಸಾಹಸ ಮಾಡಬೇಡ. ನೀನು ನಿನ್ನ ಗಂಡನೊಡನೆ ಆತ್ಮದಹನ ಮಾಡಿಕೊಳ್ಳಬೇಡ. ಹಾಗೆ ಮಾಡಿಕೊಂಡರೆ ನಿನ್ನ ಪತಿಯ ಕುಲಕ್ಕೇ ನೀನು ಭಯಂಕರವಾದ ಅಪಚಾರ ಮಾಡಿದಂತಾಗುವದು. ನಿನ್ನ ಹೊಟ್ಟೆಯಲ್ಲಿ ನಮ್ಮ ದೇಶದ ಚಕ್ರವರ್ತಿಯಾಗಲಿರುವ ಮಗು ಮೂಡಿದೆ ಅವನು ನಿನ್ನ ಪತಿಯ

ವೈರಿಗಳನ್ನೆಲ್ಲ ಕೊಂದು ನಷ್ಟವಾದ ರಾಜ್ಯವನ್ನು ಪುನಃ ದೊರಕಿಸಿ, ನಿನ್ನ ವಂಶದ ಕೀರ್ತಿ ಬೆಳಗುವನು. ನಿನ್ನ ಮೃತನಾದ ಪತಿಯ ಆತ್ಮಕ್ಕೆ ಸಂತಸ ಸಮಾಧಾನವನ್ನುಂಟು ಮಾಡುವನು. ಆದುದರಿಂದ ನೀನು ಮೊದಲು ಈ ಚಿತೆ ಬಿಟ್ಟು ಕೆಳಗೆ ಇಳಿ

**ಬಾಲಾಪತ್ಯಾಶ್ಚ ಗರ್ಭಿಣ್ಯೋ ಹ್ಯದೃಷ್ಟಋತವಸ್ತಥಾ ।**
**ರಜಸ್ವಲಾ ರಾಜಸುತೇ ನಾರೋಹಂತಿ ಚಿತಾಂ ಶುಭೇ ॥**

ಚಿಕ್ಕ ಮಕ್ಕಳ ತಾಯಂದಿರು, ಗರ್ಭಿಣಿ ಸ್ತ್ರೀ, ಋತುಮತಿಯಾಗದ ಬಾಲವಿಧವೆಯರು, ಮುಟ್ಟಾದವರು ಪತಿಯ ಜೊತೆಗೆ ಸಹಗಮನ ಮಾಡಬಾರದು, ಎಂದು ಶಾಸ್ತ್ರದ ಆದೇಶವಿರುತ್ತದೆ. ಅದರಿಂದ ಭ್ರೂಣ ಹತ್ಯಾ, ಶಿಶುಹತ್ಯಾ ಪಾಪವು ಬರುತ್ತದೆ. ಬ್ರಹ್ಮ ಹತ್ಯಾದಿ ಪಾಪಕ್ಕೆ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತ ಹೇಳಿದ್ದಾರೆ. ಆದರೆ ನಾಸ್ತಿಕ ಹಾಗೂ ಕೃತಘ್ನನಿಗೂ, ಶಿಶುಹತ್ಯೆ ಮಾಡಿದವನಿಗೂ, ಧರ್ಮದ್ವೇಷಿಗೂ ಯಾವ ಪ್ರಾಯಶ್ಚಿತ್ತವೂ ಇಲ್ಲ. ಆದುದರಿಂದ ನೀನು ಈಗ ಚಿತಾರೋಹಣ ಮಾಡಿದರೆ ಶಿಶುಹತ್ಯಾ ಪಾತಕವು ಅಂಟಿಕೊಳ್ಳುತ್ತದೆ. ಆದುದರಿಂದ ನೀನು ಈಗ ಚಿತಾರೋಹಣ ಮಾಡಬೇಡ. ಪತಿಯ ಮರಣದಿಂದ ನಿನಗೇನೋ ಮಹಾದುಃಖವಾಗಿದೆ. ಅದನ್ನು ನೀನು ಈಗ ತಾಳಿಕೊಳ್ಳಬೇಕು. ಮುಂದೆ ಮಗನ ಸೌಭಾಗ್ಯವನ್ನು ಕಂಡು ನಿನ್ನ ಈ ಹೊಟ್ಟೆಯ ಉರಿ ಶಾಂತವಾಗುವದು''. ಔರ್ವಮುನಿಯ ಮಾತು ಯುಕ್ತಿ ಯುಕ್ತವೆನಿಸಿತು ಆ ಸಾಧ್ವಿಗೆ. ''ಅಂತಹ ಮಹಾನುಭಾವರ ಮಾತನ್ನು ಮೀರುವದು ಮಹಾ ಪಾತಕ. ಮೇಲಾಗಿ ಅವರು ತನ್ನ ಹಾಗೂ ನನ್ನ ಸಂತತಿಯ ಉದ್ಧಾರಕ್ಕಾಗಿಯೇ ನುಡಿಯುತ್ತಿದ್ದಾರೆ. ಇಂತಹ ಹಿತವನ್ನು. ಅವರ ಮಾತನ್ನು ಪಾಲಿಸುವದು ತನ್ನ ಕರ್ತವ್ಯ'' ಎಂದು ಬಗೆದು ಚಿತೆಯಿಂದ ಕೆಳಗೆ ಇಳಿದಳು. ದುಃಖೋದ್ರೇಕದಿಂದ ಮುನಿಯ ಅಡಿದಾವರೆಗಳನ್ನು ಹಿಡಿದು ರೋದಿಸಿದಳು. ಔರ್ವಮುನಿ ಅವಳನ್ನು ಸಂತೈಸಿದಳು. ಶಾಸ್ತ್ರ ಪಂಡಿತರ ಮಾತು ಯಾರಿಗೆ ತಾನೇ ಸಮಾಧಾನವನ್ನುಂಟು ಮಾಡಲಿಕ್ಕಿಲ್ಲ!

**ಔರ್ವ:-** ರಾಜಕುಮಾರಿ ರೋದಿಸಬೇಡ. ದುಃಖಪಡಬೇಡ. ಮುಂದೆ ನಿನಗೆ ಒಳ್ಳೇ ಭವಿಷ್ಯ ಕಾದಿದೆ. ಕಣ್ಣೀರು ಸುರಿಸಬೇಡ. ಮಗನಿಗಾಗಿ ಹಾಗೂ ಅವನ ಮುಂದಿನ ಉತ್ಕರ್ಷಕ್ಕಾಗಿ ನಿನ್ನ ದುಃಖ ತಾಳಿಕೊ. ಹುಟ್ಟಲಿರುವ ನಿನ್ನ ಮಗನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡು. ರಾಷ್ಟ್ರಕ್ಕೆ ಶ್ರೇಷ್ಠ ಚಕ್ರವರ್ತಿಯನ್ನು ನೀಡಿದ ಪುಣ್ಯ ನಿನ್ನದಾಗಲಿರುವದು. ಶೋಕವನ್ನು ಬಿಡು. ನಿನ್ನ ಪತಿಯ ಪ್ರೇತವನ್ನು ವಿಧ್ಯುಕ್ತವಾಗಿ ಅಗ್ನಿ ಸಂಸ್ಕಾರ ಗೊಳಿಸು. ಎಷ್ಟೇ ದುಃಖವಾಗಲಿ ಕಾಲಕ್ಕೆ ತಕ್ಕಂತೆ ಕರ್ಮಗಳನ್ನು ಎಲ್ಲರೂ ಮಾಡಲೇಬೇಕು. ಪಂಡಿತನಿರಲಿ, ಅಪಂಡಿತನಿರಲಿ, ಧನಿಕನಿರಲಿ, ಮೂರ್ಖನಿರಲಿ, ಸದಾಚಾರಿಯಿರಲಿ, ದುರಾಚಾರಿಯಿರಲಿ, ಮೃತ್ಯುವಿನ ಎದುರು ಎಲ್ಲರೂ ಸಮಾನರೆ. ಕಾಲಬಂದಿತೆಂದರೆ ಸಾವು ಯಾರನ್ನೂ ಬಿಡುವದಿಲ್ಲ. ಕಾಡಿನಲ್ಲಿರಲಿ, ನಾಡಿನಲ್ಲಿರಲಿ, ಕಡಲಿನಲ್ಲಿರಲಿ, ಬೆಟ್ಟದಲ್ಲಿರಲಿ ಮನುಷ್ಯನು ತಾನು ಮಾಡಿದ ಕರ್ಮವನ್ನು ಅನುಭವಿಸಲೇಬೇಕು. ಮರಣ ಒದಗಿಬಂದಿತೆಂದರೆ ಬಾಲ್ಯ ಯೌವನ, ವಾರ್ಧಕ್ಯ ಯಾವದನ್ನೂ ನೋಡುವದಿಲ್ಲ. ಸಾವಿನ ಕರೆಬಂದಾಗ ತೆರಳುವದೊಂದೇ ಪ್ರಾಣಗಳ ಕರ್ತವ್ಯ. ಕರ್ಮಬದ್ಧರನ್ನು ನಾರಾಯಣನೇ ಸಂಹರಿಸುತ್ತಾನೆ ಹಾಗೂ ಸಂರಕ್ಷಿಸುತ್ತಾನೆ. ಆದುದರಿಂದ ಎಲ್ಲವೂ ಪೂರ್ವ ಕರ್ಮಕೃತವಾದುದು ಎಂದು ದುಃಖವನ್ನು ಬಿಡು,

ಸಮಾಧಾನ ಹೊಂದು. ನಿನ್ನ ಪತಿಯ ಮುಂದಿನ ಪ್ರೇತಕಾರ್ಯ ಮಾಡಿಸು. ವಿವೇಕದಿಂದ ಮಗುವಿನ ಮುಂದಿನ ಭವಿಷ್ಯ ಉಜ್ವಲಗೊಳಿಸಲು ಪ್ರಯತ್ನಿಸು.'' ಹೀಗೆ ಪರಿಪರಿಯಿಂದ ಅವಳಿಗೆ ಬುದ್ಧಿ ಹೇಳಿದರು- ಆ ಮುನಿಗಳು. ಅವಳಿಗೂ ಈ ಮಾತು ಸಮುಚಿತವೆಂದು ತೋರಿತು. ಔರ್ವಮುನಿಯ ಆದೇಶದಂತೆ ಆ ಸಾಧ್ವಿಯು ಚಿತೆ ಬಿಟ್ಟು ಕೆಳಗೆ ಇಳಿದಳು. ಮನದ ದುಗುಡ ಕಳೆದುಕೊಂಡು, ತನ್ನ ಮನೆತನವು ಮುಂದುವರೆದು ಕುಲದ ಕೀರ್ತಿಯು ಬೆಳಗುವಂತೆ ಉಪದೇಶಗೈದ ಆ ಮಹಾ ಮುನಿಗೆ ಪ್ರಣಾಮಗೈದು ನಮ್ರಳಾಗಿ ನುಡಿದಳು.

**ರಾಣಿ-** ತಮ್ಮಂತಹ ಸಜ್ಜನರು ಪರಾರ್ಥವಾಗಿಯೇ ಪ್ರಯತ್ನಿಸುತ್ತಾರೆ ಎನ್ನುವದು ಏನಾಶ್ಚರ್ಯ! ಮರಗಳು ತಮ್ಮ ಭೋಗಕ್ಕಾಗಿ ಹಣ್ಣು ಬಿಡುತ್ತವೆಯೇ! ಪರರ ದುಃಖವನ್ನು ತಿಳಿದು ಹಿತನುಡಿಗಳಿಂದ ಸಂತೈಯಿಸಿ, ತಿಳಿಹೇಳಿ, ಕಲ್ಯಾಣವನ್ನು ಉಂಟು ಮಾಡುವವನೇ ದೇವಮನುಷ್ಯ. ಇನ್ನೊಬ್ಬರ ದುಃಖದಿಂದ ದುಃಖಿಪಟ್ಟು ಮತ್ತೊಬ್ಬರ ಹಿಗ್ಗಿನಲ್ಲಿ ಹಿಗ್ಗುವವನ್ನು ನರರಲ್ಲ. ನರರೂಪೀ ನಾರಾಯಣ. ಅರ್ಥಾತ್ ಅವನಲ್ಲಿ ನಾರಾಯಣನ ವಿಶೇಷ ಸನ್ನಿಧಾನವಿದೆ ಎಂದು ತಿಳಿಯಬೇಕು. ಸಜ್ಜನರು ಹೆಜ್ಜೆಯಿಟ್ಟಲ್ಲಿ ದುಃಖದ ಬಾಧೆಯಿಲ್ಲ. ಚಿಂತೆಯಿಲ್ಲ, ಸೂರ್ಯ ಬೆಳಗಿದಲ್ಲಿ ಕತ್ತಲೆ ಉಳಿಯಲಿಕ್ಕುಂಟೆ? ಹೀಗೆ ನುಡಿದು ಆ ಸಾಧ್ವೀಮಣಿಯು ತನ್ನ ಪತಿಯ ಉತ್ತರ ಕ್ರಿಯೆಗಳನ್ನೆಲ್ಲ ಪೂರೈಸಿದಳು. ಅದೇ ಸರೋವರದ ದಂಡೆಯಲ್ಲಿ ಮಹಾಮುನಿ ಔರ್ವ ಋಷಿಯ ಮಾರ್ಗದರ್ಶನದಲ್ಲಿ ಪತಿಯ ಉತ್ತರಕ್ರಿಯೆಗಳನ್ನೆಲ್ಲ ಜರುಗಿಸಿದಳು. ನಿಜವಾಗಿ ಮಹಾತ್ಮನಾಗಿದ್ದ ಆ ಔರ್ವ ಮುನಿ. ಅವನ ನೇತೃತ್ವದಲ್ಲಿ ನಡೆದ ಔರ್ಧ್ವ ದೈಹಿಕ ವಿಧಿಯಿಂದ ಮೃತನ ಮೇಲೆ ದೇವತಾನುಗ್ರಹವಾಯಿತು. ಅವನ ತಪೋಬಲದಿಂದ ಅಗ್ನಿಸಂಸ್ಕಾರವಾದ ಕೂಡಲೆ ಮುನಿ ಹಾಗೂ ಮಡದಿಯರು ನೋಡುತ್ತಿರುವಂತೆ ಮಹಾರಾಜನು ಸೂಕ್ಷ್ಮ ರೂಪದಿಂದಲೇ ದೇವವಿಮಾನವೇರಿದನು. ಔರ್ವಮುನಿಗೆ ಕುಳಿತಲ್ಲಿಂದಲೇ ಸಾಷ್ಟಾಂಗ ನಮಸ್ಕರಿಸಿ, ಮೋಕ್ಷ ಪದವನ್ನು ಪಡೆದನು. ನೋಡಿದಿರಾ ದೊಡ್ಡವರ ದೃಷ್ಟಿಕ್ಷೇಪದಲ್ಲಿ ಎಂಥ ಪ್ರಭಾವವಿದೆ! ಮಹಾತ್ಮರು ದಯೆ ದೋರಿ, ದೃಷ್ಟಿಬೀರಿ, ಒಮ್ಮೆ ನೋಡಿದರೆ ಸಾಕು. ಅನುಗ್ರಹಪೂರ್ವಕವಾಗಿ ಆಶೀರ್ವಾದ ಮಾಡಿದರೂ ಸಾಕು. ಎಂಥ ಪಾಪಿಯೂ ಪಾಪಮುಕ್ತನಾಗಿ ಭಗವಂತನ ಸನ್ನಿಧಿಯನ್ನು ಸೇರುತ್ತಾನೆ. ಹೀಗೆ ಪತಿಯ ಅಂತ್ಯಕ್ರಿಯೆ ಗಳನ್ನೆಲ್ಲ ಮುಗಿಸಿ ಆ ಸಾಧ್ವೀಮಣಿಯು ತನ್ನ ಸವತಿಯೊಂದಿಗೆ ಔರ್ವ ಮುನಿಯ ಆಶ್ರಮಕ್ಕೆ ಹೋದಳು. ಅವರ ಸೇವೆ ಮಾಡಿದಳು, ಅವರ ಆಶೀರ್ವಾದ ಪಡೆದಳು.

ನಾರದ ಮಹಾಪುರಾಣದಲ್ಲಿ ಏಳನೇಯ ಅಧ್ಯಾಯ ಮುಗಿದುದು

—o—

**ಔರ್ವರ ಕೃಪೆಯಿಂದ ವಿಷಸಹಿತವಾಗಿಯೇ ಹುಟ್ಟಿದ ಸಗರರಾಜನ ಅಶ್ವಮೇಧಯಾಗ. ಕಪಿಲ ಮುನಿಯಿಂದ ಸಗರ ಕುಮಾರರು ಸುಟ್ಟು ಬೂದಿಯಾದದ್ದು.**

ಅಧ್ಯಾಯ - ೮

**ಸನಕ:-** ಔರ್ವ ಮುನಿಯ ಆಶ್ರಮದಲ್ಲಿ ಬಾಹುರಾಜನ ಇಬ್ಬರೂ ಕಾಂತೆಯರೂ ಮುನಿಗಳ ಸೇವೆ ಗೈಯತೊಡಗಿದರು. ಭಕ್ತಿಯಿಂದ ಮಾಡಿದ ಆ ರಾಣಿಯರ ಸೇವಾ ಶುಶ್ರೂಷೆಯಿಂದ ಮುನಿ ಪರಿತುಷ್ಟನಾದ. ಆರು ತಿಂಗಳು ಗತಿಸಿದವು. ಇದೇ ಕ್ರಮದಿಂದ . ಹಿರಿಯ ರಾಣಿಗೆ ಮಕ್ಕಳಿರಲಿಲ್ಲ. ಸವತಿ ಮಹಾರಾಜನಿದ್ದಾಗಲೇ ಗರ್ಭವತಿಯಾದುದನ್ನು ನೋಡಿ ಅವಳಿಗೆ ಖೇದವೆನಿಸಿತ್ತು. ಮಹಾರಾಜ ಮರಣ ಹೊಂದಿದ ಬಳಿಕ ಔರ್ವ ಮುನಿಯು ನುಡಿದ ಮಾತು, ಅವಳ ಮನದ ಮತ್ಸರದ ಕಿಡಿಗೆ ಗಾಳಿ ಬೀಸಿತು. ಸವತಿಯ ಮಗ ಮುಂದೆ ಮಹಾರಾಜನಾಗುವ ಎಂಬ ಮನಿಯ ಭವಿಷ್ಯ ಅವಳಲ್ಲಿ ಅಸೂಯೆಯನ್ನು ಹೆಡೆಯೆತ್ತುವಂತೆ ಮಾಡಿತು. ಹೇಗಾದರೂ ಮಾಡಿ ಸವತಿಗೆ ಚಕ್ರವರ್ತಿಯ ತಾಯಿಯಾಗುವ ಸೌಭಾಗ್ಯವನ್ನು ತಪ್ಪಿಸಲು ನಿಶ್ಚಯಿಸಿದಳು. ದುರ್ವಿಚಾರದಿಂದ ಪ್ರೇರಿತಳಾದ ಅವಳು, ಕಿರಿಯ ರಾಣಿಗೆ ತಿಳಿಯದಂತೆ ವಿಷ ಪ್ರಯೋಗ ಮಾಡಿದಳು. ಆದರೆ ಔರ್ವಮುನಿಗಳ ಸೇವೆಯನ್ನು ಕಿರಿಯ ರಾಣಿ ಭಕ್ತಿಯಿಂದ ಮಾಡುತ್ತಿದ್ದಳು. ಭಕ್ತಿಯ ಪ್ರಭಾವದಿಂದ ಸವತಿ ಹಾಕಿದ ವಿಷ ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. ಸಾಧ್ವೀಮಣಿಯಾದ ಕಿರಿಯ ರಾಣಿಯು ತುಂಬು ಗರ್ಭಿಣಿಯಾದರೂ ಮುನಿಯ ಸೇವೆಯನ್ನು ಭಕ್ತಿಯಿಂದಲೇ ಮಾಡುತ್ತಿದ್ದಳು. ಅವರು ಕೂಡುವ ನೆಲ, ಓಡಾಡುವ ಸ್ಥಳ, ಪೂಜೆಯ ಕೋಣೆ, ಪಾಠ ಹೇಳುವ ಮೊಗಶಾಲೆ, ಹೋಮ ಮಂಟಪ ಎಲ್ಲವನ್ನೂ ಗುಡಿಸಿ, ಪೂಜಾದಿ ಸಲಕರಣೆಗಳನ್ನು ಒದಗಿಸುತ್ತಿದ್ದಳು. ಅವರ ಪಾಠಕ್ಕೆ ಎಲ್ಲ ಅನುಕೂಲ ಮಾಡಿ ಕೊಡುತ್ತಿದ್ದಳು. ತ್ರಿಕಾಲದಲ್ಲಿ ಪ್ರತಿದಿನ ವಂದಿಸುತ್ತಿದ್ದಳು. ಅವರ ಉಪದೇಶವನ್ನು ಶ್ರದ್ಧೆಯಿಂದ ಆಲಿಸುತ್ತಿದ್ದಳು. ಅವಳ ಈ ಸೇವಾಭಾವದ ಸ್ವಭಾವದಿಂದ ಸವತಿಯ ವಿಷ ಅವಳ ಗರ್ಭವನ್ನು ಬಾಧಿಸಲೇ ಇಲ್ಲ. ಮೂರು ತಿಂಗಳು ಕಳೆದ ಬಳಿಕ 'ಗರ' ಸಹಿತವಾಗಿಯೇ ವಿಷ ಸಹಿತವಾಗಿಯೇ ಅವಳು ಮಗುವನ್ನು ಹೆತ್ತಳು. ಆಗ ಶುಭ ಮುಹೂರ್ತ. ಗುರುಸೇವೆಯಿಂದ ಅವಳ ಹೊಟ್ಟೆಯಲ್ಲಿ ಬಿದ್ದ ವಿಷವೆಲ್ಲ ನಿರ್ವೀರ್ಯವಾಗಿತ್ತು. ಮಗು ತೇಜಃಪುಂಜವಾಗಿಯೇ ಹೊರಬಂತು.

**ಅಹೋ ಸತ್ಸಂಗತಿರ್ಲೋಕೇ ಕಿಂ ಪಾಪಂ ನ ವಿನಾಶಯೇತ್ ।**
**ನ ದದಾತಿ ಸುಖಂ ಕಿಂ ವಾ ನರಾಣಾಂ ಪುಣ್ಯ ಕರ್ಮಣಾಂ ॥**

**ಜ್ಞಾನಾಜ್ಞಾನಕೃತಂ ಪಾಪಂ ಯಚ್ಚಾನ್ಯತ್ಕಾರಿತಂ ಪರೈಃ ।**
**ತತ್ಸರ್ವಂ ನಾಶಯತ್ಯಾಶು ಪರಿಚರ್ಯಾ ಮಹಾತ್ಮನಾಂ ॥**

**ಜಡೋಽ ಪಿ ಯಾತಿ ಪೂಜ್ಯತ್ವಂ ಸತ್ಸಂಗಾಜ್ಜಗತೀತಲೇ ।**
**ಕಲಾಮಾತ್ರೋಽಪಿ ಶೀತಾಂಶುಃ ಶಂಭುನಾ ಸ್ವೀಕೃತೋ ಯಥಾ ॥**

ಸಜ್ಜನರ ಸಹವಾಸವು ಲೋಕದಲ್ಲಿ ಯಾವ ಪಾಪವನ್ನು ತಾನೇ ನಾಶಮಾಡಲಾರದು! ಪುಣ್ಯಕರ್ಮವನ್ನು ಮಾಡಿದ ಜನರಿಗೆ ಯಾವ ಸುಖವು ತಾನೇ ಲಭಿಸಲಾರದು! ಸಜ್ಜನ ಸಂಗತಿಯು ಸಕಲ ಪಾಪವನ್ನು ಪರಿಹರಿಸುತ್ತದೆ. ಪುಣ್ಯಕರ್ಮವು ಸಕಲ ಸುಖಗಳನ್ನೂ ಕೊಡುತ್ತದೆ. ದೊಡ್ಡವರ ಸೇವೆಯು ತಿಳಿದು ಅಥವಾ ತಿಳಿಯದೇ ಮಾಡಿದ ಪಾಪ ಇತರರಿಂದ ಮಾಡಿಸಿದ ಪಾಪ ಇವುಗಳನ್ನೆಲ್ಲವನ್ನೂ ಶೀಘ್ರವಾಗಿ ನಾಶಮಾಡುತ್ತದೆ. ಕಲಂಕಿಯಾದ ಚಂದ್ರನನ್ನು ಈಶ್ವರನು ಸ್ವೀಕರಿಸಿದ್ದರಿಂದ ಜಗನ್ಮಾನ್ಯನಾಗಿದ್ದಾನೆ. ಅದರಂತೆ ಅಜ್ಞಾನಿಯಾದ ನರನು ಸಜ್ಜನರ ಸಂಗದಿಂದ ಲೋಕದಲ್ಲಿ ಪೂಜ್ಯನಾಗುತ್ತಾನೆ.

ತೇಜೋನಿಧಿಯಾದ ಔರ್ವಮುನಿ ಕಿರಿಯರಾಣಿ ಹೆತ್ತ ತೇಜಃಪುಂಜನಾದ ಮಗುವನ್ನು ನೋಡಿದ. 'ಗರ' ಎಂದರೆ ವಿಷವನ್ನು ದಕ್ಕಿಸಿಕೊಂಡು 'ಗರ' ಸಹಿತವಾಗಿಯೇ ಮಗುವು ಹುಟ್ಟಿತು. ಆದುದರಿಂದ ಅದಕ್ಕೆ 'ಸಗರ ' ಎಂದು ಮುನಿಗಳು ಹೆಸರಿಸಿ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದರು. ತಾಯಿ ಪ್ರೀತಿಯಿಂದ ಬೆಳೆಸಿದಳು. ಆ ಸಗರ ಕುಮಾರನನ್ನು. ಬಾಲ್ಯ ಉಪನಯನ ಮುಂತಾದವುಗಳು ಔರ್ವಮುನಿಯಿಂದಲೇ ನೇರವೇರಿಸಲ್ಪಟ್ಟವು. ಆ ಮಹಾಮುನಿಗಳು ಆ ರಾಜಕುಮಾರನಿಗೆ ಶಸ್ತ್ರ ಶಾಸ್ತ್ರವಿದ್ಯೆ ಎರಡನ್ನೂ ಕಲಿಸಿದರು. ರಾಜರು ತಿಳಿಯಬೇಕಾದ ದಂಡನೀತಿ; ಅರ್ಥಕಾರಣ, ಸಮಾಜಶಾಸ್ತ್ರ ಯುದ್ಧಶಾಸ್ತ್ರ ಎಲ್ಲವನ್ನೂ ಸರಿಯಾಗಿ ಆ ಯುವರಾಜನಿಗೆ ಹೇಳಿದರು. ಆ ಸಗರಕುಮಾರನು ತನ್ನ ವಯಸ್ಸಿಗೆ ಅನುಗುಣವಾಗಿ ಬಲಿಷ್ಠನಾಗಿದ್ದ. ಶಸ್ತ್ರಾಸ್ತ್ರ ಪಂಡಿತನಾದರೂ ಕ್ಷಮಾಗುಣವುಳ್ಳವನು. ರಾಜಕುಮಾರನಾದರೂ ವಿನೀತನಾಗಿದ್ದನು. ಪ್ರತಿದಿನವೂ ಮುನಿಪುಂಗವನ ಪೂಜೆ ಹವನ ಹೋಮಗಳಿಗೆ ಉಪಯುಕ್ತವಾದ ತುಳಸಿ, ಹೂ, ಅರ್ಘೋದಕ ಮೊದಲಾದವುಗಳನ್ನು ತಂದು ಅವರ ಪೂಜಾಮಂದಿರದಲ್ಲಿ ಅಣಿಮಾಡಿ ಇಡುತ್ತಿದ್ದನು. ಪ್ರತಿನಿತ್ಯ ಋಷಿಗಳ ಸೇವೆಯನ್ನು ತಾಯಿಯಂತೆ ಭಕ್ತಿಯಿಂದ ಮಾಡುತ್ತಿದ್ದನು. ದೊಡ್ಡವಂಶ, ಔರ್ವರಂಥ ಮುನಿಗಳ ಶಿಕ್ಷಣ, ತಾಯಿಯಿಂದ ಗುರುಭಕ್ತಿ ಉಪದೇಶ. ಇವೆಲ್ಲವೂ ಕೂಡಿ ಅವನೊಬ್ಬ ಸದ್ಗುಣಗಳ ತವನಿಧಿಯೇ ಆಗುವಂತೆ ಮಾಡಿದವು. ಒಂದು ದಿನ ಆ ಸಗರ ಕುಮಾರನು ತಾಯಿಗೆ ನಮಸ್ಕರಿಸಿದನು. ವಿನಿಯದಿಂದ ಕೈ ಜೋಡಿಸಿದನು, ನಮ್ರನಾಗಿ ಕೇಳಿದನು.

**ಸಗರ:-** ಅಮ್ಮಾ ನಮ್ಮ ತಂದೆಯು ಎಲ್ಲಿ ಹೋಗಿದ್ದಾನೆ! ಅವನ ಹೆಸರು ಏನು? ಯಾವ ಕುಲದಲ್ಲಿ ಹುಟ್ಟಿದ್ದಾನೆ ಇವೆಲ್ಲವನ್ನೂ ತಿಳಿಯಲು ಕುತೂಹಲ ನನಗಾಗಿದೆ ! ಸವಿಸ್ತರವಾಗಿ ತಿಳಿಸು. ತಂದೆಯಿಲ್ಲದ ಮಕ್ಕಳು ಇದ್ದರೂ ಇಲ್ಲದಂತೆ. ತಂದೆಯುಳ್ಳ ಮಕ್ಕಳು ದರಿದ್ರರಿದ್ದರೂ ಸಿರಿವಂತರೇ ಸರಿ. ಚಂದ್ರನಿಲ್ಲದ ರಾತ್ರಿ, ಕಮಲವಿಲ್ಲದ ಕೊಳ, ಪತಿಯಿಲ್ಲದ ಸತಿಯಂತೆ ತಂದೆಯಿಲ್ಲದ ಮಗನೂ ಕೂಡ ಅನಾಥನೂ ತೇಜೋಹೀನನೂ ಆಗುತ್ತಾನೆ. ಆದುದರಿಂದ ನೀನು ನಿಜವಾದ ಸಂಗತಿಯನ್ನು ನನಗೆ ಅರುಹು-ನನ್ನ ತಂದೆ ಎಲ್ಲಿರುವನು?

ಅದನ್ನು ಕೇಳಿ, ಅವನ ತಾಯಿಗೆ ದುಃಖ ಒತ್ತರಿಸಿ ಬಂದಿತು. ಅವಳು ಮೊದಲು ನಿಡಿದಾದ ಉಸಿರು ಬಿಟ್ಟಳು. ಕೊರಳು ಬಿಗಿದು ಬಂದಿತು, ಕಣ್ಣು ನೀರು ತುಂಬಿತು. ಧ್ವನಿ ಗದ್ಗದವಾಯಿತು. ದುಃಖದಿಂದ ಮಗನ ಎದುರು ನಡೆದ ಸಂಗತಿಯನ್ನು ತಿಳಿಸಿದಳು. ಅವನ

ತಂದೆ ಹೈಹಯ ತಾಳಜಂಘರಿಂದ ಪರಾಜಿತನಾಗಿ ಕಾಡಿಗೆ ಓಡಿ ಬಂದು, ಅದೇ ದುಃಖದಿಂದ ಕೊರಗಿನಿಂದ ತೀರಿಕೊಂಡ ಸಮಾಚಾರ ಅರುಹಿದಳು. ಅದನ್ನು ಕೇಳಿ ಸಗರಕುಮಾರನಿಗೆ ಸಿಟ್ಟು ಸಿಡಿದೆದ್ದಿತು. ಕಣ್ಣು ಕೆಂಪಗಾದವು. ''ವೈರಿಗಳನ್ನೆಲ್ಲಾ ನಾನು ಕೊಚ್ಚಿ ಹಾಕುವೆನೆಂದು'' ಅವನು ಅಲ್ಲಿಯೇ ತಾಯಿಯ ಎದುರು ಪ್ರತಿಜ್ಞೆ ತೊಟ್ಟನು. ಔರ್ವಮುನಿಗೆ ನಮಸ್ಕರಿಸಿದನು. ತಾಯಿಗೆ ನಮಸ್ಕರಿಸಿದನು. ಮುನಿಗಳು 'ವಿಜಯೀಭವ' ಎಂದು ಆಶೀರ್ವದಿಸಿದರು. ಪ್ರೀತಿಪೂರ್ವಕವಾಗಿ ತುಂಬುಹೃದಯದಿಂದ ಆಶೀರ್ವದಿಸಿ ಪ್ರೋತ್ಸಾಹಿಸಿ ಆ ರಾಜಕುಮಾರನನ್ನು ಬೀಳ್ಕೊಟ್ಟರು. ಸತ್ಯಸಂಧನಾದ ಸಗರನು ಔರ್ವಾಶ್ರಮದಿಂದ ಹೊರಹೊರಟನು. ಅಲ್ಲಿಂದ ಅವನು ನೇರವಾಗಿ ತಮ್ಮ ಕುಲಗುರುಗಳಾದ ವಶಿಷ್ಠರ ಬಳಿಗೆ ಬಂದನು. ಅವರಿಗೆ ನಮಸ್ಕರಿಸಿ ಎಲ್ಲವನ್ನೂ ವಿಜ್ಞಾಪಿಸಿದನು. ಇದು ಅವರಿಗೆ ಜ್ಞಾನದೃಷ್ಟಿಯಿಂದ ಮೊದಲೇ ತಿಳಿದಿತ್ತು. ಕುಲಾಚಾರ್ಯರಾದ ಅವರು, ಆ ಸಗರಕುಮಾರನಿಗೆ ಆಗ್ನೇಯಾಸ್ತ್ರ, ಪರ್ಜನ್ಯಾಸ್ತ್ರ, ವರುಣಾಸ್ತ್ರ, ಬ್ರಹ್ಮಾಸ್ತ್ರಗಳನ್ನು ಕರುಣಿಸಿ ವೈರಿ ವಿಜಯಕ್ಕೆ ಅವನನ್ನು ಪ್ರೋತ್ಸಾಹಿಸಿ ಬೀಳ್ಕೊಟ್ಟರು. ಗುರುಗಳಿಗೆ ನಮಸ್ಕರಿಸಿ ರಾಜಕುಮಾರನು ದಂಡಯಾತ್ರೆಗೆ ಹೊರಟನು. ವೀರಾಗ್ರಣಿಯಾದ ಸಗರನ ಶಸ್ತ್ರಾಸ್ತ್ರ ಪ್ರಯೋಗದಿಂದ ವೈರಿಗಳೆಲ್ಲರೂ ಸ್ವರ್ಗಕಂಡರು. ಶತ್ರುಗಳ ಪುತ್ರರೂ, ಮಿತ್ರರೂ, ಮಂತ್ರಿಗಳೂ, ಪರಿವಾರದವರೂ ಸಗರಕುಮಾರನ ಶಸ್ತ್ರಾಘಾತದಿಂದ ಕ್ಷತ ವಿಕ್ಷತರಾಗಿ ಪರಲೋಕವನ್ನೈದಿದರು. ರಾಜಕುಮಾರನು ಬಿಲ್ಲಿನಿಂದ ಬಿಟ್ಟ ಬಾಣವು ಬೆಂಕಿಯಾಗಿ ಅರಿಪುರವನ್ನೆಲ್ಲ ಸುಟ್ಟು ಹಾಕಿತು. ಶತ್ರುಗಳ ಗುಂಪಿನಲ್ಲಿ ಕೆಲವರು ಮರಣ ಹೊಂದಿದರು. ಹಲವರು ಶರಣು ಬಂದರು. ಉಳಿದವರು ಚದುರಿದರು. ಇತರರು ಹೆದರಿ ಓಡಿದರು. ಅಲ್ಲಿಯೇ ಇದ್ದವರಲ್ಲಿ ಕೆಲವರು ಎದೆ ಒಡೆದವರು, ತಲೆ ಒಡೆದವರು, ಕೈಕಾಲು ಕತ್ತರಿಸಿದವರು. ಶತ್ರುಸೇನೆಯಲ್ಲಿ ಇಂಥ ಬಹು ಜನರು ಕಂಡು ಬಂದರು. ಇಷ್ಟಾಗಿ ಅಳಿದುಳಿದವರು ಹುಲ್ಲುಕಚ್ಚಿ ನೆಲದ ಮೇಲೆ ಒರಗಿದರು. ಎಷ್ಟೋ ಜನರು ಬಟ್ಟೆ ಬಿಟ್ಟು ನೀರಿನಲ್ಲಿ ಅಡಗಿದರು.

ಸಗರರಾಜನ ಪ್ರತಾಪದಿಂದ ಸೋಲಿನ ರುಚಿಕಂಡ ಶಕರು, ಯವನರು ಉಳಿದ ಅನೇಕ ರಾಜಮಹಾರಾಜರು ವಶಿಷ್ಠರನ್ನು ಮೊರೆಹೊಕ್ಕರು. ಹೇಗಾದರೂ ಮಾಡಿ ಪ್ರಾಣ ಉಳಿಸಿಕೊಳ್ಳುವ ಆಸೆ ಆ ರಾಜರಿಗೆಲ್ಲ! ಚಾರರಿಂದ ಈ ಸಮಾಚಾರ ತಿಳಿಯಿತು. ಸಗರ ರಾಜನಿಗೆ. ತನ್ನ ಗುರುಗಳ ಬಳಿಗೆ ಸೋತ ಶತ್ರುಗಳೆಲ್ಲರೂ ಶರಣು ಬಂದಿದ್ದಾರೆ ಎಂದು ಅವನು ಕೂಡ ವಿನಯದಿಂದ ಆಚಾರ್ಯರ ಸನ್ನಿಧಿಗೆ ಬಂದು ಭಕ್ತಿಯಿಂದ ನಮಸ್ಕರಿಸಿ ನಿಂತನು. ಕುಲಗುರುಗಳಾದ ವಶಿಷ್ಠರು ತಮ್ಮ ಶಿಷ್ಯೋತ್ತಮನಿಗೆ ಹೇಳಿದರು. ''ರಾಜನ್'' ಈ ಶಕ, ಯವನ ಮುಂತಾದ ರಾಜರು ಶರಣು ಬಂದಿದ್ದಾರೆ. ಶರಣಾಗತರನ್ನು ರಕ್ಷಿಸುವದು ರಾಜರ ಕರ್ತವ್ಯ. ಇವರೆಲ್ಲರಿಗೂ ನೀನು ಕರುಣೆ ತೋರು. ಮರಣ ಶಾಸನ ಮಾಡಬೇಡ. ಆದರೆ ಅಪರಾಧಿಯಾದ ಇವರನ್ನು ಹಾಗೇ ಬಿಡುವುದು ಸರಿಯಲ್ಲ. ಅವರು ಬದುಕಿದ್ದರೂ ಸತ್ತಂತೆ ಆಗಿರಲಿ. ಅವಮಾನಿತರಾಗಿ ತಲೆ ಎತ್ತಿ ತಿರುಗದಂತೆ ಮಾಡೋಣ'' ಎಂದು ಹೇಳಿ ಅವರೆಲ್ಲರಿಗೂ ಪರಾಜಯದ ಕುರುಹಾಗಿ ಶಕರಿಗೆ ಮುಂಡನ (ತಲೆ ಬೋಳಿಸಿ) ಮಾಡಿಸಿದರು. ಯವನರಿಗೆ ತಲೆ ಮೇಲೆ ನಿಡುಗೂದಲು ಇಡಲು ಅಪ್ಪಣೆ ಮಾಡಿದರು. ಉಳಿದ ವೈರಿಗಳಿಗೆ ಗಡ್ಡ ಇಟ್ಟು ಮೀಶೆ ತೆಗೆಸಿದರು. ಕೆಲವರಿಗೆ ಮೀಶೆ ಇಟ್ಟು ಗಡ್ಡ

ತೆಗೆಯಿಸಿದರು. ಗುರುಗಳಾದ ವಶಿಷ್ಠರಿಂದ ಈ ರೀತಿಯಾಗಿ ವಿಕಾರಗೊಳಿಸಲ್ಪಟ್ಟ ವೈರಿಗಳ ಆ ಅವತಾರ ಕಂಡು ಸಗರರಾಜನಿಗೆ ನಗು ಬಂದಿತು. ಅವನು ಮಂದಹಾಸ ಮಾಡುತ್ತ ವಶಿಷ್ಠರನ್ನು ಕುರಿತು ನುಡಿದನು.

**ಸಗರ:-** ಗುರುಗಳೇ ಈ ದುರಾಚಾರಿಗಳನ್ನು ಏಕೆ ರಕ್ಷಿಸುವಿರಿ? ನನ್ನ ತಂದೆಯ ಬದುಕನ್ನು ಹಾಳು ಮಾಡಿದ್ದಾರೆ. ಈ ಪಾಪಿಗಳು ನಮ್ಮ ರಾಜ್ಯವನ್ನು ಅಪಹರಿಸಿದ್ದಾರೆ. ಐಶ್ವರ್ಯವನ್ನು ದೋಚಿದ್ದಾರೆ. ನನ್ನ ಪಿತೃದ್ರೋಹಿಗಳಾದ ಇವರನ್ನು ನಾನು ಈಗಲೇ ಕೊಂದು ಬಿಡುತ್ತೇನೆ. ಸಾಮರ್ಥ್ಯವಿದ್ದು ಧರ್ಮದ್ರೋಹಿಗಳನ್ನು ಶಾಸನ ಮಾಡದಿದ್ದರೆ ಅದು ಮನುಷ್ಯನ ಸರ್ವನಾಶಕ್ಕೆ ಕಾರಣವಾಗುತ್ತದೆ. ದುರ್ಜನರು ತಮ್ಮ ದೌರ್ಜನ್ಯದಿಂದ ಮೊದಲು ಮಹಾಮತ್ತರಾಗಿ ಪ್ರಪಂಚವನ್ನೇ ಪೀಡಿಸುತ್ತಾರೆ, ಮುಂದೆ ಆಕಸ್ಮಾತ್ ಅವರ ಶಕ್ತಿ ಕುಂದಿದರೆ ಅತ್ಯಂತ ಒಳ್ಳೆಯವರಂತೆ ಸಜ್ಜನರ ಸೋಗುಹಾಕಿ ನಟಿಸುತ್ತಾರೆ. ಕುತ್ಸಿತ ಮನಸ್ಸಿನ ಕಪಟಿಗಳಾದ ದುಷ್ಟಜನರು ತಾವು ತಮ್ಮ ಸೇನಾ ಬಲವು ಬಲಿಷ್ಠವಾಗುವರೆಗೆ, ತಮ್ಮಲ್ಲಿ ಸಾಕಷ್ಟು ಶಕ್ತಿ ಸಂಚಯವಾಗುವವರೆಗೆ ಸೌಮ್ಯರಾಗಿದ್ದು ಪ್ರಪಂಚವನ್ನೇ ವಂಚಿಸುತ್ತಾರೆ.

**ದಾಸಭಾವಂ ಚ ಶತ್ರೂಣಾಂ ವಾರಸ್ತ್ರೀಣಾಂ ಚ ಸೌಹೃದಂ ।**
**ಸಾಧುಭಾವಂ ಚ ಸರ್ಪಾಣಾಂ ಶ್ರೇಯಸ್ಕಾಮೋ ನ ವಿಶ್ವಸೇತ್ ॥**

ಶ್ರೇಯಸ್ಸನ್ನು ಬಯಸುವವನು, ಶತ್ರುಗಳು ದಾಸರಾಗಿ ನಟಿಸುವದನ್ನೂ ಸೂಳೆಯರು ತೋರಿಸುವ ಸೌಮನಸ್ಯವನ್ನೂ, ಸರ್ಪಗಳ ಒಳ್ಳೆತನವನ್ನೂ ನಂಬಬಾರದು. ಆದುದರಿಂದ ಗುರುಗಳೇ. ನೀತಿ ನಿಪುಣನಾದ ಮನುಷ್ಯನು ದುಷ್ಟರ ಒಳ್ಳೇತನವನು ನಂಬಬಾರದು. ಶ್ರೇಯಸ್ಸನ್ನು ಬಯಸುವರು ಎಂದೂ ನೀಚ ಜನರ ನಯ ವಿನಯಗಳನ್ನು ನೆಚ್ಚಿ ಮೋಸ ಹೋಗಬಾರದು.

**ದುರ್ಜನಂ ಪ್ರಣತಿಂ ಯಾಂತಂ ಮಿತ್ರಂ ಕೈತವಶೀಲಿನಂ ।**
**ದುಷ್ಟಾಂ ಭಾರ್ಯಾಂ ಚ ವಿಶ್ವಸ್ತೋ ಮೃತ ಏವ ನ ಸಂಶಯಃ ॥**

ನಮಸ್ಕರಿಸಿ ಬಂದ ದುರ್ಜನನನ್ನು ಮೋಸಗಾರನಾದ ಸ್ನೇಹಿತನನ್ನು, ಕೆಟ್ಟ ನಡತೆಯುಳ್ಳ ಹೆಂಡತಿಯನ್ನು ನಂಬುವವನು ಸತ್ತಂತೆಯೇ ಸರಿ. ಖಂಡಿತ ಸಂದೇಹವಿಲ್ಲ. ಆದುದರಿಂದ ಮಾನ್ಯರೆ, ಇವರನ್ನು ನೀವು ರಕ್ಷಿಸುವದು ಬೇಡ. ಇವರೆಲ್ಲರೂ ಹಸುವಿನ ಮುಖದ ಹೆಬ್ಬುಲಿಗಳು. ಈಗ ಸೌಮ್ಯರಾಗಿ ಕಂಡರೂ ಸಮಯ ಬಂದಾಗ ಮತ್ತೆ ನಮ್ಮನ್ನು ಇವರು ಘಾತಮಾಡುವದರಲ್ಲಿ ಸಂದೇಹವಿಲ್ಲ. ಆದುದರಿಂದ ತಾವು ಅಪ್ಪಣೆಕೊಟ್ಟರೆ ನಾನು ಇವರೆಲ್ಲರನ್ನು ಕೊಂದು ಯಮಪಟ್ಟಣಕ್ಕೆ ಅಟ್ಟುವೆನು. ಅನಂತರ ನಿಮ್ಮ ದಯೆಯಿಂದ ನಿಷ್ಕಂಟಕವಾಗಿ ಈ ಭೂಮಂಡಲವನ್ನು ಆಳುವೆನು.

ಇದನ್ನು ಕೇಳಿ ವಶಿಷ್ಠರು ತಮ್ಮ ಶಿಷ್ಯ ಸಗರನ ಮೇಲೆ ಕೈಯಾಡಿಸಿ, ನಗುತ್ತ ನುಡಿದರು. 'ಮಹಾರಾಜ ನೀನು ಹೇಳಿದ್ದೇನೋ ಸರಿ. ನಿನ್ನ ತಂದೆಗೆ ಇವರೆಲ್ಲರೂ ಅತ್ಯಂತ ದಾರುಣವಾದ ಅಪಚಾರ ಮಾಡಿದ್ದಾರೆ. ಆದರೂ ಕೂಡ ಈಗ ನೀನು ನನ್ನ ಮಾತನ್ನು ಕೇಳು. ಅದರಿಂದಲೇ ನಿನಗೆ ಶಾಂತಿ, ಸುಖ ಸಮಾಧಾನಗಳು ದೊರೆಯುವವು. ನಾನು ಈಗ ಈ ಎಲ್ಲ ವೈರಿಗಳ ಕೂದಲು ತೆಗೆಯಿಸಿ ಮೀಶೆ ಬೋಳಿಸಿ, ಗಡ್ಡ ತೆಗೆಯಿಸಿ, ಮೃತಪ್ರಾಯರನ್ನಾಗಿಯೇ ಮಾಡಿದ್ದೇನೆ. ಅವರೆಲ್ಲರೂ ಇದ್ದರೂ ಸತ್ತಂತೆಯೇ ಸರಿ. ಇಂಥ

ಮೃತಾವಸ್ಥೆಯಲ್ಲಿರುವವರನ್ನು ಮತ್ತೆ ಕೊಂದರೆ ನಿನಗೇನು ಕೀರ್ತಿ! ರಾಜನ್, ವಾಸ್ತವಿಕವಾಗಿ ಈ ಎಲ್ಲ ದುಷ್ಟರಾಜರ ಕುಲ ತಮ್ಮ ದುಷ್ಟ ಕರ್ಮದಿಂದಲೇ ಹತವಾಗಿ ಹೋಗಿದೆ. ತಮ್ಮ ಪಾಪಗಳಿಂದಲೆ ಪ್ರಣಷ್ಟರಾದವರನ್ನು ಮತ್ತೆ ಕೊಲ್ಲುವದರಲ್ಲಿ ಏನು ಪುರುಷಾರ್ಥ? ಪಾಪ ಮಾಡಿದ ಶರೀರವು ತನ್ನ ಪಾಪದಿಂದಲೇ ಹತವಾಗಿ ಹೋಗಿದೆ.

ಆತ್ಮನಿಗಂತೂ ಸಾವಿಲ್ಲ. ಇದು ಶಾಸ್ತ್ರಗಳ ನಿರ್ಣಯ. ಪ್ರಾಣಿಗಳು ತಮ್ಮ ತಮ್ಮ ಕರ್ಮಗಳ ಫಲವನ್ನು ಇಲ್ಲಿ ಭೋಗಿಸುತ್ತಾರೆ. ಅವರವರ ಕರ್ಮಗಳೇ ಅವರವರ ದೈವಕ್ಕೆ ಮೂಲ. ಈ ಜಗತ್ತೆಲ್ಲವೂ ದೇವರ ಅಧೀನ. ಇವರೆಲ್ಲರೂ ನಿಮಿತ್ತ ಮಾತ್ರರು. ದೈವದ ಮೇಲೆ ವಿಶ್ವಾಸ ಇರುವ ನೀನು ಸ್ವಕರ್ಮಹತರಾದ ಇವರನ್ನು ಮತ್ತೆ ಹಿಂಸಿಸುವದು ಸರ್ವಥಾ ಸರಿಯಲ್ಲ. ನಿನ್ನ ಕುಲದ ಕೀರ್ತಿ ಉಳಿಸಬೇಕೆಂದಿದ್ದರೆ ಇವರೆಲ್ಲರಿಗೂ ಜೀವದಾನ ಕೊಟ್ಟುಬಿಡು '' ಗುರುಗಳ ಈ ಮಾತನ್ನು ಕೇಳಿ ಸಗರ ರಾಜನು ಶಾಂತನಾದನು. ವೈರಿಗಳನ್ನೆಲ್ಲ ಜೀವಂತವಾಗಿ ಬಿಟ್ಟುಕೊಟ್ಟ. ಅನಂತರ ಕುಲಗುರುಗಳಾದ ವಶಿಷ್ಠರು, ಅನೇಕ ಮುನಿಮಹರ್ಷಿಗಳೊಂದಿಗೆ ಕೂಡಿಕೊಂಡು, ಸಗರ ರಾಜನಿಗೆ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ನೆರವೇರಿಸಿದರು. ಆ ಸಗರ ದೊರೆಗೆ ಇಬ್ಬರು ಮಡದಿಯರು. ಕಾಶ್ಯಪನ ಮಗಳಾದ ಕೇಶಿನಿ, ವಿದರ್ಭ ರಾಜಕುಮಾರಿ ಸುಮತಿ. ತನ್ನ ಮೆಚ್ಚಿನ ಮಡದಿಯರೊಂದಿಗೆ ಸಗರನು ಧರ್ಮದಿಂದ ರಾಜ್ಯವಾಳುತ್ತ, ಪುಣ್ಯಕರ್ಮಗಳನ್ನು ನೆರವೇರಿಸುತ್ತ ತನ್ನ ರಾಜಧಾನಿಯಲ್ಲಿ ಸಂತೋಷದಿಂದ ವಾಸಮಾಡುತ್ತಿದ್ದನು. ಸಗರ ರಾಜನು ತನ್ನ ಸಾಮ್ರಾಜ್ಯ ಸಿಂಹಾಸನದಲ್ಲಿ ಸುಖಾಸೀನನಾದ ಬಳಿಕ, ಒಂದು ದಿನ ಔರ್ವಮುನಿಗಳು ವನದಿಂದ ರಾಜಧಾನಿಗೆ ಬಂದರು. ತಪೋನಿಧಿಗಳಾದ ಆ ಮಹಾಮುನಿಗಳಿಗೆ ಭಕ್ತಿಪೂರ್ವಕವಾದ ಸ್ವಾಗತ ನೀಡಿದ ಸಗರರಾಜ. ಆನಂದದಿಂದ ಆತಿಥ್ಯ ನೀಡಿದ. ಅವರನ್ನು ಸರ್ವರೀತಿಯಿಂದ ಸಂತೋಷ ಪಡಿಸಿ ಸೇವಿಸಿದ. ಮಹಾರಾಜನ ಪ್ರೀತಿಯ ಪತ್ನಿಯರಾದ ಕೇಶಿನಿಯೂ, ಸುಮತಿಯೂ ಔರ್ವಮುನಿಗಳ ಸೇವೆಮಾಡಿದರು. ಅವರಿಬ್ಬರಿಗೂ ಮನಸ್ಸಿನಲ್ಲಿ ಸಂತಾನದ ಅಪೇಕ್ಷೆ ಇದ್ದಿತು. ಇದನ್ನು ತಿಳಿದು ಕೊಂಡರು- ಅಪರೋಕ್ಷ ಜ್ಞಾನಿಗಳಾದ ಔರ್ವಮುನಿಗಳು. ಭಾರ್ಗವ ಮಂತ್ರ ಪ್ರಭಾವದಿಂದ ಬೇಕಾದ ವರನೀಡುವ ಶಕ್ತಿ ಆ ಔರ್ವಮುನಿಗಿತ್ತು. ಈ ವಿಷಯ ರಾಣಿಯರಿಗೂ ಗೊತ್ತಿತ್ತು. ಆದುದರಿಂದಲೇ ಆ ರಾಣಿಯರ ಮುನಿಸೇವೆ ಅಧಿಕಾಧಿಕ. ಪ್ರಸನ್ನ ಮನಸ್ಕರಾದ ಔರ್ವಮುನಿಗಳು ಒಂದು ಕ್ಷಣ ಪ್ರಣಿಧಾನ ಮಾಡಿದರು. ಅಂತರ್ ದೃಷ್ಟಿಯಿಂದ ಭವಿಷ್ಯದ ಗರ್ಭಭೇದಿಸಿ ಮುಂದಾಗುವದನ್ನು ಅಂದೇ ತಿಳಿದರು. ಇಬ್ಬರೂ ರಾಣಿಯರಿಗೂ 'ಅಪೇಕ್ಷಿತವಾದ ಪುತ್ರ ಲಾಭವಾಗಲಿ' ಎಂದು ವರ ನೀಡಿದರು. ಆನಂದದಿಂದ ರಾಣಿಯರನ್ನು ಕರೆದು ಇಂತೆಂದರು.

**ಔರ್ವ**:- ರಾಣಿಯರೆ, ನೀವಿಬ್ಬರೂ, ಸಂತಾನ ಬಯಸುತ್ತಿದ್ದೀರಿ. ನನ್ನ ಸೇವೆ ಮಾಡಿದ್ದೀರಿ. ಇಬ್ಬರಿಗೂ ನಾನು ವರಕೊಡುತ್ತೇನೆ. ನಿಮ್ಮಿಬ್ಬರಲ್ಲಿ ಯಾರಿಗೆ ಯಾವ ವರಬೇಕು ಹೇಳಿರಿ. ವಂಶೋದ್ಧಾರಕ ಮಗ ಒಬ್ಬನು ಬೇಕೋ ಅಥವಾ ಅರವತ್ತು ಸಾವಿರ ಮಕ್ಕಳು ಬೇಕೋ?

**ಕೇಶಿನಿಯು**:- ವಂಶಾಭಿವೃದ್ಧಿ ಮಾಡುವ ಒಬ್ಬ ಮಗನಾದರೂ ಸಾಕು ತನಗೆ, ಎಂದು ಬಿನ್ನವಿಸಿದಳು. ಸುಮತಿಗೆ ಮಾತ್ರ ಭಾರೀ ಪುತ್ರ ಮೋಹ! ಏಕಮಾತ್ರ ಪುತ್ರ ಅವಳಿಗೆ ಎಷ್ಟೂ ತೃಪ್ತಿ ಇದ್ದಿಲ್ಲ. ಮಕ್ಕಳಾದಷ್ಟೂ ಬೇಕು ಎನ್ನುವ ಚಪಲ ಅವಳಿಗೆ ಬಾಲ್ಯದಿಂದಲೇ!

ಆದುದರಿಂದ ಅರವತ್ತು ಸಾವಿರ ಮಕ್ಕಳನ್ನು ಕೇಳಿಕೊಂಡಳು ಆನಂದದಿಂದ. ಮುನಿಗಳು ಇಬ್ಬರಿಗೂ 'ತಥಾಸ್ತು' ಎಂದು ಹೇಳಿದರು. ಅವರ ವರಬಲದಿಂದ ಸುಮತಿಯು ಅರವತ್ತು ಸಾವಿರ ಮಕ್ಕಳನ್ನು ಹಡೆದಳು. ಕೇಶಿನಿಯು ಮಾತ್ರ ತನ್ನ ಅಪೇಕ್ಷೆಯಂತೆ ಒಬ್ಬನೇ ಮಗನನ್ನು ಹೆತ್ತಳು. ಅಸಮಂಜಸ ಎಂದು ಅವನ ಹೆಸರು. ಅವನು ಬಾಲಕನಿದ್ದಾಗಲೇ ತನ್ನ ಹೆಸರಿಗೆ ತಕ್ಕಂತೆ ನಡೆದುಕೊಳ್ಳುತ್ತಿದ್ದ. ಅಸಮಂಜಸವಾದ ಕರ್ಮಗಳನ್ನೆ ಮಾಡುತ್ತಿದ್ದ. ನೋಡಲಿಕ್ಕೆ ಉನ್ಮತ್ತ. ವಸ್ತುತಸ್ತು ಮಹಾಪಂಡಿತ. ಅವನ ಸಹವಾಸದಿಂದ ಸಗರ ಪುತ್ರರೆಲ್ಲರೂ ದುಷ್ಟ ಸ್ವಭಾವದವರಾದರು. ಸಗರ ರಾಜನ ಮನಸ್ಸಿಗೆ ಬಹಳ ನೋವಾಯಿತು. ಅಸಮಂಜಸನು ಎಳಮೆಯಲ್ಲಿಯೇ ದುಷ್ಟನಾಗಿದ್ದವನ್ನು ನೋಡಿ ಬಹಳ ದುಃಖ ವಾಯಿತು. ಅವನೊಬ್ಬ ಸ್ವಭಾವತಃ ದುಷ್ಟ ಮನುಷ್ಯನೆಂದೇ ಸಗರರಾಜನು ಭಾವಿಸಿದನು. ಅಸಮಂಜಸನ ಅನೇಕ ಅತ್ಯಾಚಾರಗಳು ದುಷ್ಟ ಕೃತ್ಯಗಳು ಅವನಿಗೆ ಚಿಂತೆಯನ್ನುಂಟು ಮಾಡಿದವು. ಆ ಅಸಮಂಜಸನಿಗೆ ಅಂಶಮಾನ್ ಎಂಬ ಮಗನು ಹುಟ್ಟಿದನು. ಅವನು ಮಾತ್ರಧರ್ಮಿಷ್ಠನು ಇದ್ದನು. ಶಾಸ್ತ್ರಗಳಲ್ಲಿ ಒಳ್ಳೇ ಪರಿಣತಿ ಇದ್ದಿತು. ಅವನು ಕಣ್ಮರೆಯಾದ ತನ್ನ ತಂದೆಯ ತಂದೆಯಾದ ಸಗರ ರಾಜನಿಗೆ ಅನುಕೂಲನಾಗಿ ಅವನನ್ನು ಪ್ರಸನ್ನಗೊಳಿಸಿದನು. ಆದರೆ ಉಳಿದ ಸಗರ ಪುತ್ರರು ದುರಾಚಾರಿಗಳಾದರು. ಜನರಿಗೆ ಅವರಿಂದ ನಿತ್ಯವೂ ಉಪಟಳ. ಜಪ, ತಪೋನುಷ್ಠಾನ್ಯೆಯುವ ಮುನಿಗಳಿಗೆಲ್ಲ ಇವರಿಂದ ಆತಂಕ. ಮುನಿಗಳು ಹೋಮ ಮಾಡಲು ಹೊರಟಾಗ ಯಜ್ಞ ಮಂಟಪಕ್ಕೆ ಬಂದು ಆಜ್ಯ ಮುಂತಾದ ಹವಿಸ್ಸನ್ನೆಲ್ಲ ತಾವೇ ತಿಂದುಹಾಕಿಬಿಡುತ್ತಿದ್ದರು. ಕಂಡಲ್ಲೆಲ್ಲ ಕುಲ ಕನ್ನಿಕೆಯರನ್ನು ಸೆಳೆದು ತಂದು ಭೋಗಿಸುತ್ತಿದ್ದರು. ಸ್ವರ್ಗಕ್ಕೂ ಲಗ್ಗೆ ಇಟ್ಟರು. ರಂಭಾದಿ ಸುರಸುಂದರಿಯರನ್ನು ಸೆಳೆದು ತಂದರು. ಅಮರಾವತಿಯ ಅಂಗನೆಯರನ್ನೆಲ್ಲ ಕೂದಲು ಹಿಡಿದು ಎಳೆದು ತಂದು ತಮ್ಮ ಅಂತಃಪುರಕ್ಕೆ ತಂದರು. ಪಾರಿಜಾತ ಮೊದಲಾದ ನಂದನವನದ ಗಿಡ, ಬಳ್ಳಿಗಳ ಹೂಗಳನ್ನು ಹರಿದು ತಮ್ಮ ದೇಹಗಳನ್ನು ಶೃಂಗರಿಸಿಕೊಂಡರು. ಮದ್ಯಪಾನ ಮಾಡಿ ಮದೋನ್ಮತ್ತರಾಗಿ ಸಾಧುಗಳನ್ನೂ ಸಜ್ಜನರನ್ನೂ ದಂಡಿಸಿದರು. ಎಲ್ಲ ಧರ್ಮಗಳನ್ನು ನಾಶಪಡಿಸಿದರು. ತಮ್ಮ ಸೇನೆಯೊಂದಿಗೆ ಯುದ್ಧಕ್ಕೆ ಸನ್ನದ್ಧರಾದರು. ಇದನ್ನು ಕಂಡು ಇಂದ್ರಾದಿ ದೇವತೆಗಳಿಗೆ ದುಃಖವಾಯಿತು. ಇವರನ್ನು 'ಹೇಗೆ ನಾಶಮಾಡುವದೆಂದು' ಯೋಚಿಸಿ ಕೊನೆಗೆ ಅವರೆಲ್ಲರೂ ದೇವದೇವೇಶನಾದ ಕಪಿಲನಿಗೆ ಶರಣುಹೋದರು. ಆಗ ಕಪಿಲದೇವ ಮುನಿಯು ಪಾತಾಳ ಲೋಕದ ಒಳನಾಡಿನಲ್ಲಿ ಧ್ಯಾನ ಸಮಾಧಿಯಲ್ಲಿ ಕುಳಿತಿದ್ದನು. ತನ್ನ ಸ್ವರೂಪವನ್ನೇ ಚಿಂತಿಸುತ್ತ ತಪಃ ಸಮಾಧಿಯಲ್ಲಿ ಕುಳಿತ ಆ ಕಪಿಲ ಭಗವಂತನ ಬಳಿಗೆ ದೇವತೆಗಳೆಲ್ಲರೂ ಬಂದು ದಂಡಪ್ರಣಾಮ ಮಾಡಿದರು. ಭಕ್ತಿಯಿಂದ ಪ್ರಾರ್ಥಿಸಿದರು.

॥ದೇವಾ ಊಚುಃ ॥

ನಮಸ್ತೇ ಯೋಗಿನೇ ತುಭ್ಯಂ ಸಾಂಖ್ಯಯೋಗರತಾಯ ಚ ।
ನರರೂಪ ಪರಿಚ್ಛನ್ನ ವಿಷ್ಣವೇ ಜಿಷ್ಣವೇ ನಮಃ ॥

ನಮಃ ಪರೇಶಭಕ್ತಾಯ ಲೋಕಾನುಗ್ರಹಹೇತವೇ ।
ಸಂಸಾರಾರಣ್ಯ ದಾವಾಗ್ನಿ ಜ್ಞಾನ ಸಂಪನ್ನ ತೇ ನಮಃ ॥

**ಮಹತೇ ವೀತರಾಗಾಯ ತುಭ್ಯಂ ಭೂಯೋ ನಮೋ ನಮಃ ।**
**ಸಾಗರೈಃ ಪೀಡಿತಾನಸ್ಮಾಂಸ್ತ್ರಾಯಸ್ವ ಶರಣಾಗತಾನ್ ॥**

ದೇವತೆಗಳು ಮಾತನಾಡುತ್ತಾರೆ - ಸ್ವಾಮಿಯೇ! ಸಮಾಧಿಸ್ಥನೂ, ಜ್ಞಾನಯೋಗ ನಿರತನೂ, ಮನುಷ್ಯ ರೂಪಧಾರಿಯೂ, ಜಯಶೀಲನೂ ಆದ ವಿಷ್ಣುವೇ, ನಿನಗೆ ನಮಸ್ಕಾರ. ಸರ್ವೋತ್ತಮನೂ ಭಕ್ತಲೋಕಕ್ಕೆ ಅನುಗ್ರಹ ಮಾಡುವವನೂ, ಸಂಸಾರವೆಂಬ ಅರಣ್ಯಕ್ಕೆ ಕಾಡ್ಗಿಚ್ಚಿನೋಪಾದಿಯಲ್ಲಿರುವ ಅಪರೋಕ್ಷ ಜ್ಞಾನವನ್ನು ಹೊಂದಿರುವವನೂ ಆದ ನಿನಗೆ ನಮಸ್ಕಾರ. ನಮಸ್ಕಾರ. ಪೂಜ್ಯನೂ ಮತ್ತು ರಾಗಾದಿ ದೋಷ ರಹಿತನೂ ಆದ ನಿನಗೆ ಪುನಃ ಪುನಃ ನಮಸ್ಕಾರ. ಸಗರ ಪುತ್ರರ ಬಾಧೆಯನ್ನು ತಾಳಲಾರದೆ ನಿನ್ನಲ್ಲಿ ಶರಣಾಗತರಾಗಿರುವ ನಮ್ಮನ್ನು ಕಾಪಾಡು.'' ದೇವತೆಗಳ ಈ ಪ್ರಾರ್ಥನೆ ಕೇಳಿ ಕಪಿಲದೇವನು ಪ್ರಸನ್ನನಾಗಿ ಹೇಳಿದನು. ' ಸುರೋತ್ತಮರೆ, ತನ್ನ ಆಯುಷ್ಯ, ಐಶ್ವರ್ಯ ಮುಂತಾದವುಗಳೆಲ್ಲದರ ಸರ್ವಸ್ವ ನಾಶವು ಆಗಬೇಕೆಂದು ಬಯಸುವವನೇ ಪರಪೀಡೆಯನ್ನು ಸುರು ಮಾಡುತ್ತಾನೆ. ನಿರಪರಾಧಿಗಳಾದ ಜನರನ್ನು ಹಿಂಸಿಸಹೊರಟ ಮನುಷ್ಯ ತಾನೇ ಮೊದಲು ವಿನಾಶ ಹೊಂದುತ್ತಾನೆ. ದೈವವೇ ಅಂಥ ಲೋಕ ಕಂಟಕರನ್ನು ವಿಧ್ವಸ್ತಗೊಳಿಸುತ್ತದೆ. ಈ ಸಗರ ಕುಮಾರರು ಕೂಡ ಜನಪೀಡೆಯನ್ನು ಉಂಟುಮಾಡಿ ತಮ್ಮ ಸರ್ವಸ್ವ ನಾಶಕ್ಕೆ ಆಹ್ವಾನವಿತ್ತಿದ್ದಾರೆ. ಅವರೆಲ್ಲರೂ ಹಾಳಾಗಿ ಹೋಗುವರು. ನೀವು ಚಿಂತಿಸಬೇಡಿರಿ.'' ಕಪಿಲ ದೇವನ ಈ ಸತ್ಯವಚನ ಕೇಳಿ ಸಮಾಧಾನವಾಯಿತು ಸುರಸತ್ತಮರಿಗೆ. ಎಲ್ಲ ವೃಂದಾರಕರು ಕಪಿಲದೇವನನ್ನು ವಂದಿಸಿ ಮರಳಿದರು.

ಇತ್ತ ಸಗರ ರಾಜನು ಅಶ್ವಮೇಧಯಾಗ ಪ್ರಾರಂಭಿಸಿದನು. ಅದಕ್ಕೆ ವಶಿಷ್ಠಾದಿ ಮಹರ್ಷಿಗಳ ಸಂಪೂರ್ಣ ಬೆಂಬಲವಿತ್ತು. ಶ್ರೌತವಿಭಾಗದಲ್ಲಿ ಪರಿನಿಷ್ಠಿತರಾದ ಋತ್ವಿಜರು, ಸರ್ವಸ್ವ ದಾನಕ್ಕೆ ಸಿದ್ಧನಾಗಿ ನಿಂತ ಮಹಾರಾಜ. ವೈಭವದಿಂದ ನಡೆಯಿತು ಆ ಅಶ್ವಮೇಧ ಯಜ್ಞ. ದೇವೇಂದ್ರ ಇಂತಹ ಸಂದರ್ಭ ಕಾಯುತ್ತಿದ್ದ. ಸಗರನ ಅಶ್ವಮೇಧ ಕುದುರೆಯನ್ನು ಕದ್ದು ಬಿಟ್ಟ. ಅದನ್ನೊಯ್ದು ಪಾತಾಳ ಲೋಕದಲ್ಲಿ ತಪಗೈಯುತ್ತಿದ್ದ ಕಪಿಲನ ಹಿಂದೆ ಬಿಟ್ಟ. ಆ ಕುದುರೆಯನ್ನು ಕಪಿಲನ ಆಶ್ರಮದ ಹಿಂಬದಿಯಲ್ಲಿ ಅಡಗಿಸಿಡುವಾಗಲೂ ವೇಷಮರಿಸಿಕೊಂಡಿದ್ದ ಆ ಸುರನಾಥ. ಆದುದರಿಂದ ಈ ಅಶ್ವಚೌರ್ಯವು ಯಾರಿಗೂ ತಿಳಿಯಲೇ ಇಲ್ಲ ಇಂದ್ರ ಮಾಡಿದ್ದೆಂದು. ಸಗರ ಪುತ್ರರಾದ ಅರವತ್ತು ಸಹಸ್ರ ಜನರು ಹುಡುಕ ತೊಡಗಿದರು - ಆ ಯಜ್ಞಾಶ್ವವನ್ನು. ಭೂಲೋಕವನ್ನೆಲ್ಲ ಸುತ್ತಿದರು. ಭುವರ್ಲೋಕ ಸ್ವರ್ಗಲೋಕ ಹುಡುಕಾಡಿದರು. ಎಲ್ಲಿಯೂ ಕುದುರೆಯ ಸುಳುವಿಲ್ಲ. ಕೊನೆಗೆ ಅವರು ಪಾತಾಳಕ್ಕೆ ಹೋಗಿ ಹುಡುಕಲು ನಿರ್ಧರಿಸಿದರು. ಭೂಮಿಯನ್ನು ಒಬ್ಬೊಬ್ಬರು ಒಂದು ಗಾವುದದಂತೆ ಅಗೆದರು. ಮಣ್ಣನ್ನೆಲ್ಲ ಸಮುದ್ರ ತೀರದಲ್ಲಿ ಹರಡಿದರು. ಅಗಿಯುತ್ತ ಅಗಿಯುತ್ತ ಭೂಮಿಯನ್ನು ಕಡಿಯುತ್ತ, ಆಳದಲ್ಲಿ ಭೂಮಿಯ ಪದರು, ಪದರು, ಬಗೆಯುತ್ತ ಪಾತಾಳದವರೆಗೂ ಇಳಿದರು. ಶೂರರಾದ ಆ ಸಗರ ಕುಮಾರರು ಭೂಮಿಯಿಂದ ಪಾತಾಳದವರೆಗೆ ದೊಡ್ಡದಾದ ದ್ವಾರವನ್ನೇ ಭೂಗರ್ಭವನ್ನು ಅಗೆದು ಮಾಡಿದರು. ಮದೋನ್ಮತ್ತರಾದ ಹಾಗೂ ಬಲಿಷ್ಠರಾದ ಸಗರ ಕುಮಾರರು ಭೂಮಿಯಿಂದ ಪಾತಾಳದವರೆಗೆ ಸುರಂಗಮಾರ್ಗ ಮಾಡಿ, ಪಾತಾಳಕ್ಕೆ ಹೋಗಿ ತಮ್ಮ ಕುದುರೆಯನ್ನು ಹುಡುಕಿದರು. ಎಲ್ಲಿಯೂ ಕುದುರೆಯು ಕಾಣಲಿಲ್ಲ ಅವರ ಕಣ್ಣಿಗೆ. ಕಪಿಲ

ಮುನಿ ಕುಳಿತ ತಾಣಕ್ಕೆ ಬಂದರು. ಕೋಟಿ ಸೂರ್ಯರಿಗೆ ಸಮನಾಗಿತ್ತು ಆ ಕಪಿಲ ಮುನಿಯ ಕಾಯಕಾಂತಿ. ಧ್ಯಾನಾಸಕ್ತನಾಗಿದ್ದ ಆ ಮುನಿ. ಅವನ ಪಕ್ಕದಲ್ಲೇ ಕುದುರೆ. ನೋಡಿದ ಕೂಡಲೇ ಕೋಪ ಉಕ್ಕೇರಿತು ಆ ಎಲ್ಲ ಸಗರ ಕುಮಾರರಿಗೆ. ಕುದುರೆ ಸಿಕ್ಕಿತು ಎನ್ನುವದಕ್ಕಿಂತ ಕುದುರೆಯ ಕಳ್ಳ ದೊರೆತ. ಅವನನ್ನು ಹೊಡೆಯಬೇಕು' ಎನ್ನುವ ಹಿಂಸಾಭಾವವೇ ಉದ್ರಿಕ್ತವಾಗಿತ್ತು ಅವರಲ್ಲಿ. ಎಲ್ಲರೂ ಆ ಮಹಾಮುನಿಯನ್ನು ಹೊಡೆಯಲು ಕೈ ಎತ್ತಿದರು. ಶಸ್ತ್ರ ಹಿರಿದರು. ಧನಿ ಎತ್ತಿದರು. ' ಬಡೆಯಿರಿ,' ' ಕಡಿಯಿರಿ,' ' ಬಂಧಿಸಿರಿ,' 'ಹಿಡಿಯಿರಿ', 'ಹೊಡೆಯಿರಿ' ಎಂದು ದೊಡ್ಡ ಧನಿಯಿಂದ ಚೀರ ಕೊಡಗಿದರು. 'ಅಬ್ಬಾ! ಎಂಥ ಠಕ್ಕನೊ ಈ ತಪಸ್ವಿ! ನಮ್ಮ ಕುದುರೆಯನ್ನು ಕದ್ದು, ಕಣ್ಣು ಮುಚ್ಚಿಕೊಂಡು ಕುಳಿತಿದ್ದಾನೆ - ಒಳ್ಳೇ ಸಜ್ಜನನಂತೆ. ಮೀನು ಹಿಡಿಯಲು ಜಪಿಸಿ ಕುಳಿತ ಬಕದಂತೆ ಇದೆ ಇವನ ಧ್ಯಾನ. ದುಷ್ಟರು ದುಷ್ಕಾರ್ಯಮಾಡಿ, ಇಂಥ ತಪಸ್ಸಿನ ಆಡಂಬರ ಹೂಡಿ 'ಜನರನ್ನು ವಂಚಿಸುತ್ತಾರೆ. ಎಳೆಯಿರಿ ಇವನನ್ನು'' ಎಂದು ನುಡಿದು ಅಟ್ಟಹಾಸ ಮಾಡಿ ಆ ಮಹಾಮುನಿಯನ್ನು ಉಪಹಾಸ ಗೈದರು. ಆದರೆ ಕಪಿಲ ಮುನಿಯು ಅಸಂಪ್ರಜ್ಞಾತ ಸಮಾಧಿಯಲ್ಲಿ ಕುಳಿತಿದ್ದ. ಮದಾಂಧ ರಾಜಕುಮಾರರ ಉಪಹಾಸ, ಅಪಹಾಸ, ನಿಂದೋಕ್ತಿ, ವ್ಯಂಗ್ಯೋಕ್ತಿಗಳ ಕಡೆಗೆ ಅವನ ಲಕ್ಷ್ಯವೇ ಇರಲಿಲ್ಲ. ಅವನು ಸುಮ್ಮನೇ ಕುಳಿತಿದ್ದ. ಅವನ ಮೌನ ಮುದ್ರೆಯನ್ನು ಕಂಡು, ಆ ಅರಸು ಮಕ್ಕಳ ದುಶ್ಚೇಷ್ಟೆ ಇನ್ನೂ ಹೆಚ್ಚಾಯಿತು. ಕಾಲಿನಿಂದ ಆ ಮಹಾಮುನಿಯನ್ನು ಒದ್ದುಬಿಟ್ಟರು. ಇನ್ನು ಕೆಲವರು ಶಪೋನಿಶ್ಚಲನಾಗಿ ಕುಳಿತ ಅವನ ಎರಡೂ ತೋಳುಗಳನ್ನು ಹಿಗ್ಗಾ ಮುಗ್ಗಾ ಜಗ್ಗಿ ಕಿತ್ತಾಡಿದರು. ಇದರಿಂದ ಕಪಿಲ ದೇವನಿಗೆ ಎಚ್ಚರವಾಯಿತು. ಅವರು ಮಾಡುವ ಆಕ್ರಮಣ, ಹಾಗೂ ಪ್ರಹಾರ, ನೋಡಿ, ಅವಾಚ್ಯ ಶಬ್ದಗಳನ್ನು ಕೇಳಿ, ಒಮ್ಮೆಲೆ ಗಂಭೀರನಾದ ಆ ಮುನಿ. ಅವರ ಈ ಉನ್ಮಾದವನ್ನು ಕಂಡು ಆಶ್ಚರ್ಯವಾಯಿತು ಆ ಕಪಿಲ ದೇವನಿಗೆ. ಸಿಡಿದು ನುಡಿದ ಆ ಮಹಾ ಮುನಿ -

**ಐಶ್ವರ್ಯಮದಮತ್ತಾನಾಂ ಕ್ಷುಧಿತಾನಾಂ ಚ ಕಾಮಿನಾಂ ।**
**ಅಹಂಕಾರವಿಮೂಢಾನಾಂ ವಿವೇಕೋ ನೈವ ಜಾಯತೇ ॥**

ಐಶ್ವರ್ಯದ ಮದದಿಂದ ಕೊಬ್ಬಿದವರಿಗೂ ಹಸಿವೆಯಿಂದ ಬಳಲುವವರಿಗೂ, ಕಾಮಾತುರರಿಗೂ, ಮದಾಂಧರಿಗೂ ವಿವೇಕ ಹುಟ್ಟುವದಿಲ್ಲ.

**ಕಿಮತ್ರ ಚಿತ್ರಂ ಸುಜನಂ ಬಾಧಂತೇ ಯದಿ ದುರ್ಜನಾಃ ।**
**ಮಹೀರುಹಾಂಶ್ಚಾಪಿ ತಟೇ ಪಾತಯಂತಿ ನದೀರಯಾಃ ॥**

ದುರ್ಜನರು ಸಜ್ಜನರನ್ನು ಹಿಂಸಿಸುತ್ತಾರೆಂಬುದರಲ್ಲಿ ಆಶ್ಚರ್ಯವೇನು? ನದಿಯ ಅಲೆಗಳು ದಡದಲ್ಲಿರುವ ವೃಕ್ಷಗಳನ್ನು ಕೆಡಹುವದಿಲ್ಲವೆ?

**ಯತ್ರ ಶ್ರೀರ್ಯೌವನಂ ವಾಽಪಿ ಪರಸ್ತ್ರೀ ವಾಽಪಿ ತಿಷ್ಠತಿ ।**
**ತತ್ರಾಽಶ್ರೀರ್ವೃದ್ಧತಾ ನಿತ್ಯಂ ಮೂರ್ಖತ್ವಂ ಚಾಪಿ ಜಾಯತೇ ॥**

ಯಾವಾತನಿಗೆ ಐಶ್ವರ್ಯ, ಯೌವನ ಮತ್ತು ಪರಸ್ತ್ರೀ ಸಂಬಂಧ ಇವುಗಳಿರುತ್ತವೆಯೇ ಅಂತಹವನಿಗೆ ದಾರಿದ್ರ್ಯ ಮುದಿತನ ಮೂರ್ಖತ್ವ ಇವುಗಳು ಉಂಟಾಗುತ್ತವೆ.

**ಅಹೋ ಕನಕ ಮಾಹಾತ್ಮ್ಯಮಾಖ್ಯಾತುಂ ಕೇನ ಶಕ್ಯತೇ ।**
**ನಾಮಸಾಮ್ಯಾದಹೋ ಚಿತ್ರಂ ಧತ್ತೂರೋಽಪಿ ಮದಪ್ರದಃ ॥**

ಬಂಗಾರದ ಮಹಿಮೆಯನ್ನು ಹೇಳಲು ಯಾರಿಗೆ ಸಾಧ್ಯ! ಕನಕವೆಂಬ ಬಂಗಾರದ ನಾಮಧೇಯವುಳ್ಳ ಉಮ್ಮತ್ತಿಯ ಕಾಯಿಯೂ ಸಹ ಮದಕಾರಿಯು. ಆಶ್ಚರ್ಯ! ಎಂದರೆ ಸಂಸ್ಕೃತ ಭಾಷೆಯಲ್ಲಿ 'ಕನಕ'ವೆಂಬ ಶಬ್ದಕ್ಕೆ ಭಂಗಾರ, ಉಮ್ಮತ್ತಿಗಿಡ ಎಂದು ಎರಡು ಅರ್ಥಗಳಿವೆ. ಉಮ್ಮತ್ತಿಗಿಡದ ಕಾಯಿಯು ಮದ ಜನಕವೆಂದು ಪ್ರಸಿದ್ಧ. ಭಂಗಾರದಲ್ಲಿರುವ ಗುಣವು ಉಮ್ಮತ್ತಿಯಲ್ಲಿಲ್ಲದಿದ್ದಾಗ್ಯೂ ಬಂಗಾರವನ್ನು ಬೋಧಿಸುವ ಪದದಿಂದ ಬೋಧ್ಯವಾಗಿರುವ ಮಾತ್ರದಿಂದಲೇ ಇದು ಮದ ಜನಕವಾದರೆ ಅನರ್ಘ್ಯವಾದ ಭಂಗಾರವು ಅತ್ಯಂತ ಮದಕಾರಿ ಎಂದು ಹೇಳಬೇಕಾದದ್ದು ಏನು? ಎಂದು ತಾತ್ಪರ್ಯವು.

**ಭವೇದ್ಯದಿ ಖಲಸ್ಯ ಶ್ರೀ ಸ್ಸೈವಲೋಕ ವಿನಾಶಿನೀ ।**
**ಯಥಾ ಸಖಾಗ್ನೇಃ ಪವನಃ ಪನ್ನಗಸ್ಯ ಯಥಾ ವಿಷಂ ॥**

ಬೆಂಕಿಯು ಸುಡುವದಕ್ಕೆ ಗಾಳಿಯು ಹೇಗೆ ಸಹಕಾರಿಯೋ, ಹಾವು ಇತರರನ್ನು ಕಚ್ಚಿ ಹಿಂಸಿಸಲು ವಿಷವು ಹೇಗೆ ಸಹಕಾರಿಯೋ ಅದರಂತೆ ದುಷ್ಟರಿಗೆ ಐಶ್ವರ್ಯವು ಬಂದರೆ ಅದು ಲೋಕವಿನಾಶಕ್ಕೆ ಕಾರಣವಾಗುತ್ತದೆ.

**ಅಹೋ ಧನಮದಾಂಧಸ್ತು ಪಶ್ಯನ್ನಪಿ ನ ಪಶ್ಯತಿ**
**ಯದಿ ಪಶ್ಯತ್ಯಾತ್ಮಹಿತಂ ಪರೇಷಾಂತು ನ ಪಶ್ಯತಿ ॥**

ಐಶ್ವರ್ಯ ಮದಮತ್ತನು ಎದುರಿಗೆ ನೋಡಬಹುದಾಗಿದ್ದರೂ ಕುರುಡನಂತೆ ನೋಡುವದಿಲ್ಲ. ತನಗೆ ಅನುಕೂಲವಾದ್ದನ್ನು ನೋಡುವ ಸಂದರ್ಭದಲ್ಲಿ ಮಾತ್ರ ಕಣ್ತೆರೆದು ನೋಡುತ್ತಾನೆ, ಸಂಶಯವಿಲ್ಲ.

**ಇತ್ಯುಕ್ತ್ವಾ ಕಪಿಲಃ ಕ್ರುದ್ಧೋ ನೇತ್ರಾಭ್ಯಾಂ ಸಸೃಜೇಽನಲಂ ।**
**ಸ ವಹ್ನಿಃ ಸಾಗರಾನ್ ಸರ್ವಾನ್ ಭಸ್ಮಸಾದಕರೋತ್ಕ್ಷಣಾತ್ ॥**

ಎಂಬುದಾಗಿ ಹೇಳಿ ಕಪಿಲನು ಕೋಪಗೊಂಡು ತನ್ನ ಕಣ್ಣುಗಳಿಂದ ಬೆಂಕಿಯನ್ನು ಸೃಷ್ಟಿಸಿದನು. ಆ ಬೆಂಕಿ ಕೂಡಲೆ ಸಗರ ಪುತ್ರರನ್ನೆಲ್ಲ ಸುಟ್ಟು ಬೂದಿ ಮಾಡಿತು. ಕಪಿಲ ಮುನಿಯ ಕಣ್ಣಿನ ಕುಂಡದಿಂದ ಚಿಮ್ಮಿಬಂದ ಅಗ್ನಿಜ್ವಾಲೆಗಳನ್ನು ಕಂಡು ಪಾತಾಳದ ಪೌರರು ಹೌಹಾರಿದರು. ಇದೊಂದು ಅಕಾಲ ಪ್ರಳಯವೇ ಬಂದಿತು ಎಂದು ಅಳತೊಡಗಿದರು ಆ ಎಲ್ಲ ಅಧೋಲೋಕವಾಸಿಗಳು. ಕಪಿಲ ಮುನಿಯ ನೇತ್ರಾಗ್ನಿಯ ಜ್ವಾಲೆಗಳ ಝಳದಿಂದ ಆ ಲೋಕದ ಹಾವುಗಳು, ರಾಕ್ಷಸರು ಸಂತಪ್ತರಾದರು. ಏನು ಮಾಡಲು ತಿಳಿಯದೇ ಸಮುದ್ರದ ನೀರಿನಲ್ಲಿ ಹೊಕ್ಕರು.

**ಸತಾಂ ಕೋಪೋಹಿ ದುಸ್ಸಹಃ!**

ಸಜ್ಜನರ ಕೋಪವನ್ನು ಸಹಿಸಲು ಯಾರಿಂದಲೂ ಶಕ್ಯವಿಲ್ಲ

ಓರ್ವ ದೇವದೂತನು ಸಗರ ರಾಜನು ಯಜ್ಞ ಮಾಡುತ್ತಿರುವ ಯಜ್ಞ ಮಂಟಪಕ್ಕೆ ಬಂದನು. ಅವನ ಮೊಮ್ಮಕ್ಕಳಾದ ಸಗರ ರಾಜಕುಮಾರರ ಈ ಎಲ್ಲ ದುರಂತ ವೃತ್ತಾಂತ ತಿಳಿಸಿದನು. ಅದನ್ನು ಕೇಳಿ ಯಜ್ಞದೀಕ್ಷಿನಾದ ಸಗರ ರಾಜನಿಗೆ ಕೆಡುಕೆನಿಸಲಿಲ್ಲ.

ವ್ಯಸನಪಡಲಿಲ್ಲ. ದೇವದ್ರೋಹಿಗಳಾದ ಆ ಪಾಪಿಗಳು ಭಗವಂತನಿಂದ ಶಿಕ್ಷಿತರಾದದ್ದು ಒಳ್ಳೆಯದೇ ಆಯಿತು ಎಂದು ತನ್ನಲ್ಲಿಯೇ ತಾನು ಹೇಳಿಕೊಂಡನು. ಇದರಿಂದ ಧರ್ಮಾತ್ಮನಾದ ಸಗರರಾಜನಿಗೆ ಸಂತೋಷವೇ ಎನಿಸಿತು. ಅಧರ್ಮ ಮಾಡುವ ಆಪ್ತೇಷ್ಟರು ವೈರಿಗಳೇ ಸರಿ.

**ಮಾತಾ ವಾ ಜನಕೋ ವಾಪಿ ಭ್ರಾತಾ ವಾ ತನಯೋಽಪಿ ವಾ ॥**
**ಅಧರ್ಮಂ ಕುರುತೇ ಯಸ್ತು ಸ ಏವ ರಿಪುರುಚ್ಯತೇ ॥**

ತಾಯಿ, ತಂದೆ, ಅಣ್ಣ, ತಮ್ಮ, ಮಗ ಅಧರ್ಮ ಮಾಡಿದರೆ ಅವನೇ ವೈರಿ ಎನಿಸುತ್ತಾನೆ. ಆದುದರಿಂದ, ಸಗರ ರಾಜನು ಕಪಿಲ ಮುನಿಗೆ ದ್ರೋಹ ಬಗೆದ ತನ್ನ ಮಕ್ಕಳು ಮೃತರಾದದ್ದು ಕೇಳಿಯೂ ಶೋಕಿಸಲಿಲ್ಲ. ಆದರೆ ಮಕ್ಕಳಿಲ್ಲದವರಿಗೆ ಯಜ್ಞದಲ್ಲಿ ಭಾಗವಿಲ್ಲ ಎಂದು ಶಾಸ್ತ್ರ ವಚನವಿದೆ. ಈಗ ಸಗರ ರಾಜನಿಗೆ ಮಕ್ಕಳೇ ಇಲ್ಲದಂತಾಗಿತ್ತು. ಹಿರಿಯವನಾದ ಅಸಂಮಂಜಸನು ತೀರಿಕೊಂಡಿದ್ದ. ಕಿರಿಯರಾದ ಅರವತ್ತು ಸಹಸ್ರ ಜನ ಮಕ್ಕಳು ಕಪಿಲಮುನಿಯ ಕೋಪದ ಕಿಡಿಯಲ್ಲಿ ಹುರುಪಳಿಸಿ ಹೋಗಿದ್ದರು. ಆದುದರಿಂದ ಅವನು ತನ್ನ ಜ್ಯೇಷ್ಠ ಪುತ್ರನಾದ ಅಸಂಮಂಜಸನ ಮಗನಾದ ಅಂಶುಮಾನನನ್ನು ದತ್ತು ತೆಗೆದುಕೊಂಡ. ಅಂಶುಮಂತನು ಒಳ್ಳೇ ಜ್ಞಾನಿ ಮಾತಿನ ಮರ್ಮ ಬಲ್ಲವ. ಅವನನ್ನು ತನ್ನ ಪುತ್ರನನ್ನಾಗಿ ಮಾಡಿಕೊಂಡು ಅಶ್ವಮೇಧದ ಕುದುರೆ ತರಲು ನಿಯಮಿಸಿದ. ಅಜ್ಜನ ಆದೇಶದಂತೆ ಅಂಶುಮಂತನು ಪಾತಾಳಕ್ಕೆ ಹೋದನು. ಅದರ ಹೆಬ್ಬಾಗಿಲಲ್ಲಿಯೇ ತೋಜೋ ರಾಶಿಯಾದ ಕಪಿಲಮುನಿ ಕುಳಿತುಕೊಂಡಿದ್ದ. ಸಾಷ್ಟಾಂಗವೆರಗಿದ ಅವರಿಗೆ ಮೊದಲು. ಅವನು ಕೈಮುಗಿದು ವಿನಯದಿಂದ ಬಾಗಿ ನಿಂತುಕೊಂಡ. ಭಕ್ತಿಯುಕ್ತನಾಗಿ ಮಾತನಾಡಿದ. ಪೂಜ್ಯ ಮುನಿಗಳೇ, ನನ್ನ ಚಿಕ್ಕಪ್ಪಂದಿರು ಮಾಡಿದ ಅಪರಾಧಗಳನ್ನು ಕ್ಷಮಿಸಿರಿ. ಸಾಧುಗಳು ಪರೋಪಕಾರ ನಿರತರು. ಅವರಲ್ಲಿ ಪ್ರೇಮಗುಣವು ಮುಖ್ಯವಾಗಿ ಇರುವ ಸಾರಸದ್ಗುಣವಾಗಿದೆ.

**ದುರ್ಜನೇಷ್ವಪಿ ಸತ್ವೇಷು ದಯಾಂ ಕುರ್ವಂತಿ ಸಾಧವಃ ।**
**ನ ಹಿ ಸಂಹರತೇ ಜ್ಯೋತ್ಸ್ನಾಂ ಚಂದ್ರ ಶ್ಚಾಂಡಾಲವೇಶ್ಮನಃ ॥**

ಸಾಧುಗಳು ದುಷ್ಟರಾದ ಪ್ರಾಣಿಗಳಲ್ಲಿಯೂ ಸಹ ದಯೆಯನ್ನು ತೋರಿಸುತ್ತಾರೆ. ಚಂದ್ರನು ಚಂಡಾಲನು ದುರ್ವೃತ್ತನಾಗಿದ್ದರೂ ಅವನ ಮನೆಗೆ ಬೆಳದಿಂಗಳನ್ನು ಕೊಡದೇ ಇರುವದಿಲ್ಲ.

**ಬಾಧ್ಯಮಾನೋಽಪಿ ಸುಜನಃ ಸರ್ವೇಷಾಂ ಸುಖಕೃದ್ಭವೇತ್ ॥**
**ದದಾತಿ ಪರಮಾಂ ತುಷ್ಟಿಂ ಭುಜ್ಯಮಾನೋಽ ಮರ್ತ್ಯೈಃ ಶಶೀ ॥**

ಚಂದ್ರನು ದೇವತೆಗಳಿಂದ ಭಕ್ಷಿಸಲ್ಪಟ್ಟಾಗಲೂ ಅವರಿಗೆ ಉತ್ತಮ ಸಂತೋಷ ವನ್ನುಂಟು ಮಾಡುತ್ತಾನೆ. ಅದರಂತೆ ಸಜ್ಜನರು ತಾವು ಬಾಧಿಸಲ್ಪಡುತ್ತಿದ್ದಾಗಲೂ ಸರ್ವರಿಗೂ ಸುಖವನ್ನೇ ಉಂಟು ಮಾಡುತ್ತಾರೆ.

**ದಾರಿತಶ್ಛಿನ್ನ ಏವಾಪಿ ಹ್ಯಾಮೋದೇನೈವ ಚಂದನಃ!**
**ಸೌರಭಂ ಕುರುತೇ ಸರ್ವಂ ತಥೈವ ಸುಜನೋ ಜನಃ**

ಗಂಧದ ಕಟ್ಟಿಗೆಯು ಸೀಳಲ್ಪಟ್ಟು ಚೂರು ಚೂರು ಆದರೂ ತನ್ನನ್ನು ಕಡಿವ ಕೊಡಲಿಯನ್ನು ವಾಸನೆಯುಳ್ಳದ್ದನ್ನಾಗಿ ಮಾಡುತ್ತದೆ. ಅದರಂತೆ ಸಜ್ಜನರೂ ಸಹ ಅಪಕಾರಿಗಳಿಗೂ ಹಿತವನ್ನೇ ಮಾಡುತ್ತಾರೆ.

**ಕ್ಷಾಂತ್ಯಾ ಚ ತಪಸಾಚಾರೈಸ್ಸದ್ಗುಣಜ್ಞಾ ಮುನೀಶ್ವರಾಃ ।**
**ಸಂಜಾತಾಃ ಶಾಸಿತುಂ ಲೋಕಾಂಸ್ತಾನ್ವಿದುಃ ಪುರುಷೋತ್ತಮಾನ್ ॥**

ಯಾವ ಮುನೀಶ್ವರರು ಕ್ಷಮೆ, ತಪ, ಮತ್ತು ಸದಾಚಾರಗಳಿಂದ ಸದ್ಗುಣಗಳನ್ನು ತಿಳಿದು ಲೋಕಗಳನ್ನು ಶಿಕ್ಷಿಸುವದಕ್ಕೆ ಹುಟ್ಟುತ್ತಾರೆಯೋ ಅಂತಹವರನ್ನು ಶ್ರೇಷ್ಠರೆಂದು ತಿಳಿಯುತ್ತಾರೆ.

**ನಮೋ ಬ್ರಹ್ಮನ್ ಮುನೇ ತುಭ್ಯಂ ನಮಸ್ತೇ ಬ್ರಹ್ಮಮೂರ್ತಯೇ ।**
**ನಮೋ ಬ್ರಹ್ಮಣ್ಯ ಶೀಲಾಯ ಬ್ರಹ್ಮಧ್ಯಾನಪರಾಯ ಚ ॥**

ಬ್ರಹ್ಮಜ್ಞಾನಿಯಾದ ಮುನಿಯೇ, ನಿಮಗೆ ನಮಸ್ಕಾರ. ಬ್ರಹ್ಮಮೂರ್ತಿಯೇ ನಿನಗೆ ನಮಸ್ಕಾರ. ಪರಬ್ರಹ್ಮನ ಧ್ಯಾನದಲ್ಲಿಯೇ ಆಸಕ್ತನಾಗಿರುವ ಬ್ರಹ್ಮಣ್ಯಶೀಲರಿಗೆ ನಮಸ್ಕಾರ.'' ಅಂಶುಮಂತನ ಅರ್ಥಗರ್ಭಿತವಾದ ಈ ಸ್ತುತಿಯಿಂದ ಕಪಿಲಮುನಿಯು ಪ್ರಸನ್ನನಾದ. ಪ್ರೀತಿಯಿಂದ ಅವನಿಗೆ ನುಡಿದ. ''ಅಂಶುಮಂತ, ನಾನು ನಿನ್ನ ಮೇಲೆ ಸುಪ್ರಸನ್ನನಾಗಿದ್ದೇನೆ. ವರವನ್ನು ಕೇಳು'' ಎಂದು'' ಅಂಶುಮಂತ ಮಹಾಬುದ್ಧಿವಂತ, ಭಗವಂತನ ಬಾಯಿಂದ ಇಷ್ಟು ಶಬ್ದ ಬರುವದೇ ತಡ. ತಕ್ಷಣವೇ ಮಹಾಮುನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ವಿನಯದಿಂದ ಎರಡೂ ಕೈಗಳನ್ನು ಜೋಡಿಸಿದ 'ಭಗವನ್, ಇಲ್ಲಿ ಸತ್ತುಬಿದ್ದ ಈ ಎಲ್ಲ ನನ್ನ ಪಿತೃಗಳಿಗೂ ಬ್ರಹ್ಮಲೋಕ ಪ್ರಾಪ್ತಿಯಾಗಬೇಕು.' ಎಂದು ಬೇಡಿಕೊಂಡ. ಪರಮಪ್ರೀತನೇ ಆಗಿದ್ದ ಅವನ ಮೇಲೆ ಕಪಿಲಮುನಿ. ಅಂಶುಮಂತನ ಬೇಡಿಕೆಯನ್ನು ನಗುತ್ತಲೇ ಅನುಮೋದಿಸಿದ. 'ತಥಾಸ್ತು' ಎಂದು ನುಡಿದು, ಕರುಣೋನ್ಮುಖನಾಗಿ ಸಂತಸದಿಂದ ನುಡಿದ-

''ಭಕ್ತಾ, ನಿನ್ನ ಮೊಮ್ಮಗನು ನಿನ್ನ ಈ ಎಲ್ಲ ಪಿತೃಗಳನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾನೆ. ಅದಕ್ಕಾಗಿಯೇ ಪುಣ್ಯನದಿಯಾದ ದೇವಗಂಗೆಯನ್ನು ಪಾತಾಳದ ವರೆಗೂ ಕರೆತರುತ್ತಾನೆ ನಿನ್ನ ಆ ಮೊಮ್ಮಗ. ಆ ಗಂಗೆಯ ಪ್ರವಾಹವನ್ನು ಇಲ್ಲಿ ನನ್ನ ಶಾಪದಿಂದ ದಗ್ಧರಾಗಿ ಬಿದ್ದ ಈ ಸಗರಕುಮಾರರ ಮೇಲೆ ಹರಿದು ಬರುವಂತೆ ಮಾಡುತ್ತಾನೆ. ಆ ಪುಣ್ಯ ಪ್ರವಾಹದ ಸ್ಪರ್ಶ ಮಾತ್ರದಿಂದಲೇ ಇವರ ಎಲ್ಲ ಪಾಪಗಳು ಕರಗಿ ಹೋಗುತ್ತವೆ. ಅನಂತರ ಅವರೆಲ್ಲ ದಿವ್ಯ ಪದವನ್ನು ಹೊಂದುವರು. ಈಗ ನೀನು ನಿನ್ನ ಕೆಲಸವನ್ನು ಮಾಡು. ನಿನ್ನ ಅಜ್ಜನಾದ ಸಗರರಾಜನು ಕೈಕೊಂಡ ಅಶ್ವಮೇಧ ಯಾಗವು ಅಪೂರ್ಣವಾಗಿ ಉಳಿದಿದೆ. ಯಜ್ಞವು ಪೂರ್ಣವಾಗದೆ ಉಳಿದರೆ ಲೋಕಕ್ಕೂ ಕರ್ತೃವಿಗೂ ಅನಿಷ್ಟ. ಆದುದರಿಂದ ಮೊದಲು ಈ ಅಶ್ವಮೇಧದ ಕುದುರೆಯನ್ನು ನೀನು ತೆಗೆದು ಕೊಂಡು ಹೋಗು. ಸಗರರಾಜನಿಗೆ ಒಪ್ಪಿಸು. ಅವನು ಯಜ್ಞ ಪೂರ್ಣಮಾಡಲಿ.'' ಕಪಿಲ ಮುನಿಯ ಆದೇಶದಂತೆ ಅಂಶುಮಂತನು ಯಜ್ಞಾಶ್ವವನ್ನು ತೆಗೆದುಕೊಂಡು ಭೂಲೋಕಕ್ಕೆ ಬಂದನು. ಯಜ್ಞದೀಕ್ಷಿತನಾದ ಸಗರರಾಜನಿಗೆ ಸಾದ್ಯಂತ ವೃತ್ತಾಂತ ನಿರೂಪಿಸಿದನು. ಕಪಿಲ ದೇವರ ಸಂದೇಶವನ್ನೂ ಅರುಹಿದನು. ಅದರಂತೆ ಆ ಮಹಾರಾಜನು ಅಶ್ವಮೇಧ ಕುದುರೆಯನ್ನು ಪಡೆದು ಅರ್ಥಕ್ಕೆ ನಿಂತ ತನ್ನ ಅಶ್ವಮೇಧ ಯಾಗವನ್ನು ಪೂರ್ತಿಗೊಳಿಸಿದನು. ಅನಂತರ ಉಗ್ರ ತಪಸ್ಸು ಮಾಡಿ ಶ್ರೀ ಹರಿಯನ್ನು ಆರಾಧಿಸಿ ಅವನ ಅನುಗ್ರಹದ ಬಲದಿಂದ ದಿವ್ಯವಾದ ವೈಕುಂಠ ಲೋಕ ಪಡೆದನು. ಸಗರರಾಜನ ಅನಂತರ ಅಂಶುಮಂತನು

ಪಟ್ಟಾಭಿಷಿಕ್ತನಾದನು. ಅವನ ಮಗನೇ ಪುರಾಣಪ್ರಸಿದ್ಧನಾದ ದಿಲೀಪ. ಭಗೀರಥ ಈ ದಿಲೀಪ ಮಹಾರಾಜನ ಮಗ. ಸ್ವರ್ಗಲೋಕದಿಂದ ಭೂಲೋಕ ಹಾಗೂ ಪಾತಾಳ ಲೋಕಕ್ಕೂ ಗಂಗಾ ನದಿಯನ್ನು ಕರೆದು ತಂದ ಪುಣ್ಯಾತ್ಮ ಇದೇ ಭಗೀರಥ. ಈ ಭಗೀರಥನ ಬೆಂಬತ್ತಿ ಬಂದಿದ್ದರಿಂದ ದೇವಗಂಗೆಗೆ ಭಾಗೀರಥಿ ಎಂದು ಹೆಸರು ಬಂದಿತು. ಈ ಭಗೀರಥನ ವಂಶದಲ್ಲಿ ಸುದಾಸ ಎಂಬ ರಾಜನು ಪ್ರಸಿದ್ಧನಾದನು. ಅವನ ಪುತ್ರ ಮಿತ್ರಸಹ. ಮೂರು ಲೋಕದಲ್ಲಿ ಇವನ ಪ್ರಸಿದ್ಧಿ. ಈ ಮಿತ್ರಸಹ ರಾಕ್ಷಸಜನ್ಮ ಪಡೆಯ ಬೇಕಾಯಿತು. ಕಾರಣ ವಶಿಷ್ಠ ಋಷಿಗಳ ಶಾಪ. ಆದರೆ ಆ ವಂಶದಲ್ಲಿ ಹುಟ್ಟಿದವರಿಗೆ ಉದ್ಧಾರದ ಸುಲಭೋಪಾಯ ದೊರತೇ ಇತ್ತು. ಸುದಾಸನು ರಾಕ್ಷಸನಾದರೂ ಗಂಗಾ ಜಲದ ಹನಿಗಳಿಂದ ಅಭಿಷೇಕ ಮಾಡಿಕೊಂಡು ಆ ರಾಕ್ಷಸ ಜನ್ಮದಿಂದ ಮುಕ್ತನಾದನು.

ನಾರದ ಮಹಾಪುರಾಣದಲ್ಲಿ ಎಂಟನೇಯ ಅಧ್ಯಾಯ ಮುಗಿದುದು

## ಸೌದಾಸ, ಮದಯಂತಿ, ಕಲ್ಮಾಷಪಾದ, ಬ್ರಹ್ಮರಾಕ್ಷಸನ, ಪಿಶಾಚಿಯರ ವಿಚಿತ್ರ ಚರಿತ್ರಗಳು. ಗಂಗಾ ಜಲದಿಂದ ಎಲ್ಲರ ಉದ್ಧಾರ.

ಅಧ್ಯಾಯ - ೯

**ನಾರದ :-** ಮುನಿವರ್ಯರೆ, ಮಿತ್ರಸಹ ಮಹಾರಾಜನು ವಶಿಷ್ಠರಿಂದ ಶಪಿತನಾದನೆಂದು ಹೇಳಿದಿರಲ್ಲವೇ? ಇದು ಅತ್ಯಾಶ್ಚರ್ಯ. ವಶಿಷ್ಠರು ಕೋಪಿಷ್ಠರಲ್ಲ. ಮಿತ್ರಸಹನು ಬ್ರಹ್ಮದ್ವೇಷಿಯಲ್ಲ. ಅಂದಬಳಿಕ ಈ ಕೋಪ ಶಾಪ ಪ್ರಸಂಗಗಳು ಬರಲು ಕಾರಣವೇನು? ಅನಂತರ ಆ ಮಂದಾಕಿನಿಯಲ್ಲಿ ಮಿಂದ ಮಾತ್ರಕ್ಕೆ ಅವರಿಗೆ ಉದ್ಧಾರವಾದುದೆಂತು? ಇದೆಲ್ಲವನ್ನೂ ತಾವು ನನಗೆ ಹೇಳಬೇಕು. ಗಂಗೆಯ ಆಖ್ಯಾನವು ಹೇಳುವವರಿಗೆ ಪುಣ್ಯ, ಕೇಳುವವರಿಗೆ ಹಿತ, ಉಭಯತರಿಗೂ ಮಂಗಲ.

**ಸನಕ:-** ನಾರದ, ನೀನು ಹೇಳಿದ್ದೂ ಯಥಾರ್ಥವೇ! ಸೌದಾಸ ಎಂದು ಹಿಂದೆ ಪ್ರಸಿದ್ಧನಾದ ಮಹಾರಾಜನು ಎಲ್ಲ ಧರ್ಮದ ಮರ್ಮ ಬಲ್ಲವ. ಗುಣವಂತ. ಶುಚಿರ್ಭೂತ. ಮೇಲೆ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸುತ್ತಿದ್ದ. ಹಾಗೂ ರಂಜಿಸುತ್ತಿದ್ದ. ಹಿಂದೆ ಸಗರರಾಜನು ಕಡಲ ನಾರೆವರೆಗಿನ ಈ ಧರಣೀಮಂಡಲವನ್ನು ಧರ್ಮಾನುಸಾರವಾಗಿ ರಕ್ಷಿಸುತ್ತಿದ್ದಿಲ್ಲವೇ? ಅವನ ವಂಶದಲ್ಲಿ ಹುಟ್ಟಿದ ಈ ಸೌದಾಸನೂ ಹಾಗೇ ಧರ್ಮನಿಷ್ಠನಾಗಿ ಪೃಥ್ವೀಪಾಲನ ಮಾಡುತ್ತಿದ್ದ. ಅವನು ಆಳಿದ್ದೂ ಸ್ವಲ್ಪ ವರ್ಷವಲ್ಲ, ಮೂವತ್ತು ಸಾವಿರ ವರ್ಷ. ನವಯುವಕನಾಗಿಯೇ ಮೇದಿನೀ ಮಂಡಲವನ್ನೆಲ್ಲ ಧರ್ಮದಿಂದ ಆಳಿದ ಪುಣ್ಯ ಪ್ರಭು ಆ ಸೌದಾಸ. ಅವನಿಗೆ ಯಾವ ಐಶ್ವರ್ಯಕ್ಕೂ ಕೊರತೆ ಇರಲಿಲ್ಲ. ಸಂತಾನ ಸಂಪತ್ತು ಸರ್ವೈಶ್ವರ್ಯ, ಸರ್ವಾಧಿಕಾರ, ಸಮೃದ್ಧವಾಗಿ ಆ ಸೌದಾಸ ಮಹಾರಾಜನಿಗಿತ್ತು.

ಆ ರಾಜನಿಗೆ ಒಂದು ವ್ಯಸನವಿದ್ದಿತು.- ಬೇಟೆ ಆಡುವದು. ಅದಕ್ಕಾಗಿ ಸೈನ್ಯ ಪರಿವಾರ ಸಮೇತವಾಗಿ ಕಾಡಿನಲ್ಲಿ ಅಂಡಲೆಯುತ್ತಿದ್ದ. ಕಣ್ಣಿಗೆ ಕಂಡ ಕ್ರೂರಪಶುಗಳನ್ನು ತುಂಡರಿಸಿ ಜನರು, ದನಗಳು ನಿರ್ಭಯವಾಗಿ ತಿರುಗಾಡುವಂತೆ ಮಾಡುತ್ತಿದ್ದ.

ಒಂದು ದಿನ ಕಾಡು ಕಿರಾತರೊಂದಿಗೆ ಒಡಗೂಡಿ ಅವನು ಬೇಟೆಗಾಗಿ ರೇವಾ ನದಿಯ ತಡೆಯಲ್ಲಿರುವ ನಿಬಿಡಾರಣ್ಯದಲ್ಲಿ ತಿರುಗಾಡುತ್ತಿದ್ದ. ಬೇಟೆಯ ಬಳಲಿಕೆಯಿಂದ ಬಾಯಾರಿಕೆ ಆಯಿತು ಆ ಮಹಾರಾಜನಿಗೆ. ಆದರೂ ಅವನು ಧರ್ಮನಿಷ್ಠ ದೊರೆ. ಸ್ನಾನ ಮಾಡದೇ ಏನನ್ನೂ ತಿನ್ನುತ್ತಿರಲಿಲ್ಲ. ಆ ಕಾಡಿನಲ್ಲಿ ಹರಿಯುವ ರೇವಾನದಿಯಲ್ಲಿ ಸ್ನಾನ ಮಾಡಿದ. ಸ್ನಾನ ಮಾಡಿ ಪೂಜೆ ಪೂರೈಸಿದ. ಅನಂತರ ನೀರು ಕುಡಿದು ಬಾಯಾರಿಕೆ ಹಿಂಗಿಸಿಕೊಂಡು ಊಟಮಾಡಿದ ಬಳಿಕ ಹಸಿವೆಯ ಕಸಿವಿಸಿ ಶಾಂತವಾಯಿತು. ಪ್ರಶಾಂತವೆನಿಸಿತು ಆ ಏಕಾಂತ ಅರಣ್ಯ. ರಾತ್ರಿ ಅಲ್ಲಿಯೆ ಉಳಿದುಕೊಂಡ. ಮರುದಿನ ಅರುಣೋದಯಕ್ಕೆ ಎದ್ದು ದೇವರಿಗೆ ವಂದಿಸಿ ರೇವಾ ನದಿಯ ಪುಣ್ಯೋದಕದಲ್ಲಿ ಮಿಂದು ಸಂಧ್ಯಾವಂದನೆ ಮುಂತಾದ ತನ್ನ ಆಹ್ನಿಕ ಮುಗಿಸಿದ. ಮಂತ್ರಿ ಸೇನಾಪತಿಗಳೊಂದಿಗೆ ನರ್ಮದಾನದಿಯ ತೀರದ ಗುಂಟ ಬೆಳೆದ ಗೊಂಡಾರಣ್ಯದಲ್ಲಿ ಕಾಡು ಮಿಕಗಳನ್ನು ಹುಡುಕುತ್ತ ಅಲೆದಾಡಿದ. ವನದಿಂದ, ವನಕ್ಕೆ ದರಿಯಿಂದ ಕೊರೆಗೆ, ಕೊರೆಯಿಂದ ಗವಿಗೆ ಕ್ರೂರ ಶ್ವಾಪದಗಳನ್ನು ಎದುರಿಸಿ ಕೊಂದು ಹಾಕಿದ. ಹೀಗೆ ತನ್ನ ಬೇಟೆಯ ಹವ್ಯಾಸವನ್ನು ಮುಗಿಸಿಕೊಂಡು ಮರಳಬೇಕೆನ್ನುವಾಗ ಅವನಿಗೆ ದೂರದಿಂದ ಒಂದು ಗುಹೆಯಲ್ಲಿ ಎರಡು ಹುಲಿಗಳು ಇದ್ದ ವಾಸನೆ ಬಡಿಯಿತು. ಕೂಡಲೇ ಮಹಾರಾಜನು ಕುದುರೆ ಏರಿ ಸೈನ್ಯವನ್ನು ದೂರಬಿಟ್ಟು ಹುಲಿಯ ಗುಹೆಯ ಒಳಗೆ ಹೋದ. ಅಲ್ಲಿ ಅವನಿಗೆ ಒಂದು ಆಶ್ಚರ್ಯದ ದೃಶ್ಯ ಕಾದಿತ್ತು. ಆ ಹುಲಿ ದಂಪತಿಗಳು ತಮ್ಮ ಗುಹೆಯ ಅಂಗಣದಲ್ಲಿ ಸ್ವಚ್ಛಂದ ವಿಹಾರ ನಡೆಸಿದ್ದವು. ಕಾಮ ಕೇಳಿಯಲ್ಲಿದ್ದ ಆ ಎರಡೂ ಹೆಬ್ಬುಲಿಗಳನ್ನು ಕಂಡು ಮಹಾರಾಜನು ಅವುಗಳ ಎದುರಿಗೆ ನಿಂತು ಅಬ್ಬರಿಸಿ ಧನುಷ್ಟಂಕಾರ ಮಾಡಿದ. ಬಿಲ್ಲಿಗೆ ಬಾಣಹೂಡಿ ಹೆಣ್ಣು ಹುಲಿಗೆ ಗುರಿಯಿಟ್ಟ. ಅದೇ ಕ್ಷಣದಲ್ಲಿ ಆ ಹೆಣ್ಣು ಹುಲಿ ನೆಲಕ್ಕುರಿಳಿತು. ಕೂಡಲೇ ಅದು ತನ್ನ ನಿಜ ರೂಪ ಹೊಂದಿ ಪ್ರಳಯ ಮೇಘದಂತೆ ಘೋರ ಧ್ವನಿಗೈಯುತ್ತ, ರಾಕ್ಷಸೀ ರೂಪದಿಂದ ನೆಲಕ್ಕೆ ಹೊರಳಿತು. ಮೂವತ್ತು ಯೋಜನೆ ದೀರ್ಘವಾಗಿದ್ದಿತು. ಅದರ ದೇಹ. ಅದರ ಭೀಕರ ಆಕಾರವು ರಾಕ್ಷಸರೂಪದಲ್ಲಿ ಬಹಳ ವಿಕಾರಗೊಂಡಿತ್ತು. ಕೆಟ್ಟ ಧ್ವನಿಯಿಂದ ಚೀರುತ್ತ ಆ ರಾಕ್ಷಸಿಯು ಸೌದಾಸನ ಬಾಣ ಪ್ರಹಾರದಿಂದ ಪ್ರಾಣ ಬಿಟ್ಟಿತು. ಹುಲಿಯ ರೂಪದಲ್ಲಿದ್ದ ಗಂಡು ರಾಕ್ಷಸವು ಸತ್ತು ಬಿದ್ದ ತನ್ನ ಪ್ರೇಯಸಿಯನ್ನು ಕಂಡು ದುಃಖ ಸಂತಪ್ತವಾಯಿತು. ಆದರೆ ಮಹಾರಾಜನ ಭೀಕರ ಬಿಲ್ಲಿನ ಝೇಂಕಾರ ಕೇಳಿಯೇ ಅದರ ಎದೆ ಒಡೆದು ಹೇಗಿತ್ತು ಈಗ ಈ ಮಹಾರಾಜನ ಮೇಲೆ ಎರಗಿದರೆ ನನಗೂ ನನ್ನ ಹೆಂಡತಿಯ ಗತಿಯೇ ನಿಶ್ಚಿತವಾಗಿ ಆಗುವದೆಂದು ತಿಳಿಯಿತು ಆ ಹೆಬ್ಬುಲಿಗೆ. ಆದುದರಿಂದ ಆ ಹುಲಿಯು ಪ್ರತೀಕಾರಕ್ಕೇ ಹೋಗದೇ ಅಲ್ಲಿಯೇ ಆಗಲೇ ಅದೃಶ್ಯವಾಯಿತು. ರಾಜನಿಗೂ ಬಹಳ ಭಯವಾಯಿತು. ರಾಕ್ಷಸರೂಪದ ಎರಡು ಹುಲಿಗಳಲ್ಲಿ ಒಂದು ತಾನು ಹೊಡೆದ ಕೂಡಲೇ ಇನ್ನೊಂದು ಹೆಬ್ಬುಲಿ ತನ್ನನ್ನು ಹಿಂಸಿಸದೇ ಒಮ್ಮೆಲೆ ಅಂತರ್ಧಾನವಾಯಿತು. ಇದೆಲ್ಲವನ್ನು ನೋಡಿ ಮುಂದೆ ತನಗೆ ಏನೋ ಭಯ ಕಾದಿದೆ ಎಂದು ತಳಮಳಿಸಿತು ಅವನ ಹೃದಯ. ಈ ಸಮಾಚಾರವನ್ನೆಲ್ಲ ತಿಳಿಸಿದ ತನ್ನ ಮಂತ್ರಿಪರಿವಾರಕ್ಕೆ ತಿರುಗಿ ಊರಿಗೆ ಮರಳಿದ. ಹೆಂಡತಿಯನ್ನು ಕಳೆದುಕೊಂಡ ಆ ರಕ್ಕಸನು ತನಗೆ ಏನು ಮಾಡುವನೋ ಎಂಬ ಹೆದರಿಕೆ ಭಯ ಭ್ರಾಂತನನ್ನಾಗಿ ಮಾಡಿತ್ತು ಆ ಮಹಾರಾಜನನ್ನು ಅಂದಿನಿಂದ ಬೇಟೆಯಾಡುವದನ್ನೇ ಬಿಟ್ಟ ಆ ದೊರೆ. ಎಷ್ಟೋ ವರ್ಷಗಳು ಕಳೆದವು. ಹುಲಿ ದಂಪತಿಗಳು ಕ್ರೀಡೆಯಾಡುವಾಗ

ಹೆಣ್ಣು ಹುಲಿಯನ್ನು ಹೊಡೆದು ಸಾಯಿಸಿದ ಪ್ರಕರಣ ಮರೆತಂತಾಗಿತ್ತು ಮಹಾರಾಜನಿಗೆ. ತನ್ನ ಹಿಂದಿನ ರಾಜ ಮಹಾರಾಜರಂತೆ ಧಾರ್ಮಿಕನಾದ ಈ ಸೌದಾಸನಾದರೂ ಯಜ್ಞಯಾಗಗಳನ್ನು ಮಾಡಿದ, ಕೆರೆಕಾಲುವೆ ಗಳನ್ನು ತೋಡಿಸಿದ, ಅನ್ನ ಛತ್ರ, ಅರವಟ್ಟಿಗೆ ಇಡಿಸಿದನು. ಗುಡಿ ಛತ್ರಗಳನ್ನು ಕಟ್ಟಿಸಿದ. ಕೊನೆಗೆ ಅಶ್ವಮೇಧವೆಂಬ ದೊಡ್ಡ ಯಜ್ಞವನ್ನು ಪ್ರಾರಂಭಿಸಿದ. ವಶಿಷ್ಠಾದಿ ಮುನಿಗಳು ಹೇಗೂ ಅವನ ಬೆಂಬಲಕ್ಕಿದ್ದು ಧೈರ್ಯಕೊಟ್ಟರು. ದೇಶದ ಎಲ್ಲ ಸಾಮಂತ ಭೂಪಾಲರು ಸಹಕಾರ ನೀಡಿದರು. ಋತ್ವಿಜರು, ಪುರೋಹಿತರು ಅನುಗ್ರಹ ಮಾಡಿದರು. ಇದರಿಂದ ಸೌದಾಸನ ಅಶ್ವಮೇಧಯಾಗವು ನಿರ್ವಿಘ್ನವಾಗಿ ನೆರವೇರಿತು. ಬ್ರಹ್ಮಾದಿ ದೇವತೆಗಳಿಗೂ ಮಂತ್ರೋಚ್ಚಾರ ಪೂರ್ವಕವಾಗಿ ಹವಿಸ್ಸನ್ನು ನೀಡಿದ. ಕೊನೆಗೆ ಅವಭೃಥಸ್ನಾನ ಮಾಡಿದ. ಯಜ್ಞಕಾರ್ಯ ನಿರಾತಂಕವಾಗಿ ಕೊನೆಗೊಂಡಿತು. ಕಡೆಯ ದಿನ ವಶಿಷ್ಠರು ಸ್ನಾನಕ್ಕಾಗಿ ನದಿಗೆ ಹೋಗಿದ್ದರು.

ಆಗ ಒಂದು ದುರ್ಘಟನೆ ನಡೆಯಿತು. ಬಹಳ ವರ್ಷಗಳ ಹಿಂದೆ ಈ ಮಿತ್ರಸಹ ಮಹಾರಾಜನು ಬೇಟೆಯ ಆಟದಲ್ಲಿ ಹೆಣ್ಣು ಹುಲಿಯನ್ನು ಕೊಂದಿದ್ದ. ಗಂಡು ಹುಲಿಯ ವೇಷದ ರಾಕ್ಷಸನು ಓಡಿ ಹೋಗಿದ್ದನಷ್ಟೇ! ಅದರ ಸೇಡು ತೀರಿಸಿಕೊಳ್ಳಲು ಆ ದೈತ್ಯನು ಬಹುಕಾಲದಿಂದ ಹೊಂಚು ಹಾಕಿ ಕುಳಿತಿದ್ದನು, ಇದೇ ಯೋಗ್ಯಸಮಯವೆಂದು ಅವನಿಗೆ ಎನಿಸಿತು. ಅವನು ವಶಿಷ್ಠರ ವೇಷದಿಂದ ಅರಮನೆಗೆ ಬಂದ ಮಹಾರಾಜನನ್ನು ಕರೆಸಿ 'ಇಂದು ನಮಗೆ ಇಚ್ಛಾ ಭೋಜನವಾಗಬೇಕು.'' ಎಂದು ಆಜ್ಞೆ ಮಾಡಿದ. ''ಆಗಲಿ ಸ್ವಾಮಿ. ಅದಕ್ಕೇನು! ನಿಮಗೆ ಏನು ಅಪೇಕ್ಷೆ ಇದೆ ತಿಳಿಸಿರಿ. ನೀವು ಬಯಸಿದ ಮೃಷ್ಟಾನ್ನ ಭೋಜನ ಮಾಡಿಸುತ್ತೇನೆ.'' ಎಂದ.

ರಾಜನ್, ಇಂದೇಕೋ ನನಗೆ ಮಾಂಸ ಭೋಜನ ಮಾಡಬೇಕೆಂದು ಇಚ್ಛೆ ಆಗಿದೆ. ಬೇಗ ಮಾಡಿಸು. ನಾನೀಗಲೇ ಸ್ನಾನ ಮಾಡಿಕೊಂಡು ಪೂಜೆ ಮುಗಿಸಿಕೊಂಡು ಬರುವೆ'' ಎಂದು ಹೇಳಿ. ಆ ವಶಿಷ್ಠ ವೇಷದ ದೈತ್ಯ ನದಿ ಕಡೆಗೆ ನಡೆದ. ಮಹಾರಾಜನಿಗೆ ದಿಗ್‌ಭ್ರಮೆ ಆಯಿತು. ಸಾಕ್ಷಾತ್ ವಶಿಷ್ಠರೇ ತಮ್ಮ ಕಂಠದಿಂದ ಮಾಂಸಭೋಜನ ವಾಗಬೇಕು' ಎಂದು ಹೇಳಿದ್ದು ಅವನಿಗೆ ತಬ್ಬಿಬ್ಬಾಯಿತು. ಆದರೆ ಅವರೇ ಹೇಳಿದ್ದರಿಂದ ವಿಧಿ ಇಲ್ಲದೆ ಮಾಂಸದ ಅಡಿಗೆ ಮಾಡಿಸಲೇ ಬೇಕಾಯಿತು. ಆದರೆ ಅಂಥ ಮಾಂಸದ ಪಾಕವನ್ನು ಮಾಡುವವರು ಯಾರು? ಅವನಿಗಾಗಲಿ, ಅವನ ಹೆಂಡತಿಗಾಗಲಿ ಮದ್ಯಮಾಂಸವನ್ನು ಮುಟ್ಟಿಯೂ ಗೊತ್ತಿಲ್ಲ. ಮೂಸಿಯೂ ಗೊತ್ತಿಲ್ಲ ಮಾಡುವದಂತೂ ದೂರವೇ ಉಳಿಯಿತು. ಅವನ ಮನೆಯ ಅರಮನೆಯ ಅಡಿಗೆಯವರಿಗೆ ಈ ಮಾಂಸಪಾಕ ಅಪರಿಚಿತ. ಏನು ಮಾಡುವದು? ಎಂದು ಮಹಾರಾಜನು ಚಿಂತಿಸುತ್ತ ಕುಳಿತುಕೊಂಡ. ಅಷ್ಟರಲ್ಲಿ ಅದೇ ರಾಕ್ಷಸನು ಅಡಿಗೆಯವನ ವೇಷಹಾಕಿಕೊಂಡು ಅರಮನೆಗೆ ಬಂದನು. ತನಗೆ ಎಲ್ಲ ತರಹದ ಅಡಿಗೆ ಬರುತ್ತದೆ ಎಂದು ಹೇಳಿ ಮಾಂಸದ ಅಡಿಗೆಯನ್ನು ಬೇಯಿಸಿ ತಯಾರು ಮಾಡಿದನು. ಬಂಗಾರದ ಪಾತ್ರೆಯಲ್ಲಿ ಆ ಮಾಂಸ ಭೋಜನ ಇರಿಸಿ ಮಹಾರಾಜನಿಗೆ ತಂದು ಒಪ್ಪಿಸಿದನು. ಸೌದಾಸನು ವಶಿಷ್ಠರ ಆಗಮನವನ್ನು ಕಾಯುತ್ತ ಕುಳಿತನು. ಅವರ ಸ್ನಾನಾಹ್ನಿಕ ಮುಗಿಸಿಕೊಂಡು ಬಂದ ಕೂಡಲೇ ವಿನಯದಿಂದ ಬಂಗಾರದ ತಾಟಿನಲ್ಲಿ ಆಮಿಷ ಪಾಕಪದಾರ್ಥಗಳನ್ನು ತಂದು ಮುಂದುವರಿಸಿದನು. ಅದನ್ನು ನೋಡಿದ ಕೂಡಲೇ ವಶಿಷ್ಠರಿಗೆ ಆಶ್ಚರ್ಯವಾಯಿತು. ಬ್ರಹ್ಮಾಂಡ ಕೋಪವೂ ಬಂದಿತು. ಸಿಟ್ಟಿನಿಂದ ಸಿಡಿದೆದ್ದು

ಗುಡುಗಿದರು. 'ರಾಜನೆ, ಮನುಷ್ಯ ಮಾಂಸವನ್ನು ತಂದು ನಮ್ಮಂಥವರಿಗೆ ನೀನು ಬಡಿಸಿರುವಿ. ಇಂತಹ ಘೋರ ಕೃತ್ಯವನ್ನು ನೀನು ಎಸಗಿದ್ದರಿಂದ ಈ ಮನುಷ್ಯ ಮಾಂಸವೇ ನಿನಗೆ ಭೋಜನವಾಗಲಿ. ನೀನು ರಾಕ್ಷಸನಾಗಿ ನರಮಾಂಸವನ್ನು ಭಕ್ಷಿಸು.'' ಎಂದು ಶಾಪವಿತ್ತರು. ಸೌದಾಸನು ಭಯಭ್ರಾಂತನಾಗಿ ನಡುಗುತ್ತ ನಿಂತುಕೊಂಡ. ಹೆದರಿದರೂ ಧೈರ್ಯ ತಂದುಕೊಂಡು 'ಮಾನ್ಯರೆ, ಮಾಂಸ ಭೋಜನವಾಗಲಿ ಎಂದು ನೀವೇ ಬಂದು ಆದೇಶ ನೀಡಲಿಲ್ಲವೆ? ನಿಮ್ಮ ಆಜ್ಞೆಯಂತೆ ನಾನು ಮಾಂಸಾಶನ ತಯಾರಿಸಿ ಬಡಿಸಿದ್ದೇನೆ. ಇದರಲ್ಲಿ ನನ್ನದೇನು ತಪ್ಪಿದೆ? ಎಂದು ಕೇಳಿದನು.

ಆಗ ವಶಿಷ್ಠರು ನಿಬ್ಬೆರಗಾಗಿ, ಪ್ರಣಿಧಾನದಿಂದ ಕಣ್ಣು ಮುಚ್ಚಿ ಸಮಾಧಿಯಿಂದ ತಿಳಿದು ನೋಡಿದರು. ಅವರಿಗೆಲ್ಲವೂ ಅರ್ಥವಾಯಿತು. ಮಹಾರಾಜನು ಕೊಂದ ಹೆಣ್ಣು ಹುಲಿಯ ಗಂಡನಾದ ಆ ರಾಕ್ಷಸನು ಈ ರೀತಿಯಾಗಿ ಮಹಾರಾಜನ ಮೇಲೆ ಸೇಡುತೀರಿಸಿ ಕೊಂಡಿದ್ದಾನೆ ಎಂಬುದು ನಿಶ್ಚಯವಾಯಿತು. ಅವರು ಹಾಗೆ ಮೌನವಾಗಿ ಕುಳಿತು ಕೊಂಡದ್ದನ್ನು ಕಂಡು ಮಹಾರಾಜನಿಗೆ ಕೋಪ ಕೆರಳಿತು. ನಿರಪರಾಧಿಯಾದ ತನಗೆ ನರಮಾಂಸ ತಿನ್ನುವ ರಾಕ್ಷಸನಾಗು' ಎಂದು ಶಾಪಕೊಟ್ಟ ವಶಿಷ್ಠರಿಗೇ ಪ್ರತಿಶಾಪ ಕೊಡಲು ಅವನು ಉದ್ಯುಕ್ತನಾದನು. ಕೈಯಲ್ಲಿ ನೀರು ತೆಗೆದುಕೊಂಡು ಅಭಿಮಂತ್ರಣಮಾಡಿ ಆ ಶಾಪಜಲವನ್ನು ವಶಿಷ್ಠರ ಮೇಲೆ ಪ್ರೋಕ್ಷಿಸ ಹೊರಟನು. ಅಷ್ಟರಲ್ಲಿ ಅವನ ಪತ್ನಿಯಾದ ಮದಯಂತಿಯು ಗಂಡನ ಕೈಯನ್ನು ಶಾಪಜಲ ಪ್ರೋಕ್ಷಿಸದಂತೆ ಗಟ್ಟಿಯಾಗಿ ಹಿಡಿದು ಪತಿಯನ್ನು ತಡೆದಳು. 'ಕ್ಷತ್ರಿಯೋತ್ತಮನಾದ ಪ್ರಭು, ಶಾಂತರಾಗಿರಿ. ಕೋಪವನ್ನು ಬಿಡಿರಿ. ಹಿಂದೆ ಮಾಡಿದ ಕರ್ಮದ ಫಲವನ್ನು ಅನುಭವಿಸಲೇಬೇಕು.

**ಗುರುಂ ತ್ವಂಕೃತ್ಯ ಹುಂಕೃತ್ಯ ಯೋ ವದೇನ್ಮೂಢಧೀರ್ನರಃ ।**
**ಅರಣ್ಯೇ ನಿರ್ಜಲೇ ದೇಶೇ ಸ ಭವೇದ್ಬ್ರಹ್ಮರಾಕ್ಷಸಃ ॥**

ಗುರುಗಳನ್ನು 'ನೀನು ತಾನು' ಎಂದು ಏಕವಚನದಲ್ಲಿ ಪ್ರಯೋಗಿಸಿ, ಹುಂಕಾರದಿಂದ ಧಿಕ್ಕರಿಸಿ ಮಾತನಾಡುವ ಮೂರ್ಖನು ನೀರಿಲ್ಲದ ಅಡವಿಯಲ್ಲಿ ಬ್ರಹ್ಮರಾಕ್ಷಸನಾಗಿ ಜನಿಸುವನು. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ಕೋಪವನ್ನು ಗೆದ್ದು ಗುರು ಸೇವೆ ಮಾಡುವವರು, ಬ್ರಹ್ಮಲೋಕಕ್ಕೆ ಹೋಗುವರು, ಎಂದು ಶಾಸ್ತ್ರಗಳ ನಿರ್ಣಯ. ಆದುದರಿಂದ ಗುರುಗಳ ಬಗ್ಗೆ ಸಿಟ್ಟನ್ನು ಬಿಟ್ಟು, ಈ ಶಾಪ ಜಲವನ್ನು ಅವರ ಮೇಲೆ ಹಾಕದೆ ಕ್ಷಮೆ ಕೇಳಿರಿ''

ಮದಯಂತಿಯ ಮಾತು ಕೇಳಿ ಮಹಾರಾಜನ ಕೋಪ ಶಾಂತವಾಗಿ ವಿವೇಕ ಉದಯವಾಯಿತು. ಸಕಾಲಕ್ಕೆ ಮಡದಿ ತನ್ನನ್ನು ಎಚ್ಚರಿಸಿದ್ದಕ್ಕಾಗಿ ಅವಳನ್ನು ಅಭಿನಂದಿಸಿದನು. ಆದರೆ ಶಾಪವನ್ನು ಕೊಡಬೇಕು ಎಂದು ಅಭಿಮಂತ್ರಿಸಿದ ಈ ನೀರನ್ನು ಎಲ್ಲಿ ಚೆಲ್ಲಬೇಕು? ಎಂದು ತಾನೆ ಯೋಚಿಸಿದ. ''ಈ ಅಭಿಮಂತ್ರಿತ ಶಾಪೋದಕವು ಎಲ್ಲಿ ಬಿದ್ದರೂ ಆ ವಸ್ತು ಸುಟ್ಟು ಬೂದಿಯಾಗುವದು. ಇದು ನಿಶ್ಚಯ'' ಎಂದು ತಿಳಿದು ಆ ನೀರನ್ನು ತನ್ನ ಕಾಲಮೇಲೆ ಹಾಕಿಕೊಂಡನು. ಆ ಶಾಪಾಂಬು ರಾಜನ ಸ್ವಂತ ಕಾಲುಗಳ ಮೇಲೆ ಬಿದ್ದ ಕೂಡಲೇ ಅವನ ಎರಡೂ ಕಾಲುಗಳು ಸುಟ್ಟು ಕರಕಾದಂತೆ ಕಪ್ಪಾದವು. ಆದರಿಂದ ಅವನಿಗೆ **ಕಲ್ಮಾಷಪಾದ** ಎಂದು ಹೆಸರು ಬಂದಿತು, ಮದಯಂತೀದೇವಿಯು ಅಂದು ಪತಿಯನ್ನು ಮೃದುನುಡಿಗಳಿಂದ ಸಂತೈಸಿದಳು. ನಂತರ ಮಹಾರಾಜನು ಅಂಜುತ್ತ ವಶಿಷ್ಠರ ಬಳಿಗೆ ಬಂದು

ಅವರ ಎರಡೂ ಕಾಲುಗಳನ್ನು ಹಿಡಿದು ನಮಸ್ಕರಿಸಿ ಬೇಡಿಕೊಂಡ. ''ಗುರುಗಳೇ ಕ್ಷಮಿಸಿರಿ, ನಾನು ನಿಮಗೆ ಶರಣು ಬಂದಿದ್ದೇನೆ. ವಾಸ್ತವಿಕವಾಗಿ ನಾನು ಏನೂ ಅಪರಾಧ ಮಾಡಿಲ್ಲ. ನನಗೆ ನೀವು ಎಂತಹ ಭೀಕರವಾದ ಶಾಪಕೊಟ್ಟು ಬಿಟ್ಟಿರಿ. ಆದರಿಂದ ಅತಿಕೋಪದಿಂದ ನಾನು ವಿವೇಕವನ್ನು ಕಳೆದುಕೊಂಡು ತಮ್ಮನ್ನೇ ಶಪಿಸಲು ಹೊರಟಿದ್ದೆ. ಈ ನನ್ನ ಮಹಾಪರಾಧವನ್ನು ತಾವು ದಯಮಾಡಿ ಕ್ಷಮಿಸಬೇಕು.'' ಮಹಾರಾಜನ ಈ ಪಶ್ಚಾತ್ತಾಪದ ನುಡಿಯನ್ನು ಕೇಳಿ ವಶಿಷ್ಠರಿಗೂ ಬಹಳ ದುಃಖವಾಯಿತು. ಅವರೂ ಕೂಡ ದೀರ್ಘವಾದ ನಿಟ್ಟುಸಿರು ಬಿಟ್ಟರು. ಅವಿವೇಕರಂತೆ ವರ್ತಿಸಿದ ತಮ್ಮನ್ನು ತಾವೇ ಹಳಿದುಕೊಂಡರು.

ಅವಿವೇಕೋ ಹಿ ಸರ್ವಾಸಾಮಾಪದಾಂ ಪರಮಂ ಪದಂ ।
ವಿವೇಕರಹಿತೋ ಲೋಕೇ ಪಶುರೇವ ನ ಸಂಶಯಃ ॥

ಎಲ್ಲ ಕುತ್ತು, ಆಪತ್ತುಗಳಿಗೂ ಅವಿವೇಕವೇ ಕಾರಣ. ವಿವೇಕರಹಿತ ಮನುಷ್ಯನು ಈ ಲೋಕದಲ್ಲಿ ಪಶುವೇ ಸರಿ. ಪಾಪ, ರಾಜನು ತಿಳಿಯದೇ ಈ ಕೆಲಸ ಮಾಡಿದ. ಅದಕ್ಕೆ ನಾನು ಕೂಡ ಹಿಂದೆ ಮುಂದೆ ನೋಡದೇ, ವಿಚಾರಿಸದೆ, ವಿವೇಕ ಶೂನ್ಯನಾಗಿ ಶಾಪವಿತ್ತೆ. ಈಗ ಇದಕ್ಕೇನು ಗತಿ? ಎಂದು ಆಲೋಚಿಸಿ ಆ ರಾಜನಿಗೆ ಹೇಳಿದರು. ''ಮಹಾರಾಜ, ರಾಕ್ಷಸನಾಗು ಎಂದು ನಾನು ನಿನಗೆ ಶಾಪ ಕೊಟ್ಟಾಗಿದೆ. ಆದರೆ ಇದು ಕೊನೆಯವರೆಗೂ ಇರುವದಿಲ್ಲ. ಹನ್ನೆರಡು ವರ್ಷ ಮಾತ್ರ ನೀನು ರಾಕ್ಷಸನಾಗಿ ಇರುವಿ. ಅನಂತರ ಗಂಗೋದಕದ ಸೇಚನದಿಂದ ನಿನ್ನ ಆ ರಾಕ್ಷಸ ಶರೀರವು ತೊಲಗಿ, ಮತ್ತೆ ಈ ನಿನ್ನ ಸೌದಾಸ ರೂಪವು ನಿನಗೆ ಪುನಃ ಪ್ರಾಪ್ತವಾಗುವದು. ಆ ನಂತರ ನೀನು ಯಥಾಪ್ರಕಾರ ಮೊದಲಿನಂತೆ ಭೂಮಂಡಲವನ್ನು ಪಾಲಿಸುವಿ. ಮತ್ತು ಜಾಹ್ನವೀ ಜಲಪ್ರೋಕ್ಷಣೆ ಯಿಂದ ನಿನ್ನ ಪಾಪಗಳೆಲ್ಲವೂ ಪರಿಹೃತವಾಗುವವು. ಇನ್ನೂ ವಿಶೇಷವೆಂದರೆ ನಿನಗೆ ದಿವ್ಯ ಜ್ಞಾನೋದಯವಾಗುವದು. ನೀನು ಮುಂದೆ ಯಾವಜ್ಜನ್ಮ ಶ್ರೀ ಹರಿಯ ಸೇವಾತತ್ಪರನಾಗಿ ಭಗವಂತನ ಪ್ರಸಾದರೂಪವಾಗಿ ಮೋಕ್ಷವನ್ನು ಹೊಂದುವಿ.''

ಹೀಗೆ ಹೇಳಿ ಮಹಾರಾಜನನ್ನು ಸಂತಯಿಸಿ ವಶಿಷ್ಠರು ತಮ್ಮ ಆಶ್ರಮಕ್ಕೆ ಹೋದರು. ರಾಜನಿಗೆ ಬಹಳ ದುಃಖವಾಯಿತು. ವಶಿಷ್ಠರ ಶಾಪದಂತೆ ಅವನಿಗೆ ರಾಕ್ಷಸ ದೇಹ ಬಂದು ಬಿಟ್ಟಿತು. ಕೂಡಲೇ ಅವನು ಮನೆಬಿಟ್ಟು ಅಡವಿ ಸೇರಿದ. ಅಮಾವಾಸ್ಯೆಯ ಬಣ್ಣ, ಸಿಟ್ಟಿನಿಂದ ಕೆಂಪಾದ ಕಣ್ಣು, ಭಯಂಕರ ದೇಹ, ಭೀಕರ ಆಕಾರ, ಯಾವಾಗಲೂ ಹಸಿವೆ, ನಿರಡಿಕೆ. ಕಂಡವರನ್ನು ಕೊಲ್ಲುವದು, ಮಾಂಸ ತಿನ್ನುವದು, ರಕ್ತವನ್ನು ಕುಡಿಯುವದು, ಪಶುವಿರಲಿ, ಪಕ್ಷಿಯಿರಲಿ, ಮೃಗವಿರಲಿ, ಮನುಷ್ಯನಿರಲಿ, ಮಂಗವಿರಲಿ ಯಾರನ್ನೂ ಬಿಡುತ್ತಿದ್ದಿಲ್ಲ. ಕಂಡದ್ದನ್ನೆಲ್ಲ ಕೊಂದು ರಕ್ತ ಕುಡಿದು, ಮಾಂಸ ತಿಂದು ತೇಗುತ್ತಿದ್ದ. ರಾಕ್ಷಸ ಭಾವವು ಪೂರ್ಣವಾಗಿ ಅವನಲ್ಲಿ ವ್ಯಾಪಿಸಿತ್ತು. ಅವನು ಕೊಂದೊಗೆದ ಎಲವುಗಳಿಂದ, ತಿಂದೊಗೆದ ಶವ ದೇಹಗಳಿಂದಲೂ, ಹರಿಸಿದ ರಕ್ತಪ್ರವಾಹದಿಂದಲೂ ಭೂಮಿ ಎಲ್ಲವೂ ಬೀಭತ್ಸವಾಗಿ, ವಿಕೃತವಾಗಿ ಕಾಣುತ್ತಿತ್ತು.

ಹೀಗೆ ಆರುತಿಂಗಳಲ್ಲಿ ಮೂರು ಯೋಜನ ವಿಸ್ತಾರವಾದ ನೆಲವನ್ನೆಲ್ಲ ರಕ್ತಸಿಕ್ತವನ್ನಾಗಿ ಮಾಡಿ, ಎಲ್ಲ ಪ್ರಾಣಿಗಳನ್ನು ಕೊಂದು ಬೇರೆ ವನಕ್ಕೆ ಹೋದನು. ಅಲ್ಲಿಯೂ ಹೀಗೆಯೇ ಕೈಗೆ ಸಿಕ್ಕವರನ್ನೆಲ್ಲ ಕೊಂದು, ಮನುಷ್ಯ ಮಾಂಸ ತಿಂದು ತನ್ನ

ರಾಕ್ಷಸಲೀಲೆ ನಡೆಸಿದನು. ಹೀಗೆಯೇ ವನದಿಂದ ವನಕ್ಕೆ, ದೇಶದಿಂದ ದೇಶಾಂತರಕ್ಕೆ ಪ್ರಯಾಣ ಮಾಡುತ್ತ ಅವನು ನರ್ಮದಾ ನದಿಯದಂಡೆಗೆ ಬಂದ. ಅನೇಕ ಮುನಿಗಳು ಸಿದ್ಧರು, ಆ ತರಂಗಿಣೀ ತೀರದಲ್ಲಿತಪೋನುಷ್ಠಾನ ನಿರತರಾಗಿದ್ದರು. ಹೀಗೆ ನದೀ ದಂಡೆಗುಂಟ ನಡೆದಾಗ ಲೋಕ ಭಯಂಕರನಾದ ಆ ರಾಕ್ಷಸನು ತನ್ನ ರಮಣಿಯೊಂದಿಗೆ ವಿಹರಿಸುತ್ತಿರುವ ಒಬ್ಬ ಮುನಿಯನ್ನು ಕಂಡನು. ಹಸಿವೆಯಿಂದ ಕಂಗೆಟ್ಟ ಆ ರಾಕ್ಷಸನು ಕೋಪ ತಪ್ತನಾಗಿ ಓಡುತ್ತ ಹೋಗಿ ಆ ಮುನಿಯನ್ನು ಹಿಡಿದುಕೊಂಡನು ಬೇಡರು ಚಿಗರೆಯನ್ನು ಹಿಡಿಯುವಂತೆ. ವೇಗದಿಂದ ಮುನಿಯ ಮೇಲೆ ಆಕ್ರಮಣ ಮಾಡಿದನು. ಅಲ್ಲಿಯೇ ಇದ್ದ ಮುನಿಪತ್ನಿ ತನ್ನ ಗಂಡನನ್ನು ಕೊಲ್ಲಲು ಬಂದ ರಾಕ್ಷಸನನ್ನು ನೋಡಿ ಭಯಭ್ರಾಂತಳಾದಳು. ಅವಳು ಮಹಾ ಪತಿವ್ರತೆ. ಅವಳಿಗೆ ತಿಳಿದು ಹೋಯಿತು. ಈ ರಾಕ್ಷಸನಾರು ಎಂಬುದು. ಕೂಡಲೇ ಅವಳು ತಲೆಬಾಗಿಸಿ ಕೈಜೋಡಿಸಿ ದೀನಳಾಗಿ ಆ ರಾಕ್ಷಸನನ್ನು ಕೇಳಿಕೊಂಡಳು.

**ಮುನಿಪತ್ನಿ:-** ರಾಜಶ್ರೇಷ್ಠನಾದ ಸೌದಾಸ ಮಹಾರಾಜ, ರಕ್ಷಿಸು, ರಕ್ಷಿಸು, ಭಯಭ್ರಾಂತಳಾದ ನನ್ನನ್ನು ಕಾಪಾಡು. ನನ್ನ ಗಂಡನಿಗೆ ಜೀವದಾನ ಮಾಡು. ನನಗೆ ಮಾಂಗಲ್ಯ ಭಿಕ್ಷೆ ನೀಡು. ನೀನು ನಿಜವಾದ ರಾಕ್ಷಸನಲ್ಲ. ಸೂರ್ಯವಂಶದಲ್ಲಿ ಹುಟ್ಟಿದ ದೊಡ್ಡ ರಾಜ. ನಿನ್ನ ಹೆಸರು ಮಿತ್ರಸಹ. ಅನೇಕ ಯಜ್ಞಯಾಗ ಮಾಡಿದ ಪುಣ್ಯಾತ್ಮ ನೀನು. ದಯಮಾಡಿ ಈ ದುರ್ಗಮವಾದ ಅರಣ್ಯದಲ್ಲಿ ದುಃಖಿತಳಾದ ನನ್ನನ್ನು ಹೇಗಾದರೂ ಮಾಡಿ, ಪತಿಭಿಕ್ಷೆ ನೀಡಿ ರಕ್ಷಿಸು. ನೀನು ನನ್ನ ಗಂಡನನ್ನು ಕೊಂದರೆ ನಾನು ಬದುಕಿಯೂ ಸತ್ತಂತೆ. ನಾನು ಇನ್ನೂ ಚಿಕ್ಕ ವಯಸ್ಸಿನ ಮಹಿಳೆ. ಈಗ ನನ್ನ ಪತಿಯನ್ನು ಕೊಂದರೆ ನಾನು ಬಾಲವಿಧವೆಯಾಗುವೆನು. ಮರಣಕ್ಕಿಂತಲೂ ಬಾಲವೈಧವ್ಯ ಅತೀ ದುಃಖಕರ. ನಾನು ನನ್ನ ತಾಯಿ, ತಂದೆ, ಬಂಧು, ಬಳಗ ಎಲ್ಲ ಬಿಟ್ಟು ಈ ಪತಿಯನ್ನು ನಂಬಿ ಬಂದಿದ್ದೇನೆ. ನನಗೆ ಇವನೇ ಸರ್ವಸ್ವ. ನನಗಿರುವ ಇಂಥ ಏಕಾಧಾರನಾದ ನನ್ನ ಪತಿಯನ್ನು ಕೊಂದರೆ ನಾನು ಅನಾಥಳಾಗುವೆನು. ನನ್ನ ಈ ಚಿಕ್ಕ ಮಗುವು ತಂದೆ ಇಲ್ಲದೆ ಸತ್ತು ಹೋಗುವದು. ಪುಣ್ಯ ಪುರುಷನಾದ ನಿನಗೆ ಹೆಣ್ಣಿನ ಕಣ್ಣೀರಿನ ವ್ಯಥೆ ಕಥೆಯು ಅರ್ಥವಾಗುವದಿಲ್ಲವೆ? ಪತಿ ಇಲ್ಲದೆ ಈ ನಿರ್ಮಾನುಷ ಗೊಂಡಾರಣ್ಯದಲ್ಲಿ, ಏಕಾಕಿನಿಯಾಗಿ ನಾನು ಹೇಗೆ ಬದುಕಿರಲಿ? ನೀನು ನನ್ನನ್ನೂ ಮಗಳೆಂದು ತಿಳಿದು ರಕ್ಷಿಸು. ಪತಿದಾನ ಮಾಡಿ ಈ ಮಗಳ ಸೌಭಾಗ್ಯ ಉಳಿಸು ಎಲ್ಲ ದಾನಕ್ಕಿಂತ ಜೀವದಾನ ಹೆಚ್ಚಿನದು. ಪ್ರಾಣದಂತಹ ಹೆಚ್ಚಿನದನ್ನು ಹಿಂದೆ ಯಾರೂ ನೀಡಿಲ್ಲ ಮುಂದೆ ಯಾರೂ ನೀಡರು. ಆದುದರಿಂದ ದಯಮಾಡಿ ನನ್ನ ಕುಂಕುಮಭಾಗ್ಯ ಉಳಿಸು. ನನ್ನ ಗಂಡನನ್ನು ಕೊಲ್ಲಬೇಡ, ನಿನ್ನ ಪಾದಕ್ಕೆ ಬೀಳುತ್ತೇನೆ.

ಹೀಗೆ ದುಃಖ ವಿಹ್ವಲಳಾಗಿ, ಆ ದೈತ್ಯನ ಪಾದದ ಮೇಲೆ ಬಿದ್ದಳು ಆ ಸತೀಮಣಿ. ಎಷ್ಟಾದರೂ ರಾಕ್ಷಸನು ರಾಕ್ಷಸನೇ. ಅವನಿಗೇನೂ ಅವಳ ಮೇಲೆ ಕರುಣೆ ಬರಲಿಲ್ಲ. ಕಾಲಮೇಲೆ ಬಿದ್ದ ಆ ಕಾಂತಾಮಣಿಯನ್ನು ಕೈಯಿಂದ ಕಿತ್ತೊಗೆದು ಆ ಬ್ರಾಹ್ಮಣನ ಮೇಲೆ ಹಾರಿ ಹಿಡಿದನು. ಹೆಬ್ಬುಲಿಯು ಚಿಗರೆಯ ಮೇಲೆ ಎರಗುವಂತೆ ಎರಗಿದನು. ಆ ಬ್ರಾಹ್ಮಣನ ದೇಹ ಸೀಳಿ, ರಕ್ತಪಾನ ಮಾಡಿದನು. ಪತಿವ್ರತೆಯಾದ ಆ ಬ್ರಾಹ್ಮಣನ ಮಡದಿಯು ಎದೆ, ಎದೆ ಬಡೆದುಕೊಂಡು ಅತ್ತರೂ ಕೇಳದೇ ಆ ಕ್ರೂರ ರಕ್ಕಸನು ಆ ಬ್ರಾಹ್ಮಣನನ್ನು ಕೊಂದು ತಿಂದನು. ಆಗ ಪ್ರಕ್ಷುಬ್ಧಳಾದ ಆ ಬ್ರಾಹ್ಮಣಿಯು ಕ್ರೋಧಾಂಧಳಾಗಿ ಶಾಪವಿತ್ತಳು.

"ಕ್ರೀಡಾಸಕ್ತನಾದ ನನ್ನ ಪತಿಯನ್ನು ನೀನು ಬಲಾತ್ಕಾರದಿಂದ ಸೆಳೆದು ಕೊಂದುಹಾಕಿರುವಿ. ಆದುದರಿಂದ ಇನ್ನು ನೀನು ಸ್ತ್ರೀಸಂಗ ಮಾಡಿದ ಕೂಡಲೇ ಸತ್ತು ಹೋಗುವಿ. ದುಷ್ಟ ದೈತ್ಯನೆ, ಒಂದು ಶಾಪವು ಸಾಲದ ನಿನಗೆ ಇನ್ನೂ ಒಂದು ಶಾಪವನ್ನು ನಿನ್ನ ಮೇಲೆ ಚೆಲ್ಲುತ್ತೇನೆ, ಕೇಳು. ನಿರಪರಾಧಿಯಾದ ನನ್ನ ಪತಿಯನ್ನು ನಾನು ಬೇಡ ಬೇಡ ಎಂದು ಶೋಕಿಸುತ್ತಿರುವಾಗಲೇ ನೀನು ಕೊಂದು ತಿಂದೆ. ಇಂತಹ ರಾಕ್ಷಸ ವ್ಯಾಪರ ಮಾಡಿದ ನಿನಗೆ ರಾಕ್ಷಸ ರೂಪ ಶಾಶ್ವತವಾಗಿ ಉಳಿಯಲಿ." ಹೀಗೆ ಆ ಸಾಧ್ವೀಮಣಿಯು ದುಷ್ಟರಕ್ಕಸನಿಗೆ ಎರಡು ಹಿಡಿ ಶಾಪ ಹಾಕಿದಳು. ಅದನ್ನು ತಿಳಿದು ಕ್ರೋಧೋನ್ಮತ್ತನಾದ ಆ ದೈತ್ಯನು ಮತ್ತೆ ಕಿಡಿ ಕಿಡಿಯಾದನು. ಕೋಪಾಟೋಪದಿಂದ ಅಬ್ಬರಿಸಿದ. "ದುಷ್ಟಳೆ, ನೀನು ನನಗೆ ವ್ಯರ್ಥವಾಗಿ ಒಂದರ ಮೇಲೆ ಒಂದರಂತೆ ಎರಡು ಶಾಪ ಕೊಟ್ಟಿದ್ದೇಕೆ? ನಾನು ಒಂದು ಅಪರಾಧ ಮಾಡಿದ್ದೇನೋ ನಿಜ. ಅದಕ್ಕಾಗಿ ನೀನು ಒಂದು ಶಾಪ ಕೊಟ್ಟಿದ್ದು ಸರಿ. ನನಗೆ ರಾಕ್ಷಸರೂಪವು ನಿರಂತರ ಇರಲಿ ಎಂದು ಮತ್ತೊಂದು ಶಾಪವನ್ನು ಏಕೆ ಕೊಟ್ಟೆ? ಆದುದರಿಂದ ನೀನು ಕೂಡ ಈಗಲೇ ಪಿಶಾಚಿ ಜನ್ಮ ಹೊಂದು. ನಿನ್ನ ಮಕ್ಕಳೂ ಪಿಶಾಚರಾಗಲಿ."

ರಾಕ್ಷಸ ರೂಪಿಯಾದ ಸೌದಾಸ ಮಹಾರಾಜನ ಶಾಪದಿಂದ ಆ ಬ್ರಾಹ್ಮಣಿ ಕೂಡಲೇ ಭಯಂಕರ ಪಿಶಾಚಿಯಾದಳು. ಹಸಿವು ನೀರಡಿಕೆಯಿಂದ ದೊಡ್ಡ ದನಿ ತೆಗೆದು, ಆ ಏಕಾಂತ ಪ್ರದೇಶ ಧ್ವನಿತವಾಗುವಂತೆ ರೋದಿಸತೊಡಗಿದಳು. ಪಿಶಾಚಿಗಳಾದ ಅವಳ ಮಕ್ಕಳೂ ಕೂಡ ಈಗ ಕೂಗ ತೊಡಗಿದವು. ನಂತರ ಆ ಪಿಶಾಚರೂ ರಾಕ್ಷಸನೂ, ಕೂಡಿ ನರ್ಮದಾ ನದಿಯ ದಂಡೆಯಲ್ಲಿರುವ ಒಂದು ಆಲದ ಗಿಡದ ಬಳಿಗೆ ಹೋದರು. ಅದರಲ್ಲಿ ಇನ್ನೂ ಎಷ್ಟೋ ರಾಕ್ಷಸಗಳಿದ್ದವು. ಇಂತಹ ಭೂತ, ಪಿಶಾಚ, ರಾಕ್ಷಸರಿಗೆ ಆಶ್ರಯವಾದುದರಿಂದ ಅದು ರಾಕ್ಷಸವಟವೆಂದೇ ಹೆಸರಾಗಿದ್ದಿತು. ಗುರುದ್ರೋಹ, ಬ್ರಹ್ಮದ್ರೋಹ, ಪಾಪದಿಂದ ದುರ್ಯೋನಿಯನ್ನು ಹೊಂದಿದ ಮತ್ತೊಬ್ಬ ದೊಡ್ಡ ಬ್ರಾಹ್ಮಣನು ಬ್ರಹ್ಮರಾಕ್ಷಸನಾಗಿ ಆ ನರ್ಮದಾ ತೀರದ ವಟವೃಕ್ಷದಲ್ಲಿ ವಾಸವಾಗಿದ್ದನು. ತನ್ನ ಸ್ಥಾನಕ್ಕೆ ಮತ್ತೊಂದು ರಾಕ್ಷಸ, ಪಿಶಾಚಿ ಬಂದದ್ದು ಕಂಡು, ಮೊದಲಿದ್ದ ಬ್ರಹ್ಮರಾಕ್ಷಸಕ್ಕೆ ಬ್ರಹ್ಮಾಂಡ ಕೋಪ ಬಂದು ಕೇಳಿತು ಆ ವಟವೃಕ್ಷ ತನ್ನ ಸ್ವತ್ತೆಂದು ಭಾವಿಸಿದ ಬ್ರಹ್ಮರಾಕ್ಷಸ. "ನೀವು ಇಲ್ಲೇಕೆ ಬಂದಿರಿ? ಅಬ್ಬಾ! ಎಂತಹ ಅಸಹ್ಯವಾಗಿದೆ ನಿಮ್ಮ ಈ ಆಕಾರ। ಇದು ನನ್ನ ಮರ ನೀವೇಕೆ ಬಂದಿರಿ? ನಿಮಗೆ ಇಂತಹ ದುಷ್ಟಯೋನಿ ಬರಲು ಕಾರಣವೇನು ನಿಜವಾಗಿಯೂ ಹೇಳಿರಿ." ಆಗ ಸೌದಾಸರಾಜನು ತನಗೆ ಜನ್ಮ ಬರಲು ಕಾರಣವನ್ನೆಲ್ಲ ಯಥಾವತ್ತಾಗಿ ನಿರೂಪಿಸಿದನು ಮತ್ತು ಆ ವಟವಾಸಿಯಾದ ಬ್ರಹ್ಮರಾಕ್ಷಸವನನ್ನು ಕೇಳಿದನು.

**ಸೌದಾಸ:-** ಈ ವಟವಾಸಿ ರಾಕ್ಷಸನೆ, ನನ್ನ ಸಮಾಚಾರವನ್ನೆಲ್ಲ ತಿಳಿಸಿದ್ದೇನೆ. ನೀವೂ ಕೂಡ ನನ್ನಂತೆ ಯಾವುದೋ ದುಷ್ಕರ್ಮಮಾಡಿ ಇಂತಹ ದುರ್ಯೋನಿಯನ್ನು ಹೊಂದಿರಬಹುದು. ಏನೇ ಆಗಲಿ, ನಾವಿಬ್ಬರೂ ಸಮಾನ ದುಃಖಿಗಳು, ಸಮ ಪಾಪಿಗಳು. **'ಸಮಾನ ಶೀಲೇಷು ವ್ಯಸನೇಷು ಸಖ್ಯಮ್'** ಎಂಬ ನುಡಿಯಂತೆ ನಾನು ಮೈತ್ರಿಯಿಂದ ಕೇಳುತ್ತಿದ್ದೇನೆ. ನೀನೇನು ಪಾಪ ಮಾಡಿದೆ ಇಂತಹ ಘೋರ ಜನ್ಮ ಬರಲು? ಅದನ್ನೆಲ್ಲವನ್ನು ಸತ್ಯವಾಗಿ ನಿರೂಪಿಸು. ಮಿತ್ರನಾದ ನನ್ನನ್ನು ವಂಚಿಸಬೇಡ. ಮಿತ್ರ ದರ್ಶನದಿಂದಲೇ ಪ್ರಾಣಿಗಳ ದುಃಖಗಳು ಕ್ಷೀಣವಾಗುತ್ತವೆ. ಮಿತ್ರರ ಮುಂದೆ ಎಂದೂ ವಂಚನೆ ಮಾಡಬಾರದು. ಕಲ್ಮಾಷಪಾದ (ಸೌದಾಸನ) ನ ಈ ಸ್ನೇಹದ ನುಡಿಗಳನ್ನು ಕೇಳಿ

ಬ್ರಹ್ಮರಾಕ್ಷಸಕ್ಕೂ ಅವನ ಮೇಲೆ ಪ್ರೀತಿ ಉತ್ಪನ್ನವಾಯಿತು. ಅದು ತನ್ನ ಹಿಂದಿನ ವೃತ್ತಾಂತವನ್ನೆಲ್ಲ ಹೇಳತೊಡಗಿತು.

**ಬ್ರಹ್ಮರಾಕ್ಷಸ:-** ಅಯ್ಯಾ, ನಾನು ಹಿಂದೆ, ಹಿಂದಿನ ಜನ್ಮದಲ್ಲಿ ಒಬ್ಬ ಬ್ರಾಹ್ಮಣ. 'ಮಗಧ' ದೇಶವು ನನ್ನ ಜನ್ಮಭೂಮಿ. ವೇದವೇದಾಂತ ಶಾಸ್ತ್ರಗಳಲ್ಲಿ ನನಗೆ ಪಾರಂಗತಿ, ಪರಿಣತಿ. ಸೋಮದತ್ತನೆಂದು ನನ್ನ ಹೆಸರು. ಧರ್ಮದಲ್ಲಿ ಶ್ರದ್ಧೆ ಏನೋ ಇದ್ದಿತು. ಆದರೆ ನಾನು ಹೆಚ್ಚು ಹೆಚ್ಚು ವಿದ್ಯೆಯನ್ನು ಓದಿ ಕೆಟ್ಟೆ. ಪಾಂಡಿತ್ಯದ ಜೊತೆಗೆ ಮದವೂ ಬಂದಿತು. ಆ ವಯಸ್ಸಿನಲ್ಲಿ ನನ್ನಲ್ಲಿ ಪ್ರಾಯದ ಹಾಗೂ ಘನ ಪಾಂಡಿತ್ಯದ ಮತ್ತು ದುಡ್ಡಿನ ಮದಗಳು ಸಮಾವೇಶಗೊಂಡು, ನಾನು, ನನಗೆ ಪಾಠ ಹೇಳಿದ ಗುರುಗಳನ್ನೇ ಉದಾಸೀನ ಮಾಡಿ ಧಿಕ್ಕರಿಸಿದೆ. ಇದರ ಪರಿಣಾಮದಿಂದ ನನಗೆ ಇಂತಹ ದುರ್ದಸೆ ಪ್ರಾಪ್ತವಾಯಿತು. ಈ ದುರ್ಯೋನಿಯಲ್ಲಿ ಬಂದ ಬಳಿಕ ನನಗೆ ಸುಖವಿಲ್ಲ. ಯಾವಾಗಲೂ ಹಸಿವೆ. ನಿರಂತರವೂ ನೀರಡಿಕೆ. ತಿಂದಷ್ಟೂ ಕ್ಷುಧೆ ಉಲ್ಬಣಿಸುವದು. ಕುಡಿದಷ್ಟೂ ಬಾಯಾರಿಕೆ ಹೆಚ್ಚಾಗುವದು. ಆದರಿಂದ ನೂರಾರು ಬ್ರಾಹ್ಮಣರನ್ನು ಕೊಂದು ತಿಂದೆ. ಸಾವಿರಾರು ಎಂದರೂ ಸುಳ್ಳಲ್ಲ. ನಾನಾದರೂ ಏನು ಮಾಡಲಿ? ಯಾವಾಗಲೂ ಹಸಿವೆಯ ಕಸಿವಿಸಿ, ಹೊಟ್ಟೆಯಲ್ಲಿ ಉರಿ. ಮನದಲ್ಲಿ ತಾಪ. ಇದರಿಂದ ಉದ್ವಿಗ್ನನಾದ ನಾನು ಕಂಡವರ ಮೇಲೆ ಸಿಟ್ಟಿಗೆದ್ದು ಹರಿದು ಬೀಳುತ್ತೇನೆ. ಹರಿದು ಅವರ ಮಾಂಸ ತಿಂದು ತೃಪ್ತಿಯಾಗದೇ ಮತ್ತೂ ಚಡಪಡಿಸುತ್ತೇನೆ.

**ಜಗತ್ತ್ರಾಸಕರೋ ನಿತ್ಯಂ ಮಾಂಸಾಶನ ಪರಾಯಣಃ ।**
**ಗುರ್ವವಜ್ಞಾ ಮನುಷ್ಯಾಣಾಂ ರಾಕ್ಷಸತ್ವ ಪ್ರದಾಯಿನೀ ॥**

ಗುರುಗಳ ತಿರಸ್ಕಾರವು ಮಾನವರಿಗೆ ರಾಕ್ಷಸಭಾವವನ್ನು ತಂದು ಕೊಡುತ್ತದೆ. ಇದನ್ನೂ ನಾನು ನನ್ನ ಅನುಭವದಿಂದ ಕಂಡು ಕೊಂಡಿದ್ದೇನೆ. ಆದುದರಿಂದ ಬುದ್ಧಿವಂತನಾದ ಮಾನವನು ಎಂದೂ ಗುರುದ್ರೋಹ ಮಾಡಬಾರದು.

**ಕಲ್ಮಾಷಪಾದ:-** ಗುರುವಿನ ಲಕ್ಷಣವೇನು? ಯಾರಿಗೆ ಗುರು ಅನ್ನಬೇಕು? ಇದನ್ನು ಕೇಳಬೇಕೆಂದು ನನಗೆ ಕುತೂಹಲವಾಗಿದೆ. ಮಿತ್ರನೆ ನೀನು ನನಗೆ ನಿಜವಾದ ಗುರುವನ್ನು ಗುರುತಿಸುವ ಬಗೆಯನ್ನು ಹೇಳು.

**ಬ್ರಹ್ಮರಾಕ್ಷಸ:-** ಮಿತ್ರನೆ, ಗುರುಗಳು ಬಹಳ ಜನ ಇರುತ್ತಾರೆ. ಇವರಲ್ಲಿ ಅತ್ಯಂತ ಪೂಜ್ಯನೂ, ವಂದನೀಯನೂ ಆದ ಗುರುವಿನ ಲಕ್ಷಣ ಹೇಳುತ್ತೇನೆ, ಕೇಳಿರಿ.

**ತಾನಹಂ ಕಥಯಿಷ್ಯಾಮಿ ಶೃಣುಷ್ವೈಕಮನಾಃ ಸಖೇ ।**
**ಅಧ್ಯಾಪಕಶ್ಚ ವೇದಾನಾಂ ವೇದಾರ್ಥಾನಾಂ ಚ ಬೋಧಕಃ ॥**
**ಶಾಸ್ತ್ರವಕ್ತಾ ಧರ್ಮವಕ್ತಾ ನೀತಿ ಶಾಸ್ತ್ರೋಪದೇಶಕಃ ।**
**ಮಂತ್ರೋಪದೇಶವ್ಯಾಖ್ಯಾಕೃದ್ವೇದ ಸಂದೇಹಹೃತ್ತಥಾ ॥**
**ವ್ರತೋಪದೇಶಕಶ್ಚೈವ ಭಯತ್ರಾತಾ ನ್ನದೋಽಹಿ ಚ ।**
**ಶ್ವಶುರೋ ಮಾತುಲಶ್ಚೈವ ಜ್ಯೇಷ್ಠಾಭ್ರಾತಾ ಪಿತಾ ತಥಾ ॥**
**ಉಪನೇತಾ ನಿಷೇಕ್ತಾ ಚ ಸಂಸ್ಕರ್ತಾ ಮಿತ್ರ ಸತ್ತಮ ।**
**ಏತೇ ಹಿ ಗುರುವಃ ಪ್ರೋಕ್ತಾಃ ಪೂಜ್ಯಾ ವಂದ್ಯಾಶ್ಚ ಸಾದರಂ ॥**

ಅವರನ್ನು ವಿವರಿಸುತ್ತೇನೆ. ವಿಶ್ವಾಸದಿಂದ ಏಕಾಗ್ರಚಿತ್ತನಾಗಿ ಕೇಳು. ವೇದಾಧ್ಯಾಪಕನು, ವೇದಗಳಿಗೆ ಅರ್ಥವನ್ನು ಬೋಧಿಸುವವನು, ಶಾಸ್ತ್ರಪಾಠ ಹೇಳುವವನು, ಧರ್ಮ ಬೋಧಕನು, ನೀತಿ ಶಾಸ್ತ್ರವನ್ನು ಉಪದೇಶಿಸುವನು, ಮಂತ್ರಗಳನ್ನು ಉಪದೇಶಿಸುವವನು, ವ್ಯಾಖ್ಯಾನಗಳನ್ನು ರಚಿಸುವವನು, ವೇದ ಪಾಠ, ಅರ್ಥ ಮುಂತಾದವುಗಳಲ್ಲಿ ಪ್ರಾಪ್ತವಾದ ಸಂಶಯಗಳನ್ನು ಪರಿಹರಿಸುವವನು ಸದ್ವ್ರತಗಳನ್ನು ಬೋಧಿಸುವವನು, ಭಯದಿಂದ ರಕ್ಷಿಸಿದವನು, ಅನ್ನದಾನ ಮಾಡಿದವನು, ಹೆಣ್ಣು ಕೊಟ್ಟ ಮಾವ, ಸೋದರ ಮಾವ, ಅಣ್ಣ, ತಂದೆ, ಉಪನಯನ ಮಾಡಿದವನು, ನಿಷೇಕ ಮಾಡಿಸಿದವನು, ಜಾತಕ ಮಾಡಿ ಸಂಸ್ಕಾರ ಮಾಡಿಸಿದವನು, ಇವರೆಲ್ಲರೂ ಭಕ್ತಿಯಿಂದ ಪೂಜೆ ಮತ್ತು ನಮಸ್ಕಾರಗಳನ್ನು ಮಾಡಿಸಿಕೊಳ್ಳಲು ಅರ್ಹರಾದ ಗುರುಗಳು ಎಂಬುದಾಗಿ ಬ್ರಹ್ಮರಾಕ್ಷಸನು ಹೇಳಿದನು.

**ಕಲ್ಮಾಷಪಾದ:-** ನೀನು ಹೇಳಿದ ಲಕ್ಷಣಗಳುಳ್ಳ ಗುರುಗಳು ಎಲ್ಲರೂ ಸಮಾನರೊ ಅಥವಾ ಅವರಲ್ಲಿ ಯಾರಾದರೂ ಶ್ರೇಷ್ಠರೊ? ಇದನ್ನು ಹೇಳು.

**ಬ್ರಹ್ಮರಾಕ್ಷಸ:-** ಗುರುಗಳಲ್ಲಿಯೂ ತಾರತಮ್ಯ ಉಂಟು, ತನಗೆ ಸಾಕ್ಷಾತ್ ವೇದ, ವೇದಾಂತ ಉಪದೇಶಿಸಿದ ಅಧ್ಯಾಪಕರು ಮತ್ತು ವೇದ ಮಂತ್ರಗಳಿಗೆ ವ್ಯಾಖ್ಯಾನ ಬರೆದವರು ವಿಶಿಷ್ಟ ಗುರುಗಳು ಎನಿಸುತ್ತಾರೆ. ಇದರಂತೆ ಪ್ರತಿಯೊಬ್ಬನಿಗೂ ತಮ್ಮ ತಮ್ಮ ತಂದೆ ಹಾಗೂ ಧರ್ಮೋಪದೇಶಕರು ವಿಶೇಷ ಗುರುಗಳು ಎನಿಸುತ್ತಾರೆ. ಇವರಲ್ಲಿಯೂ ಕೂಡ ಸರ್ವ ವೇದಾರ್ಥಗಳ ಸಾರಭೂತವಾದ ಪುರಾಣಗಳನ್ನು ಹೇಳುವ, ಪುರಾಣೋಕ್ತವಾದ ಧರ್ಮ ಬೋಧಿಸುವ ಜ್ಞಾನಿಗಳು ಹೆಚ್ಚಿನ ಗುರೂತ್ತಮರು ಎನಿಸುತ್ತಾರೆ. ಸಂಸಾರ ಪಾಶವನ್ನು ಹರಿದು ಹಾಕಲು ಕಾರಣವಾದ ವಿವಿಧ ಧರ್ಮ, ವಿಹಿತಕರ್ಮ, ದೇವತಾ ಪೂಜಾ ಪ್ರಕಾರ, ವ್ರತ ನಿಯಮ, ಆಚಾರ ವಿಚಾರ ಎಲ್ಲ ವಿಷಯಗಳೂ ಪುರಾಣಗಳಲ್ಲಿ ಉಕ್ತವಾಗಿರುತ್ತವೆ. ಅವುಗಳನ್ನೆಲ್ಲ ಕೂಲಂಕುಷ ಅಭ್ಯಾಸ ಮಾಡಿ ಪುರಾಣ ಪ್ರವಚನ ಮಾಡುವ ಪುಣ್ಯಾತ್ಮರು. ಗುರು ಶ್ರೇಷ್ಠರೆಂದು ಕರೆಯಲ್ಪಡುತ್ತಾರೆ.

**ಜಾಯತೇ ಚ ಪುರಾಣೇಭ್ಯಸ್ತತ್ವಜ್ಞಾನಂ ನೃಣಾಮಿಹ ।**
**ಸರ್ವವೇದಾರ್ಥ ಸಾರಾಣಿ ಪುರಾಣಾನೀತಿ ಭೂಪತೇ ॥**

ಪುರಾಣಗಳೆಂದರೆ ಸರ್ವ ವೇದಾರ್ಥಗಳ ಸಾರವಾಗಿವೆ. ಇವುಗಳನ್ನು ಬರೆದವರು, ಹೇಳಿದವರು, ಸಾಕ್ಷಾತ್ ಮಹಾಮುನಿಗಳು. ಇಂತಹ ಪುರಾಣಗಳನ್ನು ಸರಿಯಾಗಿ ಅಭ್ಯಾಸ ಮಾಡಿ ಜನರಿಗೆ ತಿಳಿಯುವಂತೆ ಪ್ರವಚನ ಮಾಡುವ ಪಂಡಿತನು ಪರಮ ಗುರು ಎನಿಸುತ್ತಾನೆ. ಸಂಸಾರ ಸಮುದ್ರವನ್ನು ದಾಟ ಬಯಸುವ ಎಲ್ಲರೂ ಪುರಾಣಗಳನ್ನು ಕೇಳಬೇಕು ಎಂಬುದೇ ವೇದ ವಿಭಾಗ ಮಾಡಿದ ವೇದವ್ಯಾಸ ದೇವರ ಉದ್ದೇಶ. ಯಾಕೆಂದರೆ ಪುರಾಣಗಳಲ್ಲಿ ಸ್ವಯಂ ವ್ಯಾಸರು ಸರ್ವ ಧರ್ಮಗಳನ್ನು ನಿರೂಪಿಸಿದ್ದಾರೆ, ತರ್ಕಶಾಸ್ತ್ರವು ಬರೀ ವಾದವಿವಾದಕ್ಕೆ ಕಾರಣ. ನೀತಿಶಾಸ್ತ್ರವು ಐಹಿಕ ಸುಖಕ್ಕೆ ಕಾರಣ. ಪುರಾಣಗಳು ಮಾತ್ರ ಇಹದಲ್ಲಿಯೂ, ಪರದಲ್ಲಿಯೂ, ಸುಖದ ಸಾಧನವಾಗಿರುತ್ತವೆ. ಸಂತತವೂ ಪುರಾಣ ಶ್ರವಣದಿಂದ ಮನುಷ್ಯನಿಗೆ ನಿರ್ಮಲ ಬುದ್ಧಿ ಉತ್ಪನ್ನವಾಗುವದು. ಆ ನಿರ್ಮಲ ಬುದ್ಧಿಯಿಂದ ಶ್ರೀಹರಿಯಲ್ಲಿ ಭಕ್ತಿ, ಭಕ್ತಿಯಿಂದ ಧರ್ಮಬುದ್ಧಿ ಉಂಟಾಗುವದು. ಧರ್ಮ ಬುದ್ಧಿಯಿಂದ ವರ್ಣಾಶ್ರಮೋಚಿತವಾದ ವಿಹಿತಕರ್ಮಗಳಲ್ಲಿ ಆಸಕ್ತಿ ಉಂಟಾಗುವದು. ಸತ್ಕರ್ಮಗಳಿಂದ

ಪಾಪನಾಶವಾಗುವದು. ಪಾಪನಾಶದಿಂದ ದಿವ್ಯ ಜ್ಞಾನೋದಯವಾಗುವದು. ಜ್ಞಾನದಿಂದ ಭಗವಂತನ ಪ್ರಸಾದ ಲಭಿಸುವದು. ಭಗವತ್ಪ್ರಸಾದದಿಂದ ಮೋಕ್ಷವು ಲಭಿಸುವದು. ಹೀಗೆ ಪುರಾಣಗಳು ಮೋಕ್ಷಕ್ಕೆ ಕಾರಣವಾಗಿರುತ್ತವೆ. ಇದೆಲ್ಲವನ್ನು ನಾನು ಗಂಗಾ ತಟಾಕದಲ್ಲಿ ಬ್ರಹ್ಮವಾದಿಗಳಾದ ಗೌತಮ ಋಷಿಗಳಿಂದ ಕೇಳಿ ತಿಳಿದಿದ್ದೇನೆ.

ಒಂದು ದಿನ ನಾನು ಪರಮೇಶ್ವರನನ್ನು ಪೂಜಿಸಲು ಗಂಗಾತೀರಕ್ಕೆ ಹೋಗಿದ್ದೆನು. ಅಲ್ಲಿ ನಾನು ಸ್ನಾನ ಮಾಡಿ ಪೂಜೆ ಮಾಡಿತ್ತ ಕುಳಿತಿದ್ದೆ. ಆಗ ಅಲ್ಲಿಗೆ ತೇಜೋನಿಧಿಗಳಾದ ಗೌತಮರು ಆಗಮಿಸಿದರು. ಮಹಾತಪಸ್ವಿಗಳಾದರೂ ಅತ್ಯಂತ ಶಾಂತರು. ಮಹಾಬುದ್ಧಿವಂತರಾದರೂ ವಿನಯೋಪೇತರೂ ಆಗಿದ್ದರು. ಆ ಮಹಾತ್ಮರು. ಇಂತಹ ಮಹಾಮುನಿಗಳನ್ನು ನಾನು ಸ್ವಾಗತಿಸಲೂ ಇಲ್ಲ. ಸತ್ಕರಿಸಲೂ ಇಲ್ಲ, ನಮಸ್ಕರಿಸಲೂ ಇಲ್ಲ. ಆದರೂ ಅವರು ಮಹಾನುಭಾವರು. ಉನ್ಮತ್ತನಾಗಿ ನಮಸ್ಕರಿಸದೇ ನಾನು ಕುಳಿತರೂ ಅವರು ಸಿಟ್ಟಾಗಲಿಲ್ಲ. ತಾವು ಹೇಳಿದಂತೆ ವೇದೋಕ್ತಕರ್ಮ (ದೇವಪೂಜೆ) ನಾನು ಮಾಡುತ್ತಿದ್ದೇನೆಂದು ತಿಳಿದು ಅವರಿಗೆ ಸಂತೋಷವೇ ಆಯಿತು. ಅವರು ನಮಸ್ಕರಿಸಿದ ನನಗೆ ಯಾವ ಶಾಪವನ್ನೂ ಕೊಡಲಿಲ್ಲ. ಶಾಸನವನ್ನೂ ಮಾಡಲಿಲ್ಲ. ಆದರೆ ಅಂತಹ ಗುರುಗಳಿಗೆ ಅವಮಾನ ಮಾಡಿ ನಾನು ಯಾವ ದೇವರನ್ನು ಪೂಜಿಸುತ್ತಿದ್ದೆನೋ, ಆ ಪರಮೇಶ್ವರನೇ ನನ್ನ ಮೇಲೆ ಸಿಟ್ಟಾದ. ಗುರುಪೂಜೆ ಬಿಟ್ಟು ಹರಿ ಪೂಜೆಯನ್ನಾಗಲಿ, ಹರಪೂಜೆಯನ್ನಾಗಲಿ ದೇವತೆಗಳು ಸ್ವೀಕರಿಸುವದಿಲ್ಲ. ಪರಮೇಶ್ವರನು ಗುರುವನ್ನು ಧಿಕ್ಕರಿಸಿ ನಾನು ಮಾಡಿದ ಪೂಜೆಯಿಂದ ಸಂತುಷ್ಟನಾಗದೇ ಸಂತಪ್ತನಾದನು. ಗುರದ್ರೋಹಿಯಾದ ನಾನು ಮಹಾ ಅಪರಾಧಿಯಾದುದರಿಂದ ನನಗೆ ರಾಕ್ಷಸ ಜನ್ಮವನ್ನು ಕೊಟ್ಟನು. ತಿಳಿದಾಗಲಿ, ತಿಳಿಯದೇ ಆಗಲಿ ಗುರುವಿನ ತಿರಸ್ಕಾರ ಮಾಡಿದ ಮನುಷ್ಯನ ಭವಿಷ್ಯವು ಹಾಳಾಗುವದು. ಮಕ್ಕಳು ನಾಶಹೊಂದುವರು. ದ್ರವ್ಯ ಕ್ಷೀಣವಾಗುವದು. ಕಾರ್ಯಗಳು ಕೆಡುವವು. ಗುರುಗಳ ಸೇವೆ ಮಾಡಿದರೆ ಮಾತ್ರ ಸರ್ವವಿಧವಾದ ಸಂಪದ, ಸೌಭಾಗ್ಯ ತಾವಾಗಿಯೇ ಪ್ರಾಪ್ತವಾಗುವವು ಎಂದು ವಿದ್ವಜ್ಜನರ ಹೇಳಿಕೆ. ಗುರುದ್ರೋಹ ಮೂಲಕವಾಗಿ ಹರನು ಕೊಟ್ಟ ಶಾಪದಿಂದ ನಾನು ಈಗ ಇಲ್ಲಿ ಬ್ರಹ್ಮರಾಕ್ಷಸನಾಗಿ ನೆಲೆಸಿದ್ದೇನೆ. ಇದರಿಂದ ನನಗೆ ಮುಕ್ತಿ ಎಂದೊ ಆ ಶಿವನೇ ಬಲ್ಲ.''

ಹೀಗೆ ಆ ಇಬ್ಬರೂ ರಾಕ್ಷಸರು ಧರ್ಮಶಾಸ್ತ್ರ ವಿಷಯ ಮಾತನಾಡುತ್ತ ಗುರುಗಳ ಮಹತ್ವವನ್ನೂ, ಹರನ ಮಹಿಮೆಯನ್ನೂ ಬಣ್ಣಿಸಿ, ಸಂಭಾಷಣೆನಡೆಸಿದ್ದರಿಂದ ಅವರಿಬ್ಬರ ಪಾಪರಾಶಿಗಳೆಲ್ಲವೂ ಕರಗಿ ಹೋದವು. ಇದೇ ಸಂದರ್ಭದಲ್ಲಿ ಕಲಿಂಗ ದೇಶದ ಒಬ್ಬ ಬ್ರಾಹ್ಮಣನು ಅಲ್ಲಿಗೆ ಬಂದನು. ಗರ್ಗ ಎಂದು ಅವನ ಹೆಸರು. ಅವನು ಅತ್ಯಂತ ಭಗವದ್ಭಕ್ತ ಹಾಗೂ ಧಾರ್ಮಿಕ. ಹೆಗಲ ಮೇಲೆ ಅವನು ಗಂಗಾನದಿಯ ನೀರನ್ನು ಹೊತ್ತಿದ್ದ. ಬಾಯಿಂದ ಶ್ರೀ ಹರಿಯ ದಿವ್ಯ ನಾಮಮಹಿಮೆಯನ್ನು ಗಾನರೂಪದಿಂದ ಪಠಿಸುತ್ತಿದ್ದನು. ದೇವರ ಧ್ಯಾನ ಮಾಡುತ್ತ ಅವನು ಆನಂದ ಪರವಶನಾಗಿದ್ದ. ಮೈತುಂಬ ಭಕ್ತಿಯ ರೋಮಾಂಚನ.

ಆ ಬ್ರಾಹ್ಮಣನನ್ನು ಕಂಡಕೂಡಲೇ ಅವರಿಬ್ಬರೂ ರಾಕ್ಷಸರಿಗೂ ಹಾಗೂ ಆ ಪಿಶಾಚಿಗೂ ಹಿಗ್ಗಾಯಿತು. ಹಸಿವು ಉಲ್ಬಣಿಸಿ ಅವನನ್ನು ಕೊಂದು, ಮಾಂಸ ತಿನ್ನಬೇಕೆಂದು ಹಾತೊರೆದವು. ತಮ್ಮ ಉಪವಾಸದ ಪಾರಣೆಯ ಸುಯೋಗ ಒದಗಿ ಬಂದಿತೆಂದು ಅವು ಎಲ್ಲವು ಕೈ ಎತ್ತಿಕೊಂಡು ತಿನ್ನಲು ಏರಿಬಂದವು. ಆದರೆ ಆ ಭೂಸುರನು

ಮಾಡುವ ಉಚ್ಚಸ್ವರದ ನಾಮಸ್ಮರಣೆಯ ಪ್ರಭಾವದಿಂದ, ಈ ರಾಕ್ಷಸ ಪಿಶಾಚರಿಗೆ ಆ ವಿಪ್ರೋತ್ತಮನ ಬಳಿಗೆ ಹೋಗಲು ಆಗಲಿಲ್ಲ. ಅವನ ತೇಜಸ್ಸಿನಿಂದ ಬೆರಗಾಗಿ ಮುಂದೆ ಕಾಲಿಡಲಿಕ್ಕಾಗದ ಆ ರಾಕ್ಷಸರು, ದೂರದಲ್ಲಿಯೇ ನಿಂತು ಕೈ ಮುಗಿದು ನುಡಿದರು. 'ಮಹಾನುಭಾವನಾದ ಬ್ರಾಹ್ಮಣೋತ್ತಮ, ನಿನಗೆ ನಮಸ್ಕಾರ. ನೀನು ನಿಜವಾಗಿಯೂ ಮಹಾ ಮಹಿಮ. ನೀನು ನಡೆಸಿದ ಹರಿ ಸಂಕೀರ್ತನದಿಂದ ನಮಗೆ ನಿನ್ನ ಹತ್ತಿರ ಸುಳಿಯಲೂ ಆಗುತ್ತಿಲ್ಲ. ದೂರದಲ್ಲಿಯೇ ನಿಂತಿದ್ದೇವೆ. ಆದರೆ, ಈಗ ನೀನು ಮಾಡುತ್ತಿರುವ ಭಗವನ್ನಾಮ ಸ್ಮರಣೆಯು ನಿನಗೆ ವಜ್ರಕವಚವಾಗಿದೆ. ಮಹಾಭಯದಿಂದ ನಿನ್ನನ್ನು ಈ ನಾಮ ಸಂಕೀರ್ತನವೇ ಪಾರು ಮಾಡಿದೆ. ಅಯ್ಯಾ ಭೂಸುರೋತ್ತಮಾ, ನೀನು ಮಾಡಿದ ನಾಮ ಸಂಕೀರ್ತನೆ ಕೇಳಿಯೇ ನಮ್ಮ ಹೃದಯಕ್ಕೆ ಶಾಂತಿ ದೊರೆತಿದೆ. ಶ್ರೀ ಹರಿಯ ಮಹಿಮೆಯು ಅಗಾಧವಾಗಿದೆ. ಅವನ ಪುಣ್ಯಕರ ನಾಮಗಳನ್ನು ನೀನು ನಮ್ಮ ಕಿವಿಯ ಮೇಲೆ ಹಾಕಿ, ನಾವು ಎಂದೂ ಕಾಣದ ಆಂತರಂಗಿಕ ಶಾಂತಿ, ಸಂತಸಗಳನ್ನು ನೀನು ನಮಗೆ ಕರುಣಿಸಿದೆ. ಮಹಾನುಭಾವಾ, ನೀನು ನಿಜವಾಗಿಯೂ ಮಹಾಪುರುಷ. ನಿನ್ನಲ್ಲಿ ರಾಗದ್ವೇಷಾದಿ ದೋಷವಿಲ್ಲ. ನೀನು ಹೊತ್ತು ತಂದ ಗಂಗಾಜಲದ ನೀರಿನಿಂದ ನಮಗೆ ಸೇಚನಮಾಡು. ಈ ಮಹಾ ಪಾಪದಿಂದ ನಮ್ಮ ರಕ್ಷಿಸು.''

ಹರಿಸೇವಾಪರೋ ಭೂತ್ವಾ ಯಶ್ಚಾತ್ಮಾನಂ ತು ತಾರಯೇತ್ ।
ಸ ತಾರಯೇಜ್ಜಗತ್ಸರ್ವಮಿತಿ ಶಂಸಂತಿ ಸೂರಯಃ ।
ಅಪಹಾಯ ಹರೇರ್ನಾಮ ಘೋರ ಸಂಸಾರ ಭೇಷಜಂ ॥

ಕೇನೋಪಾಯೇನ ಲಭ್ಯತೇ ಮುಕ್ತಿಃ ಸರ್ವತ್ರ ದುರ್ಲಭಾ ।
ಲೋಹೋಡುಪೇನ ಪ್ರತರನ್ನಿಮಜ್ಜತ್ಯುದಕೇ ಯಥಾ ।

ವಿಷ್ಣು ಸೇವೆಯಲ್ಲಿ ನಿರತನಾಗಿ ತನ್ನನ್ನು ಉದ್ಧರಿಸಿಕೊಳ್ಳುವವನು ಹರ್ಯನುಗ್ರಹ ದಿಂದ ಸಕಲ ಜಗತ್ತನ್ನು ಉದ್ಧರಿಸಲು ಸಮರ್ಥನಾಗುತ್ತಾನೆಂದು ಜ್ಞಾನಿಗಳು ಪ್ರಶಂಸೆ ಮಾಡುತ್ತಾರೆ. ಭಯಂಕರವಾದ ಸಂಸಾರವೆಂಬ ರೋಗಕ್ಕೆ ಔಷಧ ಸ್ಥಾನೀಯವಾದ, ಹರಿನಾಮವನ್ನು ಬಿಟ್ಟು ಇನ್ನಾವ ಉಪಾಯದಿಂದ ಮುಕ್ತಿಯು ಲಭಿಸೀತು! ಮುಕ್ತಿಯು ಎಲ್ಲರಿಗೂ ಅನಾಯಾಸದಿಂದ ದೊರಕುವುದಿಲ್ಲ. ಕಬ್ಬಿಣ ಮುಂತಾದ ಲೋಹದಿಂದ ನಿರ್ಮಿತವಾದ ದೋಣಿಯಿಂದ ಸಮುದ್ರವನ್ನು ದಾಟಲು ಪ್ರಯತ್ನಿಸುವವನು, ನೀರಿನಲ್ಲಿ ಮುಳುಗುವಂತೆ, ಪುಣ್ಯವನ್ನು ಗಳಿಸದಿರುವವರು ಸಂಸಾರದಲ್ಲಿ ಸಿಲುಕಿ ಪೇಚಾಡುತ್ತ, ತಾವೇ ಸದ್ಗತಿಯನ್ನು ಹೊಂದಲು ಅಸಮರ್ಥರಾಗಿರುವಾಗ, ಇತರರನ್ನು ಈ ಸಂಸಾರ ಸಾಗರದಿಂದ ಹೇಗೆ ಪಾರು ಮಾಡಿಯಾರು?

ದೊಡ್ಡವರ ಚರಿತ್ರೆಯು ಎಲ್ಲರಿಗೂ ಸಂತೋಷವನ್ನುಂಟು ಮಾಡುವದು. ಚಂದ್ರನು ಎಲ್ಲರಿಗೂ ಆನಂದದಾಯಕನಾಗಿಲ್ಲವೆ? ಭೂಲೋಕದಲ್ಲಿ ಎಷ್ಟೋ ಪವಿತ್ರವಾದ ತೀರ್ಥಗಳಿವೆ. ಅವೆಲ್ಲ ತೀರ್ಥಗಳು ಗಂಗಾನೀರಿನ ಒಂದು ಹನಿಗೂ ಸರಿದೂಗಲಾರವು ತುಳಸೀದಳದಿಂದ ಕೂಡಿದ ಸಾಸಿವೆ ಕಾಳಿನಷ್ಟು ಗಂಗಾನೀರು ಹಿಂದು ಮುಂದಿನ ಇಪ್ಪತ್ತೊಂದು ಕುಲಗಳನ್ನು ಪ್ರೋಕ್ಷಣಮಾತ್ರದಿಂದ ಉದ್ಧರಿಸುತ್ತದೆ. ಇದನ್ನೆಲ್ಲ ಸರ್ವಶಾಸ್ತ್ರಪಂಡಿತನಾದ ನಿನಗೆ ನಾವು ಹೇಳಬೇಕೆ? ಆದುದರಿಂದ ನಿನ್ನ ಹೆಗಲ ಮೇಲಿದ್ದ

ಗಂಗಾಜಲವನ್ನು ನಮಗೆ ನೀಡಿ ಪಾಪಿಗಳಾದ ನಮ್ಮನ್ನು ಉದ್ಧರಿಸು ಪುಣ್ಯಾತ್ಮ.'' ಎಂದು ಬೇಡಿಕೊಂಡವು. ಗರ್ಗ ಬ್ರಾಹ್ಮಣನಿಗೆ ಪರಮಾಶ್ಚರ್ಯ! ಈ ರಾಕ್ಷಸ ಪಿಶಾಚಿಗಳಿಗೂ ಗಂಗೆಯ ಬಗ್ಗೆ ಇಷ್ಟು ಭಕ್ತಿಯೇ? ಇಂತಹ ನೀಚ ಯೋನಿಯ ಪಾತಕಿಗಳೂ ಕೂಡ ಗಂಗೆಯ ಮಹಿಮೆಯನ್ನು ತಿಳಿದಿದ್ದಾರೆ ಎಂದು ಯೋಚಿಸಿ ಈ ದುರ್ಯೋನಿಯ ಪಾತಕಿಗಳಿಗೆ ಉಪಕಾರಗೈಯಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದ. ಶ್ರೀ ಹರಿಗೆ ಏರಿಸಿದ ನಿರ್ಮಾಲ್ಯವನ್ನು ಆ ಗಂಗೋದಕದಲ್ಲಿ ಬೆರಸಿ ಅದನ್ನು ತನ್ನ ಕೈಯಲ್ಲಿ ತೆಗೆದುಕೊಂಡು ರಾಕ್ಷಸರ ಮೇಲೆ ಪ್ರೋಕ್ಷಣೆ ಮಾಡಿದ. ದೂರ ನಿಂತ ರಾಕ್ಷಸ, ಹಾಗೂ ಪಿಶಾಚಿಯರ ಮೇಲೆ ಸಾಸಿವೆ ಕಾಳಿನಷ್ಟು ಗಂಗೆಯ ನೀರ ಬಿಂದುಗಳು ಬಿದ್ದವು. ಆ ತುಂತುರ ಹನಿಯ ಸಂಪ್ರೋಕ್ಷಣೆ ಮಾತ್ರದಿಂದಲೇ ಆ ಪಾಪಿಗಳ ರಾಕ್ಷಸ ದೇಹವು ತೊಲಗಿತು. ದಿವ್ಯದೇಹವನ್ನು ಅವರೆಲ್ಲರೂ ಧರಿಸಿ ನಿಂತರು. ಪಿಶಾಚಿಯಾದ ಬ್ರಾಹ್ಮಣಿಯೂ, ಹಾಗೂ ಸೋಮದತ್ತನೂ ದಿವ್ಯದೇಹ ಧರಿಸಿ ನಿಂತರು. ಸೂರ್ಯ ಸಮಾನವಾದ ಕಾಂತಿಯು ಕಳಕಳಿಸತೊಡಗಿತು ಅವರ ದೇಹದಲ್ಲಿ. ಅವರೆಲ್ಲರೂ ಶಂಖ, ಚಕ್ರ, ಗದಾಧಾರಿಗಳಾಗಿ ಹರಿ ಸಾಮೀಪ್ಯ ಹೊಂದಿದರು. ಆ ಗರ್ಗ ಬ್ರಾಹ್ಮಣನನ್ನು ಹೊಗಳಿ ಸ್ತೋತ್ರ ಮಾಡುತ್ತ ಹರಿಮಂದಿರದತ್ತ ಪ್ರಯಾಣ ಮಾಡಿದರು. ಅಲ್ಲಿ ಉಳಿದ ಕಲ್ಮಾಷಪಾದ ರಾಜನಿಗೂ ಕೂಡ ರಾಕ್ಷಸ ಭಾವವು ಕಳೆದು ಹೋಗಿತ್ತು. ಅವನು ತನ್ನ ಮೊದಲಿನ ಸೌದಾಸರಾಜನ ರೂಪ ಪಡೆದು ನಿಂತನು. ಆದರೂ ಅವನ ಮನಸ್ಸಿನಲ್ಲಿ ದೊಡ್ಡ ಚಿಂತೆ ಆಯಿತು ದುಃಖಸಂತಪ್ತನಾಗಿ ಮನಸ್ಸಿನಲ್ಲಿಯೇ ಕುದಿಯುತ್ತಿರುವ ಆ ರಾಜನನ್ನು ನೋಡಿ, ಸಾಕ್ಷಾತ್ ಸರಸ್ವತಿಯು ಗುಪ್ತರೂಪದಿಂದ ಬಂದು ರಹಸ್ಯವಾಗಿ ಹೇಳಿದಳು -

'ರಾಜನೇ, ನೀನು ದುಃಖಿಸಬೇಡ. ಆ ಬ್ರಾಹ್ಮಣಿಯೂ, ಆ ಬ್ರಹ್ಮ ರಾಕ್ಷಸನೂ ನಿನ್ನ ಕಣ್ಣೆದುರೇ ಮೋಕ್ಷಕ್ಕೆ ಹೋದದ್ದು ಕಂಡು ನಿನಗೆ ದುಃಖವಾಗಿರಬಹುದು. ನೀನು ಚಿಂತಿಸಬೇಡ. ಹರಿಯಲ್ಲಿ ಭಕ್ತಿ ಮಾಡುವವರೆಲ್ಲರೂ ಮೋಕ್ಷವನ್ನು ಹೊಂದುವದರಲ್ಲಿ ಸಂದೇಹವೇ ಇಲ್ಲ. ಆದರೆ ಅವರ ಪ್ರಾರಬ್ಧ ಕರ್ಮ ಸವೆಯಬೇಕಷ್ಟೇ! ಧರ್ಮಾಚರಣೆ, ಅಧಿಕಾಧಿಕ ಹರಿ ಸೇವೆಗಳಿಂದ, ನಿನ್ನ ಪ್ರಾರಬ್ಧ ಸವೆದ ಬಳಿಕ ನೀನು ಕೂಡ ನಿಶ್ಚಿತವಾಗಿ ಅವರಂತೆ ಪರಮ ಪದ ಹೊಂದುವೆ. ನೀನು ಗುರುವನ್ನು ಮರೆಯಬೇಡ. ಹರಿಯನ್ನು ತೊರೆಯಬೇಡ. ಹೀಗೆ ಯಥೋಚಿತವಾಗಿ ಹರಿ ಪೂಜೆಯನ್ನು ತಪ್ಪದೆ ಆಚರಿಸು ಅದರಿಂದ ನಿನಗೆ ಇಲ್ಲಿ ಶ್ರೇಯಸ್ಸು ಉಂಟು. ಮತ್ತು ಪರದಲ್ಲಿ ಶ್ರೇಯಸ್ಸಾಗುವದು.''

ವಾಗ್ದೇವಿಯ ಈ ಮಾತಿನಿಂದ ಸೌದಾಸನಿಗೆ ಸಮಾಧಾನವಾಯಿತು. ಅವನು ವಶಿಷ್ಠರ ಮಾತನ್ನು ನೆನೆದುಕೊಂಡು, ಹರಿಗುರುಗಳ ಸ್ತೋತ್ರ ಮಾಡಿದನು. ಅಲ್ಲಿಯೇ ಕುಳಿತ ಗರ್ಗ ಮುನಿಯನ್ನು ನಮಸ್ಕರಿಸಿದನು. ಮತ್ತು ಪೂರ್ವ ಕಥೆಯನ್ನೆಲ್ಲ ಸಂಪೂರ್ಣವಾಗಿ ವಿವರಿಸಿದನು. ಅವನ ಅಪ್ಪಣೆ ಪಡೆದು ಕಾಶಿಗೆ ಹೋದನು ಆ ಸೌದಾಸ ಮಹಾರಾಜ. ಅಲ್ಲಿ ಆರು ತಿಂಗಳು ನೆಲಿಸಿ ನಿತ್ಯ ಗಂಗಾಸ್ನಾನ ಮತ್ತು ವಿಶ್ವೇಶ್ವರ ಪೂಜೆಯನ್ನು ಭಕ್ತಿಯಿಂದ ಮಾಡಿದನು. ಇದರಿಂದ ಬ್ರಾಹ್ಮಣಿಯು ಕೊಟ್ಟ ಶಾಪದಿಂದ ಅವನಿಗೆ ಮುಕ್ತಿಯಾಯಿತು. ಅನಂತರ ತನ್ನ ರಾಜಧಾನಿಗೆ ಬಂದನು. ಅವನನ್ನು ನೋಡಿ ವಶಿಷ್ಠರಿಗೆ ಸಂತೋಷವಾಯಿತು. ಮಹಾತ್ಮರೇ ಅಲ್ಲವೇ ಆ ಮಹರ್ಷಿಗಳು? ಅತ್ಯಾನಂದದಿಂದ ಅವರು ಸೌದಾಸನನ್ನು ಸಿಂಹಾಸನದ ಮೇಲೆ ಕೂಡಿಸಿ ಮತ್ತೊಮ್ಮೆ ಪಟ್ಟಾಭಿಷೇಕ ಮಾಡಿದರು. ಮಿತ್ರಸಹ

ಮಹಾರಾಜನು ತನ್ನ ಸಾಮ್ರಾಜ್ಯವನ್ನು ಧರ್ಮಿಷ್ಠನಾಗಿ ಶಾಸನಗೈದನು. ಹೀಗೆ ವಶಿಷ್ಠರ ಅನುಗ್ರಹದಿಂದ ಆ ಮಹಾರಾಜನು ಸಪ್ತ ಸಾಗರ ಪರಿಯಂತ ಭೂಮಂಡಲವನ್ನು ಆನಂದದಿಂದ ಆಳಿದನು. ಸುಖೋಪಭೋಗ ಅನುಭವಿಸಿದನು. ದಿವ್ಯ ಸಂತಾನ ಪಡೆದನು. ಪುಣ್ಯ ಕರ್ಮ ಮಾಡಿದನು, ಯಜ್ಞಯಾಗ ನೆರವೇರಿಸಿದನು. ಹರಿ ಗುರುಗಳ ಸೇವೆಯನ್ನು ಅತ್ಯಧಿಕವಾಗಿ ಮಾಡಿದನು. ಇದರಂತೆ ಇರುವಷ್ಟು ಕಾಲ ಇಲ್ಲಿ ಸುಖದಿಂದಿದ್ದು ಮರಣಾನಂತರ ಮೋಕ್ಷವನ್ನು ಹೊಂದಿದನು.

ಭೂಸುರೋತ್ತಮನೆ, ಇದೇನು ಅಂತಹ ಆಶ್ಚರ್ಯವಲ್ಲ. ಕಾಶಿಯಲ್ಲಿ ನೆಲೆಸಿ, ಗಂಗೆಯಲ್ಲಿ ಮಿಂದು ಶ್ರೀ ಹರಿಯ ನಾಮಸ್ಮರಣೆಯನ್ನು ಮಾಡಿ ಗಂಗೆಯ ನೀರನ್ನು ಕುಡಿದ ಮನುಷ್ಯನು ಮುಕ್ತನಾಗುವದು ಆಶ್ಚರ್ಯವೇನು! ಇದು ಅತ್ಯಂತ ಸಹಜ ಮತ್ತು ಸ್ವಾಭಾವಿಕ. ಗಂಗಾಸ್ನಾನ, ಶ್ರೀ ಹರಿ ಧ್ಯಾನಗಳಿಂದ ದೊರಕದಿದ್ದುದು ಯಾವದು? 'ಗಂಗಾ ಗಂಗಾ' ಎಂದು ಗಂಗೆಯ ನಾಮವನ್ನು ಒಮ್ಮೆ ಉಚ್ಚರಿಸಿದರೂ ಸಾಕು. ಆಗಲೇ ಪಾಪ ಪರಿಹಾರವಾಗಿ ಮನುಷ್ಯನು ಬ್ರಹ್ಮಲೋಕವನ್ನು ಐದುತ್ತಾನೆ.

ನಾರದ ಮಹಾಪುರಾಣದಲ್ಲಿ ಒಂಭತ್ತನೇಯ ಅಧ್ಯಾಯ ಮುಗಿದುದು



## ಬಲಿಚಕ್ರವರ್ತಿಯಿಂದ ದೇವತೆಗಳ ಪರಾಜಯ ದೇವಮಾತೆ ಅದಿತಿಯ ಉಗ್ರ ತಪಸ್ಸು

ಅಧ್ಯಾಯ - ೧೦

**ನಾರದ:-** ಶ್ರೀ ಹರಿಯ ಕಾಲಿನ ತುದಿಯಿಂದ ಹರಿದು ಬಂದ ನದಿಗೆ ಗಂಗಾ ಎಂದು ಹೇಳುವರಷ್ಟೇ! ಸೋದರನಾದ ಸನಕ ಮುನಿವರ್ಯ, ನಿನಗೆ ನನ್ನ ಮೇಲೆ ಮಾಡಬೇಕೆಂದಿದ್ದರೆ ಆ ಗಂಗೆಯು ಉದ್ಭವಿಸಿದ ಸಂಗತಿಯನ್ನು ಬಿತ್ತರಿಸು.

**ಸನಕ:-** ನಾರದ, ಆ ಗಂಗೆಯ ಉತ್ಪತ್ತಿಯ ಕಥೆಯನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಇಂದ್ರಾದಿ ದೇವತೆಗಳಿಗೆ ತಂದೆಯಾದ ಕಶ್ಯಪನೆಂಬ ಮಹರ್ಷಿ ಇದ್ದನು. ಅವನಿಗೆ ದಿತಿ, ಅದಿತಿ ಎಂಬ ಇಬ್ಬರು ಮಡದಿಯರು. ಅವರಿಬ್ಬರೂ ದಕ್ಷ ಪ್ರಜಾಪತಿಯ ಮಕ್ಕಳೇ. ಅವರಲ್ಲಿ ಅದಿತಿದೇವಿಯು ದೇವತೆಗಳಿಗೆ ತಾಯಿ. ದಿತಿ ದೈತ್ಯರಿಗೆಲ್ಲ ಜನನಿ. ಅವರಿಬ್ಬರ ಮಕ್ಕಳಾದ ದೇವದಾನವರು ಪರಸ್ಪರ ಸ್ಪರ್ಧಿಸುತ್ತಿದ್ದರು. ಒಬ್ಬರನ್ನೊಬ್ಬರು ಸೋಲಿಸಬೇಕೆಂದು ಸದಾ ಉಭಯ ಪಕ್ಷದಲ್ಲೂ ಪ್ರಯತ್ನ. ದೈತ್ಯರಿಗೆ ಪೂರ್ವದೇವರೆಂದೂ ಹೆಸರು ಆಗಿದ್ದಿತು. ಆ ದೈತ್ಯರಲ್ಲಿ ಮೊಟ್ಟ ಮೊದಲಿನ ಬಲಿಷ್ಠ ದೈತ್ಯನೆಂದರೆ ಹಿರಣ್ಯಕಶಿಪು. ಅವನ ಮಗ ಪ್ರಲ್ಹಾದ, ಅವನು ಜಾತಿಯಿಂದ ದೈತ್ಯನಾದರೂ ಸ್ವಭಾವದಿಂದ ಮಹಾತ್ಮನಾಗಿದ್ದ. ದೈತ್ಯರಲ್ಲಿ ಸಾತ್ವಿಕ ಶಿಖಾಮಣಿ ಎಂದರೆ ಪ್ರಹ್ಲಾದ. ತಂದೆಯಂತೆ ಪ್ರಹ್ಲಾದನ ಮಗ ವಿರೋಚನ ಕೂಡ ದೇವಬ್ರಾಹ್ಮಣರಲ್ಲಿ ಭಕ್ತಿಯುಕ್ತ. ವಿರೋಚನನ ಮಗನೇ ಬಲಿಚಕ್ರವರ್ತಿ. ಅವನು ತೇಜಸ್ವಿ ಇದ್ದಷ್ಟೇ ಪ್ರತಾಪಿಯೂ ಆಗಿದ್ದ. ದೈತ್ಯಸೇನೆಯ ಧುರೀಣನಾಗಿ ಅಖಂಡ ಭೂಮಂಡಲವನ್ನೆಲ್ಲ ಆಳತೊಡಗಿದ ಆ ಬಲಿರಾಜ. ಮೊದಲು ಅವನು ಪೃಥ್ವೀ ಮಂಡಲವನ್ನು ಗೆದ್ದು ಸ್ವರ್ಗವನ್ನೂ ವಶಪಡಿಸಲು

ಬಯಸಿದನು. ಅವನ ಚತುರಂಗ ಸೇನೆಯು ಅತ್ಯಂತ ಬಲಿಷ್ಠವಾಗಿತ್ತು. ಕುಭಾಂಡ, ಕುಪಕರಣ ಎಂಬ ಅವನ ಇಬ್ಬರು ಮುಖ್ಯ ಮಂತ್ರಿಗಳು ಮಹಾಪ್ರಚಂಡರಾಗಿದ್ದರು. ಆ ಬಲಿರಾಜನಿಗೆ ನೂರು ಜನ ಮಕ್ಕಳು. ಜ್ಯೇಷ್ಠನಾದ ಬಾಣಾಸುರನು ತಂದೆಗೆ ಸಮಾನನಿದ್ದ ಸತ್ವದಲ್ಲಿ ಪರಾಕ್ರಮದಲ್ಲಿ ಸ್ವರ್ಗದಲ್ಲಿರುವ ದೇವತೆಗಳನ್ನೆಲ್ಲ ಸೋಲಿಸುವ ಬಯಕೆ ಆ ಬಲಿಚಕ್ರವರ್ತಿಗೆ. ದೊಡ್ಡ ಸೈನ್ಯವನ್ನು ತೆಗೆದುಕೊಂಡು ಸ್ವರ್ಗಕ್ಕೆ ಲಗ್ಗೆಯಿಟ್ಟ. ಅವನ ದಾಳಿಯನ್ನು ಸನ್ನದ್ಧರಾಗಿ ಸುರ ಸೈನಿಕರೆಲ್ಲ ಧೈರ್ಯದಿಂದ ಎದುರಿಸಿದರು. ದೇವ, ದೈತ್ಯರಲ್ಲಿ ಘನಘೋರ ಸಂಗ್ರಾಮ ಜರುಗಿತು. ದಾರುಣವಾದ ಶಸ್ತ್ರಾಸ್ತ್ರಗಳಿಂದ ದೈತ್ಯರು ದೇವಸೇನೆಯನ್ನು ಬಲವಾಗಿ ಪ್ರಹರಿಸಿದರು. ಇದರಿಂದ ಭಯಭ್ರಾಂತರಾದ ದೇವತೆಗಳು ಹೆದರಿ, ಹೌಹಾರಿ ಹೋದರು. ಅನೇಕಜನ ಸುರ ಸೈನಿಕರು ಸೋತು ಸ್ವರ್ಗ ಬಿಟ್ಟು ಓಡಿಹೋದರು. ಎಷ್ಟೋ ಸುರರು ಮನುಷ್ಯ ವೇಷ ತೊಟ್ಟುಭೂಲೋಕದಲ್ಲಿ ತಲೆ ಮರೆಸಿಕೊಂಡು ತಿರುಗಾಡಿದರು. ಬಲಿ ಚಕ್ರವರ್ತಿಯು ನಿರಂತರ ನಾರಾಯಣನ ನಾಮಸ್ಮರಣೆ ಮಾಡುತ್ತಿದ್ದ. ಆ ಭಗವನ್ನಾಮ ಸ್ಮರಣೆಯ ಮಹಿಮೆಯಿಂದ ಅವನ ಶಕ್ತಿ ಸಾಮರ್ಥ್ಯಗಳು ದಿನೇದಿನೇ ಅಭಿವೃದ್ಧಿಯಾಗುತ್ತಲಿದ್ದವು. ಇದರಿಂದ ದೇವಾಧಿ ದೇವತೆಗಳನ್ನೂ ಕೂಡ ಸೋಲಿಸಿ ಸ್ವರ್ಗ ಸಾಮ್ರಾಜ್ಯ ಆಕ್ರಮಿಸಿದನು. ಮೂರು ಲೋಕಗಳ ಆಧಿಪತ್ಯವು ಅವನ ಅಡಿಯಾಳಾಯಿತು. ಅಖಂಡ ಐಶ್ವರ್ಯ; ಅಪ್ರತಿಹತ ಅಧಿಕಾರ, ಸರ್ವಲೋಕಗಳ ಆಧಿಪತ್ಯ ಇವುಗಳಿಂದ ಉಬ್ಬಿಹೋದರೂ ಆ ಬಲಿಚಕ್ರವರ್ತಿಯು ಎಂದೂ ಕೊಬ್ಬಲಿಲ್ಲ. ಗರ್ವಿಷ್ಠನಾಗಲಿಲ್ಲ. ಶ್ರೀ ಹರಿಯ ಸೇವೆಯೇ ಅವನ ಜೀವನದ ಗುರಿಯಾಗಿತ್ತು. ಶ್ರೀ ಹರಿಯ ಪ್ರೀತಿಗಾಗಿ ಅನೇಕಾನೇಕ ಅಶ್ವಮೇಧಯಾಗ ಮಾಡಿದನು. ಸ್ವರ್ಗ ಲೋಕದಲ್ಲಿ ಸ್ವಯಂ ಇಂದ್ರನಾಗಿ ಆಡಳಿತ ನಡೆಸಿದನು. ಅಷ್ಟದಿಪಾಲಕರನ್ನೆಲ್ಲ ಹೊಡೆದೋಡಿಸಿ ತಾನೇ ದಿಗಂತರಾಳದ ನಿಯಾಮಕತ್ವವನ್ನೂ ವಹಿಸಿದನು. ದೇವತೆಗಳಿಗಾಗಿ ಬ್ರಾಹ್ಮಣರು ಯಜ್ಞದಲ್ಲಿ ನೀಡುವ ಹವಿರ್ಭಾಗಗಳನ್ನೆಲ್ಲ ಇಂದ್ರ ಪದವಿಯಲ್ಲಿ ಕುಳಿತು ತಾನೇ ಭುಂಜಿಸತೊಡಗಿದನು.

ಇದರಿಂದ ದೇವಮಾತೆಯಾದ ಅದಿತಿದೇವಿಗೆ ದುಃಖವಾಯಿತು. ತನ್ನ ಮಕ್ಕಳ ದುಃಖ ದುರವಸ್ಥೆಗಳನ್ನು ಕಂಡು ಅವಳ ಹೃದಯವು ತಳಮಳಿಸಿತು. ಜೀವನವೇ ಬೇಸರವಾಯಿತು. ಅವಳು ಮನೆಯನ್ನು ತೊರೆದಳು. ಹಿಮಗಿರಿಗೆ ಸಾಗಿದಳು. ಹಿಮಾಲಯದಲ್ಲಿ ನಿಂತು ಶ್ರೀ ಹರಿಯನ್ನು ಕುರಿತು ತಪಸ್ಸನ್ನು ಮಾಡಿದಳು. ಆ ದೇವಮಾತೆಯು ಮಾಡಿದ ತಪಸ್ಸು ಸಾಮಾನ್ಯವಲ್ಲ. ಎಂತಹ ಮಹಾಮುನಿಗಳಿಗೂ ಅಶಕ್ಯವಾದ ದುಸ್ತರವಾದ ತಪಸ್ಸನ್ನು ಆಚರಿಸಿದಳು ಶ್ರೀ ಹರಿಯನ್ನು ಕುರಿತು. ಕೆಲವು ದಿನ ಆ ಪದ್ಮಾಕ್ಷಿಯು ಪದ್ಮಾಸನದಲ್ಲಿ ಕುಳಿತು ತಪಗೈದಳು. ಆಮೇಲೆ ನಿಂತು ಆರಂಭಿಸಿದಳು. ಅನಂತರ ಒಂಟಿಕಾಲಿನಲ್ಲಿ ನಡೆಸಿದಳು ಎಷ್ಟೋ ವರ್ಷ ತಪಸ್ಸು. ಕೊನೆಗೆ ಕಾಲಿನ ಉಂಗುಟ ಮಾತ್ರ ನೆಲಕ್ಕೆ ಊರಿ ನಿಂತುಕೊಂಡು, ಸೂರ್ಯನಲ್ಲಿ ದೃಷ್ಟಿ ನೆಟ್ಟು, ಘೋರ ತಪಂಗೈದಳು ಆ ಕೋಮಲಾಂಗಿ. ಮೊದಮೊದಲು ಹಣ್ಣು ಹಂಪಲ ತೆಗೆದುಕೊಂಡು ತಪಿಸಿದಳು. ಅನಂತರ ಒಣಗಿದ ಎಲೆ. ಕೆಲದಿನದ ಬಳಿಕ ಅದಿತಿ ಅದನ್ನೂ ಬಿಟ್ಟು ನೀರು ಕುಡಿದಿದ್ದಳು. ಸ್ವಲ್ಪ ಕಾಲದ ನಂತರ ಆ ಜಲಪ್ರಾಶನ ಕೂಡ ತ್ಯಜಿಸಿದಳು. ಬರಿ ಗಾಳಿಯನ್ನೇ ಸೇವಿಸಿಯೇ ನಡೆಯಿತು ಆ ನಾರೀಮಣಿಯ ತಪಸ್ಸು. ಕೊನೆಗೆ ಶ್ವಾಸನಿರೋಧಗೈದು

ಜ್ಞಾನಾನಂದರೂಪಿಯಾದ ಮುಕುಂದನನ್ನು ಒಂದೇ ಮನಸ್ಸಿನಿಂದ ಧ್ಯಾನ ಮಾಡುತ್ತ ಅತ್ಯುಗ್ರ ತಪವನ್ನು ಆಚರಿಸಿದಳು. ಅವಳು ತಪವನ್ನು ಮಾಡಿದ್ದು ಒಂದೆರಡು ವರ್ಷವೇ? ಸಾವಿರ ವರ್ಷ ನಡೆಯಿತು ಅವಳ ಅದ್ಭುತವಾದ ತಪಶ್ಚರ್ಯೆ. ದೇವಮಾತೆಯ ಉಗ್ರಾತ್ಯುಗ್ರತರವಾದ ಈ ತಪೋನುಷ್ಠಾನವನ್ನು ಕಂಡು ದೈತ್ಯರು ಗಾಬರಿಯಾಗಿ ಹೋದರು. ಮಾಯಾವಿಗಳಾದ ಆ ದಾನವರು ದೇವತೆಗಳ ರೂಪವನ್ನು ತೆಗೆದುಕೊಂಡು, ಅವಳ ಬಳಿಗೆ ಬಂದರು. ತನ್ನ ಮಕ್ಕಳಾದ ದೇವತೆಗಳೇ ಬಂದಿದ್ದಾರೆಂದು ಅದಿತಿಯು ತಿಳಿದಳು. ದೈತ್ಯರು ಬಲಿಯ ಪ್ರೇರಣೆಯಂತೆ, ದೇವತೆಗಳಂತೆಯೇ ದನಿ ತೆಗೆದು ಅವಳಿಗೆ ಹೇಳಿದರು. ''ತಾಯಿ, ಯಾಕಿಷ್ಟು ಉಗ್ರ ತಪಸ್ಸನ್ನು ಕೈಕೊಂಡಿರುವಿ? ಇದರಿಂದ ದೇಹವೆಲ್ಲವೂ ಒಣಗಿ ಹೋಗುವದು. ದೈತ್ಯರಿಗೆ ಇದು ತಿಳಿದರೆ 'ನಮ್ಮ ನಾಶಕ್ಕಾಗಿ ಇವಳು ತಪಸ್ಸು ಮಾಡುವಳು' ಎಂದು ತಿಳಿದು ಅವರು ನಿನ್ನನ್ನು ಚಿತ್ರಹಿಂಸೆಗೆ ಗುರಿಪಡಿಸಬಹುದು. ಆದುದರಿಂದ ಈ ತಪಸ್ಸು ಮಾಡುವದನ್ನು ಬಿಟ್ಟುಬಿಡು, ತಪಸ್ಸೆಂದರೆ ಬಹಳ ಕಷ್ಟ. ನಿನ್ನ ಈ ಸುಕುಮಾರ ಶರೀರವು ಈ ಉಗ್ರ ತಪಸ್ಸಿನಿಂದ ಜೀರ್ಣಶೀರ್ಣವಾಗಿ ಹೋಗುವದು. ಪಂಡಿತರಾದವರು ಅತ್ಯಂತ ಪ್ರಯಾಸ ಸಾಧ್ಯವಾದ ಪುಣ್ಯವನ್ನು ಪ್ರಶಸ್ತವೆಂದು ಹೇಳುವದಿಲ್ಲ. ಮೊದಲು ಮಾನವರು ಶರೀರವನ್ನು ರಕ್ಷಿಸಬೇಕು. ದೇಹವನ್ನು ಉಪೇಕ್ಷಿಸುವವರು ನಿಜವಾಗಿಯೂ ಆತ್ಮಘಾತಕರು. ಆದುದರಿಂದ ನೀನು ಈ ತಪಸ್ಸನ್ನು ಬಿಟ್ಟು ಸುಖವಾಗಿ ಇದ್ದುಬಿಡು, ನಿನ್ನ ಈ ಕಾಯಕ್ಲೇಶವನ್ನು ನಮ್ಮಿಂದ ನೋಡಲು ಆಗುವದಿಲ್ಲ. ನಿನ್ನ ಜೀವಕ್ಕೇನಾದರೂ ಅಪಾಯವಾದರೆ ನಮ್ಮ ಗತಿ ಏನು? ತಾಯಿ ಇಲ್ಲದ ಮಕ್ಕಳು ಇದ್ದರೂ ಸತ್ತಂತೆಯೇ ಪಶು, ಮರ, ಬಳ್ಳಿ, ಹಾವು, ಗೋವು ಯಾವ ಪ್ರಾಣಿಯಾದರೂ ತಾಯಿ ಇಲ್ಲದಿದ್ದರೆ ಜೀವನ್ಮೃತವಾದಂತೆಯೇ! ದರಿದ್ರನಾಗಲಿ, ರೋಗಿಷ್ಠನಾಗಲಿ ಮಾನವನು ತಾಯಿಯನ್ನು ಕಂಡಕೂಡಲೆ ಪರಮಾನಂದವನ್ನು ಹೊಂದುತ್ತಾನೆ. ಕೆಲವರಿಗೆ ಅನ್ನ ಕಂಡರೆ ಆಗುವದಿಲ್ಲ. ಹಲವರಿಗೆ ಜಲಪಾನ ಮಾಡಲು ಅಪೇಕ್ಷೆ ಇರುವದಿಲ್ಲ. ಇನ್ನೂ ಎಷ್ಟೋ ಜನರಿಗೆ ಧನವು ಬೇಡವಾಗುವದು, ಹೆಂಡತಿಯನ್ನು ಕಂಡರೆ ಅಸಹ್ಯಪಟ್ಟುಕೊಳ್ಳುವವರಿಗೂ ಕೊರತೆ ಇಲ್ಲ. ಆದರೆ ತಾಯಿಯನ್ನು ಕಂಡು ಮುಖ ತಿರುಗಿಸುವ ಜನ ಮಾತ್ರ ಎಲ್ಲಿಯೂ ಇರುವದಿಲ್ಲ. ಯಾರ ಮನೆಯಲ್ಲಿ ಧರ್ಮಿಷ್ಠಳಾದ ತಾಯಿ, ಪತಿವ್ರತೆಯಾದ ಹೆಂಡತಿ ಇರುವದಿಲ್ಲವೋ ಅಂತಹ ಮನುಷ್ಯನು ಮನೆ ತೊರೆದು ಅಡವಿ ಪಾಲಾಗುವದೇ ಲೇಸು. ನಾರಾಯಣನಲ್ಲಿ ಭಕ್ತಿ ಇಲ್ಲದ ಧರ್ಮ, ಭೋಗಮಾಡದ ದ್ರವ್ಯ, ಮಡದಿ ಮಕ್ಕಳಿಲ್ಲದ ಮನೆ ಇವು ಮೂರು ಹೇಗೆ ತ್ಯಾಜ್ಯವಾಗಿವೆಯೋ ಹಾಗೆ ಮಾತೆ ಇಲ್ಲದ ಮಕ್ಕಳೂ ಕೂಡ ತ್ಯಾಜರೇ ಆಗಿದ್ದಾರೆ. ಆದುದರಿಂದ ದೇವೀ, ನಿನ್ನ ಈ ತಪಸ್ಸಿನಿಂದ ಕೊರಗಿದ ದೇಹ ಕಂಡು ಮಕ್ಕಳಾದ ನಮಗೆ ಬಹಳ ದುಃಖವಾಗಿದೆ. ಹೀಗೆ ನಿನ್ನ ತಪಸ್ಸು ಮುಂದುವರಿದರೆ ನಿನ್ನ ಪ್ರಾಣಕ್ಕೆ ಅಪಾಯ ಬಂದೀತೆಂದು ನಾವೆಲ್ಲ ಚಿಂತಾಕ್ರಾಂತರಾಗಿದ್ದೇವೆ. ಅಮ್ಮಾ, ದಯಮಾಡಿ ಈ ತಪಸ್ಸನ್ನು ಬಿಡು. ನಿನ್ನ ಮಕ್ಕಳ ಮೇಲೆ ಕರುಣೆದೋರು'' ಎಂದು ಬೇಡಿಕೊಂಡರು.

ದೈತ್ಯರು ದೇವರೂಪದಿಂದ ಬಂದು ಇಷ್ಟೆಲ್ಲ ಆಗ್ರಹಪಡಿಸಿದರೂ ಆ ಅದಿತಿ ದೇವಿಯು ತನ್ನ ಸಮಾಧಿಯನ್ನು ಸಡಿಲಿಸಲಿಲ್ಲ. ತಪಸ್ಸನ್ನು ಬಿಡಲಿಲ್ಲ. ಆ ದೈತ್ಯರೊಡನೆ ಮಾತನ್ನೂ ಆಡಲಿಲ್ಲ. ತನ್ನ ಆರಾಧ್ಯದೇವನಾದ ಶ್ರೀ ಹರಿಯನ್ನೇ ಮನಸ್ಸಿನಲ್ಲಿ ಚಿಂತಿಸುತ್ತ ಅವನ

ನಿರಂತರ ಧ್ಯಾನದಲ್ಲಿಯೇ ಆಸಕ್ತಳಾದಳು. ಅದನ್ನು ಕಂಡು ದೈತ್ಯರಿಗೆ ಅತಿಶಯ ಕೋಪ ಬಂದಿತು. ಅವರ ಹಲ್ಲು ಕಡಿದು ಆ ಮಹಾ ತಾಯಿಯನ್ನು ಕೊಂದು ಬಿಡಲು ಉದ್ಯುಕ್ತರಾದರು. ಸಿಟ್ಟಿನ ಭರದಲ್ಲಿ ಕಣ್ಣು ಕೆಂಪಗೆ ಮಾಡಿ, ಮೇಘ ಗರ್ಜನೆಯಂತೆ ಕ್ರೂರ ಧ್ವನಿ ಮಾಡುತ್ತ, ತಮ್ಮ ಹಲ್ಲುಗಳನ್ನೇ ಕರಕರ ತಿಂದು ದವಡೆಗಚ್ಚಿ, ದಂತಘರ್ಷಣೆ ಮಾಡಿದರು. ಅದರಿಂದ ಭಯಂಕರ ಬೆಂಕಿ ಹೊತ್ತಿಕೊಂಡಿತು. ಅದಿತಿದೇವಿಯು ತಪಸ್ಸಿಗೆ ಕುಳಿತ ಅರಣ್ಯವೆಲ್ಲವೂ ದೈತ್ಯರ ದಂತ ಸಂಘರ್ಷದಿಂದ ಹುಟ್ಟಿದ ಅಗ್ನಿಯಿಂದ ಸುಟ್ಟುಹೋಯಿತು. ಅದೇ ಉರಿಯಿಂದ ಆ ಮಹಾ ತಾಯಿಯನ್ನು ಹೊಡೆಯಹೋದ ದೈತ್ಯರೆಲ್ಲರೂ ಸುಟ್ಟು ಬೂದಿಯಾಗಿ ಬಿದ್ದರು. ಇದೇ ಆ ಅರಣ್ಯದಲ್ಲಿ ನಡೆದ ಈ ಪ್ರಚಂಡ ಅಗ್ನಿ ತಾಂಡವದಲ್ಲಿ ಉಳಿದವಳು ದೇವ ಮಾತೆಯಾದ ಆ ಅದಿತಿ ದೇವಿ ಒಬ್ಬಳೇ. ಶ್ರೀ ಹರಿಯ ಸುದರ್ಶನ ಚಕ್ರವು ಭಕ್ತರನ್ನು ಸಂರಕ್ಷಿಸಲು ಬದ್ಧಕಂಕಣವಾಗಿ ಎಲ್ಲರಿಗೂ ನಿಂತಿರುವದಷ್ಟೇ. ಅದೇ ಸುದರ್ಶನ ಚಕ್ರದಿಂದ ಅದಿತಿದೇವಿಯು ಪರಮಾತ್ಮನ ಧ್ಯಾನದಲ್ಲಿ ಆಸಕ್ತಚಿತ್ತಳಾಗಿ ಯಾವ ಅಗ್ನಿಯ ಝುಳವೂ ತಾಕದಂತೆ ಸುರಕ್ಷಿತವಾಗಿ ತಪಸ್ಸನ್ನು ಆಚರಿಸತೊಡಗಿದಳು.

*ನಾರದ ಮಹಾಪುರಾಣದಲ್ಲಿ ಹತ್ತನೇಯ ಅಧ್ಯಾಯ ಮುಗಿದುದು*



## ಗಂಗೋತ್ಪತ್ತಿ ವರ್ಣನೆ

**ಅಧ್ಯಾಯ - ೧೧**

**ನಾರದ :-** ಪ್ರಿಯ ಬಂಧು, ಸನಕರೆ, ತಾವು ಹೇಳಿದ ವಿಷಯ ಅತ್ಯಾಶ್ಚರ್ಯಕರ. ಅಲ್ಲಿ ಹುಟ್ಟಿದ ಬೆಂಕಿಯು ಅದಿತಿದೇವಿಯನ್ನೊಬ್ಬಳನ್ನು ಬಿಟ್ಟು ಆ ದೈತ್ಯರನ್ನೆಲ್ಲ ದಹನ ಮಾಡಿತು ಎಂದು ತಾವು ಹೇಳಿದಿರಿ. ಆದರೆ ಇದು ಹೇಗೆ? ಇದನ್ನು ತಿಳಿಸಿರಿ. ಮತ್ತು ಅತ್ಯಂತ ಆಶ್ಚರ್ಯಕ್ಕೆ ಕಾರಣವಾದ ಅದಿತಿದೇವಿಯ ಸತ್ವ, ಮಹತ್ವಗಳ ಬಗ್ಗೆ ನಮಗೆ ಪ್ರವಚನ ಮಾಡಿರಿ. **'ಪರೋಪದೇಶ ನಿರತಾಃ ಸಜ್ಜನಾ ಹಿ ಮುನೀಶ್ವರಾಃ'** ಪರೋಪದೇಶದಲ್ಲಿ ಯಾವಾಗಲೂ ಆಸಕ್ತರಾದ ಸಜ್ಜನರೇ ಮುನಿಶ್ರೇಷ್ಠರು. ನಾರದರ ಪ್ರಶ್ನೆಯನ್ನು ಕೇಳಿ ಸನಕ ಮಹರ್ಷಿಗಳು ಉತ್ಸಾಹದಿಂದ ಉತ್ತರಿಸತೊಡಗಿದರು.

**ಸನಕ:-** ನಾರದನೆ, ಹರಿಭಕ್ತರ ಮಹಿಮೆಯನ್ನು ಕೇಳು. ಹರಿಯ ನಿರಂತರ ಧ್ಯಾನ ಮಾಡುವ ಸಾಧುಗಳನ್ನು ಬಾಧಿಸಲು ಯಾರು ತಾನೇ ಸಮರ್ಥರಿರುತ್ತಾರೆ. ಹರಿಭಕ್ತನು ಇದ್ದಲ್ಲಿ ಬ್ರಹ್ಮಾದಿ ದೇವತೆಗಳೂ, ಶುದ್ಧ ಮುನಿಗಳೂ ಇದ್ದಂತೆ. ಈ ಶ್ರೀ ಹರಿಯು ಮಹಾನುಭಾವರಾದ ಭಗವದ್ಭಕ್ತರ ಪ್ರಶಾಂತವಾದ ಮನಸ್ಸಿನಲ್ಲಿ ಇರುತ್ತಾನೆ. ಅಖಂಡ ಧ್ಯಾನ ಮಾಡುತ್ತ ಹರಿನಾಮ ಕೀರ್ತನವನ್ನು ಮಾಡುವವರ ಮತ್ತು ನಿರಂತರವೂ ಶ್ರೀ ಹರಿಯ ಧ್ಯಾನೋಪಾಸನೆಗಳಲ್ಲಿಯೇ ಆಸಕ್ತರಾದವರ ಹೃದಯದಲ್ಲಿ ವಾಸ ಮಾಡಿರುತ್ತಾನೆ. ಶಿವಪೂಜೆಯನ್ನಾಗಲಿ, ವಿಷ್ಣುಪೂಜೆಯನ್ನಾಗಲಿ ಭಕ್ತಿಯಿಂದ ಮಾಡುವಲ್ಲಿ ಭಾಗ್ಯದೇವತೆ ಲಕ್ಷ್ಮೀದೇವಿಯೇ ಬಂದು ನಿಲ್ಲುತ್ತಾಳೆ, ಭಕ್ತಿಯಿಂದ ವಿಷ್ಣುವಿನ ಆರಾಧನೆ ಮಾಡುವವರಿಗೆ ಯಾವುದೇ ಉಪದ್ರವಗಳು ಉಂಟಾಗುವದಿಲ್ಲ. ರಾಜನಾಗಲಿ, ಕಳ್ಳನಾಗಲಿ, ಹರಿಪೂಜೆ ಮಾಡುವವನಿಗೆ ಯಾವ ತೊಂದರೆಗಳೂ ಬರುವದಿಲ್ಲ. ಅಚ್ಯುತನ ಅರ್ಚನೆ

ಮಾಡಿದರೆ ಭೂತ-ಪ್ರೇತಗಳು, ಬಾಲಗ್ರಹಾದಿ ರೋಗಗಳು, ಡಾಕಿನಿಯರು, ರಾಕ್ಷಸರು ಯಾರೂ ಹರಿನಾಮ ಸ್ತುತಿ ಗೈಯ್ಯುವವನನ್ನು ಪೀಡಿಸುವದಿಲ್ಲ.

**ಜಿತೇಂದ್ರಿಯಃ ಸರ್ವಹಿತೋ ಧರ್ಮ ಕರ್ಮ ಪರಾಯಣಃ ।**
**ಯತ್ರ ತಿಷ್ಠತಿ ತತ್ರೈವ ಸರ್ವತೀರ್ಥಾನಿ ದೇವತಾಃ ॥**

ಇಂದ್ರಿಯ ನಿಗ್ರಹ ಮಾಡುವವನೂ ಎಲ್ಲರಿಗೂ ಅನುಕೂಲವನ್ನೂ ಮಾಡುವವನೂ, ಧರ್ಮ ಮತ್ತು ವಿಹಿತ ಕರ್ಮಗಳ ಅನುಷ್ಠಾನ ಪರನೂ ಆಗಿರುವವನು ಇರುವ ಸ್ಥಳವೇ ಸಕಲ ತೀರ್ಥಗಳು. ಅಲ್ಲಿ ಎಲ್ಲಾ ದೇವತೆಗಳ ಸನ್ನಿಧಾನವು ಇರುತ್ತದೆ.

**ನಿಮಿಷಂ ನಿಮಿಷಾರ್ಧಂ ವಾ ಯತ್ರ ತಿಷ್ಠಂತಿ ಯೋಗಿನಃ**
**ತತ್ರೈವ ಸರ್ವ ಶ್ರೇಯಾಂಸಿ ತತ್ತೀರ್ಥಂ ತತ್ತಪೋವನಂ ॥**

ಒಂದು ನಿಮಿಷ ಅಥವಾ ಅರ್ಧ ನಿಮಿಷವಾದರೂ ಯೋಗಿಗಳು ನಿಂತಿದ್ದ ಸ್ಥಳವು ಸಕಲ ಶ್ರೇಯಸ್ಸಿಗೂ ಸಾಧನವು. ಅಂತಹ ಸ್ಥಳವೇ ತೀರ್ಥ ಮತ್ತು ತಪೋವನವಾಗುವದು.

**ಯನ್ನಾಮೋಚ್ಚಾರಣಾದೇವ ಸರ್ವೇ ನಶ್ಯಂತ್ಯುಪದ್ರವಾಃ ।**
**ಸ್ತೋತ್ರೈರ್ವಾಪ್ಯರ್ಹಣಾಭಿರ್ವಾ ಕಿಮು ಧ್ಯಾನೇನ ಕಥ್ಯತೇ ॥**

ಯಾವ ಭಗವಂತನ ನಾಮ ಸ್ಮರಣಮಾತ್ರದಿಂದಲೇ ಸಕಲ ಬಾಧೆಗಳು ಹೋಗುತ್ತವೆಯೋ, ಅಂತಹ ಹರಿಯ ಸ್ತೋತ್ರ, ಪೂಜೆ, ಧ್ಯಾನ ಇವುಗಳನ್ನು ಮಾಡುವವರಿಗೆ ಯಾವ ಬಾಧೆಯೂ ಸಂಭವಿಸುವದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ರೀತಿಯಾಗಿ ಬೆಂಕಿಯಿಂದ ರಾಕ್ಷಸರೂ ಅರಣ್ಯವೂ ದಗ್ಧವಾದರೂ ಶ್ರೀ ಹರಿಯ ಸುದರ್ಶನ ಚಕ್ರದಿಂದ ಸಂರಕ್ಷಿತಳಾದ ಅದಿತಿದೇವಿಯನ್ನು ಮಾತ್ರ ಸುಡಲು ಸಮರ್ಥವಾಗಲಿಲ್ಲ ಆ ಬೆಂಕಿ. ಇದರಿಂದ ಅದಿತಿದೇವಿಯು ಆ ಅಗ್ನಿ ದಿವ್ಯದಿಂದ ಪಾರಾದಂತಾಗಿ ಸುರಕ್ಷಿತವಾಗಿ ಉಳಿದಳು. ಅವಳ ಈ ಲೋಕೋತ್ತರವಾದ ತಪಸ್ಸನ್ನು ಕಂಡು ಸಂತುಷ್ಟನಾಗಿ ಶ್ರೀ ಹರಿಯು ಪ್ರತ್ಯಕ್ಷನಾದನು. ಅದಿತಿ ದೇವಿಯು ಆಶ್ಚರ್ಯದಿಂದ ನೋಡಿದಳು, ಅಗಲವಾದ ಕಣ್ಣು, ನಾಲ್ಕೂ ಕೈಗಳಲ್ಲಿ ಹೊಳೆಯುವ ಶಂಕ, ಚಕ್ರ, ಗದಾ, ಪದ್ಮಗಳು ತುಟಿ ತಟದಲ್ಲಿ ಮುಗುಳು ನಗೆ. ಮಂದಹಾಸ ಸುಂದರವಾದ ಮುಖ ಸಂಪುಟದಿಂದ ಹಲ್ಲುಗಳ ಶುಭ್ರಕಾಂತಿಯು ಹೊರಹೊಮ್ಮಿ ದಿಗಂತರಾಳವನ್ನೆಲ್ಲ ಬೆಳಗುವಂತೆ ಮಾಡಿದೆ. ತನ್ನ ವರದ ಹಸ್ತದಿಂದ ಕಶ್ಯಪಭಾಮಿನಿ ಅದಿತಿದೇವಿಗೆ ಅಭಯ ಮುದ್ರೆ ತೋರಿಸಿ ಭಗವಂತನು ಮಾತನಾಡಿದ.

''ದೇವಮಾತೆಯೆ, ನಾನು ನಿನ್ನ ತಪಸ್ಸಿನಿಂದ ಪ್ರಸನ್ನನಾಗಿದ್ದೇನೆ. ಈ ನಿನ್ನ ಸಂತತ ಆರಾಧನೆಯಿಂದ ಸುಪ್ರೀತನಾಗಿದ್ದೇನೆ. ಅತ್ಯುಗ್ರ ತಪಸ್ಸಿನಿಂದ ನೀನು ಬಳಲಿ, ಬೆಂಡಾಗಿ ಬಹಳೇ ಆಯಾಸಗೊಂಡಿರುವೆ. ವರಬೇಡು. ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು? ಹೆದರಬೇಡ. ನಿನಗೆ ಉತ್ತರೋತ್ತರ ಶ್ರೇಯಸ್ಸು ಉಂಟಾಗುತ್ತದೆ''. ಭಗವಂತನ ಈ ಸಂತೈಸುವ ನುಡಿಯನ್ನು ಕೇಳಿ, ಆ ದೇವ ಜನನಿಗೆ ಪರಮಾನಂದವಾಯಿತು. ಭಗವಂತನ ಎದುರು ದಂಡ ಪ್ರಣಾಮಗೈದು, ಬಾಯಿ ತೆಗೆದು ಬಗೆ ಬಗೆಯಿಂದ ಭಗವಂತನನ್ನು ಸ್ತುತಿಸುತ್ತಾ ಪ್ರಾರ್ಥಿಸಿದಳು.

**॥ ಅದಿತಿರುವಾಚ ॥**

**ನಮಸ್ತೇ ದೇವದೇವೇಶ ಸರ್ವವ್ಯಾಪಿನ್ಜನಾರ್ದನ ।**
**ಸತ್ವಾದಿ ಗುಣಭೇದೇನ ಲೋಕ ವ್ಯಾಪಾರ ಕಾರಣ ॥**

**ಅದಿತಿಯ ನುಡಿಗಳು:-** ದೇವ ದೇವೋತ್ತಮನೂ, ಸರ್ವವ್ಯಾಪಕನೂ, ಸತ್ವ ರಜಸ್ತಮೋಗುಣಗಳ ಮೂಲಕವಾಗಿ ಜಗತ್ತಿನ ಭಿನ್ನ ಭಿನ್ನ ಕಾರ್ಯಗಳಿಗೆ ನಿಮಿತ್ತ ಕಾರಣನೂ ಆಗಿರುವ ಜನಾರ್ದನ ಸ್ವಾಮಿಯೇ! ನಿನಗೆ ನಮಸ್ಕಾರ.

**ನಮಸ್ತೇ ಬಹುರೂಪಾಯಾರೂಪಾಯ ಮಹಾತ್ಮನೇ ।**
**ಸರ್ವೈಕ ರೂಪ ರೂಪಾಯ ನಿರ್ಗುಣಾಯ ಗುಣಾತ್ಮನೇ ॥**

ನಾನಾ ವಿಧವಾದ ಅವತಾರ ರೂಪವನ್ನು ತಾಳಿರುವ, ಪ್ರಕೃತಿ ನಿರ್ಮಿತವಾದ ರೂಪವಿಲ್ಲದ ಸಕಲ ಪದಾರ್ಥಗಳಲ್ಲಿಯೂ ಒಂದೇ ವಿಧವಾದ ರೂಪದಿಂದ ಅಂತರ್ಯಾಮಿಯಾಗಿರುವ, ಪ್ರಾಕೃತಗುಣಶೂನ್ಯನೂ, ಅಪ್ರಾಕೃತಜ್ಞಾನಾನಂದಾದಿ ಗುಣ ಸ್ವರೂಪನೂ, ಮಹಾತ್ಮನೂ ಆಗಿರುವ ನಿನಗೆ ನಮಸ್ಕಾರ.

**ನಮಸ್ತೇ ಲೋಕನಾಥಾಯ ಪರಮಜ್ಞಾನರೂಪಿಣೇ ।**
**ಸದ್ಭಕ್ತ ಜನ ವಾತ್ಸಲ್ಯ ಶಾಲಿನೇ ಮಂಗಳಾತ್ಮನೇ ॥**

ಜಗತ್ತಿಗೆಲ್ಲಾ ಸ್ವಾಮಿಯೂ, ಉತ್ಕೃಷ್ಟ, ಜ್ಞಾನ ರೂಪಿಯೂ, ಸಾಧುಗಳಾದ ಭಕ್ತ ಜನರಲ್ಲಿ ಸ್ವಾಭಾವಿಕವಾದ ಪ್ರೇಮ ಮಾಡುವ ಮಂಗಳ ಸ್ವರೂಪಿಯೂ ಆದ ನಿನಗೆ ನಮಸ್ಕಾರ.

**ಯಸ್ಯಾವತಾರ ರೂಪಾಣಿ ಹ್ಯರ್ಚಯಂತಿ ಮುನೀಶ್ವರಾಃ ।**
**ತಮಾದಿಪುರುಷಂ ದೇವಂ ನಮಾಮಿ ಹ್ಯರ್ಥ ಸಿದ್ಧಯೇ ॥**

ಯಾವ ಅವತಾರ ರೂಪಗಳನ್ನು ಮನಿವರ್ಯರು ಪೂಜಿಸುತ್ತಾರೆಯೋ ಅಂತಹ ಮೂಲ ಪುರುಷನಾದ ನಾರಾಯಣ ದೇವನನ್ನು ಮೋಕ್ಷಾದಿ ಪುರುಷಾರ್ಥಕ್ಕೋಸ್ಕರ ನಮಸ್ಕರಿಸುತ್ತೇನೆ.

**ಶ್ರುತಯೋ ಯಂ ನ ಜಾನಂತಿ ನ ಜಾನಂತಿ ಚ ಸೂರಯಃ ।**
**ತಂ ನಮಾಮಿ ಜಗದ್ಧೇತುಂ ಸಮಾಯಂ ಚಾಪ್ಯಮಾಯಿನಂ ॥**

ವೇದಗಳೂ ಮತ್ತು ಜ್ಞಾನಿಗಳು ಸಹ, ಯಾವ ಭಗವತ್ಸ್ವರೂಪವನ್ನು ಸಂಪೂರ್ಣ ವಾಗಿ ತಿಳಿಯಲು ಸಾಧ್ಯವಾಗುವದಿಲ್ಲವೋ, ಅಂಥ ಮಾಯೆಗೆ ಅಧೀನವಾಗದೇ ಅದನ್ನು ತನ್ನ ವಶದಲ್ಲಿಟ್ಟುಕೊಂಡಿರುವ ಜಗತ್ಕಾರಣನಾದ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

**ಯಸ್ಯಾವಲೋಕನಂ ಚಿತ್ರಂ ಮಾಯೋಪದ್ರವಕಾರಣಂ ।**
**ಜಗದ್ರೂಪಂ ಜಗದ್ಧೇತುಂ ತಂ ವಂದೇ ಸರ್ವ ವಂದಿತಂ ॥**

ಯಾವನ ದರ್ಶನವು ಆಶ್ಚರ್ಯಕರವಾದುದೋ, ಅಂತಹ ಮಾಯೆಯ ಮೂಲಕವಾಗಿ ದುಃಖವನ್ನುಂಟುಮಾಡುವವನೂ, ಸಕಲ ಪ್ರಪಂಚದಲ್ಲಿ ಅಂತರ್ಯಾಮಿ ಯಾಗಿರುವನೂ, ಜಗತ್ಕಾರಣನೂ ಆಗಿರುವ, ಸರ್ವಜನಗಳಿಂದಲೂ ನಮಸ್ಕರಿಸಲ್ಪಟ್ಟ ಭಗವಂತನನ್ನು ಸೇವಿಸುತ್ತೇನೆ.

**ಯತ್ಪಾದಾಂಬುಜಕಿಂಜಲ್ಕ ಸೇವಾರಕ್ಷಿತಮಸ್ತಕಾಃ ।**
**ಅವಾಪುಃ ಪರಮಾಂ ಸಿದ್ಧಿಂ ತಂ ವಂದೇ ಕಮಲಾಧವಂ ॥**

ಯಾವ ಭಗವಂತನ ಪಾದ ಕಮಲಗಳ ಕುಸುರುಗಳನ್ನು ತಲೆಬಾಗಿ ನಮಸ್ಕರಿಸಿ, ಸೇವಿಸುವದರಿಂದ ರಕ್ಷಿಸಲ್ಪಟ್ಟ ಭಕ್ತರು ಮೋಕ್ಷವನ್ನು ಹೊಂದಿರುತ್ತಾರೆಯೋ, ಅಂತಹ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

ಯಾವ ಮಹಿಮೆಯನ್ನು ಬ್ರಹ್ಮಾದಿ ದೇವತೆಗಳು ಪೂರ್ಣವಾಗಿ ತಿಳಿಯಲಾರರೋ, ಅಜಾಮಿಳನಂತಹ ಪಾಪಿಗಳೂ ಕೂಡ ಯಾರ ನಾಮೋಚ್ಚಾರಣದಿಂದ ಮೋಕ್ಷವನ್ನು ಹೊಂದಿದರೋ, ಅಂತಹ ಸರ್ವವೇದ ಪ್ರತಿಪಾದ್ಯನಾದ ಸರ್ವಜಗದ್ರಕ್ಷಕನಾದ ಶ್ರೀಮನ್ ನಾರಾಯಣನಿಗೆ ಅನಂತಾನಂತವಂದನೆಗಳು.'' ಹೀಗೆ ಭಕ್ತಿಯಿಂದ ಪ್ರಾರ್ಥನೆ ಮಾಡಿ ಅದಿತಿಯು ಕೈ ಮುಗಿದು ವರವನ್ನು ಕೇಳಿಕೊಂಡಳು. ದೇವತೆಗಳಿಗೂ ಪ್ರಭುವಾದ ಪರಮಾತ್ಮನೆ, ನನ್ನ ಮೇಲೆ ಅನುಗ್ರಹಮಾಡಬೇಕೆಂದು ನಿನಗೆ ಇಚ್ಛೆಯಿದ್ದರೆ ನನ್ನ ಮಕ್ಕಳಾದ ದೇವತೆಗಳಿಗೆ ನಿಷ್ಕಂಟಕವಾದ ರಾಜ್ಯೈಶ್ವರ್ಯಕೊಡು. ಸರ್ವಜನಾಂತ ರ್ಯಾಮಿಯಾದ ನಿನಗೆ ತಿಳಿಯದಿದ್ದುದು ಯಾವುದಿದೆ? ಆದರೂ ನನ್ನ ಮನಸ್ಸಿನಲ್ಲಿದ್ದುದನ್ನು ಹೇಳುತ್ತೇನೆ. ನನಗೆ ಅನೇಕ ಮಕ್ಕಳಿದ್ದರೂ ಇಲ್ಲದಂತಾಗಿದೆ. ದೈತ್ಯರು ನನ್ನ ಪುತ್ರರಾದ ದೇವತೆಗಳನ್ನೆಲ್ಲ ಹೊಡೆದೋಡಿಸಿದ್ದಾರೆ. ಇಂದ್ರಾದಿ, ನನ್ನ ಚಿರಂಜೀವರೋ ರಾಜ್ಯ ಭ್ರಷ್ಟರಾಗಿ ತಲೆ ಮರೆಸಿಕೊಂಡು ಎಲ್ಲೆಲ್ಲಿಯೋ ತಿರುಗುತ್ತಿದ್ದಾರೆ. ನನ್ನ ಸಂತಾನಕ್ಕೆ ಇಂತಹ ಪ್ರಾಣಾಂತಿಕ ಪ್ರಸಂಗವನ್ನು ತಂದು ಚಿಂತಾಸಂತಾಪಗಳನ್ನುಂಟು ಮಾಡಿದ್ದರೂ, ರಾಕ್ಷಸರು ಸಾಯಲಿ ಎಂದು ನಾನು ಕೇಳುವದಿಲ್ಲ. ಅವರೂ ನನ್ನ ಮಕ್ಕಳೇ ಸರಿ ನನ್ನ ಸೋದರಿ ದಿತಿಯ ಪುತ್ರರು ನನಗೂ ಪುತ್ರರೇ. ಆದುದರಿಂದ ಅವರನ್ನು ಕೊಲ್ಲದೆ ನನ್ನ ಮಕ್ಕಳು ಬದುಕುವಂತಾಗಲಿ. ಅವರ ರಾಜ್ಯೈಶ್ವರ್ಯ ನಿರಾತಂಕವಾಗಿ ದೊರಕಲಿ ಇವೇ ನಾನು ಕೇಳಿಕೊಳ್ಳುವ ವರ.'' ಅದಿತಿದೇವಿಯ ಈ ವಚನ ಕೇಳಿ, ಹರ್ಷವಾಯಿತು ಶ್ರೀ ಹರಿಗೆ. ಅವನು ಆ ದೇವ ಜನನಿಯನ್ನು ಕುರಿತು ಮಾತನಾಡಿದರು.

**ಶ್ರೀ ಭಗವಂತ:-** ಅದಿತಿದೇವಿ, ನಿನ್ನ ಮಾತು ನನಗೆ ಸಂತಸವನ್ನುಂಟು ಮಾಡಿದೆ. ನಿನ್ನ ಮಕ್ಕಳಿಗೆ ಅಪಕಾರ ಮಾಡಿದ ರಾಕ್ಷಸರಿಗೂ ಕೂಡ ನೀನು ಕೇಡನ್ನು ಬಯಸಲಿಲ್ಲ. ಅವರು ಸಾಯಬಾರದು ಎಂದು ಕೇಳಿಕೊಂಡಿರುವಿ. ಇದರಿಂದ ಸವತಿಯ ಮಕ್ಕಳ ಮೇಲೆ ನಿನಗಿದ್ದ ಅವ್ಯಾಜ ಪ್ರೇಮವು ವ್ಯಕ್ತವಾಗುತ್ತದೆ. ಈ ಪ್ರಪಂಚದಲ್ಲಿ ಸಪತ್ನೀ ಪುತ್ರರ ಮೇಲೆ ಪ್ರೇಮ ಮಾಡುವದು ಬಹಳ ದುರ್ಲಭ. ನಿನ್ನ ಈ ಅಸಾಧಾರಣವಾದ ಗುಣವನ್ನು ನಾನು ಮೆಚ್ಚಿದೆನು. ಇಂತಹ ದೊಡ್ಡ ಮನಸ್ಸಿನ ಮಹಿಳೆಯಾದ ನಿನ್ನ ಹೊಟ್ಟೆಯಿಂದ ಮಗನಾಗಿ ನಾನೇ ಹುಟ್ಟಿ ಬರುತ್ತೇನೆ.

**ಅದಿತಿ :-** ದೇವೋತ್ತಮನೆ, ನಿನ್ನ ರೋಮ ರೋಮಗಳಲ್ಲಿ ಅನೇಕ ಬ್ರಹ್ಮಾಂಡಗಳಿವೆ. ಇಂತಹ ನಿನ್ನನ್ನು ಹೊಟ್ಟೆಯಲ್ಲಿ ಹೊರಲು ನನಗೆ ಹೇಗೆ ಸಾಧ್ಯವಾದೀತು? ನಿನ್ನ ಪ್ರಭಾವವನ್ನು ನಾಲ್ಕು ವೇದಗಳು ಬ್ರಹ್ಮಾದಿ ದೇವತೆಗಳು ಸಂಪೂರ್ಣವಾಗಿ ತಿಳಿಯಲಾರವು. ಇಂತಹ ದೇವದೇವೋತ್ತಮನಾದ ನಿನ್ನನ್ನು ನಾನು ಹೇಗೆ ಉದರದಲ್ಲಿ ಧರಿಸಲಿ? ಮೇಲೆ ನಿನಗೆ ಉತ್ಪತ್ತಿಯೇ ಇಲ್ಲ. ನೀನು ಅಣುವಿಗಿಂತ ಅಣು. ಮಹತ್ತಿಗಿಂತ ಮಹಾನ್.

ಅಂದಬಳಿಕ ನಿನ್ನನ್ನು ನಾನು ಹೊಟ್ಟೆಯಲ್ಲಿ ಹಿಡಿಯುವದು ಹೇಗೆ? ಅಜ ಎಂದರೆ ಹುಟ್ಟು ಇಲ್ಲದವ ಎಂದರ್ಥ. ಹುಟ್ಟು ಇಲ್ಲದವನು ನನ್ನ ಹೊಟ್ಟೆಯಲ್ಲಿ ಹುಟ್ಟುವ ಬಗೆ ಹೇಗೆ? ಪರಮಾಣುಗಿಂತ ಅತ್ಯಂತ ಅಣುವಾದ ನೀನು ನನ್ನ ಅಣುಗನಾಗುವದು ಹೇಗೆ? ಮಹತ್ತಿಗಿಂತ ಮಹಾನ್ ಆದ ನಿನ್ನನ್ನು ನನ್ನ ಈ ಗರ್ಭಕೋಶದಲ್ಲಿ ಧರಿಸುವದು ಹೇಗೆ? ಮೇಲಾಗಿ ನಿನ್ನ ನಾಮಸ್ಮರಣೆ ಮಾತ್ರದಿಂದ ಮಹಾ ಮಹಾಪಾಪಿಗಳು ಉದ್ಧಾರ ಹೊಂದುತ್ತಾರೆ. ಇಷ್ಟು ಪರಮಪವಿತ್ರತಮನಾದ ನೀನು ನಮ್ಮಂತಹ ಹಳ್ಳಿಗಾಡು ಜನರ ಹೊಟ್ಟೆಯಿಂದ ಹುಟ್ಟಿ ಬರುವದು ಹೇಗೆ? ಇವೆಲ್ಲವೂ ಮೂಢಳಾದ ನನ್ನ ಮಿದುಳನ್ನು ಕೊರೆಯುವ ಸಂಶಯಗಳು. ನೀನು ಹಂದಿಯಾಗಿ, ಮೀನವಾಗಿ, ಅವತಾರ ಮಾಡಿದ್ದನ್ನು ನಾನು ಕೇಳಿದ್ದೇನೆ. ಅಂದಬಳಿಕ ನಿನ್ನ ಅವತಾರದ ರಹಸ್ಯ ಏನು? ಎಂತು? ಹೇಗೆ? ಎಂಬುದನ್ನು ಲೋಕ ದೃಷ್ಟಿಯಿಂದ ನನ್ನಂತಹ ಪಾಮರರು. ಅರಿಯಲಾರರು. ನನಗಂತೂ ಗಹನವಾದ ನಿನ್ನ ವ್ಯಾಪಾರ, ಹಾಗೂ ಸಂಕಲ್ಪಗಳು, ಅರ್ಥವೇ ಆಗುವದಿಲ್ಲ. ನಿನ್ನ ಮನಸ್ಸಿಗೆ ಬಂದಂತೆ ಮಾಡು. ನಾನು ಕೇವಲ ನಿನ್ನ ಅಡಿದಾವರೆಗಳಿಗೆ ಮತ್ತೆ ಮತ್ತೆ ನಮಿಸುತ್ತೇನೆ. ಹಗಲಿರುಳು ನಿನ್ನ ನಾಮ ಸ್ಮರಣೆ ಮಾಡುತ್ತಿರುತ್ತೇನೆ. ನಿನ್ನ ಇಷ್ಟದಂತೆ ಆಗಲಿ ಎಲ್ಲವನ್ನು ಮಾಡುವವ ನೀನಿರಲು ನಾನೇಕೆ ಇಲ್ಲದ ಚಿಂತೆ ಮಾಡಿ ಕೊರಗಲಿ? ನಿನ್ನ ಇಷ್ಟವೇ ನನ್ನ ಇಷ್ಟ. ನಿನ್ನ ಆದೇಶ ನನಗೆ ಮಾನ್ಯ.'' ಆಗ ಶ್ರೀ ಹರಿಯು ದೇವಮಾತೆಯಾದ ಅದಿತಿಗೆ ಅಭಯ ಅಶ್ವಾಸನೆ ನೀಡುತ್ತ ಹೀಗೆ ನುಡಿದನು.

**ಶ್ರೀ ಹರಿ:-** ಶುಭಾಂಗಿಯೇ, ನೀನು ಹೇಳಿದ್ದು ಸತ್ಯ. ಅದರಲ್ಲಿ ಸಂದೇಹವಿಲ್ಲ. ಆದರೂ ಅಲ್ಲಿ ಒಂದು ರಹಸ್ಯವಿದೆ. ರಾಗದ್ವೇಷರಹಿತರಾಗಿ ನನ್ನಲ್ಲಿ ಮನಸಿಟ್ಟ ಅಸೂಯೆ, ಡಂಭ, ಮುಂತಾದವುಗಳಿಲ್ಲದ ನನ್ನ ಭಕ್ತರು ನನ್ನನ್ನು ಒಲಿಸಲು ಸಮರ್ಥರಾಗುತ್ತಾರೆ. ಅದರಂತೆ ಪರರಿಗೆ ಉಪದ್ರವ ಮಾಡದೆ ನನ್ನ ಕಥೆಗಳನ್ನು ಸರ್ವದಾ ಶ್ರವಣ ಮಾಡುತ್ತಲಿರುವ, ಪತಿಯನ್ನೇ ಪರದೈವ ಎಂದು ನಂಬಿದ ಸತೀಮಣಿಯರು ನನ್ನನ್ನು ಹೊಂದಲು ಸಮರ್ಥರಾಗುತ್ತಾರೆ. ಇದರಂತೆ ಗಂಡಸರಲ್ಲಿ ಮಾತಾ, ಪಿತೃಗಳ ಸೇವೆ ಮಾಡುವ, ಗುರುಗಳಲ್ಲಿ ಭಕ್ತಿ ಮಾಡುವ, ಪುಣ್ಯ ತೀರ್ಥಗಳಲ್ಲಿ ಮೀಯುವ, ಜಗತ್ತಿಗೆಲ್ಲ ಹಿತಬಯಸುವ, ಪರೋಪಕಾರದಲ್ಲಿ ಆಸಕ್ತರಾಗುವ, ಪರರ ಸ್ವತ್ತನ್ನು ಕಣ್ಣೆತ್ತಿ ನೋಡದ, ಪರಸ್ತ್ರೀ, ವಿಷಯದಲ್ಲಿ ನಪುಂಸಕನಂತೆ ನಡೆದುಕೊಳ್ಳುವ, ತುಳಸೀ, ಪೂಜೆ, ಗೋರಕ್ಷಣ, ಸತತ ನಾರಾಯಣ ನಾಮಸ್ಮರಣ, ಅತಿಥಿಸೇವೆ, ಪರಾನ್ನತ್ಯಾಗ, ಆಯಾಚಿತ ವೃತ್ತಿ, ಅಪರಿಗ್ರಹವೃತ್ತಿ, ಬಂದವರಿಗೆಲ್ಲ ತಿಂದಷ್ಟು ಅನ್ನೋದಕ ನೀಡುವದು ಮುಂತಾದ ಸದ್ಗುಣಗಳನ್ನು ಬೆಳೆಸಿಕೊಂಡು ಬಂದಿರುವ ಮಹಾನುಭಾವರಾದ ಪುರುಷರ ಮನೆಯಲ್ಲಿ, ನಾನು ಅಂತಹವರ ಮಗನಾಗಿ ಲೋಕದೃಷ್ಟಿಯಿಂದ ಜನಿಸುವೆನು. ದೇವಮಾತೆಯೆ, ನೀನು ನಾನು ಮೇಲೆ ಹೇಳಿದ ಸದ್ಗುಣಪೂರ್ಣರಾದ ಸತೀಮಣಿಯರಲ್ಲಿ ಶಿರೋಮಣಿ ಯಂತಿರುವಿ. ಆದ್ದರಿಂದ ನಿನ್ನಂತಹ ಪರಮ ಪತಿವ್ರತೆಯಾದ, ಸತಿಯ ಮಗನಾಗಿ ನಾನು ಹುಟ್ಟಿಬಂದು, ನಿನ್ನ ಎಲ್ಲ ಆಶೆ, ಆಕಾಂಕ್ಷೆಗಳನ್ನು ಪೂರೈಸುತ್ತೇನೆ. ಹೀಗೆ ದೇವಮಾತೆಯಾದ ಅದಿತಿಗೆ ಹೇಳಿ, ತನ್ನ ಕೊರಳಲ್ಲಿರುವ ದಿವ್ಯ ಮಾಲೆಯನ್ನು ಆ ತಾಯಿಗೆ ಕೊಟ್ಟು ಆ ಪರಮಾತ್ಮನು ಅದೃಶ್ಯನಾದನು. ಅದಿತಿಗೆ ಹೃದಯದಲ್ಲಿ ಹಿಡಿಸಲಾರದಷ್ಟು ಹಿಗ್ಗಾಗಿತ್ತು. ಅವಳು ಭಗವಂತನ ಪಾದಕಮಲಗಳಿಗೆ ಭಕ್ತಿಯಿಂದ ಪೊಡಮಟ್ಟು ಸ್ವಸ್ಥಾನಕ್ಕೆ ತೆರಳಿದಳು.

ಅನಂತರ, ಅದಿತಿಯು ಪರಮ ಸಂತೋಷದಿಂದ ತನ್ನ ಆಶ್ರಮಕ್ಕೆ ಬಂದಳು. ಅವಳ ಗರ್ಭದಲ್ಲಿ ಭಗವಂತನು ಸನ್ನಿಹಿತನಾದನು. ಅದರಿಂದ ಆ ಸುರಮಾತೆಯು ಜಗದ್ವಂದ್ಯಳಾದಳು. ಮತ್ತು ದಿನ ತುಂಬಿದ ಬಳಿಕ ದಿವ್ಯ ಪುತ್ರನನ್ನು ಹೆತ್ತಳು. ಭಗವಂತನ ವಚನದಂತೆ ತತ್ಸ್ವರೂಪಿಯಾದ ಅದೇ ಹುಟ್ಟಿದ ಮಗು ಶಂಖ, ಚಕ್ರ, ಧರಿಸಿತ್ತು ಕೈ ಒಂದರಲ್ಲಿ. ಇನ್ನೊಂದು ಕೈಯಲ್ಲಿ ಅಮೃತಕಲಶ ಹಿಡಿದಿತ್ತು. ಇದಕ್ಕೆ ವಾಮನನೆಂದು ಹೆಸರಾಯಿತು. ಚಂದ್ರ ಮಂಡಲದಲ್ಲಿರುವ ಭಗವಂತನ ಈ ವಾಮನರೂಪವು ಈಗ ಅದಿತಿದೇವಿಯ ಉದರದಿಂದ ಮುದದಿಂದ ಪ್ರಾದುರ್ಭೂತವಾಗಿ ಬಂದಿತ್ತು. ಅಬ್ಬಾ! ಏನು ಕಾಂತಿ ಈ ಪುಟ್ಟ ಕೂಸಿಗೆ! ಸಾವಿರ ಸೂರ್ಯರಂತೆ ಝಗಝಗಿಸುತ್ತಿತ್ತು ಅದೇ ಹುಟ್ಟಿದ ಸದ್ಯೋಜಾತ ಮಗು. ಅದರ ಕಣ್ಣೋ! ಅದೇ ಬಿರಿದ ಕೆಂದಾವರೆ! ಮೈತುಂಬ ಆಭರಣ! ಸೊಂಟದಲ್ಲಿ ಪೀತಾಂಬರ. ಸುತ್ತುಮುತ್ತಲೂ ಸ್ತೋತ್ರ ಮಾಡುವ ಮುನಿಮಹರ್ಷಿಗಳು. ಹೀಗೆ ಪರಮಾತ್ಮನು ತಮ್ಮ ಹೆಂಡತಿಯ ಹೊಟ್ಟೆಯಿಂದ ಹುಟ್ಟಿಬಂದದ್ದು ಕಂಡು, ತಂದೆ ಕಶ್ಯಪ ಋಷಿಗೆ ಹರ್ಷೋದ್ರೇಕವಾಯಿತು. ಸ್ತೋತ್ರ ಮಾಡಲು ಉಪಕ್ರಮಿಸಿದರು.

॥ ಕಶ್ಯಪ ಉವಾಚ ॥

ನಮೋನಮಸ್ತೇಽಖಿಲ ಕಾರಣಾಯ
ನಮೋನಮಸ್ತೇಽಖಿಲ ಪಾಲಕಾಯ ॥
ನಮೋನಮಸ್ತೇಽಮರನಾಯಕಾಯ
ನಮೋನಮೋ ದೈತ್ಯವಿನಾಶನಾಯ ॥

ನಮೋನಮೋ ಭಕ್ತ ಜನಪ್ರಿಯಾಯ
ನಮೋನಮಸ್ಸಜ್ಜನರಂಜಿತಾಯ ।
ನಮೋನಮೋ ದುರ್ಜನನಾಶಕಾಯ
ನಮೋಽಸ್ತು ತಸ್ಮೈ ಜಗದೀಶ್ವರಾಯ॥

ನಮೋ ನಮಃ ಕಾರಣ ಕಾರಣಾಯ ।
ನಾರಾಯಣಾಯಾಮಿತ ವಿಕ್ರಮಾಯಾ ।
ಶ್ರೀ ಶಾರ್ಙ್ಗ ಚಕ್ರಾಸಿಗದಾಧರಾಯ ।
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥

ನಮಃ ಪಯೋರಾಶಿನಿವಾಸಕಾಯ
ನಮೋಽಸ್ತು ಸದ್ಧೃತ್ಕಮಲಸ್ಥಿತಾಯ ।
ನಮೊಸ್ತು ಸೂರ್ಯಾಂಶುನಿಭಪ್ರಭಾಯ
ನಮೋ ನಮಃ ಪುಣ್ಯಾಕಥಾಗತಾಯ॥

ನಮೋನಮೋಽರ್ಕೇಂದು ವಿಲೋಚನಾಯ
ನಮೋಽಸ್ತುತೇ ಯಜ್ಞಫಲ ಪ್ರದಾಯ ।

ನಮೋಽಸ್ತು ಯಜ್ಞಾಂಗ ವಿರಾಜಿತಾಯ ।
ನಮೋಽಸ್ತು ತೇ ಸಜ್ಜನವಲ್ಲಭಾಯ ॥
ನಮೋ ಜಗತ್ಕಾರಣಕಾರಣಾಯ
ನಮೋಸ್ತು ಶಬ್ದಾದಿ ವಿವರ್ಜಿತಾಯ ॥
ನಮೋಽಸ್ತು ತೇ ದಿವ್ಯ ಸುಖಪ್ರದಾಯ।
ನಮೋಽನಮೋ ಭಕ್ತಮನೋಗತಾಯ॥
ನಮೋಽಸ್ತು ತೇ ಧ್ವಾಂತವಿನಾಶಕಾಯ ॥
ನಮೋಽಸ್ತುತೇ ಮಂದರಧಾರಕಾಯ ॥

ನಮೋಽಸ್ತು ತೇ ಯಜ್ಞ ವರಾಹ ನಾಮ್ನೇ
ನಮೋ ಹಿರಣ್ಯಾಕ್ಷವಿದಾರಕಾಯ ॥
ನಮೋಽಸ್ತುತೇ ವಾಮನರೂಪಭಾಜೇ
ನಮೋಽಸ್ತುತೇ ಕ್ಷತ್ರಕುಲಾಂತಕಾಯ ॥

ನಮೋಽಸ್ತುತೇ ರಾವಣಮರ್ದನಾಯ ॥
ನಮೋಽಸ್ತುತೇ ನಂದಸುತಾಗ್ರಜಾಯ
ನಮಸ್ತೇ ಕಮಲಾಕಾಂತ, ನಮಸ್ತೇ ಸುಖದಾಯಿನೇ
ಸ್ಮೃತಾರ್ತಿದನಾಶಿನೇ ತುಭ್ಯಂ ಭೂಯೋ ಭೂಯೋ ನಮೋ ನಮಃ
ಯಜ್ಞೇಶ ಯಜ್ಞ ವಿನ್ಯಾಸ ಯಜ್ಞ ವಿಘ್ನ ವಿನಾಶನ ॥

ಯಜ್ಞರೂಪ ಯಜ್ಞಭೃದ್ರೂಪ ಯಜ್ಞಾಂಗ ತ್ವಾಂ ಯಜಾಮ್ಯಹಂ ॥
ಇತಿ ಸ್ತುತಃಸ ದೇವೇಶೋ ವಾಮನೋ ಲೋಕಪಾವನಃ ॥

ಸರ್ವಜಗತ್ತಿನ ಸ್ಥಿತಿಗಳಿಗೆ ಕಾರಣನೂ, ಸರ್ವಪಾಲಕನೂ, ದೇವತೆಗಳಿಗೆ ನಾಯಕನೂ, ದೈತ್ಯವಿನಾಶಕನೂ ಆದ ಶ್ರೀ ನಾರಾಯಣನೇ ನಿನಗೆ ನಮಸ್ಕಾರ. ಮತ್ತೆ ಮತ್ತೆ ನಮಸ್ಕಾರ. ಇದರಂತೆ ಭಕ್ತಪ್ರೀಯನು, ಸಜ್ಜನರಿಗೆ ಸುಖ ಕೊಡುವ, ದುರ್ಜನ, ನಾಶಕನಾದ ಜಗದೀಶ್ವರನಿಗೆ ವಂದನೆ. ಜಗತ್ಕಾರಣನೂ ಶಂಖ, ಚಕ್ರ, ಗದಾಧಾರಿಯೂ, ಪುರುಷೋತ್ತಮನೂ, ಸಮುದ್ರಶಾಯಿಯೂ ಸಜ್ಜನರ ಹೃದಯ ಕಮಲದಲ್ಲಿ ನೆಲೆಸಿದವನೂ, ಸೂರ್ಯ ಸಮಾನ ಕಾಂತಿಯುಳ್ಳವನೂ, ರಾಮಾಯಣ ಭಾರತಾದಿಗಳಿಂದ ಪ್ರತಿಪಾದ್ಯನೂ, ಸೂರ್ಯಚಂದ್ರರೇ ಕಣ್ಣಾಗಿ ಉಳ್ಳವನೂ, ಯಜ್ಞವೆಂಬ ಅಂಗದಿಂದ ಶೋಭಿಸುವವನೂ, ಸಜ್ಜನಪ್ರಿಯನೂ, ಜಗತ್ತಿನ ಕಾರಣೀಭೂತ ವಸ್ತುಗಳಿಗೆ ಶಕ್ತಿಯನ್ನು ನೀಡುವವನು, ಶಬ್ದರಹಿತನೂ, ದಿವ್ಯ ಸುಖ ಕೊಡುವವನು, ಭಕ್ತರ ಮನಸ್ಸಿನಲ್ಲಿ ನೆಲಸುವವನು, ಮಂದರ ಪರ್ವತ ಧರಿಸಿದವನು, ಯಜ್ಞವರಾಹವೆಂಬ ಹೆಸರುಳ್ಳವನು, ಹಿರಣ್ಯಾಕ್ಷನನ್ನು ವಧಿಸಿದವನೂ, ಪರುಶರಾಮ ರೂಪದಿಂದ ಕ್ಷತ್ರಿಯರನ್ನು, ರಾಮ ರೂಪದಿಂದ ರಾವಣನನ್ನು ವಧಿಸಿದವನೂ ನಂದಗೋಪನ ಪುತ್ರಶ್ರೇಷ್ಠನಾದ ಶ್ರೀಕೃಷ್ಣರೂಪನೂ, ಸರ್ವರಿಗೂ ಸುಖವನ್ನು ಕೊಡುವ ಲಕ್ಷ್ಮೀ ಕಾಂತ ನರನಾರಾಯಣನೇ, ನಿನಗೆ ನನ್ನ ನಮೋನಮಃ ಸ್ಮರಿಸಿದವನ ಪಾಪಗಳನ್ನು ಪರಿಹರಿಸುವ, ಯಜ್ಞಸ್ವಾಮಿಯೂ,

ಯಜ್ಞದಲ್ಲಿ ಸನ್ನಿಹಿತನೂ, ಯಜಮಾನರೂಪಕನೂ, ಯಜ್ಞದ ಅಂಗಕಲಾಪ ಸೃಷ್ಟಿಸುವ ಅವಯವ ಉಳ್ಳವನೂ ಆದ ನಿನ್ನನ್ನು ನಾನು ಪೂಜಿಸುತ್ತೇನೆ. ನಿನಗೆ ಅನಂತಾನಂತ ವಂದನೆಗಳು. ಪುನಃ ಪುನಃ ನಮೋ ನಮಃ. ಮತ್ತೆ ಮತ್ತೆ ನಮೋ ನಮಃ. ಈ ರೀತಿಯಾಗಿ ಕಶ್ಯಪ ಋಷಿಯಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ವಾಮನ ರೂಪಿ ಪರಮಾತ್ಮನು ಮಂದಹಾಸ ಮಾಡುತ್ತ ಕಶ್ಯಪರಿಗೆ ಸಂತೋಷವಾಗುವಂತೆ ಮಾತನಾಡಿದನು. ''ತಂದೆಯೇ, ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮುಂದೆ ಕಲ್ಯಾಣವಾಗುತ್ತದೆ. ನಿನ್ನ ಮನೋರಥಗಳನ್ನೆಲ್ಲ ನಾನು ಬೇಗನೇ ಪೂರೈಸುತ್ತೇನೆ.'' ನಾನು ಎರಡು ಅವತಾರಗಳಲ್ಲಿ ಈ ರೀತಿಯಾಗಿ ನಿನ್ನ ಮಗನಾಗಿ ಹುಟ್ಟುತ್ತೇನೆ. ಮುಂದಿನ ಜನ್ಮದಲ್ಲಿ ನಿಮಗೆ ಉತ್ತಮವಾದ ಸುಖವು ದೊರಕುವಂತೆ ಮಾಡುತ್ತೇನೆ.''

ಭಗವಂತನ ಸರಸಾರ್ಥ ಸುಂದರವಾದ ಈ ಭಾವಬಂಧುರವಾಚೋ ವೈಖರಿಯಿಂದ ಕಶ್ಯಪರಿಗೆ ಹರ್ಷವಾಯಿತು. ಇಂತಹ ಸಾಕ್ಷಾತ್ ಭಗವಂತನನ್ನೇ ಲೋಕ ದೃಷ್ಟಿಯಿಂದಲೂ ಪುತ್ರನೆಂದು ಪಡೆದ ತಾವೇ ದಂಪತಿಗಳು ಧನ್ಯರು ಎಂಬ ಸಂತೃಪ್ತ ಭಾವ ಹಾಗೂ ಧನ್ಯತಾ ಬುದ್ಧಿಯು ಅವರಲ್ಲಿ ಉದಿಸಿತು. ಅಷ್ಟರಲ್ಲಿ ಇತ್ತಕಡೆಗೆ ದೈತ್ಯಸಾರ್ವಭೌಮನಾದ ಬಲಿಚಕ್ರವರ್ತಿಯು ಒಂದು ದೊಡ್ಡ ಯಜ್ಞವನ್ನು ಪ್ರಾರಂಭಿಸಿದನು. ಗುರುಗಳಾದ ಶುಕ್ರಾಚಾರ್ಯರು ಅನೇಕ ಮಹಾಮುನಿಗಳೊಂದಿಗೆ ಕೂಡಿಕೊಂಡು ಅವನ ಈ ಯಜ್ಞ ಕಾರ್ಯದಲ್ಲಿ ಮಾರ್ಗ ದರ್ಶಕರಾಗಿದ್ದರು. ಸರ್ವರೀತಿಯಿಂದಲೂ ಸಹಾಯ ಮಾಡಿ, ಯಜ್ಞ ಯಶಸ್ವಿಗೊಳಿಸುವ ಸಂಕಲ್ಪದಿಂದ ವಿಷ್ಣು ಭಕ್ತನಾದ ಬಲಿಚಕ್ರವರ್ತಿಯ ಯಜ್ಞವು ವಿಷ್ಣು ಪ್ರೀತ್ಯರ್ಥ ನಡೆದಿತ್ತು. ವಿಷ್ಣುವೇ ಆ ಯಜ್ಞದ ಉದ್ದೇಶವಾಗಿದ್ದನು. ಯಜ್ಞ ಸಮಾರಂಭದಲ್ಲಿ ಬ್ರಹ್ಮಾದಿಗಳಾದ ಶುಕ್ರಾಚಾರ್ಯ ಮೊದಲಾದ ಋಷಿಗಳು, ಮುನಿಗಳು ಮಂತ್ರೋಚ್ಚಾರಪೂರ್ವಕ ಆಹುತಿ ಸ್ವೀಕರಿಸಲು ಶ್ರೀಲಕ್ಷ್ಮೀನಾರಾಯಣರನ್ನು ಆಹ್ವಾನಿಸಿದರು. ಅದೇ ವೇಳೆಯಲ್ಲಿ ವಾಮನದೇವರು ತನ್ನ ತಂದೆ ತಾಯಿಗಳಿಗೆ ಹೇಳಿ ಅವರ ಅಪ್ಪಣೆ ಪಡೆದು ಬಲಿಚಕ್ರವರ್ತಿಯ ಯಜ್ಞಮಂಟಪಕ್ಕೆ ಬಂದನು. ಆ ವಾಮನಾವತಾರಿ ವಿಷ್ಣುವಿನ ಮಂದಹಾಸ ಮರುಳಾಗುವಂತಿತ್ತು. ಬಲಿರಾಜನ ಯಜ್ಞದಲ್ಲಿ ಪುರೋಹಿತರು ಆಹ್ವಾನ ಮಾಡಿದ ಸಾಕ್ಷಾತ್ ಶ್ರೀ ಹರಿಯೇ ಹವಿರ್ಭಾಗವನ್ನು ಸ್ವೀಕರಿಸಲು ಪ್ರತ್ಯಕ್ಷವಾಗಿ ನಡೆದುಬಂದಂತಿತ್ತು.

> ದುರ್ವೃತ್ತೋ ವಾ ಸುವೃತ್ತೋ ವಾ ಜಡೋ ವಾ ಪಂಡಿತೋsಥವಾ॥
> ಯೋ ಭಕ್ತಿ ಯುಕ್ತಸ್ತಸ್ಯಾಂತಃ ಸದಾ ಸನ್ನಿಹಿತೋ ಹರಿಃ ॥

ದುರಾಚಾರಿ ಅಥವಾ ಸದಾಚಾರಿ ಅಜ್ಞಾನಿ ಅಥವಾ ಪಂಡಿತ ಎಂತಹವನಾದರೂ ಸರಿ. ಭಕ್ತಿಯುಳ್ಳವನಾದರೆ ಅಂತಹ ಭಕ್ತನ ಅಂತರಂಗದಲ್ಲಿ ಹರಿಯು ಯಾವಾಗಲೂ ತನ್ನ ಸಾನ್ನಿಧ್ಯವನ್ನು ನೀಡುವನು.

ಬಲಿಚಕ್ರವರ್ತಿಯ ಯಜ್ಞಮಂಟಪದಲ್ಲಿ ಉಪಸ್ಥಿತರಿದ್ದ ಋಷಿಗಳು ದೂರದಿಂದಲೇ ಈ ವಾಮನ ಮೂರ್ತಿಯನ್ನು ನೋಡಿದರು. ಜ್ಞಾನ ಚಕ್ಷುಸ್ಸಿನಿಂದ ತಿಳಿದುಕೊಂಡರು ಇವನು ಸಾಕ್ಷಾತ್ ನಾರಾಯಣನೇ ಎಂದು. ಕೂಡಲೇ ಸ್ವಾಗತಕ್ಕಾಗಿ ಎದ್ದು ನಿಂತರು. ಇದನ್ನು ತಿಳಿದು ದೈತ್ಯಗುರುಗಳಾದ ಶುಕ್ರಾಚಾರ್ಯರು ಬಲಿರಾಜನನ್ನು ಏಕಾಂತದಲ್ಲಿ ಕರೆದು

ಹೇಳಿದರು. ದುರ್ಬುದ್ಧಿಯ ಜನರು ತಮ್ಮ ಬಲಾಬಲ ವಿಚಾರಿಸದೆ, ದುಡುಕಿ ಇಂತಹ ಉಪದ್ವ್ಯಾಪವನ್ನು ಮಾಡುತ್ತಾರೆ.

**ಶುಕ್ರಾಚಾರ್ಯ:-** ದೈತ್ಯ ರಾಜನೇ, ನೀನು ಬಹಳ ಸಾತ್ವಿಕನೂ ಸೌಮ್ಯನೂ ಸರಳ ಸ್ವಭಾವದವನೂ ಇರುವೆ. ಆ ಎಲ್ಲ ದೇವತೆಗಳ ಹಾಗೂ ಹರಿಯ ಕುತಂತ್ರಗಳು ನಿನಗೆ ತಿಳಿಯುವದಿಲ್ಲ. ಈಗ ನಿನ್ನ ಐಶ್ವರ್ಯ ಹಾಗೂ ಅಧಿಕಾರ ಅಪಹರಿಸುವ ಉದ್ದೇಶದಿಂದ ದೇವಪಕ್ಷಪಾತಿಯಾದ ವಿಷ್ಣುವು, ವಾಮನರೂಪದಿಂದ ಅದಿತಿಯ ಮಗನಾಗಿ ಹುಟ್ಟಿದ್ದಾನೆ. ಅದೇ ವಿಷ್ಣುವು ಈ ನಿನ್ನ ಯಜ್ಞಮಂಟಪಕ್ಕೆ ಬರುತ್ತಿದ್ದಾನೆ, ಅವನು ಇಲ್ಲಿಗೆ ಬಂದಾಗ ಏನಾದರೂ ಬೇಡಿದರೆ ನೀನು ಏನನ್ನೂ ಕೊಡಕೂಡದು. ಇದು ನನ್ನ ಅಭಿಪ್ರಾಯ. ನೀನು ಕೂಡ ಬಲ್ಲವನಿರುವೆ. ವಿಚಾರಿಸಿ ನೋಡು, ಮನುಷ್ಯನಿಗೆ ತನ್ನ ಬುದ್ಧಿಯು ಸುಖವನ್ನು ಉಂಟುಮಾಡಬಲ್ಲದು. ಹೆಚ್ಚಾಗಿ ಗುರುಬುದ್ಧಿಯು ಅತ್ಯಂತ ಫಲಪ್ರದವಾಗಿದೆ. ಪರಬುದ್ಧಿಯು ಮಾತ್ರ ವಿನಾಶಕ್ಕೆ ಕಾರಣ. ಸ್ತ್ರೀ ಬುದ್ಧಿಯು ಪ್ರಳಯಾಂತಕಾರಿ ಎಂದು ಪೌರಾಣಿಕ ನೀತಿ ಸಂಹಿತೆಯಲ್ಲಿ ಹೇಳಲಾಗಿದೆ.

**ಪರಬುದ್ಧಿರ್ವಿನಾಶಾಯ ಸ್ತ್ರೀ ಬುದ್ಧಿಃ ಪ್ರಳಯಂಕರೀ**
**ಆತ್ಮಬುದ್ಧಿಃ ಸುಖಕರೀ ಗುರುಬುದ್ಧಿರ್ವಿಶೇಷತಃ ॥**

ಅದರಲ್ಲಿಯೂ ಶತ್ರುಗಳಿಗೆ ಹಿತವನ್ನು ಮಾಡುವವನನ್ನು ಕೊಂದು ಹಾಕಬೇಕು. ಈ ವಾಮನನು ನಿನ್ನ ವೈರಿಗಳಾದ ದೇವತೆಗಳಿಗೆ ಹಿತ ಮಾಡುವ ಉದ್ದೇಶದಿಂದ, ನಿನ್ನನ್ನು ವಂಚಿಸಲು ಬಂದಿದ್ದಾನೆ. ವಿಚಾರ ಮಾಡಿ ಹೆಜ್ಜೆ ಇಡು.

**ಬಲಿರಾಜ:-** ಗುರುಗಳೆ, ತಮ್ಮಂತಹವರು ಧರ್ಮವಿರುದ್ಧವಾದ ಇಂತಹ ಮಾತು ಆಡಬಾರದು, ಸಾಕ್ಷಾತ್ ವಿಷ್ಣುವು ನನ್ನಿಂದ ದಾನ ಸ್ವೀಕರಿಸುತ್ತಾನೆ ಎಂದರೆ ಅದಕ್ಕಿಂತ ಹೆಚ್ಚಿನದು ಇನ್ನೇನು ಬೇಕು ನನ್ನಂತಹ ದೈತ್ಯರಿಗೆ? ನಿಜವಾಗಿಯೂ ಇದೊಂದು ವರವೆಂದು ಭಾವಿಸುತ್ತೇನೆ. ವಿದ್ವಾಂಸರಾದವರು ಯಜ್ಞ ಮಾಡುತ್ತಾರೆ. ಅದು ವಿಷ್ಣು ಪ್ರೀತಿಗಾಗಿಯೇ ಅಲ್ಲವೇ? ಅಂತಹ ಯಜ್ಞಪತಿಯಾದ ಶ್ರೀವಿಷ್ಣುವು ತಾನೇ ಪ್ರತ್ಯಕ್ಷವಾಗಿ ನನ್ನಿಂದ ಹವಿರ್ಭಾಗವನ್ನು ಸ್ವೀಕರಿಸಲು ಬಂದಿದ್ದಾನೆಂದರೆ ನನಗಿಂತ ಮಿಗಿಲಾಗಿ ಪುಣ್ಯವಂತರು ಯಾರಿದ್ದಾರೆ? ಎಂತಹ ದರಿದ್ರನೇ ಆಗಲಿ, ವಿಷ್ಣುವನ್ನು ಉದ್ದೇಶಿಸಿ ಕಿಂಚಿತ್ತಾದರೂ ದಾನ ಕೊಟ್ಟರೆ ಅದು ಅಕ್ಷಯವಾಗುತ್ತದೆ. ಭಕ್ತಿಯಿಂದ ನೆನೆದ ಮಾತ್ರಕ್ಕೆ ನಾರಾಯಣನು ಪಾವನಗೊಳಿಸಿ ಉದ್ಧರಿಸುತ್ತಾನೆ. ಯಾರೇ ಪೂಜಿಸಿದರೂ ಅವರಿಗೆ ದಿವ್ಯಗತಿಯನ್ನು ನೀಡುತ್ತಾನೆ.

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ।**
**ಜಿಹ್ವಾಗ್ರೇ ವಸತೇ ಯಸ್ಯ ಹರಿರಿತ್ಯಕ್ಷರದ್ವಯಂ**
**ಸ ವಿಷ್ಣು ಲೋಕಮಾಪ್ನೋತಿ ಪುನರಾವೃತ್ತಿ ದುರ್ಲಭಂ ॥**

**ಗೋವಿಂದೇತಿ ಸದಾ ಧ್ಯಾಯೇದ್ಯಸ್ತು ರಾಗಾದಿವರ್ಜಿತಃ ।**
**ಸ ಯಾತಿ ವಿಷ್ಣು ಭವನಮಿತಿ ಪ್ರಾಹುರ್ಮನೀಷಿಣಃ ॥**

**ಅಗ್ನೌವಾ ಬ್ರಾಹ್ಮಣೇ ವಾಽಪಿ ಹೂಯತೇ ಯದದವಿರ್ಗುರೋ**
**ಹರಿಭಕ್ತ್ಯಾ ಮಹಾಭಾಗ ತೇನ ವಿಷ್ಣುಃ ಪ್ರಸೀದತಿ**

ಕಾಣದೇ ಮುಟ್ಟಿದಾಗಲೂ ಅಗ್ನಿಯು ಹೇಗೆ ಸುಡುವದೋ, ಅಂತೆಯೇ ದುಷ್ಟ ಮನಸ್ಸಿನಿಂದ ಸ್ಮರಣೆ ಮಾಡಿದರೂ ಸಹ ಶ್ರೀ ಹರಿಯು ಪಾಪಗಳನ್ನು ಪರಿಹರಿಸುತ್ತಾನೆ. ಯಾವನ ನಾಲಿಗೆಯ ಕೊನೆಲ್ಲಿ 'ಹರಿ' ಎಂಬ ಎರಡು ಅಕ್ಷರಗಳು ಇರುತ್ತವೆಯೋ ಅಂತಹವಿಗೆ ಪುನರಾವೃತ್ತಿಯಿಲ್ಲದ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ. ರಾಗದ್ವೇಷಗಳಿಲ್ಲದ ಗೋವಿಂದ ಎಂಬ ನಾಮವನ್ನು ಯಾವಾಗಲೂ ಧ್ಯಾನಿಸುವವನು, ಶಾಶ್ವತ ಸುಖಮಯವಾದ ವೈಕುಂಠಲೋಕಕ್ಕೆ ಹೋಗುತ್ತಾನೆಂದು ಶಾಸ್ತ್ರಬಲ್ಲಂಥ ಜ್ಞಾನಿಗಳು ಹೇಳುತ್ತಾರೆ. ಗುರುಗಳೆ, ಅಗ್ನಿಯಲ್ಲಾಗಲಿ, ದ್ವಿಜರ ಮುಖದಲ್ಲಾಗಲಿ ಭಕ್ತಿಯಿಂದ ಹವಿಸ್ಸನ್ನು ಅರ್ಪಿಸಿದರೆ ವಿಷ್ಣು ಪ್ರಸನ್ನನಾಗುತ್ತಾನೆ. ನಾನಂತೂ ಆ ಹರಿಯ ಪ್ರೀತಿಗಾಗಿಯೇ ಈ ಯಜ್ಞ ಮಾಡುತ್ತಿದ್ದೇನೆ. ಅದಕ್ಕಾಗಿಯೇ ಆಹುತಿ ನೀಡುತ್ತಿದ್ದೇನೆ. ಶ್ರೀ ಹರಿಗೆ ಮುಟ್ಟಲೆಂದು. ಅಂತಹ ಹರಿಯು ತಾನಾಗಿಯೇ ನನ್ನ ಯಜ್ಞ ಮಂಟಪಕ್ಕೆ ಬಂದರೆ ನಾನು ಕೃತಾರ್ಥನೇ ಆದಂತೆ. ಇದರಲ್ಲಿ ಸಂಶಯವೇ ಇಲ್ಲ.

ಬಲಿರಾಜನು ಹೀಗೆ ಮಾತನಾಡುತ್ತಿರುವಾಗಲೇ, ವಾಮನ ರೂಪಿಯಾದ ವಿಷ್ಣುವು ಯಜ್ಞಮಂಟಪಕ್ಕೆ ಪ್ರವೇಶಿಸಿದನು. ಹೋಮಾಗ್ನಿಯ ಜ್ವಾಲೆಗಳ ಬೆಳಕಿನಿಂದ ಮತ್ತಿಷ್ಟು ದೇದೀಪ್ಯಮಾನವಾಗಿ ಕಂಡ ಆ ವಾಮನಮೂರ್ತಿ. ಕೋಟಿ ಸೂರ್ಯರು ಒಮ್ಮೆಲೆ ಯಜ್ಞಶಾಲೆ ಹೊಕ್ಕಂತಾಯಿತು. ಅಷ್ಟು ಉಜ್ವಲ ದೀಪ್ತಿ ತೊಳಗುತ್ತಿತ್ತು ಆ ಮಂಜಿಮೆಮಣಿಯಾದ ವಾಮನನ ದಿವ್ಯದೇಹದಲ್ಲಿ. ಅವನ ಅಂಗ ಪ್ರತ್ಯಂಗಗಳು ಅತ್ಯಂತ ಸುಂದರವಾಗಿದ್ದವು. ತೇಜಸ್ಸಿನ ತಳಿಗೆಯಂತಿರುವ ಆ ವಾಮನಾವತಾರಿ ವಿಷ್ಣುವನ್ನು ಕಂಡ ಕೂಡಲೇ ಬಲಿ ಚಕ್ರವರ್ತಿ ತಕ್ಷಣವೇ ಎದ್ದು ನಿಂತು, ಕೈ ಮುಗಿದು ವಾಮನಮೂರ್ತಿಗೆ, ಸ್ವಾಗತ ಮಾಡಿ ಆಸನ ನೀಡಿದ. ಮಡದಿಯನ್ನು ಕರೆದು, ಅವನ ಅಡಿದಾವರೆಗಳನ್ನು ಭಕ್ತಿಯಿಂದ ತೊಳೆದ. ಆ ನೀರನ್ನು ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಂಡ. ಹೆಂಡತಿಯ ಮೇಲೂ ಪ್ರೋಕ್ಷಿಸಿದ. ಅದರಿಂದ ಅವನ ಹೃದಯದ ಹಿಗ್ಗು ಹೆಚ್ಚಾಯಿತು. "**ವಿಷ್ಣುವೇ ನಮಃ ಜಗದ್ಧಾಮ್ನೇ ನಮಃ**" ಎಂದು ಬಾಯಿಂದ ಅಂದು ಅರ್ಘ್ಯ ನೀಡಿದ. ಪಾದ್ಯ ಆಚಮನಗಳನ್ನು ನೀಡಿದ. ಅದೆಲ್ಲವನ್ನೂ ವಾಮನ ದೇವರು ಸಮಾಧಾನದಿಂದ ಸ್ವೀಕರಿಸಿದರು. ಅದನ್ನು ನೋಡಿ ಬಲಿಚಕ್ರವರ್ತಿಗೆ ಹರ್ಷೋತ್ಕರ್ಷವಾಯಿತು. ಮೈತುಂಬ ರೋಮಾಂಚನ, ಕಣ್ತುಂಬ ಹರ್ಷಾಶ್ರು. ಹೃದಯದ ತುಂಬ ಹರ್ಷ.

**ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲೋ ಮಖಃ**
**ಜೀವಿತಂ ಸಫಲಂ ಮೇಽದ್ಯ ಕೃತಾರ್ಥೋಽಸ್ಮಿ ನ ಸಂಶಯಃ ॥**

**ಅಮೋಘಾಮೃತವೃಷ್ಟಿರ್ಮೇ ಸಮಾಯಾತಾತಿದುರ್ಲಭಾ ।**
**ತ್ವದಾಗಮನ ಮಾತ್ರೇಣ ಹ್ಯನಾಯಾಸೋ ಮಹೋತ್ಸವಃ ॥**

**ಏತೇ ಚ ಋಷಯಃ ಸರ್ವೇ ಕೃತಾರ್ಥಾ ನಾತ್ರ ಸಂಶಯಃ ।**
**ಯೈಃ ಪೂರ್ವಂ ಹಿ ತಪಸ್ತಪ್ತಂ ತದದ್ಯ ಸಫಲಂ ಪ್ರಭೋ ॥**

ಇಂದು ನನ್ನ ಜನ್ಮ ಸಾರ್ಥಕ. ಇಂದು ನಾನು ಮಾಡಿದ ಯಜ್ಞವು ಸಫಲ. ನನ್ನ ಜೀವನವೇ ಇಂದು ಕೃತಾರ್ಥವಾಯಿತು. ನಾನು ಧನ್ಯ ಧನ್ಯನಾದೆ. ನೀನು ನನ್ನ ಯಜ್ಞಮಂಟಪಕ್ಕೆ ಬಂದದ್ದು ಅಮೃತವೃಷ್ಟಿಯೇ ಸರಿ! ಅಮೃತದ ಮಳೆ ಉಳಿದವರಿಗೆ ಅತ್ಯಂತ ದುರ್ಲಭ. ಆದರೆ ನನಗೆ ಮಾತ್ರ ನಿನ್ನ ಆಗಮನದಿಂದ ಆ ಅಮೃತ ವರ್ಷವು ಸುಲಭವಾಗಿ ದೊರೆತಂತಾಗಿದೆ. ಇದೊಂದು ಆಯಾಸವಿಲ್ಲದ ಮಹಾನ್ ಉತ್ಸವ. ನಾನೊಬ್ಬನೆ ಅಲ್ಲ. ಇಲ್ಲಿ ಬಂದ, ಯಜ್ಞ ಮಂಟಪದಲ್ಲಿ ನಿಂತ ಋಷಿ ಮುನಿಗಳೆಲ್ಲರೂ, ಇಂದು ಕೃತಾರ್ಥರಾದರು. ಇವರೆಲ್ಲರೂ ಹಿಂದೆಂದೋ ತಪಸ್ಸನ್ನು ಮಾಡಿದ್ದಾರೆ. ಅದರ ಫಲ ಮಾತ್ರ ಇಂದು ಅವರಿಗೆ ದೊರೆತಂತಾಯಿತು. ನಿನ್ನ ದರ್ಶನದ ಹೊರತು, ತಪಸ್ಸಿಗೆ ಏನು ಫಲವಿದೆ? ಸ್ವಾಮಿನ್, ನಿಜವಾಗಿಯೂ ನಾನು ಕೃತಾರ್ಥನಾದೆ. ಎಷ್ಟು ಸಲ ನಾನು 'ಕೃತಾರ್ಥ' ನೆಂದರೂ ಸಾಲದು. ಉಪಜೀವನಕ್ಕೆ ಸಾಧನವಿಲ್ಲದ ದ್ವಿಜನಿಗೆ, ಭೂಮಿಯನ್ನು ದಾನಮಾಡುವದರಿಂದ ಬರುವ ಪುಣ್ಯ ಫಲವನ್ನು ನಾನು ನೂರು ವರ್ಷ ಬಣ್ಣಿಸಿದರೂ ಹೇಳಲು ಶಕ್ಯವಿಲ್ಲ.

ಹಿಂದೆ ಬ್ರಾಹ್ಮಕಲ್ಪದಲ್ಲಿ ಭದ್ರಮತಿ ಎಂಬ ದರಿದ್ರ ಬ್ರಾಹ್ಮಣನಿದ್ದ. ಅವನು ಶಾಸ್ತ್ರದಲ್ಲಿ ಪಂಡಿತ. ವೇದದಲ್ಲಿ ವಿದ್ವಾಂಸ, ಪುರಾಣದಲ್ಲಿ ಪಾರಂಗತ. ಧರ್ಮ ಶಾಸ್ತ್ರದಲ್ಲಿ ಮಮ ೯ಜ್ಞ. ಪಾಂಡಿತ್ಯದ ಪ್ರತಿರೂಪವೇ ಆಗಿದ್ದ ಆ ಭದ್ರಮತಿ. ಅವನಿಗೆ ಆರು ಜನ ಹೆಂಡಂದಿರು. ಶ್ರುತಿ, ಸಿಂಧು, ಯಶೋಮತಿ, ಕಾಮಿನಿ, ಮಾಲಿನಿ, ಶೋಭಾ ಎಂದು ಆ ಷಟ್‌ಪತ್ನಿಯರ ಹೆಸರು. ಈ ಆರು ಜನ ಮಡದಿಯರಲ್ಲಿ ಅವನಿಗೆ ಎರಡುನೂರ ನಲವತ್ತು ಮಕ್ಕಳು ಹುಟ್ಟಿದರು. ಮೊದಲೇ ಅಷ್ಟ ದರಿದ್ರ ಆ ಬ್ರಾಹ್ಮಣ. ಮೇಲೆ ಇಷ್ಟು ಜನ ಮಡದಿಯರು ಹಾಗೂ ಮಕ್ಕಳು. ಹೀಗಾಗಿ ಮನೆಯಲ್ಲಿ ನಿತ್ಯ ದಾರಿದ್ರ್ಯ. ಮಕ್ಕಳೆಲ್ಲರೂ ಯಾವಾಗಲೂ ಹಸಿವೆಯಿಂದ ಕಸಿವಿಸಿ ಪಡುತ್ತಿದ್ದವು ಉಣ್ಣಲು ಅನ್ನವಿಲ್ಲದೆ ಹಸಿವೆಯಿಂದ ಅಳುತ್ತಲಿರುವ ಮಕ್ಕಳನ್ನು ನೋಡಿ ಆ ಬ್ರಾಹ್ಮಣನಿಗೆ ಬಹಳ ದುಃಖವಾಯಿತು. ಅವನು ದಾರಿದ್ರ್ಯಕ್ಕಾಗಿ ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದನು- 'ಹಣವಿಲ್ಲದ ನನ್ನ ಈ ಸಂಸಾರಕ್ಕೆ ಧಿಕ್ಕಾರ! ಮಕ್ಕಳು ಬಹಳವಿದ್ದು ಅದಕ್ಕೆ ತಕ್ಕ ಐಶ್ವರ್ಯವಿಲ್ಲದ ಮನುಷ್ಯನ ಜೀವನಕ್ಕೆ ಧಿಕ್ಕಾರ. ಪಾಂಡಿತ್ಯ ಸತ್ಕುಲದಲ್ಲಿ ಜನ್ಮ, ಶಾಂತವೃತ್ತಿ, ಸಜ್ಜನಿಕೆ ಮುಂತಾದ ಸದ್ಗುಣಗಳೆಲ್ಲವೂ ದಾರಿದ್ರ್ಯದ ಸಾಗರದ ನಡುವೆ ಮುಳುಗಿದ ಮನುಷ್ಯನಿಗೆ ಇದ್ದರೂ ವ್ಯರ್ಥ. ದರಿದ್ರ ಮನುಷ್ಯನನ್ನು ಮಕ್ಕಳು ದೂರುತ್ತಾರೆ. ಮಡದಿಯರು ತ್ಯಜಿಸುತ್ತಾರೆ. ಸೋದರರು ಆದರಿಸುವದಿಲ್ಲ. ಶಿಷ್ಯರು ಮನ್ನಿಸುವದಿಲ್ಲ - ಎಲ್ಲರೂ ತಿರಸ್ಕರಿಸುತ್ತಾರೆ.

**ಚಾಂಡಾಲೋ ವಾ ದ್ವಿಜೋ ವಾಪಿ ಭಾಗ್ಯವಾನೇವ ಪೂಜ್ಯತೇ ।**
**ದರಿದ್ರಃ ಪುರುಷೋ ಲೋಕೇ ಶವವಲ್ಲೋಕ ನಿಂದಿತಃ**

ಹೊಲೆಯನಾಗಲಿ, ಬ್ರಾಹ್ಮಣನಾಗಲಿ, ಹಣವಿದ್ದರೆ ಮಾತ್ರ ಗೌರವಿಸಲ್ಪಡುತ್ತಾನೆ. ಹಣವಿಲ್ಲದ ದರಿದ್ರನು ಹೆಣವಿದ್ದಂತೆ. ಎಲ್ಲರೂ ಅವನನ್ನು ಹಳಿಯುವವರೇ.

**ಅಹೋ ದರಿದ್ರತಾ ದುಃಖಂ ತತ್ರಾಪ್ಯಾಶಾಽತಿ ದುಃಖದಾ ।**
**ಆಶಾಭಿಭೂತಾಃ ಪುರುಷಾಃ ದುಃಖಮಶ್ನುವತೇಽಕ್ಷಯಂ ॥**

ಆಶ್ಚರ್ಯ! ಬಡತನವು ದುಃಖಕರವು. ಅದರಲ್ಲಿಯೂ ಆಸೆಯು ಇನ್ನೂ ಹೆಚ್ಚು ದುಃಖ ಸಾಧನ. ಆಶಾಪೂರ್ಣರಾದ ಮನುಷ್ಯರು ಅಂತ್ಯವಿಲ್ಲದಷ್ಟು ದುಃಖವನ್ನು ಅನುಭವಿಸುತ್ತಾರೆ.

**ಆಶಾಯಾ ದಾಸಾ ಯೇ ದಾಸಾಸ್ತೇ ಸರ್ವಲೋಕಸ್ಯ ।**
**ಆಶಾ ದಾಸೀ ಯೇಷಾಂ ತೇಷಾಂ ದಾಸಾಯತೇ ಲೋಕಃ ॥**
**ಕೃತಾರ್ಥೋಽಸ್ಮಿ ನ ಸಂಶಯಃ!**
**ಕೃತಾರ್ಥೋಽಸ್ಮಿ ನ ಸಂಶಯಃ!**
**ಕೃತಾರ್ಥೋಽಸ್ಮಿ ನ ಸಂಶಯಃ!!**

ಆದುದರಿಂದ ಮಹಾಸ್ವಾಮಿಯೇ, ನಿನಗೆ ನನ್ನ ನಮನ. ಇದೋ ನನ್ನ ವಂದನೆ. ಇಕೋ ನನ್ನ ಪ್ರಣಾಮ. ಮತ್ತೆ ಮತ್ತೆ ನಮಸ್ಕಾರ. ನಾನು ಕೃತಾರ್ಥ ಕೃತಾರ್ಥ. ಇದರಲ್ಲಿ ಸಂದೇಹವಿಲ್ಲ.

**ನಮಸ್ತುಭ್ಯಂ। ನಮಸ್ತುಭ್ಯಂ। ನಮಸ್ತುಭ್ಯಂ ನಮೋನಮಃ।**

''ಪ್ರಭೋ, ನಿನ್ನ ಆಜ್ಞೆ ಏನು? ನಿನ್ನ ಆದೇಶವನ್ನು ಪಾಲಿಸಬೇಕೆಂದು ನನ್ನ ಹೃದಯ ತುಡಿಯುತ್ತಿದೆ. ನಿನ್ನ ಆಜ್ಞೆಯ ಪಾಲನಕ್ಕಾಗಿ ನನ್ನ ಮನಸ್ಸಿನಲ್ಲಿ ಉತ್ಸಾಹ ಉಕ್ಕುತ್ತಿದೆ. ಆದುದರಿಂದ ಅಪ್ಪಣೆಮಾಡು.'' ಬಲಿರಾಜನ ಈ ಮಾತನ್ನು ಕೇಳಿ, ಆ ವಾಮನ ವಟುವಿಗೆ ಸಂತೋಷವಾಯಿತು. ಅವನು ನಸುನಗುತ್ತ ನುಡಿದ. '' ಬಲಿರಾಜ, ನನಗೆ ಬೇರೆ ಏನೂ ಬೇಡ. ತಪಸ್ಸನ್ನು ಮಾಡಲು ನನಗೆ ನನ್ನ ಕಾಲಿನಿಂದ ಅಳೆದು ಮೂರುಪಾದ ಭೂಮಿಯನ್ನು ದಾನ ಕೊಡು.''

ವಾಮನನ ಈ ಅಲ್ಪ ಬೇಡಿಕೆಯನ್ನು ಕೇಳಿ, ಬಲಿಯು ಕಿಂಚಿತ್ ಖಿನ್ನನಾದನು. ಮತ್ತು ವಾಮನನಿಗೆ ಹೇಳಿದನು. '' ನೀನು, ನನ್ನಿಂದ ಏನು ಬೇಡಬೇಕು ಎಂದು ಯೋಚಿಸಲಿಲ್ಲ. ನಗರವನ್ನು ಬೇಡಲಿಲ್ಲ. ಗ್ರಾಮವನ್ನು ಕೇಳಲಿಲ್ಲ. ದ್ರವ್ಯವನ್ನು ಅಪೇಕ್ಷಿಸಲಿಲ್ಲ. ನೀನು ಏನು ಕೇಳಿದಂತಾಯಿತು? ನಾನೇನು ಕೊಟ್ಟಂತಾಯಿತು? ನೀನೇಕೆ ಹೆಚ್ಚಿನದನ್ನು ಕೇಳುವದಿಲ್ಲ ? '' ಇದನ್ನು ಕೇಳಿ ವಿಷ್ಣುವು ಬಲಿರಾಜನಿಗೆ ಹೇಳಿದನು. ಕಪಟನಾಟಕ ಸೂತ್ರಧಾರಿಯಲ್ಲವೇ ಆ ವಿಷ್ಣುವು? ಮರುಕ್ಷಣ ರಾಜ್ಯ ಭ್ರಷ್ಟನಾಗಲಿರುವ ಬಲಿಚಕ್ರವರ್ತಿಗೆ ವೈರಾಗ್ಯ ಹುಟ್ಟಿಸುವಂತಿತ್ತು ಈ ವಟು ವಾಮನನ ಹಿತವಚನ.

**ವಾಮನ :** ದೈತ್ಯರಿಗೆಲ್ಲ ಇಂದ್ರನಾದ ಬಲಿರಾಜನೆ, ನಿನಗೊಂದು ರಹಸ್ಯ ಹೇಳುತ್ತೇನೆ, ಕೇಳು. ಎಲ್ಲ ವಿಷಯಗಳಲ್ಲಿ ಆಶೆ ಬಿಟ್ಟವರು, ದ್ರವ್ಯದಿಂದ ಸಾಧಿಸಬೇಕಾದುದು ಏನು ಹೇಳು? ನಾನಂತೂ ಸರ್ವ ಪ್ರಾಣಿಗಳ ಅಂತರ್ಯಾಮಿ. ಸಕಲ ಜಗತ್ತು ನನ್ನನ್ನೇ ಆಶ್ರಯಿಸಿದೆ. ಹೀಗಿರುವಾಗ ಇತರ ವಸ್ತುಗಳಿಂದ ನಾನು ಸಾಧಿಸಬೇಕಾದುದು ಏನು? ಆದರೂ ಭೂಮಿದಾನವು ಅತ್ಯಂತ ಪುಣ್ಯಕರವಾದುದು. ಅಗ್ನಿಹೋತ್ರವನ್ನಿಟ್ಟ ಶೋತ್ರಿಯನಿಗೆ ಸ್ವಲ್ಪವಾದರೂ ಭೂಮಿ ದಾನ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿಯಾಗುವದು. ಭೂಮಿದಾನ ಮಾಡಿದವನು ಸರ್ವದಾನ ಮಾಡಿದಂತೆ. ಭೂಮಿದಾನ ನೀಡಿದವನು ಮೋಕ್ಷವನ್ನು ಹೊಂದುತ್ತಾನೆ. ಎಂತಹ ಮಹಾ ಪಾತಕ ಮಾಡಿರಲಿ, ಹತ್ತು ಮೊಳ ಭೂಮಿದಾನದಿಂದ ಸರ್ವಪಾಪದಿಂದ ಮುಕ್ತಿಯಾಗುವದು. ಆಶೆಗೆ ದಾಸರಾದವರು ಎಂದರೆ ಆಶೆ ಪಡುವವರು, ಸರ್ವರಿಗೂ ದಾಸರಾಗುತ್ತಾರೆ. ಎಂದರೆ ಎಲ್ಲರಿಗೂ ಅಧೀನರಾಗುತ್ತಾರೆ. ಆಶೆಯನ್ನೇ ತಮ್ಮ ಅಧೀನದಲ್ಲಿಟ್ಟುಕೊಂಡವರಿಗೆ ಪ್ರಪಂಚವೇ ವಶವಾಗುತ್ತದೆ. ಎಂದರೆ ದುರಾಶೆಯನ್ನು ಬಿಟ್ಟು ನಿಸ್ಪೃಹರಾಗಿ ಇರಬೇಕೆಂದು ತಾತ್ಪರ್ಯ.

**ಮಾನಂ ಹಿ ಮಹತಾಂ ಲೋಕೇ ಧನಮಕ್ಷಯಮುಚ್ಯತೇ ।**
**ತಸ್ಮಿನ್ನಾಶಾಖ್ಯರಿಪುಣಾ ಮಾನೇ ನಷ್ಟೇ ದರಿದ್ರತಾ॥**

ಜಗತ್ತಿನಲ್ಲಿ ದೊಡ್ಡವರಿಗೆ ಮರ್ಯಾದೆಯೇ ಕ್ಷೀಣವಾಗದಂತಹ ಧನವೆಂದು ಹೇಳಲ್ಪಟ್ಟಿದೆ. ಅಂತಹ ಮರ್ಯಾದೆಯು ಆಸೆಯೆಂಬ ಶತ್ರುವಿನಿಂದ ನಾಶವಾಗುತ್ತದೆ. ಮರ್ಯಾದೆಯು ಹೋದರೆ ಬಡತನವು ಹಿಂಬಾಲಿಸುತ್ತದೆ.

**ಅಹೋ ದುಃಖಮಹೋ ದುಃಖಮಹೋ ದುಃಖಂ ದರಿದ್ರತಾ ।**
**ತತ್ರಾಪಿ ಪುತ್ರಭಾರ್ಯಾಣಾಂ ಬಾಹುಲ್ಯಮತಿದುಃಖದಂ ।**

ಅಯ್ಯೋ ಬಡತನವು ದುಃಖಕರ. ಅಯ್ಯೋ ಕಷ್ಟಕಷ್ಟ. ಅದರಲ್ಲಿಯೂ ಹೆಚ್ಚು ಮಕ್ಕಳು, ಬಹಳ ಮಡದಿಯರು ಇದ್ದರಂತೂ ಬಡತನದಿಂದಾಗುವ ದುಃಖವನ್ನು ಹೇಳತೀರದು. ಹೀಗೆ ಭದ್ರಮತಿಯು ತನ್ನ ದಾರಿದ್ರ್ಯ ಹಾಗೂ ಮಕ್ಕಳ ದುಃಖದಿಂದ ಮಡದಿಯರ ಕಣ್ಣೀರಿನಿಂದ ನಿತ್ಯ ದುಃಖಿಸುವಂತಾಯಿತು. ಅವನ ದಾರಿದ್ರ್ಯ ದುಃಖಕ್ಕೆ ಅಂತಪಾರವೇ ಕಾಣಲಿಲ್ಲ. ಎಷ್ಟಾದರೂ ಸರ್ವಶಾಸ್ತ್ರ ಪರಿಣತನಲ್ಲವೆ ಅವನ ಬುದ್ಧಿ? ಧರ್ಮಶಾಸ್ತ್ರಗಳನ್ನು ಮತ್ತೊಮ್ಮೆ ತಿರುವಿಹಾಕಿದ. ಐಶ್ವರ್ಯಪ್ರದ ಧರ್ಮ ಯಾವುದೆಂದು ಆಲೋಚಿಸಿದ. ಎಲ್ಲ ದಾನಗಳಿಗಿಂತ ಭೂಮಿದಾನವೇ ಉತ್ತಮೋತ್ತಮ ದಾನವೆಂದು ಅವನಿಗೆ ಹೊಳೆಯಿತು. ಆದುದರಿಂದ ಎಲ್ಲ ದಾನಕ್ಕಿಂತ ಮೊದಲು ಭೂದಾನಕೊಡಲು ಮನಸಾ ಸಂಕಲ್ಪ ಮಾಡಿದನು. ಹೆಂಡತಿ ಮತ್ತು ಮಕ್ಕಳೊಡಗೂಡಿ ಕೌಶಾಂಬಿ ಎಂಬ ನಗರಕ್ಕೆ ಹೋದನು. ಅಲ್ಲಿ ಸುಘೋಷ ಎಂಬ ದ್ವಿಜಶ್ರೇಷ್ಠನಿದ್ದನು. ಅವನ ಬಳಿ ಬೇಕಾದಷ್ಟು ಭೂಮಿ, ಸೀಮಿ, ಧನ, ಕನಕ ಸಮೃದ್ಧವಾಗಿದ್ದವು. ಸುಘೋಷನು ಆರು ಮಡದಿಯರು, ಎರಡುನೂರಾ ಮಕ್ಕಳೊಂದಿಗೆ ಬಂದು ಭದ್ರಮತಿಯನ್ನು ಸ್ವಾಗತಿಸಿ, ಸತ್ಕರಿಸಿದನು. ಮತ್ತು ವಿನಯದಿಂದ ಕೈ ಜೋಡಿಸಿ ನುಡಿದನು. " ವಿಪ್ರೋತ್ತಮ, ನಿನ್ನ ಅನುಗ್ರಹದಿಂದ ನಾನು ಕೃತಾರ್ಥನಾದೆ. ನಾನು ಧನ್ಯನಾದೆ. ನನ್ನ ವಂಶ ಪವಿತ್ರವಾಯಿತು." ಎಂದು ಮೃದುವಚನಗಳಿಂದ ಸಂತೋಷಪಡಿಸಿದನು. ಭದ್ರಮತಿಯ ದೊಡ್ಡ ಕುಟುಂಬಕ್ಕೆ ಯಥೇಷ್ಟ ಭೋಜನದಿಂದ ತೃಪ್ತಿಪಡಿಸಿದನು.

ಅನಂತರ ಸುಘೋಷನನ್ನು ರಹಸ್ಯವಾಗಿ ಕರೆದು, ಭದ್ರಮತಿಯು ತಾನು ಬಂದ ಕಾರಣವನ್ನು ಅರುಹಿದನು. 'ಪ್ರಿಯಮಿತ್ರ ಸುಘೋಷ, ನನಗೆ ಐದು ಮೊಳ ಭೂಮಿಯನ್ನು ದಾನ ಕೊಡು. ನಿನಗೆ ಭಗವಂತನು ಬೇಕಾದಷ್ಟು ಕೊಟ್ಟಿದ್ದಾನೆ. ನಿನಗೆ ಇದರಿಂದ ಮಹಾಪುಣ್ಯ ಬರುವದು' ಎಂದು ಯಾಚಿಸಿದನು. ಇದನ್ನು ಕೇಳಿ ಸುಘೋಷನಿಗೆ ಪರಮಾನಂದವಾಯಿತು. ಅವನು ಅತ್ಯಂತ ಉತ್ಸಾಹದಿಂದ ಐದು ಮೊಳ ಭೂಮಿಯನ್ನು ಕೊಡುವ ಸಂಕಲ್ಪ ಮಾಡಿದನು.

**ಪೃಥಿವಿ ವೈಷ್ಣವೀ ಪುಣ್ಯಾ ಪೃಥಿವಿ ವಿಷ್ಣು ಪಾಲಿತಾ ॥**
**ಪೃಥಿವ್ಯಾಸ್ತು ಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ॥**

ಪೃಥ್ವಿಯು ವಿಷ್ಣುವಿನದು, ಪುಣ್ಯಕರವು. ಅವನಿಂದಲೇ ರಕ್ಷಿಸಲ್ಪಟ್ಟುದು. ಅಂತಹ ಪೃಥ್ವಿಯನ್ನು ದಾನ ಮಾಡುವದರಿಂದ ವಿಷ್ಣುವು ನನಗೆ ಪ್ರಸನ್ನನಾಗಲಿ ಎಂಬ ಈ ಮಂತ್ರದಿಂದ ದಾನವಿತ್ತನು. ಈ ಮಂತ್ರದಿಂದ ಸುಘೋಷನು ಸಾಕ್ಷಾತ್ ಶ್ರೀ ವಿಷ್ಣುವೇ

ಭದ್ರಮತಿಯ ರೂಪದಿಂದ ತನ್ನಿಂದ ಭೂಮಿ ದಾನ ಕೊಳ್ಳಲು ಬಂದಿದ್ದಾನೆ ಎಂದು ಭಾವಿಸಿ ಭೂದಾನ ಮಾಡಿದನು. ಸುಘೋಷನು ನೀಡಿದ ಭೂಮಿ ದಾನ ಪುಣ್ಯದಿಂದ ತನ್ನ ಹಿಂದಿನ ಮುಂದಿನ ವಂಶಸ್ಥರಿಂದ ಸಹಿತವಾಗಿ ವಿಷ್ಣು ಲೋಕ ಹೊಂದಿದನು.

ಇತ್ತ ಆ ಭದ್ರಮತಿ ಬ್ರಾಹ್ಮಣನು ಕೂಡ ತಾನು ಯಾಚನೆ ಮಾಡಿ ಪಡೆದ ಬಳಿಕ ವಿಷ್ಣು ಭಕ್ತರಾದ ಮಕ್ಕಳು, ಮರಿ, ಮಡದಿಯರುಳ್ಳ ದೊಡ್ಡ ಕುಟುಂಬಸ್ಥ ಶ್ರೋತ್ರಿಯನಿಗೆ ವಿಧಿಪೂರ್ವಕ ಭೂದಾನ ಸಂಕಲ್ಪ ಮಾಡಿ, ಆ ಐದು ಮೊಳ ಭೂಮಿಯನ್ನು ದಾನ ನೀಡಿದನು. ಇದರಿಂದ ಅವನ ದಾರಿದ್ರ್ಯವು ನಾಶವಾಯಿತು. ಐಶ್ವರ್ಯ ಪ್ರಾಪ್ತಿ ಆಯಿತು. ಅನಂತರ ಮಡದಿ ಮಕ್ಕಳೊಡನೆ ಆ ಭೂದಾನದ ಪುಣ್ಯ ಪ್ರಭಾವದಿಂದ ಇಂದ್ರಲೋಕ ಬ್ರಾಹ್ಮಲೋಕ ಮುಂತಾದ ಎಡೆಗಳಲ್ಲಿ ಸುಖವಾಗಿದ್ದು, ಕೊನೆಗೆ ದಿವ್ಯಸ್ಥಾನವಾದ ಮೋಕ್ಷವನ್ನು ಹೊಂದಿದನು.

''ಆದುದರಿಂದ ಬಲಿರಾಜಾ, ನೀನು ಕೂಡ ನನಗೆ ಮೂರು ಪಾದ ಭೂಮಿಯನ್ನು ಕೊಡು.'' ಎಂದು ವಾಮನ ರೂಪಿಯಾದ ವಿಷ್ಣುವು ಬಲಿರಾಜನನ್ನು ಭೂಮಿಯಾಚನ ಮಾಡಿದನು. ವಾಮನ ವಟುವಿನ ಮೂರಡಿ ಭೂಮಿಯ ಯಾಚನೆ ಕೇಳಿ, ಬಲಿರಾಜನಿಗೆ ಅತ್ಯಂತ ಹರ್ಷವಾಯಿತು. ಕೂಡಲೆ ಅವನು ದಾನ ಮಾಡುವದಕ್ಕಾಗಿ ಉದ್ಯುಕ್ತನಾದನು. ನೀರು ತುಂಬಿದ ಕಲಶವನ್ನು ಕೈಯಲ್ಲಿ ತೆಗೆದುಕೊಂಡು, ದಾನ ಸಂಕಲ್ಪ ಮಾಡಿ, ನೀರು ಬಿಡಬೇಕೆಂದು ತನ್ನ ಕೈಯಲ್ಲಿಯ ಸೊಂಡೆಮಿಳ್ಳೆಯನ್ನು ಬಾಗಿಸಿದನು. ಅವನು ಎಷ್ಟೇ ಬಗ್ಗಿಸಿದರೂ ನೀರು ಬರಲಿಲ್ಲ. ಆಗ ಅಲ್ಲಿಯೇ ನಿಂತ ವಾಮನನಿಗೆ ತಿಳಿಯಿತು ಗುರು-ಶುಕ್ರರು ಈ ಭೂದಾನವನ್ನು ತಡೆಯಲು ಆ ಸೊಂಡೆಮಿಳ್ಳೆಗೆ ಅಡ್ಡವಾಗಿ ಕುಳಿತಿದ್ದಾರೆ ಎಂದು. ಅದಕ್ಕಾಗಿ ಕಪಟ ವಟುವಾದ ವಾಮನನು, ತನ್ನ ಕೈಯಲ್ಲಿಯ ದರ್ಭದ ತುದಿಯಿಂದ ಆ ಸೊಂಡೆಮಿಳ್ಳೆಯ ರಂಧ್ರದಲ್ಲಿ ಚುಚ್ಚಿದನು. ಕೂಡಲೇ ಆ ದರ್ಭದ ತುದಿಯು ಅಮೋಘ ಬ್ರಹ್ಮಾಸ್ತ್ರದಂತಾಗಿ ಶುಕ್ರಾಚಾರ್ಯರ ಕಣ್ಣಿಗೆ ಚುಚ್ಚಿ ಅವರ ಒಂದು ಕಣ್ಣು ಕುರುಡಾಯಿತು. ಇನ್ನೂ ಮುಂದಾದರೂ ದೇವತೆಗಳನ್ನು ರಾಕ್ಷಸರನ್ನು ಒಂದೇ ದೃಷ್ಟಿಯಿಂದ ನೋಡಿರಿ, ಎಂದು ಶುಕ್ರಾಚಾರ್ಯರಿಗೆ ಆದೇಶ ದೊರಕುವಂತೆ ಆ ದರ್ಭಾಗ್ರದಿಂದ ಶುಕ್ರಾಚಾರ್ಯರ ಒಂದು ಕಣ್ಣನ್ನು ನಾಶ ಮಾಡಿದನು. ಹೀಗೆ ಶುಕ್ರಾಚಾರ್ಯರು ಭಗವತ್ ಕಾರ್ಯಕ್ಕೆ ಅಡ್ಡಿ ಮಾಡಲು ಹೋಗಿ ಒಕ್ಕಣ್ಣಿನವರಾಗಿ ಅಲ್ಲಿಂದ ಹೊರಬಿದ್ದರು. ಅನಂತರ ಬಲಿರಾಜನ ಭೂಮಿದಾನದ ಕಾರ್ಯ ನಿರ್ವಿಘ್ನವಾಗಿ ನೆರವೇರಿತು. ಅತ್ಯಂತ ಭಕ್ತಿಯಿಂದ ಮೂರು ಪಾದ ಭೂಮಿಯನ್ನು ಸಂಕಲ್ಪ ಪೂರ್ವಕವಾಗಿ ಬಲಿಚಕ್ರವರ್ತಿಯು ನೀಡಿದನು. ಕೂಡಲೆ ವಾಮನರೂಪಿಯಾದ ವಿಷ್ಣು ವಿರಾಡ್ರೂಪವನ್ನು ತೆಗೆದುಕೊಂಡನು. ಅವನ ದೇಹವು ಬ್ರಾಹ್ಮಲೋಕ ಪರ್ಯಂತವಾಗಿ ಮಹತೋಮಹೀಯವಾಗಿ ಬೆಳೆದು ನಿಂತಿತು. ತನ್ನ ಒಂದು ಪಾದದಿಂದ ಭೂಮಿಯನ್ನು ಎರಡನೆಯ ಪಾದದಿಂದ ಅಂತರಿಕ್ಷವನ್ನು ಅಳೆದುಕೊಂಡನು. ಅವನ ಕಾಲಿನ ಹೆಬ್ಬೆರಳಿನ ತುದಿ ತಾಕಿ ಬ್ರಹ್ಮಾಂಡವು ಮೇಲ್ಭಾಗದಲ್ಲಿ ಸೀಳಿಹೋಯಿತು. ಆ ಒಡಕಿನಿಂದ ಬ್ರಹ್ಮಾಂಡದ ಹೊರಗಿನ ನೀರು ಧಾರಾಕಾರವಾಗಿ ವಿಷ್ಣುವಿನ ಪಾದದ ಮೇಲೆ ಸುರಿಯತೊಡಗಿತು. ಆ ಬಾಹ್ಯೋದಕವು ಶ್ರೀ ವಿಷ್ಣುವಿನ ಪಾದ ತೊಳೆದು ಗಂಗಾ ತೀರ್ಥವಾಗಿ ಲೋಕಪಾವನ ವಾಯಿತು. ಬ್ರಹ್ಮಾಂಡದ ಬಹಿರ್ಭಾಗದ ನೀರು ಧಾರಾರೂಪದಿಂದ ಪ್ರವಹಿಸಿ, ವಿಷ್ಣು ಪಾದವನ್ನು ತೊಳೆದು, ಬ್ರಹ್ಮಾದಿ

ದೇವತೆಗಳನ್ನೂ ಕೂಡ ಪರಮ ಪವಿತ್ರಗೊಳಿಸಿತು. ಅನಂತರ ಅದು ಹಾಗೆ ಧಾರಾರೂಪದಿಂದ ಸುರಿಯುವಾಗ ಸಪ್ತರ್ಷಿಗಳು ಆ ಗಂಗಾತೀರ್ಥವನ್ನು ಸೇವಿಸಿದರು. ವಿಷ್ಣು ಪಾದೋದಕವೆಂದು ತಮ್ಮ ಶಿರಸಾ ಧಾರಣ ಮಾಡಿದರು. ಮೇರು ಪರ್ವತದ ಶಿಖರದಲ್ಲಿ ಆ ಧಾರೆಯು ಸುರಿಯಿತು. ಆ ವಿಷ್ಣು ಪಾದೋದಕವಾಗಿ ಮೇಲೆ ಸುರಿಯುವ ಧಾರಾಪ್ರವಾಹ ಕಂಡು, ಬ್ರಹ್ಮಾದಿ ದೇವತೆಗಳೂ, ಋಷಿಗಳೂ, ಮುನಿಗಳೂ, ಹರ್ಷೋತ್ಕರ್ಷದಿಂದ ಕೈ ಮುಗಿದು ಸ್ತೋತ್ರ ಮಾಡತೊಡಗಿದರು.

**ನಮಃ ಪರೇಶಾಯ ಪರಾತ್ಮರೂಪಿಣೇ ।**
**ಪರಾತ್ಪರಾಯಾಪರರೂಪಧಾರಿಣೇ ॥**

ಉತ್ತಮರಾದ ದೇವತೆಗಳಿಗೆ ಸ್ವಾಮಿಯು. ಉತ್ಕೃಷ್ಟಾತ್ಮಸ್ವರೂಪಿಯು, ಉತ್ತಮರಾದ ಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠನು, ಲೋಕವಿಲಕ್ಷಣನು ಎಂದರೆ ಅಪ್ರಾಕೃತನು ಆದ ಶ್ರೀವಿಷ್ಣುವಿಗೆ ನಮಸ್ಕಾರ. ಈ ರೀತಿಯಾಗಿ ಬ್ರಹ್ಮಾದಿ ದೇವತೆಗಳಿಂದ ಮಹಾವಿಷ್ಣು ಸ್ತುತಿಸಲ್ಪಟ್ಟನು. ಅವರೆಲ್ಲರನ್ನು ಅನುಗ್ರಹಿಸಿದನು. ಇತ್ತ ಬಲಿಚಕ್ರವರ್ತಿಯು ಕೊಟ್ಟ ಮೂರು ಪಾದ ಭೂಮಿಯಲ್ಲಿ ಎರಡು ಪಾದಗಳಿಂದ ಮೂರು ಲೋಕಗಳನ್ನು ಆಳೆದುಕೊಂಡು, ಬಲಿರಾಜನ ಅಧಿಕಾರದ ಕ್ಷೇತ್ರವೆಲ್ಲವೂ ಮುಗಿದಿದ್ದರಿಂದ ಅವನು ಸಂಕಲ್ಪ ಮಾಡಿದ ಮೂರನೆಯ ಪಾದದ ಭೂಮಿಯನ್ನು ಕೊಡಲಿಲ್ಲವೆಂದು ಅವನನ್ನು ಬಂಧನ ಮಾಡಿದನು. ಆದರೆ ಬಲಿರಾಜನು ಆ ವಾಮನರೂಪಿ ವಿಷ್ಣುವಿಗೆ ಸಂಪೂರ್ಣ ಶರಣಾಗತನಾಗಿಬಿಟ್ಟನು. ಅವನ ಭಕ್ತಿಗೆ ಮೆಚ್ಚಿ ಭಗವಂತನು ಬಂಧನದಿಂದ ಬಿಡುಗಡೆ ಮಾಡಿದನು. ಮತ್ತು ಅವನಿಗೆ ರಸಾತಳದ ಅಧಿಕಾರ ದಯಪಾಲಿಸಿದನು. ಆ ರಸಾತಳದಲ್ಲಿ ಕೂಡ ಆ ಬಲಿಚಕ್ರವರ್ತಿಗೆ ಅರಮನೆಯ ಬಾಗಿಲು ಕಾಯುವ ಚಾಕರನಾಗಿ ಶ್ರೀ ಹರಿಯು ತಾನೇ ನಿಂತುಕೊಂಡನು. ನಿಜವಾಗಿಯೂ ಆ ವಿಷ್ಣುವು ಭಕ್ತವತ್ಸಲ!

**ನಾರದ:-** ಪೂಜ್ಯರೇ, ಈ ಮಹಾವಿಷ್ಣುವು ಬಲಿರಾಜನನ್ನು ರಸಾತಲಕ್ಕೆ ಕಳಿಸಿದ ಎಂದು ಹೇಳಿದಿರಿ, ಅಲ್ಲಿ ಇರುವದೇನು' ಬರಿ ಹರಿಯುವ ಹಾವುಗಳು, ಉಲ್ಬಣವಾದ ವಿಷದಿಂದ ಭಯಂಕರವಾದ ನಾಗಗಳಿಂದ ಕೂಡಿದ ಆ ರಸಾತಳದಲ್ಲಿ ಪಾಪ ಆ ಬಲಿರಾಜನಿಗೆ ತಿನ್ನಲಿಕ್ಕೆ, ಉಣ್ಣಲಿಕ್ಕೆ ಏನು ವ್ಯವಸ್ಥೆ?

**ಸನಕ:-** ಶ್ರೀ ಹರಿಯು ಬಲಿಚಕ್ರವರ್ತಿಗೆ ಆ ರಸಾತಲದಲ್ಲಿ ಕೂಡ ಸಮೃದ್ಧವಾದ ಆಹಾರದ ಏರ್ಪಾಡು ಮಾಡಿದನು. ಯಜ್ಞಕುಂಡದಲ್ಲಿ ಮಂತ್ರವನ್ನು ಉಚ್ಚರಿಸದೆ ಅಗ್ನಿಯಲ್ಲಿ ನೀಡಿದ ಆಹುತಿಯು ನೇರವಾಗಿ ಬಲಿಚಕ್ರವರ್ತಿಗೆ ಮುಟ್ಟುತ್ತದೆ. ಮತ್ತು ಮಾನವರು ಮಾಡುವ ಅಪಾತ್ರ ದಾನದ ಪುಣ್ಯವೆಲ್ಲವೂ ಸೇರುವದು ಬಲಿರಾಜನಿಗೆ. ಮನುಷ್ಯರು ಸರಿಯಾಗಿ ಮಡಿ ಮಾಡಿಕೊಳ್ಳದೆ, ಅಶುದ್ಧರಾಗಿ ಮಾಡಿದ ಹೋಮ, ಮತ್ತು ಮನಃ ಶುದ್ಧಿಯಿಲ್ಲದ, ಭಗವದ್ಭಕ್ತಿಯಿಲ್ಲದೆ ಮಾಡಿದ ಪುಣ್ಯ ಕಾರ್ಯ ಮುಂತಾದವುಗಳ ಫಲವೆಲ್ಲವೂ ಬಲಿರಾಜನಿಗೇ ಸೇರುತ್ತದೆ. ಹೀಗೆ ಸಪರಿವಾರನಾದ ಬಲಿಚಕ್ರವರ್ತಿಗೆ ವಿಪುಲ ಆಹಾರ ಮತ್ತು ರಸಾತಳದ ಅಧಿಕಾರ, ಆಧಿಪತ್ಯ, ಐಶ್ವರ್ಯ, ಸುಖವಸತಿಗಳನ್ನು ಕರುಣಿಸಿಕೊಟ್ಟು, ಸ್ವಯಂ ತಾನು ಒಂದು ರೂಪದಿಂದ ರಕ್ಷಣೆ ಮಾಡುತ್ತ ಅವನ ಮನೆಯ ದ್ವಾರಪಾಲಕನಾಗಿ ನಿಂತುಕೊಂಡನು. ಇದರಂತೆ ಎಲ್ಲ ದೇವತೆಗಳೂ ಕೂಡ ಅಭಯ ದಾನ

ಮಾಡಿದರು, ಭಗವಂತನ ಈ ಭಕ್ತ ಪಕ್ಷಪಾತವನ್ನು ನೋಡಿ ಋಷಿಗಳು ಶ್ರೀ ವಿಷ್ಣುವನ್ನು ಸ್ತೋತ್ರ ಮಾಡಿದರು. ದೇವತೆಗಳು ಪೂಜೆ ಮಾಡಿದರು. ಗಂಧರ್ವರು ಹೊಗಳಿ ಹಾಡಿದರು. ಹೀಗೆ ತನ್ನನ್ನು ನಂಬಿದವರಿಗೆ ಶಾಂತಿ, ಸುಖ, ಸಂಪದಗಳನ್ನು ಕರುಣಿಸಿ ವಿರಾಡ್ರೂಪಿಯಾದ ವಿಷ್ಣುವು ಮತ್ತೆ ಕುಳ್ಳದೇಹದ ವಾಮನ ವಟುವಾದನು. ಭಗವಂತನ ಈ ಲೋಕೋತ್ತರ ವ್ಯಾಪಾರವನ್ನು ಕಂಡು, ಬ್ರಹ್ಮ ಜ್ಞಾನಿಗಳಾದ ಮುನಿಗಳು ನಗುನಗುತ್ತ ಆ ಪುರುಷೋತ್ತಮನಿಗೆ ಪ್ರಣಾಮಗೈದರು.

ಇತ್ತ ಶ್ರೀ ಹರಿಯು ದೇವತೆಗಳನ್ನು ಅವರ ಸ್ಥಾನದಲ್ಲಿ ಪ್ರತಿಷ್ಠಾಪಿಸಿ, ಬಲಿರಾಜನಿಗೆ ರಸಾತಳದ ಸಾಮ್ರಾಜ್ಯಾಧಿಪತ್ಯ ಕರುಣಿಸಿ, ಅದಿತಿ ಕಶ್ಯಪರಿಗೆ ಪರಮಾನಂದವನ್ನುಂಟುಮಾಡಿ, ಭೂಲೋಕದ ಭಕ್ತ ಜನರಿಗೆಲ್ಲ ಪರಮಾನುಗ್ರಹಗೈದು ಅದಿತಿದೇವಿಯ ಹತ್ತಿರಬಂದು, ನಮಿಸಿ, ಸಂತೈಸಿ, ತಪಸ್ಸಿಗಾಗಿ ವನಕ್ಕೆ ಪ್ರಯಾಣ ಮಾಡಿದನು. ಶ್ರೀ ಹರಿಯ ಈ ತಪೋನುಷ್ಠಾನ, ಕುಳ್ಳವಾಮನವೇಷ ಧಾರಣ, ಭೂಮಿಯಾಚನ, ಬಲಿಬಂಧನ, ತ್ರಿವಿಕ್ರಮರೂಪಧಾರಣ, ರಸಾತಳದಲ್ಲಿ ಬಲಿರಾಜನ ರಕ್ಷಕನಾಗಿ ಅವಸ್ಥಾನ ಇವೇ ಮುಂತಾದ ಲೀಲೆಗಳೆಲ್ಲವೂ ಅಜ್ಞೇಯಜ್ಞಾನಕ್ಕಾಗಿ ಎಂದು ತಿಳಿಯಬೇಕು. **'ಮೋಹಯನ್ ಅಖಿಲಂ ಲೋಕಂ ಪ್ರಪೇದೆ ತಪಸೇ ವನಮ್'** ದೇವಗಂಗೆಯು ಆ ವಿಷ್ಣುವಿನ ಪಾದದಿಂದ ಉದ್ಭೂತಳಾದ ಕಾರಣ ಇಷ್ಟು ಮಹಾ ಮಹಿಮೋ ಪೇತಳಾಗಿದ್ದಾಳೆ. ಅದಕ್ಕೆ ಅವಳು ಹರಿಯ ಅಡಿಯಿಂದ ಹುಟ್ಟಿದ್ದೇ ಕಾರಣ. ಆದುದರಿಂದ ಗಂಗೆಯನ್ನು ನೆನೆದ ಮಾತ್ರಕ್ಕೆ ಪಾಪಗಳೆಲ್ಲವೂ ನಷ್ಟವಾಗಿ ಹೋಗುವವು. ಗಂಗಾದೇವಿಯ ಈ ಮಾಹಾತ್ಮ್ಯವನ್ನು ಅನುದಿನವೂ ಪಠಿಸಬೇಕು. ಮತ್ತು ಕೇಳಬೇಕು. ಗಂಗಾಮಹಿಮೆಯ ಈ ಪಠಣ ಶ್ರವಣಗಳನ್ನು ನದೀ ತೀರದಲ್ಲಿಯೂ, ದೇವಾಲಯದಲ್ಲಿಯೂ ಮಾಡಿದರೆ ಅಶ್ವಮೇಧ ಯಜ್ಞ ಮಾಡಿದ ಪುಣ್ಯ ಫಲವು ಪ್ರಾಪ್ತವಾಗುವದು.

*ನಾರದ ಮಹಾಪುರಾಣದಲ್ಲಿ ಹನ್ನೊಂದನೇಯ ಅಧ್ಯಾಯ ಮುಗಿದುದು*



## ಧರ್ಮಾಖ್ಯಾನ — ಅಧ್ಯಾಯ - ೧೨

**ನಾರದ:-** ಗಂಗೆಯ ಮಹಿಮೆಯನ್ನು ನಾನು ಕೇಳಿದೆ. ಈಗ ದಾನವನ್ನು ಯಾರಿಗೆ ಕೊಡಬೇಕು? ದಾನಧರ್ಮಕ್ಕೆ ಯೋಗ್ಯ ಪಾತ್ರ ಯಾವದು? ಆ ಸತ್ಪಾತ್ರದ ಗುಣ ಧರ್ಮಗಳೇನು? ಎಂಬುವದನ್ನು ತಿಳಿಸಬೇಕು.

**ಸನಕ:-** ಬ್ರಹ್ಮಜ್ಞಾನಿಗೆ ದಾನ ನೀಡಬೇಕು. ಅವನಿಗೆ ನೀಡಿದ ದಾನವು ಅನಂತ ಫಲಪ್ರದವಾಗುವದು. ದಾನವನ್ನು ಮಕ್ಕಳಿಲ್ಲದವರಿಗೆ ಕೊಡಬಾರದು. ಡಂಭಾಚಾರಿಗಳಿಗೂ, ಪರಸ್ತ್ರೀಲಂಪಟರಿಗೂ, ಹೆರವರ ಹಣವನ್ನು ಎತ್ತಿಹಾಕುವವರಿಗೂ, ಜ್ಯೋತಿಷ್ಯವನ್ನೇ ಹೊಟ್ಟೆಯ ಉದ್ಯೋಗ ಮಾಡಿಕೊಂಡವರಿಗೂ, ಕೃತಘ್ನರಿಗೂ, ಅಸೂಯೆಯುಳ್ಳವರಿಗೂ, ಆಹಾರಪದಾರ್ಥ ಮಾರುವವರಿಗೂ, ಹಿಂಸೆಮಾಡುವವರಿಗೂ, ವೇದಶಾಸ್ತ್ರಗಳನ್ನು ಸಂಬಳ ತೆಗೆದುಕೊಂಡು ಪಾಠ ಹೇಳುವವರಿಗೂ, ದುಡ್ಡು ತೆಗೆದುಕೊಂಡು ಪುಣ್ಯ ಕಾರ್ಯ ಮಾಡುವ ವ್ಯಾಪಾರಿಗೂ, ವ್ಯಭಿಚಾರಿ ಸ್ತ್ರೀಯ ಗಂಡನಿಗೂ, ಖಡ್ಗದಿಂದ ಜೀವಿಸುವವನಿಗೂ,

ಮಸಿಯಿಂದ ಜೀವಿಸುವವನಿಗೂ, ಹಣ ತೆಗೆದುಕೊಂಡು ಪೂಜೆ-ಹೋಮ ಮಾಡುವವನಿಗೂ, ನಿಷಿದ್ಧ ಪದಾರ್ಥ ತಿನ್ನುವವನಿಗೂ, ದುಡ್ಡಿಗಾಗಿ ಕಾರ್ಯ ಮಾಡುವವರಿಗೂ, ಹಣದಾಶೆಯಿಂದ ವೈದ್ಯಕೀಯ ವೃತ್ತಿ ಮಾಡುವವನಿಗೂ, ಸ್ನಾನ ಸಂಧ್ಯಾದಿಕಾರ್ಯ ಬಿಟ್ಟವರಿಗೂ, ಹಗಲು ನಿದ್ರೆ ಹಾಗೂ ವಿಹಾರ ಮಾಡುವವರಿಗೂ, ಸಂಧ್ಯಾಕಾಲದಲ್ಲಿ ಊಟ ಮಾಡುವವರಿಗೂ, ದುಷ್ಟಕುಲದಲ್ಲಿ ಹುಟ್ಟಿದವರಿಗೂ, ಅಣ್ಣನಿಗಿಂತ ಮೊದಲು ಮದುವೆ ಮಾಡಿಕೊಂಡವರಿಗೂ, ಸ್ತ್ರೀ ಮೋಹ ಉಳ್ಳವರಿಗೂ, ಮದ್ಯ ಮಾಂಸ ಸೇವಿಸುವವನಿಗೂ, ಚಾಡಿಕೋರ, ಕಳ್ಳನಿಗೂ ಮತ್ತು ಇದರಂತೆ ಇನ್ನೂ ಹೆಚ್ಚಿನ ಪಾಪ ಕಾರ್ಯ ಮಾಡುವವರಿಗೂ ಸರ್ವಥಾ ದಾನ ನೀಡಬಾರದು.

ಸದಾಚಾರ ಸಂಪನ್ನರಿಗೂ, ತಮ್ಮ ತಮ್ಮ ವರ್ಣಾಶ್ರಮ ಉಚಿತ ಧರ್ಮಾಚರಣ ಮಾಡುವವರಿಗೂ, ಶ್ರದ್ಧೆಯಿಂದ ದಾನ ನೀಡಬೇಕು. ಪ್ರತಿಫಲದ ಅಪೇಕ್ಷೆ ಮಾಡಬಾರದು. ಎಲ್ಲ ದಾನವನ್ನು ವಿಷ್ಣು ಪ್ರೀತಿಗಾಗಿ ಎಂದು ಸಂಕಲ್ಪಿಸಿ ದಾನ ಮಾಡಬೇಕು. ಯೋಗ್ಯ ಮನುಷ್ಯನು ಬಾಯ್ದೆರೆದು ಯಾಚಿಸಿದ್ದನ್ನು ಸಂತೋಷದಿಂದ ದಾನ ನೀಡಬೇಕು. ಹಾಗೆ ಸತ್ಪಾತ್ರರಲ್ಲಿ ಯಾವ ಫಲಾಪೇಕ್ಷೆ ಇಲ್ಲದೆ ನೀಡಿದ ದಾನ ಉತ್ತಮ ದಾನ. ಪರಲೋಕ ಅಥವಾ ಇಲ್ಲಿ ಸುಖ, ಸದ್ಗತಿಗಳಾಗಿ ಮಾಡಿದ ದಾನ ಕಾಮ್ಯ ಅಥವಾ ಮಧ್ಯಮ ದಾನವೆನಿಸುವದು. ಶಾಸ್ತ್ರೋಕ್ತ ಕ್ರಮ ಬಿಟ್ಟು ಇತರರಿಗೆ ಬಾಧೆಯನ್ನುಂಟು ಮಾಡಲು ಜಂಭ, ಕೋಪ ಅನಾದರ, ಪ್ರತಿಷ್ಠೆಯ ಆಶೆ ಇವುಗಳಿಂದ ಅಯೋಗ್ಯರಿಗೆ ಕೊಡುವ ದಾನ ಅಧಮ ಧಾನವು. ಇಂತಹ ಅಧಮ ದಾನದ ಪುಣ್ಯವು ಬಲಿಚಕ್ರವರ್ತಿಗೆ ಸೇರಿ ಅವನ ಸಂತೋಷಕ್ಕೆ ಕಾರಣವಾಗುತ್ತದೆ. ಮಧ್ಯಮ ದಾನವು ಸ್ವಾರ್ಥಕ್ಕೆ ಕಾರಣವು. ಉತ್ತಮ ದಾನವು ಹರಿ ಪ್ರೀತಿಗೆ ಕಾರಣವಾಗುವದು.

**ಅಧಮಂ ಬಲಿತೋಷಾಯ ಮಧ್ಯಮಂ ಸ್ವಾರ್ಥಸಿದ್ಧಯೇ ।**
**ಉತ್ತಮಂ ಹರಿಪ್ರೀತ್ಯರ್ಥಂ ಪ್ರಾಹುರ್ವೇದವಿದಾಂ ವರಾಃ ॥**

**ದಾನ ಭೋಗ ವಿನಾಶಶ್ಚ ರಾಯಃ ಸ್ಯುರ್ಗತಯಸ್ತ್ರಿಧಾ ।**
**ಯನ್ನ ದದಾತಿ ನ ಭುಂಕ್ತೇ ಚ ತದ್ಧನಂ ನಾಶಕಾರಣಂ ॥**

ದಾನ, ಭೋಗ, ನಾಶ, ಎಂಬುದಾಗಿ ಹಣಕ್ಕೆ ಮೂರು ಮಾರ್ಗಗಳಿವೆ. ದಾನ ಕೊಡದ ಅಥವಾ ತಾನು ಅನುಭವಿಸಿದ ಹಣವು ಹಾಳಾಗುತ್ತದೆ.

**ಧನಂ ಧರ್ಮಫಲಂ ವಿಪ್ರ, ಧರ್ಮೋ ಮಾಧವತುಷ್ಟಿಕೃತ್ ॥**
**ತರವಃ ಕಿಂ ನ ಜೀವಂತಿ ತೇಽಪಿ ಲೋಕೇ ಪರಾರ್ಥಕಾಃ ॥**

ಧರ್ಮಕ್ಕೆ ಸಾಧನವಾದುದೇ ಹಣ. ಲಕ್ಷ್ಮೀಪತಿಯಾದ ಶ್ರೀ ಹರಿಗೆ ಸಂತೋಷ ವನ್ನುಂಟು ಮಾಡುವದೇ ಧರ್ಮ.

**ಯೇ ಚ ಮೂಲಫಲೈರ್ವೃಕ್ಷಾಃ ಪರಕಾರ್ಯಂ ಪ್ರಕುರ್ವತೇ ॥**

ಎಲೆ, ಚಿಗುರು, ಕಾಯಿ, ಕಟ್ಟಿಗೆ ಮತ್ತು ಹಣ್ಣುಗಳಿಂದ ಪರರಿಗೆ ಉಪಕಾರ ಮಾಡುತ್ತಾ ಪರಾರ್ಥವಾಗಿಯೇ ನೆಲೆಸಿರುವ ವೃಕ್ಷಗಳು ಜೀವಿಸುವದಿಲ್ಲವೇ! ಎಂದರೆ ಉಪಕಾರವನ್ನೇ ಮಾಡುತ್ತಿರುವ ವೃಕ್ಷಗಳು ದೀರ್ಘಕಾಲ ಬದುಕುವಂತೆ ಪರೋಪಕಾರ ನಿರತರು

ದೀರ್ಘಕಾಲ ಬದುಕಿ ಶ್ರೇಯೋಭಾಗಿಗಳಾಗುತ್ತಾರೆಂದು ತಾತ್ಪರ್ಯ. ಯಾವ ಮನುಷ್ಯರು ತನ್ನ ದೇಹದಿಂದಾಗಲಿ, ಧನದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಪರೋಪಕಾರ ಮಾಡುವದಿಲ್ಲವೋ ಅವರು ಮಹಾ ಪಾತಕಿಗಳೆಂದೇ ತಿಳಿಯಬೇಕು. ಈ ವಿಷಯದಲ್ಲಿ ಒಂದು ಇತಿಹಾಸ ಹೇಳುತ್ತೇನೆ, ನಾರದಾ ಕೇಳು.

ಹಿಂದೆ ಪೂರ್ವಕಾಲದಲ್ಲಿ ಸಗರವಂಶದಲ್ಲಿ ಭಗೀರಥನೆಂಬ ರಾಜನು ಇದ್ದನು. ಅವನು ಆಳುವ ಭೂಮಿಗೆ ಸಮುದ್ರವೇ ಸೀಮೆ. ಆ ರಾಜನಿಗೆ ಧರ್ಮದಲ್ಲಿ ಆಸಕ್ತಿ, ಸತ್ಯದಲ್ಲಿ ನಿಷ್ಠೆ, ರೂಪದಲ್ಲಿ ಮನ್ಮಥನಿಗಿಂತಲೂ ಮಿಗಿಲು ಆ ಭೂಪ. ಅವನು ಮಾಡದ ಯಜ್ಞಗಳೇ ಇರಲಿಲ್ಲ. ಧೈರ್ಯ, ಸ್ಥೈರ್ಯಗಳಲ್ಲಿ ಅವನು ಹಿಮಗಿರಿ, ಧರ್ಮದಲ್ಲಿ ಧರ್ಮರಾಜ, ಸರ್ವಶಾಸ್ತ್ರ ಪಾರಂಗತ, ಸರ್ವಶಾಸ್ತ್ರ ಪರಿಣತ, ಅಧಿಕಾರ, ಐಶ್ವರ್ಯಗಳಲ್ಲಿ ಅಸಾಧಾರಣವೆನಿಸಿದ್ದ ಆ ರಾಜರ್ಷಿ. ಅತಿಥಿಗಳಿಗಂತೂ ಈ ಮಹಾ ರಾಜನನ್ನು ಕಂಡರೆ ಹಿಗ್ಗು. ವಾಸುದೇವನ ಪೂಜೆಯಲ್ಲಿ ಅವನಿಗೆ ಸಂತತ ಆಸಕ್ತಿ. ದೀನದರಿದ್ರರಿಗೆ ಉಪಕಾರ ಮಾಡುವದು ಅವನ ವ್ರತ. ಗುರುಗಳಿಗೆಲ್ಲ ಅವನು ತವರುನಿಧಿ. ಪರಾಕ್ರಮದಲ್ಲಿ ಅವನದೇ ವೀರವಿಕ್ರಮ. ಏವಂ ಗುಣ ವಿಶೇಷಣ ವಿಶಿಷ್ಟನಾದ ಈ ಭಗೀರಥ ರಾಜನನ್ನು ಒಂದು ದಿನ ಸಾಕ್ಷಾತ್ ಯಮಧರ್ಮನೆ ನೋಡಲು ಬಂದ. ಮಹಾರಾಜನು ಧರ್ಮರಾಜನನ್ನು ಕಂಡು ಆನಂದದಿಂದ ಸ್ವಾಗತ ನೀಡಿದನು. ಶಾಸ್ತ್ರೋಕ್ತವಾಗಿ ಪೂಜೆ ಮಾಡಿದನು. ವಿನಯದಿಂದ ಮಾತನಾಡಿಸಿದ, ಪ್ರೀತಿಯಿಂದ ಕುಶಲ ಪ್ರಶ್ನಾದಿ ಮಾಡಿದನು. ಭಗೀರಥರಾಜನ ಈ ಆದರೋಪಚಾರ ಕಂಡು ಯಮಧರ್ಮನಿಗೆ ಬಹಳ ಸಂತೋಷವಾಯಿತು. ಅವನು ಆನಂದದಿಂದ ತಾನು ಬಂದ ಕಾರಣ ಹೇಳಿದ-

**ಯಮಧರ್ಮ:-** ಭಗೀರಥರಾಜ, ಈ ಜಗತ್ತಿನಲ್ಲಿ ಧರ್ಮದ ಮರ್ಮಬಲ್ಲವರು ಬಹಳಿಲ್ಲ. ಇದ್ದ ಕೆಲವರಲ್ಲಿ ನೀನೇ ಶ್ರೇಷ್ಠ. ಮೂರು ಲೋಕದಲ್ಲೂ ನಿನ್ನ ಪ್ರಸಿದ್ಧಿ ಮಹಾ ಧರ್ಮಜ್ಞ ಎಂದು. ಆ ನಿನ್ನ ಕೀರ್ತಿ ನನ್ನ ಕಿವಿವರೆಗೂ ಬಂದು ತಲುಪಿದೆ. ಅದಕ್ಕಾಗಿಯೇ ನಾನು ನಿನ್ನ ಬಳಿಗೆ ಬಂದದ್ದು. ನಿನ್ನನ್ನು ಕಣ್ಣಾರೆ ನೋಡಬೇಕೆಂಬುದೇ ನನ್ನ ಉದ್ದೇಶ, ಎಲ್ಲ ಪ್ರಾಣಗಳಿಗೂ ಹಿತ ಬಯಸುವ ಒಳ್ಳೇ ಮಾರ್ಗದಲ್ಲಿರುವ ನಿನ್ನಂತಹ ಸಜ್ಜನರನ್ನು ಕಾಣಲು ಪಂಡಿತರೆಲ್ಲರೂ ಬಯಸುತ್ತಾರೆ ನಿನ್ನ ಉತ್ಕೃಷ್ಟ ಗುಣಗಳು; ವಿದ್ವನ್ಮಾನ್ಯವಾಗಿವೆ.

**ಕೀರ್ತಿರ್ನೀತಿಶ್ಚ ಸಂಪತ್ತಿರ್ವರ್ತತೇ ಯತ್ರ ಭೂಪತೇ ।**
**ವಸಂತಿ ತತ್ರ ನಿಯತಂ ಗುಣಾಃ ಸಂತಶ್ಚ ದೇವತಾ : ॥**

ರಾಜನೇ! ಕೀರ್ತಿ, ನೀತಿ, ಐಶ್ವರ್ಯ ಇವುಗಳಿರುವೆಡೆಯಲ್ಲಿ ಸದ್ಗುಣಗಳು ಮತ್ತು ದೇವತೆಗಳೂ ಸಹ ನಿಯಮಿತವಾಗಿ ವಾಸಿಸುತ್ತಾರೆ. ರಾಜನೆ, ನಿನ್ನ ನಡೆ ನುಡಿ ಆಚರಣಗಳು ಆದರ್ಶವಾಗಿವೆ. ಎಲ್ಲ ಪ್ರಾಣಿಗಳಿಗೂ ನೀನು ಮಾಡುವಷ್ಟು ಹಿತವನ್ನು ಮತ್ತು ಪರೋಪಕಾರವನ್ನು ಅತ್ಯಂತ ವಿರಳವಾಗಿ ಮಾಡುವವರಿದ್ದಾರೆ. ಸ್ವಾರ್ಥ ಬಿಟ್ಟು ಪರಾರ್ಥಕ್ಕಾಗಿಯೇ ತಮ್ಮ ಶರೀರವನ್ನು ಸವೆಸುವ ನಿನ್ನಂತಹ ಪುಣ್ಯಾತ್ಮರು ಬೇರೆ ಯಾರೂ ಇನ್ನೂ ನನಗೆ ಕಾಣಬಂದಿಲ್ಲ. ಅದಕ್ಕಾಗಿಯೇ ನಾನು ನಿನ್ನನ್ನು ನೋಡಲು ಬಂದಿದ್ದೇನೆ.'' ಯಮಧರ್ಮನ ಈ ಮಾತನ್ನು ಕೇಳಿ ಭಗೀರಥನು ವಿನಯದಿಂದ ತಲೆ ತಗ್ಗಿಸಿದನು. ಆ ಧರ್ಮರಾಜನಿಗೆ ಸಂತೋಷದಿಂದ ನಮಸ್ಕರಿಸಿದನು. ನಮ್ರತೆಯಿಂದ ಮಾತನಾಡಿದನು.

"ಸಮದರ್ಶಿಯೆಂದು ಹೆಸರಾದ ಯಮಧರ್ಮನೇ, ನೀನು ಎಲ್ಲ ಧರ್ಮಗಳನ್ನು ಚೆನ್ನಾಗಿ ಅರಿತಿರುವೆ. ಆದುದರಿಂದಲೇ ಪೂಜ್ಯನೂ ಆಗಿರುವೆ. ಅದಕ್ಕಾಗಿ ನಾನು ನಿನಗೆ ಕೆಲವು ಪ್ರಶ್ನೆ ಮಾಡುತ್ತೇನೆ, ದಯವಿಟ್ಟು ಉತ್ತರ ಕೊಡು. ಧರ್ಮಗಳು ಎಷ್ಟು ವಿಧ? ಧರ್ಮ ಮಾಡಿದವರಿಗೆ ಯಾವ ಲೋಕಗಳು? ಅಧರ್ಮ ಮಾಡಿದವರಿಗೆ ಎಂತಹ ದುಃಖಗಳು? ಯಾವ ಯಾವ ತರಹದ ಯಾತನೆಗಳು? ಇವನ್ನೆಲ್ಲ ನಮಗೆ ತಿಳಿಸಿ ಕೊಡು. ಧರ್ಮರಾಜನೇ, ನೀನು ಯಾರನ್ನು ಗೌರವದಿಂದ ಕಾಣುವಿ? ಮತ್ತು ನೀನು ಯಾರನ್ನು ರೌರವ ನರಕಗಳಲ್ಲಿ ದುಃಖಕ್ಕೆ ಗುರಿಪಡಿಸುವಿ? ಇದೆಲ್ಲವನ್ನೂ ನನಗೆ ಬಿತ್ತರಿಸು.

**ಯಮಧರ್ಮ:-** ಭಗೀರಥ, ನೀನು ಒಳ್ಳೇ ಪ್ರಶ್ನೆ ಮಾಡಿದೆ. ನಿನ್ನ ಬುದ್ಧಿಯು ನಿರ್ಮಲವಿರುವಷ್ಟೇ ಉಜ್ವಲವಾಗಿದೆ. ಆ ಕಾರಣದಿಂದಾಗಿ ನಾನು ನಿನಗೆ ಧರ್ಮಾಧರ್ಮಗಳನ್ನು ಹೇಳುತ್ತೇನೆ ಕೇಳು- ಪುಣ್ಯ ಲೋಕ ಪ್ರಾಪ್ತಿಗೆ ಸಾಧಕವಾದ ಧರ್ಮಗಳು ಅನೇಕ ಇರುತ್ತವೆ. ಮತ್ತು ಬಗೆ ಬಗೆಯಾಗಿವೆ. ಅದರಂತೆ ಅಧರ್ಮ ಮಾಡಿದರೆ ಅನುಭವಿಸಬೇಕಾದ ಯಾತನೆಗಳು ಅಸಂಖ್ಯ ಇವೆ. ಅದನ್ನೆಲ್ಲ ವಿಸ್ತಾರವಾಗಿ ಹೇಳಲು ಆಗುವದಿಲ್ಲ. ಆದರೂ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು- ಯೋಗ್ಯರಾದ ದ್ವಿಜರಿಗೆ ಉಪಜೀವನಕ್ಕೆ ಬೇಕಾಗುವಷ್ಟು ಹಣ ಅಥವಾ ಹೊಲ ವೇತನ ಮುಂತಾದವುಗಳನ್ನು ನೀಡುವದೂ ಯಾವಜ್ಜನ್ಮ ಅವರು ಬದುಕುವಂತೆ ವೃತ್ತಿಯನ್ನು ಏರ್ಪಾಟು ಮಾಡುವದೂ, ಎಲ್ಲ ಪುಣ್ಯಗಳಲ್ಲಿ ಶ್ರೇಷ್ಠವಾದದ್ದು. ಅದರಲ್ಲಿಯೂ ಅಧ್ಯಾತ್ಮ ಜ್ಞಾನಿಯಾದ ಪಂಡಿತನಿಗೆ ಕೊಟ್ಟ ಅಂತಹ ದಾನವು ಅಕ್ಷಯವಾಗುತ್ತದೆ. ವೇದವೇದಾಂತ ಶಾಸ್ತ್ರ ಓದಿಕೊಂಡ, ಸದಾಚಾರ ಸಂಪನ್ನನಾದ ಕುಟುಂಬಸ್ಥ ಶ್ರೋತ್ರಿಯನಿಗೆ ಬದುಕಿರುವವರೆಗೂ ಉಪಜೀವನಕ್ಕೆ ಬೇಕಾಗುವಷ್ಟು ವೃತ್ತಿದಾನ ಅಥವಾ ದತ್ತಿದಾನ ಮಾಡಿದ ಮನುಷ್ಯನು, ತನ್ನ ಮಾತೃಕುಲ ಹಾಗೂ ಪಿತೃಕುಲದ ಜನರು ಸಹಿತವಾಗಿ ಮುಕ್ತಿಯನ್ನು ಹೊಂದಿ ವಿಷ್ಣುಮಂದಿರದಲ್ಲಿ ಆನಂದದಿಂದ ನಿರಂತರ ನೆಲೆಸುವನು. ಭೂಮಿಯ ಧೂಳಿಯ ಕಣಗಳನ್ನು ಎಣಿಸಬಹುದು. ಮಳೆಯ ಹನಿಗಳನ್ನು ಗಣಿಸಬಹುದು. ಆದರೆ ಬ್ರಹ್ಮಜ್ಞಾನಿಗೆ ವೃತ್ತಿಯನ್ನು ಕಲ್ಪಿಸಿಕೊಡುವದರಿಂದ ಬರುವ ಪುಣ್ಯಫಲಗಳನ್ನು ಮಾತ್ರ ಯಾರಿಗೂ ಎಣಿಸಲು ಆಗುವದಿಲ್ಲ. ಯೋಗ್ಯರಾದ ಜ್ಞಾನಿಗಳಿಗೆ ಹಿತವನ್ನು ಮಾಡುವವನು, ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿ ಯಜ್ಞಗಳನ್ನು ಹರಿಪ್ರೀತಿಗಾಗಿ ಆಚರಿಸಿದಂತೆ. ಅಧ್ಯಾತ್ಮ ವಿದ್ಯೆಯನ್ನು ಬಲ್ಲವರಿಗೆ ದತ್ತಿದಾನ ನೀಡಲು ಪ್ರೇರಣೆ ಮಾಡಿದವನು ಕೂಡ ತೀರ್ಥಸ್ನಾನ ಯಜ್ಞ ಯಾಗಾದಿಗಳ ಪುಣ್ಯವನ್ನು ಪಡೆಯುತ್ತಾನೆ. ಜನರಿಗೂ, ಪಶುಪಕ್ಷಿಗಳಿಗೂ, ಕುಡಿಯಲಿಕ್ಕೂ, ಸ್ನಾನ, ಪಾನಾದಿಗಳಿಗೂ ಉಪಯುಕ್ತವಾಗುವಂತೆ ಕೆರೆ, ಕಾಲುವೆ, ಬಾವಿ, ಮುಂತಾದವುಗಳನ್ನು ಕಡಿಸಿ, ಕಟ್ಟಿಸಿ, ನಿರ್ಮಿಸುವವನು ಅಥವಾ ಅದನ್ನು ಇನ್ನೊಬ್ಬರಿಗೆ ಹೇಳಿ ಮಾಡಿಸುವವನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಮತ್ತು ಸ್ವರ್ಗದಲ್ಲಿ ನೂರು ವರ್ಷ ವಾಸಮಾಡುತ್ತಾನೆ. ಇಂತಹ ಪರೋಪಕಾರಗಳಿಂದ, ಸ್ವಯಂ ಕಟ್ಟಿಸಿದವರಿಗೂ ಇನ್ನೊಬ್ಬರಿಗೆ ಹೇಳಿ ನಿರ್ಮಾಣ ಮಾಡಿಸಿದವರಿಗೂ ಅವುಗಳನ್ನು ಕಟ್ಟಿಸಲು ಯಥಾಶಕ್ತಿ ಸಹಾಯ ಮಾಡಿದವರಿಗೂ, ಅದಕ್ಕೆ ಉಪಾಯ ಸೂಚಿಸಿದವರಿಗೂ, ಅಥವಾ ಹೂಳು ಬಿದ್ದ ಕೆರೆಯಲ್ಲಿಯ ಮಣ್ಣು ತೆಗೆಸಿ ಮತ್ತೆ ನೀರು ಬರುವಂತೆ ಮಾಡಿದವರಿಗೂ, ಅಧಿಕಾಧಿಕ ಪುಣ್ಯಫಲ ಉಂಟು.

ಇಂತಹ ಜಲಾಶಯ ನಿರ್ಮಾಣ ಮಾಡಿಸಿದ ಅಥವಾ ಹೂಳು ತೆಗೆಸಿದ ಪುಣ್ಯ ಪ್ರಾಪ್ತವಾಗಬೇಕಾದರೆ ದೇವತಾನುಗ್ರಹ, ಗುರುಗಳ ಅನುಗ್ರಹವೂ ಮುಖ್ಯಕಾರಣ. ಗುರು, ದೇವತಾ ಅನುಗ್ರಹ ಸಂಪೂರ್ಣ ಇದ್ದವನಿಗೆ ಇಂತಹ ಈ ವಾಪೀಕೂಪ, ತಟಾಕದ ನಿರ್ಮಾಣದ ಪುಣ್ಯವು ಮಹಾ ಸೌಭಾಗ್ಯರೂಪವಾಗಿ ಒದಗಿ ಬರುವದು. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಗೌಡದೇಶದಲ್ಲಿ ವೀರಭದ್ರನೆಂಬ ರಾಜನು ಆಗಿಹೋದನು. ಅವನು ವಿದ್ಯಾವಂತನೂ, ಪರಾಕ್ರಮಿಯೂ ಆಗಿದ್ದನಲ್ಲದೇ ಜ್ಞಾನಿಗಳನ್ನು ಕಂಡರೆ ದೇವರಂತೆ ಪೂಜಿಸುವ ಪುಣ್ಯಾತ್ಮನಾಗಿದ್ದನು. ಕುಲಪರಂಪರೆಯಿಂದ ಬಂದ ಯಾವ ಆಚಾರ, ಸಂಪ್ರದಾಯ, ಪದ್ಧತಿಗಳನ್ನು ಅವನು ಬಿಡುತ್ತಿದ್ದಿಲ್ಲ. ವೇದ ಶಾಸ್ತ್ರಗಳಲ್ಲಿ ಹೇಳಿದಂತೆಯೇ ಇತ್ತು ಅವನ ನಡತೆ. ಆ ಮಹಾರಾಜನಿಗೆ ಪುಣ್ಯದಿಂದ ಅವನಂತೆಯೇ ಧರ್ಮಿಷ್ಠ ಮಡದಿಯು ದೊರೆತಿದ್ದಳು. ಚಂಪಕಮಂಜರಿ ಎಂದು ಅವಳ ಹೆಸರು. ನಿಜವಾಗಿಯೂ ಅವಳು ಮಹಾನುಭಾವಳೇ ಆಗಿದ್ದಳು. ಅವನ ಮಂತ್ರಿಗಳೂ ಕೂಡ ಧರ್ಮನಿಷ್ಠರೇ ಆಗಿದ್ದರು. ಕಾರ್ಯಾಕಾರ್ಯ ನಿರ್ಣಯಿಸುವದರಲ್ಲಿ ಧರ್ಮಶಾಸ್ತ್ರವನ್ನೇ ಪ್ರಮಾಣ ಮಾಡಿಕೊಂಡು ನಿರ್ಧಾರ ಕೈಕೊಳ್ಳುತ್ತಿದ್ದರು.

**ಪ್ರಾಯಶ್ಚಿತ್ತಂ ಚಿಕಿತ್ಸಾ ಚ ಜ್ಯೋತಿಷಂ ಧರ್ಮನಿರ್ಣಯಂ।**
**ವಿನಾ ಶಾಸ್ತ್ರೇಣ ಯೋ ಬ್ರೂಯತ್ತಮಾಹುಃ ಬ್ರಹ್ಮಘಾತಕಂ ॥**

ಪ್ರಾಯಶ್ಚಿತ್ತ, ರೋಗಗಳಿಗೆ ಚಿಕಿತ್ಸೆ, ಜ್ಯೋತಿಷ್ಯ, ಧರ್ಮ ಮತ್ತು ಅಧರ್ಮ ಇವುಗಳ ವಿಷಯದಲ್ಲಿ ನಿರ್ಣಯವನ್ನು ಶಾಸ್ತ್ರದ ನೈಜವಾದ ಅರ್ಥವನ್ನು ತಿಳಿಯದೆ ನಿರಾಧಾರವಾಗಿ ಹೇಳುವವನು ಬ್ರಹ್ಮಹತ್ಯೆ ಮಾಡಿದ ಪಾಪಕ್ಕೆ ಭಾಗಿಯಾಗುತ್ತಾನೆ.

ಇದು ಮಹಾರಾಜನಿಗೆ ಚೆನ್ನಾಗಿ ಮನವರಿಕೆ ಆಗಿತ್ತು. ಆದುದರಿಂದ ಅವನು ಗುರುಗಳಿಂದ ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳಲ್ಲಿ ಹೇಳಿದ ವಿಧಿವಿಧಾನಗಳನ್ನು ಸರಿಯಾಗಿ ಕೇಳಿ ತಿಳಿದುಕೊಳ್ಳುತ್ತಿದ್ದನು. ಆ ರಾಜನ ರಾಜ್ಯದಲ್ಲಿ ಎಂತಹ ಕೀಳು ಕುಲದವರು ಕೂಡ ಅನ್ಯಾಯ ಮಾಡುತ್ತಿದ್ದಿಲ್ಲ. ದೀನ-ದರಿದ್ರರು ಕೂಡ, ಅಧರ್ಮ ಆಚರಿಸುತ್ತಿದ್ದಿಲ್ಲ. ಅವನ ಇಡೀ ರಾಜ್ಯವೇ ಧರ್ಮರಾಜ್ಯವಾಗಿದ್ದಿತು. ಇಡೀ ದೇಶವೇ ಧರ್ಮಮಯವಾಗಿತ್ತು. ಒಟ್ಟಾರೆ, ಆ ವೀರಭದ್ರನ ಸಾಮ್ರಾಜ್ಯವು ಸ್ವರ್ಗರಾಜ್ಯಕ್ಕೆ ಸಮವಾಗಿ ನಿಂತುಕೊಂಡಿತ್ತು. ಅದರಿಂದ, ಸಾಮ್ರಾಜ್ಯ ಅಥವಾ ಸುರಾಜ್ಯದಲ್ಲಿ ದೊರೆಯಬಹುದಾದ ಎಲ್ಲ ಸುಖ, ಶಾಂತಿ, ಸಂತಸ, ಮಂಗಳಗಳು ಅಲ್ಲಿಯ ಪ್ರಜೆಗಳಿಗೆ ದೊರಕುತ್ತಿದ್ದವು.

ಒಂದು ದಿನ ಆ ದೊರೆಯು ಬೇಟೆಗೆ ಹೊರಟ. ಮಂತ್ರಿ ಪರಿವಾರದವರು ಅವನನ್ನು ಬೆಂಬತ್ತಿದರು. ಗೊಂಡಾರಣ್ಯದ ಮಧ್ಯದಲ್ಲಿ ಸೂರ್ಯನು ಮುಗಿಲ ಮಧ್ಯಕ್ಕೆ ಬರುವವರೆಗೆ ಅವನು ತಿರುಗಿದ್ದೇ ತಿರುಗಿದ್ದು. ಓಡಾಡಿದ್ದೇ ಓಡಾಡಿದ್ದು. ಅವನಿಗೆ ಒಂದೂ ಬೇಟೆ ಸಿಗಲಿಲ್ಲ. ಯಾವ ಕ್ರೂರ ಪ್ರಾಣಿಯೂ ಕಣ್ಣಿಗೆ ಬೀಳಲಿಲ್ಲ. ಶ್ರಮ ಮಾತ್ರ ಅತಿಶಯ ವಾಯಿತು. ಮಹಾರಾಜ ಮತ್ತು ಮಂತ್ರಿಗಳು ಬೇಟೆಯ ಬಳಲಿಕೆಯಿಂದ ಬಸವಳಿದು ಹೋದರು. ದೂರದಿಂದ ಅವರ ಕಣ್ಣಿಗೆ ಬಿದ್ದಿತು - ಒಂದು ಸರೋವರ. ನೀರು ಕುಡಿಯಲು ಧಾವಿಸಿ ಬಂದರು-ದೊರೆ ಹಾಗೂ ಅವನ ಪರಿವಾರ. ಆದರೆ ಅಲ್ಲೇನಿದೆ? ಅದೊಂದು ಒಣಗಿದ ಹೊಂಡ. ಹನಿ ನೀರು ಕೂಡಾ ಇಲ್ಲ.

ಅದನ್ನು ನೋಡಿ ರಾಜನು ವಿಚಾರ ಮಾಡಿದನು. ನೀರಿಲ್ಲದ ಈ ಸರೋವರವನ್ನು ಇಂತಹ ಎತ್ತರವಾದ ಭೂಮಿಯಲ್ಲಿ ಯಾರು ನಿರ್ಮಿಸಿದರು? ಏತಕ್ಕಾಗಿ ನಿರ್ಮಿಸಿದರು? ಏನು ಮಾಡಿದರೆ ಇಲ್ಲಿ ನೀರು ಬರಬಹುದು? ಬಾಯಾರಿಕೆಯಿಂದ ಬಳಲಿ ಬೆಂಡಾದ ನಾನು ಬದುಕಲಿಕ್ಕಾಗಿ ಆವಶ್ಯಕವಾದ ನೀರು ಇಲ್ಲಿ ಹೇಗೆ ಬಂದೀತು? ಇದಕ್ಕೆ ಏನು ಉಪಾಯ? ಎಂದು ಹೀಗೆ ಆಲೋಚನೆ ಮಾಡುವಷ್ಟರಲ್ಲಿ ಅವನಿಗೆ ಒಂದು ವಿಚಾರ ಹೊಳೆಯಿತು. ಈ ನಿರ್ಜಲ ಸರೋವರವನ್ನು ಅಗೆದು ನೋಡಬೇಕು - ಎಂದು. ಕೂಡಲೇ ಮಹಾರಾಜನು ಅಲ್ಲಿಗೆ ಹೋಗಿ ಆ ಒಣಗಿದ ಕೆರೆಯಲ್ಲಿ ಒಂದು ಮೊಳ ತೆಗ್ಗು ತೆಗೆದನು. ಕೂಡಲೇ ಅದರಲ್ಲಿ ನೀರು ಚಿಮ್ಮಿ ಬರಹತ್ತಿತು. ಬಾಯಾರಿಕೆಯಿಂದ ಬಳಲಿದ ಮಹಾರಾಜನು ನೀರು ಕುಡಿದನು ತೃಪ್ತಿಯಾಗುವವರೆಗೂ. ಅದರಂತೆ ಮಂತ್ರಿಯೂ ಕೂಡ ಅಲ್ಲಿಯ ನೀರನ್ನು ತೃಪ್ತಿಯಾಗುವವರೆಗೆ ಪಾನ ಮಾಡಿದನು. ಇಬ್ಬರಿಗೂ ಬಹಳ ಸಂತೋಷವಾಯಿತು. ಅವನ ಮಂತ್ರಿಯ ಹೆಸರು ಬುದ್ಧಿಸಾಗರ, ಅನ್ವರ್ಥಕವೇ ಆಗಿತ್ತು ಧರ್ಮಿಷ್ಠನಾದ ಆ ಮಂತ್ರಿಗೆ ಆ ಹೆಸರು. ಧರ್ಮಶಾಸ್ತ್ರಗಳಲ್ಲಿ ಅವನಿಗೆ ಒಳ್ಳೇ ಸೂಕ್ಷ್ಮ ಜ್ಞಾನ, ಪರೋಪಕಾರದಲ್ಲಿಯೇ ಅವನ ದೃಷ್ಟಿ. ತನ್ನ ಸ್ವಭಾವಕ್ಕನುಸರಿಸಿ ಅವನು ನುಡಿದನು.

**ಬುದ್ಧಿಸಾಗರ:-** ರಾಜನೆ, ಈ ಪುಷ್ಕರಣಿಯು ಈಗ ಒಣಗಿ ಹೋದರೂ ಮಳೆಗಾಲದಲ್ಲಿ ನೀರಿನಿಂದ ತುಂಬಿರುವದು. ಇದಕ್ಕೆ ಚೆನ್ನಾಗಿ ಕಟ್ಟೆ ಕಟ್ಟಿ, ತಳದಲ್ಲಿ ಮಣ್ಣು ತೆಗೆಸಿ, ಆಳ ಅಗಿಸಿ, ಮೆಟ್ಟಲುಗಳನ್ನು ಏರಿಳಿಯುವದಕ್ಕೆ ಅನುಕೂಲವಾಗುವಂತೆ ನಿರ್ಮಿಸಿದರೆ ದಾರಿಕಾರರಿಗೂ, ಪಶುಪಕ್ಷಿಗಳಿಗೂ ಉಪಯೋಗವಾಗುವದು. ಈ ಸರೋವರವನ್ನು ಜನರಿಗೆಲ್ಲ ನಿತ್ಯೋಪಯೋಗಿಯಾಗುವಂತೆ ಪುನರ್ನಿರ್ಮಾಣ ಮಾಡಲು ನನ್ನ ಅಪೇಕ್ಷೆ. ತಾವು ಅದಕ್ಕೆ ಅಪ್ಪಣೆ ಕೊಡಬೇಕು. ಮತ್ತು ತಾವು ಪುಣ್ಯಭಾಗಿಯಾಗಬೇಕು.'' ಮಂತ್ರಿಯ ಮಾತು ಮಹಾರಾಜನಿಗೆ ಯೋಗ್ಯವೆನಿಸಿತು. ಆನಂದದಿಂದ ಅನುಮತಿ ಇತ್ತನು. ಮತ್ತು ತಾನೂ ಆ ಕಾರ್ಯ ಮಾಡಲು ಉಜ್ಜುಗಿಸಿದನು. ಆ ಪುಷ್ಕರಣಿಯ ಪುನನಿರ್ಮಾಣಕ್ಕಾಗಿ ಆ ಮಂತ್ರಿಯನ್ನೇ ನಿಯಮಿಸಿದನು. ರಾಜಾಜ್ಞೆ ಆಗುವದೊಂದೇ ತಡ. ಬುದ್ಧಿಸಾಗರನು ದೊಡ್ಡ ಸರೋವರವನ್ನೇ ನಿರ್ಮಿಸಲು ಮೊದಲು ಮಾಡಿದನು. ಆ ಸರೋವರವನ್ನು ಒಂದು ಸಾಗರದಂತೆ ವಿಶಾಲವಾಗಿ ಮಾಡಬೇಕೆಂದು ಆ ಮಂತ್ರಿಯ ಮನೀಷೆ. ಪುಷ್ಕರಣಿಯ ಕೆಳಗೆ ಎಲ್ಲ ಹುಲ್ಲು ತೆಗೆಸಿ ಆಳವಾಗಿ ಅಗಿಸಿದನು.

ಐವತ್ತು ಧನಸ್ಸುಗಳಷ್ಟು ವಿಸ್ತಾರವಾಗಿ ಕಟ್ಟೆ ಕಟ್ಟಿಸಿದನು. ಮತ್ತು ಕಲ್ಲಿನಿಂದ ಸುತ್ತಲೂ ಕಟ್ಟೆ, ಮೆಟ್ಟಲು ಮುಂತಾದವುಗಳನ್ನು ನಿರ್ಮಿಸಿದನು. ಇದರಿಂದ ಆ ಸರೋವರದಲ್ಲಿ ಅಪಾರವಾದ ನೀರು ನಿಲ್ಲುವಂತಾಯಿತು. ಅದೊಂದು ಚಿಕ್ಕ ಸಮುದ್ರ ದಂತೆಯೇ ವರ್ಷಕಾಲದಲ್ಲಿ ನೀರು ತುಂಬಿ ತುಳುಕಿ ಶೋಭಿಸತೊಡಗಿತು. ಆ ವನದಲ್ಲಿ ಇರುವ ಎಲ್ಲ ವನೇಚರರು, ಯಾತ್ರಿಕರು, ಪಾಂಥರು, ಪಶುಪಕ್ಷಿಗಳು, ದನಗಾಹಿಗಳು, ಮೊದಲಾದ ಎಲ್ಲ ಜನರೂ ಆ ಸರೋವರದ ನೀರನ್ನು ಕುಡಿದು ತೃಪ್ತಿ ಪಡುತ್ತಿದ್ದರು. ಎಲ್ಲರಿಗೂ ಸಾಕಷ್ಟು ನೀರು ಅಲ್ಲಿ ದೊರಕಿದ್ದರಿಂದ ಅದೊಂದು ತೃಪ್ತಿಯ ತಾಣವಾಗಿ ಕಂಗೊಳಿಸಿತು. ಹೀಗೆ ಬಾಯಾರಿಕೆಯಿಂದ ಬಂದ, ನೀರು ಕುಡಿದು ತೃಪ್ತಿಪಟ್ಟವರೆಲ್ಲರೂ ಅದನ್ನು ಕಟ್ಟಿಸಿದವರನ್ನು ಹಾಡಿ ಹರಿಸುತ್ತಿದ್ದರು.

ಕೆಲವು ದಿನಗಳ ಬಳಿಕ ಆ ಮಂತ್ರಿ ಬುದ್ಧಿಸಾಗರನು ಮುಪ್ಪಿನಿಂದ ಮರಣ ಹೊಂದಿದನು. ಆಗ ನನ್ನ ದೂತರು ಅವನನ್ನು ನನ್ನ ಲೋಕಕ್ಕೆ ಕರೆತಂದರು. ನಾನು ಚಿತ್ರಗುಪ್ತನನ್ನು 'ಇವನು ಮಾಡಿದ ಧಾನ-ಧರ್ಮ-ಕರ್ಮಗಳೇನು?' ಎಂದು ಪ್ರಶ್ನಿಸಿದೆ.

ಅದಕ್ಕೆ ಚಿತ್ರಗುಪ್ತನು 'ಈ ಮಂತ್ರಿಯು ಸ್ವಯಂ ಧರ್ಮಕಾರ್ಯ ಮಾಡುವದಲ್ಲದೆ ರಾಜನಿಗೆ ಪರೋಪಕಾರ ಕೆಲಸ ಮಾಡಲು ಉಪದೇಶಿಸುತ್ತಿದ್ದನು. ಮತ್ತು ತಾನೇ ಸಹಾಯಕನಾಗಿ ನಿಂತು ಪುಣ್ಯ ಕಾರ್ಯ ಮಾಡಿಸುತ್ತಿದ್ದನು, ಆದುದರಿಂದ ಇವನು ಧರ್ಮವಿಮಾನ ಆರೋಹಣ ಮಾಡಲು ಅರ್ಹನಾಗಿದ್ದಾನೆ.' ಎಂದು ಹೇಳಿದನು. ಆಗ ನಾನು ಬುದ್ಧಿಸಾಗರನನ್ನು ಧರ್ಮವಿಮಾನದಲ್ಲಿ ಕೂಡಿಸುವಂತೆ ಆಜ್ಞೆ ನೀಡಿದೆ. ಮುಂದೆ ಕೆಲವು ದಿನಗಳ ನಂತರ ಕಾಲಾಂತರದಲ್ಲಿ ಆ ವೀರಭದ್ರರಾಜನು ಮರಣ ಹೊಂದಿದನು. ಅವನನ್ನು ನನ್ನ ಮುಂದೆ ತಂದು ನಿಲ್ಲಿಸಿದರು ನನ್ನ ದೂತರು, ಮತ್ತೆ ಚಿತ್ರಗುಪ್ತನನ್ನು ರಾಜನ ಕರ್ಮಲೇಖದ ಬಗ್ಗೆ ಕೇಳಿದೆ. ಆಗ ಚಿತ್ರಗುಪ್ತನು 'ಈ ರಾಜನು ಬೇಸಿಗೆಯಲ್ಲಿ ಒಣಗಿದ ಸರೋವರವನ್ನು ಪುನರ್ನಿರ್ಮಾಣ ಮಾಡಿ ಮಹಾಪುಣ್ಯ ಗಳಿಸಿದ್ದಾನೆ' ಎಂದು ಹೇಳಿದನು. ಆಗ ನಾನು ಆ ವೀರಭದ್ರ ರಾಜನಿಗೆ ಅವನು ಅಗಿಸಿ ಮಣ್ಣು ತೆಗೆಸಿ ಕಟ್ಟೆ ಕಟ್ಟಿಸಿ ಪುನರ್ ನವೀಕರಣ ಮಾಡಿದ ಆ ಸರೋವರದ ಹಿಂದಿನ ವೃತ್ತಾಂತ ತಿಳಿಸಿದೆ. ''ರಾಜನೆ, ಪೂರ್ವದಲ್ಲಿ ಈ ಪರ್ವತದ ತಪ್ಪಲು ಪ್ರದೇಶದಲ್ಲಿ ಮರಳುಭೂಮಿಯಲ್ಲಿ ಮೊಟ್ಟಮೊದಲು ಲಾವಿಗೆ ಹಕ್ಕಿಯು ತನ್ನ ಕೊಕ್ಕಿನಿಂದ ನೀರು ನಿಲ್ಲುವಂತೆ ಎರಡು ಅಂಗುಲ ತೋಡಿತು. ಅದಿರಂದ ಚಿಕ್ಕ ಹಳ್ಳ ರೂಪಗೊಂಡಿತು. ಅನಂತರ ಒಂದು ಹಂದಿಯು ಬಂದು ತನ್ನ ಮೊಸಡೆಯಿಂದ ಅಗೆದು ಒಂದು ಮೊಳದಷ್ಟು ತಗ್ಗು ಮಾಡಿತು. ಇನ್ನೂ ಹೆಚ್ಚು ನೀರು ನಿಲ್ಲುವಂತೆ ಮಾಡಿತು. ಕೆಲದಿನದ ನಂತರ ನೀರಡಿಸಿ ಅದೇ ಹಂದಿ ಬಂದು ನೀರು ಕುಡಿದು ತೃಪ್ತಿಯಾಗದೇ ಅದೇ ನೆಲವನ್ನು ಮತ್ತೆ ಅಗೆದು ಆಳವಾಗಿ ಎರಡು ಮೊಳ ತಗ್ಗು ಬೀಳುವಂತೆ ಮಾಡಿತು. ಅದರಿಂದ ಮಳೆ ಬಂದಾಗ ಎರಡು ತಿಂಗಳಿಗಾಗುವಷ್ಟು ನೀರು ನಿಲ್ಲುವಂತಾಯಿತು. ಕಾಡಿನಲ್ಲಿ ಸಂಚರಿಸುವ ಪ್ರಾಣಿಗಳು ಬಂದು ನೀರು ಕುಡಿಯುವಂತಾಯಿತು.

ಮೂರು ವರ್ಷಗಳ ನಂತರ ಅಲ್ಲಿ ಒಂದು ಆನೆ ಬಂದಿತು. ಅದು ಮೊದಲು ನೀರನ್ನು ಕುಡಿದು ನಂತರ ತನ್ನ ಕೋರೆದಾಡೆಯಿಂದ ಮೂರು ಮಾರಿನಷ್ಟು ಅಗೆದು ಅಲ್ಲಿ ಹೇರಳವಾಗಿ ನೀರು ನಿಲ್ಲುವಂತೆ ಮಾಡಿತು. ಆ ನೀರು ಅನೇಕ ಜಲಚರಗಳಿಗೆ ಆಹಾರವಾಗಿದ್ದುದಲ್ಲದೆ ಉಳಿದ ಎಷ್ಟೋ ಕಾಡು ಮರಗಳಿಗೂ, ಪಶುಗಳಿಗೂ ಪಕ್ಷಿಗಳಿಗೂ, ಮಾನವರಿಗೂ ಆಧಾರವಾಗಿ ಮೂರು ತಿಂಗಳ ನೀರು ನಿಲ್ಲುವಂತಾಯಿತು. ಆ ನೀರು ಒಣಗಿ ಹೋದ ಮೇಲೆ ಒಂದು ತಿಂಗಳ ನಂತರ ನೀನು ನಿನ್ನ ಮಂತ್ರಿಯೊಂದಿಗೆ ಅಲ್ಲಿಗೆ ಬಂದೆ. ಒಂದು ಮೊಳ ಆಳಕ್ಕೆ ಆ ಹೊಂಡವನ್ನು ಅಗೆದು ಅಲ್ಲಿ ಬಂದ ವರ್ತಿನೀರನ್ನು ನೀನು ಕುಡಿದು ತೃಪ್ತಿಪಟ್ಟೆ. ಮುಂದೆ ಮಂತ್ರಿಯ ಉಪದೇಶದಿಂದ ಅದೇ ಹೊಂಡವನ್ನು ಐವತ್ತು ಧನುಸ್ಸಿನಷ್ಟು ಆಳವಾಗಿ ತೆಗೆಯಿಸಿ ಇನ್ನೂ ಆಳಮಾಡಿ, ಅಗಲಗೈದು ಕಟ್ಟೆ ಕಟ್ಟಿ ಮೆಟ್ಟಲು ಮಾಡಿ, ಸುಂದರ ಸರೋವರನ್ನಾಗಿ ಸಾಗರದಂತೆ ಈ ಪುಷ್ಕರಣಿಯನ್ನು ಜೀರ್ಣೋದ್ಧಾರ ಮಾಡಿದೆ. ಆ ಸರೋವರದ ಸುತ್ತಲೂ ಹಣ್ಣು, ಹೂ ಕಾಯಿ, ಚಿಗುರು ನೆರಳುಗಳಿಂದ ಎಲ್ಲರಿಗೂ ಉಪಕಾರ ಮಾಡುವ ಗಿಡಗಳು ಬೆಳಸಲ್ಪಟ್ಟವು. ಆ ಮರಗಳ ರೆಂಬೆ ಕೊಂಬೆಗಳಲ್ಲಿ ಗೂಡುಗಟ್ಟಿ ಪಕ್ಷಿಗಳು ನೆಲೆಸಿದವು. ಕಾಡಿನ ಸುತ್ತಲೂ ಇರುವ ಪ್ರಾಣಿಗಳು,

ಪಶುಗಳು, ಪಕ್ಷಿಗಳು, ಯಾತ್ರಿಕರು, ದಾರಿಹೋಕರು, ಬಾಯಾರಿಕೆಯಿಂದ ಬಳಲುವವರು ಇಡೀ ವರ್ಷ ಅಲ್ಲಿ ನಿರಂತರ ನಿಲ್ಲುವ ನೀರನ್ನು ಸ್ನಾನ, ಪಾನಮಾಡಿ ತೃಪ್ತಿಯಿಂದ ಸಂತೋಷ ಪಡುತ್ತಿದ್ದಾರೆ ಈಗಲೂ.

ಇಂತಹ ದಿವ್ಯ ಸರೋವರ ನಿರ್ಮಿಸಿದ ಪುಣ್ಯ ಮುಖ್ಯವಾಗಿ ನಿನ್ನ ಹಾಗೂ ಮಂತ್ರಿಯಾದಾಗಿದ್ದರೂ ನಿನಗಿಂತ ಮೊದಲೇ ಈ ಸರೋವರ ನಿರ್ಮಾಣ ಕಾರ್ಯವನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ಮಾಡಲು ಮೊದಲು ಮಾಡಿದ ಆ ಎಲ್ಲ ಪುಣ್ಯ ಜೀವಿಗಳು ಈಗ ಇಲ್ಲಿ ಧರ್ಮವಿಮಾನದಲ್ಲಿ ಕುಳಿತಿದ್ದಾರೆ. ಇದೋ ನೋಡು, ಮೊದಲು ಆ ಪುಷ್ಕರಣಿಯಲ್ಲಿ ತನ್ನ ಚುಂಚುವಿನಿಂದ ಅಗೆದ ಹಕ್ಕಿ. ಅದು ಮೊದಲು ಧರ್ಮ ವಿಮಾನವೇರಿದೆ. ಅನಂತರ ಹಂದಿ, ಮೂರನೆಯದಾಗಿ ಆನೆ, ನಾಲ್ಕನೆಯದಾಗಿ ಮಂತ್ರಿ, ಐದನೇಯವ ನೀನು. ಹೀಗೆ ನೀವು ಐವರೂ ಈ ಧರ್ಮ ವಿಮಾನವನ್ನು ಆರೋಹಣ ಮಾಡಲು ಅರ್ಹರಾಗಿದ್ದೀರಿ. ಅವರೆಲ್ಲರೂ ನಿನ್ನನ್ನು ಕಾಯುತ್ತಿದ್ದಾರೆ. ನೀನು ಅದನ್ನು ಆರೋಹಣ ಮಾಡು '' ಎಂದು ಹೇಳಿದನು.

ಅದನ್ನು ಕೇಳಿ ವೀರಭದ್ರನಿಗೆ ಪರಮಾನಂದವಾಯಿತು. ಕೂಡಲೇ ಅವನು ವಿಮಾನವೇರಿ ಆ ತನ್ನ ನಾಲ್ಕೂ ಸಹಚರರೊಂದಿಗೆ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದನು. ಮುಂದೆ ಪುನಃ ಅವನು ಪುಣ್ಯದಿಂದ ಭೂಲೋಕಕ್ಕೆ ಬಂದು ಮತ್ತೆ ಇಂತಹ ಪರೋಪಕಾರ ಸಾಧನೆಯಿಂದ ಶ್ರೀ ಹರಿಯ ಅನುಗ್ರಹದಿಂದ ಮೋಕ್ಷ ಹೊಂದಿದನು. ಈ ಪ್ರಕಾರ ಕೆರೆ, ಕಾಲುವೆ, ಕೂಪಾದಿಗಳನ್ನು ಕಟ್ಟಿಸುವಂತಹ ಕಾರ್ಯ ಮಾಡುವವರು ದಿವ್ಯಗತಿಯನ್ನು ಹೊಂದುತ್ತಾರೆ.

ನಾರದ ಮಹಾಪುರಾಣದಲ್ಲಿ ಹನ್ನೆರಡನೇಯ ಅಧ್ಯಾಯ ಮುಗಿದುದು



## ಧರ್ಮಾನುಕಥನ

**ಅಧ್ಯಾಯ - ೧೩**

**ಧರ್ಮರಾಜ :** ಶಿವನ ಮಂಟಪ ಅಥವಾ ಹರಿಯ ಮಂದಿರವನ್ನು ಮಾಡಿದವನಿಗೂ ಬರುವ ಪುಣ್ಯಫಲ ಹೇಳುತ್ತೇನೆ, ಕೇಳು. ಮಣ್ಣಿನಿಂದ ದೇವರ ಗುಡಿಯನ್ನು ಕಟ್ಟಿಸಿದವನು ದಿವ್ಯ ದೇಹ ಧರಿಸಿ, ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಕಟ್ಟಿಗೆಯಿಂದ ದೇವರ ಗುಡಿ ಕಟ್ಟಿಸಿದವನಿಗೆ ಅದರ ಎರಡು ಪಟ್ಟು, ಇಟ್ಟಂಗಿಯಿಂದ ಕಟ್ಟಿಸಿದರೆ ಮೂರು ಪಟ್ಟು, ಕಲ್ಲಿನಿಂದ ಕಟ್ಟಿಸಿದರೆ ನಾಲ್ಕು ಪಟ್ಟು, ಸ್ಫಟಿಕದಿಂದ ಮಾಡಿದರೆ ಹತ್ತು ಪಟ್ಟು, ಬಂಗಾರದಿಂದ ಭಗವಂತನ ಗುಡಿಯನ್ನು ಕಟ್ಟಿದರೆ ಕೋಟಿ ಪಟ್ಟು ಪುಣ್ಯವು ಬರುವದು. ದೇವಾಲಯವನ್ನಾಗಲಿ, ಸರೋವರವನ್ನಾಗಲಿ, ಗ್ರಾಮವನ್ನಾಗಲಿ ಕಟ್ಟಿಸಿದವನಿಗಿಂತ ಕಟ್ಟಿದ್ದನ್ನು ಕೆಡದಂತೆ ರಕ್ಷಿಸುವವನಿಗೆ ನೂರು ಮಡಿ ಹೆಚ್ಚು ಪುಣ್ಯ ಬರುವದು. ದೇವರ ಗುಡಿಯಲ್ಲಿ ಸಾರಣೆ, ಕಾರಣೆ, ಸುಣ್ಣ, ಬಣ್ಣ ಹಚ್ಚುವದು, ಅಲಂಕಾರ ಮಾಡುವದು ಮುಂತಾದ ಕಾರ್ಯ ಮಾಡುವವರಿಗೆ ಪುಣ್ಯ ಅನಂತ. ಇನ್ನೊಬ್ಬರನ್ನು ಪ್ರೇರಿಸಿ, ಅವರ ಕಡೆಯಿಂದ ಮುಂದಿನ ಕೆರೆ, ಬಾವಿ, ಗುಡಿ, ಛತ್ರ ಮುಂತಾದ ಲೋಕೋಪಯೋಗಿ ಕಾರ್ಯ ಮಾಡಿಸುವವನು ಶಾಶ್ವತವಾಗಿ ವಿಷ್ಣು ಲೋಕದಲ್ಲಿ ಸಂತೋಷಪಡುವನು.

ಒಂದು ಸರೋವರದ ಅರ್ಧಫಲ ಕೆರೆ ಕಟ್ಟಿಸಿದವನಿಗೆ ಬರುವದು. ಬಾವಿ ಕಟ್ಟಿಸಿದರೆ ಅದರ ಪುಣ್ಯ ಅರ್ಧದಷ್ಟು ಎಂದರೆ ಸರಸ್ಸಿನ ನಿರ್ಮಾಣದ ಕಾಲುಭಾಗ ಪುಣ್ಯ ಬರುವದು. ಸುತ್ತಲೂ ಹೂದೋಟವಿರುವ ಕಲ್ಯಾಣಿ ಕೊಳ ನಿರ್ಮಿಸಿದರೆ ಸರೋವರ ನಿರ್ಮಿಸಿದಷ್ಟೇ ಫಲ. ಒಂದು ಕಾಲುವೆ ಅಗಿಸಿ, ದೂರದವರೆಗೆ ಹೊಲಗಳಿಗೆ ನೀರುಣ್ಣುವಂತೆ ಮಾಡಿಸಿದರೆ ಒಂದು ಕಲ್ಯಾಣಿ ಕೊಳ ನಿರ್ಮಾಣದ ಮೂರರಷ್ಟು ಫಲ ಬರುವದು. ಧನಿಕನು ಕಲ್ಲಿನಿಂದ ಕಟ್ಟಿದಷ್ಟೇ ಫಲ ಬಡವನು ಮಾಡಿದ ಮಂದಿರದಿಂದಲೂ ಲಭಿಸುವದು. ಒಂದು ಗ್ರಾಮವನ್ನೇ ದಾನ ಮಾಡುವ ರಾಜನಿಗೂ, ಒಂದು ಮೊಳ ಭೂಮಿ ದಾನ ಮಾಡುವ ದರಿದ್ರನಿಗೂ ಸಮಾನಫಲ. ಫಲವತ್ತಾದ ಬೆಳೆಗಳಿಗೆ ನೀರು ಪೂರೈಸುವ ದೊಡ್ಡ ಕೆರೆಯನ್ನು ಕಟ್ಟಿಸುವ ಧನಿಕನಿಗೆ ಬರುವಷ್ಟು ಪುಣ್ಯವೇ ನೀರು ಸೇದುವ ಬಾವಿಯನ್ನು ಅಗಿಸಿದ ಬಡವರಿಗೆ ಬರುತ್ತದೆ. ಅನೇಕ ಪ್ರಾಣಿಗಳಿಗೆ ಅನುಕೂಲವಾಗುವ ತೋಟವನ್ನು ಮಾಡಿಸುವವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಪಸು, ಬ್ರಾಹ್ಮಣ, ಹಸು, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಜಾತಿಯ ದಾರಿಕಾರರು ಹಕ್ಕಿಪಕ್ಕಿಗಳು ಮರದ ನೆರಳಿನಲ್ಲಿ ಕುಳಿತು, ನಿಂತು, ವಿಶ್ರಮಿಸಿಕೊಂಡರೆ ಆ ಮರವನ್ನು ನೆಟ್ಟು ಬೆಳೆಸಿದವನಿಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ತೋಟವನ್ನು ತಯಾರು ಮಾಡಿಸಿದವ, ಹರಿಮಂದಿರವನ್ನು ಕಟ್ಟಿಸಿದವ, ಕೆರೆಗಳನ್ನು ನಿರ್ಮಾಣ ಮಾಡುವವ ಕೂಡ ಶ್ರೀ ಹರಿಯ ಪರಮಾನುಗ್ರಹಕ್ಕೆ ಪಾತ್ರರಾಗಿ ದಿವ್ಯಗತಿಯನ್ನು ಹೊಂದುತ್ತಾರೆ. ದೇವಪೂಜೆಗಾಗಿ ಹೂವಿನ ತೋಟ ಮಾಡಿಸುವವರು, ಆ ತೋಟದ ಹೂ ಮತ್ತು ಎಲೆಗಳಷ್ಟು ವರ್ಷಕಾಲ ಸ್ವರ್ಗ ಲೋಕದಲ್ಲಿ ಸುಖದಿಂದ ಇರುತ್ತಾರೆ. ಅಂತಹ ಹೂದೋಟಕ್ಕೆ ಮುಳ್ಳುಬೇಲಿ, ಹಾಕಿದವರಿಗೂ ಪುಣ್ಯ. ಹೂದೋಟದಲ್ಲಿ ತುಳಸೀಗಿಡ ಬೆಳೆಸಿದವರು ನೂರು ಕಲ್ಪಗಳವರೆಗೆ ನಿಮ್ಮ ಲೋಕದಲ್ಲಿ ಸುಖದಿಂದ ಇರುತ್ತಾರೆ. ತುಳಸೀಗಿಡದ ಬುಡದಲ್ಲಿಯ ಮೃತ್ತಿಕೆ ಅಥವಾ ಗೋಪೀಚಂದನ ಅಥವಾ ಚಿತ್ರಕೂಟ ಪರ್ವತದ ಮಣ್ಣಿನಿಂದ, ಇಲ್ಲವೆ ಗಂಗೆಯ ದಂಡೆಯ ಮಣ್ಣಿನಿಂದ ಊರ್ಧ್ವಪುಂಡ್ರ ಧರಿಸಿದವ ಅಂದರೆ ಹಣೆ ಹಾಗೂ ಮೈಮೇಲಿನ ನಾಮ ಧರಿಸಿದವನು ವಿಷ್ಣು ಮಂದಿರದಲ್ಲಿ ಪ್ರವೇಶವನ್ನು ಪಡೆಯುತ್ತಾನೆ. ತುಳಸಿ ಗಿಡದಲ್ಲಿರುವ ಕಳೆಯನ್ನು ಕೀಳುವವನು ಬ್ರಹ್ಮಹತ್ಯಾದಿ ದೋಷ ಕಳೆದುಕೊಳ್ಳುತ್ತಾನೆ. ತುಳಸೀಗಿಡಕ್ಕೆ ಒಂದು ಬೊಗಸೆ ನೀರು ಹಾಕುವವನು ಕ್ಷೀರಶಾಯಿಯಾದ ನಾರಾಯಣನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಶಾಲಿಗ್ರಾಮವನ್ನು ತುಳಸಿಯಿಂದ ಪೂಜಿಸುವವನಿಗೆ ಅಥವಾ ಶ್ರೀಹರಿಯ ಮೂರ್ತಿಗಳನ್ನು ತುಳಸೀ ದಳಗಳಿಂದ ಪೂಜಿಸುವವನಿಗೆ ಪುನಃ ಸಂಸಾರ ಜನನವಿಲ್ಲ.

ದ್ವಾದಶಿ ಮತ್ತು ಹುಣ್ಣಿಮೆಗಳಲ್ಲಿ ಶ್ರೀ ಹರಿಗೆ ಹಾಲಿನಿಂದ ಅಭಿಷೇಕ ಮಾಡುವವನು ಅಥವಾ ಒಂದು ಗಿಂಡಿಯಿಂದ ಭಗವಂತನಿಗೆ ಕ್ಷೀರಾಭಿಷೇಕ ಮಾಡುವವನು, ದ್ವಾದಶಿಯಂದು ಒಂದು ಬಳ್ಳ ತುಪ್ಪದಿಂದ ವಿಷ್ಣುವಿಗೆ ಅಭಿಷೇಕ ಮಾಡುವವನು, ಏಕಾದಶಿ ಹುಣ್ಣಿಮೆಗಳಲ್ಲಿ ವಿಷ್ಣುವಿಗೆ ಎಳೆನೀರಿನಿಂದ ಅಭಿಷೇಕ ಮಾಡುವವನೂ, ಹಿಂದಿನ ಹತ್ತು ಜನ್ಮದ ಪಾಪಗಳನ್ನು ಕಳೆದುಕೊಂಡು ವಿಷ್ಣು ಲೋಕದಲ್ಲಿ ಶಾಶ್ವತವಾಗಿ ಸುಖವನ್ನು ಪಡೆಯುತ್ತಾನೆ.

ಕಬ್ಬಿನ ಹಾಲು, ಜೇನುತುಪ್ಪ ಗಂಧೋದಕ, ಶುದ್ಧ ನೀರುಗಳಿಂದ ಸಾಲಿಗ್ರಾಮ, ಭಗವನ್ಮೂರ್ತಿಗಳಿಗೆ ಪಂಚಾಮೃತ ಅಭಿಷೇಕ ಅಥವಾ ಕ್ಷೀರಾಭಿಷೇಕ, ಘೃತಾಭಿಷೇಕ ಜೇನುತುಪ್ಪದ ಅಭಿಷೇಕ ಮಾಡುವವನು ಪಾಪದಿಂದ ಮುಕ್ತನಾಗಿ ದಿವ್ಯ ಲೋಕದಲ್ಲಿ ಸುಖ

ಪಡುತ್ತಾನೆ. ಸಂಕ್ರಮಣ ಪರ್ವ ಕಾಲದಲ್ಲಿ ಪಂಚಾಮೃತ ಕ್ಷೀರಾಭಿಷೇಕ ಶ್ರೀ ಹರಿಗೆ ಮಾಡಿ, ಮಾನವನು ತನ್ನ ಇಪ್ಪತ್ತೊಂದು ಪಿತೃಗಳ ಸಂಗಡ ವಿಷ್ಣು ಲೋಕಕ್ಕೆ ಪ್ರಯಾಣ ಮಾಡುವನು. ಶುಕ್ಲಪಕ್ಷದ ಚತುರ್ದಶೀ, ಅಷ್ಟಮಿ, ಪೂರ್ಣಿಮೆ, ಏಕಾದಶಿ, ಭಾನುವಾರ, ದ್ವಾದಶೀ, ಪಂಚಮಿ, ಚಂದ್ರ, ಸೂರ್ಯಗ್ರಹಣಗಳು, ಯುಗಾದಿ, ಮನ್ವಾದಿ ಅರ್ಧೋದಯ (ಅಮಾವಾಸ್ಯ ಭಾನುವಾರ, ವ್ಯತೀಪಾತ ಮತ್ತು ಶ್ರವಣ ನಕ್ಷತ್ರಗಳು ಸೇರಿರುವ ದಿನ) ಪುಷ್ಯ ನಕ್ಷತ್ರಯುಕ್ತ ಭಾನುವಾರ, ರೋಹಿಣಿ ನಕ್ಷತ್ರ ಸಹಿತವಾದ ಬುಧವಾರ ಶನಿವಾರಗಳು, ಅಶ್ವಿನೀ ನಕ್ಷತ್ರ ಸಹಿತವಾದ ಮಂಗಳವಾರ, ಶನಿವಾರಗಳು ಮೃಗಶಿರಾ ನಕ್ಷತ್ರವುಳ್ಳ ಶುಕ್ರವಾರ ರೇವತಿಗಳ ಸುಗಮ ದಿನ, ಬುಧವಾರ ಯುಕ್ತವಾದ ಅನುರಾಧಾ ನಕ್ಷತ್ರ, ಶ್ರವಣಾ ನಕ್ಷತ್ರಯುತವಾದ ಭಾನು ಸೋಮವಾರಗಳು, ಹಸ್ತಾ ನಕ್ಷತ್ರ ಸಹಿತ ಗುರುವಾರ, ಬುಧವಾರ ಸಹಿತವಾದ ಅಷ್ಟಮೀ ದಿನ, ಆಷಾಢ ನಕ್ಷತ್ರವಿರುವ ಬುಧವಾರ ಮತ್ತು ಇತರ ಪುಣ್ಯ ದಿನಗಳಲ್ಲಿ ಸಹ ಶಾಂತಿ ಸಂಪನ್ನನಾದ ಪರಿಶುದ್ಧ ಮನುಷ್ಯನು, ನಿಯಮದಿಂದ ವಿಷ್ಣುದೇವನನ್ನು ಹಾಲು, ತುಪ್ಪ, ಜೇನುತುಪ್ಪ ಅಥವಾ ಮೊಸರು ಇವುಗಳಿಂದ ಅಭಿಷೇಕ ಮಾಡಿಸುವವನಿಗೆ ಉಂಟಾಗುವ ಫಲವನ್ನು ಹೇಳುವೆನು, ಕೇಳು. ದೊರೆಯೇ, ಹೀಗೆ ಪುಣ್ಯ ದಿನಗಳಲ್ಲಿ ದೇವರಿಗೆ ಪಂಚಾಮೃತ ಅಭಿಷೇಕ ಮಾಡುವವನು ಸರ್ವ ಯಜ್ಞಗಳನ್ನು ಮಾಡಿದ ಫಲ ಹೊಂದುತ್ತಾನೆ. ಸೋಮವಾರ ಕೃಷ್ಣಪಕ್ಷ ಚತುರ್ದಶಿಯಂದು ಮಹಾದೇವರಿಗೆ ಕ್ಷೀರಾಭಿಷೇಕ ಮಾಡಿದರೆ, ಸೋಮವಾರ ಅಥವಾ ಅಷ್ಟಮೀ ದಿನ ಎಳೆನೀರಿನಿಂದ ರುದ್ರಾಭಿಷೇಕ ಮಾಡಿದರೆ, ಶುಕ್ಲಪಕ್ಷ ಚತುರ್ದಶಿ ಅಥವಾ ಅಷ್ಟಮಿ ಶಿವನಿಗೆ ತುಪ್ಪದಿಂದ ಅಭಿಷೇಕ ಮಾಡಿದರೆ, ಹರಿಹರ ದೇವತೆಗಳಿಗೆ ಎಳ್ಳೆಣ್ಣೆಯಿಂದ ಮೊದಲು ಲೇಪನ ಮಾಡಿ ಅಭ್ಯಂಗ ಸ್ನಾನ ಮಾಡಿಸಿದರೆ, ಕಬ್ಬಿನ ಹಾಲಿನಿಂದ ಶಿವನಿಗೆ ಸ್ನಾನ ಮಾಡಿಸಿದರೆ, ಉತ್ಥಾನ ದ್ವಾದಶೀ ತುಪ್ಪ ಅಥವಾ ಹಾಲಿನಿಂದ ಮಹಾದೇವರಿಗೆ ಅಭಿಷೇಕ ಮಾಡಿದರೆ ಅವನ ನೂರಾರು ಜನ್ಮಗಳ ಪಾಪರಾಶಿಯೆಲ್ಲ ನಾಶವಾಗಿ ಕುಲಕೋಟಿ ಸಹಿತ ಶಿವಸಾಯುಜ್ಯ ಹೊಂದುವನು.

ಇದರಂತೆ, ವಿಷ್ಣು ತಿಥಿ ಎನಿಸಿದ ದಶಮಿ, ಏಕಾದಶಿ, ದ್ವಾದಶಿ ದಿನಗಳಲ್ಲಿ ಗಂಧ, ಕುಸುಮಗಳಿಂದಲೂ, ಕಮಲದ ಹೂವುಗಳಿಂದಲೂ, ಕೇದಿಗೆ ಹೂವುಗಳಿಂದಲೂ, ಸಂಪಿಗೆ ಹೂವುಗಳಿಂದಲೂ, ಶ್ರೀ ಹರಿಯನ್ನು ಪೂಜಿಸಿದರೆ ಸಕಲ ಪಾಪಗಳು ಪರಿಹೃತವಾಗಿ ವಿಷ್ಣು ಮಂದಿರದಲ್ಲಿ ವಾಸವು ಲಭಿಸುತ್ತದೆ. ಹರಿಹರರ ಎದುರಿಗೆ ಎಣ್ಣೆ ಅಥವಾ ತುಪ್ಪದ ದೀಪ ಹಚ್ಚುವವನಿಗೆ ಗಂಗಾಸ್ನಾನದ ಪುಣ್ಯ ಬರುತ್ತದೆ. ತನಗೆ ಇಷ್ಟವಾದ, ಯಥೇಷ್ಟವಾದ ಆಹಾರ ವಸ್ತುವನ್ನು ಶಿವ ಅಥವಾ ವಿಷ್ಣುವಿಗೆ ನೈವೇದ್ಯ ಮಾಡಿದರೆ ಹಾಗೂ ಅವನು ಜ್ಞಾನಿಮನುಷ್ಯನಿಗೆ ಉಣಬಡಿಸಿದರೆ ಮಾನವನು ಈ ಸಂಸಾರಕ್ಕೆ ಮತ್ತೆ ಹಿಂದಿರುಗದೇ ವಿಷ್ಣುಲೋಕಕ್ಕೆ ಹೋಗುತ್ತಾನೆ. ಶಿಶುಹತ್ಯೆ ಮಾಡಿದವನು ಸುವರ್ಣದಾನದಿಂದ ಉದ್ಧಾರನಾಗುತ್ತಾನೆ.

ಇದರಂತೆ ಅನ್ನದಾನ, ಜಲದಾನಗಳು ಶ್ರೇಷ್ಠದಾನಗಳು ಎನಿಸುತ್ತವೆ. ಅನ್ನದಾನ ಮಾಡುವವನಿಗೆ ಎಲ್ಲ ದಾನಗಳ ಫಲಬರುವದು. ಅನ್ನದಾನ ಮಾಡಿದರೆ ಪ್ರಾಣದಾನ ಮಾಡಿದಂತೆಯೇ. ಅನ್ನದಾನ ಮಾಡಿದವನು ತನ್ನ ಕುಲಕೋಟಿ ಸಹಿತವಾಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಅನ್ನದಾನಕ್ಕಿಂತ ಜಲದಾನವು ಇನ್ನೂ ಹೆಚ್ಚು ಪುಣ್ಯಪ್ರದವು. ನೀರಿನಿಂದ ಆನಂದವೇ ಸಿದ್ಧಿಯಾಗುವದು. ಜಲದಾನ ಮಾಡುವದರಿಂದ ಉಪಪಾತಕ ಹಾಗೂ

ಮಹಾಪಾತಕಗಳು ನಾಶವಾಗುವವು. ಇದರಂತೆ ಅನ್ನದಾನದಿಂದಲೂ ಸದ್ಯಃ ತೃಪ್ತಿ. ಅನ್ನವನ್ನು ಹೊಟ್ಟೆ ತುಂಬ ಉಣಬಡಿಸಿದರೆ ಎಂತಹ ಭೋಕ್ತಾ ಮನುಶ್ಯನು ಕೂಡ ಹೊಟ್ಟೆ ತುಂಬಿದ ಬಳಿಕ ತೃಪ್ತನಾಗಿ ' ಸಾಕು ಸಾಕು ' ಎನ್ನುತ್ತಾನೆ. ಉಂಡ ಕೂಡಲೇ ಸಂಪೂರ್ಣ ತೃಪ್ತಿಯಾಗುವದು ಅನ್ನದಿಂದಲೇ. ಅನ್ನ ನೀಡುವವರ ಕುಲದಲ್ಲಿ ಹುಟ್ಟಿದವರು ನೂರಾರು ತಲೆಗಳವರೆಗೆ ನರಕವನ್ನೇ ನೋಡುವದಿಲ್ಲ. ಬೇನೆಯಿಂದ ನರಳುವ ಒಬ್ಬ ಮನುಷ್ಯನನ್ನು ಉಪಚರಿಸಿ ರಕ್ಷಣೆ ಮಾಡಿದರೆ, ತಮ್ಮ ಎಲ್ಲ ಪಾಪ ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುತ್ತಾರೆ. ಒಬ್ಬ ಯೋಗ್ಯ ಜ್ಞಾನಿಗೆ ಹಾಲು ಹಿಂಡುವ ಹಸುವನ್ನಾಗಲಿ, ಮನೆಯನ್ನಾಗಲಿ ಕೊಡುವವನೂ, ಸಾಲಂಕೃತ ಕನ್ಯಾದಾನ ಮಾಡುವವನೂ ಶಿವಲೋಕ, ಬ್ರಹ್ಮಲೋಕ, ವಿಷ್ಣುಲೋಕಗಳನ್ನು ಕ್ರಮೇಣ ಹೊಂದುವನು. ತನ್ನ ಐಶ್ವರ್ಯಕ್ಕನು ಗುಣವಾಗಿ ಕಾರ್ತಿಕ ಪೂರ್ಣಿಮಾ, ಆಷಾಢ ಪೂರ್ಣಿಮಾ ದಿನ, ಶಿವನ ಪ್ರೀತಿಗಾಗಿ ಗೂಳಿಯನ್ನು ಬಿಡುವವನು ಶಿವಲಿಂಗಾಕಾರವಾಗಿ ಬರೆಹಾಕಿ ಕೋಣವನ್ನು ಬಿಡುವವನು, ಎಂದೂ ನರಕವನ್ನು ನೋಡದೆ ಕೈಲಾಸದಲ್ಲಿ ರುದ್ರದೇವರ ಅನುಗ್ರಹಕ್ಕೆ ಪಾತ್ರನಾಗಿ ಕಲ್ಪಕಾಲದವರೆಗೆ ಸುಖವನ್ನು ಹೊಂದುವನು. ರಾಜಶ್ರೇಷ್ಠನೆ, ಇದರಂತೆ ಹಾಲು, ತುಪ್ಪ, ಜೇನು, ಮೊಸರು, ಕಬ್ಬಿನ ಹಾಲು, ತಾಂಬೂಲ, ಬೆಲ್ಲ, ಗಂಧ, ನೀರು ಮೊದಲಾದವು ಗಳನ್ನು ಸತ್ಪಾತ್ರದಲ್ಲಿ ನೀಡುವವನು ಶ್ರೀ ಹರಿಯ ಸಾಯುಜ್ಯ ರೂಪವಾದ ಸೌಭಾಗ್ಯವನ್ನು ಪಡೆಯುತ್ತಾನೆ. ಇದರಂತೆ ವಿದ್ಯಾದಾನ, ಗೋದಾನ, ಭೂದಾನ - ಈ ಮೂರು ದಾನ ಮಾಡುವವನಿಗೆ ನರಕವೇ ಇಲ್ಲ.

ಸರ್ವೇಷಾಮಪಿ ದಾನಾನಾಂ ವಿದ್ಯಾದಾನಂ ವಿಶಿಷ್ಯತೇ ।
ವಿದ್ಯಾದಾನೇನ ಸಾಯುಜ್ಯಂ ಮಾಧವಸ್ಯ ವ್ರಜೇನ್ನರಃ ॥

ಸಕಲ ದಾನಗಳಲ್ಲಿಯೂ ವಿದ್ಯಾದಾನ ಶ್ರೇಷ್ಠ. ವಿದ್ಯಾದಾನ ಮಾಡುವ ಮನುಷ್ಯನಿಗೆ ಲಕ್ಷ್ಮೀಪತಿಯ ಸಾಯುಜ್ಯ ಪದವಿ ದೊರೆಯುತ್ತದೆ. ಇದೇ ಪ್ರಕಾರ ಶಾಲಿಗ್ರಾಮ ದಾನವು ಎಲ್ಲ ದಾನಗಳಿಗಿಂತ ಶ್ರೇಷ್ಠವಾದ ಮಹಾದಾನ ಎಂದು ಕರೆಯಲ್ಪಡುತ್ತದೆ. ಇಂತಹ ಶಾಲಿಗ್ರಾಮ ದಾನದಿಂದ ಗಂಗಾಸ್ನಾನದ ಪುಣ್ಯವು ಬರುತ್ತದೆ. ಇದೇ ರೀತಿಯಾಗಿ ರತ್ನದಿಂದ ಕೂಡಿದ ಸುವರ್ಣದಾನ, ಮಾಣಿಕ್ಯದಾನ, ಮುಂತಾದವುಗಳಿಂದ ಮೋಕ್ಷ. ವಜ್ರದಾನದಿಂದ ಧ್ರುವಲೋಕ, ಹವಳ ದಾನದಿಂದ ಸ್ವರ್ಗಲೋಕ, ಚಕ್ಕಡಿ ಮುಂತಾದ ವಾಹನಗಳ ದಾನದಿಂದ ರುದ್ರಲೋಕ, ವೈಢೂರ್ಯದಾನದಿಂದ ಚಂದ್ರಲೋಕ, ಪುಷ್ಯರಾಗದಿಂದ ಕೈಲಾಸ, ಆಭರಣದಾನದಿಂದ ಎಲ್ಲಿದ್ದರೂ ಸುಖ. ಪಲ್ಲಕ್ಕಿದಾನದಿಂದ ಸ್ವರ್ಗಲೋಕ. ಹಿಂಡುವ ಎಮ್ಮೆಯ ದಾನದಿಂದ ಅಪಮೃತ್ಯು ದೂರ. ಗೋಗ್ರಾಸ., ''ಹಸುಗಳಿಗೆ ಹುಲ್ಲು ಮುಂತಾದ್ದು'' ಮತ್ತು ಉಪ್ಪುದಾನದಿಂದ ವರುಣಲೋಕ ಮುಂತಾದವುಗಳು ಪ್ರಾಪ್ತವಾಗುವವು.

ವೇದಾಂತ ತತ್ವಗಳನ್ನು ಉಪದೇಶ ಮಾಡುವವರು, ಪ್ರತಿನಿತ್ಯ ಶಾಸ್ತ್ರೋಕ್ತ ದೇವರ ಪೂಜೆ ಮಾಡುವವರು, ಇಂದ್ರಿಯಗಳನ್ನು ನಿಗ್ರಹಿಸುವವರು, ಮಿತಾಹಾರ ಉಣ್ಣುವವರು, ಅಗ್ನಿಕಾರ್ಯ ಮಾಡುವವರು, ಗುರುಸೇವೆ ಗೈಯುವವರು, ಹಗಲಿರುಳು ಹರಿನಾಮ ಸಂಕೀರ್ತನೆ ಮಾಡುವವರು, ದಾನವನ್ನು ಸ್ವೀಕರಿಸಿದವರು, ದಿಕ್ಕಿಲ್ಲದ ದರಿದ್ರರು ಸತ್ತಾಗ ಶವ ಸಂಸ್ಕಾರ ಮಾಡಿಸುವವರು, ಅಶ್ವಮೇಧಾದಿಯಾಗ ಮಾಡಿದ ಪುಣ್ಯ ಪಡೆಯುತ್ತಾರೆ.

ಪೂಜೆಯಿಲ್ಲದೆ, ಇದ್ದ ಹಾಳು ಗುಡಿ, ಬಯಲು ಜಾಗಗಳಲ್ಲಿ ಇರುವ ಮಹಾದೇವರ ಲಿಂಗವನ್ನು ನೀರು, ಹೂ, ಹಣ್ಣು, ಪತ್ರಿ ಏರಿಸಿ ಪೂಜಿಸುವವರು, ಗಂಧರ್ವ ಅಪ್ಸರೆಯರಿಂದ ಹೊಗಳಿಸಿಕೊಂಡು ವಿಮಾನಾರಾಢರಾಗಿ ಈಶ್ವರನ ಬಳಿಗೆ ಪ್ರಯಾಣ ಮಾಡುತ್ತಾರೆ.

ಪೂಜೆ ಇಲ್ಲದೆ ಕುಳಿತಿರುವ ಶ್ರೀ ಹರಿಯ ಮೂರ್ತಿ, ಶಾಲಿಗ್ರಾಮಗಳನ್ನು ಅಭಿಷೇಕ ಮಾಡುವವನೂ, ವಿಷ್ಣು ಮಂದಿರದಲ್ಲಿ ಕಸಗುಡಿಸುವವನೂ, ನೀರಿನಿಂದ ದೇವಾಲಯವನ್ನು ಸಾರಿಸುವವನೂ, ಮಣ್ಣು, ಸುಣ್ಣ, ಬಣ್ಣಗಳಿಂದ ಹರಿ, ಹರ ದೇವಾಲಯಗಳನ್ನು ಶೃಂಗರಿಸುವವನೂ, ದೇವಸ್ಥಾನದ ಮುಂದೆ ರಂಗವಲ್ಲಿಗಳಿಂದ ಶೃಂಗರಿಸುವವನೂ, ದೀಪ ಹಚ್ಚುವವನೂ, ನಿರಂತರ ನಂದಾದೀಪ ಇರಿಸುವವನೂ, ನಮಸ್ಕಾರ ಪ್ರದಕ್ಷಿಣೆ ಮಾಡುವವನೂ ಶಿವಲೋಕ, ವಿಷ್ಣುಲೋಕಗಳಿಗೆ ಹೋಗಿ ಯುಗಯುಗಗಳವರೆಗೆ ಸುಖೋಪಭೋಗಗಳನ್ನು ಅನುಭವಿಸುತ್ತಾನೆ. ವಿಷ್ಣು, ಗೋ, ದ್ವಿಜ ಹಾಗೂ ದೇವಾಲಯ ಇವುಗಳಿಗೆ ಪ್ರದಕ್ಷಿಣೆ ನಮಸ್ಕಾರ ಮಾಡುವವನು ಹೆಜ್ಜೆ ಹೆಜ್ಜೆಗೆ ಅಶ್ವಮೇಧದ ಫಲ ಹೊಂದುತ್ತಾನೆ. ಕಾಶೀ ಕ್ಷೇತ್ರದಲ್ಲಿ ಮಹೇಶ್ವರನ ಲಿಂಗವನ್ನು ಪೂಜೆಮಾಡಿ ನಮಸ್ಕಾರ ಮಾಡಿದರೆ ಆ ಮನುಷ್ಯನಿಗೆ ಪುನಃ ಸಂಸಾರದ ಬಂಧನವಿಲ್ಲ ಎಂದು ಈ ಮುಂದಿನ ಪದ್ಯದಲ್ಲಿ ಹೇಳಲಾಗಿದೆ.

**ಕಾಶ್ಯಾಂ ಮಾಹೇಶ್ವರಂ ಲಿಂಗಂ ಸಂಪೂಜ್ಯ ಪ್ರಣಮೇತ್ತು ಯಃ ।**
**ನ ತಸ್ಯ ವಿದ್ಯತೇ ಕೃತ್ಯಂ ಸಂಸೃತಿರ್ನೈವ ಜಾಯತೇ ॥**

ಮಹಾದೇವರ ಪ್ರದಕ್ಷಿಣೆಯನ್ನು ಸವ್ಯಾಸವ್ಯ ವಿಧಾನದಿಂದ ಮಾಡಿದ ಮನುಷ್ಯನಿಗೆ ಸ್ವರ್ಗಲೋಕದಿಂದ ಎಂದಿಗೂ ಚ್ಯುತಿಯೇ ಇಲ್ಲ.

**ಶಿವಂ ಪ್ರದಕ್ಷಿಣಂ ಕೃತ್ವಾ ಸವ್ಯಾಽಸವ್ಯ ವಿಧಾನತಃ ।**
**ನರೋ ನ ಚ್ಯವತೇ ಸ್ವರ್ಗಾಚ್ಛಂಕರಸ್ಯ ಪ್ರಸಾದತಃ ॥**

ಮಹಾದೇವರ ಪ್ರದಕ್ಷಿಣೆಯಲ್ಲಿ ಸವ್ಯಾಸವ್ಯ ವಿಧಾನವೆಂದರೆ - ದೇವಸ್ಥಾನದ ಪ್ರಾಕಾರದಲ್ಲಿ ಎಡಭಾಗದಿಂದ ಅರ್ಧಕ್ಕೆ ಹೋಗಿ ಹಿಂತಿರುಗಿ ಬಲಭಾಗದಿಂದ ಸುತ್ತಿಕೊಂಡು ಅಲ್ಲಿಯವರೆಗೆ ಹೋಗಿ ಬರುವದು. ಭಕ್ತಿಯಿಂದ ಹರಿಮಂದಿರದಲ್ಲಿ ನಾರಾಯಣನ ಸ್ತೋತ್ರಗಳನ್ನು ಹೇಳುವವನೂ, ದೇವಾಲಯದಲ್ಲಿ ಸಂಗೀತಸೇವೆ ಸಲ್ಲಿಸುವವನೂ, ಕೊಳಲು, ವೀಣೆ, ಕೊಂಬು, ಭಜಂತ್ರಿ ಮುಂತಾದ ವಾದ್ಯಬಾರಿಸುವವನೂ, ಗಂಟೆಬಾರಿಸುವವನೂ, ಚಪ್ಪಾಳೆ ಹೊಡೆಯುವವನೂ, ದೇವರ ಪೂಜೆ ವೇಳೆಯಲ್ಲಿ ನಗಾರಿ, ತಮ್ಮಟೆ, ಮದ್ದಳೆ, ತಾಳ, ಜಾಗಟೆ, ಡುಮಕಿ ಮುಂತಾದವುಗಳನ್ನು ಬಾರಿಸುವವನೂ, ಶಂಖ ಊದುವವನೂ ತನ್ನ ಸರ್ವ ಪಾಪ ಕಳೆದುಕೊಂಡು, ಸ್ವರ್ಗದಲ್ಲಿ ಬಹುಕಾಲ ಸುಖ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುತ್ತಾರೆ.

**ಯಸ್ಯ ಸ್ಮರಣಮಾತ್ರೇಣ ದೇವದೇವಸ್ಯ ಚಕ್ರಿಣಃ ।**
**ಸಫಲಾನಿ ಭವಂತ್ಯೇವ ಸರ್ವಕರ್ಮಾಣಿ ಭೂಪತೇ ॥**

ದೇವದೇವೋತ್ತಮನಾದ ಯಾವ ಶ್ರೀಹರಿಯ ಸ್ಮರಣ ಮಾತ್ರದಿಂದಲೇ ಮನುಷ್ಯರು ಮಾಡುವ ಎಲ್ಲ ಕರ್ಮಫಲಗಳು ಸಫಲವಾಗುತ್ತವೆಯೋ, ಅಂತಹ ಜಗನ್ನಾಥನಾದ

ಪರಮಾತ್ಮನೇ, ನರರು ಮಾಡುವ ಎಲ್ಲ ಕರ್ಮಗಳಿಗೂ ಮೇಲೆ ಹೇಳಿದ ಎಲ್ಲ ಪುಣ್ಯಗಳನ್ನು ಪ್ರದಾನ ಮಾಡುವನು. ಆದುದರಿಂದ ಮನುಷ್ಯರು ಯಾವುದೇ ಕರ್ಮಮಾಡಿದರೂ

'ತಮುದಿಶ್ಯ ಕೃತ್ವಾ ತದಾನಂತ್ಯಾಯ ಕಲ್ಪತೇ'

ಆ ಶ್ರೀ ಹರಿಯನ್ನು ಉದ್ದೇಶಿಸಿಯೇ ಅರ್ಪಿಸಬೇಕು. ಅವನಿಗೆ ಅರ್ಪಿಸಿದ ಎಲ್ಲ ಪೂಜೆಗಳು ಅನಂತ ಫಲಕ್ಕೆ ಕಾರಣವಾಗುತ್ತವೆ.

**ಧರ್ಮಶ್ಚ ವಿಷ್ಣುಃ ಸಕಲಾನಿ ವಿಷ್ಣುಃ ।**
**ಕರ್ಮಾಣಿ ವಿಷ್ಣುಶ್ಚ ಫಲಾನಿ ಭೋಕ್ತಾ ॥**
**ಕಾರ್ಯಂ ಚ ವಿಷ್ಣುಃ ಕರಣಾನಿ ವಿಷ್ಣುಃ ।**
**ತಸ್ಮಾನ್ನ ಕಿಂಚಿದ್ವ್ಯತಿರಿಕ್ತಮಸ್ತಿ॥**

ನಾವು ಮಾಡುವ ಧರ್ಮ, ಆಚರಿಸುವ ಕರ್ಮ, ಅವುಗಳ ಫಲ, ಎಲ್ಲವೂ ವಿಷ್ಣುವಿನ ಅಧೀನ. ಆದುದರಿಂದ ಅವೆಲ್ಲವೂ ವಿಷ್ಣು ರೂಪವೆಂದೇ ಹೇಳಲ್ಪಡುತ್ತವೆ. ಧರ್ಮವೂ ವಿಷ್ಣು, ಕರ್ಮವೂ ವಿಷ್ಣು, ಆ ಫಲಭೋಗವೂ ವಿಷ್ಣು, ಕಾರ್ಯವೂ ವಿಷ್ಣು, ಕರಣ, ಕಾರಣಗಳೂ ವಿಷ್ಣು ಎಂದರೆ ಎಲ್ಲವೂ ಅವನ ಅಧೀನ. ಅವನೇ ಸರ್ವ ಸಾರ ಭೋಕ್ತಾ. ಅವನಿಗೆ ಅಧೀನವಾಗದಿರುವ ಸ್ವತಂತ್ರವಾದ ಬೇರೆ ವಸ್ತುವಿಲ್ಲ. ಅವನೊಬ್ಬನೇ ಸರ್ವತಂತ್ರ ಸ್ವತಂತ್ರನು. ಆದುದರಿಂದ ನಾವು ಮಾಡುವ ಸರ್ವಕರ್ಮಗಳನ್ನು 'ಶ್ರೀ ವಿಷ್ಣು ಪ್ರೇರಣಯಾ, ಶ್ರೀ ವಿಷ್ಣು ಪ್ರೀತ್ಯರ್ಥಂ' ಎಂದು ಸಂಕಲ್ಪಿಸಿ ಅರ್ಪಿಸಬೇಕು. ಅದರಿಂದ ಅವನು ನಾವು ಮಾಡಿದ ಅಲ್ಪಕರ್ಮಗಳಿಗೆಲ್ಲ ಅನಂತಾನಂತ ಫಲ ನೀಡುವನು.

ನಾರದ ಮಹಾಪುರಾಣದಲ್ಲಿ ಹದಿಮೂರನೇಯ ಅಧ್ಯಾಯ ಮುಗಿದುದು



## ಧರ್ಮಶಾಂತಿಕಥನ

## ಅಧ್ಯಾಯ - ೧೪

**ಯಮಧರ್ಮ:-** ವೇದಶಾಸ್ತ್ರಗಳಲ್ಲಿ ಹೇಳಿದ ವರ್ಣಧರ್ಮ. ಆಶ್ರಮ ಧರ್ಮಗಳನ್ನು ಕ್ರಮವಾಗಿ ಹೇಳುತ್ತೇನೆ. ರಾಜಶ್ರೇಷ್ಠನೇ, ನೀನು ಸಮಾಧಾನದಿಂದ ಕೇಳು, ವ್ಯಭಿಚಾರ ಮದ್ಯಪಾನ, ಕೊಲೆ, ಕಳವು, ಗೋಮಾಂಸ ಭಕ್ಷಣಾದಿಗಳಿಂದ ಪತಿತನಾದವನನ್ನು ಊಟ ಮಾಡುವಾಗ ತಿಳಿಯದೇ ಮುಟ್ಟಿದರೆ, ಅಥವಾ ಸಿಟ್ಟಿನಿಂದ ಸ್ಪರ್ಶ ಮಾಡಿದರೆ ಮೂರು ದಿನ ತ್ರಿಕಾಲ ಸ್ನಾನ ಮಾಡಿ ಪಂಚಗವ್ಯ ತೆಗೆದುಕೊಂಡರೆ ಶುದ್ಧನಾಗುತ್ತಾನೆ. ಪಂಚಗವ್ಯ (ಹಸುವಿನ ಹಾಲು, ಮೊಸರು, ತುಪ್ಪ, ಮೂತ್ರ, ಮಲ ಎಲ್ಲ ಕೂಡಿಸಿ ಇಟ್ಟದ್ದು) ಊಟ ಮಾಡುವಾಗಲೆ ಬ್ರಾಹ್ಮಣನಿಗೆ ಒಂದು ವೇಳೆ ಗುದದ್ವಾರದಿಂದ ಮಲ ವಿಸರ್ಜನೆಯಾದರೆ ಕೂಡಲೇ ಎದ್ದು ಬಹಿರ್ದೇಶಕ್ಕೆ ಹೋಗಿ, ಶುದ್ಧ ಮಾಡಿಕೊಂಡು ಒಂದು ದಿನ ಉಪವಾಸ ಮಾಡಿ ಪಂಚಗವ್ಯ ತೆಗೆದುಕೊಳ್ಳಬೇಕು. ಭೋಜನ ಮಾಡುವಾಗ ಅಥವಾ ಅನಂತರ ರೇತಃಪಾತವಾದರೆ ಒಂದು ದಿನ ಉಪವಾಸ ಮಾಡಿ ತುಪ್ಪದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು.

ಊಟ ಮಾಡುವಾಗ ವಿಪ್ರನಿಗೆ ಮೈಲಿಗೆ ಆದರೆ, ಕೈಯಲ್ಲಿಯ ತುತ್ತನ್ನು ಅಲ್ಲಿಯೇ ಇಟ್ಟು ಸ್ನಾನ ಮಾಡಿದರೆ ಶುದ್ಧಿ. ಕೈಯಲ್ಲಿ ತೆಗೆದುಕೊಂಡ ತುತ್ತನ್ನು ಹಾಗೆಯೇ ಉಂಡರೆ, ಪ್ರಾಯಶ್ಚಿತ್ತಕ್ಕಾಗಿ ಮರುದಿನ ಊಟ ಮಾಡಬೇಕು. ಮೈಲಿಗೆ ಊಟ ಉಂಡರೆ ಪುನಃ ಮೂರು ದಿನ ಮೈಲಿಗೆ ಇದ್ದಂತೆ. ಯಾವ ಶುದ್ಧ ಕಾರ್ಯಕ್ಕೂ ಅವನಿಗೆ ಅಧಿಕಾರವಿಲ್ಲ. ಊಟ ಮಾಡುವಾಗ ವಾಂತಿ ಆದರೆ ಮುನ್ನೂರು ಸಲ ಮರುದಿನ ಸ್ನಾನ, ನಂತರ ಗಾಯತ್ರೀ ಮಂತ್ರ ಪಠಿಸಬೇಕು. ಮುಟ್ಟಾದ ಹೆಂಗಸು, ನಾಯಿ, ಕಾಗೆ, ಕತ್ತೆ ಮುಂತಾದವುಗಳನ್ನು ಮುಟ್ಟಿದ್ದರೆ ಸ್ನಾನ ಮಾಡಿ ಶುದ್ಧರಾಗಬೇಕು. ಮುಟ್ಟಾದ ಹೆಂಗಸರು ಒಬ್ಬರನ್ನೊಬ್ಬರು ಮುಟ್ಟಬಾರದು. ಮುಟ್ಟು ಕಾಲದಲ್ಲಿ ಸ್ತ್ರೀ ಭೋಗ ಮಾಡಿದವನು ಮೃತ್ತಿಕಾ ಶೌಚಾದಿಗಳನು ಮಾಡಿಕೊಂಡು ಸ್ನಾನ ಮಾಡಬೇಕು. ಭೋಗಕಾಲದಲ್ಲಿ ದಂಪತಿ ಗಳಿಬ್ಬರೂ ಅಶುದ್ಧರಾಗಿರುತ್ತಾರೆ. ಆದರೆ -

'ಶಯನಾದುತ್ಥಿತಾ ನಾರೀ ಶುಚಿಃ ಸ್ಯಾದಶುಚಿಃ ಪುಮಾನ್'

ಹಾಸಿಗೆ ಬಿಟ್ಟು ಎದ್ದು ಹೋದ ಸ್ತ್ರೀಯು ಶುದ್ಧಳು. ಪುರುಷನು ಮಾತ್ರ ಅಶುದ್ಧನು. ಅವನು ಸ್ನಾನ ಮಾಡಿದ ಬಳಿಕವೇ ಮುಂದಿನ ಕಾರ್ಯಗಳಿಗೆ ಅರ್ಹನಾಗುತ್ತಾನೆ. ಗಂಡನ ಸೇವೆ ಮಾಡದೆ, ದುಷ್ಟ ಬುದ್ಧಿಯಿಂದ ಬಿರುನುಡಿಗಳನ್ನಾಡಿ ಪತಿಯ ಮನಸ್ಸನ್ನು ನೋಯಿಸುವ ಹೆಣ್ಣು ಮಗಳನ್ನು ಶಿಕ್ಷಿಸಬೇಕು. ಅವಳನ್ನು ಒಂದು ವರ್ಷದಲ್ಲಿ ಹನ್ನೆರಡು ಸಲ ಮನೆಬಿಟ್ಟು ಹೊರ ಹಾಕಬೇಕು. ಆದರೆ ಉಪ ಜೀವನಕ್ಕೆ ಹಣವನ್ನು ಮಾತ್ರ ಬೇಕಾಗುವಷ್ಟು ಕೊಡಬೇಕು. ಅರ್ಥಾತ್ ಅವಳನ್ನು ತಾನೇ ತನ್ನ ಮೇಲ್ವಿಚಾರಣೆಯಲ್ಲಿ ಬೇರೆ ಮನೆಯಲ್ಲಿಟ್ಟು ಅವಳ ಹೊಟ್ಟೆ ಬಟ್ಟೆ ನಡೆಸಬೇಕು. ಮದ್ಯಪಾನ, ಮಾಂಸಭಕ್ಷಣ, ವ್ಯಭಿಚಾರ ಮುಂತಾದ ಪಾಪಗಳಿಂದ ಪತಿತರಾದ ಬಂಧುಗಳನ್ನು ಬಿಟ್ಟು ಬಿಡಬೇಕು. ಪತಿತರಾದರೆ ತಂದೆಯನ್ನು ಕೂಡ ಬಿಡಬೇಕು. ಆದರೆ-

ಪಿತಾ ಹಿ ಪತಿತಃ ಕಾಮಂ ನ ತು ಮಾತಾ ಕದಾಚನ'

ತಾಯಿಮಾತ್ರ ಎಷ್ಟೇ ಪಾಪ ಮಾಡಿದರೂ ಅವಳನ್ನು ಬಿಡತಕ್ಕದ್ದಲ್ಲ. ಬೆಂಕಿ, ನೀರು, ನೇಣುಗಳಿಂದ ಆತ್ಮ ಹತ್ಯೆಗಾಗಿ ಪ್ರಯತ್ನ ಮಾಡಿದರೂ ಸಾಯದೇ ಇರುವವರು, ಸನ್ಯಾಸಿಯಾಗಿ ದುರಾಚಾರದಿಂದ ಧರ್ಮಭ್ರಷ್ಟರಾದವರು ಸಹಭೋಜನಕ್ಕೆ ಅಪಾತ್ರರು. ಅವರಿಗೆ ಎಲ್ಲರೂ ಬಹಿಷ್ಕಾರ ಹಾಕಬೇಕು. ಅಂತಹ ಮಹಾಪಾಪ 'ಚಾಂದ್ರಯಣ' ಅಥವಾ ತಪ್ತಕೃಚ್ಛ ಎಂಬ ವ್ರತ ಮಾಡಿಸಿ ಶುದ್ಧರಾದ ಬಳಿಕ ಅವರ ಜೊತೆಗೆ ಪಂಕ್ತಿ ವ್ಯವಹಾರಾದಿಗಳನ್ನು ಮಾಡಬಹುದು. ಮರ, ಬೆಟ್ಟಗಳಿಂದ ಬಿದ್ದು, ಖಡ್ಗಬಾಣಗಳಿಂದ ತಿವಿದುಕೊಂಡು, ಸಾಯಲು ಪ್ರಯತ್ನಿಸಿ ಬದುಕಿರುವವರು ಎರಡು 'ಚಾಂದ್ರಾಯಣ' ಮಾಡಿ ಶುದ್ಧನಾಗಬೇಕು. ನಾಯಿ, ನರಿ, ಕತ್ತೆ, ಕೋತಿ ಮುಂತಾದ ಪ್ರಾಣಗಳನ್ನು ಮುಟ್ಟಿದರೆ ತಕ್ಷಣ ಸ್ನಾನಮಾಡಿ ಶುದ್ಧ ನಾಗಬೇಕು. ಜ್ಞಾನಪೂರ್ವಕವಾಗಿ ಚಂಡಾಲ ಮುಂತಾದ ಕೀಳು ಜಾತಿಯ ಹೆಂಗಸರನ್ನು ಬಲತ್ಕಾರದಿಂದ ಭೋಗಿಸುವವನು ಕೃಚ್ಛಾರ್ಧ' ಎಂದರೆ ಆರುದಿನ ಮಾಡುವ 'ಕೃಚ್ಛ್ರ' ವ್ರತವನ್ನೂ, ಅಜ್ಞಾನದಿಂದ ಮಾಡಿದವನು ಎರಡು 'ಚಾಂದ್ರಾಯಣ' ವ್ರತಗಳನ್ನೂ ಮಾಡಬೇಕು.

---

*(ತಪ್ತಕೃಚ್ಛವೆಂದರೆ - ತ್ರ್ಯಹಮುಷ್ಣಾಃ ಪಿಬೇದಾಪಃ ತ್ರ್ಯಹ ಮುಷ್ಣಂ ಘೃತಂ ಪಿಬೇತ್ । ತ್ರ್ಯ ಮುಷ್ಣಂ ಪಯಃ ಪೀತ್ವಾ ವಾಯು ಭಕ್ಷ್ಯೋ ದಿನ ತ್ರಯಂ ॥ ಎಂಬ ವಚನಾನುಸಾರವಾಗಿ, ಮೂರು ದಿವಸ ಬಿಸಿನೀರು, ಮೂರು ದಿನ ಕಾಯಿಸಿ ಬಿಸಿಯಾಗಿರುವ ತುಪ್ಪ ಮಾತ್ರ, ಮೂರು ದಿವಸ ಕಾಯಿಸಿ ಬಿಸಿಯಾಗಿರುವ ಹಾಲು ಮಾತ್ರ ಈ ಪ್ರಕಾರ ಒಂಬತ್ತು ದಿವಸಗಳು ಆಹಾರ ಸೇವಿಸಿ ತರುವಾಯ ಮೂರು ದಿವಸಗಳು ಕೇವಲ ವಾಯುಸೇವನೆಯಿಂದ ಉಪವಾಸ ಮಾಡುವ ವ್ರತವು.

ಪರಮಾತ್ಮನೇ, ನರರು ಮಾಡುವ ಎಲ್ಲ ಕರ್ಮಗಳಿಗೂ ಮೇಲೆ ಹೇಳಿದ ಎಲ್ಲ ಪುಣ್ಯಗಳನ್ನು ಪ್ರದಾನ ಮಾಡುವನು. ಆದುದರಿಂದ ಮನುಷ್ಯರು ಯಾವುದೇ ಕರ್ಮಮಾಡಿದರೂ

'ತಮುದಿಶ್ಯ ಕೃತ್ವಾ ತದಾನಂತ್ಯಾಯ ಕಲ್ಪತೇ'

ಆ ಶ್ರೀ ಹರಿಯನ್ನು ಉದ್ದೇಶಿಸಿಯೇ ಅರ್ಪಿಸಬೇಕು. ಅವನಿಗೆ ಅರ್ಪಿಸಿದ ಎಲ್ಲ ಪೂಜೆಗಳು ಅನಂತ ಫಲಕ್ಕೆ ಕಾರಣವಾಗುತ್ತವೆ.

**ಧರ್ಮಶ್ಚ ವಿಷ್ಣುಃ ಸಕಲಾನಿ ವಿಷ್ಣುಃ ।**
**ಕರ್ಮಾಣಿ ವಿಷ್ಣುಶ್ಚ ಫಲಾನಿ ಭೋಕ್ತಾ ॥**
**ಕಾರ್ಯಂ ಚ ವಿಷ್ಣುಃ ಕರಣಾನಿ ವಿಷ್ಣುಃ ।**
**ತಸ್ಮಾನ್ನ ಕಿಂಚಿದ್ವ್ಯತಿರಿಕ್ತಮಸ್ತಿ॥**

ನಾವು ಮಾಡುವ ಧರ್ಮ, ಆಚರಿಸುವ ಕರ್ಮ, ಅವುಗಳ ಫಲ, ಎಲ್ಲವೂ ವಿಷ್ಣುವಿನ ಅಧೀನ. ಆದುದರಿಂದ ಅವೆಲ್ಲವೂ ವಿಷ್ಣು ರೂಪವೆಂದೇ ಹೇಳಲ್ಪಡುತ್ತವೆ. ಧರ್ಮವೂ ವಿಷ್ಣು, ಕರ್ಮವೂ ವಿಷ್ಣು, ಆ ಫಲಭೋಗವೂ ವಿಷ್ಣು, ಕಾರ್ಯವೂ ವಿಷ್ಣು, ಕರಣ, ಕಾರಣಗಳೂ ವಿಷ್ಣು ಎಂದರೆ ಎಲ್ಲವೂ ಅವನ ಅಧೀನ. ಅವನೇ ಸರ್ವ ಸಾರ ಭೋಕ್ತಾ. ಅವನಿಗೆ ಅಧೀನವಾಗದಿರುವ ಸ್ವತಂತ್ರವಾದ ಬೇರೆ ವಸ್ತುವಿಲ್ಲ. ಅವನೊಬ್ಬನೇ ಸರ್ವತಂತ್ರ ಸ್ವತಂತ್ರನು. ಆದುದರಿಂದ ನಾವು ಮಾಡುವ ಸರ್ವಕರ್ಮಗಳನ್ನು 'ಶ್ರೀ ವಿಷ್ಣು ಪ್ರೇರಣಯಾ, ಶ್ರೀ ವಿಷ್ಣು ಪ್ರೀತ್ಯರ್ಥಂ' ಎಂದು ಸಂಕಲ್ಪಿಸಿ ಅರ್ಪಿಸಬೇಕು. ಅದರಿಂದ ಅವನು ನಾವು ಮಾಡಿದ ಅಲ್ಪಕರ್ಮಗಳಿಗೆಲ್ಲ ಅನಂತಾನಂತ ಫಲ ನೀಡುವನು.

ನಾರದ ಮಹಾಪುರಾಣದಲ್ಲಿ ಹದಿಮೂರನೇಯ ಅಧ್ಯಾಯ ಮುಗಿದುದು



## ಧರ್ಮಶಾಂತಿಕಥನ

**ಅಧ್ಯಾಯ - ೧೪**

**ಯಮಧರ್ಮ:-** ವೇದಶಾಸ್ತ್ರಗಳಲ್ಲಿ ಹೇಳಿದ ವರ್ಣಧರ್ಮ. ಆಶ್ರಮ ಧರ್ಮಗಳನ್ನು ಕ್ರಮವಾಗಿ ಹೇಳುತ್ತೇನೆ. ರಾಜಶ್ರೇಷ್ಠನೇ, ನೀನು ಸಮಾಧಾನದಿಂದ ಕೇಳು, ವ್ಯಭಿಚಾರ ಮದ್ಯಪಾನ, ಕೊಲೆ, ಕಳವು, ಗೋಮಾಂಸ ಭಕ್ಷಣಾದಿಗಳಿಂದ ಪತಿತನಾದವನನ್ನು ಊಟ ಮಾಡುವಾಗ ತಿಳಿಯದೇ ಮುಟ್ಟಿದರೆ, ಅಥವಾ ಸಿಟ್ಟಿನಿಂದ ಸ್ಪರ್ಶ ಮಾಡಿದರೆ ಮೂರು ದಿನ ತ್ರಿಕಾಲ ಸ್ನಾನ ಮಾಡಿ ಪಂಚಗವ್ಯ ತೆಗೆದುಕೊಂಡರೆ ಶುದ್ಧನಾಗುತ್ತಾನೆ. ಪಂಚಗವ್ಯ (ಹಸುವಿನ ಹಾಲು, ಮೊಸರು, ತುಪ್ಪ, ಮೂತ್ರ, ಮಲ ಎಲ್ಲ ಕೂಡಿಸಿ ಇಟ್ಟದ್ದು) ಊಟ ಮಾಡುವಾಗಲೆ ಬ್ರಾಹ್ಮಣನಿಗೆ ಒಂದು ವೇಳೆ ಗುದದ್ವಾರದಿಂದ ಮಲ ವಿಸರ್ಜನೆಯಾದರೆ ಕೂಡಲೇ ಎದ್ದು ಬಹಿರ್ದೇಶಕ್ಕೆ ಹೋಗಿ, ಶುದ್ಧ ಮಾಡಿಕೊಂಡು ಒಂದು ದಿನ ಉಪವಾಸ ಮಾಡಿ ಪಂಚಗವ್ಯ ತೆಗೆದುಕೊಳ್ಳಬೇಕು. ಭೋಜನ ಮಾಡುವಾಗ ಅಥವಾ ಅನಂತರ ರೇತಃಪಾತವಾದರೆ ಒಂದು ದಿನ ಉಪವಾಸ ಮಾಡಿ ತುಪ್ಪದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು.

ಊಟ ಮಾಡುವಾಗ ವಿಪ್ರನಿಗೆ ಮೈಲಿಗೆ ಆದರೆ, ಕೈಯಲ್ಲಿಯ ತುತ್ತನ್ನು ಅಲ್ಲಿಯೇ ಇಟ್ಟು ಸ್ನಾನ ಮಾಡಿದರೆ ಶುದ್ಧಿ. ಕೈಯಲ್ಲಿ ತೆಗೆದುಕೊಂಡ ತುತ್ತನ್ನು ಹಾಗೆಯೇ ಉಂಡರೆ, ಪ್ರಾಯಶ್ಚಿತ್ತಕ್ಕಾಗಿ ಮರುದಿನ ಊಟ ಮಾಡಬೇಕು. ಮೈಲಿಗೆ ಊಟ ಉಂಡರೆ ಪುನಃ ಮೂರು ದಿನ ಮೈಲಿಗೆ ಇದ್ದಂತೆ. ಯಾವ ಶುದ್ಧ ಕಾರ್ಯಕ್ಕೂ ಅವನಿಗೆ ಅಧಿಕಾರವಿಲ್ಲ. ಊಟ ಮಾಡುವಾಗ ವಾಂತಿ ಆದರೆ ಮುನ್ನೂರು ಸಲ ಮರುದಿನ ಸ್ನಾನ, ನಂತರ ಗಾಯತ್ರೀ ಮಂತ್ರ ಪಠಿಸಬೇಕು. ಮುಟ್ಟಾದ ಹೆಂಗಸು, ನಾಯಿ, ಕಾಗೆ, ಕತ್ತೆ ಮುಂತಾದವುಗಳನ್ನು ಮುಟ್ಟಿದ್ದರೆ ಸ್ನಾನ ಮಾಡಿ ಶುದ್ಧರಾಗಬೇಕು. ಮುಟ್ಟಾದ ಹೆಂಗಸರು ಒಬ್ಬರನ್ನೊಬ್ಬರು ಮುಟ್ಟಬಾರದು. ಮುಟ್ಟು ಕಾಲದಲ್ಲಿ ಸ್ತ್ರೀ ಭೋಗ ಮಾಡಿದವನು ಮೃತ್ತಿಕಾ ಶೌಚಾದಿಗಳನು ಮಾಡಿಕೊಂಡು ಸ್ನಾನ ಮಾಡಬೇಕು. ಭೋಗಕಾಲದಲ್ಲಿ ದಂಪತಿ ಗಳಿಬ್ಬರೂ ಅಶುದ್ಧರಾಗಿರುತ್ತಾರೆ. ಆದರೆ -

**'ಶಯನಾದುತ್ಥಿತಾ ನಾರೀ ಶುಚಿಃ ಸ್ಯಾದಶುಚಿಃ ಪುಮಾನ್'**

ಹಾಸಿಗೆ ಬಿಟ್ಟು ಎದ್ದು ಹೋದ ಸ್ತ್ರೀಯು ಶುದ್ಧಳು. ಪುರುಷನು ಮಾತ್ರ ಅಶುದ್ಧನು. ಅವನು ಸ್ನಾನ ಮಾಡಿದ ಬಳಿಕವೇ ಮುಂದಿನ ಕಾರ್ಯಗಳಿಗೆ ಅರ್ಹನಾಗುತ್ತಾನೆ. ಗಂಡನ ಸೇವೆ ಮಾಡದೆ, ದುಷ್ಟ ಬುದ್ಧಿಯಿಂದ ಬಿರುನುಡಿಗಳನ್ನಾಡಿ ಪತಿಯ ಮನಸ್ಸನ್ನು ನೋಯಿಸುವ ಹೆಣ್ಣು ಮಗಳನ್ನು ಶಿಕ್ಷಿಸಬೇಕು. ಅವಳನ್ನು ಒಂದು ವರ್ಷದಲ್ಲಿ ಹನ್ನೆರಡು ಸಲ ಮನೆಬಿಟ್ಟು ಹೊರ ಹಾಕಬೇಕು. ಆದರೆ ಉಪ ಜೀವನಕ್ಕೆ ಹಣವನ್ನು ಮಾತ್ರ ಬೇಕಾಗುವಷ್ಟು ಕೊಡಬೇಕು. ಅರ್ಥಾತ್ ಅವಳನ್ನು ತಾನೇ ತನ್ನ ಮೇಲ್ವಿಚಾರಣೆಯಲ್ಲಿ ಬೇರೆ ಮನೆಯಲ್ಲಿಟ್ಟು ಅವಳ ಹೊಟ್ಟೆ ಬಟ್ಟೆ ನಡೆಸಬೇಕು. ಮದ್ಯಪಾನ, ಮಾಂಸಭಕ್ಷಣ, ವ್ಯಭಿಚಾರ ಮುಂತಾದ ಪಾಪಗಳಿಂದ ಪತಿತರಾದ ಬಂಧುಗಳನ್ನು ಬಿಟ್ಟು ಬಿಡಬೇಕು. ಪತಿತರಾದರೆ ತಂದೆಯನ್ನು ಕೂಡ ಬಿಡಬೇಕು. ಆದರೆ-

**ಪಿತಾ ಹಿ ಪತಿತಃ ಕಾಮಂ ನ ತು ಮಾತಾ ಕದಾಚನ'**

ತಾಯಿಮಾತ್ರ ಎಷ್ಟೇ ಪಾಪ ಮಾಡಿದರೂ ಅವಳನ್ನು ಬಿಡತಕ್ಕದ್ದಲ್ಲ. ಬೆಂಕಿ, ನೀರು, ನೇಣುಗಳಿಂದ ಆತ್ಮಹತ್ಯೆಗಾಗಿ ಪ್ರಯತ್ನ ಮಾಡಿದರೂ ಸಾಯದೇ ಇರುವವರು, ಸನ್ಯಾಸಿಯಾಗಿ ದುರಾಚಾರದಿಂದ ಧರ್ಮಭ್ರಷ್ಟರಾದವರು ಸಹಭೋಜನಕ್ಕೆ ಅಪಾತ್ರರು. ಅವರಿಗೆ ಎಲ್ಲರೂ ಬಹಿಷ್ಕಾರ ಹಾಕಬೇಕು. ಅಂತಹ ಮಹಾಪಾಪ 'ಚಾಂದ್ರಯಣ' ಅಥವಾ ತಪ್ತಕೃಚ್ಛ ಎಂಬ ವ್ರತ ಮಾಡಿಸಿ ಶುದ್ಧರಾದ ಬಳಿಕ ಅವರ ಜೊತೆಗೆ ಪಂಕ್ತಿ ವ್ಯವಹಾರಾದಿಗಳನ್ನು ಮಾಡಬಹುದು. ಮರ, ಬೆಟ್ಟಗಳಿಂದ ಬಿದ್ದು, ಖಡ್ಗ ಬಾಣಗಳಿಂದ ತಿವಿದುಕೊಂಡು, ಸಾಯಲು ಪ್ರಯತ್ನಿಸಿ ಬದುಕಿರುವವರು ಎರಡು 'ಚಾಂದ್ರಾಯಣ' ಮಾಡಿ ಶುದ್ಧನಾಗಬೇಕು. ನಾಯಿ, ನರಿ, ಕತ್ತೆ, ಕೋತಿ ಮುಂತಾದ ಪ್ರಾಣಗಳನ್ನು ಮುಟ್ಟಿದರೆ ತಕ್ಷಣ ಸ್ನಾನಮಾಡಿ ಶುದ್ಧ ನಾಗಬೇಕು. ಜ್ಞಾನಪೂರ್ವಕವಾಗಿ ಚಂಡಾಲ ಮುಂತಾದ ಕೀಳು ಜಾತಿಯ ಹೆಂಗಸರನ್ನು ಬಲತ್ಕಾರದಿಂದ ಭೋಗಿಸುವವನು ಕೃಚ್ಛ್ರಾರ್ಧ' ಎಂದರೆ ಆರುದಿನ ಮಾಡುವ 'ಕೃಚ್ಛ್ರ' ವ್ರತವನ್ನೂ, ಅಜ್ಞಾನದಿಂದ ಮಾಡಿದವನು ಎರಡು 'ಚಾಂದ್ರಾಯಣ' ವ್ರತಗಳನ್ನೂ ಮಾಡಬೇಕು.

*(ತಪ್ತಕೃಚ್ಛವೆಂದರೆ - ತ್ರ್ಯಹಮುಷ್ಣಾಃ ಪಿಬೇದಾಪಃ ತ್ರ್ಯಹ ಮುಷ್ಣಂ ಘೃತಂ ಪಿಬೇತ್ । ತ್ರ್ಯ ಮುಷ್ಣಂ ಪಯಃ ಪೀತ್ವಾ ವಾಯು ಭಕ್ಷ್ಯೋ ದಿನ ತ್ರಯಂ ॥ ಎಂಬ ವಚನಾನುಸಾರವಾಗಿ, ಮೂರು ದಿವಸ ಬಿಸಿನೀರು, ಮೂರು ದಿನ ಕಾಯಿಸಿ ಬಿಸಿಯಾಗಿರುವ ತುಪ್ಪ ಮಾತ್ರ, ಮೂರು ದಿವಸ ಕಾಯಿಸಿ ಬಿಸಿಯಾಗಿರುವ ಹಾಲು ಮಾತ್ರ, ಈ ಪ್ರಕಾರ ಒಂಬತ್ತು ದಿವಸಗಳು ಆಹಾರ ಸೇವಿಸಿ ತರುವಾಯ ಮೂರು ದಿವಸಗಳು ಕೇವಲ ವಾಯುಸೇವನೆಯಿಂದ ಉಪವಾಸ ಮಾಡುವ ವ್ರತವು.

ಕುರುಗಾಹಿಗಳ ಮನೆಯಲ್ಲಿ ಊಟ ಮಾಡುವವನೂ, ಗೋಪಸ್ತ್ರೀಯರ ಸಂಗ ಮಾಡುವವನೂ, ಬೇರೆ ಸ್ತ್ರೀ ಸಹವಾಸ ಮಾಡುವವನೂ, ಮದ್ಯಪಾನ, ಮಾಂಸಭಕ್ಷಣ ಮಾಡುವವನೂ ತಪ್ತಕೃಚ್ಛ್ರದಿಂದಲೂ ಹಾಗೂ ಮೌಲೀಹೋಮದಿಂದಲೂ ಶುದ್ಧನಾಗಬೇಕು. ಬಂಗಾರದ ಕಳವು, ಮದ್ಯಪಾನ, ಬ್ರಹ್ಮಹತ್ಯಾ, ಗುರುಪತ್ನೀ ಗಮನ ಮುಂತಾದ ಮಹಾಪಾತಕಗಳನ್ನು ಮಾಡಿದವರು ಅಗ್ನಿ ಪ್ರವೇಶವನ್ನಾದರೂ ಮಾಡಬೇಕು. ಇಲ್ಲವೆ ಮಹಾಯಾಗವನ್ನು ಮಾಡಿ, ಒಂದು ತಿಂಗಳು ಪ್ರತಿದಿನ ನೀರಿನಲ್ಲಿ ಮುಳುಗಿ 'ಅಘಮರ್ಪಣ' ಮಂತ್ರ ಜಪಿಸಿದರೆ ಶುದ್ಧನಾಗುತ್ತಾನೆ. ತಾಯಿ, ಗುರುಪತ್ನಿ, ಮಗಳು, ತಂಗಿ, ಸೊಸೆ ಈ ಐವರ ಸಹವಾಸ ಮಾಡಿದರೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಅಗ್ನಿ ಪ್ರವೇಶವೇ ಗತಿ. ತನ್ನ ಗೋತ್ರದಲ್ಲಿ ಹುಟ್ಟಿದ ಸ್ತ್ರೀಯರು. ಪರಸ್ತ್ರೀ, ವೇಶ್ಯೆ, ರಾಣಿ, ಸನ್ಯಾಸಿನಿ, ದಾದಿ ಇವರ ಸಂಗ ಮಾಡಿದರೆ ಎರಡು ಸಲ ಕೃಚ್ಛ್ರ ವ್ರತ ಆಚರಿಸಬೇಕು. ಇದರಂತೆ ಗೋಹತ್ಯೆ, ಬ್ರಹ್ಮಚಾರಿಯಾಗಿದ್ದಾಗ ಸ್ತ್ರೀಸಂಗ ಮಾಡಿದವನಿಗೆ ಎರಡಾವರ್ತಿ ಗೋವ್ರತಮಾಡಿ ಪ್ರಾಯಶ್ಚಿತದಿಂದ ಶುದ್ಧಿ, ಗೋವನ್ನು ಹೊಡೆಯುವಾಗ ಅದು ಗರ್ಭಿಣಿಯಾಗಿದ್ದರೆ ಎರಡರಲ್ಲಿ ಪ್ರತ್ಯೇಕವಾಗಿ ಕೃಚ್ಛ್ರ ವ್ರತ ಆಚರಿಸಬೇಕು. ಕಟ್ಟಿಗೆಯಿಂದ ಗೋವಿಗೆ ಹೊಡೆದು, ಅದು ಮೂರ್ಛೆ ಬಂದು ಬಿದ್ದ ಬಳಿಕ ಅದು ಎದ್ದು, ಎಂಟು ಹತ್ತು ಹೆಜ್ಜೆ ನಡೆದರೆ, ಆಹಾರ ತಿಂದು ನೀರು ಕುಡಿದರೆ ಹೊಡದವನಿಗೆ ಪ್ರಾಯಶ್ಚಿತ್ತವಿಲ್ಲ. ಆ ಗೋವು ಮುಂದೆ ಮೃತವಾದರೂ ಇವನಿಗೆ ಪ್ರಾಯಶ್ಚಿತ ಮಾಡಬೇಕಾಗಿಲ್ಲ. ಗೋವನ್ನು ಕಲ್ಲು, ಇಟ್ಟಿಗೆ, ಹೆಂಟೆ, ಮುಂತಾದವುಗಳಿಂದ ಹೊಡೆದು ಕೊಂದರೆ ಬೇರೆ ಬೇರೆ ಪ್ರಾಯಶ್ಚಿತ್ತ. ಕಟ್ಟಿಗೆಗೆ - ಕೃಚ್ಛ್ರ, ಮಣ್ಣು - ಹೆಂಟೆಗೆ - ಪ್ರಾಜಾಪತ್ಯವ್ರತ, ಕಲ್ಲಿನಿಂದ - ತಪ್ತಕೃಚ್ಛ್ರ, ಶಸ್ತ್ರದಿಂದ - ಅತಿಕೃಚ್ಛ್ರ ಮುಂತಾದವುಗಳನ್ನು ಆಚರಿಸಿ ಶುದ್ಧರಾಗಬೇಕು.

ಗೋವುಗಳಿಗಾಗಲಿ ಅಥವಾ ಬೇರೆಯಾರಿಗೇ ಆಗಲಿ ಔಷದಾರ್ಥವಾಗಿ ತೈಲ, ರಸಾಯನ ರಾಸ್ನ ಮುಂತಾದವುಗಳನ್ನು ಕೊಡಬೇಕು. ಹಾಗೆ ಕೊಡುವಾಗ ಅವರಿಗೆ ಮರಣವಾದರೆ ಅಥವಾ ರೋಗಿಯನ್ನು ಉಪಚರಿಸುವಾಗ ವಿಪತ್ತು ಸಂಭವಿಸಿದರೆ, ವೈದ್ಯನಿಗೆ ಪಾಪವಿಲ್ಲ; ಪ್ರಾಯಶ್ಚಿತ್ತವಿಲ್ಲ. ಗೋವುಗಳನ್ನು ಕಡಿಯಲು ಕಟುಕರಿಗೆ ಕೊಟ್ಟರೆ ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಅದಕ್ಕೆ ಯಾರಾದರೂ ಶಾಸ್ತ್ರಗಳಲ್ಲಿ ಹೇಳದಿರುವ ಪ್ರಾಯಶ್ಚಿತ್ತ ಹೇಳಿದರೆ ಅಂತಹವರನ್ನು ಶಾಸನ ಮಾಡಬೇಕು. ಕ್ರಿಮಿ-ಕೀಟ ನೊಣ ಮುಂತಾದ ಕ್ಷುದ್ರ ಜೀವಿಗಳನ್ನು ಬುದ್ಧಿಪೂರ್ವಕ ಸಂಹರಿಸಿದರೆ 'ಕೃಚ್ಛ್ರಾರ್ಧ' ವ್ರತ ಆಚರಿಸಬೇಕು. ಇಲ್ಲವೆ ಪ್ರಾಯಶ್ಚಿತ್ತ ಮಾಡಿಕೊಂಡು ಜ್ಞಾನಿಗೆ ಐದು ಗುಂಜಿ ಬಂಗಾರದಾನ ಮಾಡಬೇಕು. ಜ್ಞಾನಿಗಳಾದವರು ಪ್ರಯತ್ನಪೂರ್ವಕವಾಗಿ 'ಇಷ್ಟಾಪೂರ್ತ'ವನ್ನು ಆಚರಿಸಬೇಕು. ದ್ರವ್ಯಾಪೇಕ್ಷೆಯಿಂದ ಮಾಡುವ ಕರ್ಮವು ಇಷ್ಟವೆನಿಸುತ್ತದೆ. ಕೆರೆ, ಕಾಲುವೆ, ದೇವಾಲಯ, ಸರೋವರ ಭಾವಿ, ಛತ್ರ - ವಿದ್ಯಾಲಯ, ಛಾತ್ರಾಲಯ, ಮುಂತಾದವುಗಳನ್ನು ಕಟ್ಟಿಸುವದು ಪೂರ್ತ ಎನಿಸುತ್ತದೆ. ಹೀಗೆ ಇಷ್ಟದಿಂದ ಸ್ವರ್ಗವೂ ಪೂರ್ತದಿಂದ ಮೋಕ್ಷವೂ ದೊರಕುತ್ತವೆ. ಆದ್ದರಿಂದ ಎಲ್ಲರೂ ಇಷ್ಟಾಪೂರ್ತಗಳನ್ನು ಪ್ರಯತ್ನದಿಂದ ಆಚರಿಸಬೇಕು.

ಪತಿತರನ್ನು ಉದ್ಧಾರಮಾಡುವವನು ಪುಣ್ಯ ಭಾಗಿ ಆಗುವನು. 'ಪತಿತಾನುದ್ಧರೇದ್ಯಸ್ತು ಸಪುಣಫಲಮಶ್ನುತೇ' ಪತಿತರನ್ನು ಉದ್ಧರಿಸಲು ಮುಖ್ಯವಾಗಿ ಪಂಚಗವ್ಯವನ್ನು ಪ್ರಾಶನ ಮಾಡಲು ಕೊಡಬೇಕು. ಪಂಚಗವ್ಯವೆಂದರೆ ಬಿಳಿಯ ಆಕಳಿನ ಮೂತ್ರ, ಕರಿ ಆಕಳಿನ ಶೆಗಣಿ,

ಕೆಂಪು ಆಕಳ ಹಾಲು, ಬಿಳಿ ಆಕಳಿನ ಮೊಸರು, ಹಂಡಬಂಡ ಹಸುವಿನ ತುಪ್ಪ ಇವು ಐದನ್ನೂ ಮಿಶ್ರ ಮಾಡಿದರೆ ಪಂಚಗವ್ಯ ಎನಿಸುವದು. ಈ ಪಂಚಗವ್ಯ ಪ್ರಾಶನದಿಂದ ಮಹಾಮಹಾ ಪಾಪಗಳು ಕೂಡ ನಾಶವಾಗುತ್ತವೆ. ಮತ್ತು ಕುಶೋದಕದಿಂದಲೂ ಮನುಷ್ಯನಿಗೆ ಶುದ್ಧಿ ಆಗುವದು. ಕುಶೋದಕ ಎಂದರೆ ಪುಣ್ಯ ತೀರ್ಥಗಳ ನೀರು ಮತ್ತು ದರ್ಭೆ ಇವುಗಳನ್ನು ಪ್ರತ್ಯೇಕವಾಗಿ ಪ್ರಣವಮಂತ್ರದಿಂದ ಪೂಜಿಸಿ ಆ ಪ್ರಣವಮಂತ್ರದಿಂದಲೇ ಪ್ರಾಶನ ಮಾಡಿಸಬೇಕು. ಈ ಕುಶೋದಕವನ್ನು ಚಿನ್ನ, ತಾಮ್ರದಪಾತ್ರೆ, ಮಣ್ಣಿನ ಗಡಿಗೆಗಳಲ್ಲಿ ಇಟ್ಟುಕೊಂಡು ಸಂಗ್ರಹಿಸಬೇಕು. ಸೂತಕ ಮಧ್ಯದಲ್ಲಿಮತ್ತೊಂದು ಸೂತಕ ಬಂದರೆ ಎರಡನೆಯ ಸೂತಕವು ದೋಷವಿಲ್ಲ. ಮೊದಲನೆಯದನ್ನು ಕಳೆದುಕೊಳ್ಳುವದರಿಂದಲೇ ನರನು ಪರಿಶುದ್ಧನಾಗುತ್ತಾನೆ. ಮರಣ ಹೊಂದಿದಾಗ ಮೃತನ ಸಂಬಂಧಿಕರಿಗೆ ಇರುವ ಮೈಲಿಗೆಗೆ ಸೂತಕ ಎನ್ನುವರು. ಇದರಂತೆ ಹೆಂಗಸು ಮಗುವನ್ನು ಹಡೆದಾಗ ಸಂಬಂಧಿಕರಿಗೆ ಬರುವ ವೃದ್ಧಿ ಸಂಭವಿಸಿದಾಗಲೇ ಮತ್ತೊಂದು ಜಾತಾಶೌಚ (ವೃದ್ಧಿ) ಬಂದರೆ ಎರಡನೇಯದನ್ನು ಆಚರಿಸಬೇಕಿಲ್ಲ. ಮೊದಲನೆಯದನ್ನು ಆಚರಿಸುವದರಿಂದಲೇ ಶುದ್ಧಿ. ಸ್ತ್ರೀಯರು ಮುಟ್ಟಾದಾಗ ಮೂರು ದಿನ ಅಶುದ್ಧರು. ಮೂರು ರಾತ್ರಿಯಾದ ಬಳಿಕ ಸ್ನಾನ ಮಾಡಿ ಶುದ್ಧಿಯನ್ನು ಪಡೆಯುವರು.

ಹೆಂಗಸು ವಿವಾಹವಾಗಿ ಸಪ್ತಪದಿಯಾದನಂತರ ಅವಳಿಗೆ ತನ್ನ ತಂದೆಯ ಗೋತ್ರದಿಂದ ಬಿಡುಗಡೆಯಾಗುವದು. ಸಪ್ತಪದಿನಂತರ ತಕ್ಷಣವೇ ಮರಣ ಹೊಂದಿದರೆ, ಆ ಹೆಂಗಸಿನ ಪತಿಯ ಗೋತ್ರದಿಂದಲೇ ಶ್ರಾದ್ಧಾದಿಗಳನ್ನು ಮಾಡಿ ತರ್ಪಣ ಕೊಡಬೇಕು. ತಾಯಿ, ತಂದೆಗಳಿಗೆ ಅವರು ಮರಣಹೊಂದಿದ ನಂತರ ಪ್ರತಿವರ್ಷ ಶ್ರಾದ್ಧಾದಿಗಳನ್ನು ಮಾಡಬೇಕು. ಶ್ರಾದ್ಧವು ನಿತ್ಯ ನೈಮಿತ್ತಿಕ, ಕಾಮ್ಯ, ವೃದ್ಧಿ, ಪಾರ್ವಣ ಎಂಬುದಾಗಿ ಐದು ವಿಧವಾಗಿರುತ್ತವೆ. ಕನ್ಯೆಯು ತಾನು ವಿವಾಹ ಮಾಡಿಕೊಂಡ ನಂತರ ಗಂಡನ ಜಾತಿಗೆ ಅನುಸಾರವಾಗಿ, ಗಂಡನಿಗೆ ಸಮನಾಗಿ ಸೂತಕಾದಿ ಆಚರಿಸಬೇಕು. ಪಿಂಡೋದಕ ಪ್ರದಾನದಲ್ಲೂ ಪತಿಗೆ ಸಮಭಾಗಿಯಾಗಬೇಕು. ಮರಣದ ನಂತರ ಹಿತೈಷಿಗಳಾದ ಬಂಧುಗಳು ಬ್ರಾಹ್ಮಣನಿಗೆ ನಾಲ್ಕನೆಯ ದಿನದಲ್ಲಿ, ಕ್ಷತ್ರಿಯನಿಗೆ ಐದನೆ ದಿನ, ಹಾಗೂ ವೈಶ್ಯನಿಗೆ ಏಳರಲ್ಲಿ, ಶೂದ್ರನಿಗೆ ಒಂಭತ್ತನೆಯ ದಿನದಲ್ಲಿ ಅಸ್ಥಿಸಂಚಯ ಮಾಡಿ ತೀರ್ಥಗಳಲ್ಲಿ ಬಿಟ್ಟು ಶ್ರಾದ್ಧಾದಿಕರ್ಮ ಆಚರಿಸಬೇಕು. ಹನ್ನೊಂದನೆಯ ದಿನ 'ವೃಷೋತ್ಸರ್ಗ' ವ್ರತ ಮಾಡಿದರೆ ಮೃತನು ಸ್ವರ್ಗದಲ್ಲಿ ಪುಣ್ಯ ಪಡೆಯುತ್ತಾನೆ. ''ಪಿತೃಗಳಿಗೆ ನೀರಿನಲ್ಲಿ ನಿಂತು ದಕ್ಷಿಣಾಭಿಮುಖವಾಗಿ ಬೊಗಸೆ ನೀರಿನಿಂದ ''ಆಗಚ್ಛಂತು ಮೇ ಪಿತರೋ ಗೃಹ್ಣಂ ತು ಏತಾನ್ ''ಜಲಾಂಜಲೀನ್'' ಪಿತೃಗಳು ಬರಲಿ, ನಾನು ನೀಡಿದ ಈ ಜಲಾಂಜಲಿಗಳನ್ನು ಸ್ವೀಕರಿಸಲಿ' ಎಂದು ಪ್ರಾರ್ಥಿಸಿ, ಗೋವಿನ ಕೊಂಬಿನಷ್ಟು ಎತ್ತರ ಬೊಗಸೆಯನ್ನು ಎತ್ತರಿಸಿ, ನೀರನ್ನು ಮೇಲಕ್ಕೆ ಎರಚಿ ಪಿತೃಗಳನ್ನು ಉದ್ದೇಶಿಸಿ ಜಲಾಂಜಲಿ ನೀಡಬೇಕು. ಪಿತೃಗಳು, ದೇವತೆಗಳು ನೀರಿನಲ್ಲಿ ಸನ್ನಿಹಿತರಾಗಿರುತ್ತಾರೆ. ಆದುದರಿಂದ ಅವರಿಗೆ ನೀರಿನಲ್ಲಿಯೇ ಜಲಾಂಜಲಿ ಕೊಡಬೇಕು.

**ದಿವಾ ಸೂರ್ಯಾಂಶುಸಂತಪ್ತಂ ರಾತ್ರೌ ನಕ್ಷತ್ರಮಾರುತೈಃ ।**
**ಮಧ್ಯಯೋರಪ್ಯುಭಾಭ್ಯಾಂ ಚ ಪವಿತ್ರಂ ಸರ್ವದಾ ಜಲಂ ।**

ಹಗಲು ಸೂರ್ಯನ ಕಿರಣಗಳಿಂದ, ರಾತ್ರಿ ನಕ್ಷತ್ರವಾಯುಗಳಿಂದ, ಮಧ್ಯಕಾಲದಲ್ಲಿ

ಎರಡರಿಂದಲೂ ಸಹ ಕಾಯ್ದು ಜಲವು ಸ್ವಾಭಾವಿಕವಾಗಿ ಯಾವಾಗಲೂ ಪವಿತ್ರವಾಗಿಯೇ ಇರುತ್ತದೆ. ಅಪವಿತ್ರ ಪದಾರ್ಥಗಳು ಕೂಡದಿದ್ದರೆ, 'ಭಾಂಡಸ್ಥಂ ಧರಣೀಸ್ಥಂವಾ ಪವಿತ್ರಂ ಸರ್ವದಾ ಜಲಂ,' ಪಾತ್ರೆಯಲ್ಲಿ ಹಾಗೂ ನೆಲದಲ್ಲಿ ಇದ್ದ ನೀರು ಯಾವಾಗಲೂ ಶುದ್ಧ ಮತ್ತು ಪವಿತ್ರ ಆಗಿರುತ್ತದೆ.

**ಶ್ರಾದ್ಧೇ ಹವನ ಕಾಲೇ ಚ ದದ್ಯಾದೇಕೇನ ಪಾಣಿನಾ**
**ಉಭಾಭ್ಯಾಂ ತರ್ಪಣೇ ದದ್ಯಾದೇಷ ಧರ್ಮೋ ವ್ಯವಸ್ಥಿತಃ ॥**

ಶ್ರಾದ್ಧ, ಹೋಮಕಾಲ ಇವುಗಳಲ್ಲಿ ಒಂದೇ ಹಸ್ತದಿಂದಲೂ, ತರ್ಪಣಕಾಲದಲ್ಲಿ ಎರಡೂ ಹಸ್ತಗಳಿಂದಲೂ ಜಲಪ್ರದಾನ ಮಾಡಬೇಕೆಂಬುದು ಶಾಸ್ತ್ರನಿರ್ಣೀತವಾದ ಧರ್ಮವು.

ನಾರದ ಮಹಾಪುರಾಣದಲ್ಲಿ ಹದಿನಾಲ್ಕನೇಯ ಅಧ್ಯಾಯ ಮುಗಿದುದು



## ಗಂಗಾನಯನ ಪ್ರಯತ್ನ ಕಥನ

**ಅಧ್ಯಾಯ - ೧೫**

**ಧರ್ಮರಾಜ:-** ನಾನಾವಿಧ ಪಾಪಗಳನ್ನೂ, ಅದರಿಂದ ಜನರಿಗೆ ಮುಂದೆ ಒದಗಬಹುದಾದ ದುಃಖಗಳನ್ನೂ ಹೇಳುತ್ತೇನೆ. ನರಕ ಯಾತನೆಗಳ ವಿತರಣೆಯು ಭೀತಿ ಹುಟ್ಟಿಸುವಂತಹದು. ಆದುದರಿಂದ ಹೆದರದೇ ನೀನು ಧೈರ್ಯದಿಂದ ಕೇಳು. ಘೋರ ಪಾತಕಿಗಳು ಬೆಂಕಿಯಂತಿರುವ ನರಕಗಳಲ್ಲಿ ಬೇಯುವರು. ಮಾಡಿದ ದುಷ್ಕರ್ಮಗಳಿಗೆ ಘೋರ ದುಃಖಾನುರೂಪ ಫಲ ಕೊಡುವ ನರಕಗಳ ಹೆಸರು ಹೇಳುತ್ತೇನೆ ಕೇಳು - ತಪನ, ವಾಲುಕುಂಭ, ಮಹಾರೌರವ, ರೌರವ, ಕುಂಭೀಪಾಕ, ನಿರುಚ್ಛ್ವಾಸ, ಕಾಲಸೂತ್ರ, ಪ್ರಮರ್ದನ, ಸಂಘಾತ, ಭಯಂಕರವಾದ ಅಸಿಪತ್ರವನ, ಲಾಲಾಭಕ್ಷ, ಹಿಮೋತ್ಕಟ, ಮೂರ್ಧಾಮಷ್ಠಾ, ವಸಾಕೂಪ, ವೈತರಣೀನದಿ ಎಂಬಿವುಗಳು ನರಕಗಳು (ದುಃಖಭೋಗಸ್ಥಾನ).

ಈ ಎಲ್ಲ ಭಯಂಕರವಾದ ನರಕಗಳಲ್ಲಿ ಮಾನವರು ಅನುಭವಿಸಬೇಕಾದ ಅಸಹ್ಯ ಯಾತನೆಗಳೆಂದರೆ - ಮೂತ್ರಪಾನ, ನಾಯಿಯ ಮಾಂಸಭಕ್ಷಣ, ಪಾಯಖಾನೆಯ ಹೊಲಸಿನಲ್ಲಿ ಹೊರಳಾಡುವದು, ಬೆಂಕಿಯಲ್ಲಿ ಕಾಯ್ದು ಶೂಲದ ಮೇಲೆ ಕೂಡುವುದು, ರಕ್ತಪಾನ, ತನ್ನದೇ ಮಾಂಸ ತಿನ್ನುವದು, ಬೆಂಕಿಯಲ್ಲಿ ಬೀಳುವದು, ಎಸರು ನೀರು ಕುಡಿಯುವದು, ಕಲ್ಲಿನ ಮೊಳೆ, ಶಸ್ತ್ರಗಳ ಮೊಳೆ, ಬೆಂಕಿಯಲ್ಲಿ ನಿಲ್ಲುವದು, ಕಾಯ್ದು ಕಬ್ಬಿಣ ನೆಕ್ಕುವದು, ತಲೆ ಕೆಳಗೆ ಮಾಡಿ ನಿಲ್ಲುವದು, ಕ್ರಿಮಿಗಳ ಭಕ್ಷಣ, ಗರಗಸದಿಂದ ಅಂಗಛೇದನ, ತನ್ನ ಮಲವನ್ನೇ ತಾನು ತಿನ್ನುವದು. ಸ್ವ-ವೀರ್ಯಪಾನ, ಅವಯವಗಳ ಸಂದುಗಳಲ್ಲಿ ಸುಡುವದು, ಶೂಲಗಳಿಂದ ಚುಚ್ಚುವದು, ಬೆಂಕಿಯ ಮೇಲೆ ಮಲಗುವದು, ವನಿಕೆಯಿಂದ ಕುಟ್ಟುವದು, ಕಟ್ಟಿಗೆ ಯಂತ್ರಗಳ ಮಧ್ಯದಲ್ಲಿ ಜಜ್ಜಿ ಕೈಕಾಲು ಚೂರು ಮಾಡುವುದು, ಹಾವುಗಳಿಂದ ಕಚ್ಚಿಸುವದು, ಮೂಗು ಬಾಯಿಯಲ್ಲಿ ಉಪ್ಪು ನೀರು ಸುರಿಯುವದು, ಮೂಳೆ ಛೇದನ ಮಾಡುವದು, ಹಾವು, ಚೇಳು ಕಚ್ಚಿಸುವದು, ಹೀಗೆ ಒಂದೇ ಎರಡೇ ನರಕದ ಯಾತನೆಗಳು? ಅಸಂಖ್ಯ, ಅಪರಿಮಿತ ಮೇಲೆ ಅಸಹ್ಯ, ಅವುಗಳನ್ನು ನೆನೆದರೂ ಮೈಯಲ್ಲಿ ನಡುಕ ಬರುವದು.

ಈ ಎಲ್ಲ ನರಕದ ಘೋರ ದುಃಖಗಳು ಯಾವ ಯಾವ ಪಾಪಗಳಿಂದ ಬರುತ್ತವೆ ಎಂಬುದನ್ನು ತಿಳಿಸುತ್ತೇನೆ. ಕೇಳು. - ಪಾಪಗಳಲ್ಲಿ ಐದು ಪಾಪಗಳು ಮಹಾ ಪಾತಕ ಎನಿಸುವವು. ಮೊದಲನೆಯದು ಬ್ರಹ್ಮಹತ್ಯೆ ಅಂದರೆ ಬ್ರಹ್ಮಜ್ಞಾನಿಯನ್ನು ಕೊಲ್ಲುವದು. ೨. ಮದ್ಯಪಾನ, ೩. ಗುರುವಿನ ಹೆಂಡತಿಯೊಡನೆ ಸರಸ, ೪. ಬಂಗಾರ ಕದಿಯುವದು ೫. ಈ ಮಹಾಪಾಪಿಗಳೊಡನೆ ಸಂಪರ್ಕ ಮಾಡುವದು ಐದನೆಯ ಪಾಪ. ಇವು ಐದು ಪಂಚ ಮಹಾಪಾತಕಗಳು ಎಂದು ಧರ್ಮಶಾಸ್ತ್ರಗಳಲ್ಲಿ ಕರೆಯಲ್ಪಡುತ್ತವೆ. ಇದರಲ್ಲಿ ಮೊದಲನೆಯದಾದ ಬ್ರಹ್ಮಹತ್ಯೆಗೆ ಸಮಾನವಾದ ಕೆಲವು ಪಾಪಗಳು, ಊಟದಲ್ಲಿ ಪಂಕ್ತಿಭೇದ, ದೇವರಿಗೆ ನಿವೇದನೆ ಮಾಡದೇ, ಅತಿಥಿಗಳಿಗೆ ಕೊಡದೇ ತಾನೇ ತಿನ್ನುವದು, ಜ್ಞಾನಿಗಳನ್ನು ನಿಂದಿಸುವದು. ಸಂಬಳ ತೆಗೆದುಕೊಂಡು ಪಾಠ ಹೇಳುವದು, ದೇವರ ಪೂಜೆಗೆ ವಿಘ್ನಮಾಡುವದು, ಆತ್ಮಪ್ರಶಂಸೆ, ಅಸತ್ಯವಚನ, ಡಂಭಾಚಾರ, ಚಾಡಿ ಹೇಳುವದು, ಪ್ರಾಣಿಹಿಂಸೆ ಇವೇ ಮೊದಲಾದವುಗಳು ಬ್ರಹ್ಮಹತ್ಯೆಗೆ ಸಮಾನ ಪಾಪಗಳು.

ಎರಡನೆಯದು ಸುರಾಪಾನಕ್ಕೆ ಸಮಾನ ಪಾಪಗಳು ಹೀಗಿವೆ - ಸಂಘ ಸಂಸ್ಥೆಗಳ ಅನ್ನ ತಿನ್ನುವದು, ಹಣ ಎತ್ತಿ ಹಾಕುವದು, ವೇಶಾವೃತ್ತಿ ಮಾಡಿಸಿ ದುಡ್ಡುಗಳಿಸುವದು, ಜಾತಿಭ್ರಷ್ಟನ ಮನೆಯಲ್ಲಿ ಊಟ; ತನ್ನ ಜಾತಿ ಬಿಡುವದು, ಮದ್ಯಪಾನ ಮಾಡುವ ಸ್ತ್ರೀ ಸಂಪರ್ಕ ಮಾಡುವದು ಮುಂತಾದವುಗಳ ಸುರಾಪಾನವೆಂಬ ಮಹಾಪಾಪಕ್ಕೆ ಸಮಾನ ಪಾಪಗಳು. ಮೂರನೆಯದು ಬಂಗಾರದ ಕಳುವಿಗೆ ಸಮಾನ ಪಾಪಗಳೆಂದೆ - ಯಾವದೇ ತಿನ್ನುಣ್ಣುವ, ಕುಡಿಯುವ ಪದಾರ್ಥಗಳ ಕಳವು, ಯಾವುದೇ ತರಹದ ಬಟ್ಟೆಗಳ ಕಳವು, ಯಾವದೇ ತರಹದ ಧಾತು, ಪಾತ್ರೆ, ಪರಡೆ, ಸುಗಂಧದ್ರವ್ಯ ಮುಂತಾದವುಗಳನ್ನು ಕದಿಯುವದು, ಸುವರ್ಣ ಚೌರ್ಯವೆಂಬ ಪಾಪಕ್ಕೆ ಸಮಾನವು. ಇದರಂತೆ ತಂದೆ ತಾಯಿಗಳ ಶ್ರಾದ್ಧ ಮಾಡದೇ ಇರುವದು. ಧರ್ಮಕಾರ್ಯಕ್ಕೆ ವಿಘ್ನ ತರುವದು, ತುಳಸೀ ಮಾಲೆ, ರುದ್ರಾಕ್ಷಿ ದೇವಪೂಜೆಯ ಉಪಕರಣಗಳು, ಭಕ್ಷ್ಯ ಭೋಜ್ಯ, ಧನಧಾನ್ಯ ಕದಿಯುವದು ಮುಂತಾದವುಗಳು ಕೂಡ ಮೇಲಿನ ಪಂಚ ವಿಧದ ಪಾಪದಲ್ಲಿಯೇ ಸಮಾವೇಶವಾಗುತ್ತವೆ. ಗುರುಪತ್ನಿ ಗಮನಕ್ಕೆ ಸಮಾನ ಪಾಪಗಳೆಂದರೆ ತಂಗಿಯ ಸಂಗ, ಸೊಸೆಯೊಡನೆ ವಿಹಾರ, ರಜಸ್ವಲೆಯೊಡನೆ ರತಿಕೇಳಿ, ಕೀಳುಜಾತಿಯ ಸ್ತ್ರೀ ಸಂಪರ್ಕ, ಸೆರೆಗುಡುಕನ ಸುಂದರಿ ಯೊಡನೆ ಸಂಭೋಗ, ಹೆರವರ ಹೆಣ್ಣಿನೊಡನೆ ಲೋಲಾಟ, ಸೋದರನ ಸತಿಯೊಡನೆ ಸರಸಾಟ, ಮಿತ್ರನ ಮಡದಿಯೊಡನೆ ಮೈಥುನ, ವಿಧವಾ ಸ್ತ್ರೀಯೊಡನೆ ವಿಹಾರ, ಪುತ್ರಿಯೊಡನೆ ಪ್ರಣಯಕೇಳಿ, ತನ್ನ ಹೆಂಡತಿಯೊಡನೆಯೂ ನಿಷಿದ್ಧ ಕಾಲದಲ್ಲಿ ರತಿಕೇಳಿ, ಹರಿ, ಗುರುಗಳ ನಿಂದೆ, ಇವು 'ಗುರುತಲ್ಪಗಮನ'ವೆಂಬ ಪಾಪಕ್ಕೆ ಸರಿಸಮಾನ ಪಾಪಗಳು ಎನಿಸುತ್ತವೆ. ಮೇಲೆ ಹೇಳಿದ ಈ ನಾಲ್ಕು ವಿಧವಾದ ಮಹಾಪಾಪಗಳ ಹಾಗೂ ಅವುಗಳ ಗುಂಪಿಗೆ ಸೇರಿದ ಪಾಪಗಳನ್ನು ಮಾಡಿದವನ ಸಹವಾಸ, ಸಂಪರ್ಕ ಮಾಡುವದು ಐದನೆಯ ಮಹಾಪಾಪ ಎನಿಸುವದು. ಹಾಗೆ ಈ ಪಂಚಮಹಾಪಾತಕಗಳು ಭಯಂಕರವಾದ ನರಕ ಯಾತನೆಗೆ ಕಾರಣವಾಗುತ್ತವೆ. ಆದರೆ ನಮ್ಮ ಹಿಂದಿನ ಮುನಿ ಮಹರ್ಷಿಗಳು ಧರ್ಮಶಾಸ್ತ್ರ ಗ್ರಂಥಗಳನ್ನು ಮಂಥನ ಮಾಡಿ, ಈ ಎಲ್ಲ ಮಹಾಪಾಪಗಳಿಗೆ ಪರಿಹಾರದಮಾರ್ಗ, ಪ್ರಾಯಶ್ಚಿತ್ತದ ಮಾರ್ಗಗಳನ್ನು ಕಂಡುಹಿಡಿದು, ಪಾಪಿಗಳೂ ಕೂಡ ಪ್ರಾಯಶ್ಚಿತ್ತದಿಂದ ಶುದ್ಧರಾಗಿ ಉದ್ಧಾರ ಹೊಂದಲಿ ಎಂದು ಉಪಾಯಗಳನ್ನು ತೋರಿಸಿಕೊಟ್ಟಿದ್ದಾರೆ.

ಇನ್ನೂ ಉಳಿದ ಪಾಪಗಳು, ಅವುಗಳಿಂದ ಆಗಬಹುದಾದ ನರಕಯಾತನೆಗಳು ಯಾವವು ಎಂಬುದನ್ನು ಹೇಳುತ್ತೇನೆ ಕೇಳು. ಪರರ ಉತ್ಕರ್ಷ ನೋಡಿ ಹೊಟ್ಟೆಕಿಚ್ಚು ಪಡುವವನಿಗೆ ರೌರವ ನರಕ ಪ್ರಾಪ್ತಿ. ಗೋ, ದೇವರು, ಜ್ಞಾನಿಗಳಿಗೆ ಏನನ್ನೂ ಕೊಡಕೂಡದು ಎಂದು ಹೇಳುವವನು ನರಕದಲ್ಲಿ ಅಮೇಧ್ಯದಲ್ಲಿ ಕ್ರಿಮಿಯಾಗಿ ಬಹುಕಾಲ ಯಾತನೆ ಪಡುತ್ತಾನೆ. ಯಾವಾಗಲೂ ಪರನಿಂದೆ ಮಾಡುವವರು, ದಾನ ಕೊಡುವದಕ್ಕೆ ವಿಘ್ನ ತರುವವರು, ಕಾಲಸೂತ್ರವೆಂಬ ನರಕದಲ್ಲಿ ಶಿಕ್ಷಿತರಾಗುತ್ತಾರೆ. ಮತ್ತು ಅಂತಹವರನ್ನು ತಲೆಯ ಮೇಲೆ ಬೆಂಕಿಯಂತೆ ಸುಡುವ ಕಲ್ಲು ಹೊರೆಸಿ, ಅನಂತರ ಒರಳಿನಲ್ಲಿ ಹಾಕಿ ಒನಕೆಯಿಂದ ಜಜ್ಜುತ್ತಾರೆ.

ಚಾಡಿ ಹೇಳುವವರಿಗೆ ಕೆಂಪಗೆ ಕಾಸಿದ ಸುಡುವ ಕಬ್ಬಿಣವನ್ನು ನುಂಗಿಸಿ, ಅವರ ನಾಲಿಗೆ ಕಿತ್ತಿ ನಿರುಚ್ಛ್ವಾಸ ಎಂಬ ನರಕದಲ್ಲಿ ಒಗೆಯುತ್ತಾರೆ. ಪರಸ್ತ್ರೀ ಸಂಗ ಮಾಡಿದವರ ಎದುರು, ಅದೇ ಸ್ತ್ರೀ ಆಕಾರದ ತಾಮ್ರದ ಒಂದು ಪ್ರತಿಮೆ ಮಾಡಿಸಿ ಅದನ್ನು ಬೆಂಕಿಯಲ್ಲಿ ಕಾಸಿ, ಅದರ ಜೊತೆಗೆ ಬಲಾತ್ಕಾರದಿಂದ ಸಂಭೋಗ ಮಾಡಿಸುತ್ತಾರೆ. ಇದರಂತೆ ಪತಿಯನ್ನು ಬಿಟ್ಟು, ಪರಪುರುಷರೊಡನೆ ವಿಹರಿಸಿದ ಸ್ತ್ರೀಯನ್ನು ಬೆಂಕಿಯಲ್ಲಿ ಕಾಸಿದ ಕಬ್ಬಿಣದಿಂದ ನಿರ್ಮಿತವಾದ ಪುರುಷರೊಡನೆ ಬಲಾತ್ಕಾರದಿಂದ ಬೆಂಕಿಯಲ್ಲಿ ತಪ್ತವಾದ ಕಬ್ಬಿಣದ ಮಂಚದ ಮೇಲೆ ಮಲಗಿಸಿ ಬಹುಕಾಲ ರಮಿಸುತ್ತಾರೆ. ಅನಂತರ ಕಾಯ್ದ ಕಬ್ಬಿಣದ ಕಂಬವನ್ನು ಸ್ತ್ರೀಯರು ಆಲಿಂಗನ ಮಾಡಿಕೊಂಡು ನಿಂತ ಬಳಿಕ ಉರಿಯುವ ಉಪ್ಪು ನೀರಿನಲ್ಲಿ ಅವರನ್ನು ಮುಳುಗಿಸುತ್ತಾರೆ. ರಾಜೋತ್ತಮನೆ, ಗೋಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿಗಳ ವಧೆ ಮಾಡುವವನು ಚಿರಕಾಲ ಎಲ್ಲ ನರಕಗಳ ಯಾತನೆಯನ್ನೂ ಅನುಭವಿಸುವಂತೆ ಮಾಡುತ್ತಾರೆ. ದೊಡ್ಡವರ ನಿಂದೆಯನ್ನು ಆಸ್ಥೆಯಿಂದ ಕೇಳುವವರ ಕಿವಿಗಳ ರಂಧ್ರಗಳಲ್ಲಿ ಕಾಯಿಸಿದ ಕಬ್ಬಿಣದ ಸಲಾಕೆ ಬಡೆದು ಅವುಗಳ ಸಂದುಗಳಲ್ಲಿ ಉರಿಯುವ ಎಣ್ಣೆಯನ್ನು ತುಂಬಿಸಿ ಕುಂಭೀಪಾಕ ಎಂಬ ನರಕಕ್ಕೆ ದೂಡುತ್ತಾರೆ. ದೇವರಿಲ್ಲ ಎಂದು ಹೇಳುವ ನಾಸ್ತಿಕರು, ನರಕದಲ್ಲಿ ತಮ್ಮ ಅಮೇಧ್ಯ ತಿನ್ನುತ್ತ, ರೌರವ ನರಕದಲ್ಲಿ ಕಾಯ್ದ ಮರಳನ್ನು ಮುಷ್ಟಿಮುಷ್ಟಿಯಾಗಿ ಮುಕ್ಕುವಂತೆ ಮಾಡುತ್ತಾರೆ. ಜ್ಞಾನಿಗಳನ್ನು ಸಿಟ್ಟಿನಿಂದ ನೋಡಿ, ಹೆದರಿಸಿ, ಅವಮಾನಗೈಯುವ ದುಷ್ಟರ ಕಣ್ಣುಗಳಲ್ಲಿ ಕಾಯ್ದ ಕೆಂಪುಗಾದ ಸಾವಿರಾರು ಸೂಜಿ ಚುಚ್ಚಿ ಉಪ್ಪು ನೀರು ಎರಚುತ್ತಾರೆ. ಅನಂತರ ಭಯಂಕರ ಕರಗಸದಿಂದ ಅಂಗಾಂಗ ಕೊಯ್ಯುತ್ತಾರೆ. ವಿಶ್ವಾಸದ್ರೋಹ ಮಾಡುವವರು, ಶಾಸ್ತ್ರ ಸಂಪ್ರದಾಯ ಮೀರುವವರು, ಪರಾನ್ನಕ್ಕೆ ಆಶೆ ಪಡುವವರು, ತಮ್ಮ ಮಾಂಸವನ್ನು ತಾವೇ ತಿನ್ನುತ್ತ ಒಂದೊಂದು ನರಕದಲ್ಲಿ ಒಂದೊಂದು ವರ್ಷದಂತೆ ಯಾತನೆ ಅನುಭವಿಸಬೇಕಾಗುವದು.

ಬ್ರಾಹ್ಮಣನಾಗಿಯೂ ದೇವರ ಪೂಜೆ, ಪಂಚಮಹಾಯಜ್ಞಗಳನ್ನು ಮಾಡದವನು, ಲಾಲಾಭಕ್ಷವೆಂಬ ನರಕಕ್ಕೆ ಹೋಗಿ ಅಲ್ಲಿ ಮಹಾದುಃಖವನ್ನು ಅನುಭವಿಸುವನು. ಬೇರೆ ಸ್ತ್ರೀ ಹಾಗೂ ಹೆಣ್ಣು ಪಶುಗಳಲ್ಲಿ ರೇತಸ್ಸಿಂಚನ ಮಾಡಿದವನು, ತನ್ನ ರೇತಸ್ಸನ್ನು ತಾನೇ ತಿನ್ನುತ್ತ ವಸಾಕೂಪವೆಂಬ ನರಕದಲ್ಲಿ ದುಃಖಿಸುವನು. ದೇವಸ್ಥಾನಗಳ ದ್ರವ್ಯ, ಮತ್ತು ಗುರುಮಠದ ದ್ರವ್ಯ ಅಪಹರಿಸುವವನು ಬ್ರಹ್ಮಹತ್ಯೆಯ ಮಹಾಪಾಪಕ್ಕೆ ವಿಧಿಸುವ ಎಲ್ಲ ಶಿಕ್ಷೆ ಅನುಭವಿಸುವನು. ಅನಾಥರ ಹಣ ಅಪಹರಿಸುವವರು, ಅನಾಥರನ್ನು ತಿರಸ್ಕರಿಸುವವರು ಸಾವಿರಾರು ವರ್ಷ ನರಕದಲ್ಲಿ ಕೊಳೆಯುತ್ತಾರೆ.

ನೀರಿನಲ್ಲಾಗಲಿ, ದೇವಸ್ಥಾನದಲ್ಲಾಗಲಿ ಮಲವಿಸರ್ಜನೆ ಮಾಡುವವನು, ಉಗುಳುವವನು, ಎಂಜಲು ಹಾಕುವವನು, ಕುದಿಯುವ ಎಣ್ಣೆಯನ್ನು ಕುಡಿದು ಯಮದೂತರ ಭರ್ಜಿಗಳಿಂದ ಹೊಡೆಸಿಕೊಂಡು, ದೇಹದಲ್ಲಿ ಛಿದ್ರವಿಛಿದ್ರವಾಗಿ ಕುಂಭೀಪಾಕದಲ್ಲಿ ನರಳುವನು. ಸುಳ್ಳು ಸಾಕ್ಷಿ ಹೇಳಿದವನು, ಅತಿಕಾಮಿಗಳು, ಸುಳ್ಳು ಸುದ್ದಿ ಪ್ರಸಾರಕರು ರೌರವ ನರಕದಲ್ಲಿ ಮಹಾ ದುಃಖವನ್ನು ಅನುಭವಿಸುವರು. ಇದರಂತೆ ಋತುಮತಿಯಾದ ತನ್ನ ಹೆಂಡತಿಯೊಡನೆ ನಾಲ್ಕು, ಆರು, ಎಂಟು, ಹತ್ತು, ಹನ್ನೆರಡು, ಹದಿನಾಲ್ಕು, ಹದಿನಾರು- ಈ ದಿನಗಳಲ್ಲಿ ಅಪೇಕ್ಷಿಸಿದರೂ ಆರೋಗ್ಯದಿಂದ ಇದ್ದರೂ ಸಂಭೋಗ ಮಾಡದೇ ಇರುವ ಮನುಷ್ಯನು ರೌರವ ನರಕಕ್ಕೆ ಹೋಗುವನು. ತನ್ನ ಧರ್ಮ ಬಿಟ್ಟು ಧರ್ಮಾಂತರವನ್ನು ಅವಲಂಬಿಸ ಹೊರಟ ಮನುಷ್ಯನನ್ನು ತಾನು ಸಮರ್ಥನಿದ್ದರೂ, ತಡೆಯದಿದ್ದರೆ ರೌರವ ನರಕಕ್ಕೆ ಹೋಗುತ್ತಾನೆ. ಪಾಪ ಮಾಡದಿರುವ ಸಜ್ಜನರ ಮೇಲೆ ಸುಳ್ಳು ಸುಳ್ಳೇ ಪಾಪದೂಷಣೆ ಮಾಡುವವರು ಆಚಂದ್ರಾರ್ಕವಾಗಿ ನರಕದಲ್ಲಿ ಬೇಯುತ್ತಾರೆ. ಆದರೆ ಅವರೇ ನಿಜವಾದ ಪಾಪಿಗಳನ್ನು ನಿಂದೆ ಮಾಡಿದರೆ ಅವರ ಪಾಪದಲ್ಲಿ ಅರ್ಧ ತಾನಾಗಿ ಪರಿಹಾರವಾಗುತ್ತದೆ. ವಿಹಿತವಾದ ವ್ರತೋಪವಾಸ ಮಾಡದವನಿಗೆ ಅಸಿಪತ್ರವನ, ಕೊಡುತ್ತೇನೆಂದು ವಚನ ಕೊಟ್ಟು ಕೊಡದವನಿಗೆ ಲಾಲಾಭಕ್ಷ್ಯ, ತೋಟವನ್ನು ಹಾಳು ಮಾಡುವವನಿಗೆ ನಾಯಿಯ ಭೋಜನ, ದೇವಸ್ಥಾನ, ಕೆರೆ, ಹೂವಿನ ತೋಟಗಳನ್ನು ಹಾಳುಮಾಡುವವನಿಗೆ ಸರ್ವನರಕ, ದುಃಖ, ಭೋಗ. ಪರರ ಎಂಜಲು ತಿನ್ನುವವರಿಗೂ, ಮಿತ್ರ ದ್ರೋಹಿಗಳಿಗೂ ಸೂರ್ಯ ಚಂದ್ರರಿರುವವರೆಗೆ ನರಕಯಾತನೆ. ದೇವಯಜ್ಞ, ಪಿತೃಯಜ್ಞ ಬಿಟ್ಟು, ವೇದೋಕ್ತ ವಿಧಾನಗಳಿಂದ ದೂರಾದ ಪಾಖಂಡಿಗಳು ಎಲ್ಲ ನರಕದ ದುಃಖಗಳನ್ನು ಅನುಭವಿಸಬೇಕಾಗುವದು. ಮಹಾರಾಜನೇ ಈ ಎಲ್ಲ ಪಾಪಗಳಿಗೂ, ಧರ್ಮ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟವೆ. ಅವುಗಳನ್ನು ವಿಧ್ಯುಕ್ತ ರೀತಿಯಿಂದ ಆಚರಿಸಿದರೆ ಎಲ್ಲ ಪಾಪಗಳು ಪರಿಹಾರವಾಗಿ ನರಕದ ಯಾತನೆ ತಪ್ಪುತ್ತದೆ. ಎಲ್ಲ ಪಾಪಗಳಿಗೂ ಪರಿಹಾರಕ್ಕಾಗಿ ಶ್ರೀ ಹರಿಯ ಸನ್ನಿಧಾನದಲ್ಲಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕು.

**ಪ್ರಾಯಶ್ಚಿತ್ತೇಷು ಚೀರ್ಣೇಷು ಪಾಪರಾಶಿಃ ಪ್ರಣಶ್ಯತಿ**
**ಪ್ರಾಯಶ್ಚಿತ್ತಾನಿ ಕಾರ್ಯಾಣಿ ಸಮೀಪೇ ಕಮಲಾಪತೇ :**
**ನ್ಯೂನಾತಿರಿಕ್ತಕೃತ್ಯಾನಾಂ ಸಂಪೂರ್ತಿಕರಣಾಯ ಚ ॥**

**ಗಂಗಾ ಚ ತುಲಸೀ ಚೈವ ಸತ್ಸಂಗೋ ಹರಿಕೀರ್ತನಂ॥**
**ಅನಸೂಯಾ ಹ್ಯಹಿಂಸಾ ಸ ಸರ್ವೇಪ್ಯೇತೇ ಹಿ ಪಾಪಹಾಃ ॥**
**ವಿಷ್ಣ್ವರ್ಪಿತಾನಿ ಕರ್ಮಾಣಿ ಸಫಲಾನಿ ಭವಂತಿ ಹಿ ॥**

ನಾವು ಮಾಡಿದ ಕಾರ್ಯಗಳಲ್ಲಿ ಏನಾದರೂ ನ್ಯೂನತೆ, ಅತಿರೇಕ ಆಗಿದ್ದರೆ, ಅವೆಲ್ಲವೂ ಸಾಂಗವೂ, ಸಂಪೂರ್ಣವೂ ಆಗಬೇಕಾದರೆ, ಗಂಗಾತೀರದಲ್ಲಾಗಲಿ, ತುಲಸೀವನದಲ್ಲಾಗಲಿ, ಶ್ರೀ ಹರಿಯನ್ನು ಪೂಜಿಸಿ, ಅವನ ನಾಮ ಸಂಕೀರ್ತನೆ ಮಾಡಿ ಅವನಲ್ಲಿ ಸರ್ವಕರ್ಮ ಸಮರ್ಪಣೆ ಮಾಡಬೇಕು. ಅಸೂಯೆ ಇಲ್ಲದೆ ಯಾವ ಪ್ರಾಣಿಯನ್ನೂ ಹಿಂಸೆ ಮಾಡದಿದ್ದರ ಅದೇ ಹಿಂದಿನ ಪಾಪಗಳನ್ನೆಲ್ಲ ಪರಿಹರಿಸಿ ಪುಣ್ಯಪ್ರದಾನ ಮಾಡುತ್ತದೆ.

ಭಗವಂತನಿಗೆ ಅರ್ಪಿಸದ ಪುಣ್ಯಕರ್ಮಗಳೆಲ್ಲವೂ ಬೂದಿಯಲ್ಲಿ ಹೋಮಮಾಡಿದಂತೆ. ನಿತ್ಯ ಅಥವಾ ನೈಮಿತ್ತಿಕವಾದ ಅಥವಾ ಕಾಮ್ಯವಾದ ಯಾವದೇ ವಿಧ ಕರ್ಮವಾದರೂ ವಿಷ್ಣುವಿಗೆ ಸಮರ್ಪಣೆ ಮಾಡಿದರೆ ಸಫಲವಾಗುತ್ತದೆ. ಮೋಕ್ಷಸಾಧನವಾದ ಕರ್ಮಗಳನ್ನು ಕೂಡ ಭಗವಂತನಿಗೆ ಸಮರ್ಪಣೆ ಮಾಡಿದರೆ ಮಾತ್ರ ಸಾಫಲ್ಯ ಉಂಟು. ಶ್ರೀ ಹರಿಯು ಸರ್ವೋತ್ತಮನೆಂದು ತಿಳಿದು ಅವನಲ್ಲಿ ಅರ್ಪಣವಾದರೆ ಕರ್ಮವು ಸಾರ್ಥಕವಾಗುತ್ತದೆ. ಶ್ರೀಹರಿಯು ಸರ್ವೋತ್ತಮನೆಂದು ತಿಳಿದು ಅವನಲ್ಲಿ ಮಾಡಿದ ಭಕ್ತಿಯು ಸಕಲ ಪಾಪಗಳನ್ನು ಪರಿಹರಿಸುತ್ತದೆ. ಈ ಹರಿಭಕ್ತಿಯು ಪಾಪದ ಕಾಡಿಗೆ ದಳ್ಳುರಿ ಇದ್ದಂತೆ. ತಾಮಸ, ರಾಜಸ, ಸಾತ್ವಿಕವೆಂದು ಜೀವರು ಮೂರು ವಿಧರಾಗಿದ್ದಾರೆ. ಈ ವಿಧರಾದ ಮೂವರ ಬಗೆಬಗೆಯ ಭಾವನೆಗಳನ್ನು ಅನುಸರಿಸಿ, ಈ ಭಕ್ತಿಯು ಹತ್ತು ವಿಧವಾಗಿರುತ್ತದೆ. ಶ್ರೀ ಹರಿಯಲ್ಲಿ ಮಾಡುವ ತಾಮಸ ಭಕ್ತಿ-ಉತ್ತಮ, ಮಧ್ಯಮ, ಅಧಮ, ಎಂದು ಮೂರು ವಿಧವಾಗಿದೆ. ಪರರಿಗೆ ಕೇಡಾಗಲಿ ಎಂಬ ಉದ್ದೇಶದಿಂದ ವಿಶ್ವಾಸ ಪೂರ್ವಕವಾಗಿ ಶ್ರೀ ಹರಿಯನ್ನು ಭಜಿಸಿದರೆ ಆ ಭಕ್ತಿಯು- ಅಧಮತಾಮಸ. ಪುರುಷನಲ್ಲಿ ಆಸಕ್ತಳಾದ ಸ್ತ್ರೀಯು ಪರಗಂಡನಲ್ಲಿ ಕೋರಿಕೆಗೆ ನಡೆದುಕೊಂಡಂತೆ ಶ್ರೀ ನಾರಾಯಣನನ್ನು ಕಪಟ ಭಕ್ತಿಯಿಂದ ಪೂಜಿಸುವದು ಮಧ್ಯಮ ತಾಮಸ. ಇನ್ನೊಬ್ಬರು ಮಾಡುವ ದೇವಪೂಜೆಯನ್ನು ನೋಡಿ, ಅಸೂಯೆಯಿಂದ ತಾನೂ ಹರಿಪೂಜೆ ಮಾಡುವವದು ಉತ್ತಮ ತಾಮಸ. ಧನಧಾನ್ಯ, ಕನಕ, ಕಾಂತೆ ಮುಂತಾದ ಯಾವ ಫಲವನ್ನೂ ಅಪೇಕ್ಷಿಸದೇ ಶ್ರದ್ಧೆಯಿಂದ ಹರಿಯನ್ನು ಪೂಜಿಸುವ ಭಕ್ತಿ ಅಧಮರಾಜಸ. ಕೀರ್ತಿಯ ಉದ್ದೇಶದಿಂದ ಉತ್ಕೃಷ್ಟ ಭಕ್ತಿಪೂರ್ವಕ ಹರಿಯನ್ನು ಪೂಜಿಸುವದು ಮಧ್ಯರಾಜಸ. ಸಾಲೋಕ್ಯಾದಿ, ಮೋಕ್ಷ ಪಡೆಯುವ ಉದ್ದೇಶದಿಂದ ಹರಿಯನ್ನು ಪೂಜಿಸುವದು ಉತ್ತಮ ರಾಜಸ.

ಇದರಂತೆ ತಾನು ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳಲಿಕ್ಕಾಗಿ, ಉತ್ತಮ ಶ್ರದ್ಧೆಯಿಂದ ಹರಿಯನ್ನು ಪೂಜಿಸುವ ಭಕ್ತಿಯು ಅಧಮಸಾತ್ವಿಕ. ಹರಿಯು ಪ್ರೀತನಾಗಲಿ ಎಂದು ಸಂಕಲ್ಪ ಪೂರ್ವಕ ಹರಿಯನ್ನು ಪೂಜಿಸುವ ಭಕ್ತಿಯು ಮಧ್ಯಮ ಸಾತ್ವಿಕ. ಭಗವದಾಜ್ಞೆಯೆಂಬ ಅನುಸಂಧಾನದಿಂದ ಯಾವ ಫಲ ಬಯಸದೆ ಶ್ರೀ ಹರಿಯನ್ನು ಆರಾಧಿಸುವ ಭಕ್ತಿ ಉತ್ತಮ ಸಾತ್ವಿಕ. ಎಲ್ಲ ವಿಧವಾದ ಭಕ್ತಿಗಳಲ್ಲಿ ಈ ಉತ್ತಮ ಸಾತ್ವಿಕ ಭಕ್ತಿಯೇ ಸರ್ವಶ್ರೇಷ್ಠವಾಗಿದೆ. ''ನನ್ನಲ್ಲಿ ಅಂತರ್ಯಾಮಿಯಾಗಿರುವ ಶ್ರೀ ವಿಷ್ಣುವೇ ಪರದೇವ-ಈ ಎಲ್ಲ ಜಗತ್ತಿನಲ್ಲಿ ಅಂತರ್ಯಾಮಿಯಾಗಿ ಇದ್ದ ಆ ಪರಮಾತ್ಮನನ್ನು ಆಶ್ರಯಿಸಿ ಕೊಂಡು ಈ ಜಗತ್ತು ಇರುತ್ತದೆ. ಅವನೇ ಸರ್ವೋತ್ತಮ. ನಾನು ಅವನ ಸೇವಕನೆಂದು'' ತಿಳಿದುಕೊಂಡು, ಮೋಕ್ಷಾದಿ ಪುರುಷಾರ್ಥಗಳನ್ನು ಅಪೇಕ್ಷಿಸದೇ ಭಗವಂತನ ಪ್ರೀತ್ಯರ್ಥ ವಾಗಿಯೇ ಎಲ್ಲ ಕರ್ಮಗಳನ್ನು 'ನಾಹಂ ಕರ್ತಾ ಹರಿಃ ಕರ್ತಾ' ಎಂದು ಸಂಕಲ್ಪ ಪೂರ್ವಕವಾಗಿ ಮಾಡಿ ಶ್ರೀ ಹರಿಗೇ ಸಮರ್ಪಣೆ ಮಾಡುವವನ ಅವಿಚ್ಛಿನ್ನ ಪ್ರೇಮ ಪ್ರವಾಹರೂಪವಾದ ಭಗವದ್ಭಕ್ತಿಯು, ಹತ್ತನೆಯದಾದ, ಅತ್ಯುತ್ತಮೋತ್ತಮ ಭಕ್ತಿ ಎಂದು ಕರೆಯಲ್ಪಡುತ್ತದೆ.

ಈ ರೀತಿಯಾಗಿ ಭವಬಂಧನ ನಾಶಕವಾದ ಈ ಭಕ್ತಿಯು ಹತ್ತು ವಿಧವಾಗಿದೆ. ಅದರಲ್ಲಿಯೂ ಸಾತ್ವಿಕ ಭಕ್ತಿಯು, ಹತ್ತನೆಯದಾದ ಅತ್ಯುತ್ತಮೋತ್ತಮ ಭಕ್ತಿಯು ಸಕಲೇಷ್ಟಪ್ರದವಾಗಿದೆ. ಆದುದರಿಂದ ರಾಜನ್, ಭವಬಂಧನದಿಂದ ಮುಕ್ತನಾಗಬೇಕೆಂದು ಅಪೇಕ್ಷಿಸುವವನು, ಜನಾರ್ದನನಲ್ಲಿ ಭಕ್ತಿ ಮಾಡಬೇಕು. ಆದರೆ ಭಕ್ತಿಯ ನೆಪದಲ್ಲಿ ತನ್ನ

ಯಾವದೇ ವಿಹಿತ ಕರ್ಮಕ್ಕೆ ಲೋಪ ಬಾರದಂತೆ ನೋಡಿಕೊಳ್ಳಬೇಕು. ಸ್ವವಿಹಿತ ಧರ್ಮಬಿಟ್ಟು, ಕೇವಲ ಭಕ್ತಿಯಿಂದಲೇ ಶ್ರೇಯಸ್ಸನ್ನು ಪಡೆಯ ಬಯಸುವವನಿಗೆ ವಿಷ್ಣುವು ಪ್ರಸನ್ನನಾಗುವದಿಲ್ಲ. ಅವರವರಿಗೆ ವಿಹಿತವಾದ ಕರ್ಮಸಹಿತವಾದರೆ ಅದು ನಿಜವಾದ ಹರಿಭಕ್ತಿ ಎನಿಸುವದು. ಆದುದರಿಂದಲೇ ಎಲ್ಲ ಶಾಸ್ತ್ರಗಳಲ್ಲಿ ಮೇಧಾವಿ ಆಚಾರಕ್ಕೆ ಪ್ರಾಶಸ್ತ್ಯ ಕೊಟ್ಟು "ಆದ್ಯ ಕರ್ತವ್ಯ" ಎಂದು ಸದಾಚಾರವನ್ನೇ ನಿರ್ದೇಶಿಸಿದ್ದಾರೆ.

ಸರ್ವಾಗಮೇಷುಸದಾಚಾರಃ ಪ್ರಥಮಃ ಪರಿಕಲ್ಪಿತಃ
ಆಚಾರ ಪ್ರಭುವೋ ಧರ್ಮೋ ಧರ್ಮಸ್ಯ ಪ್ರಭುತಚ್ಯುತ :

ವೇದಾದಿ ಸಕಲ ಶಾಸ್ತ್ರಗಳಲ್ಲಿ ಆಚಾರವೇ ಪ್ರಥಮ ಕರ್ತವ್ಯವೆಂದು ಹೇಳಿದೆ. ಆಚಾರದಿಂದ ಧರ್ಮ ಉಂಟಾಗುತ್ತದೆ, ಧರ್ಮಕ್ಕೆ ಹರಿಯೇ ಸ್ವಾಮಿಯು.

ತಸ್ಮಾತ್ಕುರ್ಯಾದ್ ಹರೇರ್ಭಕ್ತಿಂ ಸ್ವಧರ್ಮಸ್ಯಾವಿರೋಧಿನೀಂ
ಸದಾಚಾರ ವಿಹೀನಾನಾಂ ಧರ್ಮಾ ಅಪ್ಯಸುಖಪ್ರದಾಃ ॥

ಆದುದರಿಂದ ವಿಹಿತ ಧರ್ಮಗಳಿಗೆ ಅವಿರುದ್ಧವಾಗಿ ಹರಿಯಲ್ಲಿ ಭಕ್ತಿ ಮಾಡಬೇಕು. ಸ್ವಧರ್ಮ ಹಾಗೂ ಸದಾಚಾರಗಳಿಂದ ರಹಿತವಾದ ಭಕ್ತಿಯು ಭಕ್ತಿಯೇ ಅಲ್ಲ. ಅದನ್ನು ಮಾಡಿಯೂ ಮಾಡದ್ದಂತೆ (ಸ್ವಧರ್ಮಹೀನಾ ಯಾ ಭಕ್ತಿಸ್ಸಾಕೃತೇವ ಪ್ರಕೀರ್ತಿತಾ) ರಾಜನೇ, ನೀನು ಕೇಳಿದ್ದಕ್ಕೆಲ್ಲ ನಾನು ಉತ್ತರವನ್ನು ಇಷ್ಟು ಹೊತ್ತಿನವರೆಗೆ ಹೇಳಿದ್ದೇನೆ. ಆದ್ದರಿಂದ ಧರ್ಮಿಷ್ಠನಾಗಿ ನಾರಾಯಣನನ್ನು ಪೂಜಿಸು. ಅದರಿಂದ ನೀನು ಶಾಶ್ವತವಾದ ಸುಖವನ್ನು ಹೊಂದುವಿ. ಭಗೀರಥ, ನಾನು ಈಗ ನಿನ್ನ ಸಮೀಪದಲ್ಲಿ ಬಂದು ಉದ್ದೇಶವನ್ನು ಹೇಳುತ್ತೇನೆ ಕೇಳು. ನಿನ್ನ, ಹಿಂದಿನ ಅಜ್ಜಂದಿರು ಕಪಿಲನನ್ನು ಕೆಣಕಿದರು. ಅದರಿಂದ ಆತ್ಮಘಾತವನ್ನೇ ಮಾಡಿಕೊಂಡರು. ಆ ಪಾಪದಿಂದಲೇ ಸತ್ತು ಸುಟ್ಟುಬಿದ್ದರು. ಅವರೆಲ್ಲರೂ ಈಗ ನರಕದಲ್ಲಿ ಕೊಳೆಯುತ್ತಿದ್ದಾರೆ. ಅವರೆಲ್ಲರೂ ನಿನ್ನ ತಾತ, ಮುತ್ತಾತರೇ ಅಲ್ಲವೆ ಅವರನ್ನು ಉದ್ಧರಿಸುವುದು ನಿನ್ನ ಕರ್ತವ್ಯ. ಆ ಉದ್ಧಾರಕ್ಕಾಗಿ ಇರುವ ಒಂದೇ ಮಾರ್ಗ-ಸ್ವರ್ಗದ ಗಂಗೆಯನ್ನು ಪಾತಾಳಕ್ಕೆ ಕರೆತರುವದು. ಅದೇ ನದಿಯು ಎಲ್ಲ ಪಾಪಗಳನ್ನು ಪರಿಹರಿಸುತ್ತದೆ. ಇದರಲ್ಲಿ ಸಂದೇಹವಿಲ್ಲ. ಕೂದಲು, ಮೂಳೆ, ಉಗುರು, ಹಲ್ಲು, ಬಾಯಿ, ಮುಂತಾದ ದೇಹದ ಯಾವದೇ ಭಾಗಕ್ಕೆ ಗಂಗೆಯ ನೀರು ತಾಕಿದರೆ ಸಾಕು. ಅದು ಅವರನ್ನು ವಿಷ್ಣು ಮಂದಿರಕ್ಕೆ ಕರೆದೊಯ್ಯುತ್ತದೆ. ಯಾವನ ಬೂದಿಯನ್ನು ಗಂಗೆಯಲ್ಲಿ ಚೆಲ್ಲುವರೋ, ಅವನ ಎಲ್ಲ ಪಾಪಗಳು ಪರಿಹೃತವಾಗಿ ಮುಕ್ತಿಮಂದಿರಕ್ಕೆ ಪ್ರಯಾಣ ಮಾಡುವನು. ನಾನು ನಿನಗೆ ನರಕ ವರ್ಣನೆ ಮಾಡುವಾಗ ಅನೇಕ ಪಾಪಗಳ ಪಟ್ಟಿಯನ್ನೇ ಕೊಟ್ಟಿನಲ್ಲವೆ? ಅವೆಲ್ಲ ಪಾಪಗಳು ಗಂಗಾನದಿಯ ನೀರಿನ ಒಂದು ಹನಿಯ ಸೇಚನ ಮಾತ್ರದಿಂದಲೇ ದೂರವಾಗುವವು.

ಹೀಗೆ ಯಮಧರ್ಮನು, ಧರ್ಮಾತ್ಮನಾದ ಭಗೀರಥನನ್ನು ಕುರಿತು ಉಪದೇಶ ಮಾಡಿ, ಕೂಡಲೇ ಅಲ್ಲಿಯೇ ಅಂತರ್ಧಾನ ಹೊಂದಿದನು. ಮೊದಲೇ ಮಹಾಪಂಡಿತ ಆ ಭಗೀರಥ, ಸರ್ವಶಾಸ್ತ್ರಗಳಲ್ಲಿಯೂ ಪಾರದರ್ಶಕ ಅವನ ಮೇಧಾಶಕ್ತಿ. ಅದರ ಮೇಲೆ ಸಾಕ್ಷಾತ್ ಯಮನೇ ಬಂದು ಧರ್ಮಸೂಕ್ಷ್ಮ ಉಪದೇಶಿಸಿದ, ಆದರಿಂದ ಅವನಿಗೆ ತನ್ನ ಮುಂದಿನ ಕರ್ತವ್ಯದ ಅರಿವಾಯಿತು. ಕೂಡಲೇ ಅವನು ತನ್ನ ಸಚಿವರನ್ನು ಕರೆದು, ಸಾಮ್ರಾಜ್ಯದ

ಭಾರವನ್ನು ಅವರಿಗೆ ವಹಿಸಿಕೊಟ್ಟು ತಾನು ಅರಣ್ಯಕ್ಕೆ ಹೊರಟ. ಅವನು ತನ್ನ ರಾಜಧಾನಿಯಿಂದ ಹೊರಟು ನೇರವಾಗಿ ಬಂದದ್ದು ಹಿಮಾಚಲ ಪರ್ವತಕ್ಕೆ. ಆ ಪರ್ವತದಲ್ಲಿರುವ ನರನಾರಾಯಣಾಶ್ರಮಕ್ಕೆ ಹೋಗಿ ಅಲ್ಲಿ ಭಗವದರ್ಶನ ಪಡೆದು ಅಲ್ಲಿಂದ ಪಶ್ಚಿಮಕ್ಕೆ ತಿರುಗಿದ. ಅಲ್ಲಿಂದ ಹದಿನಾರು ಗಾವುದ ದೂರದಲ್ಲಿಯೇ ತಲೆ ಎತ್ತಿ ನಿಂತಿತ್ತು ಹಿಮಾಚಲದ ಉತ್ತುಂಗ ಶಿಖರ. ತುಷಾರದಿಂದ ಆಚ್ಛಾದಿತವಾದ ಷೋಡಶ ಯೋಜನ ವಿಸ್ತೀರ್ಣವಾದ ಆ ಶಿಖರದಲ್ಲಿ ನಿಂತು, ಆ ಭಗೀರಥ ಮಹಾರಾಜನು ಅಖಂಡ ತಪಸ್ಸನ್ನು ಆಚರಿಸಿದನು. ಅದರಿಂದ ಪ್ರಸನ್ನಳಾದ ಗಂಗೆಯನ್ನು ಪಾತಾಳ ಲೋಕಕ್ಕೆ ಕರೆತಂದ. ಗಂಗೆಯು ಭಗೀರಥನ ತಪಸ್ಸಿಗೆ ಮೆಚ್ಚಿ ಪ್ರಸನ್ನಳಾದಳು. ಮೂರು ಲೋಕವನ್ನೇ ಪವಿತ್ರಗೊಳಿಸಿದಳು.

ನಾರದ ಮಹಾಪುರಾಣದಲ್ಲಿ ಹದಿನಾಲ್ಕನೇ ಅಧ್ಯಾಯ ಮುಗಿದುದು



## ಭಗೀರಥನು ಗಂಗೆಯನ್ನು ಪಾತಾಳ ಲೋಕಕ್ಕೆ ಕರೆತಂದನು

**ಅಧ್ಯಾಯ - ೧೬**

**ನಾರದ:-** ಭಗೀರಥಮಹಾರಾಜನು ಹಿಮಗಿರಿಗೆ ಹೋಗಿ ಏನು ಮಾಡಿದನು? ಆ ಗಂಗಾನದಿಯನ್ನು ಹೇಗೆ ಕರೆತಂದನು? ಇದೆಲ್ಲವನ್ನು ನಮಗೆ ನಿರೂಪಿಸಿರಿ.

**ಸನಕ:-** ನಾರದಾ, ಭಗೀರಥರಾಜನು ಹಿಮಾಚಲಕ್ಕೆ ಹೋಗುವ ಮೊದಲು ದಾರಿಯಲ್ಲಿ ಗೋದಾವರಿ ತೀರಕ್ಕೆ ಬಂದನು. ಗಂಗೆಯನ್ನು ಕುರಿತು ತಪಸ್ಸನ್ನು ಮಾಡಲು ಸಂಕಲ್ಪಿಸಿದ. ಆ ಮಹಾರಾಜನು ಮನೆ ಬಿಟ್ಟು ಹೊರಟ ಕೂಡಲೇ ನಾರುಬಟ್ಟೆಯನ್ನು ಉಟ್ಟುಕೊಂಡು, ಬಿಸಿಲು ಮಳೆಗಳಿಗೆ ಅವನ ಕೂದಲುಗಳು ಜಡೆಗಟ್ಟಿದವು. ತಪೋನುಷ್ಠಾನಕ್ಕಾಗಿ ಹೇಮಾಚಲದ ಉತ್ತುಂಗ ಶೃಂಗದ ಎಡೆಗೆ ಹೊರಟ. ರಾಜ ಮಹರ್ಷಿಯು ಮಾರ್ಗ ಮಧ್ಯದಲ್ಲಿಯೇ ಭೃಗು ಋಷಿಯ ಆಶ್ರಮವನ್ನು ನೋಡಿದನು. ಗೋದಾವರೀ ತೀರದ ಆಶ್ರಮದ ಪರಿಸರ ಪ್ರದೇಶದಲ್ಲಿ ಬೆಳೆದ ವನಾಂತರದಲ್ಲಿ ಜಿಗರೆಗಳ ಓಡಾಟ, ಕಪಿಗಳ ಹಾರಾಟ. ಲತಾಕುಂಜಗಳಲ್ಲಿ ಭ್ರಮರಗಳ ಗೀತಗುಂಜಾರವ, ಮರಬಳ್ಳಿಗಳಲ್ಲಿ ಕುಕಿಲುವ ಕೋಗಿಲೆಗಳ ಕಲ ಕಲನಾದ. ಅಲ್ಲಲ್ಲಿ ಹೆದರಿ ಹಾರಾಡುವ ಚಮರೀಮೃಗಗಳ ಚಾಮರ ಸೇವೆ, ಆನಂದದಿಂದ ನೃತ್ಯಭಂಗಿಯಲ್ಲಿ ಲಾಸ್ಯವಾಡುವ ನವಿಲುಗಳ ತಾಂಡವ. ಆಶ್ರಮದ ಅಂಗಳದಲ್ಲಿಯೂ ನದೀ ತೀರದ ಸುದೂರ ಪರಿಸರದಲ್ಲಿಯೂ ಮುನಿಕನ್ಯೆಯರು ನೀರು ಹಾಕಿ ಬೆಳೆಸಿದ ಹೆಮ್ಮೆಯ ಹೆಮ್ಮರಗಳು ಸಾಲ, ತಾಲ, ತಮಾಲ, ಒಂದೇ ಎರಡೇ ಅಲ್ಲಿ ತಲೆ ಎತ್ತಿ ಮುಗಿಲು ಮುಟ್ಟುತ್ತಿರುವ ನಿಬಿಡ ಗಿಡಗಳ ಗುಂಪು, ಈ ಎಲ್ಲ ವೃಕ್ಷರಾಶಿಗೆ ಅಂಟಿಕೊಂಡು ಮಾಲತಿ, ಮಲ್ಲಿಗೆ, ಸಂಪಿಗೆ, ಮಾಧವಿ ಮುಂತಾದ ಬಳ್ಳಿಗಳು ಬೆಳೆದು ನಿಂತಿವೆ. ಆ ಎಲ್ಲ ಗಿಡಬಳ್ಳಿಗಳಲ್ಲಿ ಅರಳಿದ ಹೂವುಗಳ ಸುಗಂಧವು ಮಂದ ಮಾರುತದಿಂದ ಎಲ್ಲೆಡೆಗೂ ಹರಡಿ, ಇಡೀ ವನಾಂತರವೇ ಕಂಪಿಂಪು ಸೂಸುತ್ತಿದ್ದು, ದೂರದಿಂದಲೇ ವೇದಘೋಷವು, ಶಾಸ್ತ್ರ ಪಾಠವು ಕೇಳಿ ಬರುತ್ತಿದೆ. ಅನೇಕಾನೇಕ ಋಷಿಗಳು ಆಶ್ರಮದಲ್ಲಿ ಅಧ್ಯಾತ್ಮ ಸಾಧನೆ ಮಾಡುತ್ತಿದ್ದಾರೆ. ಇಂತಹ ಪರಮ ಪವಿತ್ರವಾದ ಪುಣ್ಯಾಶ್ರಮವನ್ನು ಜಟಾವಲ್ಕಲಧಾರಿಯಾದ ಭಗೀರಥನು ವಿನಯದಿಂದ ಪ್ರವೇಶಿಸಿದಾಗ ಆಶ್ರಮದಲ್ಲಿ ಭೃಗು ಋಷಿಗಳು ಕುಳಿತಿದ್ದರು. ಅವರೊಂದು ಬೆಳಕಿನ ಬೆಟ್ಟ, ಸುತ್ತಲೂ ಶಿಷ್ಯರು. ಅಕ್ಕಪಕ್ಕದಲ್ಲಿ

ಅನೇಕ ಮಹರ್ಷಿಗಳು, ಬೆಂಬದಿಯಲ್ಲಿ ಅನೇಕ ಬ್ರಹ್ಮಜ್ಞಾನಿಗಳು. ಅವರ ಮುಖದಿಂದ ಅವಿಚ್ಛಿನ್ನವಾಗಿ ಬ್ರಹ್ಮೋಪದೇಶ ನಡೆದಿತ್ತು. ಇಂತಹ ಮುನಿಮಾರ್ತಾಂಡರನ್ನು ದೂರದಿಂದಲೇ ಕಂಡ ಆ ಭಗೀರಥ, ವಿನಯದಿಂದ ಸಾಷ್ಟಾಂಗ ವಂದಿಸಿ, ಅವರ ಎರಡು ಪಾದಗಳನ್ನು ಹಿಡಿದು ಅವರ ಅಡಿದಾವರೆಯ ಹುಡಿಯನ್ನು ತಲೆಯಲ್ಲಿ ಧರಿಸಿದ. ಭೃಗು ಋಷಿಗಳು ಆದರಾತಿಥ್ಯ ನೀಡಿದರು. ಆ ಮಹಾತ್ಮರ ಆತಿಥ್ಯ ಸವಿದು, ಸಂತಸ ದುಂಬಿದ ಮಹಾರಾಜನು ಕೃತಜ್ಞತೆಯಿಂದ ಬಾಗಿ ಕೈಮುಗಿದ: ಪ್ರೀತಿಯಿಂದ ಮಾತನಾಡಿದ.

**ಭಗೀರಥ:-** ಮಾನ್ಯರೆ, ತಾವು ಎಲ್ಲ ಧರ್ಮಗಳ ರಹಸ್ಯ ಬಲ್ಲವರು. ಎಲ್ಲ ಶಾಸ್ತ್ರಗಳಲ್ಲಿಯೂ ಸರ್ವಂಕುಷ ಪ್ರಭುತ್ವ ತಮಗೆ, ನಾನು ಸಂಸಾರದಿಂದ ಭೀತನಾಗಿದ್ದೇನೆ. ನಮ್ಮಂತಹ ಪಾಮರರ ಉದ್ಧಾರದ ಮಾರ್ಗವೇನು? ತಮ್ಮಲ್ಲಿ ನನ್ನದು ಇದೇ ಪ್ರಶ್ನೆ. ಈ ಸಂಸಾರ ಸಾಗರದಿಂದ ನರನನ್ನು ದಾಟಿಸುವವನು ನಾರಾಯಣನೇ ಅಲ್ಲವೇ? ಅಂತಹ ಶ್ರೀ ಹರಿಯು ಯಾವುದರಿಂದ ಪ್ರೀತನಾಗುವನು? ಇದನ್ನು ನನಗಾಗಿ ತಿಳಿಸಿರಿ .

**ಭೃಗುಋಷಿ:-** ರಾಜನೆ, ನಿನ್ನ ಅಪೇಕ್ಷೆ ನನಗೆ ತಿಳಿಯಿತು. ನೀನು ಪುಣ್ಯವಂತರಲ್ಲಿ ಅಗ್ರಗಣ್ಯ. ಇಲ್ಲದಿದ್ದರೆ ನಿನ್ನ ಆತ್ಮೋದ್ಧಾರದ ವಿಚಾರಬಿಟ್ಟು ಲೋಕೋದ್ಧಾರಕ್ಕೆ ಏಕೆ ಹೊರಡುತ್ತಿದ್ದಿ? ಸತ್ಕರ್ಮಗಳನ್ನು ಮಾಡಿ ತನ್ನ ವಂಶೋದ್ಧಾರ ಮಾಡ ಹೊರಟ ರಾಜನು ಯಾವನೇ ಇರಲಿ, ಅವನು ನರರೂಪಿ ನಾರಾಯಣನೇ ಸರಿ. (ನಾರಾಯಣನು ಅವನಲ್ಲಿ ನಿಂತು ಈ ವಂಶೋದ್ಧಾರ ಕಾರ್ಯ ಮಾಡಿಸುತ್ತಾನೆ ಎಂದರ್ಥ) ದೇವತೆಗಳನ್ನೆಲ್ಲ ನಿಯಮನ ಮಾಡುವ ಆ ಶ್ರೀ ಹರಿಯು ಯಾವ ಕರ್ಮದಿಂದ ಪ್ರೀತನಾಗಿ ಯಾವ ಫಲವನ್ನು ಮಾಡುತ್ತಾನೆ ಎಂಬುದನ್ನು ಹೇಳುತ್ತೇನೆ. ಸಮಾಧಾನದಿಂದ ಹೇಳು.

**ಭವ ಸತ್ಯಪರೋ ರಾಜನ್ನಹಿಂಸಾನಿರತಸ್ತಥಾ ॥**
**ಸರ್ವಭೂತ ಹಿತೋ ನಿತ್ಯಂ ಮಾಽನೃತಂ ವೈಕ್ವಚಿತ್ ॥**

ರಾಜನೇ, ಸತ್ಯ ವಚನವನ್ನೇ ನುಡಿಯುವವನೂ, ಅಹಿಂಸೆಯಲ್ಲಿ ನಿರತನೂ, ಮತ್ತು ಜಗದಲ್ಲಿ ಸಕಲ ಪ್ರಾಣಿಗಳಿಗೂ ಹಿತಕರನೂ ಆಗಿರು. ಯಾವ ಸಂದರ್ಭದಲ್ಲೂ ಸುಳ್ಳು ಹೇಳಬೇಡ.

**ತ್ಯಜ ದುರ್ಜನ ಸಂಸರ್ಗಂ ಭಜ ಸಾಧು ಸಮಾಗಮಂ ॥**
**ಕುರು ಪುಣ್ಯಮಹೋರಾತ್ರಂ ಸ್ಮರ ವಿಷ್ಣುಂ ಸನಾತನಂ ॥**

ದುರ್ಜನರ ಸಹವಾಸವನ್ನು ಬಿಡು. ಸಜ್ಜನ ಸಂಗ ಮಾಡು. ಹಗಲಿರುಳು ಪುಣ್ಯ ಕೆಲಸ ಮಾಡು, ಅನಾದಿ ವಿಷ್ಣುವನ್ನು ಸ್ಮರಿಸು.

**ಕುರುಪೂಜಾಂ ಮಹಾವಿಷ್ಣೋರ್ಯಾಹಿ ಶಾಂತಿಮನುತ್ತಮಾಂ ॥**
**ದ್ವಾದಶಾಷ್ಟಾಕ್ಷರಂ ಮಂತ್ರಂ ಜಪ ಶ್ರೇಯೊ ಭವಿಷ್ಯತಿ ॥**

ಮಹಾವಿಷ್ಣುವಿನ ಪೂಜೆಯನ್ನು ಮಾಡು. ಅದರಿಂದ ಶಾಂತಿಯನ್ನು ಹೊಂದು. ವಾಸುದೇವ ದ್ವಾದಶಾಕ್ಷರ ಮಂತ್ರ ಮತ್ತು ನಾರಾಯಣಾಷ್ಟಾಕ್ಷರ ಮಂತ್ರಗಳನ್ನು ಜಪಿಸು. ಶ್ರೇಯಸ್ಸುಂಟಾಗುತ್ತದೆ.

**ಭಗೀರಥ:-** ತಾವು ಹೇಳಿದ್ದೇನೂ ನಿಜ. ಆದರೆ ಸತ್ಯ, ಭೂತಹಿತ, ಅನೃತ, ಇವುಗಳ ಸ್ವರೂಪವೇನು? ಸುಜ್ಞಾನಿಯ ಲಕ್ಷಣವೇನು? ವಿಷ್ಣು ಸ್ಮರಣೆ ಹೇಗೆ ಮಾಡಬೇಕು? ಅವನ ಪೂಜೆಯ ರೀತಿ ಯಾವದು? ಶಾಂತಿ ಎಂದರೇನು? ಅಷ್ಟಾಕ್ಷರ, ದ್ವಾದಶಾಕ್ಷರ ಮಂತ್ರಗಳಾವುವು? ಈ ಎಲ್ಲ ನನ್ನ ಪ್ರಶ್ನೆಗಳಿಗೆ ತತ್ವಜ್ಞಾನಿಗಳಾದ ತಾವು ದಯವಿಟ್ಟು ಸಮಾಧಾನ ಕಾರಕವಾದ ಉತ್ತರವನ್ನು ಹೇಳಿರಿ.

**ಭೃಗು:-** ಮಹಾರಾಜ, ನೀನು ನಿಜವಾಗಿಯೂ ಮಹಾಪ್ರಾಜ್ಞನೇ ಸರಿ. ಆದುದರಿಂದಲೇ ಇಂತಹ ಮಾರ್ಮಿಕವಾದ ಪ್ರಶ್ನೆಗಳನ್ನು ಮಾಡಿರುವಿ. ನಿನ್ನ ಎಲ್ಲ ಪ್ರಶ್ನೆಗಳಿಗೆ ನಾನು ಸಮಂಜಸ ಉತ್ತರ ಕೊಡುತ್ತೇನೆ. ಸತ್ಯ ಎಂದರೆ 'ಯಥಾರ್ಥಕಥನ' ಇದ್ದುದನ್ನು ಇದ್ದಂತೆ, ನಡೆದದ್ದನ್ನು ನಡೆದಂತೆಯೇ ಹೇಳುವದು ಸತ್ಯ. ಆದರೆ ಈ ಸತ್ಯವನ್ನು ನುಡಿಯುವಾಗ ಧರ್ಮನಿಷ್ಠರಾದವರು ಒಂದು ಅಂಶ ಗಮನವಿಡಬೇಕು. ಧರ್ಮಕ್ಕೆ ವಿರುದ್ಧವಾಗಿರಬಾರದು ಆ ಸತ್ಯ, ದೇಶಕಾಲಗಳನ್ನು ನೋಡಿಕೊಂಡು ಸುಜನರು ಸದ್ಬುದ್ಧಿಯಿಂದ ನುಡಿದ ಮಾತು ಸತ್ಯವೆನಿಸುತ್ತದೆ. ಆ ಸತ್ಯವು ಯಾವ ಪ್ರಾಣಿಗಳಿಗೂ ದುಃಖವನ್ನುಂಟು ಮಾಡಬಾರದು, ಅದು ಎಲ್ಲರಿಗೂ ಹಿತವಾಗಿರಬೇಕು. ಇದೇ ಸತ್ಯ.

ಯಾವ ಪ್ರಾಣಿಗಳಿಗೂ ಕಿಂಚಿತ್ತಾದರೂ ಹಿಂಸೆಯನ್ನು ಮಾಡದಿರುವದೇ ಅಹಿಂಸೆ ಎನಿಸುವದು. ಬರಿ ಹಿಂಸೆ ಮಾತ್ರ ಬಿಟ್ಟರೆ ಅಹಿಂಸೆಯಲ್ಲ. ಯಾರಿಗೂ ಮನಸ್ಸು ನೋಯದಂತೆ, ಕಾಯಕ್ಕೆ ಕ್ಲೇಶವಾಗದಂತೆ ನಡೆಯುವದೇ ಅಹಿಂಸೆ. ಇಂತಹ ಅಹಿಂಸೆಯು ಸರ್ವಕಾಮನೆಗಳನ್ನು ಪೂರ್ಣ ಮಾಡುವದು. ಇನ್ನು ಲೋಕಹಿತವೆಂದರೆ ಧರ್ಮಕಾರ್ಯಕ್ಕೆ ಸಹಾಯ, ನಿಷಿದ್ಧಕಾರ್ಯಕ್ಕೆ ವಿರೋಧ, ಇದೇ ಜ್ಞಾನಿಗಳಿಗೆ ಸಮ್ಮತವಾದ ಸರ್ವಲೋಕ ಹಿತ. ಅನೃತ ಎಂದರೆ ಮನಬಂದಂತೆ ಮಾತನಾಡುವದು. ಧರ್ಮಾಧರ್ಮವನ್ನೂ ವಿಚಾರಿಸುವದಿಲ್ಲ. ಇಂತಹ ಸುಳ್ಳು ಮಾತನಾಡುವದು. ಇಂತಹ ಈ ಅನೃತವು ಸಕಲ ವಿಧ ಶ್ರೇಯಸ್ಸಿಗೂ ವಿರೋಧಿಯಾಗಿದೆ.

ಇನ್ನು ದುರ್ಜನರೆಂದರೆ ಯಾರೆಂದು ನಿನ್ನ ನಾಲ್ಕನೆಯ ಪ್ರಶ್ನೆ

ಈ ಲೋಕದಲ್ಲಿಯ ಎಲ್ಲರನ್ನು ನಿಷ್ಕಾರಣವಾಗಿ ದ್ವೇಷಿಸುವವರೂ, ಯಾವಾಗಲು ದುರ್ಮಾರ್ಗದಲ್ಲಿಯೇ ತನ್ನ ಬುದ್ಧಿ ಓಡಿಸುವವರೂ ಆದ ಮೂರ್ಖರೇ, ದುರ್ಜನರು. ಅವರಿಗೆ ಯಾವ ಧರ್ಮ, ನೀತಿ ಕುಲಾಚಾರ ಸಂಪ್ರದಾಯಗಳಿಲ್ಲ, ಸರ್ವನೀತಿಗಳನ್ನು ಬಿಟ್ಟು ಮನಬಂದಂತೆ ನಡೆಯುವ ದಾರಿ ತಪ್ಪಿದ ದುರುಳರೇ, ಈ ದುರ್ಜನರು. ಇನ್ನು ಸಜ್ಜನರೆಂದರೆ, ಎಲ್ಲ ಜನರಿಗೆ ಹಿತವನ್ನುಂಟು ಮಾಡುವದರಲ್ಲಿಯೇ ಆಸಕ್ತಿಯುಳ್ಳ, ವೇದ ಶಾಸ್ತ್ರ ಮಾರ್ಗ ಅನುಸರಿಸುವ, ಧರ್ಮ ಅಧರ್ಮಗಳನ್ನು ನಿರುಕಿಸಿ ನಡೆಯುವ, ವಿವೇಕಶಾಲಿಗಳಾದ ಸಜ್ಜನರೇ ಸಾಧುಗಳು. ಶ್ರೀಹರಿಗೆ ಪ್ರೀತಿಕರವೂ, ಸಜ್ಜನರಿಗೆ ಅಭಿಮತವೂ, ಪರಮಾತ್ಮನ ಪ್ರಸಾದವನ್ನು ಹುಟ್ಟಿಸುವದೂ ಆದ ಕಾರ್ಯವೇ ಪುಣ್ಯ.

ವಿಷ್ಣುವಿನ ಸ್ಮರಣೆಯನ್ನು ಹೇಗೆ ಮಾಡಬೇಕೆಂದು ಪ್ರಶ್ನೆ ಮಾಡಿರುವಿ. ಸರ್ವ ದೋಷ ರಹಿತನಾದ, ಆದುದರಿಂದ ಅಜೇಯನಾದ, ವಿಷ್ಣುವು ಸರ್ವತ್ರ ವ್ಯಾಪ್ತ, ಸುಖ ರೂಪನಾದ ಶ್ರೀ ಹರಿಯು ಜಗತ್ತಿಗೂ, ನನಗೂ ನಿಯಾಮಕನು ಎಂಬುವ ಜ್ಞಾನ ಪೂರ್ವಕವಾಗಿ ಸರ್ವಾಂತರ್ಯಾಮಿಯಾದ ವಿಷ್ಣುವನ್ನು ಸ್ಮರಣೆ ಮಾಡುತ್ತ ಶಾಸ್ತ್ರೋಕ್ತ ವಿಧಿಪೂರ್ವಕವಾಗಿ

ಆ ಭಗವಂತನನ್ನು ಪೂಜೆ ಮಾಡಬೇಕು. ಅವನ ಗುಣಗಳನ್ನು ಸರಿಯಾಗಿ ತಿಳಿದು ಮನನ, ಧ್ಯಾನ ಮಾಡಬೇಕು. ಇದೇ ಶ್ರೀ ಹರಿಯ ಸ್ಮರಣೆ ಮಾಡುವ ರೀತಿ. ಈ ವಿಷ್ಣುವು ಗುಣ ಪರಿಪೂರ್ಣನು. ನಿತ್ಯ ಸತ್ಯ ಸ್ವರೂಪಿಯೂ, ಸರ್ವಾಂತರ್ಯಾಮಿಯೂ ಆಗಿರುವನು. ನನ್ನಲ್ಲಿಯೂ, ಪ್ರಾಣಿಗಳ ಹೃದಯ ಗುಹೆಯಲ್ಲಿಯೂ ಹೊರಗೆ ಬ್ರಹ್ಮಾಂಡದಲ್ಲಿಯೂ, ಪುರುಷ ಮತ್ತು ಕಾಲರೂಪದಿಂದ ವ್ಯಾಪ್ತನಾದ ಶ್ರೀ ಹರಿಯಲ್ಲಿ ಭೇದವಿಲ್ಲ ಎಂಬ ಭಕ್ತಿಯಿಂದ ಮಾಡಿದ ಸೇವೆಯೇ ವಿಷ್ಣುವಿನ ಪೂಜೆ ಎನಿಸುವದು. ಶತ್ರು ಮಿತ್ರರಲ್ಲಿ ಸಮ ಬುದ್ಧಿ ಅಂದರೆ ಎಲ್ಲರಲ್ಲಿಯೂ ಪರಮಾತ್ಮನು ನೆಲೆಸಿದ್ದಾನೆಂದು ತಿಳಿಯುವದು. ಇಂದ್ರಿಯ ನಿಗ್ರಹ. ದೇವರು ಕೊಟ್ಟದ್ದರಲ್ಲಿಯೇ ಸಂತೋಷಪಡುವದು. ಇವೆಲ್ಲ ಶಾಂತಿ ಎಂದು ಹೇಳಲ್ಪಡುತ್ತವೆ.

ಎಲ್ಲ ಪಾಪರಾಶಿಗಳನ್ನು ಪರಿಹರಿಸುವ ಅಷ್ಟಾಕ್ಷರದ ಮಹಾಮಂತ್ರವನ್ನು ನಿನಗೆ ಉಪದೇಶಿಸುತ್ತೇನೆ. ಈ ಮಹಾಮಂತ್ರವು ಮೋಕ್ಷರೂಪ ಮಹಾಪುರುಷಾರ್ಥ ಸಾಧಿಸುವ ಏಕೈಕ ದಿವ್ಯ ಸಾಧನವಾಗಿದೆ. ಸರ್ವಸಿದ್ಧಿಗಳು ಇದರಿಂದ ಕರತಲಾಮಲಕವಾಗುವವು. ಮೇಲಾಗಿ ಇದು ಶ್ರೀವಿಷ್ಣುವಿಗೆ ಅತ್ಯಂತ ಪ್ರಿಯಕರವಾದ ಮಂತ್ರ. ಈ ಅಷ್ಟಾಕ್ಷರ ಮಂತ್ರವನ್ನು ಯಾವಾಗಲೂ ಪ್ರಣವ ಮಂತ್ರಪೂರ್ವಕವಾಗಿಯೇ ಜಪಿಸಬೇಕು. 'ಓಂ ನಮೋ ನಾರಾಯಣಾಯ ' ಎನ್ನುವದೇ ಈ ಅಷ್ಟಾಕ್ಷರ ಮಂತ್ರ. ಇದರಂತೆ 'ಓಂ ನಮೋ ಭಗವತೇ ವಾಸುದೇವಾಯ ' ಎಂಬುದು ದ್ವಾದಶಾಕ್ಷರ ಮಂತ್ರವೆಂದು ಕರೆಯಲ್ಪಡುತ್ತದೆ. ಈ ಎರಡೂ ಮಂತ್ರಗಳಿಗೆ ಭಗವತ್ಪ್ರೀತಿಯೇ ಫಲ. ಆದರಿಂದ ಮೋಕ್ಷಾದಿ ಪುರುಷಾರ್ಥಗಳು ಅವಕ್ಕೆ ಆನುಷಂಗಿಕ ಫಲ. ಈ ಮಂತ್ರವನ್ನು ಜಪಿಸುವದಕ್ಕಿಂತ ಮೊದಲು ಭಗವಂತನ ದಿವ್ಯವಾದ ರೂಪವನ್ನು ಧ್ಯಾನಮಾಡಬೇಕು.

ಲಕ್ಷ್ಮೀಸಂಶ್ರೀತವಾಮಾಂಕಂ ತಥಾಭಯಕರಂ ಪ್ರಭುಂ ।
ಕಿರೀಟಕುಂಡಲಧರಂ ನಾನಾ ಮಂಡನಶೋಭಿತಂ ॥

ಭ್ರಾಜತ್ಕೌಸ್ತುಭಮಾಲಾಢ್ಯಂ ಶ್ರೀವತ್ಸಾಂಕಿತವಕ್ಷಸಂ ।
ಪೀತಾಂಬರಧರಂ ದೇವಂ ಸುರಾಸುರ ನಮಸ್ಕೃತಂ ॥
ಧ್ಯಾಯೇದನಾದಿನಿಧನಂ ಸರ್ವಕಾಮಫಲಪ್ರದಂ ।

ಶಂಖ ಚಕ್ರಗಳನ್ನು ಧರಿಸಿದವನು, ಶಾಂತ ಮೂರ್ತಿಯೂ, ಎಡತೊಡೆಯ ಮೇಲೆ ಲಕ್ಷ್ಮಿಯಿಂದ ಆಶ್ರಿತನಾದವನು. ಕಿರೀಟ, ಕುಂಡಲಾದಿ ಆಭರಣ ಧರಿಸುವನು ಶ್ರೀವತ್ಸ ಚಿನ್ಹದಿಂದ ಲಾಂಛಿತ ಆದ ವಕ್ಷಸ್ಥಳವುಳ್ಳವನು. ಕೌಸ್ತುಭ ಮಣಿಯನ್ನು ಧರಿಸಿದವನು. ಸುರಾಸುರರಿಂದ ನಮಸ್ಕೃನು, ಪೀತಾಂಬರ ಧರಿಸಿದವನು, ದಿವ್ಯವಾದ ವನಮಾಲೆಯನ್ನು ಧರಿಸಿದವನು. ಸಜ್ಜನರ ಸರ್ವ ಅಭೀಷ್ಟಗಳನ್ನು ಪೂರ್ಣ ಮಾಡುವವನು, ಜನನ ಮರಣರಹಿತನಾದ, ಎಲ್ಲರಿಗೂ ಅಭಯಪ್ರದಾಯಕನಾದ, ನಾಶರಹಿತನಾದ ಶ್ರೀಮನ್ ನಾರಾಯಣನನ್ನು ಧ್ಯಾನಮಾಡಬೇಕು.

ಈ ರೀತಿಯಾಗಿ ಧ್ಯಾನಮಾಡಿ, ಸರ್ವಂತರ್ಯಾಮಿಯೂ, ಗುಣಪರಿಪೂರ್ಣನೂ ಆದ, ಆ ನಾರಾಯಣನನ್ನು ಸ್ಮರಿಸುತ್ತ ಅಷ್ಟಾಕ್ಷರ ಹಾಗೂ ವಾಸುದೇವಾಷ್ಟಾಕ್ಷರ ಮಂತ್ರಗಳನ್ನು ಜಪಿಸಬೇಕು. ನೀನು ಪ್ರಶ್ನೆ ಮಾಡಿದ್ದರಿಂದ ಈ ಎಲ್ಲ ವಿವರಗಳನ್ನು ನಿನಗೆ ನಾನು ತಿಳಿಸಿದ್ದಾಯಿತು. ನಿನಗೆ ಕಲ್ಯಾಣವಾಗಲಿ. ನೀನು ಕೈಕೊಳ್ಳಲಿರುವ ತಪಸ್ಸು ಯಶಸ್ವಿಯಾಗಲಿ.

ನೀನು ಆ ತಪಸ್ಸಿದ್ಧಿಯನ್ನು ಪಡೆದು ಸಂತೋಷವನ್ನು ಹೊಂದು. ಹೀಗೆ ಮಹರ್ಷಿಗಳಾದ ಭೃಗುಋಷಿಗಳಿಂದ ಆಜ್ಞೆಯನ್ನೂ, ಅನುಗ್ರಹವನ್ನೂ ಪಡೆದ ಭಗೀರಥನಿಗೆ ಬಹಳ ಸಂತೋಷವಾಯಿತು. ಗುರುವಿನ ಅನುಗ್ರಹವನ್ನು ಪಡೆದು, ಅವನು ತಪಕ್ಕೆ ತೆರಳಿದ ಹಿಮಗಿರಿಗೆ. ಆ ಹಿಮಾಲಯ ಪರ್ವತದಲ್ಲಿ ನಾದೇಶ್ವರ ಎಂಬ ಕ್ಷೇತ್ರ. ಅದು ನೋಡಲು ಅತ್ಯಂತ ಸುಂದರ. ತಪಸ್ಸಿಗೂ ಉಚಿತವಾದ ಸುರಮ್ಯ ಪ್ರದೇಶ.ಅಲ್ಲಿಯೇ ನಿಂತುಕೊಂಡ ರಾಜರ್ಷಿ. ಪ್ರಾರಂಭವಾಯಿತು ಅವನ ಅತಿ ದುಷ್ಕರವಾದ ತಪಶ್ಚರ್ಯ. ಮೂರು ಹೊತ್ತು ಸ್ನಾನ, ಗಡ್ಡೆ ಗೆಣಸು ಆಹಾರ. ಬಂದ ಅತಿಥಿಗಳಿಗೆಲ್ಲ ಆದರದ ಆತಿಥ್ಯ ಪ್ರತಿನಿತ್ಯ ಹೋಮ ಹವನ. ಯಾವಾಗಲೂ ಹಗಲಿರುಳು ನಾರಾಯಣನ ಧ್ಯಾನ ತ್ರಿಕಾಲದಲ್ಲಿಯೂ ಹೂ, ಹಣ್ಣು, ಕಾಯಿ, ನೀರು, ತುಳಸಿ ಮುಂತಾದವುಗಳಿಂದ ಶಾಸ್ತ್ರೋಕ್ತವಾದ ನಾರಾಯಣನ ಪೂಜೆ ಎಲ್ಲರ ಹಿತಾಚರಣೆ. ಈ ರೀತಿಯಾಗಿ ಸಾಗಿತು ಬಹುಸಮಯದವರೆಗೆ ಆ ರಾಜರ್ಷಿಯ ತಪಸ್ಸು. ಹೀಗೆ ಕೆಲವೊಂದು ಕಾಲ ಸ್ಥೈರ್ಯದಿಂದ ನಿಂತು ಶ್ರೀಮಾನ್ ನಾರಾಯಣನನ್ನು ಅಂತರಂಗದಲ್ಲಿ ಸಂತತವೂ ಧ್ಯಾನಗೈದು ಕಂದಮೂಲ ಫಲಹಾರಗಳನ್ನು ತೊರೆದ. ತನಗೆ ತನ್ನಿಂದ ಹಣ್ಣಾಗಿ ಉದುರಿಬಿದ್ದ. ಎಲೆಗಳನ್ನು ತಿಂದು ಶ್ವಾಸ ನಿರೋಧ ಮಾಡಿ ಉಗ್ರ ತಪಸ್ಸು ಆರಂಭಿಸಿದ, ಹೀಗೆಯೇ ಕೆಲವು ದಿನ ಕಳೆದ ಬಳಿಕ ಶ್ವಾಸೋಚ್ವಾಸ ನಿರೋಧಿಸಿ, ಏಕಾಗ್ರ ಮನಸ್ಸಿನಿಂದ, ದೇವದೇವೋತ್ತಮನಾದ ನಾರಾಯಣನನ್ನು ಧ್ಯಾನಮಾಡತೊಡಗಿದ. ಹೀಗೆ ಅರವತ್ತು ಸಾವಿರ ವರ್ಷ. ಶ್ವಾಸನಿರೋಧಮಾಡಿ ಅತ್ಯುಗ್ರತರವಾದ ತಪಸ್ಸು ಆಚರಿಸಿ ಅವನ ಮೂಗಿನ ಹೊರಳೆಯಿಂದ ಅಗ್ನಿಜ್ವಾಲೆಗಳು ತೂರಿ ಬರತೊಡಗಿದವು. ಅದರಿಂದ ಚರಾಚರ ಪ್ರಪಂಚವೇ ತಲ್ಲಣಿಸಿತು. ದೇವತೆಗಳಿಗೂ ತಾಕಿತು, ಅವನ ತಪಸ್ಸಿನ ಝಳ. ಗಾಬರಿಯಾಯಿತು ದೇವತಾಗಣ. ಜಗತ್ಪತಿಯಾದ ಶ್ರೀವಿಷ್ಣು ಇದ್ದಲ್ಲಿ ದೇವಾಧಿ ದೇವತೆಗಳು ಧಾವಿಸಿದರು. ಕ್ಷೀರಸಾಗರದ ಉತ್ತರದ ತೀರಕ್ಕೆ ಬಂದರು. ಮೊರೆಹೊಕ್ಕವರನ್ನು ಪೊರೆಯುವ ದೀನರಕ್ಷಕನಾದ ಆ ದೇವದೇವೋತ್ತಮ ನನ್ನು ಪ್ರಾರ್ಥಿಸತೊಡಗಿದರು.

॥ ದೇವಾ ಊಚುಃ ॥

ನತಾಃ ಸ್ಮ ವಿಷ್ಣುಂ ಜಗದೇಕನಾಥಂ
ಸ್ಮರತ್ಸಮಸ್ತಾರ್ತಿರಹಂ ಪರೇಶಂ ॥
ಸ್ವಭಾವ ಶುದ್ಧಂ ಪರಿಪೂರ್ಣ ಭಾವಂ ।
ವದಂತಿ ಯಂ ಜ್ಞಾನತನುಂ ಚ ತಜ್ಞಾಃ ।
ಧ್ಯೇಯಃ ಸದಾ ಯೋಗಿವರೈರ್ಮಹಾತ್ಮಾ

ಜಗತ್ತಿಗೆಲ್ಲ ಮುಖ್ಯ ಸ್ವಾಮಿಯೂ, ಸ್ಮರಿಸುವವರ ಎಲ್ಲ ದುಃಖಗಳನ್ನು ಪರಿಹರಿಸುವವನೂ, ಬ್ರಹ್ಮ, ರುದ್ರ, ಲಕ್ಷ್ಮೀ ಮುಂತಾದವರಿಗೂ ನಿಯಾಮಕನೂ ಆದ ಶ್ರೀವಿಷ್ಣುವಿಗೆ ನಮ್ಮ ನಮಸ್ಕಾರ.

ಸ್ವೇಚ್ಛಾ ಶರೀರೈಃ ಕೃತದೇವಕಾರ್ಯಃ
ಜಗತ್‌ಸ್ವರೂಪೋ ಜಗದಾದಿನಾಥ
ತಸ್ಮೈನತಾಃ ಸ್ಮಪುರುಷೋತ್ತಮಾಯ ।

ಯನ್ನಾಮಸಂಕೀರ್ತನತೋಽ ಖಿಲಾನಿ ।
ಸಮಸ್ತಪಾಪಾನಿ ಲಯಂ ಪ್ರಯಾಂತಿ ।

ಜ್ಞಾನ ಸ್ವರೂಪಿಯೂ, ನಿರ್ದೋಷನೂ, ಯೋಗಿಗಳಿಂದ ಧ್ಯೇಯನೂ, ತನ್ನ ಇಚ್ಛೆಯಿಂದ ಎತ್ತಿದ ಅವತಾರಗಳಿಂದ ಕ್ಷೇಮಕಾರ್ಯ ಸಾಧಿಸುವವನೂ ಆದ ಶ್ರೀಹರಿಗೆ ವಂದನೆ.

ತಮೀಶಮೀಢ್ಯಂ ಪುರುಷಂ ಪುರಾಣಂ
ನತಾಃ ಸ್ಮ ವಿಷ್ಣುಂ ಪುರುಷಾರ್ಥ ಸಿದ್ಧೈ
ಯತ್ತೇಜಸಾ ಭಾಂತಿ ದಿವಾಕರಾದ್ಯಾ ।
ನಾತಿಕ್ರಮಂತ್ಯಸ್ಯ ಕದಾಽಪಿ ಶಿಕ್ಷಾಃ ।

ಜಗತ್ತಿನ ಅಂತರ್ಯಾಮಿಯಾಗಿ, ಜಗದೇಕ ಅರಸನಾದ, ಈ ಪುರುಷೋತ್ತಮನ ನಾಮ ಸಂಕೀರ್ತನೆಯಿಂದಲೇ ಎಲ್ಲ ಪಾಪಗಳು ನಾಶಹೊಂದುತ್ತವೆ.

ಕಲಾತ್ಮಕಂ ತಂ ತ್ರಿದಶಾಧಿನಾಥಂ
ನಮಾಮಹೇ ವೈ ಪುರುಷಾರ್ಥರೂಪಂ ।
ಜಗತ್ಕರೋತ್ಯಬ್ಜಭವಸ್ತ್ವಜಸ್ರಂ
ಪುನಂತಿ ಲೋಕಾನ್ ಶ್ರುತಯಶ್ಚ ವಿಪ್ರಾಃ ॥

ಸೂರ್ಯ, ಚಂದ್ರಾದಿ, ಗ್ರಹಗಳು ಯಾರ ತೇಜಸ್ಸಿನಿಂದ ಬೆಳಗುತ್ತಿವೆಯೇ, ಅಂತಹ ಶ್ರೀಹರಿಯನ್ನು ನಮಿಸುತ್ತೇನೆ.

ತ್ವಾಮಾದಿದೇವಂ ಗುಣಸನ್ನಿಧಾನಂ ।
ಯದಾಜ್ಞಯಾ ತಂ ಪ್ರಣತಾಃ ಸ್ಮ ವಿಷ್ಣುಂ
ವರಂ ವರೇಣ್ಯಂ ಮಧುಕೈಟಭಾರಿಂ
ಸುರಾಸುರಾಭ್ಯರ್ಚಿತ ಪಾದಪೀಠಂ ॥

ಯಾರ ಆಜ್ಞೆಯಿಂದ ಚತುರ್ಮುಖ ಬ್ರಹ್ಮನು ಜಗದ ಸೃಷ್ಟಿಮಾಡುವನೋ ಮತ್ತು ವೇದಗಳು, ವಿಪ್ರರೂ, ಲೋಕವನ್ನು ಪವಿತ್ರಗೊಳಿಸುವರೋ ಅಂತಹ ಕಾಲ ನಿಯಾಮಕರಾದ ದೇವತೆಗಳ ಒಡೆಯನಾದ, ಎಲ್ಲರಿಂದಲೂ ಅರ್ಥಿತನಾದ ಪರಮಾತ್ಮನನ್ನು ನೆನಸುತ್ತೇನೆ.

ಸದ್ಭಕ್ತ ಸಂಕಲ್ಪಿತ ಸಿದ್ಧಿಹೇತುಂ ।
ಜ್ಞಾನೈಕವೇದ್ಯಂ ಪ್ರಣತಾಃ ಸ್ಮ ದೇವಂ ।
ಅನಾದಿಮಧ್ಯಾಂತಮದಂ ಪರೇಶ
ಮನಾದ್ಯವಿದ್ಯಾಖ್ಯ ತಮೋವಿನಾಶಂ ।

ಗುಣಪರಿಪೂರ್ಣನೂ, ಮಧುಕೈಟಭ ಎಂಬ ದೈತ್ಯರನ್ನು ಸಂಹರಿಸಿದವನೂ, ಸುರಾಸುರರಿಂದ ಪೂಜಿತನೂ ಆದ ವಿಷ್ಣುವನ್ನು ನಮಸ್ಕರಿಸುತ್ತೇನೆ.

ಸಚ್ಚಿತ್ಪರಾನಂದ ಘನಸ್ವರೂಪಂ ।
ರೂಪಾದಿಹೀನಂ ಪ್ರಣತಾಃ ಸ್ಮ ದೇವಂ

**ನಾರಾಯಣಂ ವಿಷ್ಣುಂ ಮನಂತಮೀಶಂ ।**
**ಪೀತಾಂಬರಂ ಪದ್ಮಭವಾದಿಸೇವ್ಯಂ**

ಸಜ್ಜನರ ಮನೋರಥ ಸಿದ್ಧಿಸಲು ಕಾರಣನಾದ, ತುದಿ, ಮೊದಲು, ಮಧ್ಯವಿಲ್ಲದ ಅನಾದಿಯಾದ, ಅಜ್ಞಾನವೆಂಬ ಕತ್ತಲೆ ಹೊಡೆದೋಡಿಸುವ, ದೇವದೇವೋತ್ತಮನನ್ನು ನಮಸ್ಕರಿಸುತ್ತೇನೆ. ಸತ್- ಚಿತ್- ಆನಂದ, ಸ್ವರೂಪಿಯೂ, ಪ್ರಾಕೃತರೂಪಾದಿ ರಹಿತನೂ, ಬ್ರಹ್ಮಾದಿ ದೇವತೆಗಳಿಂದ ಸೇವಿತನೂ, ಸರ್ವಸ್ವಾಮಿಯೂ, ಪಿತಾಂಬರಧಾರಿಯೂ ಆದ ಶ್ರೀ ಹರಿಯನ್ನು ನಮಸ್ಕರಿಸುತ್ತೇವೆ.

**ಯಜ್ಞಪ್ರಿಯಂ ಯಜ್ಞಕರಂ ವಿಶುದ್ಧಂ**
**ನತಾಃ ಸ್ಮಸರ್ವೋತ್ತಮಮವ್ಯಯಂ ತಂ**
**ಇತಿ ಸ್ತುತೋ ಮಹಾವಿಷ್ಣು ರ್ದೇವೈರಿಂದ್ರಾದಿಭಿಸ್ತದಾ ।**

ಯಜ್ಞಪ್ರಿಯನೂ, ಯಜ್ಞಾದಿ ಪುಣ್ಯ ಕರ್ಮಗಳನ್ನು ಮಾಡಿಸಿ ಫಲನೀಡುವವನು ಶ್ರೇಷ್ಠನೂ, ಆರು ವಿಧವಾದ ನಾಶರಹಿತನೂ ಆದ ಶ್ರೀ ಹರಿಯನ್ನು ನಮಸ್ಕರಿಸುತ್ತೇವೆ. ಹೀಗೆ ಇಂದ್ರಾದಿ ದೇವತೆಗಳು ಮಹಾವಿಷ್ಣುವನ್ನು ಸ್ತೋತ್ರ ಮಾಡಿದರು. ಅನಂತರ ಶ್ರೀ ಹರಿಯು ದೇವತೆಗಳ ಹೊಗಳುವಿಕೆಯಿಂದ ಹರ್ಷಗೊಂಡು, ರಾಜರ್ಷಿ ಭಗೀರಥನ ಉದ್ದೇಶವನ್ನು ಕೇಳಿ ಅವರೆಲ್ಲರಿಗೂ ಅಭಯ ನೀಡಿ ಸಮಾಧಾನ ಪಡಿಸಿದನು, ಮತ್ತು ಸ್ವಯಂ ತಾನೇ ಎದ್ದು ಭಗೀರಥರಾಜನು ತಪಸ್ಸಿಗೆ ಕುಳಿತ. ಹಿಮಗಿರಿಯ ಉತ್ತುಂಗ ಶೃಂಗಕ್ಕೆ ದಯಮಾಡಿಸಿದನು. ದಿಗ್ದಿಗಂತಗಳಲ್ಲೂ ವ್ಯಾಪಿಸಿ, ದೈದೀಪ್ಯಮಾನವಾಗಿ ಬೆಳಗುತ್ತ ಆ ಭಗವದ್ದೇವಕಾಂತಿ, ಜಗದ್ಗುರುವಾದ ಶ್ರೀ ಹರಿಯು ಭಗೀರಥನು ತಪಂಗೈಯುವ ಸ್ಥಳಕ್ಕೆ ಬಂದು ಪ್ರತ್ಯಕ್ಷನಾದನು. ಅಗಸೆಯ ಹೂವಿನಂತಹ ಬಣ್ಣ, ಎರಡೂ ಕಿವಿಗಳಲ್ಲಿ ಹೊಳೆಯುವ ರತ್ನ ಕುಂಡಲಗಳು, ಆ ಕುಂಡಲ ಕಾಂತಿಯಿಂದ ಹೊಳೆಯುವ ಮುಖಮಂಡಲ. ತಲೆಯ ಮೇಲೆ ಮಿಂಚುವ ಮಣಿಮುಕುಟ. ಎದೆಯ ಮೇಲೆ ಶ್ರೀವತ್ಸ, ಕೊರಳಲ್ಲಿ ಕೌಸ್ತುಭ ಮಣಿ, ಕತ್ತಿನಲ್ಲಿ ವನಮಾಲೆ. ನೀಳವಾದ ತೋಳು, ಸುಂದರ ಶರೀರ, ಎಲ್ಲ ಲೋಕಪಾಲಕರೂ, ದಿಕ್ಪಾಲಕರೂ, ಪೂಜಿಸಿ ಅರ್ಚಿಸಿದ ಅಡಿದಾವರೆಗಳು.

ಭಗವಂತನ ಈ ದಿವ್ಯ ಸ್ವರೂಪ ಕಂಡು, ಭಗೀರಥರಾಜನು ನೆಲದ ಮೇಲೆ ದಂಡಪ್ರಣಾಮ ಮಾಡಿದನು. ಅವನ ಮೈ ರೋಮಾಂಚನವಾಗಿತ್ತು. ಹರ್ಷದಿಂದ ಹೃದಯ ತುಂಬಿ, ಕಂಠ ಗದ್ಗದಿತವಾಗಿತ್ತು. 'ಕೃಷ್ಣಾ ಕೃಷ್ಣಾ ಕೃಷ್ಣಾ... ಶ್ರೀ ಕೃಷ್ಣಾ' ನಡೆದೇ ಇತ್ತು ಬಾಯಿಂದ ನಿರಂತರ ಧ್ಯಾನ. ಭಗೀರಥರಾಜನ ಭಕ್ತಿ ಉದ್ರೇಕದಿಂದ ಬರುತ್ತಿರುವ ಉಚ್ಚ ಸ್ವರದ ನಾಮೋಚ್ಚಾರಣೆ ಕೇಳಿ, ವಿಷ್ಣುವು ಸುಪ್ರಸನ್ನನಾದ. ಕರುಣೆಯಿಂದ ಭಗೀರಥನನ್ನು ಕುರಿತು ಹೇಳಿದ -

**ಶ್ರೀ ಹರಿ:-** ಭಗೀರಥನೆ, ನಿನ್ನ ಅಪೇಕ್ಷೆಯು ಪೂರ್ಣವಾಗುವದು. ಮಹಾದೇವನು, ನನ್ನ ಒಂದು ಬೇರೆ ಮೂರ್ತಿಯಿದ್ದಂತೆ. ಅವನನ್ನು ನೀನು ನಿನ್ನ ಶಕ್ತ್ಯಾನುಸಾರ ಸ್ತೋತ್ರ ಮಾಡು. ಆ ಮಹಾದೇವನು ನಿನ್ನ ಸಕಲ ಇಷ್ಟಾರ್ಥಗಳನ್ನು ಕೂಡಲೇ ನೆರವೇರಿಸುತ್ತಾನೆ. ಹಿಂದೆ ಶರಣಾಗತನಾದ ಚಂದ್ರನನ್ನು ಸ್ವೀಕರಿಸಲಿಲ್ಲವೇ ಆ ಪರಮೇಶ್ವರ? ಹಾಗೆಯೇ ನಿನ್ನನ್ನೂ ಅನುಗ್ರಹಿಸುವನು ಆ ಶಂಭುವು. ಆದುದರಿಂದ ನೀನು, ನಿತ್ಯವೂ ಈಶ್ವರನನ್ನು

ಸ್ತೋತ್ರ, ನಾಮ, ಸಂಕೀರ್ತನ, ಪ್ರಾರ್ಥನೆ ಮುಂತಾದವುಗಳಿಂದ ಆರಾಧಿಸು. ಅವನು ನಿನಗೆ ಸರ್ವವಿಧ, ಸೌಖ್ಯವನ್ನು ಪ್ರದಾನ ಮಾಡುವನು. ಶಿವನ ಸೇವೆಯು ನಿನಗೆ ಒಳ್ಳೆಯ ಶ್ರೇಯಸ್ಕರ. ಹೀಗೆ ಹೇಳಿ ಶ್ರೀ ಹರಿಯು ಅಂತರ್ಧಾನ ಹೊಂದಿದನು. ಮಹಾರಾಜ ಭಗೀರಥನು, ಜಗದೀಶ್ವರನು ಒಮ್ಮೆಲೆ ಕಣ್ಮರೆಯಾದ ಕೂಡಲೇ ಎದ್ದು ನಿಂತನು. ಇದೇನು ಕನಸೋ...? ನೆನಸೋ...? ಅಥವಾ ನಿಜವಾದ ಭಗವದ್ ಸಾಕ್ಷಾತ್ಕಾರವೋ..? ಅಚ್ಚರಿಯಲ್ಲ! ಮುಂದೇನು ಮಾಡಬೇಕೆಂಬುದು ಹೊಳೆಯಲಿಲ್ಲ. ಆಗ ಒಮ್ಮೆಲೆ ಆಕಾಶದಲ್ಲಿ ಅಶರೀರವಾಣಿಯು ಆಯಿತು.

'ಮಹಾರಾಜ, ಇದೆಲ್ಲ ಸತ್ಯ, ನೀನೇನು ಚಿಂತೆ ಮಾಡಬೇಡ.' ಈ ಆಕಾಶವಾಣಿಯನ್ನು ಕೇಳಿ, ಭಗೀರಥರಾಜನು ಸಕಲ ದೇವತೆಗಳಿಗೆಲ್ಲ ವಂದ್ಯನಾದ ಈಶ್ವರನನ್ನು ಸ್ತೋತ್ರ ಮಾಡಿದನು

॥ ಭಗೀರಥ ಉವಾಚ ॥

**ಪ್ರಣಮಾಮಿ ಜಗನ್ನಾಥಂ ಪ್ರಣತಾರ್ತಿ ಪ್ರಣಾಶನಂ ॥**
**ಪ್ರಮಾಣಗೋಚರಂ ದೇವಮೀಶಾನಂ ಪ್ರಣವಾತ್ಮಕಂ ।**
**ಜಗದ್ರೂಪಮಜಂ ನಿತ್ಯಂ ಸರ್ಗಸ್ಥಿತ್ಯಂತಕಾರಣಂ ॥**

ನಮಸ್ಕಾರ ಮಾಡಿದವರ ದುಃಖಗಳನ್ನು ಪರಿಹಾರ ಮಾಡಿ, ವೇದಾದಿ ಪ್ರಮಾಣ ಗೋಚರನಾದ, ಜಗದೊಡೆಯನಾದ, ಪ್ರಣವ ಸ್ವರೂಪಿಯಾದ, ಜಗದಂತರ್ಯಾಮಿಯಾದ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದ ಮಹಾದೇವನನ್ನು ನಮಸ್ಕರಿಸುತ್ತೇನೆ.

**ವಿಶ್ವರೂಪಂ ವಿರೂಪಾಕ್ಷಂ ಪ್ರಣತೋಽಸ್ಮ್ಯೂರ್ಧ್ವರೇತಸಂ ।**
**ಆದಿಮಧ್ಯಾಂತರಹಿತಮನಂತಮಜಮವ್ಯಯಂ ॥**

ವಿಶ್ವರೂಪಿಯೂ, ತುದಿಮೊದಲು, ಮಧ್ಯರಹಿತನೂ, ಹುಟ್ಟು ಸಾವು ಇಲ್ಲದ ಆದ್ಯ ವಿರೂಪಾಕ್ಷನನ್ನು ವಂದಿಸುತ್ತೇನೆ.

**ಸಮಾನಯಂತಿ ಯೋಗೀಂದ್ರಾಸ್ತಂ ವಂದೇ ಪುಷ್ಟಿ ವರ್ಧನಂ ।**
**ನಮೋ ಲೋಕಾಧಿನಾಥಾಯ ರಕ್ಷತೇ ಪರಿರಕ್ಷತೇ ॥**

ಯೋಗಿಶ್ರೇಷ್ಠರು ತಿಳಿದು ಗೌರವಿಸುವ, ಶಾಂತಿ, ತುಷ್ಟಿಪುಷ್ಟಿಗಳನ್ನು ನೀಡುವ, ಜಗತ್ತಿಗೆಲ್ಲ ಯೋಗೀಶ್ವರನಾದ.

**ನಮೋಸ್ತು ನೀಲಗ್ರೀವಾಯ ಪಶೂನಾಂ ಪತಯೇ ನಮಃ ।**
**ನಮಶ್ಚೈತನ್ಯ ರೂಪಾಯ ಪುಣ್ಯಾನಾಂ ಪತಯೇ ನಮಃ ॥**

ಜಗದ್ರಕ್ಷಕನಾದ, ಕಪ್ಪುಕೊರಳಿನ ಪಶುಪತಿಗೆ ನಮೋ ನಮಃ।

**ನಮಃ ಕಲ್ಪಪ್ರಕಲ್ಪಾಯ ಭೂತಾನಾಂ ಪತಯೇ ನಮಃ ।**
**ನಮಃ ಪಿನಾಕ ಹಸ್ತಾಯ ಶೂಲಹಸ್ತಾಯ ತೇ ನಮಃ ॥**
**ನಮಃ ಕಪಾಲಹಸ್ತಾಯ ಪಾಶಮುದ್ಗರ ಧಾರಿಣೇ ॥**
**ನಮಸ್ತೇ ಸರ್ವ ಭೂತಾಯ ಘಂಟಾಹಸ್ತಾಯ ತೇ ನಮಃ ॥**

ಚೈತನ್ಯರೂಪಿಯೂ, ಕಲ್ಪವೃಕ್ಷ ಸಮಾನನೂ, ಭೂತಾಧಿನಾಥನೂ, ಪಿನಾಕವನ್ನು ಧರಿಸಿದವನೂ, ತ್ರಿಶೂಲಧಾರಿಯೂ, ತಲೆಬುರುಡೆ ಹಿಡಿದವನೂ, ಪಾಶ, ಮುದ್ಗರ, ಘಂಟೆಗಳನ್ನು ಧರಿಸಿದವನೂ.

ನಮಃ ಪಂಚಾಸ್ಯ ದೇವಾಯ ಕ್ಷೇತ್ರಾಣಾಂ ಪತಯೇ ನಮಃ ।
ನಮಃ ಸಮಸ್ತ ಭೂತಾನಾಮಾದಿಭೂತಾಯ ಭೂಭೃತೇ ॥
ಐದು ಮೋರೆಯುಳ್ಳವನೂ, ಸಮಸ್ತ ಪ್ರಾಣಿಗಳಿಗೆ ಆದಿಕಾರಣನೂ,

ಅನೇಕ ರೂಪರೂಪಾಯ ನಿರ್ಗುಣಾಯ ಪರಾತ್ಮನೇ ।
ನಮೋ ಗಣಾಧಿದೇವಾಯ ಗಣಾನಾಂ ಪತಯೇ ನಮಃ ॥
ಅನೇಕ ರೂಪವುಳ್ಳವನೂ, ನಿರ್ಗುಣನೂ, ಗಣಾಧಿಪತಿಯೂ,

ನಮೋ ಹಿರಣ್ಯಗರ್ಭಾಯ ಹಿರಣ್ಯ ಪತಯೇ ನಮಃ ।
ಹಿರಣ್ಯ ರೇತಸೇ ತುಭ್ಯಂ ನಮೋ ಹಿರಣ್ಯಬಾಹವೇ ॥
ನಮಸ್ತೇ ಧ್ಯಾನ ರೂಪಾಯ ನಮಸ್ತೇ ಧ್ಯಾನ ಸಾಕ್ಷಿಣೇ ॥
ನಮಸ್ತೇ ಧ್ಯಾನ ಸಂಸ್ಥಾಯ ಧ್ಯಾನ ಗಮ್ಯಾಯ ತೇ ನಮಃ ॥
ಹಿರಣ್ಯಗರ್ಭನೂ, ಹಿರಣ್ಯ ಬಾಹುವೂ, ಹಿರಣ್ಯ ರೇತಸ್ಕನಾದವನೂ, ಧ್ಯಾನಗಮ್ಯನೂ, ಧ್ಯಾನಕ್ಕೆ ಮುಖ್ಯ ವಿಷಯನೂ, ಧ್ಯಾನಸಾಕ್ಷಿಯೂ ಆದ ಮಹಾದೇವನಿಗೆ ನನ್ನ ವಂದನೆ.

ಯೇನೇದಂ ವಿಶ್ವಮಖಿಲಂ ಚರಾಚರವಿರಾಜಿತಂ ।
ಪ್ರಧಾನಂ ಪುರುಷಶ್ಚೈವ ಅಭ್ರಾದ್ವೃಷ್ಟಿರಿವಾಜನಿ ॥
ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಅದಕ್ಕೆ ಕಾರಣರಾದ ಪ್ರಕೃತಿ ಪುರುಷರು ಮೋಡದಿಂದ ಮಳೆಯಾಗುವಂತೆ,

ಸ್ವಪ್ರಕಾಶಂ ಮಹಾತ್ಮಾನಂ ಪರಂಜ್ಯೋತಿಃ ಸನಾತನಂ ।
ಯಮಾನಮಂತಿ ತತ್ವಜ್ಞಾಃ ಸವಿತಾರಂ ನೃಚಕ್ಷುಷಾಂ ॥
ಉಮಾಕಾಂತಂ ನಂದಿಕೇಶಂ ನೀಲಕಂಠಂ ಸದಾಶಿವಂ ।
ಮೃತ್ಯುಂಜಯಂ ಮಹಾದೇವಂ ಪರಾತ್ಪರತರಂ ವಿಭುಂ ।
ಯಾವನಿಂದ ಸೃಷ್ಟಿಯಾದ ಮತ್ತು ಯಾವನನ್ನು ತತ್ವಜ್ಞಾನಗಳು, 'ಸ್ವ ಪ್ರಕಾಶ', ಶ್ರೀಮಹಾತ್ಮಾ ಪರಂಜ್ಯೋತಿ ' ಎಂಬುದಾಗಿ ಹೊಗಳುವವೋ, ಅಂತಹ ಪಾರ್ವತಿ ಪತಿಯಾದ, ನಂದೀಶ್ವರನಿಗೆ ಒಡೆಯನಾದ, ಕಪ್ಪುಕೊರಳಿನ, ಮೃತ್ಯುವನ್ನು ಗೆದ್ದ, ಕರುಣೆ ಮತ್ತು ಶಾಂತ ಸ್ವರೂಪದ, ಬ್ರಹ್ಮಸ್ವರೂಪಿಯಾದ, ಸರ್ವಕಾರಣನಾದ, ಶಿವನನ್ನು ವಂದಿಸುತ್ತೇನೆ.

ಪರಂ ಶಾಂತಂ ಬ್ರಹ್ಮರೂಪಂ ತಂ ವಂದೇಽ ಖಿಲಕಾರಣಂ ।
ಕಪರ್ದಿನೇ ನಮಸ್ತುಭ್ಯಂ ನೀಲಗ್ರೀವಾಯ ತೇ ನಮಃ ॥
ಜಟಾಧಾರಿಯೂ, ನೀಲಕಂಠನೂ, ಸಂಸಾರ ಕಾರಣನೂ, ಪರಿಶುದ್ಧ ಸ್ವರೂಪನೂ, ಅಣೋರಣೀಯನೂ, ಮಹತೋಮಹೀಯನೂ,

ಭವೋದ್ಭವಾಯ ಶುದ್ಧಾಯ ಜ್ಯೇಷ್ಠಾಯ ಚ ಕನೀಯಸೇ ।
ನಮ ಸ್ತ್ರಯೀಪತಯೇ ನಮಸ್ತೇ ಯಜ್ಞತಂತವೇ ॥

ವೇದಪ್ರತಿಪಾದ್ಯನೂ, ಯಜ್ಞನಿಯಾಮಕನೂ, ದಿಕ್ಕುಗಳಿಗೆಲ್ಲ ಒಡೆಯನೂ, ಕಾಲರೂಪಿಯೂ,

ಊರ್ಜೇ ದಿಶಾಂ ಚಪತಯೇ ಕಾಲಾಯ ಘೋರರೂಪಿಣೇ ।
ಕೃಶಾನು ರೇತಸೇ ತುಭ್ಯಂ ನಮೋಸ್ತು ಸುಮಹಾತ್ಮನೇ ॥

ಸೌಮ್ಯ ಸ್ವರೂಪಿಯೂ, ಅಗ್ನಿರೇತಸ್ಕನೂ ಆದ ಮಹಾದೇವ ನಿನಗೆ ನಮಸ್ಕಾರ.

ಯತಃ ಸಮುದ್ರಾಃ ಸರಿತೋದ್ರಯಶ್ಚ ।
ಗಂಧರ್ವಯಕ್ಷಾ ಸುರಸಿದ್ಧ ಸಂಘಾಃ ॥
ಸ್ಥಾಣುಶ್ಚರಿಷ್ಣು ಮಹದಲ್ಪತರಂ ಚ ।
ನಮೋಸ್ತು ದೇವಶ್ಚ ಶುಭಪ್ರದಶ್ಚ ॥

ಸಮುದ್ರ, ನದಿ, ಪರ್ವತ, ಗಂಧರ್ವ, ಯಕ್ಷ, ರಾಕ್ಷಸ, ಸಿದ್ಧಗಮ, ಸ್ಥಾವರ ಜಂಗಮವಸ್ತುಗಳು, ಚಿಕ್ಕದು, ದೊಡ್ಡದು ಯಾರಿಂದ ಸೃಷ್ಟವಾದವೋ ಅವನಿಗೆ (ಮಹಾದೇವನಿಗೆ) ನಮಸ್ಕಾರ.

ನತೋಽಸ್ಮಿತಂ ಯೋಗಿನತಾಂಘ್ರಿಪದ್ಮಂ ।
ಸರ್ವಾಂತರಾತ್ಮಾನಮರೂರಮೀಶಂ ।
ಸ್ವತಂತ್ರಮೇಕಂ ಗುಣಿನಂ ಗುಣಂ ಚ ।
ನಮಾಮಿ ಭೂಯಂ ಪ್ರಣಮಾಮಿ ಭೂಯಃ ॥

ಯೋಗಿಗಳೆಲ್ಲರೂ ವಂದಿಸುವ ಪಾದಪದ್ಮಗಳುಳ್ಳ, ಸ್ವತಂತ್ರನಾದ, ಗುಣ ಹಾಗೂ ಗುಣಿ ಎರಡೂ ಆದ ಈಶ್ವರನನ್ನು ನಮಿಸುತ್ತೇನೆ. ಈ ರೀತಿಯಾಗಿ ಭಗೀರಥರಾಜನ ಸ್ತೋತ್ರದಿಂದ ಸಂತುಷ್ಟನಾಗಿ, ಶಂಕರನು ರಾಜನ ಕಣ್ಣೆದುರಿಗೆ ವ್ಯಕ್ತನಾದನು. ಪಂಚಮುಖ, ಹತ್ತು ತೋಳು. ತಲೆಯ ಮೇಲೆ ಅರ್ಧಚಂದ್ರ, ಮುಖದಲ್ಲಿ ಮೂರು ಕಣ್ಣು, ಹಾವಿನ ಜನಿವಾರ, ಆನೆಯ ತೊಗಲು, ವಿಶಾಲ ವೃಕ್ಷಸ್ಥಳ ಈ ಎಲ್ಲ ಲಕ್ಷಣವುಳ್ಳ ಸಾಕ್ಷಾತ್ ಪರಮೇಶ್ವರನನ್ನು ಕಣ್ಣಿನಿಂದ ನೋಡಿ, ಭಗೀರಥರಾಜನು ಅವನಿಗೆ ದಂಡಪ್ರಣಾಮ ಮಾಡಿದನು. ಅನಂತರ ಎದ್ದು ನಿಂತು, ಶಿವನ ನಾಮಸ್ಮರಣೆ ಮಾಡುತ್ತ, ಅವನನ್ನು ಮತ್ತೆ ಮತ್ತೆ ನಮಸ್ಕರಿಸಿದನು, ಅದನ್ನು ತಿಳಿದು, ಅವನು ಭಗೀರಥನ ಭಕ್ತಿಯ ಗಾಢತೆ ಅರಿತು ನುಡಿದನು. ರಾಜನೆ, ನಿನ್ನ ಸ್ತುತಿಗೆ ಸಂತುಷ್ಟನಾಗಿದ್ದೇನೆ. ಬೇಕಾದ ವರಬೇಡು. ನೀನು ಈಗ ಮಾಡಿದ ಈ ಸ್ತೋತ್ರದಿಂದ ನನಗೆ ಅತ್ಯಧಿಕ ಹರ್ಷವಾಗಿದೆ.'

**ಭಗೀರಥ:**- ಮಹೇಶ್ವರನೇ, ನನ್ನ ಮೇಲೆ ಅನುಗ್ರಹ ಮಾಡಬೇಕೆಂದಿದ್ದರೆ ನಮ್ಮ ಪಿತೃಗಳಿಗೆ ಸದ್ಗತಿ, ಮುಕ್ತಿಗಾಗಿ ಗಂಗೆಯನ್ನು ನೀಡು ಮಹಾದೇವ : ರಾಜನೆ ನಿನಗೆ ನಾನು ಗಂಗೆಯನ್ನು ಕೊಟ್ಟಿದ್ದೇನೆ. ನಿನ್ನ ಪಿತೃಗಳಿಗೆ ಸದ್ಗತಿ ನಿನಗೆ ಮೋಕ್ಷ ದೊರಕುವದು ಎಂದು ಹೇಳಿ, ಅಂತರ್ಧಾನ ಹೊಂದಿದನು.

ಕೂಡಲೇ ಮಹಾದೇವರ ಜಟಾಜೂಟದಿಂದ, ಲೋಕಪಾವನೆಯಾದ ಗಂಗೆಯು ಹೊರಹೊಮ್ಮಿ ಚಿಮ್ಮತೊಡಗಿದಳು. ಎಲ್ಲ ಪ್ರಪಂಚವನ್ನು ಪವಿತ್ರಗೊಳಿಸುವ ಆ ಪುಣ್ಯ

ಪಯಸ್ವಿನಿಯು ಭಗೀರಥನನ್ನು ಅನುಸರಿಸಿ ಅವನ ಬೆನ್ನ ಹಿಂದೆ ನಡೆದಳು. ಆದುದರಿಂದ ಪಾಪನಾಶಿನಿಯಾದ ಆ ಪುಣ್ಯ ನದಿಗೆ ಅಂದಿನಿಂದ ' ಭಾಗೀರಥಿ ' ಎಂದು ಹೆಸರಾಯಿತು. ಭಗೀರಥನು ಆ ಸುರನದಿಯನ್ನು ಕರೆದೊಯ್ದನು. ಮೊದಲು ಸಗರನ ಮಕ್ಕಳೆಲ್ಲರೂ ಕಪಿಲಮುನಿಯ ಕಿಡಿಗಣ್ಣಿನ ನೋಟದಿಂದ ಸುಟ್ಟು ಬಿದ್ದಿದ್ದರಲ್ಲವೇ? ಅದೇ ಸ್ಥಳಕ್ಕೆ ದೇವಗಂಗೆಯನ್ನು ಕರೆತಂದ ಭಗೀರಥ, ಅವರೆಲ್ಲರನ್ನು ಭಾಗೀರಥಿಯು ತೋಯಿಸಿದಳು. ಭಾಗೀರಥಿಯ ನೀರು ಸಗರಕುಮಾರರ ಬೂದಿಯ ಮೇಲೆ ಹರಿಯುವದೊಂದೇ ತಡ, ನರಕದಲ್ಲಿ ಬಿದ್ದ ಸಗರಕುಮಾರರ ಜೀವಗಳು, ಪಾಪಗಳನ್ನು ತೊಳೆದುಕೊಂಡು ಉದ್ಧಾರ ಹೊಂದಿದರು. ಇಷ್ಟು ದಿನದಿಂದಲೂ, ಯಮದೂತರಿಂದಲೂ ಹೊಡೆತ ತಿಂದು, ದುಃಖಿಸುವ ಸಗರಕುಮಾರರನ್ನು ಇಂದು ಅದೇ ಯಮರಾಜನು ಗಂಗಾಜಲದಿಂದ ಪವಿತ್ರರಾದ, ಪುಣ್ಯಾತ್ಮರೆಂದು ಪೂಜೆ ಮಾಡತೊಡಗಿದನು, ಅವರ ಪಾಪಗಳೆಲ್ಲವೂ ಕಳೆದುಹೋಗಿವೆ ಎಂದು ತಿಳಿದು ಯಮಧರ್ಮನು ಆ ಸಗರ ಪುತ್ರರೆಲ್ಲರನ್ನೂ ವಿದ್ಯುಕ್ತವಾಗಿ ಪೂಜೆ ಮಾಡಿದನು, ಗಂಗಾದೇವಿಯ ಪಾವಿತ್ರ್ಯಕ್ಕೆ ವಂದಿಸಿ ಸಂತೋಷದಿಂದ ಹೇಳಿದನು.

**ಯಮಧರ್ಮ:-** ರಾಜಪುತ್ರರೆ, ನೀವು ಈ ಅತ್ಯಂತ ಘೋರವಾದ ನರಕದಿಂದ ಗಂಗೋದಕದ ಪ್ರಭಾವದಿಂದ ಮುಕ್ತರಾಗಿದ್ದೀರಿ. ಅಕೋ, ಅಲ್ಲಿ ನಿಮ್ಮನ್ನು ಕರೆದೊಯ್ಯಲು ದೇವವಿಮಾನ ಬಂದಿದೆ - 'ಏಳಿರಿ ' ವಿಷ್ಣು ಮಂದಿರಕ್ಕೆ ಪಯಣಿಸಿರಿ.

ಯಮಧರ್ಮನ ಈ ನುಡಿ ಬಹುಕಾಲದಿಂದ ನರಕದಲ್ಲಿ ಸವೆಯುತ್ತಿದ್ದ ಸಗರ ಕುಮಾರರ ಮನಸ್ಸಿಗೆ ಆಪ್ಯಾಯಮಾನ ಎನಿಸಿತು. ಜನ್ಮಾಂತರಗಳಿಂದ ಅವರಿಗೆ ಅಂಟಿದ ಪಾಪಗಳು ನಾಶವಾಗಿದ್ದವು. ಅವರೆಲ್ಲರಿಗೂ ದಿವ್ಯವಾದ ದೇಹವು ಪ್ರಾಪ್ತವಾಗಿದ್ದಿತು. ಯಮರಾಜನ ಅಣತಿಯಂತೆ ಅವರು ವಿಮಾನಾರೂಢನಾಗಿ ವಿಷ್ಣು ಲೋಕವನ್ನು ಕುರಿತು ಪ್ರಯಾಣ ಮಾಡಿದರು. ಇದು ಆ ಗಂಗೆಯ ಪ್ರಭಾವ. ಗಂಗಾನದಿಯ ಇಂತಹ ಅತ್ಯದ್ಭುತ ಮಹಾಮಹಿಮೆಗೆ ಅವಳು ವಿಷ್ಣುವಿನ ಪಾದದ ಉಗುರಿನಿಂದ ಹುಟ್ಟಿದ್ದೇ ಕಾರಣ, ಹರಿಪಾದದಿಂದ ಉದ್ಭೂತಳಾಗಿ ಸರ್ವಲೋಕಗಳಲ್ಲಿಯೂ ಮಹಾಪಾತಕಗಳನ್ನೂ ನಾಶ ಪಡಿಸುವ ಮಹಾನದಿ ಎಂದು ಪ್ರಖ್ಯಾತಿ ಪಡೆದಿದ್ದಾಳೆ, ಆ ದೇವಗಂಗೆ. ಈ ಗಂಗಾದೇವಿಯ ಮಹಾತ್ಮೆಯನ್ನು ಕೇಳಿದವರು ಹೇಳಿದವರು, ಗಂಗಾಸ್ನಾನದ ಫಲ ಪಡೆಯುತ್ತಾರೆ.

ನಾರದ ಮಹಾಪುರಾಣದಲ್ಲಿ ಹದಿನಾರನೇಯ ಅಧ್ಯಾಯ ಮುಗಿದುದು

—o—

**ಋಷಿಗಳು:-** ಸೂತನೆ, ಒಳ್ಳೆಯದು, ನೀನು ನಮಗೆ ಕರುಣೆಯಿಂದ ಗಂಗೆಯ ಮಹಿಮೆಯನ್ನು ಕೇಳಿಸಿದೆ. ಸರ್ವ ಪಾತಕಗಳನ್ನು ತೊಳೆಯುವದು ಈ ಗಂಗೆಯ ಮಹಿಮೆ. ಆದುದರಿಂದಲೇ ಇದು ಅತ್ಯುತ್ತಮ. ಇದಕ್ಕಾಗಿ ನಿನಗೆ ನಾವೆಲ್ಲರೂ ಕೃತಜ್ಞರಾಗಿದ್ದೇವೆ. ಈ ಗಂಗೆಯ ಮಹಿಮೆಯನ್ನು ಸನಕಮುನಿಯು ನಾರದ ಮುನಿಗೆ ಹೇಳಿದನಷ್ಟೆ. ಇದನ್ನು ಕೇಳಿದ ಬಳಿಕ ನಾರದನು ಆ ಸನಕ ಋಷಿಗೆ ಮತ್ತೇನು ಪ್ರಶ್ನೆ ಮಾಡಿದ? ಅದಕ್ಕೆ ಉತ್ತರವೇನು ಕೊಟ್ಟ? ಇದನ್ನು ತಿಳಿಸಿರಿ.

**ಸೂತ:-** ಉತ್ತಮವಾದ ಗಂಗೆಯ ಮಹಿಮೆಯನ್ನು ನಾರದರು ಆದರದಿಂದ ಕೇಳಿದರು. ನಾನಾವಿಧವಾದ ಆಶ್ಚರ್ಯಕರ ಇತಿಹಾಸಗಳನ್ನು ಒಳಗೊಂಡಿತ್ತು. ಈ ಗಂಗೆಯ ವೃತ್ತಾಂತ. ಅದನ್ನೆಲ್ಲ ಸವಿಸ್ತಾರವಾಗಿ ಕೇಳಿದ ಬಳಿಕ ಮತ್ತೆ ಪ್ರಶ್ನಿಸಿದರು - ದೇವಮುನಿ.

**ನಾರದ:-** ಮಹಾಮುನಿಯಾದ ಸನಕರೆ, ನಾನು ಅತ್ಯಂತ ಪುಣ್ಯಕರ ಗಂಗಾ ಮಹಾತ್ಮ್ಯ ಕೇಳಿದೆ. ಇದು ನನ್ನ ಸುಖ ಸೌಭಾಗ್ಯದ ಸಾರ, ಇದರಿಂದ ನಾನು ಧನ್ಯ ಧನ್ಯ! ಪರಮ ಕರುಣಾಶಾಲಿಗಳಾದ ನೀವು ನನಗೆ ಬೇಕಾದುದನ್ನೇ ನಿರೂಪಿಸಿದಿರಿ. ನಿಜವಾದ ವಿಷ್ಣು ಭಕ್ತರಾದ ಸಜ್ಜನರು ಪರಾರ್ಥಕ್ಕಾಗಿಯೇ ಪ್ರಯತ್ನಿಸುತ್ತಾರೆ. ಮೂಢ ಮುಗ್ಧರಾದ, ಜನರಿಗೆ ಬಗೆ ಬಗೆಯ ಉಪದೇಶ ನೀಡಿ ತತ್ವಜ್ಞಾನ ಉಂಟುಮಾಡಿ, ಅವರನ್ನು ಮೇಲಕ್ಕೆ ಎತ್ತುತ್ತಾರೆ. ಆದುದರಿಂದ ತಾವು ವಿಷ್ಣುವಿಗೆ ಪ್ರೀತಿಕರವಾದ ವ್ರತಗಳು ಯಾವುವು? ಎಂಬುದನ್ನು ನನಗೆ ಹೇಳಿರಿ. ತನ್ನನ್ನು ವ್ರತ, ಉಪವಾಸ ಮುಂತಾದವುಗಳಿಂದ ಸೇವಿಸಿದವರಿಗೆ ತನ್ನಲ್ಲಿ ಭಗವಂತ, ಭಕ್ತಿ, ನೀಡುತ್ತಾನೆ. ಮುಕ್ತಿಯು ಯಾವಾಗಲೂ ಭಗವದ್ಭಕ್ತಿಯ ದಾಸಿಯೇ ಆಗಿರುತ್ತದೆ. ವ್ರತ, ಪೂಜೆ, ಧ್ಯಾನ ಮುಂತಾದವುಗಳಿಂದ ಭಕ್ತಿ ಪುರಸ್ಕರವಾಗಿ ಭಗವಂತನನ್ನು ಆರಾಧಿಸುವವರಿಗೆ ಸ್ವಯಂ ಶ್ರೀ ಹರಿಯು ಮುಕ್ತಿಯನ್ನು ಕರುಣಿಸುತ್ತಾನೆ. ಆದುದರಿಂದ ವ್ರತಗಳನ್ನೂ ಅವುಗಳ ವಿಧಾನವನ್ನೂ ಪ್ರವೃತ್ತಿ ನಿವೃತ್ತಿ, ಧರ್ಮವನ್ನೂ ಹರಿಪ್ರೀತಿಕಾರಕವಾದ ಧರ್ಮಕರ್ಮಗಳ ವಿಧಿ ವಿಧಾನಗಳನ್ನೂ ನಮಗೆ ತಿಳಿಸಿರಿ. ಇವುಗಳನ್ನೆಲ್ಲ ತಿಳಿಸಿ ಹೇಳಲು ನಿಮ್ಮಂತಹ ವಿಷ್ಣು ಭಕ್ತರು ಬೇರೆ ಯಾರಿದ್ದಾರೆ?

**ಸನಕ:-** ಮುನಿಶ್ರೇಷ್ಠನಾದ ನಾರದ, ಭಲಾ! ನೀನು ನಿಜವಾಗಿಯೂ ಭಗವದ್ಭಕ್ತ ಯಾಕೆಂದರೆ ನೀನು ಮತ್ತೆ ಮತ್ತೆ ಕೇಳಿದರೂ, ಶ್ರೀ ಹರಿಯ ಚರಿತ್ರೆಯನ್ನೇ ಕೇಳಿದಿ. ಲೋಕಕ್ಕೆಲ್ಲ ಉಪಯುಕ್ತವಾದ ವ್ರತಗಳನ್ನು ನಿನಗೆ ಹೇಳುತ್ತೇನೆ. ಹರಿಯ ಪ್ರೀತಿ, ಪ್ರಸಾದ ಆಗಲು ಇಂತಹ ವ್ರತಗಳನ್ನು ಮಾನವನಿಗೆ ಮಾಡುವದು ಅವಶ್ಯ. ಆ ಜನಾರ್ಧನನು ಯಾರ ಮೇಲೆ ಪ್ರಸನ್ನನಾಗುವನೋ, ಅವರಿಗೆ ಇಹದಲ್ಲಿ ಸೌಖ್ಯ, ಪರದಲ್ಲಿ ಸಂತಸ, ಯಾವುದಾದರೂ ಉಪಾಯ, ಯಾವುದಾದರೂ ಅನುಷ್ಠಾನ, ಯಾವುದಾದರೂ ಮಾರ್ಗದಿಂದ ಹರಿಯ ಪೂಜೆಯನ್ನು ತಪ್ಪದೇ ಮಾಡುವವರು ದಿವ್ಯ ಸ್ಥಾನವನ್ನೂ ಪಡೆಯುತ್ತಾರೆ. ಇದು ಮಹರ್ಷಿಗಳ ಅಭಿಪ್ರಾಯ. ಮಾರ್ಗಶೀರ್ಷ ಶುದ್ಧ ದ್ವಾದಶಿಯಂದು, ಉಪವಾಸ ಮಾಡಿದ ಮನುಷ್ಯನು ಭಕ್ತಿಯಿಂದ ನೀರಿನಲ್ಲಿ ಶಯನ ಮಾಡಿದ

ಪರಮಾತ್ಮನನ್ನು ಪೂಜಿಸಬೇಕು. ಮೊದಲು ಹಲ್ಲುಜ್ಜಿಕೊಂಡು ಸ್ನಾನ ಮಾಡಿ ಬಿಳಿಬಟ್ಟೆ ಧರಿಸಿ, ನೈವೇದ್ಯ, ಮಂಗಳಾರತಿಗಳಿಂದ ಹರಿಯನ್ನು ಪೂಜಿಸಬೇಕು. 'ಕೇಶವಾಯ ನಮಸ್ತುಭ್ಯಂ' ಎಂಬ ಮಂತ್ರದಿಂದ ಭಗವಂತನನ್ನು ಪೂಜಿಸಿ, ಜಪಿಸಿ, ನೂರಾ ಎಂಟು ಸಲ ಅಗ್ನಿಯಲ್ಲಿ ತುಪ್ಪ, ಹಾಗೂ ಎಳ್ಳುಗಳಿಂದ ಆಹುತಿ ಸಮರ್ಪಿಸಬೇಕು.

ಅಂದು ರಾತ್ರಿ ಶಾಲಿಗ್ರಾಮ ಮುಂದಿಟ್ಟುಕೊಂಡು 'ಜಾಗರ' ಮಾಡಬೇಕು. ಅನಂತರ ಒಂದು ಬಳ್ಳ ಹಾಲಿನಿಂದ ನಾರಾಯಣನಿಗೆ ಅಭಿಷೇಕ ಮಾಡಬೇಕು. ಅನಂತರ ಗಂಧ, ಅಕ್ಷತೆ, ತುಳಸೀ, ಹೂವು ಮುಂತಾದವುಗಳನ್ನು ಏರಿಸಿ, ಭಕ್ಷ್ಯ, ಭೋಜ್ಯ ನೈವೇದ್ಯ ಸಮರ್ಪಿಸಿ, ಸಂಗೀತ ಸೇವೆಯಿಂದ ಹಾಡು ಹಾಡಿ ಭಗವಂತನನ್ನು ಕೊಂಡಾಡಬೇಕು. ಹೀಗೆ ಮೂರು ಹೊತ್ತು ಲಕ್ಷ್ಮೀ ಸಮೇತನಾದ ನಾರಾಯಣನನ್ನು ಪೂಜಿಸಬೇಕು ಭಕ್ತಿಯಿಂದ. ಮರುದಿನ ಪ್ರಾತಃಕಾಲ ಎದ್ದು ಸ್ನಾನಾದಿ ಕರ್ಮಗಳನ್ನು ಮುಗಿಸಿಕೊಂಡು ಮೌನದಿಂದ ಶುಚಿರ್ಭೂತನಾಗಿ ಹಿಂದಿನಂತೆ ದೇವರನ್ನು ಪೂಜಿಸಿ, ತುಪ್ಪ ಹಾಕಿದ ಪಾಯಸ, ತೆಂಗಿನಕಾಯಿ, ದೇವರಿಗೆ ನಿವೇದಿಸಿ. ಬ್ರಹ್ಮಜ್ಞಾನಿಗೆ ಈ ಮುಂದಿನ ಮಂತ್ರ ಹೇಳಿ ದಾನ ಕೊಡಬೇಕು.

**ಕೇಶವಃ ಕೇಶಿಹಾ ದೇವಃ ಸರ್ವ ಸಂಪತ್ಪ್ರದಾಯಕಃ ॥**
**ಪರಮಾನ್ನಪ್ರದಾನೇನ ಮಮ ಸ್ಯಾದಿಷ್ಟದಾಯಕ : ॥**

ಸಕಲೈಶ್ವರ್ಯ ಪ್ರದಾಯಕನಾದ, ಕೇಶಿ ಎಂಬ ದೈತ್ಯನನ್ನು ಸಲುಹಿದ! ದೇವ ಕೇಶವನು ಈ ಪರಮಾನ್ನದಿಂದ ಪ್ರೀತನಾಗಿ ನನಗೆ ಅಭೀಷ್ಟವನ್ನು ಕೊಡುವವನಾಗಲಿ. ಈ ಮಂತ್ರದಿಂದ ಪಾಯಸವನ್ನು ಮಾಡಿ ಅನಂತರ ತನ್ನ ಶಕ್ತ್ಯಾನು ಸಾರ ದ್ವಿಜರ ಭೋಜನ ಮಾಡಿಸಬೇಕು. ಅನಂತರ ಬಂಧುಗಳೊಂದಿಗೆ ಪ್ರಸಾದ ಭಕ್ಷಣ ಮಾಡಬೇಕು.

ಹೀಗೆ ಮಾರ್ಗಶೀರ್ಷ ಶುದ್ಧ ದ್ವಾದಶಿಯ ದಿನ ಭಕ್ತಿಯಿಂದ ಕೇಶವನ ಪೂಜೆ ಮಾಡುವವನು, ಪೌಂಡರೀಕಯಾಗದ ಎಂಟು ಪಟ್ಟು ಫಲ ಹೊಂದುವನು. ಇದರಂತೆ ಪುಷ್ಯ ಶುಕ್ಲದ್ವಾದಶಿಯಂದು ಇದೇ ರೀತಿ- ಹರಿಪೂಜೆಯನ್ನು ಮಾಡಬೇಕು. ಏಕಾದಶಿ ಉಪವಾಸ ಮಾಡಿ, ದ್ವಾದಶಿ ದಿನ ಉಷಃಕಾಲದಲ್ಲೆದ್ದು ಸ್ನಾನಾನಂತರ 'ಓಂ ನಮೋ ನಾರಾಯಣಾಯ' ಎಂಬ ಮಂತ್ರದಿಂದ ವಿಷ್ಣುವನ್ನು ಪೂಜಿಸಬೇಕು. ಕ್ಷೀರಾಭಿಷೇಕ, ಪಾಯಸ ನೈವೇದ್ಯ, ತ್ರಿಕಾಲ ಪೂಜೆ, ರಾತ್ರಿ ಜಾಗರ, ಮುಂತಾಗಿ ಯಥಾ ಪ್ರಕಾರ ಪೂಜೆ ಮಾಡಬೇಕು. ಆ ಪೂಜೆಗೆ ಗಂಧ, ಪುಷ್ಪ, ದೀಪ, ಧೂಪ, ನೈವೇದ್ಯ, ಗೀತ, ವಾದ್ಯ, ನೃತ್ಯ, ಸ್ತೋತ್ರ, ಮುಂತಾದ ಸೇವಾವಿಧಾನಗಳನ್ನೆಲ್ಲ ಶಾಸ್ತ್ರೋಕ್ತವಾಗಿ ಭಕ್ತಿಯಿಂದ ವಿದ್ಯುಕ್ತ ರೀತಿಯಿಂದ ಮಾಡಿ ಪೂಜಿಸಬೇಕು. ತುಳಸೀ ಹಾಕಿದ ಕ್ಷೀರಾನ್ನವನ್ನೂ, ದಕ್ಷಿಣೆಯನ್ನೂ ಶ್ರೋತ್ರಿಯನಿಗೆ ದಾನಮಾಡಿ -

**ಸರ್ವಾತ್ಮಾ ಸರ್ವಲೋಕೇಶಃ ಸರ್ವವ್ಯಾಪೀ ಸನಾತನಃ ।**
**ನಾರಾಯಣಃ ಪ್ರಸನ್ನಃ ಸ್ಯಾತ್ ಕೃಶರಾನ್ನ ಪ್ರದಾನತಃ ॥**

ಎಂಬ ಮಂತ್ರದಿಂದ ಸರ್ವವ್ಯಾಪಿಯೂ, ಸರ್ವಲೋಕದೊಡೆಯನೂ, ಸರ್ವಾಂತಾರ್ಯಾಮಿಯೂ ಆದ ನಾರಾಯಣನು ಈ ಕೃಶರಾನ್ನ ದಾನದಿಂದ ಪ್ರೀತನಾಗಲಿ ಎಂದು ಸಂಕಲ್ಪಪೂರ್ವಕ ದಾನವಿತ್ತು. ಯಥಾಶಕ್ತಿ ದ್ವಿಜರನ್ನು ಭೋಜನ ಮಾಡಿಸಬೇಕು. ಅನಂತರ ತನ್ನ ಬಂಧು, ಬಾಂಧವರೊಂದಿಗೆ ಭೋಜನ ಮಾಡಬೇಕು. ಇದರಿಂದ ಅಗ್ನಿಷ್ಟೋಮ ಯಾಗದ ಎಂಟರಷ್ಟು ಪುಣ್ಯ ಫಲ ಬರುವದು. ಇದರಂತೆ ಮಾಘ ಶುಕ್ಲ ದ್ವಾದಶಿಯಂದು

ಹಿಂದಿನಂತೆ ಉಪವಾಸ ಮಾಡಿ 'ನಮಸ್ತೇ ಮಾಧವಾಯ' ಎಂಬ ಮಂತ್ರದಿಂದ ಎಂಟು ಆಜ್ಯಾಹುತಿ ನೀಡಿ ಹೋಮ ಮಾಡಬೇಕು. ಮಾಧವನಿಗೆ ಹಿಂದೆ ಹೇಳಿದಂತೆ ಕ್ಷೀರಾಭಿಷೇಕ ಗಂಧ ಅಕ್ಷತೆಗಳಿಂದ ಪೂಜೆ, ರಾತ್ರಿಜಾಗರ, ಮರುದಿನ ಉಷಃಕಾಲ ಪೂಜೆ ಮುಂತಾದವುಗಳನ್ನು ಮಾಡಿ, ಒಂದು ಪಾತ್ರೆ ತುಂಬ ತಿಲವನ್ನು ವಿಪ್ರರಿಗೆ ದಾನ ಮಾಡಬೇಕು.

**ಮಾಧವಃ ಸರ್ವಭೂತಾತ್ಮಾ ಸರ್ವಕರ್ಮಫಲಪ್ರದಃ ॥**
**ತಿಲದಾನೇನ ಮಹತಾ ಸರ್ವಾನ್ ಕಾಮಾನ್ ಪ್ರಯಚ್ಛತು**

ಸರ್ವಪ್ರಾಣಿಗಳಿಗೂ ಸ್ವಾಮಿಯೂ, ಎಲ್ಲಾ ಕರ್ಮಗಳಿಗೂ ಫಲಪ್ರದನೂ ಆಗಿರುವ ಮಾಧವನು ಮಹತ್ತಾದ ಈ ತಿಲದಾನದಿಂದ ಪ್ರೀತನಾಗಿ ಸಕಲ ಇಷ್ಟಾರ್ಥಗಳನ್ನು ಕೊಡಲಿ. ಈ ಮಂತ್ರದಿಂದ ವಿಪ್ರನಿಗೆ ತಿಲದಾನ ಮಾಡಿ, ಮಾಧವನನ್ನು ಸ್ಮರಿಸುತ್ತ, ವಿಪ್ರರಿಗೆ ಭೋಜನ ಮಾಡಿಸಬೇಕು, ಅವರಿಗೆ ನೂರು ವಾಜಪೇಯ ಯಜ್ಞ ಮಾಡಿದ ಪುಣ್ಯ ಬರುತ್ತದೆ. ಫಾಲ್ಗುಣ ಶುಕ್ಲದ್ವಾದಶಿಯಂದು 'ಗೋವಿಂದಾಯ ನಮಸ್ತುಭ್ಯಂ' ಎಂಬ ಮಂತ್ರದಿಂದ ಪೂಜೆ. ತುಪ್ಪಸಹಿತ ಎಳ್ಳಿನ ನೂರೆಂಟು ಆಹುತಿಯಿಂದ ಹೋಮ, ರಾತ್ರಿ, ಜಾಗರ, ತ್ರಿಕಾಲ ಪೂಜೆ ಮುಂತಾದವುಗಳನ್ನು ಮಾಡಿ, ಮರುದಿನ ಉಷಃಕಾಲದಲ್ಲಿ ನಿತ್ಯಕರ್ಮ ಮುಗಿಸಿಕೊಂಡು ಗೋವಿಂದನನ್ನು ಪೂಜಿಸಿ, ಭತ್ತ, ಉದ್ದಗಳನ್ನು ವಸ್ತ್ರ ಸಹಿತವಾಗಿ ವಿಪ್ರನಿಗೆ ದಾನಕೊಡಬೇಕು.

**ನಮೋ ಗೋವಿಂದ ಸರ್ವೇಶ ಗೋಪಿಕಾಜನ ವಲ್ಲಭ**
**ಅನೇನ ಧ್ಯಾನದಾನೇನ ಪ್ರೀತೋ ಭವ ಜಗದ್ಗುರೋ ॥**

ಗೋಪೀವಲ್ಲಭವಾದ ಗೋವಿಂದನೇ, ಜಗದ್ಗುರುವಾದ ನೀನು, ಈ ಧಾನ್ಯ ದಾನದಿಂದ ಪ್ರೀತನಾಗು ಎಂಬ ಮಂತ್ರದಿಂದ ಧಾನ್ಯ ದಾನ ಮಾಡಿ ವ್ರತವನ್ನು ಭಕ್ತಿಯಿಂದ ಅನುಷ್ಠಾನ ಮಾಡುವ ಮನುಷ್ಯನಿಗೆ ಗೋಮೇಧದ, ಗೋಯಜ್ಞ ಮಾಡಿದ ಪುಣ್ಯ ಪ್ರಾಪ್ತವಾಗುವದು. ಚೈತ್ರ ಶುಕ್ಲ ದ್ವಾದಶಿಯಂದು 'ನಮೋಸ್ತು ವಿಷ್ಣುವೇ ತುಭ್ಯಂ' ಎಂದು ನೂರೆಂಟು ಜಪಮಾಡಿ, ಪೂಜಾದಿಗಳನ್ನು ಹಿಂದಿನಂತೆ ಆಚರಿಸಿ, ಮರುದಿನ ಜೇನುತುಪ್ಪ ಎಳ್ಳು ಕೂಡಿಸಿ, ನೂರೆಂಟು ಆಹುತಿ ನೀಡಬೇಕು. ಅಕ್ಕಿ ತೊಗರಿಬೇಳೆಗಳನ್ನು ದಕ್ಷಿಣೆ ಸಹಿತವಾಗಿ ದಾನಮಾಡಬೇಕು.

**ಪ್ರಾಣರೂಪೀ ಮಹಾವಿಷ್ಣುಃ ಪ್ರಾಣದಃ ಸರ್ವವಲ್ಲಭಃ**
**ತಂಡುಲಾಢಕ ದಾನೇನ ಪ್ರೀಯತಾಂ ಮೇ ಜನಾರ್ದನಃ ॥**

ಪ್ರಾಣಶಬ್ದದ ಮುಖ್ಯ ವಾಚ್ಯನೂ, ಎಲ್ಲರಿಗೂ ಜೀವನ ಪ್ರದನೂ ಜಗದ್ವಲ್ಲಭನೂ ಆದ ಮಹಾವಿಷ್ಣುವು, ಈ ಅಕ್ಕಿ ಹಾಗೂ ತೊಗರಿಬೇಳೆ ದಾನದಿಂದ ಪ್ರೀತನಾಗಲಿ ಎಂದು ದಾನ ನೀಡಬೇಕು. ಅವನಿಗೆ ಅಗ್ನಿಷ್ಟೋಮದ ಎಂಟು ಪಟ್ಟು ಪುಣ್ಯ ಬರುವದು. ವೈಶಾಖ ಶುಕ್ಲ ದ್ವಾದಶಿ, ಉಪವಾಸ, ಕ್ಷೀರಾಭಿಷೇಕ, ರಾತ್ರಿ ಜಾಗರ, ಪೂಜೆಗಳನ್ನು ಮಾಡಿ 'ನಮಸ್ತೇ ಮಧು ಹಂತ್ರೇ' ಎಂಬ ಮಂತ್ರದಿಂದ ಆಜ್ಯಹೋಮ, ನೂರೆಂಟು ಜಪ ಮುಂತಾದವುಗಳನ್ನು ಶಾಸ್ತ್ರೋಕ್ತವಾಗಿ ಮಾಡಿದರೆ ಎಂಟು ಅಶ್ವಮೇಧ ಯಜ್ಞಗಳ ಫಲ ಬರುತ್ತದೆ. ಜ್ಯೇಷ್ಠ ಶುಕ್ಲ ದ್ವಾದಶಿಯಲ್ಲಿ 'ನಮಸ್ತ್ರಿವಿಕ್ರಮಾಯ' ಎಂದು ನೂರೆಂಟು ಜಪ, ಪಾಯಸ, ಹೋಮ ಮುಂತಾದವುಗಳನ್ನು ಮಾಡಿ ಇಪ್ಪತ್ತು ಅಪೂಪಗಳನ್ನು (ಅನಾರಸ) ವಿಪ್ರರಿಗೆ ದಾನ ಕೊಡಬೇಕು.

**ದೇವದೇವ ಜಗನ್ನಾಥ ಪ್ರಸೀದ ಪರಮೇಶ್ವರ**
**ಉಪಾಯನಂ ಚ ಸಂಗೃಹ್ಯ ಮಮಾಭೀಷ್ಟ ಪ್ರದೋ ಭವ-**

ದೇವರಿಗೂ ದೇವನಾದ ಜಗನ್ನಾಥನೆ, ನೀನು ಪ್ರಸನ್ನನಾಗು, ಈ ದಾನವನ್ನು ಸ್ವೀಕರಿಸಿ ಪರಮೇಶ್ವರನಾದ ನೀನು ನನಗೆ ಇಷ್ಟಾರ್ಥ ನೀಡು ಎಂಬ ಮಂತ್ರದಿಂದ ದಾನ ನೀಡಬೇಕು. ಇದರಿಂದ ನೂರೆಂಟು ದಿವ್ಯ ಹೋಮ ಮಾಡಿದ ಫಲಪ್ರಾಪ್ತಿ ಆಗುವದು. ಆಷಾಢ ಶುಕ್ಲ ದ್ವಾದಶಿ ಯಂದು 'ನಮಸ್ತೇ ವಾಮನಾಯ' ಎಂಬ ಮಂತ್ರ ನೂರೆಂಟು ಸಲ ಜಪಿಸಿ ಅಷ್ಟೇ ಆಜ್ಯಾಹುತಿ ಗಳನ್ನು ನೀಡಿ ಹೋಮಮಾಡಿ, ವಾಮನದೇವನನ್ನು ಪೂಜಿಸಬೇಕು. ಮೊಸರು ಅನ್ನವನ್ನು, ತೆಂಗಿನ ಕಾಯಿಯೊಂದಿಗೆ ದಕ್ಷಿಣೆ ಸಹಿತವಾಗಿ ಪ್ರತಿದಿನ ವಾಮನ ದೇವರ ಪೂಜೆ ಮಾಡುವ ವಿಪ್ರನಿಗೆ-

**ವಾಮನೋ ಬುದ್ಧಿದೋ ಹೋತಾ ದ್ರವ್ಯಸ್ಥೋ ವಾಮನಸ್ಸದಾ ॥**
**ವಾಮನ ಸ್ತಾರಕೋಽ ಸ್ಮಾಚ್ಚ ವಾಮನಾಯ ನಮೋ ನಮಃ ॥**

ಹೋಮ ಮಾಡುವ ಯಜಮಾನನಲ್ಲಿಯೂ, ಹೋಮದ ದ್ರವ್ಯದಲ್ಲಿಯೂ ಇರುವ ವಾಮನ ದೇವರು ಸದ್ಬುದ್ಧಿಯನ್ನು ಕೊಟ್ಟು ಈ ಸಂಸಾರಸಾಗರದಿಂದ ಮನುಜರನ್ನು ದಾಟಿಸುತ್ತಾನೆ. ಅಂತಹ ವಾಮನದೇವರಿಗೆ ನಮನ, ಎಂಬ ಮಂತ್ರೋಚ್ಚಾರಣ ಪೂರ್ವಕ ವಾಗಿ ದಾನ ಕೊಡಬೇಕು. ಇದರಿಂದ ಅಗ್ನಿಷ್ಟೋಮ ಯಾಗದ ಪುಣ್ಯಬರುವದು. ಶ್ರಾವಣ ಶುದ್ಧ ದ್ವಾದಶಿಯಂದು ಜೇನುತುಪ್ಪ ಬೆರಸಿದ ಹಾಲಿನಿಂದ ಸ್ನಾನ, 'ನಮೋಸ್ತು ಶ್ರೀಧರಾಯ' ಎಂಬ ಮಂತ್ರದಿಂದ ನೂರೆಂಟು ಸಲ ಜಪ,ತಪ, ಮತ್ತು ನೂರೆಂಟು ಆಜ್ಯಾಹುತಿಯಿಂದ ಹೋಮ, ರಾತ್ರಿ ಜಾಗರಣವನ್ನೂ ಪೂಜೆಯನ್ನೂ, ಮಾಡಿ, ವಿಪ್ರನಿಗೆ ಹಾಲು ತುಂಬಿದ ಪಾತ್ರೆಯನ್ನೂ ವಸ್ತ್ರ, ಬಂಗಾರದ ಕುಂಡಲಗಳನ್ನು ದಕ್ಷಿಣೆ ನೀಡಬೇಕು. ಆ ಕಾಲದಲ್ಲಿ.

**ಕ್ಷೀರಾಬ್ಧಿಶಾಯಿನ್ ದೇವೇಶ ರಮಾಕಾಂತ ಜಗತ್ಪತೇ**
**ಕ್ಷೀರದಾನೇನ ಸಂಪ್ರೀತೋ ಭವ ಸರ್ವಸುಖ ಪ್ರದಃ ॥**

ಹಾಲ್ಗಡಲಲ್ಲಿ ಮಲಗಿದ, ಜಗದೊಡೆಯನಾದ ಲಕ್ಷ್ಮೀಪತಿಯೇ ಈ ಕ್ಷೀರದಾನದಿಂದ ನೀನು ಎಲ್ಲರಿಗೂ ಸುಖ ನೀಡು ಎಂಬ ಮಂತ್ರ ಹೇಳಿ ಕ್ಷೀರದಾನ ಮಾಡಿದರೆ ಸಾವಿರ ಅಶ್ವಮೇಧ ಯಾಗ ಮಾಡಿದ ಪುಣ್ಯ ಬರುವದು. ಭಾದ್ರಪದ ಶುಕ್ಲ ದ್ವಾದಶಿಯಲ್ಲಿ ಕ್ಷೀರಾಭಿಷೇಕ ಗೈದು 'ಹೃಷೀಕೇಶ ನಮಸ್ತುಭ್ಯಂ' ಎಂದು ನೂರೆಂಟು ಸಲ ಜಪಿಸಿ ಜೇನುತುಪ್ಪ ಸಹಿತ ಅನ್ನದಿಂದ ನೂರೆಂಟು ಆಹುತಿ ನೀಡಿ ಹೋಮ ಮಾಡಬೇಕು. ಯಥಾಶಕ್ತಿ ಗೋದಿ, ಬಂಗಾರ, ಮುಂತಾದವುಗಳನ್ನು ಆತ್ಮ ಜ್ಞಾನಿಗೆ

**ಹೃಷೀಕೇಶ ನಮಸ್ತುಭ್ಯಂ ಸರ್ವಲೋಕೈಕ ಹೇತವೇ ।**
**ಮಹ್ಯಂ ಸರ್ವ ಸುಖಂ ದೇಹಿ ಗೋಧೂಮಸ್ಯ ಪ್ರದಾನತಃ ॥**

ಎಲ್ಲ ಜಗತ್ಕಾರಣನಾದ ಹೃಷೀಕೇಶನೆ, ನಿನಗೆ ನಮಸ್ಕಾರ. ಈ ಗೋದಿಯ ದಾನದಿಂದ ಪ್ರೀತನಾಗಿ ನನಗೆ ಎಲ್ಲ ವಿಧದ ಸುಖ ಕೊಡು ಎಂದು ಮಂತ್ರ ಹೇಳಿ ದಾನ ನೀಡಬೇಕು. ಇದರಿಂದ ಬ್ರಹ್ಮಮೇಧದ ಫಲ ದೊರಕುವದು.

ಆಶ್ವೀನ ಶುಕ್ಲ ದ್ವಾದಶಿಯಂದು 'ನಮಸ್ತೇ ಪದ್ಮನಾಭಾಯ' ಎಂಬ ಮಂತ್ರದ ಜಪ, ಎಳ್ಳು, ಅಕ್ಕಿ, ಗೋದಿ, ತುಪ್ಪಗಳಿಂದ ನೂರೆಂಟು ಆಹುತಿನೀಡಿ ಹೋಮ ಪೂಜಾದಿಗಳನ್ನು ಮಾಡಿ ಮುಗಿಸಬೇಕು. ಅನಂತರ ಬ್ರಾಹ್ಮಣನಿಗೆ.

**ಪದ್ಮನಾಭ ನಮಸ್ತುಭ್ಯಂ ಸರ್ವಲೋಕ ಪಿತಾಮಹ**
**ಮಧುದಾನೇನ ಸುಪ್ರೀತೋ ಭವ ಸರ್ವಸುಖಪ್ರದಃ ॥**

ಎಲ್ಲ ಲೋಕಗಳಿಗೆ ಪಿತಾಮಹನಾದ ಪದ್ಮನಾಭನೆ ನಿನಗೆ ನಮಸ್ಕಾರ ಈ ಜೇನಿನ ದಾನದಿಂದ ಸುಪ್ರೀತನಾಗಿ ಸೌಖ್ಯ ನೀಡು ಎಲ್ಲರಿಗೂ, ಈ ಮಂತ್ರಹೇಳಿ ಒಂದು ಪಾತ್ರೆ ತುಂಬ ಜೇನುತುಪ್ಪವನ್ನು ದಕ್ಷಿಣೆ ಸಹಿತ ಕೊಡಬೇಕು. ಈ ಪದ್ಮನಾಭ ವ್ರತದಿಂದ ಸಾವಿರ ಬ್ರಹ್ಮಮೇಧದ ಫಲ ಬರುವದು.

ಕಾರ್ತೀಕ ಶುಕ್ಲ ದ್ವಾದಶೀಯಂದು 'ನಮೋ ದಾಮೋದರಾಯ' ಎಂಬ ಮಂತ್ರದಿಂದ ಸ್ನಾನ ಪೂಜಾದಿ ಮಾಡಿ, ಜೇನುತುಪ್ಪ, ತುಪ್ಪದಲ್ಲಿ ಅದ್ದಿದ ನೂರೆಂಟು ಎಳ್ಳಿನ ಆಹುತಿ ನೀಡಿ, ಜಾಗರ ಪೂಜಾದಿಗಳನ್ನು ಹಿಂದಿನಂತೆ ಮಾಡಬೇಕು. ಅನಂತರ ಮರುದಿನ ಉಷಃ ಕಾಲದಲ್ಲಿ ಎದ್ದು ಕಮಲಗಳಿಂದ ದೇವರ ಪೂಜೆ ಮತ್ತೊಮ್ಮೆ ತುಪ್ಪದಲ್ಲಿ ಅದ್ದಿದ ಎಳ್ಳುಗಳಿಂದ ನೂರೆಂಟು ಆಹುತಿ, ಕೊಟ್ಟು ಹೋಮ ಮಾಡಿ ಪಕ್ವಾನ್ನಗಳನ್ನು ವಿಪ್ರನಿಗೆ ದಾನ ನೀಡಬೇಕು. ಆ ದಾನ ಕಾಲದಲ್ಲಿ

**ದಾಮೋದರ ಜಗನ್ನಾಥ ಸರ್ವಕಾರಣಕಾರಣ**
**ತ್ರಾಹಿ ಮಾಂ ಕೃಪಯಾ ದೇವ ಶರಣಾಗತ ಪಾಲಕ**

ಜಗತ್ತಿಗೆ ಕಾರಣೀಭೂತವಾದ ಎಲ್ಲ ವಸ್ತುಗಳಿಗೆ ಶಕ್ತಿ ಪ್ರದನಾದ ಜಗದೊಡೆಯ ದಾಮೋದರನೆ, ಶರಣು ಬಂದವರನ್ನು ಪೊರೆಯುವ ನೀನು ದಯಮಾಡಿ ನನ್ನನ್ನು ರಕ್ಷಿಸು, ಎಂಬ ಮಂತ್ರವನ್ನು ಪಠಿಸಬೇಕು. ಈ ಮಂತ್ರದಿಂದ ಶ್ರೋತ್ರಿಯ (ಕುಟುಂಬಿಯಾದ) ನಿಗೆ ಪಕ್ವಾನ್ನ ದಾನ ಮಾಡಿ, ವಿಪ್ರ ಭೋಜನ ಮಾಡಿಸಿ, ಬಂಧುಗಳಿಂದ ಕೂಡಿಕೊಂಡು, ತಾನೂ ಸಹ ಪ್ರಸಾದ ಶೇಷ ಭುಂಜಿಸಬೇಕು. ಇದರಿಂದ ಸಾವಿರ ಅಶ್ವಮೇಧ ಯಜ್ಞದ ಎರಡಷ್ಟು ಫಲಪ್ರಾಪ್ತಿ ಇದೆ. ಹೀಗೆ ಇಡೀ ವರ್ಷ ಹನ್ನೆರಡು ದ್ವಾದಶಿ ದಿನಗಳಂದು ವ್ರತಗಳನ್ನು ಮಾಡಿ ಅಥವಾ ಅಷ್ಟಾಗದಿದ್ದರೆ ಯಥಾಶಕ್ತಿ ಹಲಕೆಲವು ದ್ವಾದಶಿ ದಿನಗಳಂದು ವ್ರತಗಳನ್ನು ಮಾಡಿ, ಮಾರ್ಗಶೀರ್ಷ ಶುದ್ಧ ದ್ವಾದಶಿಯ ದಿನ 'ಉದ್ಯಾಪನೆ' ಮಾಡಬೇಕು. ಉದ್ಯಾಪನೆಯ ದಿನದಂದು ಉಷಃಕಾಲದಲ್ಲಿಯೇ ದಂತ ದಾವನೆಯ ನಂತರ ಸ್ನಾನ ಮಾಡಿ, ಮಡಿಯಿಂದ ಶುಭ್ರವಸ್ತ್ರ ತುಳಸೀಮಾಲೆ ಧರಿಸಿ, ಗಂಧ ಲೇಪಿಸಿಕೊಂಡು, ಪೂಜೆಗಾಗಿಯೇ ನಿರ್ಮಿಸಿದ ಮಂಟಪದಲ್ಲಿ ಬಂದು ಕೂಡಬೇಕು. ಹೂವಿನಮಾಲೆ, ಗಂಟೆ, ಚಾಮರ, ಬಾಳೆಯಗಿಡ, ಧ್ವಜ, ದೀಪಮಾಲೆಗಳಿಂದ ವಿರಾಜಿತ ಮಂಟಪದ ಮೇಲೆ, ಶುಭವಸ್ತ್ರಗಳಿಂದ ಆಚ್ಛಾದನೆ ಮಾಡಿ ಅಲಂಕರಿಸಬೇಕು.

ಮಂಟಪದ ಮಧ್ಯಭಾಗದಲ್ಲಿ 'ಸರ್ವತೋ ಭದ್ರ' ಎಂಬ ಮಂಡಲ ರಚಿಸಿ, ನೀರು ತುಂಬಿದ ಹನ್ನೆರಡು ಕಲಶ ಸ್ಥಾಪಿಸಿ, ಅವುಗಳಲ್ಲಿ ಪಂಚರತ್ನಗಳನ್ನು ಹಾಕಿ, ಶುಭ್ರವಾದ ಬಿಳಿಬಟ್ಟೆಯನ್ನು ಅವುಗಳಿಗೆ ಹೊದಿಸಬೇಕು. ತನ್ನ ಯೋಗ್ಯತಾನುಸಾರ, ತಾಮ್ರ, ಬೆಳ್ಳಿ, ಅಥವಾ ಬಂಗಾರದ ಲಕ್ಷ್ಮೀ ನಾರಾಯಣನ ಮೂರ್ತಿ ಮಾಡಿಸಿ ಆ ಕಲಶದಲ್ಲಿ ಇಡಬೇಕು. ಇಂತಹ ವ್ರತ ಉದ್ಯಾಪನ ಮಾಡುವಾಗ ದ್ರವ್ಯಲೋಭ ಮಾಡಬಾರದು. ಯೋಗ್ಯತೆ ಇದ್ದರೆ ಧಾರಾಳವಾಗಿ ಖರ್ಚುಮಾಡಿ ಶಾಸ್ತ್ರೋಕ್ತವಾಗಿಯೇ ಮಾಡಬೇಕು. ಶೇಷಶಾಯಿಯಾದ ಶ್ರೀ ನಾರಾಯಣದೇವರನ್ನು ಪಂಚಾಮೃತಸ್ನಾನ ಮಾಡಿಸಿ ಕೇಶವಾದಿ ಮಂತ್ರಗಳಿಂದ ತುಳಸಿ

ಗಂಧಗಳಿಂದ ಷೋಡಶೋಪಚಾರ ಪೂಜೆ ಮಾಡಿ, ರಾತ್ರಿ ಪುರಾಣ, ಹರಿಕಥೆಗಳಿಂದ ಜಾಗರಣೆ ಹಾಗೂ ರಾತ್ರಿ ಉಪವಾಸ ಮಾಡಿ ತ್ರಿಕಾಲದಲ್ಲೂ ದೇವರ ಪೂಜೆಮಾಡಿ, ಮರುದಿನ ಉಷಃಕಾಲದಲ್ಲಿ ನಿತ್ಯ ಕರ್ಮ ಮುಗಿಸಿ, ವ್ಯಾಹೃತಿ ಮಂತ್ರಗಳಿಂದ ಸಾವಿರ ತಿಲ ಹೋಮ ಮಾಡಿಸಬೇಕು. ಅನಂತರ ಕ್ರಮ ಪ್ರಕಾರ ದೇವರ ಪೂಜೆ ಮಾಡಿ, ಆ ದೇವರ ಸನ್ನಿಧಿಯಲ್ಲಿ ಪುರಾಣ ಶ್ರವಣ ಮಾಡಬೇಕು. ಮತ್ತು ಹನ್ನೆರಡು ಜನ ವಿಪ್ರರಿಗೆ -

ದೇವ ದೇವ ಜಗನ್ನಾಥ ಭಕ್ತಾನುಗ್ರಹ ವಿಗ್ರಹ
ಗೃಹಾಣೋಪಾಯನಂ ಕೃಷ್ಣ ಸರ್ವಾಭೀಷ್ಟ ಪ್ರದೋ ಭವ

"ಭಕ್ತರಿಗೆ ಅನುಗ್ರಹ ಮಾಡುವ ಪ್ರಸನ್ನ ಮೂರ್ತಿಯಾದ, ಜಗದೊಡೆಯನಾದ ದೇವದೇವನೇ, ನಾನು ಕೊಟ್ಟ ಈ ಕಾಣಿಕೆ ಸ್ವೀಕರಿಸು, ನನ್ನ ಎಲ್ಲ ಅಭೀಷ್ಟ ಪೂರೈಸು" ಎಂಬ ಮಂತ್ರದಿಂದ ಹತ್ತು ಅನಾರಸ (ಅಪೂಪ) ಮೊಸರನ್ನ, ತುಪ್ಪ ಹಾಕಿದ ಪಾಯಸ ಮುಂತಾದವುಗಳನ್ನು ದಕ್ಷಿಣೆ ಸಹಿತ ದಾನ ನೀಡಬೇಕು. ಅನಂತರ - 'ಕುರುಷ್ವ ಸಂಪೂರ್ಣ ಫಲಂ ಮಮಾದ್ಯ । ನಮೋಸ್ತು ತುಭ್ಯಂ ಪುರುಷೋತ್ತಮಾಯ' ಪುರುಷೋತ್ತಮನಿಗೆ ನಮಸ್ಕಾರ. ನಾನು ಮಾಡಿದ ಈ ವ್ರತವನ್ನು ಸಂಪೂರ್ಣ ಫಲ ಬರುವಂತೆ ಮಾಡು ಎಂದು ಪ್ರಾರ್ಥಿಸಬೇಕು ಅನಂತರ -

ಲಕ್ಷ್ಮೀಪತೇ ನಮಸ್ತುಭ್ಯಂ ಕ್ಷೀರಾರ್ಣವ ನಿವಾಸಿನೇ ।
ಅರ್ಘ್ಯಂ ಗೃಹಾಣ ದೇವೇಶ ಲಕ್ಷ್ಮ್ಯಾಚ ಸಹಿತಃ ಪ್ರಭೋ ॥

ಹಾಲಿನ ಸಮುದ್ರದಲ್ಲಿ ನೆಲೆಸಿದ ಲಕ್ಷ್ಮೀಪತಿಯೇ, ನಿನಗೆ ವಂದನೆ, ನಾನಿತ್ತ ಈ ಅರ್ಘ್ಯವನ್ನು ಲಕ್ಷ್ಮೀ ಸಹಿತನಾದ ದೇವೇಶನೇ ನೀನು ಸ್ವೀಕರಿಸು' ಎಂದು ದೇವರನ್ನು ಪ್ರಾರ್ಥಿಸಿ ತಾನು ಮಾಡಿದ ಕರ್ಮವನ್ನೆಲ್ಲ ಭಗವಂತನಿಗೆ ಸಮರ್ಪಿಸಬೇಕು. ಮತ್ತು ಆ ಲಕ್ಷ್ಮೀನಾರಾಯಣರ ಪ್ರತಿಮೆಯನ್ನು ಆಚಾರ್ಯರಿಗೆ ಕೊಟ್ಟು ಮೇಲೆ ದಕ್ಷಿಣೆ ನೀಡಬೇಕು. ಯಥಾಶಕ್ತಿ ಜ್ಞಾನಿಗಳ ಭೋಜನ, ದಕ್ಷಿಣೆದಾನ, ಸಾಯಂಕಾಲ ವಿಷ್ಣು ಕಥಾಶ್ರವಣ, ಪಾರಾಯಣ ಮುಂತಾದವುಗಳನ್ನು ಮಾಡಬೇಕು. ಈ ರೀತಿಯಾಗಿ ದ್ವಾದಶಿ ವ್ರತ ಮಾಡಿದವರು, ಈ ಲೋಕ ಹಾಗೂ ಪರಲೋಕಗಳಲ್ಲಿ ಸರ್ವಾಭೀಷ್ಟ ಹೊಂದಿ, ಕೊನೆಗೆ ಪರಮ ಪದವನ್ನು ಹೊಂದುವರು.

*ನಾರದ ಮಹಾಪುರಾಣದಲ್ಲಿ ಹದಿನೇಳನೇ ಅಧ್ಯಾಯ ಮುಗಿದುದು*

—o—

**ಸನಕ:-** ಮುನಿಶ್ರೇಷ್ಠನಾದ ನಾರದ, ನಿನಗೆ ಸರ್ವ ಪಾಪಗಳನ್ನು ಪರಿಹರಿಸುವ 'ಪೂರ್ಣಿಮಾ ವ್ರತ'ವನ್ನು ಹೇಳುತ್ತೇನೆ,ಕೇಳು. ಮಾರ್ಗಶಿರ ಹುಣ್ಣಿಮೆಯಂದು ವಿಧಿಪೂರ್ವಕವಾಗಿ ದಂತ ಧಾವನ, ಸ್ನಾನಾದಿಗಳಿಂದ ಶುದ್ಧನಾಗಿ, ಬಿಳಿಯ ಬಟ್ಟೆಯನ್ನು ಧರಿಸಿ, ನಾರಾಯಣನನ್ನು ಸ್ಮರಿಸುತ್ತ ಪ್ರತಿನಿತ್ಯ ದೇವರ ಪೂಜೆ ಮಾಡಬೇಕು. ಅನಂತರ ಸಂಕಲ್ಪ ಪೂರ್ವಕವಾಗಿ ' ಓಂ ನಮೋ ನಾರಾಯಣಾಯ ' ಎಂಬ ಮಂತ್ರವನ್ನು ಜಪಿಸಿ ಲಕ್ಷ್ಮೀನಾರಾಯಣರನ್ನು ಭಕ್ತಿಯಿಂದ ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಬೇಕು. ದೇವರ ಮುಂದೆ ಗೀತ, ವಾದ್ಯ, ನೃತ್ಯ, ಪುರಾಣ ಪಠಣ ಸ್ತೋತ್ರಾದಿಗಳನ್ನು ಮಾಡಿ, ಚೌಕ ಆಕಾರದ ಸ್ಥಂಡಿಲವನ್ನು ದೇವರ ಎದುರು ಅಕ್ಕಿಹಿಟ್ಟಿನಿಂದ ಒಂದು ಗೇಣು ಉದ್ದ ಅಗಲವಾಗಿ ಚಿತ್ರಿಸಬೇಕು. ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ ಆ ಸ್ಥಂಡಿಲದಲ್ಲಿ ಅಗ್ನಿಸ್ಥಾಪನೆ ಮಾಡಬೇಕು. ಅಗ್ನಿಯನ್ನು ಉದ್ದೀಪನಗೊಳಿಸಿ 'ಪುರುಷಸೂಕ್ತದಿಂದ ' ಆಜ್ಯ ಭಾಗಾಂತವಾದ ಅಂಗ ಕರ್ಮಕಲಾಪಗಳನ್ನು ಮಾಡಿ, ಅನ್ನ, ಎಳ್ಳು, ತುಪ್ಪಗಳಿಂದ ಹೋಮ ಮಾಡಬೇಕು. ಅನಂತರ 'ಶಾಂತಿಸೂಕ್ತ ' ಪಠಿಸಿ, ಮತ್ತೆ ದೇವರ ಪೂಜೆ ಮಾಡಿ, ತಾನು ಮಾಡಿದ ವ್ರತೋಪವಾಸವನ್ನು ದೇವರಿಗೆ ಸಮರ್ಪಿಸಬೇಕು. ಪೌರ್ಣಿಮೆಯ ದಿನ ಪೂರ್ಣ ಉಪವಾಸವಿದ್ದು.

**'ಭೋಕ್ಷ್ಯಾಮಿ ಪುಂಡರೀಕಾಕ್ಷ ಪರೇಽಹ್ನಿ ಶರಣಂ ಭವ'**

'ಪುಂಡರೀಕಾಕ್ಷನೇ, ನಿನ್ನ ಆಜ್ಞೆಯಂತೆ ಇಂದು ಉಪವಾಸವಿದ್ದು ನಾಳೆ ಪಾರಣೆ ಮಾಡುತ್ತೇನೆ, ನಿನಗೆ ಶರಣು ಬಂದಿದ್ದೇನೆ ರಕ್ಷಿಸು' ಎಂದು ಹೇಳಿ ದೇವರಿಗೂ ಚಂದ್ರನಿಗೂ ಅರ್ಘ್ಯಕೊಡಬೇಕು. ಅರ್ಘ್ಯಕೊಡುವಾಗ ನೆಲದಮೇಲೆ ಮೊಳಕಾಲು ಊರಿ ಕುಳಿತುಕೊಂಡು ಬಿಳಿ ಹೂ, ಅಕ್ಷತೆಗಳನ್ನು ಅರ್ಘ್ಯದಲ್ಲಿ ಸೇರಿಸಿ -

**ಕ್ಷೀರೋದಾರ್ಣವ ಸಂಭೂತ ಅತ್ರಿಗೋತ್ರ ಸಮುದ್ಭವ**
**ಗ್ರಹಾಣಾರ್ಘ್ಯಂ ಮಯಾ ದತ್ತಂ ರೋಹಿಣೀ ನಾಯಕ ಪ್ರಭೋ ॥**

ಅತ್ರಿಗೋತ್ರದಲ್ಲಿ ಹುಟ್ಟಿ ಹಾಲ್ಗಡಲಿನಿಂದ ಹೊರಬಿದ್ದ ರೋಹಿಣಿಯ ನಾಯಕನಾದ ಚಂದ್ರನೇ, ನಾನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸು, ಎಂಬ ಮಂತ್ರದಿಂದ ಚಂದ್ರನಿಗೆ ಅರ್ಘ್ಯ ಕೊಡಬೇಕು. ಅನಂತರ ಪೂರ್ವಕ್ಕೆ ಮುಖ ಮಾಡಿ ಚಂದ್ರನನ್ನು ನೋಡುತ್ತ

**ಶುಕ್ಲಾಂಶವೇ ನಮಃ । ಶುಕ್ಲಾಂಶವೇ ತುಭ್ಯಂ ನಮಃ**

ಶುಭ್ರ ಕಿರಣುಳ್ಳ ಚಂದ್ರನೇ, ನಿನಗೆ ನಮಸ್ಕಾರ.

ದ್ವಿಜರಾಜಾಯ ತೇ ನಮಃ, ದ್ವಿಜರ ಪತಯೇ ನಿನಗೆ ನಮಸ್ಕಾರ ರೋಹಿಣೀ ಪತಯೇ ನಮಃ ರೋಹೀಣೀ ಪತಿಯಾದ ನಿನಗೆ ನಮಸ್ಕಾರ.

ಲಕ್ಷ್ಮೀ ಭ್ರಾತ್ರೇ ನಮಃ, ಲಕ್ಷ್ಮೀ ಸಹೋದರನಾದ ನಿನಗೆ ನಮಸ್ಕಾರ ಎಂದು ಹೇಳಿ ನಮಸ್ಕಾರ ಮಾಡಬೇಕು. ಅಂದು ರಾತ್ರಿ ಹರಿಕೀರ್ತನ, ಪುರಾಣ ಶ್ರವಣಾದಿಗಳಿಂದ

ಗಂಧಗಳಿಂದ ಷೋಡಶೋಪಚಾರ ಪೂಜೆ ಮಾಡಿ, ರಾತ್ರಿ ಪುರಾಣ, ಹರಿಕಥೆಗಳಿಂದ ಜಾಗರಣೆ ಹಾಗೂ ರಾತ್ರಿ ಉಪವಾಸ ಮಾಡಿ ತ್ರಿಕಾಲದಲ್ಲೂ ದೇವರ ಪೂಜೆಮಾಡಿ, ಮರುದಿನ ಉಷಃಕಾಲದಲ್ಲಿ ನಿತ್ಯ ಕರ್ಮ ಮುಗಿಸಿ, ವ್ಯಾಹೃತಿ ಮಂತ್ರಗಳಿಂದ ಸಾವಿರ ತಿಲ ಹೋಮ ಮಾಡಿಸಬೇಕು. ಅನಂತರ ಕ್ರಮ ಪ್ರಕಾರ ದೇವರ ಪೂಜೆ ಮಾಡಿ, ಆ ದೇವರ ಸನ್ನಿಧಿಯಲ್ಲಿ ಪುರಾಣ ಶ್ರವಣ ಮಾಡಬೇಕು. ಮತ್ತು ಹನ್ನೆರಡು ಜನ ವಿಪ್ರರಿಗೆ -

**ದೇವ ದೇವ ಜಗನ್ನಾಥ ಭಕ್ತಾನುಗ್ರಹ ವಿಗ್ರಹ**
**ಗೃಹಾಣೋಪಾಯನಂ ಕೃಷ್ಣ ಸರ್ವಾಭೀಷ್ಟ ಪ್ರದೋ ಭವ**

"ಭಕ್ತರಿಗೆ ಅನುಗ್ರಹ ಮಾಡುವ ಪ್ರಸನ್ನ ಮೂರ್ತಿಯಾದ, ಜಗದೊಡೆಯನಾದ ದೇವದೇವನೇ, ನಾನು ಕೊಟ್ಟ ಈ ಕಾಣಿಕೆ ಸ್ವೀಕರಿಸು, ನನ್ನ ಎಲ್ಲ ಅಭೀಷ್ಟ ಪೂರೈಸು" ಎಂಬ ಮಂತ್ರದಿಂದ ಹತ್ತು ಅನಾರಸ (ಅಪೂಪ) ಮೊಸರನ್ನ, ತುಪ್ಪ ಹಾಕಿದ ಪಾಯಸ ಮುಂತಾದವುಗಳನ್ನು ದಕ್ಷಿಣೆ ಸಹಿತ ದಾನ ನೀಡಬೇಕು. ಅನಂತರ - 'ಕುರುಷ್ವ ಸಂಪೂರ್ಣ ಫಲಂ ಮಮಾದ್ಯ । ನಮೋಸ್ತು ತುಭ್ಯಂ ಪುರುಷೋತ್ತಮಾಯ ' ಪುರುಷೋತ್ತಮನಿಗೆ ನಮಸ್ಕಾರ. ನಾನು ಮಾಡಿದ ಈ ವ್ರತವನ್ನು ಸಂಪೂರ್ಣ ಫಲ ಬರುವಂತೆ ಮಾಡು ಎಂದು ಪ್ರಾರ್ಥಿಸಬೇಕು ಅನಂತರ -

**ಲಕ್ಷ್ಮೀಪತೇ ನಮಸ್ತುಭ್ಯಂ ಕ್ಷೀರಾರ್ಣವ ನಿವಾಸಿನೇ ।**
**ಅರ್ಘ್ಯಂ ಗೃಹಾಣ ದೇವೇಶ ಲಕ್ಷ್ಮ್ಯಾಚ ಸಹಿತಃ ಪ್ರಭೋ ॥**

' ಹಾಲಿನ ಸಮುದ್ರದಲ್ಲಿ ನೆಲೆಸಿದ ಲಕ್ಷ್ಮೀಪತಿಯೇ, ನಿನಗೆ ವಂದನೆ, ನಾನಿತ್ತ ಈ ಅರ್ಘ್ಯವನ್ನು ಲಕ್ಷ್ಮೀ ಸಹಿತನಾದ ದೇವೇಶನೇ ನೀನು ಸ್ವೀಕರಿಸು ' ಎಂದು ದೇವರನ್ನು ಪ್ರಾರ್ಥಿಸಿ ತಾನು ಮಾಡಿದ ಕರ್ಮವನ್ನೆಲ್ಲ ಭಗವಂತನಿಗೆ ಸಮರ್ಪಿಸಬೇಕು. ಮತ್ತು ಆ ಲಕ್ಷ್ಮೀನಾರಾಯಣರ ಪ್ರತಿಮೆಯನ್ನು ಆಚಾರ್ಯರಿಗೆ ಕೊಟ್ಟು ಮೇಲೆ ದಕ್ಷಿಣೆ ನೀಡಬೇಕು. ಯಥಾಶಕ್ತಿ ಜ್ಞಾನಿಗಳ ಭೋಜನ, ದಕ್ಷಿಣೆದಾನ, ಸಾಯಂಕಾಲ ವಿಷ್ಣು ಕಥಾಶ್ರವಣ, ಪಾರಾಯಣ ಮುಂತಾದವುಗಳನ್ನು ಮಾಡಬೇಕು. ಈ ರೀತಿಯಾಗಿ ದ್ವಾದಶಿ ವ್ರತ ಮಾಡಿದವರು, ಈ ಲೋಕ ಹಾಗೂ ಪರಲೋಕಗಳಲ್ಲಿ ಸರ್ವಾಭೀಷ್ಟ ಹೊಂದಿ, ಕೊನೆಗೆ ಪರಮ ಪದವನ್ನು ಹೊಂದುವರು.

ನಾರದ ಮಹಾಪುರಾಣದಲ್ಲಿ ಹದಿನೇಳನೇ ಅಧ್ಯಾಯ ಮುಗಿದುದು

—o—

**ಸನಕ:-** ಮುನಿಶ್ರೇಷ್ಠನಾದ ನಾರದ, ನಿನಗೆ ಸರ್ವ ಪಾಪಗಳನ್ನು ಪರಿಹರಿಸುವ 'ಪೂರ್ಣಿಮಾ ವ್ರತ'ವನ್ನು ಹೇಳುತ್ತೇನೆ,ಕೇಳು. ಮಾರ್ಗಶಿರ ಹುಣ್ಣಿಮೆಯಂದು ವಿಧಿಪೂರ್ವಕವಾಗಿ ದಂತ ಧಾವನ, ಸ್ನಾನಾದಿಗಳಿಂದ ಶುದ್ಧನಾಗಿ, ಬಿಳಿಯ ಬಟ್ಟೆಯನ್ನು ಧರಿಸಿ, ನಾರಾಯಣನನ್ನು ಸ್ಮರಿಸುತ್ತ ಪ್ರತಿನಿತ್ಯ ದೇವರ ಪೂಜೆ ಮಾಡಬೇಕು. ಅನಂತರ ಸಂಕಲ್ಪ ಪೂರ್ವಕವಾಗಿ ' ಓಂ ನಮೋ ನಾರಾಯಣಾಯ ' ಎಂಬ ಮಂತ್ರವನ್ನು ಜಪಿಸಿ ಲಕ್ಷ್ಮೀನಾರಾಯಣರನ್ನು ಭಕ್ತಿಯಿಂದ ಗಂಧ ಪುಷ್ಪಕ್ಷತೆಗಳಿಂದ ಪೂಜಿಸಬೇಕು. ದೇವರ ಮುಂದೆ ಗೀತ, ವಾದ್ಯ, ನೃತ್ಯ, ಪುರಾಣ ಪಠಣ ಸ್ತೋತ್ರಾದಿಗಳನ್ನು ಮಾಡಿ, ಚೌಕ ಆಕಾರದ ಸ್ಥಂಡಿಲವನ್ನು ದೇವರ ಎದುರು ಅಕ್ಕಿಹಿಟ್ಟಿನಿಂದ ಒಂದು ಗೇಣು ಉದ್ದ ಅಗಲವಾಗಿ ಚಿತ್ರಿಸಬೇಕು. ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ ಆ ಸ್ಥಂಡಿಲದಲ್ಲಿ ಅಗ್ನಿಸ್ಥಾಪನೆ ಮಾಡಬೇಕು. ಅಗ್ನಿಯನ್ನು ಉದ್ದೀಪನಗೊಳಿಸಿ 'ಪುರುಷಸೂಕ್ತದಿಂದ ' ಆಜ್ಯ ಭಾಗಾಂತವಾದ ಅಂಗ ಕರ್ಮಕಲಾಪಗಳನ್ನು ಮಾಡಿ, ಅನ್ನ, ಎಳ್ಳು, ತುಪ್ಪಗಳಿಂದ ಹೋಮ ಮಾಡಬೇಕು. ಅನಂತರ 'ಶಾಂತಿಸೂಕ್ತ ' ಪಠಿಸಿ, ಮತ್ತೆ ದೇವರ ಪೂಜೆ ಮಾಡಿ, ತಾನು ಮಾಡಿದ ವ್ರತೋಪವಾಸವನ್ನು ದೇವರಿಗೆ ಸಮರ್ಪಿಸಬೇಕು. ಪೌರ್ಣಿಮೆಯ ದಿನ ಪೂರ್ಣ ಉಪವಾಸವಿದ್ದು.

**'ಭೋಕ್ಷ್ಯಾಮಿ ಪುಂಡರೀಕಾಕ್ಷ ಪರೇಽಹ್ನಿ ಶರಣಂ ಭವ'**

'ಪುಂಡರೀಕಾಕ್ಷನೇ, ನಿನ್ನ ಆಜ್ಞೆಯಂತೆ ಇಂದು ಉಪವಾಸವಿದ್ದು ನಾಳೆ ಪಾರಣೆ ಮಾಡುತ್ತೇನೆ, ನಿನಗೆ ಶರಣು ಬಂದಿದ್ದೇನೆ ರಕ್ಷಿಸು' ಎಂದು ಹೇಳಿ ದೇವರಿಗೂ ಚಂದ್ರನಿಗೂ ಅರ್ಘ್ಯಕೊಡಬೇಕು. ಅರ್ಘ್ಯಕೊಡುವಾಗ ನೆಲದಮೇಲೆ ಮೊಳಕಾಲು ಊರಿ ಕುಳಿತುಕೊಂಡು ಬಿಳಿ ಹೂ, ಅಕ್ಷತೆಗಳನ್ನು ಅರ್ಘ್ಯದಲ್ಲಿ ಸೇರಿಸಿ -

**ಕ್ಷೀರೋದಾರ್ಣವ ಸಂಭೂತ ಅತ್ರಿಗೋತ್ರ ಸಮುದ್ಭವ**
**ಗ್ರಹಾಣಾರ್ಘ್ಯಂ ಮಯಾ ದತ್ತಂ ರೋಹಿಣೀ ನಾಯಕ ಪ್ರಭೋ ॥**

ಅತ್ರಿಗೋತ್ರದಲ್ಲಿ ಹುಟ್ಟಿ ಹಾಲ್ಗಡಲಿನಿಂದ ಹೊರಬಿದ್ದ ರೋಹಿಣಿಯ ನಾಯಕನಾದ ಚಂದ್ರನೇ, ನಾನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸು, ಎಂಬ ಮಂತ್ರದಿಂದ ಚಂದ್ರನಿಗೆ ಅರ್ಘ್ಯ ಕೊಡಬೇಕು. ಅನಂತರ ಪೂರ್ವಕ್ಕೆ ಮುಖ ಮಾಡಿ ಚಂದ್ರನನ್ನು ನೋಡುತ್ತ

**ಶುಕ್ಲಾಂಶವೇ ನಮಃ । ಶುಕ್ಲಾಂಶವೇ ತುಭ್ಯಂ ನಮಃ**

ಶುಭ್ರ ಕಿರಣುಳ್ಳ ಚಂದ್ರನೇ, ನಿನಗೆ ನಮಸ್ಕಾರ.

ದ್ವಿಜರಾಜಾಯ ತೇ ನಮಃ, ದ್ವಿಜರ ಪತಯೇ ನಿನಗೆ ನಮಸ್ಕಾರ ರೋಹಿಣೀ ಪತಯೇ ನಮಃ ರೋಹೀಣೀ ಪತಿಯಾದ ನಿನಗೆ ನಮಸ್ಕಾರ.

ಲಕ್ಷ್ಮೀ ಭ್ರಾತ್ರೇ ನಮಃ, ಲಕ್ಷ್ಮೀ ಸಹೋದರನಾದ ನಿನಗೆ ನಮಸ್ಕಾರ ಎಂದು ಹೇಳಿ ನಮಸ್ಕಾರ ಮಾಡಬೇಕು. ಅಂದು ರಾತ್ರಿ ಹರಿಕೀರ್ತನ, ಪುರಾಣ ಶ್ರವಣಾದಿಗಳಿಂದ

ಜಾಗರಣ ಮಾಡಬೇಕು. ಸ್ತ್ರೀಸಂಗ ವರ್ಜಿಸಬೇಕು. 'ದೇವರಿಲ್ಲ, ಧರ್ಮವಿಲ್ಲ ಎನ್ನುವ ನಾಸ್ತಿಕರೊಡನೆ ಮಾತನಾಡಕೂಡದು. ಮರುದಿನ ಉಷಃಕಾಲಕ್ಕೆ ಎದ್ದು, ಸ್ನಾನದಿ ಮುಗಿಸಿ, ತನ್ನ ಯೋಗ್ಯತೆಗೆ ಅನುಸರಿಸಿ, ಸಲಕರಣೆ ಒದಗಿಸಿಕೊಂಡು ವೈಭವದಿಂದ ದೇವರ ಪೂಜೆ ಮಾಡಬೇಕು. ಯಥಾಶಕ್ತಿ ಭೂರಿಭೋಜನ ಮಾಡಬೇಕು. ಅಂದು ಮೌನಿಯಾಗಿಯೇ ಇರಬೇಕು. ಹೀಗೆ ಪುಷ್ಯ, ಮಾಘ ಮುಂತಾದ ಎಲ್ಲ ಹುಣ್ಣಿಮೆ ದಿನಗಳಲ್ಲಿ ಉಪವಾಸ ಮಾಡಿ ಭಕ್ತಿಯಿಂದ ಶ್ರೀನಾರಾಯಣನನ್ನು ಪೂಜಿಸಬೇಕು. ಹೀಗೆ ಒಂದು ವರ್ಷದವರೆಗೆ ಹನ್ನೊಂದು ಹುಣ್ಣಿಮೆ ಪೂಜೆ ಮಾಡಿ, ಕಾರ್ತೀಕ ಪೂರ್ಣಿಮೆಯಂದು 'ಉದ್ಯಾಪನ' ಮಾಡಬೇಕು. ಅದರ ವಿಧಾನ ಹೇಳುತ್ತೇನೆ ಕೇಳು.

ಹೂವಿನ ಮಾಲೆ, ತೋರಣ, ಪತಾಕೆ, ಇವುಗಳಿಂದ ಶೋಭಿಸುವಂತೆ, ಒಂದು ಚೌಕೋನಾಕಾರದ ಮಂಟಪ ಮಾಡಿಸ (ರಚಿಸ)ಬೇಕು. ಅಲ್ಲಲ್ಲಿ ಅನೇಕ ದೀಪಗಳು ಹೊಳೆಯುವಂತೆ ಮಾಡಿ, ಕಿರುಗಂಟೆಗಳನ್ನು ಅಲ್ಲಲ್ಲಿ ನೇತುಹಾಕಬೇಕು. ಕನ್ನಡಿ, ಕಲಶ, ಚಾಮರಗಳಿಂದ ಆ ಮಂಟಪವನ್ನು ಶೃಂಗರಿಸಬೇಕು. ಮಧ್ಯಭಾಗದಲ್ಲಿ ಐದು ಬಣ್ಣಗಳಿಂದ ಹೊಳೆಯುವ ಸರ್ವತೋಭದ್ರ' ಮಂಡಲವನ್ನು ಮಾಡಿ, ಅದರ ಮೇಲೆ ನೀರು ತುಂಬಿದ ಕಲಶವನ್ನು ಸ್ಥಾಪಿಸಬೇಕು.

ಅಲಂಕೃತ ಕಲಶವನ್ನು ತೆಳ್ಳಗಿನ ಬಿಳಿಯ ವಸ್ತ್ರದಿಂದ ಮುಚ್ಚಿ, ತಾಮ್ರ ಬೆಳ್ಳಿ ಅಥವಾ ಬಂಗಾರದ ಲಕ್ಷ್ಮೀನಾರಾಯಣ ಪ್ರತಿಮೆ ಮಾಡಿಸಿ ಕಲಶಗಳ ಮೇಲಿಡಬೇಕು. ಅದಕ್ಕೆ ಪಂಚಾಮೃತ ಅಭಿಷೇಕ ಮಾಡಿ, ಗಂಧ, ಪುಷ್ಪ, ತುಳಸೀ ಪತ್ರಾದಿಗಳನ್ನೇರಿಸಿ ವಿವಿಧ ಭಕ್ಷ್ಯ ಭೋಜ್ಯನೈವೇದ್ಯಗಳಿಂದ ಪೂಜಿಸಬೇಕು. ಜಿತೇಂದ್ರಿಯನಾಗಿ ಅಂದು ರಾತ್ರಿ ಜಾಗರ, ಪುರಾಣ ಶ್ರವಣ, ಭಗವನ್ನಾಮಾದಿ ಸ್ಮರಣ ಮಾಡಬೇಕು. ಮರುದಿನ ಪ್ರಾತಃ ಕಾಲ, ಹಿಂದೆ ಹೇಳಿದಂತೆ ವಿಧ್ಯುಕ್ತ ದೇವರ ಪೂಜೆ ಮಾಡಿ ಗುರುಗಳಿಗೆ ದಕ್ಷಿಣೆ ಸಹಿತ ಪ್ರತಿಮೆ ದಾನ ಕೊಡಬೇಕು.

*ನಾರದ ಮಹಾಪುರಾಣದಲ್ಲಿ ಹದಿನೆಂಟನೇಯ ಅಧ್ಯಾಯ ಮುಗಿದುದು*



## ಧ್ವಜಾರೋಪಣ ವ್ರತ

ಅಧ್ಯಾಯ - ೧೯

**ಸನಕ:-** 'ಧ್ವಜಾರೋಪಣ'ವೆಂಬ ಇನ್ನೊಂದು ವ್ರತ ಹೇಳುತ್ತೇನೆ. ಇದು ವಿಷ್ಣುಪ್ರೀತಿಕಾರಕವಾಗಿದೆ. ಕಾರ್ತೀಕ ಶುದ್ಧ ದಶಮಿ ದಿನ, ದಂತಧಾವನದ ನಂತರ ಸ್ನಾನ ಮಾಡಬೇಕು. ನಂತರ ದೇವರ ಪೂಜಾದಿಗಳನ್ನೂ ಮಾಡಬೇಕು. ಅಂದು ಒಪ್ಪತ್ತು ಊಟಮಾಡಿ ಬ್ರಹ್ಮಚರ್ಯದಿಂದಿದ್ದು ಶ್ರೀಮನ್ನಾರಾಯಣನನ್ನು ಸ್ಮರಿಸುತ್ತ, ರಾತ್ರಿ ಬಿಳಿ ಬಟ್ಟೆ ಹೊದ್ದುಕೊಂಡು ದೇವರ ಎದುರೇ ಮಲಗಬೇಕು. ಮರುದಿನ ಅರುಣೋದಯ ಸಮಯಕ್ಕೆ ಎದ್ದು ಸ್ನಾನ ಮಾಡಿ, ಆಚಮನಾನಂತರ ಪ್ರತಿನಿತ್ಯದಂತೆ ದೈನಂದಿನ ಜಪ ತಪಾನುಷ್ಠಾನಗಳನ್ನು ಮುಗಿಸಿ ದೇವರಪೂಜೆ ಮಾಡಬೇಕು. ಅನಂತರ ನಾಲ್ಕು ಜನ ಬ್ರಾಹ್ಮಣರೊಂದಿಗೆ ಸ್ವಸ್ತಿವಾಚನಮಾಡಿ, ಧ್ವಜಾರೋಪಣದಂಗವಾಗಿ 'ನಾಂದೀಶ್ರಾದ್ಧ' ಮಾಡಬೇಕು. ವಸ್ತ್ರ ಹೊದಿಸಿದ ಧ್ವಜವನ್ನು ಮತ್ತು ಸ್ತಂಭವನ್ನು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಿ, ಸೂರ್ಯ, ಗರುಡ, ಚಂದ್ರ, ಮೂವರನ್ನೂ ಪೂಜಿಸಬೇಕು. ಧ್ವಜದ ಸ್ತಂಭದಲ್ಲಿ

ಬ್ರಹ್ಮ, ವಿಷ್ಣು ಇವರನ್ನು ಅರಿಷಿಣ ಕುಂಕುಮ, ಬಿಳಿ ಹೂಗಳಿಂದ ಪೂಜಿಸಬೇಕು. ಬಳಿಕ ಗೋಚರ್ಮಮಾತ್ರ ಸ್ಥಂಡಿಲ ಹಾಕಿ, ಅದನ್ನು ಸಾರಿಸಿ, ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ, ಅಗ್ನಿಸ್ಥಾಪನೆಮಾಡಿ ಆಜ್ಯಭಾಗ ಪರ್ಯಂತ ಕರ್ಮವನ್ನು ಆಚರಿಸತಕ್ಕದ್ದು.

ಬಳಿಕ 'ಪುರುಷಸೂಕ್ತ', 'ವಿಷ್ಣು ಸೂಕ್ತ', 'ಇರಾಪತಿ' ಎಂಬ ಮಂತ್ರಗಳನ್ನು ಪಠಣಮಾಡುತ್ತ, ಪಾಯಸದಿಂದ ಒಂದು ನೂರೆಂಟುಸಲ ಹೋಮಮಾಡಬೇಕು. ಅನಂತರ 'ವೈನ್ಯತೇಯಾಯ ಸ್ವಾಹಾ' ವೈನತೇಯಾಯ ಇದಂಮಮ' ಎಂದು ಅಗ್ನಿಯಲ್ಲಿ ಎಂಟು ಆಹುತಿ ಹಾಕಬೇಕು. 'ಸ್ವಾಮಿಧೇನು ಸ್ವಾಹಾ' ಎಂದು ಐದು ಆಹುತಿ ಅಗ್ನಿಯಲ್ಲಿ ಅರ್ಪಿಸಬೇಕು. ಸೌರಮಂತ್ರ. ಶಾಂತಿಸೂಕ್ತ ಪಠಿಸಬೇಕು. ದೇವರ ಬಳಿಯಲ್ಲಿ ರಾತ್ರಿ ಪುರಾಣ ಶ್ರವಣ ಮಾಡುತ್ತ ಜಾಗರಣೆ ಮಾಡಬೇಕು.

ಮರುದಿನ ಬೆಳಿಗ್ಗೆ ಎದ್ದು ನಿತ್ಯ ಕರ್ಮ ಮುಗಿಸಿ, ಗಂಧಪುಷ್ಪಾದಿಗಳಿಂದ ದೇವರ ಪೂಜೆ ಮಾಡಿ, ಮಂಗಳ ವಾದ್ಯಗಳನ್ನು ಬಾರಿಸುತ್ತ, ವೇದ ಘೋಷಗೈಯುತ್ತ, ಸ್ತೋತ್ರ ಪಾರಾಯಣ, ನೃತ್ಯಗೀತಾದಿಗಳನ್ನು ಹಾಡುತ್ತ ಹೇಳುತ್ತ, ಗೈಯುತ್ತ ಮೆರವಣಿಗೆಯಿಂದ ಆ ಧ್ವಜವನ್ನು ದೇವರ ಗುಡಿಗೆ ಒಯ್ಯಬೇಕು. ದೇವಾಲಯದ ತಲೆಬಾಗಿಲ ಬಳಿಯಲ್ಲಾಗಲಿ ಅಥವಾ ಶಿಖರದಲ್ಲಾಗಲಿ ಸ್ತಂಭವನ್ನು ನೆಟ್ಟು, ಅದರ ಮೇಲೆ ಧ್ವಜವನ್ನು ಭದ್ರವಾಗಿ ಸ್ಥಾಪಿಸಬೇಕು. ಧ್ವಜ ಸ್ಥಾಪನೆ ಮಾಡಿದ ಬಳಿಕ, ಗಂಧಾಕ್ಷತೆ, ಪುಷ್ಪಗಳಿಂದಲೂ, ಧೂಪ, ದೀಪಗಳಿಂದಲೂ, ಪಕ್ವಾನ್ನ ನೈವೇದ್ಯಾದಿಗಳಿಂದಲೂ ಶ್ರೀ ಹರಿಯನ್ನು ಪೂಜಿಸಬೇಕು. ಹಾಗೆ ದೇವಾಲಯದಲ್ಲಿ ಶುಭಕರವಾದ ಧ್ವಜವನ್ನು ಸ್ಥಾಪಿಸಿ ಪ್ರದಕ್ಷಿಣೆ ಮಾಡಿ.

'ನಮಸ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ'
ನಮಸ್ತೇಽಸ್ತು ಹೃಷಿಕೇಶ ಮಹಾಪುರುಷ ಪೂರ್ವಜ ॥

ಕಮಲದಂತೆ ಕಣ್ಣುಳ್ಳ ಪರಮಾತ್ಮನೇ, ನಿನಗೆ ನಮಸ್ಕಾರ. ವಿಶ್ವವನ್ನೆಲ್ಲ ಸೃಷ್ಟಿಸಿದ ನಿನಗೆ ವಂದನೆ, ಇಂದ್ರಿಯಗಳನ್ನು ಪ್ರೇರಿಸುವ, ಬ್ರಹ್ಮಾದಿ ಪುರುಷರನ್ನು ಮೊದಲು ಹುಟ್ಟಿಸಿದ ಜಗದೀಶ್ವರನೇ, ನಿನಗೆ ನಮಸ್ಕಾರ ಎಂದು ಸ್ತೋತ್ರ ಮಾಡುತ್ತ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಹಾಕಬೇಕು.

ಹೀಗೆ ಬಗೆ ಬಗೆಯಿಂದ ಭಗವಂತನನ್ನು ಸ್ತೋತ್ರ ಮಾಡಿ, ಪುನಃ ನಮಸ್ಕರಿಸಿ, ಬ್ರಹ್ಮಜ್ಞಾನಿ ಹಾಗೂ ಗುರುಗಳನ್ನು ವಸ್ತ್ರ ದಕ್ಷಿಣೆಗಳ ಸಹಿತವಾಗಿ ಪೂಜಿಸಬೇಕು. ಅನಂತರ ಅನ್ನಸಂತರ್ಪಣೆ ನೆರವೇರಿಸಿ, ತನ್ನ ಪುತ್ರ, ಮಿತ್ರ, ಕುಟುಂಬ, ಪರಿವಾರದೊಂದಿಗೆ ತಾನು ಕೂಡ ಪಾರಣೆ ಮಾಡಬೇಕು. ಇದರಿಂದ ಮಹಾಪಾತಕ, ಉಪಪಾತಕಗಳು ನಾಶವಾಗುತ್ತವೆ. ಹರಿಮಂದಿರಲ್ಲಿ ಆ ಧ್ವಜವು ಎಷ್ಟು ದಿನ ಇರುವದೋ ಅಷ್ಟು ಸಾವಿರ ವರ್ಷ ಮಾನವನು ಶ್ರೀ ಹರಿಯ ಸಾರೂಪ್ಯ ಹೊಂದಿ ಆನಂದ ಪಡುತ್ತಾನೆ. ವಿಷ್ಣು ಮಂದಿರದಲ್ಲಿ ಧ್ವಜವನ್ನು ನಿಲ್ಲಿಸಿ, ಅದು ಎಂದಿಗೂ ಬೀಳದಂತೆ, ಹಾಳಾಗದಂತೆ ನೋಡಿಕೊಳ್ಳುವವನು, ಸುಮತಿ ರಾಜನಂತೆ ವಿಮಾನಾರೂಢನಾಗಿ ದೇವಲೋಕಕ್ಕೆ ಹೋಗುವನು.

ನಾರದ ಮಹಾಪುರಾಣದಲ್ಲಿ ಹತ್ತೊಂಭತ್ತನೇಯ ಅಧ್ಯಾಯ ಮುಗಿದುದು

—o—

ಜಾಗರಣ ಮಾಡಬೇಕು. ಸ್ತ್ರೀಸಂಗ ವರ್ಜಿಸಬೇಕು. 'ದೇವರಿಲ್ಲ, ಧರ್ಮವಿಲ್ಲ ಎನ್ನುವ ನಾಸ್ತಿಕರೊಡನೆ ಮಾತನಾಡಕೂಡದು. ಮರುದಿನ ಉಷಃಕಾಲಕ್ಕೆ ಎದ್ದು, ಸ್ನಾನದಿ ಮುಗಿಸಿ, ತನ್ನ ಯೋಗ್ಯತೆಗೆ ಅನುಸರಿಸಿ, ಸಲಕರಣೆ ಒದಗಿಸಿಕೊಂಡು ವೈಭವದಿಂದ ದೇವರ ಪೂಜೆ ಮಾಡಬೇಕು. ಯಥಾಶಕ್ತಿ ಭೂರಿಭೋಜನ ಮಾಡಬೇಕು. ಅಂದು ಮೌನಿಯಾಗಿಯೇ ಇರಬೇಕು. ಹೀಗೆ ಪುಷ್ಯ, ಮಾಘ ಮುಂತಾದ ಎಲ್ಲ ಹುಣ್ಣಿಮೆ ದಿನಗಳಲ್ಲಿ ಉಪವಾಸ ಮಾಡಿ ಭಕ್ತಿಯಿಂದ ಶ್ರೀನಾರಾಯಣನನ್ನು ಪೂಜಿಸಬೇಕು. ಹೀಗೆ ಒಂದು ವರ್ಷದವರೆಗೆ ಹನ್ನೊಂದು ಹುಣ್ಣಿಮೆ ಪೂಜೆ ಮಾಡಿ, ಕಾರ್ತೀಕ ಪೂರ್ಣಿಮೆಯಂದು 'ಉದ್ಯಾಪನ' ಮಾಡಬೇಕು. ಅದರ ವಿಧಾನ ಹೇಳುತ್ತೇನೆ ಕೇಳು.

ಹೂವಿನ ಮಾಲೆ, ತೋರಣ, ಪತಾಕೆ, ಇವುಗಳಿಂದ ಶೋಭಿಸುವಂತೆ, ಒಂದು ಚೌಕೋನಾಕಾರದ ಮಂಟಪ ಮಾಡಿಸ (ರಚಿಸ)ಬೇಕು. ಅಲ್ಲಲ್ಲಿ ಅನೇಕ ದೀಪಗಳು ಹೊಳೆಯುವಂತೆ ಮಾಡಿ, ಕಿರುಗಂಟೆಗಳನ್ನು ಅಲ್ಲಲ್ಲಿ ನೇತುಹಾಕಬೇಕು. ಕನ್ನಡಿ, ಕಲಶ, ಚಾಮರಗಳಿಂದ ಆ ಮಂಟಪವನ್ನು ಶೃಂಗರಿಸಬೇಕು. ಮಧ್ಯಭಾಗದಲ್ಲಿ ಐದು ಬಣ್ಣಗಳಿಂದ ಹೊಳೆಯುವ ಸರ್ವತೋಭದ್ರ' ಮಂಡಲವನ್ನು ಮಾಡಿ, ಅದರ ಮೇಲೆ ನೀರು ತುಂಬಿದ ಕಲಶವನ್ನು ಸ್ಥಾಪಿಸಬೇಕು.

ಅಲಂಕೃತ ಕಲಶವನ್ನು ತೆಳ್ಳಗಿನ ಬಿಳಿಯ ವಸ್ತ್ರದಿಂದ ಮುಚ್ಚಿ, ತಾಮ್ರ ಬೆಳ್ಳಿ ಅಥವಾ ಬಂಗಾರದ ಲಕ್ಷ್ಮೀನಾರಾಯಣ ಪ್ರತಿಮೆ ಮಾಡಿಸಿ ಕಲಶಗಳ ಮೇಲಿಡಬೇಕು. ಅದಕ್ಕೆ ಪಂಚಾಮೃತ ಅಭಿಷೇಕ ಮಾಡಿ, ಗಂಧ, ಪುಷ್ಪ, ತುಳಸೀ ಪತ್ರಾದಿಗಳನ್ನೇರಿಸಿ ವಿವಿಧ ಭಕ್ಷ್ಯ ಭೋಜ್ಯನೈವೇದ್ಯಗಳಿಂದ ಪೂಜಿಸಬೇಕು. ಜಿತೇಂದ್ರಿಯನಾಗಿ ಅಂದು ರಾತ್ರಿ ಜಾಗರ, ಪುರಾಣ ಶ್ರವಣ, ಭಗವನ್ನಾಮಾದಿ ಸ್ಮರಣ ಮಾಡಬೇಕು. ಮರುದಿನ ಪ್ರಾತಃ ಕಾಲ, ಹಿಂದೆ ಹೇಳಿದಂತೆ ವಿಧ್ಯುಕ್ತ ದೇವರ ಪೂಜೆ ಮಾಡಿ ಗುರುಗಳಿಗೆ ದಕ್ಷಿಣೆ ಸಹಿತ ಪ್ರತಿಮೆ ದಾನ ಕೊಡಬೇಕು.

*ನಾರದ ಮಹಾಪುರಾಣದಲ್ಲಿ ಹದಿನೆಂಟನೇಯ ಅಧ್ಯಾಯ ಮುಗಿದುದು*



## ಧ್ವಜಾರೋಪಣ ವ್ರತ

**ಅಧ್ಯಾಯ - ೧೯**

**ಸನಕ:-** 'ಧ್ವಜಾರೋಪಣ'ವೆಂಬ ಇನ್ನೊಂದು ವ್ರತ ಹೇಳುತ್ತೇನೆ. ಇದು ವಿಷ್ಣುಪ್ರೀತಿಕಾರಕವಾಗಿದೆ. ಕಾರ್ತೀಕ ಶುದ್ಧ ದಶಮಿ ದಿನ, ದಂತಧಾವನದ ನಂತರ ಸ್ನಾನ ಮಾಡಬೇಕು. ನಂತರ ದೇವರ ಪೂಜಾದಿಗಳನ್ನೂ ಮಾಡಬೇಕು. ಅಂದು ಒಪ್ಪತ್ತು ಊಟಮಾಡಿ ಬ್ರಹ್ಮಚರ್ಯದಿಂದಿದ್ದು ಶ್ರೀಮನ್ನಾರಾಯಣನನ್ನು ಸ್ಮರಿಸುತ್ತ, ರಾತ್ರಿ ಬಿಳಿ ಬಟ್ಟೆ ಹೊದ್ದುಕೊಂಡು ದೇವರ ಎದುರೇ ಮಲಗಬೇಕು. ಮರುದಿನ ಅರುಣೋದಯ ಸಮಯಕ್ಕೆ ಎದ್ದು ಸ್ನಾನ ಮಾಡಿ, ಆಚಮನಾನಂತರ ಪ್ರತಿನಿತ್ಯದಂತೆ ದೈನಂದಿನ ಜಪ ತಪಾನುಷ್ಠಾನಗಳನ್ನು ಮುಗಿಸಿ ದೇವರಪೂಜೆ ಮಾಡಬೇಕು. ಅನಂತರ ನಾಲ್ಕು ಜನ ಬ್ರಾಹ್ಮಣರೊಂದಿಗೆ ಸ್ವಸ್ತಿವಾಚನಮಾಡಿ, ಧ್ವಜಾರೋಪಣದಂಗವಾಗಿ 'ನಾಂದೀಶ್ರಾದ್ಧ' ಮಾಡಬೇಕು. ವಸ್ತ್ರ ಹೊದಿಸಿದ ಧ್ವಜವನ್ನು ಮತ್ತು ಸ್ತಂಭವನ್ನು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಿ, ಸೂರ್ಯ, ಗರುಡ, ಚಂದ್ರ, ಮೂವರನ್ನೂ ಪೂಜಿಸಬೇಕು. ಧ್ವಜದ ಸ್ತಂಭದಲ್ಲಿ

ಬ್ರಹ್ಮ, ವಿಷ್ಣು ಇವರನ್ನು ಅರಿಷಿಣ ಕುಂಕುಮ, ಬಿಳಿ ಹೂಗಳಿಂದ ಪೂಜಿಸಬೇಕು. ಬಳಿಕ ಗೋಚರ್ಮಮಾತ್ರ ಸ್ಥಂಡಿಲ ಹಾಕಿ, ಅದನ್ನು ಸಾರಿಸಿ, ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ, ಅಗ್ನಿಸ್ಥಾಪನೆಮಾಡಿ ಆಜ್ಯಭಾಗ ಪರ್ಯಂತ ಕರ್ಮವನ್ನು ಆಚರಿಸತಕ್ಕದ್ದು.

ಬಳಿಕ 'ಪುರುಷಸೂಕ್ತ', 'ವಿಷ್ಣು ಸೂಕ್ತ', 'ಇರಾಪತಿ' ಎಂಬ ಮಂತ್ರಗಳನ್ನು ಪಠಣಮಾಡುತ್ತ, ಪಾಯಸದಿಂದ ಒಂದು ನೂರೆಂಟುಸಲ ಹೋಮಮಾಡಬೇಕು. ಅನಂತರ 'ವೈನ್ಯತೇಯಾಯ ಸ್ವಾಹಾ' ವೈನತೇಯಾಯ ಇದಂಮಮ' ಎಂದು ಅಗ್ನಿಯಲ್ಲಿ ಎಂಟು ಆಹುತಿ ಹಾಕಬೇಕು. 'ಸ್ವಾಮಿಧೇನು ಸ್ವಾಹಾ' ಎಂದು ಐದು ಆಹುತಿ ಅಗ್ನಿಯಲ್ಲಿ ಅರ್ಪಿಸಬೇಕು. ಸೌರಮಂತ್ರ. ಶಾಂತಿಸೂಕ್ತ ಪಠಿಸಬೇಕು. ದೇವರ ಬಳಿಯಲ್ಲಿ ರಾತ್ರಿ ಪುರಾಣ ಶ್ರವಣ ಮಾಡುತ್ತ ಜಾಗರಣೆ ಮಾಡಬೇಕು.

ಮರುದಿನ ಬೆಳಿಗ್ಗೆ ಎದ್ದು ನಿತ್ಯ ಕರ್ಮ ಮುಗಿಸಿ, ಗಂಧಪುಷ್ಪಾದಿಗಳಿಂದ ದೇವರ ಪೂಜೆ ಮಾಡಿ, ಮಂಗಳ ವಾದ್ಯಗಳನ್ನು ಬಾರಿಸುತ್ತ, ವೇದ ಘೋಷಗೈಯುತ್ತ, ಸ್ತೋತ್ರ ಪಾರಾಯಣ, ನೃತ್ಯಗೀತಾದಿಗಳನ್ನು ಹಾಡುತ್ತ ಹೇಳುತ್ತ, ಗೈಯುತ್ತ ಮೆರವಣಿಗೆಯಿಂದ ಆ ಧ್ವಜವನ್ನು ದೇವರ ಗುಡಿಗೆ ಒಯ್ಯಬೇಕು. ದೇವಾಲಯದ ತಲೆಬಾಗಿಲ ಬಳಿಯಲ್ಲಾಗಲಿ ಅಥವಾ ಶಿಖರದಲ್ಲಾಗಲಿ ಸ್ತಂಭವನ್ನು ನೆಟ್ಟು, ಅದರ ಮೇಲೆ ಧ್ವಜವನ್ನು ಭದ್ರವಾಗಿ ಸ್ಥಾಪಿಸಬೇಕು. ಧ್ವಜ ಸ್ಥಾಪನೆ ಮಾಡಿದ ಬಳಿಕ, ಗಂಧಾಕ್ಷತೆ, ಪುಷ್ಪಗಳಿಂದಲೂ, ಧೂಪ, ದೀಪಗಳಿಂದಲೂ, ಪಕ್ವಾನ್ನ ನೈವೇದ್ಯಾದಿಗಳಿಂದಲೂ ಶ್ರೀ ಹರಿಯನ್ನು ಪೂಜಿಸಬೇಕು. ಹಾಗೆ ದೇವಾಲಯದಲ್ಲಿ ಶುಭಕರವಾದ ಧ್ವಜವನ್ನು ಸ್ಥಾಪಿಸಿ ಪ್ರದಕ್ಷಿಣೆ ಮಾಡಿ.

'ನಮಸ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ'
ನಮಸ್ತೇಽಸ್ತು ಹೃಷಿಕೇಶ ಮಹಾಪುರುಷ ಪೂರ್ವಜ ॥

ಕಮಲದಂತೆ ಕಣ್ಣುಳ್ಳ ಪರಮಾತ್ಮನೇ, ನಿನಗೆ ನಮಸ್ಕಾರ. ವಿಶ್ವವನ್ನೆಲ್ಲ ಸೃಷ್ಟಿಸಿದ ನಿನಗೆ ವಂದನೆ, ಇಂದ್ರಿಯಗಳನ್ನು ಪ್ರೇರಿಸುವ, ಬ್ರಹ್ಮಾದಿ ಪುರುಷರನ್ನು ಮೊದಲು ಹುಟ್ಟಿಸಿದ ಜಗದೀಶ್ವರನೇ, ನಿನಗೆ ನಮಸ್ಕಾರ ಎಂದು ಸ್ತೋತ್ರ ಮಾಡುತ್ತ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಹಾಕಬೇಕು.

ಹೀಗೆ ಬಗೆ ಬಗೆಯಿಂದ ಭಗವಂತನನ್ನು ಸ್ತೋತ್ರ ಮಾಡಿ, ಪುನಃ ನಮಸ್ಕರಿಸಿ, ಬ್ರಹ್ಮಜ್ಞಾನಿ ಹಾಗೂ ಗುರುಗಳನ್ನು ವಸ್ತ್ರ ದಕ್ಷಿಣೆಗಳ ಸಹಿತವಾಗಿ ಪೂಜಿಸಬೇಕು. ಅನಂತರ ಅನ್ನಸಂತರ್ಪಣೆ ನೆರವೇರಿಸಿ, ತನ್ನ ಪುತ್ರ, ಮಿತ್ರ, ಕುಟುಂಬ, ಪರಿವಾರದೊಂದಿಗೆ ತಾನು ಕೂಡ ಪಾರಣೆ ಮಾಡಬೇಕು. ಇದರಿಂದ ಮಹಾಪಾತಕ, ಉಪಪಾತಕಗಳು ನಾಶವಾಗುತ್ತವೆ. ಹರಿಮಂದಿರಲ್ಲಿ ಆ ಧ್ವಜವು ಎಷ್ಟು ದಿನ ಇರುವದೋ ಅಷ್ಟು ಸಾವಿರ ವರ್ಷ ಮಾನವನು ಶ್ರೀ ಹರಿಯ ಸಾರೂಪ್ಯ ಹೊಂದಿ ಆನಂದ ಪಡುತ್ತಾನೆ. ವಿಷ್ಣು ಮಂದಿರದಲ್ಲಿ ಧ್ವಜವನ್ನು ನಿಲ್ಲಿಸಿ, ಅದು ಎಂದಿಗೂ ಬೀಳದಂತೆ, ಹಾಳಾಗದಂತೆ ನೋಡಿಕೊಳ್ಳುವವನು, ಸುಮತಿ ರಾಜನಂತೆ ವಿಮಾನಾರೂಢನಾಗಿ ದೇವಲೋಕಕ್ಕೆ ಹೋಗುವನು.

ನಾರದ ಮಹಾಪುರಾಣದಲ್ಲಿ ಹತ್ತೊಂಭತ್ತನೇಯ ಅಧ್ಯಾಯ ಮುಗಿದುದು

—o—

**ನಾರದ:-** ಎಲ್ಲ ಧರ್ಮಗಳನ್ನು ಬಲ್ಲ, ಸರ್ವ ಶಾಸ್ತ್ರಾರ್ಥಗಳನ್ನು ಅರಿತ ಸನಕ ಮಹಾಮುನಿಯೇ, ದೇವಾಲಯದಲ್ಲಿ ಧ್ವಜಾರೋಪಣವು ಸರ್ವಕರ್ಮಗಳಲ್ಲಿಯೂ ಶ್ರೇಷ್ಠವಾದ ಪುಣ್ಯಕರ್ಮ ಎಂದು ತಿಳಿಸಿದಿರಿ. ಸುಮತಿ ಎಂಬ ಮಹಾರಾಜನು ಧ್ವಜಾರೋಪಣಗೈದು, ದೇವಲೋಕಕ್ಕೆ ಹೋದನು ಎಂದು ಸಹ ನೀವು ನನಗೆ ತಿಳಿಸಿದಿರಿ. ಆ ಸುಮತಿ ನೃಪನ ಚರಿತ್ರವನ್ನು ಸ್ವಲ್ಪ ವಿಶದವಾಗಿ ನಿರೂಪಿಸಿರಿ.

**ಸನಕ:-** ಈ ಸುಮತಿ ದೊರೆಯ ವೃತ್ತಾಂತವನ್ನು ನನಗೆ ಹೇಳಿದವರು ಸಾಕ್ಷಾತ್ ಬ್ರಹ್ಮದೇವರೇ. ಇದೊಂದು ಪುಣ್ಯ ಪುರುಷನ ಇತಿಹಾಸ. ಶ್ರದ್ಧೆಯಿಂದ ಇದನ್ನು ಆಲಿಸು.

ಹಿಂದೆ ಕೃತಯುಗದಲ್ಲಿ ಸುಮತಿ ಎಂಬ ಅರಸನಿದ್ದನು. ಅವನು ಹುಟ್ಟಿದ್ದು ಚಂದ್ರವಂಶದಲ್ಲಿ. ಅವನು ಆಳಿದ್ದು ಸಪ್ತದ್ವೀಪವತೀಯಾದ ಅಖಂಡ ಪೃಥ್ವೀ ಮಂಡಲ. ಧರ್ಮ ಅವನ ಜೀವನದ ಉಸಿರು. ಸತ್ಯವೇ ಅವನ ಧರ್ಮ. ಆತಿಥ್ಯವೇ ಅವನ ದೇವರು. ಅವನು ಕೇಳುವದು ಹರಿಯ ಕಥೆ. ಸೇವಿಸುವದು ಹರಿ ಗುರುಗಳನ್ನು. ಪೂಜಿಸುವದು ಸಜ್ಜನರನ್ನು. ಎಲ್ಲ ಪ್ರಾಣಿಗಳಿಗೆ ಹಿತಗೈಯುವದೇ ಅವನ ದೊಡ್ಡ ವ್ರತ.

ಇಂತಹನಿಗೆ ಮಡದಿಯಾಗಿ ಬಂದ ಸತ್ಯವತಿಯು ಮಹಾ ಪತಿವ್ರತೆ. ಬರಿ ಪತಿವ್ರತೆಯಲ್ಲ, ಪತಿಯ ಪ್ರಾಣವೆಂದರೂ ಯಥಾರ್ಥವೇ. ಸತೀಮಣಿಯರ ಲಕ್ಷಣಗಳೆಲ್ಲವೂ ಅವಳಲ್ಲಿ ಸಮನ್ವಯವಾಗಿ ಸಂಪನ್ನವಾಗಿಯೇ ಇದ್ದವು. ದಂಪತಿಗಳಿಬ್ಬರೂ ನಿತ್ಯವೂ ಹರಿಪೂಜೆ ಮಾಡುವದೇ ಒಂದು ಯೋಗ ಹಾಗೂ ಉದ್ಯೋಗ. ಇದರಿಂದ ಅವರಿಬ್ಬರಿಗೂ ಜನ್ಮಾಂತರದ ಸ್ಮರಣೆ ಇದ್ದಿತು. ಅನ್ನದಾನಕ್ಕೆ ಎಂದೂ ಅರಮನೆಯಲ್ಲಿ ಕೊರತೆ ಇಲ್ಲ. ಜಲದಾನವಂತೂ ನಿರಂತರವೂ ನಡೆಯುತ್ತಿತ್ತು. ಅವರು ಕಟ್ಟಿಸಿದ ಕೆರೆಗಳಿಗೂ, ಕಡಿಸಿದ ಬಾವಿಗಳಿಗೂ, ನೆಡಿಸಿದ ವೃಕ್ಷಗಳಿಗೂ, ನಿರ್ಮಿಸಿದ ಹರಿಮಂದಿರಗಳಿಗೂ ಸಂಖ್ಯೆಯೇ ಇಲ್ಲ. ಸತೀಮಣಿಯಾದ ಸತ್ಯವತಿಯು ನಿಜವಾಗಿ ಭಕ್ತಮಣಿಯೇ ಆಗಿದ್ದಳು. ದಿನಾಲು ವಿಷ್ಣು ದೇವಾಲಯಕ್ಕೆ ಹೋಗಿ ಶ್ರೀ ಹರಿಯನ್ನು ಹಾಡಿ ಪಾಡಿ, ಕೊಂಡಾಡುತ್ತಿದ್ದಳು. ಭಕ್ತಿ ಪರವಶಳಾಗಿ ದೇವರ ಮುಂದೆ ನೃತ್ಯ ಮಾಡುತ್ತಿದ್ದಳು. ಧ್ಯಾನಗೈಯುತ್ತಿದ್ದಳು.

ಇದರಂತೆ ಆ ಸುಮತಿ ಮಹಾರಾಜನಾದರೂ ಪ್ರತಿ ದ್ವಾದಶಿಯ ದಿನ ವಿಷ್ಣು ಮಂದಿರದಲ್ಲಿ ಧ್ವಜವನ್ನು ತಪ್ಪದೇ ಏರಿಸುತ್ತಿದ್ದನು. ಅವನು ಏರಿಸಿದ ಧ್ವಜವು ಸುಂದರವೂ, ವಿಶಾಲವೂ, ಮನೋಹರವೂ ಆಗಿದ್ದಿತು. ಇಂತಹ ಧರ್ಮಿಷ್ಠರೂ, ಹರಿನಿಷ್ಠರೂ ಆದ ಆ ದಂಪತಿಗಳನ್ನು ಸ್ತುತಿಸುವವರು ಮಾನವರು ಮಾತ್ರವಲ್ಲ, ದೇವತೆಗಳೂ ಕೂಡ ಅವರನ್ನು ಹೊಗಳಿ ಹರಿಸುತ್ತಿದ್ದರು. ಅವರ ಕೀರ್ತಿಯು ಮೂರು ಲೋಕಗಳಲ್ಲಿಯೂ ವ್ಯಾಪಿಸಿತ್ತು. ಇದನ್ನು ಕೇಳಿ ವಿಭಾಂಡಕ ಎಂಬ ಮುನಿಯು ಈ ಧರ್ಮನಿಷ್ಠ ದಂಪತಿಗಳನ್ನು ಕಾಣಲು ಅನೇಕ ಶಿಷ್ಯರೊಂದಿಗೆ ಇವರಿದ್ದಲ್ಲಿಗೆ ಬಂದನು. ಮಹಾರಾಜನು ಮಡದಿಯೊಂದಿಗೆ ಸ್ವಾಗತ ನೀಡಿದನು. ಆ ಮಹರ್ಷಿಗೆ ವಿಧಿ ಪೂರ್ವಕವಾಗಿ ಭಕ್ತಿಯಿಂದ ಅರ್ಘ್ಯಪಾದ್ಯ, ಅಶನ, ಆಚಮನ, ಮಧುಪರ್ಕಾದಿ ನೀಡಿ ಸತ್ಕರಿಸಿದನು. ಅವರನ್ನು ಉಚ್ಚಾಸನದಲ್ಲಿ ಕೂಡಿಸಿ, ತಾನು ಕೆಳಗೆ ಕುಳಿತುಕೊಂಡು ಹೇಳಿದನು.

**ರಾಜನು:-** ಪೂಜ್ಯರೆ, ಇಂದು ನಾನು ಧನ್ಯನಾದೆ, ತಮ್ಮ ದರ್ಶನದಿಂದ ಕೃತಕೃತ್ಯನಾದೆ. ದೊಡ್ಡವರ ಆಗಮನವು ಶುಭದಾಯಕವೆಂದು ಹಿರಿಯರು ಹೇಳಿದ್ದಾರೆ.

**ಯತ್ರ, ಸ್ಯಾನ್ಮಹತಾಂ ಪ್ರೇಮ ತತ್ರ ಸ್ಯುಃ ಸರ್ವ ಸಂಪದಃ ।**
**ತೇಜಃ ಕೀರ್ತಿರ್ಧನಂ ಪುತ್ರಾ, ಇತಿ ಪ್ರಾಹುರ್ವಿಪಶ್ಚಿತಃ ॥**

ದೊಡ್ಡವರು ಯಾರ ಮೇಲೆ ಪ್ರೇಮ ಮಾಡುವರೋ ಅವರಿಗೆ ಸರ್ವವಿಧ ಸಂಪತ್ತು ತೇಜಸ್ಸು, ಕೀರ್ತಿ, ಸಂತತಿ - ಸೌಭಾಗ್ಯ ಎಲ್ಲವೂ ಪ್ರಾಪ್ತವಾಗುವದೆಂದು ತಿಳಿದವರು ಹೇಳುತ್ತಾರೆ. ಮಹಾನುಭಾವರು ಕರುಣೆ ತೋರಿದಲ್ಲಿ ಶ್ರೇಯಸ್ಸು ಅನುದಿನ ಅಭಿವೃದ್ಧಿ ಹೊಂದುತ್ತದೆ. ದೊಡ್ಡವರ ಕಾಲಿನ ಧೂಳಿ, ಪಾದತೊಳೆದ ನೀರನ್ನು ತಲೆಯಲ್ಲಿ ಧರಿಸಿದವನು ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದಂತೆ, ವಿಪ್ರ ಶ್ರೇಷ್ಠರೆ, ಇಂದು ನನ್ನ ಮಡದಿ, ಮಕ್ಕಳು, ಸಂಪದ ಸರ್ವಸ್ವವನ್ನು ತಮ್ಮ ಅಡಿದಾವರೆಗೆ ಅರ್ಪಿಸಿದ್ದೇನೆ. ಆಜ್ಞೆಯಾಗಲಿ ತಮಗೆ ಪ್ರಿಯವಾದುದು ಏನು? ತಮಗೆ ಇಷ್ಟವಾದುದನ್ನು ಏನು ಮಾಡಲಿ? ಅಪ್ಪಣೆಕೊಡಿರಿ. ಈ ರೀತಿಯಾಗಿ ತಲೆ ತಗ್ಗಿಸಿ ವಿನಯದಿಂದ ಕೇಳುತ್ತಿರುವ ಆ ಮಹಾರಾಜನನ್ನು ಪ್ರೀತಿಯಿಂದ ಸ್ಪರ್ಶಮಾಡಿ, ವಿಭಾಂಡಕ ಮುನಿಗಳು ಮಾತನಾಡಿದರು.

**ಋಷಿ:-** ಮಹಾರಾಜನೆ, ನೀನು ಮಾತನಾಡಿದುದೆಲ್ಲವೂ ನೀನು ಹುಟ್ಟಿದ ಕುಲಕ್ಕೆ ಅದುಗುಣವೇ ಆಗಿದೆ! ವಿನಯದಿಂದ ಬಾಗಿ ನಡೆಯುವವರು ಸಕಲ ವಿಧವಾದ ಶ್ರೇಯಸ್ಸನ್ನು ಹೊಂದುತ್ತಾರೆ.

**ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚ ನೃಪಸತ್ತಮ ।**
**ವಿನಯಾಲ್ಲಭತೇ ಸರ್ವಂ ವಿನಯಾತ್ಕಿಂ ನ ಸಾಧ್ಯತೇ ॥**

ಧರ್ಮ, ಅರ್ಥ, ಕಾಮ, ಮೋಕ್ಷ ಇವು ನಾಲ್ಕೂ ವಿನಯದಿಂದ ಲಭಿಸುತ್ತವೆ. ವಿನಯದಿಂದ ಸಾಧಿಸದಿದ್ದದು ಯಾವದಿದೆ. ರಾಜನೆ, ವೇದಶಾಸ್ತ್ರೋಕ್ತ ಮಾರ್ಗದಲ್ಲಿ ನಡೆದಿರುವ ನಿನ್ನ ಸದಾಚಾರ ವಿದ್ಯೆ, ವಿನಯ, ಹರಿ, ಗುರು, ಭಕ್ತಿಗಳನ್ನು ಕಂಡು ಸಂತುಷ್ಟನಾಗಿದ್ದೇನೆ. ನೀನು ಮಾಡುವ ಧರ್ಮಾಚರಣೆಯು ಪ್ರಮಾಣ ಬದ್ಧವೂ, ಶಾಸ್ತ್ರ ಶುದ್ಧವೂ, ಸಂಪ್ರದಾಯ ಸಿದ್ಧವೂ ಆಗಿದೆ. ಅದರಲ್ಲಿ ನೀನು ಪರಿಣತನಾಗಿರುವೆ, ಧರ್ಮಶಾಸ್ತ್ರಗಳ ವಿಧಿ ವಿಧಾನಗಳಲ್ಲಿ ನೀನು ಒಳ್ಳೇ ಪಾರಂಗತನಿರುವಿ. ಆದುದರಿಂದ ನಿನಗೆ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಸರಿಯಾಗಿ ಉತ್ತರ ಹೇಳು. ಹರಿಗೆ ಪ್ರೀತಿಕರವಾದ ಪೂಜೆಗಳು ಅನೇಕ ವಿಧವಾಗಿವೆ, ನೀನು ನಿತ್ಯವೂ ಧ್ವಜಾರೋಪಣವನ್ನು ಬಹಳ ಭಕ್ತಿಯಿಂದ ಮಾಡುತ್ತಲಿರುವೆ, ಇದಕ್ಕೆ ಕಾರಣವೇನು? ನಿನ್ನ ಮಡದಿಯಾದ ಸತ್ಯವತಿಯು ಪರಮ ಸಾಧ್ವೀ ಇವಳು ಕೂಡ ದೇವರ ಎದುರು ನರ್ತನ ಮಾಡುತ್ತಾಳೆ. ಹೀಗೇಕೆ! ಈ ಎರಡು ನನ್ನ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಹೇಳು.

**ಸುಮತಿಮಹಾರಾಜ:-** ಪೂಜ್ಯರೇ, ಜನರಿಗೆಲ್ಲ ನಮ್ಮಿಬ್ಬರ ಈ ನಡತೆಯು ಹಾಗೂ ಈ ವಿಶೇಷ ಧರ್ಮಾನುಷ್ಠಾನವು ಆಶ್ಚರ್ಯಕರವಾಗಿ ಕಾಣುತ್ತದೆ. ಇದಕ್ಕಾಗಿ ಈ ಪ್ರಶ್ನೆಯನ್ನು ನೀವು ಮಾಡಿದ್ದೀರಿ. ಅದರ ಕಾರಣ ಹೇಳುತ್ತೇನೆ ಕೇಳಿರಿ, ಪೂರ್ವ ಜನ್ಮದಲ್ಲಿ ನಾನು ಮಾಲಿನಿಯೆಂಬ ಹೆಸರಿನ ಶೂದ್ರನಾಗಿದ್ದೆ. ನಾನು ಹಿಡಿದಿದ್ದು ದುರ್ಮಾರ್ಗ, ನಾನು ಮಾಡುತ್ತಿದ್ದುದು ಎಲ್ಲರ ಜನರ ಅಹಿತ. ಧರ್ಮದಲ್ಲಿ ಮಹಾದ್ವೇಷ ಚಾಡಿ ಹೇಳುವದು

ನನ್ನ ಸ್ವಾಭಾವ, ದೇವರ ದುಡ್ಡನ್ನು ಅಪಹರಿಸುವದೇ ನನ್ನ ಕಸಬು. ಎಷ್ಟು ಬ್ರಾಹ್ಮಣನನ್ನು ಹಿಂಸಿಸಿದೆನೋ ಎಷ್ಟು ಗೋವುಗಳನ್ನು ಕೊಂದೆನೋ ಎಷ್ಟು ಕೊಲೆ ನಡೆಸಿದೆನೋ ಗೊತ್ತಿಲ್ಲ. ನಾನು ಕೊಲ್ಲದ ಪ್ರಾಣಿಯೇ ಇರಲಿಲ್ಲ. ನನ್ನ ಬಾಯಿಂದ ಎಂದೂ ವಿನಯದ ವಚನ ಬರುತ್ತಲೇ ಇರಲಿಲ್ಲ. ನಿಷ್ಠುರ ವಚನ ಲೋಕಪೀಡೆ ಮಾಡುವ ನನಗೆ ವೇಶ್ಯಾವ್ಯಸನವೂ ಇದ್ದಿತು.

ಇದರಿಂದ ನನ್ನ ಎಲ್ಲ ಬಂಧು ಬಾಂಧವರು ನನ್ನನ್ನು ಮನೆಬಿಟ್ಟು ಹೊರಗೆ ಹಾಕಿದರು. ದುಃಖತಪ್ತನಾಗಿ ಅಡವಿಪಾಲಾದೆ. ಅಲ್ಲಿ ಮೃಗಗಳನ್ನು ಕೊಂದು ಮಾಂಸತಿಂದು ಹೇಗೋ ಬದುಕಿದೆ. ದಾರಿಕಾರರನ್ನೆಲ್ಲ ದೋಚುತ್ತಿದ್ದೆ. ಮನಸ್ಸಿಗೆ ಶಾಂತಿ ಸಂತಸ ಎಂದೂ ಇರಲಿಲ್ಲ. ಹೀಗೆ ಏಕಾಕಿತನದ ದುಃಖದಿಂದ ಆಕ್ರಾಂತನಾಗಿ ನಾನು ಒಂದು ನಿರ್ಜನ ವನದಲ್ಲಿ ವಾಸವಾದೆ. ಒಂದು ದಿನ ಹಸಿವೆಯಿಂದ ಬಳಲಿ ಬಾಯಾರಿಕೆಯಿಂದ ಬೆಂದು ಹೋಗಿದ್ದೆ. ಆಗ ಬೇಸಿಗೆ ಕಾಲವಾದದ್ದರಿಂದ ಎಲ್ಲಿಯೂ ನೀರು ದೊರೆಯಲಿಲ್ಲ. ನೀರಿಗಾಗಿ ವನಪ್ರಾಂತದಲ್ಲಿ ಅತ್ತಿತ್ತ ಅಲೆಯುತ್ತ ಹೊರಟ ನನ್ನ ಕಣ್ಣಿಗೆ ಒಂದು ವಿಷ್ಣು ದೇವಾಲಯ ಬಿದ್ದಿತು. ಅದು ಜೀರ್ಣವಾಗಿ ಅಲ್ಲಲ್ಲಿ ಬಿದ್ದು ಹೋಗಿತ್ತು. ಅದರ ಸಮೀಪವೇ ತಿಳಿನೀರಿನ ಒಂದು ಸರೋವರ. ಅಲ್ಲಿ ಹಂಸ, ಕಾರಂಡವಾದಿಗಳ ಕಲಕಲಾಟ. ಅದರ ಸುತ್ತಲೂ ನಿಬಿಡ ಗಿಡಗಳ ಝಾಡು. ಹೂ ಭರಿತವಾದ ರಂಜನೀಯ ಲತಾಕುಂಜಗಳು. ನಾನು ಅದನ್ನು ಕಂಡಕೂಡಲೇ ಅಲ್ಲಿಗೆ ಧಾವಿಸಿದೆ. ಕೊಳದ ನೀರನ್ನು ತೃಪ್ತಿಯಾಗುವವರೆಗೆ ಕುಡಿದೆ. ಅಲ್ಲಿದ್ದ ಮರಗಳಿಂದ ಹಣ್ಣುಗಳನ್ನು ತೆಗೆದು ಹೊಟ್ಟೆ ತುಂಬ ತಿಂದೆ. ಅನಂತರ ನಾನು ಅದೇ ಮುರುಕ ಗುಡಿಯಲ್ಲಿ ವಾಸಮಾಡಿದೆ. ಎಲ್ಲ ಕಡೆಗೂ ಬಿದ್ದು ಹೋದ ಆ ದೇವಾಲಯವನ್ನು ಪ್ರತಿ ನಿತ್ಯವೂ ಸ್ವಲ್ಪ ಸ್ವಲ್ಪ ಜೋಡಿಸಿ ಕಟ್ಟಿ ಸರಿಪಡಿಸುತ್ತಿದ್ದೆ. ಅದೇ ವನದಲ್ಲಿ ತಿರುಗಾಡಿ, ಕಟ್ಟಿಗೆಗಳನ್ನು ತಂದು ತೊಲೆ, ಜಂತಿ, ಕಂಬಗಳನ್ನು ಮಾಡಿಕೊಂಡೆ, ಹುಲ್ಲು, ಎಲೆ, ಮುಂತಾದ ಗೃಹೋಪಯುಕ್ತ ಪದಾರ್ಥಗಳನ್ನು ವನಾಂತರದಿಂದ ನಾನೇ ತೆಗೆದುಕೊಂಡು ಬಂದೆ. ಅವುಗಳಿಂದ ಜೀರ್ಣವಾದ ದೇವಾಲಯವನ್ನು ನಾನು ಕಟ್ಟಿ, ನನಗೆ ಇರಲಿಕ್ಕಾಗಿ ಆ ಹರಿ ಮಂದಿರವನ್ನು ಜೀರ್ಣೋದ್ಧಾರ ಮಾಡಿಕೊಂಡೆ.

ನನ್ನ ಶತ ಪ್ರಯತ್ನದಿಂದ ಸುಂದರವಾದ ಒಂದು ಮನೆಯೇ ದೇವಾಲಯ ರೂಪದಿಂದ ಸಿದ್ಧವಾಯಿತು. ಒಳಗಿನ ಭಾಗವನ್ನೆಲ್ಲ ತೊಳೆದು ಬಳಿದು, ಸಾರಿಸಿ, ನನಗೆ ಇರಲಿಕ್ಕಾಗಿ ಸ್ವಚ್ಛ ಮಾಡಿ ಸಿಂಗರಿಸಿಕೊಂಡೆ, ಅಲ್ಲಿ ನಾನು ಇದ್ದು ನನ್ನ ವ್ಯಾಧ ವೃತ್ತಿಯಿಂದಲೇ ಜೀವಿಸತೊಡಗಿದೆ. ಅನೇಕ ಮೃಗಗಳನ್ನು ಕೊಂದು ತಿಂದು ಆ ದೇವಾಲಯದಲ್ಲಿ ಇಪ್ಪತ್ತು ವರ್ಷ ವಾಸಮಾಡಿದೆ. ಅನಂತರ ಒಂದು ದಿನ ಈ ಸಾಧ್ವೀಮಣಿಯು ಅಲ್ಲಿಗೆ ಬಂದಳು. ಇವಳ ತಾಯ್ನಾಡು ವಿಂಧ್ಯದೇಶ. ಇವಳು ಹುಟ್ಟಿದ ವಂಶ ಬೇಡರ ಕುಲ. ಕೋಕಿಲಿನಿ ಎಂದು ಇವಳ ಹೆಸರು. ಬಂಧುಗಳೆಲ್ಲರೂ ಇವಳನ್ನು ಹೊರಗೆ ಹಾಕಿಬಿಟ್ಟರು. ತಿನ್ನಲು ಇಲ್ಲದೆ ಇವಳು ಕೊರಗಿ ಸೊರಗಿ ಸವೆದು ಹೋಗಿದ್ದಳು. ಹಸಿವೆ ಬಾಯಾರಿಕೆಗಳಿಂದ ಸಂಕಟ ಪಡುತ್ತ, ಅಳುತ್ತ ದೈವಯೋಗದಿಂದ ಇಲ್ಲಿಗೆ ಬಂದಳು, ಹೊರಗೆ ಬೇಸಿಗೆಯ ಬಿಸಿಲು, ಒಳಗೆ ತನಗೆ ಯಾರೂ ದಿಕ್ಕಿಲ್ಲವೆಂಬ ಚಿಂತೆಯ ಕೊರಗು, ಇವುಗಳಿಂದ ಸಂತಪ್ತಳೂ ಸಂತ್ರಸ್ತಳೂ ಆದ ಈ ಕೋಕಿಲಿನಿಯನ್ನು ಕಂಡು ನನಗೆ ಕರುಣೆ ಹುಟ್ಟಿತು. ಮೊದಲು ಬಾಯಾರಿ ಬಂದ ಅವಳಿಗೆ ನೀರುಕೊಟ್ಟೆ. ಹಸಿವೆಯಿಂದ ಕಂಗಾಲಾದ ಅವಳಿಗೆ ಕಾಡಿನ

ಹಣ್ಣುಗಳನ್ನೂ, ಮಾಂಸವನ್ನೂ ನೀಡಿದೆ. ಇವನ್ನು ತಿಂದು, ಅದನ್ನು ಕುಡಿದು ಅವಳು ಪ್ರಸನ್ನಳಾದಳು. ಅವಳ ಆಯಾಸ ಪರಿಹಾರವಾಯಿತು. ಅವಳನ್ನು ನಾನು ಕೇಳಿದೆ 'ನೀನು ಯಾರೆಂದು'? ಅವಳು ತನ್ನ ಕಥೆಯನ್ನು ವ್ಯಥೆಯಿಂದ ಹೇಳಿದಳು. 'ವಿಂಧ್ಯ ಪರ್ವತದಲ್ಲಿ ಇರುವ ದಾರುಕನ ಮಗಳು ನಾನು. ಪರರ ಹಣವನ್ನು ಕದಿಯುವದು, ಚಾಡಿ ಹೇಳುವದು, ಸುಳ್ಳಾಡುವದು, ಮೋಸ ಮಾಡುವದು, ನನ್ನ ಸ್ವಭಾವ, ವ್ಯಭಿಚಾರವು ನನಗೊಂದು ಸಹಜಧರ್ಮ, ನನಗೆ ಮದುವೆ ಯಾಗಿದ್ದರೂ ಕಾಮಾತುರತೆ ಕಡಿಮೆಯಾಗಲಿಲ್ಲ. ನನ್ನ ಈ ದುರ್ಗುಣ ಕಂಡು ಬಂಧುಗಳೆಲ್ಲರೂ ನನ್ನನ್ನು ಬಿಟ್ಟು ಬಿಟ್ಟರು. ನನ್ನ ದುರ್ಗುಣ ತಿಳಿದರೂ ಪತಿಯು ನನ್ನನ್ನು ಕೆಲಕಾಲ ಪೋಷಿಸಿದನು. ಆದರೆ ನನ್ನ ದುರ್ದೈವದಿಂದ ನನ್ನ ಗಂಡನು ಮರಣ ಹೊಂದಿದನು. ಅನಾಥಳಾದ ನನ್ನನ್ನು ಯಾವ ಬಂಧುಗಳೂ ಹತ್ತಿರ ಸೇರಿಸಿಕೊಳ್ಳಲಿಲ್ಲ. ಅದರಿಂದ ನಾನು ಊರಲ್ಲಿ ಬಾಳಲಾರದೇ ಅಡವಿಪಾಲಾದೆ. ಈ ನಿರ್ಜನ ವನಾಂತರದಲ್ಲಿ ಏಕಾಕಿನಿಯಾಗಿ ಗತಿಗಾಣದೆ ತಿರುಗುತ್ತಿದ್ದೆನು. ಸುದೈವದಿಂದ ನಾನು ನೀನಿದ್ದೆಡೆಗೆ ಬಂದೆ. ಆಹಾರ ನೀರನ್ನಿತ್ತು ನೀನು ನನ್ನನ್ನು ಬದುಕಿಸಿದೆ' ಎಂದು ತನ್ನ ದುರಂತ ವೃತ್ತಾಂತ ಹೇಳಿದಳು.

ಆಗಲೇ ನಾನು ನಿರ್ಧರಿಸಿ ಬಿಟ್ಟೆ - ಇವಳು ನನಗೆ ಯೋಗ್ಯಳಾದ ಮಡದಿ ಎಂದು. ನನ್ನಷ್ಟೇ ದುರ್ಗುಣಗಳು ಅವಳಲ್ಲಿ ಇದ್ದವು, ಅವಳಷ್ಟೇ ದುರ್ವ್ಯಸನಗಳು ನನ್ನಲ್ಲಿದ್ದವು. ದುರ್ಗುಣ ಬಾಹುಲ್ಯ, ದುರ್ವ್ಯಸನ ಪಾಪಗಳು - ಇಬ್ಬರಲ್ಲೂ ಸಮನಾಗಿದ್ದುದರಿಂದ ಅನುರೂಪವಾಗಿದ್ದಿತು - ಈ ದುಷ್ಟದ್ವಂದ್ವ ದಾಂಪತ್ಯ. ಹೀಗೆ ಅದೇ ದೇವಾಲಯದಲ್ಲಿ ಹತ್ತು ವರ್ಷ ಮಾಂಸವನ್ನೂ, ಕಂದಮೂಲಗಳನ್ನೂ ತಿನ್ನುತ್ತ ವಾಸವಾಗಿದ್ದೆವು.

ಒಂದು ದಿನ ನಾವಿಬ್ಬರೂ ಕುಡಿದಿದ್ದೆವು - ಅತಿಯಾಗಿ, ಅದರಿಂದ ನಿಶೆ ಏರಿ ನಾವಿಬ್ಬರೂ ಮತ್ತರಾಗಿ ಬಿಟ್ಟಿದ್ದೆವು. ಮೇಲೆ ಮಾಂಸಭೋಜನ ಮಾಡಿ, ಮದ್ಯಪಾನದ ಗುಂಗಿನಲ್ಲಿ ರಾತ್ರಿ ಸಮಯದಲ್ಲಿ ದೇವಾಲಯದಲ್ಲಿ ಕುಣಿಯಹತ್ತಿದ್ದೆವು. ನಮಗೆ ಬಟ್ಟೆಯ ಪರಿವೆಯು ಉಳಿದಿರಲಿಲ್ಲ. ನಗ್ನರಾಗಿಯೇ ದೇವರ ಎದುರು ಉನ್ಮತ್ತ ನೃತ್ಯವನ್ನು ಮೋಹಾಂಧರಾಗಿ ಮಾಡಿದೆವು. ಅತಿ ಪಾನ, ಅತಿ ಭಕ್ಷ್ಯದಿಂದ ನಮ್ಮ ದೇಹಸ್ಥಿತಿಯು ಕೆಟ್ಟು ಹೋಗಿತ್ತು. ಆಗ ಯಮದೂತರು ನಮ್ಮಿಬ್ಬರನ್ನು ಸೆಳೆದೊಯ್ಯಲು ಯಮಪಾಶ ಹಿಡಿದುಕೊಂಡೇ ಬಂದರು. ಆದರೆ ಅಷ್ಟರಲ್ಲಿ ದೇವರು ನಮ್ಮನ್ನು ರಕ್ಷಿಸಲು ತನ್ನ ದೂತರನ್ನು ಅಲ್ಲಿಗೆ ಕಳುಹಿಸಿದನು. ನಾನು ಅಲ್ಲಿದ್ದಾಗ ಮಾಡಿದ ಆ ದೇವಾಲಯದ ಜೀರ್ಣೋದ್ಧಾರದಿಂದ ಆ ಸ್ವಾಮಿಯು ಸಂತುಷ್ಟನಾಗಿದ್ದ ನಾನದನ್ನು ಸ್ವಾರ್ಥಕ್ಕಾಗಿ ಮಾಡಿದರೂ ಅದೊಂದು ವಿಷ್ಣುಮಂದಿರವಾಗಿದ್ದರಿಂದ ದೇವಸ್ಥಾನದ ಜೀರ್ಣೋದ್ಧಾರದ ಕಾರ್ಯವು ಸಂಪೂರ್ಣವಾಗಿ ನನ್ನಿಂದಲೇ ನೆರವೇರಿತ್ತು. ಭಗವಂತನು ಈ ನನ್ನ ಅಲ್ಪಸೇವೆಯನ್ನು ಮನ್ನಿಸಿ ನನ್ನನ್ನು ರಕ್ಷಿಸಲು ತನ್ನ ದೂತರನ್ನು ಅಲ್ಲಿಗೆ ಕಳಿಸಿದನು. ಆ ವಿಷ್ಣುದೂತರು, ವಿಷ್ಣುವಿನಂತೆಯೇ ಚತುರ್ಭುಜರು, ಶಂಖ, ಚಕ್ರ, ಗದಾಧಾರಿಗಳು, ಸೂರ್ಯನಂತೆ ಕಾಂತಿಯುಳ್ಳವರು. ಕಿರೀಟ, ಕುಂಡಲ, ವನಮಾಲೆ, ಕೌಸ್ತುಭಧಾರಿಗಳಾಗಿದ್ದರು. ಅವರ ಕಾಯಕಾಂತಿಯಿಂದ ಆ ರಾತ್ರಿಕಾಲದಲ್ಲಿ ಸುತ್ತಲೂ ಹರಡಿದ ಕತ್ತಲೆ ನಾಶವಾಗಿ ದಿಗಂತಗಳು ದೇದೀಪ್ಯಮಾನವಾದವು. ನಮ್ಮನ್ನು ಸೆಳೆದೊಯ್ಯ ಬಂದ ಕ್ರೂರರಾದ ಯಮದೂತರನ್ನು ಕುರಿತು ಆ ವಿಷ್ಣುದೂತರು ಮಾತನಾಡಿದರು.

**ವಿಷ್ಣುದೂತ:-** ಎಲೋ, ಕ್ರೂರರೂ, ದುರಾಚಾರಿಗಳೂ, ವಿವೇಕ ಶೂನ್ಯರೂ ಆದ ಯಮದೂತರೆ, ಬಿಟ್ಟು ಬಿಡಿರಿ ಮೊದಲು ಈ ದಂಪತಿಗಳನ್ನು. ಇವರು ಶ್ರೀ ಹರಿಯ ಪ್ರೀತಿಪಾತ್ರರು. ಆ ಭಗವತ್ಪ್ರೀತಿಯಿಂದಲೇ ಪಾಪರಹಿತರು. ಈ ಲೋಕಗಳಲ್ಲಿ ವಿವೇಕವೇ ಸಂಪದಕ್ಕೆ ಕಾರಣ. ವಿವೇಕ ಇಲ್ಲದೆ ಪಾಪಮಾಡದವನನ್ನು ಪಾಪಿ ಎಂದು ತಿಳಿದರೆ ಅವನಿಗೆ ಪುರುಷಾಧಮ ಎನ್ನುವರು. ಇದರಂತೆ ಪಾಪಿಷ್ಠನನ್ನು ಪುಣ್ಯವಂತನೆಂದು ತಿಳಿದರೆ ಅಧಮಾಧಮ.

**ಯಮದೂತ:-** ನೀವು ಹೇಳಿದ್ದೆಲ್ಲವೂ ನಿಜ. ಪುಣ್ಯವಂತರನ್ನು ಪಾಪಿಗಳೆಂದೂ, ಪಾಪಿಗಳನ್ನೂ ಪುಣ್ಯವಂತರೆಂದೂ ತಿಳಿಯುವದು ತಪ್ಪು. ಆದರೆ ಇವರಿಬ್ಬರೂ. ಮಹಾ ಪಾಪಿಗಳು, ಪಾಪಿಗಳನ್ನು ದಂಡಿಸುವದು ಯಮನ ಕರ್ತವ್ಯ. ಆದುದರಿಂದ ಇವರಿಬ್ಬರನ್ನು ಯಮಲೋಕಕ್ಕೆ ಒಯ್ಯುತ್ತೇವೆ. ಇದರಿಂದ ವಿಷ್ಣುದೂತರಿಗೆ ಕೋಪ ಬಂದಿತು. ಅಧರ್ಮವನ್ನು ಧರ್ಮವೆಂದು ತಿಳಿದ ಯಮದೂತರನ್ನು ಕುರಿತು ಮಾತನಾಡಿದರು.

**ವಿಷ್ಣುದೂತ:-** ಇದು ಒಳ್ಳೇ ಕಷ್ಟಕ್ಕಿಟ್ಟುಕೊಂಡಿತು. ಅಕಟಕಟಾ ! ಧರ್ಮವಂತರಿಗೂ ಕೂಡ ಪಾಪವನ್ನು ಆರೋಪಣ ಮಾಡಲಾಗುತ್ತಿದೆಯಲ್ಲ! ವಿವೇಕ ಶೂನ್ಯರ ನಿರ್ಣಯಗಳು ಮಹಾ ಆಪತ್ತಿಗೆ ಕಾರಣವಾಗುತ್ತವೆ. ಸಾರಾಸಾರ ವಿಚಾರ ಶೂನ್ಯರಾಗಿರುವದರಿಂದಲೇ ನೀವು ಇನ್ನೂ ನರಕದಲ್ಲಿಯೇ ನವೆಯುತ್ತಿರುವಿರಿ. ನೀವು ಇನ್ನೂ ಅಂತಹ ಪಾಪ ಮಾಡುವದರಲ್ಲಿಯೇ ತೊಡಗಿರುವಿರಿ. ಧರ್ಮ ಏನೆಂದು ತಿಳಿದಿರುವಿರಿ? ನಿಮಗೆ ತೋಚಿದ್ದೇ ಧರ್ಮವಲ್ಲ. ವೇದ ವಿಹಿತವಾದದ್ದೇ ಧರ್ಮ, ಸತ್ಯ, ಸತ್ಯ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಇವರಿಬ್ಬರೂ ಮಾಡಿದ ಧರ್ಮಪೂತವಾದ ಆಚರಣೆಯನ್ನು ಹೇಳುತ್ತೇವೆ ಕೇಳಿರಿ. ಇವರಿಬ್ಬರೂ ಹಗಲಿರುಳು ಹರಿಯ ಸೇವೆಯಲ್ಲಿಯೇ ತತ್ಪರರಾಗಿದ್ದರು. ಅಂದ ಬಳಿಕ ಯಾವ ಪಾಪ ಉಳಿದೀತು ಇವರಲ್ಲಿ! ಸಾಕ್ಷಾತ್ ಶ್ರೀ ಹರಿಯು ಯಾವಾಗಲೂ ಇವರ ಬೆಂಗಾವಲಿಗೆ ಇರುತ್ತಾನೆ. ಬಿಟ್ಟು ಬಿಡಿರಿ ಮೊದಲು ಇವರನ್ನು. ಇವನು ಎಲ್ಲ ಮಂದಿರ ಜೀರ್ಣೋದ್ಧಾರದ ಕಾರ್ಯವನ್ನು ಮಾಡಿದ್ದಾನೆ. ಈ ಹೆಣ್ಣು ಮಗಳು ಅಂತ್ಯಕಾಲದಲ್ಲಿ ಭಗವಂತನ ಮುಂದೆ ನರ್ತನ ಸೇವೆಯನ್ನು ಮಾಡಿದ್ದಾಳೆ. ಮರಣಕಾಲದಲ್ಲಿ ಪರಮಾತ್ಮನ ನಾಮವನ್ನು ಉಚ್ಚರಿಸಿದ ಮಾತ್ರಕ್ಕೇ ಪರಮಗತಿಯನ್ನು ಅಥವಾ ಕಿವಿಯಿಂದ ಒಮ್ಮೆಯಾದರೂ ಕೇಳಿದ ಮಾತ್ರಕ್ಕೇ ಪರಮಗತಿಯನ್ನು ಹೊಂದುವಾಗ, ಭಕ್ತಿಯಿಂದ ಭಗವಂತನ ಕೈಂಕರ್ಯವನ್ನು ಮಾಡುವವರ ಬಗ್ಗೆ ಏನು ಹೇಳಬೇಕು?

ಮಹಾಪಾತಕ, ಉಪಪಾತಕಗಳನ್ನು ಜನ್ಮಾವಧಿ ಮಾಡಿದ ಪಾತಕಿಯು ಅಂತ್ಯ ಕಾಲದಲ್ಲಿ ಶ್ರೀ ಕೃಷ್ಣನ ಸೇವೆ ಮಾಡಿದರೆ, ದಿವ್ಯ ಗತಿಯನ್ನು ಹೊಂದುತ್ತಾನೆ. ವಿಷ್ಣು ಭಕ್ತರಾದ ಸಾಧು ಜನರ ಶುಶ್ರೂಷೆ ಮಾಡಿದರೂ ಪರಮಗತಿಯನ್ನು ಹೊಂದುತ್ತಾನೆ. ಒಂದು ಗಳಿಗೆ ಅಥವಾ ಅರ್ಧಗಳಿಗೆಯಾದರೂ ವಿಷ್ಣು ದೇವಾಲಯದಲ್ಲಿ ಇದ್ದವನು ಸದ್ಗತಿ ಹೊಂದುವಾಗ ಮೂವತ್ತೆರಡು ವರ್ಷ ಅದೇ ವಿಷ್ಣು ಮಂದಿರದಲ್ಲಿದ್ದು, ಆ ದೇವಾಲಯವನ್ನು ಪ್ರತಿನಿತ್ಯವೂ ಕಸಗುಡಿಸಿ, ಸಾರಿಸಿ, ಸಾರಣೆ-ಕಾರಣೆ ಮಾಡಿ, ರಂಗವಲ್ಲ್ಯಾದಿ ಹಾಕಿ ಶೃಂಗಾರ ಗೈದು ಬಿದ್ದ ಭಾಗವನ್ನು ಕಟ್ಟಿ ಜೀರ್ಣೋದ್ಧಾರ ಮಾಡಿ, ನೀರಿನಿಂದ ಎಲ್ಲ ಕಡೆ 'ಥಳಿ' ಹೊಡೆದು, ರಾತ್ರಿ ದೀಪ ಹಚ್ಚಿ, ಶ್ರೀ ಹರಿಯ ಸೇವೆಯನ್ನು ಮಾಡಿದ ಈ ಇಬ್ಬರೂ ದಂಪತಿಗಳು ನರಕ ದುಃಖವನ್ನು ಹೊಂದಲು ಹೇಗೆ ಅರ್ಹರಾಗುತ್ತಾರೆ? ಹೀಗೆ ಹೇಳಿ, ಆ ವಿಷ್ಣು ದೂತರು ಯಮದೂತರು ಹಾಕಿದ ಯಮಪಾಶವನ್ನು ಕಿತ್ತೊಗೆದು, ನಮ್ಮಿಬ್ಬರನ್ನು ವಿಮಾನದಲ್ಲಿ

ಕೂಡಿಸಿಕೊಂಡು ವಿಷ್ಣು ಲೋಕಕ್ಕೆ ಕರೆದೊಯ್ದರು. ಅಲ್ಲಿ ಭಗವಂತನ ಹತ್ತಿರ ನಾವು ದೇವರ ಸನ್ನಿಧಿಯಲ್ಲಿ ದಿವ್ಯ ಭೋಗಗಳನ್ನು ಅನುಭವಿಸಿದೆವು. ಹೀಗೆ ಅನೇಕ ವರ್ಷಗಳ ಕಾಲ ವಿಷ್ಣುವಿನ ಅನುಗ್ರಹದಿಂದ ಊರ್ಧ್ವಲೋಕಗಳಲ್ಲಿ ದಿವ್ಯ ಭೋಗಗಳನ್ನು ಅನುಭವಿಸಿ ಮತ್ತೆ ಮರಳಿ ಈ ಭೂಮಿಗೆ ಬಂದೆವು. ಇಲ್ಲಿ ಯಾದರೂ ಕೂಡ ಹಿಂದೆ ಮಾಡಿದ ಶ್ರೀ ಹರಿಯ ಸೇವಾ ಪ್ರಸಾದದಿಂದ ಅಪರಿಮಿತ ರಾಜ್ಯಾಧಿಕಾರ, ರಾಜೈಶ್ವರ್ಯಗಳು ಬಂದಿರುತ್ತವೆ. ಇಚ್ಛೆ ಇಲ್ಲದೆ, ಮಾಡಿದ ಶ್ರೀ ಹರಿಯ ಸೇವೆಯಿಂದ ದೇವ ದುರ್ಲಭ ಫಲವು ದೊರಕುವಾಗ, ಇಚ್ಛೆಯಿಂದಲೂ ಭಕ್ತಿಯಿಂದಲೂ ಪರಮಾತ್ಮನನ್ನು ಆರಾಧಿಸುವವರು ಶ್ರೇಯಸ್ಸನ್ನು ಪಡೆಯುತ್ತಾರೆ. ಎಂಬ ವಿಷಯದಲ್ಲಿ ಹೇಳುವದೇನಿದೆ?

**ಅವಶೇನಾಪಿ ಯತ್ಕರ್ಮ ಕೃತಂ ಸ್ಯಾತ್ಸುಮಹತ್ಫಲಂ ।**
**ಜಾಯತೇ ಭೂಮಿದೇವೇಂದ್ರ ಕಿಂ ಪುನಃ ಶ್ರದ್ಧಯಾ ಕೃತಂ ॥**

ಬ್ರಾಹ್ಮಣ ಶ್ರೇಷ್ಠನೇ! ಬುದ್ಧಿ ಪೂರ್ವಕವಲ್ಲದೇ ಮಾಡಿದ ಕರ್ಮವೇ ಮಹಾ ಫಲಪ್ರದವಾಗಿರುವಾಗ, ಶ್ರದ್ಧೆಯಿಂದ ಅನುಷ್ಠಿತವಾದ ಕರ್ಮವು ಮಹಾಫಲಪ್ರದವೆಂದು ಹೇಳಲೇಬೇಕಿಲ್ಲ. ಸುಮತಿ ರಾಜನ ಈ ಮಾತನ್ನು ಕೇಳಿ ವಿಭಾಂಡಕ ಮುನಿಯ ಮನಸ್ಸಿಗೆ ಸಮಾಧಾನವಾಯಿತು. ಭಗವದ್ಭಕ್ತರಾದ ಆ ದಂಪತಿಗಳನ್ನು ಅವರು ಪ್ರಶಂಸಿದರು ಮತ್ತು ಅಲ್ಲಿಂದ ತಪೋನುಷ್ಠಾನಕ್ಕಾಗಿ ತಪೋವನಕ್ಕೆ ತೆರಳಿದರು. ಆದುದರಿಂದ ನಾರದನೆ, ನೀನಿದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ನಾರಾಯಣನ ಸೇವೆಯು ಎಲ್ಲ ಜನರಿಗೂ ಕಾಮಧೇನು ಸದೃಶವಾಗಿದೆ. ಹರಿಪೂಜೆಯನ್ನು ಮಾಡುವವರಿಗೆ ಶ್ರೀಹರಿ ಸರ್ವವಿಧವಾದ ಶ್ರೇಯಸ್ಸನ್ನು ನೀಡುತ್ತಾನೆ. ಎಲ್ಲ ಕಾಮನೆಗಳನ್ನು ಪೂರ್ಣಮಾಡುವ ಪ್ರಭು ಅವನೊಬ್ಬನೇ ಅಲ್ಲವೆ? ಪುಣ್ಯಕರವಾದ ಈ ಆಖ್ಯಾನವನ್ನು ಕೇಳಿದವರು ಪರಮಗತಿಯನ್ನು ಐದುತ್ತಾರೆ.

*ನಾರದ ಮಹಾಪುರಾಣದಲ್ಲಿನ ಇಪ್ಪತ್ತನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುಪಂಚಕವ್ರತ

## ಅಧ್ಯಾಯ - ೨೧

**ಸನಕ:-** ಸರ್ವಲೋಕಗಳಲ್ಲಿ ದುರ್ಲಭನಾದ 'ವಿಷ್ಣುಪಂಚಕ' ವ್ರತದ ಬಗ್ಗೆ ಹೇಳುತ್ತೇನೆ. ಕೇಳು. ಇದನ್ನು ಭಕ್ತಿಯಿಂದ ನಾರಿಯರು ಆಚರಿಸಿದರೆ ಪಾಪಗಳು ಪರಿಹೃತ ವಾಗುವವು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳು ಕರಗತವಾಗುವವು. ಮಾರ್ಗಶೀರ್ಷ ಶುದ್ಧ ದಶಮಿಯಂದು ಹಲ್ಲುಜಿಕೊಂಡು, ವಿಧಿಪೂರ್ವಕ ಸ್ನಾನ, ದೇವತಾರ್ಚನೆ, ನೈವೇದ್ಯಗಳನ್ನು ಮಾಡಿ, ವೈಶ್ವದೇವ ಮೊದಲಾದವು ಗಳನ್ನು ಪೂರೈಸಬೇಕು. ಅಂದು ಒಂದೇ ಹೊತ್ತು ಊಟ ಮಾಡಿ ಜಿತೇಂದ್ರಿಯನಾಗಿ ಹರಿಧ್ಯಾನ ಮಾಡುತ್ತ ಇರಬೇಕು. ಮರುದಿನ ಏಕಾದಶಿಯಿಂದ ವಿಧ್ಯುಕ್ತ ರೀತಿಯಿಂದ ಸ್ನಾನ ಮಾಡಿ, ದೇವರಿಗೆ ಪಂಚಾಮೃತ ಅಭಿಷೇಕಗೈದು, ಗಂಧ ಪುಷ್ಪಾದಿಗಳನ್ನೇರಿಸಿ, ಧೂಪ, ದೀಪ - ನೈವೇದ್ಯಗಳಿಂದ ಪೂಜೆ ಮಾಡಬೇಕು.

**ನಮಸ್ತೇ ಜ್ಞಾನರೂಪಾಯ ಜ್ಞಾನದಾಯ ನಮೋಽಸ್ತುತೇ।**
**ನಮಸ್ತೇ ಸರ್ವರೂಪಾಯ ಸರ್ವಸಿದ್ಧಿ ಪ್ರದಾಯಿನೇ ॥**

ಜ್ಞಾನರೂಪಿಯೂ, ಜ್ಞಾನಪ್ರದನೂ, ಸರ್ವಸಿದ್ಧಿಪ್ರದಾಯಕನೂ, ಸರ್ವಾಂತರ್ಯಾಮಿಯೂ ಆದ ವಿಷ್ಣುವೇ, ನಿನಗೆ ನಮಸ್ಕಾರ' ಎಂದು ಹೇಳಿ ದೇವರಿಗೆ ನಮಸ್ಕಾರ ಮಾಡಬೇಕು. ಇಂದಿನಿಂದ ಐದು ದಿನ ಉಪವಾಸ ಮಾಡುತ್ತೇನೆ ಎಂದು ದೇವರ ಮುಂದೆ ಪ್ರತಿಜ್ಞೆ ಮಾಡಬೇಕು. ಅದಕ್ಕಾಗಿ ದೇವರ ಅಪ್ಪಣೆಯನ್ನು ಈ ಮಂತ್ರದಿಂದ ತೆಗೆದುಕೊಂಡು ಆ ಉಪವಾಸದ ಪುಣ್ಯವನ್ನು ವಾಸುದೇವನಿಗೆ ಸಮರ್ಪಿಸಬೇಕು.

ಪಂಚರಾತ್ರಂ ನಿರಾಹಾರೋ ಹ್ಯದ್ಯಪ್ರಭೃತಿ ಕೇಶವ ।
ತ್ವದಾಜ್ಞಯಾ ಜಗತ್ಸಾ ಮಿನ್‌ಮಮಾಭೀಷ್ಟ ಪ್ರದೋ ಭವ ॥

ಜಗನ್ನಾಯಕನಾದ ಕೇಶವನೇ, ನಿನ್ನ ಪ್ರೇರಣೆಯಂತೆ ಇವತ್ತಿನಿಂದ ಐದು ದಿವಸಗಳು ಆಹಾರವಿಲ್ಲದೇ ಉಪವಾಸ ಮಾಡುತ್ತೇನೆ. ನನಗೆ ಇಷ್ಟಾರ್ಥವನ್ನು ದಯಪಾಲಿಸು. ಇದೇ ಸಮರ್ಪಣ ಮಂತ್ರ. ಹೀಗೆ ದೇವರೆದುರಿಗೆ ಸಂಕಲ್ಪಿಸಿ ಏಕಾದಶೀ ರಾತ್ರಿ ಜಾಗರಣ ಮಾಡಬೇಕು. ಇದರಂತೆ ದ್ವಾದಶಿ, ಚತುರ್ದಶಿ, ತ್ರಯೋದಶಿ, ಹುಣ್ಣಿಮೆ ಈ ಐದು ದಿನಗಳಲ್ಲಿ ಷೋಡಶ ಉಪಚಾರಗಳಿಂದ ವಿಷ್ಣುವನ್ನು ಅರ್ಚಿಸಬೇಕು. ಏಕಾದಶಿ ಮತ್ತು ಹುಣ್ಣಿಮೆ ಈ ಎರಡು ದಿನ ರಾತ್ರಿ ಹರಿಕಥಾ ಶ್ರವಣ, ಹರಿನಾಮ ಸ್ಮರಣ ಮುಂತಾದವು ಗಳಿಂದ ಜಾಗರ ಮಾಡಬೇಕು. ಪ್ರತಿನಿತ್ಯ ಕ್ಷೀರಾಭಿಷೇಕ, ಪಂಚಾಮೃತಾಭಿಷೇಕಗಳನ್ನು ದೇವರಿಗೆ ಮಾಡಬೇಕು. ಹುಣ್ಣಿಮೆ ದಿನ ಸಾಧ್ಯವಿದ್ದಷ್ಟು ಹೆಚ್ಚು ಹಾಲಿನಿಂದ ಕ್ಷೀರಾಭಿಷೇಕ ಮಾಡಿ, ಎಳ್ಳಿನಿಂದ ಹೋಮ ಹಾಗೂ ತಿಲದಾನಗಳನ್ನು ಮಾಡಿಸಬೇಕು. ಅನಂತರ ಆರನೆಯ ದಿನ ಹರಿಪೂಜಾದಿಗಳನ್ನು ಮಾಡಿ, ಪಂಚಗವ್ಯ ಪ್ರಾಶನ ಮಾಡಿ, ಬ್ರಹ್ಮಜ್ಞಾನಿಗಳ ಭೋಜನ ಮಾಡಿಸಿ, ಬಂಧುಗಳೊಡನೆ ತಾನೂ ಪ್ರಸಾದ ಭೋಜನ ಮಾಡಬೇಕು. ಈ ರೀತಿ ಪುಷ್ಯ ಮಾಸದಿಂದ ಕಾರ್ತೀಕಮಾಸದವರೆಗೆ ಮೇಲೆ ಹೇಳಿದ ವಿಧಾನದಿಂದ ವ್ರತಾಚರಣೆಯನ್ನು ಮಾಡಬೇಕು. (ಒಂದು ವರ್ಷದವರೆಗೆ) ಎರಡನೆಯ ವರ್ಷ ಮಾರ್ಗಶೀರ್ಷ ಮಾಸದಲ್ಲಿ ಅದರ 'ಉದ್ಯಾಪನೆ' ಮಾಡಬೇಕು. ಉದ್ಯಾಪನೆಯ ವಿಧಾನ ಹೇಳುತ್ತೇನೆ, ಕೇಳು. ದಶಮಿ ಒಪ್ಪತ್ತು ಊಟ, ಏಕಾದಶಿ ಉಪವಾಸ, ರಾತ್ರಿ ಜಾಗರಣೆ ಮಾಡಿ, ದ್ವಾದಶಿ ದಿನ ಸ್ನಾನಾಹ್ನಿಕಗಳನ್ನು ಮುಗಿಸಿ, ಪಂಚಗವ್ಯ ಪ್ರಾಶನ ಮಾಡಬೇಕು. ಶ್ರೀ ಹರಿಯನ್ನು ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ ನೈವೇದ್ಯಾದಿಗಳಿಂದ ಪೂಜಿಸಿ, ಅಧ್ಯಾತ್ಮ ಜ್ಞಾನಿಗೆ ಜೇನುತುಪ್ಪ ಮಿಶ್ರಿತ ಪಾಯಸಗಳನ್ನು, ಪಂಚರತ್ನ ಹಾಕಿದ ಕುಂಭಗಳನ್ನು ದಾನ ನೀಡಬೇಕು. ಆಗ ಸರ್ವಾತ್ಮನ್

ಸರ್ವಭೂತೇಷು ಸರ್ವಾಸಿನ್ ಸರ್ವವ್ಯಾಪಿನ್ ಸನಾತನ ।
ಪರಮಾನ್ನಪ್ರದಾನೇನ ಸುಪ್ರೀತೋ ಭವ ಮಾಧವ ॥

ಸರ್ವಾಂತರ್ಯಾಮಿಯೂ, ಸರ್ವವ್ಯಾಪಕನೂ, ಅನಾದಿಯೂ, ಆಗಿರುವ ಮಾಧವನೇ, ಈ ಪರಮಾನ್ನದಾನದಿಂದ ಪ್ರಸನ್ನನಾಗು.'' ಈ ಮಂತ್ರವನ್ನು ಹೇಳಬೇಕು. ಪಾಯಸದಾನ, ವಿಪ್ರಭೋಜನ, ಬಂಧು ಸಹಿತ ಸ್ವಭೋಜನಗಳನ್ನು ಹಿಂದಿನಂತೆ ನೇರವೇರಿಸಬೇಕು. ಇಂತಹ ಈ ವಿಷ್ಣುಪಂಚಕ ವ್ರತ ಮಾಡಿದವರು ಬ್ರಹ್ಮಲೋಕದಿಂದ ಎಂದಿಗೂ ಹಿಂದಿರುಗಿ ಬರುವದಿಲ್ಲ.

ನಾರದ ಮಹಾಪುರಾಣದಲ್ಲಿ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು

—○—

**ಸನಕ:-** ಮತ್ತೊಂದು ಎಲ್ಲ ಜನರಿಗೂ ಉಪಕಾರಕವಾದ ವ್ರತವನ್ನು ಹೇಳುತ್ತೇನೆ. ಆಷಾಢ, ಭಾದ್ರಪದ, ಅಶ್ವೀನಗಳಲ್ಲಿ ಯಾವದಾದರೂ ಒಂದು ಮಾಸದಲ್ಲಿ ಈ 'ಮಾಸೋಪವಾಸ ವ್ರತ' ಆಚರಿಸಬೇಕು. ಮೇಲೆ ಹೇಳಿದ ನಾಲ್ಕು ತಿಂಗಳಲ್ಲಿ ಒಂದು ಮಾಸದ ಶುಕ್ಲ ಪಕ್ಷದಲ್ಲಿ ಪ್ರತಿಪದೆಯಂದು ಪಂಚಗವ್ಯ ಕುಡಿದು ಜಿತೇಂದ್ರಿಯನಾಗಿ ಶ್ರೀಹರಿಯ ಸಮೀಪದಲ್ಲಿ ವಾಸಿಸಬೇಕು. ಹಗಲು ದೇವರಪೂಜೆ, ಧ್ಯಾನ, ಭಜನೆ, ಪಾರಾಯಣ, ಪುರಾಣ ಪಠಣ, ಹರಿಕಥಾದಿ ಶ್ರವಣಾದಿಗಳಿಂದ ಸಮಯ ಕಳೆಯಬೇಕು. ರಾತ್ರಿ ಕೂಡ ಶ್ರೀ ಹರಿಯನ್ನೇ ಧ್ಯಾನ ಮಾಡುತ್ತ ದೇವರ ಸಮೀಪದಲ್ಲಿಯೇ ಮಲಗಿಕೊಳ್ಳಬೇಕು, ಮರುದಿನ ಬೆಳಿಗ್ಗೆ ಎದ್ದು ನಿತ್ಯ ಕರ್ಮಗಳನ್ನುಪೂರೈಸಿ, ಶ್ರೀ ಹರಿಯ ಪೂಜೆ ಮಾಡಬೇಕು. ಶಾಸ್ತ್ರೋಕ್ತವಾಗಿ ಭಗವತ್ಪೂಜೆ ಆಚರಿಸಿ ವಿದ್ವಾಂಸರನ್ನು ಕರೆಸಿ, ಅವರಿಂದ ಸ್ವಸ್ತಿವಾಚನ ಮಾಡಿಸಿ ಮಾಸೋಪವಾಸದ ಸಂಕಲ್ಪ ಮಾಡಬೇಕು.

**ಮಾಸಮೇಕಂ ನಿರಾಹಾರೋ ಹ್ಯದ್ಯಪ್ರಭೃತಿ ಕೇಶವ ।**
**ಮಾಸಾಂತೇ ಪಾರಣಂ ಕುರ್ವೇ ದೇವ ದೇವ ತವಾಜ್ಞಯಾ ॥**

**ತಪೋರೂಪ ನಮಸ್ತುಭ್ಯಂ ತಪಸಾಂ ಫಲದಾಯಕ ।**
**ಮಮಾಭೀಷ್ಟ ಪ್ರದಂ ದೇಹಿ ಸರ್ವ ವಿಘ್ನಾನ್ನಿವಾರಯ ॥**

'ಕೇಶವ ಸ್ವಾಮಿಯೇ! ಇವತ್ತಿನಿಂದ ಒಂದು ತಿಂಗಳು ಉಪವಾಸ ಮಾಡಿ, ದೇವ ದೇವೋತ್ತಮನಾದ ನಿನ್ನ ಪ್ರೇರಣೆಯಿಂದ ಮಾಸಾಂತ್ಯದಲ್ಲಿ ಪಾರಣೆಯನ್ನು ಮಾಡುತ್ತೇನೆ. ಸಕಲ ತಪಸ್ಸುಗಳಿಗೆ ನಿಯಾಮಕನೂ ಮತ್ತು ಫಲಪ್ರದನೂ ಆಗಿರುವ ಭಗವಂತನೇ ನಿನಗೆ ನಮಸ್ಕಾರ. ನನಗೆ ಇಷ್ಟಾರ್ಥವನ್ನು ಕೊಡು, ಸಕಲ ವಿಘ್ನಗಳನ್ನು ಪರಿಹರಿಸು. ಈ ರೀತಿಯಾಗಿ ಈ ಮಾಸ ವ್ರತವನ್ನು ದೇವರ ಎದುರು ಪ್ರತಿಜ್ಞೆಮಾಡಿ ತಾನು ಮಾಡಲಿರುವ ಮಾಸೋಪವಾಸದ ಸಂಪೂರ್ಣ ಫಲವನ್ನೂ ಪರಮಾತ್ಮನ ಪಾದಾರವಿಂದಗಳಲ್ಲಿ ಮಾಡಬೇಕು. ಮತ್ತು ದೇವರಿಗೆ ನಂದಾದೀಪ ಹಚ್ಚಬೇಕು. ಪಂಚಾಮೃತ ಅಭಿಷೇಕ ಮಾಡಿಸಬೇಕು.

ಪ್ರತಿದಿನ ಉತ್ತರಾಣಿ ಕಡ್ಡಿಯಿಂದ ಹಲ್ಲುಜ್ಜಿಕೊಂಡು, ಸ್ನಾನ ಮಾಡಿ, ದೇವ ಪೂಜೆ ಮಾಡಿಸಿ, ಯಥಾಶಕ್ತಿ ವಿಪ್ರಭೋಜನ ಮಾಡಿಸಿ ದಕ್ಷಿಣೆ ನೀಡಬೇಕು. ವರ್ಷದ ಕೊನೆಗೆ ವೇದಜ್ಞಗೆ ಗೋದಾನ ನೀಡಿ, ಹನ್ನೆರಡು ಜನ ಜ್ಞಾನಿಗಳಿಗೆ ಭೋಜನ ಮಾಡಿಸಿ, ಯಥಾಶಕ್ತಿ ಆಭರಣ, ದಕ್ಷಿಣಾದಿಗಳನ್ನು ಕೊಡಬೇಕು. ಈ ಮಾಸೋಪವಾಸ ವ್ರತವು ಕಷ್ಟಕರ ವಾದುದರಿಂದ ಜನ್ಮದಲ್ಲಿ ಒಂದು, ಎರಡು ಸಲ ಅಥವಾ ಯಥಾಶಕ್ತಿ ಆಚರಿಸಬೇಕು. ಉತ್ತಮ ಪಕ್ಷವೆಂದರೆ ಹದಿಮೂರು ಸಲ ಆಚರಿಸಬೇಕು. ಇದನ್ನು ಹೆಣ್ಣು ಮಕ್ಕಳು, ಸನ್ಯಾಸಿಗಳೂ, ಬ್ರಹ್ಮಚಾರಿಗಳೂ, ವಾನಪ್ರಸ್ಥರೂ, ಯಾರಾದರೂ ಮಾಡಬಹುದು. ಈ ದುರ್ಲಭವಾದ ವ್ರತದಿಂದ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ.

*ನಾರದ ಮಹಾಪುರಾಣದಲ್ಲಿ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

**ನಾರದ:-** ಈಗ ನಿನಗೆ ಎಲ್ಲರೂ ಆಚರಿಸಬಹುದಾದ ಏಕಾದಶೀ ವ್ರತವನ್ನು ಹೇಳುತ್ತೇನೆ ಕೇಳು. ಎಲ್ಲ ವ್ರತಗಳಿಗಿಂತ ಈ ಏಕಾದಶೀ ವ್ರತವು ಶ್ರೀ ಹರಿಗೆ ಪ್ರೀತಿಕರವಾದದ್ದು. ಈ ವ್ರತದ ಇನ್ನೊಂದು ವೈಶಿಷ್ಟವೇನೆಂದರೆ ಇದನ್ನು ಕೇವಲ ಬ್ರಾಹ್ಮಣರು ಮಾತ್ರವಲ್ಲದೆ, ಕ್ಷತ್ರಿಯ, ವೈಶ್ಯ, ಶೂದ್ರರು, ವರ್ಣಬಾಹಿರರು ಎಲ್ಲರೂ, ಆಚರಿಸಬಹುದು. ಎಲ್ಲ ಜಾತಿ, ಧರ್ಮದವರು ಈ ಏಕಾದಶೀ ವ್ರತಾಚರಣೆಯಿಂದ ಮೋಕ್ಷವನ್ನು ಹೊಂದುತ್ತಾರೆ. ಶುಕ್ಲಪಕ್ಷ ಏಕಾದಶಿ, ಕೃಷ್ಣ ಪಕ್ಷ ಏಕಾದಶಿ ಹೀಗೆ ತಿಂಗಳಲ್ಲಿ ಬರುವ ಎರಡೂ ಏಕಾದಶಿ ದಿನ ಸರ್ವಥಾ ಭೋಜನ ಮಾಡಕೂಡದು. ಉಪವಾಸದ ಪೂರ್ಣಫಲ ಬಯಸುವವರು ಒಟ್ಟು ನಾಲ್ಕು ಊಟಗಳನ್ನು ಬಿಡಬೇಕು. ದಶಮಿ ರಾತ್ರಿ, ಏಕಾದಶಿ ಎರಡು ಹೊತ್ತು, ದ್ವಾದಶೀ ರಾತ್ರಿ ಹೀಗೆ ನಾಲ್ಕು ಹೊತ್ತು ನಿತ್ಯ ಮಾಡುವ ಊಟವನ್ನು ಬಿಟ್ಟರೆ ಪೂರ್ಣ ಏಕಾದಶಿ ಮಾಡಿದಂತಾಗುತ್ತದೆ.

ಮೋಕ್ಷವನ್ನು ಅಪೇಕ್ಷಿಸುವ ಮನುಷ್ಯನು ದಶಮಿ ದ್ವಾದಶಿಗಳಲ್ಲಿ ಒಪ್ಪತ್ತು ಭೋಜನಮಾಡಿ, ಏಕಾದಶಿ ದಿನ ಯಾವದೇ ಆಹಾರ ತೆಗೆದುಕೊಳ್ಳದೇ ಪೂರ್ಣ ಉಪವಾಸ ಇರಬೇಕು. ಬ್ರಹ್ಮಹತ್ಯಾ ಮೊದಲಾದ ಎಲ್ಲ ಪಾಪಗಳು ಏಕಾದಶಿ ಅನ್ನ ಆಶ್ರಯಿಸಿಕೊಂಡು ಇರುತ್ತವೆ. ಅಂದು ಅನ್ನ ತಿಂದರೆ ಆ ಪಾಪಗಳನ್ನೇ ತನ್ನ ಹೊಟ್ಟೆಯಲ್ಲಿ ಹಾಕಿಕೊಂಡಂತೆ. ಶಾಸ್ತ್ರದಲ್ಲಿ ಪಂಚಮಹಾಪಾತಕಗಳಿಗೆ ಪ್ರಾಯಶ್ಚಿತ್ತ ಹೇಳಿದ್ದಾರೆ. ಆದರೆ ಏಕಾದಶಿಯ ದಿನ ಊಟ ಮಾಡಿದರೆ, ಬರುವ ಪಾಪಕ್ಕೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಯಾವ ಪರಿಹಾರವೂ ಇಲ್ಲ. ಇಂತಹ ಪರಮ ಪವಿತ್ರವಾದ ಮೋಕ್ಷಪ್ರದವಾದ, ಎಲ್ಲರಿಂದಲೂ ಅವಶ್ಯವಾಗಿ ಆಚರಿಸಲ್ಪಡಲೇಬೇಕಾದ ಏಕಾದಶಿ ವ್ರತದ ವಿಧಿ ವಿಧಾನ ಹೇಳುತ್ತೇನೆ ಕೇಳು. ದಶಮಿ ರಾತ್ರಿ ಉಪವಾಸ ಇದ್ದು, ಜಿತೇಂದ್ರಿಯನಾಗಿ ಏಕಾದಶಿ ದಿನ ನಿರಾಹಾರದಿಂದ ವಿದ್ಯುಕ್ತವಾಗಿ ಸ್ನಾನ, ದೇವಪೂಜೆ, ಮುಂತಾದವುಗಳನ್ನೆಲ್ಲ ಮಾಡಬೇಕು. ಮತ್ತು ಮುಂದೆ ಹೇಳುವ ಮಂತ್ರ ಉಚ್ಚರಿಸಿ, ಏಕಾದಶಿ ವ್ರತ ಫಲವನ್ನು ಶ್ರೀ ಹರಿಗೆ, ಸಮರ್ಪಿಸಬೇಕು.

**ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽದ್ಯಾಹಂ ಪರೇಽಹನಿ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥**

ಪುಂಡರೀಕಾಕ್ಷನೆ, ಈ ಏಕಾದಶಿಯ ದಿನ ಆಹಾರವನ್ನು ತೆಗೆದುಕೊಳ್ಳದೆ ಉಪವಾಸ ಮಾಡಿ, ನಾಳೆಯ ದಿನ ಪಾರಣೆ ಮಾಡುತ್ತೇನೆ. 'ಅಚ್ಯುತನೇ ನೀನು ರಕ್ಷಿಸು' ಅನಂತರ ಪೂರ್ಣ ಉಪವಾಸವಿದ್ದು, ವಿಶೇಷವಾಗಿ ದೇವತಾರ್ಚನ, ಪಾರಾಯಣ ಪಾಠ ಪ್ರವಚನಗಳನ್ನು ಸಾಯಂಕಾಲದವರೆಗೂ ಆಚರಿಸಬೇಕು. ರಾತ್ರಿ ಕಾಲದಲ್ಲಿ ದೇವರ ಎದುರು ಪುರಾಣಗಳ ವಾಚನ, ಶ್ರವಣಗಳನ್ನು ಮಾಡಿ, ದೇವರ ಸ್ತೋತ್ರಗಳನ್ನು ಹಾಡುಗಳನ್ನು, ಸಂಗೀತ ವಾದ್ಯಗಳೊಂದಿಗೆ ಅಥವಾ ಅವಿಲ್ಲದೆ ಹಾಡಬೇಕು. ಭಕ್ತಿಯಿಂದ ನರ್ತಿಸಬೇಕು. ಸಂಗೀತಗಾರರಿಂದ ಹಾಡುಗಳನ್ನು ಹೇಳಿಸಿ, ಕೇಳಬೇಕು. ಹೀಗೆ ಇಡೀ ರಾತ್ರಿ ಜಾಗರ ಮಾಡಿ,

ಮರುದಿನ ದ್ವಾದಶಿಯಂದು ಅರುಣೋದಯ ದಲ್ಲಿದ್ದು, ಸ್ನಾನ ಮಾಡಿ, ವಿಷ್ಣು ಪೂಜೆ ಮಾಡಬೇಕು. ಕ್ಷೀರಾಭಿಷೇಕ, ಪಂಚಾಮೃತ, ಜಲಾಭಿಷೇಕಗಳನ್ನು ಮಾಡಿ, ಗಂಧ, ಪುಷ್ಪ, ತುಲಸೀ, ಧೂಪ, ದೀಪ ನೈವೇದ್ಯಾದಿಗಳನ್ನು ಸಮರ್ಪಿಸಿ ಪೂಜಿಸಬೇಕು. ಅನಂತರ -

**ಅಜ್ಞಾನ ತಿಮಿರಾಂಧಸ್ಯ ವ್ರತೇನಾನೇನ ಕೇಶವ**
**ಪ್ರಸೀದ ಸುಮುಖೋ ಭೂತ್ವಾ ಜ್ಞಾನದೃಷ್ಟಿ ಪ್ರದೋ ಭವ ॥**

''ಅಜ್ಞಾನವೆಂಬ ಕತ್ತಲೆಯಲ್ಲಿ ಸಿಲುಕಿ ಕುರುಡನಾದ ನನ್ನನ್ನು ಈ ಏಕಾದಶಿ ವ್ರತದಿಂದ ನೀನು ಪ್ರಸನ್ನನಾಗಿ, ನನಗೆ ಜ್ಞಾನದೃಷ್ಟಿಯನ್ನು ದಯಪಾಲಿಸು,'' ಹೀಗೆ ಭಗವಂತನಲ್ಲಿ ಪ್ರಾರ್ಥಿಸಬೇಕು. ಯಥಾಶಕ್ತಿ ವಿಪ್ರರಿಗೆ ಭೋಜನ ಮಾಡಿಸಿ, ದಕ್ಷಿಣೆಕೊಟ್ಟು, ತಮ್ಮ ಬಂಧುಗಳೊಡನೆ ತಾನೂ ಕೂಡ ಪಾರಣೆ ಮಾಡಬೇಕು. ಈ ವ್ರತವನ್ನು ಮಾಡುವವನು ಮೂರು ದಿನಗಳಲ್ಲಿ ಧರ್ಮಕಾರ್ಯಗಳಲ್ಲಿಯೇ ನಿರತನಾಗಿರಬೇಕು. ದೇವದ್ರೋಹಿ ಗಳನ್ನೂ, ನಾಸ್ತಿಕನನ್ನೂ, ಮಾತನಾಡಿಸಬಾರದು. ಭಕ್ತಿಪೂರ್ವಕವಾಗಿ ಪುಣ್ಯಪ್ರದವಾದ ಈ ಏಕಾದಶಿ ವ್ರತವನ್ನು ಮಾಡುವವನು, ಪುನಃ ಈ ಸಂಸಾರಬಂಧನಕ್ಕೆ ಸಿಲುಕುವದಿಲ್ಲ. ಈ ಉಪವಾಸವ್ರತ ನಿಷ್ಠನು ಮೋಕ್ಷವನ್ನು ಹೊಂದುತ್ತಾನೆ.

**ನಾಸ್ತಿ ಗಂಗಾಸಮಂ ತೀರ್ಥಂ ನಾಸ್ತಿ ಮಾತೃಸಮೋ ಗುರುಃ ।**
**ನಾಸ್ತಿ ವಿಷ್ಣು ಸಮಂ ದೈವಂ ತಪೋ ನಾನಶನಾತ್ಪರಂ ॥**

ಗಂಗೆಗೆ ಸಮಾನ ತೀರ್ಥ, ತಾಯಿಗೆ ಸರಿಯಾದ ಗುರುವು, ವಿಷ್ಣುವಿಗೆ ಸಮಾನವಾದ ದೇವರು ಅದರಂತೆ ನಿರಾಹಾರ ವ್ರತಕ್ಕಿಂತ ಹೆಚ್ಚಿನ ವ್ರತವಾಗಲಿ, ತಪಸ್ಸಾಗಲಿ ಬೇರೆ ಯಾವದೂ ಇಲ್ಲ ಈ ಲೋಕದಲ್ಲಿ.

**ನಾಸ್ತಿ ಕ್ಷಮಾಸಮಾ ಮಾತಾ ನಾಸ್ತಿ ಕೀರ್ತಿಸಮಂ ಧನಂ ।**
**ನಾಸ್ತಿ ಜ್ಞಾನಸಮೋ ಲಾಭೋ ನ ಚ ಧರ್ಮಸಮ ಪಿತಾ ॥**

ಸಹನೆಗೆ ಸಮಾನವಾದ ತಾಯಿ, ಕೀರ್ತಿಗೆ ಸಮಾನವಾದ ಧನ, ಹಾಗೂ ಐಶ್ವರ್ಯ ಜ್ಞಾನಕ್ಕೆ ಸಮಾನವಾದ ಲಾಭವು, ಧರ್ಮಕ್ಕೆ ಸರಿಯಾದ ತಂದೆ ಈ ಲೋಕದಲ್ಲಿ ಬೇರೆ ಇಲ್ಲ.

**ನ ವಿವೇಕ ಸಮೋ ಬಂಧುಃ ನೈಕಾದಶ್ಯಾಃ ಪರಂ ವ್ರತಂ ।**

ಅದರಂತೆ ಸುಜ್ಞಾನ ಅಥವಾ ವಿವೇಕಕ್ಕೆ ಸರಿಸಮವೆನಿಸುವ ಬಂಧು ಬೇರೆ ಇಲ್ಲ. ಏಕಾದಶಿಗಿಂತ ಉತ್ತಮವಾದ ವ್ರತ ಈ ಲೋಕದಲ್ಲಿ ಮತ್ತೆ ಬೇರೆ ಯಾವದೂ ಇಲ್ಲ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸ ಹೇಳುತ್ತೇನೆ ಕೇಳು. ಪೂರ್ವ ಕಾಲದಲ್ಲಿ ನರ್ಮದಾ ನದಿಯ ದಂಡೆಯ ಮೇಲೆ ಗಾಲವ ಮುನಿ ಇದ್ದನು. ಅವನಿಗೆ ಭದ್ರಶೀಲನೆಂಬ ಮಗನಿದ್ದನು. ಅವನ ಜನ್ಮಾಂತರದ ಘಟನೆಗಳೆಲ್ಲವೂ ಅಚ್ಚಳಿಯದೇ ಉಳಿದಿದ್ದವು - ಅವನ ಜ್ಞಾಪಕದಲ್ಲಿ. ಅವನು ಬಾಲಕನಿದ್ದಾಗ ಆಟವಾಡುವಾಗಲೂ ಭಗವದೈಕ ನಿಷ್ಠನು ಮಣ್ಣಿನಿಂದ ಭಗವಂತನ ದಶಾವತಾರದ ಪ್ರತಿಮೆ ಮಾಡಿ ಪೂಜಿಸುವದು, ಗೆಳೆಯರಿಗೆಲ್ಲ ವಿಷ್ಣು ಪಾರಮ್ಯ ಭೋದಿಸುವದು, ಏಕಾದಶೀ ವ್ರತದ ಆವಶ್ಯಕತೆಯನ್ನು ಒತ್ತಿ ಹೇಳುವದು. ಶಿಶುಗಳೂ, ಪಶುಗಳೂ, ಪಂಡಿತರೂ, ಪಾಮರರೂ ಎಲ್ಲರೂ ಏಕಾದಶೀವ್ರತ ಪಾಲಿಸಲೇಬೇಕು ಎಂದು ಒತ್ತಿ ಹೇಳುವದು. ಹೀಗೆ ಶೈಶವದಲ್ಲಿಯೂ ವಿಷ್ಣು ಮಹಿಮೆಯನ್ನು

ಪ್ರತಿಪಾದಿಸುವದೇ ಅವನ ಸ್ವಭಾವ. ಅವನ ಗೆಳೆಯಂದಿರು ಅವನಂತೆ ಮಣ್ಣಿನ ಮೂರ್ತಿ ನಿರ್ಮಿಸಿ, ಬೇರೆಯಾಗಲಿ, ಕೂಡಿಯಾಗಲಿ ಭಕ್ತಿಯಿಂದ ವಿಷ್ಣು ಪೂಜೆಗೈಯ್ಯುತ್ತಿದ್ದರು. ಯಾವಾಗಲೂ ಶ್ರೀ ಹರಿಗೆ ನಮಸ್ಕರಿಸುತ್ತಿದ್ದರು. ಭದ್ರಶೀಲ ಬಾಲಕನಾದರೂ ಸರ್ವದಾ ಭಗವದ್‌ಧ್ಯಾನ ಪರನಾಗಿ ಆಟಪಾಠ ಮಾಡುವಾಗಲೂ ಭಗವಂತನನ್ನು ವಂದಿಸುತ್ತಿದ್ದನು. ಮಗನ ಈ ಒಳ್ಳೇ ನಡತೆ, ಏಕಾದಶಿ ನಿಷ್ಠೆ, ಮುಂತಾದವುಗಳನ್ನು ಕಂಡು, ತಂದೆ ಗಾಲವ ಮುನಿಗೆ ಆನಂದ ಅಷ್ಟೇ ಆಶ್ಚರ್ಯ. ಒಂದು ದಿನ ಪ್ರೀತಿಯಿಂದ ಮಗನನ್ನು ಕೇಳಿದನು.

**ಗಾಲವ:-** ವತ್ಸ, ನೀನು ನಿಜವಾಗಿಯೂ ಭದ್ರವಾದ ಶೀಲವುಳ್ಳವನೇ ಆಗಿರುವಿ. ಎಲ್ಲರಿಗೂ ಹಿತಬಯಸುವ ನೀನು, ಸಂತತವೂ ಹರಿಪೂಜಾ ತತ್ಪರನಾಗಿ ಏಕಾದಶಿ ವ್ರತ, ಮಾಡುತ್ತ, ನಿಷಿದ್ಧವಾದ ಆಚಾರದ ವಿಚಾರ ತೊರೆದು, ಶಾಂತ ಮನಸ್ಸಿನಿಂದ ಸಂತತವೂ ಹರಿಧ್ಯಾನ ಮಾಡುತ್ತಿರುವೆ. ನಿನಗೆ ಇಂತಹ ಸದ್ಬುದ್ಧಿಯು ಹೇಗೆ ಹುಟ್ಟಿತು? ದೊಡ್ಡವರ ಸೇವೆ ಇಲ್ಲದೆ ಇಂತಹ ಅತಿಶಯ ಹರಿಭಕ್ತಿ ಉಂಟಾಗಲು ಸಾಧ್ಯವಿಲ್ಲ. ಅದಕ್ಕಾಗಿ ಕೇಳುತ್ತಿದ್ದೇನೆ. ನಿನಗೆ ಹೇಗೂ ಜಾತಿ ಸ್ಮರಣ ಉಂಟು. ಪೂರ್ವಜನ್ಮದಲ್ಲಿ ನೀನು ಏನಾದರೂ ವಿಶೇಷ ವ್ರತಮಾಡಿರಬೇಕು - ಅದನ್ನು ನೀನು ನನಗೆ ಯಥಾವತ್ತಾಗಿ ಹೇಳು.

**ಭದ್ರಶೀಲ:-** ತಂದೆಯೆ, ನೀನು ಸರಿಯಾಗಿ ತರ್ಕಮಾಡಿರುವೆ. ನಾನು ಮೊದಲು ಒಬ್ಬ ಅರಸ. ಚಂದ್ರಕುಲದಲ್ಲಿ ನನ್ನ ಹುಟ್ಟು. 'ಧರ್ಮಕೀರ್ತಿ' ಎಂದು ಹೆಸರು. ಒಂಭತ್ತು ಸಾವಿರ ವರ್ಷ ಭೂಮಿಯನ್ನು ನಾನು ಶಾಸನಗೈದೆ. ದತ್ತಾತ್ರೇಯನ ಆಶೀರ್ವಾದದ ಬೆಂಬಲ ನನಗೆ ಆಗ. ನಾನು ಅಸಂಖ್ಯ ಧರ್ಮಕಾರ್ಯಗಳನ್ನು ಆಚರಿಸಿದೆ. ಅಷ್ಟೇ ಅಧರ್ಮ ಕಾರ್ಯಗಳನ್ನೂ ಎಸಗಿದೆ. ಅದಕ್ಕೆ ಪಾಖಂಡಿಗಳ ಸಂಸರ್ಗವೇ ಕಾರಣ. ತಾರುಣ್ಯದಲ್ಲಿ ಅಪರಿಮಿತ ಐಶ್ವರ್ಯ, ಅಧಿಕಾರ ನನಗೆ ದೊರಕಿದ್ದವು. ನಾನು ಮತ್ತನಾದೆ. ದುಷ್ಟನಷ್ಟೇ ಅಲ್ಲ. ಪಾಖಂಡಿಯೂ ಆದೆ. ಅದಕ್ಕೂ ಹಿಂದಿನ ಜನ್ಮದಲ್ಲಿ ನಾನು ಗಳಿಸಿದ ಪುಣ್ಯಕ್ಕೆ ಲೆಕ್ಕವೇ ಇರಲಿಲ್ಲ. ಅದರ ಪ್ರಭಾವದಿಂದ ಅಂತಹ ಅಪಾರ ಸಂಪತ್ತು, ರಾಜಸತ್ತೆ ನನ್ನ ಸ್ವತ್ತಾಗಿತ್ತು. ಆದರೆ ಇಂತಹ ರಾಜೈಶ್ವರ್ಯ ಅಧಿಕಾರ, ಭೋಗಗಳು ಪ್ರಾಪ್ತವಾದಾಗ ನನ್ನ ತೂಕ ತಪ್ಪಿ, ವಿವೇಕ ಹೋಯಿತು. ದುಷ್ಟ ದುರ್ಬೋಧನೆಯಿಂದ ತೊರೆದು ಬಿಟ್ಟೆ ಆ ಋಜುಮಾರ್ಗವನ್ನು.

ಅನೇಕ ಹಂಚಿಕೆ ಮಾಡಿ ಯಜ್ಞಗಳನ್ನು ನಾಶಮಾಡಿದೆ. ತಪಸ್ವಿಗಳನ್ನು ತಡೆದೆ. ಧರ್ಮಕಾರ್ಯಗಳನ್ನು ನಿಲ್ಲಿಸಿದೆ. 'ಯಥಾ ರಾಜಾ ತಥಾಪ್ರಜಾ' ಎನ್ನುವಂತೆ, ನನ್ನನ್ನು ನೋಡಿ ನನ್ನ ಪ್ರಜೆಗಳೂ ಧರ್ಮದ್ರೋಹಿ ವ್ಯಾಪಾರದಲ್ಲಿ ತೊಡಗಿದರು. ರಾಜ್ಯದ ಎಲ್ಲ ಪ್ರಜೆಗಳೂ ಮಾಡುವ ದುರಾಚಾರ, ದುರ್ವ್ಯಾಪಾರಗಳಲ್ಲಿ ಆರನೇಯ ಭಾಗವು ನನಗೆ ತಾನಾಗಿಯೇ ಬರುತ್ತಿತ್ತು. ಹಾಗೆ ಎಲ್ಲರ ಪಾಪರಾಶಿಯು ನನ್ನಲ್ಲಿ ಶೇಖರಿತವಾಯಿತು. ವ್ಯಸನಗಳು ಒಂದರ ಮೇಲೊಂದು ನನಗೆ ಅಂಟಿಕೊಂಡವು. ಬೇಟೆಯ ಚಟ ಅತ್ಯಧಿಕವಾಗಿತ್ತು. ಒಂದು ದಿನ ಸೈನಿಕರೊಂದಿಗೆ ಘೋರ ಅರಣ್ಯದಲ್ಲಿ ಬೇಟೆಗೆ ಹೋಗಿದ್ದೆ. ಅನೇಕ ಮೃಗಗಳನ್ನು ಕೊಂದೆನು. ಬೇಟೆಯ ಆಯಾಸದಿಂದ ಬಾಯಾರಿಕೆ ಆಯಿತು. ದಣಿವು ನನ್ನ ಶಕ್ತಿಯನ್ನು ಉಡುಗಿಸಿತ್ತು. ನೀರನ್ನು ಹುಡುಕುತ್ತ ನೀರಿನ ತೀರಕ್ಕೆ ಬಂದೆ. ಬಿಸಿಲಿನಲ್ಲಿ ಹರಿಯುತ್ತಿತ್ತು. ಬೆವರು ದೇಹದಿಂದ. ನಾನೊಬ್ಬನೇ ರೇವಾತೀರಕ್ಕೆ ಧಾವಿಸಿ ಶೀತಲ ನದಿಯಲ್ಲಿ ಸ್ನಾನ ಮಾಡಿದೆ. ಆದರೆ ಆಹಾರ ಏನೂ ದೊರಕಲಿಲ್ಲ. ಅತ್ತಿತ್ತ ಏನಾದರೂ ತಿನ್ನಲಿಕ್ಕೆ ದೊರಕುವದೇನೋ. ಎಂದು ಹುಡುಕ ತೊಡಗಿದೆ. ಅಷ್ಟರಲ್ಲಿ ಸಂಧ್ಯಾ

ಕಾಲವಾಯಿತು. ರೇವಾನದಿಯ ಮೇಲೆ ಏಕಾದಶಿ ವ್ರತನಿಷ್ಠರಾದ ಕೆಲವರು ನನ್ನ ಕಣ್ಣಿಗೆ ಬಿದ್ದರು. ಅವರೆಲ್ಲರೂ ಅಂದು ಏಕಾದಶಿಯಾದುದರಿಂದ ಉಪವಾಸ ಮಾಡಿದ್ದರು.

ಆಗ ಕತ್ತಲೆ. ಆದುದರಿಂದ ನನಗೆ ಆಹಾರ ಹುಡುಕಲು ಬಾರದಂತಾಯಿತು. ಬೆಳಗಿನಿಂದ ಸಾಯಂಕಾಲದವರೆಗೆ ದೇಹದ ಪರಿವೆ ಇಲ್ಲದೆ ಕಾಡಿನಲ್ಲಿ ಓಡಾಡಿ ಸೋತು ಹೋಗಿದ್ದೆ. ಅತಿದಣಿವು, ಅತಿಹಸಿವು, ಅತಿಸಂಕಟಗಳಿಂದ ಅಂದು ರಾತ್ರಿ ನಿದ್ರೆಯೇ ಬರಲಿಲ್ಲ. ಮತ್ತೆ ನೀರಡಿಕೆ ಆದರೂ ನದಿಯತನಕ ಹೋಗಲು ತ್ರಾಣವಿದ್ದಿಲ್ಲ. ಹೀಗೆ ಹಸಿವು ಬಾಯಾರಿಕೆ, ಅತ್ಯಾಯಾಸ ಮುಂತಾದವುಗಳಿಂದ ನನಗೆ ಸಂಕಟ ತಾಳಲಾರದೇ ಮರಣ ಬಂದಿತು. ಯಮದೂತರು ಬಂದರು. ಒಬ್ಬೊಬ್ಬರಿಗೂ ಉದ್ದುದ್ದ ಕೋರೆ ಹಲ್ಲು. ಆದರಿಂದ ಅವರು ಇನ್ನೂ ಭಯಂಕರರಾಗಿ ಕಾಣುತ್ತಿದ್ದರು. ನನ್ನನ್ನು ಕಟ್ಟಿ ಅವರು ಯಮಲೋಕಕ್ಕೆ ಸೆಳೆದೊಯ್ದರು. ದಾರಿಯಲ್ಲಿ ನಾನು ಪಟ್ಟ ಕಷ್ಟ ಬಣ್ಣಿಸಲು ಬಾರದು. ಭಯಂಕರ ದುಃಖ ಮೂಲವಾದ ಘೋರ ದಾರಿಯನ್ನು ಕ್ರಮಿಸಿ, ಯಮನ ಬಳಿಗೊಯ್ದು ನನ್ನನ್ನು ನಿಲ್ಲಿಸಿದರು. ನೋಡಲು ಭಯಂಕರವಾಗಿತ್ತು. ಯಮನ ಭೀಕರ ಆಕಾರ. ಕಣ್ಣು ಕೆಂಪಗಿದ್ದವು, ಭ್ರುಕಟಿಯನ್ನು ನೋಡಿದರೆ ಎದೆ ಒಡೆಯಬೇಕು. ಹೀಗೆ ಅಕರಾಳ ವಿಕರಾಳ ಮೂರ್ತಿಯಾದ ಯಮನು ಚಿತ್ರಗುಪ್ತನನ್ನು ಕರೆದು 'ಯಾವ ಶಿಕ್ಷೆ ಇವನಿಗೆ ವಿಧಿಸಬೇಕು?' ಎಂದು ಕೇಳಿದನು. ಧರ್ಮರಾಜನ ಮಾತಿಗೆ ತಕ್ಷಣ ಉತ್ತರಿಸಲಿಲ್ಲ ಆ ಚಿತ್ರಗುಪ್ತ ಕೆಲವು ಕ್ಷಣ ವಿಚಾರಿಸಿ ನಿರ್ಧಾರಕ್ಕೆ ಬಂದು ಹೇಳಿದ.

**ಚಿತ್ರಗುಪ್ತ:-** ಇವನೇನೋ ಮಹಾ ಪಾಪಿ ನಿಜ. ಆದರೂ ಒಂದು ವಿಷಯವನ್ನು ತಾವು ವಿಚಾರಿಸಬೇಕು. ಇವನು ಒಂದು ಏಕಾದಶಿ ಪೂರ್ಣ ಉಪವಾಸ ಮಾಡಿದ್ದಾನೆ. ರೇವಾ ತೀರದಲ್ಲಿ ಉಪವಾಸವಿದ್ದು ಜಾಗರವನ್ನು ಮಾಡಿದ್ದಾನೆ. ಜಾಗರ ಮತ್ತು ಏಕಾದಶಿ ಇವೆರಡರಿಂದ ನಷ್ಟವಾಗದ ಪಾಪಗಳುಂಟೆ? ಏಕಾದಶಿಯ ಪೂರ್ಣ ಆಚರಣೆಯಿಂದ ಇವನ ಸರ್ವಪಾತಕಗಳು ನಷ್ಟವಾಗಿವೆ. ಇದರ ಮೇಲೆ ತಮ್ಮ ನಿರ್ಣಯವೇ ಪ್ರಮಾಣ. ಈ ಮಾತನ್ನು ಕೇಳಿದಾಗ ಧರ್ಮರಾಜನು ನನ್ನ ಎದುರು ಕಟ್ಟಿಗೆಯಂತೆ ಉರುಳಿ, ಆತನು ದಂಡಪ್ರಣಾಮ ಮಾಡಿದ ತನ್ನ ಅಂತರ್ಯಾಮಿಯಾದ ಸ್ವಾಮಿಗೆ, ಭಕ್ತಿಯಿಂದ ಪೂಜಿಸಿದ. ತನ್ನ ದೂತರನ್ನು ಕರೆದ.

**ಯಮ :** ದೂತರೆ, ನಿಮ್ಮೆಲ್ಲರಿಗೂ ಒಂದು ಹಿತವನ್ನು ಹೇಳುತ್ತೇನೆ. ಇನ್ನು ಮೇಲೆ ನೀವು ಧರ್ಮಮಾರ್ಗದಲ್ಲಿ ಇರುವವರನ್ನು ಎಂದೂ ನನ್ನ ಬಳಿಗೆ ತರಬೇಡಿರಿ.

**ನಾರಾಯಣಾಚ್ಯುತ ಜನಾರ್ದನ ಕೃಷ್ಣ ವಿಷ್ಣೋ ।**
**ಪದ್ಮೇಶ ಪದ್ಮಜಪಿತ ಶಿವಶಂಕರೇತಿ ॥**

**ನಿತ್ಯಂ ವದಂತ್ಯಖಿಲಲೋಕಹಿತಾಃ ಪ್ರಶಾಂತಾಃ ।**
**ದೂರದ್ಭಟಾಸ್ತ್ಯಜತ ತನ್ನ ಮಮೈಷು ಶಿಕ್ಷಾ ॥**

**ನಾರಾಯಣಾರ್ಪಿತ ಕೃತಾನ್ಹರಿಭಕ್ತಿ ಭಾಜಃ**
**ಸ್ವಾಚಾರಮಾರ್ಗನಿರತಾನ್ ಗುರು ಸೇವಕಾಂಶ್ಚ**
**ಸತ್ಪಾತ್ರದಾನನಿರತಾಂಶ್ಚ ಸದೀನಪಾಲಾನ್ ।**
**ದೂತಾಸ್ತ್ಯಜದ್ವಮನಿಶಂ ಹರಿನಾಮಸಕ್ತಾನ್ ॥**

ದೂತರೇ! ನಾರಾಯಣ, ಅಚ್ಯುತ, ಜನಾರ್ದನ, ಕೃಷ್ಣ, ವಿಷ್ಣು, ಚತುರ್ಮುಖಜನಕ, ಮಂಗಳಪ್ರದ, ಸುಖಪ್ರದ ಎಂಬುದಾಗಿ ಯಾವಾಗಲೂ ಭಗವನ್ನಾಮಸ್ಮರಣೆ ಮಾಡುತ್ತಿರುವ, ಲೋಕೋಪಕಾರಿಗಳಾದ, ಶಾಂತಮನಸ್ಕರಾದ ವಿಷ್ಣುಭಕ್ತರನ್ನು ದೂರದಿಂದಲೇ ಬಿಟ್ಟುಬಿಡಿ. ನನಗೆ ಅಂತಹವರ ವಿಷಯದಲ್ಲಿ ಶಿಕ್ಷಿಸುವ ಅಧಿಕಾರವಿಲ್ಲ. ದೂತರೇ, ತಾವು ಮಾಡಿದ ಕರ್ಮಗಳನ್ನು ನಾರಾಯಣನಿಗೆ ಸಮರ್ಪಿಸುತ್ತಿರುವ ಹರಿಭಕ್ತಿಯುಳ್ಳವರು, ವರ್ಣಾಶ್ರಮ ವಿಹಿತ ಧರ್ಮಾನುಷ್ಠಾನ ಪರರು, ಗುರುಗಳನ್ನು ಸೇವಿಸುವವರು, ಸತ್ಪಾತ್ರದಲ್ಲಿ ದಾನಮಾಡುವವರು, ದೀನರನ್ನು ರಕ್ಷಿಸುವವರು, ಯಾವಾಗಲೂ ಹರಿನಾಮ ಕೀರ್ತನಪರರೂ ಆಗಿರುವವರನ್ನು ಬಿಟ್ಟುಬಿಡಿರಿ.

ಪಾಷಂಡಸಂಗರಹಿತಾನ್ದ್ವಿಜ ಭಕ್ತಿನಿಷ್ಠಾನ್।
ಸತ್ಸಂಗಲೋಲುಪತರಾಂಶ್ಚ ತಥಾತಿಥೇಯಾನ್ ॥
ಶಂಭೌ ಹರೌ ಚ ಸಮಬುದ್ಧಿಮತಸ್ತಥೈವ
ದೂತಾಸ್ತ್ಯಜಧ್ವಮುಪಕಾರಪರಾನ್ಜನಾನಾಂ ॥

ಪಾಷಂಡಜನ ಸಹವಾಸ ಮಾಡದಿರುವವರು, ದ್ವಿಜ ಭಕ್ತಿ ಮಾಡುವವರು, ಸಜ್ಜನ ಸಹವಾಸದಲ್ಲಿ ಆಶೆಯುಳ್ಳವರು, ಅತಿಥಿಸತ್ಕಾರ ಮಾಡುವವರು ಮತ್ತು ಹರಿಹರರಲ್ಲಿ ಯೋಗ್ಯತಾನುಸಾರ ಭಕ್ತಿ ಪೂಜೆ ಮಾಡುವವರು ಮತ್ತು ಪರೋಪಕಾರಿಗಳು ಆಗಿರುವವರನ್ನು ಸರ್ವಥಾ ನನ್ನಲ್ಲಿ ನೀವು ಕರೆತರಬಾರದು.

ಯೇ ವರ್ಜಿತಾ ಹರಿಕಥಾಮೃತಸೇವನೈಶ್ಚ ।
ನಾರಾಯಣಸ್ಮೃತಿ ಪರಾಯಣಮಾನಸೈಶ್ಚ ॥
ವಿಪ್ರೇಂದ್ರ ಪೋಷಣನಿಷೇವಣತೋಽ ಪ್ರಹೃಷ್ಟಾನ್ ।
ತಾನ್ಪಾಪಿನೋ ಮಮ ಭಟಾ ಗೃಹಮಾನಯಧ್ವಂ ॥

ದೂತರೇ, ಹರಿಕಥೆಯೆಂಬ ಅಮೃತವನ್ನು ಸೇವಿಸದಿರುವವರು, ನಾರಾಯಣ ಧ್ಯಾನಪರವಾದ ಮನಸ್ಸಿಲ್ಲದವರು ಜ್ಞಾನಿ ಶ್ರೇಷ್ಠರ ಪೋಷಣೆಯಿಂದ ಸಂತೋಷ ಪಡೆದಿರುವವರೂ, ಆಗಿರುವ ಆ ಪಾಪಿಷ್ಠರನ್ನು ನನ್ನ ಬಳಿಗೆ ತನ್ನಿರಿ.

ಯೇ ಮಾತೃತಾತಪರಿಭರ್ತ್ಸನಶೀಲಿನಶ್ಚ ।
ಲೋಕದ್ವಿಷೋ ಹಿತಜನಾಹಿತ - ಕರ್ಮಿಣಶ್ಚ ॥
ದೇವಸ್ವ ಲೋಭನಿರತಾನ್ ಜನನಾಶಕರ್ತೄನ್ ।
ಅತ್ರಾನಯಧ್ವಮಪರಾಧಪರಾಂಶ್ಚ ದೂತಾಃ ॥

ದೂತರೆ, ಮಾತಾಪಿತರನ್ನು ತೆಗಳುವವರು, ದ್ವೇಷ ಮಾಡುವವರು, ಲೋಕಕ್ಕೆ ಅಪಕಾರಿಗಳು, ಕೃತಘ್ನರು, ದೇವರ ದುಡ್ಡಿಗೆ ಆಶೆಪಡುವವರು, ಪ್ರಾಣ ಹಂತಕರು, ಮತ್ತು ಅಪರಾಧ ಮಾಡುವ ಪಾಪಿಗಳನ್ನು ನನ್ನ ಹತ್ತಿರ ಎಳೆದು ತನ್ನಿರಿ.

ಏಕಾದಶೀವ್ರತಪರಾಙ್ಮುಖಮುಗ್ರ ಶೀಲಂ ।
ಲೋಕಾಪವಾದ ನಿರತಂ ಪರನಿಂದಕಂಚ ॥
ಗ್ರಾಮಸ್ಯ ನಾಶಕರಮುತ್ತಮ ವೈರಯುಕ್ತಂ ।
ದೂತಾಃ ಸಮಾನಯತ ವಿಪ್ರಧನೇಷು ಲುಬ್ಧಂ ॥

ದೂತರೇ, ಏಕಾದಶಿವ್ರತವನ್ನು ಕೈಕೊಳ್ಳದಿರುವವರೂ ಕ್ರೂರರೂ, ಪರನಿಂದೆ ಗೈಯುವವರೂ, ಇತರರನ್ನೂ ಅನ್ಯಥಾ ದೂಷಣೆ ಮಾಡುವವರೂ, ಗ್ರಾಮ, ಹಳ್ಳಿಗಳನ್ನು ನಾಶಪಡಿಸುವ ದ್ರೋಹಿಗಳೂ, ದ್ವಿಜರ ಸಂಪತ್ತನ್ನು ಅಪಹರಿಸಬಯಸುವ ಪಾಖಂಡಿಗಳೂ ಆಗಿರುವವರನ್ನು ಇಲ್ಲಿಗೆ ಎಳೆದು ತನ್ನಿರಿ.

**ಯೇ ವಿಷ್ಣು ಭಕ್ತಿವಿಮುಖಾಃ ಪ್ರಣಮಂತಿ ನೈವ ।**
**ನಾರಾಯಣಂ ಹಿ ಶರಣಾಗತಪಾಲಕಂ ಚ ।**
**ವಿಷ್ಣ್ವಾಲಯಂ ಚ ನ ಹಿ ಯಾಂತಿ ನರಾಃ ಸುಮೂರ್ಖಾಃ ।**
**ತಾನಾನಯಧ್ವಮತಿಪಾಪರತಾನ್ನ್ರಸಹ್ಯ ॥**

ಸೇವಕರೇ, ವಿಷ್ಣು ಭಕ್ತಿಯಲ್ಲಿ ಆಸಕ್ತಿಯಿಲ್ಲದವರಾಗಿ, ಶರಣಾಗತ ವತ್ಸಲನಾದ ದೇವನನ್ನು ನಮಸ್ಕರಿಸದ, ಅಜ್ಞಾನದಲ್ಲಿ ಶ್ರೀ ಹರಿಯ ಅಥವಾ ದೇವಾಲಯಕ್ಕೂ ಹೋಗದಂತಹ ಪಾಪಿಗಳನ್ನೂ ಮತ್ತು ದಿನದಿನವೂ ಕೆಟ್ಟ ಕಾರ್ಯ ಎಸಗುವ ನೀಚರನ್ನೂ ನನ್ನ ಬಳಿಗೆ ಕರೆದು ತನ್ನಿರಿ.

ಹೀಗೆ ಯಮದೇವರು ಮಾತನಾಡಿದ್ದನ್ನು ಕೇಳಿ ನನಗಾದರೂ ಪಶ್ಚಾತ್ತಾಪ ವಾಯಿತು. ನಾನು ಮಾಡಿದ ದುಷ್ಟಕಾರ್ಯಗಳು ನನ್ನ ನೆನಪಿಗೆ ಬಂದವು. ಹಿಂದೆ ಮಾಡಿದ ಪಾಪಕೃತ್ಯಗಳಿಗಾಗಿ ನನ್ನಲ್ಲಿ ಪಶ್ಚಾತ್ತಾಪ ಹುಟ್ಟಿದ್ದರಿಂದಲೂ, ಸತ್ಕರ್ಮ ಮಾಡಿದ್ದರಿಂದಲೂ, ನನ್ನ ಪಾಪಗಳು ದೂರವಾದವು. ಕೂಡಲೇ ಯಮಧರ್ಮನು ನಾನು ಪಾಪಲೇಪವಿಲ್ಲದವನೆಂದು ತಿಳಿದು ವಿಮಾನದಲ್ಲಿ ಕೂಡಿಸಿ ವಿಷ್ಣುಲೋಕಕ್ಕೆ ಕಳಿಸಿದನು. ನನ್ನನ್ನು ವಿಷ್ಣುವಿನ ಕೃಪಾಕಟಾಕ್ಷದಿಂದ ಆನಂದಪೂರ್ಣವಾದ ಅದೊಂದು ದಿವ್ಯಲೋಕಕ್ಕೆ ಕಳಿಸಿದನು. ಆ ಇಂದ್ರ ಲೋಕದಲ್ಲಿದ್ದು, ಸರ್ವಸುಖ ಅನುಭವಿಸಿ ಅನಂತರ ಭೂಲೋಕಕ್ಕೆ ಬಂದೆನು. ನಿಮ್ಮ ಮಗನಾಗಿ ನಿಮ್ಮ ಉದರದಲ್ಲಿ ಹುಟ್ಟಿದೆನು. ಕಳೆದ ಜನ್ಮದ ನೆನಪು ನನಗೆ ನಿಚ್ಚಳವಾಗಿಯೇ ಇದೆ. ಏಕಾದಶಿ ವ್ರತದ ಪ್ರಭಾವವನ್ನು ಸ್ವಯಂ ನಾನು ಹಿಂದಿನ ಜನ್ಮದಲ್ಲಿ ಅನುಭವಿಸಿದ್ದೇನೆ. ಅಂತೆಯೇ ನಾನು ಈ ಜನ್ಮದಲ್ಲಿ ಬಾಲಕನಿದ್ದಾಗಲೇ ಏಕಾದಶೀ ವ್ರತ ಆರಂಭಿಸಿದ್ದೇನೆ. ವಿಷ್ಣು ಪೂಜೆ ಮಾಡುತ್ತೇನೆ. ಹಾಗೂ ಮಿತ್ರರಿಗೆ ಹೇಳುತ್ತೇನೆ. ಅವರೆಲ್ಲರನ್ನು ನನ್ನ ಉಪದೇಶದ ಪ್ರಭಾವದಿಂದ ಇದೇ ಸನ್ಮಾರ್ಗಕ್ಕೆ ಹಚ್ಚಿದ್ದೇನೆ. ವಿಷ್ಣುಪೂಜೆ, ಏಕಾದಶೀ ವ್ರತ ಇವೆರಡನ್ನೂ ಮರೆಯದೇ ಬಿಡದೇ ಆಚರಿಸುವವರಿಗೆ ವೈಕುಂಠಲೋಕ ಪ್ರಾಪ್ತಿ ನಿಶ್ಚಿತ.''

ಮಗನ ಈ ಅನುಭವ ಪೂರ್ಣವಾದ ವಚನವನ್ನು ಕೇಳಿ, ತಂದೆ ಗಾಲವನಿಗೆ ಪರಮಾನಂದವಾಯಿತು. ನನ್ನ ಜನ್ಮ ಸಫಲ, ನಮ್ಮ ಕುಲವೇ ಪಾವನ. ನಿನ್ನಂತಹ ವಿಷ್ಣುಭಕ್ತ ನನ್ನ ಮನೆಯಲ್ಲಿ ಹುಟ್ಟಿದ್ದು ನನ್ನ ಜನ್ಮಾಂತರದ ವಿಶೇಷ ಸುಕೃತ - ಎಂದು ಏಕಾದಶಿ ಮಹಿಮೆಯನ್ನು ಬಣ್ಣಿಸಿದ ಮಗನನ್ನು ಅಭಿನಂದಿಸಿದನು. ಮತ್ತು ತನ್ನ ಮನದಲ್ಲಿಯೇ ಆನಂದಿಸಿದನು.

*ನಾರದ ಮಹಾಪುರಾಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಸದಾಚಾರ ನಿರೂಪಣ

ಅಧ್ಯಾಯ - ೨೪

**ನಾರದ:-** ತತ್ವಜ್ಞಾನಿಗಳಾದ ಸನಕಮುನಿಗಳೇ, ತಾವು ಈವರೆಗೆ ವ್ರತೋಪವಾಸಗಳ ವಿವರವನ್ನು ನಿರೂಪಿಸಿದಿರಿ. ಈಗ ವರ್ಣಧರ್ಮ, ಮತ್ತು ಸದಾಚಾರಗಳ ವಿಧಿ ವಿಧಾನಗಳನ್ನು ಮತ್ತು ಎಲ್ಲ ಆಶ್ರಮ, ಆಚಾರಗಳ ಪದ್ಧತಿ, ಹಾಗೂ ಪ್ರಯಶ್ಚಿತ್ತ ಪದ್ಧತಿಗಳನ್ನು ದಯಮಾಡಿ ಹೇಳಿರಿ.

**ಸನಕ:-** ಈ ವಿಷಯದಲ್ಲಿ ಹಿಂದೆ ಮನು ಮಹಾರಾಜ ಮೊದಲಾದವರು ಹೇಳಿದ್ದನ್ನೇ ನಿನಗೆ ನಿರೂಪಿಸುತ್ತೇನೆ. ಬ್ರಾಹ್ಮಣ, ಕ್ಷತ್ರಿಯ, ವೈಶ,, ಶೂದ್ರ, ಇವು ನಾಲ್ಕು ವರ್ಣಗಳು. ಅವುಗಳಲ್ಲಿ ಮೊದಲಿನ ಮೂರು ವರ್ಣದವರಿಗೆ - ದ್ವಿಜ ಎಂದು ಹೆಸರು. ಇವರು ತಾಯಿಯ ಹೊಟ್ಟೆಯಿಂದ ಒಮ್ಮೆ ಹುಟ್ಟಿ ಶಾಸ್ತ್ರೋಕ್ತ ಸಂಸ್ಕಾರದಿಂದ ಮತ್ತೊಮ್ಮೆ ಹುಟ್ಟನ್ನು ಪಡೆಯುವರು. ಆದುದರಿಂದ ಇವರಿಗೆ ಎರಡು ಸಲ ಜನನವು ಆದಂತಾಗುವದು. ಇದಕ್ಕಾಗಿ ದ್ವಿಜ ಎಂದು ಇವರಿಗೆ ಕರೆಯುತ್ತಾರೆ. ಇವರೆಲ್ಲರೂ ತಮ್ಮ ವರ್ಣಾಶ್ರಮ ವಿಹಿತವಾದ ಧರ್ಮ ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಈ ವರ್ಣಧರ್ಮಗಳನ್ನು, ಆಶ್ರಮಧರ್ಮಗಳನ್ನು ತೊರೆದು, ಮನಬಂದಂತೆ ನಡೆಯುವವರು ಪಾಖಂಡಿಗಳೆಂದು ಕರೆಯಲ್ಪಡುತ್ತಾರೆ.

ದ್ವಿಜನಾದವನು ಗೃಹ್ಯಸೂತ್ರದಲ್ಲಿ ವಿಹಿತವಾದ ಕರ್ಮಾಚರಣೆ ಮಾಡಬೇಕು. ಯಥಾಯೋಗ್ಯವಾಗಿ, ಸ್ಮೃತಿವಿಹಿತ ಧರ್ಮಗಳಿಗೆ ಅನುಗುಣವಾದ ದೇಶಾಚಾರ ಪದ್ಧತಿಯನ್ನು ಗ್ರಹಿಸಬೇಕು. ಧರ್ಮವನ್ನು ಕಾಯಾ,ವಾಚಾ, ಮನಸಾ, ತ್ರಿಕರಣ ಶುದ್ಧಿಪೂರ್ವಕವಾಗಿ, ಭಕ್ತಿಯಿಂದ ಆಚರಿಸಬೇಕು. ಬಹುಜನರ ಹಿತಕ್ಕೆ ಧಕ್ಕೆ ಬರುವ, ಸ್ವರ್ಗಾದಿ ಪುಣ್ಯಲೋಕಗಳಿಗೆ ಸಾಧನವಲ್ಲದ ಧರ್ಮವನ್ನು ಆಚರಿಸಬಾರದು. ಸಮುದ್ರ ಯಾನ ಕಮಂಡಲ ಹಿಡಿಯುವದು, ದ್ವಿಜರು ಬೇರೆ ಜಾತಿ ಹೆಣ್ಣನ್ನು ಮದುವೆ ಆಗುವದು, ಮೈದುನನ ಸಂಗದಿಂದ ಮಗುವನ್ನು ಪಡೆಯುವದು. ವಿವಾಹಾದಿಗಳಲ್ಲಿ ಮಧುಪರ್ಕ ವಿಧಿಗಾಗಿ ಪಶುಕೊಲ್ಲುವದು, ಶ್ರಾದ್ಧದಲ್ಲಿ ಮಾಂಸ ಬಳಸುವದು; ವಾನಪ್ರಸ್ಥಾಶ್ರಮ ಸ್ವೀಕರಿಸುವದು, ಒಮ್ಮೆ ಮದುವೆ ಆದ ಬಳಿಕ ಸಂಪರ್ಕವಾಗದೆ ಪತಿಯು ತೀರಿಕೊಂಡರೆ, ಅಕ್ಷತೆಯೋನಿಯಾಗಿದ್ದಾಳೆಂದು, ಆ ಕನ್ಯೆಗೆ ಪುನರ್ವಿವಾಹ ಮಾಡುವದು, ಯಾವಜ್ಜನ್ಮ ನೈಷ್ಠಿಕ ಬ್ರಹ್ಮಚಾರಿಯಾಗಿರುವದು, ನರಮೇಧ ಗೋಮೇಧ, ಅಶ್ವಮೇಧ, ಮುಂತಾದ ಮಹಾಯಜ್ಞಗಳನ್ನು ಮಾಡುವದು, ಹಾಗೂ ಮಹಾಪ್ರಸ್ಥಾನ ಗಮನ ಮುಂತಾದ ಧರ್ಮಗಳನ್ನು, ಧರ್ಮಶಾಸ್ತ್ರ ಗ್ರಂಥಗಳಲ್ಲಿ ಹೇಳಿದ್ದರೂ, ಕಲಿಯುಗದಲ್ಲಿ ಆಚರಿಸ ಬಾರದೆಂದು ಜ್ಞಾನಿಗಳು ಹೇಳಿದ್ದಾರೆ. ಇದಕ್ಕೆ ಪ್ರಮಾಣ ವಚನಗಳು ಕೆಳಗಿನಂತಿರುತ್ತವೆ.

ಸಮುದ್ರಯಾತ್ರಾಸ್ವೀಕಾರಃ ಕಮಂಡಲುವಿಧಾರಣಂ ।
ದ್ವಿಜಾನಾಮಸವರ್ಣಾಸು ಕನ್ಯಾಸೂಪಯಮಸ್ತಥಾ ॥
ದೇವರಾಚ್ಚ ಸುತೋತ್ಪತ್ತಿ ರ್ಮಧುಪರ್ಕೇ ಪಶೋರ್ವಧಃ ।
ಮಾಂಸಾದನಂ ತಥಾ ಶ್ರಾದ್ಧೇ ವಾನಪ್ರಸ್ಥಾಶ್ರಮಸ್ಥಥಾ ॥

**ದತ್ತಾಕ್ಷತಾಯಾಃ ಕನ್ಯಾಯಾಃ ಪುನರ್ದಾನಂ ವರಾಯ ಚ ।**
**ನೈಷ್ಠಿಕ ಬ್ರಹ್ಮಚರ್ಯಂ ಚ ನರಮೇಧಾಶ್ವಮೇಧಕೌ ॥**

**ಮಹಾಪ್ರಸ್ಥಾನಗಮನಂ ಗೋಮೇಧ ಸದೃಶಾಖಾಶೋಮಖಃ ।**
**ವನಸ್ಥಧರ್ಮಾನ್ಕಲಿಯುಗೇ ವರ್ಜ್ಯಾನಾಹುರ್ಮನೀಷಿಣಃ ॥**

ಆಯಾದೇಶಗಳಲ್ಲಿ ಇರುವ ಜನರು ತಮ್ಮ ತಮ್ಮ ದೇಶಾಚಾರಗಳನ್ನು ಅನುಸರಿಸಬೇಕು. ಇಲ್ಲದಿದ್ದರೆ ದೇಶಾಚಾರ ಬಿಟ್ಟ ಮನುಷ್ಯನು ಪತಿತನೂ, ಸರ್ವಧರ್ಮ ಬಹಿಷ್ಕೃತನೆಂದು ತಿಳಿಯಬೇಕು. ಇನ್ನು ಬ್ರಾಹ್ಮಣಾದಿ ಕ್ಷತ್ರಿಯಾಂತ ಎಲ್ಲ ಜನರ ಸಾಮಾನ್ಯ ಧರ್ಮಗಳನ್ನು ಹೇಳುತ್ತೇನೆ. ಜ್ಞಾನಿಗಳಿಗೆ ದಾನ ಕೊಡಬೇಕು. ದೇವರನ್ನು ಪೂಜಿಸಬೇಕು. ಪಾಠ ಪ್ರವಚನಾದಿ ಮಾಡಬೇಕು. ಅದರಲ್ಲಿಯೂ ಬ್ರಾಹ್ಮಣನು ವೇದಾಧ್ಯಯನ, ಉಪಾಸನ, ಸರ್ವಲೋಕ ಹಿತಾಚರಣ, ಮೃದು ವಚನ, ಋತುಕಾಲದಲ್ಲಿ ಪತ್ನೀಸಂಗ, ವಿಷ್ಣು ಪೂಜೆ ಮುಂತಾದ ಧರ್ಮಗಳನ್ನು ಆಚರಿಸಬೇಕು. ಕ್ಷತ್ರಿಯನು ಶಸ್ತ್ರ ವಿದ್ಯೆಯಿಂದ ಜೀವಿಸಿ, ಧರ್ಮದಿಂದ ರಾಜ್ಯಪಾಲನ, ದುಷ್ಟ ನಿಗ್ರಹ ಶಿಷ್ಟ ಪಾಲನ, ದಾನಧರ್ಮ, ವೇದಾಧ್ಯಯನ, ರಾಜ್ಯ ಶಾಸನ, ಧರ್ಮಚಕ್ರ ಪ್ರವರ್ತನ ಮುಂತಾದವುಗಳನ್ನು ಮಾಡಬೇಕು. ವೈಶ್ಯನು ಪಶುಪಾಲನ, ವೇದಾಧ್ಯಯನ, ಕ್ರಯ ವಿಕ್ರಯಾದಿ ವ್ಯಾಪಾರ, ವ್ಯವಸಾಯ, ಬೇಸಾಯ, ಶಿಲ್ಪ, ಗೋರಕ್ಷಣೆ, ದಾನಧರ್ಮ, ಪರೋಪಕಾರ, ಕುಟುಂಬ ಪೋಷಣೆ, ಸಾಮಾಜಿಕ ಕಾರ್ಯ ಮುಂತಾದವುಗಳನ್ನು ಆಚರಿಸಬೇಕು.

ಶೂದ್ರನು ದಾನಧರ್ಮ, ತ್ರಿವರ್ಣೀಯರ ಸೇವೆ, ಋತುಕಾಲದಲ್ಲಿ ಪತ್ನೀ ಗಮನ, ಪ್ರಿಯಭಾಷಣ, ಬೇಸರವಿಲ್ಲದೆ ಉದ್ಯೋಗಶೀಲತೆ, ಬಂದದ್ದರಲ್ಲಿ ಮನಸ್ಸಿಗೆ ಸಮಾಧಾನ, ಸಹನಶೀಲತೆ, ದುರಭಿಮಾನರಾಹಿತ್ಯ ಮುಂತಾದ ಗುಣಗಳನ್ನು ಬೆಳೆಸಿಕೊಳ್ಳಬೇಕು. ಈ ನಾಲ್ಕು ವರ್ಗದವರು ತಮ್ಮ ತಮ್ಮ ವರ್ಣಗಳಿಗೆ ಉಚಿತವಾದ ಕರ್ಮಗಳನ್ನು ಮಾಡುತ್ತಲಿದ್ದು 'ಮುನಿ' ಎನಿಸಿಕೊಳ್ಳುವರು. ಇದರಂತೆ ಆಶ್ರಮಗಳು ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ, ಸನ್ಯಾಸ ಎಂದು ನಾಲ್ಕು ಇರುತ್ತವೆ. ಈ ನಾಲ್ಕು ಆಶ್ರಮಗಳಲ್ಲಿ ಇದ್ದು ಮನುಷ್ಯನು ದಿವ್ಯವಾದ ಧರ್ಮಾಚರಣೆ ಮಾಡಿ ಶ್ರೇಷ್ಠ ಪುಣ್ಯವನ್ನು ಸಂಪಾದಿಸಬೇಕು. ತನ್ನ ವರ್ಣ, ತನ್ನ ಆಶ್ರಮಗಳಿಗೆ ಉಚಿತವಾದ ಕರ್ಮಗಳನ್ನು ಆಚರಿಸಿದಲ್ಲಿ, ಪರಮಾತ್ಮನು ಸಂತುಷ್ಟನಾಗಿ ಪರಮಾನುಗ್ರಹ ಮಾಡುತ್ತಾನೆ.

ನಾರದ ಮಹಾಪುರಾಣದಲ್ಲಿ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು

—o—

**ಸನಕಃ:-** ವರ್ಣ ಹಾಗೂ ಆಶ್ರಮ ಆಚಾರಗಳ ವಿಧಿಯನ್ನು ಹೇಳುತ್ತೇನೆ, ಕೇಳು. ತನ್ನ ಧರ್ಮವನ್ನು ತ್ಯಜಿಸಿ ಪರಧರ್ಮವನ್ನು ಆಶ್ರಯಿಸುವವನು ಪಾಷಂಡನೆಂದು ತಿಳಿಯಬೇಕು. ಅವನಿಗೆ ಯಾವ ಧರ್ಮದಲ್ಲಿಯೂ ಪ್ರವೇಶವಿಲ್ಲ. ಪಾಷಂಡನಿಗೆ ಸರ್ವಧರ್ಮಗಳಿಂದಲೂ ಬಹಿಷ್ಕಾರ. ಗರ್ಭಾದಾನಾದಿ ಸಂಸ್ಕಾರಗಳನ್ನು ಮಂತ್ರೋಚ್ಚಾರ ಪೂರ್ವಕ ಮಾಡಬೇಕು. ಸ್ತ್ರೀಯರಿಗೆ ಕಾಲಕಾಲಕ್ಕೆ ಮಂತ್ರ ಹೇಳದೇ ಎಲ್ಲ ಸಂಸ್ಕಾರ ಮಾಡಬೇಕು. ಮೊದಲು ಸ್ತ್ರೀಯರಿಗೆ ಸೀಮಂತಕರ್ಮ, ಗರ್ಭನಿಂತ ನಾಲ್ಕನೆಯ ತಿಂಗಳಲ್ಲಿ ಸೀಮಂತ ವಿಧಿಯನ್ನು ಮಾಡುವದು ಪ್ರಶಸ್ತ. ಆರು, ಏಳು, ಎಂಟನೆಯ ತಿಂಗಳಲ್ಲಿ ಮಾಡಬಹುದು. ಮಗು ಹುಟ್ಟಿದ ಕೂಡಲೆ ತಂದೆಯು ಬಟ್ಟೆ ಸಹಿತ ಸ್ನಾನ ಮಾಡಬೇಕು. ಅನಂತರ ಜಾತಕರ್ಮ ಮುಂತಾದವುಗಳನ್ನೂ ಸ್ವಸ್ತಿವಾಚನ ಪೂರ್ವಕ ಮಾಡಬೇಕು. ಬಂಗಾರ ಅಥವಾ ಬೆಳ್ಳಿಯಿಂದ ವೃದ್ಧಿಶ್ರಾದ್ಧ ನಡೆಸಬೇಕು. ಅನ್ನದಿಂದ ನಡೆಸಬಾರದು. ಆಭ್ಯುದಯಿಕ ಶ್ರಾದ್ಧ ಮಾಡಿ, ಜನನಾಶೌಚ ಕಳೆದ ಬಳಿಕ ಹನ್ನೊಂದನೆಯ ದಿನದಲ್ಲಿ ನಾಮಕರಣ ಮಾಡಬೇಕು. ಮಕ್ಕಳಿಗೆ ಹೆಸರಿಡುವಾಗ ಈ ಕೆಳಗಿನ ಅಂಶವನ್ನು ಗಮನಿಸಬೇಕು.

ಹೆಸರು ಅಸ್ಪಷ್ಟ ಇರಬಾರದು. ಅರ್ಥ ರಹಿತವಾಗಿರಬಾರದು. ವತ್ತಕ್ಷರ ದ್ವಿತ್ತಕ್ಷರಗಳು ಹೆಚ್ಚಿಗೆ ಇರಬಾರದು. ವಿಷಮ ಸಂಖ್ಯೆಯಲ್ಲಿ ಅಕ್ಷರ ಇರಬಾರದು. ದೇವರ ಹೆಸರುಳ್ಳ ಸುಂದರವಾಗಿ ಉಚ್ಚರಿಸಲು ಹಗುರಾದ ಅರ್ಥಸಹಿತವಾದ ಮೃದು ಮಧುರ ಅಕ್ಷರಗಳಿಂದ ಕೂಡಿದ ಹೆಸರನ್ನು ಮಕ್ಕಳಿಗೆ ಇಡಬೇಕು. ಮೂರು, ಐದು, ಎಂಟನೆಯ ವರ್ಷದಲ್ಲಿ ಚೌಲಕರ್ಮ ಮಾಡಬೇಕು. ಎಂಟನೆಯ ವರ್ಷದಲ್ಲಿ ವಟುವಿಗೆ ಉಪನಯನ ಮಾಡಬೇಕು. ಇದು ಉತ್ತಮ. ಮುಂದೆ ಹದಿನಾರನೆಯ ವರ್ಷಕ್ಕೆ ಉಪನಯನದ ಗೌಣಕಾಲ, ಕ್ಷತ್ರಿಯನಿಗೆ ಹನ್ನೊಂದು ವರ್ಷದವರೆಗೆ ಉಪನಯನಕ್ಕೆ ಉತ್ತಮಕಾಲ, ಇಪ್ಪತ್ತೆಂಟರವರೆಗೆ ಗೌಣಕಾಲ. ವೈಶ್ಯನಿಗೆ ಹನ್ನೆರಡನೆಯ ವರ್ಷ ಉತ್ತಮಕಾಲ. ಇಪ್ಪತ್ತನಾಲ್ಕನೆಯ ವರ್ಷಗಳವರೆಗೆ ಗೌಣಕಾಲ. ಆಯಾವರ್ಣದ ದ್ವಿಜರಿಗೆ ಈ ವಿಹಿತಕಾಲ ಮೀರಿದರೆ, ಗಾಯತ್ರಿ ಅಧಿಕಾರವು ಹೋಗುವದು, ಅವನು ಪತಿತನೆಂದು ತಿಳಿಯಬೇಕು. ವಿಹಿತಕಾಲ ಮೀರಿದರೆ 'ಚಾಂದ್ರಾಯಣ' 'ಸಾಂತಪನವ್ರತ' ಮುಂತಾದ ಪ್ರಾಯಶ್ಚಿತ್ತ ಮಾಡಿಸಿ ಉಪನಯನ ಮಾಡಬೇಕು.

ಬ್ರಾಹ್ಮಣರು ಕಟಿಸೂತ್ರಕ್ಕಾಗಿ ಮೆದೆಹುಲ್ಲಿನ ಹುರಿಯನ್ನೂ, ಕ್ಷತ್ರಿಯರು ಬಿಲ್ಲಿನ ದಾರ ವೈಶ್ಯರು ಉಣ್ಣೆಯ ದಾರ ಉಪಯೋಗಿಸಬೇಕು. ಇದರಂತೆ ಜಿಂಕೆಯ ಚರ್ಮವನ್ನು ಮೊದಲನೆಯವರು, ಎರಡನೆಯವನು ಕೃಷ್ಣಸಾರ ಮೃಗದ ಚರ್ಮ, ವೈಶ್ಯರು ಆಡಿನ ಚರ್ಮವನ್ನು ಯಜ್ಞೋಪವೀತಕ್ಕೆ ಸೇರಿಸಿ, ಧರಿಸಬೇಕು. ಇದರಂತೆ ಬ್ರಾಹ್ಮಣನಿಗೆ ಕೂದಲವರೆಗೆ ಉದ್ದವಾಗಿದ್ದ ಮುತ್ತುಗದ ದಂಡ, ಕಾವೀವಸ್ತ್ರವನ್ನೂ, ಕ್ಷತ್ರಿಯನು ಹಣೆಯವರೆಗೆ ಉದ್ದವಿರುವ ಅತ್ತಿಯ ದಂಡವನ್ನೂ, ಹುರುಮಂಡನ ವಸ್ತ್ರವನ್ನೂ, ವೈಶ್ಯನು ಮೂಗಿನ ತುದಿಯವರೆಗೆ ಉದ್ದವಿರುವ ಬಿಲ್ವದಂಡವನ್ನೂ, ಹಳದಿ ಬಣ್ಣದ ವಸ್ತ್ರವನ್ನೂ, ಉಪನಯನ ಕಾಲದಲ್ಲಿ ಧರಿಸಲೇಬೇಕು. ಹೀಗೆ ಮುಂಜಿ ಆದ ಬಳಿಕ ತನ್ನ ಅಧ್ಯಯನ ಮುಗಿಯುವವರೆಗೆ ಗುರುಕುಲದಲ್ಲಿ ವಾಸಮಾಡಬೇಕು. ಪ್ರತಿದಿನ ಬೆಳಿಗ್ಗೆ ಸ್ನಾನಮಾಡಿ,

ಗುರುಗಳ ಪೂಜೆಗೆ ಸಮಿಧೆ, ಧರ್ಬೆ, ಹೂವು, ಹಣ್ಣು, ಗೆಡ್ಡೆ ಗೆಣಸು ಮುಂತಾದವುಗಳನ್ನು ತಂದುಕೊಡಬೇಕು. ಜನಿವಾರ, ಕೃಷ್ಣಾಜಿನ, ದಂಡ ಇವು ಜೀರ್ಣ ವಾದಾಗ ಬೇರೆ ಯಜ್ಞೋಪವೀತಾದಿಗಳನ್ನೂ ಮಂತ್ರಪೂರ್ವಕ ಧರಿಸಿ, ಹಳೆಯದನ್ನು ನೀರಿನಲ್ಲಿ ಹಾಕಬೇಕು. ಬ್ರಹ್ಮಚಾರಿಯು ಭಿಕ್ಷಾನ್ನದಿಂದ ಜೀವಿಸಬೇಕು. ಭಿಕ್ಷೆ ಬೇಡುವಾಗ ಬ್ರಾಹ್ಮಣನು 'ಭವಾನ್ ಭಿಕ್ಷಾಂ ದದಾತು ಎಂದು ಕ್ಷತ್ರಿಯನು "ಭಿಕ್ಷಾಂ ಭವಾನ್ ದದಾತು" ಎಂದೂ ವೈಶ್ಯನು 'ಭಿಕ್ಷಾಂ ದದಾತು ಭವಾನ್ ಎಂದು ಶಬ್ದ ಉಚ್ಚರಿಸಿ, ಭಿಕ್ಷೆ ಹಾಕಿಸಿಕೊಳ್ಳಬೇಕು.

ಬ್ರಹ್ಮಚಾರಿಯು ಜಿತೇಂದ್ರಿಯನಾಗಿ ಸಂಜೆ, ಮುಂಜಾವುಗಳಲ್ಲಿ ಸಂಧ್ಯಾವಂದನೆ ಅಗ್ನಿಕಾರ್ಯ, ಬ್ರಹ್ಮಯಜ್ಞ, ತರ್ಪಣ, ದೇವಪೂಜೆ, ಗುರುಸೇವೆಗಳನ್ನು ಅವಶ್ಯ ಮಾಡಬೇಕು. ಸದಾಚಾರ ಸಂಪನ್ನರಾದವರ ಮನೆಗಳಲ್ಲಿ ಭಿಕ್ಷೆ ಬೇಡಿ ತಂದು, ಗುರುಗಳಿಗೆ ನಿವೇದಿಸಿ, ಅವರ ಅಪ್ಪಣೆ ಪಡೆದು, ತಾನು ಭೋಜನ ಮಾಡಬೇಕು. ಬ್ರಹ್ಮಚಾರಿಯು ಜೇನುತುಪ್ಪ, ಹಣ್ಣು, ಮಾಂಸ, ತಾಂಬೂಲ, ಉಪ್ಪು ಎಂಜಲು, ಹಗಲು ನಿದ್ದೆ, ಚಪ್ಪಲಿ, ಗಂಧ, ಹಾರ ಮುಡಿಯುವದು, ಜಲಕ್ರೀಡೆ ನರ್ತನ, ಗಾಯನ, ವಾದ್ಯ, ಪರನಿಂದೆ, ಹಿರಿಯರಿಗೆ ವಿರುದ್ಧ ಮಾತು, ಕಾಡಿಗೆ, ಪಾಖಂಡಿಗಳ ಸಹವಾಸ ಮುಂತಾದವುಗಳನ್ನೆಲ್ಲ ತ್ಯಜಿಸಬೇಕು. ಜ್ಞಾನವೃದ್ಧ, ತಪೋವೃದ್ಧ, ವಯೋವೃದ್ಧ ಗುರು ಮುಂತಾದವರಿಗೂ ತಂದೆ, ತಾಯಿ ಮೊದಲಾದ ಹಿರಿಯರಿಗೂ, ತ್ರಿಕಾಲದಲ್ಲಿ ನಮಸ್ಕರಿಸಬೇಕು.

ಇವರಲ್ಲಿಯೂ ವೇದ ಶಾಸ್ತ್ರಗಳನ್ನು ಉಪದೇಶಿಸುವ ಗುರುವಿಗೆ 'ಅಹಂ ಭೋ ಅಭಿವಾದಯೇ' ಎಂದು ಹೇಳಿ ನಮಸ್ಕರಿಸಬೇಕು. ಪಾಖಂಡಿ ಪತಿತ, ವ್ರಾತ್ಯ, ಜೋಯಿಸ, ನಾಸ್ತಿಕ, ಗ್ರಾಮಪುರೋಹಿತ, ಕಳ್ಳ, ಮೋಸಗಾರ, ಉನ್ಮತ್ತ, ದುಷ್ಟ, ಧೂರ್ತ, ಓಡುವವ, ಅಶುಚಿ, ಅಭ್ಯಂಗ ಸ್ನಾನ ಮಾಡುವವ, ಜಗಳಗಂಟ, ವಾಂತಿ ಮಾಡಿಕೊಳ್ಳುವವ, ಜಪ ಮಾಡುವವ, ನೀರಿನ ನಡುವೆ ನಿಂತವ, ಮಲಗಿದವ, ಭಿಕ್ಷಾನ್ನ ಕೈಯಲ್ಲಿ ಹಿಡಿದವ, ಇಂತಹವರಿಗೆ ನಮಸ್ಕಾರ ಮಾಡಬಾರದು. ಪರಮ ಪತಿವ್ರತೆಯರನ್ನೂ, ಮುತ್ತೈದೆಯರನ್ನೂ ಭಕ್ತಿಯಿಂದ ವಂದಿಸಬೇಕು. ಆದರೆ ಗಂಡನನ್ನು ಕೊಂದವಳು, ಮುಟ್ಟಾದವಳು, ವ್ಯಭಿಚಾರಿಣಿ, ಬಾಣಂತಿ, ಗರ್ಭನಾಶಪಡಿಸಿದವಳು, ಉಪಕಾರ ಮರೆತಿರುವವಳು, ಹಟಮಾಡುವವಳು, ವಂಧ್ಯಳಲ್ಲ, ಇವರಿಗೆ ನಮಸ್ಕರಿಸಬಾರದು.

**ಅಸಭಾಯಾಂ ಯಜ್ಞಶಾಲಾಯಾಂ ದೇವತಾಯತನೇಷ್ವಪಿ ॥**
**ಪ್ರತ್ಯೇಕಂ ತು ನಮಸ್ಕಾರಃ ಹಂತಿ ಪುಣ್ಯಂ ಪುರಾಕೃತಂ ॥**

ಸಭೆ. ಯಜ್ಞಶಾಲೆ, ದೇವಾಲಯ ಮುಂತಾದವುಗಳಲ್ಲಿ ಬಹು ಜನರು ನೆರೆದಾಗ ಹಿರಿಯರಾಗಿದ್ದರೂ ಪ್ರತ್ಯೇಕವಾಗಿ ಒಬ್ಬರಿಗೆ ನಮಸ್ಕಾರ ಮಾಡಬಾರದು, ಮತ್ತು ಶ್ರಾದ್ಧ, ವ್ರತ, ದಾನ ದೇವಪೂಜೆ, ಯಜ್ಞತರ್ಪಣ ಇವುಗಳನ್ನು ಮಾಡುತ್ತಿರುವವರಿಗೆ ನಮಸ್ಕಾರ ಮಾಡಬಾರದು ಎಂದು ಕೆಳಗಿನ ಪ್ರಮಾಣ ವಚನದಲ್ಲಿ ಹೇಳಲಾಗಿದೆ.

**'ಶ್ರಾದ್ಧಂ ವ್ರತಂ ತಥಾ ದಾನಂ ದೇವತಾಭ್ಯರ್ಚನಂ ತಥಾ ॥**
**ಯಜ್ಞಂಚ ತರ್ಪಣಂ ಚೈವ ಕುರ್ವತಂ ನಾಭಿವಾದಯೇತ್'**

ಇನ್ನೊಂದು ಪ್ರಮಾಣ ವಚನದಲ್ಲಿ ನಮಸ್ಕಾರಕ್ಕೆ ಪ್ರತಿನಮಸ್ಕಾರ ಮಾಡದವನಿಗೂ ವಂದನೆ ಮಾಡಬಾರದು ಎಂದು ಹೇಳಿದ್ದಾರೆ.

**ಕೃತೇಭಿವಾದನೇ ಯಸ್ತು ನ ಕುರ್ಯಾತ್ ಪ್ರತಿವಾದನಂ**
**ನಾಭಿವಾದ್ಯಃ ಸ ವಿಜ್ಞೇಯಃ ಯಥಾ ಶೂದ್ರಸ್ತಥೈವ ಸಃ ॥**

ನಮಸ್ಕಾರ ಮಾಡಿದಾಗ ತಿರುಗಿ ಪ್ರತಿ ನಮಸ್ಕಾರ ಮಾಡದಿದ್ದವನಿಗೆ ಎಂದೂ ನಮಸ್ಕಾರ ಮಾಡಬಾರದು. ಅವನನ್ನು ಶೂದ್ರನೆಂದೇ ತಿಳಿಯಬೇಕು. ಬುದ್ಧಿವಂತನಾದ ವಿದ್ಯಾರ್ಥಿಯು ಪ್ರತಿದಿನ ಪಾಠವನ್ನು ಓದುವಾಗ ಮೊದಲು ಆಚಮನ ಮಾಡಿ, ಗುರುಗಳ ಕಾಲು ತೊಳೆದು, ಅನಂತರ ಮತ್ತೊಮ್ಮೆ ಆಚಮನ ಮಾಡಿ, ಅವರಿಗೆ ಅಭಿಮುಖವಾಗಿ ಕುಳಿತುಕೊಂಡು, ಪಾದಕ್ಕೆ ನಮಸ್ಕರಿಸಿ ಅಧ್ಯಯನ ಆರಂಭಿಸಬೇಕು. ಅನಾಧ್ಯಾಯ ದಿನಗಳಂದು ಪಾಠ ಓದಬಾರದು. ಚತುರ್ದಶಿ, ಅಮಾವಾಸ್ಯೆ, ಹುಣ್ಣಿಮೆ ಪಾಡ್ಯ ಮಹಾಭರಣಿ, ಅಷ್ಟಮೀತಿಥಿ, ಭಾದ್ರಪದ ಕೃಷ್ಣಪಕ್ಷ ದ್ವಿತೀಯಾ, ಮಾಘ ಶುದ್ಧ ಸಪ್ತಮಿ ಮುಂತಾದ ದಿನಗಳು ಅನಾಧ್ಯಾಯನ ದಿನಗಳು. ಅಂದು ಅಧ್ಯಯನವಿಲ್ಲ.

ಇದರಂತೆ ಸೂರ್ಯನಿಗೆ ಕೆರೆಕಟ್ಟಿದ ದಿನ, ದೊಡ್ಡವರು ಮನೆಗೆ ಬಂದ ದಿನ. ಮನೆಯಲ್ಲಿ ಕಲಹವಾದಾಗ, ಸಂಧ್ಯಾಕಾಲದಲ್ಲಿ ಅಕಾಲವೃಷ್ಟಿಯಲ್ಲಿ, ಉರಿಯುವ ಕೊಳ್ಳಿ ಕಲ್ಲು ಬೀಳತೊಡಗಿದಾಗ, ನಾಲ್ಕು ಯುಗಾದಿ, ಮನ್ವಾದಿ, ದಿನಗಳಲ್ಲಿ ತಾವು ಮಾಡಿದ ಕರ್ಮಕ್ಕೆ ಫಲ ಬರಬೇಕು ಎಂದು ಅಪೇಕ್ಷಿಸುವ ದ್ವಿಜನು ಅಧ್ಯಯನ ಮಾಡಬಾರದು. ನಾಲ್ಕು ಯುಗಾದಿ ಯಾವವು ಎಂದರೆ ವೈಶಾಖ ಶುದ್ಧ ತದಿಗಿ, ಭಾದ್ರಪದ ಕೃಷ್ಣ ತ್ರಯೋದಶಿ, ಕಾರ್ತಿಕ ಶುದ್ಧ ನವಮಿ, ಮಾಘ ಪೂರ್ಣಿಮಾ ಈ ನಾಲ್ಕು ದಿನಗಳು ಯುಗಾದಿ ಎನಿಸಲ್ಪಡುತ್ತವೆ. ಈ ಯುಗಾದಿಯಲ್ಲಿ ಮಾಡಿದ ಕರ್ಮ ಅನಂತ ಫಲಪ್ರದ. ಮನ್ವಾದಿಗಳನ್ನು ಹೇಳುತ್ತೇನೆ- ಅಶ್ವೀನ ಶುಕ್ಲ ನವಮಿ, ಕಾರ್ತೀಕ ಶುದ್ಧ ದ್ವಾದಶಿ, ಚೈತ್ರ ಶುದ್ಧ ತೃತೀಯಾ, ಭಾದ್ರಪದ ಶುದ್ಧ ತೃತೀಯಾ, ಆಷಾಢ ಶುಕ್ಲ ದಶಮಿ, ಮಾಘ ಶುದ್ಧ ಸಪ್ತಮಿ, ಶ್ರಾವಣ ಕೃಷ್ಣ ಅಷ್ಟಮಿ, ಆಷಾಢ ಹುಣ್ಣಿಮೆ, ಫಾಲ್ಗುಣ ಅಮಾವಾಸ್ಯೆ, ಪುಷ್ಯ ಶುದ್ಧ ಏಕಾದಶಿ, ಕಾರ್ತೀಕ, ಫಾಲ್ಗುಣ, ಚೈತ್ರ, ಜೇಷ್ಠ ಮಾಸಗಳು, ಪೂರ್ಣಿಮೆಗಳು ಈ ಹದಿನಾಲ್ಕು ಮನ್ವಾದಿಗಳೆಂದು ಹೇಳಲ್ಪಟ್ಟಿವೆ. ಈ ದಿನಗಳಲ್ಲಿ ಅಧ್ಯಯನ ಮಾಡಿದರೆ ಜ್ಞಾನ, ಕೀರ್ತಿ, ಸಂತತಿ, ಐಶ್ವರ್ಯ, ಆಯುಷ್ಯ, ಶಕ್ತಿ, ಆರೋಗ್ಯ ಮುಂತಾದವುಗಳು ನಾಶ ಹೊಂದುವವು. ವೇದಾಧ್ಯಯನ ಮಾಡದ ಬ್ರಾಹ್ಮಣನು, ಸದಾಚಾರ ಸತ್ಕರ್ಮ ಮಾಡಿದರೂ ಅವನಿಗೆ ಫಲ ಬರುವದಿಲ್ಲ. ವೇದ ಓದದ ವಿಪ್ರನ ಎಲ್ಲ ಕರ್ಮಗಳೂ ವ್ಯರ್ಥ.

**ಅನಧೀತಸ್ಯ ವಿಪ್ರಸ್ಯ ಸರ್ವಂ ಭವತಿ ನಿಷ್ಫಲಂ ॥**
**ಶಬ್ದಬ್ರಹ್ಮಮಯೋ ವಿಷ್ಣುರ್ವೇದಃ ಸಾಕ್ಷಾದ್ಧರಿಃ ಸ್ಮೃತಃ**
**ವೇದಾಧ್ಯಾಯೀ ತತೋ ವಿಪ್ರಃ ಸರ್ವಾನ್ಕಾಮಾನವಾಪ್ನುಯಾತ್ ॥**

ವಿಷ್ಣುವು ಸಕಲ ಶಬ್ದವಾಚ್ಯನಾಗಿರುವದರಿಂದ ಅನಂತಗುಣ ಪರಿಪೂರ್ಣನು. ವೇದವು ಪರಮ ಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತದೆಯಾದ ಕಾರಣ ಹರಿ ಎಂದು ಉಕ್ತವಾಗಿದೆ. ಆದುದರಿಂದ ವೇದಾಧ್ಯಯನ ಮಾಡಿದ ಮನುಷ್ಯನು ಸಕಲೇಷ್ಟಾರ್ಥಗಳನ್ನು ಹೊಂದುವನು.

ನಾರದ ಮಹಾಪುರಾಣದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿದುದು

—೦—

**ಸನಕ:-** ಬ್ರಹ್ಮಚಾರಿಯು ವೇದಾಧ್ಯಯನವಾಗುವವರೆಗೆ ಗುರುಕುಲದಲ್ಲಿ ಇರಬೇಕು. ಗುರುಗಳ ಸೇವೆ ಮಾಡಬೇಕು. ಅಧ್ಯಯನವೆಲ್ಲವೂ ಪೂರ್ತಿ ಮುಗಿದ ಬಳಿಕ ಮದುವೆ ಮಾಡಿಕೊಳ್ಳಬೇಕು. ಅದನ್ನು ಕೂಡ ಗುರುಗಳ ಅಪ್ಪಣೆ ಪಡೆದು. ಗುರುಗಳಲ್ಲಿ ಓದಬೇಕಾದ ವಿದ್ಯೆ ಇಷ್ಟು: ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಗಳು ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು ಜೋತಿಷ್ಯ, ಆರು ವೇದಾಂಗಳು ಮತ್ತು ಮನುಸ್ಮೃತಿ, ಬ್ರಾಹ್ಮಣ ಆರಣ್ಯಕಗಳು, ಉಪನಿಷತ್ತು, ವೇದಾಂತ, ಗೃಹ್ಯಸೂತ್ರ, ಬ್ರಹ್ಮಸೂತ್ರ, ಪುರಾಣ ಮುಂತಾದ ಧರ್ಮಶಾಸ್ತ್ರ ಗ್ರಂಥಗಳು, ಇವುಗಳನ್ನೆಲ್ಲ ಓದಿ ಪಂಡಿತನಾಗಬೇಕು. ಗುರುದಕ್ಷಿಣೆ ಕೊಡಬೇಕು. ಅನಂತರ ವಿವಾಹ ಮಾಡಿಕೊಳ್ಳಬೇಕು. ವಿವಾಹ ಮಾಡಿಕೊಳ್ಳುವಾಗ ಒಳ್ಳೇ ಕನ್ಯೆಯನ್ನು ಮಾಡಿಕೊಳ್ಳಬೇಕು. ಲಾವಣ್ಯವತಿಯಾಗಿರಬೇಕು. ಗೃಹಣಿಯಲ್ಲಿರಬೇಕಾದ ಪಾತಿವ್ರತ್ಯ, ಗೃಹಕಾರ್ಯ ದಕ್ಷತೆ, ಪತಿಶುಶ್ರೂಷೆ, ವಿನಯ, ಮುಂತಾದ ಗುಣಗಳೆಲ್ಲವೂ ಇರಬೇಕು. ಒಳ್ಳೇ ಶೀಲ, ಧರ್ಮ, ಬುದ್ಧಿ ಇವೂ ಕೂಡ ಅವಶ್ಯವಾಗಿರಬೇಕಾದ ಗುಣಗಳು ಕೈ ಹಿಡಿಯುವ ಕನ್ಯೆಗೆ.

ತಾಯಿಯ ಸೋದರತ್ತೆ, ಅಜ್ಜಿಯ ತಂಗಿ, ಅವಳ ಮಕ್ಕಳು ಮುಂತಾದ ಮಾತೃ ಬಂಧು ವರ್ಗದಲ್ಲಿಯೂ, ತಂದೆಯ ಸೋದರತ್ತೆ, ತಂದೆಯ ಅಕ್ಕ-ತಂಗಿಯರು ಅವರ ಮಕ್ಕಳು ಮುಂತಾಗಿ ಪಿತೃ ಬಂಧು ವರ್ಗದಲ್ಲಿಯೂ ಐದು, ಏಳು ತಲೆಗಳನ್ನು ಬಿಟ್ಟು ಕನ್ನೆಯನ್ನು ಮದುವೆಯಾಗಬೇಕು. ಈ ಪಿತೃ ಮಾತೃ ಬಂಧುವರ್ಗದಲ್ಲಿ ವಿವಾಹವಾದರೆ ಗುರುಪತ್ನಿ ಗಮನಮಾಡಿದ ಪಾಪ ಬರುತ್ತದೆ. ಇನ್ನು ಎಂತಹ ಕನ್ಯೆಯನ್ನು ಮದುವೆಯಾಗಬಾರದು ಎಂಬುದನ್ನು ಹೇಳುತ್ತೇನೆ ಕೇಳು. ರೋಗಿಷ್ಠ, ಕೋಪಿಷ್ಠ, ಕೂದಲು ಇಲ್ಲದ, ಮೈತುಂಬ ಕೂದಲು ಇದ್ದ, ಅತಿ ಮಾತಾಡುವ ಅತಿ ಉದ್ದವಿರುವ, ವಿಕೃತ ರೂಪವುಳ್ಳ ಆವಯವ ಹೀನಳಾದ, ತಲೆ ಕೆಟ್ಟ, ಚಾಡಿಕೋರ, ಗಂಡಸರ ಆಕಾರ ಹೋಲುವ ಮೀಶೆ ಬಂದ, ಅತಿ ಗಿಡ್ಡವಾಗಿರುವ, ಸುಮ್ಮನೆ ನಗುವ, ಯಾವಾಗಲೂ ಹೆರವರ ಮನೆಯಲ್ಲಿಯೇ ಇರುವ, ವಾದಿಸುವ, ಭ್ರಾಂತಿಷ್ಠಳಾದ, ಮನ ಚುಚ್ಚುವ ಮಾತನಾಡುವ ಅತಿ ಭೋಜನ ಮಾಡುವ, ದೊಡ್ಡ ಹಲ್ಲಿನ ದಪ್ಪ ತುಟಿಯ ಗೊಗ್ಗರು ಧನಿಯ, ಅತಿಕೆಂಪು, ಅತಿಕಪ್ಪು, ಅತಿ ಬೆಳ್ಳಗಿರುವ, ವಂಚಕಿಯಾದ, ದೊಡ್ಡ ಮೂಗಿನ, ಗರ್ವಿಷ್ಠಳಾದ, ಯಾವಾಗಲೂ ಅಳುತ್ತಲಿರುವ, ದಮ್ಮು ಇರುವ, ಹಗಲಿರುಳು ಮಲಗುವ, ಪರರನಿಂದೆ ಮಾಡುವ, ಕದಿಯುವ ಸ್ವಭಾವದ, ಅನರ್ಥ ಮಾತನಾಡುವ, ಜನರನ್ನು ದ್ವೇಷಿಸುವ, ಶೀಲ ನಡತೆ ಇಲ್ಲದ, ಗುಣವಿಲ್ಲದ ಕನ್ಯೆಯನ್ನು ಮದುವೆಯಾಗಬಾರದು. ಮದುವೆಯ ನಂತರ ಗಂಡ ಮತ್ತು ಮಕ್ಕಳನ್ನು ಯಾವಾಗಲೂ ಬಿರುನುಡಿಗಳನ್ನಾಡಿ ನಿರ್ಭರ್ತ್ಸನೆ ಮಾಡುತ್ತ, ಪರರಿಗೆ ಅನುಕೂಲ ಮಾಡಿಕೊಡುತ್ತ ಮನೆಗೆ ಮಾರಿ, ಪರರಿಗೆ ಉಪಕಾರಿ ಎನ್ನುವಂತಿರುವ ನಾರಿಯನ್ನು ಮನೆಯಲ್ಲಿ ಇಟ್ಟುಕೊಳ್ಳ ಕೂಡದು. ಅಂತವರನ್ನು ಬಿಡಬೇಕು.

**ಭರ್ತೃಪುತ್ರೇಷು ಯಾ ನಾರೀ ಸರ್ವದಾ ನಿಷ್ಠುರಾ ಭವೇತ್ ।**
**ಪರಾನುಕೂಲಿನೀ ವಾ ಚ ಸರ್ವಥಾ ತಾಂ ಪರಿತ್ಯಜೇತ್ ॥**

ಮುನಿಪುಂಗವನೇ, ವಿವಾಹಗಳು ಎಂಟು ವಿಧ, ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ಇವುಗಳಲ್ಲಿ ಶ್ರೇಷ್ಠ ಕನಿಷ್ಠ ಭಾವವನ್ನು ಕ್ರಮಪ್ರಕಾರ ತಿಳಿದುಕೊಳ್ಳಬೇಕು. ಮೇಲಿನಿಂದ ಕೆಳಗಿನವರೆಗೆ. ದ್ವಿಜಶ್ರೇಷ್ಠರು ಬ್ರಾಹ್ಮವಿಧಿ ಅಥವಾ ದೈವವಿಧಿಯಿಂದ ವಿವಾಹ ಮಾಡಿಕೊಳ್ಳಬೇಕು. ಆರ್ಷ ವಿವಾಹ, ಗ್ರಾಹ್ಯವೆಂದು ಕೆಲವರ ಅಭಿಮತ. ಪ್ರಾಜಾಪತ್ಯ ಮುಂತಾದ ಕೊನೆಯ ಐದನೇಯ ಪಥಗಳು ಅಥವಾ ವಿಧಾನಗಳು - ಅವು ಅಗ್ರಾಹ್ಯ ಇವುಗಳಲ್ಲಿ ಮೊದಮೊದಲಿನ ವಿವಾಹಗಳು ಉತ್ತಮೋತ್ತಮ, ಉತ್ತಮ, ಮಧ್ಯಮ, ಅಧಮ, ಅಧಮಾಧಮ ಎಂದು ತಿಳಿದುಕೊಳ್ಳಬೇಕು.

ವಿವಾಹವಾದವನು ಎರಡು ಜನಿವಾರ, ಹೊದೆಯುವ ವಸ್ತ್ರ ಕಿವಿಯಲ್ಲಿ ಬಂಗಾರದ ಕಡಕು, ಜೋಡುಬಟ್ಟೆ ಹಾಕಿಕೊಳ್ಳಬೇಕು. ಮತ್ತು ಆಗಾಗ ಅಭ್ಯಂಜನ ಸ್ನಾನ, ಕಾಲಕಾಲಕ್ಕೆ ಕ್ಷೌರ,ಟೊಪ್ಪಿಗೆ ಅಥವಾ ರುಮಾಲು ಕೊಡೆ, ಚಪ್ಪಲಿ, ಹೂವು, ಸುಗಂಧ ದ್ರವ್ಯ ಮುಂತಾದವುಗಳನ್ನು ಧರಿಸಬೇಕು. ಪ್ರತಿದಿನ ಅಧ್ಯಯನ ಮಾಡಬೇಕು. ಪರಾನ್ನ, ಪರನಿಂದೆ, ಪರದ್ರೋಹಗಳನ್ನು ಬಿಡಬೇಕು. ಒಂದು ಕಾಲಿನಿಂದ ಇನ್ನೊಂದು ಕಾಲನ್ನು ಉಜ್ಜುವದು, ಉಸುಕು ದಾಟುವದು, ಎರಡೂ ಕೈಗಳಿಂದ ಒಮ್ಮೆಲೆ ತಲೆ ಕೆರೆಯುವದು, ಪರಸ್ತ್ರೀಗಮನ, ಚಾಡಿಹೇಳುವದು. ಹಗಲು ನಿದ್ದೆ, ಹೊಟ್ಟೆ ಕಿಚ್ಚು, ಆತ್ಮಪ್ರಶಂಸೆ, ದುರ್ಜನ ಸಹವಾಸ, ಇವುಗಳನ್ನು ಬಿಡಬೇಕು.

ದ್ವಿಜನಾದವನು ದೇವಸ್ಥಾನವನು ಅಪ್ರದಕ್ಷಿಣವಾಗಿ ಸುತ್ತಬಾರದು. ದೇವರ ಪೂಜೆ, ಆಚಮನ, ಸ್ನಾನ, ವ್ರತ, ಶ್ರಾದ್ಧ ಮುಂತಾದ ಪವಿತ್ರ ಕಾರ್ಯಗಳನ್ನು ಜುಟ್ಟು ಹರವಿಕೊಂಡು ಮಾಡಬಾರದು. ಜೂಟಾಟ, ಗ್ರಾಮ್ಯಗೀತ, ದುಷ್ಟರ ಸಹವಾಸ, ಪರರ ಪಾಪಗಳನ್ನು ಎಣಿಸುವದು, ತಾನು ಮಾಡಿದ ಒಳ್ಳೆಯ ಕೆಲಸ ಹೇಳಿಕೊಳ್ಳುವದು ಮುಂತಾದವುಗಳನ್ನು ಮಾಡಬಾರದು. ದಾರಿಯಲ್ಲಿ ಬಿದ್ದ ಎಂಜಲು, ಪತಿತ, ಹೆಣ, ವೈದ್ಯ, ಹೆಣದಚಟ್ಟು, ಹೆಣಸುಡುವ ಕಟ್ಟಿಗೆ, ಹಣತೆಗೆದುಕೊಂಡು ಪೂಜಿಸುವ ದೇವರ ಪೂಜಾರಿ ಮುಂತಾದವುಗಳನ್ನು ಮುಟ್ಟಿದರೆ ಬಟ್ಟೆ ಸಹಿತ ನೀರಲ್ಲಿ ಮುಳುಗಬೇಕು. ಇವಲ್ಲದೆ ಎಲ್ಲ ಜನರಿಗೂ ಸಾಮಾನ್ಯವಾದ ಕೆಲವು ವರ್ಜ್ಯ ವಿಷಯಗಳನ್ನು ಹೇಳುತ್ತೇನೆ

**ಶೂರ್ಪವಾತಂ ಪ್ರೇತಧೂಮಂ ತಥಾ ಶೂದ್ರಾನ್ನ ಭೋಜನಂ ।**
**ವೃಷಲೀಪತಿಸಂಗಂ ಚ ದೂರತಃ ಪರಿವರ್ಜಯೇತ್ ॥**

**ಅಸಚ್ಛಾಸ್ತ್ರಮನನಂ ಖಾದನಂ ನಖಕೇಶಯೋಃ : ।**
**ತಥೈವ ನಗ್ನಶಯನಂ ಸರ್ವದಾ ಪರಿವರ್ಜಯೇತ್ ॥**

**ಶಿರೋಽಭ್ಯಂಗಾವಶಿಷ್ಟೇನ ತೈಲೇನಾಂಗಂ ನ ಲೇಪಯೇತ್ ।**
**ತಾಂಬೂಲಮಶುಚಿರ್ನಾದ್ಯಾತ್ತಥಾ ಸುಪ್ತಂನ ಬೋಧಯೇತ್ ॥**

**ನ್ಯಾಶುದ್ಧೋಽಗ್ನಿಂ ಪರಿಚರೇತ್ಪೂಜಯೇದ್ಗುರು ದೇವತಾಃ ।**
**ನ ವಾಮಹಸ್ತೇನೈಕೇನ ಪಿಬೇದ್ವಕ್ತ್ರೇಣ ವಾ ಜಲಂ ॥**

**ನ ಚಾಕ್ರಮೇದ್ಗುರೋಶ್ಛಾಯಾ ತದಾಜ್ಞಾಂ ಚ ಮುನೀಶ್ವರ ।**
**ನ ನಿಂದೇದ್ಯೋಗಿನೋಽ ವಿಪ್ರಾನ್ ವ್ರತಿನೋಽಪಿ ಯತೀಂಸ್ತಥಾ ॥**

**ಪರಸ್ಪರಸ್ಯ ಮರ್ಮಾಣಿ ನ ಕದಾಪಿ ವದೇದ್ದ್ವಿಜಃ ।**
**ದರ್ಶೇ ಚ ಪೌರ್ಣಮಾಸ್ಯಾಂ ಚ ಯಾಗಂ ಕುರ್ಯಾದ್ಯಥಾ ವಿಧಿ ॥**

ಮೊರದಿಂದ ಬೀಸುವ ಗಾಳಿ, ಹೆಣಸುಟ್ಟ ಹೊಗೆ, ಶೂದ್ರರ ಅನ್ನ, ವ್ಯಭಿಚಾರಿಣಿಯ ಪತಿಯ ಸಹವಾಸ, ನಾಸ್ತಿಕ ಶಾಸ್ತ್ರಗಳ ಅಧ್ಯಯನ, ಉಗುರು, ಕೂದಲು ಕಡಿಯುವದು, ಬತ್ತಲೆ ಮಲಗುವದು, ತಲೆಗೆ ಹಚ್ಚಿ ಉಳಿದ ಎಣ್ಣೆಯನ್ನು ಮೈಗೆ ಲೇಪಿಸುವುದು, ಮೈಲಿಗೆ ಇದ್ದಾಗ ತಾಂಬೂಲ ಮೆಲ್ಲುವದು, ಮಲಗಿದವರನ್ನು ಎಬ್ಬಿಸುವದು, ಅಶುದ್ಧವಾಗಿ ಹೋಮ, ವೈಶ್ವದೇವ,ಅಗ್ನಿ ಕಾರ್ಯ ಮಾಡುವದು, ಸ್ನಾನ ಮಾಡದೇ ದೇವತೆಗಳ, ಗುರುಗಳ ಪೂಜೆ ಮಾಡುವದು, ಎಡಗೈಮಾತ್ರದಿಂದ ನೀರು ಕುಡಿಯುವದು, ನೀರಿಗೆ ಬಾಯಿ ಹಚ್ಚಿ ಕುಡಿಯುವದು, ಗುರುಗಳ ನೆರಳು ಹಾಗೂ ಆಜ್ಞೆ ಮೀರುವದು, ಜ್ಞಾನಿಗಳನ್ನು, ಯೋಗಿಗಳನ್ನು, ಸನ್ಯಾಸಿಗಳನ್ನು, ವ್ರತಾನುಷ್ಠಾನ ಮಾಡುವವರನ್ನು ನಿಲ್ಲಿಸುವದು. ಒಬ್ಬರಿಗೊಬ್ಬರ ಗುಟ್ಟನ್ನು ಬಯಲು ಮಾಡುವದು ಮುಂತಾದವುಗಳನ್ನು ಯಾರೂ ಮಾಡಬಾರದು. ದ್ವಿಜನಾದವನು ಸಾಯಂಕಾಲ, ಪ್ರಾತಃಕಾಲ ಔಪಾಸನೆ ಹಾಗೂ ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಯಾಗ, ಅಯನ, ಪರ್ವಕಾಲ, ಯುಗಾದಿ, ಅಮಾವಾಸ್ಯೆ, ಸಂಕ್ರಮಣ, ಭಾದ್ರಪದ ಕೃಷ್ಣಪಕ್ಷ, ಪಿತೃಗಳ ಮರಣದಿನ, ಅಷ್ಟಕಾತಿಥಿ, ಹೊಸದಾಗಿ ಮನೆಗೆ ಧಾನ್ಯ ಬಂದದಿನ, ಶ್ರೋತ್ರಿಯರು ಮನೆಗೆ ಆಗಮಿಸಿದ ದಿನ, ಪುಣ್ಯತೀರ್ಥ ಕ್ಷೇತ್ರಗಳಿಗೆ ಹೋದಾಗ ತಪ್ಪದೆ ಶ್ರಾದ್ಧ ಮಾಡಬೇಕು.

**ಯಜ್ಞೋ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ॥**
**ವೃಥಾ ಭವತಿ ತತ್ಸರ್ವಮೂರ್ಧ್ವಪುಂಡ್ರಂವಿನಾಕೃತಂ**

ಊರ್ಧ್ವಪುಂಡ್ರವನ್ನು ಧರಿಸದೆ ಮಾಡಿದ ಯಜ್ಞ, ದಾನ ತಪಸ್ಸು, ಹೋಮ, ವೇದಾಧ್ಯಯನ, ಪಿತೃತರ್ಪಣ ಇವೆಲ್ಲವೂ ವ್ಯರ್ಥವಾಗುತ್ತವೆ.

**ಸದಾಚಾರಪರಾ ಯೇ ತು ತೇಷಾಂ ವಿಷ್ಣುಃ ಪ್ರಸೀದತಿ ॥**
**ವಿಷ್ಣೌ ಪ್ರಸನ್ನತಾಂ ಯಾತೇ ಕಿಮಸಾಧ್ಯಂ ದ್ವಿಜೋತ್ತಮ ॥**

ದ್ವಿಜನೇ, ಸದಾಚಾರ ನಿರತರಾದವರಿಗೆ ವಿಷ್ಣುವು ಪ್ರಸನ್ನನಾಗುವನು. ವಿಷ್ಣುವಿನ ಪ್ರಸಾದ ದೊರೆತ ಬಳಿಕ ಯಾವದು ತಾನೇ ಅಸಾಧ್ಯವು ಈ ಲೋಕದಲ್ಲಿ? ಅರ್ಥಾತ್ ಅಂತಹವರಿಗೆ ಸಕಲ ಸಿದ್ಧಿಯೂ ದೊರೆಯುತ್ತದೆ.

ನಾರದ ಮಹಾಪುರಾಣದಲ್ಲಿ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು.

—o—

**ಸನಕ :-** ಗೃಹಸ್ಥರ ಸದಾಚಾರ ಹೇಳುತ್ತೇನೆ ಕೇಳು. ಬ್ರಾಹ್ಮೀ ಮುಹೂರ್ತದಲ್ಲಿ ಎಂದರೆ ಬೆಳಗಿನ ಜಾವದಲ್ಲಿ ಏಳಬೇಕು. ಧರ್ಮಾದಿ ಪುರುಷಾರ್ಥಗಳಿಗೆ ವಿರುದ್ಧವಾಗದಂತೆ ದ್ರವ್ಯವನ್ನು ಕುರಿತು ಚಿಂತಿಸಬೇಕು. ದ್ವಿಜನಾದವನು ಮಲಮೂತ್ರಗಳನ್ನು ಹಗಲು ಮತ್ತು ಸಂಜೆ ಉತ್ತರಾಭಿಮುಖವಾಗಿ ರಾತ್ರಿ ದಕ್ಷಿಣಾಭಿಮುಖವಾಗಿ ಕುಳಿತು ವಿಸರ್ಜನೆ ಮಾಡಬೇಕು. ಕಿವಿಗೆ ಜನಿವಾರ ಸುತ್ತಬೇಕು. ಮಲಮೂತ್ರ ವಿಸರ್ಜನೆ ಮಾಡಿದ ಸ್ಥಳವನ್ನು ಮಣ್ಣು, ಹುಲ್ಲಿನಿಂದ ಮುಚ್ಚಬೇಕು. ಆ ಕಾಲದಲ್ಲಿ ಮಾತನಾಡಬಾರದು. ಕೆರೆ ಬಾವಿಗಳ ದಂಡೆಗಳ ಮೇಲೆ, ಮನೆ ಹಾಗೂ ದೇವಾಲಯ, ತೋಟ, ಬಿತ್ತಿದ ಹೊಲ,ಓಡಾಡುವ ದಾರಿ. ಸ್ತ್ರೀಯರು ಇರುವ ಸ್ಥಳದ ಸಮೀಪದಲ್ಲಿ ಮತ್ತು ನೀರಿನಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು. ಈ ದೈಹಿಕ ಆವಶ್ಯಕತೆ ಪೂರೈಸಿದ ಬಳಿಕ ತನ್ನ ಅಂಗಾಂಗಗಳನ್ನು ಶಾಸ್ತ್ರೋಕ್ತವಾಗಿ ಶುದ್ಧೀಕರಿಸಬೇಕು. ಶುದ್ಧಿಕ್ರಿಯೆ ಇಲ್ಲದವನು ಮಾಡಿದ ಎಲ್ಲ ಪುಣ್ಯ ಕರ್ಮಫಲಗಳು ನಿಷ್ಫಲವಾಗುತ್ತವೆ.

**ಶೌಚೇ ಯತ್ನ: ಸದಾ ಕಾರ್ಯ: ಶೌಚಮೂಲೋ ದ್ವಿಜಃ ಸ್ಮೃತಃ**
**ಶೌಚಾಚಾರ ವಿಹೀನಸ್ಯ ಸಮಸ್ತಂಕರ್ಮ ನಿಷ್ಫಲಂ ॥**

ಶೌಚ ಎಂದರೆ ನಿರ್ಮಲತೆ ಶುಚಿತ್ವ. ಈ ಶುಚಿತ್ವಕ್ಕಾಗಿ ಯಾವಾಗಲೂ ಪ್ರಯತ್ನ ಮಾಡುತ್ತಿರಬೇಕು. ದ್ವಿಜನಿಗೆ ಶುಚಿತೆಯೇ ಮುಖ್ಯ. ಶೌಚ ಸದಾಚಾರಗಳಿಲ್ಲದ ಮನುಷ್ಯನು ಮಾಡಿದ್ದೆಲ್ಲವೂ ವ್ಯರ್ಥ. ಈ ಶೌಚವು ಬಾಹ್ಯ, ಆಂತರಿಕ ಎಂದು ಎರಡು ವಿಧ. ಎಂದರೆ ಬಹಿರಂಗ ಶುದ್ಧಿ, ಹಾಗೂ ಅಂತರಂಗ ಶುದ್ಧಿ ಎಂದರ್ಥ. ಮಣ್ಣು, ನೀರುಗಳಿಂದ ಬಹಿರಂಗ ಶುದ್ಧಿ ಆಗುವದು. ಅಂತರಂಗ ಶುದ್ಧಿಯು ಒಳ್ಳೇ ವಿಚಾರ ಹಾಗೂ ಸದ್ಭಾವನೆಗಳಿಂದ ಆಗುವದು. ಈಗ ಬಹಿರಂಗ ಶುದ್ಧಿಯನ್ನು ಹೇಳುತ್ತೇನೆ. ಮಲಮೂತ್ರ ವಿಸರ್ಜನಾನಂತರ ಆ ಇಂದ್ರಿಯಗಳನ್ನು ಮಣ್ಣು, ನೀರುಗಳಿಂದ ಶುದ್ಧೀಕರಿಸಬೇಕು. ಇದಕ್ಕಾಗಿ ಮಣ್ಣನ್ನೂ ಕೂಡ ಒಳ್ಳೆಯದನ್ನು ಉಪಯೋಗಿಸಬೇಕು. ಮಲವಿಸರ್ಜನ ಆದ ಬಳಿಕ ಪೃಷ್ಠ ಭಾಗದಲ್ಲಿ ಹತ್ತು ಸಲ, ಗುದಕ್ಕೆ ಐದು ಸಲ, ಜನನೇಂದ್ರಿಯಕ್ಕೆ ಒಂದು ಸಲ ಮಣ್ಣು ಹಚ್ಚಿ ತೊಳೆಯಬೇಕು. ಎರಡೂ ಕಾಲುಗಳಿಗೆ ಮೂರು ಸಲ ಮಣ್ಣು ಹಚ್ಚಿ ತೊಳೆಯಬೇಕು.

ಮೂತ್ರ ವಿಸರ್ಜನೆ ಮಾಡಿದಾಗ, ಅಂಡ ಮತ್ತು ಇಂದ್ರಿಯಗಳನ್ನು ಮಣ್ಣಿನಿಂದ ಒಂದು ಸಲ ಅಥವಾ ನೀರಿನಿಂದ ಮೂರು ಸಲ ತೊಳೆಯಬೇಕು. ಇದು ಗೃಹಸ್ಥರಿಗೆ ಹೇಳಿದ ಶೌಚವಿಧಿ. ಇದರ ಎರಡು ಪಟ್ಟು ಬ್ರಹ್ಮಚಾರಿಗಳು, ನಾಲ್ಕು ಪಟ್ಟು ಸನ್ಯಾಸಿಗಳು ಶುದ್ಧಿ ಮಾಡಿಕೊಳ್ಳಬೇಕು. ಪ್ರವಾಸದಲ್ಲಿದ್ದಾಗ ಮೇಲೆ ಹೇಳಿದ ಅರ್ಧಭಾಗ ಶುದ್ಧಿ ಮಾಡಬಹುದು. ಆದರಂತೆ ರೋಗಿ, ಆಪತ್ಕಾಲ, ಮುಂಜಿವೆಯಾದ ಹುಡುಗರು, ಸ್ತ್ರೀಯರು ದುರ್ಗಂಧ ಹೋಗುವವರೆಗೂ ಆ ವಿಸರ್ಜನ ವಿಭಾಗವನ್ನು ತೊಳೆದುಕೊಳ್ಳಬೇಕು. ಇವರಿಗೆ ಇಂತಿಷ್ಟೇ ಸಲ ಮಾಡಬೇಕೆಂಬ ನಿಯಮವಿಲ್ಲ. ವ್ರತ ಹಿಡಿದವರು, ವಿಧವೆಯರು, ಗೃಹಸ್ಥರಿಗೆ ಹೇಳಿದ ನಾಲ್ಕು ಪಟ್ಟು ಮಾಡಬೇಕು. ಹೀಗೆ ಶೌಚ ವಿಧಿಯನ್ನು ಮುಗಿಸಿ

ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖ ಮಾಡಿ ಆಚಮನ ಮಾಡಬೇಕು. ಅನಂತರ ಬಿಲ್ವ ಉತ್ತರಣೆ, ಬೇವು ಮುಂತಾದ ಗಿಡಗಳ ಕಡ್ಡಿ ತೆಗೆದುಕೊಂಡು, ನೀರಿನಿಂದ ತೊಳೆದು -

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ವಂಶಂ ವಸೂನಿ ಚ ।**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥**

"ಆಯುಷ್ಯ, ಬಲ, ಕೀರ್ತಿ ತೇಜಸ್ಸು,ಮಕ್ಕಳು, ಪಶು, ದ್ರವ್ಯ, ಬ್ರಹ್ಮಜ್ಞಾನ, ಬುದ್ಧಿಮತ್ತೆ ಮುಂತಾದವುಗಳನ್ನು ವನಸ್ಪತಿಯೇ ನನಗೆ ಕೊಡು" ಎಂಬ ಮಂತ್ರ ಹೇಳಿ, ಅಭಿಮಂತ್ರಿಸಿ, ಹಲ್ಲಿನಿಂದ ಅದನ್ನು ಅಗೆದು ಮೆತ್ತಗೆ ಮಾಡಿಕೊಂಡು ಹಲ್ಲುಜ್ಜಿ ಕೊಳ್ಳಬೇಕು. ಬ್ರಾಹ್ಮಣನು ತನ್ನ ಕಿರುಬೆರಳಿನಷ್ಟು ದಪ್ಪ, ಹತ್ತು ಬೆರಳು ಉದ್ದ, ಕ್ಷತ್ರಿಯನು ಒಂಭತ್ತು, ವೈಶ್ಯನು ಎಂಟು ಅಂಗುಲ, ಶೂದ್ರ ನಾಲ್ಕು ಅಂಗುಲಕಡ್ಡಿಗಳಿಂದ ಉಜ್ಜಬೇಕು. ಇದರಂತೆ ಹೆಂಗಸರು ಕೂಡ ದಂತಕಾಷ್ಠದಿಂದ ಹಲ್ಲುಗಳನ್ನು ತಿಕ್ಕಬೇಕು. ಮೇಲೆ ಹೇಳಿದ ಮರಗಳ ಕಡ್ಡಿಗಳು ಸಿಗದಿದ್ದರೆ ಕೈಯಿಂದಲೇ ತಿಕ್ಕಿ, ಹನ್ನೆರಡು ಸಲ ಬಾಯಿ ಮುಕ್ಕಳಿಸಿ ಹಲ್ಲು ಸ್ವಚ್ಛ ಮಾಡಿಕೊಳ್ಳಬೇಕು. ಕೈಯಿಂದ ಹಲ್ಲನ್ನು ತಿಕ್ಕುವದೆಂದರೆ ಎಲೆಗಳನ್ನು ಕೈಯಲ್ಲಿ ಹಿಡಿದು ಎಡದಿಂದ ಬಲಕ್ಕೆ ತಿಕ್ಕಬೇಕು. ಅನಂತರ ಆ ಎಲೆಯನ್ನು ತೊಳೆದು ಸೀಳಿ, ಅದರ ದಳಗಳಿಂದ ನಾಲಿಗೆಯನ್ನು ತಿಕ್ಕಬೇಕು. ಅನಂತರ ಮತ್ತೆ ಆಚಮನ ಮಾಡಿ ನದಿ ಮುಂತಾದ ಸ್ವಚ್ಛ ನೀರಿನಲ್ಲಿ ಸ್ನಾನ ಮಾಡಬೇಕು. ಸ್ನಾನ ಮಾಡುವ ಮುನ್ನ ತಾನು ಇಳಿದ ನದಿಯ ತೀರವನ್ನು ತೊಳೆದು ಅದರ ಮೇಲೆ ದರ್ಭೆ ಇರಿಸಿ ಸ್ನಾನಕ್ಕೆ ಇಳಿಯಬೇಕು. ತೀರ್ಥಾಭಿಮಾನಿ ದೇವತೆಗಳನ್ನು ನಮಸ್ಕರಿಸಿ, ಗಂಧಾದಿಗಳಿಂದ ಮಂಡಲ ಮಾಡಿ, ಅಲ್ಲಿ ಸೂರ್ಯ ಮಂಡಲ ಮಧ್ಯವರ್ತಿ ನಾರಾಯಣನನ್ನು ಧ್ಯಾನಿಸಿ ಸ್ನಾನ ಮಾಡಬೇಕು. ಸ್ನಾನ ಮಾಡುವಾಗ ಪುಣ್ಯತೀರ್ಥ ಸ್ಮರಿಸಿ ಮಂತ್ರ ಹೇಳಬೇಕು.

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ।**
**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ ।**
**ಆಗಚ್ಛಂತು ಮಹಾಭಾಗಾಃ ಸ್ನಾನಕಾಲೇ ಸದಾ ಮಮ ।**
**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।**
**ಪುರೀ ದ್ವಾರಾವತೀ ಜ್ಞೇಯಾ ಸಪ್ತೈತಾ ಮೋಕ್ಷದಾಯಕಾಃ ॥**

ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಕಾವೇರಿ ನದಿಗಳಿರಾ, ಈ ನೀರಿನಲ್ಲಿ ನೀವೆಲ್ಲರೂ ಸನ್ನಿಹಿತರಾಗಿರಿ. ಪುಷ್ಕರ ಮೊದಲಾದ ತೀರ್ಥಗಳು ಗಂಗೆ ಮೊದಲಾದ ನದಿಗಳು ನನ್ನ ಸ್ನಾನ ಕಾಲದಲ್ಲಿ ಇಲ್ಲಿಗೆ ಬನ್ನಿರಿ, ಅಯೋಧ್ಯಾ, ಮಥುರಾ, ಮಾಯಾ ಕಾಶೀ, ಕುಂಚಿ, ಅವಂತಿ, ಜಗನ್ನಾಥಪುರಿ, ದ್ವಾರಕಾ ಇವು ಏಳು ಮೋಕ್ಷದಾಯಕ ಪುಣ್ಯಕ್ಷೇತ್ರಗಳು. ಇವುಗಳನ್ನು, ಸ್ನಾನ ಮಾಡುವಾಗ ನೆನೆಯಬೇಕು. ಅನಂತರ ಅಗ ಮರ್ಷಣಮಂತ್ರ ಜಪಿಸಿ ನೀರಿನಲ್ಲಿ ಮುಳುಗಿ, ಸ್ನಾನಾದಿ ತರ್ಪಣ ನೀಡಿ, ಆಚಮನಗೈದು ಸೂರ್ಯನಿಗೆ ಅರ್ಘ್ಯ ಕೊಡಬೇಕು. ನೀರಿನಿಂದ ಹೊರಗೆ ಬಂದು, ಸೂರ್ಯನನ್ನು ಧ್ಯಾನಿಸಿ, ಮಡಿಬಟ್ಟೆ ಉಟ್ಟು, ಮೇಲೊಂದು ಬಟ್ಟೆಹೊದ್ದು, ದರ್ಭಾಸನದಲ್ಲಿ ಕುಳಿತು, ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳನ್ನು ಪ್ರಾರಂಭಿಸಬೇಕು. ಸಂಧ್ಯಾವಂದನೆಯನ್ನು ಈಶಾನ್ಯದಿಕ್ಕಿಗೆ

ಅಭಿಮುಖವಾಗಿ ಕುಳಿತು, ಆಚಮನ ಮಾಡಿ, ಗಾಯತ್ರಿ ಮಂತ್ರದಿಂದ ಪ್ರಾಣಾಯಾಮ ಮಾಡಬೇಕು. ಅನಂತರ ನೀರನ್ನು ಅಭಿಮಂತ್ರಿಸಿ ಮತ್ತೆ ಆಚಮನ ಮಾಡಬೇಕು. ಅಮೇಲೆ ನೀರಿನಿಂದ ತನ್ನನ್ನು ಸುತ್ತಿಕೊಂಡು, ಆ ನೀರನ್ನು ಸುತ್ತಲೂ ಚೆಲ್ಲಿ (ಪ್ರದಕ್ಷಿಣ ಆಕಾರವಾಗಿ) ಗಾಯತ್ರಿ ಮಂತ್ರಜಪದ ಸಂಕಲ್ಪ ಮಾಡಬೇಕು. ಪ್ರಣವ ಮಂತ್ರ ಉಚ್ಚರಿಸಿ, ಋಷಿ, ಛಂದಸ್ಸು, ದೇವತೆಗಳನ್ನು, ನೆನೆದು, 'ಭೂಃ' ಇತ್ಯಾದಿ 'ವ್ಯಾಹೃತಿ' ಗಳಿಂದ ತಲೆಯನ್ನು ಪ್ರೋಕ್ಷಿಸಿ, ಮಂತ್ರ ಜಪ ಮಾಡುವವನು ಕೈ ಮತ್ತು ಇತರ ಅಂಗಗಳಲ್ಲಿ ಪ್ರತ್ಯೇಕ 'ನ್ಯಾಸ' ಮಾಡಬೇಕು. ಹೃದಯದೇಶದಲ್ಲಿ ಓಂಕಾರವನ್ನೂ, ಶಿರಸ್ಸಿನಲ್ಲಿ ಭೂಃ ಎಂಬ ವ್ಯಾಹೃತಿಯನ್ನೂ, ಭುವಃ ಎಂಬುದನ್ನು ಶಿಖೆಯಲ್ಲಿ, ಸ್ವಃ ಎಂಬುದನ್ನು ಎರಡು ಭುಜಗಳಲ್ಲಿ, 'ಭೂರ್ಭುವಃ' ಎಂಬುದನ್ನು ನೇತ್ರಗಳಲ್ಲಿ, 'ಭೂರ್ಭುವಃಸ್ವಃ' ಎಂಬುದನ್ನೂ, 'ಅಸ್ತ್ರಾಯ ಫಟ' ಎಂಬುದನ್ನು ದಿಕ್ಕುಗಳಲ್ಲಿ ನ್ಯಾಸ ಮಾಡಿ, ಮೂರು ಸಾರೆ ಚಪ್ಪಾಳೆ ಹೊಡೆಯಬೇಕು. ಮಂತ್ರಗಳನ್ನು ನ್ಯಾಸ ಮಾಡುವದೆಂದರೆ ಆಯಾ ಮಂತ್ರ ಹೇಳುತ್ತ ಆಯಾ ಸ್ಥಳಗಳನ್ನು ಮುಟ್ಟುವದು. ಅನಂತರ ಪ್ರಾತಃ ಕಾಲದಲ್ಲಿ ಕೆಂಪು ಕಮಲದಲ್ಲಿ ಸಂಧ್ಯಾದೇವಿಯನ್ನು

**ಆಗಚ್ಛ ವರದೇ ದೇವಿ ತ್ರ್ಯಕ್ಷರೇ ಬ್ರಹ್ಮವಾದಿನಿ**
**ಗಾಯತ್ರಿ ಛಂದಸಾಂ ಮಾತಃ ಬ್ರಹ್ಮಯೋನೇ ನಮೋಸ್ತು ತೇ ॥**

ಗಾಯತ್ರಿ ಎಂದು ಮೂರು ಅಕ್ಷರವುಳ್ಳ ಪರಬ್ರಹ್ಮವನ್ನು ಪ್ರತಿಪಾದಿಸುವ, ವರ ನೀಡುವ, ಬ್ರಹ್ಮದೇವರ ಯೋಗಕ್ಕೆ ಆಶ್ರಯವಾದ ಗಾಯತ್ರಿದೇವಿಯೇ, ನೀನು ಇಲ್ಲಿ ಸನ್ನಿಹಿತಳಾಗು. ನಿನಗೆ ನನ್ನ ನಮಸ್ಕಾರ, ಎಂದು ಪ್ರಾರ್ಥನೆ ಮಾಡಿ ಆಹ್ವಾನಿಸಬೇಕು. ಮಧ್ಯಾಹ್ನ ಕಾಲದಲ್ಲಿ ಸಾವಿತ್ರಿದೇವಿಯನ್ನೂ, ಸಾಯಂಕಾಲ ಸರಸ್ವತಿಯನ್ನೂ ಆಹ್ವಾನಿಸಿ ಧ್ಯಾನ ಮಾಡಬೇಕು. ಸಾಯಂಕಾಲದಲ್ಲಿ ಗರುಡನ ಮೇಲೆ ಕುಳಿತಿರುವ, ಪೀತಾಂಬರವನ್ನು, ಉಟ್ಟಿರುವ, ವಿಷ್ಣುಪಜೀವ್ಯಳೂ, ವಿಷ್ಣುವಾದಿನಿಯೂ ಆಗಿರುವ, ಸರಸ್ವತಿ ದೇವಿಯನ್ನು ಆಹ್ವಾನ ಮಾಡಬೇಕು.

ಓಂಕಾರ, ಏಳು, ವ್ಯಾಹೃತಿಗಳು, ಪಾದತ್ರಯಾತ್ಮಕವಾದ, ಗಾಯತ್ರಿ ಮಂತ್ರ ಇವುಗಳನ್ನು ಹೇಳುತ್ತಾ ತಲೆ, ಶಿಖೆ ಇವುಗಳನ್ನು ಮುಟ್ಟಿ, ಎಡಮೂಗಿನಿಂದ ವಾಯುವನ್ನು ತೆಗೆದುಕೊಂಡು ಮಧ್ಯಭಾಗದಲ್ಲಿ ನಿಲ್ಲಿಸಿ ಕುಂಭಕ ಮಾಡಿ, ಬಲಮೂಗಿನಿಂದ ವಿರೇಚನ ಎಂದರೆ ಹೊರಗೆ ಬಿಡಬೇಕು. ಹೀಗೆ ಕ್ರಮದಿಂದ ಪ್ರಾಣಾಯಾಮ ಮಾಡಿದ ಮೇಲೆ ಎರಡಾವರ್ತಿ ಆಚಮನ ಮಾಡಬೇಕು. ಅನಂತರ 'ಸೂರ್ಯಶ್ಚಮಾ' ಇತ್ಯಾದಿ ಮಂತ್ರದಿಂದ ಪ್ರಾತಃ ಕಾಲದಲ್ಲಿಯೂ, 'ಆಪಃ ಪುನಂತು' ಇತ್ಯಾದಿ ಮಂತ್ರದಿಂದ ಮಧ್ಯಾಹ್ನದಲ್ಲಿಯೂ, 'ಅಗ್ನಿಶ್ಚಮಾ' ಇತ್ಯಾದಿ ಮಂತ್ರದಿಂದ ಸಾಯಂಕಾಲದಲ್ಲಿಯೂ ನೀರನ್ನು ಅಭಿಮಂತ್ರಿಸಿ ಪ್ರಾಶನ ಮಾಡಬೇಕು. 'ಆಪೋಹಿಷ್ಠಾ' ಮುಂತಾದ ಮೂರು ದಿಕ್ಕುಗಳಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. 'ಸುಮಿತ್ರಿಯಾನ' ಇತ್ಯಾದಿ ಮಂತ್ರಗಳಿಂದ ಅಭಿನಂದಿಸಿ, ಮೂಗಿಗೆ ಸ್ಪರ್ಶ ಮಾಡಿದ ಉದಕದಿಂದ ಪಾಪ ಪುರುಷನನ್ನು ಹೊರಡಿಸಿ ಅವನ ತಲೆಯ ಮೇಲೆ ಆ ನೀರನ್ನು ಚೆಲ್ಲಬೇಕು. 'ಋತಂ ಚ ಸತ್ಯಂ' ಇತ್ಯಾದಿ ಮಂತ್ರದಿಂದ ಪಾಪಶಮನಮಾಡಿ 'ಅಂತಶ್ಚರಸಿ' ಎಂಬ ಮಂತ್ರದಿಂದ ಒಂದೇ ಸಾರಿ ನೀರು ಕುಡಿಯಬೇಕು.

ಅನಂತರ ವಿಹಿತ ರೀತಿಯಿಂದ ಸೂರ್ಯನಿಗೆ ಗಂಧ, ಪುಷ್ಪ ಮತ್ತು ಬೊಗಸೆಯಲ್ಲಿ ನೀರು ಇವುಗಳನ್ನು ಸಮರ್ಪಿಸಿ, ಪ್ರಾತಃಕಾಲದಲ್ಲಿ ಸ್ವಸ್ತಿಕಾಂಜಲಿಯಾಗಿ, ಮಧ್ಯಾಹ್ನದಲ್ಲಿ

ಬಾಹುಗಳನ್ನೆತ್ತಿಕೊಂಡು, ಸಾಯಂಕಾಲದಲ್ಲಿ ಬಾಹುಗಳನ್ನು ಕೆಳಗಿರಿಸಿ ಸೂರ್ಯೋಪಸ್ಥಾನ ಮಾಡಬೇಕು. 'ಉದುತ್ಯಂ' ಇತ್ಯಾದಿ ಮಂತ್ರ, 'ಚಿತ್ರಂ' ಇತ್ಯಾದಿ ಮಂತ್ರ, ಮತ್ತು ತಚ್ಚಕ್ಷುಃ' ಇತ್ಯಾದಿ ಮಂತ್ರ ಈ ಮೂರು ಮಂತ್ರಗಳನ್ನು ಉಪಸ್ಥಾನ ಕಾಲದಲ್ಲಿ ಜಪಿಸಬೇಕು. ನಾರದನೇ, ಸೂರ್ಯ, ರುದ್ರ, ವಿಷ್ಣುದೇವತಾ ಮಂತ್ರಗಳನ್ನೂ, ಇನ್ನೂ ಇತರ ಮಂತ್ರಗಳನ್ನು ಜಪಿಸಬೇಕು. ಸೂರ್ಯನ ತೇಜಸ್ಸನ್ನು 'ತೇಜೋಸಿ', 'ಗಾಯತ್ರ್ಯಸಿ' ಎಂಬುದಾಗಿ ಪ್ರಾರ್ಥಿಸಬೇಕು. ಅನಂತರ ಅಂಗಗಳನ್ನು ಸುತ್ತಿ, ಸೂರ್ಯಾದಿ ಶಕ್ತಿಗಳನ್ನು ಧ್ಯಾನಿಸಬೇಕು.

**ಬ್ರಹ್ಮಾಣೀ ಚತುರಾನನಾಽಕ್ಷವಲಯಂ ಕುಂಭಂ ಕರೈಃ ಸ್ರುಕ್ಸ್ರುವೌ**
**ಬಿಭ್ರಾಣಾ ತರುಣೇಂದು ಕಾಂತಿವದನಾ ಋಗ್ರೂಪಿಣೀ ಪಾಲಿಕಾ**
**ಹಂಸಾರೋಹಣಕೇಲಿ ಮಂಡಿತಮಣೇರ್ಬಿಂಬಾರ್ಚಿತಾ ಭೂಷಿತಾ ।**
**ಗಾಯತ್ರೀ ಪರಿಭಾವಿತಾ ಭವತು ನಃ ಸಂಪತ್ಸಮೃದ್ಧ್ಯೈ ಸದಾ ॥**

ಚತುರ್ಮುಖ ಬ್ರಹ್ಮನ ಪತ್ನಿಯು, ನಾಲ್ಕು ಮುಖಗಳುಳ್ಳವಳು, ಕಮಲಾಕ್ಷಮಣಿಯ ಸರ. ಕುಂಭ ಸ್ರುಕ್ ಮತ್ತು ಸ್ರುವ ಇವುಗಳನ್ನು ಹಸ್ತಗಳಲ್ಲಿ ಧರಿಸಿರುವವಳು, ಚಂದ್ರನಂತೆ ಕಾಂತಿಯುಕ್ತವಾದ ಮುಖವುಳ್ಳವಳು, ಋಗ್ವೇದಾಭಿಮಾನಿನಿಯು, ಬಾಲೆಯು, ಹಂಸ ವಾಹನವನ್ನು ಹತ್ತಿ ವಿಲಾಸದಿಂದ ಮಂಡಿಸಲ್ಪಟ್ಟ ಸೂರ್ಯಬಿಂಬದಿಂದ ಅರ್ಚಿತಳೂ, ಅಲಂಕೃತಳೂ, ಆದ ಗಾಯತ್ರೀದೇವಿಯು, ಧ್ಯಾನದಿಂದ ಪ್ರಸನ್ನಳಾಗಿ ಯಾವಾಗಲೂ ನನಗೆ ಸಂಪದಭಿವೃದ್ಧಿಯನ್ನು ಅನುಗ್ರಹಿಸಲಿ.

**ರುದ್ರಾಣೀ ನವಯೌವನಾ ತ್ರಿನಯನಾ ವೈಯಾಘ್ರಚರ್ಮಾಂಬರಾ ।**
**ಖಟ್ವಾಂಗ ತ್ರಿಶಿಖಾಕ್ಷ ಸೂತ್ರ ವಲಯಾಽಭೀತಿಃ ಶ್ರಿಯೈ ಚಾಸ್ತು ನಃ ।**
**ವಿದ್ಯುದ್ದಾಮಜಟಾಕಲಾಪವಿಲಸದ್ಬಾವೇಂದು ಮೌಲಿರ್ಮುದಾ ।**
**ಸಾವಿತ್ರೀ ವೃಷವಾಹನಾ ಸಿತತನುರ್ಧ್ಯೇಯಾ ಯಜೂರೂಪಿಣೀ ॥**

ರುದ್ರನ ಪತ್ನಿಯು, ನೂತನ ಯುವತಿಯು, ಮೂರು ನೇತ್ರಗಳುಳ್ಳವಳು, ಹುಲಿ ಚರ್ಮವನ್ನುಟ್ಟಿರುವಳು, ಯೋಗದಂಡ, ತ್ರಿಶೂಲ, ಕಮಲಾಕ್ಷಮಣಿಯ ಜಪಮಾಲೆ ಮತ್ತು ಅಭಯಮುದ್ರೆ, ಇವುಗಳನ್ನು ಹಸ್ತದಲ್ಲಿ ಧರಿಸಿರುವವಳು, ಮಿಂಚಿನ ಹಗ್ಗದಂತೆ ಹೊಳೆಯುತ್ತಿರುವ ಜಟೆಗಳ ಸಮೂಹದಿಂದ ಪ್ರಕಾಶಮಾನನಾದ ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವಳು, ಎತ್ತಿನ ಮೇಲೆ ಕುಳಿತಿರುವವಳು, ಶುದ್ಧ ದೇಹವುಳ್ಳವಳು, ಯಜುರ್ವೇದಾಭಿಮಾನಿಯೂ ಆಗಿರುವ ಸಾವಿತ್ರೀದೇವಿಯನ್ನು ಸಂತೋಷದಿಂದ ಧ್ಯಾನಿಸಬೇಕು.

**ಧ್ಯೇಯಾ ಸಾ ಚ ಸರಸ್ವತೀ ಭಗವತೀ ಪೀತಾಂಬರಾಲಂಕೃತಾ ।**
**ಶ್ಯಾಮಾ ಶ್ಯಾಮತನುರ್ಜರೋಪರಿಲಸದ್ಗಾತ್ರಾಂಚಿತಾ ವೈಷ್ಣವೀ**
**ತಾರ್ಕ್ಷ್ಯಸ್ಥಾ ಮಣಿನೂಪುರಾಂಗದಲಸದ್ಗ್ರೈವೇಯ ಭೂಷೋಜ್ಜ್ವಲಾ ।**
**ಹಸ್ತಾಲಂಕೃತ ಶಂಖಚಕ್ರಸುಗದಾ ಪದ್ಮಾ ಶ್ರಿಯೈ ಚಾಸ್ತು ನಃ ॥**

ಐಶ್ವರ್ಯವಂತಳು, ಪೀತಾಂಬರವನ್ನು ಧರಿಸಿರುವವಳು, ಶ್ಯಾಮವರ್ಣ ಮತ್ತು ಇತರ ವರ್ಣದಿಂದ ಮಿಶ್ರಿತವಾದ ಶರೀರವುಳ್ಳವಳು, ಮುದಿತನವಿಲ್ಲದ ಶರೀರ ಕಾಂತಿಯುಳ್ಳವಳು, ವಿಷ್ಣು ಭಕ್ತಳು, ಗರುಡಾರೂಢಳು, ಹಸ್ತ ಭುಜಾಭರಣ ಮಣಿಗಳಿಂದ ಪ್ರಕಾಶಮಾನವಾದ

ಕಂಠಾಭರಣದಿಂದ ಪ್ರಕಾಶಮಾನಳು, ಕೈಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮ ಇವುಗಳನ್ನು ಧರಿಸಿರುವವಳೂ ಆಗಿರುವ ಸರಸ್ವತೀದೇವಿಯು ನಮಗೆ ಸಂಪತ್ತನ್ನು ಅನುಗ್ರಹಿಸಲಿ ' ಎಂದು ಧ್ಯಾನಿಸಬೇಕು.

ಮೇಲೆ ಹೇಳಿದ ರೀತಿಯಲ್ಲಿ ಧ್ಯಾನಗೈದು, ಪ್ರಾತಃಕಾಲ ಮತ್ತು ಮಧ್ಯಾಹ್ನ ಸಮಯದಲ್ಲಿ ನಿಂತು, ಸಾಯಂಕಾಲ ಕುಳಿತು, ಭಕ್ತಿಯಿಂದ ಜಪ ಮಾಡಬೇಕು. ಪಾದತ್ರಯವುಳ್ಳ "ಭೂರ್ಭುವಸ್ವ" ಎಂಬ ಗಾಯತ್ರಿ ಮಂತ್ರ ಸಾವಿರ ಸಲ ಜಪಿಸಬೇಕು. ಸಾಧ್ಯವಾಗದೆ ಇದ್ದಲ್ಲಿ ನೂರು ಸಲ, ಕನಿಷ್ಠ ಹತ್ತುಸಲ ಜಪಿಸಬೇಕು. ಸನ್ಯಾಸಿ ಹಾಗೂ ದೀಕ್ಷಿತರು ತಾರಷಟ್ಕ ಸಂಪುಟ ಆಕಾರ ಜಪಿಸುವದು ಧರ್ಮ. ಅದರಂತೆ ಗೃಹಸ್ಥನೂ ಸಹ ತಾರಸಹಿತವಾಗಿ ಜಪಿಸಬೇಕು. ಜಪ ಮುಗಿಸಿ ಗಾಯತ್ರಿ ಮತ್ತು ಸೂರ್ಯರಿಗೆ ಎರಡು ಬೊಗಸೆ ಅರ್ಘ್ಯದ ನೀರನ್ನು ಬಿಡಬೇಕು.

ಅರ್ಘ್ಯ ಬಿಟ್ಟ ನಂತರ ' ಉತ್ತಮೇಶಿಖರೆ ' ಎಂಬಿತ್ಯಾದಿ ಮಂತ್ರದಿಂದ ಬ್ರಹ್ಮ, ಈಶ್ವರ, ಹರಿ ಇವರುಗಳಿಂದ ಗಾಯತ್ರಿಯನ್ನು ವಿಸರ್ಜನೆ ಮಾಡಬೇಕು. ಅದರಂತೆ ದಿಗ್ದೇವತೆಗಳಿಗೆ ನಮಸ್ಕರಿಸಬೇಕು. ತ್ರಿಕಾಲದಲ್ಲಿಯೂ ಈ ರೀತಿ ಆಚರಣೆ ಮಾಡಬೇಕು. ನಾರದನೇ, ಗೃಹಸ್ಥ, ವಾನಪ್ರಸ್ಥರು ಪ್ರಾತಃಕಾಲ ಹಾಗೂ ಮಧ್ಯಾಹ್ನದಲ್ಲಿ ಸ್ನಾನ ಮಾಡಬೇಕು, ಸನ್ಯಾಸಿಗಳು ಮೂರು ಸಲ ಸ್ನಾನ ಮಾಡಬೇಕು.

ಆದರೆ ರೋಗಿಗಳು, ಪ್ರಯಾಣಿಕರು ಒಂದು ಸಲ ಮಾಡಿದರೆ ಸಾಕು. ಸಂಧ್ಯಾವಂದನೆ ನಂತರ ದರ್ಭೆ ಹಿಡಿದು ಬ್ರಹ್ಮಯಜ್ಞ ಮಾಡಬೇಕು. ಒಂದು ವೇಳೆ ಈ ಧಾರ್ಮಿಕ ಕರ್ತವ್ಯಗಳ ಆಚರಣೆಗೆ ಚ್ಯುತಿ ಬಂದಲ್ಲಿ, ರಾತ್ರಿ ಮೊದಲ ಯಾಮದಲ್ಲಿ ಮಾಡಬಹುದು. ಬ್ರಾಹ್ಮಣನು ದುರ್ಬುದ್ಧಿಯಿಂದ, ಅಲಸಿಕೆಯಿಂದ ಸಂಧ್ಯಾಕರ್ಮ ಗೈಯ್ಯದಿದ್ದರೆ ಪಾಷಂಡನೆನಿಸುವನು, ವಿನಾಕಾರಣ ಸಂಧ್ಯಾಕರ್ಮ ಮಾಡದವನು ಪರಮಪಾತಕಿಯಾಗಿ ಅನೇಕ ದುಷ್ಟ ಉಪದ್ರವಗಳಿಗೆ ಗುರಿಯಾಗುವದು ಖಂಡಿತ. ಸಂಧ್ಯಾಕರ್ಮ ಆಚರಿಸದ ಮನುಷ್ಯನೊಡನೆ ಮಾತನಾಡಿದವರೂ ಸಹ ಆಚಂದ್ರಾರ್ಕ ನರಕಗಳನ್ನು ಹೊಂದುತ್ತಾರೆ. ಸಂಧ್ಯಾವಂದನೆ ಮುಗಿಸಿ ನಂತರ ದೇವರ ಪೂಜೆ, ವೈಶ್ವದೇವ ಆಚರಿಸಬೇಕು. ಮತ್ತು ಅತಿಥಿಗಳ ಸತ್ಕಾರ ಗುರು ಬ್ರಾಹ್ಮಣರಿಗೆ ದಾನಾದಿಗಳನ್ನು ನೀಡಿ ಸತ್ಕರಿಸಬೇಕು. ಪಂಚಯಜ್ಞಗಳನ್ನು ಮಾಡದವರು ಬ್ರಹ್ಮಹತ್ಯೆ ಗುರುದ್ರೋಹಿ ಸಮಾನರೂಪನೆಂದು ಜ್ಞಾನಿಗಳು ಹೇಳುತ್ತಾರೆ. ಆದುದರಿಂದ ಪಂಚಯಜ್ಞ ಅವಶ್ಯಕವಾಗಿ ಮಾಡುವದು ವಿಹಿತ, ಪಂಚಯಜ್ಞಗಳೆಂದರೆ - ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ನರಯಜ್ಞ ಮತ್ತು ಬ್ರಹ್ಮಯಜ್ಞ.

ಆಪೋಶನ ತೆಗೆದುಕೊಳ್ಳುವಾಗ, ಆಚಮನ ಮಾಡುವಾಗ, ತಿನ್ನುವಾಗ, ಬ್ರಾಹ್ಮಣರು ಶಬ್ದ ಮಾಡಬಾರದು. ಊಟ ಮಾಡುವಾಗ 'ಅಮೃತೋಪಸ್ತರಣಮಸಿ' ಎಂಬ ಮಂತ್ರ ದಿಂದ ಆಪೋಶನ ತೆಗೆದುಕೊಳ್ಳಬೇಕು. ಊಟದ ನಂತರ 'ಅಮೃತಾಪಿಧಾನಮಸಿ ' ಎಂಬ ಮಂತ್ರದಿಂದ ಒಂದಾವರ್ತಿ, ಕೈಯಲ್ಲಿ ಉದ್ಧರಣೆಯಿಂದ ನೀರನ್ನು ಹಾಕಿಕೊಂಡು ಕುಡಿಯಬೇಕು. ಪ್ರಾಣಾಪಾನಾದಿಗಳಿಗೆ ಆಹುತಿ ಕೊಟ್ಟು ಆಚಮನ ಪೂರ್ವಕವಾಗಿ ಭೋಜನ ಮಾಡಬೇಕು. ಅನಂತರ ಆಚಮನ ಮಾಡಿ, ಶಾಸ್ತ್ರಗಳನ್ನು ತಿಳಿದುಕೊಳ್ಳಲು ಮನಸ್ಸು ಕೇಂದ್ರಿಕೃತ ಮಾಡಬೇಕು. ಅತಿಥಿಗಳನ್ನು, ಅಭ್ಯಾಗತರನ್ನು, ಉಚಿತ ಗೌರವಾಸನ ಹಾಗೂ

ಸುಗ್ರಾಸ ಭೋಜನಗಳಿಂದ ಸತ್ಕರಿಸಿ, ನಂತರ ತಾನೂ ಭೋಜನ ಮಾಡಬೇಕು. ಈ ಪ್ರಕಾರ ಗೃಹಸ್ಥನು ವಿಹಿತಾಚಾರಗಳನ್ನೂ ಆಚರಿಸಬೇಕು.

ನಂತರ ವಾನಪ್ರಸ್ಥಾಶ್ರಮ ಸ್ವೀಕರಿಸಬೇಕು. ಕಾಡಿನಲ್ಲಿ ನಿಯಮದಿಂದ ಜೀವನ ಮಾಡುವದೇ ವಾನಪ್ರಸ್ಥಾಶ್ರಮವೆನಿಸುತ್ತದೆ. ವಾನಪ್ರಸ್ಥಾಶ್ರಮ ಸ್ವೀಕರಿಸಿದ ದಿನದಿಂದ ಉಗುರು, ಮೀಸೆ, ಜಟೆ ಇವುಗಳನ್ನು ಧರಿಸಿಕೊಂಡು ತ್ರಿಕಾಲಸ್ನಾನ ಜಪ, ತಪ, ಅನುಷ್ಠಾನಗೈಯಬೇಕು. ಬ್ರಹ್ಮಚರ್ಯ ನಿಯಮದಿಂದಿದ್ದು, ಗಡ್ಡೆಗೆಣಸು ಆಹಾರ ಸೇವಿಸಿ ಪ್ರಶಾಂತ ಚಿತ್ತದಿಂದಿದ್ದು ಪಂಚಯಜ್ಞ, ಶ್ರೀ ಹರಿಯಧ್ಯಾನ ಜಪ, ತಪಗಳನ್ನು ಆಚರಿಸುವವನೇ ನಿಜವಾದ ವಾನಪ್ರಸ್ಥಾಶ್ರಮಜೀವಿ ಎನಿಸುವನು.

ವಾನಪ್ರಸ್ಥಾಶ್ರಮ ಸ್ವೀಕರಿಸದವನು ಪಾಲಿಸಬೇಕಾದ ಅವಶ್ಯಧರ್ಮಗಳನ್ನು ಕುರಿತು ಹೇಳುತ್ತೇನೆ, ಕೇಳು. ವಾನಪ್ರಸ್ಥಾಶ್ರಮ ಸ್ವೀಕರಿಸಿದವನು ತೈಲಾಭ್ಯಂಗವನ್ನೂ ಮೈಥುನವನ್ನೂ ನಿದ್ದೆ ಮತ್ತು ಆಲಸ್ಯ ಇವುಗಳನ್ನು ಬಿಡಬೇಕು. ಅಡವಿಯಲ್ಲಿ ಬೆಳೆದ ಗಡ್ಡೆ ಗೆಣಸು ತಿನ್ನಬೇಕು. ರಾತ್ರಿ ಕಾಲದಲ್ಲಿ ಭೋಜನಮಾಡಬಾರದು. ತ್ರಿಕಾಲಗಳಲ್ಲಿ ಶ್ರೀಹರಿಯ ಧ್ಯಾನ ಮಾಡುತ್ತ ಆನಂದ ಚಿತ್ತದಿಂದ ಇರಬೇಕು. ಅವನು ಶೀತೋಷ್ಣಾದಿಗಳನ್ನು ಸಹಿಸಬೇಕು. ವಿಹಿತವಾದ ರೀತಿಯಲ್ಲಿ ಅಗ್ನಿಪರಿಚರ್ಯೆಯನ್ನು ಮಾಡಬೇಕು. ಮನಃಪೂರ್ವಕ ವೈರಾಗ್ಯ ಹುಟ್ಟಿದನಂತರ ಸನ್ಯಾಸಧರ್ಮ ಸ್ವೀಕರಿಸಬೇಕು. ಇನ್ನು ಸನ್ಯಾಸಿಯು ಪಾಲಿಸಬೇಕಾದ ಕೆಲವು ನಿಯಮಗಳನ್ನು ವಿವರಿಸುತ್ತೇನೆ ಕೇಳು. ಅವರು ವಸ್ತ್ರ ಹೀನನಾಗಿ ಅಂದರೆ ಹಳೆಯ ಬಟ್ಟೆಯ ಕೌಪೀನ ಧರಿಸಬೇಕು. ಸನ್ಯಾಸಿಯು ಒಂದೇ ಮನೆಯ ಅನ್ನವನ್ನು ಉಣ್ಣಬಾರದು. ಅವನು ಅಡಿಗೆಯಾಗಿ ಬೆಂಕಿ ಆರಿಸಿರುವ, ಊಟವಿಲ್ಲದಿರುವ ಹಾಗೂ ನಿಯಮನಿಷ್ಠೆಯಿಂದಿರುವ ಯೋಗ್ಯಜನರ ಮನೆಗೆ ಭಿಕ್ಷೆಗೆ ಹೋಗಬೇಕು.

ಅಂತರಂಗ, ಬಹಿರಂಗದಿಂದ ತ್ರಿಕಾಲದಲ್ಲಿಯೂ ಪರಿಶುದ್ಧನಾಗಿದ್ದು ತ್ರಿಕಾಲಗಳಲ್ಲಿಯೂ ಭಗವದಾರಾಧಕನಾಗಿರಬೇಕು. ಶೃಂಗಾರ, ಹಾಸ್ಯ, ಚೇಷ್ಟೆ ಮುಂತಾದ ಮಾತುಗಳನ್ನಾಡಬಾರದು. ಹಾಗೂ ಶರೀರ ಸೌಂದರ್ಯದ ಬಗ್ಗೆ ವೈರಾಗ್ಯದಿಂದ ಇರಬೇಕು. ಯಾವದೇ ಕಾಮ, ಮೋಹಗಳಿಗೆ ವಶನಾದಲ್ಲಿ ಅವನು ಚಂಡಾಲನೆನಿಸುವನು. ಒಂದೇ ಮನೆಯಲ್ಲಿ ಊಟಮಾಡಿದವರಾಗಲಿ, ಅಥವಾ ವಿಷಯಲೋಲುಪನಾದರೆ ಸಾವಿರಾರು ಪಾಪ ಮಾಡಿದಂತೆ, ಎಂತಹ ಪ್ರಾಯಶ್ಚಿತ್ತಕ್ಕೂ ಅವನು ಎಸಗಿದ ಪಾಪ ಹೋಗುವದಿಲ್ಲ. ಸನ್ಯಾಸಿಯು ನಿತ್ಯವೂ ತ್ರಿಕಾಲಗಳಲ್ಲಿ ಉಪನಿಷತ್ತಿನ ವಾಕ್ಯವನ್ನು ಪಠಣ ಮಾಡಬೇಕು. ವೇದ, ವೇದಾಂತಗಳ ವಿಚಾರಗಳನ್ನು ಚಿಂತನ, ಮಂಥನ ಮಾಡುವದರಲ್ಲಿ ಆಸಕ್ತನಾಗಿದ್ದು ಸದಾ ಶ್ರೀ ಹರಿಯ ಧ್ಯಾನ ಮಾಡುತ್ತಿರಬೇಕು. ಸದಾ ಕಾಲದಲ್ಲಿಯೂ ಅರಿಷಡ್ವರ್ಗಗಳನ್ನು ಜಯಿಸಬೇಕು. ಈ ಪ್ರಕಾರ ವರ್ಣಾಶ್ರಮ ಧರ್ಮಗಳನ್ನು ಆಚರಿಸುವ ವಿಪ್ರನು, ಪರಲೋಕದಲ್ಲಿ ವಿಷ್ಣು ಸನ್ನಿಧಾನ ಪಡೆದು ಸುಖಿಸುತ್ತಾನೆ. ವರ್ಣಾಶ್ರಮ ಧರ್ಮನಿರತರು, ಸಕಲ ಪಾಪಗಳನ್ನು ಕಳೆದುಕೊಂಡು, ಶ್ರೀ ಹರಿಯ ಸೇವೆ, ಪೂಜೆ, ಧ್ಯಾನ ನಿರತರಾಗಿ ಮರಣಾನಂತರ ವೈಕುಂಠ ಲೋಕ ಪಡೆದು ಸುಖಿಸುತ್ತಾರೆ.

ನಾರದ ಮಹಾಪುರಾಣದಲ್ಲಿ ಇಪ್ಪತ್ತೇಳನೇಯ ಅಧ್ಯಾಯ ಮುಗಿದುದು

—o—

**ಸನಕ:-** ಶ್ರಾದ್ಧದ ವಿಧಿ ವಿಧಾನ ಹೇಳುತ್ತೇನೆ, ಕೇಳು. ಶ್ರಾದ್ಧ ಮಾಡುವವನು ಶ್ರಾದ್ಧ ಮುಂಚಿನ ದಿನ ಒಪ್ಪತ್ತು ಊಟ, ಬ್ರಹ್ಮಚರ್ಯ, ನೆಲದ ಮೇಲೆ ರಾತ್ರಿ ಮಲಗುವದು, ತಾಂಬೂಲ, ಅಭ್ಯಂಗ, ಸ್ತ್ರಿಸಂಗ, ಪರಾನ್ನ ಮುಂತಾದವುಗಳನ್ನು ತ್ಯಜಿಸಬೇಕು. ವಿಪ್ರರ ಮನೆಗೆ ಹೋಗಿ ಔತಣ ನೀಡಿ ಬರಬೇಕು. ಶ್ರಾದ್ಧದ ದಿನ, ಪ್ರಯಾಣ, ಕಲಹ, ಸಿಟ್ಟು, ಸ್ತ್ರೀಸಂಗ, ಹಾಗೂ ನಿದ್ರೆ, ಇವುಗಳನ್ನು ಯಜಮಾನನೂ, ಊಟಕ್ಕೆ ಬರುವವನೂ ಇಬ್ಬರೂ ತ್ಯಾಗ ಮಾಡಬೇಕು. ಶ್ರಾದ್ಧದಲ್ಲಿ ಸದಾಚಾರ ಸಂಪನ್ನನೂ, ವಿಷ್ಣುಭಕ್ತನೂ ಪುರಾಣಗಳ ಫಲಬಲ್ಲವನೂ, ನಿತ್ಯ ದೇವತಾಪೂಜೆ ಮಾಡುವವನೂ, ವೇದಾಂತ ತತ್ವ ತಿಳಿದವನೂ, ಸಚ್ಛಾಸ್ತ್ರ ಪ್ರವಚನ ಮಾಡುವವನೂ ಆದ ಯೋಗ್ಯ ವ್ಯಕ್ತಿಗೆ ಔತಣ ಹೇಳಬೇಕು.

ಮತ್ತು ಅವಯವಗಳು ಊನವಾಗಿದ್ದರೆ, ಅಧಿಕವಿದ್ದರೆ ರೋಗಿ, ತೊನ್ನು, ಹತ್ತಿದವ, ಜೋತಿಷ್ಯದಿಂದ ಉಪಜೀವಿಸುವವ, ಹೆಣಹೊರುವವ, ಹಣಕ್ಕಾಗಿ ಪೌರೋಹಿತ್ಯ ಮಾಡುವವ, ವ್ಯಭಿಚಾರಾದಿಗಳಿಂದ ಜೀವಿಸುವವ, ಪರಸ್ತ್ರೀ ಲಂಪಟ, ಅನ್ನ ಮಾರುವವ, ವೇದ, ವೈದ್ಯಶಾಸ್ತ್ರ, ಸಂಗೀತ, ಮಂತ್ರ ಧರ್ಮಶಾಸ್ತ್ರ, ಮುಂತಾದವುಗಳನ್ನು ಧನಕ್ಕಾಗಿ ಮಾರಾಟ ಮಾಡುವವ, ಹರಿಹರರಲ್ಲಿ ಭಕ್ತಿ ಶೂನ್ಯ ಡಂಭಾಚಾರಿ ಚಂಡಿಕೆ ಇಲ್ಲದೆ ಪೂರ್ಣ ತಲೆ ಬೋಳಿಸದವ, ವಂಚಕ, ಲೋಕನಿಂದಕ ಮುಂತಾದವರನ್ನು ಆಹ್ವಾನಿಸಕೂಡದು. ಶ್ರಾದ್ಧದ ಮೊದಲನೆಯ ದಿನ ಅಥವಾ ಅಂದೇ ವಿಪ್ರರಿಗೆ ಬೇಗನೆ ಶ್ರಾದ್ಧದ ಔತಣ ಕೊಡಬೇಕು. ಶ್ರಾದ್ಧವನ್ನು 'ಕುತಪಕಾಲ'ದಲ್ಲಿಯೇ ಮಾಡಬೇಕು. ಕುತಪಕಾಲ ಎಂದರೆ ಹಗಲಿನ ಎಂಟನೆಯ ಭಾಗದಲ್ಲಿ ಸೂರ್ಯನು ಇಳಿಮುಖನಾದಾಗ ಅಪರಾಹ್ನದಲ್ಲಿ ಶ್ರಾದ್ಧ ಮಾಡುವದು ವಿಹಿತವಾಗಿದೆ. ಈ ಕಾಲ ಬಿಟ್ಟು ಬೇರೆ ಕಾಲದಲ್ಲಿ ಕೊಡಲ್ಪಟ್ಟ ಕವ್ಯವು ಪಿತೃಗಳಿಗೆ ತೃಪ್ತಿ ತರುವದಿಲ್ಲ. ಆದುದರಿಂದ ಸಕಾಲದಲ್ಲಿಯೇ ಶ್ರಾದ್ಧ ಮಾಡಬೇಕು. ಆಹೂತರಾದ ವಿಪ್ರರೆಲ್ಲರೂ ಸೇರಿದ ಮೇಲೆ ಯಜಮಾನನು ಪ್ರಾಯಶ್ಚಿತ್ತದಿಂದ ಶುದ್ಧನಾಗಿ, ವಿಪ್ರರ ಅಪ್ಪಣೆಯನ್ನು ವಿಪ್ರರಿಂದ ಪಡೆದು, ವಿಧ್ಯುಕ್ತವಾಗಿ ವಿಶ್ವೇದೇವತೆ ಗಳಿಗಾಗಿ ಇಬ್ಬರು, ಪಿತೃಗಳಿಗಾಗಿ ಮೂವರನ್ನು, ಅಷ್ಟು ಶಕ್ತಿ ಇಲ್ಲದಿದ್ದರೆ, ಇಬ್ಬರು ವಿಪ್ರರನ್ನಾದರೂ ಆಹ್ವಾನಿಸಬೇಕು. ಯೋಗ್ಯ ಜ್ಞಾನಿಗಳು ದೊರಕದಿದ್ದರೆ ತನ್ನ ಸೋದರ, ಮಗ, ಕೊನೆಗೆ ತಾನೇ ವಿಪ್ರ ಎಂದು ಸಂತೋಷಿಸಿಕೊಳ್ಳಬೇಕು, ಎಂದು ಪ್ರಮಾಣ ವಚನವಿದೆ. ಅದರ ತಾತ್ಪರ್ಯ ಜ್ಞಾನವಿಲ್ಲದವನನ್ನು ಶ್ರಾದ್ಧಕ್ಕೆ ಕೂಡಿಸಬಾರದು, ಎಂದು ಅಭಿಪ್ರಾಯ.

ಆಹ್ವಾನ ಮಾಡಿದ ಜ್ಞಾನಿಗಳ ಪಾದ ಪ್ರಕ್ಷಾಳನ ಗೈದು, ಆಚಮನಮಾಡಿ, ನಿಯತ ಸ್ಥಾನದಲ್ಲಿ ಕೂಡಿಸಿ ಶ್ರೀ ಹರಿಯನ್ನು ಧ್ಯಾನಿಸುತ್ತ ವಿಧಿಪೂರ್ವಕ ಪೂಜೆ ಮಾಡಬೇಕು. ಶ್ರಾದ್ಧಕಾಲದಲ್ಲಿ ಉಕ್ತವಾದ ರೀತಿಯಿಂದ, ವಿಧ್ಯುಕ್ತವಾಗಿ, ಶ್ರಾದ್ಧವನ್ನು ಮಾಡಬೇಕು. ಪ್ರಯಾಣದಲ್ಲಿರುವವನು, ಅತಿ ದರಿದ್ರನು, ರೋಗಿ ಆಮಶ್ರಾದ್ಧವನ್ನು ಮಾಡಬೇಕು. ಅಥವಾ ಸುವರ್ಣಶ್ರಾದ್ಧ ಮಾಡಬೇಕು. ದ್ರವ್ಯ ಇಲ್ಲದಿದ್ದರೆ, ಯೋಗ್ಯವ್ಯಕ್ತಿ ದೊರೆಯದಿದ್ದರೆ ಅನ್ನ ಪಿಂಡವನ್ನು ಮಾಡಿ ಪಿತೃಸೂಕ್ತದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು.

ಅತಿ ದರಿದ್ರನಿದ್ದರೆ ಎಲ್ಲಿಯಾದರೂ ಬೆಳೆದ ಹುಲ್ಲನ್ನು ಕೊಯ್ದು ತಂದು, ಹಸುವಿಗೆ ಹಾಕಿ,, ಅನಂತರ ತಿಲತರ್ಪಣ ಮಾಡಬೇಕು. ಅಷ್ಟಕ್ಕೂ ಗತಿ ಇಲ್ಲದಿದ್ದರೆ, ನಾನು ಬಡವ, ಮಹಾಪಾಪಿ ಎಂದೂ ಎರಡೂ ಕೈಗಳನ್ನು ಮೇಲೆ ಮಾಡಿ ದುಃಖದಿಂದ ಪಿತೃಗಳಿಗೂ, ದೇವತೆಗಳಿಗೂ ಕೈಮುಗಿದು ಕೇಳಿಕೊಳ್ಳಬೇಕು. ಶ್ರಾದ್ಧದ ವಿಧಾನದಿಂದ ಪಿತೃಗಳನ್ನು ಪೂಜಿಸಿದರೆ ಶ್ರೀ ಹರಿಯು ಇದು ತನ್ನದೇ ಪೂಜೆ ಎಂದು ಮಾಡಿದವನ ಮೇಲೆ ಸುಪ್ರೀತನಾಗುವನು. ಅವನು ಸಂತುಷ್ಟನಾದರೆ ಸಕಲ ಜೀವಿಗಳು ಪ್ರೀತರಾಗುತ್ತಾರೆ.

*ನಾರದ ಪುರಾಣದಲ್ಲಿ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ತಿಥ್ಯಾದಿ ನಿರ್ಣಯ

ಅಧ್ಯಾಯ - ೨೯

**ಸನಕ:-** ಕರ್ಮಸಿದ್ಧಿಗೆ ಉಪಯುಕ್ತವಾದ ತಿಥಿಗಳ ನಿರ್ಣಯ ಮತ್ತು ಪ್ರಾಯಶ್ಚಿತ್ತ ವಿಧಿಗಳನ್ನು ಹೇಳುತ್ತೇನೆ ಕೇಳು. ವೇದೋಕ್ತವಾದ ಮತ್ತು ಸ್ಮೃತಿಯಲ್ಲಿ ಹೇಳಿದ ವ್ರತ ದಾನ ಕೊಡುವುದೇ ಮುಂತಾದ ಕರ್ಮವನ್ನು ತಿಥಿ ನಿರ್ಣಯವಿಲ್ಲದೆ ಯಾವುದಾದರೂ ಒಂದು ದಿನದಲ್ಲಿ ಮಾಡಿದರೆ ಫಲ ಬರುವದಿಲ್ಲ. ಏಕಾದಶಿ, ಸಪ್ತಮಿ, ಷಷ್ಠಿ, ಹುಣ್ಣಿಮೆ, ತ್ರಯೋದಶಿ, ಅಮಾವಾಸ್ಯೆ, ತೃತೀಯಾ ಈ ದಿನಗಳಲ್ಲಿ ಉಪವಾಸಾದಿ ವ್ರತ ಆಚರಿಸಬೇಕಾದರೆ, ಅವು ಪರವಿದ್ಧವಾಗಿದ್ದರೆ, ಎಂದರೆ ಮುಂದಿನ ತಿಥಿಯಿಂದ ಕೂಡಿದ್ದರೆ ಪ್ರಶಸ್ತ. ಪೂರ್ವವಿದ್ಧವಾದ ತಿಥಿಗೆ ಉಪವಾಸ ಆಚರಿಸಬಾರದು. ಏಕಾದಶಿವಿದ್ಧವಾದ ದಶಮಿ ತಿಥಿಯಲ್ಲಿ ಉಪವಾಸ ಮಾಡಬಾರದು. ಅಮಾವಾಸ್ಯೆ ಪೂರ್ಣಿಮಾ ಸಪ್ತಮಿ ತಾಯಿ-ತಂದೆಗಳ ಶ್ರಾದ್ಧದ ದಿನಗಳು ಪೂರ್ವವಿದ್ಧವಾದಾಗ ಕರ್ಮಾಚರಣೆ ಮಾಡಿದವರು ನರಕಕ್ಕೆ ಹೋಗುತ್ತಾರೆ. ಎಲ್ಲ ವ್ರತಗಳಿಗೂ ಶುಕ್ಲಪಕ್ಷ, ಅಪರಾಹ್ನಕ್ಕಿಂತ, ಪೂರ್ವಾಹ್ನ ಪ್ರಶಸ್ತವಾಗಿರುತ್ತದೆ. ರಾತ್ರಿಕಾಲದ ವ್ರತಗಳಿಗೆ ಪ್ರದೋಷ ಕಾಲದ ತಿಥಿಯೇ ಗ್ರಾಹ್ಯ.

ಗ್ರಹಣಕಾಲಗಳಲ್ಲಿ ಸ್ಪರ್ಶದಿಂದ ಮೋಕ್ಷವರೆಗಿನ ಕಾಲವು ಜಪಾದಿಗಳಿಗೆ ಯೋಗ್ಯಕಾಲ. ಆ ಸಮಯದಲ್ಲಿ ಸ್ನಾನ, ದಾನ, ಜಪ, ಮುಂತಾದವುಗಳನ್ನು ಮಾಡುವವರಿಗೆ ಅಕ್ಷಯ ಫಲ. ಕರ್ಕ ಮಕರ ಸಂಕ್ರಮಣ, ದಕ್ಷಿಣಾಯಣಗಳು ಪುಣ್ಯಕಾಲ ಈ ಸಂಕ್ರಮಣ ಕಾಲದಲ್ಲಿ ಸಂಕ್ರಮಣದ ಮೊದಲಿನ ಮೂವತ್ತು ಗಳಿಗೆ ಪುಣ್ಯಕಾಲ. ವೃಷಭ, ವೃಶ್ಚಿಕ, ಸಿಂಹ, ಕುಂಭ ಈ ನಾಲ್ಕು ಸಂಕ್ರಮಣಗಳಲ್ಲಿ ಮೊದಲಿನ ಹದಿನಾರು ಗಳಿಗೆಯ ಕಾಲವು,ಸ್ನಾನ, ದಾನ, ಜಪ, ತಪಾದಿಗಳಿಗೆ ಯೋಗ್ಯ ಕಾಲ ಎನಿಸುವದು. ತುಲಾ ಮೇಷ, ಸಂಕ್ರಮಣಗಳಲ್ಲಿ ಹಿಂದು ಮುಂದಿನ ಹತ್ತು ಗಳಿಗೆಗಳು ಮಾತ್ರ ಪುಣ್ಯಕಾಲ. ಕನ್ಯಾ, ಮಿಥುನ, ಮೀನ, ಧನಸ್ಸು, ರಾಶಿಗಳ ಸಂಕ್ರಮಣಗಳ ಮುಂದಿನ ಹದಿನಾರು ಗಳಿಗೆ ಪುಣ್ಯಕಾಲ. ಮಕರಸಂಕ್ರಮಣಕ್ಕೆ ಉತ್ತರಾಯಣ ಪುಣ್ಯಕಾಲ ಎನ್ನುವರು. ಉತ್ತರಾಯಣದಲ್ಲಿ ಮುಂದಿನ ಮೂವತ್ತುಗಳಿಗೆ ಪರ್ವಕಾಲ. ಸೂರ್ಯ ಚಂದ್ರರು ಗ್ರಸ್ತರಾಗಿ ಅಸ್ತ ಹೊಂದಿದರೆ, ಮರುದಿನ ಶುದ್ಧಮಂಡಲ ನೋಡಿ ಸ್ನಾನ ಮಾಡಿ, ಭೋಜನಾದಿಗಳನ್ನು ಮಾಡಬೇಕು. ಸೂರ್ಯಗ್ರಹಣವಾದಾಗ 'ಉದುತ್ತ್ಯಂ ಜಾತವೇದಸಂ' 'ಅಸತ್ಯೇನೊ' ಇತ್ಯಾದಿ ಮಂತ್ರಗಳಿಂದ ಹೋಮ ಮಾಡಬೇಕು. ಚಂದ್ರಗ್ರಹಣದಲ್ಲಿ 'ದಶಮೇಸೋಮ' ಅಪ್ಯಾಯಸ್ವ 'ಸೋಮಪಾಽಸ್ತೇ' ಎಂಬ ಮಂತ್ರಗಳಿಂದ ಹೋಮ ಮಾಡಬೇಕು.

*ನಾರದ ಮಹಾಪುರಾಣದಲ್ಲಿ ಇಪ್ಪತ್ತೊಂಭತ್ತನೇಯ ಅಧ್ಯಾಯ ಮುಗಿದುದು.*

**ಸನಕ:-** ನಾರದನೇ, ಈಗ ಪ್ರಾಯಶ್ಚಿತ್ತ ವಿಧಾನವನ್ನು ಹೇಳುತ್ತೇನೆ. ಪ್ರಾಯಶ್ಚಿತ್ತದಿಂದ ಪರಿಶುದ್ಧನಾದ ಮನುಷ್ಯನು ಎಲ್ಲ ಕರ್ಮಗಳ ಫಲ ಹೊಂದುವನು. ನದಿಯ ನೀರಿನಲ್ಲಿ ಮದ್ಯಪಾತ್ರವನ್ನು ಮುಳುಗಿಸಿ ಇಟ್ಟರೆ ಅದು ಎಂದಾದರೂ ಶುದ್ಧವಾಗುವದೆ? ಅದರಂತೆ ಶ್ರೀ ಹರಿಯಲ್ಲಿ ಭಕ್ತಿ ಇಲ್ಲದವನು ಯಾವ ಪ್ರಾಯಶ್ಚಿತ್ತ ಮಾಡಿಕೊಂಡರೂ ವ್ಯರ್ಥವೇ ಸರಿ. ಈ ಪ್ರಾಯಶ್ಚಿತ್ತ ವಿಧಾನಕ್ಕಾಗಿ ಕಾಮ ಕ್ರೋಧಗಳು ಇಲ್ಲದ ಶಾಸ್ತ್ರ ವಿಶಾರದರಾದ ಪಂಡಿತರನ್ನೇ ಕೇಳಬೇಕು. ಅವರು ಹೇಳಿದಂತೆ ಹರಿಭಕ್ತಿಯಿಂದ ಯುಕ್ತನಾಗಿ ಪ್ರಾಯಶ್ಚಿತ್ತಗಳನ್ನು ಹೇಳಲಾಗಿದೆ.

**ಬ್ರಹ್ಮ ಹತ್ಯೆ:-** ಮಾಡಿದರೆ ದೇಶಬಿಟ್ಟು ಜಟಾಧಾರಿಯಾಗಿ, ನಾರು ಬಟ್ಟೆ ಧರಿಸಿ, ಪುಣ್ಯಕ್ಷೇತ್ರ ಹಾಗೂ ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡುತ್ತ ದೇಶಾಟನಗೈಯುತ್ತ ಕಾಡಿನಲ್ಲಿ ಅಥವಾ ಗ್ರಾಮದಲ್ಲಿ ಭಿಕ್ಷಾವೃತ್ತಿಯಿಂದ ಜೀವಿಸಬೇಕು. ಯಾವಾಗಲೂ ಹರಿಯ ಸ್ಮರಣೆ, ಉಪವಾಸ, ತ್ರಿಕಾಲ ಸ್ನಾನ, ಕಂದಮೂಲ ಫಲಾಹಾರ, ಬ್ರಹ್ಮಚರ್ಯ, ವ್ರತಾಚರಣೆ ಮುಂತಾದವುಗಳನ್ನು ಮಾಡುತ್ತ ಹನ್ನೆರಡು ವರ್ಷ ಕಾಲ ಕಳೆಯಬೇಕು. ಇದರಿಂದ ಅವನು ಶುದ್ಧನಾಗಿ ಶ್ರೋತ್ರಿಯ ಕರ್ಮಾದಿಗಳಿಗೆ ಅರ್ಹನಾಗುತ್ತಾನೆ. ಇದರಂತೆ ಕ್ಷತ್ರಿಯನನ್ನು ಸಂಹರಿಸಿದರೂ ಇದೇ ಪ್ರಾಯಶ್ಚಿತ್ತ. ಹಿತೋಪದೇಶ ಮಾಡಿದ ಗುರುವನ್ನು ಕೊಂದರೆ ಇದರ ನಾಲ್ಕು ಪಟ್ಟು ಪ್ರಾಯಶ್ಚಿತ್ತ. ಆದರೆ ಪಾಪ ಮಾಡಿದವನು ರೋಗಿ, ಮುದುಕ ಅಥವಾ ಸ್ತ್ರೀಯಾಗಿದ್ದರೆ ಅವರು ಮೇಲೆ ಹೇಳಿದವುಗಳಲ್ಲಿ ಅರ್ಧ ಪಾಲು ಮಾಡಿದರೆ ಸಾಕು. ಮದ್ಯಪಾನವನ್ನು ಯಾವ ಜಾತಿಯವರೂ ಮಾಡಬಾರದು. ಪ್ರಮಾದದಿಂದ ಎಂದಾದರೂ ಮಾಡಿದರೆ, ಸ್ನಾನ ಮಾಡಿ, ಒದ್ದೆ ಬಟ್ಟೆಯಿಂದ ಹಾಲು, ತುಪ್ಪ, ಗೋಮೂತ್ರ ಇವುಗಳನ್ನು ಎಸರುಬರುವಂತೆ ಕಾಯಿಸಿ, ಕುದಿಯುತ್ತಿರುವಾಗಲೇ ಕುಡಿಯಬೇಕು. ಅನಂತರ ಕಬ್ಬಿಣ, ಕಂಚು, ತಾಮ್ರ, ಲೋಹದ ಪಾತ್ರೆಗಳನ್ನು ಕಾಯಿಸಿ ಅವುಗಳಿಂದಲೇ ನೀರನ್ನು ಕುಡಿಯಬೇಕು. ರೋಗ ಪರಿಹಾರಕ್ಕಾಗಿ ಔಷಧ ರೂಪವಾಗಿ ಮದ್ಯಪಾನ ಮಾಡಿದವನು ಮತ್ತೊಮ್ಮೆ ಉಪನಯನ ಮಾಡಿಕೊಂಡು ಎರಡು ಚಾಂದ್ರಾಯಣ ವ್ರತ ಆಚರಿಸಬೇಕು. ಮದ್ಯಮಿಶ್ರವಾದ ಹಾಲು ಮುಂತಾದವುಗಳನ್ನು ಕುಡಿಯಬಾರದು. ಮದ್ಯದ ಪಾತ್ರೆಯಲ್ಲಿ ನೀರನ್ನೂ ಸಹ ಕುಡಿಯಬಾರದು. ಮದ್ಯವು ಹನ್ನೊಂದು ವಿಧವಾಗಿವೆ. ತಾಳೆಯಮರ, ಹಲಸಿನ ಮರ, ಉತ್ತತ್ತಿ ಗಿಡ, ತೆಂಗಿನ ಮರ ಮುಂತಾದ ಮರಗಳಿಂದಲೂ ದ್ರಾಕ್ಷೀ ಮಾಧವಿಕಾ, ಶೈಲಾ, ಆರಿಷ್ಠಾ, ಮೈರೇಯಾ ಮುಂತಾಗಿ ಹಣ್ಣು ಕಾಯಿಗಳ ಭಟ್ಟಿಯಿಂದಲೂ ಮದ್ಯವು ಹೊರಡುವದು. ಇದರಲ್ಲಿ ಯಾವದನ್ನೂ ನಾಲ್ಕು ವರ್ಣದವರು ಮದ್ಯ ಸೇವಿಸಬಾರದು.

**ಸ್ವರ್ಣಸ್ತೇಯ:-** ಪಂಚಮಹಾಪಾತಕಗಳಲ್ಲಿ ಮೊದಲನೆಯದು ಬ್ರಹ್ಮಹತ್ಯೆ. ಎರಡನೆಯದು ಸುರಾಪಾನ. ಮೂರನೇಯದೇ ಸ್ವರ್ಣಸ್ತೇಯ-ಎಂದರೆ ಬಂಗಾರದ ಕಳವು ಎಂದರ್ಥ. ಗುರುಗಳು, ಯಜ್ಞದೀಕ್ಷಿತರು, ಶ್ರೋತ್ರಿಯರು, ಪುಣ್ಯಾತ್ಮರು ಇವರ

ಬಂಗಾರವನ್ನು ಅಪಹರಿಸಿದರೆ, ಅದಕ್ಕಾಗಿ ಅವನಿಗೆ ಪಶ್ಚಾತ್ತಾಪವಾದರೆ, ಮೈಗೆಲ್ಲ ತುಪ್ಪ ಹಚ್ಚಿ ಬೆರಣಿಯಿಂದ ಮುಚ್ಚಿ, ಸ್ವಲ್ಪ ಅಗ್ನಿಸ್ಪರ್ಶ ಮಾಡಿಸಬೇಕು. ಆದರಿಂದ ಸುವರ್ಣ ಚೌರ್ಯ ಪಾಪದಿಂದ ಶುದ್ಧಿಯಾಗುತ್ತದೆ. ಬಂಗಾರವೆಂದರೆ ಬಂಗಾರ ಮಾತ್ರವಲ್ಲ, ರತ್ನ, ಆಸನ, ಮನುಷ್ಯ, ಹೆಂಗಸು, ಗೋವು, ಹೊಲ, ಮನೆ, ಸಂಪತ್ತು ಕದ್ದರೂ ಬಂಗಾರದ ಕಳುವಿನಷ್ಟೇ ಪಾಪ ಬರುವದು. ಅತ್ಯಂತ ಅಲ್ಪವಾದ, ಬಂಗಾರದ ಚಿಕ್ಕ ಚೂರನ್ನೂ ಅಪಹರಿಸಿದರೆ ಪ್ರಾಣಾಯಾಮದಿಂದ ಶುದ್ಧಿಯಾಗುವದು. ಸಾಸಿವೆ ಕಾಳಿನಷ್ಟು ಬಂಗಾರ ಅಪಹರಿಸಿದರೆ ಎಂಟು ಸಾವಿರ ಗಾಯತ್ರಿ ಜಪ, ಅಕ್ಕಿಕಾಳಿನಷ್ಟು ಕದ್ದರೆ ಬೆಳಗಿನಿಂದ ಸಾಯಂಕಾಲದವರೆಗೆ ಗಾಯತ್ರಿ ಜಪ, ಉದ್ದಿನ ಕಾಳಿನಷ್ಟು ಬಂಗಾರ ಕದ್ದರೆ ಗಂಗಾಜಲದಿಂದ ಬೇಯಿಸಿದ ಯವ ಧಾನ್ಯವನ್ನು ಒಂದು ವರ್ಷಕಾಲ ಉಣ್ಣಬೇಕು. ಇದರಂತೆ ಬೆಳ್ಳಿಯನ್ನು ನಾಲ್ಕರಿಂದ ಹತ್ತು ನಿಷ್ಕಗಳವರೆಗೆ ಕದ್ದರೆ, ಚಾಂದ್ರಾಯಣ, ಅದಕ್ಕಿಂತ ಹೆಚ್ಚಾಗಿದ್ದರೆ, ಎರಡು ಚಾಂದ್ರಾಯಣ, ರತ್ನಾಪಹಾರಕ್ಕೆ ಬೆಳ್ಳಿಯ ಅಪಹಾರದಂತೆಯೇ ಪ್ರಾಯಶ್ಚಿತ್ತ.

**ಗುರುಪತ್ನೀಗಮನ:-** ಇಲ್ಲಿ ಗುರುಪತ್ನಿ ಎಂದರೆ ಗುರುವಿನ ಹೆಂಡತಿ ಒಬ್ಬಳೇ ಅಲ್ಲ. ತನ್ನ ತಾಯಿ, ತಂಗಿ, ಮಿತ್ರನ ಪತ್ನಿ, ಗುರುಪತ್ನಿ, ಮಲತಾಯಿ ಎಲ್ಲರೂ ಸಮಾವೇಶ ವಾಗುತ್ತಾರೆ. ಹಾಗೆ ಮಾಡಿದವನು ತನ್ನ ಪಾಪಕ್ಕೆ ಪ್ರಾಯಶ್ಚಿತ್ತಪಟ್ಟು ತನ್ನ ಇಂದ್ರಿಯ ಛೇದ ಮಾಡಿಕೊಳ್ಳಬೇಕು. ಸಾಕ್ಷಾತ್ ತನ್ನ ತಾಯಿಯ ಸಂಗ ಮಾಡಿದರೆ, ಅವನಿಗೆ ಪ್ರಾಯಶ್ಚಿತ್ತವಿಲ್ಲ. ಅಂಥವರನ್ನು ಬೆಂಕಿ ಹಚ್ಚಿ ಸುಡಬೇಕು. ತನ್ನ ಸಮಾನ ಜಾತಿ, ಅಥವಾ ವಿಜಾತಿ ಸ್ತ್ರೀ ಸಹವಾಸ ಮಾಡಿದರೆ, ಒಂಭತ್ತು ವರ್ಷ ಬ್ರಹ್ಮಹತ್ಯಾ ಪ್ರಾಯಶ್ಚಿತ್ತ ಆಚರಿಸಬೇಕು.

ಕಾಮಾಂಧನಾಗಿ, ತಾಯಿಯ ತಂಗಿ, ತಂದೆಯ ತಂಗಿ, ಅತ್ತೆ ಚಿಕ್ಕಪ್ಪನ ಹೆಂಡತಿ, ಸೋದರಮಾವನ ಹೆಂಡತಿ, ಮಗಳು ಇವರ ಸಂಗ ಮಾಡಿದವನು ಬ್ರಹ್ಮಹತ್ಯಕ್ಕೆ ಹೇಳಿದ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಈ ನಾಲ್ಕು ಮಹಾಪಾತಕಿಗಳ ಸಹವಾಸ ಮಾಡಿದವನು ಐದನೆಯ ಮಹಾ ಪಾತಕಿ ಎನಿಸುವನು. ಈ ಮಹಾ ಪಾತಕಿಗಳ ಸಹವಾಸವನ್ನು ಐದು ದಿನ ಮಾಡಿದವನು 'ಕಚ್ಛ್ರ ', ಹನ್ನೆರಡು ದಿನ ಮಾಡಿದವನು 'ಮಹಾಸಾಂತಪನ ', ಒಂದು ತಿಂಗಳು ಮಾಡಿದವನು ಎರಡು 'ಚಾಂದ್ರಾಯಣ ' ವ್ರತ ಆಚರಿಸಬೇಕು. ಕಪ್ಪೆ, ಕಾಗೆ, ಮುಂಗಸಿ, ಹಂದಿ, ಇಲ್ಲಿ ಬೆಕ್ಕು, ಮೇಕೆ, ಕುರಿ, ನಾಯಿ, ಮತ್ತು ಕೋಳಿ ಇವುಗಳನ್ನು ಕೊಂದರೆ ಅರ್ಧ 'ಕೃಚ್ಛ್ರ ' ವ್ರತವನ್ನೂ, ಕುರಿ ಕೊಂದರೆ 'ಅತಿಕೃಚ್ಛ್ರ' ಆನೆಯನ್ನು ಕೊಂದರೆ 'ತಪ್ತ ಕೃಚ್ಛ್ರ' ಗೋವಧೆ ಮಾಡಿದರೆ ' 'ಪರಾರ್ಕವ್ರತಗಳನ್ನು ಆಚರಿಸಿ ಶುದ್ಧನಾಗಬೇಕು. ಇಚ್ಛಾಪೂರ್ವಕ ಗೋವಧೆ ಮಾಡಿದರೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತವಿಲ್ಲ. ಇದಲ್ಲದೇ ಸಣ್ಣ ಪುಟ್ಟ ವಸ್ತುಗಳನ್ನು ಎಂದರೆ ಹೂವು,ಹಣ್ಣು, ಗಡ್ಡೆ, ಗೆಣಸು, ಭಕ್ಷ್ಯ, ಭೋಜ್ಯ, ಪಾನ, ಶಯ್ಯಾ, ಆಸನ ಮುಂತಾದ ಯಾವುದನ್ನೇ ಕಳವು ಮಾಡಿದರೆ, ಪಂಚಗವ್ಯ ಪ್ರಾಶನ ಮಾಡಿ ಶುದ್ಧನಾಗಬೇಕು. ಒಣಗಿದ ಕಟ್ಟಿಗೆ ಹುಲ್ಲು, ಗಿಡ, ಬೆಲ್ಲ, ಚರ್ಮ, ಮಾಂಸಗಳನ್ನು ಕದ್ದರೆ ಮೂರು ದಿನ ಊಟ ಮಾಡಕೂಡದು. ಹಂಸ, ಕಾರಂಡವ, ಸಾರಸ, ಕಪೋತ, ಗಿಳಿ, ಟಿಟ್ಟಿಭ, ಚಾಪ, ಕಚ್ಛಪ, ಶಿಂಶುಮಾರ ಮುಂತಾದವುಗಳಲ್ಲಿ ಯಾವದನ್ನಾದರೂ ಕೊಂದರೆ ಹನ್ನೆರಡು ದಿನ ಭೋಜನವಿಲ್ಲದೆ ಇರಬೇಕು. ದ್ವಿಜನು, ರಜಸ್ವಲೆ, ವರ್ಣಬಾಹ್ಯ, ಮಹಾಪಾಪಿ, ಆದೇ ಹಡೆದವಳು, ಪತಿತ, ಎಂಜಲು ಇವುಗಳನ್ನು ಮುಟ್ಟಿದರೆ ಬಟ್ಟೆ ಸಹಿತ ಸ್ನಾನ ಮಾಡಬೇಕು. ಅನಂತರ ನೂರಾ ಎಂಟು ಗಾಯತ್ರಿ ಜಪ

ಮಾಡಬೇಕು. ರಜಸ್ವಲಾ ಮುಂತಾದವರನ್ನು ಮುಟ್ಟಿ ತಿಳಿಯದೇ ಊಟ ಮಾಡಿದ್ದರೆ ಮೂರು ದಿನ ಉಪವಾಸ ಮಾಡಿ ಪಂಚಗವ್ಯ ಪ್ರಾಶನ ಮಾಡಬೇಕು.

ಮಡಿಯಿಂದ ಇದ್ದಾಗ, ಪೂಜೆ, ಜಪ ಮಾಡುವಾಗ, ಸ್ನಾನ ಮಾಡುವಾಗ, ಊಟ ಮಾಡುವಾಗ, ರಜಸ್ವಲೆ ಮುಂತಾದವರ ಶಬ್ದವನ್ನು ಕೇಳಬಾರದು, ಕೇಳಿದರೆ ಉಂಡದ್ದನ್ನು ವಾಂತಿ ಮಾಡಿಕೊಂಡು ಸ್ನಾನ ಮಾಡಿ ಉಪವಾಸವಿದ್ದು, ಎರಡನೆಯ ದಿನವೂ ಕೇವಲ ಕುಪ್ಪವನ್ನು ಕುಡಿದು ನಂತರ ಶುದ್ಧಿ ಪಡೆಯಬೇಕು. ವ್ರತ ಮಾಡುವಾಗ ಮಧ್ಯಕಾಲದಲ್ಲಿ ರಜಸ್ವಲೆಯರ ಧ್ವನಿ ಕೇಳಿದರೆ ಗಾಯತ್ರಿ ಮಂತ್ರ ಸಾವಿರ ಸಲ ಪಠಿಸಬೇಕು. ನಾರದ, ಪಾಪಗಳಲ್ಲಿ ಹೆಚ್ಚಿನ ಪಾಪವೆಂದರೆ- ದ್ವಿಜ, ದೇವತೆಗಳ ನಿಂದೆ, ಇದಕ್ಕೆ ಬೇರೆ ಯಾವ ಪರಿಹಾರವಿಲ್ಲ. ಆದ್ದರಿಂದ ಮಹಾಪಾತಕಗಳಿಗೆ ವಿಧಿಸಿದ ಪ್ರಾಯಶ್ಚಿತ್ತವನ್ನೇ ಇದಕ್ಕೂ ಹೇಳಿದ್ದಾರೆ. ಒಟ್ಟಾರೆ ಮಹಾಪಾಪಗಳನ್ನು ಮಾಡಲಿ ಬಿಡಲಿ, ರಾಗದ್ವೇಷಾದಿಗಳನ್ನು ಬಿಟ್ಟು, ಪಶ್ಚಾತ್ತಾಪಪಟ್ಟು ಸರ್ವ ಪ್ರಾಣಿಗಳಲ್ಲಿ ದಯೆಯುಳ್ಳವನಾಗಿ ಶ್ರೀ ಹರಿಯನ್ನು ಧ್ಯಾನಿಸಿದರೆ ಪಾಪ ಪರಿಹಾರ ದೊರೆಯುವದು.

ನಾರದನೇ "ಸಕೃತ್ ಸಂಸ್ಮರಣಾದ್ ವಿಷ್ಣೋಃ ನಶ್ಯಂತಿ ಕ್ಲೇಶಸಂಚಯಾಃ" ಒಮ್ಮೆಯಾದರೂ ಶ್ರೀ ಹರಿಯ ಸ್ಮರಣೆ ಮಾಡಿದವನ ಪಾಪಗಳು ನಾಶವಾಗುತ್ತವೆ. ಅವನಿಗೆ ಸ್ವರ್ಗಾದಿ ಭೋಗಗಳು ಅನಾಯಾಸವಾಗಿಯೇ ದೊರಕುವವು. ಮೃತ್ಯುವು ಹತ್ತಿರದಲ್ಲಿಯೇ ಇರುವದು. ಐಶ್ವರ್ಯ ಚಂಚಲ, ಶರೀರವೋ ಮರಣೋನ್ಮುಖಿ. ಆದುದರಿಂದ ಗರ್ವವನ್ನು ಬಿಟ್ಟು ಭಗವಂತನ ಪೂಜೆಯನ್ನೂ ಭಕ್ತಿಯನ್ನೂ ಮಾಡಿ ಮೋಕ್ಷವನ್ನು ಹೊಂದಬೇಕು.

ನಾರದ ಮಹಾಪುರಾಣದಲ್ಲಿ ಮೂವತ್ತನೇಯ ಅಧ್ಯಾಯ ಮುಗಿದುದು



## ಯಮಮಾರ್ಗ

**ಅಧ್ಯಾಯ - ೩೧**

**ನಾರದ:-** ಮುನಿಶ್ರೇಷ್ಠರೆ, ವರ್ಣಾಶ್ರಮ ವಿಧಿಯನ್ನು ನೀವು ಚೆನ್ನಾಗಿ ವಿವರಿಸಿದಿರಿ. ಈಗ ಅತ್ಯಂತ ದುರ್ಗಮವಾದ ಯಮಮಾರ್ಗವನ್ನು ಕೇಳಲು ಅಪೇಕ್ಷಿಸುತ್ತೇನೆ.

**ಸನಕ:-** ಪಾಪಿಗಳಿಗೆ ಭಯಂಕರವಾದ ಈ ಯಮಮಾರ್ಗವು ಎಂಭತ್ತಾರು ಸಾವಿರ ಗಾವುದ ವಿಸ್ತಾರವಾಗಿದೆ. ಈ ಮಾರ್ಗದಲ್ಲಿ ದಾನ ಧರ್ಮ ಮಾಡಿದ ಪುಣ್ಯಾತ್ಮರು ಸುಖದಿಂದ ಪ್ರಯಾಣ ಮಾಡುವರು. ಪಾಪಿಗಳು ಮಾತ್ರ ಅತ್ಯಂತ ದುಃಖದಿಂದ ಪೀಡಿತರಾಗಿ ಈ ಸುದೀರ್ಘ ದಾರಿಯನ್ನು ಕ್ರಮಿಸಬೇಕಾಗುವದು. ಪಾಪಿಗಳನ್ನು ಯಮದೂತರು, ಆಯುಧ, ಬೆತ್ತ ಮುಂತಾದವುಗಳಿಂದ ಮೇಲಿಂದ ಮೇಲೆ ಚುಚ್ಚಿ ಹೊಡೆಯುತ್ತಿರುವದರಿಂದ, ಪಾಪಿಗಳು ಹೆದರಿ ಕಂಗಾಲಾಗಿ ಓಡುತ್ತ, ಬೀಳುತ್ತ, ಏಳುತ್ತ, ಬಕ್ಕ ನೆತ್ತಿ ಬರಿಗಾಲುಗಳಿಂದ ಮುಗ್ಗರಿಸುತ್ತ, ಅಳುತ್ತ ಪ್ರಯಾಣ ಮಾಡಬೇಕಾಗುವದು. ಕೆಸರು, ಬೆಂಕಿ, ಸುಡುವ ಮರಳು, ಮುಳ್ಳುಗಿಡ, ಕತ್ತಲೆ ಗುಹೆ ಸೂಜಿಹಾಸಿದ ದಾರಿಗಳಲ್ಲಿ ಓಡಾಡಬೇಕಾಗುವದು. ಓಡದಿದ್ದರೆ, ಸರಿಯಾಗಿ ನಡೆಯದಿದ್ದರೆ, ಹಗ್ಗದಿಂದ ಬಿಗಿದು, ಮೂಗಿನಲ್ಲಿ ದಾರ ಪೋಣಿಸಿ ಎಳೆದೊಯ್ಯುವರು. ಆದರೆ ಅನ್ನ, ಪಾನ, ತುಪ್ಪ, ಜೇನುತುಪ್ಪ,

ಕಾಯಿಪಲ್ಲೆ, ವಸ್ತ್ರ, ಭೂದಾನ, ಗೃಹದಾನ ಮಾಡಿದವರೆಲ್ಲ ತಾವು ನೀಡಿದ ಪದಾರ್ಥಗಳನ್ನು ಇಲ್ಲಿ ಯಥೇಷ್ಟವಾಗಿ ಸೇವಿಸುತ್ತ, ಆನಂದದಿಂದ ಈ ಮಾರ್ಗವನ್ನು ಕ್ರಮಿಸಿ ಯಮ ಪಟ್ಟಣ ಸೇರುವರು. ಪುಣ್ಯ ಮಾಡಿದವರನ್ನು ಯಮನೂ, ಯಮದೂತರು ಪ್ರೀತಿಯಿಂದ ಮಾತನಾಡಿ, ಆದರ ಮಾಡಿ, ಚೆನ್ನಾಗಿ ಪೂಜೆ ಮಾಡುತ್ತಾರೆ.

ಧರ್ಮ ಮಾಡಿದವರು ಎಲ್ಲ ಕಡೆಗೂ ಸತ್ಕರಿಸಲ್ಪಡುತ್ತಾರೆ. ಪುಣ್ಯಾತ್ಮರಲ್ಲಿ ಏನಾದರೂ ದೋಷವಿದ್ದರೂ ಯಮನು ಅವರಿಗೆ ಮೃದು ಹೃದಯದಿಂದಲೇ ಪುಣ್ಯ ಪಾಪಗಳನ್ನು ಅಲ್ಲಿಯೇ ಅನುಭವಿಸ ಹಚ್ಚುವನು. ಆದರೆ ಪಾಪಿಗಳನ್ನು ಮಾತ್ರ ವಿಚಿತ್ರ ಹಿಂಸೆಗೆ ಗುರಿಪಡಿಸಿ, ಅವರನ್ನು ನಿರ್ಭರ್ತ್ಸನೆ ಮಾಡಿ, ನಿಂದನೆಗೈದು ಗದರಿಸುವನು. ''ಇಂತಹ ಕ್ರೂರ ಕೃತ್ಯ ಮಾಡಲು ನಿಮಗೆ ವಿವೇಕವು ಇರಲಿಲ್ಲವೇ ? ವೇದ ಶಾಸ್ತ್ರಗಳ ಆಜ್ಞೆಯನ್ನು ಏಕೆ ಮೀರಿದಿರಿ? ಇಂದ್ರಿಯ ಸುಖಕ್ಕೆ ಏಕೆ ಮರುಳಾದಿರಿ? ಆಗ ನಗುತ್ತ ಮಾಡಿದ್ದನ್ನು ಈಗ ಅಳುತ್ತ ಅನುಭವಿಸಿರಿ. ''ಈಗ ಎಷ್ಟು ಅತ್ತರೆ ಏನು ಫಲ?'' ಎಂದು ಮುಂತಾಗಿ ಅವರನ್ನು ಧಿಕ್ಕರಿಸಿ ಘೋರ ದುಃಖಗಳನ್ನು ಕೊಡುತ್ತಾನೆ. ಮಾನವರು ಮಾಡುವ ಪಂಚ ಮಹಾಪಾತಕಾದಿ ದುಷ್ಕರ್ಮಗಳಿಗೆ ಅನಂತ ಕಾಲದವರೆಗೂ ಯಮ ಯಾತನೆಯನ್ನು ಅನುಭವಿಸ ಬೇಕಾಗುತ್ತದೆ. ಆದುದರಿಂದ ವಿವೇಕಿಯಾದವನು ಬೇಗನೇ ಎಚ್ಚತ್ತು, ಅನಂತಕಾಲದವರೆಗೆ ನರಕ ಯಾತನೆಯನ್ನು ಅನುಭವಿಸುವ ದುರ್ಧರ ಪ್ರಸಂಗವು ಬಾರದಂತೆ ಪುಣ್ಯ ಕರ್ಮ, ವಿಹಿತ ಕರ್ಮಗಳನ್ನು ಆಚರಿಸುವದರಲ್ಲಿ ಆಸಕ್ತನಾಗಿರಬೇಕು. ಇದರಂತೆ ಶ್ರೀ ಹರಿಯಲ್ಲಿ ಅಚಲ ಶ್ರದ್ಧೆಯಿಂದ ಸ್ವವಿಹಿತವಾದ, ಶಾಸ್ತ್ರೋಕ್ತ ಕರ್ಮಾನುಷ್ಠಾನ ಮಾಡಿದವನು ಅನಂತ ಕಾಲದ ವರೆಗೆ ಪುಣ್ಯ ಫಲೋಪ- ಭೋಗವನ್ನು ಹೊಂದುತ್ತಾನೆ.

**ನಾರದ:**- ಮಹಾ ಮುನಿಗಳೆ, ನನಗೆ ಈ ಸಂದರ್ಭದಲ್ಲಿ ಒಂದು ಸಂದೇಹ ಬಂದಿದೆ. ಅತಿ ಪಾಪ ಮಾಡಿದವರು ಅನಂತ ಕಾಲದವರೆಗೆ ದುಃಖವನ್ನು, ಅತಿ ಪುಣ್ಯ ಮಾಡಿದವರು ಅತ್ಯಂತ ಸುಖವನ್ನು ಅನುಭವಿಸುವರೆಂದು ತಾವು ಅಪ್ಪಣೆ ಕೊಡಿಸಿದಿರಿ, ಗ್ರಾಮದಾನ, ಮುಂತಾದ ಪುಣ್ಯಕರ್ಮಗಳಿಗೆ ಕೋಟಿ ಸಹಸ್ರ ಕಲ್ಪ ಪರ್ಯಂತ ಮಹಾಭೋಗ ಪ್ರಾಪ್ತಿ.

**ಗ್ರಾಮದಾನಾದಿಪುಣ್ಯಾನಾಂ ತ್ವಯೈವ ವಿಧಿನಂದನ ।**
**ಕಲ್ಪಕೋಟಿ ಸಹಸ್ರೇಷು ಮಹಾನ್ ಭೋಗ ಉದಾಹೃತಃ ॥**

ಎಂಬ ಪ್ರಮಾಣ ವಚನ ಉದಾಹರಿಸಿ, ಸಾವಿರಾರು ಕೋಟಿ ಕಲ್ಪವರ್ಷ ದಿವ್ಯ ಭೋಗಾನುಭೋಗಗಳ ಫಲವನ್ನು ಹೇಳಿರುವಿರಿ. ಆದರೆ ಚತುರ್ಮುಖ ಬ್ರಹ್ಮದೇವನಿಗೆ ಒಂದು ದಿನ ಕಳೆದರೆ ಮೂರು ಲೋಕಗಳು ನಾಶವಾಗುತ್ತವೆ. ಇದಕ್ಕೆ 'ಅವಾಂ ತರ ಪ್ರಳಯ' ಅಥವಾ 'ದೈನಂದಿನ ಪ್ರಳಯ'ವೆಂದು ಹೆಸರು. ಎರಡು 'ಪರಾರ್ಧ'ಗಳು ಕಳೆದರೆ ಬ್ರಹ್ಮಾಂಡವೇ ನಾಶವಾಗುತ್ತದೆ. ಆಗ ಶ್ರೀಹರಿಯೊಬ್ಬನೇ ಉಳಿದಿರುತ್ತಾನೆ. ಎಂದು ತಾವು ತಿಳಿಸಿದಿರಿ. ಆದುದರಿಂದ ಈ ಪ್ರಾಕೃತ ಪ್ರಳಯವಾಗುವಷ್ಟರಲ್ಲಿ ಮಾನವ ಜೀವಿಗಳು ಅನುಭವಿಸಬೇಕಾದ ಕೋಟಿ ಸಹಸ್ರ ಕಲ್ಪ ಪರ್ಯಂತ ಭೋಗಿಸಬೇಕಾದ ಪುಣ್ಯ ಪಾಪಕರ್ಮಗಳ ಫಲೋಪಭೋಗವು ಮುಗಿಯುವದೆಂತು ? ಈ ನನ್ನ ಸಂಶಯವನ್ನು ತಾವೇ ಪರಿಹರಿಸಬೇಕು.

**ಸನಕ:**-ನೀನು ನಿಜವಾಗಿಯೂ ಮಹಾಪ್ರಾಜ್ಞ. ರಹಸ್ಯವಾದ ವಿಷಯವನ್ನೇ ಕೇಳಿರುವಿ. ಇದನ್ನು ನಿನಗೆ ತಿಳಿಸಿ ಹೇಳುತ್ತೇನೆ ಕೇಳು.

**ನಾರಾಯಣೋಽಕ್ಷರೋಽನಂತಃ ಪರಂಜ್ಯೋತಿಃ ಸನಾತನಃ**
**ಬ್ರಹ್ಮರೂಪೇಣ ಸೃಜತಿ ವಿಷ್ಣುರೂಪೇಣ ಪಾತಿ ಚ**
**ಅಂತೇ ಚ ರುದ್ರರೂಪೇಣ ಸರ್ವಮತ್ತೀತಿ ಸುಸ್ಥಿತಮ್ ॥**

ನಾಶರಹಿತನೂ, ಗುಣಪೂರ್ಣನೂ ಆದ ಆ ನಾರಾಯಣನು ಪರಂಜ್ಯೋತಿ ಸ್ವರೂಪನು, ಬ್ರಹ್ಮರೂಪದಿಂದ ಜಗತ್ತನ್ನು ಸೃಷ್ಟಿಸಿ, ವಿಷ್ಣುರೂಪದಿಂದ ಪಾಲಿಸಿ, ಕೊನೆಗೆ ರುದ್ರರೂಪದಿಂದ ಎಲ್ಲವನ್ನೂ ನಾಶಮಾಡುವನು. ಇದು ನಿಶ್ಚಿತವಾದ ವಿಷಯ.

**ಪ್ರಳಯಾಂತೇ ಸಮುತ್ಥಾಯ ಬ್ರಹ್ಮರೂಪೀ ಜನಾರ್ದನಃ ।**
**ಚರಾಚರಾತ್ಮಕಂ ವಿಶ್ವಂ ಯಥಾಪೂರ್ವಮಕಲ್ಪಯತ್ ॥**

ಪ್ರಳಯ ಕಾಲದಲ್ಲಿ ಸಮುದ್ರದಲ್ಲಿ ಶಯನಮಾಡಿದ ಆ ಜನಾರ್ದನನೇ ಯೋಗನಿದ್ರೆಯಿಂದ ಎಚ್ಚೆತ್ತು ಬ್ರಹ್ಮರೂಪಿಯಾಗಿ ಚರಚರಾತ್ಮಕವಾದ ವಿಶ್ವವನ್ನು ಮೊದಲಿನಂತೆ ಸೃಷ್ಟಿಸುತ್ತಾನೆ. ಆದುದರಿಂದ ಮಾಡಿದ ಪುಣ್ಯ ಪಾಪಗಳ ಫಲವನ್ನು ನರನು ಅನುಭವಿಸಿಯೇ ತೀರಬೇಕು. ಎಷ್ಟೇ ಯುಗಗಳು ಉರುಳಿದರೂ, ಮನುಷ್ಯನ ಪುಣ್ಯ ಪಾಪ ಕರ್ಮಗಳು ಅನುಭವಿಸದೇ ಮುಗಿಯುವದಿಲ್ಲ. ಆದುದರಿಂದ ಎಷ್ಟು ಕಲ್ಪಗಳು ಉರುಳಿದರೂ ಶುಭಾಶುಭ ಕರ್ಮಫಲಗಳನ್ನು ಅನುಭವಿಸಿಯೇ ತೀರಬೇಕು.

ಜಗನ್ನಿಯಾಮಕನಾದ ಶ್ರೀ ಹರಿಯು ಸಕಲ ಕರ್ಮ ಫಲದಲ್ಲಿಯೂ ಸಾರಾಂಶವನ್ನು ತೆಗೆದುಕೊಂಡು 'ಸರ್ವಸಾರ ಭೋಕ್ತಾ' ಎನಿಸಿದ್ದಾನೆ.

ನಾರದ ಮಹಾಪುರಾಣದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿದುದು



## ವರ್ಣಾಶ್ರಮ ಧರ್ಮನಿರೂಪಣ

ಅಧ್ಯಾಯ - ೩೨

**ಸನಕ:-** ಪ್ರಾಣಿಗಳು ಕರ್ಮಪಾಶದಿಂದ ಯಾವಾಗಲೂ ಬದ್ಧರು. ತಮ್ಮ ಪುಣ್ಯಕಾರ್ಯಗಳ ಫಲವನ್ನು ಪುಣ್ಯಸ್ಥಾನಗಳಲ್ಲಿಯೂ, ಪಾಪ ಫಲವನ್ನು ನರಕಗಳಲ್ಲಿಯೂ ಅನುಭವಿಸಿ ಕೆಲವು ಕರ್ಮಗಳನ್ನು ಹೋಗಲಾಡಿಸಿಕೊಳ್ಳುವರು, ಉಳಿದ ಕರ್ಮಫಲ ಅನುಭವಿಸುವದಕ್ಕಾಗಿ ಭೂಲೋಕಕ್ಕೆ ಬರುವರು. ಇಲ್ಲಿ ಗಿಡ, ಬಳ್ಳಿ, ಪೊದರು, ಬೆಟ್ಟ, ಹುಲ್ಲು ಮುಂತಾದ ಸ್ಥಾವರ ಜನ್ಮವನ್ನು ಪಡೆಯುವರು, ಸ್ಥಾವರ ಜನ್ಮದಲ್ಲಿ ಯಾವ ಜ್ಞಾನವೂ ಇರುವದಿಲ್ಲ. ಅವು ಪೂರ್ಣವಾಗಿ ಅಜ್ಞಾನದಿಂದ ಕೂಡಿರುತ್ತವೆ. ಮುಂದೆ ನೀರು, ಗೊಬ್ಬರ ಮುಂತಾದ ಸಂಸ್ಕಾರದಿಂದ ಮೊಳಕೆಯಾಗಿ, ಅಂಕುರ, ಎಲೆ, ದಂಟು, ನಾಳ, ಕುಡಿ, ಮಿಡಿ, ಹೂ, ಕಾಯಿ, ಹಣ್ಣು ಮುಂತಾದ ರೂಪದಿಂದ ಹೊರಹೊಮ್ಮುತ್ತವೆ. ಈ ಹೂವುಗಳಲ್ಲಿ ಕೆಲವು ಸಫಲ, ಹಲವು ನಿಷ್ಫಲ ಇರುವವು. ಆ ಹೂವುಗಳು ಬೆಳೆದು ಪರಿಣತವಾದ ಬಳಿಕ ಅವುಗಳಲ್ಲಿ 'ತುಷಾ' ಎಂಬ ಹೊಟ್ಟು ಹುಟ್ಟುತ್ತದೆ. ಅನುಭವಿಸುವ ಪ್ರಾಣಿಗಳ ಅದೃಷ್ಟಾನುಸಾರವಾಗಿ ಆ ತುಷಾಗಳು ಚಂದ್ರನ ಕಿರಣಗಳ ಸಂಬಂಧದಿಂದ ಹಾಲಾಗಿ ಪರಿಣಮಿಸಿದ ಧಾನ್ಯರಸದಿಂದ ಬತ್ತದ ಆಕಾರವನ್ನು ಹೊಂದುವವು.

ಈ ಎಲ್ಲ ಸ್ಥಾವರ ಜನ್ಮಗಳಲ್ಲಿಯೂ ಪ್ರಾಣಿಗಳಿಗೆ ಕಡಿಯುವದು, ಮುರಿಯುವದು, ಸುಡುವದು, ಬಿಸಿಲು, ಚಳಿ, ಮಳೆ, ಗಾಳಿಗಳ ಉಪದ್ರವ, ಅದರಿಂದ ದುಃಖ, ಮರಣ ಎಲ್ಲವೂ ಇದ್ದದ್ದೆ. ಎಷ್ಟೋ ಕ್ರಿಮಿಗಳಾಗಿ ಹುಟ್ಟಿ, ಬಲಿಷ್ಠ ಪ್ರಾಣಿಗಳಿಂದ ಪೀಡಿತವಾಗಿ, ಶೀತ, ಮುಂತಾದವುಗಳಿಂದ ದುಃಖ ಪಡುತ್ತ, ಮಲಮೂತ್ರಾದಿಗಳಲ್ಲಿ ಹೊರಳಾಡಬೇಕಾಗುತ್ತದೆ.

ಅನಂತರ, ಪಶು ಜನ್ಮ ಹೊಂದಿ, ಸಜಾತಿ ಹಾಗೂ ವಿಜಾತೀಯ ಬಲಿಷ್ಠ ಪ್ರಾಣಿಗಳಿಂದ ಬಾಧೆ, ಭಯ, ದುಃಖ ಪಡುತ್ತ ಕಾಡಿನಲ್ಲಿ ಆಹಾರಕ್ಕಾಗಿ ಕಂಡಕಂಡಲ್ಲಿ ಅಂಡಲೆದು ದುಃಖಪಡುವವು. ಕೆಲವು ಜನ್ಮದಲ್ಲಿ ಹುಲ್ಲು, ಮಾಂಸ, ಅಮೇಧ್ಯ, ಗಡ್ಡೆಗೆಣಸು ತಿನ್ನುತ್ತ ದುಃಖ ಅನುಭವಿಸುತ್ತವೆ. ಪಶುಗಳಾದಾಗ ತಮ್ಮವರ ವಿಯೋಗ, ಭಾರಹೊರುವದು, ಬಡಿಗೆ ಬಾರಕೋಲಿನಿಂದ ಹೊಡೆತ ತಿನ್ನುವದು, ನೇಗಿಲು ಎಳೆಯುವದು ಮೊದಲಾದ ದುಃಖ ಅನುಭವಿಸುತ್ತವೆ. ಹೀಗೆ ಅನೇಕ ಸ್ಥಾವರ, ಜಂಗಮ ಯೋನಿಗಳಲ್ಲಿ ತಿರುಗಿದ ಬಳಿಕ ಮನುಷ್ಯ ಜನ್ಮ ಪಡೆಯುವರು. ಈ ಮನುಷ್ಯ ಜನ್ಮದಲ್ಲಿ ಸ್ತ್ರೀ ಪುರುಷ ಸಂಯೋಗದಿಂದ ಶುಕ್ಲ ಶೋಣಿತಗಳ ಸಂಯೋಗದಿಂದ 'ಕಲಲ'ವೆಂಬ ಉಭಯ ಪರಿಣತ ಪಿಂಡದಲ್ಲಿ ಸೇರುವದು - ಆ ಹುಟ್ಟಲಿರುವ ಪ್ರಾಣಿ. ಐದು ದಿವಸಗಳಲ್ಲಿ ಕಲಲವಾಗಿದ್ದುದು ಹದಿನೈದು ದಿನಕ್ಕೆ 'ಪಲಲ'ವಾಗಿ ತಿಂಗಳಲ್ಲಿ ಚೋಟು ಪರಿಮಿತಿ ಉಳ್ಳದ್ದಾಗಿರುತ್ತದೆ, ಆಗಿನ್ನೂ ಜೀವ, ಭಾವ ಬಂದಿರುವದಿಲ್ಲ.

ಎರಡು ತಿಂಗಳಿಗೆ ಜೀವಭಾವ ಮೂರು ತಿಂಗಳಿಗೆ ರೂಪ, ಆಕಾರ, ನಾಲ್ಕು ತಿಂಗಳಾದ ಬಳಿಕ ಅವಯವಗಳ ಬೆಳವಣಿಗೆ, ಐದು ತಿಂಗಳಿಗೆ ಉಗುರುಗಳು, ಆರು ತಿಂಗಳಿಗೆ ಸಂಧಿಗಳ ಸ್ಫುಟತ್ವ ಹೊಂದುವದು. ಆ ಬಳಿಕ ದುಃಖಾನುಭವ ಪ್ರಾರಂಭವಾಗುತ್ತದೆ. ಮಲಮೂತ್ರಗಳ ಕುಂಡದಲ್ಲಿ ಉರುಳಾಡುತ್ತ, ರಕ್ತ ಮೂಳೆ, ಕ್ರಿಮಿ, ಕೊಬ್ಬು, ನರ ಮುಂತಾದವುಗಳಿಂದ ಆವೃತವಾಗಿ ದುಃಖ ಪಡುತ್ತಾನೆ. ತಾಯಿಯ ನಾಲಿಗೆಯ ರುಚಿಗಾಗಿ ಹುಳಿ, ಉಪ್ಪು, ಖಾರ, ಬಿಸಿ ಬಿಸಿ ಪಾನ, ಕರಿದ ಹುರಿದ ಪದಾರ್ಥ ತಿಂದಾಗ ಈ ಜೀವಕ್ಕೆ ಮೈಯಲ್ಲಿ ಉರುಪು. ಆಗ ಆ ಜೀವಕ್ಕೆ ಪೂರ್ವಜನ್ಮದ ಸ್ಮರಣೆ ಇರುವದು. ಹಿಂದಿನ ತನ್ನ ಪಾಪಗಳನ್ನು ನೆನೆದು ಪಶ್ಚಾತ್ತಾಪ ಪಡುವದು.

ಅಯ್ಯೋ! ನಾನು ಎಂತಹ ಪಾಪಿ! ಹಿಂದೆ ನನ್ನ ಮಡದಿ ಮಕ್ಕಳ ಮೇಲಿನ ಮೋಹದಿಂದ ಅವರ ಪೋಷಣೆಗಾಗಿ ಹೆರವರ ಹಣ ಎತ್ತಿ ಹಾಕಿದೆ, ಕೊಲೆ ಕಳವು ಮಾಡಿದೆ. ಕಾಮಾಂಧನಾಗಿ ಪರಸ್ತ್ರೀ ಸಂಗ ಮಾಡಿದೆ. ಇಷ್ಟು ಕಷ್ಟಪಟ್ಟು ನಾನು ಆಗ ಪೋಷಿಸಿದ ಆ ನನ್ನ ಮಡದಿ, ಮಕ್ಕಳು ನನ್ನ ಸಂಕಟ ಕಾಲದಲ್ಲಿ ರಕ್ಷಿಸುವರೆ? ಯಾರೂ ಇಲ್ಲ, ಅಯ್ಯೋ! ಎಂತಹ ಉರಿ...! ಸಂಕಟ...! ದುಃಖ......! ಇನ್ನು ನಾನು ಹುಟ್ಟಿದ ಬಳಿಕ, ಇಂತಹ ಯಾವ ಮಾಯಾ ಮೋಹದ ಸುಳಿಯಲ್ಲಿ ಸಿಕ್ಕು ಬೀಳದೇ ಶ್ರೀಲಕ್ಷ್ಮೀಪತಿಯನ್ನು ಭಕ್ತಿಯಿಂದ ಪೂಜಿಸಿ ಈ ಸಂಸಾರ ಬಂಧನವನ್ನು ಕಳೆದುಕೊಳ್ಳುವೆನು.'' ಹೀಗೆ ಗರ್ಭವಾಸವು ಕಳೆದು ಪ್ರಸವ ಕಾಲ ಬಂದಾಗ, ವಾಯುವಿನಿಂದ ಪೀಡಿತನಾಗಿ, ಹೊಟ್ಟೆಯಲ್ಲಿ ಮೂಡಿದ ಕೂಸು, ತಾಯಿಯನ್ನೂ ಹಿಂಸೆ ಪಡಿಸುತ್ತ ಗರ್ಭ ಬಿಟ್ಟು ಬಲಾತ್ಕಾರವಾಗಿ ಹೊರಗೆ ದೂಡಲ್ಪಡುತ್ತದೆ. ಆ ಕಾಲದಲ್ಲಿ ಎಲ್ಲ ಯಾತನಾಭೋಗಗಳು ಆ ಜೀವಕ್ಕೆ ಬರುತ್ತವೆ. ಆ ಅತಿ ದುಃಖದಿಂದ ಗರ್ಭದಿಂದ ಹೊರಬಂದ ಕೂಡಲೇ ಜೀವವು ಚೇತನಾ

ಶೂನ್ಯವಾಗುತ್ತದೆ. ಆ ಶಿಶುವನ್ನು ಬಾಹ್ಯವಾಯು ಪುನರುಜ್ಜೀವನಗೊಳಿಸುತ್ತದೆ. ಬಾಹ್ಯ ವಾಯು ಸಂಪರ್ಕದಿಂದ, ಪೂರ್ವ ಜನ್ಮದ ಸ್ಮರಣೆ ಹೋಗಿಬಿಡುತ್ತದೆ. ಹೀಗೆ ಶೈಶವಾವಸ್ಥೆಯಲ್ಲಿ ಮಲಮೂತ್ರಗಳಲ್ಲಿ ಹೊರಳಾಡುತ್ತ, ಅಳುತ್ತ, ತಾಯಿ ಉಣಿಸಿದಾಗ ಉಂಡು ಮಲಗಿಸಿದಾಗ ಮಲಗಿ, ಕ್ರಿಮಿ ಕೀಟಗಳು ಕಚ್ಚಿದರೂ ತಡೆಯಲು ಅಶಕ್ತನಾಗಿ ದುಃಖ ಪಡುತ್ತಾನೆ. ಹೀಗೆ ಬಾಲ್ಯದಲ್ಲಿ ನಂತರ ದೊಡ್ಡವನಾದ ಕೂಡಲೇ, ತಾಯಿ, ತಂದೆಗಳ, ಉಪಾಧ್ಯಾಯರ, ಕಿರಿಯರ, ಗೆಳೆಯರ, ಹೊಡೆತ, ಬೈಗಳನ್ನು ತಿನ್ನುತ್ತ, ಮಣ್ಣಲ್ಲಿ ಆಡುತ್ತ, ಕಂಡದ್ದಕ್ಕೆ ಆಸೆಪಟ್ಟು, ಅದು ದೊರಕದೇ ದುಃಖಿಸುತ್ತ ಇರುವನು. ಯೌವನದಲ್ಲಿ ಹಣದ ಹವ್ಯಾಸ, ಹೆಣ್ಣಿನ ನಾದ, ಕಾಮ ಕ್ರೋಧ, ಹೊಟ್ಟೆಕಿಚ್ಚುಗಳಿಂದ ಯಾವಾಗಲೂ ದುಃಖಿಸುವನು. ಪರದ್ರವ್ಯ, ಪರಸ್ತ್ರೀಯರ ಆಶೆಯಿಂದ ಅಪಮಾನ, ಸಾಹಸ, ನಿರಾಶೆಗಳನ್ನೂ ಮಡದಿ ಮಕ್ಕಳ ಪೋಷಣೆಯ ಚಿಂತೆಯನ್ನೂ, ತನ್ನ ಹಾಗೂ ಪರಿವಾರದವರ ರೋಗರುಜಿನಗಳಿಂದ ದುಃಖಗಳನ್ನೂ ಅನುಭವಿಸುತ್ತ ಯಾತನೆ ಪಡುತ್ತಾನೆ. ಈ ಸಂಸಾರದಲ್ಲಿ ಚಿಂತೆ ಒಂದೇ ಎರಡೇ?

ಹೀಗೆ ಚಿಂತಾಕ್ರಾಂತನಾಗಿರುವಲ್ಲಿ ಮುಪ್ಪು ಆವರಿಸಿ, ದೇಹವೆಲ್ಲವೂ ಸುಕ್ಕಾಗಿ ಕಿವುಡು, ಕುರುಡು, ದಮ್ಮು, ಕೆಮ್ಮು ಮುಂತಾದ ರೋಗಗಳಿಂದ ದುಃಖಪಡುತ್ತ, ಯಾವಾಗ ಮರಣ ಬರುವದೋ ಎಂದು ಮನಸ್ಸಿನಲ್ಲಿ ಸಂತಾಪ ಪಡುತ್ತಾನೆ. ಅನಂತರ ಮರಣ ಕಾಲ ಸಮೀಪಿಸಿದಾಗ, ತನ್ನ ದುಷ್ಕರ್ಮಗಳಿಂದ ತಾನು ಗಳಿಸಿದ ದುಃಖವನ್ನು ಪರಿಹರಿಸಿಕೊಳ್ಳುವ ಚಿಂತೆ ಮಾಡುವನು. ಮಡದಿ ಮಕ್ಕಳು ತನ್ನ ಮಾತನ್ನೇ ಕೇಳುವದಿಲ್ಲವೆಂಬ ಆಂತರಿಕ ಸಂತಾಪ ಹೊಂದಿ, ಈ ಲೋಕ ಹೇಗೆ ಬೇಗ ಬಿಟ್ಟು ಹೋಗುವೆನೆಂದು ಒದ್ದಾಡುತ್ತ ಉಸಿರುಕಟ್ಟಿ ಸತ್ತುಹೋಗುವನು. ಅನಂತರ ಯಮದೂತರಿಂದ ತಾಡನ, ಛೇದನ ಮೊದಲಾದ ಯಾತನೆಗಳಿಂದ ಯಮಪಾಶದಲ್ಲಿ ಬಂಧಿತನಾಗಿ ನರಕದ ಯಾತನೆ, ಅನುಭವಿಸುತ್ತಾನೆ. ಮತ್ತೆ ಜನ್ಮ, ಮತ್ತೆ ಮರಣ ಮತ್ತೆ ದುಃಖ ಹೀಗೆ ತಾನು ಮಾಡಿದ ಕರ್ಮಗಳು ಸವೆಯುವವರೆಗೆ, ಈ ಸುಖದುಃಖಗಳ ಚಕ್ರದಲ್ಲಿ ಈ ಜೀವಿಯು ಅನುಭವಿಸಬೇಕಾಗುವದು. ಆದ ಕಾರಣ

**ತಸ್ಮಾತ್ ಸಂಸಾರದಾವಾಗ್ನಿ ತಾಪಾರ್ತೋ ದ್ವಿಜಸತ್ತಮ**
**ಅಭ್ಯಸೇತ್ ಪರಮಂ ಜ್ಞಾನಂ ಜ್ಞಾನಾತ್ ಮೋಕ್ಷಮವಾಪ್ನುಯಾತ್॥**

ಆದುದರಿಂದ ಸಂಸಾರವೆಂಬುದು ಒಂದು ಕಾಡ್ಗಿಚ್ಚು, ಇದರ ಉರಿಯ ತಾಪದಿಂದ ಬಳಲುವವರು, ಪರಮಾತ್ಮನ ದಿವ್ಯ ಜ್ಞಾನವನ್ನು ಅಭ್ಯಾಸದಿಂದ ಪಡೆಯಬೇಕು. ಜ್ಞಾನದಿಂದ ಮೋಕ್ಷವನ್ನು ಹೊಂದಬೇಕು. ಮನುಷ್ಯಜನ ಹೊಂದಿಯೂ, ಭವಬಂಧನದಿಂದ ಬಿಡಿಸುವ ಶ್ರೀ ಹರಿಯನ್ನು ಸೇವಿಸದಿದ್ದರೆ ಅವನಂತಹ ಮೂರ್ಖನು ಬೇರೆ ಯಾರು?

**ಅಹೋ ಚಿತ್ರಮಹೋ ಚಿತ್ರಮಹೋ ಚಿತ್ರಂ ಮುನೀಶ್ವರ!**
**ಆಸ್ಥಿತೇ ಕಾಮದೇ ವಿಷ್ಣೌ ನರಾಯಾಂತಿ ಹಿ ಯಾತನಾಂ ॥**

ಮುನಿವರ್ಯನೆ, ಇಷ್ಟಾರ್ಥಗಳನ್ನು ಕೊಡಲು ವಿಷ್ಣು ಸನ್ನಿಧಾನನಾಗಿದ್ದಾಗಲೂ, ಮನುಷ್ಯರು ದುಃಖಕ್ಕೆ ಈಡಾಗುವದು ಅತ್ಯಂತ ಆಶ್ಚರ್ಯ! ಆಶ್ಚರ್ಯ!! ಆಶ್ಚರ್ಯ!!!

**ನಾರಾಯಣೇ ಜಗನ್ನಾಥೇ ಸರ್ವಕಾಮ ಫಲಪ್ರದೇ ।**
**ಸ್ಥಿತೇऽಪಿ ಜ್ಞಾನರಹಿತಾಃ ಪಚ್ಯಂತೇ ನರಕೇಷ್ವಹೋ ॥**

ಜಗನ್ನಾಥನು ಸಕಲ ಇಚ್ಛೆಗಳನ್ನು ಈಡೇರಿಸಲು ವರಪ್ರದನಾಗಿದ್ದಾಗಲೂ, ಅವನ ನಾಮಸ್ಮರಣೆ, ಪೂಜೆ, ಆರಾಧನೆಗಳಿಂದ ಅವನನ್ನು ಸಂತೋಷಪಡಿಸಲಾರದೆ, ಅಜ್ಞಾನದಿಂದ ನರಕದಲ್ಲಿ ಬಿದ್ದು ದುಃಖಪಡುತ್ತಿದ್ದಾರೆ. ಈ ಮನುಷ್ಯ ಜನ್ಮವು ಬರುವದೇ ಕಷ್ಟ. ಅಂತಹ ಮಾನವ ಜನ್ಮವು ಬಂದಾಗ ವಿವೇಕಿಯಾದವನು, ಪರಲೋಕದ ಶ್ರೇಯಸ್ಸಿಗಾಗಿ ಪ್ರಯತ್ನಿಸಬೇಕು. ಶ್ರೀ ಹರಿಯನ್ನು ಭಕ್ತಿಯಿಂದ ಆರಾಧಿಸುವವರು ಆಧ್ಯಾತ್ಮ ಜ್ಞಾನವನ್ನು ಪಡೆಯುತ್ತಾರೆ. ಆದರಿಂದ ಎಂದೂ ಮರಳಿ ಬಾರದ ಶ್ರೇಷ್ಠಸ್ಥಾನವಾದ ವೈಕುಂಠವನ್ನು ಪಡೆಯುತ್ತಾರೆ. ಈ ಜನನ ಮರಣ ರೂಪವಾದ ಸಂಸಾರದಿಂದ ಪಾರಾಗಿ ಮೋಕ್ಷವನ್ನು ಪಡೆಯಲು ಇರುವ ಒಂದೇ ಒಂದು ಉಪಾಯವೆಂದರೆ - ದೇವದೇವನಾದ ನಾರಾಯಣನನ್ನು ಭಕ್ತಿಯಿಂದ ಆರಾಧಿಸುವದು.

*ನಾರದ ಮಹಾಪುರಾಣದಲ್ಲಿ ಮೂವತ್ತೆರಡನೇಯ ಅಧ್ಯಾಯ ಮುಗಿದುದು*

—o—

## ಸಮಾಧಿ ವಿವರಣೆ

**ಅಧ್ಯಾಯ - ೩೩**

**ನಾರದ:-** ಪೂಜ್ಯರಾದ ಸನಕ ಮುನಿಗಳೇ,ಸಂಸಾರ ಪಾಶದಿಂದ ಬದ್ಧರಾದವರಿಗೆ ಒದಗುವ ದುಃಖಗಳು ಅಸಂಖ್ಯ. ಈ ಸಂಸಾರ ಪಾಶವನ್ನು ಕಡಿಯುವವರು ಯಾರು? ಯಾವ ಉಪಾಯದಿಂದ ಮೋಕ್ಷವು ದೊರೆಯುವದು? ಪ್ರಾಣಿಗಳು ನಿತ್ಯವೂ ಕರ್ಮವನ್ನು ಮಾಡುತ್ತಲೇ ಇರುವರು. ಆದರಿಂದ ಕರ್ಮರಾಶಿಯ ಸಂಚಿತವಾಗುತ್ತಲೆ ನಡೆಯುವದು. ಅವುಗಳನ್ನು ಭೋಗಿಸಲು ಜನ್ಮವೆತ್ತಿ ಮತ್ತೆ ಕರ್ಮಮಾಡುವನು. ಕರ್ಮದಿಂದ ದೇಹ, ದೇಹದಿಂದ ಕರ್ಮ. ಈ ಕರ್ಮನಾಶಕ್ಕೆ ಉಪಾಯವೇನು? ಕರ್ಮದಿಂದ ನರನಿಗೆ ದೇಹ ಬಂದ ಬಳಿಕ ದೇಹಿಯು ಕಾಮಗಳಿಂದ ಬಂಧಿತನಾಗುವನು. ಕಾಮದಿಂದ ಲೋಭ, ಲೋಭದಿಂದ ಕ್ರೋಧ, ಕ್ರೋಧದಿಂದ ಧರ್ಮನಾಶ. ಧರ್ಮನಾಶದಿಂದ ಬುದ್ಧಿಭ್ರಮೆ. ಬುದ್ಧಿ ಹೊದರೆ ಪಾಪಾಚರಣೆ, ಪಾಪಾಚರಣೆಯಿಂದ ಮತ್ತೆ ದೇಹಪ್ರಾಪ್ತಿ. ಆ ದೇಹದಿಂದ ಮತ್ತೆ ಪಾಪಕರ್ಮ. ಹೀಗೆ ಅವ್ಯಾಹತವಾಗಿ ನಡೆಯುವದು. ಆದುದರಿಂದ ಈ ಜನನ ಮರಣ ಚಕ್ರತಪ್ಪಿ ಮೋಕ್ಷ ಹೊಂದುವ ಉಪಾಯ ತಿಳಿಸಿರಿ.

**ಸನಕ: ಮಹದಾದಿ ವಿಶೇಷಾಂತಾ ಜಾತಾ ಯಸ್ಯ ಪ್ರಭಾವತಃ ।**
**ತಂವಿದ್ಯಾತ್ ಮೋಕ್ಷದಂ ವಿಷ್ಣುಂನಾರಾಯಣಮನಾಮಯಂ ॥**

ಮಹಾತ್ತತ್ವ ಮೊದಲಾಗಿ ಭೂತ ವಿಶೇಷಗಳವರೆಗೂ ಸರ್ವವೂ ಯಾವ ಪರಮಾತ್ಮನ ಮಹಿಮೆಯಿಂದಲೇ ಉತ್ಪನ್ನವಾಯಿತೋ, ಅಂತಹ ನಿರ್ದುಷ್ಟನಾದ ನಾರಾಯಣ ನಾಮಕನಾದ ವಿಷ್ಣುವೇ ಮೋಕ್ಷದಾಯಕನೆಂದು ತಿಳಿಯತಕ್ಕದ್ದು.

**ಯಸ್ಯಾವತಾರ ರೂಪಾಣಿ ಬ್ರಹ್ಮಾದ್ಯಾ ದೇವತಾಗಣಾಃ**
**ಸಮರ್ಚಯಂತಿ ತಂ ವಿದ್ಯಾತ್ ಶಾಶ್ವತಸ್ಥಾನದಂ ಹರಿಂ ॥**

ಯಾವ ಪರಮಾತ್ಮನ ಮುಚ್ಛ್ಯ, ಕೂರ್ಮಾದಿ ಅವತಾರಗಳನ್ನು ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳು ಪೂಜೆ ಮಾಡುವರೋ, ಅಂತಹ ಶ್ರೀ ಹರಿಯು ಜೀವರಿಗೆ ಮೋಕ್ಷವನ್ನು ನೀಡುವವನು ಎಂದು ತಿಳಿಯಬೇಕು.

**ನಾರದ:-** ಯೋಗಿಗಳಿಗೆ ಯೋಗ ಸಿದ್ಧಿಯು ಯಾವ ಕರ್ಮದಿಂದ ಉಂಟಾಗುತ್ತದೆ? ಆ ಉಪಾಯವನ್ನು ತಿಳಿಸಿರಿ.

**ಸನಕ:-** ಮೋಕ್ಷವು ಪರಮಾತ್ಮನ ಅಪರೋಕ್ಷ ಜ್ಞಾನದಿಂದ ಲಭಿಸುವದು. ಆ ಅಪರೋಕ್ಷ ಜ್ಞಾನಕ್ಕೆ ಭಗವದ್ಭಕ್ತಿಯೇ ಮೂಲ ಕಾರಣ. ಆ ಭಕ್ತಿಯು ಉತ್ಪನ್ನವಾಗಬೇಕಾದರೆ, ಶ್ರವಣ, ಮನನಾದಿಗಳಿಂದ ಹುಟ್ಟಿದ ಪರಮಾತ್ಮನ ಪರೋಕ್ಷ ಜ್ಞಾನವು ಕಾರಣವು. ಈ ಪರೋಕ್ಷ ಜ್ಞಾನಕ್ಕೆ ಯಜ್ಞ ಯಾಗ, ತೀರ್ಥ ಯಾತ್ರೆ, ದಾನ, ಧರ್ಮ ಮುಂತಾದವುಗಳು ಕಾರಣವಾಗುವವು. ಮೋಕ್ಷ ಪ್ರಾಪ್ತಿಗೆ ಕಾರಣವಾದ ಎಲ್ಲ ಸಾಧನಗಳ ಹಿಂದೆ ಶ್ರೀ ಹರಿಯ ಭಕ್ತಿಯು ಓತಪ್ರೋತವಾಗಿರಬೇಕು. ಕರ್ಮದಿಂದ ಜ್ಞಾನ, ಜ್ಞಾನದಿಂದ ಭಕ್ತಿ, ಭಕ್ತಿಯಿಂದ ಪ್ರಸಾದ, ಪ್ರಸಾದದಿಂದ ಸಾಕ್ಷಾತ್ಕಾರ, ಸಾಕ್ಷತ್ಕಾರದಿಂದ ಮೋಕ್ಷ. ಆ ಮೋಕ್ಷವೇ ಮಾನವರ ಪರಮ ಗಂತವ್ಯ. ಯೋಗಿಗಳಿಗೆ ಜ್ಞಾನಕರ್ಮ ಲಭ್ಯವಾದ ಭಕ್ತಿ ಸಾಧ್ಯ. ಮೋಕ್ಷವು ಶ್ರೀ ಹರಿಯ ಪ್ರಸಾದದಿಂದ ನಿಶ್ಚಿತವಾಗಿಯೂ ಲಭಿಸುತ್ತದೆ. ಸಾಮಾನ್ಯ ಜನರು ವರ್ಣಾಶ್ರಮ ವಿಹಿತವಾದ ಕರ್ಮವನ್ನು ಮಾಡಬೇಕು. ಅದರಿಂದ ಜ್ಞಾನ, ಭಕ್ತಿ, ಪ್ರಸಾದ, ಮೋಕ್ಷಗಳು ಮುಂದೆ ದೊರಕುವವು. ವಿಹಿತ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಶ್ರೀ ಹರಿಯ ಆಜ್ಞೆಯೆಂದು ಮಾಡುವದು. ಕರ್ಮಯೋಗ. ಈ ಕರ್ಮಗಳಲ್ಲಿ ಮುಖ್ಯವಾದದ್ದು ಶ್ರೀ ಹರಿಯ ಪೂಜೆ. ಶ್ರೀ ಹರಿಯ ಪೂಜೆಯನ್ನು ಧ್ವಜ, ಭೂಮಿ, ಅನ್ನ, ಸೂರ್ಯ, ನೀರು, ಬೆಳ್ಳಿ, ಬಂಗಾರ, ಧಾತುಗಳ ಮೂರ್ತಿ, ಮನಸ್ಸು, ಚಿತ್ತ ಮುಂತಾದವುಗಳಲ್ಲಿ ಬರೆದು, ಕೊರೆದು, ಆವಾಹನೆ ಮಾಡಿ ಪೂಜಿಸಬೇಕು. ಸರ್ವ ಪ್ರಾಣಿಗಳಿಗೂ ಪರಮಾತ್ಮನೇ ಸ್ವಾಮಿ. ಅವನೇ ಸರ್ವ ನಿಯಾಮಕ. ಬ್ರಹ್ಮನಿಂದ ಆರಂಭಿಸಿ ತನ್ನ ತನಕ ಎಲ್ಲ ಜೀವಿಗಳು ಆ ಭಗವಂತನ ದಾಸರು ಎಂದು ತಿಳಿಯುವವರೆ ನಿಜವಾದ ಜ್ಞಾನಿಗಳು.

ಭಗವತ್ಪೂಜಾದಿ ಕರ್ಮಗಳನ್ನು ಮಾಡುವವನು ಕಾಮ, ಕ್ರೋಧಾದಿಗಳಿಂದ ದೂರ ಇರಬೇಕು. ಮನಸ್ಸಿನಲ್ಲಿ ಕಾಮ, ಕ್ರೋಧಾದಿಗಳನ್ನು ತುಂಬಿಕೊಂಡು ದೇವರ ಪೂಜೆ ಮಾಡಿದರೆ, ಅವನಿಗೆ ಡಂಭಾಚಾರಿ ಎನ್ನಬೇಕು. ಹೊಟ್ಟೆಯಲ್ಲಿ ಅಸೂಯೆ ಇಟ್ಟುಕೊಂಡು ಮಾಡಿದ ದೇವರ ಪೂಜೆ ವ್ಯರ್ಥ. ಕಾಯಾ, ವಾಚಾ, ಮನಸಾ ಪರೋಪಕಾರ ಮತ್ತು ಸರ್ವಜನರ ಹಿತವನ್ನು ಮಾಡುವವನೇ ದೇವಪೂಜೆಗೆ ಅರ್ಹನಾಗುತ್ತಾನೆ. ಯೋಗಿಯಾದವನು, ಯೋಗಾಭ್ಯಾಸದಿಂದ ಅಜ್ಞಾನವನ್ನು ನಾಶಪಡಿಸಿಕೊಂಡು ತಪಸ್ಸಮಾಧಿಯಿಂದ ಒಲಿಸಿಕೊಳ್ಳುವನು. ಯೋಗವು ಎಂಟು ಅಂಗಗಳಿಂದ ಸಿದ್ಧಿಸುತ್ತದೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಇವೇ ಆ ಎಂಟು ಯೋಗಾಂಗಗಳು. ಅವುಗಳ ಲಕ್ಷಣ ಹೇಳುತ್ತೇನೆ, ಕೇಳು. ಅಹಿಂಸೆ, ಸತ್ಯ ಕಳವು ಮಾಡದಿರುವದು, ಬ್ರಹ್ಮಚರ್ಯ, ಅಪರಿಗ್ರಹ, ಅಕ್ರೋಧ, ಅನಸೂಯೆ ಇವು ಎಂಟು 'ಯಮ' ಎನಿಸುವವು. ಈ ಯಮ ಎನ್ನುವದು ಯೋಗದ ಅಷ್ಟಾಂಗದಲ್ಲಿ ಮೊದಲನೆಯದು.

ಯಾವ ಪ್ರಾಣಿಗೂ ದುಃಖವುಂಟು ಮಾಡದಿರುವದು ಅಹಿಂಸೆ, ಧರ್ಮಾಧರ್ಮ ವಿವೇಕದಿಂದ ನಿಜನುಡಿಯುವದು ಸತ್ಯ. ಹೆರವರ ಸೊತ್ತನ್ನು ಅಪರಿಹರಿಸದಿರುವದು

ಅಸ್ತೇಯ. ಸ್ತ್ರೀಯ ಹೊರತು, ಯಾವ ನಾರಿಯನ್ನೂ ಕಣ್ಣೆತ್ತಿ ನೋಡದಿರುವದೇ ಬ್ರಹ್ಮಚರ್ಯ, ಎಂತಹ ಸಮಯದಲ್ಲಿಯೂ ಪರದ್ರವ್ಯವನ್ನು ಸ್ವೀಕರಿಸದಿರುವದು ಅಪರಿಗ್ರಹ. ಧನ, ವಿದ್ಯೆಗಳಿಂದ ಹಾಗೂ ಅಧಿಕಾರಗಳಿಂದ ಮತ್ತನಾಗಿ ನಿಷ್ಠುರ ನುಡಿಯದಿರುವದೇ ಅಕ್ರೋಧ. ಜ್ಞಾನಬಲ, ಐಶ್ವರ್ಯಗಳಿಂದ ತನಗಿಂತ ಮಿಗಿಲಾದವರನ್ನು ಕಂಡು ಹೊಟ್ಟೆ ಕಿಚ್ಚು ಪಡೆದಿರುವುದೇ ಅನಸೂಯೆ. ಹೀಗೆ ಇವು ಎಂಟು ಯಮ ಎಂಬ ಯೋಗಾಂಗ ಲಕ್ಷಣಗಳು.

ಇದರಂತೆ ನಿಯಮಗಳು, ತಪಸ್ಸು, ವೇದಶಾಸ್ತ್ರಾಧ್ಯಯನ, ಯದೃಚ್ಛಾಲಾಭ, ಸಂತೋಷ, ಶೌಚಾಚಾರ, ಹರಿಪೂಜೆ, ಸಂಧ್ಯಾವಂದನಾದಿ, ನಿತ್ಯಕರ್ಮಗಳು, ಇವು ಆರು ನಿಯಮಗಳೆಂದು ತಿಳಿಯಲ್ಪಡುತ್ತವೆ. ಮೂರನೆಯದಾದ ಆಸನಗಳು : ಪದ್ಮ ಸ್ವಸ್ತಿಕ, ಪೀಠ, ಸಿಂಹಾಸನ, ಕುಕ್ಕುಟ, ಕುಂಜರ, ಕೂರ್ಮ ಮುಂತಾಗಿ ಅನೇಕ ವಿಧವಾಗಿವೆ. ಇವುಗಳಿಂದ ಮನಸ್ಸನ್ನು ಏಕಾಗ್ರ ಮಾಡಿಕೊಂಡು ಭಗವಂತನ ಧ್ಯಾನ ಮಾಡಬೇಕು. ಯೋಗಾಭ್ಯಾಸ ಮಾಡಿ ಪ್ರಾಣವಾಯು ಜಯಿಸುವದಕ್ಕೆ ಪ್ರಾಣಾಯಾಮವೆನ್ನುವರು. ಈ ಪ್ರಾಣಾಯಾಮ ಪೂರಕ, ರೇಚಕ, ಕುಂಭಕ, ಶೂನ್ಯಕ ಎಂಬುದಾಗಿ ನಾಲ್ಕು ವಿಧವಾಗಿದೆ. ಪ್ರಾಣಗಳ ದೇಹದಲ್ಲಿ, ಬಲಭಾಗದಲ್ಲಿರುವ ನಾಡಿಯು ಪಿಂಗಳಾ ಎಡಭಾಗದಲ್ಲಿಯದು ಇಡಾ. ಇವೆರಡರ ಮಧ್ಯದಲ್ಲಿರುವದು 'ಸುಷುಮ್ನಾ ' ನಾಡಿ. ಎಡಗಡೆಯ ಮೂಗಿನಿಂದ ವಾಯುವನ್ನು ಬಿಡುವದಕ್ಕೆ ರೇಚಕವೆಂದು ಹೆಸರು. ಹೀಗೆ ವಾಯುವನ್ನು ಹೊರಗೆ ಬಿಡುವದಕ್ಕೆ ಕುಂಭಕವೆಂದು ಹೆಸರು. ಹೊರಗಿನ ವಾಯುವನ್ನು ಸ್ವೀಕರಿಸದೆ, ಒಳಗಿನ ವಾಯುವನ್ನು ಹೊರಗೆ ಬಿಡದೆ ಇರುವದು ಶೂನ್ಯಕವು. ಮದೋನ್ಮತ್ತವಾದ ಆನೆಯಂತಿರುವ ಈ ಪ್ರಾಣವಾಯುವನ್ನು ಮೆಲ್ಲಮೆಲ್ಲನೆ ಅಭ್ಯಾಸಿಸಿ ಗೆಲ್ಲಬೇಕು. ಒಮ್ಮೆಲೆ ಮಾಡಿದರೆ ಭಯಂಕರ ರೋಗಗಳು ಉಲ್ಬಣಿಸಿ ಬರುವವು. ಹೀಗೆ ವಾಯುವನ್ನು ಜಯಿಸಿ, ಶ್ವಾಸವನ್ನು ನಿರೋಧಗೈದು, ಭಗವಂತನ ಧ್ಯಾನ ಮಾಡುವ ಯೋಗಿಯು ವೈಕುಂಠ ಲೋಕವನ್ನು ಹೊಂದುವನು. ಪ್ರತ್ಯಾಹಾರ ಎಂದರೆ-ವಿಷಯಗಳಲ್ಲಿ ಸಂಚರಿಸುತ್ತಿರುವ ಇಂದ್ರಿಯಗಳನ್ನು ಸೆಳೆದು ನಿಗ್ರಹಿಸಿ, ಪರಮಾತ್ಮನಿಗೆ ಅಭಿಮುಖವಾಗಿ ಮಾಡುವದು, ಇಂದ್ರಿಯಗಳನ್ನು ಸೆಳೆದು ನಿಗ್ರಹಿಸದೇ ಧ್ಯಾನ ಮಾಡುವವನು ಮೂಢನೇ ಸರಿ. ನಮ್ಮ ಕಣ್ಣಿಗೆ ಕಾಣುವದೆಲ್ಲ, ನಮ್ಮ ಇಂದ್ರಿಯಗಳಿಗೆ ಗೋಚರವಾಗುವದೆಲ್ಲ, ಪರಮಾತ್ಮನ ಅಧೀನ ಎಂದು ತಿಳಿದು ವಿಷಯಗಳಲ್ಲಿ ಆಸಕ್ತವಾದ ಇಂದ್ರಿಯಗಳನ್ನು ಅಲ್ಲಿಂದ ಬಿಡಿಸಿ, ಭಗವಂತನಲ್ಲಿ ಮನಸ್ಸನ್ನು ಕೇಂದ್ರೀಕರಿಸುವದೇ ಧಾರಣೆ ಎನಿಸುವದು. ಹೀಗೆ ಯೋಗಾಭ್ಯಾಸದಿಂದ ಇಂದ್ರಿಯಗಳ ವೃಂದವನ್ನು ವಿಷಯಗಳತ್ತ ವಾಲದಂತೆ ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲಿಸಿ, ಜಗಜ್ಜನ್ಮಾದಿ ಕಾರಣನಾದ, ಸರ್ವಾಂತರ್ಯಾಮಿಯಾದ, ಶ್ರೀ ಹರಿಯನ್ನು ಧ್ಯಾನಮಾಡಬೇಕು. ಇದಕ್ಕೆ ಧ್ಯಾನವೆಂದು ಕರೆಯುವರು.

ತಾವರೆಗಣ್ಣನ ಬಂಗಾರದ ಯಜ್ಞೋಪವೀತ ಧರಿಸಿದ, ಪೀತಾಂಬರ ಉಟ್ಟ, ಸರ್ವಾಲಂಕಾರಗಳನ್ನು ತೊಟ್ಟ, ಕೊರಳಲ್ಲಿ ತುಳಸೀಮಾಲೆ, ಹೃದಯದಲ್ಲಿ ಕೌಸ್ತುಭ, ವಕ್ಷಸ್ಥಳದಲ್ಲಿ ಲಕ್ಷ್ಮೀ ಲಾಂಛನ ಧರಿಸಿದ, ಭಗವಂತನ ದಿವ್ಯವಾದ ಸುಂದರವಾದ ಮೂರ್ತಿಯನ್ನು ಹನ್ನೆರಡು ಅಂಗಲ ವಿಸ್ತಾರವಾದ ಹೃದಯಪದ್ಮದಲ್ಲಿ ಧ್ಯಾನ ಮಾಡಬೇಕು. ಧ್ಯಾನವೆಂದರೆ - ಧ್ಯೇಯನಾದ ಭಗವಂತನನ್ನೇ ವಿಷಯೀಕರಿಸುವ ಮನಸ್ಸಿನ

ಏಕಾಗ್ರತೆ, ಇಂತಹ ಧ್ಯಾನವನ್ನು ಪ್ರತಿದಿನವೂ ಮನುಷ್ಯನು ಒಂದು ಮುಹೂರ್ತವಾದರೂ ಮಾಡಬೇಕು. ಧ್ಯಾನದಿಂದ ಮಾನವನ ಪಾಪಗಳು ನಾಶವಾಗುತ್ತವೆ; ಪರಮಾತ್ಮನು ಪ್ರಸನ್ನನಾಗುತ್ತಾನೆ; ಮನುಷ್ಯನು ಮೋಕ್ಷವನ್ನು ಪಡೆಯುತ್ತಾನೆ.

ಈ ಧ್ಯಾನದ ಮುಂದಿನ ಮೆಟ್ಟಲು ಸಮಾಧಿ. ಈ ಸಮಾಧಿಯಲ್ಲಿ ಭಕ್ತನು ಸುಷುಪ್ತಿಯಂತೆ, ಸರ್ವ ಬಾಹ್ಯೇಂದ್ರಿಯ ವ್ಯಾಪಾರ ವರ್ಜಿತನಾಗಿ, ಪರಮಾತ್ಮನ ಧ್ಯಾನಾನಂದದಲ್ಲಿಯೇ ಲೀನನಾಗಿ ಇರುವದು. ಗಾಳಿಯಿಲ್ಲದಿರುವಲ್ಲಿ ದೀಪವು ಹೊಯ್ದಾಡದೇ ನಿಂತಿರುವಂತೆ, ಹೊರಗಿನ ಯಾವ ವಿಷಯಗಳ ವಾಸನೆಗಳಿಗೆ ಸೋಂಕದೆ, ಪರಮಾತ್ಮನ ರೂಪವನ್ನೇ ಅಂತರಂಗದಲ್ಲಿ ನಿಲ್ಲಿಸಿಕೊಂಡು, ಅದನ್ನೇ ನೆನೆಸುತ್ತ ದಾಹ್ಯಪ್ರಜ್ಞೆ ಇಲ್ಲದೆ, ದೇವರಲ್ಲಿ ತನ್ಮಯನಾಗಿ ಕೂಡುವುದಕ್ಕೆ ಸಮಾಧಿ ಎಂದು ಕರೆಯುತ್ತಾರೆ. ಈ ಸಮಾಧಿಯು ಸಂಪ್ರಜ್ಞಾತ, ಅಸಂಪ್ರಜ್ಞಾತ ಎಂದು ಎರಡು ಬಗೆಯಾಗಿದೆ. ಮೊದಲನೆಯದರಲ್ಲಿ ಕೆಲವೊಂದು ಕಾಲಾನಂತರ ಎದ್ದು, ಸ್ನಾನ ಸಂಧ್ಯಾದಿ ನಿತ್ಯ ವಿಧಿಗಳನ್ನು ಮಾಡಿ ಕ್ಲೃಪ್ತ ಆಹಾರ ಸೇವಿಸಿ ಮತ್ತೆ ತಪಃ ಸಮಾಧಿಯಲ್ಲಿ ಮಗ್ನನಾಗುವದು. ಆದರೆ ಅಸಂಪ್ರಜ್ಞಾತ ಸಮಾಧಿಯಲ್ಲಿ ಮಾತ್ರ ಆಹಾರ, ನಿದ್ರೆ, ಸ್ನಾನ, ಸಂಧ್ಯೆ, ಪೂಜೆ ಎಲ್ಲವನ್ನೂ ತೊರೆದು, ಯಾವುದರ ಪರಿವೆಯೂ ಇಲ್ಲದೆ, ಸಮಯದ ನಿರ್ಬಂಧ ವಿಲ್ಲದೆ, ಭಗವಂತನ ಧ್ಯಾನದಲ್ಲಿ ಮಗ್ನನಾಗಿ, ಬ್ರಹ್ಮಾನಂದದಲ್ಲಿ ಮುಳುಗಿ ಮೈಮರೆತು ನಿಂತು, ಬಾಹ್ಯ ಪ್ರಪಂಚದ ಪರಿಜ್ಞಾನ ಶೂನ್ಯನಾಗಿ ಬಿಡುವನು - ಅಂತಹ ಯೋಗಿ. ಅವನು ಹೊರಗಿನ ಶಬ್ದಗಳನ್ನು ಕೇಳುವದಿಲ್ಲ. ಹೊರಗಿನ ವಸ್ತುಗಳನ್ನು ಕಣ್ತೆರೆದು ನೋಡುವದಿಲ್ಲ. ಅವನ ಘ್ರಾಣೇಂದ್ರಿಯ ಗಂಧವನ್ನು ಗ್ರಹಿಸುವದಿಲ್ಲ. ಅವನ ಸರ್ವೇಂದ್ರಿಯಗಳೂ ಪರಮಾತ್ಮನಲ್ಲಿ ಕೇಂದ್ರೀಕೃತವಾಗಿರುವವು. ಇಂತಹ ಸಮಾಧಿಯೋಗ ದಿಂದ ಭಗವಂತನನ್ನು ಆರಾಧಿಸುವ ಯೋಗಿಗಳಿಗೆ, ಸಚ್ಚಿದಾನಂದ ದೇಹವುಳ್ಳ, ನಿರ್ದೋಷನಾದ ಪರಮಾತ್ಮನು, ಸಾಕ್ಷಾತ್ ಗೋಚರನಾಗುವನು. ಸಂಸಾರ ತಾಪದಿಂದ ಬಳಲುವ ಮನುಷ್ಯರಿಗೆ ಅಮೃತವೃಷ್ಟಿಯಂತಿದ್ದ ಇನ್ನೊಂದು ಧ್ಯಾನದ ಬಗೆಯನ್ನು ಹೇಳುತ್ತೇನೆ, ಕೇಳು. ಪ್ರಣವಮಂತ್ರ ಪ್ರತಿ ಪಾದ್ಯನಾದ, ಆ ಪರಮಾತ್ಮನು ಸರ್ವಗುಣ ಪರಿಪೂರ್ಣನೆಂದು ಧ್ಯಾನ ಮಾಡಬೇಕು. ಪ್ರಣವಮಂತ್ರಕ್ಕೆ ಪರಬ್ರಹ್ಮನೇ ಮುಖ್ಯ. ಇಂತಹ ಪ್ರಣವ ಮಂತ್ರಾರ್ಥನಾದ ಶ್ರೀ ಹರಿಯನ್ನು ಗುಣಪರಿಪೂರ್ಣನೆಂದು ತಿಳಿದು ಉಪಾಸಿಸುವವರು ಮೋಕ್ಷವನ್ನು ಹೊಂದುತ್ತಾರೆ. ಈ ಪ್ರಣವ ಮಂತ್ರ ಜಪಿಸುವಾಗ ಪರಮಾತ್ಮನ ಮೂರ್ತಿ ಅಥವಾ ಶಾಲಿಗ್ರಾಮವನ್ನು ಮನಸ್ಸಿನಲ್ಲಿ ಮೂಡಿಸಿಕೊಳ್ಳಬೇಕು.

**ಶಾಲಿಗ್ರಾಮ ಶಿಲಾರೂಪಂ ಪ್ರತಿಮಾರೂಪಮೇವ ವಾ**
**ಯದ್ಯತ್ ಪಾಪಹರಂ ವಸ್ತು ತತ್ತದ್ವಚ್ಚಿಂತಯೇತ್ ಹರಿಂ ॥**

ಪಾಪಗಳನ್ನು ಪರಿಹರಿಸುವ ಭಗವಂತನ ಕೃಷ್ಣ, ರಾಮ, ನರಸಿಂಹ, ವರಾಹ ಮುಂತಾದ ಯಾವದಾದರೂ ಒಂದು ರೂಪವನ್ನು, ಮನಸ್ಸಿನಲ್ಲಿ ಚಿತ್ರಿಸಿ ಧ್ಯಾನ ಗೈಯಬೇಕು. ಇದರಿಂದ ಉತ್ತಮವಾದ ಮೋಕ್ಷ ಲಭಿಸುತ್ತದೆ.

ನಾರದ ಮಹಾಪುರಾಣದಲ್ಲಿ ಮೂವತ್ತುಮೂರನೇಯ ಅಧ್ಯಾಯ ಮುಗಿದುದು

—o—

**ನಾರದ:-** ಭಕ್ತಿಯುಳ್ಳವರಿಗೆ ಮಾತ್ರ ಜ್ಞಾನಯೋಗ, ಕರ್ಮಯೋಗಗಳು ಸಿದ್ಧಿಸುವವು ಎಂದು ಹೇಳಿದಿರಿ. ಆ ಭಕ್ತಿಯು ಹುಟ್ಟಬೇಕಾದರೆ, ಭಗವಂತನು ಯಾರ ಮೇಲೆ ಪ್ರೀತನಾಗಿರುವನೋ ಅಂತಹ ಪುಣ್ಯವಂತನಿಗೆ ಮಾತ್ರ ಹುಟ್ಟುವದು, ಭಗವಂತನ ಅನುಗ್ರಹವಿಲ್ಲದೆ ಅವನಲ್ಲಿ ಭಕ್ತಿಯು ಹುಟ್ಟಲಾರದು. ಹಾಗಾದರೆ ಆ ಪರಮಾತ್ಮನು ಹೇಗೆ ಪ್ರೀತನಾಗುವನು? ಅವನನ್ನು ಪ್ರಸನ್ನಗೊಳಿಸುವ ಉಪಾಯ ಯಾವದು? ಇದನ್ನು ಹೇಳಿರಿ.

**ಸನಕ:-** ನಾರದನೇ, ನೀನು ಮುಕ್ತಿಯನ್ನು ಬಯಸುವದಾದರೆ ಜ್ಞಾನಾನಂದಾತ್ಮಕ ಶರೀರವುಳ್ಳವನೂ, ಉತ್ತಮದೇವನೂ ಆಗಿರುವ, ನಾರಾಯಣನನ್ನು ಸರ್ವ ಪ್ರಕಾರ ದಿಂದಲೂ ಭಜಿಸಬೇಕು.

**॥ ಸನಕ ಉವಾಚ ॥**

**ನಾರಾಯಣಂ ಪರಂ ದೇವಂ ಸಚ್ಚಿದಾನಂದವಿಗ್ರಹಂ**
**ಭಜ ಸರ್ವಾತ್ಮನಾ ವಿಪ್ರ ಯದಿ ಮುಕ್ತಿಮಭೀಪ್ಸ್ಯಸಿ ॥**
**ರಿಪವಸ್ತಂ ನ ಹಿಂಸಂತಿ ನ ಬಾಧಂತೇ ಗ್ರಹಾಶ್ಚ ತಂ ।**
**ರಾಕ್ಷಸಾಶ್ಚ ನ ಖಾದಂತಿ ನರಂ ವಿಷ್ಣು ಪರಾಯಣಂ ॥**
**ಭಕ್ತಿರ್ದೃಡಾ ಭವೇದ್ಯಸ್ಯ ದೇವ ದೇವೇ ಜನಾರ್ದನೇ ।**
**ಶ್ರೇಯಾಂಸಿ ತಸ್ಯ ಸಿದ್ಧಂತಿ ಭಕ್ತಿಮಂತೋಽಧಿಕಾಸ್ತತಃ ॥**

ವಿಷ್ಣು ಭಕ್ತನಾದ ಮನುಷ್ಯನನ್ನು ಶತ್ರುಗಳು ಹಿಂಸಿಸುವದಿಲ್ಲ. ಗ್ರಹಗಳೂ ಅವನನ್ನು ಪೀಡಿಸುವದಿಲ್ಲ. ರಾಕ್ಷಸರೂ ಸಹ ಅವನನ್ನು ತಿನ್ನುವದಿಲ್ಲ. ದೇವೋತ್ತಮನಾದ ಜನಾರ್ದನನಲ್ಲಿ ದೃಢವಾದ ಭಕ್ತಿಯನ್ನಿಟ್ಟಿರುವವನಿಗೆ ಶ್ರೇಯಸ್ಸುಗಳೆಲ್ಲವೂ ಸಿದ್ಧಿಸುತ್ತವೆ. ಆದುದರಿಂದ ಭಕ್ತಿಯುಳ್ಳವರು ಉತ್ತಮರು.

**ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।**
**ವೇದ ಶಾಸ್ತ್ರಾತ್ಪರಂ ನಾಸ್ತಿ ನ ದೇವಃ ಕೇಶವಾತ್ಪರಃ ॥**
**ಸತ್ಯಂ ವಚ್ಮಿ ಹಿತಂ ವಚ್ಮಿ ಸಾರಂ ವಚ್ಮಿ ಪುನಃ ಪುನಃ ।**
**ಅಸಾರೇಽಸ್ಮಿಂಸ್ತು ಸಂಸಾರೇ ಸತ್ಯಂ ಹರಿಸಮರ್ಚನಂ ।**
**ಸಂಸಾರಪಾಶಂ ಸುದೃಢಂ ಮಹಾಮೋಹಪ್ರದಾಯಕಂ ।**
**ಹರಿಭಕ್ತಿಕುಠಾರೇಣ ಛಿತ್ವಾತ್ಯಂತಸುಖೀ ಭವ ॥**

ಜನಾರ್ದನನ್ನು ದರ್ಶನ ಮಾಡುವವರ ಕಣ್ಣುಗಳೇ ಸಫಲಗಳೆಂತಲೂ ಹರಿನಾಮ ಸಂಕೀರ್ತನೆ ಮಾಡುತ್ತಿರುವ ಜಿಹ್ವೆಯೇ ಸಾರ್ಥಕವೆಂತಲೂ ಸಾಧುಗಳು ಹೇಳಿರುತ್ತಾರೆ. ವೇದಾದಿಗಳಿಗಿಂತ ಉತ್ತಮವಾದ ಶಾಸ್ತ್ರವಿಲ್ಲ. ಕೇಶವನಾಮಕನಾದ, ವಿಷ್ಣುವಿಗಿಂತ ಉತ್ತಮ ದೇವತೆಯಿಲ್ಲ. ಇದೇ ತತ್ವಸಾರವು, ಸತ್ಯವು, ಸತ್ಯವು, ಎಂದು ಬಾಹುಗಳನ್ನು ಎತ್ತಿ ಶಪಥ ಮಾಡಿಹೇಳಲ್ಪಟ್ಟಿದೆ. ಸತ್ಯವನ್ನು ಹೇಳುವೆನು. ಹಿತವನ್ನು ಹೇಳುವೆನು. ಸಾರವನ್ನು

ಹೇಳುವೆನು ಎಂದು ಪ್ರತಿಜ್ಞೆ ಮಾಡಿ, ಬಾರಿಬಾರಿಗೂ ಹೇಳಿರುವದರಿಂದ ಅಸಾರವಾದ ಈ ಸಂಸಾರದಲ್ಲಿ ಭಕ್ತಿಪೂರ್ವಕವಾಗಿ ಮಾಡುವ ವಿಷ್ಣುವಿನ ಆರಾಧನೆಯು ಸಾಧುವಾದುದು. ಆದುದರಿಂದ ಆನಂದ ಸ್ವರೂಪನೂ, ನಾಶರಹಿತನೂ, ಪ್ರಾಣಿಗಳ ಹೃದಯದಲ್ಲಿ ಇರುವ ಶ್ರೀ ಹರಿಯನ್ನು ಯಾವಾಗಲೂ ಭಜಿಸಬೇಕು. ಈ ನಾರಾಯಣನು ಅಹಿಂಸಾ, ಸತ್ಯ, ಅಸ್ತೇಯ (ಕಳವುಮಾಡದಿರುವದು) ಬ್ರಹ್ಮಚರ್ಯ, ಅಪರಿಗ್ರಹ (ದಾನಸ್ವೀಕರಿಸ ದಿರುವದು) ಮುಂತಾದ ಗುಣಗಳಿಂದ ಸಂತುಷ್ಟನಾಗುವನು.

ಪತಿಯೆ ಪರದೇವತೆ ಎಂದು ತಿಳಿದು, ಅವನ ಸೇವಾರೂಪ ಪೂಜೆ ಮಾಡುವ ಸ್ತ್ರೀಯರಿಗೂ ಕೂಡ, ಆ ಪರಮಾತ್ಮನು ಪ್ರಸನ್ನನಾಗಿ ತನ್ನ ಸ್ಥಾನವನ್ನು ಕೊಡುತ್ತಾನೆ. ಆದುದರಿಂದ ಮಾನವನು ಅಹಂಕಾರವನ್ನು ಬಿಟ್ಟು ಮಿಂಚಿನಂತೆ ಚಂಚಲವಾದ ಸಂಪತ್ತಿನ ಬೆನ್ನು ಹತ್ತದೆ, ದೇವರ ಧ್ಯಾನ ಮಾಡಬೇಕು.

**ಶರೀರಂ ಮೃತ್ಯು ಸಂಯುಕ್ತಂ ಜೀವಿತಂ ಚಾತಿ ಚಂಚಲಂ**
**ರಾಜಾದಿಭಿರ್ಧನಂ ಬಾಧ್ಯಂ ಸಂಪದಃ ಕ್ಷಣಭಂಗುರಾಃ ॥**

ಈ ಶರೀರವು ಮೃತ್ಯುವಿನಿಂದ ಕೂಡಿದೆ. ಬದುಕು ಅತ್ಯಂತ ಚಂಚಲ. ಧನಕ್ಕೆ ರಾಜರು, ಕಳ್ಳರಿಂದ, ಬಹಳ ಬಾಧೆ, ಆದುದರಿಂದ ಈ ಪ್ರಂಪಚದಲ್ಲಿ ಎಲ್ಲವೂ ಹೇಯ ಅಶಾಶ್ವತ ಎಂದು ತಿಳಿದು ಭಗವಂತನನ್ನು ಧ್ಯಾನ ಮಾಡಬೇಕು. ಮಾನವನ ಆಯುಷ್ಯದ ಅರ್ಧಭಾಗ ನಿದ್ರೆಯಲ್ಲಿಯೇ ಕಳೆಯುತ್ತದೆ. ಊಟ, ಉಪಚಾರಗಳಿಂದ ಎಷ್ಟೋ ಆಯುಷ್ಯವು ನಶಿಸಿ ಹೋಗುವದು. ಬಾಲ್ಯ, ವೃದ್ಧಾಪ್ಯಗಳಲ್ಲಿ ಹೆಚ್ಚಿನ ಭಾಗ ಕಳೆಯುವದು. ಉಳಿದ ಆಯುಷ್ಯವು ವಿಷಯ ಭೋಗಗಳಲ್ಲಿ ವ್ಯತೀತವಾಗುವದು. ಅಂದಮೇಲೆ ಮನುಷ್ಯನು ಧರ್ಮವನ್ನು ಯಾವಾಗ ಆಚರಿಸುವನು? ಬಾಲ್ಯದಲ್ಲಿ ಹಾಗೂ ಮುಪ್ಪಿನಲ್ಲಿ ಧರ್ಮ ಕರ್ಮವನ್ನು, ದೇವರ ಆರಾಧನೆಯನ್ನು ಆಸಕ್ತಿಯಿಂದ ಮಾಡಲು ಆಗುವದಿಲ್ಲ. ಆದುದರಿಂದ ತಾರುಣ್ಯದಲ್ಲಿ ಅಹಂಕಾರ ಬಿಟ್ಟು ಧರ್ಮಾಚರಣೆ ಮಾಡಬೇಕು. ಮನುಷ್ಯ ಜನ್ಮ ಸಿಗುವದು ದುರ್ಲಭವು. ದೇವರ ಆರಾಧನೆಯನ್ನು ಮಾಡದಿದ್ದರೆ ಅವನಂತಹ ಮೂರ್ಖ ಯಾರು ? ಮನುಷ್ಯನು ಸಾಯಲಿಕ್ಕಾಗಿಯೆ ಹುಟ್ಟುತ್ತಾನೆ. ಹುಟ್ಟಿದವನು ಸಾಯುತ್ತಾನೆ. ಅವೆರಡೂ ಅತ್ಯಂತ ನಿಕಟಸಂಬಂಧಉಳ್ಳವು. ಇವುಗಳ ನಾಶವು ಹರಿಸೇವೆಯಿಂದಲೇ ಸಾಧ್ಯ.

**ಅಹೋ ಚಿತ್ರಮಹೋಚಿತ್ರಮಹೋಚಿತ್ರಮಿದಂ ದ್ವಿಜ**
**ಹರಿನಾಮ್ನೀ ಸ್ಥಿತೇ ಲೋಕೇ ಸಂಸಾರೇ ವಿ ಪರಿವರ್ತತೇ ॥**

ಇದು ಅತ್ಯಂತ ಆಶ್ಚರ್ಯ! ಶ್ರೀ ಹರಿಯೆಂಬ ನಾಮವು ತಾರಕ ಮಂತ್ರದಂತೆ ಇರುವಾಗ ಅದರ ಧ್ಯಾನ ಬಿಟ್ಟು, ಮಾನವನು ಇನ್ನೂ ಸಂಸಾರದಲ್ಲಿಯೇ ಹೊರಳಾಡುತ್ತಿದ್ದಾನೆ ಎಂದರೆ ಇದು ಅತ್ಯಾಶ್ಚರ್ಯ. ಇನ್ನೂ ಇಂದ್ರಿಯಗಳು ಗಟ್ಟಿ ಇರುವಾಗಲೇ, ಮರಣಾಂತಿಕ ಬೇನೆಗಳು ಬಾರದಿರುವಾಗಲೇ ವಿಷ್ಣುವನ್ನು ಪೂಜಿಸು ಮೋಕ್ಷವನ್ನು ಪಡೆಯುವ ಅಪೇಕ್ಷೆ ಇದ್ದರೆ.

**ಅಹೋ ಧೈರ್ಯಮಹೋ ಧೈರ್ಯಮಹೋ ಧೈಯಮಹೋ ನೃಣಾಮ್॥**
**ವಿಷ್ಣೌ ಸ್ಥಿತೇ ಜಗನ್ನಾಥೇ ನ ಭಜಂತೆ ಮದೋದ್ಧತಾಃ ॥**

ಉದ್ಧಾರ ಮಾಡುವ ಜಗದೊಡೆಯನಾದ ಶ್ರೀ ಹರಿಯು ಇದ್ದರೂ, ಅವನನ್ನು

ಮದೋನ್ಮತ್ತರಾಗಿ ಮಾನವರು ಭಜಿಸುವದಿಲ್ಲ. ಇದು ಎಂತಹ ಧೈರ್ಯ! ಏನು ಧೈರ್ಯ! ನಿಜವಾಗಿಯೂ ಇದೊಂದು ಮನುಷ್ಯರ ಮೂರ್ಖ ಧೈರ್ಯವೇ ಸರಿ!

**ಅನಾರಾಧ್ಯ ಜಗನ್ನಾಥಂ ಸರ್ವಧಾತಾರಚ್ಯುತಂ ।**
**ಸಂಸಾರಸಾಗರೇ ಮಗ್ನಾಃ ಕಥಂ ಪಾರಂ ಪ್ರಯಾಂತಿ ಹಿ ।**

ಸಂಸಾರವೆಂಬ ಮಹಾಸಮುದ್ರದಲ್ಲಿ ಮುಳುಗಿರುವ ಮನುಜರು ಜಗನ್ನಾಥನೂ ಜಗದ ಸೃಷ್ಟಾರನೂ ಆಗಿರುವ, ಅಚ್ಯುತನನ್ನು ಪೂಜಿಸದೇ ಹೇಗೆ ಮುಕ್ತರಾಗಬಲ್ಲರು?

**ಅಚ್ಯುತಾನಂತ ಗೋವಿಂದನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ ।**

ಅಚ್ಯುತ, ಅನಂತ, ಗೋವಿಂದ ಮುಂತಾಗಿ ಹರಿನಾಮ ಸ್ಮರಣೆಯೆಂಬ ದಿವ್ಯ ಔಷಧದಿಂದ ಸಕಲ ಭವರೋಗಗಳು ನಾಶವಾಗುತ್ತವೆಂಬುದು ಸತ್ಯ ಸತ್ಯ ಎಂದು ಶಪಥ ಮಾಡಿ ಹೇಳುತ್ತೇನೆ.

ನಾರದ ಮಹಾಪುರಾಣದಲ್ಲಿ ಮೂವತ್ನಾಲ್ಕನೇಯ ಅಧ್ಯಾಯ ಮುಗಿದುದು

—o—

## ಜ್ಞಾನ ನಿರೂಪಣ ಕಥಾ — ಅಧ್ಯಾಯ - ೩೫

**ಸನಕ:-** ವ್ಯಸನಾಕ್ರಾಂತರೂ, ಮೂರ್ಖರೂ, ತಾವು ಈ ಲೋಕದಲ್ಲಿ ಅಜರಾಮರರು ಎಂದು ತಿಳಿದುಕೊಂಡಿರುತ್ತಾರೆ. ಅವರು ಯಾವ ದೇವರನ್ನೂ ಪೂಜಿಸುವದಿಲ್ಲ. ಅಂತಹವರು ಮನುಷ್ಯರಲ್ಲ, ಮನುಷ್ಯ ಹುಳಗಳೇ ಸರಿ. ನರಕೀಟಕರೆಂದು ಅವರನ್ನು ಕರೆಯಬೇಕು. ವಿಷ್ಣುವಿಗೆ ಪ್ರೀತಿಕರವಾದ ಕರ್ಮಗಳನ್ನು ಮಾಡುವವರೂ, ಶಾಂತ ಮೂರ್ತಿಗಳೂ, ಲೋಕಹಿತವನ್ನು ಬಯಸುವವರಾದ ಹರಿಭಕ್ತರು, ಕ್ವಚಿತ್ತಾಗಿ ಸುದೈವದಿಂದ ಸಿಗುತ್ತಾರೆ. ಈ ವಿಷಯವಾಗಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು. ಬಹುಕಾಲದ ಹಿಂದೆ ರೈವತ ಮನ್ವಂತರದಲ್ಲಿ ವೇದಮಾಲಿ ಎಂಬ ಒಬ್ಬ ಬ್ರಾಹ್ಮಣನಿದ್ದ, ಅವನು ವೇದಗಳನ್ನು ಓದಿದ್ದ. ವೇದಾಂತದಲ್ಲಿ ಪಾರಂಗತನೂ ಆಗಿದ್ದ. ಪ್ರಾಣಿಗಳ ಮೇಲೆ ದಯೆಯನ್ನಿಟ್ಟದ್ದ. ದೇವರ ಪೂಜೆಯನ್ನು ಎಂದೂ ಬಿಡುತ್ತಿರಲಿಲ್ಲ. ಏನಾದರೇನು? ಅವನು ದುರ್ದೈವಿ. ಆಶೆ ಹೋಗಿರಲಿಲ್ಲ. ಅನ್ನ ಮುಂತಾದ ತಿನ್ನುವ ಪದಾರ್ಥಗಳನ್ನು ಹಣಕ್ಕಾಗಿ ಮಾರುತ್ತಿದ್ದ. ಎಂತಹ ಕೀಳು ಜಾತಿಯವರು ತಂದು ಕೊಟ್ಟ ದುಡ್ಡನ್ನು 'ಬೇಡ' ಅನ್ನುತ್ತಿರಲಿಲ್ಲ.

ಹಣಕ್ಕಾಗಿ ತಪಸ್ಸನ್ನೂ ಮಾರಾಟ ಮಾಡುತ್ತಿದ್ದ ಎಂದರೆ - ಏಳು ದಿನ, ಹದಿನೈದು ದಿನ, ದುಡ್ಡಿಗಾಗಿ ತಪೋನುಷ್ಠಾನ ಮಾಡಿ ಅದರ ಫಲವನ್ನು ಹಣ ಕೊಟ್ಟವನಿಗೆ ಮಾರಾಟಮಾಡುತ್ತಿದ್ದ. ಹೀಗೆ ದ್ರವ್ಯವು ಸಿಗುವ ಒಂದೂ ಮಾರ್ಗವನ್ನು ಅವನು ಬಳಸದೇ ಬಿಡುತ್ತಿರಲಿಲ್ಲ. ಅವನಿಗೆ ಮಕ್ಕಳಿರಲಿಲ್ಲ. ಮಕ್ಕಳ ಸಲುವಾಗಿ ತೀರ್ಥಯಾತ್ರೆಗೆ ಹೊರಟ. ಹೆಂಡತಿಯೂ ಬೆನ್ನು ಹತ್ತಿದಳು. ಅವಳ ಮಾತಿನಂತೆ ಮಕ್ಕಳ ಉದ್ದೇಶದಿಂದ ತೀರ್ಥಯಾತ್ರೆ ಮಾಡಿದನು. ವ್ಯರ್ಥವಾಗಲಿಲ್ಲ ಅವನ ತೀರ್ಥಯಾತ್ರೆ. ಅವರಿಗೆ ಯಜ್ಞಮಾಲಿ, ಸುಮಾಲಿ ಎಂಬ ಅವಳಿ ಮಕ್ಕಳಾದರು. ಅವರಿಬ್ಬರೂ ಕುಮಾರರು ಸುಂದರರಾಗಿದ್ದರು. ಅತಿಶಯ

ವಾತ್ಸಲ್ಯ ಆ ಮಕ್ಕಳಲ್ಲಿ ವೇದಮಾಲಿಗೆ. ಇಬ್ಬರನ್ನೂ ಚೆನ್ನಾಗಿ ಬೆಳೆಸಿದ - ಇತ್ತ ತನ್ನ ಧನಸಂಪಾದನೆ ನಡೆಸಿಯೇ ಇದ್ದ. ಅದಕ್ಕಾಗಿ ಅವನು ಹೂಡಿದ ಹೂಟ ಅಸಂಖ್ಯ; ಆಡಿದ ಆಟ ಅಗಣ್ಯ. ಅದರಿಂದ ಸಂಪಾದಿಸಿದ ದ್ರವ್ಯವು ಅಪರಂಪಾರ. ಅವನಿಗೇ ಗೊತ್ತಿರಲಿಲ್ಲ ತಾನು ಈ ವರೆಗೆ ಗಳಿಸಿದ ಹಣದ ಮೊತ್ತ ಎಷ್ಟು ಎಂದು.

ಕೊನೆಗೆ ಒಂದು ದಿವಸ ಹಣ ಎಣಿಸಿ ನೋಡಲು ಕುಳಿತ. ಆ ಮೊತ್ತವನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವನ ಮನೆಯಲ್ಲಿದ್ದ ಹಣ ಕೋಟಿ ಸಂಖ್ಯೆ ಮೀರಿತ್ತು. ಕೋಟಿ ಕೋಟಿ ಬಂಗಾರದ ನಾಣ್ಯಗಳು ಬೊಕ್ಕಸದಲ್ಲಿದ್ದವು. ಅವುಗಳನ್ನು ಎಣಿಸಿ ನೋಡಿದಾಗ, ಅವನಿಗೆ ಆನಂದಕ್ಕಿಂತ ಆಶ್ಚರ್ಯವೇ ಮಿಗಿಲಾಯಿತು. ಅದರ ಜೊತೆಗೆ ಚಿಂತೆ ಕೊರೆಯತೊಡಗಿತು. ''ನಾನು ಈ ಹಣವನ್ನು ದುರ್ಮಾರ್ಗದಿಂದಗಳಿಸಿದೆ. ದುಷ್ಟರಿಂದ ಎಷ್ಟೋ ದ್ರವ್ಯವನ್ನು ಇಸಿದುಕೊಂಡೆ, ಶಿಷ್ಟರಿಂದ ಕಸಿದುಕೊಂಡೆ. ಮಾರಬಾರದ ವಸ್ತುಗಳನ್ನೆಲ್ಲ ಮಾರಿದೆ. ಜಪ, ತಪ, ಪೂಜೆ, ಪ್ರವಚನ, ಪಾರಾಯಣದ ಪುಣ್ಯವನ್ನು ಕೂಡ ಮಾರಿ, ಇಷ್ಟು ಪ್ರಭೂತ ಧನವನ್ನು ನಾನು ಗಳಿಸಿದೆ. ಇಷ್ಟಾದರೂ ನನಗೆ ತೃಪ್ತಿಯಿಲ್ಲ. ಇನ್ನೂ ದ್ರವ್ಯ ಸಂಪಾದಿಸಬೇಕೆಂದು ಆಶೆ ಕೆರಳುತ್ತಲೆ ಇದೆ.''

**ಜೀರ್ಯಂತಿ-ಜೀರ್ಯತಃ ಕೇಶಾಃ ದಂತಾ ಜೀರ್ಯಂತಿ-ಜೀರ್ಯತಃ ।**
**ಚಕ್ಷುಃ ಶ್ರೋತೇ ಚ ಜೀರ್ಯೇತೇ ತೃಷ್ಣೈಕಾ ತರುಣಾಯತೇ ॥**

ವಯಸ್ಸಾದಂತೆ ಕೂದಲು ಜೀರ್ಣವಾಗಿ ನೆರೆಯು ಬರುತ್ತದೆ. ಹಲ್ಲುಗಳು ಸಡಿಲಾಗುತ್ತವೆ. ಕಣ್ಣು ಮಂಜಾಗುತ್ತವೆ. ಕಿವಿಗಳು ಕಿವುಡಾಗುತ್ತವೆ. ಆದರೆ ಆಶೆಯು ಮಾತ್ರ, ಅನುದಿನವೂ ತಾರುಣ್ಯವನ್ನು ಪಡೆಯುತ್ತಲೇ ಇರುತ್ತದೆ. ಮನುಷ್ಯನಿಗೆ ಆಶೆ ಒಂದಿದ್ದರೆ ಬಹಳ ಕಷ್ಟ. ಈ ಆಶೆಯಿಂದ ಪಂಡಿತನು ಮೂರ್ಖನಾಗುತ್ತಾನೆ. ಶಾಂತನು ಕೋಪಿಷ್ಟನಾಗುವನು. ಆಶೆಯು ಮನುಷ್ಯನಿಗೆ ಅಳಿಗಾಲವನ್ನು, ವಿನಾಶವನ್ನು ತಂದುಕೊಡುತ್ತದೆ. ಅದೊಂದು ದೊಡ್ಡ ವೈರಿ. ಅದನ್ನು ಗೆಲ್ಲುವದು ದುಸ್ತರ. ಮನುಷ್ಯನು ನಿಜವಾದ ಶಾಶ್ವತ ಸುಖ ಪಡೆಯುವದಿದ್ದರೆ ಆಶೆಯನ್ನು ಬಿಟ್ಟುಬಿಡಬೇಕು. ನಾನು ಈ ಆಶೆಯ ಬೆನ್ನು ಹತ್ತಿ, ಇಷ್ಟು ಅಪಾರ ಸಂಪತ್ತುಗಳಿಸಿದೆ. ಇದರಲ್ಲಿಯೇ ದೇಹ ಮುಪ್ಪಾಯಿತು. ಇನ್ನು ಮೇಲಾದರೂ ಪರಲೋಕ ಸಾಧನೆಗೆ ಈ ಆಶೆಯನ್ನು ತ್ಯಜಿಸುತ್ತೇನೆ ಎಂದು ನಿರ್ಧರಿಸಿದನು-ಆ ವಿವೇಕಿಯಾದ ವೇದಮಾಲಿ, ಧರ್ಮದಲ್ಲಿ ಅಂದಿನಿಂದ ಅವನಿಗೆ ಅಭಿರುಚಿ ಹುಟ್ಟಿತು. ಸಂಪಾದಿಸಿದ ಸಂಪತ್ತೆಲ್ಲವನ್ನೂ ನಾಲ್ಕು ಭಾಗಮಾಡಿ, ಎರಡು ಭಾಗ ತನಗೆ, ಉಳಿದೆರಡರಲ್ಲಿ ಒಬೊಬ್ಬ ಮಗನಿಗೆ ಒಂದೊಂದು ಭಾಗವನ್ನು ಹಂಚಿಕೊಟ್ಟನು.

ತಾನು ಇಟ್ಟುಕೊಂಡ ಪ್ರಭೂತ ಧನದಿಂದ ಅನ್ನಛತ್ರಗಳನ್ನು ಇಟ್ಟ. ಅನ್ನಛತ್ರ, ಅರವಟ್ಟಿಗೆ, ಬಾವಿ, ಕೆರೆ, ಪುಷ್ಕರಣಿ, ದೇವಾಲಯ, ಉದ್ಯಾನ ಮುಂತಾದವುಗಳನ್ನು ನಿರ್ಮಿಸಿದ. ಗಂಗಾತೀರದಲ್ಲಿ ಅನ್ನದಾನಮಾಡಿದ, ದ್ರವ್ಯದಾನ, ಗೃಹದಾನ ಮುಂತಾದವುಗಳನ್ನು ಮಾಡಿದ. ಒಟ್ಟು ತನ್ನ ಅಪರಂಪಾರ ಐಶ್ವರ್ಯದಲ್ಲಿ ಒಂದು ಒಡಕು ಕವಡೆಯನ್ನು ಇಟ್ಟುಕೊಳ್ಳದೇ ಎಲ್ಲವನ್ನು ಜ್ಞಾನಿಗಳಿಗೆ, ಬಡಬಗ್ಗರಿಗೆ ದಾನ ಮಾಡಿಬಿಟ್ಟ. ಹೀಗೆ ಸರ್ವಸ್ವವನ್ನು ದಾನಮಾಡಿ, ನರನಾರಾಯಣರ ಆಶ್ರಮವಾದ ಬದರಿ ಕ್ಷೇತ್ರಕ್ಕೆ ತಪಸ್ಸಿಗೆ ಹೊರಟು ಹೋದ.

ಪರಮ ರಮ್ಯವಾಗಿತ್ತು ಆ ಬದರಿಕಾಶ್ರಮ. ಪೂತಬಳ್ಳಿ, ಏಕಾತ, ಮರ, ತಪಂಗೈಯುವ ಮುನಿಗಳು, ಬ್ರಹ್ಮವಿಚಾರ ಮಾಡುವ ಬ್ರಾಹ್ಮಣರು, ಸೇವೆ ಮಾಡುವ ಮುನಿಗಳು,

ಕೈಂಕರ್ಯ ಎಸಗುವ ಶಿಷ್ಯರು. ನೋಡಿದಲ್ಲೆಲ್ಲ ಹೋಮ, ಹವನ, ಪೂಜೆ, ಪಾರಾಯಣ ಧ್ಯಾನ, ಗಾನ, ಇಂತಹ ಸಿದ್ಧಾಶ್ರಮವನ್ನು ಕಂಡು ವೇದಮಾಲಿಯ ಭಕ್ತಿ ಉತ್ಕಟವಾಯಿತು. ಆಶ್ರಮದ ಅಂತರಂಗ ಪ್ರವೇಶಿಸಿದ ವೇದಮಾಲಿ, ಅಲ್ಲಿ ಶಿಷ್ಯರಿಂದ ಸುತ್ತುವರಿಯಲ್ಪಟ್ಟಿದ್ದಾರೆ ಜಾನಂತಿ ಎಂಬ ಮುನಿಗಳು ಆ ಪರಬ್ರಹ್ಮನನ್ನು ಮನದಲ್ಲಿ ಕಂಡು ಸ್ತುತಿಸುತ್ತಿದ್ದಾರೆ.

ಅದೊಂದು ತೇಜಸ್ಸಿನ ರಾಶಿಯೇ. ರಾಗದ್ವೇಷಗಳ ಸುಳಿವೇ ಇಲ್ಲ. ಅಲ್ಲಿರುವದು ಕೇವಲ ಶಮದಮಾದಿ ಸಂಪತ್ತಿನ ನಿಧಿ ಮಾತ್ರ. ಅವರ ಆಹಾರ ಒಣಗಿದ ಎಲೆಯ ಸೀಳಿದ ತುಣುಕಗಳು. ಅಂತಹ ತೇಜೋನಿಧಿಯನ್ನು ಕಂಡು, ವೇದಮಾಲಿಯ ತಲೆ ತಾನಾಗಿ ಬಾಗಿತು. ಸಾಷ್ಟಾಂಗ ಪ್ರಣಾಮಗೈದ. ಜಾನಂತಿ ಮುನಿಗಳು ವೇದಮಾಲಿಗೆ ಸ್ವಾಗತ ನೀಡಿದರು. ಸತ್ಕಾರಗೈದರು. ಕಂದಮೂಲ, ಫಲಗಳನ್ನೂ ತಿನ್ನಲು ಕೊಟ್ಟರು, ಮನೆಗೆ ಬಂದ ಮಹಾನುಭಾವರು ಸಾಕ್ಷಾತ್ ನಾರಾಯಣನೇ ಎಂದರೆ ನಾರಾಯಣನಿಷ್ಠರೇ ಎಂದರಿತು ಪೂಜಿಸುವದು ಅವರ ಸಂಪ್ರದಾಯ. ಆದರ ಆತಿಥ್ಯದಿಂದ ಪ್ರೀತನಾದ ವೇದಮಾಲಿಯು ವಿನಯದಿಂದ ಕೇಳಿದ, 'ಪೂಜ್ಯರೇ, ತಮ್ಮ ದರ್ಶನದಿಂದ ನಾನು ಕೃತಕೃತ್ಯ! ನಾನು ಮಾಡಿದ ಪಾಪ ಅಪಾರ. ಆದರೆ ಇಂದು ತಮ್ಮ ದರ್ಶನದಿಂದ ತೊಳೆದುಹೋಯಿತು ಆ ಪಾಪ. ಮಹಾನುಭಾವರೆ, ದಿವ್ಯಜ್ಞಾನ ಕರುಣಿಸಿ ನನ್ನನ್ನು ಉದ್ಧರಿಸಿರಿ'' ಅವನ ಪ್ರಾರ್ಥನೆಯನ್ನು ಮನ್ನಿಸಿ, ಜಾನಂತಿ ಮುನಿಗಳು ನಸುನಗುತ್ತ ಅವನಿಗೆ ಉಪದೇಶ ಮಾಡಿದರು.

**ಜಾನಂತಿ:-** ಸಂಸಾರ ಬಂಧನಕ್ಕೆ ಕಾರಣವಾದ ತತ್ವವನ್ನು ಹೇಳುತ್ತೇನೆ ನಿನಗೆ ಸಂಕ್ಷೇಪದಲ್ಲಿ. ಲಕ್ಷ್ಯವಿಟ್ಟು, ಕೇಳು.

**ಭಜ ವಿಷ್ಣುಂ ನಿತ್ಯಂ ಸ್ಮರ ನಾರಾಯಣಂ ಪ್ರಭುಂ।**
**ಪರಾಪವಾದಂ ಪೈಶುನ್ಯಂ ಕದಾಚಿದಪಿ ಮಾ ಕೃಥಾ ॥**

ವಿಷ್ಣುವನ್ನು ಭಜಿಸು. ಪ್ರಭುವಾದ ಶ್ರೀ ಹರಿಯನ್ನು ತ್ರಿಕಾಲಗಳಲ್ಲೂ ಸ್ಮರಿಸು. ಪರಾಪವಾದ ಮತ್ತು ಚಾಡಿ ಹೇಳುವದನ್ನು ಸರ್ವಥಾ ಎಂದೂ ಮಾಡಬೇಡ.

**ಪರೋಪಕಾರ ನಿರತಃ ಭವ ಮಹಾಮತೇ ।**
**ಹರಿಪೂಜಾಪರಶ್ಚೈವ ತ್ಯಜ ಮೂರ್ಖಸಮಾಗಮಂ ॥**

ಜಾಣನಾದ ಮನುಷ್ಯನೆ, ಯಾವಾಗಲೂ ಪರೋಪಕಾರ ಕಾರ್ಯ ಮಾಡುತ್ತಿರು. ತ್ರಿಕಾಲದಲ್ಲೂ ಹರಿಯ ನಾಮಸ್ಮರಣೆ, ಪೂಜೆ, ಧ್ಯಾನಾದಿಗಳಲ್ಲಿ ಆಸಕ್ತನಾಗಿರು. ಮತ್ತು ಮೂರ್ಖರ ಸಹವಾಸದಿಂದ ನೀನು ದೂರವಿರು.

**ಕಾಮಂ ಕ್ರೋಧಂ ಚ ಲೋಭಂ ಚ ಮೋಹಂ ಚ ಮದಮತ್ಸರೌ ।**
**ಪರಿತ್ಯಜ್ಯಾತ್ಮನೋ ಲೋಕಂ ಗತ್ವಾ ಶಾಂತಿಂ ಗಮಿಷ್ಯಸಿ ॥**

ಅರಿಷಡ್ವರ್ಗಗಳನ್ನು (ಕಾಮ ಕ್ರೋಧಾದಿಗಳನ್ನು) ನೀನು ಬಿಟ್ಟರೆ ಅಥವಾ ಜಯಿಸಿದರೆ ಪರಲೋಕದಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತ ಶ್ರೀ ಹರಿಯ ಸಾನ್ನಿಧ್ಯ ಪಡೆಯಲು ಅರ್ಹನಾಗುವಿ.

**ಅಸೂಯಾಂ ಪರನಿಂದಾಂ ಚ ಕದಾಚಿದಪಿ ಮಾ ಕುರು ।**
**ದಂಭಾಚಾರಮಹಂಕಾರಂ ನೈಷ್ಠುರ್ಯಂ ಚ ಪರಿತ್ಯಜ ॥**

''ಹೊಟ್ಟೇ ಕಿಚ್ಚು ಪಡುವದು, ಪರರನ್ನು ದೂಷಿಸುವದು, ಇವುಗಳನ್ನು ಎಂದೂ ಮಾಡಬೇಡ. ಆಡಂಬರ, ಗರ್ವ, ಮನನೋಯುವಂತೆ ಮಾತನಾಡುವದು ಇವುಗಳನ್ನು ತ್ಯಜಿಸಬೇಕು. ಸಜ್ಜನರನ್ನು ಸೇವಿಸು. ನೀನು ಯಾವದೇ ಪುಣ್ಯಕರ ಕೆಲಸ ಮಾಡಿದರೂ ಅದನ್ನು ಪ್ರಚಾರಮಾಡಬೇಡ. ಅನಾಚಾರಿಗಳನ್ನು ಸಾಧ್ಯವಾದಷ್ಟು ಉಪದೇಶದಿಂದ ತಿದ್ದಲು ಪ್ರಯತ್ನಿಸು. ನಿನ್ನ ಸಂಸಾರಕ್ಕೆ ಬಾಧೆ ಬರದಂತೆ ಅತಿಥಿಗಳನ್ನು ಪೂಜಿಸು. ದೇವರ ಪೂಜೆಯನ್ನು ತಪ್ಪದೇ ನಿತ್ಯವೂ ಮಾಡು. ದೇವ, ಋಷಿಗಳಿಗೆ ತರ್ಪಣ ನೀಡು. ಅಗ್ನಿಕಾರ್ಯ ಮುಂತಾದ ಅವಶ್ಯ ಕಾರ್ಯಬಿಡಬೇಡ. ದೇವರ ಗುಡಿಯಲ್ಲಿ ನಿತ್ಯವೂ ಸಾರಿಸು, ಕಸಹೊಡೆ, ಒಡೆದ ಗೋಡೆಗಳನ್ನು ಸರಿಪಡಿಸು, ಗುಡಿಗೆ ಹೋಗುವ ದಾರಿಯನ್ನು ಶೃಂಗರಿಸು. ನಿತ್ಯವೂ ಪುರಾಣಗಳನ್ನು ಕೇಳು ಅಥವಾ ಪಠಿಸು. ವೇದ ಪ್ರವಚನಗಳನ್ನು ಕೇಳು.'' ಹೀಗೆ ಜಾನಂತ ಮುನಿ ಪುಂಗವರು ಉಪದೇಶಿಸಿದರು. ಆದರಂತೆ ನಡೆದು ಕೊಂಡನು ವೇದಮಾಲಿ. ಆದರಿಂದ ಕೆಲವು ದಿನಗಳಲ್ಲಿ ಸ್ವಲ್ಪಮಟ್ಟಿಗೆ ಜ್ಞಾನೋದಯವಾಯಿತು. ಅದರಿಂದ ಅವನು ಮತ್ತೆ ವಿಚಾರಿಸಿದನು.

'ನಾನು ಯಾರು? ನನ್ನ ಕರ್ತವ್ಯವೇನು? ನನಗೆ ಈ ಜನ್ಮ ಹೇಗೆ ಬಂದಿತು? ಆದರೆ ಇದೆಲ್ಲ ಎಷ್ಟು ವಿಚಾರಿಸಿದರೂ ಅವನಿಗೆ ತನ್ನ ಸ್ವರೂಪ ನಿರ್ಣಯ ತಿಳಿಯಲಿಲ್ಲ. ಅದರಿಂದ ಗೊಂದಲಗೊಂಡ ವೇದಮಾಲಿಯು. ಮತ್ತೆ ಅದೇ ಜಾನಂತಿ ಮುನಿಯ ಬಳಿಗೆ ಬಂದು ಕೇಳಿದ-
''ನಾನು ಯಾರು? ನನ್ನ ಕರ್ತವ್ಯವೇನು? ನನಗೆ ಈ ಜನ್ಮ ಬಂದ ಬಗೆ ಹೇಗೆ! ಮತ್ತು ಏಕೆ?

**ಜಾನಂತಿ:-** ಶಿಷ್ಯೋತ್ತಮಾ ನಿಜವಾಗಿಯೂ ನಿನ್ನ ಮನಸ್ಸು ಭ್ರಾಂತವಾಗಿದೆ. ನೀನು ಕೇಳಿರುವಿ 'ನಾನು ಯಾರು? ಎಂದು. ಇದಕ್ಕೆ ನಾನು ಏನು ಉತ್ತರಿಸಲಿ! 'ಅಹಂ ಎನ್ನುವದು ಮನಸ್ಸಿನ ಧರ್ಮ. ಅಹಂಕಾರವು ಆತ್ಮಧರ್ಮವಲ್ಲ. ಅಹಂ ಶಬ್ದದ ಮುಖ್ಯ ವಾಚ್ಯನಾದ ಆತ್ಮನು ಜಾತ್ಯಾದಿರಹಿತ. ಅವನಿಗೆ ನಾನು ಏನೆಂದು ಹೆಸರಡಲಿ? ಅಹಂಕಾರವು ಅಂತಃಕರಣದ ಧರ್ಮವಾದುದರಿಂದ ಅದಕ್ಕೂ ಜೀವಾತ್ಮನಿಗೂ ಸಂಬಂಧವಿಲ್ಲ. 'ನನ್ನ ಕರ್ತವ್ಯವೇನು? ಎಂದೆನ್ನುವ ಪ್ರಶ್ನೆಗೆ ನಾನೇನು ಉತ್ತರ ಹೇಳಲಿ? ಪರಂಜ್ಯೋತಿ ಸ್ವರೂಪನೂ, ನಾಶರಹಿತನೂ, ಗುಣಪರಿಪೂರ್ಣನೂ ಆದ ಪರಮಾತ್ಮನಿಗೆ ಯಾವ ಕರ್ತವ್ಯವೂ ಕಾರ್ಯಗಳೂ ಇಲ್ಲ. ಜೀವಾತ್ಮನು ಕೂಡ ನಾನು, ನನ್ನದು ಎಂದು ಹೇಳುವದು ಭ್ರಾಂತಿ ಮೂಲಕವೇ. ಪ್ರಪಂಚದಲ್ಲಿರುವ ಸಕಲ ವಸ್ತುಗಳಿಗೆ ಪರಮಾತ್ಮನೇ ನಿಯಾಮಕನು. ನಿಜವಾದ ಆತ್ಮಜ್ಞಾನವನ್ನು ಮಾಡಿಕೊಳ್ಳಬೇಕು. ಸಕಲವೂ ಆ ಪರಬ್ರಹ್ಮನ ಅಧೀನವೆಂದು ತಿಳಿಯಬೇಕು. ಜೀವಾತ್ಮನು, ಪರಮಾತ್ಮನ ಪ್ರತಿಬಿಂಬ. ಅವನ ಅಧೀನ, ಅವನ ಆದೇಶರೂಪವಾದ ವೇದಶಾಸ್ತ್ರಗಳ ಅಪ್ಪಣೆಯನ್ನು ಪಾಲಿಸಬೇಕು. ವೇದವಿಹಿತವಾದ ಕರ್ಮಾನುಷ್ಠಾನ ಮಾಡಿ ದಿವ್ಯವಾದ ತತ್ವಜ್ಞಾನ ಪಡೆಯಬೇಕು. ಅದರಿಂದ ಮೋಕ್ಷವನ್ನು ಹೊಂದಬೇಕು. ಜಾನಂತಿ ಮುನಿಗಳ ಈ ಉಪದೇಶವನ್ನು ಕೇಳಿ ವೇದಮಾಲಿಗೆ ಪರಮಾನಂದವಾಯಿತು. ಸಮಾಧಾನದಿಂದ ಅವನು ಮುನಿಗಳಿಗೆ ನಮಸ್ಕರಿಸಿ, ಶ್ರೀ ಹರಿಯ ಧ್ಯಾನದಲ್ಲಿ ತೊಡಗಿದನು. ಮುಂದೆ ಕೆಲವು ದಿನಗಳ ನಂತರ ಕಾಶೀ ಕ್ಷೇತ್ರಕ್ಕೆ ಹೋಗಿ, ಗಂಗಾತೀರದಲ್ಲಿದ್ದು, ಸಂತತವೂ ಅಂತರಂಗದಲ್ಲಿ ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಧ್ಯಾನಗೈದು, ದಿವ್ಯವಾದ ಮೋಕ್ಷವನ್ನು ಹೊಂದಿದನು.

ನಾರದ ಮಹಾಪುರಾಣದಲ್ಲಿ ಮೂವತ್ತೈದನೇಯ ಅಧ್ಯಾಯ ಮುಗಿದುದು.

—o—

## ಅಧ್ಯಾಯ - ೩೬

**ಸನಕ:-** ವೇದಮಾಲಿಗೆ ಇಬ್ಬರು ಮಕ್ಕಳೆಂದು ಹಿಂದೆ ಹೇಳಿದೆಯಷ್ಟೇ. ಅವರಿಬ್ಬರ ವೃತ್ತಾಂತವನ್ನು ಈಗ ಹೇಳುತ್ತೇನೆ, ಕೇಳು. ಅವರಿಬ್ಬರಲ್ಲಿ ಎರಡನೆಯವನಾದ ಸುಮಾಲಿಯು, ತಂದೆಗಳಿಸಿದ ಹಣವನ್ನು ದುರ್ವಿನಿಯೋಗ ಮಾಡತೊಡಗಿದನು. ಪ್ರಾಯದಲ್ಲಿ ಐಶ್ವರ್ಯ ದೊರತದ್ದರಿಂದ ಅವನ ತಲೆ ತಿರುಗಿತು. ಮದ್ಯಪಾನ, ವೇಶ್ಯಾವಿಲಾಸ, ಪರಸ್ತ್ರೀವಿಲಾಸ, ಹಾಡು, ಕುಣಿತ, ಕುಡಿತ, ಅನಾಚಾರ ಮುಂತಾದವುಗಳಲ್ಲಿ ಮುಳುಗಿಹೋದ. ಹಿರಿಯಮಗನಾದ ಯಜ್ಞಮಾಲಿಯು ಯೋಗ್ಯ, ವಿವೇಕಿ. ತಮ್ಮನ ಈ ದುರಾಚಾರ ಕಂಡು ಬಹಳ ದುಃಖವಾಯಿತು ಅವನ ಮನಸ್ಸಿಗೆ. ತಮ್ಮನನ್ನು ಹತ್ತಿರ ಕರೆದು ಹೇಳಿದ - 'ತಮ್ಮಾ ಈ ದುರ್ವ್ಯಾಪಾರ ನಿಲ್ಲಿಸು, ದುರ್ವ್ಯಹಾರ ನಿಲ್ಲಿಸು. ನಮ್ಮ ವಂಶದಲ್ಲಿ ಇಂತಹ ಕುಕೃತ್ಯ ಯಾರೂ ಮಾಡಿಲ್ಲ. ನೀನೊಬ್ಬನೇ ದುಷ್ಟನಾಗಿರುವಿ. ಎಂತೆಂತಹ ಪಾಪ ಮಾಡಿರುವಿ. ಅವುಗಳನ್ನು ನೋಡಿದರೆ, ನಡುಗು, ನೆನೆದರೂ ಭಯ. ಇಷ್ಟು ಕೀಳು ಮಟ್ಟಕ್ಕೇ ಇಳಿಯಬೇಡ' ಎಂದು. ಖಡ್ಗವನ್ನೇ ಎತ್ತಿದ ಆ ತಮ್ಮನಾದ ಸುಮಾಲಿ. 'ಕೊಂದು ಬಿಡುತ್ತೇನೆ ನಿನ್ನನ್ನು' ಎಂದು ನುಡಿದು ಕೂದಲು ಹಿಡಿದೆಳೆದು, ಖಡ್ಗ ಝಳಪಿಸಿದ, ನೆರೆದ ಜನರೆಲ್ಲರೂ ಧಾವಿಸಿಬಂದರು. ಸುಮಾಲಿಯ ಕ್ರೂರ ಕಾರ್ಯವನ್ನು ಕಂಡು ಕುಪಿತರಾದರು. ಸುಮಾಲಿಯನ್ನು ಹಿಡಿದು ಕಟ್ಟಿ ಹಾಕಿದರು. ಸಾತ್ವಿಕನಾದ ಯಜ್ಞಮಾಲಿಯನ್ನು ಬಿಡಿಸಿದರು.

ಅದನ್ನು ನೋಡಿ ಯಜ್ಞಮಾಲಿಗೆ ದುಃಖವಾಯಿತು. ತಮ್ಮನನ್ನು ಬಂಧನದಲ್ಲಿರಿಸಲು ತಾನೇ ಕಾರಣನಾದೆನೆಂದು ಮನದಲ್ಲಿ ಮರುಗಿದನು. ಊರಲ್ಲಿಯ ಜನರಿಗೆ ಹೇಳಿಕೊಂಡು, ತಮ್ಮನನ್ನು ಬಂಧನದಿಂದ ಬಿಡಿಸಿ, ಮನೆಗೆ ಕರೆತಂದು ಉಪದೇಶಿಸಿದನು. ಆದರೆ ಸುಮಾಲಿ ಈಗ ತೀರ ನಿರ್ಧನ. ತಿನ್ನಲು ಆಹಾರವಿಲ್ಲ. ಅದನ್ನು ಕಂಡು ಯಜ್ಞಮಾಲಿಯು ತನಗೆ ತಂದೆಯು ಕೊಟ್ಟ ಹಣದಲ್ಲಿ ಎರಡು ಭಾಗ ಮಾಡಿ ಅವನಿಗೆ ಒಂದು ಪಾಲು ಕೊಟ್ಟನು. 'ಇದನ್ನು ಸದ್ವಿನಿಯೋಗ ಮಾಡಿ ಬದುಕು' ಎಂದು ಹೇಳಿಕಳಿಸಿದ. ಸುಮಾಲಿಯು ಎಂದಿನಿಂದಲೂ ದುರ್ವ್ಯಸನಿ. ಅವನ ಎಲ್ಲ ಚಟಗಳು ಮತ್ತೆ ಅಂಟಿಕೊಂಡವು. ಧನ ಬಂದದ್ದರಿಂದ, ದುಷ್ಟ ಮಿತ್ರರು ಅವನ ಸುತ್ತಲೂ ಮುತ್ತಿಕೊಂಡರು. ಮತ್ತೆ ಯಥಾಪ್ರಕಾರ ಆರಂಭವಾಯಿತು. ಮದಿರೆ, ಮದಿರಾಕ್ಷಿ, ಮಾಂಸ, ಜೂಜಾಟ ಮುಂತಾದ ಸ್ವಚ್ಛಂದವರ್ತನೆ. ಜಾರಿಣಿ ಸ್ತ್ರೀಯರೊಡನೆ, ಕಾಮಾಂಧನಾಗಿ ವಿಹಾರಕ್ಕೆ ಇಳಿದನು. ಇದರಿಂದ ಬಂಧುಗಳು ಬಹಿಷ್ಕರಿಸಿದರು. ರಾಜನು ಅವನ ದುರ್ನಡತೆಗಾಗಿ ಶಿಕ್ಷೆ ವಿಧಿಸಿದನು. ಅದರಿಂದಲೂ ತಪ್ಪಿಸಿಕೊಂಡು ಕಾಡಿಗೆ ಓಡಿ ಹೋದನು ಆ ಪಾಪಿ. ಆದರೆ ಅವನ ಅಣ್ಣ ಯಜ್ಞಮಾಲಿ ಮಹಾ ಧರ್ಮಿಷ್ಠ. ನಿತ್ಯವೂ ಅನ್ನದಾನ, ನಿರಂತರವೂ ಸತ್ಸಂಗ, ಯಾವಾಗಲೂ ಹರಿ, ಗುರುಪೂಜೆ. ತಂದೆ ಕಟ್ಟಿಸಿದ ಕೆರೆ ಕಾಲುವೆಗಳನ್ನು ಜೀರ್ಣೋದ್ಧಾರ ಮಾಡಿ, ಅನ್ನ ಛತ್ರ ಅರವಟ್ಟಿಗೆಗಳನ್ನು ಮುನ್ನಡೆಸಿದ. ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದನು. ಹೀಗೆ ಯಜ್ಞಮಾಲಿಯ ದ್ರವ್ಯವು ಸತ್ಕಾರ್ಯಕ್ಕೆ ವ್ಯಯವಾಯಿತು. ಅವನು ತನ್ನ ಉಳಿದ ವೇಳೆಯನ್ನು ವಿಷ್ಣು ದೇವಾಲಯದ ಕಸಗುಡಿಸುತ್ತ, ಅಂಗಳ ಸಾರಿಸುತ್ತ ಕಳೆಯುತ್ತಿದ್ದನು.

ಹೀಗೆ ಎಷ್ಟೋ ವರ್ಷಗಳು ಕಳೆದವು. ಅವರಿಬ್ಬರೂ ಮುದುಕರಾದರು. ಏಕಕಾಲದಲ್ಲಿಯೇ ಇಬ್ಬರೂ ಮರಣ ಹೊಂದಿದರು. ಯಜ್ಞಮಾಲಿಯನ್ನು ಕರೆದೊಯ್ಯಲು ವೈಕುಂಠದಿಂದ ವಿಮಾನ ಬಂತು. ದೇವದೂತರು ಆದರಿಸಿ ಅವನನ್ನು ವಿಮಾನದಲ್ಲಿ ಕೂಡಿಸಿದರು. ಅವನ ಪಕ್ಕದಲ್ಲಿ ಗಂಧರ್ವರು ಹಾಡುತ್ತಿದ್ದರು. ಎದುರು ಅಪ್ಸರೆಯರು ಕುಣಿಯುತ್ತಿದ್ದರು ಮೇಲೆ ದೇವತೆಗಳು ಪುಷ್ಪವೃಷ್ಟಿ ಮಾಡುತ್ತಿದ್ದರು. ಅವನು ವೈಕುಂಠವನ್ನು ಕುರಿತು ಹೊರಡುವಾಗ ಯಮದೂತರು ಇವನೊಡನೆ ಮರಣಹೊಂದಿದ ಸುಮಾಲಿಯನ್ನು ಹೊಡೆಯುತ್ತ ಬಡಿಯುತ್ತ ಎಳೆದೊಯ್ಯುತ್ತಿದ್ದುದು ಅವನ ಸೂಕ್ಷ್ಮ ದೃಷ್ಟಿಗೆ ಬಿದ್ದಿತು. ಪ್ರೇತನಾದ ಸುಮಾಲಿಯು, ಬಟ್ಟೆಯಿಲ್ಲದೆ ಯಮದೂತರ ಕ್ರೂರ ಪ್ರಹಾರವನ್ನು ತಾಳಲಾರದೆ ಚೀರುತ್ತ ಅತ್ತಿಂದಿತ್ತ ಓಡಾಡುತ್ತಿದ್ದನು. ಅವನನ್ನು ಬರ್ಚಿಯಿಂದ ಚುಚ್ಚಿ, ಚಾವಟಿಗೆಯಿಂದ ಹೊಡೆದು, ಪಾಶದಿಂದ ಬಿಗಿದು ಕಂಟಕಾಕೀರ್ಣ ಮಾರ್ಗದಲ್ಲಿ ಎಳೆಯಲು ಸುಮಾಲಿಯು ಕೆಟ್ಟ ಧ್ವನಿಯಿಂದ ಒದರುತ್ತ ಅಳುತ್ತಿದ್ದನು. ಅದನ್ನು ಕಂಡು ಯಜ್ಞಮಾಲಿಯ ಮನಸ್ಸಿನಲ್ಲಿ ಕರುಣೆಯು ಅಂಕುರಿಸಿತು. ಅವನು ದೇವದೂತರನ್ನು ಕೇಳಿದನು 'ಇವನು ಯಾರು ಎಂದು?' 'ಇವನು ನಿನ್ನ ತಮ್ಮ ಸುಮಾಲಿ' ಎಂದುತ್ತರಿಸಿದರು. ಆ ಹರಿಭಟರು. ಇದನ್ನು ಕೇಳಿ ಯಜ್ಞಮಾಲಿಗೆ ದುಃಖವಾಯಿತು.

**ಯಜ್ಞಮಾಲಿ:-** ''ಸ್ವಾಮಿ, ಈ ಪಾಪದಿಂದ ಇವನಿಗೆ ಮುಕ್ತಿ ಇಲ್ಲವೆ? ಏನಾದರೂ ಉಪಾಯವಿದ್ದರೆ ಹೇಳಿರಿ, ನೀವಿಂದು ನನ್ನ ಬಾಂಧವರು, ನನ್ನ ಮಿತ್ರರು. ಏಳು ಹೆಜ್ಜೆ ಕೂಡಿ ನಡೆದರೂ ಮಿತ್ರರಾಗುವರು ಎಂದು ನೀತಿಶಾಸ್ತ್ರಗಳಲ್ಲಿ ಹೇಳಿದೆ. ವಾಸ್ತವಿಕವಾಗಿ ಸಜ್ಜನರಿಗೆ ಏಳು ಹೆಜ್ಜೆ ಚಲನವೂ ಸಹ ಕಾರಣವಿಲ್ಲ. ಮೂರು ಹೆಜ್ಜೆ ಕೂಡಿ ನಡೆದರೂ ಸಾಕು ಮಧುರ ಮೈತ್ರಿ ಉಂಟಾಗುವದು. ಹೆಚ್ಚೇನು? ಹೆಜ್ಜೆ ಹೆಜ್ಜೆಗೂ ಸಜ್ಜನರು ತಮ್ಮ ಮೈತ್ರಿ ರಸವನ್ನು ಹರಿಸುವರು. ಆದುದರಿಂದ ನನ್ನನ್ನು ಕರೆಯಬಂದ ನೀವು ನನ್ನ ಬಾಂಧವರು, ಇಲ್ಲಿ ನರಕದ ಮಾರ್ಗದಲ್ಲಿ ಮುಗ್ಗರಿಸುತ್ತಿರುವವನು ನನ್ನ ತಮ್ಮ, ಇವನನ್ನು ಹೇಗಾದರೂ ಮಾಡಿ ಬಿಡಿಸಿರಿ'' ಅವನ ಮಾತು ಕೇಳಿ ವಿಷ್ಣುದೂತರ ಮುಖದಲ್ಲಿ ಮುಗುಳುನಗೆ ಮೂಡಿತು. ಅವರು ಯಜ್ಞಮಾಲಿಗೆ ಹೇಳಿದರು.

**ವಿಷ್ಣುದೂತ:-** ಮಹಾನುಭಾವನಾದ ಯಜ್ಞಮಾಲಿಯೆ, ನೀನು ನಾರಾಯಣನ್ನೈ ಕನಿಷ್ಠ, ಆದುದರಿಂದ ನಿನ್ನ ಇಷ್ಟಾರ್ಥ ಸಿದ್ಧಿಸಲು ಉಪಾಯ ಹೇಳುತ್ತೇನೆ. ಹಿಂದಿನ ಜನ್ಮದಲ್ಲಿ ನೀನು ವೈಶ್ಯನಾಗಿ ಹುಟ್ಟಿದೆ. ಆಗ ನಿನ್ನ ಹೆಸರು ವಿಶ್ವಂಭರ. ಆಗ ನೀನು ಮಾಡಿದ ಪಾಪಗಳು ಯಾವ ಲೆಕ್ಕಕ್ಕೂ ಸಿಗಲಾರವು. ತಾಯಿ ತಂದೆಗಳನ್ನು ಗೋಳಾಡಿಸುತ್ತಿದ್ದೆ. ಯಾವ ಪುಣ್ಯ ಕರ್ಮಗಳನ್ನೂ ನೀನು ಆಚರಿಸಲಿಲ್ಲ. ನಿನ್ನ ದುರಾಚಾರಕ್ಕೆ ಹೇಸಿ ನಿನ್ನ ಬಂಧುಗಳು ನಿನ್ನನ್ನು ತೊರೆದರು. ಅದರಿಂದ ನೀನು ಬಹಳದುಃಖಿತವಾಗಿದ್ದೆ. ಯಾರೂ ನಿನಗೆ ಅನ್ನ ನೀರು ನೀಡಲಿಲ್ಲ. ಹಸಿವೆ ನಿನ್ನ ಹೊಟ್ಟೆಯಲ್ಲಿ ಸಂಕಟ ತರಿಸಿತ್ತು. ಆ ಸಂಕಟದಲ್ಲಿ ನೀನು ವಿಷ್ಣು ದೇವಾಲಯಕ್ಕೆ ಬಂದೆ, ಅಂದು ಮಳೆಯಾಗಿತ್ತು. ಅದರಿಂದ ಆ ದೇವಾಲಯದಲ್ಲಿ ಕೆಸರಾಗಿ ನೆಲೆಸಲು ಬಾರದಂತಾಗಿತ್ತು. ಬೇರೆ ಎಲ್ಲಿಯೂ ನಿನಗೆ ಸ್ಥಾನವಿರಲಿಲ್ಲ. ಅಲ್ಲಿಯೇ ವಾಸಿಸುವ ಆಶೆಯಿಂದ ನೀನೇ ಆ ಎಲ್ಲ ಕೆಸರನ್ನೂ, ಕಸವನ್ನೂ ತೆಗೆದುಹಾಕಿದೆ. ಆದರಿಂದ ನೀನು ಆ ವಿಷ್ಣುಮಂದಿರವನ್ನು ಸಾರಿಸಿದಂತಾಯಿತು. ನೀನು ಕೆಲವು ದಿನ ಅಲ್ಲಿಯೇ ವಾಸವಾಗಿದ್ದೆ. ಆಗ ಒಂದು ದಿನ ಹಾವು ಬಂದು ನಿನ್ನನ್ನು ಕಚ್ಚಿತು. ನೀನು ಮರಣ

ಹೊಂದಿದೆ. ಆದರೆ ನೀನು ಆ ವಿಷ್ಣುಮಂದಿರವನ್ನು ಸ್ವಚ್ಛಗೊಳಿಸಿದ ಪುಣ್ಯದಿಂದ ನಿನಗೆ ಬ್ರಾಹ್ಮಣ ಜನ್ಮ ಬಂದಿದೆ ಈಗ.

ಶ್ರೀ ಹರಿಯಲ್ಲಿ ಭಕ್ತಿ ಹುಟ್ಟಲಿಕ್ಕೆ ನೀನು ಹಿಂದೆ ಮಾಡಿದ 'ಯಾದೃಚ್ಛಿಕವಾದ ಹರಿಸೇವೆಯೇ ಕಾರಣ. ನೀನು ಹರಿಯ ಪ್ರೀತಿ ಸಂಪಾದಿಸಿ ಸುಖವನ್ನು ಪಡೆಯುವೆ. ಈಗ ನೀನು ನಿನ್ನ ತಮ್ಮನನ್ನು ಉದ್ಧರಿಸುವ ಉಪಾಯವನ್ನು ಹೇಳುತ್ತೇನೆ ಕೇಳು. ಪುಣ್ಯಾತ್ಮನೇ, ನೀನು ಆ ದೊಡ್ಡದಾದ ವಿಶಾಲ ಹರಿಮಂದಿರವನ್ನು ಸಂಪೂರ್ಣವಾಗಿ ಕೆಸರು ತೆಗೆದು ಸಾರಿಸಿರುವೆ. ಆದರಿಂದ ನಿನಗೆ ಅಪಾರ ಪುಣ್ಯ ಬಂದಿದೆ. ನಿನ್ನ ಆ ಮಹಾಪುಣ್ಯದಲ್ಲಿ ಒಂದು ಹಸುವಿನ ತೊಗಲಿನಷ್ಟು ಭೂಮಿಯನ್ನು ಸಾರಿಸಿದ, ನಿನ್ನ ಪುಣ್ಯವನ್ನು ನಿನ್ನ ತಮ್ಮನಿಗೆ ನೀಡು. ಆದರಿಂದ ಅವನ ಉದ್ಧಾರವಾಗುವದು. ವಿಷ್ಣುದೂತರ ಈ ಸೂಚನೆಯನ್ನು ಕೇಳಿ ಯಜ್ಞಮಾಲಿಗೆ ಮಹದಾನಂದವಾಯಿತು. ಕೂಡಲೆ ಅವನು ಸಂಕಲ್ಪಮಾಡಿ, ದೇವಾಲಯದಲ್ಲಿ ಗೋ ಚರ್ಮದಷ್ಟು ಭೂಮಿಯನ್ನು ಸಾರಿಸಿದ್ದರ ಪುಣ್ಯವನ್ನು ಧಾರೆ ಎರೆದ. ಅಣ್ಣನು ಕೊಟ್ಟ ಈ ಪುಣ್ಯ ವಿಶೇಷದಿಂದ ಸುಮಾಲಿಯ ಪಾಪಗಳು ತೊಳೆದುಹೋದವು. ಯಮದೂತರು ಅವನನ್ನು ಅಲ್ಲಿಯೇ ಬಿಟ್ಟುಹೋದರು. ವೈಕುಂಠದಿಂದ ಮತ್ತೊಂದು ವಿಮಾನ ಬಂದಿತು. ಆಗ ಇಬ್ಬರು ಸಹೋದರರು ಪ್ರೀತಿಯಿಂದ ಆಲಂಗಿಸಿಕೊಳ್ಳುತ್ತ ವಿಷ್ಣುಲೋಕಕ್ಕೆ ತೆರಳಿದರು.

**ತಸ್ಮಾತ್ಸರ್ವ ಪ್ರಯತ್ನೇನ ಸಂಪೂಜ್ಯೋ ಜಗತಾಂ ಪತಿಃ ।**
**ಅಕಾಮಾದಪಿ ಯೇ ವಿಷ್ಣೋಃ ಸಕೃತ್ ಪೂಜಾಂ ಪ್ರಕುರ್ವತೇ**
**ನ ತೇಷಾಂ ಭವಬಂಧಸ್ತು ಕದಾಚಿದಪಿ ಜಾಯತೇ ॥**

ಸರ್ವ ಪ್ರಯತ್ನದಿಂದಲೂ ಹರಿಯನ್ನು ಪೂಜಿಸಬೇಕು. ಇಚ್ಛೆ ಇರಲಿ, ಇಲ್ಲದಿರಲಿ, ಒಮ್ಮೆಯಾದರೂ ಭಕ್ತಿಯಿಂದ ಹರಿಯ ಪೂಜೆ ಮಾಡಿದರೆ ಅವರೆಂದೂ ಸಂಸಾರ ಬಂಧನದಲ್ಲಿ ಸಿಲುಕುವದಿಲ್ಲ. ಹರಿಯನ್ನು ಪೂಜಿಸಿದಂತೆ ಹರಿಭಕ್ತರನ್ನೂ ಪೂಜಿಸಿದರೆ ಪಾಪಿಗಳೂ ಕೂಡ ಪರಗತಿಯನ್ನು ಹೊಂದುವರು.

ನಾರದ ಮಹಾಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿದುದು.

—o—

## ವಿಷ್ಣು ಮಹಾತ್ಮೆ ಉತ್ತಂಕನ ಉಪದೇಶ, ಬೇಡನ ಉದ್ಧಾರ

ಅಧ್ಯಾಯ - ೩೭

**ಸನಕ:-** ವಿಷಯಾಂಧರಾದ ಮನುಷ್ಯರ ಪಾಪಗಳೆಲ್ಲವೂ ಪರಿಹಾರವಾಗಬೇಕಾದರೆ ಹರಿಯನಾಮ ಸ್ಮರಣೆಯೊಂದೇ ಉಪಾಯ. ಒಮ್ಮೆಯಾದರೂ ಹರಿಯನ್ನು ನಮಸ್ಕರಿಸದವನು ಶುದ್ಧ ಶ್ವಪಚ. ಅವನೊಡನೆ ಮಾತಾಡಕೂಡದು. ದೇವರ ಪೂಜೆಯಿಲ್ಲದ ಮನೆ ಸುಡುಗಾಡು, ಎಂದೂ ಪ್ರವೇಶಿಸಬಾರದು ಅಂತಹ ಅಪವಿತ್ರ ಸ್ಥಳದಲ್ಲಿ. ದೇವರನ್ನು ದ್ವೇಷಿಸುವವರು, ವೇದವನ್ನು ನಿಂದಿಸುವವರು, ರಾಕ್ಷಸರೇ ಸರಿ. ಹರಿಯಲ್ಲಿ ಭಕ್ತಿ ಮಾಡುವ ಚಂಡಾಲನು ಕೂಡ ಶ್ರೇಷ್ಠನು ಎನಿಸುತ್ತಾನೆ. (ಚಂಡಾಲಾ ऽಪಿ ವೈಶ್ರೇಷ್ಠಾಃ ಹರಿಭಕ್ತಿ ಪರಾಯಣಾಃ) ಒಂದು ಹನಿ ಹರಿಯ ಪಾದೋದಕವನ್ನು ಕುಡಿದರೆ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದಂತೆ. ಹರಿಯನ್ನು ನಂಬಿದವರಿಗೆ ಮುಕ್ತಿ ನಿಶ್ಚಿತ. ಈ ವಿಷಯವಾಗಿ ಒಂದು ಕಥೆಯನ್ನು ಹೇಳುತ್ತೇನೆ.

ಕೃತಯುಗದಲ್ಲಿ ಗುಲಿಕನೆಂಬ ಒಬ್ಬ ಬೇಡ. ಅವನ ಉದ್ಯೋಗ ಹೆರವರ ಹೆಣ್ಣನ್ನು ಅಪಹರಿಸುವದು. ಪರರ ದ್ರವ್ಯ ದೋಚುವದು. ಪರರ ನಿಂದೆಯಲ್ಲಿ ಅವನಿಗೆ ಪರಮಾನಂದ. ಇನ್ನೊಬ್ಬರನ್ನು ಗೋಳುಹುಯ್ಯುವದೆಂದರೆ ಅವನಿಗೆಲ್ಲಿಲ್ಲದ ಹಿಗ್ಗು. ನೂರಾರು ದ್ವಿಜರನ್ನು, ಸಾವಿರಾರು ಗೋವುಗಳನ್ನು ಕೊಂದ ಹೆಮ್ಮೆ ಆ ದುಷ್ಟನಿಗೆ. ದೇವಸ್ಥಾನದಲ್ಲಿಯ ಹಣ ಕದಿಯುವದರಲ್ಲಿ ಅವನು ಎತ್ತಿದ ಕೈ - ಪರರ ಸಂಪತ್ತನ್ನು ಕಂಡರೆ ಬಿಡುತ್ತಲೇ ಇರಲಿಲ್ಲ ಆ ಪಾಪಿ. ಇಂತಹ ಪಾಪಗಳನ್ನು ಅವನು ಗೈದದ್ದು - ಸಾವಿರವಲ್ಲ, ಲಕ್ಷ ಕೋಟಿ ಸಂಖ್ಯೆಯಲ್ಲಿ. ಆ ಮಹಾಪಾಪಿಯು ಒಂದು ದಿನ ಸೌವೀರ ರಾಜನ ರಾಜಧಾನಿಗೆ ಹೋಗಿದ್ದ. ಅದೊಂದು ಸ್ವರ್ಗದ ಸಂಕ್ಷಿಪ್ತ ಆವೃತ್ತಿಯಂತೆ ಕಾಣುತ್ತಿತ್ತು. ನೋಡಿದಲ್ಲೆಲ್ಲ ಅಲಂಕೃತರಾದ ನಾರಿಯರು, ಹಣದ ಹೊಳೆ ಹರಿಯುವ ಅಂಗಡಿಗಳ ಬೀದಿ, ಬೀದಿಯ ಅಕ್ಕ ಪಕ್ಕದಲ್ಲಿ ಕಮಲ ಕನ್ನೈದೆಗಳಿಂದ ತಳತಳಿಸುವ ಪುಷ್ಕರಣೆಗಳು. ಆ ನಗರದ ಮಧ್ಯದಲ್ಲಿ ಒಂದು ಸುಂದರವಾದ ಉಪವನ. ನಂದನವನದ ಮುಂದಿನ ಭಾಗವೇನೊ ಎನ್ನುವಷ್ಟು ರಮಣೀಯವಾಗಿತ್ತು ಆ ಹೂದೋಟ. ಅದರ ನಡುವೆ ಒಂದು ಕೇಶವನ ದೇವಸ್ಥಾನ. ಅದರ ಮೇಲ್ಭಾಗದಲ್ಲಿ ಅನೇಕ ಬಂಗಾರದ ಕಲಶಗಳು ಕಂಗೊಳಿಸುತ್ತಿದ್ದವು. ಅದನ್ನು ಕಂಡು ಇವನ ಬಾಯಿಯಲ್ಲಿ ನೀರು! ಎಲ್ಲಿ ನೋಡಿದಲ್ಲೆಲ್ಲ ಬಂಗಾರ ಈ ಊರಲ್ಲಿ, ಎಷ್ಟು ಚಿನ್ನ! ಎಷ್ಟು ರನ್ನ! ಇದನ್ನು ಬಿಡಲಿಕ್ಕುಂಟೇ ಎಂದು ಯೋಚಿಸಿದ ಆ ಪಾಪಿ. ದೇವಾಲಯದ ಒಳಗೆ ಹೊಕ್ಕ. ಅದರಲ್ಲಿ ಮಹಾತತ್ವಜ್ಞಾನಿಗಳಾದ ಉತ್ತಂಕ ಮುನಿಗಳು ದೇವರ ಪೂಜೆ ಮಾಡುತ್ತಿದ್ದರು. ಸುತ್ತ ಮುತ್ತ ನೋಡಿದ ಆ ಗುಲಿಕ ಬೇಡ. ಯಾರೂ ಇಲ್ಲ. ತಪೋನಿಧಿಗಳು ಧ್ಯಾನದಲ್ಲಿದ್ದಾರೆ. ಏಕಾಕಿಯಾಗಿದ್ದಾರೆ. ಇದೊಂದು ನನಗೆ ಸುವರ್ಣಸುಸಂಧಿ ಎಂದು ಭಾವಿಸಿದ. ಆದರೆ ಆ ಗುಲಿಕನಿಗೆ ಮನಸ್ಸಿನಲ್ಲಿ ಶಂಕಾತಂಕ - ಈ ಉತ್ತಂಕ ಮುನಿ ಫಕ್ಕನೇ ಕಣ್ಣು ತೆರೆದು ನೋಡಿ ನನ್ನನ್ನು ಹಿಡಿಯಲು ಬರಬಹುದು ಎಂದು. ಆದುದರಿಂದ ಇವನನ್ನು ಕೊಂದೇ

ಈ ದೇವಸ್ಥಾನದಲ್ಲಿ ಬೆಳ್ಳಿ ಬಂಗಾರದ ಆಭರಣಗಳನ್ನೆಲ್ಲ ಅಪಹರಿಸಬೇಕು. ಎಂದು ಅವನು ಯೋಚಿಸಿದ. ಅದರಂತೆ ಅತಿ ಸಾಹಸದಿಂದ ಅವನು ಖಡ್ಗವೆತ್ತಿ ಉತ್ತಂಕಮುನಿಯನ್ನು ಕೊಲ್ಲಲ್ಲು ಏರಿಬಂದ. ಅವರ ಜಟೆಯನ್ನು ಹಿಡಿದು ನೆಲಕ್ಕೆ ಬೀಳಿಸಿ ಅವರ ಎದೆಯ ಮೇಲೆ ಕಾಲನ್ನು ಇಟ್ಟ. ಕೊಲ್ಲಲು ಖಡ್ಗವನ್ನು ಎತ್ತಿದ. ಅದನ್ನು ನೋಡಿ ಉತ್ತಂಕಮುನಿಗಳು ಶಾಂತರಾಗಿಯೇ ಕೇಳಿದರು.

**ಉತ್ತಂಕ:-** ಅಯ್ಯಾ ನನ್ನನ್ನೇಕೆ ಕೊಲ್ಲುವೆ? ನಾನೇನು ತಪ್ಪು ಮಾಡಿದ್ದೇನೆ? ಹೇಳು. ಅಪರಾಧ ಮಾಡಿದವರಿಗೆ ಸಮರ್ಥರು ಶಿಕ್ಷೆ ವಿಧಿಸುವರು. ಆದರೆ ನಿಜವಾಗಿ ಸಜ್ಜನರು ಅಪರಾಧಿಗಳನ್ನು ಕೂಡ ದಂಡಿಸುವದಿಲ್ಲ. ಯಾಕೆಂದರೆ ವೈರಿಯಲ್ಲಿ ಕೂಡ ಕೆಲವು ಸದ್ಗುಣಗಳು ಇದ್ದೇ ಇರುತ್ತವೆ. ಆದುದರಿಂದ ಶಾಂತ ಮನಸ್ಸಿನ ಜ್ಞಾನಿಗಳು ವೈರಿಗಳೊಡನೆ ಎಂದೂ ವಿರೋಧ ಮಾಡುವದಿಲ್ಲ.

**ಸುಜನೋ ನ ಯಾತಿ ವೈರಂ ಪರಹಿತ ಬುದ್ಧಿರ್ವಿನಾಶಕಾಲೇಽಪಿ ।**
**ಛೇದೇಽಪಿ ಚಂದನತರುಃ ಸುರಭಯತಿ ಮುಖಂ ಕುಠಾರಸ್ಯ**

ಸಜ್ಜನರು ತಮಗೆ ವಿನಾಶಕಾಲ ಸಮೀಪಿಸಿದಾಗ ಕೂಡ ಪರಹಿತವನ್ನು ಮಾಡುವ ಬುದ್ಧಿಯನ್ನು ತೋರಿಸುತ್ತಾರೆ. ಅವರು ಯಾರನ್ನೂ ದ್ವೇಷ ಮಾಡುವದಿಲ್ಲ. ಯಾಕೆಂದರೆ ಗಂಧದ ಮರವನ್ನು ಕೊಡಲಿಯಿಂದ ಕಡಿದಾಗಲೂ ಆ ಮರವು ಕೊಡಲಿಯ ಮುಖ ಭಾಗವನ್ನು ಸುಗಂಧವುಳ್ಳದ್ದನ್ನಾಗಿ ಮಾಡುತ್ತದೆ. ದೈವವೇ ಬಲವತ್ತರವಾದದ್ದು. ವಾಸ್ತವಿಕವಾಗಿ ದುಷ್ಟರು ಎಲ್ಲವನ್ನು ತೊರೆದು ಅಡವಿಯಲ್ಲಿ ತಪಸ್ಸು ಮಾಡುವವರನ್ನು ಕೊಲ್ಲುವರು. ಇಷ್ಟೆಲ್ಲ ಕಳುವು ಮಾಡಿ ನೀನು ಕುಟುಂಬ ಪೋಷಣೆ ಮಾಡುತ್ತಿರುವೆ. ಇವರಲ್ಲಿ ಯಾರಾದರು ಮರಣಾನಂತರ ನಿನ್ನ ಸಂಗಡ ಬರುವರೇ? ನೀನು ಗಳಿಸಿದ ಹಣವನ್ನು ನಿನ್ನ ಮಡದಿ ಮಕ್ಕಳ ಸುಖದಿಂದ ಭೋಗಿಸುವರು. ಆದರೆ ಪಾಪದ ಫಲವನ್ನು ಮಾತ್ರ ನೀನೊಬ್ಬನೇ ಅನುಭವಿಸಬೇಕು. ನೀನು ಸತ್ತ ಬಳಿಕ ನಿನ್ನನ್ನು ಸುಟ್ಟು ಮನೆಯವರು ಮಾತ್ರ ಸಕ್ಕರೆ ತುಪ್ಪ ಉಣ್ಣುವರು. ನಿನ್ನೊಡನೆ ಯಾರೂ ಬರಲಾರರು.

ಅಕಟಕಟ ಇದು ಎಂತಹ ಸಂಕಟ! ಇದೆಂತಹ ದುಃಖ! ಮನುಷ್ಯನು ಮಹಾ ಮಹಾ ಪಾಪಗಳನ್ನು ಮಾಡಿ ತಾನು ನರಕವನ್ನು ಅನುಭವಿಸಲು ಸಿದ್ಧನಾಗಿ ಮಡದಿ ಮಕ್ಕಳನ್ನು ಪೋಷಿಸುತ್ತಾನೆ, ಮುಂದೆ ನಿನ್ನ ಗತಿ ಏನು?'' ಉತ್ತಂಕ ಮುನಿಯ ಈ ಮಾತು ಕೇಳಿ ಗುಲಿಕ ಬೇಡನಿಗೆ ಒಮ್ಮೆಲೆ ತಾನು ಮಾಡುವ ನೀಚಕೃತ್ಯದ ಅರಿವಾಯಿತು. ತಕ್ಷಣವೇ ಅವನು ಮುನಿಯ ಎದೆಯ ಮೇಲೆ ಮೆಟ್ಟಿದ ಪಾದವನ್ನು ಹಿಂದೆ ತೆಗೆದನು. ಖಡ್ಗವನ್ನು ಆಚೆಗೆ ಎಸೆದು, ಆ ಮುನಿಯ ಪಾದದ ಮೇಲೆ ತಲೆಯಿಟ್ಟನು. 'ಮಹನೀಯರೇ ನನ್ನನ್ನು ಕ್ಷಮಿಸಿರಿ' ಎಂದು ಹೇಳಿ ನಮಿಸಿದನು ಅವರ ಪಾದಾರವಿಂದಗಳಿಗೆ. ಮತ್ತು ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಟ್ಟು, ವಿನಯಾನುನಯಗಳಿಂದ ನಮ್ರನಾಗಿ ಮಾತನಾಡಿದನು.

**ಗುಲಿಕ:-** ವಿಪ್ರೋತ್ತಮರೆ, ನಾನು ಮಹಾಮಹಾ ಪಾಪಗಳನ್ನು ಮಾಡಿದ್ದೇನೆ. ಅವುಗಳನ್ನು ಬಹಳವಾಗಿಯೂ ಮಾಡಿದ್ದೇನೆ. ಆದರೆ ಇಂದು ಅವುಗಳು ನಷ್ಟವಾದವು. ಆದುದರಿಂದಲೇ ಈಗ ನನಗೆ ತಮ್ಮಲ್ಲಿ ಭಕ್ತಿ ಉಂಟಾಗಿದೆ. ಆದುದರಿಂದ ತಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ನನ್ನಪಾಪಗಳು ಹೇಗಾದರೆ ಪರಿಹಾರವಾಗುವವು? ನಾನು ಯಾರನ್ನು

ಮೊರಹೋಗಲಿ? ಹಿಂದೆ ಮಾಡಿದ ಪಾಪದಿಂದ ನಾನು ಕಾಡು ಬೇಡನಾಗಿ ಹುಟ್ಟಿದೆ. ಈಗಲೂ ಕೂಡ ಅಂತಹ ಪಾಪಗಳನ್ನೇ ಮಾಡುತ್ತಿದ್ದೇನೆ. ಇನ್ನೇನು ಗತಿ ನನಗೆ ಮುಂದೆ? ನನ್ನ ಆಯುಷ್ಯವು ಕ್ಷೀಣವಾಗುತ್ತಲಿದೆ. ಪಾಪಗಳೋ ಅಸಂಖ್ಯ ಮಾಡಿದ್ದೇನೆ. ನಾನು ಅವುಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡಿಲ್ಲ. ಮುಂದೆ ನನಗೆ ಎಂಥ ಜನ್ಮ ಬರುವದು ?

ಹೀಗೆ ಭಯಂಕರವಾದ ಪಶ್ಚಾತ್ತಾಪ ಸಂತಾಪದಿಂದ ಕುದಿಯುತ್ತಲೆ ಆ ಗುಲಿಕ ಬೇಡನು ಮರಣಹೊಂದಿದನು. ಅವನನ್ನು ನೋಡಿ ಉತ್ತಂಕಮುನಿಗೆ ದಯೆಯು ಉದಯ ವಾಯಿತು. ಕೂಡಲೆ ಅವನು ವಿಷ್ಣುವಿನ ಪಾದೋದಕವನ್ನು ಅವನ ಮೇಲೆ ಸಿಂಪಡಿಸಿದನು. ಹರಿ ಪಾದೋದಕವು ಅವನ ಮೃತದೇಹದ ಮೇಲೆ ಬೀಳುವದೊಂದೇ ತಡ ಅವನ ಪಾತಕಗಳೆಲ್ಲ ಸುಟ್ಟು ಹೋದವು. ಅವನು ಎಸಗಿದ ಪಾಪ ರಾಶಿ ನಷ್ಟವಾಗಿ ಹೋಯಿತು. ದಿವ್ಯ ವಿಮಾನವು ಅವನನ್ನು ಕರೆಯಲು ಬಂದಿತು. ಆಗ ಅವನು ಉತ್ತಂಕಮುನಿಗೆ ನಮಸ್ಕರಿಸಿ ಹೇಳಿದನು.

**ಗುಲಿಕ:-** ಮುನಿವರ್ಯರಾದ ಉತ್ತಂಕ ಋಷಿಗಳೇ, ನೀವು ನನಗೆ ನಿಜವಾದ ಗುರುಗಳು, ನಿಮ್ಮ ಪ್ರಸಾದದಿಂದ ಈ ಪಾಪದ ಬಂಧನದಿಂದ ನಾನು ಮುಕ್ತನಾಗಿದ್ದೇನೆ. ನಿಮ್ಮ ಉಪದೇಶದಿಂದ ನನ್ನ ಮನದ ದುಗುಡ ಕಳೆದಿದೆ. ಪಾಪಗಳೆಲ್ಲವೂ ಅಳಿದುಹೋಗಿವೆ. ಶ್ರೀ ಹರಿಯ ಪಾದತೀರ್ಥವನ್ನು ನನ್ನ ಮೇಲೆ ಸಿಂಪಡಿಸಿ ನನ್ನನ್ನು ವಿಷ್ಣು ಲೋಕಕ್ಕೆ ಹೋಗಲು ಅರ್ಹನನ್ನಾಗಿ ಮಾಡಿದಿರಿ. ಇದಕ್ಕೆ ನನ್ನ ಅನಂತ ಕೃತಜ್ಞತೆಗಳು. ನಾನು ಮಾಡಿದ ಅಪರಾಧ ಕ್ಷಮಿಸಿರಿ.'' ಎಂದು ಪ್ರದಕ್ಷಿಣೆ ನಮಸ್ಕಾರ ಮಾಡಿ ಅನಂತರ ವಿಮಾನ ಆರೋಹಣ ಮಾಡಿ ಅಪ್ಸರೆಯರಿಂದ ಸೇವಿತನಾಗಿ ಶ್ರೀ ಹರಿಯ ದಿವ್ಯಸ್ಥಾನವಾದ ವೈಕುಂಠಕ್ಕೆ ಹೋದನು. ಇದನ್ನು ಕಂಡು ಉತ್ತಂಕಮುನಿಗೆ ಅತ್ಯಾಶ್ಚರ್ಯವಾಯಿತು. ಇಂತಹ ಸರ್ವಸಮರ್ಥನಾದ ಶ್ರೀ ಹರಿಯನ್ನು ಕುರಿತು ಸ್ತೋತ್ರ ಮಾಡಿದನು. ಅವನ ಈ ಭಕ್ತಿಯುಕ್ತವಾದ ದಿವ್ಯ ಸ್ತೋತ್ರವನ್ನು ಕೇಳಿ ಶ್ರೀ ಹರಿಯು ಪ್ರಸನ್ನನಾದನು ಮತ್ತು ಉತ್ತಂಕನಿಗೆ ದಿವ್ಯವಾದ ಮೋಕ್ಷವನ್ನು ಕರುಣಿಸಿದನು.

ನಾರದ ಮಹಾಪುರಾಣದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿದುದು

—o—

॥ ಉತ್ತಂಕ ಉವಾಚ ॥

ನತೋಽಸ್ಮಿ ನಾರಾಯಣಮಾದಿದೇವಂ
ಜಗನ್ನಿವಾಸಂ ಜಗದೇಕ ಬಂಧುಂ ।
ಚಕ್ರಾಬ್ಜ ಶಾರ್ಙ್ಗಪಾಣಿಂ ಮಹಾಂತಂ ।
ಸ್ಮೃತಾರ್ತಿ ವಿಘ್ನಂ ಶರಣಂ ಪ್ರಪದ್ಯೆ ॥

ಯನ್ನಾಭಿಜಾಬ್ಜ ಪ್ರಭವೋ ವಿಧಾತಾ
ಸೃಜತ್ಯಮುಂ ಲೋಕಸಮುಚ್ಚಯಂ ಚ ।
ಯತ್ಕ್ರೋಧಜೋಹಂ ಜಗಚ್ಚ ರುದ್ರ
ಸ್ತಮಾದಿದೇವಂ ಪ್ರಣತೋಽಸ್ಮಿ ವಿಷ್ಣುಂ ॥

ಪದ್ಮಾಪತಿಂ ಪದ್ಮದಲಾಯತಾಕ್ಷಂ
ವಿಚಿತ್ರ ವೀರ್ಯಮನಖಿಲೈಕಹೇತುಂ ।
ವೇದಾಂತವೇದ್ಯಂ ಪುರುಷಂ ಪುರಾಣಂ ।
ತೇಜೋನಿಧಿಂ ವಿಷ್ಣುಮಹಂ ಪ್ರಪನ್ನಃ ॥

ಆತ್ಮಾಽಕ್ಷರಃ ಸರ್ವಜ
ಜ್ಞಾನಾತ್ಮಕೋ ಜ್ಞಾನವಿದಾಂ ಶರಣ್ಯಃ ।
ಜ್ಞಾನೈಕವೇದ್ಯೋ ಭಗವಾನನಾದಿಃ ।
ಪ್ರಸೀದಂತಾಂ ವ್ಯಷ್ಟಿ ಸಮಷ್ಟಿ ರೂಪಃ ॥

ಎಲ್ಲ ದೇವತೆಗಳಿಗೆ ಮೂಲಕಾರಣವಾದ ನಾರಾಯಣನಿಗೆ ನಮಸ್ಕಾರ ಮಾಡುತ್ತೇನೆ. ಶಂಖ ಚಕ್ರ, ಪದ್ಮ, ಮತ್ತು ಶಾರ್ಙ್ಗಧನುಷ್ಯ ಧರಿಸಿದ ಆ ಭಗವಂತನು ಜಗದಂತರ್ಯಾಮಿಯಾಗಿ ಜಗದ್ಬಂಧುವೂ ಆಗಿದ್ದಾನೆ.

ಸ್ಮರಿಸಿದವರ ದುಃಖ ಪರಿಹರಿಸುವ ಮಹಾತ್ಮನಾದ ಆ ಶ್ರೀಹರಿಯನ್ನು ನಮಸ್ಕರಿಸಿ ಶರಣು ಹೊಂದುತ್ತೇನೆ. ಅವನ ಹೊಕ್ಕಳದ ತಾವರೆಯಲ್ಲಿ ಜನಿಸಿದ ನಾಲ್ಕು ಮುಖದ ಬ್ರಹ್ಮನು ಈ ಲೋಕ ಹಾಗೂ ಉಳಿದೆಲ್ಲ ಲೋಕಗಳನ್ನು ಸೃಷ್ಟಿ ಮಾಡುತ್ತಾನೆ. ಇವನ ಸಿಟ್ಟಿನಿಂದ ಹುಟ್ಟಿದ ರುದ್ರನು ಜಗತ್ತನ್ನೆಲ್ಲ ಸಂಹರಿಸುತ್ತಾನೆ. ಇಂತಹ ವಿಷ್ಣುವನ್ನು ನಮಸ್ಕರಿಸುತ್ತೇನೆ. ಪದ್ಮದಂತೆ ವಿಶಾಲ, ನೇತ್ರ, ವಿಚಿತ್ರ ಶಕ್ತಿ ತೇಜೋನಿಧಿ, ವೇದಾಂತಗಮ್ಯ, ಸರ್ವಕ್ಕೂ ಕಾರಣನಾದ ಲಕ್ಷ್ಮೀಪತಿ ವಿಷ್ಣುವನ್ನು ಶರಣು ಹೋಗುತ್ತೇನೆ. ಸರ್ವವ್ಯಾಪಿಯೂ, ನಾಶರಹಿತನೂ, ಜ್ಞಾನರೂಪಿಯೂ, ಜ್ಞಾನಿಗಳಿಗೆ ಶರಣನೂ, ವ್ಯಷ್ಟಿ, ಸಮಷ್ಟಿರೂಪನೂ ಆದ ಆ ಭಗವಂತನು ಪ್ರಸನ್ನನಾಗಲಿ.

**ಅನಾದಿನಿಧನಂ ದೇವಂ ಸರ್ವಧಾತಾರಮಚ್ಯುತಂ ।**
**ಯೇ ಪ್ರಪನ್ನಾ ಮಹಾತ್ಮಾನಃ ತೇಷಾಂ ಮುಕ್ತಿರ್ಹಿ ಶಾಶ್ವತೀ ॥**

ಹುಟ್ಟು ಸಾವು ರಹಿತನೂ, ಸರ್ವಕರ್ತನೂ, ಶಾಂತಮೂರ್ತಿಯೂ ಆದ ಶ್ರೀ ಹರಿಯನ್ನು ಯಾರು ಶರಣುಹೊಂದುವರೋ ಅವರೇ ಮಹಾತ್ಮರು ಅವರಿಗೆ ಶಾಶ್ವತವಾದ ಮೋಕ್ಷವು ಲಭಿಸುತ್ತದೆ. ಇದು ನಿಶ್ಚಿತ.

**ಯತ್ಪಾದ ತೋಯಂ ಭವರೋಗವೈದ್ಯೋ**
**ಯತ್ಪಾದ ಪಾಂಸು ವಿಮಲತ್ವ ಸಿದ್ಧ್ಯೈ**
**ಯನ್ನಾಮ ದುಷ್ಕರ್ಮ ನಿವಾರಣಾಯ**
**ತಮಪ್ರಮೇಯಂ ಪುರುಷಂ ಭಜಾಮಿ**

ಯಾರ ಪಾದೋದಕವು ಸಂಸಾರವೆಂಬ ರೋಗ ನಿವಾರಿಸುವಲ್ಲಿ ವೈದ್ಯರಂತಿರುವದೋ, ಯಾರ ಪಾದ ದೂಳಿಯು ಪಾಪಗಳನ್ನು ಪರಿಹರಿಸಿ ಪ್ರಾಣಿಗಳನ್ನು ಪರಿಶುದ್ಧ ಮಾಡಲು ಸಮರ್ಥವಾಗಿರುವದೋ ಹಾಗೂ ಯಾರ ನಾಮಸ್ಮರಣೆ ಮಾತ್ರದಿಂದ ಪಾಪ ರಾಶಿ ನಿವಾರಣೆ ಆಗುವದೋ, ಅಂತಹ ಯಾರಿಂದಲೂ ಸಾಕಲ್ಯೇನ ತಿಳಿಯಲ್ಪಡದಿರುವ ಆ ಶ್ರೀಹರಿಯನ್ನು ಭಜಿಸುತ್ತೇನೆ.

**ಯನ್ನಿತ್ಯಂ ಪರಮಾನಂದಂ ಪರಂ ಬ್ರಹ್ಮ ಸನಾತನಂ**
**ವಿಷ್ಣು ಸಂಜ್ಞಂ ಜಗದ್ಧಾಮ**
**ತಮಸ್ಮಿ ಶರಣಂ ಗತಃ ॥**

ನಿತ್ಯ ಸತ್ಯ ಸ್ವರೂಪನಾದ, ಪರಿಪೂರ್ಣನೂ, ಅನಾದಿಯೂ, ವಿಶ್ವವ್ಯಾಪಿಯೂ ಆದ ವಿಷ್ಣು ಎಂಬ ಹೆಸರಿನ ಪರಬ್ರಹ್ಮನಿಗೆ ನಾನು ಶರಣಾಗತನಾಗಿದ್ದೇನೆ. ಈ ರೀತಿಯಾಗಿ ಉತ್ತಂಕಮುನಿಯು ಭಕ್ತಿ ಉದ್ರೇಕದಿಂದ ಪ್ರಾರ್ಥಿಸಲಾಗಿ ದಯಾಳುವಾದ ಆ ಕಮಲಾಪತಿಯು ಪ್ರತ್ಯಕ್ಷನಾದನು. ಆಗ ಉತ್ತಂಕನು ಕಣ್ಣು ತೆರೆದು ನೋಡಿದನು. ಅದೊಂದು ತೇಜಸ್ಸಿನ ನಿಧಿ. ಅರಳುದಾವರೆಯಂತೆ ಕಣ್ಣು, ಅಗಸಿಯಂತೆ ಬಣ್ಣ. ತಲೆಯ ಮೇಲೆ ಕಿರೀಟ. ಕೊರಳಲ್ಲಿ ಶ್ರೀವತ್ಸ, ಕೌಸ್ತುಭ, ಕಿವಿಯಲ್ಲಿ ಕುಂಡಲ, ಎರಡೂ ತೋಳುಗಳಲ್ಲಿ ಕೇಯೂರ, ಹೆಗಲಮೇಲೆ ಬಂಗಾರದ ಯಜ್ಞೋಪವೀತ, ನಡುವಿನಲ್ಲಿ ಪೀತಾಂಬರ, ಹೃದಯದಲ್ಲಿ ವನಮಾಲೆ, ಪಾದಗಳ ಮೇಲೆ ತುಳಸೀದಳ, ಸೊಂಟದಲ್ಲಿ ಪೀತಾಂಬರ, ಮುಖದಲ್ಲಿ ಮಹಾಕಾಂತಿ. ಕಣ್ಣಿನಲ್ಲಿ ತೇಜಸ್ಸು, ನೋಡಿದರೆ ಗೊತ್ತಾಗುತ್ತಿತ್ತು ಇವನು ಸಾಕ್ಷಾತ್ ಪರಮೇಶ್ವರನೆ ಎಂದು. ಭಗವಂತನ ಈ ದಿವ್ಯರೂಪ ಕಂಡು, ಮುನಿಯು ನೆಲದ ಮೇಲೆಯೇ ದಂಡ ಪ್ರಣಾಮ ಮಾಡಿದನು. ತನ್ನ ಹರ್ಷಾಶ್ರುಗಳಿಂದ ಆ ಭಗವಂತನ ಪಾದಗಳನ್ನು ಪ್ರಕ್ಷಾಲನೆ ಮಾಡಿದನು. 'ಮುರಾರಿಯೇ ಪಾಲಿಸು, ಮಧುಸೂದನನೇ ಕಾಪಾಡು' ಎಂದು ಅನನ್ಯ ಮನಸ್ಸಿನಿಂದ ಮೊರೆಯಿಟ್ಟನು - ಆ ಪರಮಾತ್ಮನಿಗೆ.

ಭಕ್ತವತ್ಸಲನಾದ ಭಗವಂತ ಅವನನ್ನು ಎಬ್ಬಿಸಿ ದಯೆಯಿಂದ ಆಲಿಂಗಿಸಿಕೊಂಡು ಅಭಯದಾನ ಮಾಡಿ ಹೇಳಿದನು. 'ಏಳು ವತ್ಸ, ಕೇಳು ನಿನಗೆ ಬೇಕಾದ ವರವನ್ನು. ನಾನು ಪ್ರಸನ್ನನಾದರೆ ಅಸಾಧ್ಯ ಎನ್ನುವದು ಯಾವದೂ ಇಲ್ಲ. ನಿನಗೆ ಬೇಕಾದುದನ್ನು ನೀಡುತ್ತೇನೆ

ನಿನಗೆ ಅಭೀಷ್ಟವಾದ ವರವನ್ನು ಕೇಳು. ನೀನು ಬೇಡಿದ್ದನ್ನು ನೀಡುತ್ತೇನೆ.' ಈ ಮಾತನ್ನು ಕೇಳಿ, ಉತ್ತಂಕನು ಮತ್ತೆ ಅವನಿಗೆ ನಮಸ್ಕರಿಸಿ 'ದೇವ, ದೇವ, ನೀನು ನನ್ನನ್ನೇಕೆ ಮೋಹಪಡಿಸುವೆ! ಬೇರಾವ ವರ ಬೇಕಾಗಿದೆ ನನಗೆ! ನಾನು ಬೇಡುವದಿಷ್ಟೆ : ನಿನ್ನಲ್ಲಿ ನನಗೆ ದೃಢವಾದ ಭಕ್ತಿ ಇರಲಿ. ಇದು ಒಂದು ಜನ್ಮದಲ್ಲಿ ಅಲ್ಲ. ನಾನು ಜನುಮ ಜನುಮದಲ್ಲಿಯೂ ನಿನ್ನ ಭಕ್ತನಾಗಿಯೇ ಇರಲಿ. ನೀನು ನನ್ನನ್ನು ಅನುಗ್ರಹಗೈಯುತ್ತಲೇ ಇರು.

**ಕೀಟೇಷು ಪಕ್ಷಿಷು ಮೃಗೇಷು ಸರೀಸೃಪೇಷು ।**
**ರಕ್ಷಃ ಪಿಶಾಚಮನುಜೇಷ್ವಪಿ ಯತ್ರ ಯತ್ರ ॥**
**ಜಾತಸ್ಯ ಮೇ ಭವತು ಕೇಶವ ತೇ ಪ್ರಸಾದಾ**
**ತ್ತ್ವಯ್ಯೇವ ಭಕ್ತಿರಚಲಾऽವ್ಯಭಿಚಾರಿಣೀ ಚ ॥**

ಕೇಶವನೇ, ಕೀಟ, ಪಕ್ಷಿ, ಮೃಗ, ಸರ್ಪ, ರಾಕ್ಷಸ, ಪಿಶಾಚ, ಮನುಷ್ಯ ಇವುಗಳಲ್ಲಿ ನನಗೆ ಜನ್ಮ ಬಂದರೂ ಸರಿ, ಅಲ್ಲೆಲ್ಲಾ ನನಗೆ ನಿನ್ನ ಅನುಗ್ರಹದಿಂದ ಭಕ್ತಿಯು ಶಾಶ್ವತವಾಗಿ ಇರಲಿ.''ಅವನ ಈ ಪ್ರಾರ್ಥನೆಯನ್ನು ವಿಷ್ಣುವು ಮನ್ನಿಸಿದನು. ಪ್ರೀತಿಯಿಂದ ತನ್ನ ಕೈಯಲ್ಲಿರುವ ಶಂಖವನ್ನು ಅವನಿಗೆ ಸ್ಪರ್ಶ ಮಾಡಿದನು. ಆಗ ಒಮ್ಮೆಲೆ ಅವನಿಗೆ ಯೋಗಿಗಳಿಗೂ ದುರ್ಲಭವಾದ ಜ್ಞಾನೋದಯವಾಯಿತು. ಆ ದಿವ್ಯ ಜ್ಞಾನದಿಂದ ತನ್ನನ್ನು ಮತ್ತೆ ಸ್ತುತಿಸತೊಡಗಿದ ಆ ಉತ್ತಂಕ ಮುನಿಗೆ ಪರಮಾತ್ಮನು ತಲೆಯಮೇಲೆ ವರದ ಹಸ್ತವನ್ನಿಟ್ಟು ಅಪ್ಪಣೆ ಮಾಡಿದನು. 'ವಿಪ್ರೋತ್ತಮ, ನೀನು ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗದಿಂದ ನನ್ನನ್ನು ಆರಾಧಿಸು. ನರನಾರಾಯಣರ ಸ್ಥಾನವಾದ ಬದರಿಕಾಶ್ರಮಕ್ಕೆ ಪ್ರಯಾಣ ಮಾಡು. ಅಲ್ಲಿ ತಪಸ್ಸನ್ನಾಚರಿಸು. ಅಲ್ಲಿಂದ ನೀನು ಮೋಕ್ಷ ಪಡೆಯುವಿ. ನೀನು ಹೇಳಿದ ಸ್ತೋತ್ರ ಪಠಿಸುವವನು ತನ್ನ ಕಾಮನೆಗಳನ್ನೆಲ್ಲ ಹೊಂದುತ್ತಾನೆ.'' ಹೀಗೆ ಹೇಳಿ ಶ್ರೀಮನ್ನಾರಾಯಣನು ಅಂತರ್ಧಾನ ಹೊಂದಿದನು.

ಉತ್ತಂಕ ಮಹಾಮುನಿಯಾದರೂ ಮಾಧವನ ಅಪ್ಪಣೆಯಂತೆ ಬದರಿಕಾಶ್ರಮಕ್ಕೆ ಪ್ರಯಾಣಿಸಿದನು. ಅಲ್ಲಿ ನಿಂತು ಕರ್ಮಯೋಗ, ಜ್ಞಾನಯೋಗದಿಂದ, ಭಕ್ತಿಯೋಗ ದಿಂದ ಭಾವಭರಿತನಾಗಿ ಭಗವಂತನನ್ನು ಪೂಜಿಸಿದನು. ಅದರಿಂದ ಭಗವಂತನ ದಿವ್ಯಾಪರೋಕ್ಷ ಪಡೆದು ವೈಕುಂಠ ಲೋಕವನ್ನು ಹೊಂದಿದನು. ಆದುದರಿಂದ ಇಲ್ಲಿ ಸುಖ, ಅಲ್ಲಿ ಶಾಶ್ವತಾನಂದ ಬಯಸುವವರು ಭಕ್ತಿಯಿಂದ ಶ್ರೀ ಹರಿಯನ್ನು ಪೂಜಿಸಬೇಕು.

*ನಾರದ ಮಹಾಪುರಾಣದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ವಿಷ್ಣುಮಂದಿರದಲ್ಲಿ ವಿಲಾಸಕ್ಕೆ ಕಸಗುಡಿಸಿದವನ ಉದ್ಧಾರ

ಅಧ್ಯಾಯ - ೩೯

**ಸನಕ:-** ವಿಪ್ರೋತ್ತಮನೆ, ಭಗವಂತನ ಮಹಾ ಮಹಿಮೆಯನ್ನು ಮತ್ತೆ ಹೇಳುತ್ತೇನೆ ಕೇಳು, ಹಿಂದೆ ಸೋಮವಂಶದಲ್ಲಿ ಜಯಧ್ವಜನೆಂಬ ರಾಜನಿದ್ದ. ಅವನು ಯಾವಾಗಲೂ ದೇವಸ್ಥಾನವನ್ನು ಗುಡಿಸಿ ಶೃಂಗರಿಸುತ್ತಿದ್ದ. ದೇವಾಲಯದಲ್ಲಿ ದೀಪ ಹಚ್ಚುತ್ತಿದ್ದ. ಒಮ್ಮೆ ಆ ಮಹಾರಾಜನು ಸುಂದರವಾದ ರೇವಾತೀರದಲ್ಲಿ ಶ್ರೀ ಹರಿಯ ದೇವಾಲಯ ಕಟ್ಟಿಸಿದ, ಅವನ ಕೈಯಲ್ಲಿ ಬೇಕಾದಷ್ಟು ದಾಸ ದಾಸಿಯರು, ಆದರೂ ತಾನೇ ಶ್ರೀ ಹರಿಯ ಸೇವೆಮಾಡಲು ಆಸೆ ಆ ದೊರೆಗೆ. ಅವನಿಗೆ ವೀತಿಹೋತ್ರನೆಂಬ ಪುರೋಹಿತ. ಅವನಿಗೂ ಅತ್ಯಾಶ್ಚರ್ಯ ಈ ಜಯಧ್ವಜನ ದೇವಭಕ್ತಿ ಕಂಡು. ಆ ವೀತಿಹೋತ್ರ ಸ್ವಯಂ ವೇದಪಾರಂಗತ. ಆದರೂ ಹರಿತತ್ಪರನಾದ ಆ ದೊರೆಯನ್ನು ಪ್ರಶ್ನಿಸಿದ.

**ವೀತಿಹೋತ್ರ:-** ರಾಜನೆ, ನಿಜವಾಗಿಯೂ ದೇವಭಕ್ತರಲ್ಲಿ ನೀನು ಶ್ರೇಷ್ಠ. ನೀನು ರಾಜಾಧಿರಾಜ. ಕೈಗೊಂದು, ಕಾಲಿಗೊಂದು ಆಳು ನಿನ್ನ ಸೇವೆಗೆ. ಇಷ್ಟು ದಾಸ, ದಾಸಿಯರಿದ್ದರೂ ನೀನು ಅನುದಿನ ದೇವಮಂದಿರವನ್ನು ನೀನೇ ಉಡಗುವೆ. ನೀನೇ ಸಾರಿಸುವೆ, ದೀಪಾರತಿಯನ್ನು ನೀನೇ ಹಚ್ಚುವೆ. ಇದರ ವಿಶೇಷ ಫಲವೇನಾದರೂ ನಿನಗೆ ತಿಳಿದಿದೆಯೆ? ನೀನು ಯಾವಾಗಲೂ ಹತ್ತಿಯನ್ನು ಸಂಗ್ರಹಿಸಿ ಬತ್ತಿಮಾಡುವದರಲ್ಲಿ ನಿರತನಾಗಿರುವೆ, ಎಣ್ಣೆತಂದು ದೀಪ ಹಚ್ಚುವದು, ಕುಡಿ ಚಾಚುವದು ಗುಡಿಯನ್ನು ಗುಡಿಸುವದು ನಿನ್ನ ಉದ್ಯೋಗವಾಗಿದೆ. ಪುಣ್ಯಕರ್ಮಗಳು ಬೇಕಾದಷ್ಟು ಹೇಳಿವೆ ಶಾಸ್ತ್ರದಲ್ಲಿ. ಹರಿಪ್ರೀತಿಕಾರಕವೂ ಆಗಿವೆ ಅವೆಲ್ಲ ಪುಣ್ಯಕಾರ್ಯಗಳು. ಅವೆಲ್ಲವನ್ನು ತ್ಯಜಿಸಿ ನೀನು ಈ ದೀಪದಾನ ಹಾಗೂ ದೇವಸ್ಥಾನ ಸಮ್ಮಾರ್ಜನ ಇವೆರಡನ್ನೇ ಮಾಡುತ್ತಿರುವೆ. ಇವೇ ಎರಡು ಕಾರ್ಯಗಳನ್ನು ಮಾಡಲು ಏನುಕಾರಣ? ಇವುಗಳಿಗೆ ಮಹಾಪುಣ್ಯವಿದ್ದರೆ, ಅದು ನಿನಗೆ ತಿಳಿದಿದ್ದರೆ ಅಂತಹ ಗುಹ್ಯ ವಿಷಯವಾಗಿರದಿದ್ದರೆ, ಅದನ್ನು ನನಗೆ ತಿಳಿಸು.

**ಜಯಧ್ವಜ:-** ವಿಪ್ರೋತ್ತಮರೆ, ಇದಕ್ಕೆ ಕಾರಣ ಉಂಟು. ಜನ್ಮಾಂತರದ ಸ್ಮರಣೆ ನನಗೆ ಈಗಲೂ ಇದ್ದುದರಿಂದ ಹಿಂದಿನ ವೃತ್ತಾಂತವನ್ನೆಲ್ಲ ಹೇಳುತ್ತೇನೆ, ಇದು ನಿಜವಾಗಿಯೂ ಆಶ್ಚರ್ಯಕರವಾಗಿದೆ. ಹಿಂದೆ ಕೃತಯುಗದಲ್ಲಿ ರೋಚಿಷ ಮನ್ವಂತರದಲ್ಲಿ' ರೈವತನೆಂಬ ವಿಪ್ರಶ್ರೇಷ್ಠನಿದ್ದನು. ಅವನು ವೇದದಲ್ಲಿ ಕೋವಿದ. ವೇದಾಂತದಲ್ಲಿ ಪಾರಂಗತ. ಆದರೆ ಏನು ಮಾಡುವದು? ಎರಡರಲ್ಲೂ ಅವನಿಗೆ ವಿಶ್ವಾಸ ಇರಲಿಲ್ಲ. ದುಡ್ಡನ್ನು ಗಳಿಸುವದೇ ಅವನ ದೊಡ್ಡ ಉದ್ಯೋಗ. ಯಜ್ಞಮಾಡಲು ಅಧಿಕಾರವಿಲ್ಲ ದವರಿಂದ ಹಣ ತೆಗೆದುಕೊಂಡು ಅವನು ಯಜ್ಞ ಮಾಡಿಸುತ್ತಿದ್ದ. ಮಾರಬಾರದ ಪದಾರ್ಥಗಳನ್ನೂ ನಿಷಿದ್ಧ ವಸ್ತುಗಳನ್ನೂ ಮಾರಾಟಮಾಡುತ್ತಿದ್ದ. ಮೃದುವಚನಗಳನ್ನು ಎಂದೂ ನುಡಿಯುತ್ತಿದ್ದಿಲ್ಲ. ಎಲ್ಲರ ವಿರುದ್ಧವೂ ಚಾಡಿ ಹೇಳುವದೂ, ನಿಷಿದ್ಧ ಕರ್ಮ ಆಚರಿಸುವದೂ, ಅವನ ಸ್ವಭಾವವೇ ಆಗಿತ್ತು.

ದುರ್ವ್ಯಸನಗಳಿಂದ ಅವನಿಗೆ ಅನೇಕ ರೋಗಗಳು ಅಂಟಿಕೊಂಡವು. ಅದರಿಂದ ಬಂಧುಬಾಂಧವರೆಲ್ಲರೂ ಅವನನ್ನು ತ್ಯಾಗಮಾಡಿದರು. ದಾರಿದ್ರ್ಯ, ದುಃಖ, ದುರವಸ್ಥೆ, ಅವನಿಗೆ ಬೆನ್ನು ಹತ್ತಿದವು. ದಮ್ಮು, ಕೆಮ್ಮು, ಕ್ಷಯ, ಅವನನ್ನು ಹಿಡಿದವು. ಒಮ್ಮೆ ಹಿಡಿದು ಮತ್ತೆ ಬಿಡಲೇ ಇಲ್ಲ. ಹೊಟ್ಟೆಯ ಪಾಡಿಗಾಗಿ ಅತ್ತಿತ್ತ ಅಲೆದಾಡುತ್ತಿರುವಾಗ ನರ್ಮದಾ ತೀರದಲ್ಲಿ ಮರಣಹೊಂದಿದ. ಅವನು ಮರಣ ಹೊಂದಿದ ಬಳಿಕ ಅವನ ಮಡದಿ ಬಂಧುಮತಿಗೆ ಹೇಳುವವರೇ ಇಲ್ಲದಂತಾಯಿತು. ಸ್ವೈರಾಚಾರಗಳಲ್ಲಿ ಅವಳು ಸ್ವಚ್ಛಂದವಾಗಿ ಪ್ರವೃತ್ತಳಾದಳು. ಎಲ್ಲರು ಅವಳನ್ನು ಬಿಟ್ಟುಬಿಟ್ಟಿದ್ದರು. ಅವಳ ಹೊಟ್ಟೆಯಿಂದ ದಂತಕೇತು ಎಂಬ ಹೆಸರಿನಿಂದ ನಾನು ಜನಿಸಿದ್ದೆ. ನಾನು ಚಿಕ್ಕಪುಟ್ಟ ಪಾಪಗಳನ್ನೆಲ್ಲ ಮಾಡುತ್ತಿರಲಿಲ್ಲ. ಮಾಡುವವೆಲ್ಲ ಮಹಾಪಾಪಗಳೇ, ಬ್ರಹ್ಮದ್ವೇಷ, ಬ್ರಹ್ಮದ್ರೋಹ, ಪರದಾರ ಪರದ್ರವ್ಯಗಳಲ್ಲಿ ಆಸಕ್ತಿ, ಪ್ರಾಣಿ ಹಿಂಸೆ, ಗೋಹತ್ಯೆ, ಮದ್ಯಪಾನ, ಕೊಲೆ, ಕಳವು ಹೀಗೆ ಅಸಂಖ್ಯವಾಗಿದ್ದವು. ನಾನು ಮಾಡಿದ ಪಾಪಗಳು.

ಒಂದು ದಿನ ನಾನು ಒಬ್ಬ ಪರಸ್ತ್ರೀಯೊಡನೆ ವಿಹರಿಸಬೇಕಾಗಿತ್ತು. ಕಾಮಾತುರನಾದ ನನಗೆ ಏಕಾಂತ ಸ್ಥಳ ಎಲ್ಲಿಯೂ ದೊರೆಯದಿರುವಾಗ ನನ್ನ ಕಣ್ಣಿಗೆ ಒಂದು ವಿಷ್ಣುಮಂದಿರ ಬಿದ್ದಿತು. ಅಲ್ಲಿ ಯಾರೂ ಇರಲಿಲ್ಲ. ಶೂನ್ಯವಾದ ಹರಿ ಮಂದಿರವು ನನಗೆ ಅಂದು ರಾತ್ರಿ ವಿಲಾಸ ಮಂದಿರವಾಯಿತು. ಅಲ್ಲಿ ನಮ್ಮ ಆ ವಿಹಾರಕ್ಕಾಗಿ ನನ್ನ ಮೈಮೇಲಿನ ಬಟ್ಟೆಯಿಂದ ನನಗೆ ಮಲಗುವಷ್ಟು ಸ್ಥಾನವನ್ನು ಗುಡಿಸಿದೆ. ಕಸ ಕಡ್ಡಿ ತೆಗೆದು ಸ್ವಚ್ಛ ಮಾಡಿದೆ, ನಮ್ಮ ರತಿ ಕ್ರೀಡೆಗಾಗಿ ಆ ದೇವಾಲಯದಲ್ಲಿ ದೀಪ ಉರಿಸಿದೆ. ಅಷ್ಟರಲ್ಲಿ ಆ ಊರಿನ ನಗರಪಾಲಕರು ಅಲ್ಲಿಗೆ ಬಂದರು. ನಮ್ಮಿಬ್ಬರನ್ನು ನೋಡಿ ಜಾರ. ಜಾರಿಣಿಯರೆಂದು ಅವರಿಗೆ ತಿಳಿಯಿತು. ಕೂಡಲೆ ಅವರು ನನ್ನನ್ನೂ ಆ ಮಹಿಳೆಯನ್ನೂ ಹೊಡೆದು ಕೊಂದರು. ನಮ್ಮಿಬ್ಬರನ್ನು ಸಂಹರಿಸಿ, ನಗರಪಾಲಕರು ಹೊರಟು ಹೋದರು. ಆಗ ವಿಷ್ಣು ದೂತರು ಅಲ್ಲಿಗೆ ಬಂದರು. ನಾಲ್ಕು ತೋಳು, ಕಿರೀಟಕುಂಡಲ ಧರಿಸಿದ್ದರು - ಆ ಹರಿದೂತರು. ನಾವಿಬ್ಬರೂ ಅವರು ತಂದ ದಿವ್ಯ ವಿಮಾನ ಏರಿದೆವು. ನಮಗೆ ಸುಂದರ ಶರೀರ ಪ್ರಾಪ್ತವಾಗಿತ್ತು. ಅನಂತರ ದೇವಯೋಗ್ಯವಾದ ಅನೇಕ ಭೂಭಾಗಗಳಲ್ಲಿ ಸುಖ ಅನುಭವಿಸಿ ಅನಂತರ ಯದುವಂಶದಲ್ಲಿ ಹುಟ್ಟಿದೆನು. ಆ ಪುಣ್ಯದಿಂದ ನನಗಿಂದು ಸಂಪತ್ತು, ಸಾಮ್ರಾಜ್ಯ ಬಂದಿದೆ. ಇವೆಲ್ಲವೂ ನಾನು ಹಿಂದಿನ ಜನ್ಮದಲ್ಲಿ ವಿಷ್ಣುಮಂದಿರ ಗುಡಿಸಿದ ಹಾಗೂ ದೀಪವನ್ನು ಹಚ್ಚಿದ ಪುಣ್ಯದಿಂದ ಪ್ರಾಪ್ತವಾಗಿದೆ. ನಾನು ಸಮಸ್ತ ವಿಷ್ಣು ಮಂದಿರವನ್ನು ಗುಡಿಸಲಿಲ್ಲ. ನನ್ನ ದುರ್ವ್ಯಾಪಾರಕ್ಕೆ ಬೇಕಾಗುವಷ್ಟನ್ನೇ ವಸ್ತ್ರದಿಂದ ಗುಡಿಸಿದೆ. ನಾನು ಎಷ್ಟು ಕಣಗಳನ್ನು ಗುಡಿಸಿದೆನೋ ಅಷ್ಟು ಜನ್ಮಗಳಲ್ಲಿ ನಾನು ಹಿಂದೆ ಮಾಡಿದ ಪಾಪಗಳೆಲ್ಲವೂ ತಕ್ಷಣ ನಾಶವಾದವು. ಇಂತಹ ವೈಭವೋಪೇತವಾದ, ಉತ್ತಮವಾದ ಸ್ಥಾನ, ಮಾನ, ಜನ್ಮ ಅಧಿಕಾರ ರಾಜ್ಯ ಭೋಗಗಳೆಲ್ಲವೂ ನನಗೆ ಪ್ರಾಪ್ತವಾಗಿವೆ. ಆದುದರಿಂದ ನಾನು ಈ ಜನ್ಮದಲ್ಲಿ ಉತ್ಕೃಷ್ಟ ಭಕ್ತಿಯಿಂದ ದೇವರ ಗುಡಿಯನ್ನು ಗುಡಿಸಿ ಸೇವೆ ಮಾಡುತ್ತಲಿದ್ದೇನೆ, ಉದ್ದೇಶವಿಲ್ಲದೇ ಮಾಡಿದ ಕಾರ್ಯಗಳಿಂದ ನಾನು ಇಂತಹ ಸಂಪತ್ತು ಹೊಂದಿದೆನು. ಅಂದಬಳಿಕ ಶಮದಮಾದಿ ಸಂಪನ್ನರಾಗಿ ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸಿದರೆ ಶಾಶ್ವತ ಸಂಪತ್ತು ದೊರಕುವದರಲ್ಲಿ ಸಂದೇಹವೇನು?

ಜಯಧ್ವಜರಾಜನ ಈ ಮಾತು ಕೇಳಿ, ಪುರೋಹಿತನಾದ ವೀತಿಹೋತ್ರನು ಸಂತೋಷಪಟ್ಟು ತಾನೂ ಕೂಡ ಶ್ರೀ ಹರಿಯ ಪೂಜೆ, ಧ್ಯಾನಾದಿಗಳಲ್ಲಿ ಆಸಕ್ತನಾದನು. ಆದುದರಿಂದ ಮನುಷ್ಯನು ಬಂಧು, ಬಾಂಧವರು, ಅಧಿಕಾರ, ಐಶ್ವರ್ಯಗಳು ಅಶಾಶ್ವತವೆಂದು ತಿಳಿದು, ಶ್ರೀ ಹರಿಯು ಸೇವೆಯನ್ನು ತಪ್ಪದೇ ಮಾಡಬೇಕು. ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿಬರಬಹುದು. ಅತಿಥಿಗಳನ್ನು ಸಂತುಷ್ಟಿ ಪಡಿಸಬಹುದು. ಆದರೆ ವಿಷ್ಣುವಿನಲ್ಲಿ ಭಕ್ತಿ ಹುಟ್ಟುವದು ದುರ್ಲಭ. ಈ ಪ್ರಪಂಚದಲ್ಲಿ 'ಸತ್ಸಂಗಃ ತುಲಸೀ ಸೇವಾ, ಹರಿಭಕ್ತಿಶ್ಚ ದುರ್ಲಭಾ ' ಸತ್ಸಂಗ, ತುಲಸೀಪೂಜೆ ಹರಿಭಕ್ತಿಗಳು ದುರ್ಲಭ. ಆದುದರಿಂದ ಹರಿಯನ್ನು ಸೇವಿಸಿ ಮನುಷ್ಯನು ತನ್ನ ಜನ್ಮ ಸಾರ್ಥಕ ಮಾಡಿಕೊಳ್ಳಬೇಕು. ಹರಿಯಂತೆ ಹರಿಯ ಪಾದಗಳನ್ನೇ ನಂಬಿದ ಹರಿಭಕ್ತರನ್ನು ಪೂಜಿಸಬೇಕು. ಹರಿಭಕ್ತರನ್ನು ಪೂಜಿಸಿದರೆ ಹರಿಯನ್ನು ಪೂಜಿಸಿದಂತೆಯೇ, ಯಥಾಯೋಗ್ಯ ಅದಕ್ಕೆ ಫಲ ಉಂಟು. ಇದರಂತೆ, ತುಲಸೀಪೂಜೆ, ಶಾಲಿಗ್ರಾಮ ಪೂಜೆ, ತಪ್ಪದೇ ಮಾಡಬೇಕು.

**'ತತ್ರೈವ ಸರ್ವ ದೇವಾಶ್ಚ ತಿಷ್ಠಂತಿ ಶ್ರೀ ಹರಿಸ್ತಥಾ'**
**ಪೂಜ್ಯಮಾನಾ ಚ ತುಳಸೀ ಯಸ್ಯ ತಿಷ್ಠತಿ ವೇಶ್ಮನಿ ॥**

ಯಾವ ಮನೆಯಲ್ಲಿ ತುಳಸೀ ಪೂಜೆ ನಡೆಯುವುದೋ ಅಲ್ಲಿ ದೇವತೆಗಳು ಸನ್ನಿಹಿತರಾಗುವರು.

**ತತ್ರ ಪ್ರೇಯಾಂಸಿ ಶ್ರೇಯಾಂಸಿ ವರ್ಧಂತ್ಯಹಃ ಹರಿಧ್ವಜ**
**ಶಾಲಿಗ್ರಾಮ ಶಿಲಾರೂಪೀ ಯತ್ರತಿಷ್ಠತಿ ಕೇಶವಃ ॥**

ಶಾಲಿಗ್ರಾಮ ಶಿಲಾರೂಪೀ ಯತ್ರಯಾರ ಮನೆಯಲ್ಲಿ ಶಾಲಿಗ್ರಾಮ 'ಶಿಲಾರೂಪದಿಂದ' ಶ್ರೀ ಹರಿಯು ಸನ್ನಿಹಿತನಾಗಿರುವನೋ ಅಲ್ಲಿ ಹಗಲಿರುಳು ಶ್ರೇಯೋಭಿವೃದ್ಧಿಯಾಗುವದು.

**ನ ಬಾಧಂತೇ ಗ್ರಹಾಸ್ತತ್ರ ಭೂತವೇತಾಲಕಾದಯಃ**
**ಶಾಲಿಗ್ರಾಮ ಶಿಲಾ ಯತ್ರ ತತ್ ತೀರ್ಥಂ ತತ್ ತಪೋವನಂ ॥**

ಶಾಲಿಗ್ರಾಮವಿದ್ದಲ್ಲಿ ಭೂತಪ್ರೇತಗಳ ಬಾಧೆ, ಗ್ರಹಪೀಡೆಗಳು ಉಂಟಾಗುವದಿಲ್ಲ. ಶಾಲಿಗ್ರಾಮ ಇದ್ದಲ್ಲಿಯೇ ತೀರ್ಥ , ಅದೇ ತಪೋವನ ಯಾವ ಮನೆಯಲ್ಲಿ ಶಾಲಿಗ್ರಾಮ ಪೂಜೆ ನಡೆಯುವುದಿಲ್ಲವೋ ಅದು ಸ್ಮಶಾನವಿದ್ದಂತೆ.

**ಪುರಾಣಂ ನ್ಯಾಯಮಿಮಾಂಸಾ ಧರ್ಮಶಾಸ್ತ್ರಾಣಿ ಚ ದ್ವಿಜ**
**ಸಾಂಗಾ ವೇದಾಃ ತಥಾ ಸರ್ವೇ ವಿಷ್ಣೋಃ ರೂಪಂ ಪ್ರಕೀರ್ತಿತಂ ॥**

ಪುರಾಣ, ನ್ಯಾಯ, ಶಾಸ್ತ್ರ, ಮಿಮಾಂಸಾ, ಧರ್ಮಶಾಸ್ತ್ರಗಳು, ವೇದಾಂಗಗಳು ಇವೆಲ್ಲವೂ ವಿಷ್ಣುವಿನ ಮಹಿಮೆಯನ್ನು ನಿರೂಪಿಸುವದರಿಂದ ಅವನ ಪ್ರತಿಮಾರೂಪ ವೆಂದು ಹೇಳಲ್ಪಟ್ಟವೆ. ಶ್ರೀಹರಿಗೆ ನಾಲ್ಕು ಪ್ರದಕ್ಷಿಣೆ ಮಾಡುವವರು ಸರ್ವಪಾಪಗಳನ್ನು ಪರಿಹರಿಸಿಕೊಂಡು ಉತ್ತಮ ಸ್ಥಾನ ಪಡೆಯುತ್ತಾರೆ.

ನಾರದ ಮಹಾಪುರಾಣದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿದುದು

—○—

## ಅಧ್ಯಾಯ - ೪೦

**ಸನಕ:-** ಇನ್ನು ಮೇಲೆ ವಿಷ್ಣುವಿನ ವಿಭೂತಿಯನ್ನು ಹೇಳುತ್ತೇನೆ. ಪೂರ್ವ ಕಾಲದಲ್ಲಿ ವೈವಸ್ವತ ಮನ್ವಂತರದಲ್ಲಿ ಇಂದ್ರ ಹಾಗೂ ಬೃಹಸ್ಪತ್ಯಾಚಾರ್ಯರಲ್ಲಿ ಒಂದು ಸಂವಾದ ನಡೆಯಿತು. ಅದನ್ನು ಹೇಳುತ್ತೇನೆ ಕೇಳು.

ಇಂದ್ರದೇವನು ಗುರುಬೃಹಸ್ಪತ್ಯಾಚಾರ್ಯರಿಗೆ ಹೀಗೆ ಕೇಳಿದರು.

**ಇಂದ್ರ:-** ಸರ್ವ ತತ್ವಾರ್ಥಗಳಲ್ಲಿ ಪಂಡಿತರಾದ ಆಚಾರ್ಯರೇ ಹಿಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿ ಹೇಗೆ ಇದ್ದಿತು? ಇಂದ್ರನು ಯಾರಾಗಿದ್ದರು? ದೇವತೆಗಳು ಯಾರು ಅವರ ಕಾರ್ಯವೇನು? ಇವೆಲ್ಲವನ್ನೂ ಹೇಳಿರಿ.

**ಬೃಹಸ್ಪತಿ:-** ದೇವೇಂದ್ರನೇ ನಿನ್ನೆ ನಡೆದ ಸಂಗತಿಯು ಇಂದು ನೆನಪಿರುವದಿಲ್ಲ. ಅಂದ ಬಳಿಕ ಹಿಂದಿನ ಬ್ರಹ್ಮಕಲ್ಪದಲ್ಲಿ ನಡೆದ ಸಮಾಚಾರವು ಇಂದು ನನಗೆ ಹೇಗೆ ತಿಳಿದೀತು? ಎಷ್ಟು ಇಂದ್ರರು ಮನುಗಳು ಆಗಿಹೋದರು ಎಂಬುದನ್ನು ಕೂಡ ಹೇಳಲು ನಾನು ಅಸಮರ್ಥನು. ಆದರೆ ಇದನ್ನೆಲ್ಲ ತಿಳಿದ ಒಂದು ವ್ಯಕ್ತಿಯನ್ನು ನಿನಗೆ ಹೇಳುತ್ತೇನೆ. ನಿನ್ನ ಈ ಅಮರಾವತಿ ಪಟ್ಟಣದಲ್ಲಿ ಸುಧರ್ಮ ಎಂಬ ಪುಣ್ಯವಂತನಿರುತ್ತಾನೆ. ಅವನು ಬ್ರಹ್ಮಲೋಕದಿಂದ ಇಲ್ಲಿಗೆ ಬಂದು, ದಿವ್ಯ ಭೋಗಗಳನ್ನು ಅನುಭವಿಸುತ್ತ ನೆಲೆಸಿದ್ದಾನೆ, ಅವನಿಗೆ ಈ ಮನ್ವಂತರಗಳ ವೃತ್ತಾಂತ ಚೆನ್ನಾಗಿ ತಿಳಿದಿದೆ. ಸುರಾಚಾರ್ಯನ ಈ ಸಲಹೆಯನ್ನು ಕೇಳಿ, ಶಚೀಪತಿಯು ತಮ್ಮ ದೇವತಾಗಣದೊಂದಿಗೆ ಬೃಹಸ್ಪತ್ಯಾಚಾರ್ಯರ ಸಂಗಡ ಸುಧರ್ಮನ ಮನೆಗೆ ಹೋದನು. ಅವನ ಮಂದಿರದಲ್ಲಿ ಕಂಡು ಬಂದ ಅದ್ಭುತ ಐಶ್ವರ್ಯವು ಸ್ವರ್ಗಾಧಿಪತಿಯನ್ನು ಅಚ್ಚರಿಗೊಳಿಸಿತು. ವಿನಯದಿಂದ ನುಡಿದನು ಸುರಪತಿ.

**ಇಂದ್ರ:-** ಹಿಂದಿನ ಬ್ರಹ್ಮಕಲ್ಪದ ವೃತ್ತಾಂತವನ್ನು ನೀನು ತಿಳಿದಿರುವಿಯಂತೆ ಅದನ್ನು ಕೇಳಲು ನಾನು ಇಲ್ಲಿಗೆ ಬಂದಿದ್ದೇನೆ - ಪುರೋಹಿತ ಪರಿವಾರದೊಂದಿಗೆ ನೀನು ಇಲ್ಲಿಯೇ ಇದ್ದರೂ ಜ್ಞಾನದಿಂದ ನಮಗಿಂತ ಮಿಗಿಲಾಗಿರುವಿ. ಇದಕ್ಕೆ ಕಾರಣವಾದ ಪುಣ್ಯ ಯಾವದು ? ಯಾವ ಜ್ಞಾನ, ದಾನ ತಪಸ್ಸುಗಳಿಂದ ಪ್ರಾಪ್ತವಾಗಿದೆ ನಿನಗೆ ಈ ಮಹಿಮೆ? ಈ ಪ್ರಶ್ನೆ ಕೇಳಿ ಸುಧರ್ಮನು ವಿನಯದಿಂದ ಉತ್ತರಿಸಿದನು.

**ಸುಧರ್ಮ:-** ಒಂದು ಸಾವಿರ ಚತುರ್ಯುಗಗಳೆಂದರೆ ಬ್ರಹ್ಮದೇವರ ಒಂದು ದಿನ. ಬ್ರಹ್ಮದೇವರ ಒಂದು ದಿನದಲ್ಲಿ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು, ನಾನಾ ದೇವತೆಗಳು, ಇವರೆಲ್ಲರೂ, ತೇಜೋವಂತರು, ಬಲವಂತರು, ಪ್ರಭಾವಶಾಲಿಗಳು. ಅವರೆಲ್ಲರ, ಹೆಸರು ಹೇಳುತ್ತೇನೆ ಕೇಳು. ಮೊದಲನೆಯವನು ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ಈ ಹಿಂದೆ ಇವು ಆರು ಮನ್ವಂತರಗಳು ಕಳೆದಿವೆ. ಈಗ ನಡೆಯುತ್ತಿರುವದು ಏಳನೆಯ ವೈವಸ್ವತ, ಮನ್ವಂತರ. ಈ ಮನ್ವಂತರದ ಅಧಿಪತಿ ಮನು ಮಹಾರಾಜನು. ವಿವಸ್ವತ ಸೂರ್ಯನ ಮಗನಾದುದರಿಂದ ಅವನಿಗೆ ವೈವಸ್ವತ ಮನು ಎಂದು ಹೆಸರು. ಎಂಟನೆಯವನು ಸೂರ್ಯಸಾವರ್ಣಿ, ಒಂಭತ್ತನೆಯವ ಮನು ದತ್ತಸಾವರ್ಣಿ,

ಹತ್ತನೆಯ ಮನು ಬ್ರಹ್ಮಸಾವರ್ಣಿ, ಹನ್ನೊಂದನೆಯ ಧರ್ಮಸಾವರ್ಣಿ, ಹನ್ನೆರಡನೆಯ ರುದ್ರಸಾವರ್ಣಿ, ಹದಿಮೂರನೇ ಯವನು ರೋಚಮಾನ, ಕೊನೆಯವನು ಭೌತ್ಯ ಎಂದು ಹೆಸರುಳ್ಳವ. ಹೀಗೆ ಇವರು ಬ್ರಹ್ಮದೇವರ ಒಂದು ದಿನದಲ್ಲಿ ಆ ಹದಿನಾಲ್ಕು ಮನ್ವಂತರದ ಅಧಿಪತಿಗಳಾದ ಮನುಗಳು ಆಗಿ ಹೋಗುತ್ತಾರೆ. ಇನ್ನು ಈ ಹದಿನಾಲ್ಕು ಮನ್ವಂತರಗಳಲ್ಲಿಯೂ ತ್ರಿಲೋಕ ಆಳುವ ಇಂದ್ರರನ್ನು, ದೇವತೆಗಳನ್ನು ಹೇಳುತ್ತೇನೆ ಕೇಳು. ಮೊದಲನೆಯ ಸ್ವಯಂಭು ಮನ್ವಂತರದಲ್ಲಿ ಯಾಮವೆಂಬ ದೇವತೆಗಳ ಗುಂಪು ಶಾಸನ ಸೂತ್ರ ನಡೆಸುತ್ತಿದ್ದರು. ಅವರಿಗೆ ಮಹಾಮತಿ ಎಂಬುವವ ಇಂದ್ರನಾಗಿದ್ದನು. ಅವನಿಗೆ ಯಜ್ಞನೆಂದು ಕರೆಯುತ್ತಿದ್ದರು. ಸ್ವಾರೋಚಿಷ ಮನ್ವಂತರದಲ್ಲಿ ಪಾರಾವತರು (ತುಷಿತರು) ಎಂಬ ದೇವಗಣ ವಿಪಶ್ಚಿತ ಎಂಬುವವನು ಇಂದ್ರ.

ಮೂರನೆಯ ಮನ್ವಂತರದಲ್ಲಿ, ಸುಧಾಮ, ಸತ್ಯ, ಶಿವ ಎನ್ನುವ ದೇವತಾ ಗಣಗಳು ಸುಶಾಂತಿ ಎಂಬುವನು ದೇವೇಂದ್ರ.

ನಾಲ್ಕನೆಯ ತಾಮಸ ಮನ್ವಂತರದಲ್ಲಿ ಸುತ ಪರಾಹರ, ಸುತ್ಯ, ಸುಧೀ, ಮುಂತಾದ ದೇವತಾ ನಾಯಕರು. ಶಿವ ಎಂಬುವವನು ಆಗ ಮಹೇಂದ್ರ' ಐದನೆಯ ಮನ್ವಂತರದಲ್ಲಿ. ಅಮಿತಾಭ ಎಂಬ ದೇವತೆಗಳು 'ರುಹು ' ಎಂಬ ದೇವೇಂದ್ರ. ಆರನೆಯ ಮನ್ವಂತರದಲ್ಲಿ. ಆರ್ಯ ಎಂಬ ಹೆಸರಿನ ದೇವಗಣ ಮನೋಜವ ಎಂಬ ಇಂದ್ರ. ಪ್ರಕೃತ ವೈವಸ್ವತ ಮನ್ವಂತರದಲ್ಲಿ ಆದಿತ್ಯ, ವಸು, ರುದ್ರ ಮುಂತಾದ ದೇವತಾಗಣ ಪುರಂದರ ಎಂಬುವನು ಇಂದ್ರ. ಮುಂದಿನ ಎಂಟನೆಯ ಮನ್ವಂತರದಲ್ಲಿ ಸುತಪ ಎಂಬ ದೇವತೆಗಳು, ವಿಷ್ಣುವಿಗೆ ಭೂಮಿದಾನ ನೀಡಿದ ಪುಣ್ಯದಿಂದ ಬಲಿಯು ಇಂದ್ರನಾಗುವನು. ಒಂಭತ್ತನೆಯ ಮನ್ವಂತರದಲ್ಲಿ ಪರ ಎಂಬ ದೇವತಾಗಣ, ಅದ್ಭುತ ಎಂಬ ಹೆಸರಿನವರು ದೇವೇಂದ್ರ. ಹತ್ತನೆ ಮನ್ವಂತರದಲ್ಲಿ ಸುವಾಮನ ಎಂಬುವವರು ದೇವತೆಗಳು, ಶಾಂತಿ ಎಂಬುವನು ದೇವೇಂದ್ರ, ಹನ್ನೊಂದನೆಯ ಮನ್ವಂತರದಲ್ಲಿ ವಿಹಂಗಣ ಎಂಬ ದೇವತಾಗಣ 'ವೃಷ ' ಎಂಬುವವನು ಇಂದ್ರ, ಹನ್ನೆರಡನೆಯದರಲ್ಲಿ ಹರಿನಾಭ ಎಂಬುವವರು ದೇವತೆಗಳು, ಋತು ಹೆಸರಿನ ಇಂದ್ರ. ಹದಿಮೂರನೆಯ ಮನ್ವಂತರದಲ್ಲಿ ಸುತಾಮ ಎಂಬುವವರು ದೇವತೆಗಳು ದಿವಸ್ಪತಿ ಎಂಬುವವನು ಇಂದ್ರ.

ಕೊನೆಯ ಮನ್ವಂತರದಲ್ಲಿ ಚಾಕ್ಷುಷ ಎನ್ನುವ ದೇವತೆಗಳು ಶುಚಿ ಎಂಬುವವನೇ ದೇವೇಂದ್ರ. ಒಂದೊಂದು ಬ್ರಹ್ಮದಿನದಲ್ಲಿ ಒಬ್ಬೊಬ್ಬ ಮನುವಿನ ಅಧಿಕಾರ. ಆ ದಿನ ಮುಗಿದ ಬಳಿಕ ಆಯಾ ಮನು ಮಹಾರಾಜರ ಅಧಿಕಾರ ಪರಿಸಮಾಪ್ತವಾಗುವದು. ನಾನು ಈ ಸ್ವರ್ಗಲೋಕಕ್ಕೆ ಬಂದು ಎಷ್ಟು ಕಾಲವಾಯಿತೆಂದು ಹೇಳುತ್ತೇನೆ ಕೇಳು. ನನ್ನ ಜೀವಿತ ಕಾಲದಲ್ಲಿ ನಾಲ್ಕು ಮನುಗಳು, ಅಧಿಕಾರ ಮಾಡಿಹೋಗಿದ್ದು. ನನ್ನ ಐಶ್ವರ್ಯ ಅಪಾರಪಾರಂ ಇನ್ನೂ ಕೋಟಿ ವರ್ಷ ನಾನಿರಬೇಕು ಇಲ್ಲಿ. ಅನಂತರ ನನ್ನ ಕರ್ಮಭೂಮಿಗೆ ನಾನು ಹೋಗುವೆನು. ನನ್ನ ಜನ್ಮಾಂತರದ ವೃತ್ತಾಂತ ಹೇಳುತ್ತೇನೆ ಕೇಳು.

ನಾನು ಹಿಂದೆ ಹದ್ದಾಗಿ ಹುಟ್ಟಿ ಅಮೇಧ್ಯ ತಿನ್ನುತ್ತ ಜೀವಿಸಿದ್ದೆ. ಒಂದು ದಿನ ನಾನು ಸಾಯಂಕಾಲದಲ್ಲಿ ವಿಷ್ಣುದೇವಾಲಯದ ಪ್ರಾಕಾರದ ಮೇಲೆ ಕುಳಿತಿದ್ದೆ. ಆಗ ಅಲ್ಲಿಗೆ ಬೇಡನೊಬ್ಬ ಬಂದು, ಗುರಿಯಿಟ್ಟು ಬಾಣ ಬಿಟ್ಟನು. ಬಾಣ ತಾಗಿ ಅದೇ ದೇವಾಲಯದ

ಅಂಗಳದಲ್ಲಿ ನಾನು ಬಿದ್ದೆ. ನನ್ನ ಪ್ರಾಣ ಕುತ್ತಿಗೆಗೆ ಬಂತು. ಆಗ ಒಂದು ನಾಯಿಯು ಮಾಂಸದ ಆಶೆಯಿಂದ ನನ್ನನ್ನು ಬಾಯಿಯಲ್ಲಿ ಕಚ್ಚಿಕೊಂಡಿತು. ಉಳಿದ ನಾಯಿಗಳು ಅದನ್ನು ಹಿಂಬಾಲಿಸಿ ಓಡಿಬಂದವು. ನನ್ನನ್ನು ಕಚ್ಚಿದ ನಾಯಿಯು ನನ್ನನ್ನು ಬಾಯಿಯಲ್ಲೇ ಹಿಡಿದುಕೊಂಡು, ಇತರ ನಾಯಿಗಳೊಡನೆ ಆ ವಿಷ್ಣು ಮಂದಿರವನ್ನು ಪ್ರದಕ್ಷಿಣೆಯಾಗಿ ಸುತ್ತಿತು. ಹೀಗೆ ಆಕಸ್ಮಿಕವಾಗಿ ನನಗೂ ಆ ನಾಯಿಗೂ, ವಿಷ್ಣು ದೇವಾಲಯದ ಸುತ್ತಲೂ ಪ್ರದಕ್ಷಿಣೆ ಹಾಕುವ ಪ್ರಸಂಗ ಬಂದಿತು. ಇದರಿಂದ ಜಗನ್ನಿಯಾಮಕನಾದ ಆ ಶ್ರೀ ಹರಿಯು ನನಗೂ ಆ ನಾಯಿಗೂ ಸದ್ಗತಿ ನೀಡಿದನು. ಬುದ್ಧಿ, ಭಕ್ತಿಗಳಿಲ್ಲದೆ ವಿಷ್ಣು ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿದ ನನಗೂ ಆ ನಾಯಿಗೂ ಇಂತಹ ದಿವ್ಯಗತಿ ಆಯಿತು. ಇನ್ನು ಭಕ್ತಿಯಿಂದ ಭಗವನ್ಮಂದಿರವನ್ನು ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿದವರಿಗೆ ಎಂಥ ಫಲ ಬರಬಹುದು ನೀವೇ ವಿಚಾರಿಸಿರಿ.'' ಸುಧನ್ವನು ಹೇಳಿದ ಈ ಪವಾಡವನ್ನು ಕೇಳಿ ದೇವೇಂದ್ರನಿಗೆ ಸಂತೋಷವಾಯಿತು. ಅಂದಿನಿಂದ ಅವನು ಕೂಡ ಅಧಿಕಾಧಿಕವಾಗಿ ಶ್ರೀ ಹರಿಯ ಕೈಂಕರ್ಯದಲ್ಲಿ ನಿರತರಾದರು. ಇದಕ್ಕಾಗಿ ದೇವಾಧಿದೇವತೆಗಳೂ ಕೂಡ ಭರತಖಂಡದಲ್ಲಿ ಜನಿಸಿ ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ನಿರ್ದುಷ್ಟನಾದ ಹರಿಯನ್ನು ಭಕ್ತಿಯಿಂದ ಆರಾಧಿಸುವವರನ್ನು ಬ್ರಹ್ಮಾದಿದೇವತೆಗಳು, ಗೌರವಿಸುವರು.

**ಯೇ ಮಾನವಾಃ ಪ್ರತಿದಿನಂ ಪರಿಮುಕ್ತ ಸಂಗಾ**
**ನಾರಾಯಣಂ ಗರುಡವಾಹನ ಮರ್ಚಯಂತೀ!**
**ತೇ ಸರ್ವಪಾಪ ನಿಕರೈಃ ಪರಿತೋ ವಿಮುಕ್ತಾ**
**ವಿಷ್ಣೋಃ ಪದಂ ಶುಭತರಂ ಪ್ರತಿಯಾಂತಿ ಹೃಷ್ಟಾಃ**

ಪ್ರತಿದಿನವೂ ನಿಷ್ಕಾಮರಾಗಿ ಗರುಡವಾಹನನಾದ ನಾರಾಯಣನನ್ನು ಪೂಜಿಸುವ ಮನುಷ್ಯರು ಸಕಲಪಾಪಗಳನ್ನು ಕಳೆದುಕೊಂಡು ಅತಿ ಮಂಗಳಕರವಾದ ವಿಷ್ಣುಲೋಕವನ್ನು ಹೊಂದಿ ಸಂತೋಷ ಪಡುವರು.

**ಯೇ ಮಾನವಾ । ವಿಗತರಾಗ ಪರಾವರಜ್ಞಾ ।**
**ನಾರಾಯಣಂ ಸುರಗುರುಂ ಸತತಂ ಸ್ಮರಂತಿ ॥**
**ಧ್ಯಾನೇನ ತೇನ ಹತ ಕಿಲ್ಬಿಷಚೇತನಾಸ್ತೆ ।**
**ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥**

ರಾಗಾದಿ ದೋಷಗಳನ್ನು ಬಿಟ್ಟು ಪರಾಪರ ತತ್ವಜ್ಞರಾಗಿ ದೇವಗುರುವಾದ ನಾರಾಯಣನನ್ನು ಯಾವಾಗಲೂ ಧ್ಯಾನಿಸುವ ಮನುಷ್ಯರು, ಆ ಧ್ಯಾನದಿಂದ ತಮ್ಮ ಪಾಪಗಳನ್ನು ಪರಿಹರಿಸಿಕೊಳ್ಳುವರು. ಅವರು ಪುನಃ ತಾಯಿಯ ಸ್ತನ್ಯಪಾನ ಮಾಡುವದಿಲ್ಲ. ಎಂದರೆ ಪುನರ್ಜನ್ಮ ರಹಿತವಾದ ಮುಕ್ತಿ ಸ್ಥಾನವನ್ನು ಹೊಂದುತ್ತಾರೆಂದು ತಾತ್ಪರ್ಯ.

**ಯೇ ಮಾನವಾ ಹರಿಕಥಾಶ್ರವಣಾದದೋಷಾಃ ॥**
**ಕೃಷ್ಣಾಂಘ್ರಿ ಪದ್ಮ ಭಜನೇ ರತಚೇತನಾಶ್ಚ ॥**
**ತೇ ವೈ ಪುನಂತಿ ಚ ಜಗಂತಿ ಶರೀರಸಂಗಾ ॥**
**ತ್ಸಂಭಾಷಣಾದಪಿ ತತೋ ಹರಿರೇವ ಪೂಜ್ಯಃ ॥**

ಹರಿಕಥೆಯ ಶ್ರವಣದಿಂದ ದೋಷಗಳನ್ನು ಹೋಗಲಾಡಿಸಿಕೊಂಡು, ಶ್ರೀ ಹರಿಯ ಭಜನೆ ಮಾಡುವವದರಲ್ಲಿ ಆಸಕ್ತವಾದ ಬುದ್ಧಿಶಾಲಿ ಮನುಷ್ಯರು, ತಮ್ಮ ಶರೀರ ಸಂಬಂಧ ಸಂಭಾಷಣೆ, ಮುಂತಾದವುಗಳಿಂದ ಲೋಕಗಳನ್ನು ಪವಿತ್ರ ಮಾಡುತ್ತಾರೆ. ಆದುದರಿಂದ ಹರಿಯೇ ಪೂಜ್ಯನು.

ನಾರದ ಮಹಾಪುರಾಣದಲ್ಲಿ ಎಂಬ ನಲವತ್ತನೆಯ ಅಧ್ಯಾಯ ಮುಗಿದುದು

—o—

## ನಾಮ ಮಾಹಾತ್ಮ ವರ್ಣನ

ಅಧ್ಯಾಯ - ೪೧

**ನಾರದ:-** ತತ್ವ ಜ್ಞಾನದಲ್ಲಿ ಪರಿಣತನಾದ ಸನಕಮುನಿಯೇ, ತಾವು ನನಗೆ ಎಲ್ಲ ವಿಷಯ ತಿಳಿಸಿದಿರಿ. ಈಗ ಯುಗಗಳ ಸ್ಥಿತಿ ಹಾಗೂ ಲಕ್ಷಣಗಳನ್ನು ಕೇಳ ಬಯಸುತ್ತೇನೆ.

**ಸನಕ:-** ಸಂತೋಷ ಬುದ್ಧಿವಂತನಾದ ನಾರದ, ನೀನು ಬಹಳ ಒಳ್ಳೇ ಪ್ರಶ್ನೆ ಮಾಡಿದೆ, ಸರ್ವಜನರಿಗೆ ಉಪಕಾರಕವಾದ ಸರ್ವ ಯುಗಗಳನ್ನು ಹೇಳುತ್ತೇನೆ. ಈ ಲೋಕದಲ್ಲಿ ಒಂದು ಕಾಲದಲ್ಲಿ ಧರ್ಮವೃದ್ಧಿ ಹೊಂದಿದರೆ ಮತ್ತೊಮ್ಮೆ ಹ್ರಾಸವಾಗುತ್ತದೆ. ಕೃತ, ತ್ರೇತಾ, ದ್ವಾಪರ ಕಲಿ ಇವು ನಾಲ್ಕು ಯುಗಗಳು ದೇವಮಾನದ ಹನ್ನೆರಡು ಸಾವಿರ ವರ್ಷಗಳು, ಮನುಷ್ಯರ ಒಂದು ಚತುರ್ಯುಗ ಎಂದು ಕರೆಯಲ್ಪಡುತ್ತವೆ. ಕೃತಯುಗದಲ್ಲಿ ಎಲ್ಲರೂ ಧರ್ಮಿಷ್ಠರು ಹಾಗೂ ಸಂತುಷ್ಟರು ಆಗಿದ್ದರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ಜಾತಿಯವರು ತಮ್ಮ ತಮ್ಮ ಧರ್ಮದಲ್ಲಿ ನಾರಾಯಣನಲ್ಲಿ ಭಕ್ತಿ ಇಟ್ಟು ಅಸೂಯೆ ಅಹಂಕಾರ ವಿಲ್ಲದೆ ಸತ್ಯ ನುಡಿಯುತ್ತ ತಮ್ಮ ವರ್ಣಾಶ್ರಮ ಧರ್ಮಗಳನ್ನು ವಿಹಿತ ಕರ್ಮಗಳನ್ನು ಫಲಾಶೆಯಿಲ್ಲದೆ ಮಾಡುತ್ತ ಶ್ರೀ ಹರಿಯಲ್ಲಿ ಭಕ್ತಿ ಮಾಡಿ ಉತ್ತಮ ಗತಿಯನ್ನು ಹೊಂದುತ್ತಾರೆ.

ಎರಡನೆಯದಾದ ತ್ರೇತಾಯುಗದಲ್ಲಿ ಜನರು ಯಜ್ಞಾದಿ ಕಾರ್ಯಗಳಲ್ಲಿ ಆಸಕ್ತರು. ಸರ್ವದಾ ಹರಿಧ್ಯಾನಪರರು ಆಗಿರುವರು. ದ್ವಾಪರಯುಗದಲ್ಲೂ, ಕೆಲವು ದ್ವಿಜರು ಅಸತ್ಯವಾದಿಗಳು ರಾಗದ್ವೇಷಾದಿ ದುರ್ಗುಣ ಉಳ್ಳವರು. ಸ್ವರ್ಗ ಮೋಕ್ಷಗಳ ಉದ್ದೇಶದಿಂದ ಯಜ್ಞಾದಿ ಪುಣ್ಯ ಕರ್ಮ ಮಾಡುವವರು, ದ್ರವ್ಯದಾಶೆಯಿಂದ ಪುಣ್ಯಕರ್ಮ ಮಾಡುವವರಾಗಿರುತ್ತಾರೆ. ಈ ಯುಗದಲ್ಲಿ ಧರ್ಮ, ಅಧರ್ಮಗಳು ಸರಿಸಮ. ಅಧರ್ಮದಿಂದ ಪ್ರಜಾನಾಶ ಉಂಟಾಗುವದು. ಕಲಿಯುಗದಲ್ಲಿ ಧರ್ಮವು ಕಾಲುಭಾಗ ಮಾತ್ರ ಉಳಿಯುತ್ತದೆ. ಈಗ ಪುಣ್ಯ ಮಾಡುವ ಯಜ್ಞಾದಿ ಕರ್ಮ ಮಾಡುವವರು ವಿರಳ. ಸದಾಚಾರಿಗಳು ಸಿಗುವದು ದುರ್ಲಭ. ಎಲ್ಲಿಯೋ ಒಬ್ಬಿಬ್ಬ ಪುಣ್ಯಾತ್ಮರು ಕರ್ಮಯೋಗ ನಿರತರಾದರೆ ಅವರನ್ನು ಕಂಡು ಅಸೂಯೆ ಪಡುವವರೇ ಬಹಳ. ವ್ರತ ಧರ್ಮ, ಜ್ಞಾನ ಮುಂತಾದವುಗಳು ನಾಶವಾಗುತ್ತವೆ. ಕಲಿಯುಗದ ಪ್ರಜೆಗಳು ಡಂಭಾಚಾರ ಹೊಟ್ಟೆಕಿಚ್ಚಿನವರು. ಅಲ್ಪಾಯುಷಿಗಳಾಗುವರು.

**ನಾರದ:-** ಧರ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಸನಕ ಮುನಿಗಳೇ ತಾವು ನಮಗೆ ಎಲ್ಲ ಯುಗಧರ್ಮಗಳನ್ನು ಹೇಳಿದಿರಿ. ಈಗ ಕಲಿಯುಗದ ಧರ್ಮವನ್ನು ವಿಸ್ತರಿಸಿ ಹೇಳಿರಿ.

**ಸನಕ:-** ನಾರದನೇ, ಶ್ರೀ ಹರಿಯು ಒಂದೊಂದು ಯುಗದಲ್ಲಿ ಒಂದೊಂದು ವರ್ಣದಿಂದ ಒಡಗೂಡಿ ಭಕ್ತರನ್ನು ಅನುಗ್ರಹಿಸುವನು. ಕೃತಯುಗದಲ್ಲಿ ಶ್ರೀ ಹರಿಯು

ಶುಕ್ಲವರ್ಣ, ತ್ರೇತಾಯುಗದಲ್ಲಿ ಕೆಂಪುವರ್ಣ, ದ್ವಾಪರಯುಗದಲ್ಲಿ ಶ್ರೀಹರಿಯ ವರ್ಣಪೀತ ಕಲಿಯುಗದಲ್ಲಿ ಕೃಷ್ಣ ವರ್ಣ. ತ್ರೇತಾಯುಗದಲ್ಲಿ ಮುಕ್ಕಾಲುಪಾಲು ಧರ್ಮ, ದ್ವಾಪರಯುಗದಲ್ಲಿ ಅರ್ಧ ಧರ್ಮ, ಅರ್ಧ ಅಧರ್ಮ, ಕಲಿಯುಗದಲ್ಲಿ ಮೂರು ಭಾಗ ಅಧರ್ಮ, ಕಾಲು ಭಾಗ ಧರ್ಮ, ಕಲಿಯುಗವು ಉಗ್ರವಾಗುತ್ತ ಹೋದಂತೆ ಚಾತುರ್ವರ್ಣಿಗಳು ತಮಗೆ ವಿಹಿತ ಧರ್ಮಕರ್ಮ ಗಳನ್ನೂ ಬಿಡುವರು. ಪಂಡಿತರಾದವರೂ ಕೂಡ ಗರ್ವಾಂಧರಾಗಿ ದುಬುದ್ಧಿಯಿಂದ ಸತ್ಯ ಭ್ರಷ್ಟರಾಗುವರು. ಎಲ್ಲರೂ ಅಧರ್ಮ ಆಚರಿಸುವರು. ನಾಸ್ತಿಕರಾಗುವರು.

ಈ ಅಧರ್ಮ ಪ್ರಾಬಲ್ಯದಿಂದ ಅಲ್ಪಾಯುಷ್ಯ ಸರ್ವೇ ಸಾಮಾನ್ಯವಾಗುವದು. ಅದರಲ್ಲಿಯೂ ಕ್ರಮತಪ್ಪಿ ಸಾವು, ಮೊದಲು ಚಿಕ್ಕವರಿಗೂ, ಅನಂತರ ಮುದುಕರಿಗೆ ಆಗಾಗ ಬರುವದು ಉಂಟು ಕಲಿಯುಗದಲ್ಲಿ. ಬ್ರಾಹ್ಮಣಾದಿ ವರ್ಣಗಳೂ ಸಂಕೀರ್ಣವಾಗಿ ಎಲ್ಲರೂ ಶೂದ್ರರಂತಾಗುವರು. ರಾಜರು ಅನ್ಯಾಯಮಾರ್ಗದಲ್ಲಿ ನಡೆದು ಕರ ಕಂದಾಯ ಹೆಚ್ಚಿಸಿ ಪ್ರಜೆಗಳನ್ನು ಪೀಡಿಸುವರು. ಧರ್ಮಪತ್ನಿಯನ್ನು ಬಿಟ್ಟು ಪರಸ್ತ್ರೀಯರನ್ನು ಕಾಮಿಸುವವರೇ ಬಹಳ. ಮಕ್ಕಳು ತಂದೆಯನ್ನೂ, ಸ್ತ್ರೀಯರು ಗಂಡನನ್ನೂ ದ್ವೇಷಿಸುವರು. ಬ್ರಾಹ್ಮಣರು ಕೂಡ ಮೀನಮಾಂಸಾದಿಗಳನ್ನು ತಿನ್ನತೊಡಗುವರು. ಸ್ತ್ರೀಯರು, ವೇಶ್ಯೆಯರು ಮಾಡಿ ಕೊಳ್ಳುವ ಅಲಂಕಾರ ಶೃಂಗಾರ ಮಾಡಿಕೊಂಡು ಅವರ ಹಾವಭಾವಗಳನ್ನು ಅನುಕರಿಸುವರು.

ಬ್ರಾಹ್ಮಣರು ವೇದಗಳನ್ನು ಮಾರಾಟಮಾಡುವರು. ಸ್ತ್ರೀಯರು ದೇಹವನ್ನೂ, ದ್ವಿಜರು ಧರ್ಮವನ್ನೂ ಮಾರಾಟಕ್ಕೆ ಇಡುವರು. ಬ್ರಾಹ್ಮಣರು ಒಳ್ಳೆಯವರ, ವಿಧವೆಯರ ಧನವನ್ನು ಅಪಹರಿಸುವರು. ಧರ್ಮಾಚಾರಬಿಟ್ಟು ವಾದವಿವಾದಗಳಿಂದ ಪ್ರತಿಷ್ಠೆ ಪಡೆಯ ಬಯಸುವರು. ತಂದೆತಾಯಿಗಳ ಶ್ರಾದ್ಧಾದಿ ಕರ್ಮಗಳನ್ನೆಲ್ಲ ದಂಭ ಹಾಗೂ ಪ್ರತಿಷ್ಠೆಗಾಗಿ ಮಾಡುವರು. ಅಪಾತ್ರರಲ್ಲಿ ದಾನ, ಹಾಲಿನ ಸಲುವಾಗಿ ಹಸು ಕಟ್ಟುವದು, ಸಾಧುಗಳ ನಿಂದೆ ಪರನಿಂದೆ, ಸ್ನಾನ ಪೂಜಾದಿಗಳನ್ನು ಬಿಡುವದು. ಮಾಡುವದನ್ನೂ ಕೂಡ ಸಕಾಲದಲ್ಲಿ ಮಾಡದಿರುವದು, ಇವೆಲ್ಲವೂ ಕಲಿಯುಗದಲ್ಲಿ ನಡೆಯುವ ದುಷ್ಕಾರ್ಯಗಳು. ಪಾಷಂಡಿಗಳು ದ್ವಿಜರ ಚಿಹ್ನೆಗಳನ್ನು ಧರಿಸಿ, ತಾವು ಮಹಾ ಧರ್ಮಾತ್ಮರೆಂದು ತೋರಿಸಿಕೊಳ್ಳುವರು. ಕಾವಿ ಬಟ್ಟೆಯನ್ನು ಮೈಗೆ ಬೂದಿ ಬಳಿದುಕೊಂಡು, ಜಟಾಧಾರಿ ಗಳಾಗಿ ಜನರನ್ನು ವಂಚಿಸುವರು. ವರ್ಣಾಶ್ರಮಧರ್ಮ ದೂಷಿಸುವರು. ಅಧಿಕಾರಿಗಳೆಲ್ಲ - 'ಉತ್ಕೋಚ ಜೀವಿನಸ್ತತ್ರ ಭವಿಷ್ಯಂತಿ ಕಲೌ ಮುನೆ' ಲಂಚತಿಂದೇ ಉಪಜೀವಿಸುವರು. ಅಧಮಜನರು ಕೆಂಪುಬಟ್ಟೆ ಉಟ್ಟುಕೊಂಡು ಉಚ್ಚಾಸನದಲ್ಲಿ ಕುಳಿತು ಧರ್ಮ ಪ್ರವಚನ ಮಾಡುವರು. ತಮ್ಮ ಜಾತಿಗಳನ್ನು ಬಿಟ್ಟು ಧರ್ಮಾಂಧರಾಗುವರು. ತಂದೆ ತಾಯಿಗಳನ್ನು ಬಿಟ್ಟು, ಪತ್ನಿಯ ಬಳಗವನ್ನು ಪೋಷಿಸುವರು, ಮ್ಲೇಂಛ ಜಾತಿಯವರು ರಾಜ್ಯಾಧಿಕಾರ ಮಾಡುವರು. ಮುಂದೆ ಕಲಿಯುಗವು ಪ್ರವೃದ್ಧವಾದಂತೆ ಮಳೆ ಬೆಳೆಗಳು ಕಡಿಮೆಯಾಗಿ ಕ್ಷಾಮ ಡಾಮರಗಳು ಹೆಚ್ಚಾಗಿ, ಜನರು ದುಃಖಪಡುತ್ತ ಹೊಟ್ಟೆಗಿಲ್ಲದೆ ಆತ್ಮಹತ್ಯೆ ಮಾಡಿಕೊಳ್ಳುವರು. ಹೆಂಗಸರು ಸ್ವಾರ್ಥಪರರಾಗಿ ವೇಶ್ಯೆಯರಂತೆ ತಮ್ಮನ್ನು ಅಲಂಕರಿಸಿ ಕೊಳ್ಳುವರು. ಪತಿಯ ಮಾತನ್ನು ತಿರಸ್ಕರಿಸಿ, ಪತಿಯ ಬಳಗ ಧಿಕ್ಕರಿಸಿ, ಶೀಲಭ್ರಷ್ಟ ರಾಗುವರು. ಸ್ತ್ರೀಯರು ಗಂಡಂದಿರನ್ನು ವಂಚಿಸುವರು. ರಾಜರ ಅಧಿಕ ಕರ, ಕ್ಷಾಮ, ಚೌರ್ಯ ಮುಂತಾದ ಉಪದ್ರವಗಳಿಂದ ಜನರು ದೇಶಾಂತರಕ್ಕೆ ವಲಸೆ ಹೋಗುವರು.

ಸನ್ಯಾಸಿಗಳು ತಮ್ಮ ಮಿತ್ರ ಹಾಗೂ ಸಂಬಂಧಿಗಳ ಒತ್ತಾಯಕ್ಕೆ ಮಣಿದು ಅವರು ನೀಡುವ ದಾನಧರ್ಮಗಳಿಗೆ ಮನಸೋತು, ಅಯೋಗ್ಯರನ್ನು ಶಿಷ್ಯರನ್ನಾಗಿ ಪರಿಗ್ರಹಿಸುವರು. ಹೀಗೆ ಕಲಿಯುಗವು ಅಭಿವೃದ್ಧವಾಗಿ ಸಕಲಧರ್ಮಗಳು ನಾಶವಾಗುವವು. ಆದುದರಿಂದ ವಿವೇಕಿಯಾದವನು ಯಾವ ಯುಗ ಬಂದರೂ ಹರಿಭಕ್ತಿಯನ್ನು ಬಿಡದಾರದು. ಶ್ರೀ ಹರಿಯ ಭಕ್ತಿಯಲ್ಲಿ ನಿಷ್ಠರಾದವರನ್ನು ಕಲಿಯು ಎಂದೂ ಬಾಧಿಸಲಾರನು. (ಹರಿಭಕ್ತಿ ಪರಾನೇಷ ನ ಕಲಿರ್ಬಾಧತೇ ಕ್ವಚಿತ್)

ಒಂದೊಂದು ಯುಗದಲ್ಲಿ ಒಂದೊಂದು ಧರ್ಮವು ಶ್ರೇಯಸ್ಕರವಾಗಿದೆ.

**ತಪಃಪರಂ ಕೃತಯಗೇ ತ್ರೇತಾಯಾಂ ಧ್ಯಾನಮೇವ ಚ ।**
**ದ್ವಾಪರೇ ಯಜ್ಞಮೇವಾಹುಃ ದಾನಮೇಕಂಕಲೌಯುಗೇ ॥**

ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಹರಿಧ್ಯಾನ, ದ್ವಾಪರಯುಗದಲ್ಲಿ ಯಜ್ಞ, ಕಲಿಯುಗದಲ್ಲಿ ದಾನವು ಪ್ರಶಸ್ತವಾದದ್ದು. ಕೃತಯುಗದಲ್ಲಿ ಹತ್ತು ವರ್ಷ, ತ್ರೇತಾಯುಗದಲ್ಲಿ ಒಂದು ವರ್ಷ ದ್ವಾಪರ ಯುಗದಲ್ಲಿ ಒಂದು ತಿಂಗಳು, ಧರ್ಮ ಮಾಡುವದರಿಂದ ಬರುವ ಪುಣ್ಯವು ಕಲಿಯುಗದಲ್ಲಿ ಒಂದೇ ದಿನ ಧರ್ಮಾಚರಣೆ ಮಾಡುವದರಿಂದ ಪ್ರಾಪ್ತವಾಗುವದು.

**ಧ್ಯಾಯನ್ ಕೃತೇ ಯಜನ್ ಯಜ್ಞೈಃ**
**ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥**

ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಯಜ್ಞ - ಯಾಗ, ದ್ವಾಪರದಲ್ಲಿ ನಿರಂತರ ಶ್ರೀ ಹರಿಯ ಪೂಜೆ ಮುಂತಾದವುಗಳಿಂದ ಬರುವ ಪುಣ್ಯವು, ಕಲಿಯುಗದಲ್ಲಿ ಶ್ರೀ ಹರಿಯ ನಾಮ ಸಂಕೀರ್ತನ ಮಾತ್ರದಿಂದಲೇ ಬರುವದು.

**ಅಹೋರಾತ್ರಂ ಹರೇರ್ನಾಮ ಕೀರ್ತಯಂತಿ ಚ ಯೇ ನರಾಃ ।**
**ಕುರ್ವಂತಿ ಹರಿಪೂಜಾಂ ವಾ ನ ಕಲಿರ್ಬಾಧತೇ ಚ ತಾನ್ ॥**

ಹಗಲಿರುಳು ಶ್ರೀ ಹರಿಯ ನಾಮಸ್ಮರಣೆ ಮಾಡುವ ಅಥವಾ ಶ್ರೀ ಹರಿಯ ಸಂಕೀರ್ತನೆ ಮಾಡುವವನನ್ನು ಕಲಿಯು ಬಾಧಿಸಲಾರನು.

**ನಮೋ ನಾರಾಯಣಾಯೇತಿ ಕೀರ್ತಯಂತಿ ಚ ಯೇ ನರಾಃ ।**
**ನಿಷ್ಕಾಮಾ ವಾ ಸಕಾಮಾ ವಾ ನ ಕಲಿರ್ಬಾಧತೇ ಚ ತಾನ್ ॥**

'ನಮೋ ನಾರಾಯಣಾಯ' ನಾರಾಯಣನಿಗೆ ನಮಸ್ಕಾರ ಎಂಬುದಾಗಿ ಫಲಾಪೇಕ್ಷೆಯಿಂದಲೋ ಅಥವಾ ಇಲ್ಲದೆಯೋ ಹೇಳುವವರನ್ನು ಕಲಿಯು ಭಾದಿಸಲಾರನು.

**ಹರಿನಾಮ ಪರಾ ಯೇ ಚ ಘೋರೇಕಲಿಯುಗೇದ್ವಿಜ ।**
**ತ ಏವ ಕೃತಕೃತ್ಯಾಶ್ಚ ನ ಕಲಿರ್ಬಾಧತೆಹೀತಾನ್ ॥**

ಬ್ರಾಹ್ಮಣನೆ, ಘೋರ ಕಲಿಯುಗದಲ್ಲಿ ಹರಿನಾಮ ಸಂಕೀರ್ತನೆ ಮಾಡುವವರು ಧನ್ಯರು. ಅಂತಹ ಶ್ರೀ ಹರಿಯ ಭಕ್ತರನ್ನು ಕಲಿಯು ಯಾವಾಗಲೂ ಬಾಧಿಸಲಾರನು. ಪೀಡಿಸಲಾರನು.

**ಹರೇ ಕೇಶವ ಗೋವಿಂದ ವಾಸುದೇವ ಜಗನ್ಮಯ ।**
**ಇತಿ ರಮತಿ ಯೇ ನಿತ್ಯಂ ನ ಹಿ ತಾನ್ಬಾದತೇ ಕಲಿಃ ॥**

ಹರಿ, ಕೇಶವ, ಗೋವಿಂದ, ವಾಸುದೇವ, ಜಗದಂತರ್ಯಾಮಿ ಎಂಬುದಾಗಿ ಧ್ಯಾನಗೈಯುವವರನ್ನು ಕಲಿಯು ಎಂದಿಗೂ ಪೀಡಿಸಲಾರನು.

**ಶಿವ ಶಂಕರ ರುದ್ರೇಶ ನೀಲಕಂಠ ತ್ರಿಲೋಚನ ।**
**ಇತಿ ಜಪ್ಯಂತಿ ಯೇ ವಾಽಸಿ ಕಲಿಸ್ತಾನ್ನಾಪಿ ಬಾಧತೇ ॥**

ಶಿವ, ಶಂಕರ, ರುದ್ರ, ನೀಲಕಂಠ, ತ್ರಿಲೋಚನ ಎಂಬುದಾಗಿ ಧ್ಯಾನಗೈಯುವವರನ್ನು ಕಲಿಯು ಎಂದಿಗೂ ಪೀಡಿಸಲಾರನು.

ಹರಿನಾಮದಲ್ಲಿ ನಿರತರಾದವರ ಭಾಗ್ಯವು ಅದ್ಭುತವಾದದ್ದು. ದೇವತೆಗಳ ಹಿತೋಪದೇಷ ಒಂದೇ. ಹರಿಯ ನಾಮಸ್ಮರಣೆ ಮಾಡಿರಿ. ಯಾಕೆಂದರೆ ಹರಿಯನ್ನು ಸ್ಮರಿಸುವವರಿಗೆ ಕಲಿಯ ಬಾಧೆ ಎಂದೂ ತಟ್ಟುವದಿಲ್ಲ.

**ಹರೇ ರ್ನಾಮೈವ ನಾಮೈವ ನಾಮೈವ ಮಮ ಜೀವನಂ**
**ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥**

ಕಲಿಯುಗದಲ್ಲಿ ಶ್ರೀ ಹರಿಯ ನಾಮ ಸಂಕೀರ್ತನೆಯೇ ನನಗೆ ಜೀವನ. ಮಾನವರನ್ನು ಕಲಿಯ ಭಯದಿಂದ ಪಾರು ಮಾಡಿಸಲು ಒಂದೇ ಉಪಾಯವೆಂದರೆ ಹರಿನಾಮ. ಹರಿನಾಮ. ಹರಿನಾಮ. ಅದನ್ನು ಬಿಟ್ಟರೆ ಕಲಿಯುಗದಲ್ಲಿ ಬೇರೆ ಗತಿಯು ಇಲ್ಲ. ಇಲ್ಲ. ಇಲ್ಲ.

**ನಾರದ :** ಪೂಜ್ಯರೆ, ನೀವು ಅತ್ಯಂತ ಕರುಣಾಶಾಲಿಗಳು. ಮತ್ತು ಸರ್ವ ಶಾಸ್ತ್ರಗಳಲ್ಲಿ ನಿಷ್ಣಾತರು. ಆದುದರಿಂದ ನಾನು ಕೇಳಿದಾಗ ಜಗಜ್ಯೋತಿಯಾದ ಪರಮಾತ್ಮನ ತತ್ವವನ್ನು ಬೋಧಿಸಿ ಬೆಳಕು ಬೀರಿದಿರಿ. ಇದೇ ಪರಮ ಪುಣ್ಯ. ಇದೇ ಪರಮ ತಪಸ್ಸು. ಪುಂಡರೀಕಾಕ್ಷನಾದ ಹರಿಯನ್ನು ಸ್ಮರಿಸುವದೇ ಪಾಪನಾಶಕವಾದ ಪರಮ ತಪಸ್ಸು.

**ಏತದೇವ ಪರಂ ಪುಣ್ಯಂ ಏತದೇವ ಪರಂ ತಪಃ**
**ಯಸ್ಮರೇತ್ಪುಂಡರೀಕಾಕ್ಷಂ ಸರ್ವ ಪಾಪ ವಿನಾಶನಂ ॥**

ಪೂಜ್ಯರೇ, ಈ ಜಗತ್ತೆಲ್ಲವೂ ಪರಬ್ರಹ್ಮನನ್ನೇ ಆಧರಿಸಿಕೊಂಡು ಅವನಿಂದ ವ್ಯಾಪ್ತವಾಗಿ ಇರುತ್ತದೆ ಎಂದು ತಾವು ಹೇಳಿದಿರಿ. ಇದನ್ನು ದೃಷ್ಟಾಂತವಿಲ್ಲದೆ ನಾನು ಹೇಗೆ ತಿಳಿಯಲಿ? ಆದುದರಿಂದ ಆ ಪರಬ್ರಹ್ಮವನ್ನು ಯಾರು? ಹೇಗೆ? ಎಂತು? ತಿಳಿದುಕೊಂಡರು ಎನ್ನುವದನ್ನು ಹೇಳಿರಿ.

**ಸನಕ :** ನಾರದ! ನಾನು ಈವರೆಗೆ ನಿನಗೆ ತತ್ವೋಪದೇಶ ಮಾಡಿದೆ. ಇನ್ನು ಬ್ರಹ್ಮಧ್ಯಾನವನ್ನು ನಿನಗೆ ಮಾಡಬೇಕಾಗಿದೆ. ಆದುದರಿಂದ ಸನಂದನ ಮುನಿಯನ್ನು ನೀನು ಹೋಗಿ ಕೇಳು, ''ವೇದಶಾಸ್ತ್ರದಲ್ಲಿ ಪರಿಣತನಾಗಿದ್ದಾರೆ ಈ ಸನಂದನ ಮುನಿ. ನಿನ್ನ ಎಲ್ಲ ಸಂಶಯಗಳನ್ನು ಪರಿಹರಿಸಲು ಅವನು ಸಮರ್ಥರು. ದೊಡ್ಡ ದೊಡ್ಡ ಜ್ಞಾನಿಗಳೂ ಸಹ ಆ ಸನಂದನನ್ನು ಆನಂದದಿಂದ ವಂದಿಸುವರು ಇದಕ್ಕಾಗಿಯೇ.'' ಸನಕ ಮುನಿಗಳ ಈ ಮಾತನ್ನು ಕೇಳಿ ನಾರದರು ಸನಂದನ ಮುನಿಯ ಬಳಿಗೆ ಬಂದು ನಮಸ್ಕರಿಸಿ, ಮೋಕ್ಷ ಧರ್ಮಗಳನ್ನು ಕೇಳಲು ಮೊದಲು ಮಾಡಿದರು.

*ನಾರದ ಮಹಾಪುರಾಣದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿದುದು*

## ಜಗದುತ್ಪತ್ತಿ ವರ್ಣನ

**ಅಧ್ಯಾಯ - ೪೨**

**ನಾರದ:-** ಬ್ರಹ್ಮಜ್ಞಾನಿಯಾದ ಸನಂದರೆ, ಈ ಸ್ಥಾವರ ಜಂಗಮಾತ್ಮಕ ಪ್ರಪಂಚವನ್ನು ಸೃಷ್ಟಿಮಾಡಿದವರು ಯಾರು? ಇದು ಪ್ರಳಯದಲ್ಲಿ ಎಂದು, ಎಲ್ಲಿ ಲೀನವಾಗುವದು? ಇದನ್ನು ಹೇಳಿರಿ. ಕಡಲು, ಮುಗಿಲು, ಬೆಟ್ಟ, ಮೋಡ, ನೆಲ, ಬೆಂಕಿ, ಗಾಳಿ ಇವುಗಳನ್ನು ನಿರ್ಮಿಸಿದವರು ಯಾರು? ಪಂಚಮಹಾಭೂತಗಳು ಪ್ರಾಣಿಗಳು, ಸೃಷ್ಟಿಗೊಂಡ ಬಗೆ ಹೇಗೆ? ಶೌಚ ಎಂದರೇನು? ಅಶೌಚ ಎಂದರೇನು? ಧರ್ಮಾಧರ್ಮಗಳ ಸ್ವರೂಪವೇನು? ಅವುಗಳ ವಿಧಿ ವಿಧಾನಗಳೆಂತು? ಜೀವಂತ ಪ್ರಾಣಿಗಳ ದೇಹದಲ್ಲಿರುವ ಈ ಜೀವನು ಯಾರು? ಅವನ ಸ್ವರೂಪವೇನು? ಲೋಕದಲ್ಲಿ ಮರಣಹೊಂದಿದವರು ಎಲ್ಲಿಗೆ ಹೋಗುವರು? ಇದನ್ನೆಲ್ಲ ಬಿತ್ತರಿಸಿರಿ?

**ಸನಂದನ:-**ನಾರದನೆ, ಇದೊಂದು ಇತಿಹಾಸ. ಇದನ್ನು ಹಿಂದೆ ಭರದ್ವಾಜ ಮುನಿಯು ಪ್ರಶ್ನೆ ರೂಪವಾಗಿ ಕೇಳಿದಾಗ ಭೃಗುಋಷಿಯು ಉತ್ತರ ರೂಪವಾಗಿ ಇದನ್ನು ಹೇಳಿದ. "ಕೈಲಾಸ ಪರ್ವತದಲ್ಲಿ ರಮ್ಯವಾದ ಶಿಖರದಲ್ಲಿ ಬೇರೊಂದು ಬೆಳಕಿನ ಬೆಟ್ಟದಂತೆ ಕುಳಿತಿದ್ದ ಭೃಗುಮಹರ್ಷಿ. ಅವನ ಬಳಿಗೆ ಭರದ್ವಾಜ ಮುನಿಯು ವಿನಯದಿಂದ ಬಂದು, ಕೇಳಿದ -

**ಭರದ್ವಾಜ:-** ಜೀವನು ಬಗೆಬಗೆಯ ಯೋನಿಗಳಲ್ಲಿ ತಿರುಗುತ್ತಲೇ ಇರತ್ತಾನೆ. ಇದು ಏಕೆ? ಹೇಗೆ? ಸಂಸಾರದ ಚಕ್ರಭ್ರಮಣದಿಂದ ಮುಕ್ತಿ ಇಲ್ಲವೇ ಈ ಜೀವಕ್ಕೆ? ನಾರಾಯಣನು ತಾನೇ ಬ್ರಹ್ಮನಾಗಿ ಜಗತ್ತನ್ನು ಸೃಷ್ಟಿಸಿದನು. ಅವನೇ ಬ್ರಹ್ಮ. ಅವನಲ್ಲಿದ್ದು ಬ್ರಹ್ಮಶಬ್ದವಾಚ್ಯವಾಗಿ, ಬ್ರಹ್ಮನ ಕಾರ್ಯವಾದ ಸೃಷ್ಟಿಯ ಕಾರ್ಯ ಮಾಡುತ್ತಾನೆಂದು ಜ್ಞಾನಿಗಳು ಹೇಳುವರು. ಅದರ ಜೊತೆಗೆ ಬ್ರಹ್ಮನು ವಿಷ್ಣುವಿನ ಸೇವಕ ಎಂದೂ ಹೇಳುವರು. ವಿಷ್ಣುವೇ ಬ್ರಹ್ಮನಾಗಿ ಸೃಷ್ಟಿಯನ್ನು ಮಾಡಿದರೆ ಅವನಿಗೆ ಈ ಸೇವ್ಯ, ಸೇವಕ ಭಾವವು ಹೇಗೆ ಬರುವದು ? ಮತ್ತು ಪ್ರಾಣಿಗಳು ಯಾವ ಪರಮಾತ್ಮನಲ್ಲಿ ಲಯ ಹೊಂದುವವೊ ಅಂತಹ ಪರಮಾತ್ಮನನ್ನು ನಿರ್ಗುಣ, ಅಜ್ಞೇಯ ಮುಂತಾಗಿ ಹೇಳುತ್ತಾರೆ. ಅವನು ನಿರ್ಗುಣನಾಗಿ ಅಪ್ರಮೇಯನಾದರೆ ಅವನನ್ನು ತಿಳಿಯುವ ಬಗೆ ಹೇಗೆ? ನಿರ್ಗುಣನನ್ನು ತಿಳಿಯುವವರಾರು? ಸರ್ವಥಾ ಅಪರಿಮೇಯನಾಗಿದ್ದರೆ ಆ ಭಗವಂತ, ವೇದಗಳು ಅವನನ್ನು ಹೇಗೆ ಸ್ತೋತ್ರ ಮಾಡುವವು? ಈ ಜೀವನು ತನ್ನ ಲಿಂಗ ಶರೀರವನ್ನು ಕಳೆದುಕೊಂಡು, ಪರಬ್ರಹ್ಮ ಸಾರೂಪ್ಯವನ್ನು ಪಡೆಯುವದೆಂತು, ಇದೆಲ್ಲವನ್ನು ನನಗೆ ತಿಳಿದುಕೊಳ್ಳುವ ಆಸೆ. ಅದನ್ನು ದಯವಿಟ್ಟು ತಾವು ನನಗೆ ಅರುಹಬೇಕು.

**ಭೃಗು:-** ಮಹರ್ಷಿಗಳು ಕೇಳಿ ತಿಳಿದ ಮಾನಸ ಎಂಬ ಹೆಸರಿನ ಪರಮಾತ್ಮನು ಸೃಷ್ಟಿಯ ಪೂರ್ವದಲ್ಲಿ ಅವ್ಯಕ್ತವೆಂಬ ಹೆಸರಿನಿಂದ 'ಪ್ರಥಿತ'ನಾಗಿದ್ದನು. ಅವನಿಗೆ ನಾಶ,ಹುಟ್ಟು, ಹ್ರಾಸ, ಮುಪ್ಪು, ದುಃಖ, ಮರಣ ಯಾವದೂ ಇಲ್ಲ. ಆ ಮಾನಸ ನಾಮಕನಾದ ಅವ್ಯಕ್ತ ಶ್ರೀ ಹರಿಯು ಮೊದಲು ಮಹತ್ತತ್ವ ನಿರ್ಮಿಸಿದನು. ಅದರಿಂದ ಆಕಾಶವನ್ನೂ, ಆಕಾಶದಿಂದ ಜಲ, ಜಲದಿಂದ ತೇಜ, ತೇಜದಿಂದ ವಾಯು ವಾಯುವಿನಿಂದ ಪೃಥ್ವಿ ಮೊದಲಾದ ಪಂಚಮಹಾಭೂತಗಳು ಸೃಷ್ಟಿಯಾದವು. ಅನಂತರ ತೇಜೋಮಯವಾದ ದಿವ್ಯ ಪದ್ಮವು ಭಗವದಿಚ್ಛೆಯಿಂದ ಉದ್ಭೂತವಾಯಿತು. ಪದ್ಮದಿಂದ ಚತುರ್ಮುಖ

ಬ್ರಹ್ಮದೇವರು ಹುಟ್ಟಿದರು. ಅವರು ಪಂಚಮಹಾಭೂತ ಗಳಿಗೂ ಕಾರಣರಾಗಿ ಅಹಂಕಾರ ಎಂದು ಖ್ಯಾತರಾದರು. ಆ ಮಹಾತೇಜಸ್ವಿಯಾದ ಬ್ರಹ್ಮನ ಪಂಚಧಾತುಗಳೇ ನಮ್ಮ ಕಣ್ಣಿಗೆ ಕಾಣುವ ಭೌತಿಕ ದೃಶ್ಯ. ಬ್ರಹ್ಮಶರೀರದ ಮೂಳೆಗಳ ಸಮೂಹವೇ ಬೆಟ್ಟ, ಮಾಂಸಗಳೇ ಪಥ್ವಿ, ರಕ್ತವೇ ಸಾಗರ, ಉದರವೇ ಆಕಾಶ. ಶ್ವಾಸವೇ ಗಾಳಿ, ನಾಡಿಗಳೇ ನದಿಗಳು, ನೇತ್ರಗಳೇ ಚಂದ್ರ ಸೂರ್ಯರು. ಶಿರಸ್ಸೇ ಅಂತರಿಕ್ಷ, ಪಾದವೇ ಭೂಮಿ, ಇವೆಲ್ಲವೂ ಬ್ರಹ್ಮಾಂತರ್ಯಾಮಿಯಾದ ನಾರಾಯಣನ ವಿರಾಡ್ರೂಪ. ಅಹಂಕಾರ ತತ್ವಾಭಿಮಾನಕ್ಕೂ ಅವನೇ ಸೃಷ್ಟಾರ. ಜಗತ್ತಿನ ಕ್ಷೇಮಕ್ಕಾಗಿ ಇದನ್ನೆಲ್ಲ ಸೃಷ್ಟಿಸಿದ್ದಾನೆ.

**ಭಾರದ್ವಾಜ:-** ಆಕಾಶ, ದಿಕ್ಕು, ಭೂಮಿ, ವಾಯು, ಇವುಗಳ ಪರಿಮಿತಿ ಎಷ್ಟು ಎಂಬುದನ್ನು ತಿಳಿಸಿರಿ?

**ಭೃಗು:-** ಈ ಆಕಾಶವು ಅನಂತವಾಗಿದೆ. ಇದರ ಅಂಶ ತಿಳಿಯಲು ಶಕ್ಯವಿಲ್ಲ. ಮುಗಿಲಿನಲ್ಲಿ ಮೇಲೆ ಬೆಳಗುತ್ತಿರುವ ಸೂರ್ಯ ಚಂದ್ರರೂ ಕೂಡ ಈ ಆಕಾಶದ ಕೊನೆ ಕಂಡಿಲ್ಲ. ಇದರ ಅತ್ಯಂತ ಮೇಲಿನ ಭಾಗವು ಸ್ವಯಂ ಪ್ರಕಾಶರಾದ ದೇವತೆಗಳಿಂದ ಪ್ರಾಪ್ತವಾಗಿದೆ. ಇದರ ಅಂತವನ್ನು ಆ ದೇವತೆಗಳು ಕೂಡ ಕಾಣಲಾರರು. ಪೃಥ್ವಿಯ ಕೊನೆಯ ಭಾಗದಲ್ಲಿ ಸಮುದ್ರ, ಸಮುದ್ರದ ಅಂಚಿಗೆ ತಮಸ್ಸು, ತಮಸ್ಸಿನ ಕೊನೆಗೆ ಜಲ. ಜಲದಾಚೆಗೆ ಅಗ್ನಿ, ರಸಾತಲದಾಚೆಗೆ ನೀರು. ಅದರ ಅಂಚಿನಲ್ಲಿ ಆದಿಶೇಷ ಮೊದಲಾದ ಹಾವುಗಳು. ಅದರ ಕೊನೆಗೆ, ಆಕಾಶ ಮತ್ತೆ ನೀರು. ಹೀಗೆ ಆಕಾಶ, ಅದಕ್ಕೆ ಸಂಬಂಧವಾದ ಜಲ ಇವುಗಳ ಪರಿಮಿತಿ ತಿಳಿಯಲು ಸಾಧ್ಯವಿಲ್ಲ. ಆ ಆಕಾಶ ಜಲಗಳಂತೆ ಇಲ್ಲಿ ಎಲ್ಲ ಕಡೆಗೂ ವ್ಯಾಪಿಸಿದ ಅಗ್ನಿ, ವಾಯುಗಳ ಪ್ರಮಾಣವನ್ನೂ ನೀರಿನ ಆಳ ಅಗಲ ಉದ್ದ, ಭಾರ ಮೊತ್ತ ಮುಂತಾದ ಇತಿ ಮಿತಿಗಳನ್ನು ದೇವರ ಹೊರತು ಯಾರೂ ಅರಿಯಲಾರರು. ಇನ್ನು ಸರ್ವಜ್ಞರಾದ ಮುನಿಗಳು ತಮ್ಮ ದಿವ್ಯ ದೃಷ್ಟಿಯಿಂದ ಈ ಪಂಚ ಮಹಾಭೂತಗಳ ಮಹತ್ತೆಯ ಇಯತ್ತೆಯನ್ನು ಹೇಗೊ ತಿಳಿದು ಹೇಳಬಹುದು. ಆದರೆ ಅಪರಿಮೇಯ ಹಾಗೂ ಅದೃಶ್ಯನಾದ ಆ ಪರಮಾತ್ಮನ ಪ್ರಮಾಣ ಪರಿಮಾಣಗಳನ್ನು ಯಾರು ಹೇಳಬಲ್ಲರು ? ಆದುದರಿಂದಲೇ ಮಾನಸ ಎಂಬ ಹೆಸರುಳ್ಳ ವಿಷ್ಣುವಿಗೆ 'ಅನಂತ' ಎಂಬ ಹೆಸರು ಯಥಾರ್ಥವೇ ಆಗಿರುತ್ತದೆ. ಆ ಭಗವಂತನು ತೇಜೋಮಯನಾದ ದಿವ್ಯ ಪದ್ಮದಿಂದ ಪ್ರಜಾಪತಿ ಎಂಬ ಸರ್ವ ಶ್ರೇಷ್ಠನೂ ಎಲ್ಲರಿಗಿಂತ ಜ್ಯೇಷ್ಠನೂ ಧರ್ಮ ಮೂರ್ತಿಯೂ ಆದ ಬ್ರಹ್ಮ ಎಂಬ ಪ್ರಜಾಪತಿಯನ್ನು ನಿರ್ಮಿಸಿದನು.

**ಭಾರದ್ವಾಜ:-** ಪೂಜ್ಯರೆ, ಪದ್ಮದಿಂದ ಬ್ರಹ್ಮನು ಹುಟ್ಟಿದರೆ, ಬ್ರಹ್ಮನು ಹೇಗೆ ಜ್ಯೇಷ್ಠನಾಗುವನು ? ಬ್ರಹ್ಮನಿಗಿಂತಲೂ ಮೊದಲು ಹುಟ್ಟಿದ ಪದ್ಮವೇ ಜ್ಯೇಷ್ಠವಾಯಿತು ಅಲ್ಲವೆ ?

**ಭೃಗು:-** ಅನಾದಿ ಮೂರ್ತಿಯಾದ ಮಾನಸರೂಪಿ ಪರಮಾತ್ಮನ ಪ್ರತಿಮಾ ರೂಪದ ಪ್ರತೀಕವೇ ಈ ಬ್ರಹ್ಮ. ಇವನಿಗೆ ಆಸನ ರೂಪವಾಗಿದೆ ಈ ಪದ್ಮ. ಅಲ್ಲಿ ಹುಟ್ಟಿ ಅದನ್ನೇ ಆಸನವನ್ನಾಗಿ ಬ್ರಹ್ಮನು ಪದ್ಮಾಸನನೆಂದು ಹೆಸರಾದನು. ಭಗವಂತನಿಂದಲೇ ಸೃಷ್ಟರಾದ ಜೀವಿಗಳಲ್ಲಿ ಬ್ರಹ್ಮನು ಶ್ರೇಷ್ಠನಾಗಿದ್ದಾನೆ. ಅವನ ಆಸನ ಭೂತವಾದ ಲೋಕ ಪದ್ಮದ ನಡುವಿನ ಕರಣಿಕಾಗ್ರವೇ ಎಲ್ಲಕ್ಕಿಂತ ಎತ್ತರವಾದ ಮೇರು ಪರ್ವತ, ಅದರ ಮಧ್ಯದಲ್ಲಿ ಬ್ರಹ್ಮನು ಅನೇಕ ಲೋಕಗಳನ್ನು ಸೃಷ್ಟಿಸಿದ್ದಾನೆ.

**ಭಾರದ್ವಾಜ:-** ಪದ್ಮಾಂತರ್ಗತನಾದ ಮೇರುವಿನ ಮಧ್ಯಭಾಗದಲ್ಲಿರುವ ಬ್ರಹ್ಮನು ಆದರ ಹೊರಭಾಗದಲ್ಲಿಯ ಸೃಷ್ಟಿಯನ್ನು ಹೇಗೆ ಮಾಡುವನು? ಆ ಬಹಿರ್ ಸೃಷ್ಟಿಯು ಆದುದೆಂತು?

**ಭೃಗು:-** ಚತುರ್ಮುಖ ಬ್ರಹ್ಮನಿಗೂ ಮೂಲ ಕಾರಣನಾದ ಮಾನಸ ನಾಮಕ ಪರಮಾತ್ಮನು ತನ್ನ ಮನಸ್ಸಿನಿಂದ ವಿವಿಧ ಭೂತಗಳನ್ನು ಸೃಷ್ಟಿಸಿದನು. ಅವುಗಳ ಸಂರಕ್ಷಣೆಗಾಗಿ ಮೊದಲು ನೀರನ್ನು ನಿರ್ಮಿಸಿದನು. ಈ ನೀರು ಎಲ್ಲ ಪ್ರಾಣಿಗಳಿಗೂ ಪ್ರಾಣಭೂತವಾಗಿದೆ. ಆ ಜಲದಿಂದಲೇ ಸರ್ವ ಭೂತಗಳ ವೃದ್ಧಿ. ಅದಕ್ಕಾಗಿಯೇ ಮೊದಲು ಸಕಲ ಸೃಷ್ಟಿ. ಪೃಥ್ವಿ, ಪರ್ವತ, ಮೋಡ ಉಳಿದೆಲ್ಲ ಸಾಕಾರ ಪ್ರಾಣಿಗಳು ನೀರಿನಿಂದ ಆವೃತ ಹಾಗೂ ಸಂಬದ್ಧವಾಗಿದ್ದು ಎಲ್ಲವೂ ವರುಣದೇವರ ಅಧೀನ.

**ಭರದ್ವಾಜ:-** ಜಲ, ತೇಜ, ವಾಯು, ಭೂಮಿ, ಇವೆಲ್ಲವೂ ಉತ್ಪನ್ನವಾದವೆಂದು ಹಿಂದೆ ಹೇಳಿದಿರಿ. ಆದರೆ ವಿಭಿನ್ನ ಪ್ರಕೃತಿ, ಓಘ, ಓಜಸ್ಸುಳ್ಳ ಇವುಗಳಿಗೆಲ್ಲ ಈ ಉತ್ಪಾದ್ಯ ಉತ್ಪಾದಕ ಭಾವವು ಹೇಗೆ ಎಂಬುದನ್ನು ತಿಳಿಸಿರಿ.

**ಭೃಗು:-** ಮೊಟ್ಟ ಮೊದಲು ಪರಬ್ರಹ್ಮ ಪ್ರತಿಪಾತಕವಾದ ಶಬ್ದವು ಆಕಾಶದಲ್ಲಿ ಜನಿಸಿತು. ಆಕಾಶವು ಆಗ ಪ್ರಕಾಶಮಾನವಾಗಿದ್ದಿತು - ಸೂರ್ಯನಿಲ್ಲ, ಚಂದ್ರನಿಲ್ಲ, ನಕ್ಷತ್ರಗಳಿಲ್ಲ. ಕೇವಲ ಎಲ್ಲಕಡೆಗೂ ಅಪರಿಮಿತನಾದ ಅನಂತವಾದ ದೊಡ್ಡಗುಡ್ಡದಂತೆ ಬಿದ್ದಿರುವ ಆಕಾಶವೇ ಆಕಾಶ. ಆ ಆಕಾಶದಿಂದ ನೀರು, ಕತ್ತಲೆಯಿಂದ ಕತ್ತಲೆಯ ಹುಟ್ಟಿದಂತೆ ಹೇಗೋ ಜನಿಸಿತು. ಆ ನೀರು ಆಕಾಶದ ಅವಕಾಶವನ್ನೆಲ್ಲ ವ್ಯಾಪಿಸಿಬಿಟ್ಟಿತು. ಆ ನೀರಿನ ಹೊಯ್ದಾಟದಿಂದ ಗಾಳಿಯು ಉದ್ಭೂತವಾಯಿತು. ಈವರೆಗೆ ಅಛಿದ್ರವಾಗಿ, ನಿಶ್ಶಬ್ದವಾಗಿ, ಸುಪ್ತವಾದಂತಿರುವ ಆಕಾಶದಲ್ಲಿ ಜಲಸಂಘರ್ಷದಿಂದ ಹುಟ್ಟಿದ ವಾಯುವು ಸಮುದ್ರದ ಆಳವನ್ನು ಸೀಳಿಕೊಂಡು ಮೇಲಕ್ಕೆ ಏಳುತ್ತದೆ. ಸಮುದ್ರದ ನೀರಿನ ರಾಶಿಯನ್ನು ತಟ್ಟಿಮುಟ್ಟಿ ಗಾಳಿಯು ಶಬ್ದವನ್ನು ಉಂಟು ಮಾಡಿ ಆಕಾಶವೆಲ್ಲವೂ ಶಬ್ದಪೂರಿತವಾದಂತೆ ಮಾಡುತ್ತದೆ. ಈ ವಾಯು ಮತ್ತು ನೀರು ಪರಸ್ಪರ ಸಂಘರ್ಷದಿಂದ ದೇದೀಪ್ಯಮಾನವಾದ ಅಗ್ನಿಯು ಹುಟ್ಟುತ್ತದೆ. ಅಗ್ನಿ ಹಾಗೂ ವಾಯು ಇವೆರಡರ ಬಲದಿಂದ ನೀರು ಆಕಾಶದ ತುಂಬ ಚಿಮ್ಮುತ್ತದೆ. ಅಗ್ನಿ ವಾಯುಗಳ ನಿತ್ಯ ಸಂಪರ್ಕದಿಂದ ಕ್ರಮೇಣ ಆ ಜಲವು ಘನೀಭಾವ ಹೊಂದುವದು. ಅದೇ ಪೃಥ್ವಿಯಾಗಿ ಮೈದಾಳುತ್ತದೆ. ರಸ, ಗಂಧ, ಸ್ನೇಹ, ಪ್ರಾಣಿ ಎಲ್ಲವೂ ಭೂಮಿಯಿಂದಲೇ ಉತ್ಪನ್ನವಾಗುವವು. ಇದೆಲ್ಲಕ್ಕೂ ಭೂಮಿಯೇ ಕಾರಣ.

**ಭಾರದ್ವಾಜ:-** ಭೂಮಿ, ಜಲ, ಅಗ್ನಿ, ವಾಯು, ಆಕಾಶ ಇವು ಪಂಚಮಹಾಭೂತ ಗಳೆಂದು ಹೇಳಿದೆ. ಇವು ಸಕಲ ಪ್ರಪಂಚವನ್ನೇ ಆವರಿಸುತ್ತವೆ. ಆದರೆ ದೇವರು ನಿರ್ಮಿಸಿದ ಎಲ್ಲ ಪ್ರಾಣಿಗಳು ಭೂತ ಶಬ್ದದಿಂದ ಕರೆಯಲ್ಪಡುವವು. ಹೀಗೆ ಭೂತಗಳು ಅನಂತ ಅಸಂಖ್ಯವಾಗಿರುವಾಗ, ಈ ಐದು ವಸ್ತುಗಳಿಗೆ ಮಾತ್ರ ಪಂಚಮಹಾಭೂತ ಗಳೆಂದು ಹೆಸರು ಹೇಗೆ ಕೂಡುತ್ತದೆ?

**ಭೃಗು:-** ಜಗತ್ತಿನಲ್ಲಿ ಎಲ್ಲ ಭೂತಗಳು ಎಂದರೆ, ಚರಾಚರವಾದ ವಸ್ತುಗಳೆಲ್ಲವೂ ಮುಖ್ಯವಾದ ಈ ಐದು ಭೂತಗಳಿಂದಲೇ ರೂಪಗೊಳ್ಳುತ್ತವೆ. ಆದುದರಿಂದ ಇವುಗಳಿಗೆ ಪಂಚಮಹಾಭೂತಗಳೆಂದು ಹೆಸರು ಉಚಿತವಾಗಿದೆ. ಇವುಗಳಿಂದ ರೂಪಗೊಂಡ

ಈ ಅಸಂಖ್ಯ ಭೂತಗಳ ದೇಹದಲ್ಲಿ ಚೈತನ್ಯದಾಯಕನಾದ ವಾಯುಸೇಂದ್ರಿಯವಾದ ಆಕಾಶ, ಆವಿ ಮೂಲಕ ಅಗ್ನಿ ದ್ರವೀಭೂತ ನೀರು, ಹಾಗೂ ಪೃಥ್ವಿ ಎಲ್ಲವೂ ಒಂದುಗೂಡಿವೆ. ಪ್ರಪಂಚದಲ್ಲಿಯ ಎಲ್ಲ ಚರಾಚರ ಪ್ರಾಣಿಗಳ ದೇಹಗಳು ಈ ಪಂಚಮಹಾಭೂತಗಳಿಂದ ನಿರ್ಮಿತವಾದುದರಿಂದ ಈ ದೇಹಗಳು ಪಾಂಚಭೌತಿಕವೆಂದು ಹೇಳಲ್ಪಡುವವು. ಕಿವಿ, ಮೂಗು, ನಾಲಿಗೆ ತೊಗಲು, ಕಣ್ಣು ಇವು ಐದು ಇಂದ್ರಿಯಗಳೆಂದು ಹೇಳಲ್ಪಡುತ್ತವೆ.

**ಭಾರದ್ವಾಜ:-** ಚರಾಚರ ಪ್ರಾಣಿಗಳ ಶರೀರಗಳೆಲ್ಲ ಪಾಂಚಭೌತಿಕವೆಂದು ಹೇಳಿದಿರಿ, ಚರದೇಹವಾದ ಮನುಷ್ಯ, ಪಶು, ಪಕ್ಷಿ ಶರೀರದಲ್ಲಿ ಪಂಚಮಹಾಭೂತಗಳ ಅಸ್ತಿತ್ವ ನಮಗೆ ಕಂಡು ಬರುವದರಿಂದ ಈ ಚರದೇಹಗಳಿಗೆ ಪಾಂಚಭೌತಿಕ ಎನ್ನುವದು ಉಚಿತವಾಗುವದು. ಆದರೆ ಅಚರವಾದ ಮರ ಮೊದಲಾದ ದೇಹಗಳಲ್ಲಿ ಪಂಚಭೂತಗಳು ಗೋಚರ ವಾಗುವದಿಲ್ಲ. ಅವು ಹೇಗೆ ಪಾಂಚಭೌತಿಕವಾಗುವವು? ಯಾವ ಮರ ಬಳ್ಳಿಗಳೂ ಶ್ವಾಸೋಚ್ಛ್ವಾಸದಿಂದ ಉಸಿರಾಡುವದಿಲ್ಲ? ಕಿವಿ ಕೇಳುವದಿಲ್ಲ. ಅವುಗಳಿಗೆ ಕಿವಿಯೂ ಇಲ್ಲ. ಕೇಳಿಸುವದೂ ಇಲ್ಲ. ಕಣ್ಣು ಇಲ್ಲ, ಕಾಣಿಸುವದೂ ಇಲ್ಲ. ನಾಲಿಗೆಯಿಲ್ಲ. ರುಚಿ ತಿಳಿಯುವದಿಲ್ಲ. ಘ್ರಾಣೇಂದ್ರಿಯವಿಲ್ಲ ಆದುದರಿಂದ ಅವುಗಳಿಗೆ ಗಂಧ ಜ್ಞಾನವಿಲ್ಲ. ಸ್ಪರ್ಶ ಜ್ಞಾನವೂ ಇಲ್ಲ. ಆಕಾಶ ಸಂಬಂಧವಂತೂ ಇಲ್ಲವೇ ಇಲ್ಲ. ಹೀಗೆ ಪಂಚಭೂತಗಳಲ್ಲಿ ಯಾವುದರ ಸಂಬಂಧವು ವೃಕ್ಷಾದಿಸ್ಥಾವರಗಳಿಗೆ ಉಂಟು? ಅವೇಕೆ ಪಾಂಚಭೌತಿಕ ಶರೀರಗಳು?

**ಭೃಗು:-** ವೃಕ್ಷಗಳು ನಿಬಿಡವಾಗಿದ್ದರೂ ಅವುಗಳಲ್ಲಿ ಆಕಾಶಕ್ಕೆ ಅವಕಾಶ ಉಂಟು. ಆ ಮರಗಳ ಹಣ್ಣು ಕಾಯಿ, ಕುಡಿ, ಮಿಡಿಗಳು, ಬಿಸಿಲು ಬೆಂಕಿಯ ಶಾಖದಿಂದ ಬಾಡುತ್ತದೆ. ಮತ್ತು ಒಣಗುತ್ತವೆ. ಉದುರುತ್ತವೆ. ಕೊಡಲಿ ಎತ್ತಿದರೆ ಮೈಮುದುರುತ್ತವೆ. ಇದರಿಂದ ವೃಕ್ಷದಲ್ಲಿ ಸ್ಪರ್ಶವಿದ್ದುದು ಗೊತ್ತಾಗುತ್ತದೆ. ಗಾಳಿ, ಬೆಂಕಿ, ಸಿಡಿಲು ಇವುಗಳ ಸ್ಪರ್ಶದಿಂದ ಹಣ್ಣುಗಳು ಉದುರಿಬೀಳುವವು. ಮರಗಳಿಗೆಲ್ಲ ಕಿವಿಗಳು ಇದ್ದು ಅವು ಶಬ್ದವನ್ನು ಗ್ರಹಿಸುತ್ತವೆ. ಸಂಗೀತದಿಂದ ಅರಳುತ್ತವೆ. ವೃಕ್ಷಗಳಿಗೆ ಚಕ್ಷುಸ್ಸೂ ಉಂಟು, ಆದುದರಿಂದಲೇ ಬಳ್ಳಿಯು ಗಿಡವನ್ನು ಸುತ್ತಲೂ ಸುತ್ತಿಕೊಂಡು ಹೋಗುತ್ತವೆ. ಸುಗಂಧ ಮಂದಮಾರುತದಿಂದಲೂ ಧೂಪದಿಂದಲೂ ವನಸ್ಪತಿಗಳು ಪರಿಪಕ್ವ ವಾಗುತ್ತವೆ. ಅವುಗಳಿಗೆ ಘ್ರಾಣೇಂದ್ರಿಯವೂ ಉಂಟು, ಮರಬಳ್ಳಿಗಳನ್ನು ಕಡಿದು ಹಾಕಿದರೂ ಮತ್ತೆ ಚಿಗುರುತ್ತವೆ. ಇದು ಅವುಗಳ ಜೀವಂತಿಕೆಯ ಸಾಕ್ಷಿ. ಯಾವ ಗಿಡವೂ ಜಡವಲ್ಲ. ಅವು ಗಾಳಿಯಿಂದ ಉಸಿರಾಡಿಸುತ್ತವೆ. ನಿರ್ವಾತ ಪ್ರದೇಶದಲ್ಲಿ ಯಾವ ಬೆಳೆಯೂ ಬೆಳೆಯುವದಿಲ್ಲ. ಅಗ್ನಿ, ವಾಯುಗಳಿಂದ ಅವು ಕುಡಿದ ನೀರು ಪಚನವಾಗುತ್ತದೆ. ಆಹಾರವು ಪರಿಣಾಮಹೊಂದಿ ಅದಕ್ಕೆ ಅನುಗುಣವಾಗಿ ಆ ಮರಬಳ್ಳಿಗಳು ಬೆಳೆಯುತ್ತವೆ. ನೀರು, ಹವೆ, ಗಾಳಿ, ಬೆಳಕು, ಬಿಸಿಲು ಇಲ್ಲದಿದ್ದರೆ ಯಾವ ವನಸ್ಪತಿಯೂ ಬೆಳೆಯುವುದಿಲ್ಲ. ಮತ್ತು ಕೊರಗಿ ನಾಶಹೊಂದುತ್ತವೆ. ಇದು ಈ ಎಲ್ಲ ಮರಬಳ್ಳಿಗಳು ಮೊದಲಾದ ಸ್ಥಾವರ ಜೀವಿಗಳಿಗೆ ಪಂಚಮಹಾಭೂತದ ಸಂಬಂಧ ಉಂಟು ಎಂಬುದಕ್ಕೆ ನಿದರ್ಶನವಾಗಿದೆ.

ಎಂಥ ಬಿರುಸಾದ ಮರಬಳ್ಳಿಯಲ್ಲಿಯೂ ನೀರು ಗಾಳಿ ಹರಿದಾಡಲು ಅವಕಾಶ ಅರ್ಥಾತ್ ಆಕಾಶವಿದ್ದೇ ಇರುವದು. ಗಾಳಿಯಿಲ್ಲದ ಗುಹೆ ಭೂಗರ್ಭದಾಳದಲ್ಲಿ ವನಸ್ಪತಿ ಜೀವಿಸುವದಿಲ್ಲ. ಗಾಳಿಯಿಂದ ಉಸಿರಾಡಿಸಿಯೇ ಎಲ್ಲ ಸ್ಥಾವರಗಳೂ ವರ್ಧಿಸುವವು.

ನೀರಂತೂ ಮರಬಳ್ಳಿಗಳಿಗೆ ಮುಖ್ಯ ಜೀವಧಾರ. ಇದಲ್ಲದೇ ಉಪ್ಪು ಮೊದಲಾದ ಕ್ಷಾರಗೊಬ್ಬರದ ಆಹಾರ ಅವುಗಳಿಗೆ ಅತ್ಯವಶ್ಯ. ಈ ನೀರು ಹಾಗೂ ಪಾರ್ಥಿವ ಭಾಗ ಜೀರ್ಣವಾಗಲಿಕ್ಕೆ ಅವುಗಳಿಗೆ ಅಗ್ನಿಯು ಅತ್ಯವಶ್ಯ. ಭೂಗರ್ಭದ ಕಾವು ಸೂರ್ಯನ ಬಿಸಿಲುಗಳಿಂದ ಶಾಖ ಪಡೆದೇ ಎಲ್ಲ ಪೈರು ಪಾದಪಗಳು ಪ್ರವರ್ಧಿಸುವವು. ವನಸ್ಪತಿಗಳಿಗೆಲ್ಲ ಪಂಚಮಹಾಭೂತ ಸಂಬಂಧವಾಗಿಯೇ ಅವು ಅಭಿವೃದ್ಧಿಯಾಗುವವು.

ಹೀಗೆ ಸ್ಥಾವರ ಜಂಗಮಾತ್ಮಕವಾದ ಜೀವಿಗಳ ಎಲ್ಲ ಬಗೆಯ ಶರೀರಗಳಲ್ಲಿಯೂ ಪಂಚಭೂತಾತ್ಮಕವಾಗಿ ಪಂಚಭೂತಗಳು ಇರುತ್ತವೆ. ಪೃಥ್ವಿ, ಜಲ, ವಾಯು ಆಕಾಶ ತೇಜಸ್ಸು - ಈ ಪಂಚಮಹಾಭೂತಗಳು ಮತ್ತೆ ಐದೈದರ ವಿಧದಿಂದ ಗುಂಪುಗೂಡಿ ಈ ಸ್ಥಿರ, ಚರ, ದೇಹಗಳಲ್ಲಿ ಸಮ್ಮಿಲಿತವಾಗಿರುತ್ತವೆ. ಈ ದೇಹದಲ್ಲಿರುವ ಪೃಥ್ವಿಯ ಭಾಗಗಳು ಐದು. ಚರ್ಮ, ಮಾಂಸ, ಮೂಳೆ,ಕೊಬ್ಬು, ನರ ಹೀಗೆ ಮನುಷ್ಯರೇ ಮೊದಲಾದ ಜೀವಿಗಳ ಶರೀರದಲ್ಲಿದ್ದ ಪಾರ್ಥಿವ ಭಾಗವು ಐದು ವಿಧವಾಗಿವೆ.

ಇದರಂತೆ ಪ್ರಾಣಿದೇಹದಲ್ಲಿರುವ ಜಲವೂ ಐದು ವಿಧ- ಶ್ಲೇಷ್ಮ, ಪಿತ್ತ, ಬೆವರು,ರಕ್ತ, ಕೀವು ಎಂದು ಇವು ಐದು ದೇಹದ ಪಂಚ ಜಲಪ್ರಕಾರಗಳು. ಇದರಂತೆ ತೇಜಸ್ಸೂ ಕೂಡ ಕಣ್ಣು ತೇಜಸ್ಸು, ಅಗ್ನಿ, ಕೋಪ, ಆವಿ ಹೀಗೆ ಐದು ವಿಧವಾಗಿದೆ. ದೇಹದಲ್ಲಿನ ತೇಜೋಭೂತ ಇದರಂತೆ ಜೀವ ದೇಹದಲ್ಲಿಯ ಆಕಾಶವೆಂಬ ಮಹಾಭೂತ ಕೂಡ ಕಿವಿ, ಮೂಗು, ಹೃದಯ, ಬಾಯಿ, ಹೊಟ್ಟೆ ಐದು ವಿಧ ಅವಕಾಶಗಳಿಂದ ಒಡಗೂಡಿದೆ. ಇದರಂತೆ ವಾಯುವೆಂಬ ಮಹಾಭೂತ ಕೂಡ ಐದು ವಿಧವಾಗಿದೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು. ಪ್ರಾಣವಾಯುವಿನಿಂದ ಪ್ರಾಣಿಯು ಸಂತೋಷ ಪಡುತ್ತಾನೆ. ವ್ಯಾನವಾಯುವಿನಿಂದ ವ್ಯಾಯಾಮವಾಗಿ ಪುಷ್ಟಿ ಹೊಂದುತ್ತಾನೆ. ಅಪಾನ ವಾಯುವಿನಿಂದ ಅವಕಾಶಪಡೆದು ಪಚನ ಮಾಡಿಕೊಳ್ಳುತ್ತಾನೆ. ಸಮಾನವಾಯುವಿನಿಂದ ಹೃದಯದ ಕೇಂದ್ರ ದಿಂದ ದೇಹದ ಅಂತರ್ವ್ಯವಸ್ಥೆಯನ್ನೆಲ್ಲ ಸರಿಗೊಳಿಸುತ್ತಾನೆ. ಉದಾನದಿಂದ ಉಸಿರಾಟ ನಡೆಯುವದು. ಹೀಗೆ ವಾಯುಭೂತವು ಪ್ರಾಣಿಯ ಶರೀರದಲ್ಲಿ ಪಂಚವಿಧವಾಗಿರುತ್ತದೆ.

ದೇಹಿಯು ಭೂಮಿಯಿಂದ ಗಂಧವನ್ನು, ಜಲದಿಂದ ರಸವನ್ನು, ಹೀರಿಕೊಂಡು ತುಷ್ಟಿ ಪುಷ್ಟಿ ಪಡೆಯುತ್ತಾನೆ. ಈ ಗಂಧವು ಪೃಥ್ವಿಯ ಮುಖ್ಯ ಗುಣವಾಗಿದ್ದು ಅದು ಒಂಭತ್ತು ವಿಧವಾಗಿದೆ. ಇಷ್ಟ, ಅನಿಷ್ಟ, ಮಧುರ, ಕಟು, ನಿರ್ಹಾರಿ, ಸಿಂಹತ, ಸ್ನಿಗ್ಧ, ರುಕ್ಷ ವಿಷದ ಎಂದು. ಇನ್ನು ರಸವು ಜಲದ ಗುಣವಾಗಿದ್ದು ಮಧುರ, ಲವಣ, ತಿಕ್ತ ಕಷಾಯ, ಆಮ್ಲ, ಕಟು - ಕ್ರಮವಾಗಿ ಕನ್ನಡದಲ್ಲಿ ಸಿಹಿ, ಉಪ್ಪು, ಕಹಿ, ವಗರು, ಹುಳಿ, ಖಾರ ಎಂದು ಆರು ವಿಧವಾಗಿವೆ. ತೇಜಸ್ಸು ರೂಪವನ್ನು ಕಾಣಿಸುತ್ತದೆ. ರೂಪವೇ ಆ ತೇಜಸ್ಸಿನ ಗುಣ. ಈ ರೂಪವು ಹೃಸ್ವ, ಧೀರ್ಘ, ಸ್ಥೂಲ, ಚತುರಸ್ರ, ಅಣು, ವೃತ್ತ, ಶುಕ್ಲ. ಕೃಷ್ಣ(ಕಪ್ಪು), ರಕ್ತ(ಕೆಂಪು), ನೀಲಿ, ಪೀತ, (ಹಳದಿ) ಆರುಣ, (ಗುಲಾಬಿ) ಕಠಿಣ, ಮಿದು, ದಾರುಣ ಎಂದು ಹದಿನಾರು ವಿಧವಾಗಿವೆ.

ಆಕಾಶವು ಶಬ್ದಗುಣ ಉಳ್ಳದ್ದು. ಆಕಾಶಗುಣವಾದ ಈ ಶಬ್ದವು, ಷಡ್ಜ, ಗಾಂಧಾರ, ಮಧ್ಯಮ, ಪಂಚಮ, ಧೈದತ, ನಿಷಾದ ಎಂದು ಏಳು ಬಗೆಯಾಗಿದೆ. ಆಕಾಶವು ಸರ್ವವ್ಯಾಪಿ. ಆದುದರಿಂದ ತಬಲ, ನಗಾರಿ, ಶಂಖ, ಮೇಘ, ರಥ ಮುಂತಾದವುಗಳ ಮುಖಾಂತರವಾಗಿ

ಬಗೆ ಬಗೆಯ ಶಬ್ದವನ್ನು ಅಭಿವ್ಯಕ್ತಗೊಳಿಸುತ್ತದೆ. ವಾಯುವಿನ ಗುಣವಾದ ಸ್ಪರ್ಶ ಹನ್ನೊಂದು ವಿಧ- ಉಷ್ಣ, ಶೀತ, ಸುಖ, ದುಃಖ, ಸ್ನಿಗ್ಧ, ವಿಶದ, ಖರ, ಮೃದು, ಲಘು, ಗುರು, ಎಂದು ಶಬ್ದ ಮತ್ತು ಸ್ಪರ್ಶಗಳು ವಾಯುವಿನ ಗುಣಗಳು. ಶಬ್ದವು ಆಕಾಶದ ಗುಣವಾಗಿ ಆಕಾಶದಲ್ಲಿ ಹುಟ್ಟುತ್ತದೆ. ವಾಯುವಿನ ಗುಣದಿಂದ ಅದಕ್ಕೆ ಅಲ್ಲಲ್ಲಿ ತಡೆಯಾಗಿ ಅದು ಎಲ್ಲ ಕಡೆಗೂ ಕೇಳಿ ಬರುವದಿಲ್ಲ. ಆದುದರಿಂದ ಶಬ್ದದ ಗತಿಯು ವಿಷಮವಾಗಿರುತ್ತದೆ. ಜಲ, ಅಗ್ನಿ, ವಾಯು ಈ ಮೂರು ದೇಹಿಗಳು ಶರೀರದಲ್ಲಿ ಜಾಗೃತವಾಗಿರುತ್ತವೆ. ಈ ಶರೀರಕ್ಕೆ ಧಾತುಗಳು ಮೂಲಾಧಾರ. ಧಾತುಗಳು ಪ್ರಾಣಿಗಳಲ್ಲಿ ವ್ಯಾಪಿಸಿರುತ್ತವೆ. ಪಾರ್ಥಿವ ಧಾತುವಿನಿಂದ ಈ ಪ್ರಾಣಧಾತುವು ಬಲಗೊಳ್ಳುವದು. ತೇಜಸ್ಸು ಶಿರಸ್ಸನ್ನು ಆಶ್ರಯಿಸಿ ದೇಹವನ್ನು ರಕ್ಷಿಸುವದು. ಪ್ರಾಣವಾಯುವು ಅಗ್ನಿಯಿಂದ ಒಡಗೂಡಿ ದೇಹದ ಚೇಷ್ಟೆಗಳಿಗೆಲ್ಲ ಕಾರಣವಾಗಿ ದೈಹಿಕವಾಗಿ ಸರ್ವ ವ್ಯಾಪಾರಗಳನ್ನು ಮಾಡುತ್ತದೆ. ಈ ಪಂಚಭೂತಾತ್ಮಕವಾದ ದೇಹದಲ್ಲಿ ಇರುವ ಜೀವವೇ ಪ್ರಾಣ. ಅವನು ಅನಾದಿ, ಚೇತನವೆಂದು ಆ ಜೀವಕ್ಕೆ ಹೆಸರು. ದೇಹದಲ್ಲಿರುವ ಮನಸ್ಸು, ಬುದ್ಧಿ, ಅಹಂಕಾರ, ವಿಷಯೇಂದ್ರಿಯಗಳು ಎಲ್ಲ ಅವನ ಅಧೀನ. ಈ ದೇಹದಲ್ಲಿರುವ ಜೀವನಿಗೂ ಪುರುಷ ಎಂದು ಹೆಸರು. ಈ ಚೇತನ, ಪುರುಷ ಅಥವಾ ಜೀವನು ಪ್ರಾಣವಾಯುವಿನ ಅಧೀನ (ನಿಯಂತ್ರಿತ). ಈ ವಾಯುಭೂತವೇ ದೇಹವನ್ನು ಪ್ರಾಣಾಧಾರದಿಂದ ರಕ್ಷಿಸುವದು. ಅಪಾನ ವಾಯುವು ಗುದಪ್ರದೇಶಗಳನ್ನು ತೇಜಸ್ಸುಗಳನ್ನು ಆಶ್ರಯಿಸಿ, ಮಲಮೂತ್ರಗಳನ್ನು ಹೊರಗೆ ಹಾಕುತ್ತದೆ. ಪ್ರಯತ್ನ, ವಿವಿಧಕರ್ಮಗಳು, ಹಾಗೂ ನಿಯಂತ್ರಣ ಈ ಮೂರು ಕಾರ್ಯಗಳನ್ನು ದೇಹದಲ್ಲಿ ಉದಾನವಾಯು ಮಾಡುತ್ತದೆ. ಜೀವರ ದೇಹದ ಸಂಧಿಬಂಧ ಪ್ರದೇಶಗಳ ಆಕುಂಚನ, ಪ್ರಸರಣ ಕಾರ್ಯ ಮಾಡುವದು ವ್ಯಾನ ವಾಯುವು, ಸಮಾನವಾಯುವು ಅಗ್ನಿಯಿಂದ ಪ್ರೇರಿತವಾಗಿ ದೇಹದಲ್ಲಿಯ ಎಲ್ಲ ರಸ, ದೋಷಾದಿಗಳನ್ನು ನಿಯಮನ ಮಾಡಿ, ಶರೀರ ಯಂತ್ರವು ಸರಿಯಾಗಿ ಕಾರ್ಯ ನಿರ್ವಹಿಸುವಂತೆ ಮಾಡುತ್ತದೆ. ಅಗ್ನಿಯು ಅಪಾನ, ಹಾಗೂ ಪ್ರಾಣವಾಯುಗಳ ಮಧ್ಯ ನಿಂತುಕೊಂಡು ಅವೆರಡರ ಸಹಕಾರ ಸಾಮರಸ್ಯದಿಂದ ಸಮನ್ವಿತವಾಗಿ ಅನ್ನವನ್ನು ಪಚನಮಾಡುತ್ತದೆ.

ವಾಯುವಿನ ಪರ್ಯಂತ ಭಾಗಕ್ಕೆ ಗುದವೆಂದು ಸಂಜ್ಞೆ. ಅದರ ಒಂದು ಭಾಗದಲ್ಲಿ ಸಕಲ ಇಂದ್ರಿಯ ವ್ಯಾಪಾರಗಳಿಗೂ ಚೇತನಪ್ರದವಾದ ರೇತಸ್ಸು ಎಂಬ ರಸ ಹುಟ್ಟುತ್ತದೆ. ದೇಹದಲ್ಲಿ ಉಂಡ ಅನ್ನವು ಜೀರ್ಣವಾಗುವಂತೆ ಮಾಡುವ ಅಗ್ನಿಗೆ ಊಷ್ಮಾಗ್ನಿ ಎಂದು ಕರೆಯುವರು. ದೇಹದ ನಾಭಿಯ ಕೆಳಭಾಗದಲ್ಲಿ ಜೀರಕವಾದ ಪಾಚಕ ರಸದ ಕೋಶವಿದ್ದು ಮೇಲೆ ಆಮಾಶಯವಿರುತ್ತದೆ. ನಾಭಿಯ ಮೂಲದಲ್ಲಿ ಎಲ್ಲ ಪ್ರಾಣಿಗಳೂ ಇರುತ್ತವೆ. ಹೃದಯದಿಂದ ಮೇಲೆ ಕೆಳಗೆ ಎಡಬಲ ಎಲ್ಲ ಕಡೆಗೂ ನಾಡಿಗಳು ಹೊರಟು ಹರಿದಿರುತ್ತವೆ. ಅವು ಹತ್ತು ವಿಧ ಪ್ರಾಣಗಳಿಂದ ಪ್ರೇರಿತವಾಗಿ ಅನ್ನ ರಸವನ್ನು ದೇಹದ ಎಲ್ಲ ಭಾಗಗಳಿಗೆ ಒಯ್ಯುತ್ತವೆ. ಯೋಗಿಗಳು ಶ್ವಾಸವನ್ನು ನಿರೋಧಮಾಡಿ, ಪ್ರಾಣವನ್ನು ಬ್ರಹ್ಮರಂಧ್ರಕ್ಕೆ ತಂದು ದೇವಯಾನದಿಂದ ಪ್ರಯಾಣ ಮಾಡಿ, ಪರಮ ಪದವನ್ನು ಹೊಂದುತ್ತಾರೆ.

*ನಾರದ ಮಹಾಪುರಾಣದಲ್ಲಿ ನಲವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಸರ್ವ ವರ್ಣ, ಧರ್ಮ, ಆಶ್ರಮಗಳ ಸದಾಚಾರ ನಿರೂಪಣೆ

ಅಧ್ಯಾಯ - ೪೩

**ಭಾರದ್ವಾಜ:-** ವಾಯುವು ಪ್ರಾಣಗಳಿಗೆ ಪತಿ. ಈ ದೇಹದ ಎಲ್ಲ ಚೇಷ್ಟೆಗಳೂ ಆ ವಾಯುವಿನ ಮೂಲಕವೆ. ಈ ಜೀವವು ಉಸಿರಾಡಿಸುವದು, ಹೋಗುವದು, ಬರುವದು ಎಲ್ಲ ವ್ಯಾಪಾರಗಳು ವಾಯುವಿನಿಂದಲೆ ಎಂದು ಹೇಳಿದಿರಿ. ಹಾಗಾದರೆ ಈ ಶರೀರದಲ್ಲಿ ಜೀವವು ನಿರರ್ಥಕ ಎಂದಂತಾಯಿತಲ್ಲವೆ? ದೇಹದಲ್ಲಿ ಇರುವ ಅಗ್ನಿಯು ತಿಂದ ಆಹಾರವನ್ನು ಪಚನ ಮಾಡುತ್ತದೆ. ಸಮಾನವಾಯುವು ಅದರಲ್ಲಿ ಪೋಷಕರಸವನ್ನು ದೇಹದ ಅವಶ್ಯಕ ಭಾಗಗಳಿಗೆ ಪೂರೈಸುತ್ತದೆ. ಹೀಗೆ ಈ ವಾಯು, ಅಗ್ನಿಯು ಇದ್ದ ಬಳಿಕ ಜೀವದ ಕೆಲಸವೇನು? ಈ ಶರೀರವು ಪಂಚಭೂತಾತ್ಮಕ. ಇದರಲ್ಲಿ ಯಾವುದಾದರೂ ಒಂದು ಇಲ್ಲದಂತಾಗಲು ಈ ದೇಹವು ಹಾಳಾಗುವದು. ಆ ಜೀವವು ಮೃತವಾಯಿತು ಎಂದು ನೀವು ಹೇಳಿದಂತಾಯಿತು. ಈ ದೇಹದಲ್ಲಿಯ ಆಹಾರ ರೂಪವಾದ ಪಾರ್ಥಿವ ಭಾಗ, ನೀರು ಮೊದಲಾದ ಜಲಭಾಗ, ಮುಂತಾದವುಗಳು ಕಡಿಮೆಯಾದರೆ ಅರ್ಥಾತ್ ಊಟ ಮಾಡದೇ ಹೋದರೆ ಜಠರಾಗ್ನಿಯು ನಾಶವಾಗುವದು. ಶ್ವಾಸೋಚ್ಛ್ವಾಸ ಮಾಡದಿದ್ದರೆ ಜೀವವು ನಷ್ಟವಾಗುವುದು. ಹೀಗೆ ಯಾವುದಾದರೊಂದು ಭಾಗ ನಾಶವಾದರೆ ಇಡೀ ದೇಹ ಹಾಗೂ ಜೀವಗಳೆರಡೂ ನಷ್ಟವಾಗುವವು.

ಹೀಗೆ ಈ ಶರೀರವು ನಾಶವಾದ ಬಳಿಕ ಅದರಲ್ಲಿ ಇರುವ ಜೀವನು ಎಲ್ಲಿ ಹೋಗುವನು ? ಗೋದಾನಾದಿ ಪುಣ್ಯಕರ್ಮಗಳು ಯಾವ ಮನುಷ್ಯನನ್ನು ಉದ್ಧರಿಸುವವು ? ದಾನ ತೆಗೆದುಕೊಂಡವನು, ಕೊಟ್ಟವನು ಮತ್ತು ದಾನ ಮಾಡಿದ ಆ ಹಸುವು - ಈ ಮೂರು ಮರಣ ಹೊಂದಿದ ಬಳಿಕ ಪುನಃ ಮತ್ತೆ ಅವುಗಳು ಎಲ್ಲಿ ಸಮಾವೇಶವಾಗುವವು? ಬೆಟ್ಟದಿಂದ ಬಿದ್ದ, ಪಾಪಿಗಳು ತಿಂದ, ಅಗ್ನಿಯಿಂದ ದಗ್ಧವಾದ, ಶರೀರದಲ್ಲಿರುವ ಜೀವನಿಗೆ ಪುನಃ ಈ ಸಂಸಾರಕ್ಕೆ ಪುನರಾವರ್ತನವು ಹೇಗೆ? ಕಡಿದು ಒಗೆದ ಮರವು ಮತ್ತೆ ಚಿಗುರುವದಿಲ್ಲ. ಹಾಗೆ ಒಮ್ಮೆ ಬೆಂಕಿಯಲ್ಲಿ ಬೂದಿಯಾದ ಅಥವಾ ಪಶು - ಪಕ್ಷಿಗಳು ತಿಂದುಹೋದ ಈ ಶರೀರದಲ್ಲಿರುವ ಜೀವನಿಗೆ ಪುನಃ ದೇಹಪ್ರಾಪ್ತಿ, ಬೆಳವಣಿಗೆ ಎಂತು ಕೂಡುವದು? ಒಮ್ಮೆ ಸತ್ತು ಹೋದ ಮನುಷ್ಯ ಹೋಗುವದೆಲ್ಲಿ? ಮತ್ತೊಂದು ದೇಹಕ್ಕೆ ಎಲ್ಲಿಂದ ಬರುವನು? ಇವೇ ಮೊದಲಾದ ಸಂಶಯಗಳು ನನ್ನನ್ನು ಕಾಡುತ್ತಿವೆ. ತಾವು ನನಗೆ ಸಮಂಜಸ ಉತ್ತರ ಹೇಳಿ ಸಮಾಧಾನ ಉಂಟು ಮಾಡಬೇಕು.

**ಭೃಗು:-** ಮರಣ ಹೊಂದಿದ ಬಳಿಕ ದಾನ ಕೊಟ್ಟ ಯಜಮಾನ ಇರುವದಿಲ್ಲ. ದಾನ ನೀಡಿದ ಹಸುವು ಇರುವದಿಲ್ಲ. ದಾನ ಪಡೆದವನು ಇರುವದಿಲ್ಲ. ಆ ದೇಹಿಗಳು ತಮ್ಮ ತಮ್ಮ ಕರ್ಮಾನುಸಾರ ಬೇರೆ ಬೇರೆ ಶರೀರಕ್ಕೆ ಹೋಗಿರುತ್ತವೆ. ಆದರೆ ನಾಶವನ್ನು ಮಾತ್ರ ಹೊಂದಿರುವದಿಲ್ಲ-ಆ ಜೀವಗಳು ಕಟ್ಟಿಗೆಯನ್ನು ರಾಶಿ ಹಾಕಿ ಸುಟ್ಟ ಬಳಿಕ ಕಟ್ಟಿಗೆ ಉಳಿಯುವದಿಲ್ಲ. ಕಟ್ಟಿಗೆ ನಾಶವಾದರೂ ಅಗ್ನಿಯೂ ಮಾತ್ರ ಅಲ್ಲಿಯೇ ಇರುತ್ತದೆ. ಹಾಗೆ ದೇಹವು ನಾಶವಾದರೂ ಜೀವ ನಾಶವಾಗದೆ, ಅಗ್ನಿಯಂತೆ ಉಳಿದೇ ಇರುತ್ತದೆ.

**ಭಾರದ್ವಾಜ:-** ಕಟ್ಟಿಗೆಗಳು ಉರಿದ ಬಳಿಕ ಕಟ್ಟಿಗೆಯು ನಾಶವಾದರೂ, ಅಗ್ನಿ ಮಾತ್ರ ಇರುತ್ತದೆ ಎಂದು ಹೇಳಿದಿರಿ. ಆದರೆ ಕೆಲವು ಸಮಯದ ಬಳಿಕ ಆ ಅಗ್ನಿಯೂ ಶಾಂತವಾಗಿ ಬೂದಿಯಾದಾಗ ಅಲ್ಲಿ ಅಗ್ನಿ ಎಲ್ಲಿ ದೊರೆಯುವದು? ಯಾವ ವಸ್ತುವು ಕಣ್ಣಿಗೆ ಕಾಣದೆ, ಕೆಳಗೆ ಬಿಸಿ ಹತ್ತದೆ ಬೂದಿಯಾಗಿ ಬಿದ್ದಿರುವದೋ ಅದು ಅಂತಹ ಅಗ್ನಿ ಇನ್ನೂ ಇದೆಯೆಂದು ಭಾವಿಸುವದು ಪ್ರಮಾಣ ವಿರುದ್ಧ. ಆದುದರಿಂದ ಕಟ್ಟಿಗೆ ನಾಶವಾಗಿ (ಕಟ್ಟಿಗೆ ಉರಿದ ಬಳಿಕ) ಆದರಿಂದ ಉಂಟಾದ ಕೆಂಡವೂ ಕೂಡ ಬೂದಿಯಾಗಿ ಶಾಂತವಾದ ಬಳಿಕ ಆ ಅಗ್ನಿಯು ನಷ್ಟವಾಯಿತೆಂದೇ ಭಾವಿಸಬೇಕಾಗುತ್ತದೆ. ಹಾಗೆ ಈ ಶರೀರವು ಅಗ್ನಿ ದಗ್ಧ, ಇಲ್ಲವೆ ಮಣ್ಣಿನಲ್ಲಿ ಮಣ್ಣಾಗಿ ಹೋದ ಬಳಿಕ, ಜೀವವು ನಷ್ಟವಾಯಿತೆಂದೇ ಅನ್ನಬೇಕಾಗುತ್ತದೆ.

**ಭೃಗು:-** ಕಟ್ಟಿಗೆಗಳು ದಗ್ಧವಾಗಿ ಅಲ್ಲಿದ್ದ ಕೆಂಡ, ಕಿಚ್ಚು, ಆರಿ ಬೂದಿಯಾದ ಬಳಿಕ, ಅಲ್ಲಿ ಅಗ್ನಿಯು ಕಾಣುವದಿಲ್ಲವಾದುದರಿಂದ ಅಗ್ನಿಯು ನಷ್ಟವಾಯಿತೆಂದು ಹೇಳಬಾರದು. ಅಗ್ನಿಯ ಆಶ್ರಯ ನಾಶವಾಯಿತು. ಆಶ್ರಯನಾಶದಿಂದ ಅದು ನಮಗೆ ಗೋಚರವಾಗುವದಿಲ್ಲ. ಅದೃಶ್ಯರೂಪದಿಂದ ಆಕಾಶದಲ್ಲಿ ಲೀನವಾಗಿರುತ್ತದೆ. ಅದರಂತೆ ಶರೀರವನ್ನು ತ್ಯಜಿಸಿ ಹೋದಬಳಿಕ ಈ ಜೀವನು ಕೂಡ ಸೂಕ್ಷ್ಮ ರೂಪದಿಂದ ಇದ್ದೇ ಇರುವನು ಅಗ್ನಿಯಂತೆ. ಈ ನಮ್ಮ ದೇಹದಲ್ಲಿ ಪ್ರಾಣವಾಯುವಿಗೆ ಅಗ್ನಿಯು ಧಾರಕವಾಗಿದೆ. ಆ ಅಗ್ನಿಯು ನಿಯಂತ್ರಿಸಿದ ಕೂಡಲೇ ಹೃದಯದಲ್ಲಿಯ ಉಸಿರಾಟ ನಿಂತುಹೋಗುವದು. ಉಸಿರಾಟ ನಿಂತಕೂಡಲೇ ಶರೀರಾಗ್ನಿಯು ನಾಶ ಹೊಂದುವದು. ಹೀಗೆ ದೇಹದಲ್ಲಿ ಮುಖ್ಯವಾದ ವಾಯು ಅಗ್ನಿಗಳು ನಷ್ಟವಾದ ಬಳಿಕ, ಶರೀರದಲ್ಲಿಯ ಜಲಭಾಗ ಪಾರ್ಥಿವ ಭಾಗಗಳು ಒಣಗಿ ಹೋಗುವವು. ಆರೋಪಿತವಾದ ಪಾರ್ಥಿವ ಭಾಗವು ಪೃಥ್ವಿಯಲ್ಲಿ ಕೂಡಿ ಹೋಗುವದು. ಪ್ರಾಣಿಯು ಮೃತನಾದ ಕೂಡಲೇ ಅವನ ಪ್ರಾಣವಾಯುವು ಆಕಾಶದಲ್ಲಿರುವ ವಾಯುವಿನಲ್ಲಿ ಲೀನವಾಗುವದು. ತೇಜಸ್ಸು, ವಾಯುವನ್ನೇ ಅನುಸರಿಸುತ್ತದೆ, ವಾಯು ಆಕಾಶಗಳ ಜೊತೆಗೆ ಪ್ರಾಣಾಗ್ನಿ ನಂದಿ ಹೋಗುತ್ತದೆ, ಉಳಿದ ಭಾಗ ಪೃಥ್ವಿಯಲ್ಲಿ ಸೇರುತ್ತದೆ. ಹೀಗೆ ಪಂಚಭೂತಗಳಿಂದ ರೂಪುಗೊಂಡ ದೇಹವು ಪಂಚಭೂತಗಳಲ್ಲಿ ಲೀನವಾಗುವದೇ ಮರಣ. ಇದಕ್ಕೆ ಪಂಚತ್ವವೆಂದು ಅನ್ನುತ್ತಾರೆ.

**ಭಾರದ್ವಾಜ:-** ಈ ದೇಹವು ಪಾಂಚಭೌತಿಕ ಎಂದರೆ ಪಂಚಮಹಾಭೂತಗಳಿಂದ ರೂಪಗೊಂಡದ್ದು ಎನ್ನುವದು ಸತ್ಯವಾದರೆ - ದೇಹದಲ್ಲಿರುವ ಈ ಪಂಚಮಹಾ ಭೂತಗಳ ಮಾಂಸ, ರಕ್ತ, ಕೊಬ್ಬು, ನರ, ಮೂಳೆ, ಹೃದಯ ಮುಂತಾದವುಗಳನ್ನೆಲ್ಲ ಬೇರೆ ಬೇರೆಯಾಗಿ ಬಗೆದು ನೋಡಿದರೂ ಜೀವನು ಕಾಣುವುದಿಲ್ಲ. ಈ ಯಾವ ಪದಾರ್ಥಗಳಲ್ಲಿಯೂ ಜೀವನು ಇರುವುದಿಲ್ಲ ಎಂದಂತಾಯಿತು ಶರೀರಕ್ಕೆ, ದೈಹಿಕ ಮಾನಸಿಕ ದುಃಖ ಆದಾಗ ಅದನ್ನು ತಿಳಿಯುವವನು ಯಾರು? ಜೀವನೇ ಅದನ್ನು ತಿಳಿಯುವವ ದುಃಖ ಸುಖ ಅನುಭವಿಸುವವ ಎಂದಾದರೆ ಈ ಜೀವನು ಶಬ್ದ, ಗಂಧ, ರೂಪ ಮುಂತಾದ ವಿಷಯಗಳನ್ನು ಒಮ್ಮೊಮ್ಮೆ ಮನಸ್ಸಿನಲ್ಲಿ ವ್ಯಾಕುಲವಾದಾಗ ಗ್ರಹಿಸುವುದಿಲ್ಲ. ಮನಸ್ಸು ವ್ಯಗ್ರವಾದಾಗ, ಕಣ್ಣೆದುರು ಇದ್ದದ್ದು ಕಾಣುವದಿಲ್ಲ. ಕಿವಿಯ ಮೇಲೆ ಬಿದ್ದದ್ದು ಕೇಳುವದಿಲ್ಲ. ನಿದ್ರೆ ಮಾಡುವಾಗಂತೂ ಯಾವ ಬಾಹ್ಯೇಂದ್ರಿಯಗಳೂ ಕೆಲಸ ಮಾಡುವದಿಲ್ಲ. ಅಲ್ಲದೆ ಆ ನಿದ್ರಾಕಾಲದಲ್ಲಿಯೂ ಜೀವ ನಿಷ್ಕ್ರಿಯ, ನಿಶ್ಚೇಷ್ಟನಾಗಿರುವದಿಲ್ಲ. ಆ ಕಾಲದಲ್ಲಿ ಶ್ವಾಸೋಚ್ಛ್ವಾಸಕ್ರಿಯೆ, ಪಚನ, ಸುಖಾನುಭವ, ಸ್ವಪ್ನ

ಮುಂತಾದವುಗಳು ಹೇಗೆ ನಡೆಯುವವು? ಈ ಶರೀರದಲ್ಲಿ ಸುಖ, ದುಃಖ, ಕೋಪ, ತಾಪ ಅನುರಾಗ, ಧ್ಯಾನ, ಗಾನ, ದ್ವೇಷ, ಪ್ರೀತಿಗಳನ್ನು ಮಾಡುವವನು ಯಾರು?

**ಭೃಗು:-** ಪಾಂಚಭೌತಿಕವಾದ ಈ ಶರೀರದಲ್ಲಿ ಇರುವ ಚೇತನ, ಆತ್ಮ, ಜೀವ ಎನ್ನುವವನು ಇದ್ದು ರೂಪ, ರಸ, ಗಂಧ, ಶಬ್ದಗಳನ್ನು ಆಯಾ ಇಂದ್ರಿಯಗಳ ಮೂಲಕ ಪರಿಗ್ರಹಿಸಿ, ಆ ವಸ್ತುಗಳ ಸ್ವಭಾವಕ್ಕನುಗುಣವಾಗಿ ಸುಖ, ದುಃಖ ಅನುಭವಿಸುತ್ತಾನೆ. ದೇಹ ಇರುವವರೆಗೂ ಅವನಿಗೆ ಈ ಸುಖ, ದುಃಖಗಳ ಅನುಭವ ತನ್ಮೂಲಕವಾಗಿ ಅಭಿಮಾನ ರಾಗ, ದ್ವೇಷಾದಿಗಳು ಹಾಗೂ ಉದ್ವೇಗಗಳು, ಉಂಟಾಗುವವು. ಶರೀರದಲ್ಲಿರುವ ಅಗ್ನಿಯು ಶಾಂತವಾಗಿ ಶಾಸೋಚ್ಛ್ವಾಸವು ನಿಂತಬಳಿಕ, ಜೀವ ಆ ದೇಹವನ್ನು ಬಿಟ್ಟು ಬಿಡುತ್ತಾನೆ. ಆದರೆ ಆಗ ದುಃಖಾನುಭವದ ಜ್ಞಾನ ಇರುವದಿಲ್ಲ. ಈ ಜೀವನಾಶ ಹೊಂದಿರುವದಿಲ್ಲ. ಈ ದೇಹ ಸಂಬಂಧದ ಸುಖ-ದುಃಖಗಳು ಜೀವಾತ್ಮನಿಗೆ ಜೀವಾತ್ಮನಿಗೆ ಮಾತ್ರ ಬರುವವು. ಅದೇ ದೇಹದಲ್ಲಿ ಆ ದೇಹಕ್ಕೂ ಜೀವಕ್ಕೂ ನಿಯಾಮಕನಾಗಿ ಪರಮಾತ್ಮನು ಇರುತ್ತಾನೆ. ಅವನು ತಾವರೆಯ ಎಲೆಯ ಮೇಲಿನ ನೀರಿನ ಹನಿ ಇದ್ದಂತೆ. ಅವನಿಗೆ ಈ ದೈಹಿಕವಾದ ಸುಖ ದುಃಖಾದಿಗಳು ಎಂದೂ ತಗಲುವದಿಲ್ಲ.

'ಕ್ಷೇತ್ರಜ್ಞಂತಂ ವಿಜಾನೀಹಿ ನಿತ್ಯಂ ಲೋಕ ಹಿತಾತ್ಮತಂ' ಅವನೇ ಕ್ಷೇತ್ರಜ್ಞನೆಂದು ತಿಳಿದುಕೊ. ಯಾವಾಗಲೂ ಲೋಕಹಿತ ಮಾಡುವದೇ ಅವನ ಸ್ವಭಾವ, ಸ್ವರೂಪ, ಸತ್ವ, ರಜ, ತಮಗಳೇ ಜೀವನಗಳೆಂದು ತಿಳಿಯಬೇಕು. ಜೀವದಿಂದ ಸಕಲ ವ್ಯಾಪಾರಗಳನ್ನು ದೇಹಾಂತರ್ಗತನಾದ ಪರಮಾತ್ಮನೇ ಮಾಡಿಸುವನು. ನಿಜವಾದ ಕ್ಷೇತ್ರಜ್ಞರ ಸ್ವರೂಪ ಅರಿತವರು, ಜೀವನಿಯಾಮಕನೂ, ದೇಹನಿಯಾಮಕನೂ ಆದ ಕ್ಷೇತ್ರಜ್ಞನಿಯಾಮಕ ಪರಮಾತ್ಮನೇ. ಬಾಹ್ಯ ಪ್ರಪಂಚವನ್ನೂ ಲೋಕಗಳನ್ನೂ ವ್ಯಾಪ್ತನಾಗಿ ನಿಯಮಿಸುತ್ತಾನೆ, ಎಂದು ಹೇಳುತ್ತಾರೆ. ಜೀವನಿಗೆ ಸರ್ವಥಾ ನಾಶವಿಲ್ಲ. ಪಂಚಮಹಾಭೂತಗಳ ವಿಕಾರವಾದ ಒಂದು ದೇಹವು ಪಾತವಾದರೆ ಈ ಜೀವನು ದೇಹಾಂತರಕ್ಕೆ ಪಯಣಿಸುತ್ತಾನೆ. ಕೆಲವರು ಮನಸ್ಸೇ ದೇಹವೆಂದು ಹೇಳುವರು. ಇದು ಬುದ್ಧಿ ಇಲ್ಲದವರು ಹೇಳುವ ಮಾತು. ಮನಸ್ಸು ಬೇರೆ, ದೇಹ ಬೇರೆ, ಜೀವ ಬೇರೆ. ಇವೆಲ್ಲವನ್ನು ನಿಯಮಿಸುವ ಕ್ಷೇತ್ರಜ್ಞನಾದ ಪರಮಾತ್ಮನೂ ಬೇರೆ. ಇಂತಹ ಈ ಪರಮಾತ್ಮನು ಎಲ್ಲ ಪ್ರಾಣಿಗಳಲ್ಲಿಯೂ ಸೂಕ್ಷ್ಮ ರೂಪದಿಂದ ಇರುತ್ತಾನೆ. ಪಿಂಡಾಂಡದಲ್ಲಿದ್ದವನು ಬ್ರಹ್ಮಾಂಡದಲ್ಲಿಯೂ ಇದ್ದು, ಇದನ್ನೆಲ್ಲ ನಿಯಮಿಸುತ್ತಾನೆ. ತತ್ವಜ್ಞಾನಿಗಳು ಪ್ರಾಣಿಗಳ ಅಂತರಂಗ, ಬಹಿರಂಗಗಳಲ್ಲಿ ಇರುವ, ವ್ಯಾಪ್ತನಾದರೂ ಸೂಕ್ಷ್ಮನಾದ ಆ ಪರಮಾತ್ಮನನ್ನು ತಮ್ಮ ಜ್ಞಾನ ದೃಷ್ಟಿಯಿಂದ ನೋಡುತ್ತಾರೆ.

ಬಾಹ್ಯ ಪ್ರಪಂಚದಲ್ಲಿ ಸರ್ವತ್ರ ವ್ಯಾಪ್ತನಾದ ಆ ಪರಮಾತ್ಮನನ್ನು ಜ್ಞಾನಿಯು ನಿರಂತರ ಧ್ಯಾನ ಯೋಗದಿಂದ ತನ್ನ ಹೃದಯಾಕಾಶದಲ್ಲಿಯೇ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಹಗಲಿರುಳು ವಿಹಿತ ಕರ್ಮಾನುಷ್ಠಾನ ಮಾಡುತ್ತಲಿದ್ದು, ಸರ್ವಸಂಗ ಪರಿತ್ಯಾಗ ಮಾಡಿ, ಆ ಭಗವಂತನನ್ನು ನಿರಂತರ ಉಪಾಸನೆಗಳಿಂದ ಸಂತೋಷಪಡಿಸಿ ಅವನ ಅನುಗ್ರಹದಿಂದ ಅಕ್ಷಯ ಸುಖವನ್ನು ಪಡೆಯುತ್ತಾನೆ. ಭಕ್ತ ಜೀವ, ಈ ಸರ್ವಸ್ವಾಮಿಯಾದ ಆ ಭಗವಂತನ ಆಜ್ಞೆಯಿಂದ ಪ್ರಜಾಪತಿಯಾದ ಬ್ರಹ್ಮದೇವರು ಬ್ರಾಹ್ಮಣಾದಿ ವರ್ಣಗಳನ್ನು, ಬ್ರಹ್ಮಚರ್ಯಾದಿ ಆಶ್ರಮಗಳನ್ನು ಅವರವರಿಗೆ ವಿಧಿಸಿ, ಇದರಿಂದ ಶ್ರೇಯಸ್ಸನ್ನು ಪಡೆಯಲು ಆಜ್ಞಾಪಿಸಿದರು.

**ಭಾರದ್ವಾಜ:-** ಬ್ರಾಹ್ಮಣಾದಿ ವರ್ಣಗಳನ್ನು ಸೃಷ್ಟಿಸಿದರು ಎಂದು ತಾವು ಹೇಳಿದಿರು. ಈ ವರ್ಣಭೇದವು ಏಕೆ ಉಂಟಾಯಿತು? ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಈ ಎಲ್ಲರ ದೇಹಗಳು ಪಾಂಚಭೌತಿಕ ದೇಹಗಳು. ಎಲ್ಲರ ಮೈಯಿಂದ ಹರಿಯುವ ಬೆವರು, ಸುರಿಯುವ ಮೂತ್ರ, ವಿಸರ್ಜಿಸುವ ಮಲ, ಸ್ರವಿಸುವ ರಕ್ತ, ದ್ರವಿಸುವ ಶ್ಲೇಷ್ಮ ಮೊದಲಾದವುಗಳು ಒಂದೇ ಇರುವಾಗ, ಜಾತಿ ಮಾತ್ರ ಬೇರೆ ಬೇರೆಯಾಗಲು ಕಾರಣವೇನು ? ಇತರ ಪ್ರಾಣಿಗಳು, ಮತ್ತು ಮರ ಬಳ್ಳಿಗಳು ಇವುಗಳಲ್ಲಿ ಜಾತಿ ಭೇದ ಉಂಟೆ?

**ಭೃಗು:-** ಬ್ರಹ್ಮದೇವರು ಪೂರ್ವದಲ್ಲಿ ಅವರವರ ಕರ್ಮಾನುಸಾರವಾಗಿ ವರ್ಣವನ್ನು ಸೃಷ್ಟಿ ಮಾಡಿದ್ದಾನೆ. ಬ್ರಾಹ್ಮಣರು ತಪಸ್ಸು, ಸತ್ಯ, ಧರ್ಮ, ವೇದಾಧ್ಯಯನ, ಆಚಾರ ಶೌಚ ಮುಂತಾದ ಧರ್ಮಗಳನ್ನು ಆಚರಿಸಬೇಕೆಂದೂ, ಇವೇ ಅವರಿಗೆ ಸ್ವರ್ಗ ಸಾಧನವೆಂದೂ ವಿಧಿಸಿದ್ದಾರೆ. ಸಾಹಸಿಗಳೂ, ಸ್ವಚ್ಛಂದ ಭೋಗ ಮಾಡ ಬಯಸುವವರೂ, ಕೋಪಿಷ್ಠರೂ, ಕ್ರೂರರೂ ಕ್ಷತ್ರಿಯರೆನಿಸುತ್ತಾರೆ. ಗೋವುಗಳ ಸೇವೆ ಯಿಂದ ಜೀವನ ಮಾಡುವವರು, ವ್ಯಾಪಾರ ಮಾಡುವವರು ವೈಶ್ಯರೆನಿಸುವರು. ಹಿಂಸೆ, ಅಸತ್ಯ, ಲೋಭ ಮುಂತಾದ ದುರ್ಗುಣ ಉಳ್ಳವರು, ದೊರೆತ ಕರ್ಮವನ್ನೆಲ್ಲ ಮಾಡಿ ಬದುಕುವವರು, ಶೌಚಾಚಾರಗಳಿಂದ ಭ್ರಷ್ಟರು ಶೂದ್ರರೆನಿಸುವರು. ಧರ್ಮವನ್ನು ಸರ್ವರೀತಿಯಿಂದಲೂ ನಂಬಿ, ಜ್ಞಾನ ಸಂಪಾದನೆಗಾಗಿ ಹಗಲಿರುಳು ವೇದಾಧ್ಯಯನಾದಿ ಕರ್ಮಗಳನ್ನು ಮಾಡುತ್ತ ಕಷ್ಟದಿಂದ ತಪ, ಜಪ, ಉಪವಾಸ ಮುಂತಾದವುಗಳನ್ನು ಆಚರಿಸುವವರು ಶ್ರೇಷ್ಠ ಬ್ರಾಹ್ಮಣರೆನಿಸುವರು.

**ಭಾರದ್ವಾಜ:-** ಯಾವ ಕರ್ಮಗಳಿಂದ ಮತ್ತು ಯಾವ ಧರ್ಮಾಚಾರಗಳಿಂದ ಬ್ರಾಹ್ಮಣರೆನಿಸುವರು? ಕ್ಷತ್ರಿಯ ಎನಿಸಲು ಯಾವ ಕರ್ಮಗಳು ಕಾರಣ? ವೈಶ್ಯರ ಕಾರ್ಯಗಳೇನು? ಶೂದ್ರರಿಗೆ ಎಂಥ ಕರ್ಮಗಳು ಕಾರಣ?

**ಭೃಗು:-** ಜಾತಕರ್ಮ ಮೊದಲಾದ ಹದಿನಾರು ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟು, ವೇದಾಧ್ಯಯನ ಮಾಡಿ, ವೇದೋಕ್ತ ಕರ್ಮಾದಿಗಳನ್ನು ಶೌಚ, ಆಚಾರಗಳನ್ನು ಆಚರಿಸುವ ಸತ್ಯನಿಷ್ಠನಾದವನು ಬ್ರಾಹ್ಮಣನೆನಿಸುವನು. ಬ್ರಾಹ್ಮಣನನ್ನು ಗುರುತಿಸುವ ಇನ್ನೊಂದು ಲಕ್ಷಣ ಹೇಳುತ್ತೇನೆ ಕೇಳು -

**ಸತ್ಯಂ ದಾನಮಥೋऽ ದ್ರೋಹ ಆನೃಶಂಸ್ಯಂ ಕೃಪಾ ಘೃಣಾ ।**
**ತಾಪಸ್ಯಂ ದೃಶ್ಯತೇ ಯತ್ರ ಸ ಬ್ರಾಹ್ಮಣ ಇತಿ ಸ್ಮೃತಃ ॥**

ಅಧ್ಯಾಪನ, ಸತ್ಯ, ದಾನ, ಯಾರಿಗೂ ದ್ರೋಹ ಬಗೆಯದಿರುವದು, ಅಹಿಂಸೆ, ದಯೆ, ತಪಸ್ಸು, ಸಾತ್ವಿಕತೆ ಉಳ್ಳವನು ಬ್ರಾಹ್ಮಣ. ವೇದವನ್ನು ಅಧ್ಯಯನ ಮಾಡಿ ಶಸ್ತ್ರ ವಿದ್ಯೆ ಶಾಸ್ತ್ರವಿದ್ಯೆ ಎರಡನ್ನೂ ಸಂಪಾದಿಸಿ, ದಾನ-ಧರ್ಮ, ಪರೋಪಕಾರ, ದೀಮ ರಕ್ಷಣೆ, ದುಷ್ಟ ನಿಗ್ರಹ, ಶಿಷ್ಟಪಾಲ, ರಾಜ್ಯ ಶಾಸನ ಮುಂತಾದವುಗಳನ್ನು ಮಾಡುವವ ಕ್ಷತ್ರಿಯ. ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಶು ರಕ್ಷಣೆ, ವ್ಯಾಪಾರ, ಉದ್ಯೋಗ, ವ್ಯವಸಾಯ ಬೇಸಾಯ, ಪರೋಪಕಾರ, ಸತ್ಪಾತ್ರದಾನ ಮುಂತಾದವುಗಳನ್ನು ಮಾಡುತ್ತ ದೇಹ ದಿಂದಲೂ, ಮನಸ್ಸಿನಿಂದಲೂ ಪರಿಶುದ್ಧನಾಗಿ ಎಲ್ಲ ಜಾತಿ ವರ್ಣದವರಿಗೆ ಹಿತ ಮಾಡುವವನು ವೈಶ್ಯನೆನಿಸುವನು. ಹೊಟ್ಟೆಗಾಗಿ ಎಂತಹ ಕೆಲಸವನ್ನಾದರೂ ಮಾಡುವ, ರುಚಿ ಹತ್ತಿದ್ದನ್ನೆಲ್ಲ ತಿನ್ನುವ ಆಚಾರ - ವಿಚಾರಗಳ ನಿರ್ಬಂಧವಿಲ್ಲದ, ಶುಚಿತ್ವವಿಲ್ಲದ,

ವೇದ ಶಾಸ್ತ್ರಗಳನ್ನು ತ್ಯಜಿಸಿದವನು ಶೂದ್ರನೆನಿಸುತ್ತಾನೆ. ಸ್ವೈರಾಚಾರ ಲೋಭ ಮತು ಸಿಟ್ಟು ಇವು ಮೂರು ಮನುಷ್ಯನಿಗೆ ವೈರಿಗಳು. ಮಾನವನ ಶ್ರೇಯಸ್ಸನ್ನು ಘಾತ ಮಾಡಲು ಇವು ಮೂರು ಹೊರಟಿರುತ್ತವೆ. ಸರ್ವ ಪ್ರಯತ್ನದಿಂದ ಇವುಗಳನ್ನುನಿಗ್ರಹ ಮಾಡಬೇಕು. ಮಾಡದಿದ್ದರೆ ಬ್ರಾಹ್ಮಣ ಬ್ರಾಹ್ಮಣನಲ್ಲ, ಶೂದ್ರ ಶೂದ್ರನಲ್ಲ.

ನಿತ್ಯಕ್ರೋಧಾಚ್ಛ್ರಿಯಂ ರಕ್ಷೇತ್ತಪೋರ ಕ್ಷೇತು ಮತ್ಸರಾತ್ ।
ವಿದ್ಯಾಂ ಮಾನಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥

ಯಾವಾಗಲೂ ಸಂಪತ್ತನ್ನು ಕ್ರೋಧದ ದೆಶೆಯಿಂದ ರಕ್ಷಿಸಬೇಕು. ಎಂದರೆ ಸಿಟ್ಟು ಮನುಷ್ಯನನ್ನು ಹಾಳುಮಾಡುವದು. ಆದುದರಿಂದ ಅದನ್ನು ಬಿಡುವದರಿಂದ ಕ್ಷೇಮ. ಮಾತ್ಸರ್ಯದಿಂದ ತಪಸ್ಸನ್ನು ಕಾಪಾಡಬೇಕು. ಅದರಂತೆ ಮಾನಾಪಮಾನಗಳಿಂದ ವಿದ್ಯೆಯನ್ನು, ದೋಷಗಳಿಂದ ಆತ್ಮನನ್ನು ರಕ್ಷಿಸಬೇಕು. ಯಾವನ ಸಕಲ ಕಾರ್ಯಗಳು ಫಲೇಚ್ಛಾರಹಿತ ವಾಗಿವೆಯೋ ಮತ್ತು ಯಾವನು ಸರ್ವಸ್ವವನ್ನು ಪರಮಾತ್ಮನಿಗೆ ಅರ್ಪಿಸಿರುವನೋ ಅವನಿಗೆ ತ್ಯಾಗಿ ಎಂದು ಜ್ಞಾನಿಗಳು ಹೇಳುತ್ತಾರೆ. ತ್ಯಾಗಿಯು ಯಾವ ಪ್ರಾಣಿಗಳನ್ನೂ ಹಿಂಸಿಸದೇ ಎಲ್ಲರೊಡನೆ ಪ್ರೀತಿಯಿಂದಲೇ ಇರಬೇಕು. ದಾನವನ್ನು ಸ್ವೀಕರಿಸಬಾರದು. ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡಿರಬೇಕು.

**ಭಾರದ್ವಾಜ:-** ಧರ್ಮದ ಲಕ್ಷಣವೇನು? ಯಾವ ಧರ್ಮಾಚರಣೆಯು ಯಾರಿಗೆ ವಿಹಿತ? ಧರ್ಮ ಎಷ್ಟು ವಿಧ? ಮುಂತಾವುಗಳನ್ನು ತಿಳಿಸಿರಿ.

**ಭೃಗು:-** ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮಗಳ ಆಚರಣೆಯಿಂದ ಮನುಷ್ಯನಿಗೆ ಸ್ವರ್ಗ ದೊರಕುವದು. ತನಗೆ ವಿಹಿತ ಕರ್ಮಾಚರಣೆ, ಧರ್ಮಾಚರಣೆ ಮಾಡದಿದ್ದರೆ ಆ ಮನುಷ್ಯನು ದುಃಖಕ್ಕೆ ಈಡಾಗುವನು.

**ಭಾರದ್ವಾಜ:-** ನಾಲ್ಕು ಆಶ್ರಮಗಳ ಜನರಿಗೂ ವಿಹಿತವಾದ ಕರ್ಮ, ಧರ್ಮಗಳನ್ನು ಹೇಳಿರಿ.

**ಭೃಗು:-**ಪೂರ್ವದಲ್ಲಿಯೇಬ್ರಹ್ಮದೇವರು ಧರ್ಮರಕ್ಷಣೆಗಾಗಿ ನಾಲ್ಕು ಆಶ್ರಮಗಳನ್ನು ವಿಧಿಸಿದ್ದಾರೆ.

**ಬ್ರಹ್ಮಚರ್ಯಾಶ್ರಮ:-** ಬಾಲ್ಯದಲ್ಲಿ ಗುರುಕುಲದಲ್ಲಿದ್ದು ಅಧ್ಯಯನ ಮಾಡಬೇಕು. ಗುರುಕುಲದಲ್ಲಿ ಇರುವಾಗ ಶೌಚ, ಸಂಸ್ಕಾರ, ವ್ರತ, ಎರಡೂ ಹೊತು ಸಂಧ್ಯಾವಂದನೆ, ಅಗ್ನಿಕಾರ್ಯ, ವೇದಾಭ್ಯಾಸ, ತ್ರಿಕಾಲ ಸ್ನಾನ, ಬ್ರಹ್ಮಚರ್ಯ, ಗುರುಸೇವೆ, ನಿತ್ಯಭಿಕ್ಷೆ, ಗುರುವಂದನೆ ಮುಂತಾವುಗಳನ್ನು ಮಾಡಬೇಕು.

**ಗೃಹಸ್ಥಾಶ್ರಮ:-** ಈ ಆಶ್ರಮದ ಲಕ್ಷಣಗಳು ಇಂತಿವೆ. ವೇದಾಧ್ಯಯನ ಮುಗಿದ ಬಳಿಕ ವಿವಾಹ ಮಾಡಿಕೊಂಡು, ಪರಿಶುದ್ಧ ಕರ್ಮದಿಂದ ದ್ರವ್ಯ ಸಂಪಾದನೆ ಮಾಡಿ ಬ್ರಹ್ಮಚಾರಿ, ಸನ್ಯಾಸಿ ಮುಂತಾದ ಎಲ್ಲ ವರ್ಣ ಜಾತಿಯವರಿಗೆ ಆಶ್ರಯವಿತ್ತು ಪುಣ್ಯ ಕರ್ಮಾನುಷ್ಠಾನ ಮಾಡಬೇಕು.

**ವಾನಪ್ರಸ್ಥಾಶ್ರಮ:-** ಈ ಆಶ್ರಮದಲ್ಲಿ ಮನುಷ್ಯ ಪಥ್ಯಾಹಾರ, ವೇದಾಧ್ಯಯನ, ತೀರ್ಥಯಾತ್ರೆ, ಅಸೂಯಾರಾಹಿತ್ಯ ಮುಂತಾದ ಗುಣಗಳನ್ನು ಸಾಧಿಸಿಕೊಂಡು, ಅಧ್ಯಾತ್ಮಪರ ನಾಗಿ ಇರಬೇಕು. ಇಂತಹ ವಾನಪ್ರಸ್ಥಾಶ್ರಮಿಗಳನ್ನು ಗೃಹಸ್ಥರು ಅತ್ಯಾದರ ದಿಂದ ಸ್ವಾಗತಿಸಬೇಕು. ಮತು ಅವರಿಗೆ ಜೀವನಕ್ಕೆ ಅವಶ್ಯಕವಾದ ದ್ರವ್ಯವನ್ನು (ಹಣ, ಪಾತ್ರೆ, ಬಟ್ಟೆ)

ಗೃಹಸ್ಥರು ಒದಗಿಸಬೇಕು. ಇದರಂತೆ ಸನ್ಯಾಸಿಗಳಿಗೂ ಬ್ರಹ್ಮಚಾರಿಗಳಿಗೂ ಗೃಹಸ್ಥರೇ ತಾವು ಗಳಿಸಿದ ಹಣದಲ್ಲಿ ಭಿಕ್ಷೆ, ಬಲಿ ರೂಪದಿಂದ ವಿಭಾಗಿಸಿ ಕೆಲವೊಂದು ಭಾಗ ನೀಡಬೇಕು. ಆದುದರಿಂದಲೇ ಎಲ್ಲ ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಮೂಲವೆಂದು ಹೇಳುತ್ತಾರೆ.

**ತದ್ಧಿ ಗಾರ್ಹಸ್ಥ್ಯಂ ಸರ್ವಾಶ್ರ ಮಾಣಾಂ ಮೂಲಮುದಾಹರಂತಿ । ಗುರುಕುಲ ನಿವಾಸಿನಃ ।**
**ಪರಿವ್ರಾಜಕಾ ಯೇಽನ್ಯೇ ಸಂಕಲ್ಪಿತವ್ರತನಿಯಮಧರ್ಮಾನುಷ್ಠಾನಃ ॥ ತೇಷಾಮಪ್ಯಂತರಾ ಚ**
**ಭಿಕ್ಷಾಪಾಬಲಿಸಂವಿಭಾಗಾಃ ಪ್ರವರ್ತಂತೇ ॥**
**ವಾನಪ್ರಸ್ಥಾನಾಂ ಚ ದ್ರವ್ಯೋಪಸ್ಕಾರ ಇತಿ । ಪ್ರಾಯಶಃ ಖಲ್ವೇತೇ ಸಾಧವಃ**
**ಸಾಧುಪಥ್ಯೋದನಾಃ ಸ್ವಾಧ್ಯಾಯಪ್ರಸಂಗಿನ : ತೇಷಾಂ**
**ಪ್ರತ್ಯುತ್ಥಾನಾಭಿಗಮನಾನಸೂಯಾವಾಕ್ಯದಾನ ।**
**ಸುಖಸತ್ಕಾರಾಸನ ಸುಖಶಯನಾಭವರಾಹಸತ್ಕ್ರಿಯಾ ಚೇತಿ ॥**

**ಸನ್ಯಾಸಾಶ್ರಮ:-** ಸಾಧುಗಳಾದ ಬ್ರಹ್ಮವಾದಿಗಳು, ಸನ್ಯಾಸಿಗಳು, ವಾನಪ್ರಸ್ಥರು ಅನಿಷಿದ್ಧವಾದ ಆಹಾರ ಸ್ವೀಕರಿಸುತ್ತ, ಪಾಠಪ್ರವಚನ, ಉಪನ್ಯಾಸಾದಿಗಳಿಂದ ಜನರಿಗೆ ಜ್ಞಾನದಾನ ಮಾಡುತ್ತ, ಪುಣ್ಯಕ್ಷೇತ್ರ, ತೀರ್ಥಯಾತ್ರೆಗಳ ಉದ್ದೇಶದಿಂದ ದೇಶದಲ್ಲಿ ಸಂಚಾರ ಮಾಡುತ್ತಿರುತ್ತಾರೆ. ಅಂತಹ, ಬ್ರಹ್ಮಚಾರಿ ಅಥವಾ ಸನ್ಯಾಸಿ ವಾನಪ್ರಸ್ಥರು ತಮ್ಮ ಊರು ಅಥವಾ ಮನೆಗೆ ಬಂದರೆ ಅಂತಹವರಿಗೆ ಮೇಲೆದ್ದು ಸ್ವಾಗತ ಮಾಡಬೇಕು. ಆದರದ ಆತಿಥ್ಯ ನೀಡಬೇಕು. ಅಸೂಯೆ ಇಲ್ಲದೆ ವಿನಯದ ವಾಕ್ಯಗಳಿಂದ ಅವರನ್ನು ಬರಮಾಡಿಕೊಂಡು, ಉಚ್ಚ ಆಸನದಲ್ಲಿ ಕೂಡಿಸಿ, ಸತ್ಕರಿಸಬೇಕು. ಅವರಿಗೆ ತೃಪ್ತಿಯಾಗುವಂತೆ ಊಟ, ಉಪಹಾರ, ಉಪಚಾರ, ಹಾಸಿಗೆ, ಹೊದಿಕೆ ಮುಂತಾದವುಗಳಿಂದ ಗೌರವಿಸಬೇಕು. ಯೋಗ್ಯರಾದ ಅತಿಥಿಗಳು ಮನೆಗೆ ಬಂದು, ಆತಿಥ್ಯ ಹೊಂದದೇ ಆಶಾಭಗ್ನರಾಗಿ ಮನೆಯಿಂದ ತಿರುಗಿ ಹೋದರೆ ಅವರ ಪಾಪಗಳು ಯಜಮಾನನಿಗೆ ಬರುವವು. ಯಜಮಾನನ ಪುಣ್ಯವೆಲ್ಲವೂ ಆ ಅತಿಥಿಗೆ ಹೋಗುವದು. ಎಂದು ಒಂದು ಪ್ರಾಚೀನ ಧರ್ಮಶಾಸ್ತ್ರಶ್ಲೋಕವಿದೆ.

**॥ ಭವತಿ ಚಾತ್ರಶ್ಲೋಕಃ ॥**

**ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ**
**ಸ ದತ್ವಾ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ ॥**

ಆದುದರಿಂದ ಗೃಹಸ್ಥಾಶ್ರಮಿಯು ಅತಿಥಿಗಳನ್ನು ಎಂದೂ ನಿರಾಶರನ್ನಾಗಿ ಮಾಡಿ ಕಳಿಸಬಾರದು. ಈ ಗೃಹಸ್ಥಾಶ್ರಮವು ಒಂದು ಕಾಮಧೇನು ಇದ್ದಂತೆ. ಇದರಲ್ಲಿ ದೇವತೆಗಳನ್ನೂ, ಪಿತೃಗಳನ್ನೂ, ಋಷಿಗಳನ್ನೂ, ಬ್ರಹ್ಮದೇವರನ್ನೂ ನಾವು ಸಂತೋಷಪಡಿಸಬಹುದು.

**ಅಪಿ ಚಾತ್ರ ಯಜ್ಞ ಕ್ರಿಯಾಭಿರ್ದೇವತಾಃ ।**
**ಪ್ರೀಯಂತೇ । ನಿವಾಪೇನ ಪಿತರಃ, ವಿದ್ಯಾಭ್ಯಾಸ ಶ್ರವಣಧಾರಣೇನ ಋಷಯಃ ।**
**ಅಪತ್ಯೋತ್ಪಾದನೇನ ಪ್ರಜಾಪತಿರಿತಿ ॥**

ಈ ಗೃಹಸ್ಥ ಆಶ್ರಮದಲ್ಲಿ ಯಜ್ಞಯಾಗಗಳಿಂದ ದೇವತೆಗಳನ್ನು, ತರ್ಪಣಾದಿಗಳಿಂದ ಪಿತೃಗಳನ್ನು, ವಿದ್ಯಾಭ್ಯಾಸ, ಶ್ರವಣ ಮನನಾದಿಗಳಿಂದ ಋಷಿಗಳನ್ನು, ಸಂತಾನಪಡೆದು ಬ್ರಹ್ಮದೇವರನ್ನು ಇಲ್ಲಿ ಸಂತೋಷಪಡಿಸಬಹುದು. ಮತು ಈ ಆಶ್ರಮದಲ್ಲಿ ಇಷ್ಟೆಲ್ಲ ದೇವತಾ, ಪಿತೃ, ಋಷಿಗಳಿಗೆ ಸಂತೋಷ ಉಂಟುಮಾಡಿ ಪುಣ್ಯಸಾಧನ ಮಾಡಿಕೊಳ್ಳಲು ಬರುವಂತೆ ಲೌಕಿಕವಾದ ವಿವಿಧ ಸುಖಭೋಗಗಳನ್ನು ಅನುಭವಿಸಲು ಸಾಕಷ್ಟು ಅವಕಾಶವಿದೆ. ಉಳಿದ ಆಶ್ರಮಗಳಲ್ಲಿ ಧರ್ಮಶಾಸ್ತ್ರಕಾರರು ಲೌಕಿಕ ಸುಖಭೋಗಕ್ಕೆ ಇಷ್ಟು ಧಾರಾಳವಾಗಿ ಅವಕಾಶಕೊಟ್ಟಿಲ್ಲ. ಈ ಗೃಹಸ್ಥಾಶ್ರಮದಲ್ಲಿ ಮಾತ್ರ ಸುಗಂಧ ಹೂಮಾಲೆ, ಬೇಕಾದ ಆಭರಣ, ಬಗೆ ಬಗೆಯ ಬಟ್ಟೆ, ಬೇಕೆನಿಸಿದಾಗ ಅಭ್ಯಂಗಸ್ನಾನ, ನಿತ್ಯ ಸ್ತ್ರೀ ಸುಖಭೋಗ ಮುಂತಾದವುಗಳನ್ನು ಅನುಭವಿಸಲಿಕ್ಕೂ ಹಾಡು, ಕುಣಿತ, ಮುಂತಾದ ಕಿವಿಗೆ ಇಂಪಾದ ಮಂಜುಳಗಾನ ಕೇಳಲಿಕ್ಕಾಗಿಯೂ, ಕಣ್ಣಿಗೆ ಸುಖವೆನಿಸುವ ವಿಹಿತವಾದ ಮಡದಿ, ಉಪವನ, ಚಿತ್ರ ದೃಶ್ಯ ಮುಂತಾದವುಗಳನ್ನು ನೋಡಲಿಕ್ಕೂ, ನಾಲಿಗೆಗೆ ಹಿತವೆನಿಸುವ ಭಕ್ಷ್ಯ ಭೋಜ್ಯ, ಪೇಯ ಮುಂತಾದ ಬಗೆ ಬಗೆಯ ಪಕ್ವಾನ್ನಗಳನ್ನು ಉಣ್ಣಲಿಕ್ಕೂ, ಉಳಿದ ಯಾವದೇ ಅನಿಷಿದ್ಧವಾದ ಸುಖ ಸೌಭಾಗ್ಯ ಅನುಭವಿಸಲಿಕ್ಕೂ ಈ ಆಶ್ರಮದಲ್ಲಿ ಸಂಪೂರ್ಣ ಅವಕಾಶ ಉಂಟು.

ವಾನಪ್ರಸ್ಥಾಶ್ರಮಿಗಳು ಕೂಡ ಪುಣ್ಯ ತೀರ್ಥ, ಪುಣ್ಯ ಕ್ಷೇತ್ರ ಮುಂತಾದವುಗಳನ್ನು ಸಂಚರಿಸುತ ಘೋರ, ಕ್ರೂರ ಮೃಗಗಳುಳ್ಳ ಅರಣ್ಯದಲ್ಲಿ ಭಗವ ಧ್ಯಾನ ಪರರಾಗಿ ನಿಶ್ಚಿಂತೆಯಿಂದ ವಾಸಮಾಡಬೇಕು. ಇದರಂತೆ ಸನ್ಯಾಸಿಗಳು ಮಡದಿ ಮಕ್ಕಳು, ಮನೆ, ಮಾರು ಮುಂತಾದವುಗಳನ್ನು ತೊರೆದು, ಅವರಲ್ಲಿಯ ಮೋಹ ಬಿಟ್ಟು, ಮಣಿ ಮಣ್ಣು ಕಲ್ಲು ಕಾಂಚನ ಎಲ್ಲ ಒಂದೇ ಎಂದು ಭಾವಿಸಿ, ಯಾವ ಪ್ರಾಣಿಗೂ ಮನಸ್ಸಿನಿಂದಲೂ ಕೃತಿಯಿಂದಲೂ ದ್ರೋಹ ಬಗೆಯದೆ, ಒಂದೇ ಕಡೆಗೆ ನಿಲ್ಲದೆ, ಬೆಟ್ಟ, ಬಯಲು, ದೇವಸ್ಥಾನ ಮುಂತಾದ ಕಡೆ ಸಂಚರಿಸುತ್ತ ನಗರ, ಗ್ರಾಮಗಳಿಗೆ ಎಂದೂ ಬಾರದೆ, ಸಿಟ್ಟು, ಸೊಕ್ಕು, ಆಶೆ, ಮೋಹ, ನಿಂದೆ, ದುರಬಿಮಾನಗಳಿಂದ ದೂರವಾಗಿ ಇರಬೇಕು. ಈ ಮೇಲೆ ಹೇಳಿದ ಸನ್ಯಾಸಿಗಳ ಕರ್ತವ್ಯ ಹಾಗೂ ಧರ್ಮಗಳನ್ನು ಸುಂದರವಾದ ಸಂಸ್ಕೃತ ಗದ್ಯದಲ್ಲಿ ನಾರದ ಪುರಾಣದಲ್ಲಿ ಹೇಳಿದ್ದಾರೆ. ಅದರ ಅರ್ಥವನ್ನು ಈವರೆಗೆ ವಿವರಿಸಲಾಗಿದೆ. ಮೂಲ ಸಂಸ್ಕೃತಗದ್ಯ ಕೆಳಗೆ ಕೊಡಲಾಗಿದೆ.

ಪರಿವ್ರಾಜಕಾನಾಂ ಪುನರಾಚಾರಸ್ತದ್ಯಥಾ -
ವಿಮುಚ್ಯಾಗ್ನಿಂ ಧಮಕಲತ್ರಪರಿಬರ್ಹಸಂಗೇಷ್ವಾತ್ಮನಃ ಸ್ನೇಹಪಾಶಾನವಧೂಯ
ಪರಿವ್ರಜಂತಿ - ಸಮಲೋಷ್ಟಾಶ್ಮಕಾಂಚನಾಸ್ತ್ರೀವರ್ಗ ಪ್ರವೃತ್ತೇಷ್ವಸಕ್ತಬುದ್ಧಯಃ
ಅಪರಿಮಿತೋದಾಸೀನಾನಾಂ ತುಲ್ಯ ದರ್ಶನಾಃ ಸ್ಥಾವರಜರಾಯಜಾಂಡಜ
ಸ್ವೇದಜಾನಾಂ ಭೂತಾನಾಂ ವಾಙ್ಮನಃ ಕರ್ಮಭಿರನಭಿದ್ರೋಹಿಣೋಽ
ನಿಕೇತಾಃ ಪರ್ವತ ವುಲಿನ ವಕ್ಷಮೂಲ
ದೇವಾಯತನಾನ್ಯನುಸಂಚರಂತೋ ವಾಸಾರ್ಥಂ ಮುಪೇಯುರ್ನಗರಂ
ಗ್ರಾಮಂ ವಾ ನ ಕ್ರೋಧ ದರ್ಪಲೋಭ ಮೋಹಕಾರ್ಪಣ್ಯದಂಭ
ಪರಿವಾದಾಭಿಮಾನಾ ನಿವೃತ್ತ ಹಿಂಸಾ ಇತಿ ॥

ಈ ಎಲ್ಲ ಆಶ್ರಮದವರಿಗೂ ಸಾಮಾನ್ಯವಾದ ಒಂದು ತಪಸ್ಸೆಂದರೆ -

**ಅವಜ್ಞಾನಮಹಂಕಾರಂ ದಂಭಂಚೈವ ವಿವರ್ಜಯೇತ್ ।**
**ಅಹಿಂಸಾ ಸತ್ಯಮಕ್ರೋಧಃ ಸರ್ವಾಶ್ರಮ ಗತಂ ತಪಃ ॥**

ಅವಜ್ಞಾನ ಎಂದರೆ ಇತರರ ತಿರಸ್ಕಾರ ಗರ್ವ ಮತ್ತು ಜಂಭ ಇವುಗಳನ್ನು ಬಿಡಬೇಕು. ಅಹಿಂಸೆ, ಸತ್ಯ, ಅಕ್ರೋಧ ಇವುಗಳು ಉಚಿತವಾದ ಗುಣಧರ್ಮಗಳು. ಇವುಗಳನ್ನು ಆಚರಿಸಬೇಕು.

ನಾರದ ಮಹಾಪುರಾಣದಲ್ಲಿ ನಲವತ್ತೂರನೆಯ ಅಧ್ಯಾಯ ಮುಗಿದುದು



## ಮೋಕ್ಷಶಾಸ್ತ್ರ ನಿರೂಪಣೆ

ಅಧ್ಯಾಯ - ೪೪

**ಭಾರದ್ವಾಜ:-** ಈ ಲೋಕಕ್ಕಿಂತ ಬೇರೆಯಾದ ಒಂದು ಶ್ರೇಷ್ಠ ಲೋಕವಿದೆ ಎಂದು ನಾನು ಕೇಳಿದ್ದೇನೆ. ಆದರೆ ಅದು ಎಲ್ಲಿಯೂ ಕಾಣಿಸುವುದಿಲ್ಲ. ಹಾಗೂ ದೊರಕುವುದಿಲ್ಲ. ಅದು ಯಾವುದು? ಎಲ್ಲಿದೆ? ಇದನ್ನೆಲ್ಲ ತಾವು ತಿಳಿಸಿ ಹೇಳಬೇಕು.

**ಭೃಗು:-** ಪುಣ್ಯಭೂಮಿಯಾದ ಈ ಭರತ ಖಂಡದ ಉತ್ತರಕ್ಕೆ ಹಿಮಾಲಯ ಪರ್ವತದ ಶ್ರೇಣಿಯಲ್ಲಿ ಶ್ರೇಷ್ಠವಾದ ಎಲ್ಲರೂ ಬಯಸುವ ಆ ಉತ್ತಮ ಲೋಕವಿರುತ್ತದೆ. ಪಾಪಮಾಡದಿರುವ ಶುಚಿರ್ಭೂತರಾದ ನಿರುಪದ್ರವಿ ಮಾನವರು ಅಲ್ಲಿರುವರು. ಸ್ವರ್ಗಕ್ಕೆ ಸಮಾನವಾಗಿದೆ ಆ ದೇಶ. ಅಲ್ಲಿ ಆ ಕಾಲದಲ್ಲಿ ಮೃತ್ಯುವಿಲ್ಲ. ಬೇನೆಗಳು ಬರುವದಿಲ್ಲ. ಪರಸ್ತ್ರೀಯರನ್ನು ಯಾರೂ ಕಣ್ಣೆತ್ತಿ ನೋಡುವದಿಲ್ಲ. ತಮ್ಮ ಮಡದಿಯರಲ್ಲಿ ಪ್ರೇಮವನ್ನು ಬಿಡುವದಿಲ್ಲ, ಯಾವ ಪ್ರಾಣಿಯ ಹಿಂಸೆಯೂ ಅವರಲ್ಲಿಲ್ಲ. ಹಣವನ್ನಂತೂಕೇಳುವವರಿಲ್ಲ. ಅಲ್ಲಿ ಇರುವವರಿಗೆಲ್ಲ ದೊಡ್ಡ ದೊಡ್ಡ ಅರಮನೆಯಂತಹ ಮನೆಗಳು. ಅಲ್ಲಿ ಮೃದುವಾದ ಆಸನ, ಪೀಠ ಉಪಕರಣಗಳು, ಪ್ರತಿದಿನವೂ ಇಚ್ಛಾಭೋಜನ. ಬಯಸಿದ್ದೆಲ್ಲ ಕೊಡುವರು, ಎಲ್ಲರೂ ಬಂಗಾರದ ಆಭರಣಗಳನ್ನು ಹಾಕಿಕೊಂಡು ಶೃಂಗಾರಿತರಾಗಿರುತ್ತಾರೆ. ಆದರೆ ನಾವು ಇರುವ ಈ ಲೋಕದಲ್ಲಿ ಎಲ್ಲವೂ ಅದಕ್ಕೆ ವಿಪರೀತ. ಇಲ್ಲಿ ಕೆಲವರು ಧರ್ಮಪರರು ಹಲವರು ಅಧರ್ಮಿಗಳು, ಕೆಲವರು ಬಡವರು ಉಳಿದವರು ಸಿರಿವಂತರು, ಪರರ ಛಿದ್ರ ಹುಡುಕುವದು, ಕಪಟ, ಕಳವು, ಹೊಟ್ಟೆ ಕಿಚ್ಚು, ಪರೋಪದ್ರವ, ಹಿಂಸೆ, ಚಾಡಿಹೇಳುವದು, ಇವೇ ಅನೇಕ ಜನರ ಸ್ವಭಾವವಾಗಿದೆ. ಇಲ್ಲಿರುವವರಿಗೆ ಶ್ರಮ, ಭಯ, ಅಜ್ಞಾನ ಹೆಚ್ಚು ಉಂಟಾಗುವವು. ಎಲ್ಲರೂ ದುಡ್ಡಿಗಾಗಿ ಆಶೆ ಪಡುವವರೇ. ಎಲ್ಲ ಲೋಕಗಳಲ್ಲಿ ಇದೇ ಕರ್ಮಭೂಮಿ. ಶುಭಾಶುಭ ಕರ್ಮಗಳನ್ನು ಇಲ್ಲಿ ಮಾಡಿಯೇ ಜನರು ಪುಣ್ಯ ಪಾಪಗಳನ್ನು ಹೊಂದುತ್ತಾರೆ. ಪೃಥ್ವಿಯ ಮೇಲಿನ ಉತ್ತರ ಭಾಗವು ಪುಣ್ಯಲೋಕ ಎನಿಸುತ್ತದೆ. ಇಲ್ಲಿ ಪುಣ್ಯ ಮಾಡಿದ ಜನರು ಅಲ್ಲಿ ಹುಟ್ಟಿ ಪುಣ್ಯ ಫಲೋಪ ಭೋಗವನ್ನು ಅನುಭವಿಸುವರು. ಅಲ್ಲಿ ಆ ಉತ್ತಮ ಲೋಕದಲ್ಲಿ ಗೌರವ, ಸುಖ, ಭಾಗ್ಯ, ಬಯಸುವವರು ಈ ಭರತ ಖಂಡದಲ್ಲಿ ತಿರ್ಯಕ್ ಜಂತುಗಳಾಗಿ ಹುಟ್ಟಲು ಬಯಸುತ್ತಾರೆ. ಆದುದರಿಂದ ಮೇಲಿನ ಲೋಕಗಳಲ್ಲಿಯೂ ಇಲ್ಲಿಯೇ ಪೃಥ್ವಿಯಲ್ಲಿರುವ ಹಿಮವತ್ಪಾರ್ಶ್ವದ ಉತ್ತಮ ಲೋಕಗಳಲ್ಲಿಯೂ ಪ್ರಶಾಂತಿ ಪಡೆಯ ಬಯಸುವವರು ಈ ಕರ್ಮಭೂಮಿಯಲ್ಲಿ ವಿಹಿತ ಕರ್ಮಾನುಷ್ಠಾನ ಮಾಡಿ ಪರಮಾತ್ಮನ ಪರಮಾನುಗ್ರಹ ಪಡೆಯಬೇಕು.

**ಭಾರದ್ವಾಜ :** ತಪೋಧನರೆ, ಪ್ರಾಜ್ಞರಾದ ಮಾನವರು ಚಿಂತಿಸುವ ಅಧ್ಯಾತ್ಮ ಎಂದರೆ ಏನು? ಅದು ಹೇಗೆ ಅದನ್ನೆಲ್ಲ ಹೇಳಿರಿ.

**ಭೃಗು:-** ಈ ಅಧ್ಯಾತ್ಮವು ನಿಜವಾಗಿಯೂ ಎಲ್ಲರಿಗೂ ಅತ್ಯಂತ ಶ್ರೇಯಸ್ಕರವಾದದ್ದು. ಇದರ ಸರಿಯಾದ ಪರಿಜ್ಞಾನವಾದರೆ ದಿವ್ಯಫಲವಾಗುವದು. ಹಿಂದಿನ ಆಚಾರ್ಯರು ಉಪದೇಶಿಸಿದ ಆ ಅಧ್ಯಾತ್ಮ ವಿಷಯವನ್ನು ನಿನಗೆ ನಾನು ತಿಳಿಸಿ ಹೇಳುತ್ತೇನೆ ಕೇಳು. ಈ ಪಂಚಮಹಾಭೂತಗಳು ಇವುಗಳಿಂದ ಉತ್ಪನ್ನವಾದ ಎಲ್ಲ ವಸ್ತುಗಳು ಅವುಗಳಲ್ಲಿಯೇ ಲಯವನ್ನು ಹೊಂದುತ್ತವೆ. ಸಮುದ್ರದಲ್ಲಿ ಉದ್ಭವಿಸಿದ ತೆರೆಗಳು ಅದೇ ಸಾಗರದ ನೀರಿನಲ್ಲಿ ಕರಗಿಹೋಗುವದಿಲ್ಲವೆ? ಅದರಂತೆ ಆಮೆಯು ಪಸರಿಸಿದ ತನ್ನ ಅಂಗಾಂಗಳನ್ನು ಸೆಳೆದುಕೊಂಡು ತನ್ನಲ್ಲಿಯೇ ಆಕುಂಚನಗೊಳಿಸುವಂತೆ ಪರಮಾತ್ಮನು ಈ ಪ್ರಪಂಚವನ್ನೆಲ್ಲ ಸೃಷ್ಟಿಸಿ, ಅದೆಲ್ಲವೂ ತನ್ನಲ್ಲಿ ಪುನಃ ವಿಲೀನವಾಗುವಂತೆ ಮಾಡುತ್ತಾನೆ.

ಆ ಜಗದ್ವೀಶ್ವರನು ಎಲ್ಲ ಪ್ರಾಣಿಗಳಲ್ಲಿಯೂ ಪಂಚಮಹಾ ಭೂತಗಳನ್ನೇ ಸಂಯೋಜನಮಾಡಿ ಸೃಷ್ಟಿ, ಸ್ಥಿತಿಗಳ ವ್ಯವಸ್ಥೆಯನ್ನು ಕೈಗೊಂಡಿರುವನು. ಇದು ಜೀವನಿಗೆ ಗೋಚರವಾಗುವದಿಲ್ಲ. ಶಬ್ದ ಅದನ್ನು ಕೇಳುವ ಕಿವಿ ಮತ್ತು ಶೋತ್ರೇಂದ್ರಿಯ ಇವು ಆಕಾಶ ಸಂಬಂಧಿಗಳಾಗಿವೆ. ಚೇಷ್ಟೆ ಮುಂತಾದವುಗಳು ವಾಯು ಸಂಬಂಧಗಳಾಗಿವೆ. ಕಣ್ಣು ಮತ್ತು ಚಕ್ಷುರಿಂದ್ರಿಯ ರೂಪ ಇವು ಮೂರು ತೇಜಸ್ಸಂಬಂಧಿಗಳು. ರಸ, ನಾಲಿಗೆ, ಸ್ವೇದ ಇವು ಮೂರು ಜಲ ಸಂಬಂಧಿಗಳು. ಘ್ರಾಣೇಂದ್ರಿಯ ಗಂಧ ಮತ್ತು ಶರೀರ ಇವು ಭೂಮಿಗೆ ಸಂಬಂಧಿಸಿದವುಗಳು. ಈ ಪಂಚಮಹಾಭೂತಗಳಲ್ಲದೆ ಮನಸ್ಸು ಆರನೆಯದು. ಬುದ್ಧಿ ಏಳನೇಯದು, ಕ್ಷೇತ್ರಜ್ಞನು ಎಂಟನೆಯವನೆಂದು ಜ್ಞಾನಿಗಳು ತಿಳಿಸುತ್ತಾರೆ. ಈ ಪಂಚಮಹಾಭೂತಗಳು ಅವುಗಳ ಗುಣಗಳಾದ ತನ್ಮಾತ್ರಗಳು ಮತ್ತು ಆಯಾ ಇಂದ್ರಿಯಗಳಿಗೆ ಒಂದೊಂದು ಪ್ರಯೋಜನವಿದೆ. ಆಕಾಶದ ಗುಣವಾದ ಶಬ್ದವನ್ನು ಕೇಳಲು ಕಿವಿ ಹಾಗೂ ಶೋತ್ರೇಂದ್ರಿಯ. ಸ್ಪರ್ಶವನ್ನು ಗುರುತಿಸಲು ತೊಗಲು, ತ್ವಚ ಇಂದ್ರಿಯ. ಜಲದ ಗುಣವಾದ ರಸವನ್ನು ತಿಳಿಯಲು ನಾಲಿಗೆ ಮತ್ತು ರಸೇಂದ್ರಿಯ, ಭೂಮಿಯ ಗುಣವಾದ ಗಂಧವನ್ನು ಆಘ್ರಾಣ ಮಾಡಲು ಮೂಗು ಮತ್ತು ಘ್ರಾಣೇಂದ್ರಿಯ. ಮತ್ತು ನೋಡಲು ಕಣ್ಣು ಮತ್ತು ಚಕ್ಷುಕಂದ್ರಿಯ. ಮಾನವನಿಗೆ ಹಿತಾಹಿತ ವಿಚಾರ ಮಾಡಲು ಮನಸ್ಸು ಸಾಧನವಾಗಿದೆ. ನಿಶ್ಚಯಾತ್ಮಕ ಜ್ಞಾನ ಹುಟ್ಟಿಸುವದು ಬುದ್ಧಿಯ ಕಾರ್ಯ. ಇವೆಲ್ಲದಕ್ಕೂ ಸಾಕ್ಷಿಯಾಗಿ ಕ್ಷೇತ್ರಜ್ಞನಾದ ಪರಮಾತ್ಮನು ವ್ಯವಸ್ಥಿತನಾಗಿದ್ದಾನೆ. ಮತ್ತು ಆ ಕ್ಷೇತ್ರಜ್ಞನಾಮಕ ಪರಮಾತ್ಮನು ಈ ಜಗದಂಡ ಮಂಡಲವನ್ನು ವ್ಯಾಪಿಸಿದ್ದಾನೆ. ಅದೇ ಪರಮಾತ್ಮನು ದೇಹದಲ್ಲಿಯೂ ಇದ್ದು, ಜೀವಾತ್ಮನನ್ನು ನಿಯಮಿಸುತ್ತಾನೆ.

ದೇಹಸಂಬಂಧಿಯಾದ ಸುಖ-ದುಃಖಾದಿಗಳು ಜೀವಾತ್ಮನಿಗೆ ಸಂಬಂಧಿಸಿದರೂ ಅಲ್ಲಿಯೇ ಇದ್ದ ಕ್ಷೇತ್ರಜ್ಞನಾದ ಪರಮಾತ್ಮನಿಗೆ ಮಾತ್ರ ಲೇಪಿಸುವದಿಲ್ಲ. ಜ್ಞಾನಿಯಾದವನು ಇಂದ್ರಿಯಗಳನ್ನು ಜಯಿಸಬೇಕು. ಸರ್ವ ಪ್ರಾಣಿಗಳಿಗೂ ಸಾತ್ವಿಕ ರಾಜಸ, ತಾಮಸ ಎಂದು ಮೂರು ವಿಧವಾದ ಅನುಭವಗಳು ಬರುತ್ತವೆ. ಸತ್ವಗುಣದಿಂದ ಸುಖಾನುಭವ, ರಜೋಗುಣದಿಂದ ದುಃಖಾನುಭವ, ಮೋಹಕಾರಕವಾದ ಬುದ್ಧಿಭ್ರಮೆಯನ್ನುಂಟು ಮಾಡುವ ಅನುಭವಗಳು ತಮೋಗುಣದಿಂದಲೂ ಉತ್ಪನ್ನವಾಗುವವು.

ಆನಂದ ಸ್ನೇಹ, ಶಾಂತಿ, ಸಮಾಧಾನ, ಪ್ರೇಮ ಇವು ಸಾತ್ವಿಕ ಗುಣಗಳು. ಅಸಂತೋಷ, ಅತೃಪ್ತಿ, ಲೋಭ, ದುಃಖ ಮುಂತಾದವು ರಜೋಗುಣದ ಚಿನ್ಹಗಳು, ಅಪಮಾನ, ಅಜ್ಞಾನ, ಮೋಹ, ಮತಿಭ್ರಮೆ, ಸ್ವಪ್ನ ಆಲಸ್ಯಗಳು ತಮೋಗುಣಗಳು ಎಂದು ತಿಳಿಯಬೇಕು.

ಈ ಗುಣ ತ್ರಯಾತ್ಮಕ ಸುಖ-ದುಃಖಾದಿಗಳು ಪ್ರಕೃತಿಜನ್ಯವಾದುದರಿಂದ ಪ್ರಾಕೃತ ಎನಿಸಿಕೊಳ್ಳುತ್ತವೆ. ಈ ಪ್ರಾಕೃತ ಭಾವವು ಜೀವನಿಗೆ ಅವನ ಪೂರ್ವ ಕರ್ಮಾನುಸಾರವಾಗಿ ಪ್ರಾಪ್ತವಾಗುತ್ತದೆ. ಅವರ ಪ್ರಾರಬ್ಧಕರ್ಮಾನುಸಾರವಾಗಿ ಇವುಗಳನ್ನು ಜೀವನ ಅನುಭವಕ್ಕೆ ಒದಗಿಸುವವನು ಆದೇ ಕ್ಷೇತ್ರಜ್ಞನಾಮಕವಾದ ಪರಮಾತ್ಮ. ಪ್ರಾಕೃತ ಕರ್ಮಗಳನ್ನು ಬಿಟ್ಟು ನಿತ್ಯವೂ ಆತ್ಮೋಪಾಸನೆಯಲ್ಲಿ ಆಸಕ್ತನಾದ ಜ್ಞಾನಿಯು ಸರ್ವಭೂತಾತ್ಮಭೂತನಾದ ಶ್ರೀ ಹರಿಯ ಅನುಗ್ರಹವನ್ನು ಪಡೆದು ಉತ್ತಮಗತಿ ಹೊಂದುವನು. ನೀರಲ್ಲಿ ಸಂಚರಿಸುವ ಪಕ್ಷಿಯು ನೀರಿನಿಂದ ಅಲಿಪ್ತವಾಗಿಯೇ ತನ್ನ ಗತಿಯನ್ನು ಸಾಧಿಸಿಕೊಳ್ಳುವಂತೆ ಸಂಸಾರದಲ್ಲಿದ್ದರೂ ಪ್ರಕೃತಿಜನ್ಯವಾದ ಶರೀರದಲ್ಲಿ ಸತ್ವಾದಿ ಗುಣಜನ್ಯವಾದ ವಿಷಯ ಸಂಪರ್ಕವಿದ್ದರೂ ಜ್ಞಾನಿಯು ಅವುಗಳನ್ನು ಹಚ್ಚಿಕೊಳ್ಳದೆ ನಿರ್ಲಿಪ್ತನಾಗಿ ಇರುತ್ತಾನೆ. ದೇಹ ಕೊಳೆಯಾದವರು ನೀರು ತುಂಬಿದ ಹೊಳೆಯಲ್ಲಿ ಸ್ನಾನ ಮಾಡಿ ಶುದ್ಧರಾಗುವಂತೆ ವಿದ್ವಾಂಸರು ಜ್ಞಾನ ತರಂಗಿಣಿಯಲ್ಲಿ ಅವಗಾಹನ ಮಾಡಿ ಪರಿಶುದ್ಧರಾಗುವರು. ಧರ್ಮ, ಅರ್ಥ, ಕಾಮಗಳೆಂಬ ಮೂರು ವಿಧ ಪುರುಷಾರ್ಥಗಳಿಗಿಂತ ಶ್ರೇಷ್ಠವಾದ ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಸಾಧಿಸಿ ಜನ್ಮಸಾರ್ಥಕಗೊಳಿಸುವರು. ಕಣ್ಣೆದುರು ಇದ್ದರೂ ಅವುಗಳನ್ನು ಉಪೇಕ್ಷಿಸಿ, ಭಗವಂತನನ್ನೇ ಹುಡುಕಿಕೊಂಡು ಧ್ಯಾನಗೈಯುವವನು ತತ್ವಜ್ಞಾನಿ ಎನಿಸುವನು. ಫಲಾಶೆ ಇಲ್ಲದೆ ಮಾಡಿದ ಕರ್ಮವು ಹಿಂದೆ ಮಾಡಿದ ಕರ್ಮಗಳಿಂದ ಉಂಟಾಗಬಹುದಾದ ದುಃಖಗಳ ಸಂಬಂಧವನ್ನೇ ತಪ್ಪಿಸಿ ಬಿಡುತ್ತದೆ.

**ಭಾರದ್ವಾಜ :-** ಮನುಷ್ಯನು ಮೂರು ವಿಧ ತಾಪಗಳಿಂದ ಮುಕ್ತನಾಗಿ ಮೋಕ್ಷ, ಹೊಂದಲು ಧ್ಯಾನಯೋಗವೇ ದಿವ್ಯಸಾಧನವಲ್ಲವೆ! ಅಂತಹ ಧ್ಯಾನಯೋಗವನ್ನು ನನಗೆ ನಿರೂಪಿಸಿರಿ.

**ಭೃಗು:-** ಈಗ ನಿನಗೆ ಧ್ಯಾನ ಯೋಗದ ಪ್ರಕಾರವನ್ನು ನಿರೂಪಿಸುತ್ತೇನೆ. ಮಹರ್ಷಿಗಳು ಧ್ಯಾನಯೋಗದಿಂದ ಶಾಶ್ವತಸಿದ್ಧಿಯಾದ ಮೋಕ್ಷವನ್ನು ಪಡೆದಿದ್ದಾರೆ. ಈ ಧ್ಯಾನಯೋಗವನ್ನು ಸರಿಯಾಗಿ ತಿಳಿಯುವದೇ ಜ್ಞಾನಯೋಗ. ಜ್ಞಾನದಿಂದ ತೃಪ್ತರಾದ ಮುನಿಗಳು ಭವ ಬಂಧನದಿಂದ ಮುಕ್ತರಾಗಲು ಪರಮಾತ್ಮನ ಸಂತತ ಧ್ಯಾನವನ್ನು ಮಾಡುವರು. ಪರಬ್ರಹ್ಮನ ಧ್ಯಾನವನ್ನು ಮಾಡುವಾಗ ಸಾಧಕನು ಮೌನವನ್ನು ಆಚರಿಸಬೇಕು. ವಿಷಯಗಳಿಂದ ಇಂದ್ರಿಯಗಳನ್ನು ಸೆಳೆದು ಪರಮಾತ್ಮನಲ್ಲಿ ಕೇಂದ್ರೀಕರಿಸಬೇಕು. ಮನಸ್ಸನ್ನು ದೇವರಲ್ಲಿಯೇ ಸ್ಥಿರವಾಗಿ ನೆಟ್ಟು, ಅಖಂಡ ಧ್ಯಾನ ಮಾಡಬೇಕು. ಕಿವಿಯಿಂದ ಬೇರೆ ವಾಚ್ಯ ಶಬ್ದವನ್ನು ಕೇಳಬಾರದು. ದೇಹದಿಂದ ಬೇರೆ ಸ್ಪರ್ಶ ಪಡೆಯಬಾರದು. ಕಣ್ಣಿನಿಂದ ಬೇರೆ ದೃಶ್ಯಗಳನ್ನು ನೋಡಬಾರದು. ನಾಲಿಗೆ ರುಚಿಯನ್ನು ಪೂರ್ಣ ವರ್ಜಿಸಬೇಕು. ಬೇರಾವುದನ್ನು ದೂಷಿಸಬಾರದು. ಹೀಗೆ ಇಂದ್ರಿಯ ವ್ಯಾಪಾರಗಳನ್ನು ವರ್ಜಿಸಿ, ಅವುಗಳನ್ನು ಅಚೀಚೆ ಹರಿಯದಂತೆ ನಿಯಂತ್ರಿಸಿ ಪರಮಾತ್ಮನನ್ನೇ ತನ್ನ ಸರ್ವೇಂದ್ರಿಯ ಹಾಗೂ ಮನಸ್ಸಿನ ಏಕೈಕ ಲಕ್ಷ್ಯಮಾಡಿಕೊಂಡು ಭಗವದ್ ಧ್ಯಾನ ವ್ರತನಾಗಬೇಕು. ಇದನ್ನು 'ಧ್ಯಾನಯೋಗ' ಎಂದು ವರ್ಣಿಸುವರು. ಹೀಗೆ ಮನಸ್ಸು ಧ್ಯಾನ ಮಾರ್ಗದಲ್ಲಿ ನಿಂತಬಳಿಕ ಶಾಂತವಾಗುತ್ತದೆ. ಈ ತರಹದ ಧ್ಯಾನವನ್ನು

ಸಂತತವಾಗಿ ನಡೆಸಲು ಸಾಧಕನು ಸಮರ್ಥನಾದರೆ ಧಾರಾವಾಹಿಯಾಗಿ ನಿರಂತರ ನಡೆದ ಈ ಧ್ಯಾನಯೋಗದಿಂದ ಮೇಘಮಂಡಲದಲ್ಲಿ ಮಿಂಚು ಸ್ಫುರಿಸುವಂತೆ ಹೃದಯದಲ್ಲಿ ಅಧ್ಯಾತ್ಮ ಜ್ಞಾನ ಜ್ಯೋತಿಯು ಬೆಳಗಿ ಭಗವಂತನ ಸಾಕ್ಷಾತ್ಕಾರವಾಗುವದು ಆ ಪರಮಾತ್ಮನ ಅನುಗ್ರಹದಿಂದ ಧ್ಯಾನಯೋಗಿಗಳು ನಿರ್ದುಷ್ಟವಾದ ಮೋಕ್ಷವನ್ನು ಪಡೆಯುವರು.

ನಾರದ ಮಹಾಪುರಾಣದಲ್ಲಿ ನಲವತ್ತುನಾಲ್ಕನೆಯ ಅಧ್ಯಾಯ ಮುಗಿದುದು

—o—

## ಮಿಥಿಲೆಯಲ್ಲಿ ಪಂಚಶಿಖನಿಂದ ನಾಸ್ತಿಕ್ಯ ಖಂಡನೆ | ಅಧ್ಯಾಯ - ೪೫

**ನಾರದ:-** ಸನಂದನ ಮುನಿವರ್ಯರೆ, ತಾವು ಹೇಳಿದ ಮೋಕ್ಷ ಶಾಸ್ತ್ರವನ್ನು ನಾನು ಕೇಳಿದೆ. ಮತ್ತೆ ಮತ್ತೆ ಕೇಳಿದರೂ ನನಗೆ ತೃಪ್ತಿಯು ಉಂಟಾಗುವದಿಲ್ಲ. ಅವಿದ್ಯಾ ಬಂಧನದಿಂದ ಪಾರಾಗುವ ಆ ಮೋಕ್ಷ ಮಾರ್ಗದ ಬಗ್ಗೆ ಇನ್ನೂ ವಿವರಿಸಿ ಹೇಳಿರಿ.

**ಸನಂದನ:-** ಈ ವಿಷಯದಲ್ಲಿ ಮಿಥಿಲೆಯ ರಾಜನಾದ ಜನಕನು ಮೋಕ್ಷವನ್ನು ಪಡೆದ ಇತಿಹಾಸವನ್ನು ಹೇಳುತ್ತೇನೆ ಕೇಳು. ಮಿಥಿಲಾ ಪಟ್ಟಣದ ಒಡೆಯನಾದ ಜನದೇವ ಎಂಬ ಹೆಸರಿನ ರಾಜನು ಮರಣಾನಂತರದ ಧರ್ಮಗಳನ್ನು ಕುರಿತು ವಿಚಾರತೊಡಗಿದನು. ಜನಕ ವಂಶದಲ್ಲಿ ಹುಟ್ಟಿದ ಈ ಜನದೇವನ ಮನೆಯಲ್ಲಿ ಬಗೆ ಬಗೆಯ ಪಾಷಂಡ ಮತಗಳನ್ನೂ, ನಾಸ್ತಿಕ ವಿಚಾರಗಳನ್ನು ಉಪದೇಶಿಸುವ ನೂರಾರು ಜನ ಆಚಾರ್ಯರು ಪರುಷರು ವಾಸವಾಗಿದ್ದರು.

ಆದರೆ ಆ ಜನಕ ವಂಶದ ಜನದೇವನು. ಜನಕನ ವಂಶದಲ್ಲಿ ಜನಿಸಿ ಅವನಂತೆಯೆ ಜ್ಞಾನಿಯಾದವರಿಂದ ಜನಕರಾಜನೆಂದೇ ಕರೆಯಲ್ಪಡುತ್ತಿದ್ದನು. ವೈದಿಕ ಧರ್ಮದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿದ್ದನು. ನಾಸ್ತಿಕ ಮತದ ಪ್ರಚಾರಕ ಆಚಾರ್ಯರು ಆತ್ಮ ಸ್ವರೂಪ ಪುನರ್ಜನ್ಮ ಮುಂತಾದ ವಿಷಯಗಳಲ್ಲಿ ಎಷ್ಟೇ ನಾಸ್ತಿಕ ವಿಚಾರಗಳನ್ನು ಹೇಳಿದರೂ, ಬೋಧಿಸಿದರೂ ಯಾವದೂ ಆ ಜನದೇವನ ಬುದ್ಧಿಗೆ ಹಿಡಿಯುತ್ತಿರಲಿಲ್ಲ.

ವೇದೋಕ್ತ ಧರ್ಮಗಳಲ್ಲಿ ಅವನಿಗೆ ಅಚಲವಾದ ಶ್ರದ್ಧೆ ಇದ್ದಿತು. ಆದುದರಿಂದ ತನ್ನ ಆಶ್ರಯದಲ್ಲಿರುವ ವೇದವಿರೋಧಿ, ನಾಸ್ತಿಕವಾದಿಗಳು ಕುಯುಕ್ತಿಯುಕ್ತವಾಗಿ ಪ್ರತಿಪಾದಿಸಿದ ಒಂದೂ ತತ್ವವನ್ನು ಅವನು ಒಪ್ಪಲಿಲ್ಲ. ಅವನ ವಾದವನ್ನು ಅಂಗೀಕರಿಸಲೂ ಇಲ್ಲ.

ಈ ಸಮಯದಲ್ಲಿ ಕಪಿಲಮುನಿಯ ಅನುಯಾಯಿಯಾದ ಪಂಚಶಿಖ ಎಂಬ ಮಹರ್ಷಿಯು ದೇಶ ಸಂಚಾರ ಮಾಡುತ್ತ ಮಿಥಿಲಾ ಪಟ್ಟಣಕ್ಕೆ ಆಗಮಿಸಿದನು. ಈ ಪಂಚ ಶಿಖನು ಸನ್ಯಾಸ ಧರ್ಮಗಳ ಪರಮ ಗಂತವ್ಯವನ್ನು ಸುನಿಶ್ಚಿತವಾಗಿ ತಿಳಿದು ಕೊಂಡಿದ್ದನು.

ಸುಖದುಃಖ, ರಾಗದ್ವೇಷ ಮುಂತಾದ ದ್ವಂದ್ವಗಳ ಕಟ್ಟುಪಾಡಿಗೆ ಒಳಗಾಗಿದ್ದಿಲ್ಲ. ಆ ನಿಯಮನಿಷ್ಠವಾದ ಮುನಿ. ತಾತ್ಪರ್ಥ ವಿಷಯದಲ್ಲಿ ನಿಶ್ಚಿತವಾಗಿತ್ತು. ಅವನ ಜ್ಞಾನ. ಅಲ್ಲಿ ಸಂದೇಹಕ್ಕೆ ಎಡೆಯೇ ಇರಲಿಲ್ಲ. ಮಾನವರಿಗೆಲ್ಲ ಶಾಶ್ವತ ಸುಖವಾದ ಮೋಕ್ಷವು ಹೇಗಾದರೂ ಮಾಡಿ ದೊರಕುವಂತೆ ಮಾಡಬೇಕು. ಎಂದು ಪ್ರಯತ್ನಿಸುವವರಲ್ಲಿ ಮಹಾಮುನಿಯಾದ ಪಂಚಶಿಖನು ಅಗ್ರಗಣ್ಯನಾಗಿದ್ದನು.

ಸಾಂಖ್ಯಶಾಸ್ತ್ರ ಪ್ರವರ್ತಕನಾದ ಕಪಿಲಮುನಿಯೇ ತನ್ನ ಶಿಷ್ಯನಾದ ಈ ಪಂಚಶಿಖನ ರೂಪದಿಂದ ಇಳಿದು ಬಂದಿದ್ದಾನೆ ಎಂದು ಜ್ಞಾನಿಗಳು ಹೇಳುತ್ತಿದ್ದರು. ಕಪಿಲಮುನಿಯ ಶಿಷ್ಯನಾದ ಅಸುರಿಮಹರ್ಷಿಯ ಪ್ರೀತಿಯ ಛಾತ್ರನಾಗಿದ್ದ ಈ ಪಂಚಶಿಖ.

ಅಸುರಿಮುನಿಯು ಪಂಚಸ್ತ್ರೋತಸ್ ಎಂಬ ಕ್ಷೇತ್ರದಲ್ಲಿ ಸಾವಿರ ವರ್ಷದ ಒಂದು ಜ್ಞಾನಸತ್ರ ನಡೆಸತೊಡಗಿದ್ದ. ಅಸುರ ಮುನಿಯು ಪಂಚಶ್ರೋತಸ್ಸಿಗೆ ಬಂದ ಬಳಿಕ ಕಪಿಲದೇವನ ಸುವ್ಯವಸ್ಥಿನಾದ ತತ್ವಜ್ಞಾನದ ರಹಸ್ಯವನ್ನು ಅರಿತು ಕೊಂಡ. ಸತ್ರಯಾಗವನ್ನು ಮಾಡಿ ಮುಗಿಸಿದ ಬಳಿಕ ಇನ್ನೂ ಹೆಚ್ಚಿನ ತಪವನ್ನಾಚರಿಸಿ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡು ಕ್ಷೇತ್ರ ಕ್ಷೇತ್ರಜ್ಞರ ವಿಷಯವಾಗಿ ದಿವ್ಯ ಜ್ಞಾನ ಪಡೆದನು, ಓಂಕಾರರೂಪ ಏಕಾಕ್ಷರ ಪ್ರತಿಪಾದ್ಯನಾದ ಆ ಪರಬ್ರಹ್ಮವು ಹೇಗೆ ಬಗೆಬಗೆಯ ರೂಪಗಳಿಂದ ಕಾಣುತ್ತದೆ ಎಂಬುದನ್ನು ಆ ಕಪಿಲ ಮಂಡಲದಲ್ಲಿ ಅವನು ತಿಳಿದುಕೊಂಡನು.

ಕಪಿಲಾ ಎಂಬ ಬ್ರಾಹ್ಮಣ ಸ್ತ್ರೀಯು ಈ ಪಂಚಶಿಖನೆಂಬ ಮಗುವನ್ನು ತಾನೇ ಸಾಕಿ ದೊಡ್ಡವನನ್ನಾಗಿ ಮಾಡಿದ್ದಳು. ಅವಳ ಎದೆಯ ಹಾಲನ್ನು ಕುಡಿದು ಬೆಳೆದದ್ದರಿಂದ ಪಂಚಶಿಖಿಗೆ ಕಾಪಿಲೇಯ ಎಂಬ ಹೆಸರು ಬಂದಿತು. ಈ ಕಾಪಿಲೇಯ ಪಂಚಶಿಖನು, ಕಾಪಿಲ ಮಹಾಮಂಡಲವನ್ನು ಚೆನ್ನಾಗಿ ತಿಳಿದ. ಸತ್ರಯಾಗವನ್ನು ಮಾಡಿದ. ಅಸುರಿಯಲ್ಲಿ ಅಧ್ಯಯನ ಮಾಡಿ, ಅವನ ಶಿಷ್ಯತ್ವವನ್ನು ವಹಿಸಿ, ವಿದ್ಯಾಪಾರಂಗತನಾದನು.

ಅವನು ಮುಂದೆ ಸಂಚಾರಕ್ರಮೇಣ ಮಿಥಿಲಾನಗರಕ್ಕೆ ಬಂದಾಗ ಜನಕ ರಾಜನ ಆಸ್ಥಾನದ ಸಮಾಚಾರವನ್ನೆಲ್ಲ ತಿಳಿದುಕೊಂಡ. ಜ್ಞಾನಿಯಾದ ಜನಕರಾಜನು ತನ್ನ ಮನೆಯಲ್ಲಿಯೇ ಇದ್ದ ಆಸ್ತಿಕ ನಾಸ್ತಿಕ ಮುನಿಗಳನ್ನೂ ಹಾಗೂ ಧರ್ಮನಿಷ್ಠನೂ ಧರ್ಮನಿಂದಕ ಆಚಾರ್ಯರನ್ನೂ ಸಮಾನರೆಂದು ಭಾವಿಸುತ್ತಿದ್ದನು.

ಇದು ಪಂಚಶಿಖಾಚಾರ್ಯರಿಗೆ ಸರಿ ಎನಿಸಲಿಲ್ಲ. ಅವರು ನೇರವಾಗಿ ಬಂದರು ಪಂಡಿತ ಕುಲಮಂಡಿತವಾದ ಜನಕನ ಆಸ್ಥಾನಕ್ಕೆ. ಅಲ್ಲಿ ನೂರಾರು ಜನ ವಿದ್ವಾಂಸರು ವಿದ್ವತ್ಪೀಠದಲ್ಲಿ ವಿರಾಜಿಸುತ್ತಿದ್ದರು. ಪಂಚಶಿಖನು ಅಲ್ಲಿಗೆ ಬಂದು ಆ ಎಲ್ಲ ನಾಸ್ತಿಕ ಮತದ ಅಧ್ವರ್ಯಗಳನ್ನು ವಾದಕ್ಕೆ ಆಹ್ವಾನಿಸಿದನು. ಅವರೆಲ್ಲರನ್ನು ನಿರುತ್ತರರನ್ನಾಗಿ ಮಾಡಿ ಪರಾಜಯಗೊಳಿಸಿದನು. ಇತ್ತ ಜನಕಮಹಾರಾಜನಿಗೆ ಈ ಕಾಪಿಲೇಯ ಪಂಚಶಿಖನು ಬೋಧಿಸುವ ವೈದಿಕ ತತ್ವಜ್ಞಾನವು ಪರಮಶ್ರೇಷ್ಠವೆನಿಸಿತು. ಆದುದರಿಂದ ಅವನು ತನ್ನ ಮನೆಯಲ್ಲಿ ನೆಲೆಸಿದ ನೂರಾರು ಜನ ಆಸ್ತಿಕ ನಾಸ್ತಿಕ ನಿರೀಶ್ವರವಾದಿ ಆಚಾರ್ಯರನ್ನೆಲ್ಲ ಬಿಟ್ಟು, ಈ ಕಾಪಿಲೇಯ ಪಂಚಶಿಖನನ್ನೇ ಹಿಂಬಾಲಿಸಿದ. ಧರ್ಮವನ್ನು ತಿಳಿಯಲಿಕ್ಕಾಗಿ ಜನಕ ಮಹಾರಾಜನು ಸಾಷ್ಟಾಂಗ ನಮಸ್ಕಾರ ಮಾಡಿದ ಆ ಪಂಚಶಿಖನಿಗೆ. ಜನಕರಾಜನ ಕೇಳುವ ತವಕವನ್ನು ಶಾಂತ ಮಾಡಲು ಕಾಪಿಲೇಯ ಪಂಚಶಿಖಮುನಿಯು ಸಾಂಖ್ಯಶಾಸ್ತ್ರದಲ್ಲಿ ನಿರೂಪಿತವಾದ ಉತ್ತಮ ಮೋಕ್ಷ ಮಾರ್ಗವನ್ನು ಉಪದೇಶಿಸಿದನು.

**ಕಾಪಿಲೇಯ ಪಂಚಶಿಖ :** ಮಹಾರಾಜ, ನಿನ್ನ ಮನೆಯಲ್ಲಿರುವ ನಾಸ್ತಿಕ ವಾದಿಗಳು 'ದೇಹವೇ ಆತ್ಮ' ಈ ದೇಹದಿಂದ ಭಿನ್ನವಾದ ಆತ್ಮವೇ ಇಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣ. ಅನುಮಾನ ಆಗಮಗಳು ಅಪ್ರಮಾಣ'' ಎಂದು ಮುಂತಾಗಿ ವಾದ ಮಾಡುವರು. ಮೊದಲು ಅವರ ವಾದವನ್ನು ಕೇಳಿ ಅದರ ಖಂಡನವನ್ನೂ ಮತ್ತು ಅವರ ಪ್ರಶ್ನೆಗಳಿಗೆ

ಸಮಾಧಾನವನ್ನೂ ತಿಳಿಸುತ್ತೇನೆ. ದೇಹವು ಹುಟ್ಟುವದು ಮತ್ತು ದೇಹವು ನಾಶವಾಗುವದು. ಆತ್ಮನು ಕೂಡ ದೇಹ ಹುಟ್ಟಿದಾಗಲೇ ಹುಟ್ಟಿ ದೇಹ ಸತ್ತಾಗಲೇ ಸಾಯುವನು, ದೇಹವಿಲ್ಲದೆ ಎಂದೂ ಎಲ್ಲಿಯೂ ಆತ್ಮವಿಲ್ಲ. ಅಂದಬಳಿಕ ದೇಹವೇ ಆತ್ಮ ಎಂದು ಹೇಳಿದರೆ ಬಾಧಕವೇನು? ಮುಪ್ಪು ಬೇನೆ, ಮರಣ ಇವು ದೇಹಕ್ಕೆ ಬಂದಾಗ, ನಾವು ಈ ಮನುಷ್ಯನು - ಈ ಜೀವನು ರೋಗಗ್ರಸ್ತನಾದ, ಮರಣ ಹೊಂದಿದ, ಅಥವಾ ಮುಪ್ಪು ಬಂದೀತು ಎಂದೆನ್ನುತ್ತೇವೆ. ದೇಹ ಭಿನ್ನ, ಆತ್ಮನು ಬೇರೆ ಇದ್ದರೆ, ಆತ್ಮನಿಗೆ ಮುಪ್ಪು ಬೇನೆ, ಮರಣ ಬಂದವು ಎಂದು ಹೇಳಬೇಕಾಗಿತ್ತು. ಹಾಗೆ ನುಡಿಯದೇ ಈ ದೇಹಕ್ಕೆ ಜರಾಮರಣ ರೋಗಾದಿಗಳು ಬರುತ್ತವೆ ಎಂದು ವ್ಯವಹರಿಸುವದರಿಂದ ಈ ದೇಹವೇ ಆತ್ಮವೆಂದು ಒಪ್ಪಲೇ ಬೇಕಾಗುವದು. ಆತ್ಮನು ಬೇರೆ ಇರುತ್ತಾನೆ ಎಂದು ತಿಳಿಯುವ ಬಗೆ ಹೇಗೆ? ಜಗತ್ತಿನಲ್ಲಿ ನಿಜವಾದ ಯಥಾರ್ಥ ಪ್ರಮಾಣವೆಂದರೆ ಪ್ರತ್ಯಕ್ಷ ಒಂದೇ. ಈ ಪ್ರತ್ಯಕ್ಷ ವಿರುದ್ಧವಾದ ಅನುಮಾನವಾಗಲಿ,ಆಗಮವಾಗಲಿ ಪ್ರಮಾಣವೇ ಅಲ್ಲ. ಪ್ರತ್ಯಕ್ಷದಿಂದಂತೂ ಆತ್ಮವೂ ಕಾಣುವದೇ ಇಲ್ಲ. ಆಗಮವು ಈ ವಿಷಯದಲ್ಲಿ ಪ್ರತ್ಯಕ್ಷವಿರುದ್ಧ ಹೇಳುವದರಿಂದ ಪ್ರಮಾಣವಲ್ಲ ಇದರಂತೆ ಪ್ರತ್ಯಕ್ಷಕ್ಕೆ ವಿರುದ್ಧವಾದ ಅನುಮಾನವೂ ಪ್ರಮಾಣವಲ್ಲ. ಪ್ರತ್ಯಕ್ಷವನ್ನು ಅನುಸರಿಸಿಕೊಂಡಿದ್ದರೆ ಮಾತ್ರ ಅನುಮಾನವು ಪ್ರಮಾಣ. ವಾಸ್ತವಿಕವಾಗಿ ಅನುಮಾನ, ಆಗಮಗಳೆರಡೂ ಅಪ್ರಮಾಣವೇ, ನಿಜವಾದ ಪ್ರಮಾಣ - ಪ್ರತ್ಯಕ್ಷ. ಆ ಪ್ರತ್ಯಕ್ಷಕ್ಕಂತೂ ಆತ್ಮನು ಗೋಚರವಾಗುವದಿಲ್ಲ. ಆದುದರಿಂದ ಆತ್ಮನೇ ಮೊದಲಾದ ಅತೀಂದ್ರಿಯ ಪದಾರ್ಥಗಳನ್ನು ಒಪ್ಪಲೇಬಾರದು. ಪ್ರತ್ಯಕ್ಷಕ್ಕೆ ಗೋಚರವಾಗುವದು ದೇಹಮಾತ್ರ, ಈ ದೇಹವೇ ಆತ್ಮವೆಂದು ಹೇಳಬಹುದು.

ದೇಹದಿಂದ ಅತಿರಿಕ್ತವಾದ ಅತೀಂದ್ರಯವಾದ ಆತ್ಮ ಉಂಟು ಎನ್ನುವದರಲ್ಲಿ ಪ್ರತ್ಯಕ್ಷವಂತೂ ಪ್ರಮಾಣವಾಗುವದಿಲ್ಲ. ಅನುಮಾನ, ಆಗಮಗಳಂತೂ ಪ್ರಮಾಣವಲ್ಲ. ಇದೇ ನಿನ್ನ ಮನೆಯಲ್ಲಿರುವ ಮಹಾಚಾರ್ಯರ ಮತ, ಇದಕ್ಕೆ ನಾಸ್ತಿಕ ಮತವೆಂದು ಕರೆಯುತ್ತಾರೆ. ಆದರೆ ಇದು ಶುದ್ಧ ಅಪದ್ಧವಾದ ಮತ. ಯುಕ್ತಿಗೆ ವಿರುದ್ಧವೂ ಬಲ್ಲವರಿಂದ ತ್ಯಾಜ್ಯವೂ ಆಗಿದೆ - ಈ ನಾಸ್ತಿಕ ಮತ. ಅತೀಂದ್ರಿಯ ಪದಾರ್ಥಗಳನ್ನು ನಾವು ಒಪ್ಪಲೇಬೇಕಾಗುವದು. ಆಗಮಾದಿ ಪ್ರಮಾಣಗಳನ್ನು ಒಪ್ಪದಿದ್ದರೆ ವ್ಯವಹಾರವೇ ಶೂನ್ಯವಾಗುವ ಪ್ರಸಂಗ ಬರುವದು.

ರೇತೋಧಾತುರ್ವಟಕಣಿಕಾ ಘೃತ ಧೂಮಾಧಿವಾಸನಂ ।
ಜಾತಿಸ್ಮೃತಿರಯಸ್ಕಾಂತಃ ಸೂರ್ಯಕಾಂತೊಂಬುಭಕ್ಷಣಂ ॥
ಪ್ರೇತ್ಯ ಭೂತಾಪ್ಯಯಶ್ಚೈವ ದೇವತಾಭ್ಯುಪಯಾಚನಂ ।
ಮೃತೇ ಕರ್ಮ ನಿವೃತ್ತಿಶ್ಚ ಪ್ರಮಾಣಮಿತಿನಿಶ್ಚಯಃ ॥

ರೇತಸ್ಸು, ಪಿತ್ಥ ಮೊದಲಾದ ಧಾತುವಿಕಾರವು. ವಟವೃಕ್ಷದ ಬೀಜವು. ತುಪ್ಪವು, ಪುಷ್ಪಾದಿಗಳು ಹುಟ್ಟುವದಕ್ಕೋಸ್ಕರ ಧೂಮದಿಂದ ಮಾಡಲ್ಪಡತಕ್ಕ ವೃಕ್ಷ ಸಂಸಾರವು ಸಾಧನ ವಿಶೇಷದಿಂದ ಉಂಟಾಗತಕ್ಕ ಪೂರ್ವಜನ್ಮದ ಸ್ಮರಣವು, ಸೂಚೀಪಾಷಾಣವು, ಸೂರ್ಯಕಾಂತನಾಮಕ ಶಿಲೆಯು, ಜಲಪಾನವು, ಮರಣಾನಂತರದಲ್ಲಿ (ಅಂದರೆ ಜೀವನವನ್ನು ಬಿಟ್ಟ ಇರತಕ್ಕ) ಶರೀರಕ್ಕೆ ಪೃಥಿವ್ಯಾದಿ ಭೂತಗಳಲ್ಲಿ ಆಗತಕ್ಕ ಲಯವೂ,

ದೇವತೆಗಳ ಪ್ರಾರ್ಥನೆಯೂ, ಮರಣಾನಂತರ ಚೇಷ್ಟಾ ನಿವೃತ್ತಿಯೂ ಕೂಡ (ಅತೀಂದ್ರಿಯಾರ್ಥಗಳು ಇವೆ ಎನ್ನುವ ವಿಷಯದಲ್ಲಿಯೂ ಅನುಮಾನಾದಿಗಳು ಪ್ರಮಾಣಗಳು ಎನ್ನುವ ವಿಷಯದಲ್ಲಿಯೂ) ಜ್ಞಾಪಕಗಳಾಗುತ್ತವೆನ್ನುವದು ನಿಶ್ಚಯವು. ಹೀಗೆ ಮೋಕ್ಷ ಧರ್ಮ ವಚನದಿಂದ ನಾಸ್ತಿಕ್ಯವಾದವು ಕೂಡುವದಿಲ್ಲ.

**(೧) ರೇತಸ್ಸು :-** ಶರೀರಕ್ಕೆ ಕಾರಣವಾಗಿದೆ. ಇದು ಪ್ರತ್ಯಕ್ಷಕ್ಕೆ ಕಾಣುವದಿಲ್ಲ. ಕಣ್ಣಿಗೆ ಕಾಣದಿದ್ದರೂ ಜನರು ಅನುಮಾನದಿಂದ 'ಸ್ತ್ರೀಯರಲ್ಲಿ' ರೇತಃಪಾತವು ಸಂತಾನೋತ್ಪತ್ತಿಗೆ ಕಾರಣವಾಗಿದೆ. ಎಂದು ತಿಳಿದುಕೊಳ್ಳುತ್ತಾರೆ. ಅನುಮಾನವು ಪ್ರಮಾಣವೇ ಅಲ್ಲ ಎಂದಾದರೆ ಪ್ರತ್ಯಕ್ಷವಾದರೆ ಪ್ರಮಾಣವೆಂದು ನಂಬುವದಾದರೆ ರೇತಃಪಾತಕ್ಕೂ ಸಂತಾನೋತ್ಪತ್ತಿಗೂ ಕಾರ್ಯಕಾರಣಭಾವವು ಪ್ರತ್ಯಕ್ಷದಿಂದ ಗೋಚರವಾಗುವದಿಲ್ಲ. ಆದುದರಿಂದ ಯಾರೂ ಪುತ್ರೋತ್ಪತ್ತಿಗೆ ಪ್ರವೃತ್ತಿಸದೇ ಹೋಗಬೇಕಾದೀತು. ಲೋಕದಲ್ಲಿ ಜನರೆಲ್ಲರೂ ಸಂತಾನ ಪ್ರಾಪ್ತಿಗಾಗಿ ಭಾರ್ಯದಿಗಳಲ್ಲಿ ರೇತೋನಿಷೇಚನ ಮಾಡುತ್ತಾರೆ. ಅದರಿಂದ ಸಂತತಿ ಹೊಂದುತ್ತಾರೆ. ಎಲ್ಲ ಜನರ ಈ ಪ್ರವೃತ್ತಿಯ ನಿಷ್ಪ್ರಮಾಣಕವಲ್ಲ. ಆದುದರಿಂದ ಜನರು ರೇತಸ್ಸೇಚನ ಮಾಡಿದರೆ ಸಂತಾನೋತ್ಪತ್ತಿ ಆಗುವದು. ರೇತಸ್ಸೇಚನ ಮಾಡದಿದ್ದರೆ ಆಗುವದಿಲ್ಲ ಎಂಬ ಅನ್ವಯವ್ಯಾಪ್ತಿ. ವ್ಯತಿರೇಕವ್ಯಾಪ್ತಿ ರೂಪವಾದ ಅನುಮಾನ ಮಾಡಿಕೊಂಡು, ಕಾರ್ಯಕಾರಣಭಾವವನ್ನು ತಿಳಿದುಕೊಂಡು ವೀರ್ಯಸಿಂಚನಕ್ಕೆ ಪ್ರವೃತ್ತರಾಗುತ್ತಾರೆ. ಇದರಿಂದ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾಯಿತು. ಇದರಂತೆ ಮೃತಶರೀರದಲ್ಲಿ ರೇತಸ್ಸೇಚನದಿಂದ ಸಂತಾನೋತ್ಪತ್ತಿ ಆಗುವದಿಲ್ಲ. ಜೀವದಿಂದ ಅಧಿಷ್ಠಿತವಾದ ಶರೀರದಲ್ಲಿಯೇ ಮಾಡಲ್ಪಟ್ಟ ರೇತಸ್ಸೇಚನವು ಸಂತಾನಕ್ಕೆ ಕಾರಣವಾಗುವದು. ಇದರ ಮೇಲಿಂದ ದೇಹ - ಅತಿರಿಕ್ತವಾದ ಜೀವನು ಸಿದ್ಧನಾಗುವನು. ಜೀವವುಳ್ಳ ಎಲ್ಲ ಹೆಣ್ಣು ಮಕ್ಕಳಲ್ಲಿಯೂ ರೇತಸ್ಸೇಚನವು ಫಲಕಾರಿಯಾಗುವದಿಲ್ಲ. ಕೆಲವರಲ್ಲಿ ಮಾತ್ರ ಫಲಕಾರಿ ಆಗುವದು, ಆದುದರಿಂದ ಅದೃಷ್ಟನಿಯಾಮಕನಾಗಿ ಪರಮಾತ್ಮ, ಜೀವರ ಅನಾದಿ-ಕರ್ಮ ಮುಂತಾದ ಅತೀಂದ್ರಿಯ ಪದಾರ್ಥಗಳೆಲ್ಲವೂ ಸಿದ್ಧಿಸುತ್ತವೆ.

**(೨) ಧಾತು:-** ವಾತ, ಪಿತ್ತ, ಕಫ ಮೊದಲಾದ ಧಾತುಗಳು ದೇಹದಲ್ಲಿ ಅಪಥ್ಯ ಮೊದಲಾದವುಗಳಿಂದ ಜೀವಂತಶರೀರದಲ್ಲಿ ಮಾತ್ರ ವಿಕಾರವನ್ನುಂಟು ಮಾಡುತ್ತವೆ. ಮೃತಶರೀರದಲ್ಲಿ ವಿಕಾರ ಹೊಂದುವದಿಲ್ಲ. ಮತ್ತು ಈ ಧಾತು ಪ್ರಕೋಪದಿಂದ ಬೇನೆ ಬರುವದು. ಬೇನೆಗೂ ಈ ಧಾತುವಿಕಾರಕ್ಕೂ ಕಾರ್ಯ ಕಾರಣಭಾವವಿರುವದು ಕಣ್ಣಿಗೆ ಗೋಚರಿಸುವದಿಲ್ಲ. ಔಷಧಿಯಿಂದ ಧಾತು ಸಾಮ್ಯ ಉಂಟಾಗಿ ಆರೋಗ್ಯವಾಗುವದು. ಪ್ರತ್ಯಕ್ಷಕ್ಕೆ ಗೋಚರಿಸುವದಿಲ್ಲ. ಆದರೂ ವೈದ್ಯರು ಪಥ್ಯ ಔಷಧಿಗಳಿಗೂ ರೋಗಕ್ಕೆ, ಕಾರ್ಯಕಾರಣ ಭಾವವನ್ನು ಅನುಮಾನದಿಂದ ತಿಳಿದು ಔಷಧಿ ಕೊಡುತ್ತಾರೆ. ಜನರೂ ಸೇವಿಸುತ್ತಾರೆ. ಆ ಔಷಧಿಗಳು ಎಲ್ಲರಿಗೂ ಫಲ ಕೊಡುವದಿಲ್ಲ. ಕೆಲವರಿಗೆ ಮಾತ್ರ ಕೊಡುತ್ತವೆ. ಇದರ ಮೇಲಿಂದ ಅದೃಷ್ಟನಿಯಾಮಕನಾದ ಈಶ್ವರ ವೈದ್ಯಶಾಸ್ತ್ರಾದಿ ಆಘಮ, ಆರೋಗ್ಯ ಹಾಗೂ ಔಷಧಿ, ಕಾರ್ಯಕಾರಣಭಾವಕ್ಕೆ ಪ್ರಮಾಣವೆಂದು ಸಿದ್ಧಿಸುತ್ತದೆ.

**(೩) ಬೀಜ:-** ಬೀಜದಿಂದ ಮರ ಹುಟ್ಟುವದು ಕಣ್ಣಿಗೆ ಕಾಣುವದಿಲ್ಲ. ಆದರೂ ಜನರು ಬೀಜ ಬಿತ್ತುವದಕ್ಕೂ ಕಾರ್ಯಕಾರಣಭಾವವನ್ನು ಅನೇಕ ಕಡೆಗಳಲ್ಲಿ ನೋಡಿ ವ್ಯಾಪ್ತಿ

ನಿಶ್ಚಯಮಾಡಿಕೊಂಡು, ಅನುಮಾನದಿಂದ ತಿಳಿದುಕೊಂಡು ಬೀಜ ಬಿತ್ತುವರು. ಬೆಳೆಯನ್ನು ಪಡೆಯುವರು. ಇದು ಅನುಮಾನ ಪ್ರಮಾಣವೆಂದು ಒಪ್ಪದಿದ್ದರೆ, ಜಗತ್ತಿನ ವ್ಯವಹಾರವೇ ಛಿನ್ನವಾಗಬೇಕಾಗುವದು.

**(೪) ಘೃತ:-** ತುಪ್ಪ, ಜೇನುತುಪ್ಪ, ಹಾಲು ಮುಂತಾದ ಪೌಷ್ಠಿಕ ಪದಾರ್ಥಗಳಿಂದ ಮನುಷ್ಯರಿಗೆ ಶಕ್ತಿಬರುತ್ತದೆ. ಘೃತಾದಿಗಳಿಗೂ ದೇಹಪುಷ್ಟಿಗೂ ಅನುಮಾನದಿಂದ ಕಾರ್ಯಕಾರಣಭಾವವನ್ನು ತಿಳಿದು ಪ್ರವರ್ತಿಸುತ್ತಾರೆ.

**(೫) ಧೂಮಾದಿವಾಸನ:-** ಗಿಡಗಳಿಗೆ ಹೂ, ಕಾಯಿ, ಹೆಚ್ಚು ಬರಲು ಹೊಗೆ ಹಾಕುವದು, ಗೊಬ್ಬರ ಹಾಕುವ ಸಂಸ್ಕಾರಗಳನ್ನು ಮಾಡುತ್ತಾರೆ. ಅದರಿಂದ ಬೆಳೆಗಳಿಗೂ ಮರದ ಹೂ ಹಣ್ಣು ಕಾಯಿಗಳಿಗೂ ಒಳ್ಳೇ ಸುಗ್ಗಿ, ಅಧಿಕ್ಕ ಬರುತ್ತದೆ. ಇದು ಕೂಡ ಪ್ರತ್ಯಕ್ಷ ಸಿದ್ಧವಾಗದಿದ್ದರೂ ಅನುಮಾನದಿಂದ ತಿಳಿದು ಜನರು ಪ್ರವರ್ತಿಸುತ್ತಾರೆ.

**(೬) ಜಾತಿಸ್ಮೃತಿ:-** ಕೆಲವರಿಗೆ ಸಾಧನ ವಿಶೇಷದಿಂದ ಪೂರ್ವಜನ್ಮದ ಸ್ಮರಣೆಯು ಬರುತ್ತದೆ. ದೇಹವೇ ಆತ್ಮವೆಂದರೆ ಅಲ್ಲಲ್ಲಿ ಕಂಡುಬರುವ, ಕೇಳಿಬರುವ ಜಾತಿ ಸ್ಮರಣೆಯು ಹೇಗೆ? ಏಕೆ? ಎನ್ನುವ ಪ್ರಶ್ನೆಗೆ ಉತ್ತರವೇ ಇಲ್ಲದಂತಾಗುವದು.

**(೭) ಅಯಸ್ಕಾಂತ:-** ಲೋಹಚುಂಬಕವು ಕಬ್ಬಿಣವನ್ನು ಎಳೆಯುತ್ತದೆ. ಎಲ್ಲ ಧಾತುಗಳನ್ನು ಲೋಹಚುಂಬಕವು ಎಳೆದುಕೊಳ್ಳುವದಿಲ್ಲ. ಲೋಹವು ಮಾತ್ರ ಉಕ್ಕು ಹಾಗೂ ಶಿಲಾವಿಶೇಷದಿಂದ ಸೆಳೆಯಲ್ಪಡುವದು, ಅದಕ್ಕೆ ಈಶ್ವರನ ಪ್ರೇರಣೆಯೇ ಕಾರಣ ಎಂದು ಒಪ್ಪಬೇಕು.

(೮) ಇದರಂತೆ **ಸೂರ್ಯಕಾಂತ** ಶಿಲಾವಿಶೇಷದಿಂದ ಮಾತ್ರ ಅಗ್ನಿ ಹುಟ್ಟುವದು.

**(೯) ಅಂಬುಭಕ್ಷಣ:-** ನೀರು ಕುಡಿದರೆ ತೃಷ್ಣೆ ಹಿಂಗುವದು.

**(೧೦) ಪ್ರೇತ್ಯ ಭೂತಾಪ್ಯಯ:-** ಮರಣದಿಂದ ಪಂಚಭೂತಗಳಲ್ಲಿ ಸೇರುವದು.

**(೧೧) ದೇವತಾ ಪ್ರಾರ್ಥನೆ:-** ಗುರುಗಳ ಆರಾಧನೆಯಿಂದ ಇಷ್ಟ ಸಿದ್ಧಿ, ಅನಿಷ್ಟ ನಿವಾರಣೆ, ಸಂಪತ್ಪ್ರಾಪ್ತಿ, ಆರೋಗ್ಯ ಲಾಭ ಮುಂತಾದವುಗಳು.

**(೧೨) ಮೃತೇ ಕರ್ಮನಿವೃತ್ತಿ :** ಮರಣಹೊಂದಿದ ಕೂಡಲೇ ದೇಹದ ಚೇಷ್ಟೆಗಳು (ಕ್ರಿಯೆಗಳು) ಎಲ್ಲವೂ ನಿಂತುಹೋಗುತ್ತವೆ. ಮರಣ ಹೊಂದದೆ ಜೀವಂತ ಇದ್ದಾಗ ಕ್ರಿಯೆಗಳೆಲ್ಲವೂ ನಡೆಯುತ್ತವೆ. ಈ ಮೊದಲಾದ ಎಲ್ಲ ದೃಷ್ಟಾಂತಗಳಲ್ಲಿ ಅನುಮಾನದಿಂದ ಕಾರ್ಯಕಾರಣ ಭಾವವು ಅತೀಂದ್ರಿಯ ವಸ್ತುವಿನ ಅಸ್ತಿತ್ವವು, ಈಶ್ವರನ ಸರ್ವನಿಯಾಮಕತ್ವವು, ಜೀವನ ಅದೃಷ್ಟದ ಕಾರಣತ್ವವು, ಇವೆಲ್ಲವುಗಳನ್ನು ಹೇಳುವ ಅನುಮಾನದ ಪ್ರಾಮಾಣ್ಯವು ಆಗಮದ ಪ್ರಾಮಾಣ್ಯವು ಸಿದ್ಧಿಸುವವು. ಇವೇ ಮೊದಲಾದ ಮೋಕ್ಷ ಧರ್ಮದ ವಚನಗಳಿಂದ ನಾಸ್ತಿಕರವಾದವು ಯುಕ್ತಿ ವಿರುದ್ಧವೂ ಪ್ರಮಾಣ ವಿರುದ್ಧವೂ ಆಗಿರುತ್ತದೆ. ಆದುದರಿಂದ ಈ ತರಹದ ನಾಸ್ತಿಕವಾದವನ್ನು ಒಪ್ಪಬಾರದು.

**ಅರ್ಥಾಂಸ್ತಥಾ ಹಂತಿ ಸುಖಾವಹಾಂಶ್ಚ ।**
**ಅಹಂಯ್ಯೈತೇ ಬಹವೋವಿನಷ್ಟಾಃ ।**
**ಮಹತ್ತರಂ ದುಃಖಮಭಿಪ್ರಪನ್ನಾ**
**ಹಿತ್ವಾSಮಿಷಂ ಮೃತ್ಯುವಶಂ ಪ್ರಯಾಂತಿ ॥**

ದೇಹವನ್ನೇ ಆತ್ಮವೆಂದು ತಿಳಿಯುವವನು ಮಿಥ್ಯಾಜ್ಞಾನಿ. ಅವನಿಗೆ ದುಃಖವು ನಾಶವಾಗುವದೇ ಇಲ್ಲ. ಶರೀರವನ್ನು ನಮ್ಮ ಆತ್ಮ ಅಲ್ಲವೆಂದು ತಿಳಿದರೆ ಇದು ನಾನು, ನನ್ನದು ಎನ್ನುವ ಮಮಕಾರಗಳು ಹುಟ್ಟುವದಿಲ್ಲ. ಅದರಿಂದ ಬರುವ ದುಃಖ ಸಂತತಿಯ ಮೂಲೇ ಕುಠಾರವಾಗಿ ದುಃಖಕ್ಕೆ ಕಾರಣವಾಗುವದಿಲ್ಲ. ಆದುದರಿಂದ ಸಜ್ಜನರು ಈ ದೇಹವು ನನ್ನದು ಎನ್ನುವ ಅಭಿಮಾನ ತ್ಯಾಗ ಮಾಡಬೇಕು. ಈ ತ್ಯಾಗವೂ ಒಂದು ಯೋಗಎನಿಸುವದು. ದೇಹದ ಅಭಿಮಾನದ ತ್ಯಾಗ, ಮಡದಿ ಮನೆ ಮಕ್ಕಳಲ್ಲಿ ಮಮಕಾರದ ತ್ಯಾಗ, ಮಾಡುವ ಕರ್ಮಗಳಲ್ಲಿ ಫಲದ ಆಶೆಯ ತ್ಯಾಗ, ಕೊನೆಗೆ ಆದರಿಂದ ಬರುವ ಪುಣ್ಯದ ತ್ಯಾಗ ಮಾಡಿ ಸರ್ವಸ್ವನ್ನೂ ಪರಮಾತ್ಮನಿಗೆ ಸಮರ್ಪಿಸುವದೇ ಮೋಕ್ಷಕ್ಕೆ ಸಾಧನಾಗುವದು.

**ದ್ರವ್ಯತ್ಯಾಗೇ ತು ಕರ್ಮಾಣಿ ಭೋಗತ್ಯಾಗೇ ವ್ರತಾನಿ ಚ ।**
**ಸುಖತ್ಯಾಗೇ ತಪೋಯೋಗಃ ಸರ್ವತ್ಯಾಗೇ ಸಮಾಪನಾ ॥**
**ತಸ್ಯ ಮಾರ್ಗೋಽಯಮದ್ವೈಧಃ ಸರ್ವತ್ಯಾಗಸ್ಯ ದರ್ಶಿತಃ ॥**
**ವಿಪ್ರಹಾಣಾಯ ದುಃಖಸ್ಯ ದುರ್ಗತಿ ಸ್ತ್ವನ್ಯಥಾ ಭವೇತ್ ॥**

ಸಂಪತ್ತಿಯ ತ್ಯಾಗ ಮಾಡಿದರೆ ಕರ್ಮಗಳು, ಭೋಗಾದಿಗಳನ್ನು ತ್ಯಜಿಸಿದರೆ ವ್ರತಗಳು, ಸುಖವನ್ನು ತ್ಯಜಿಸಿದರೆ ತಪಸ್ಸು ಸಿದ್ಧಿಸುತ್ತವೆ. ಹೀಗೆ ಸಕಲವೂ ಆಶೆ ಬಿಡುವದರಲ್ಲಿಯೇ ಪರ್ಯವಸಾನವಾಗುತ್ತದೆ. ದುಃಖವನ್ನು ನಾಶಪಡಿಸುವದಕೆ ಸರ್ವತ್ಯಾಗವೇ ಅದ್ವಿತೀಯವಾದ ಮಾರ್ಗವೆಂದು ಉಕ್ತವಾಗಿದೆ. ಅದನ್ನು ಆಶ್ರಯಿಸದಿದ್ದರೆ ದುರ್ಗತಿಯೇ ಆಗುವದು.

**ಇಮಾಂ ಚ ಯೋ ವೇದ ವಿಮೋಕ್ಷ ಬುದ್ಧಿ**
**ಮಾತ್ಮಾನನ್ವಿಚ್ಛತಿ ಚಾಪ್ರಮತ್ತಃ ।**
**ನ ಲಿಪ್ಯತೆ ಕರ್ಮಫಲೈರನಿಷ್ಟೈಃ**
**ಪತ್ರಂ ಬಿಸಸ್ಯೇವ ಜಲೇನ ಸಿಕ್ತಂ ।**

ಈ ರೀತಿಯಾಗಿ ತ್ಯಾಗಬುದ್ಧಿಯನ್ನುಗಳಿಸಿ, ಆಲಸ್ಯವಿಲ್ಲದೆ ಆತ್ಮ ತತ್ವವನ್ನು ಅರಿಯಲು ಬಯಸುವವನು, ನೀರಮೇಲಿರುವ ಕಮಲದ ಎಲೆಯ ನೀರಿನ ಲೇಪವನ್ನು ಹೊಂದಿರುವಂತೆ, ಅನಿಷ್ಟವಾದ ಕರ್ಮಫಲವನ್ನು ಹೊಂದಲು ಸಾಧ್ಯವಿಲ್ಲ.

**ದೃಢೈರ್ಹಿ ಪಾಶೈರ್ವಿವಿಧೈರ್ವಿಮುಕ್ತಃ**
**ಪ್ರಜಾನಿಮಿತ್ತೈರಪಿ ದೈವತೈಶ್ಚ ।**
**ಯದಾಹ್ಯಸೌ ದುಃಖಸೌಖ್ಯೇ ಜಹಾತಿ**
**ಮುಕ್ತಸ್ತದಾಗ್ರ್ಯಾಂ ಗತಿಮೇತ್ಯಲಿಂಗಃ**

ಮಾನುಷ, ದೈವನಿರ್ಮಿತವಾದ ಅನೇಕ ರೀತಿಯ ಬಂಧನಾದಿಗಳಿಂದ ಮುಕ್ತ ಮಾಡಲ್ಪಟ್ಟ ಈ ಜೀವನು, ದುಃಖಗಳನ್ನು ಹಾಗೂ ಲೌಕಿಕ ಸುಖಭೋಗಾದಿಗಳನ್ನು ಬಿಟ್ಟಾಗ, ಲಿಂಗದೇಹರಹಿತನಾಗಿ ಉತ್ತಮೋತ್ತಮ ಗತಿಯನ್ನು ಹೊಂದಿ ಮುಕ್ತನಾಗುವನು.

**ಶ್ರುತಿ ಪ್ರಮಾಣಾಗಮ ಮಾರ್ಗಣಾಮೀ ॥**
**ಶೇತೇ ಜರಾಮೃತ್ಯುಭಯಾದತೀತಃ**
**ಕ್ಷೀಣೇ ಚ ಪುಣ್ಯೇ ವಿಗತೇ ಚ ಪಾಪೇ**
**ತಯೋರ್ನಿಮಿತ್ತೇ ಚ ಫಲೇ ವಿನಷ್ಟೇ ॥**

ಅಲೇಪಮಾಕಾಶಮಲಿಂಗಮೇವ
ಮಾಸ್ಥಾಯ ಪಶ್ಯಂತಿ ಮಹತ್ಯಸಕ್ತಾ:
ಯಥೋರ್ಣನಾಭಿಃ ಪರಿವರ್ತಮಾನ
ಸ್ತಂತುಕ್ಷಯೇ ತಿಷ್ಠತಿ ಪಾತ್ಯಮಾನಃ ॥

ವೇದ ಹಾಗೂ ಪ್ರಮಾಣಭೂತವಾದ ಆಗಮಗಳಲ್ಲಿ ಹೇಳಿದ ಶ್ರೇಯಸ್ಕರ ಕರ್ಮಾದಿಗಳನ್ನು ಆಚರಿಸಿ, ಮುಪ್ಪು - ಮರಣ ಇವುಗಳ ಭೀತಿಯನ್ನು ಹೋಗಲಾಡಿಸಿ ಕೊಂಡು, ಸುಖದಿಂದ ಇರುವವನು. ಪುಣ್ಯಪಾಪಾದಿಗಳಿಂದ ಸಂಭವಿಸುವ ದುಷ್ಫಲ, ಸತ್ಫಲಗಳೆಲ್ಲವೂ ನಷ್ಟವಾದ ಮೇಲೆ ಪ್ರಕೃತಿವಿದೂರನಾಗಿ, ಲಿಂಗದೇಹವಿಲ್ಲದೆ ಸ್ವರೂಪ, ಮಾತ್ರದಿಂದ ಇದ್ದು, ಕರ್ಮಲೇಪವಿಲ್ಲದ ಆಕಾರಶಬ್ದವಾಚ್ಯನಾದ ಪರಮಾತ್ಮನನ್ನು ಪ್ರಸನ್ನೀಕರಿಸಿಕೊಳ್ಳುವರು. ಮಾನವನಿಗೆ ಅನಾದಿಕಾಲದಿಂದ ಅಂಟಿಕೊಂಡು ಈ ಲಿಂಗದೇಹವು ಪರಮಾತ್ಮನ ಅಪರೋಕ್ಷ ಜ್ಞಾನದಿಂದ ಭಂಗವಾಗಿ ಹೋಗುವದು. ಜೇಡರ ಹುಳವು ತನ್ನ ಸುತ್ತಲೂ ತಿರುಗಿ ತಾನೇ ನೇಯ್ದ ಬಲೆಯಲ್ಲಿ ಬಿದ್ದು ಒದ್ದಾಡುವಂತೆ, ಜೀವನಾದರೂ ಕೂಡ, ತಾನು ಮಾಡಿದ ಕರ್ಮದ ಫಲರೂಪವಾದ ಈ ದೇಹದಲ್ಲಿ ಬಿದ್ದು ಒದ್ದಾಡುತ್ತಾನೆ. ಅದು ಅಪರೋಕ್ಷ ಜ್ಞಾನವಾದ ಕೂಡಲೇ ಕರ್ಮನಾಶವಾಗಿ ತನ್ಮೂಲಕ, ದೇಹನಾಶವಾಗಿ ಹುಳವು ತನ್ನ ಗೂಡನ್ನು ಬಿಟ್ಟು ಹೊರಗೆ ಬರುವಂತೆ, ಮಾನವನು ಕೂಡ ಮುಕ್ತನಾಗಿ ಆನಂದಪಡುವನು.

ಬಹುಕಾಲದಿಂದ ಬಂದ ಈ ಲಿಂಗದೇಹ ಅಪರೋಕ್ಷ ಜ್ಞಾನಿಯು ಪರಿತ್ಯಜಿಸುವಾಗ ಅವನಿಗೆ ದುಃಖವಾಗುವದಿಲ್ಲ. ಹಾವು ತನ್ನ ಪರೆಯನ್ನು ಬಿಡುವಂತೆ ಚಿಗರೆಯು ತನ್ನ ಕೊಂಬನ್ನು ತ್ಯಜಿಸುವಂತೆ ಅಥವಾ ಮರದ ಮೇಲೆ ಕುಳಿತ ಪಕ್ಷಿಯು ಆ ಮರವು ನೀರಿನಲ್ಲಿ ಮುಳುಗಿ ಹೋಗುವ ಪರಿಸ್ಥಿತಿ ಬಂದಾಗ, ಅದನ್ನು ತ್ಯಜಿಸಿ ಅದರ ಚಿಂತೆಯಿಲ್ಲದೆ ಹಾರಿಹೋಗುವಂತೆ, ಈ ಆತ್ಮನೂ ಕೂಡ ತನ್ನ ಹಳೆಯದಾದ ಆ ಲಿಂಗದೇಹವನ್ನು ನೋಡದೆ, ಆದರ ಸಂಬಂಧವನ್ನೂ ಪೂರ್ಣ ಕಡಿದುಕೊಂಡು ಮುಕ್ತನಾಗಿ ದಿವ್ಯಗತಿಯನ್ನು ಹೊಂದುವನು. ಮೋಕ್ಷ ಸಾಧನವಾದ ಕಾಪಿಲೀಯ ಪಂಚಶಿಖಾಚಾರ್ಯರ ಈ ತತ್ತ್ವೋಪದೇಶ ಕೇಳಿ, ಜನದೇವಮಹಾರಾಜನು ತನ್ನನ್ನು ಆಶ್ರಯಿಸಿದ ನಾಸ್ತಿಕಧರ್ಮದ ಪ್ರತಿಪಾದಕ ಆಚಾರ್ಯರನ್ನೆಲ್ಲ ಸಂಪೂರ್ಣವಾಗಿ ತ್ಯಜಿಸಿ, ಪಂಚಶಿಖಾಚಾರ್ಯರ ಉಪದೇಶವನ್ನೇ ಅನುಸರಿಸಿದನು. ಅದರಂತೆಯೇ ದೇವರನ್ನು ಆರಾಧಿಸಿದನು. ಪ್ರಾಕೃತಿಕವಾದ ವಿಷಯಗಳನ್ನೆಲ್ಲ ತ್ಯಾಗಮಾಡಿದನು. ಪತ್ನೀ ಪುತ್ರಾದಿಗಳಲ್ಲಿಯ ಮಮಕಾರಗಳನ್ನು ತ್ಯಾಗ ಮಾಡಿದನು. ದೇಹಾಭಿಮಾನವನ್ನು ತ್ಯಾಗಮಾಡಿದನು. ಭಗವಂತನ ಧ್ಯಾನಯೋಗದಲ್ಲಿ ಲಕ್ಷವಿಟ್ಟು, ಏಕಾಗ್ರಚಿತ್ತದಿಂದ ಧ್ಯಾನಮಾಡಿ ಪರಮಾತ್ಮನ ಪ್ರಸಾದಕ್ಕೆ ಪಾತ್ರನಾದನು.

ಹೀಗೆ ಆ ಜನಕ ಮಹಾರಾಜನು ಭಗವಂತನ ಧ್ಯಾನದಲ್ಲಿ ಏಕತಾನ ಮನಸ್ಸಿನಿಂದ ಲೀನವಾಗಿ ಕುಳಿತುಕೊಂಡಾಗ, ಅವನ ರಾಜಧಾನಿಗೆ ಬೆಂಕಿಬಿದ್ದಿತು. ಅವನ ಊರು, ಅಂತಃಪುರ, ಅರಮನೆ ಎಲ್ಲವೂ ಭೀಕರವಾದ ಬೆಂಕಿಯ ಜ್ವಾಲೆಗಳಿಂದ ಸುಡತೊಡಗಿದವು. ರಾಜಪರಿವಾರದವರು ಭ್ರಾಂತರಾಗಿ ರಾಜನ ಬಳಿಗೆ ಬಂದು ಅರಿಕೆ ಮಾಡಿಕೊಂಡರು. ''ಪ್ರಭು, ರಾಜಧಾನಿಗೆ ಬೆಂಕಿ ಹತ್ತಿದೆ.'' ಅದನ್ನು ಕೇಳಿ ವಿರಕ್ತನಾದ ಜನಕರಾಜನು 'ನ ಮೇ ದಹತಿ ಕಿಂಚನ! ''ಊರು ಉರಿದರೆ ನನ್ನದೇನು ಸುಡುತ್ತದೆ! ' ಎಂದನು.

ಅಷ್ಟರಲ್ಲಿ ಮತ್ತೊಬ್ಬ ದೂತನು ಬಂದು ಅರಮನೆಯೇ ಬೆಂಕಿಯಿಂದ ದಹಿಸುತ್ತಿದೆ ಎಂದನು. ಆಗಲೂ ಮಹಾರಾಜನದು ಅದೇ ಉತ್ತರ 'ನ ಮೇ ದಹತಿ ಕಿಂಚನ.' ಆಗ ಮತ್ತೂ ಒಬ್ಬ ರಾಜದೂತ ಅಲ್ಲಿಗೆ ಬಂದು 'ಅಂತಃಪುರವೇ ಉರಿಯುತ್ತದೆ. ರಾಣೀವಾಸಕ್ಕೆ ಬೆಂಕಿ ತಗುಲಿದೆ ' ಎಂದಾಗಲೂ ಮಹಾರಾಜ ನಿರ್ವಿಕಾರದಿಂದ ಉತ್ತರಿಸಿದ 'ನ ಮೇ ದಹತಿ ಕಿಂಚನ '. ಆ ಬೆಂಕಿಯು ಬಲಿತು, ಕೊನೆಗೆ ಮಹಾರಾಜನಿದ್ದ ಸಭಾಮಂಟಪಕ್ಕೂ ಕೊನೆಗೆ ಅವನ ಬಟ್ಟೆಗೂ ತಗುಲಿ, ಕೊನೆಗೆ ದೇಹ ಉರಿಯುವಾಗಲೂ ರಾಜನ ಉದ್ಗಾರ ಅದೇ 'ನ ಮೇ ದಹತಿ ಕಿಂಚನ. ' ಹೀಗೆ ಭಗವಂತನ ನಿರಂತರ ಧ್ಯಾನ, ಅವನ ಬದುಕಿರುವವರೆಗೂ ನಡದೇ ಇತ್ತು. ಪಂಚಶಿಖಾಚಾರ್ಯರ ಉಪದೇಶದಿಂದ ಜನಕರಾಜನಿಗೆ ಇಂತಹ ವೈರಾಗ್ಯ ಹುಟ್ಟಿತು. ಅಂದೂ ಅವನು ಕೊನೆಯವರೆಗೂ ಹರಿಯ ಧ್ಯಾನ ಬಿಡಲಿಲ್ಲ. ರಾಜಪರಿವಾರ ದವರು ಬಂದು, ಅಗ್ನಿಯನ್ನು ನಿಯಂತ್ರಣ ಮಾಡಿದ ಬಳಿಕವೂ ಅವನ ಈ ಧ್ಯಾನ ಸಮಾಧಿಯು ನಡದೇ ಇತ್ತು. ಹೀಗೆ ಆ ಮಹಾರಾಜನು ಬದುಕಿ ಇರುವವರೆಗೂ ತ್ಯಾಗ, ಯೋಗ, ಜ್ಞಾನಯೋಗ, ಭಕ್ತಿಯೋಗಗಳಿಂದ ಭಗವಂತನನ್ನು ಪ್ರಸನ್ನಗೊಳಿಸಿ, ಪರಮಾತ್ಮನ ಅಪರೋಕ್ಷಜ್ಞಾನ, ನಿರಂತರ ಧ್ಯಾನದಿಂದ ಅವನ ಸಾಕ್ಷಾತ್ಕಾರ ಪಡೆದು, ಈ ಲಿಂಗ ದೇಹವನ್ನು ಕಳೆದುಕೊಂಡು, ದಿವ್ಯವಾದ ಮೋಕ್ಷವನ್ನು ಪಡೆದನು.

*ನಾರದ ಮಹಾಪುರಾಣದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿದುದು.*



## ಖಾಂಡಿಕ್ಯ ಕೇಶಿಧ್ವಜರ ವಿಚಿತ್ರ ಚರಿತ್ರ

**ಅಧ್ಯಾಯ - ೪೬**

**ನಾರದ :-** ಕರುಣಶಾಲಿಗಳಾದ ಸುನಂದ ಮುನಿಗಳೆ, ತಾಪವು ಮೂರು ವಿಧವೆಂದು ಕೇಳಿದ್ದೇನೆ.ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಎಂದು. ಈ ತ್ರಿವಿಧ ತಾಪಗಳನ್ನು ಅನುಭವಿಸುವ ಪ್ರಸಂಗಬಾರದಂತೆ ಮಾಡಲು ಏನಾದರೂ ಉಪಾಯ ಇದ್ದರೆ ತಿಳಿಸಿರಿ.

**ಸನಂದನ :-** ಜ್ಞಾನಿಯಾದ ನಾರದನೆ, ಮನುಷ್ಯನಿಗೆ ಜನನ ದುಃಖ, ಮರಣ ದುಃಖ ಮತ್ತು ಮುಪ್ಪು ಬಾಲ್ಯ, ತಾರುಣ್ಯ ಮೊದಲಾದ ಅವಸ್ಥೆಗಳಲ್ಲಿ ಸಂಭವಿಸುವ ದುಃಖ- ಹೀಗೆ ಮೂರು ವಿಧವಾದ ದುಃಖಗಳಿರುತ್ತವೆ. ಈ ಮೂರು ವಿಧ ದುಃಖಗಳ ಪರಿಹಾರ ವಾಗಬೇಕಾದರೆ -

**' ಭೋಷಜಂ ಭಗವತ್ಪ್ರಾಪ್ತಿ ರೇಕಾ ದುಃಖಹರಾ ಮತಾ ।'**

ಭಗವಂತನ ಪ್ರಾಪ್ತಿಯೇ, ಈ ಎಲ್ಲ ದುಃಖಗಳಿಗೆ ಔಷಧವಿದ್ದಂತೆ. ಈ ಭಗವಂತನನ್ನು ಅವನ ಸ್ವರೂಪವನ್ನು ತಿಳಿಸಿಕೊಡುವ ವಿದ್ಯೆಯು ' ಪರವಿದ್ಯೆ ' ಎಂದು ಅಥರ್ವಣ ವೇದದಲ್ಲಿ ಹೇಳಿದೆ. ಅಕ್ಷರನಾಮಕ ಪರಮಾತ್ಮನ ಸ್ವರೂಪ ತಿಳಿಸಿಕೊಡುವ ಬ್ರಹ್ಮಮೀ ಮಾಂಸಾ ಸಹಿತವಾದ ಋಗ್ವೇದಾದಿಗಳು ಪರವಿದ್ಯೆ ಎನಿಸುತ್ತವೆ. ಈ ಎಲ್ಲ ವೇದ ವೇದಾಂತಗಳಲ್ಲಿ ಪ್ರತಿಪಾದ್ಯನಾದ ವಿಷ್ಣುವಿಗೆ ' ಭಗವಾನ್ ' ಎಂದು ಕರೆಯುವರು- 'ತದೇವ ಭಗವದ್ವಾಚ್ಯಂ ಸ್ವರೂಪಂ ಪರಮಾತ್ಮನಃ' ಈ ಭಗವಾನ್ ಎಂಬ ನಾಲ್ಕು ಅಕ್ಷರದಲ್ಲಿ ಭ- ಕಾರಕ್ಕೆ ಜ್ಞೇಯ ಮತ್ತು ಜ್ಞಾತಾ ಎಂದರ್ಥ, ಗ- ಕಾರಕ್ಕೆ ಗಮಯಿತ್ರ ಆಗಮಯಿತ್ರ ಅಂದರೆ ಸೃಷ್ಟಿ ಮಾಡುವವ, ಮೋಕ್ಷರೂಪ ಫಲ ಕೊಡುವವ ಎಂದು ಎರಡು

ಅರ್ಥ ಮತ್ತು ಭಗ ಎಂಬ ಎರಡು ಅಕ್ಷರಗಳಿಗೆ ಐಶ್ವರ್ಯ, ಸಂಪತ್ತು, ವೀರ್ಯ, ಯಶಸ್ಸು, ಜ್ಞಾನ, ವೈರಾಗ್ಯ ಇವು ಆರು ಅರ್ಥಗಳೂ ಇವೆ. ವ-ಕಾರಕ್ಕೆ ಎಲ್ಲ ಭೂತಗಳಿಗೆ ಅಂತರ್ಯಾಮಿಯಾಗಿ ವಾಸಿಸುವವನು ಎಲ್ಲ ಪ್ರಪಂಚಕ್ಕೂ ಆಧಾರಭೂತನಾಗಿರುವವನೂ, ನಾಶರಹಿತನೂ ಎಂದು ಅರ್ಥ. ಹೀಗೆ ಈ ಭಗವಾನ್ ಎಂಬ ಶಬ್ದವು ಪರಬ್ರಹ್ಮನಾದ ನಾರಾಯಣನನ್ನು ಮಾತ್ರ ಬೋಧಿಸುತ್ತದೆ.

**ಏವಮೇವ ಮಹಾಶಬ್ದೋ ಭಗವಾನಿತಿ ಸತ್ತಮ ।**
**ಪರಬ್ರಹ್ಮಭೂತಸ್ಯ ವಾಸುದೇವಸ್ಯ ನಾನ್ಯಗಃ**
**ತ್ರ ಪೂಜ್ಯ ಪದಾರ್ಥೋಕ್ತಿಃ ಪರಿಭಾಷಾಸಮನ್ವಿತಾ ।**
**ಶಬ್ದೋಽಯಂ ನೋಪಚಾರೇಣ ಚಾನ್ಯತ್ರ ಹ್ಯುಪಚಾರತಃ ॥**

ಸಾಧುವರ್ಯನೇ! ಈ ಪ್ರಕಾರವಾಗಿ 'ಭಗವಾನ್' ಎಂಬುದು ಮಾಹಾಶಬ್ದವು. ಅದು ಪರಬ್ರಹ್ಮವಾದ ವಾಸುದೇವನಿಗೆ ವಾಚಕವಾಗಿದೆ ಇತರರಿಗಲ್ಲ. ಆ ಭಗವಂತನಲ್ಲಿ ಈ ಶಬ್ದವು ಪರಿಭಾಷೆಯಾದ ಪೂಜ್ಯಂ ಎಂಬ ಅರ್ಥವನ್ನು ಸೂಚಿಸುತ್ತದೆ. ಇತರರಲ್ಲಿ ಈ ಶಬ್ದವು ಔಪಚಾರಿಕವು.

**ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯತೇಜಾಂಸ್ಯಶೇಷತಃ ।**
**ಭಗವಚ್ಛಬ್ದವಾಚ್ಯಾನಿ ವಿನಾದಿ ಹೇಯೈರ್ಗುಣಾದಿಭಿಃ ॥**

ಹೇಯವಾದ ಗುಣಾದಿಗಳ ವಿನಹ ಸಮಗ್ರವಾದ ಜ್ಞಾನ, ಶಕ್ತಿ, ಬಲ ಐಶ್ವರ್ಯ. ವೀರ್ಯ ಮತ್ತು ತೇಜಸ್ಸು ಇವುಗಳು ಭಗವಚ್ಛಬ್ದಾರ್ಥಗಳು.

**ಸರ್ವಾಣಿ ತತ್ರ ಭೂತಾನಿ ವಸಂತಿ ಪರಮಾತ್ಮನಿ ।**
**ಭೂತೇಷು ವಸತೇ ಸೋತರ್ವಾಸುದೇವಸ್ತತಃ ಸ್ಮೃತಃ ।**

ಸಕಲ ಭೂತಗಳೂ ಪರಮಾತ್ಮನನ್ನೇ ಆಶ್ರಯಿಸಿವೆ, ಪರಮಾತ್ಮನು ಸಕಲ ಭೂತಗಳಲ್ಲಿ ಅಂತರ್ಗತನಾಗಿರುವವನು. ಆದುದರಿಂದ ಅವನು ವಾಸುದೇವನೆನಿಸಿಕೊಳ್ಳುವನು. ದೋಷರಹಿತನೂ, ಸರ್ವಗುಣ ಪರಿಪೂರ್ಣನೂ ಆದ ಆ ಭಗವಂತನ ಸ್ವರೂಪವನ್ನು ಚೆನ್ನಾಗಿ ಅರಿಯಲು ಮತ್ತು ಸಾಕ್ಷಾತ್ಕರಿಸಲು ಸಾಧನವಾದದ್ದೇ ಧರ್ಮ, ಮಿಕ್ಕಿದ್ದೆಲ್ಲವೂ ಅಜ್ಞಾನ. ಈ ಪರಮಾತ್ಮ ದರ್ಶನವು ಸ್ವಾಧ್ಯಾಯ ಹಾಗೂ ಇಂದ್ರಿಯ ನಿಗ್ರಹಗಳಿಂದ ಸಾಧ್ಯ. ಸ್ವಾಧ್ಯಾಯದಿಂದ ಜ್ಞಾನಯೋಗ, ಜ್ಞಾನದಿಂದ ಭಕ್ತಿಯೋಗ, ಭಕ್ತಿಯೋಗದಿಂದ ಭಗವತ್ಪ್ರಸಾದ, ಭಗವತ್ಪ್ರಸಾದದಿಂದ ಪರಮಾತ್ಮನ ದರ್ಶನ. ಆದರಿಂದ ಮೋಕ್ಷ. ಹೀಗೆ ಪರಮಪದ ಪ್ರಾಪ್ತಿಗೆ ಸ್ವಾಧ್ಯಾಯ ಮೂಲ ಕಾರಣವಾಗಿದೆ.

**ನಾರದ :-** ಪೂಜ್ಯರೆ, ಆ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನವಾದ ಯೋಗ ಜ್ಞಾನದ ಸ್ವರೂಪವನ್ನು ತಿಳಿಯುವ ಅಪೇಕ್ಷೆ ನನಗಿದೆ. ತಿಳಿಸಬೇಕು.

**ಸನಂದನ :-** ಈ ವಿಷಯದಲ್ಲಿ ಮಹಾತ್ಮನಾದ ಖಾಂಡಿಕ್ಯನಿಗೆ ಕೇಶಿಧ್ವಜನು ಹೇಳಿದ ಆ ಯೋಗವಿಷಯವನ್ನು ನಿನಗೆ ಹೇಳುತ್ತೇನೆ ಕೇಳು. ಜನಕ ವಂಶದಲ್ಲಿ ಹಿಂದೆ ಧರ್ಮಧ್ವಜ ನೆಂದು ರಾಜನಿದ್ದ. ಧರ್ಮಧ್ವಜನ ಮಕ್ಕಳು ಅಮಿತಧ್ವಜ ಮತ್ತು ಕೃತಧ್ವಜ. ಕೃತಧ್ವಜನು ರಾಜನಾದರೂ ಅಧ್ಯಾತ್ಮ ವಿಚಾರದಲ್ಲಿ ತತ್ಪರನಾಗಿದ್ದನು.

ಕೃತಧ್ವಜನಿಗೆ ಕೇಶಿಧ್ವಜನೆಂಬ ಪುತ್ರನಿದ್ದನು. ಅಮಿತಧ್ವಜನಿಗೆ ಖಾಂಡಿಕ್ಯನೆಂಬ ಹೆಸರಿನ ಮಗನಿದ್ದನು. ಈ ಖಾಂಡಿಕ್ಯನಿಗೆ ಜನಕರಾಜನೆಂದೂ ಕರೆಯುತ್ತಿದ್ದನು. ರಾಜ್ಯ ಸಿಂಹಾಸನದಲ್ಲಿ ಎಲ್ಲ ಪ್ರಜಾಪರಿವಾರ ಮಂತ್ರಿಗಳು ಕೇಶಿಧ್ವಜನನ್ನು ಕೂಡಿಸಿ ಪಟ್ಟಾಭಿಷೇಕ ಮಾಡಿದರು. ಖಾಂಡಿಕ್ಯನನ್ನು ರಾಜ್ಯಾಧಿಕಾರದಿಂದ ದೂರಗೊಳಿಸಿದರು. ಹೀಗೆ ಅಧಿಕಾರದಿಂದ ನಿರಾಕೃತನಾಗಿ ರಾಜ್ಯ ವೈಭವ ರಹಿತನಾದ ಖಾಂಡಿಕ್ಯನು ದೇಶವನ್ನು ಬಿಟ್ಟು ಅರಣ್ಯದಲ್ಲಿಯೇ ವಾಸಿಸಿದನು. ರಾಜಧಾನಿಯಲ್ಲಿದ್ದ ಕೇಶಿಧ್ವಜ ರಾಜನೂ ಪರಮಧಾರ್ಮಿಕ. ಪರಬ್ರಹ್ಮ ಜಿಜ್ಞಾಸು. ದಿವ್ಯಜ್ಞಾನ ಪಡೆಯಲು ತವಕಿಸುವ ಆ ರಾಜನು ಅನೇಕ ಯಜ್ಞ ಮಾಡಿದನು. ಬ್ರಹ್ಮವಿದ್ಯೆಯನ್ನು ಚೆನ್ನಾಗಿ ಅವಗತ ಮಾಡಿಕೊಂಡು, ಮೃತ್ಯುವನ್ನು ಮೀರಿ ನಿಲ್ಲಲು ಆ ಕೇಶಿಧ್ವಜನು ಯೋಗಾನುಷ್ಠಾನದಲ್ಲಿ ತೊಡಗಿದನು.

ಆಗ ಆ ಕೇಶಿಧ್ವಜರಾಜನ ಆಕಳವನ್ನುಕಾಡಿನಲ್ಲಿ ಒಂದು ಕ್ರೂರ ಹುಲಿಯಕೊಂದು ಹಾಕಿತು. ಅದನ್ನು ಕೇಳಿ ರಾಜನಿಗೆ ದುಃಖವಾಯಿತು. ತಾನು ಆ ಹಸುವಿನ ಹಿಂದೆ ಸರಿಯಾಗಿ ಸೇವಕರನ್ನು ನಿಯಮಿಸಿದ್ದರೆ ಹಸು ಸಾಯುತ್ತಿರಲಿಲ್ಲ. ತನ್ನ ಅನವಧಾನದಿಂದಲೇ ಗೋಹತ್ಯೆ ಆಯಿತು ಎಂದು ಅವನು ಮನದಲ್ಲಿ ಕುದಿಯ ತೊಡಗಿದನು. ತಿಳಿಯದೇ ಘಟಿಸಿದ ಗೋಹತ್ಯಾ ರೂಪ ಪಾಪಕ್ಕೆ ಪರಿಹಾರವೇನು ಎಂದು ತನ್ನ ಋತ್ವಿಜರಿಗೆ ಕೇಳಿದನು. ಅದಕ್ಕೆ ಅವರು- '' ಈ ವಿಷಯವು ಅತ್ಯಂತ ಸೂಕ್ಷ್ಮವಾಗಿದ್ದು ನಾವು ಏನನ್ನೂ ಹೇಳಲಾರೆವು. ನೀನು ಬೇಕಾದರೆ ಕಶೇರುವನ್ನು ಕೇಳು '' ಎಂದು ಸೂಚಿಸಿದರು.

ಕಶೇರುವಿನ ಬಳಿಗೆ ಬಂದ ಮಹಾರಾಜ. ಅವನು ಕೂಡ ' ಭೂಪಾಲ, ಈ ವಿಷಯವು ಬಹಳ ಗಹನ, ನನಗೆ ಇದರ ಬಗ್ಗೆ ಜ್ಞಾನವಿಲ್ಲ. ನೀನು ಶುನಕನನ್ನು ಕೇಳುವದು ಯೋಗ್ಯ' ಎಂದ. ಆಗ ರಾಜನು .ಯಾರಾದರೂ ಈ ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಹೇಳಿದರೆ ಸಾಕೆಂದು ಶುನಕನ ಬಳಿಗೆ ಬಂದು ತನ್ನ ಪ್ರಶ್ನೆಯನ್ನು ಅವನೆದುರು ಹೇಳಿದಾಗ ಶುನಕನು ಹೇಳಿದನು - '' ಮಹಾರಾಜ, ನೀನು ಏಕೆ ಇಷ್ಟು ಪ್ರಯಾಸ ಪಡುವಿ ? ಈ ವಿಷಯ ನಿಜವಾಗಿಯೂ ಸಾಮಾನ್ಯರಿಗೆ ದುರ್ಜ್ಞೇಯವಾಗಿದೆ, ಈ ಬಗ್ಗೆ ಚೆನ್ನಾಗಿ ತಿಳಿದ ವ್ಯಕ್ತಿ ಎಂದರೆ ನಿನ್ನ ವೈರಿಯಾದ ಖಾಂಡಿಕ್ಯ. ನೀನು ಅವನನ್ನು ಯುದ್ಧದಲ್ಲಿ ಸೋಲಿಸಿ ದೇಶಬಿಟ್ಟು ಹೊರಗೆ ಹಾಕಿರುವಿ, ಅವನು ಎಲ್ಲಿಯೋ ಕಾಡಿನಲ್ಲಿ ವಾಸಿಸುತ್ತಿದ್ದಾನೆ. ಆದರೆ ಈ ವಿಷಯದ ಬಗ್ಗೆ ನಿರ್ಣಯ ಕೊಡಲು ಅವನೊಬ್ಬನೇ ಸಮರ್ಥನು. ನಿಜವಾಗಿ ಅಸಾಮಾನ್ಯ ಮಹಾಜ್ಞಾನಿ ಆ ಖಾಂಡಿಕ್ಯ'' ಮಹಾಜ್ಞಾನಿಗಳಾದ ಶುನಕರಂಥ ಮುನಿಪುಂಗವರ ಬಾಯಿಂದ ಖಾಂಡಿಕ್ಯನ ಜ್ಞಾನದ ಎತ್ತರ ಬಿತ್ತರಗಳನ್ನು ಕೇಳಿ ಕೇಶಿಧ್ವಜರಾಜನಿಗೆ ಅತ್ಯಾಶ್ಚರ್ಯವಾಯಿತು. ಅವನು ಕೂಡ ಬಹಳ ಗುಣಪಕ್ಷಪಾತಿ, ವಿದ್ಯಾವೃದ್ಧ. ಕೂಡಲೇ ಅವನು ಶುನಕನ ಮುಂದೆ ವಿಚಾರಿಸಿ ಹೇಳಿದನು - ''ನಿಜವಾದ ಜ್ಞಾನಿಯನ್ನು ಗೊತ್ತು ಹಚ್ಚಿ ನನಗೆ ತಿಳಿಸಿದ್ದಕ್ಕಾಗಿ ತಮಗೆ ನಾನು ಕೃತಜ್ಞ. ನನ್ನ ವೈರಿಯಾದರೂ ಚಿಂತೆ ಇಲ್ಲ, ಖಾಂಡಿಕ್ಯನ ಬಳಿಗೆ ಹೋಗುವೆ. ನಾನು ಮಾಡಿದ ಈ ಗೋಹತ್ಯೆಗೆ ಪ್ರಾಯಶ್ಚಿತ್ತ ಕೇಳುತ್ತೇನೆ. ಅವನು ನನ್ನ ವೈರಿ, ಆದುದರಿಂದ ನಾನು ಅವನ ಮನೆಗೆ ಹೋದಾಗ ಅವನು ನನ್ನನ್ನು ಕೊಂದರೂ ಚಿಂತೆ ಇಲ್ಲ. ಅಂತಹ ಜ್ಞಾನಿಯ ಕೈಯಿಂದ ಮರಣವಾದರೂ ನನಗೆ ಯಜ್ಞ ಫಲ ಬಂದಂತೆ. ಅವನು ಪ್ರಾಯಶ್ಚಿತ್ತ ಹೇಳಿದರಂತೂ ನನ್ನ ಈ ಜ್ಞಾನಯೋಗವು ಸಾಂಗವಾಗುವದು'' ಹೀಗೆ ಹೇಳಿ ಮಹಾರಾಜನು ರಥಾರೂಢನಾಗಿ, ಕೃಷ್ಣಾಜಿನ ಹೊದ್ದು ಕಾಡಿಗೆ ಹೊರಟನು. ಖಾಂಡಿಕ್ಯನು

ಇರುವ ಅರಣ್ಯಕ್ಕೆ ಬಂದನು. ಪಾದಾಚಾರಿಯಾಗಿಯೇ ಅವನಿರುವ ಎಲೆಮನೆಗೆ ನಡೆದು ಆಗಮಿಸಿದನು. ಅವನನ್ನು ನೋಡಿದ ಕೂಡಲೇ ಖಾಂಡಿಕ್ಯನ ಕಣ್ಣು ಕೋಪದಿಂದ ಕೆಂಪಗಾದವು. ಕೂಡಲೇ ಅವನು ಬಿಲ್ಲಿಗೆ ಬಾಣ ಹೂಡಿದನು. ಬಾಣದಂತೆ ಬಿರುಸಾದ ಮಾತೂ ಆಡಿದನು-

"ಮೂಢನಾದ ಕೇಶಿಧ್ವಜನೇ, ಕೃಷ್ಣಾಜಿನ ಹೊದ್ದುಕೊಂಡು ಸಾಧುಗಳ ಸೋಗುಹಾಕಿ ನೀನು ನನ್ನನ್ನುಸಂಹರಿಸಲು ಬಂದಿರುವೆ. ನನ್ನನ್ನು ವಂಚಿಸಬೇಕೆಂದು ನೀನು ದುರ್ಬುದ್ಧಿಯಿಂದ ಈ ಕೃಷ್ಣಾಜಿನ ಹೊದ್ದಿರುವೆ, ಕೃಷ್ಣಾಜಿನ ಧರಿಸಿರುವ ಸಾಧುಗಳನ್ನು ನೋಡಿ ನಾನು ಅಂತಹವರನ್ನು ಕೊಲ್ಲುವದಿಲ್ಲವೆಂದು ತಿಳಿದಿರುವೆ. ಆದರೆ ನೀನು ಎಂತಹ ಸಾತ್ವಿಕ ವೇಷ ಧರಿಸಿದರೂ ನಾನು ಬಿಡುವದಿಲ್ಲ. ನೀನು ಹಿಂದೆ ನನ್ನ ಮೇಲೆ ಕ್ರೂರ ಬಾಣ ಬಿಟ್ಟು ಹಿಂಸೆ ಮಾಡಿರುವೆ. ನನ್ನನ್ನು ಸೋಲಿಸಿ ನನ್ನ ರಾಜ್ಯ ಅಪಹರಿಸಿರುವೆ. ನಿನ್ನನ್ನು ಕೊಂದರೆ ನನಗೆ ಪಾಪವಿಲ್ಲ. ನಿನ್ನನ್ನು ನಾನು ಈಗ ಕೊಲ್ಲದೇ ಬಿಡುವದಿಲ್ಲ."

**ಕೇಶಿಧ್ವಜ :-** ಖಾಂಡಿಕ್ಯನೇ, ನಾನು ನಿನ್ನನ್ನು ಕೊಲ್ಲಲು ಬಂದಿಲ್ಲ. ತತ್ವ ವಿಷಯದಲ್ಲಿ ಸಂಶಯ ಬಂದಿದೆ. ಅದನ್ನು ಪರಿಹಾರ ಮಾಡಿಕೊಳ್ಳಲು ನಿನ್ನಲ್ಲಿಗೆ ಬಂದಿದ್ದೇನೆ. ನನ್ನ ಈ ಮಾತನ್ನು ನಂಬು. ಇದರ ಮೇಲೆ ನೀನು ವಿಚಾರ ಮಾಡು. ನಾನು ಹೇಳುವದನ್ನು ಹೇಳಿದ್ದೇನೆ. ಬಂದ ಕಾರಣ ತಿಳಿಸಿದ್ದೇನೆ. ಇದನ್ನೆಲ್ಲ ನಿನ್ನಮಂತ್ರಿ ಪರಿವಾರದೊಡನೆ ಆಲೋಚಿಸು, ಅನಂತರ ನೀನು ನನ್ನ ಮೇಲಿನ ಕೋಪ ಬಿಡು, ಇಲ್ಲವೆ ನನ್ನ ಮೇಲೆ ಬಾಣವನ್ನಾದರೂ ಬಿಡು." ಅನಂತರ ಖಾಂಡಿಕ್ಯನು ಒಳಗೆ ಹೋಗಿ ತನ್ನ ಪುರೋಹಿತ ಹಾಗೂ ಮಂತ್ರಿಗಳೊಂದಿಗೆ ರಹಸ್ಯವಾಗಿ ವಿಚಾರ ಮಾಡಿದನು. ಅವನ ಮಂತ್ರಿಗಳು ಹೇಳಿದರು. " ಇವನು ನಮ್ಮ ವೈರಿ. ನಮ್ಮ ರಾಜ್ಯ ಕಸಿದುಕೊಂಡಿದ್ದಾನೆ, ಈಗ ಒಬ್ಬನೇ ಸಿಕ್ಕಿದ್ದಾನೆ. ಇವನನ್ನು ನಾವು ಸುಲಭವಾಗಿ ಕೊಲ್ಲಬಹುದು. ಇವನನ್ನು ಕೊಂದರೆ ರಾಜ್ಯ ನಮಗೇ ದೊರೆಯುವದು. ಈಗ ಇವನನ್ನು ಬಿಡಬಾರದು." ಮಂತ್ರಿಗಳ ಈ ಸಲಹೆ ಖಾಂಡಿಕ್ಯನಿಗೆ ಹಿಡಿಸಲಿಲ್ಲ. ಅವನು ವಿಚಾರ ಮಾಡಿದನು. " ಇವನನ್ನು ನಾನು ಕೂಕಾಂದರೆ ಈ ರಾಜ್ಯವೆಲ್ಲವೂ ನನ್ನದಾಗುವದು. ಆದರೆ ಪರಲೋಕದಲ್ಲಿ ಇವನಿಗೆ ಜಯವಾಗುವದು. ಮನೆಗ ಬಂದು ಇವನನ್ನು ನಾನು ಕೊಲ್ಲದಿದ್ದರೆ ಇವನಿಗೆ ಈಗ ಇದ್ದಂತೆ ಈ ಲೋಕದ ರಾಜ್ಯ ಲಾಭವು ಮಾತ್ರ ಉಳಿಯುತ್ತದೆ. ಇವನಿಗೆ ಜ್ಞಾನೋಪದೇಶ ಮಾಡಿದ್ದಕ್ಕೆ ನನಗೆ ಪರಲೋಕ ಜಯಪ್ರಾಪ್ತವಾಗುತ್ತದೆ. ಭೂಲೋಕ ಜಯ ಅಲ್ಪಕಾಲೀನ, ಪರಲೋಕ ಜಯ ಶಾಶ್ವತ, ಆದುದರಿಂದ ಮನೆಗೆ ಬಂದ ಇವನನ್ನು ಆದರಿಸಿ ಇವನು ಮಾಡಿದ ಪ್ರಶ್ನೆಗಳಿಗೆ ಉತ್ತರ ಹೇಳುತ್ತೇನೆ" ಎಂದು ನಿರ್ಧರಿಸಿದನು. ಖಾಂಡಿಕ್ಯ ಯಾವ ಮಂತ್ರಿಮಾನ್ಯರ ಮಾತನ್ನೂ ಕೇಳಲಿಲ್ಲ. ಹೊರಗೆ ಬಂದು ಕೇಶಿಧ್ವಜನ ಹತ್ತಿರ ನಿಂತು ನುಡಿದನು. " ಕೇಶಿಧ್ವಜ ನಿನಗೇನು ಕೇಳಬೇಕಾಗಿದೆ ಕೇಳು. ನಾನು ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತೇನೆ" ಎಂದನು. ಅನಂತರ ಕೇಶಿಧ್ವಜನು ತಾನು ಹೋಮಕ್ಕಾಗಿ ನಿಯೋಜಿಸಿದ ಹಸುವು ತನ್ನ ಅಸಾವಧಾನದಿಂದ ಹತವಾಯಿತೆಂದು ತಿಳಿಸಿ ಅದಕ್ಕೆ ಪ್ರಾಯಶ್ಚಿತ್ತ ಕೇಳಿದನು. ಆಗ ಖಾಂಡಿಕ್ಯನು ಸಹಾನುಭೂತಿಯಿಂದ ಎಲ್ಲವನ್ನೂ ಕೇಳಿಕೊಂಡು ಅದಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತ ವಿಧಿ ವಿಧಾನವನ್ನು ಶಾಸ್ತ್ರೋಕ್ತವಾಗಿ ಸಮಂಜಸವಾಗಿ ಉಪದೇಶಿಸಿದನು. ಎಲ್ಲ ವಿಷಯಗಳನ್ನು ಸರಿಯಾಗಿ ಖಾಂಡಿಕ್ಯನಿಂದ ತಿಳಿದುಕೊಂಡು ಅವನ ಅಪ್ಪಣೆ ಪಡೆದು ಕೇಶಿಧ್ವಜನು ತನ್ನ ಯಜ್ಞವಾಟಕ್ಕೆ ಬಂದನು. ಪುರೋಹಿತರಿಂದ ಕೂಡಿಕೊಂಡು ಸರಿಯಾಗಿ

ಮೊದಲು ಗೋಹತ್ಯೆಗೆ ಪ್ರಾಯಶ್ಚಿತ್ತ ಮಾಡಕೊಂಡನು. ಅನಂತರ ಬ್ರಹ್ಮಜ್ಞಾನ ಪ್ರಾಪ್ತಿಗಾಗಿ ತಾನು ಕೈಕೊಂಡ ವ್ರತಾನುಷ್ಠಾನವನ್ನೂ, ಯಜ್ಞ ವಿಧಾನವನ್ನೂ ವಿಧಿಪೂರ್ವಕವಾಗಿ ಮಾಡಿ ಅವಭೃತ ಸ್ನಾನ ಮಾಡಿದನು.

ಯಜ್ಞವೆಲ್ಲವೂ ಮುಗಿದ ಬಳಿಕ ರಾಜನು ಋತ್ವಿಜರಿಗೆ ದಾನ ದಕ್ಷಿಣೆ ಕೊಟ್ಟು ಸತ್ಕರಿಸಿದನು. ಸದಸ್ಯರನ್ನು ಗೌರವಿಸಿದನು. ಅನ್ನದಾನ ಭೂದಾನ ಗೋದಾನ ಸುವರ್ಣದಾನ, ದಕ್ಷಿಣಾದಾನಾದಿಗಳನ್ನು ಸಾಂಗವಾಗಿ ವಂಚನೆಯಿಲ್ಲದೆ, ಮಾಡಿ ಪೂರೈಸಿದನು. ಇಷ್ಟಾದರೂ ಆ ಮಹಾರಾಜನಿಗೆ ಸಮಾಧಾನವಾಗಲಿಲ್ಲ.

ತನ್ನಲ್ಲಿಯೇ ಆಲೋಚಿಸಿದನು. 'ನಾನು ಮಾಡುವದೆಲ್ಲ ಮಾಡಿದ್ದೇನೆ. ಬ್ರಾಹ್ಮಣರಿಗೂ ಇತರ ವರ್ಣದವರಿಗೂ ಬಯಸಿದ್ದಷ್ಟು ದಕ್ಷಿಣೆ ಕೊಟ್ಟಿದ್ದೇನೆ, ಭಿಕ್ಷುಕರಿಗೆಲ್ಲ ಬಟ್ಟೆ, ಬಂಗಾರ, ಭೋಜನ, ಮನೆ ಮುಂತಾಗಿ ಬೇಡಿದ್ದೆಲ್ಲ ನೀಡಿದ್ದೇನೆ. ಆದರೂ ನನ ಮನಸ್ಸಿನಲ್ಲಿ ಇನ್ನೂ ಸಂತೃಪ್ತಿ ಹುಟ್ಟದಿರಲು ಕಾರಣವೇನು ? ಹೀಗೆ ಅವನ ಮಿದುಳಿನಲ್ಲಿ ವಿಚಾರ ಹುಟ್ಟುತ್ತಿರುವಾಗಲೇ ಒಂದು ವಿಷಯ ಜ್ಞಾಪಕಕ್ಕೆ ಬಂತು, "ಖಾಂಡಿಕ್ಯನಿಂದ ಪ್ರಾಯಶ್ಚಿತ್ತ ಉಪದೇಶ ಪಡೆದ ಬಳಿಕ ಅವನಿಗೆ ನಾನು ಗುರುದಕ್ಷಿಣೆ ಕೊಡಲಿಲ್ಲ. ಅದಕ್ಕಾಗಿ ನನಗೆ ಈಗ ಹಳಹಳಿ. ಯಜ್ಞವು ಇನ್ನೂ ಪೂರ್ಣವಾಗಿದೆ ಎಂದೆನಿಸಲೊಲ್ಲದು. ಅದಕ್ಕೆ ಇದೇ ಕಾರಣ." ಹೀಗೆ ತಿಳಿದು ಕೂಡಲೇ ರಥವೇರಿ ಖಾಂಡಿಕ್ಯನ ಬಳಿಗೆ ಬಂದನು. ಖಾಂಡಿಕ್ಯನಿಗೆ ಮತ್ತೆ ಅದೇ ಸಂದೇಹ "ತನ್ನ ಯಜ್ಞ ಮುಗಿಸಿಕೊಂಡು ನನ್ನನ್ನು ಕೊಲ್ಲುವದಕ್ಕೆ ಬಂದಿದ್ದಾನೆ"ಎಂದು. ಆಗ ಕೇಶಿಧ್ವಜನು ವಿನಯದಿಂದ - " ಸೋದರ ನಾನು ನಿನಗ ಸರ್ವಥಾ, ಅಪಕಾರ ಬಗೆಯ ಬಂದವನಲ್ಲ. ನಿನ್ನಿಂದ ಉಪದೇಶ ಪಡೆದಿದ್ದೇನೆ. ನೀನು ನನಗೆ ಗುರು. ಆದರೆ ನಿನಗೆ ಗುರುದಕ್ಷಿಣೆ ನೀಡದೇ ಹೊರಟು ಹೋದೆ. ಆ ತಪ್ಪನ್ನು ತಿದ್ದಿಕೊಳ್ಳಲು ಬಂದಿದ್ದೇನೆ. ನನ್ನ ಯಾಗವು ಸಾಂಗವಾಯಿತು. ಅದಕ್ಕೆ ಕಾರಣ ನಿನ್ನ ಉಪದೇಶ. ಆದುದರಿಂದ ನಿನಗೆ ಸರಿಯಾದ ಗುರುದಕ್ಷಿಣೆ ಕೊಡಲು ಬಂದಿದ್ದೇನೆ ನಿನ್ನ ಬಳಿಗೆ. ನಿನಗೇನು ಗುರುದಕ್ಷಿಣೆ ಬೇಕು ? ಹೇಳು. ಬಯಸಿದ್ದನ್ನು ಕೊಡುವೆ." ಇದನ್ನು ಕೇಳಿ ಖಾಂಡಿಕ್ಯನು ತನ್ನ ಮಂತ್ರಿಗಳೊಡನೆ ವಿಚಾರಿಸಿದನು. ಅವನ ಮಂತ್ರಿಗಳು ನಿನ್ನಿಂದ ಅಪಹರಿಸಿದ ರಾಜ್ಯ ಮರಳಿ ಕೇಳು " ಎಂದು ಸಲಹೆ ಇತ್ತರು. ಅದಕ್ಕೆ ಖಾಂಡಿಕ್ಯನು ನಕ್ಕು ನುಡಿದನು - ಯುದ್ಧ ಮಾಡದೆ, ಮೈಗೆ ಆಯಾಸವಾಗದೆ, ರಾಜ್ಯವನ್ನು ಯಾಚನೆ ಮಾಡಿ ದೊರಕಿಸುವದೇ ಕ್ಷತ್ರಿಯರು ? ಅಂತಹ ರಾಜ್ಯ ನನಗೆ ಬೇಡ. ಎಷ್ಟಾದರೂ ಈ ರಾಜ್ಯ ಅತ್ಯಲ್ಪಕಾಲ ಅನುಭವಿಸುವಂತಹುದು. ಈ ಅಶಾಶ್ವತ ರಾಜ್ಯವನ್ನು ನಾನು ಇವನಿಂದ ಹೇಗೆ ಕೇಳಿ ತೆಗೆದುಕೊಳ್ಳಲಿ ? ನೀವೆಲ್ಲರೂ ಸ್ವಾರ್ಥಪರರು." ಎಂದು ಹೇಳಿ ಖಾಂಡಿಕ್ಯನು ಕೇಶಿಧ್ವಜ ರಾಜನ ಬಳಿಗೆ ಬಂದು "ನೀನು ನನಗೆ ಗುರುದಕ್ಷಿಣೆ ಕೊಡುವದು ಖಂಡಿತವೆ ? ಎಂದು ಕೇಳಿದನು. ಅದಕ್ಕೆ ಕೇಶಿಧ್ವಜನು ನುಡಿದನು "ಅದರಲ್ಲಿ ಸಂದೇಹ ಏಕೆ? ನಾನು ಬಂದಿರುವುದೇ ಅದಕ್ಕಾಗಿ. ನೀನು ನಿರಾತಂಕವಾಗಿ ಕೇಳು. ಕೇಳಿದ್ದನ್ನು ಕೊಟ್ಟು ಹೋಗುತ್ತೇನೆ."

**ಖಾಂಡಿಕ್ಯ** :- ಸಂಸಾರ ದುಃಖವನ್ನು ಹೋಗಲಾಡಿಸಲು ತಾರಕವಾದ ಕರ್ಮ ಯಾವದು ? ಎಂಬುದನ್ನು ತಿಳಿಸು. ನೀನು ನನಗೆ ಗುರು ದಕ್ಷಿಣೆ ಕೊಡುವದಾದರೆ ಇಂತಹ

ಭಲವಂಧ ಮೋಚಕವಾದ ಆತ್ಮೋದ್ಧಾರ ಸಾಧಕವಾದ ಕರ್ಮದ ವಿಷಯ ತಿಳಿಸು.'' ಅದನ್ನು ಕೇಳಿ ಕೇಶಿಧ್ವಜನಿಗೆ ಅಚ್ಚರಿ ಆಯಿತು, ಅವನು ಕೇಳಿದನು -

**ಕೇಶಿಧ್ವಜ :-** ಕ್ಷತ್ರಿಯರಿಗೆ ರಾಜ್ಯ, ಅಧಿಕಾರಕ್ಕಿಂತ ಪ್ರಿಯವಾದ್ದು ಯಾವದೂ ಇಲ್ಲ. ಆದರೂ ನೀನು ಈ ವಿಶಾಲ ಸಾಮ್ರಾಜ್ಯವನ್ನು ಏಕೆ ಯಾಚಿಸಲಿಲ್ಲ ?

**ಖಾಂಡಿಕ್ಯ :-** ಕೇಶಿಧ್ವಜನೆ, ನಿಜವಾದ ಪಂಡಿತರು, ರಾಜ್ಯಾಧಿಕಾರವನ್ನು ಅಪೇಕ್ಷಿಸುವದಿಲ್ಲ. ಅದರ ಅಪೇಕ್ಷೆ ಇದ್ದರೆ ಪಂಡಿತರೇ ಅಲ್ಲ, ನಾನು ನಿನ್ನ ರಾಜ್ಯ ಅಪೇಕ್ಷಿಸದಿರುವದಕ್ಕೆ ಇನ್ನೂ ಒಂದು ಕಾರಣ ಉಂಟು, ಪ್ರಜೆಗಳನ್ನು ರಕ್ಷಿಸುವದು ಕ್ಷತ್ರಿಯರ ವಿಶೇಷವಾಗಿ ರಾಜರ ಮುಖ್ಯ ಕರ್ತವ್ಯ. ಆ ಪ್ರಜಾಜನರಿಗೆ ಕಂಟಕರಾದ ವೈರಿ ರಾಜರನ್ನು ಧರ್ಮ ಯುದ್ಧಮಾಡಿ ಕೊಲ್ಲುವದು ರಾಜರಾದವರ ಆದ್ಯಕರ್ತವ್ಯ. ಪರರಾಜರನ್ನು ಸಂಹರಿಸುವದಕ್ಕೆ ನನ್ನಲ್ಲಿ ಶಕ್ತಿಯಿಲ್ಲ. ಮತ್ತು ಈ ರಾಜ್ಯೈಶ್ವರ್ಯವನ್ನು ಭೋಗಮಾಡುವ ಉದ್ದೇಶವೇನು ? ಆ ಐಶ್ವರ್ಯದ ಲಾಲಸೆ, ಅಧಿಕಾರ ದರ್ಪದ ಮೆರೆಸುವಿಕೆ, ಸ್ವಚ್ಛಂದ ಸುಖೋಪಭೋಗ. ಇದಿಷ್ಟೇ ತಾನೆ ? ವಾಸ್ತವಿಕವಾಗಿ ವಿಚಾರಿಸಿದರೆ ಇವೆಲ್ಲವೂ ಸಂಸಾರ ಬಂಧನಕ್ಕೆ ಕಾರಣ ಆಗುವವು. ನಾನು ಇದೀಗ ಭವಬಂಧನದ ಸಂಬಂಧವನ್ನು ಹರಿದುಕೊಂಡು ಈಚೆಗೆ ಬಂದಿದ್ದೇನೆ. ಮತ್ತೆ ಆ ಸಂಸಾರದ ಸೆಳುವಿಗೆ ಸಿಲುಕಲಾರೆ. ಇನ್ನೂ ಒಂದು ಕಾರಣ ರಾಜ್ಯಾಧಿಕಾರವನ್ನು ಬಯಸದಿರುವದಕ್ಕೆ ಉಂಟು. 'ನ ಯಾಂಚಾ ಕ್ಷತ್ರಬಂಧೂನಾಂ ಧರ್ಮೋ ಹ್ಯೇತತ್ ಸತಾಂ ಮತಂ' ಕ್ಷತ್ರಿಯರು ಯಾಚನೆಯನ್ನು ಸರ್ವಥಾ ಮಾಡಕೂಡದು. ಅದು ಅಧರ್ಮ. ಆದುದರಿಂದ ಕ್ಷತ್ರಿಯನಾದ ನಾನು ನಿನಗೆ ರಾಜ್ಯವನ್ನು ಬೇಡಲಿಲ್ಲ. ಅಹಂಕಾರದಿಂದ ಉಬ್ಬಿಕೊಬ್ಬಿ ಮದವೆಂಬ ಮದಿರೆಯನ್ನು ಪಾನಮಾಡಿ ಮತ್ತಾರಾದವರು ಮಾತ್ರ ರಾಜ್ಯ ಸಿರಿಯನ್ನು ಬಯಸುವರು. ನನ್ನಂತಹ ವೀತರಾಗ ಪೂತಾತ್ಮರು ರಾಜ್ಯವನ್ನು ಬಯಸುವದಿಲ್ಲ. ಅಧಿಕಾರಕ್ಕೆ ಆಶಿಸುವದಿಲ್ಲ. ಈ ರಾಜ್ಯಾಧಿಕಾರಾದ ಅಭಿಲಾಷೆಯು ಅವಿದ್ಯಾ ವಿಲಸಿತ.

**ಕೇಶಿಧ್ವಜ :-** ಹಾಗಾದರೆ ನಾನು ಅವಿದ್ಯಾದಿಂದ ಆವೃತನೆ ! ದಿವ್ಯಜ್ಞಾನದಿಂದಲೇ ಈ ಸಂಸಾರವನ್ನು ದಾಟಬೇಕೆಂದು ಬಯಸಿದ್ದೇನೆ. ರಾಜ್ಯವನ್ನು ಆಳುತ್ತೇನೆ. ಆಶೆಯಿಂದಲ್ಲ ಕರ್ತವ್ಯ ಬುದ್ಧಿಯಿಂದ. ಯಜ್ಞಗಳನ್ನು ನೆರವೇರಿಸುತ್ತೇನೆ; ಸ್ವರ್ಗಾಪೇಕ್ಷೆಯಿಂದಲ್ಲ; ಹರಿಪ್ರೀತಿಗಾಗಿ. ಭೋಗ ಬಯಸುತ್ತೇನೆ; ಇಂದ್ರಿಯ ಲೌಲ್ಯದಿಂದಲ್ಲ; ಅನಿಷ್ಟ ಪುಣ್ಯವು ಕ್ಷಯಿಸಲಿ ಎಂದು. ಈಗ ನೀನು ಹೇಳುವ ನಿನ್ನ ಮಾತು ನಿನ್ನ ಮನಸ್ಸಿನ ಕಲ್ಮಷವನ್ನು ಎತ್ತಿ ತೋರಿಸುತ್ತದೆ. ಅವಿದ್ಯೆ ಎಂದರೆ ಏನು ? ಎಂಬುದನ್ನು ಹೇಳುತ್ತೇನೆ ಕೇಳು. ಆತ್ಮ ಅಲ್ಲದ್ದನ್ನು 'ಆತ್ಮ' ಎಂದು ತಿಳಿಯುವ ವಿಷಮ ಬುದ್ಧಿಯೇ ಅವಿದ್ಯಾ. ದೇಹಾತಿರಿಕ್ತವಾದ ಆತ್ಮವಿಲ್ಲ, ದೇಹವೇ ಆತ್ಮವೆಂದು ತಿಳಿಯುವದೇ ಅವಿದ್ಯೆ. ಪಂಚಭೂತಾತ್ಮಕವಾದ ಈ ಶರೀರವನ್ನು ಆತ್ಮವೆಂದು ಯಾವ ವಿವೇಕಿಯು ತಿಳಿದಾನು !

ಆದರೆ ಆತ್ಮವು ದೇಹದಿಂದ ಭಿನ್ನವೆಂದು ತಿಳಿದರೂ ಜ್ಞಾನಿಯೂ ಕೂಡ ಆ ಶರೀರ ದಿಂದ ಭೋಗ್ಯವಾದ ಮನೆ, ಮಾರು, ಐಶ್ವರ್ಯ ಮುಂತಾದವುಗಳೂ ಹಾಗೂ ಆ ದೇಹ ದಿಂದ ಹುಟ್ಟಿದ ಮಕ್ಕಳೂ ಅದಕ್ಕೆ ಸಾಧನವಾಗಿ ಬಂದ ಹೆಂಡತಿಯೂ ತನ್ನವರೆಂದು ತಿಳಿಯುವನು. ಪಂಚಭೂತಾತ್ಮಕ ಶರೀರವು ಪಂಚಭೋಗಗಳಿಂದ ಆನಂದ ಪಡೆಯುವದಾದರೆ ಇದರಲ್ಲಿ ಮಾನವನು ಗರ್ವಿಷ್ಠನಾಗಲು ಕಾರಣವೇನು ?

ಮಣ್ಣಿನಿಂದ ಕಟ್ಟಿದ ಮನೆಯು ಮತ್ತೆ ಮತ್ತೆ ಮಣ್ಣು ನೀರು ಕಲಸಿ ಕಟ್ಟುವುದರಿಂದ ಮತ್ತಿಷ್ಟು ಭದ್ರವಾಗುವಂತೆ ಪಂಚಭೂತಾತ್ಮಕ ದೇಹವು ಅನ್ನ ಪಾನ ಮೊದಲಾದ ಪಾಂಚಭೌತಿಕ ಸುಖೋಪಭೋಗಗಳಿಂದ ಸಂತೃಪ್ತವೂ, ಸುಖಪೂರ್ಣವೂ ಆಗಬಹುದು. ಅದರಲ್ಲಿ ಆತ್ಮನ ಅಹಂಕಾರಕ್ಕೆ ಕಾರಣವೇ ಇಲ್ಲ. ಆದರೂ ಮಿಥ್ಯಾಜ್ಞಾನ ವಾಸನೆಯಿಂದ ಇದು ನಾನು ನನ್ನದು ಎಂಬ ಅಹಂಕಾರ ಮಮಕಾರಗಳು ಮನುಷ್ಯನಲ್ಲಿ ತಲೆ ಎತ್ತುವವು. ಜ್ಞಾನವೆಂಬ ಬಿಸಿನೀರಿನಿಂದ ತೊಳೆದಾಗಲೇ ಈ ಅವಿದ್ಯೆಯೆಂಬ ಧೂಳು ಶಾಂತವಾಗುವದು. ಈ ಅಜ್ಞಾನಾವಸ್ಥೆಯು ಹೋದ ಬಳಿಕ ದಿವ್ಯಜ್ಞಾನವು ಪ್ರಾಪ್ತವಾಗಿ ಅದರಿಂದ ಮೋಕ್ಷ ಹೊಂದುವನು ಮಾನವ. ದುಃಖ ಹಾಗೂ ಅಜ್ಞಾನ ಮುಂತಾದವುಗಳೆಲ್ಲವೂ ಆತ್ಮನ ಧರ್ಮಗಳಲ್ಲ. ಇವೆಲ್ಲವೂ ಪ್ರಕೃತಿ ಸಂಬಂಧದಿಂದ ಮನುಷ್ಯನಿಗೆ ಒದಗಿಬರುತ್ತವೆ. ಜಲಕ್ಕೆ ಸಾಕ್ಷಾತ್ತಾಗಿ ಅಗ್ನಿಯ ಸಂಬಂಧವಿರದಿದ್ದರೂ ಅಗ್ನಿಗೆ ಸಂಬಂಧವಾದ ಪಾತ್ರೆಯ ಸಂಪರ್ಕದಿಂದ ನೀರು ಕುದಿಯುವದು ಶಬ್ದ ಮಾಡುವದು ಮುಂತಾದ ವಿಕಾರಗಳನ್ನು ಹೊಂದುವಂತೆ ಜ್ಞಾನಸ್ವರೂಪಿಯಾದ ಆತ್ಮನು ಪ್ರಕೃತಿಯ ಸಂಬಂಧದಿಂದ ಅಹಂಕಾರಾದಿ ದೋಷಗಳನ್ನು ಹೊಂದುವನು. ಅವಿದ್ಯೆಯ ಸಂಬಂಧದಿಂದ ಪ್ರಕೃತಿ ಧರ್ಮಗಳ ಸಂಬಂಧ ಆತ್ಮನಿಗೆ ಆಗುವದು. ಹೀಗೆ ಅವಿದ್ಯೆಯಿಂದ ಮಾನವನಿಗೆ ಆಗುವ ಅನರ್ಥಗಳನ್ನು ನಾನು ನಿನಗೆ ತಿಳಿಸಿ ಹೇಳಿದ್ದೇನೆ, ಈ ಎಲ್ಲ ಪ್ರಾಕೃತ ಅರ್ಥಾತ್ ಅವಿದ್ಯಾಮೂಲಕ ದುಃಖಗಳನ್ನು ಸಂಪೂರ್ಣವಾಗಿ ನಾಶಮಾಡಲು ಯೊಗವೇ ಕಾರಣ. ಯೋಗದ ಹೊರತು ದುಃಖನಾಶಕವಾದದ್ದು ಬೇರೆ ಯಾವದೂ ಇಲ್ಲ.

ನಾರದ ಮಹಾಪುರಾಣದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿದುದು



ಬೃಹದುಪಾಖ್ಯಾನ

ಅಧ್ಯಾಯ - ೪೭

**ಸನಂದನ :-** ಕೇಶಿಧ್ವಜನ ಅಧ್ಯಾತ್ಮ ಜ್ಞಾನವನ್ನು ವಿಶದಪಡಿಸುವ ಈ ಅಮೃತದಂತಹ ವಚನವನ್ನು ಕೇಳಿ ಸಂತೋಷಪಟ್ಟು ಮತ್ತೆ ಪ್ರಶ್ನಿಸಿದ ಖಾಂಡಿಕ್ಯ.

**ಖಾಂಡಿಕ್ಯ :-** ಮಹಾನುಭಾವನಾದ ಕೇಶಿಧ್ವಜನೇ, ನಮ್ಮ ಈ ನಿಮಿಕುಲದಲ್ಲಿ ಅರ್ಥಾತ್ ಜನಕವಂಶದಲ್ಲಿ ನೀನು ಒಳ್ಳೇ ಯೋಗಜ್ಞಾನಿ. ಯೋಗಶಾಸ್ತ್ರವೆಲ್ಲವೂ ನಿನಗೆ ಕರತಲಾಮಲಕ. ಆದುದರಿಂದ ನೀನು ನನಗೆ ಈಗ ಯೋಗದ ಸ್ವರೂಪವನ್ನು ತಿಳಿಸಿಹೇಳು.

**ಕೇಶಿಧ್ವಜ :-** ಯೋಗದ ಸ್ವರೂಪ ಹೇಳುತ್ತೇನೆ ಕೇಳು. ಪರಬ್ರಹ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವದೇ ಯೋಗ, ಬಂಧ, ಮೋಕ್ಷಗಳಿಗೆ ಮನಸ್ಸೇ ಕಾರಣ. ಆ ಮನಸ್ಸನ್ನು ವಿಷಯದಲ್ಲಿ ತೊಡಗಿಸಿದರೆ ಬಂಧಕ್ಕೆ ಕಾರಣ ವಿಷಯಾಸಕ್ತಿ ಬಿಟ್ಟು ಪರಮಾತ್ಮನಲ್ಲಿ ನೆಟ್ಟು ಅಖಂಡ ಧ್ಯಾನ ಮಾಡಿದರೆ ಅದೇ ಮನಸ್ಸು ಮೋಕ್ಷಕ್ಕೆ ಕಾರಣ. ಆದರೆ ಈ ಮನಸ್ಸು ಚಂಚಲ ಮತ್ತು ಸುಖಾನುಧಾವಿ. ಇದನ್ನು ಪರಮಾತ್ಮನ ಕಡೆ ಉನ್ಮುಖ ಮಾಡಲು ಆತ್ಮನ ಪ್ರಯತ್ನವು ಅತ್ಯವಶ್ಯ. ಮಹಾಪ್ರಯತ್ನದಿಂದ ಅತ್ತಿತ್ತ ಹರಿದಾಡುವ ಈ ಚಂಚಲ ಮನಸ್ಸನ್ನು ಸ್ಥಿರವಾಗಿ ಪರಬ್ರಹ್ಮನಲ್ಲಿ ಸಂಯೋಜನ ಮಾಡುವದೇ ಯೋಗವೆನಿಸುವದು. ಇಂಥ ಯೋಗ ಅನುಷ್ಠಾನ ಮಾಡುವ ಮುಮುಕ್ಷುವು ಅಂದರೆ ಮೋಕ್ಷಾಪೇಕ್ಷಿ ಮನುಷ್ಯನು

ಫಲವಂಥ ಮೋಚಕವಾದ ಆತ್ಮೋದ್ಧಾರ ಸಾಧಕವಾದ ಕರ್ಮದ ವಿಷಯ ತಿಳಿಸು.'' ಅದನ್ನು ಕೇಳಿ ಕೇಶಿಧ್ವಜನಿಗೆ ಅಚ್ಚರಿ ಆಯಿತು, ಅವನು ಕೇಳಿದನು -

**ಕೇಶಿಧ್ವಜ :-** ಕ್ಷತ್ರಿಯರಿಗೆ ರಾಜ್ಯ, ಅಧಿಕಾರಕ್ಕಿಂತ ಪ್ರಿಯವಾದ್ದು ಯಾವದೂ ಇಲ್ಲ. ಆದರೂ ನೀನು ಈ ವಿಶಾಲ ಸಾಮ್ರಾಜ್ಯವನ್ನು ಏಕೆ ಯಾಚಿಸಲಿಲ್ಲ ?

**ಖಾಂಡಿಕ್ಯ :-** ಕೇಶಿಧ್ವಜನೆ, ನಿಜವಾದ ಪಂಡಿತರು, ರಾಜ್ಯಾಧಿಕಾರವನ್ನು ಅಪೇಕ್ಷಿಸುವದಿಲ್ಲ. ಅದರ ಅಪೇಕ್ಷೆ ಇದ್ದರೆ ಪಂಡಿತರೇ ಅಲ್ಲ, ನಾನು ನಿನ್ನ ರಾಜ್ಯ ಅಪೇಕ್ಷಿಸದಿರುವದಕ್ಕೆ ಇನ್ನೂ ಒಂದು ಕಾರಣ ಉಂಟು, ಪ್ರಜೆಗಳನ್ನು ರಕ್ಷಿಸುವದು ಕ್ಷತ್ರಿಯರ ವಿಶೇಷವಾಗಿ ರಾಜರ ಮುಖ್ಯ ಕರ್ತವ್ಯ. ಆ ಪ್ರಜಾಜನರಿಗೆ ಕಂಟಕರಾದ ವೈರಿ ರಾಜರನ್ನು ಧರ್ಮ ಯುದ್ಧಮಾಡಿ ಕೊಲ್ಲುವದು ರಾಜರಾದವರ ಆದ್ಯಕರ್ತವ್ಯ. ಪರರಾಜರನ್ನು ಸಂಹರಿಸುವದಕ್ಕೆ ನನ್ನಲ್ಲಿ ಶಕ್ತಿಯಿಲ್ಲ. ಮತ್ತು ಈ ರಾಜ್ಯೈಶ್ವರ್ಯವನ್ನು ಭೋಗಮಾಡುವ ಉದ್ದೇಶವೇನು ? ಆ ಐಶ್ವರ್ಯದ ಲಾಲಸೆ, ಅಧಿಕಾರ ದರ್ಪದ ಮೆರೆಸುವಿಕೆ, ಸ್ವಚ್ಛಂದ ಸುಖೋಪಭೋಗ. ಇದಿಷ್ಟೇ ತಾನೆ ? ವಾಸ್ತವಿಕವಾಗಿ ವಿಚಾರಿಸಿದರೆ ಇವೆಲ್ಲವೂ ಸಂಸಾರ ಬಂಧನಕ್ಕೆ ಕಾರಣ ಆಗುವವು. ನಾನು ಇದೀಗ ಭವಬಂಧನದ ಸಂಬಂಧವನ್ನು ಹರಿದುಕೊಂಡು ಈಚೆಗೆ ಬಂದಿದ್ದೇನೆ. ಮತ್ತೆ ಆ ಸಂಸಾರದ ಸೆಳುವಿಗೆ ಸಿಲುಕಲಾರೆ. ಇನ್ನೂ ಒಂದು ಕಾರಣ ರಾಜ್ಯಾಧಿಕಾರವನ್ನು ಬಯಸದಿರುವದಕ್ಕೆ ಉಂಟು. 'ನ ಯಾಂಚಾ ಕ್ಷತ್ರಬಂಧೂನಾಂ ಧರ್ಮೋ ಹ್ಯೇತತ್ ಸತಾಂ ಮತಂ' ಕ್ಷತ್ರಿಯರು ಯಾಚನೆಯನ್ನು ಸರ್ವಥಾ ಮಾಡಕೂಡದು. ಅದು ಅಧರ್ಮ. ಆದುದರಿಂದ ಕ್ಷತ್ರಿಯನಾದ ನಾನು ನಿನಗೆ ರಾಜ್ಯವನ್ನು ಬೇಡಲಿಲ್ಲ. ಅಹಂಕಾರದಿಂದ ಉಬ್ಬಿಕೊಬ್ಬಿ ಮದವೆಂಬ ಮದಿರೆಯನ್ನು ಪಾನಮಾಡಿ ಮತ್ತಾರಾದವರು ಮಾತ್ರ ರಾಜ್ಯ ಸಿರಿಯನ್ನು ಬಯಸುವರು. ನನ್ನಂತಹ ವೀತರಾಗ ಪೂತಾತ್ಮರು ರಾಜ್ಯವನ್ನು ಬಯಸುವದಿಲ್ಲ. ಅಧಿಕಾರಕ್ಕೆ ಆಶಿಸುವದಿಲ್ಲ. ಈ ರಾಜ್ಯಾಧಿಕಾರಾದ ಅಭಿಲಾಷೆಯು ಅವಿದ್ಯಾ ವಿಲಸಿತ.

**ಕೇಶಿಧ್ವಜ :-** ಹಾಗಾದರೆ ನಾನು ಅವಿದ್ಯಾದಿಂದ ಆವೃತನೆ ! ದಿವ್ಯಜ್ಞಾನದಿಂದಲೇ ಈ ಸಂಸಾರವನ್ನು ದಾಟಬೇಕೆಂದು ಬಯಸಿದ್ದೇನೆ. ರಾಜ್ಯವನ್ನು ಆಳುತ್ತೇನೆ. ಆಶೆಯಿಂದಲ್ಲ ಕರ್ತವ್ಯ ಬುದ್ಧಿಯಿಂದ. ಯಜ್ಞಗಳನ್ನು ನೆರವೇರಿಸುತ್ತೇನೆ; ಸ್ವರ್ಗಾಪೇಕ್ಷೆಯಿಂದಲ್ಲ; ಹರಿಪ್ರೀತಿಗಾಗಿ. ಭೋಗ ಬಯಸುತ್ತೇನೆ; ಇಂದ್ರಿಯ ಲೌಲ್ಯದಿಂದಲ್ಲ; ಅನಿಷ್ಟ ಪುಣ್ಯವು ಕ್ಷಯಿಸಲಿ ಎಂದು. ಈಗ ನೀನು ಹೇಳುವ ನಿನ್ನ ಮಾತು ನಿನ್ನ ಮನಸ್ಸಿನ ಕಲ್ಮಷವನ್ನು ಎತ್ತಿ ತೋರಿಸುತ್ತದೆ. ಅವಿದ್ಯೆ ಎಂದರೆ ಏನು ? ಎಂಬುದನ್ನು ಹೇಳುತ್ತೇನೆ ಕೇಳು. ಆತ್ಮ ಅಲ್ಲದ್ದನ್ನು 'ಆತ್ಮ' ಎಂದು ತಿಳಿಯುವ ವಿಷಮ ಬುದ್ಧಿಯೇ ಅವಿದ್ಯಾ. ದೇಹಾತಿರಿಕ್ತವಾದ ಆತ್ಮವಿಲ್ಲ, ದೇಹವೇ ಆತ್ಮವೆಂದು ತಿಳಿಯುವದೇ ಅವಿದ್ಯೆ. ಪಂಚಭೂತಾತ್ಮಕವಾದ ಈ ಶರೀರವನ್ನು ಆತ್ಮವೆಂದು ಯಾವ ವಿವೇಕಿಯು ತಿಳಿದಾನು !

ಆದರೆ ಆತ್ಮವು ದೇಹದಿಂದ ಭಿನ್ನವೆಂದು ತಿಳಿದರೂ ಜ್ಞಾನಿಯೂ ಕೂಡ ಆ ಶರೀರ ದಿಂದ ಭೋಗ್ಯವಾದ ಮನೆ, ಮಾರು, ಐಶ್ವರ್ಯ ಮುಂತಾದವುಗಳೂ ಹಾಗೂ ಆ ದೇಹ ದಿಂದ ಹುಟ್ಟಿದ ಮಕ್ಕಳೂ ಅದಕ್ಕೆ ಸಾಧನವಾಗಿ ಬಂದ ಹೆಂಡತಿಯೂ ತನ್ನವರೆಂದು ತಿಳಿಯುವನು. ಪಂಚಭೂತಾತ್ಮಕ ಶರೀರವು ಪಂಚಭೋಗಗಳಿಂದ ಆನಂದ ಪಡೆಯುವದಾದರೆ ಇದರಲ್ಲಿ ಮಾನವನು ಗರ್ವಿಷ್ಠನಾಗಲು ಕಾರಣವೇನು ?

ಮಣ್ಣಿನಿಂದ ಕಟ್ಟಿದ ಮನೆಯು ಮತ್ತೆ ಮತ್ತೆ ಮಣ್ಣು ನೀರು ಕಲಸಿ ಕಟ್ಟುವುದರಿಂದ ಮತ್ತಿಷ್ಟು ಭದ್ರವಾಗುವಂತೆ ಪಂಚಭೂತಾತ್ಮಕ ದೇಹವು ಅನ್ನ ಪಾನ ಮೊದಲಾದ ಪಾಂಚಭೌತಿಕ ಸುಖೋಪಭೋಗಗಳಿಂದ ಸಂತೃಪ್ತವೂ, ಸುಖಪೂರ್ಣವೂ ಆಗಬಹುದು. ಅದರಲ್ಲಿ ಆತ್ಮನ ಅಹಂಕಾರಕ್ಕೆ ಕಾರಣವೇ ಇಲ್ಲ. ಆದರೂ ಮಿಥ್ಯಾಜ್ಞಾನ ವಾಸನೆಯಿಂದ ಇದು ನಾನು ನನ್ನದು ಎಂಬ ಅಹಂಕಾರ ಮಮಕಾರಗಳು ಮನುಷ್ಯನಲ್ಲಿ ತಲೆ ಎತ್ತುವವು. ಜ್ಞಾನವೆಂಬ ಬಿಸಿನೀರಿನಿಂದ ತೊಳೆದಾಗಲೇ ಈ ಅವಿದ್ಯೆಯೆಂಬ ಧೂಳು ಶಾಂತವಾಗುವದು. ಈ ಅಜ್ಞಾನಾವಸ್ಥೆಯು ಹೋದ ಬಳಿಕ ದಿವ್ಯಜ್ಞಾನವು ಪ್ರಾಪ್ತವಾಗಿ ಅದರಿಂದ ಮೋಕ್ಷ ಹೊಂದುವನು ಮಾನವ. ದುಃಖ ಹಾಗೂ ಅಜ್ಞಾನ ಮುಂತಾದವುಗಳೆಲ್ಲವೂ ಆತ್ಮನ ಧರ್ಮಗಳಲ್ಲ. ಇವೆಲ್ಲವೂ ಪ್ರಕೃತಿ ಸಂಬಂಧದಿಂದ ಮನುಷ್ಯನಿಗೆ ಒದಗಿಬರುತ್ತವೆ. ಜಲಕ್ಕೆ ಸಾಕ್ಷಾತ್ತಾಗಿ ಅಗ್ನಿಯ ಸಂಬಂಧವಿರದಿದ್ದರೂ ಅಗ್ನಿಗೆ ಸಂಬಂಧವಾದ ಪಾತ್ರೆಯ ಸಂಪರ್ಕದಿಂದ ನೀರು ಕುದಿಯುವದು ಶಬ್ದ ಮಾಡುವದು ಮುಂತಾದ ವಿಕಾರಗಳನ್ನು ಹೊಂದುವಂತೆ ಜ್ಞಾನಸ್ವರೂಪಿಯಾದ ಆತ್ಮನು ಪ್ರಕೃತಿಯ ಸಂಬಂಧದಿಂದ ಅಹಂಕಾರಾದಿ ದೋಷಗಳನ್ನು ಹೊಂದುವನು. ಅವಿದ್ಯೆಯ ಸಂಬಂಧದಿಂದ ಪ್ರಕೃತಿ ಧರ್ಮಗಳ ಸಂಬಂಧ ಆತ್ಮನಿಗೆ ಆಗುವದು. ಹೀಗೆ ಅವಿದ್ಯೆಯಿಂದ ಮಾನವನಿಗೆ ಆಗುವ ಅನರ್ಥಗಳನ್ನು ನಾನು ನಿನಗೆ ತಿಳಿಸಿ ಹೇಳಿದ್ದೇನೆ, ಈ ಎಲ್ಲ ಪ್ರಾಕೃತ ಅರ್ಥಾತ್ ಅವಿದ್ಯಾಮೂಲಕ ದುಃಖಗಳನ್ನು ಸಂಪೂರ್ಣವಾಗಿ ನಾಶಮಾಡಲು ಯೋಗವೇ ಕಾರಣ. ಯೋಗದ ಹೊರತು ದುಃಖನಾಶಕವಾದದ್ದು ಬೇರೆ ಯಾವದೂ ಇಲ್ಲ.

ನಾರದ ಮಹಾಪುರಾಣದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿದುದು



## ಬೃಹದುಪಾಖ್ಯಾನ

**ಅಧ್ಯಾಯ - ೪೭**

**ಸನಂದನ :-** ಕೇಶಿಧ್ವಜನ ಅಧ್ಯಾತ್ಮ ಜ್ಞಾನವನ್ನು ವಿಶದಪಡಿಸುವ ಈ ಅಮೃತದಂತಹ ವಚನವನ್ನು ಕೇಳಿ ಸಂತೋಷಪಟ್ಟು ಮತ್ತೆ ಪ್ರಶ್ನಿಸಿದ ಖಾಂಡಿಕ್ಯ.

**ಖಾಂಡಿಕ್ಯ :-** ಮಹಾನುಭಾವನಾದ ಕೇಶಿಧ್ವಜನೇ, ನಮ್ಮ ಈ ನಿಮಿಕುಲದಲ್ಲಿ ಅರ್ಥಾತ್ ಜನಕವಂಶದಲ್ಲಿ ನೀನು ಒಳ್ಳೇ ಯೋಗಜ್ಞಾನಿ. ಯೋಗಶಾಸ್ತ್ರವೆಲ್ಲವೂ ನಿನಗೆ ಕರತಲಾಮಲಕ. ಆದುದರಿಂದ ನೀನು ನನಗೆ ಈಗ ಯೋಗದ ಸ್ವರೂಪವನ್ನು ತಿಳಿಸಿಹೇಳು.

**ಕೇಶಿಧ್ವಜ :-** ಯೋಗದ ಸ್ವರೂಪ ಹೇಳುತ್ತೇನೆ ಕೇಳು. ಪರಬ್ರಹ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವದೇ ಯೋಗ, ಬಂಧ, ಮೋಕ್ಷಗಳಿಗೆ ಮನಸ್ಸೇ ಕಾರಣ. ಆ ಮನಸ್ಸನ್ನು ವಿಷಯದಲ್ಲಿ ತೊಡಗಿಸಿದರೆ ಬಂಧಕ್ಕೆ ಕಾರಣ ವಿಷಯಾಸಕ್ತಿ ಬಿಟ್ಟು ಪರಮಾತ್ಮನಲ್ಲಿ ನೆಟ್ಟು ಅಖಂಡ ಧ್ಯಾನ ಮಾಡಿದರೆ ಅದೇ ಮನಸ್ಸು ಮೋಕ್ಷಕ್ಕೆ ಕಾರಣ. ಆದರೆ ಈ ಮನಸ್ಸು ಚಂಚಲ ಮತ್ತು ಸುಖಾನುಧಾವಿ. ಇದನ್ನು ಪರಮಾತ್ಮನ ಕಡೆ ಉನ್ಮುಖ ಮಾಡಲು ಆತ್ಮನ ಪ್ರಯತ್ನವು ಅತ್ಯವಶ್ಯ. ಮಹಾಪ್ರಯತ್ನದಿಂದ ಅತ್ತಿತ್ತ ಹರಿದಾಡುವ ಈ ಚಂಚಲ ಮನಸ್ಸನ್ನು ಸ್ಥಿರವಾಗಿ ಪರಬ್ರಹ್ಮನಲ್ಲಿ ಸಂಯೋಜನ ಮಾಡುವದೇ ಯೋಗವೆನಿಸುವದು. ಇಂಥ ಯೋಗ ಅನುಷ್ಠಾನ ಮಾಡುವ ಮುಮುಕ್ಷುವು ಅಂದರೆ ಮೋಕ್ಷಾಪೇಕ್ಷಿ ಮನುಷ್ಯನು

ಯೋಗಿ ಎನಿಸುವನು. ಯೋಗಿಯು ಯೋಗಾನುಷ್ಠಾನವನ್ನು ಅಭ್ಯಸಿಸುವ ಸಾಧಕ ಅವಸ್ಥೆಯಲ್ಲಿ ಇರುವಾಗ ಅವನಿಗೆ ' ಯುಂಜಮಾನ ' ಎಂದು ಹೇಳುವರು. ಸಾಧನೆಗೆ ವಿಘ್ನಗಳು ಬಹಳ. ಇದು ಆಗಾಗ ಜರಿದು ಹೋಗುವ ಸಂಭವವೂ ಹೆಚ್ಚು.

ಜನ್ಮಜನ್ಮಾಂತರದ ಅಭ್ಯಾಸ ಹಾಗೂ ಸಾಧನೆಯ ಫಲವಾಗಿ ಅವನ ಮನಸ್ಸು ದೂಷಿತವಾಗದೇ ಈ ಯೋಗವು ಸಾಧಿಸಿದರೆ ಅದರಿಂದ ಭಗವದಪರೋಕ್ಷವಾದರೆ ಅವನ ' ವಿನಿಷ್ಪನ್ನ ಸಮಾಧಿ ' ಅಂದರೆ - ಅಸಂಪ್ರಜ್ಞಾತ ಸಮಾಧಿ ಅವಸ್ಥೆಯಿಂದ ಪರಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡವ ಎಂದರ್ಥ. ಹೀಗೆ ತನ್ನ ಯೋಗಾಗ್ನಿ ಹಾಗೂ ಜ್ಞಾನಾಗ್ನಿಗಳಿಂದ ಸಂಚಿತ ಕರ್ಮಗಳೆಲ್ಲವೂ ಸುಟ್ಟು ಹೋದ ಬಳಿಕ ಕೆಲವೇ ದಿನಗಳಲ್ಲಿ ಪ್ರಾರಬ್ಧ ಕರ್ಮಗಳನ್ನು ನಾಶಮಾಡಿಕೊಂಡು ಮೋಕ್ಷವನ್ನು ಹೊಂದುತ್ತಾನೆ. ಸಾಧಕ ಅವಸ್ಥೆಯಲ್ಲಿರುವ ಯೋಗಿಯು ಬ್ರಹ್ಮಚರ್ಯ, ಅಹಿಂಸಾ, ಸತ್ಯ, ಅಪರಿಗ್ರಹ, ಅಸ್ತೇಯ ಎಂಬ ಐದು ಯಮಗಳನ್ನು ಸ್ವಾಧ್ಯಾಯ, ಶೌಚ, ಸಂತೋಷ ,ಹರಿಪೂಜೆ, ತಪಸ್ಸು ಎಂಬ ಐದು ನಿಯಮಗಳನ್ನು ತಪ್ಪದೇ ಆಚರಿಸಬೇಕು. ಮತ್ತು ಈ ಯಮ ನಿಯಮಗಳಲ್ಲದೆ ಹಿಂದೆ ಹೇಳಿದಂತೆ ಪ್ರಾಣಾಯಾಮ, ಪ್ರತ್ಯಾಹಾರ ಮುಂತಾದ ಅಷ್ಟಾಂಗ ಯೋಗಸಾಧನೆಗೈದು ಕಲ್ಯಾಣನಿಧಿಯಾದ ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ನೆಟ್ಟು ಧ್ಯಾನ ಮಾಡಬೇಕು.

ಪ್ರಾಣಾಯಾಮದಿಂದ ವಾಯುವನ್ನೂ, ಪ್ರತ್ಯಾಹಾರದಿಂದ ಇಂದ್ರಿಯಗಳನ್ನು, ಯಮ ನಿಯಮಗಳಿಂದ ಮನಸ್ಸನ್ನು ನಿಯಂತ್ರಿಸಿ, ಭಗವದ್ ಧ್ಯಾನೈಕಪರರನ್ನಾಗಿ ಅವುಗಳನ್ನು ಮಾಡಿದಾಗ ಅಪರೋಕ್ಷಜ್ಞಾನದ ಸಾಧನ ಸಂಪೂರ್ತಿ ಆದಂತಾಯಿತು. ಆ ಅಪರೋಕ್ಷ ಜ್ಞಾನದಿಂದ ಪರಮಾತ್ಮನ ಅತ್ಯರ್ಥ ಪ್ರಸಾದವಾಗಿ ಅದರಿಂದ ಮೋಕ್ಷವು ದೊರೆಯುವದು. ಅದಕ್ಕೆ ಅಷ್ಟಾಂಗ ಸಾದನೆಗಳಲ್ಲಿ ಒಂದೊಂದನ್ನಾಗಿ ಮಾಡುತ್ತ ಬರಬೇಕು. ಯಮ ನಿಯಮಗಳಿಂದ ಮನಸ್ಸನ್ನು, ಪ್ರಾಣಾಯಾಮದಿಂದ ವಾಯುವನ್ನು, ಪ್ರತ್ಯಾಹಾರದಿಂದ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು, ಯೋಗದಿಂದ ಅವೆಲ್ಲವುಗಳನ್ನು ಭಗವದುನ್ಮುಖವನ್ನಾಗಿ ಮಾಡಿ, ಅನಂತರ ಆ ಮನಸ್ಸನ್ನು ಎಲ್ಲಿಯೂ ಚ್ಯುತವಾಗದಂತೆ ಭಗವಂತನಲ್ಲಿಯೇ ನೆಡಬೇಕು.

ಇದೇ ' ಧಾರಣ ' ಎನಿಸುವದು. ಧಾರಣವೆಂದರೆ - ಮನಸ್ಸಿನಲ್ಲಿ ಭಗವದ್ರೂಪ ಚಲವಿಚಲವಾಗದಂತೆ ಧಾರಣೆ ಮಾಡುವದು ಮತ್ತು ಭಗವಂತನಲ್ಲಿ ಯಾವಾಗಲೂ ಹೊಯ್ದಾಡದಂತೆ, ವಿಷಯೇಂದ್ರಿಯಾದಿಗಳಲ್ಲಿ ಮತ್ತೆ ಮೊದಲಿನಂತೆ ಜಾರಿಹೋಗದಂತೆ ಸ್ಥಿರವಾಗಿ ಚಿತ್ರವನ್ನು ಇರಿಸುವದು. ಇದಕ್ಕೆ ಧಾರಣವೆನ್ನುವರು. ಆದರೆ ಪರಮಾತ್ಮನ ಒಂದು ಮೂರ್ತರೂಪವಿಲ್ಲದೆ ಈ ಧಾರಣವು ಸುಸಂಪನ್ನವಾಗಲಾರದು. ಆದುದರಿಂದ ಪರಮಾತ್ಮನ ಅತ್ಯಂತ ಸುಂದರವಾದ ದಿವ್ಯ ರೂಪವನ್ನು ಮನಸ್ಸಿನಿಂದ ಧ್ಯಾನ (ಚಿಂತೆ) ಮಾಡಬೇಕು. ಇದಕ್ಕೆ ' ಧ್ಯಾನ ' ವೆಂದನ್ನುವರು. ಚಿತ್ತದಲ್ಲಿ ಧ್ಯಾನ ಮಾಡಬೇಕಾದ ಭಗವದ್ರೂಪವನ್ನು ಜ್ಞಾನಿಗಳು ಹೇಳಿದ್ದಾರೆ.

ಪ್ರಸನ್ನಚಾರುವದನಂ ಪದ್ಮಪತ್ರಾಯತೇಕ್ಷಣಂ ।
ಸುಕಪೋಲಂ ಸುವಿಸ್ತೀರ್ಣಂ ಲಲಾಟಫಲಕೋಜ್ಜ್ವಲಂ ॥
ಸಮಕರ್ಣಾಂಶವಿನ್ಯಸ್ತಚಾರು ಕರ್ಣೋಪಭೂಷಣಂ ।
ಕಂಬುಗ್ರೀವಂ ಸುವಿಸ್ತೀರ್ಣ ಶ್ರೀವತ್ಸಾಂಕಿತವಕ್ಷಸಂ ॥

ಸುಂದರ ಮುಖ, ಮುಖದ ತುಂಬ ಪ್ರಸನ್ನತೆ, ತಾವರೆ ಎಲೆಯಂತೆ ವಿಶಾಲನೇತ್ರ, ಹೊಳೆಯುವ ಗಲ್ಲ, ಹರವಾದ ಹಣೆ, ಕುಂಡಲಗಳಿಂದ ಶೋಭಿಸುವ ಕಿವಿ, ಶಂಖದಂತಿರುವ ಕೊರಳು, ವಿಶಾಲ ವಕ್ಷಸ್ಥಳ, ಅದರಲ್ಲಿ ಶ್ರೀವತ್ಸ.... ಎಂಟು ನೀಳ್ದೋಳು ಅಥವಾ ಚತುರ್ಭುಜ. ಸಮಾನವಾದ ತೊಡೆ, ಮೊಣಕಾಲು, ಕಲಮದಂತಿರುವ ಕೈಕಾಲು, ನಡುವಿನಲ್ಲಿ ಹೊಳೆಯುವ ಪೀತಾಂಬರ, ತಲೆಯ ಮೇಲೆ ಸುಂದರ ಕಿರೀಟ. ಬಾಹುಗಳಲ್ಲಿ ಕಡಗ, ಕೈಗಳಲ್ಲಿ ಶಂಖ, ಚಕ್ರ, ಗದಾ, ಖಡ್ಗ.

**ವಲಿತ್ರಿಭಂಗಿನಾ ಭಗ್ನನಾಭಿನಾ ಚೋದರೇಣವೈ ।**
**ಫುಲಂಬಾಷ್ಟಭುಜಂ ವಿಷ್ಣುಮಥವಾಽಪಿ ಚತುರ್ಭುಜಂ ॥**
**ಸಮಸ್ಥಿತೋರು ಜಂಘಂ ಚ ಸುಸ್ಥಿರಾಂಘ್ರಿ ಕರಾಂಬುಜಂ ।**
**ಚಿಂತಯೇದ್ಬ್ರಹ್ಮಭೂತಂ ತಂ ಪೀತನಿರ್ಮಲವಾಸಸಂ ॥**

ಈ ಎಲ್ಲ ಲಕ್ಷಣಗಳಿಂದ ಪ್ರಕಾಶಿಸುತ್ತಿರುವ ಶ್ರೀಹರಿಯ ದಿವ್ಯ ಮೂರ್ತಿಯನ್ನು ಯೋಗಿಯಾದವನು ಮನಸ್ಸಿನಲ್ಲಿ ನಿಲ್ಲಿಸಿಕೊಂಡು ಧ್ಯಾನ ಮಾಡಬೇಕು. ಧಾರಣಾ ಎಂದರೆ ಇದೇ. ಮನಸ್ಸು ಆಚೀಚೆ ಹೋಗದಂತೆ ಇಂತಹ ಭಗವನ್ಮೂರ್ತಿಯಲ್ಲಿ ಧೃಡವಾಗಿ ನಿಲ್ಲುವಂತೆ ಮನಸ್ಸನ್ನು ಹಿಡಿದಿಡುವದೇ ಧಾರಣಾ ಶಬ್ದಾರ್ಥವಾಗಿದೆ. ಅದುಅಲ್ಲಿ ಗಟ್ಟಿಯಾಗಿ ನಿಲ್ಲುವವರೆಗೂ ಈ ಧ್ಯಾನವು ನಿರಂತರವಾಗಿ ನಡೆಯಬೇಕು.

**ಕಿರೀಟಚಾರುಕೇಯೂರಕಟಕಾದಿ ವಿಭೂಷಿತಂ ।**
**ಶಾರ್ಙ್ಗಶಂಖಗದಾ ಖಡ್ಗಪ್ರಕಾಶವಲಯಾಂಚಿತಂ ॥**
**ಚಿಂತಯೇತ್ತನ್ಮಯೋ ಯೋಗೀ ಸಮಾಧಾಯಾತ್ಮ ಮಾನಸಂ ।**
**ತಾವದ್ಯಾವದ್ದೃಢೀಭೂತಾ ತತ್ರೈವ ನೃಪ ಧಾರಣಾ ॥**

ಇಂತಹ ಭಗವದ್ರೂಪವು ಮನಸ್ಸಿನಲ್ಲಿ ಗಟ್ಟಿಯಾಗಿ ನೆಟ್ಟಂತಾಗಬೇಕು. ಮಾತನಾಡುತ್ತಿರುವ ಅಥವಾ ಬೇರೆ ಬೇರೆ ಕೆಲಸ ಮಾಡುತ್ತಿರುವಾಗಲೂ ಅಥವಾ ಸುಮ್ಮನೆ ಇರುವಾಗಲೂ ಕೂಡ ಎಂದರೆ ದೇಹವು ಬೇರೆ ವ್ಯಾಪಾರ ಮಾಡುತ್ತಿದ್ದರೂ ಮನಸ್ಸು ಮಾತ್ರ ಇಂತಹ ಭಗವದ್ರೂಪ ಚಿಂತನದಲ್ಲಿಯೇ ನೆಲೆಸಿರಬೇಕು. ಅಂದರೆ ಧಾರಣೆಯು ಸಿದ್ಧವಾದಂತೆ.

ಹೀಗೆ ಧಾರಣೆಯನ್ನು ಸಾಧಿಸಿಕೊಂಡ ಬಳಿಕ ಶಂಖ, ಚಕ್ರಾದಿ, ಚಿಹ್ನೆಗಳು ಇಲ್ಲದ ಪ್ರಶಾಂತವಾದ ಭಗವದ್ರೂಪವನ್ನು ಧ್ಯಾನ ಮಾಡಬೇಕು. ಅನಂತರ ಕಿರೀಟ, ಕಡಗ, ಕುಂಡಲ ಮುಂತಾದ ಆಭರಣಹರಿತವಾದ ಭಗವದ್ರೂಪವನ್ನು ಚಿಂತಿಸಬೇಕು. ಆ ಬಳಿಕ ಪರಿಶುದ್ಧವಾದ ಭಗವದ್ರೂಪವನ್ನು ಪಾದದಿಂದ ತಲೆಯವರೆಗೆ ಒಂದೊಂದೇ ಅವಯವಗಳನ್ನು ಧ್ಯಾನ ಮಾಡಬೇಕು. ಹೀಗೆ ಏಕೈಕ ಅವಯವದ ಧ್ಯಾನವನ್ನು ಸಾಧಿಸಿದ ಬಳಿಕ ಸಮಗ್ರವಾದ ಆಪಾದಮೌಲಿಪರ್ಯಂತ ಭಗವದ್ರೂಪವನ್ನು ಧ್ಯಾನಮಾಡಬೇಕು. ಇಂತಹ ಭಗವಂತನ ಆಪಾದ ಮೌಲಿಪರ್ಯಂತ ಸಮಗ್ರರೂಪವನ್ನು ಏಕಕಾಲಕ್ಕೆ ವಿಷಯೀಕರಿಸುವ ಪರಮಾತ್ಮನ ನಿರಂತರ ಧ್ಯಾನಧಾರೆಯೇ ಧ್ಯಾನವೆನಿಸುವದು. ಆರು ತಿಂಗಳವರೆಗೆ ಸತತವಾಗಿ ಮಾಡಿದಾಗ, ಇಂತಹ ಧ್ಯಾನವು ಯೋಗ್ಯ ಚೇತನನಿಗೆ ಭಗವದನುಗ್ರಹವಿದ್ದರೆ ನಿಷ್ಪನ್ನವಾಗುವದು. ಇಂತಹ ಧ್ಯಾನವನ್ನು ಅಖಂಡವಾಗಿ

ಬಾಹ್ಯಪ್ರಜ್ಞೆ ಇಲ್ಲದೆ, ಏಕಾಗ್ರ ಚಿತ್ತದಿಂದ ಬಿಟ್ಟುಬಿಡದೆ. ಕಾಲ ನಿರ್ಬಂಧವಿಲ್ಲದೆ ಸತತವಾಗಿ ನಡೆಸುವದು ಸಮಾಧಿ ಎನಿಸುವದು. ಇಂತಹ , ಸಮಾಧಿಯಿಂದ ಭಗವತ್ ಸಾಕ್ಷಾತ್ಕಾರ. ಅದರಿಂದ ಪ್ರಸಾದ, ಅದರಿಂದ ಪರಮಾತ್ಮನ ಸಾರೂಪ್ಯ. ಸಾಲೋಕ್ಯಾದಿ ಮೋಕ್ಷಪ್ರಾಪ್ತಿ. ಖಾಂಡಿಕ್ಯನೆ, ನೀನು ಕೇಳಿದ್ದರಿಂದ ಅಷ್ಟಾಂಗ ಪರಿಪೂರ್ಣವಾದ ಈ ಯೋಗ ಸಾಧನ ಕ್ರಮವನ್ನು ನಾನು ತಿಳಿಸಿ ಹೇಳಿದೆ. ನಿನಗೆ ಮತ್ತೇನು ಹೇಳಲಿ ?

**ಖಾಂಡಿಕ್ಯ** :- ಕೇಶಿಧ್ವಜನೆ, ನಾನು ಕೇಳಿದ್ದನ್ನೆಲ್ಲ ನೀನು ಸರಿಯಾಗಿ ನಿರೂಪಿಸಿದೆ. ನನ್ನ ಪ್ರಶ್ನೆಗಳಿಗೆಲ್ಲ ಸಮಂಜಸವಾದ ಉತ್ತರ ನೀಡಿರುವೆ. ನನ್ನ ಮನಸ್ಸಿನ ಕಲ್ಮಷವೆಲ್ಲವೂ ತೊಳೆದು ಹೋಗಿದೆ - ನಿನ್ನ ಉಪದೇಶದಿಂದ ಅಜ್ಞಾನ ದೂರವಾಗಿದೆ. ನಿನ್ನ ತತ್ವಬೋಧೆಯಿಂದ ನಿರ್ಮಲ ಜ್ಞಾನವು ಈಗ ಉದಿಸಿದೆ ನನ್ನ ಹೃದಯದಲ್ಲಿ, ನನ್ನದು ಎಂದು ನಾನು ಹೇಳಿದ್ದು ತಪ್ಪಾಯಿತು ಅದು ಸರಿಯಲ್ಲ. ನಾನು ನನ್ನದು ಎನ್ನುವದೆಲ್ಲವೂ ಅಜ್ಞಾನದಿಂದ ಉಂಟಾದುದು. ಈ ಅಜ್ಞಾನವು ದೂರವಾಗಿ ದಿವ್ಯಜ್ಞಾನವು ಉದಿಸಿ, ಶಾಶ್ವತವಾದ ಮುಕ್ತಿಗೆ ಸಾಧಕವಾದ ಯೋಗಮಾರ್ಗವನ್ನು ನೀನೇ ನನಗೆ ಚೆನ್ನಾಗಿ ವಿವರಿಸಿ ಹೇಳಿದೆ, ಇನ್ನು ನೀನು ನಿನ್ನ ಸ್ಥಾನಕ್ಕೆ ತಿರುಗಿ ಹೋಗಬಹುದು. ನಿನಗೆ ಕಲ್ಯಾಣವಾಗಲಿ.'' ಹೀಗೆ ಹೇಳಿ ಖಾಂಡಿಕ್ಯನು ಕೇಶಿಧ್ವಜ ಮಹಾರಾಜನನ್ನು ಅತ್ಯಾದರದಿಂದ ಸತ್ಕರಿಸಿದನು. ನಂತರ ಕೇಶಿಧ್ವಜ ದೊರೆಯು ತನ್ನ ರಾಜಧಾನಿಗೆ ಕೃತಾರ್ಥನಾಗಿ ಹಿಂತಿರುಗಿದನು. ಅವನು ತನ್ನ ಊರಿಗೆ ಪ್ರಯಾಣ ಬೆಳೆಸಿದ ಬಳಿಕ ಖಾಂಡಿಕ್ಯನು ತನ್ನ ಮಗನನ್ನು ತನ್ನಂತೆಯೇ ಯೋಗ ಕ್ಷೇತ್ರದಲ್ಲಿ ಅಧಿರಾಜನನ್ನಾಗಿ ಅಂದರೆ ತನ್ನ ಮಗನಿಗೆ ಯೋಗಶಾಸ್ತ್ರದ ಸಿದ್ಧಿಯನ್ನು ಚೆನ್ನಾಗಿ ತಿಳಿಸಿಕೊಟ್ಟು ಬದರಿ ಕ್ಷೇತ್ರಕ್ಕೆ ಪ್ರಯಾಣ ಮಾಡಿದನು. ಆ ದಿವ್ಯ ಕ್ಷೇತ್ರದಲ್ಲಿ ಅಷ್ಟಾಂಗ ಯೋಗಗಳಿಂದ ಭಗವಂತನ ಆರಾಧನೆಯನ್ನು ಅಖಂಡವಾಗಿ ಮಾಡಿ ಮೋಕ್ಷ ಹೊಂದಿದನು.

ಇತ್ತ ಕೇಶಿಧ್ವಜ ಮಹಾರಾಜನು ತನ್ನ ರಾಜಧಾನಿಗೆ ಬಂದು, ಧರ್ಮಶಾಸ್ತ್ರೋಕ್ತ ಪದ್ಧತಿಯಿಂದ ರಾಜ್ಯವಾಳಿದನು. ಅವಧೂತನಂತೆ ಇದ್ದು ಈ ಪ್ರಪಂಚದಲ್ಲಿ ಜೀವನ್ಮುಕ್ತಾವಸ್ಥೆಯಲ್ಲಿ ತನ್ನ ಪೂರ್ವದ ಪ್ರಾರಬ್ಧ ಕರ್ಮವೆಲ್ಲವೂ ಕ್ಷಯಿಸುವವರೆಗೆ ಅನಿಷ್ಟ ಪುಣ್ಯಗಳನ್ನೆಲ್ಲ ಭೋಗಿಸಿ, ಭಗವದ್‌ಧ್ಯಾನೈಕ ಪರವಾಗಿ, ಎಲ್ಲ ಪಾಪಗಳನ್ನು ಕಳೆದುಕೊಂಡು, ತಾಪತ್ರಯವನ್ನು ಪರಿಹರಿಸುವ ದಿವ್ಯಸಿದ್ಧಿಯನ್ನು ಪಡೆದನು. ನಾರದನೆ, ತಾಪತ್ರಯ ಪರಿಹಾರಕ್ಕೆ ಉಪಾಯ ಕೇಳಿದ್ದೆಯಲ್ಲವೆ ? ಈಗ ಅದನ್ನೇ ಸವಿಸ್ತರವಾಗಿ ತಿಳಿಸುತ್ತೇನೆ. ಯಮ ನಿಯಮಾದಿಗಳಿಂದ ಪರಮಾತ್ಮನಲ್ಲಿ ನಿರಂತರ ಮನಸ್ಸಿಟ್ಟು ಸಂತತವಾಗಿ ಅಲ್ಲಿಯೇ ನೆಟ್ಟು, ಅಖಂಡ ಭಗವದ್‌ಧ್ಯಾನ ಮಾಡುವ ಯೋಗಸಾಧನೆಯೇ ಆ ತಾಪತ್ರಯಗಳ ಪರಿಹಾರಕ್ಕೆ ಸರಿಯಾದ ಚಿಕಿತ್ಸೆ. ಇದನ್ನೆಲ್ಲ ನಿನಗೆ ತಿಳಿಸಿ ಹೇಳಿದ್ದಾಯಿತು. ಮತ್ತೇನು ಹೇಳಬೇಕು ತಿಳಿಸು.

ನಾರದ ಮಹಾಪುರಾಣದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿದುದು

—○—

# ಭರತರಾಜನ ಚರಿತ್ರೆ, ರಾಜನಾಗಿ ಬಿದ್ದ, ಜಿಗರೆಯಾಗಿ ಎದ್ದ, ಅವಧೂತನಾಗಿ ಗೆದ್ದ

ಅಧ್ಯಾಯ - ೪೮

**ನಾರದ :-** ಮುನಿಗಳೆ, ತಾಪತ್ರಯ ಪರಿಹಾರಕ್ಕೆ ತಾವು ಹೇಳಿದ ಉಪಾಯ ಕೇಳಿದೆ. ಆದರೂ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ದುರ್ಜನರು ನೀವು ಹೇಳಿದ ಆತ್ಮ ಧರ್ಮಕ್ಕೆ ವ್ಯತಿರಿಕ್ತವಾಗಿ ದುರ್ವ್ಯಾಪಾರಗಳನ್ನು ಮಾಡುತ್ತಲೇ ಇರುತ್ತಾರೆ. ಇದನ್ನು ಸಹಿಸುವದು ಹೇಗೆ ? ಅದರ ಪ್ರಕಾರವನ್ನು ತಿಳಿಸಿರಿ.

**ಸೂತ :-** ನಾರದರ ಈ ಪ್ರಶ್ನೆಯನ್ನುಕೇಳಿ ಬ್ರಹ್ಮಪುತ್ರರಾದ ಸನಂದನ ಮುನಿಗಳಿಗೆ ಭರತರಾಜನ ನಡತೆಯ ವಿಚಿತ್ರವಾದ ವ್ಯಾಪಾರವು ನೆನಪಾಯಿತು. ಅದರಿಂದ ಹರ್ಷಗೊಂಡು ಹೇಳಿದರು.

**ಸನಂದನ :-** ಈ ವಿಷಯದಲ್ಲಿ ನಿನಗೆ ಒಂದು ಮನೋಹರವಾದ ಇತಿಹಾಸವನ್ನು ಹೇಳುತ್ತೇನೆ. ಅದರಿಂದ ನಿನ್ನ ಭ್ರಾಂತಿಷ್ಟವಾದ ಮನಸ್ಸಿಗೆ ಸಮಾಧಾನ, ಸ್ಥೈರ್ಯ ಮುಂತಾದವುಗಳು ದೊರಕುವವು. ಈ ನಮ್ಮ ದೇಶಕ್ಕೆ ಭರತಖಂಡವೆಂದು ಹೆಸರು. ಇದಕ್ಕೆ ಕಾರಣ ಯಾರು ಗೊತ್ತೆ ? ಅವನೇ ಭರತರಾಜ. ಆನುವಂಶಿಕವಾಗಿ ಬಂದಿದ್ದಿತು- ಅಜ್ಜ-ಮುತ್ತಜ್ಜರಿಂದ ಈ ರಾಜ್ಯ ಆ ಭರತನಿಗೆ. ಇದನ್ನು ಧರ್ಮದಿಂದ ಆಳುತ್ತಿದ್ದ- ಆ ಭರತ ಭೂಪ. ತಂದೆಯಂತೆ ನ್ಯಾಯವಾಗಿ ರಾಜ್ಯವಾಳಿದರೂ ಎಲ್ಲರನ್ನೂ ಸಂತೋಷಪಡಿಸುತ್ತಿದ್ದ. ಬಗೆಬಗೆಯ ಯಜ್ಞಗಳನ್ನು ನೆರವೇರಿಸಿದ. ಭಗವಂತನಾದ ಶ್ರೀಹರಿಯನ್ನು ಸಂತೋಷ ಪಡಿಸಿದ. ಅವನು ಮಾಡಿದ ಎಲ್ಲ ಕರ್ಮಾದಿಗಳು ಯಜ್ಞರೂಪವೇ ಆಗಿರುತ್ತಿದ್ದವು. ಯಾಕೆಂದರೆ ಅವನು ತಾನು ಮಾಡುವ ಪ್ರತಿಯೊಂದು ಕರ್ಮದಲ್ಲಿ ಭಗವಂತನನ್ನೇ ಸ್ತುತಿಸುತ್ತಿದ್ದ, ನಮಿಸುತ್ತಿದ್ದ, ಆದ್ದರಿಂದ ಅವನು ಕೈಕೊಂಡ ಕಾರ್ಯಗಳೆಲ್ಲವೂ ಯಜ್ಞರೂಪ, ಧ್ಯಾನರೂಪ, ಪೂಜಾರೂಪವೇ ಆಗಿರುತ್ತಿದ್ದವು.

ಮಕ್ಕಳು ಹುಟ್ಟಿದರೂ ಆ ದೊರೆಗೆ, ಅವರೆಲ್ಲರೂ ಯೋಗ್ಯರು, ಸಮರ್ಥರೂ ಅಹುದು. ಕೆಲದಿನಗಳಾದ ಬಳಿಕ ಮಹಾರಾಜನಿಗೆ ವೈರಾಗ್ಯ ಹುಟ್ಟಿತು. ಸಂಸಾರವೆಲ್ಲವೂ ತ್ಯಾಜ್ಯ ಎಂದು ಬಿಟ್ಟು ಹೊರಟೇ ಬಿಟ್ಟ ತಪಸ್ಸಿಗೆ. ಅವನಿಗೆ ಗೊತ್ತು ತಪಸ್ಸನ್ನು ಎಲ್ಲಿ ಆಚರಿಸಬೇಕು ಎಂಬುದು. ಆದುದರಿಂದ ನೇರವಾಗಿ ಪುಲಸ್ತ್ಯರ ಆಶ್ರಮಕ್ಕೆ ಬಂದ. ಮನುಗಳು ತಪಸ್ಸು ಮಾಡಿ ಸಿದ್ಧಿ ಪಡೆದ ಕ್ಷೇತ್ರವಾಗಿತ್ತು ಆ ತಾಣ, ಅದಕ್ಕೆ ಪುಲಹಾಶ್ರಮವೆಂದು ಕರೆಯುತ್ತಿದ್ದರು. ಇವರಿಬ್ಬರೂ ಅಲ್ಲಿ ತಪಸ್ಸು ಮಾಡಿ ಸಿದ್ಧಿಪಡೆಯುವದಕ್ಕಿಂತ ಮೊದಲು ಅದಕ್ಕೆ ಶಾಲಿಗ್ರಾಮ ಕ್ಷೇತ್ರವೆಂದು ಹೆಸರಿತ್ತು. ಮೋಕ್ಷವನ್ನು ಅಪೇಕ್ಷಿಸುವವರು ಅಲ್ಲಿ ನಿಂತು ತಪಗೈಯುತ್ತಿದ್ದರು. ಅಂತಹ ದಿವ್ಯ ಸ್ಥಾನವನ್ನೇ ಈ ಭರತಮಹಾರಾಜ ಹುಡುಕಿ ಹೋಗಿ ಅಲ್ಲಿ ತಪಸ್ಸಿಗಾಗಿ ನಿಂತು ವಿಷ್ಣುವನ್ನು ಆರಾಧಿಸಿದ. ಅಲ್ಲಿ ದೊರಕಿದ ವಸ್ತುಗಳಿಂದ ಭಗವಂತನ ಪೂಜೆಯನ್ನು ನೆರವೇರಿಸಿದ, ಭಕ್ತಿಪ್ರಧಾನವಾಗಿತ್ತು ಅವನ ತಪಸ್ಸು. ಅರುಣೋದಯ ಕಾಲದಲ್ಲಿ ಉತ್ಥಾನ. ನಿರ್ಮಲ

ವಾದ ಗಂಡಕಿ ನದಿಯ ನೀರಿನಲ್ಲಿ ಶಾಸ್ತ್ರೋಕ್ತ ಸ್ನಾನ, ಸುರ್ಯೋಪಸ್ಥಾನ, ಸಂಧ್ಯಾವಂದನೆ, ಗಾಯತ್ರೀಜಪ, ಅನಂತರ ಆಶ್ರಮಕ್ಕೆ ಆಗಮನ, ಅಲ್ಲಿ ವಿಧಿಪೂರ್ವಕ ವಾಸುದೇವನ ಪೂಜೆ. ಅದಕ್ಕಾಗಿ ಮೊದಲೇ ತಂದು ಇಟ್ಟುಕೊಂಡಿರುತ್ತಿದ್ದ ಹೂವು, ಹಣ್ಣು, ತುಳಸಿ, ಗರಿಕೆ, ಪತ್ರಿ, ಸಮಿಧೆ, ನೀರು, ದರ್ಭೆ ಮುಂತಾದವುಗಳನ್ನು. ಭಕ್ತಿಯಿಂದ ಪೂಜೆ. ಶ್ರದ್ಧೆಯಿಂದ ಧ್ಯಾನ, ಏಕಾಗ್ರಚಿತ್ತದಿಂದ ಸಮಾಧಿ. ಹೀಗೆ ಅವಿಚ್ಛಿನ್ನವಾಗಿ ನಡೆದಿತ್ತು ಆ ಭರತಮುನಿಯ ಏಕಾಂತ ತಪಶ್ಚರ್ಯೆ, ಅದೊಂದು ದಿನ ರಂಜನೀಯ ಮುಂಜಾವು. ಗಂಡಕೀ ನದಿಯಲ್ಲಿ ಸ್ನಾನ ಮಾಡಿದ್ದಾನೆ ಮಹಾರಾಜ. ಸ್ನಾನ ಮಾಡುವಾಗ ನದಿಯ ತೀರದಲ್ಲಿ ಮೂರು ಮುಹೂರ್ತ ನಿಂತು ಜಪ ಮಾಡಿದ. ಆಗ ಒಂದು ಹೆಣ್ಣು ಚಿಗರೆಯು ನೀರು ಕುಡಿಯಲಿಕ್ಕೆ ಬಂದಿತು. ಬಹಳ ಬಾಯಾರಿತ್ತು ಆ ಜಿಂಕೆಗೆ. ಅದು ತುಂಬು ಗರ್ಭಿಣಿ, ಈಯಲಾಗಿತ್ತು. ಏಕಾಕಿಯಾದ ಆ ಹರಿಣಾಂಗನೆಯು ನದಿಯ ನೀರಿಗೆ ಬಾಯಿ ಹಚ್ಚಿತು. ಅಷ್ಟರಲ್ಲಿ ಕಾಡನ್ನೇ ನಡುಗಿಸುವ ಒಂದು ಸಿಂಹನಾದ. ಆ ಭೀಕರವಾದ ಸಿಂಹನಾದವನ್ನು ಕೇಳಿ, ಭಯಭ್ರಾಂತವಾದ ಆ ಹರಿಣಿಯು ನದಿಯ ದಂಡೆಯ ಮೇಲೆ ಹಾರಿ ಬಿದ್ದಿತು. ಗಾಬರಿಯಿಂದ ಹಾರುವಾಗ ಆ ಗರ್ಭಿಣಿಯಾದ ಹರಿಣಿಯ ಗರ್ಭಸ್ರಾವವಾಯಿತು. ಮರಿಯು ನೀರಿನಲ್ಲಿ, ತಾಯಿ ತೀರದಲ್ಲಿ, ದಡದಲ್ಲಿ ಬಿದ್ದ ತಾಯಿ ಜಿಂಕೆಯು ಸಿಂಹಾಸನದಿಂದ ಹೃದಯಕ್ಕೆ ಆಘಾತವಾಗಿ ತಡಿಯ ಹುಡಿಯಲ್ಲಿ ಹೊರಳಾಡಿ ಪ್ರಾಣ ನೀಗಿತು.

ಅದೇ ತಾಯಿಯ ಗರ್ಭದಿಂದ ಉಚ್ಚ ನೀರ ಮೇಲೆ ಬಿದ್ದ ಮರಿಯ ತೆರೆಯ ಗುಂಟ ತೇಲುತ್ತ ಹರಿದುಹೊರಟಿತು. ಈಸಲಕ್ಕೂ ಬಾರದೇ ನೀರು ಗುಟುಕರಿಸತೊಡಗಿತು. ಇದನ್ನೆಲ್ಲ ಅಲ್ಲಿಯೇ ನದಿಯ ತೀರದಲ್ಲಿ ಜಪ ಮಾಡುತ್ತ ನಿಂತ ಭರತ ದೊರೆ ನೋಡಿದ. ಆ ತಾಯಿಯಂತೆ ಈ ಮಗುವೂ ಹೆದ್ದೆರೆಗಳಲ್ಲಿ ಬಿದ್ದು ಸತ್ತು ಹೋಗುವದು ಎಂದೆನಿಸಿತು ಭರತನಿಗೆ. ಕೂಡಲೇ ಅವನು ಜಪಮಾಲೆಯನ್ನು ದಂಡೆಗೆ ಎಸೆದ. ನೀರಿಗೆ ಹಾರಿದ. ಮರಿಯ ಬಳಿ ಸಾರಿದ. ಅದನ್ನು ಕೈಯಲ್ಲೆತ್ತಿಕೊಂಡ. ನೀರಿನಲ್ಲಿ ಬಿದ್ದು ನಡುಗುತ್ತಿತ್ತು ಆ ಪುಟ್ಟ ಮರಿಜಿಂಕೆ.

ಆ ಹರಿಣ ಶಿಶುವನ್ನು ಅರಸನು ಆಶ್ರಮಕ್ಕೆ ಕರೆದುಕೊಂಡು ಬಂದು ಪ್ರೀತಿಯಿಂದ ಪೋಷಿಸಿದ, ತಾನೇ ತಾಯಿಯಾಗಿ ಅದಕ್ಕೆ ಎಲ್ಲ ಬಗೆಯ ಆರೈಕೆ ಮಾಡಿದ. ಹಾಗೆ ಸುದೈವದಿಂದ ತನಗೆ ಒದಗಿದ ರಾಜೋಪಚಾರದಿಂದ ಆ ಚಿಗರೆ ಮರಿ ಚೆನ್ನಾಗಿ ಬೆಳೆಯಿತು. ಕಾಡು ಮೇಡುಗಳಲ್ಲಿ ಹೋಗಿ ಎಳೆಗರಿಕೆ ತಿಂದು, ತೊರೆಯ ನೀರು ಕುಡಿದು, ಸಂತೋಷದಿಂದ ಆಶ್ರಮಕ್ಕೆ ಹಿಂತಿರುಗುತ್ತಿತ್ತು. ದೊಡ್ಡದಾದಂತೆ ಕಾಡಿನಲ್ಲಿ ದೂರ ದೂರ ಹೋಗಿ ಸಂಜೆ ಆಶ್ರಮಕ್ಕೆ ಮರಳುತ್ತಿತ್ತು. ತಪ್ಪದೆ ದೂರ ದೂರ ವನಾಂತರದಲ್ಲಿ ಅಲೆದಾಡಿ ಬರುತ್ತಿತ್ತು. ಚಿಗರೆಯ ಬಗ್ಗೆ ಚಿತ್ತದಲ್ಲಿ ಪ್ರೀತಿ ಚಿಗುರಿತು- ಆ ಮಹಾರಾಜನಿಗೆ. ನಿತ್ಯ ಸಹವಾಸದಿಂದ ಪ್ರೀತಿಯು, ಆಸಕ್ತಿಯಲ್ಲಿ ಆಸಕ್ತಿಯು, ಅನುರಕ್ತಿಯಲ್ಲಿ ಅನುರಕ್ತಿಯು ಪರ್ಯವಸಾನವಾಯಿತು. ರಾಜ್ಯ, ಮಕ್ಕಳು, ಮಡದಿ, ಎಲ್ಲವನ್ನೂ ತೊರೆದು ಬಂದ ಮಹಾರಾಜನಿಗೆ ಈ ಚಿಗರೆಯ ಗೀಳು ಹಿಡಿಯಿತು. ಮೊದಲು ಇದ್ದ ದಯೆ ಮತ್ತು ಕರ್ತವ್ಯ ಬುದ್ಧಿಯ ಸ್ಥಾನದಲ್ಲಿ ಬೆಳೆಯಿತು - ಸ್ನೇಹ ಸ್ನೇಹವು ಮೋಹಕ್ಕೆ ತಿರುಗಿತು. ಆ ಮೋಹ ತಪಸ್ಸಿನಲ್ಲಿಯ ನಿಷ್ಠೆಯನ್ನು ಸಡಲಿಸಿತು. ಎಂದಾದರೂ ಆ ಚಿಗರೆಯ ಮರಿಯು ಹಿಂದಿರುಗುವದು ತಡವಾದರೆ ತೀರಿಯೇ ಹೋಯಿತು. ಎಲ್ಲಿಯಾದರೂ ಹುಲಿ ಹಿಡಿದಿದೆಯೇ ? ಎಂದು ಹೆದರುತ್ತಿದ್ದ. ಸಿಂಹ ಹಿಂಸಿಸಿದೆಯೇ ? ಎಂದು ಕೊರಗುತ್ತಿದ್ದ.

ಅದು ಹತ್ತಿರವಿರದಿದ್ದರೆ ಮಹಾರಾಜನಿಗೆ ತಪಸ್ಸಿನ ಸಮಾಧಿಯೇ ಏರುತ್ತಿರಲಿಲ್ಲ. ಕಣ್ಣು ತುಂಬ ನೋಡುವದು. ಅದರ ಮೈಮೇಲೆ ಪ್ರೀತಿಯಿಂದ ಕೈ ಆಡಿಸುವದು. ಪ್ರೀತಿಯಿಂದ ಬೆನ್ನು ನೇವರಿಸುವದರಲ್ಲಿಯೇ ಸಮಯ ಕಳೆಯುತ್ತಿದ್ದ. ಅದರ ಉಪಚಾರ, ಉಪಹಾರಗಳಲ್ಲಿ ಅವನಿಗೆ ಧ್ಯಾನ, ತಪಸ್ಸುಮಾಡಲಾಗುತ್ತಿರಲಿಲ್ಲ. ಅದು ದೂರ ಹೋದರೆ, ಅದು ಸುರಕ್ಷಿತವಾಗಿ ಮರಳಿ ಬರುವದೋ ಇಲ್ಲವೋ ಎಂಬ ಚಿಂತೆಯಲ್ಲಿ ತಪಸ್ಸು ಸಾಗುತ್ತಿರಲಿಲ್ಲ. ಅಂತೂ ಹಾಗಾದರೆ ಆಗುತ್ತಿದ್ದಿಲ್ಲ, ಹೀಗಾದರೆ ಸಾಗುತ್ತಿರಲಿಲ್ಲ. ಹೀಗಾಗಿ ಆ ಭರತ ಮುನಿಯ ಧ್ಯಾನ, ತಪಸ್ಸು, ಅನುಷ್ಠಾನಗಳೆಲ್ಲವೂ ನಿಲುಗಡೆಗೆ ಬಂದವು. ಹೀಗೆ ಚಿಗರೆಯ ಚಿಂತೆಯಲ್ಲಿಯೇ ಒಂದು ದಿನ ಆ ಭರತಮಹಾರಾಜನು ಮರಣ ಹೊಂದಿದನು. ಸಾಯುವಾಗಲೂ ಅಷ್ಟೇ, ಪುತ್ರವತ್ಸಲನಾದ ತಂದೆ, ಮಕ್ಕಳನ್ನು ನೋಡುತ್ತಲೇ ಪ್ರಾಣಬಿಟ್ಟಂತೆ ಭರತರಾಜನು ಚಿಗರೆಯಲ್ಲಿ ಕಣ್ಣನ್ನು ನೆಟ್ಟೇ ಜೀವಬಿಟ್ಟನು.

ಮರಣ ಹೊಂದುವಾಗ ಮನಸ್ಸಿನಲ್ಲಿ ಚಿಗರೆಯನ್ನು ನೋಡುತ್ತ ಧ್ಯಾನ ಮಾಡುತ್ತಲೇ ತೀರಿಕೊಂಡಿದ್ದರಿಂದ, ಮರಣೋತ್ತರ ಕಾಲದಲ್ಲಿ ಆ ಸಂಸ್ಕಾರ ಬಲದಿಂದ ತಾನೇ ಚಿಗರೆಯಾಗಿ ಹುಟ್ಟಿದನು. ಆದರೆ ಜನ್ಮಾಂತರದಲ್ಲಿ ಅವನು ಗೈದ ತಪಸ್ಸಿನ ಪುಣ್ಯ ಎಲ್ಲಿ ಹೋಗುವದು ? ಆ ತಪಸ್ಸಿನ ಫಲವಾಗಿ ಜನ್ಮಾಂತರದ ನೆನಪು ಮಾಸದೇ ಉಳಿದಿತ್ತು ಅವನ ಪ್ರೇಮ ಘಟಲದಲ್ಲಿ. ಬುದ್ಧಿಯೂ ಬಂದಿತು ಈ ಜನ್ಮದಲ್ಲಿ. ಅವನಿಗೆ "ಚಿಗರೆಯ ಮರಿಯನ್ನು ಮನಸ್ಸಿಗೆ ಹಚ್ಚಿಕೊಂಡು ಅದನ್ನು ನೆನೆಯುತ್ತಲೇ ಪ್ರಾಣ ಬಿಟ್ಟದ್ದರಿಂದ ನಾನು ಈಗ ಚಿಗರೆಯಾಗಿ ಹುಟ್ಟಿದ್ದನೆ" ಎಂದು ಮನದಟ್ಟಾಯಿತು. ಈ ಜನ್ಮದಲ್ಲಿ ಆ ಚಿಗರೆಯು ಬುದ್ಧಿವಂತವಾಯಿತು. ಪೂರ್ಣ ಎಚ್ಚರ ಬಂದಿತ್ತು ಆ ಜೀವಕ್ಕೆ. ಅದು ಯಾರನ್ನೂ ಹಚ್ಚಿಕೊಳ್ಳಲಿಲ್ಲ. ತಂದೆ ತಾಯಿಯರನ್ನೂ ನಂಬಲಿಲ್ಲ. ಬಂಧು-ಬಳಗ ನೆಚ್ಚಲಿಲ್ಲ. ಉಳಿದವರನ್ನಂತೂ ನೋಡಲೇ ಇಲ್ಲ. ನಡೆಯುವಷ್ಟು ಕಾಲಲ್ಲಿ ಶಕ್ತಿ ಬಂದ ಕೂಡಲೇ ಅದು ಓಡಿ ಬಂದಿತು ಅದೇ ಆ ಪುಲಹಾಶ್ರಮಕ್ಕೆ. ಹಿಂದಿನ ಶಾಲಿಗ್ರಾಮ ಕ್ಷೇತ್ರದಲ್ಲಿಯೇ ನೆಲೆನಿಂತಿತು. ಆ ಆಶ್ರಮದ ಪರಿಸರದಲ್ಲಿ ಬೆಳೆದ ಹುಲ್ಲನಷ್ಟೇ ಮೇಯುತ್ತಿತ್ತು. ಮುನಿಗಳು ಓಡಾಡಿ ತುಳಿದಾಡಿದ ಪವಿತ್ರವಾದ ಎಲೆಗಳನ್ನು ಮಾತ್ರ ತಿನ್ನುತ್ತಿತ್ತು. ಹೀಗೆ ಅಲ್ಪಾಹಾರದಿಂದ ದೇಹಕೊರಗಿಸಿ, ಹರಿಣ ಜನ್ಮ ಬರಲು ಕಾರಣವಾದ ಕಲ್ಮಷವನ್ನೆಲ್ಲ ತೊಳೆದುಕೊಂಡಿತು. ಕೊನೆಗೆ ಆ ಶಾಲಿಗ್ರಾಮ ಕ್ಷೇತ್ರದಲ್ಲಿಯೇ ಆ ಹರಿಣ ಶರೀರವನ್ನು ಬಿಟ್ಟಿತು. ನಂತರ ಯೋಗಿಗಳ ವಂಶದಲ್ಲಿ ಬ್ರಾಹ್ಮಣನಾಗಿ ಜನಿಸಿತು. ವಂಶಪರಂಪರಾಗತ ದಿವ್ಯಜ್ಞಾನ ಸಂಪಾದಿಸಿತು. ಎಲ ಶಾಸ್ತ್ರಗಳ ತಿರುಳು, ಎಲ್ಲ ವೇದಾಂತಗಳ ಹುರುಳು, ಅವನ ಮಿದುಳಿನಲ್ಲಿ ಅರಳಿತು, ದಿವ್ಯಜ್ಞಾನಿಯಾಗಿ ರೂಪುಗೊಂಡಿತು. ಆ ಸಾತ್ವಿಕ ಚೇತನ. ನಿಜವಾದ ಆತ್ಮನ ಸ್ವರೂಪವೇನು ? ಎಂಬುದನ್ನು ಅರಿತನು. ನಿಜವಾದ ಪರಮಾತ್ಮನ ಮಹಿಮೆ ಏನೆಂಬುದನ್ನು ತಿಳಿದನು. ನಾಯಿ, ನರಿಗಳಲ್ಲಿಯೂ ದೇವ, ಬ್ರಾಹ್ಮಣರಲ್ಲಿಯೂ ಅಂತರ್ಯಾಮಿಯಾಗಿರುವ ಭಗವಂತನ ಅನಂತ ರೂಪಗಳಲ್ಲಿಯೂ ಅಂತರವೇ ಇಲ್ಲ ಎಂಬುದನ್ನು ಅವನು ತಿಳಿದನು. ನಾಯಿ, ನರಿಗಳಲ್ಲಿಯೂ ದೇವ, ಬ್ರಾಹ್ಮಣರಲ್ಲಿಯೂ ಅಂತರ್ಯಾಮಿಯಾಗಿರುವ ಭಗವಂತನ ಅನಂತ ರೂಪಗಳಲ್ಲಿ ಅಂತರವೇ ಇಲ್ಲ. ಎಂಬುದೇ ಅವನು ತಿಳಿದ. ಯಥಾರ್ಥತತ್ವವಾಗಿದ್ದಿತು. ಸರ್ವತ್ರ ವ್ಯಾಪ್ತನಾದ ಭಗವಂತನ ರೂಪಗಳಲ್ಲಿ ಅಭೇದವನ್ನು ಪರಿಪಕ್ವವಾದ ಅವನ ಬುದ್ಧಿಯು ಗ್ರಹಿಸಿತು. ಇಷ್ಟೆಲ್ಲ ತತ್ವಜ್ಞಾನ ಅವನಿಗೆ ಆಗಿದ್ದರೂ ಮೇಲೆ ಮಾತ್ರ ನೋಡಲು ಅವನೊಬ್ಬ ಶುದ್ಧ ಮೊದ್ದು. ಸಂಪೂರ್ಣ ಅಜ್ಞಾನಿ.

ಗುರುಗಳು ಹೇಳಿದ್ದನ್ನು ಅನ್ನುತ್ತಿದ್ದಿಲ್ಲ, ಶಬ್ದೋಚ್ಚಾರಣೆಯನ್ನೇ ಸರಿಯಾಗಿ ಮಾಡುತ್ತಿದ್ದಿಲ್ಲ. ಆದರೂ ಅವನ ತಂದೆ ಈ ಮುದ್ದು ಮಗನ ಕೊರಳಿಗೆ ಜನಿವಾರ ಹಾಕಿ ಕೈ ತೊಳೆದು ಕೊಂಡ. ಆದರೆ ಈ ಕುಮಾರ ಮಾತ್ರ ಸಂಧ್ಯಾವಂದನೆ ಮಾಡಲಿಲ್ಲ. ವೇದ ಹಿಡಿಯಲಿಲ್ಲ. ಶಾಸ್ತ್ರ ತಿಳಿಯಲಿಲ್ಲ. ಮಂತ್ರಗಳ ಉಚ್ಚಾರ ಆಗಲೇ ಇಲ್ಲ. ಹೀಗೇಕೆ ಎಂದು ಕೇಳಿದವರಿಗೆ ಕೊಡಲು ಮಾತು, ಅಸಂಬದ್ಧ ಉತ್ತರ, ಅಸಂಗತ ವಚನ. ಅವನು ಉಟ್ಟ ಬಟ್ಟೆ ತೀರ ಕೊಳೆ, ಅದು ಕೂಡ ಸರಿಯಾಗಿ ಮೈಮೇಲೆ ಇರುತ್ತಿರಲಿಲ್ಲ. ಯಾರು ಏನು ಮಾತನಾಡಿದರೂ ಬಾಯಿ ಬಿಡುತ್ತಲೇ ಇರಲಿಲ್ಲ. ಯಾವಾಗಲಾದರೂ ಮನಸ್ಸು ಬಂದಾಗ ಮಾತನಾಡಿದರೆ, ಅದೂ ಕೂಡ ಅಸಂಬದ್ಧ ಪ್ರಲಾಪ. ಇದರಿಂದ ಊರವರೆಲ್ಲರಿಗೂ ಅಸಹ್ಯ ಇವನನ್ನು ಕಂಡರೆ.

ನಿಜವಾದ ಯೋಗಿಯಾದವನು ಇರಬೇಕಾದದ್ದು ಹೀಗೆಯೇ. ಜನರ ಮಾನ ಮರ್ಯಾದೆಯಿಂದ ಯೋಗ ಹಾನಿ ನಿಶ್ಚಿತ, ಜನರ ಅವಮಾನದಿಂದ ಯೋಗಸಿದ್ಧಿ ಸುಲಭ. ಆದುದರಿಂದ ಯೋಗಿಯಾದವನು ಜನರು ಅವಮಾನಿಸುವಂತೆ, ಅವರೆಂದೂ ಇವನ ಸಂಗತಿಯನ್ನು ಬಯಸದಂತೆ, ಹುಚ್ಚನಂತೆ ಇರಬೇಕು. ಎಂದು ಹಿರಣ್ಯಗರ್ಭನ ಆದೇಶ ಉಂಟು ಅವಧೂತಯೋಗಿಗಳಿಗೆ. ಅದನ್ನು ಅಕ್ಷರಶಃ ಪಾಲಿಸುತ್ತಿದ್ದ ಈ ವೀತರಾಗ ಪುಣ್ಯಾತ್ಮ. ನೋಡಲು ಹುಚ್ಚ. ಮಾತನಾಡಿಸಿದರೆ ಉನ್ಮತ್ತ. ತನ್ನಷ್ಟಕ್ಕೆ ತಾನೇ ಇದ್ದಾಗ ಶುದ್ಧ ಶುಂಠ. ಕೊಟ್ಟದ್ದನ್ನೆಲ್ಲ ತಿನ್ನುತ್ತಿದ್ದ, ಕೆಟ್ಟದ್ದನ್ನೂ ನುಂಗುತ್ತಿದ್ದ. ಒಳ್ಳೆಯದನ್ನೂ ಭುಂಜಿಸುತ್ತಿದ್ದ. ಕಾಡಿನಲ್ಲಿ ಬೆಳೆದ ಹಣ್ಣು, ಹಾಳು ಹೊಲಗಳಲ್ಲಿಯ ಕಾಳು, ಅಲ್ಲಲ್ಲಿ ಬೆಳೆದ ಪಲ್ಲೆ, ಇದೇ ಅವನ ಕೂಳು. ಸಿಕ್ಕದ್ದನ್ನೆಲ್ಲ ತಿನ್ನುತ್ತಿದ್ದ. ಸಿಕ್ಕಷ್ಟನ್ನೂ ತಿನ್ನುತ್ತಿದ್ದ. ಕಡಿಮೆಯೆಂದು ಕೊರಗುತ್ತಿದ್ದಿಲ್ಲ. ದೊರಕಿದಷ್ಟು ತಿಂದು, ಇದ್ದಷ್ಟರಲ್ಲಿಯೇ ತೃಪ್ತಿಪಟ್ಟು, ಅಂತರಂಗದಲ್ಲಿ ಭಗವಂತನ ಧ್ಯಾನ ಮಾಡುತ್ತಿದ್ದ. ಮುಂದೆ ಒಂದು ದಿನ ಅವನ ತಂದೆ ತೀರಿಹೋದನು. ಅಣ್ಣ ಅವನ ಮಕ್ಕಳು ಹಾಗೆಯೇ ಏಕೆ ಕೂಳು ಹಾಕುವರು ಆ ಹುಚ್ಚನಿಗೆ. ದುಡಿಸಿಕೊಂಡರು, ಮನೆಗೆಲಸ ಮಾಡಿಸಿಕೊಂಡರು. ಮಿಕ್ಕ ಉಳಿದ ವೇಳೆಯಲ್ಲಿ ಹೊಲದ ಕೆಲಸಕ್ಕೂ ಹಚ್ಚಿದರು. ತಾವು ಉಂಡು ಉಳಿದ ತಂಗಳ ಆಹಾರವನ್ನು ಅವನಿಗೆ ನೀಡಿದರು. ಅವರು ಕೊಟ್ಟದ್ದನ್ನೇ ಆನಂದದಿಂದ ತಿಂದು ತೇಗುತ್ತಿದ್ದ ಆ ಭೂಪ. ಯಾರೇ ಕರೆಯಲಿ, ಯಾವ ಕೆಲಸವನ್ನೇ ಹೇಳಲಿ 'ಇಲ್ಲ' ಅಥವಾ 'ಒಲ್ಲೆ' ಎಂದು ಎಂದೆಂದೂ ಅನ್ನುತ್ತಿರಲಿಲ್ಲ. ಹೇಳಿದಷ್ಟು ಕೆಲಸ ಮಾಡಿ, ಹಾಕಿದಷ್ಟು ಊಟ ಮಾಡಿ, ಜನರಿಗೆಲ್ಲ ಉಪಕಾರ ಮಾಡುತ್ತಿದ್ದ. ಒಮ್ಮೆ ಸೌವೀರ ದೇಶದ ದೊರೆಯ ಸಾರಥಿಯ ಕಣ್ಣಿಗೆ ಈ ವ್ಯಕ್ತಿಯು ಬಿದ್ದಿತು. ರಾಜನ ಪಲ್ಲಕ್ಕಿಯನ್ನು ಹೊರಲು ಆಳನ್ನು ಹುಡುಕುತ್ತಿದ್ದ ಆ ರಾಜದೂತ. ಇವನು ಬ್ರಾಹ್ಮಣನಾದುದರಿಂದ ಅವನನ್ನು ಪಲ್ಲಕ್ಕಿ ಹೊರಲು ಹಚ್ಚುವದು ಹೇಗೆ ಎಂದು ವಿಚಾರಿಸಿದ, ನಿರ್ಧಾರ ಮಾಡಿದ. ಹುಟ್ಟಿನಿಂದೇನೋ ಇವನು ಬ್ರಾಹ್ಮಣ, ಆದರೆ ಸಂಧ್ಯಾವಂದನೆ, ದೇವರಪೂಜೆ ಇಲ್ಲ. ಇವನೆಂತಹ ಬ್ರಾಹ್ಮಣ! ಇವನನ್ನು ಎಷ್ಟು ದುಡಿಸಿಕೊಂಡರೂ, ಏನೂ ತಪ್ಪಿಲ್ಲ ? ಎಂದು ತನ್ನಲ್ಲಿಯೇ ವಿಚಾರಿಸಿ ನಿರ್ಣಯಕ್ಕೆ ಬಂದ. ಇದೇ ಸಂದರ್ಭದಲ್ಲಿ ಆ ಸೌವೀರ ದೇಶದ ದೊರೆಯು ಕಪಿಲಮುನಿಗಳ ಕಡೆಗೆ ಹೊರಟಿದ್ದ. ದುಃಖಮಯವಾದ ಈ ಸಂಸಾರದಲ್ಲಿ ಮನುಷ್ಯನಿಗೆ ಶ್ರೇಯಸ್ಕರವಾದದ್ದು ಯಾವದು ? ಎಂಬುದನ್ನು ಕಪಿಲಮುನಿಯಿಂದ ತಿಳಿಯಬೇಕಾಗಿತ್ತು ಆ ರಾಜನಿಗೆ. ಆ ಕಪಿಲಮಹರ್ಷಿ ಇದ್ದುದು ಇಕ್ಷುಮತಿ ನದಿಯ ತೀರದಲ್ಲಿ. ಅದು ಬಹುದೂರ. ಇವರು ಮಹಾರಾಜರು. ಪಲ್ಲಕ್ಕಿಯಲ್ಲಿ ಕುಳಿತು ಹೋಗಲು ದೊರೆ ನಿಶ್ಚಯಿಸಿದ.

ಅದಕ್ಕಾಗಿ ವಾಹಕ ಬೇಕಾಗಿದ್ದಿತು. ಈ ಜಡವಾದ ಬ್ರಾಹ್ಮಣ ಅದಕ್ಕಾಗಿ ಸಂಬಳವಿಲ್ಲದ ಆಳು ಎಂದು ಅರಸನ ಸಾರಥಿಯು ಇವನನ್ನು ಹಿಡಿದುಕೊಂಡು ಹೋದ. ರಾಜನ ಪಲ್ಲಕ್ಕಿ ಹೊರಲು ಹಚ್ಚಿದ. ಸಾರಥಿಯ ಮಾತಿನಂತೆ ಈ ಜಡ ಬ್ರಾಹ್ಮಣನು ಆ ಅರಸನ ಪಲ್ಲಕ್ಕಿಯನ್ನೂ ಹೊತ್ತು ನಡೆದ. ಸಂಬಳ ತೆಗೆದುಕೊಂಡ ಕೆಲವು ವಾಹಕರೂ ಆ ಪಲ್ಲಕ್ಕಿಯನ್ನು ಹೊತ್ತಿದ್ದರು. ಎಲ್ಲರೊಡನೆ ಇವನೂ ಹೆಜ್ಜೆ ಹಾಕಿದ. ಬೋಯಿಗಳು ರಾಜನ ಆ ಪಲ್ಲಕ್ಕಿಯನ್ನು ಹೊತ್ತು ವೇಗವಾಗಿ ನಡೆಯುತ್ತಿದ್ದರು.

ಆದರೆ, ಈ ಮೊದ್ದ ಬ್ರಾಹ್ಮಣನು ಮಾತ್ರ ಆ ಪಲ್ಲಕ್ಕಿಯ ದಂಡೆಯ ತುದಿಯನ್ನು ನೋಡುತ್ತ ಮೆಲ್ಲಗೆ ಹೆಜ್ಜೆ ಇರಿಸುತ್ತಿದ್ದ. ಬೋಯಿಗಳು ವೇಗದಿಂದ ಹೋಗುವದು, ಇವನು ಮಾತ್ರ ಮೆಲ್ಲನೆ ಹೆಜ್ಜೆ ಇಡುವದು, ಇದರಿಂದ ಒಳಗೆ ಕುಳಿತ ಮಹಾರಾಜನಿಗೆ ಮೈಕುಲುಕಿದಂತಾಯಿತು. ಕೂಡಲೇ ಅವನು ಗದರಿದ. ''ಹೀಗೇಕೆ ವ್ಯತ್ಯಾಸವಾಗಿ ನಡೆಯುವಿರಿ? ಸಮವಾಗಿ ಹೋಗಿರಿ''- ಎಂದು, ಮತ್ತೆ ನಾಲ್ಕು ಹೆಜ್ಜೆ ಪ್ರಯಾಣ. ಬೋಯಿಗಳ ವೇಗದ ಹೆಜ್ಜೆ, ಈ ಅವಧೂತನ ಮಂದಗಮನ, ಅದರಿಂದ ಹೊತ್ತ ಪಲ್ಲಕ್ಕಿಯು ಜಗ್ಗಾಡಿದಂತೆ ತಾರಮಾರು, ಒಳಗಿದ್ದ ಮಹಾರಾಜನಿಗೆ ಜಗ್ಗಿಬಿಟ್ಟಂತೆ. ಮತ್ತೆ ಮಹಾರಾಜ ಗುಡುಗಿದ - ''ಏನಿದು! ಹೀಗೇಕೆ ನಡೆಯುತ್ತೀರಿ? ಸರಿಯಾಗಿ ಹೆಜ್ಜೆ ಹಾಕಲು ಬರುವುದಿಲ್ಲವೇ - ನಿಮಗೆ?'' ಹೀಗೆ ಅನೇಕ ಬಾರಿ ಪ್ರಶ್ನಿಸಿದ ಮಹಾರಾಜ, ಬೆದರಿಸಿದ ಬೈದ, ಆಗ ವಾಹಕರು '' ಬುದ್ಧಿ, ನಾವೆಲ್ಲರೂ ಸರಿಯಾಗಿಯೇ ನಡೆಯುತ್ತೇವೆ. ಆದರೆ ಇವನು ಮಾತ್ರ ಬಹಳ ಮೆಲ್ಲಗೆ ಹೆಜ್ಜೆ ಇಡುತ್ತಾನೆ'' ಎಂದರು. ಅದನ್ನು ಕೇಳಿ ಸೌವೀರ ದೊರೆಯು ಅವಧೂತನಿಗೆ ಕೇಳಿದನು. ''ಏನಯ್ಯಾ ನಿನಗೆ ಬಹಳ ಶ್ರಮವಾಗಿದೆಯೇ? ನೀನು ಈ ಪಲ್ಲಕ್ಕಿ ಹೊತ್ತಿದ್ದಾದರೂ ಎಷ್ಟು ಹೊತ್ತು? ಬಹಳ ಅಲ್ಪ ದಾರಿಯಲ್ಲಿ ನೀನು ಇದನ್ನು ಹೊತ್ತಿರುವೆ. ಇಷ್ಟರಿಂದಲೇ ನಿನಗೆ ಆಯಾಸವಾಯಿತೆ? ನೀನು ಬಹಳ ಸಣ್ಣ (ಗಿಡ್ಡ) ಗಿರುವೆ. ಅಲ್ಲವೆ! ನೀನು ನಡೆಯುವದು ಇಲ್ಲಿ ಯಾರಿಗೂ ಕಾಣುವದಿಲ್ಲವೆಂದು ಬಗೆದೆಯಾ?

**ಅವಧೂತ :-** ರಾಜನೇ, ನಾನು ಸ್ಥೂಲ ದೇಹದವನೂ ಅಲ್ಲ. ನಿನ್ನ ಪಲ್ಲಕ್ಕಿಯನ್ನೂ ಹೊತ್ತಿಲ್ಲ, ನಾನು ದಣಿದೂ ಇಲ್ಲ. ನನಗೆ ಆಯಾಸವೂ ಆಗಿಲ್ಲ. ನಿನ್ನ ಪಲ್ಲಕ್ಕಿಯನ್ನು ಹೊತ್ತವರೇ ಬೇರೆ. ನಾನೇ ಬೇರೆ.

**ಮಹಾರಾಜ :-** ಪ್ರತ್ಯಕ್ಷವಾಗಿ ಕಣ್ಣಿಗೆ ಕಂಡದ್ದನ್ನು ಇಲ್ಲವೆಂದು ಅಲ್ಲಗಳೆಯುವಿಯಾ? ನೀನು ದೇಹದಿಂದ ದಪ್ಪಗಾಗಿರುವದು ಕಣ್ಣಿಗೆ ಕಾಣುವದಿಲ್ಲವೇ? ಈ ಪಲ್ಲಕ್ಕಿಯು ಇನ್ನೂ ನಿನ್ನ ಹೆಗಲ ಮೇಲೆಯೇ ಇದೆ. ಭಾರವನ್ನು ಹೊತ್ತರೆ ಮಾನವರಿಗೆ ಶ್ರಮವು ಆಗಿಯೇ ಆಗುವದು. ಹೀಗೆ ಪ್ರತ್ಯಕ್ಷ ಕಂಡದ್ದನ್ನು ಇಲ್ಲವೆಂದು ಹೇಗೆ ಹೇಳುವಿ?

**ಅವಧೂತ :-** ರಾಜನೇ ಪ್ರತ್ಯಕ್ಷವಾಗಿ ನೋಡಿದ್ದನ್ನು ಮಾತ್ರ ನನಗೆ ಹೇಳು, ನಾನು ಪಲ್ಲಕ್ಕಿಯನ್ನು ಹೊತ್ತಿದ್ದೇನೆ, ಅದು ನನ್ನ ಮೇಲೆ ಇದೆ ಎನ್ನುವದು ಶುದ್ಧ ಸುಳ್ಳು. ನಿನ್ನ ಕಣ್ಣಿಗೆ ಕಂಡಂತೆ ನಿನ್ನ ಪಲ್ಲಕ್ಕಿಯನ್ನು ಹೊತ್ತವನು ನಾನಲ್ಲ - ಈ ಹೆಗಲು. ಈ ಹೆಗಲು ಈ ನನ್ನ ಎರಡು ಬಾಹುಗಳ ಮೇಲೆ ಇದೆ. ಈ ಬಾಹು ಎದೆಯ ಮೇಲ್ಭಾಗದಲ್ಲಿ ಇದೆ. ಆ ಎದೆಯು ಹೊಟ್ಟೆಯ ಮೇಲೆ. ಹೊಟ್ಟೆ ಮೊಣಕಾಲುಗಳ ಮೇಲೆ ಇದೆ. ಮೊಣಕಾಲು ಕಾಲುಗಳ ಮೇಲೆ. ಆ ಕಾಲು ನೆಲದ ಮೇಲೆ, ಅಂದ ಬಳಿಕ ನಿನ್ನ ಈ ಪಲ್ಲಕ್ಕಿಯ - ನಿಜವಾದ ಭಾರವನ್ನು

ಹೊತ್ತಿದ್ದು ಕೊನೆಗೆ ಭೂಮಿ, ನಾನು ಪಲ್ಲಕ್ಕಿ ಹೊತ್ತಿದ್ದೇನೆ ಎಂದು ನೀನು ಹೇಳಿದಿ? ನೀನು ಪಲ್ಲಕ್ಕಿಯಲ್ಲಿ ಕುಳಿತಿರುವವ, ನಾನು ಇದನ್ನು ಹೊತ್ತುಕೊಂಡವ ಎಂಬ ಅಭಿಪ್ರಾಯದಿಂದ 'ನನ್ನ ಹೆಗಲ ಮೇಲೆ ಪಲ್ಲಕ್ಕಿ' ಇದೆ ಎಂದು ನಿರ್ದೇಶಿಸಿದೆ, ಶಿಬಿಕೆಯಲ್ಲಿ ಕುಳಿತ ನೀನಾಗಲಿ, ಅದನ್ನು ಹೊತ್ತ ನಾನಾಗಲಿ ಕಣ್ಣಿಗೆ ಕಾಣುವ ವಸ್ತುಗಳಲ್ಲ. ಅದನ್ನು ಇದನ್ನು ಈ ಭೌತಿಕ ಶರೀರಗಳ ವ್ಯಾಪಾರಗಳಿಂದಲೇ ಊಹಿಸಬೇಕು. ಸತ್ವ, ತೇಜಸ್ಸು, ತಮಸ್ಸು ಮುಂತಾದ ಗುಣಪ್ರವಾಹದಲ್ಲಿ ಬಿದ್ದ ಎಲ್ಲಾ ಪ್ರಾಣಿಗಳು ವಿನಾಶವನ್ನು ಹೊಂದುವವು. ತಮ್ಮ ತಮ್ಮ ಕರ್ಮಾನುಗುಣವಾಗಿ ವಿನಾಶಹೊಂದದ ಪದಾರ್ಥ ಒಂದೇ. ಅದೇ ಪರಮಾತ್ಮ.

ಆ ಪರಮಾತ್ಮನು ನನ್ನಲ್ಲಿಯೂ ಇರುತ್ತಾನೆ. ನಿನ್ನಲ್ಲಿಯೂ ಇರುತ್ತಾನೆ. ಎಲ್ಲವನ್ನು ಅರ್ಥಾತ್ ಈ ಜಗತ್ತಿನ ಭಾರವನ್ನು ಆ ಭಗವಂತನೇ ಹೊತ್ತಿದ್ದು, ಅವನು ಸರ್ವಾಧಾರ. ಈ ಜೀವರಿಗೆ ಒಂದು ತೃಣದ ಭಾರ ಹೊರಲು ಕೂಡ ಶಕ್ತಿ ಇಲ್ಲ. ಅಂದ ಬಳಿಕ ನಾನು ಪಲ್ಲಕ್ಕಿಯ ಭಾರ ಹೊತ್ತಿದ್ದೇನೆ ಎಂದು ನೀನು ಹೇಳಿದ್ದು ಸರಿಯಲ್ಲ. ಮತ್ತು ನಾನು ದೇಹದಿಂದ ದಪ್ಪನಾಗಿದ್ದೇನೆ ಎಂದು ಮೂದಲಿಸಿ ಮಾತನಾಡಿದೆ. ಇದೂ ಕೂಡ ನಿನ್ನ ಮೂರ್ಖತನಕ್ಕೆ ಸಾಕ್ಷಿಯಾಗಿದೆ. ಜೀವಾತ್ಮನಿಗೆ ಉತ್ಪತ್ತಿಯು ಇಲ್ಲ ನಾಶವೂ ಇಲ್ಲ. ಅದು ಸೊರಗುವದೂ ಇಲ್ಲ, ಸೊಕ್ಕುವದೂ ಇಲ್ಲ. ಅಂದ ಬಳಿಕ ನಾನು ಪುಷ್ಟನಾಗಿದ್ದೇನೆ ಎಂದು ನೀನು ಹೇಳಿದ್ದು ತಪ್ಪು. ವಾಸ್ತವಿಕವಾಗಿ ಈ ನಿನ್ನಪಲ್ಲಕ್ಕಿಯನ್ನು ನಾನು ಮಾತ್ರವಲ್ಲ. ಈ ಬೋಯಿಗಳಲ್ಲಿ ಕೂಡ ಯಾರೂ ಹೊತ್ತಿಲ್ಲ. ಬಾಹು, ನಡುವು, ಮೊಣಕಾಲು, ಪಾದ, ಭೂಮಿ, ಸಹಿತವಾಗಿ ನನ್ನನ್ನೂ, ನಿನ್ನನ್ನೂ ಈ ಪಲ್ಲಕ್ಕಿಯನ್ನು ಅಲ್ಲದೆ ಈ ಪಲ್ಲಕ್ಕಿಗೆ ಉಪಯೋಗಿಸಿದ ಕಟ್ಟಿಗೆಯ ಮೂಲಗಿಡವನ್ನೂ, ಆ ಗಿಡಗಳ ಕಾಡನ್ನೂ, ಅಂತಹ ಅನೇಕಾನೇಕ ಕಾಡುಗಳನ್ನೂ ಬೆಳೆದು ನಿಂತ ಪೃಥ್ವಿಯನ್ನೂ, ಇಂತಹ ಅನೇಕ ಪೃಥ್ವಿಗಳಿಂದ ತುಂಬಿದ ಬ್ರಹ್ಮಾಂಡವನ್ನೂ, ಆ ಬ್ರಹ್ಮಾಂಡ ಹೊತ್ತ ಆ ಆದಿಶೇಷನನ್ನೂ ನಿಜವಾಗಿ ಹೊತ್ತು ನಿಂತವ ನಾರಾಯಣನೊಬ್ಬನೆ.

ನೀನು ತಿಳಿಯದೇ ' ನಾನೇ ಪಲ್ಲಕ್ಕಿ ಹೊತ್ತಿದ್ದೇನೆ ' 'ನಾನು ದಪ್ಪಗಿದ್ದೇನೆ' ನನಗೆ 'ಶ್ರಮವಾಗಿದೆ' ಎಂದು ಹೇಳುವದು ಶುದ್ಧ ತಪ್ಪು. ಎಲ್ಲವನ್ನೂ ಭಗವಂತನೇ ಹೊತ್ತಿರುವಾಗ ನನಗೆ ಆಯಾಸ ಹೇಗೆ ಆಗುವದು ? ಆದುದರಿಂದ ನೀನು ಹೇಳಿದ ಮಾತಿನಲ್ಲಿ ಒಂದೂ ಸತ್ಯಾಂಶವಿಲ್ಲ. ಹೀಗೆ ಹೇಳಿ ಪಲ್ಲಕ್ಕಿಯನ್ನು ಹೊತ್ತು ನಿಂತ ಆ ಅವಧೂತನು ಸುಮ್ಮನಾದನು. ಅವನ ಮಾತನ್ನು ಕೇಳಿದ ಕೂಡಲೇ ರಾಜನು ತಕ್ಷಣ ಪಲ್ಲಕ್ಕಿಯಿಂದ ಇಳಿದು ಆ ಅವಧೂತನ ಕಾಲಿಗೆ ನಮಸ್ಕರಿಸಿ ಎಂದನು.

**ರಾಜ :-** ಪುಣ್ಯಾತ್ಮನೇ, ಆ ಪಲ್ಲಕ್ಕಿಯನ್ನು ಬಿಟ್ಟು ಬಿಡು. ನನ್ನ ಮೇಲೆ ಅನುಗ್ರಹಿಸು. ಈ ಹುಚ್ಚು ವೇಷಧಾರಿಯಾದ ನೀನು ಯಾರ ಮಗ ? ಇಲ್ಲಿಗೆ ಬರಲು ಕಾರಣವೇನು ? ನಿಮ್ಮಂಥವರ ಸೇವೆಗೆಂದೇ ನಾನೀಗ ಹೊರಟಿದ್ದು.

**ಅವಧೂತ :-** ಮಹಾರಾಜ, ನಾನು ಯಾರು ಎಂಬುದನ್ನು ಹೇಗೆ ಹೇಳಲಿ. ನಾನು ಎಂದರೆ ಈ ಆತ್ಮ. ಇಥಕ್ಕೆ ಹೆಸರು ಇಲ್ಲ. ದೇಶವಿಲ್ಲ, ಕರ್ಮಾನುಸಾರವಾಗಿ ಅನೇಕ ಜನ್ಮ, ದೇಹಗಳಲ್ಲಿ ತಿರುಗುತ್ತಿರುವ ಆತ್ಮಕ್ಕೆ ನಾನು ಏನೆಂದು ಹೆಸರು ಕೊಡಲಿ ? ಯಾವ ಊರು ಯಾವ ದೇಶವೆಂದು ಹೇಳಲಿ ? ಇಲ್ಲಿಗೆ ಬರಲು ಕಾರಣವೇನೆಂದು ಕೇಳಿರುವೆ, ಇದಕ್ಕೆ

ಉತ್ತರ ಹೇಳಲು ಕಾರಣವಿಲ್ಲ. ನಾನು ನೀನು ಎಲ್ಲರೂ ಹಿಂದಿನ ಕರ್ಮಗಳ ಫಲವನ್ನು ಅನುಭವಿಸಲು ಈ ಬೇರೆ ಬೇರೆ ಜನ್ಮಗಳನ್ನು ಎತ್ತಿರುತ್ತೇವೆ. ಇಲ್ಲಿ ಬರಲು ಕಾರಣ ಹಿಂದಿನ ಕರ್ಮ. ಈಗ ಅನುಭವಿಸುವ ಸುಖದುಃಖಗಳೆಲ್ಲ ಅದರ ಫಲ.

**ರಾಜ:-** 'ನಾನು' ಯಾರು? ಎಂಬುದನ್ನು ಹೇಳಲು ಸಾಧ್ಯವಿಲ್ಲವೆಂದು ನೀನು ಹೇಳಿದೆಯಷ್ಟೆ! ಆದರೆ ಅಹಂ ಎಂಬ ಶಬ್ದಕ್ಕೆ ಒಬ್ಬನು ಪಾತ್ರನಾಗಿದ್ದಾನೆ. ಈ ಅಹಂ ಶಬ್ದವು ಆತ್ಮವಾಚಕವಾಗಿದೆ. ಪ್ರಕೃತ ಸಂದರ್ಭಕ್ಕೆ ಅನುಗುಣವಾಗಿ ಆತ್ಮ ಎಂದರೆ ಜೀವಾತ್ಮ ಎಂದು ಅರ್ಥಮಾಡಿ 'ಅಹಂ' ಎಂದರೆ ನಾನು ಎಂದೆನ್ನುವದರಲ್ಲಿ ಏನು ದೋಷವಿದೆ?

**ಅವಧೂತ:-** 'ಅಹಂ' ಶಬ್ದಕ್ಕೆ ನಾನು ಎಂದು ಅರ್ಥವಿದ್ದುದು ತಪ್ಪಲ್ಲ. ಆದರೆ ಈ ಅಹಂ ಶಬ್ದವು ಆತ್ಮ ಬೋಧಕವಾದರೂ ಅನಾತ್ಮವನ್ನೂ ಆತ್ಮವೆಂದು ಬೋಧಿಸುತ್ತದೆ. ಈ ಅಹಂ ಎಂಬ ಶಬ್ದವನ್ನು ಉಚ್ಚಾರ ಮಾಡುವವರು ಯಾರು? ಹಲ್ಲು, ನಾಲಿಗೆ, ತುಟಿ, ದವಡೆ ಮುಂತಾದವುಗಳು. ಶಬ್ದ ಉತ್ಪತ್ತಿಗೆ ಕಾರಣವಾದ ಇವು ಯಾವವೂ ಅಹಂ ಶಬ್ದಕ್ಕೆ ಅರ್ಹವಲ್ಲ. ಅಹಂ ಎಂದು ಹೇಳುವ ವಾಕ್ಯವು ಮತ್ತು ಅದು ಬೋಧಿಸುವ ತಲೆ, ಕೈ ಮುಂತಾದ ಅವಯವ ಸಮೂಹರೂಪವಾದ ಶರೀರವು ಆತ್ಮನಿಗಿಂತ ಭಿನ್ನವಾಗಿರುವದರಿಂದ ಈ 'ಅಹಂ' ಎಂಬ ಸಂಜ್ಞೆಯನ್ನು ಎಲ್ಲಿ ಮಾಡಬೇಕು? ಇದರಂತೆ 'ತ್ವಂ' ಎಂದರೆ ನೀನು ಈ 'ತ್ವಂ' ಪದಾರ್ಥವಾದ ನೀನು ಯಾರೆಂದು ಹೇಳಲು ಸಾಧ್ಯವಿಲ್ಲ. ಏನೆಂದು ಹೇಳುವದು? ನೀನು ಪ್ರಜರಿಗೆ ರಾಜ. ನಿಮ್ಮ ತಂದೆಗೆ ಮಗ. ಹೆಂಡತಿಗೆ ಗಂಡ. ವೈರಿಗೆ ಶತ್ರು, ಸ್ನೇಹಿತರಿಗೆ ಮಿತ್ರ. ಮಗನಿಗೆ ತಂದೆ. ಹೀಗಿರುವಾಗ ನಿನ್ನನ್ನು ಅಥವಾ ಅದೇ ತರಹವಾಗಿರುವ ನನ್ನನ್ನು ಯಾರೆಂದು ಹೇಳುವದು?

ಇದು ನಿನ್ನ ತಲೆಯೇ? ಅಥವಾ ನೀನೇ ತಲೆಯೋ? ನೀನು ಹೊಟ್ಟೆಯೋ ಅಥವಾ ನಿನ್ನದು ಈ ಹೊಟ್ಟೆಯೋ? ಅಲ್ಲ, ನೀನು ಹೊಟ್ಟೆಯೂ ಅಲ್ಲ. ನಿನ್ನ ತಲೆ, ಹೊಟ್ಟೆ, ಪಾದಗಳು ನಿನ್ನವೇ? ಅಲ್ಲ. 'ನೀನು' ಈ ಎಲ್ಲ ಅವಯವಗಳಿಂದ ಭಿನ್ನನಾಗಿರುವೆ. ಅದರಂತೆ ನಾನೂ ಸಹ. ಹೀಗಿರುವಾಗ ನಿನ್ನನ್ನಾಗಲಿ ನನ್ನನ್ನಾಗಲಿ ಯಾರು ಎಂದು ಹೇಳುವದು! ಮರದಿಂದ ಕಟ್ಟಿಗೆ, ಕಟ್ಟಿಗೆಯಿಂದ ನೀನು ಕುಳಿತ ಪಲ್ಲಕ್ಕಿ ನಿರ್ಮಿತವಾಗಿದೆ. ನೀನು ಕುಳಿತ ಪಲ್ಲಕ್ಕಿಯು ಕಟ್ಟಿಗೆ ಆದರೂ ಈಗ ಅದು ಮರ ಅಥವಾ ಕಟ್ಟಿಗೆ ಎಂಬ ಹೆಸರು ಎಲ್ಲಿದೆ? ಮಹಾರಾಜನು ಮರದಮೇಲೆ, ಕಟ್ಟಿಗೆಯ ಮೇಲೆ ಕುಳಿತಿದ್ದಾನೆ ಎಂದರೆ ಯಾರು ನಂಬುವರು? ಈ ಪಲ್ಲಕ್ಕಿಯು ಅದೇ ಮರದ ಪರಿಣಾಮ. ಆದರೆ ಅದರ ಹಿಂದಿನ ಅಥವಾ ಇಂದಿನ ಮರ ಕಟ್ಟಿಗೆ ಮುಂತಾದ ಶಬ್ದಗಳ ಸ್ವರೂಪ ಅವಸ್ಥೆಗಳನ್ನು ವಿಮರ್ಶಿಸಿ ನೋಡು. ಹೀಗೆ ಕರ್ಮಪ್ರವಾಹ ಪತಿತನಾದ ಒಂದೇ ಜೀವಿಯು ಭಿನ್ನ ಭಿನ್ನ ಅವಸ್ಥೆ, ಆಕಾರ, ಅಭಿಧಾನಗಳನ್ನು ಹೊಂದುತ್ತಿರುವಾಗ ಸ್ತ್ರೀ-ಪುರುಷ, ಆಳು, ಅರಸ, ನರ, ನಾಯಿ, ಮೇಕೆ, ಮನುಷ್ಯ ಮುಂತಾದ ಬಗೆ ಬಗೆಯ ರೂಪಗಳನ್ನು ಧರಿಸುವಾಗ ನಾನು ಯಾರು? ನೀನು ಯಾರು? ಎನ್ನುವದನ್ನು ಹೇಗೆ ಹೇಳಲು ಸಾಧ್ಯವಿದೆ! ಹೀಗೆ ಕರ್ಮಾನುಸಾರ ಅನುಷ್ಠಿತ ಧರ್ಮಾನುಸಾರ ಬಗೆ ಬಗೆಯ ರೂಪಗಳನ್ನು ಹೊಂದುವ ಮತ್ತು ಭಿನ್ನ ಭಿನ್ನ ಭಾಗಗಳಿಂದ ರೂಪಗೊಂಡು ಒಂದಾಗಿ ಎದ್ದಿರುವ ಈ ದೇಹವನ್ನು 'ನನ್ನ' ದಾಗಿರದ 'ನಾನು' ಆಗಿರದ ಈ ಶರೀರವನ್ನು ನಾನು ಎಂದು ಭಾವಿಸಲು ಹೇಗೆ ಶಕ್ಯ.

*ನಾರದ ಮಹಾಪುರಾಣದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿದುದು*

## ಗುರು ಶಿಷ್ಯರ ಆಧ್ಯಾತ್ಮ ಪ್ರಯೋಗ, ವಿವಾದ ಸಂವಾದ

ಅಧ್ಯಾಯ - ೪೯

**ರಾಜ:-** ಪರಮಾರ್ಥಜ್ಞಾನಿಯಾದ ಬ್ರಾಹ್ಮಣನೇ, ನಿನ್ನ ಈ ಎಲ್ಲ ಮಾತನ್ನು ಕೇಳಿದ ಬಳಿಕ, ಆಧ್ಯಾತ್ಮ ವಿಷಯವನ್ನು ನಿನ್ನಿಂದ ತಿಳಿದುಕೊಳ್ಳಲು ನನಗೆ ಚಪಲ ಉಂಟಾಗಿದೆ. ಈ ಎಲ್ಲ ಪರಮಾರ್ಥ ವಿಷಯಗಳನ್ನು ಕಪಿಲಋಷಿಯ ಬಳಿಗೆ ಹೋಗಿ ವಿಚಾರಿಸಲು ನಾನು ಹೊರಟದ್ದೆ ಅಷ್ಟರಲ್ಲಿ ನಿನ್ನ ದರ್ಶನವಾಯಿತು.ಜಗತ್ತಿನ ಅಜ್ಞಾನ ನಾಶಕ್ಕಾಗಿ ಕಪಿಲರೂಪದಿಂದ ಅವತರಿಸಿದ ಶ್ರೀ ವಿಷ್ಣುವಿನ ದರ್ಶನವೇ ನನಗೆ ಇಂದು ಆದಂತಾಯಿತು. ನೀನು ಈಗ ಪಾರಮಾರ್ಥಿಕ ಶ್ರೇಯಸ್ಸು ಯಾವದು ತಿಳಿಸು.

**ಬ್ರಾಹ್ಮಣ:-** ದೊರೆಯೆ, ನೀನು ಮತ್ತೆ ಅದೇ ಧಾಟಿಯಲ್ಲಿಯೇ ಕೇಳುತ್ತಿರುವೆ. ಪಾರಮಾರ್ಥಿಕ ಶ್ರೇಯಸ್ಸು ಯಾವದು ಎಂದು ಕೇಳುತ್ತಿರುವೆ! ಎಲ್ಲ ಪರಮಾರ್ಥಗಳೂ ಶ್ರೇಯಸ್ಸೇ ಆಗಿವೆ. ಒಬ್ಬನು ಮಕ್ಕಳಿಗಾಗಿ ದೇವರನ್ನು ಪೂಜಿಸಿದರೆ, ಇನ್ನೊಬ್ಬನು ಐಶ್ವರ್ಯಕ್ಕಾಗಿ ಮತ್ತೊಬ್ಬನು ರಾಜ್ಯಕ್ಕಾಗಿ, ಮಗದೊಬ್ಬನು ಮಡದಿಗಾಗಿ. ಇವರೆಲ್ಲರಿಗೆ ಅವರವರು ಅಪೇಕ್ಷಿಸುವ ವಸ್ತುಗಳೆಲ್ಲ ಪರಮಾರ್ಥ ವಸ್ತುಗಳು, ನಿಜವಾದ ವಿವೇಕಿ ಮನುಷ್ಯನಿಗೆ ಭಗವಂತನ ಸಾನ್ನಿಧ್ಯ ಪ್ರಾಪ್ತಿಯೇ ಪರಮಾರ್ಥ, ಅದೇ ಅವನಿಗೆ ಶ್ರೇಯಸ್ಸು, ಯಜ್ಞಾದಿ ಕರ್ಮಗಳು ಸ್ವರ್ಗದ ಆಶೆಯಿಂದ ಮಾಡಿದರೆ ಸಾಮಾನ್ಯವಾಗಿ ಶ್ರೇಯಸ್ಕರ, ಅಲ್ಲದೆ ಅದನ್ನೇ ಫಲಾಪೇಕ್ಷೆ ಇಲ್ಲದೆ ಭಗವತ್ಪ್ರೀತ್ಯರ್ಥವಾಗಿ ಮಾಡಿದರೆ ಅದು ಉತ್ತಮ ಶ್ರೇಯಸ್ಸಾಗುವದು. ಯೋಗಿಗಳೂ, ವಿರಕ್ತರೂ ಇಂತಹ ಪರಮಾತ್ಮನ ದಿವ್ಯ ಸಾನ್ನಿಧ್ಯ ಅಪೇಕ್ಷಿಸಿ ಅವನನ್ನು ಯಾವಾಗಲೂ ಧ್ಯಾನ ಮಾಡುತ್ತಾರೆ.

ಅವರಿಗೆ ಅದೇ ಶ್ರೇಯಸ್ಸು. ಅದೇ ಪರಮಾರ್ಥ. ಹೀಗೆ ಅಧಿಕಾರ ಭೇದದಿಂದ ಶ್ರೇಯಸ್ಸು ಭಿನ್ನ ಭಿನ್ನವಾಗಿ ಸಾವಿರಾರು ವಿಧವಾಗಿದೆ. ಇವೆಲ್ಲವೂ ಪರಮಾರ್ಥವಲ್ಲ. ಪರಮಾರ್ಥದ ಉದ್ದೇಶದಿಂದ ಆ ಶ್ರೇಯಸ್ಸುಗಳನ್ನು ಸಾಧಿಸಿದರೆ ಅವು ನಿಜವಾದ ಶ್ರೇಯಸ್ಸು ಎಂದು ಕರೆಯಲ್ಪಡುತ್ತವೆ. ಧನದ ಆಶೆಯನ್ನು ಬಿಟ್ಟು ದೇವರು ಕೊಟ್ಟ ಐಶ್ವರ್ಯವನ್ನು ಧರ್ಮಮಾರ್ಗದಲ್ಲಿ ವಿನಿಯೋಗಿಸುತ್ತ ಇದ್ದರೆ, ಅದು ಪರಮಾರ್ಥ ಧರ್ಮ ಅಥವಾ ಶ್ರೇಯಸ್ಸು ಆಗುವದು. ನಶ್ವರವಾದ ಸಮಿಧೆ, ತುಪ್ಪ, ದರ್ಭೆ ಮುಂತಾದವುಗಳಿಂದ ನಿಶ್ಪನ್ನವಾಗುವ ಯಜ್ಞಾದಿಕ್ರಿಯೆಗಳು ನಾಶ ಹೊಂದುವವು. ಇವುಗಳಿಂದ ನಾಶ ಉಳ್ಳದ್ದೇ ಆದ ಸ್ವರ್ಗಾದಿಗಳನ್ನು ಬಯಸಿ ನಡೆದರೆ ಇವೆರಡೂ ಪರಮಾರ್ಥವಲ್ಲ. ಅದನ್ನೇ ಕಾಮ್ಯಫಲಾಪೇಕ್ಷೆಯಿಲ್ಲದೆ ಹರಿ ಪ್ರೀತ್ಯರ್ಥವಾಗಿ ಮಾಡಿದರೆ ಅದು ಪರಮಾರ್ಥ ಧರ್ಮವೆನಿಸುವದು. ನಶ್ವರವಾದ ಪದಾರ್ಥಗಳಿಂದ ಶಾಶ್ವತ ಸತ್ಯಸ್ವರೂಪಿಯಾದ ಪರಮಾತ್ಮನನ್ನು ಆರಾಧಿಸಿ ಶಾಶ್ವತವಾದ ಮೋಕ್ಷ ಪಡೆಯುವದೇ ಪರಮಾರ್ಥ ಶಬ್ದದ ಯಥಾರ್ಥ ಅರ್ಥ. ಈ ಪ್ರಪಂಚದಲ್ಲಿ ಪರಮಾರ್ಥ ವಸ್ತು ಒಂದೇ ಅದ್ವಿತೀಯ, ವ್ಯಾಪಕ. ಸರ್ವತ್ರಸಮ, ನಿರ್ದೋಷ, ಪ್ರಾಕೃತಗುಣರಹಿತ, ಪ್ರಕೃತಿಗಿಂತ ಉತ್ತಮ ಉತ್ಪತ್ತಿ ವೃದ್ಧಿ, ಹ್ರಾಸ ಶೂನ್ಯ, ಜ್ಞಾನರೂಪಿಯಾದ ಪರಮಾತ್ಮನೊಬ್ಬನೇ ಪರಮಾರ್ಥ. ಈ ಪರಮಾತ್ಮನು

ವಿಭುವಾದರೂ, ಪ್ರಕೃತಿಮಯವಾದ ಜಾತಿ, ರೂಪ, ದೇಹ ಮುಂತಾದವುಗಳನ್ನು ಹಿಂದೆ ಹೊಂದಿಲ್ಲ, ಈಗ ಹೊಂದುತ್ತಿಲ್ಲ, ಮುಂದೆ ಹೊಂದಲಾರನು. ಸ್ವದೇಹ, ಪರದೇಹ, ಜೀವ, ಜಡ ಮುಂತಾದ ಎಲ್ಲಡೆಗೆ ಇದ್ದರೂ, ಭಿನ್ನ ಭಿನ್ನವಾಗಿ ಕಂಡರೂ ಎಲ್ಲರಿಗೂ ಇರುವ ಆತ್ಮತತ್ವವು ಒಂದೇ. ಬಿದಿರಿನ ಒಳಗೆ ಪ್ರವೇಶಿಸಿದ ಗಾಳಿಯು ಒಂದೇ ಆದರೂ ಬೇರೆ ಬೇರೆ ತೂತುಗಳಿಂದ ಹೊರಬಂದಾಗ ಸ,ರಿ,ಗ,ಮ,ಪ,ದ,ನಿ, ಎಂದು ಮುಂತಾಗಿ ಬೇರೆ ಬೇರೆ ಸ್ವರ ರೂಪವಾಗಿ ಕೇಳಿ ಬರುವವು. ರಂಧ್ರದಿಂದ ಬರುವ ಧ್ವನಿಗಳು ಬೇರೆ ಬೇರೆಯಾದರೂ ಅವೆಲ್ಲವೂ ಬಿದಿರಿನ ಒಳಗೆ ಪ್ರವೇಶಿಸಿದ ಒಂದೇ ವಾಯುವಿನ ಭಿನ್ನ ಭಿನ್ನ ಆವಿಷ್ಕಾರಗಳು. ಅದರಂತೆ ಒಬ್ಬನೇ ಪರಮಾತ್ಮನು ಪಿಂಡಾಂಡ ಬ್ರಹ್ಮಾಂಡಗಳಲ್ಲಿದ್ದು, ಸರ್ವವ್ಯಾಪಾರಗಳನ್ನು ನಿರ್ವಹಿಸುವನು. ಎಲ್ಲ ದೇಹದಲ್ಲಿ ಎಲ್ಲ ಮಾನವರಲ್ಲಿ, ಎಲ್ಲ ಪ್ರಾಣಿಗಳಲ್ಲಿ ಇರುವ ಆ ಭಗವಂತನು ಒಬ್ಬನೇ. ಈ ವಿಷಯದಲ್ಲಿ ಋಭು ಹೇಳಿದ ಒಂದು ಆಖ್ಯಾನ ಹೇಳುತ್ತೇನೆ ಕೇಳು. ''ಚತುರ್ಮುಖ ಬ್ರಹ್ಮದೇವರಿಗೆ ಒಬ್ಬ ಮಗನಿದ್ದ. ಋಭು ಎಂಬುದು ಅವನ ನಾಮಧೇಯ. ಪುಲಸ್ತ್ಯಋಷಿಯ ಮಗ ನಿದಾಘನು ಅವನ ಶಿಷ್ಯ. ಋಭು ಮುನಿಗೆ ಶಿಷ್ಯ. ನಿದಾಘನಿಗೆ ಉತ್ತಮವಾದ ವಿಜ್ಞಾನ ತತ್ವವನ್ನು ಉಪದೇಶ ಮಾಡಿದವನು. ತನ್ನ ಶಿಷ್ಯ ನಿದಾಘನಿಗೆ ತಾನು ಹೇಳಿದ ತತ್ವವು ಇನ್ನೂ ಮನದಟ್ಟಾಗಿಲ್ಲ ಎಂದು ಅನಿಸಿತು. ಆಗ ಋಭು ಗುರುವು ಸಮಯಬಂದಾಗ ಈ ವಿಷಯವನ್ನು ಚೆನ್ನಾಗಿ ತಿಳಿಸಿಕೊಡಲು ಸಂಕಲ್ಪಿಸಿದನು.

ಸಾವಿರಾರು ವರ್ಷ ಕಳೆದುಹೋದವು. ನಿದಾಘನು ಆಗ ದೇವಿಕಾನದಿಯ ತೀರದಲ್ಲಿ ಇರುವ ನಾಗರ ಎಂಬ ಪಟ್ಟಣದಲ್ಲಿ ನೆಲೆಸಿದ್ದನು. ನದೀ ತಟಾಕದಲ್ಲಿ ನಿರ್ಮಿತವಾದ ಆ ನಗರ ಸರ್ವ ಸಂಪತ್ತುಗಳಿಂದ ಸಮೃದ್ಧವಾಗಿದ್ದಿತು. ಅದನ್ನು ನಿರ್ಮಿಸಿದವರು ಸಾಮಾನ್ಯರೆ! ಬ್ರಹ್ಮಮಾನಸಪುತ್ರರಾದ ಸಾಕ್ಷಾತ್ ಅಗಸ್ತ್ಯ ಮುನಿಗಳು.

ಸುತ್ತಲೂ ರಮ್ಯವಾದ ಹೂದೋಟಗಳು, ನೋಡಿದಲ್ಲೆಲ್ಲ ನೈದಿಲೆ, ತಾವರೆಗಳಿಂದ ಶೋಭಿಸುವ ಹೊಕ್ಕರಣಿಗಳು. ಆ ನಾಗರವೆಂಬ ನಗರ ನೋಡುವವರ ಕಣ್ಣಿಗೆ ಅತ್ಯಂತ ಮನೋಹರವಾಗಿ ಕಂಗೊಳಿಸುತ್ತಿತ್ತು. ಇಂತಹ ಸಂಪತ್ತಿನ ಸಮೃದ್ಧಿಯಲ್ಲಿ ಮೆರೆಯುವ ಈ ನಗರದಲ್ಲಿ ವಾಸ ಮಾಡಿದ್ದಾನೆ ತನ್ನ ಶಿಷ್ಯ ನಿದಾಘ ಎಂದು ತಿಳಿದು ಬಂದಿತು ಆ ಋಭುಮುನಿಗೆ. ಕೂಡಲೇ ಶಿಷ್ಯನನ್ನು ಕರೆಯಲು ಹೊರಟ ಆ ಋಭು ಗುರು. ಆ ಪಟ್ಟಣದಲ್ಲಿ ಹುಡುಕಿ ನಿದಾಘನ ಮನೆಗೆ ಆಗಮಿಸಿದ ಆ ಗುರುದೇವ. ಅತಿಥಿಗಳ ದಾರಿ ಕಾಯುತ್ತ ನಿಂತಿದ್ದ ನಿದಾಘ. ತನ್ನ ವೈಶ್ವದೇವವನ್ನು ಮಾಡಿ ಮುಗಿಸಿ ಅಭ್ಯಾಗತರಿಗಾಗಿ ದಾರಿ ಕಾಯುತ್ತಿದ್ದ. ಋಭುಋಷಿಗಳು ಹೋಗಿ ನಿಂತರು. ಆನಂದವಾಯಿತು ನಿದಾಘನಿಗೆ. ಅತ್ಯಾದರದಿಂದ ಸ್ವಾಗತ ಮಾಡಿದ. ಆಸನ ನೀಡಿದ. ಅರ್ಘ್ಯೋದಕಗಳಿಂದ ಅಡಿದಾವರೆಗಳನ್ನು ತೊಳೆದ. ಎಲೆ ಹಾಕಿ ಊಟ ಬಡಿಸಿದ. ಭೋಜನ ಮಾಡಲು ಕೈ ಮುಗಿದು ಬೇಡಿಕೊಂಡ. ಆ ಗುರುವು ನಿದಾಘನಿಗೆ ಪ್ರಶ್ನಿಸಿದ.

**ಋಭು :-** ನಿದಾಘ, ನಾನು ಕದನ್ನವನ್ನೆಂದೂ ಮುಟ್ಟುವದಿಲ್ಲ. ನಿನ್ನ ಮನೆಯಲ್ಲಿ ಏನೇನು ಅಡಿಗೆ ಮಾಡಿರುವೆ.

**ನಿದಾಘ :-** ದ್ವಿಜಶ್ರೇಷ್ಠರೇ, ಅಕ್ಕಿ ಹಿಟ್ಟು, ಇದರಿಂದ ಮಾಡಿದ ಅನಾರಸ ಮುಂತಾದ ಪದಾರ್ಥಗಳನ್ನು ನಾನು ಮಾಡಿಸಿದ್ದೇನೆ. ಇದರಲ್ಲಿ ತಮಗೆ ಇಷ್ಟವಾದದ್ದನ್ನು ಯಥೇಷ್ಟ ಭೋಜನ ಮಾಡಬಹುದು.

**ಋಭು :-** ಇದೆಲ್ಲವೂ ಕದನ್ನವೇ ಸರಿ. ನನಗೆ ಏನಾದರೂ ಮೃಷ್ಟಾನ್ನವಿದ್ದರೆ ಬಡಿಸು.

**ನಿದಾಘ :-** ಸ್ವಾಮಿ ಸಕ್ಕರೆ ಹಾಕಿದ ಪಾಯಸವನ್ನು ಮಾಡಿಸಿದ್ದೇನೆ. ಕಬ್ಬಿನ ರಸದಿಂದ ಬೇರೆ ಬೇರೆ ಪಕ್ವಾನ್ನಗಳನ್ನು ಮಾಡಿಸಿದ್ದೇನೆ. ಗೋದಿಯ ಹಿಟ್ಟಿನಿಂದ ಸಿಹಿಯಾದ ತಿಂಡಿಗಳನ್ನು ತಯಾರಿಸಿದ್ದೇನೆ. ಇದರಲ್ಲಿ ಇಷ್ಟವಾದದ್ದನ್ನು ಭಕ್ಷಿಸಬೇಕು.

**ಋಭು :-** ಇವೂ ಕೂಡ ಎಲ್ಲವೂ ಕದನ್ನವೆ! ಮತ್ತೇನಾದರೂ ಪಕ್ವಾನ್ನವಿದ್ದರೆ ಬಡಿಸು.

ಆಗ ನಿದಾಘನು ತನ್ನ ಮಡದಿಯನ್ನು ಕರೆದು ನಮ್ಮ ಮನೆಯಲ್ಲಿರುವ ಅಕ್ಕಿಯಲ್ಲಿ ಅತ್ಯುತ್ತಮವಾದದ್ದನ್ನು ಆರಿಸಿ, ಅದರಿಂದ ಮೃಷ್ಟಾನ್ನ ತಯಾರಿಸಿ ಭೋಜನಕ್ಕೆ ಅಣಿ ಮಾಡಲು ಹೇಳಿದನು. ಪತಿಯ ಆಜ್ಞೆಯನ್ನು ಶಿರಸಾವಹಿಸಿ, ಅವನ ಹೆಂಡತಿಯಾದ ಶಾಲಿನಿಯು ಮಧುರವಾದ ಮೃಷ್ಟಾನ್ನ ತಯಾರಿಸಿ, ಋಭುಮುನಿಗೆ ಎಲೆ ಬಡಿಸಿದಳು. ಅದೆಲ್ಲವನ್ನು ಋಭು ಋಷಿಯು ಯಥೇಷ್ಟ ಭೋಜನ ಮಾಡಿದನು. ಅದರಿಂದ ನಿದಾಘನಿಗೆ ಆನಂದವಾಯಿತು. ನಿದಾಘನಿಗೆ ಇವನು ತನ್ನ ಗುರುವಾದ ಋಭುಋಷಿ ಎಂದು ಗೊತ್ತೇ ಆಗಿರಲಿಲ್ಲ. ಸಾವಿರ ವರ್ಷಗಳ ಮೇಲಾಗಿತ್ತು ಅವನು ಈ ಗುರುವಿನಲ್ಲಿ ಓದಿ. ಅಧ್ಯಯನದ ನಂತರ ಒಮ್ಮೆಯೂ ಗುರು-ಶಿಷ್ಯರ ಭೆಟ್ಟಿಯಾಗಿರಲಿಲ್ಲ. ಅದರಿಂದ ಗುರುವಿನ ಗುರುತು ಸ್ವಲ್ಪವೂ ಆಗಲಿಲ್ಲ ಆ ನಿದಾಘನಿಗೆ. ಆದರೂ ಕೂಡ ಮಧ್ಯಾಹ್ನದ ವೇಳೆಯಲ್ಲಿ ಅನಾಯಾಸ ವಾಗಿ ಓರ್ವ ಮಹರ್ಷಿಯು ತನಗೆ ಆತಿಥ್ಯ ನೀಡಲು ದೊರಕಿದರು ಎಂಬ ಸಂತೋಷದಿಂದ ಆ ಋಭುಮುನಿಯನ್ನು ಕರೆದು ಊಟಣ ನೀಡಿದ. ತನ್ನ ಮಡದಿಯು ದಕ್ಷತೆಯಿಂದ ಮಾಡಿದ ಪಕ್ವಾನ್ನವನ್ನು ಈ ಅತಿಥಿಯು ಯಥೇಚ್ಛವಾಗಿ ಭಕ್ಷಣ ಮಾಡಿದ್ದರಿಂದ ಅವನಿಗೆ ಹಿಗ್ಗಾಯಿತು. ಭಕ್ತಿಯಿಂದ ನಮಸ್ಕರಿಸಿದ. ಆ ಋಭುಮುನಿಯನ್ನು ಪ್ರಶ್ನಿಸಿದನು.

**ನಿದಾಘ :-** ವಿಪ್ರೋತ್ತಮ, ನಾನು ಬಡಿಸಿದ ಈ ಊಟದಿಂದ ನಿನಗೆ ಸಂಪೂರ್ಣ ತೃಪ್ತಿ ಆಯಿತೇ ? ಮನಸ್ಸಿಗೆ ಸಮಾಧಾನವಾಯಿತೇ? ತಮ್ಮ ಊರು ಯಾವದು? ಎತ್ತ ಹೊರಟಿದ್ದೀರಿ? ಇಲ್ಲಿಗೆ ದಯಮಾಡಿಸಲು ಕಾರಣವೇನು?

**ಋಭು :-** ಬ್ರಾಹ್ಮಣನೆ, ಹಸಿವು ಆದವನಿಗೆ ಅನ್ನ ಉಂಡರೆ ತೃಪ್ತಿ ಆಗುವದು. ನನಗೆ ಹಸಿವೆಯೇ ಆಗಿಲ್ಲ. ತೃಪ್ತಿ ಎಲ್ಲಿಂದ ಬಂತು ? ನನ್ನನ್ನೇಕೆ ಕೇಳುವೆ ? ಜಠರಾಗ್ನಿಯಿಂದ ಪಾರ್ಥಿವವಾದ ಅನ್ನಾದಿಗಳು ದಹಿಸಲ್ಪಟ್ಟರೆ ಅಂದರೆ ಜೀರ್ಣವಾದರೆ ಹಸಿವೆ ತಾನೇ ಹುಟ್ಟುತ್ತದೆ. ನೀರು ಬತ್ತಿದ್ದರೆ ಮಾನವನಿಗೆ ನಿರಡಿಕೆ ಆಗುತ್ತದೆ. ಹೀಗೆ ದೇಹದಲ್ಲಿಯ ಪೃಥ್ವೀಭಾಗ, ಜಲಭಾಗಗಳು ತೇಜೋಭಾಗವಾದ ಅಗ್ನಿಯಿಂದ ಶೋಷಿಸಲ್ಪಟ್ಟರೆ ಹಸಿವೆ ನಿರಡಿಕೆ ಆಗುತ್ತದೆ. ಆದರೆ ಅವು ಆತ್ಮದ ಧರ್ಮವಲ್ಲ. ಅದರಿಂದ ನನಗೆ ಹಸಿವೆ ಹುಟ್ಟುವದೂ ಇಲ್ಲ. ಅದರ ಪ್ರಸಕ್ತಿಯೂ ಇಲ್ಲ. ಹಸಿವೆಯೇ ಇಲ್ಲದಿರುವ ಆತ್ಮನಿಗೆ ತುಷ್ಟಿ ಪುಷ್ಟಿ ಎಲ್ಲಿಂದಾದೀತು ? ಸಂತೋಷ, ಮನಃಸ್ವಾಸ್ಥ್ಯ ಇವು ಮನೋಧರ್ಮಗಳು. ಅದಕ್ಕೂ ಆತ್ಮನಿಗೂ ಸಂಬಂಧವಿಲ್ಲ. ಅಂದಬಳಿಕ ಸಂತೋಷವಾಯಿತೆ ಎನ್ನುವ ನಿನ್ನ ಪ್ರಶ್ನೆ ಸರಿಯಿಲ್ಲ.

ಈ ಜಗತ್ತೆಲ್ಲವೂ ಪರಮಾತ್ಮನದು. ಎಲ್ಲ ಕಡೆಗೂ ಅವನು ವ್ಯಾಪ್ತನಾಗಿದ್ದು ಸರ್ವ ನಿಯಾಮಕನಾಗಿದ್ದಾನೆ. ಅದರಿಂದ ನಿನ್ನ ಊರು ಯಾವದು? ಎಲ್ಲಿಗೆ ಹೋಗುತ್ತಿರುವೆ ಎಂಬ ಪ್ರಶ್ನೆ ಕೂಡುವದಿಲ್ಲ. ನೀನು ಮಾಡಿದ ಮೃಷ್ಟಾನ್ನದಿಂದ ನನಗೆ ತೃಪ್ತಿ ಆಯಿತೇ ಎಂದು ಕೇಳಿದೆ. ಆದರೆ ನೀನು ಮಾಡಿದ ಅನ್ನವು ಮೃಷ್ಟಾನ್ನ ಅಲ್ಲವೆಂದರೆ ನಿನಗೆ ಕೋಪ

ಬರುವದು. ವಾಸ್ತವಿಕವಾಗಿ ಯಾವ ವಸ್ತುವೂ ಕೊನೆಯ ವರೆಗೆ ಮೃಷ್ಟಾನ್ನವಾಗಿ ಉಳಿಯುವದಿಲ್ಲ. ನೀನು ಮಾಡಿದ ಮೃಷ್ಟಾನ್ನವು ನೀನು ಮಾಡುವದಕ್ಕಿಂತ ಮೊದಲು ಮೃಷ್ಟಾನ್ನವಾಗಿರಲಿಲ್ಲ. ಮಾಡಿಟ್ಟ ಏಳೆಂಟು ಗಂಟೆಗಳ ನಂತರ ಅದು ತಂಗಳಾಗಿ ದುರ್ಗಂಧದಿಂದ ತಿಂದವರಿಗೆ ಅನಾರೋಗ್ಯಕರವಾಗುವದು. ಅದನ್ನು ಹೆಚ್ಚು ತಿಂದರೆ ದೇಹಕ್ಕೆ ವಿನಾಶಕರವಾಗುವದು. ಹೀಗೆ ಹಿಂದೆ, ಈಗ, ಮುಂದೆ ಪ್ರಮಾಣ ಮೀರಿದರೆ, ಅರುಚಿಕರ, ಅನಾರೋಗ್ಯಕರವಾದ ವಸ್ತುವನ್ನು ಮೃಷ್ಟಾನ್ನವೆಂದು ನಾನು ಹೇಗೆ ಹೇಳಲಿ ?

ಈ ಪಾರ್ಥಿವದೇಹವು ಪಾರ್ಥಿವಾಂಶವು ಕಡಿಮೆ ಆದಾಗ ಜಲಾಂಶವು ಕಡಿಮೆ ಆದಾಗ ಸಂಕಟಪಡುವದು. ಆಗ ಮಣ್ಣಿನ ಮನೆಗೆ ಸೆಗಣಿಯಿಂದ ಸಾರಿಸಿದರೆ ತುಸು ಭದ್ರತೆ ಉಂಟಾದಂತೆ ಪಾರ್ಥಿವ ದೇಹಕ್ಕೆ ಅನ್ನ ನೀರು ಹಾಕಿದರೆ ತಾತ್ಕಾಲಿಕ ತೃಪ್ತಿ ಆಗುವದು. ಇದು ಆವುದೂ ಪರಮಾರ್ಥವಲ್ಲ. ಕ್ಷುದ್ರವಾದ ಆಶೆಗಳಿಂದ ಈ ದೇಹೇಂದ್ರಿಯಗಳ ತೃಪ್ತಿ ಹಾಗೂ ಪೋಷಣೆ ಮಾಡುವದು ಬಿಟ್ಟು, ಆ ಪರಮಾತ್ಮನನ್ನೇ ನೀನು ಆರಾಧಿಸಬೇಕು. ಮೋಕ್ಷವನ್ನು ಪಡೆಯಬೇಕು,'' ಅವನ ಈ ಮಾತುಗಳನ್ನು ಕೇಳಿ, ನಿದಾಘನಿಗೆ ಆನಂದವಾಯಿತು. ಅವನು ಗುರುವಿಗೆ ನಮಸ್ಕರಿಸಿ- ''ವಿಪ್ರೋತ್ತಮನೇ, ನನ್ನ ಮೇಲೆ ಪ್ರಸನ್ನನಾಗು. ನಿನ್ನ ಈ ಹಿತೋಪದೇಶ ಕೇಳಿ ನನ್ನ ಅಜ್ಞಾನವು ಕಳೆದುಹೋಯಿತು. ನನ್ನ ಮೇಲೆ ಅನುಗ್ರಹ ಮಾಡಿರಿ. ತಾವು ಯಾರು ಹೇಳಿರಿ.''

**ಋಭು :-** ನಿನಗೆ ನನ್ನ ಗುರುತು ಹತ್ತಲಿಲ್ಲವೆಂದು ತೋರುತ್ತದೆ. ನಿನಗೆ ಹಿಂದೆ ತತ್ವೋಪದೇಶಗೈದ ಋಭುವೇ ನಾನು. ನಾನು ಹಿಂದೆ ಹೇಳಿದ ಜ್ಞಾನವನ್ನು ದೃಢಪಡಿಸಲು ಇಲ್ಲಿಗೆ ಬಂದಿದ್ದೆ. ಆದುದರಿಂದ ಈ ಜಗತ್ತಿನಲ್ಲಿ ಅಂತರ್ಯಾಮಿಯಾಗಿರುವ ಏಕೈಕ ಶಕ್ತಿ ಪರಮಾತ್ಮ, ಅವನು ಅಧಿಕರಣ ಭೇದದಿಂದ ಅಸಂಖ್ಯ ವಸ್ತುಗಳಿದ್ದರೂ ಅವನಿಗೆ ಭೇದವಿಲ್ಲ. ಸರ್ವತ್ರ, ವ್ಯಾಪ್ತನಾದ ಪರಮಾತ್ಮನ ರೂಪಗಳಿಗೆ ಐಕ್ಯವನ್ನು ಚಿಂತಿಸುವದೇ ಅಧ್ಯಾತ್ಮ-ಅದ್ವೈತ ಜ್ಞಾನ. ಇದನ್ನು ನಿನಗೆ ತಿಳಿಸಿಕೊಡಬೇಕೆಂದೇ ನಾನಿಲ್ಲಿಗೆ ಬಂದೆ.'' ಗುರುವಿನ ಈ ಉಪದೇಶವನ್ನು ಕೈಮುಗಿದು ಕೇಳಿದ ಶಿಷ್ಯ ನಿದಾಘ ''ಸ್ವಾಮಿ ತಾವು ಈ ವರೆಗೆ ಹೇಳಿದ್ದು ನಿಜ. ಈ ದಿವ್ಯ ಜ್ಞಾನೋಪದೇಶದಿಂದ ನನ್ನನ್ನು ಉದ್ಧರಿಸಿದ್ದಕ್ಕಾಗಿ ತಮಗೆ ವಂದನೆ'' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನಂತರ ''ಇಲ್ಲಿಯೇ ಕೆಲವು ದಿನ ಇರಲು'' ಕೇಳಿಕೊಂಡ. ಆದರೆ ಸ್ವತಂತ್ರ ಇಚ್ಛೆಯುಳ್ಳವನಾದ ಆ ಋಭುಮುನಿಯು ಅಲ್ಲಿಂದ ಹೊರಟು ಹೋದ.

ಮತ್ತೆ ಸಾವಿರ ವರ್ಷ ಉರುಳಿದವು. ನಡುವೆ ಒಮ್ಮೆಯೂ ಗುರು-ಶಿಷ್ಯರ ಮಿಲನವಾಗಲಿಲ್ಲ. ಗುರು ಮರೆಯಲಿಲ್ಲ. ಶಿಷ್ಯ ಅರಿಯಲಿಲ್ಲ. ಇದನ್ನು ತಿಳಿದ ಋಭು ಗುರುವು ಮತ್ತೆ ಆ ಶಿಷ್ಯನಿಗೆ ಜ್ಞಾನೋಪದೇಶ ಗೈಯಲು ಅವನನ್ನು ಹುಡುಕಿಕೊಂಡು ಬಂದ. ಅದೇ ದೇವಿಕಾ ದಂಡೆಯ ದಂಡೆ. ಅದೇ ಪುಲಸ್ತ್ಯ ನಿರ್ಮಿತವಾದ ಆರಾಮ. ರಮ್ಯವಾದ ನಾಗರನಗರ. ಅದೇ ತನ್ನ ಮನೆಯಲ್ಲಿ ನಿದಾಘ ವಾಸವಾಗಿದ್ದಾನೆ. ನಿದಾಘನು ಯಾವುದೋ ಕೆಲಸಕ್ಕೆ ಊರ ಹೊರಗೆ ಹೋಗಿದ್ದ. ಮರಳಿ ಬರುವಾಗ ರಾಜಧಾನಿಯ ಅಗಸೆ ಬಾಗಿಲ ಬಳಿ ಭಾರಿ ಗಲಾಟೆ. ದಿಗ್ವಿಜಯಕ್ಕೆ ಹೋದ ಮಹಾರಾಜರು ತಿರುಗಿ ಪುರ ಪ್ರವೇಶ ಮಾಡುತ್ತಿದ್ದರು, ಅವರೊಂದಿಗೆ ಸೇನಾಪರಿವಾರವೆಲ್ಲ. ಪಟ್ಟಣದಲ್ಲಿ ಮೆರವಣಿಗೆ ಮಾಡುತ್ತಿದ್ದರು. ವಿಪರೀತ ಜನ ಸಂದಣಿ. ಭಾರಿ ನೂಕು ನುಗ್ಗಲು ನಿದಾಘನಿಗೆ, ಗದ್ದಲವೆಂದರೆ ಆಗದು.

ಆದುದರಿಂದ ಅವನು ಈ ಗೊಂದಲವನ್ನು ಬಿಟ್ಟು ದೂರ ನಿಂತಿದ್ದ. ಈ ಎಲ್ಲ ರಾಜ ಪರಿವಾರವು ಹೋಗುವದನ್ನೇ ಕಾಯುತ್ತಿದ್ದ. ಅದಂತೂ ಹೇಳಿಕೇಳಿ ರಾಜಪರಿವಾರ. ಮಂಗಳವಾದ್ಯಗಳು ಮುಂದೆ ಆನೆ ಕುದುರೆ, ಕಾಲಾಳು, ಅದರ ಹಿಂದೆ ಮಂತ್ರಿ ಪರಿವಾರ, ಸೇನಾಪತಿಗಳು, ಅದರ ಹಿಂದೆ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ಮಹಾರಾಜ. ಹೀಗೆ ಸಾಗಿತ್ತು ವೈಭವದ ಮೆರವಣಿಗೆ. ನಿದಾಘನಿಗೂ ಆ ಮಧ್ಯಾಹ್ನದಲ್ಲಿ ಹಸಿವು, ಬಾಯಾರಿಕ ಆಗಿತ್ತು. ಅರಣ್ಯದಲ್ಲಿ ತಿರುಗಿ ಸಮಿಧೆ, ದರ್ಭೆ, ಹೂ,ತುಳಸಿ ತೆಗೆದುಕೊಂಡು ಬಂದಿದ್ದ. ಈ ಮೆರವಣಿಗೆ ದಾಟಿ, ಮುಂದೆ ಹೋಗಲು ಅವನು ಒಂದೆಡೆ ಯಾರಿಗೂ ಕಾಣದಂತೆ ನಿಂತಿದ್ದ. ಋಭುವು ಅವನು ಇದ್ದಲ್ಲಿಗೆ ಬಂದ. ಅವನನ್ನು ಅಭಿವಾದಿಸಿ ಕೇಳಿದ- ''ಬ್ರಾಹ್ಮಣನೆ, ಇಷ್ಟೆಲ್ಲ ಜನರು ಆ ದಂಡ ಯಾತ್ರೆಯ ವೈಭವ ನೋಡುತ್ತಲಿರುವಾಗ ನೀನೊಬ್ಬನೆ ಜನರಹಿತವಾದ ಮೂಲೆಯಲ್ಲಿ ಬಂದು ಏಕೆ ನಿಂತಿರುವೆ ?

**ನಿದಾಘ :-** ರಾಜನು, ಈ ಸುಂದರವಾದ ಪಟ್ಟಣದಲ್ಲಿ ಸೇನಾ ಪರಿವಾರದೊಂದಿಗೆ ಪ್ರವೇಶಮಾಡುತ್ತಿದ್ದಾನೆ. ಆದುದರಿಂದ ಅಲ್ಲಿ ಜನರು ನೆರೆದಿದ್ದಾರೆ. ಅದಕ್ಕಾಗಿ ನಾನು ಇಲ್ಲಿಯೇ ನಿಂತಿದ್ದೇನೆ.

**ಋಭು :-** ರಾಜನು ಯಾರು ? ಉಳಿದ ಜನರು ಯಾರು ? ಇದನ್ನು ನನಗೆ ಹೇಳು. ಎಲ್ಲವೂ ನಿನಗೆ ಗೊತ್ತಿದೆ ಎಂದು ನಾನು ತಿಳಿದಿದ್ದು, ನಾನು ಕೇಳುತ್ತಿದ್ದೇನೆ.

**ನಿದಾಘ :-** ಅದೋ, ಅಲ್ಲಿ, ಆ ಪರ್ವತದ ಶಿಖರದಂತೆ ಎತ್ತರವಾಗಿ ಮದೋನ್ಮತ್ತವಾಗಿ ಕಾಣುವುದಿಲ್ಲವೆ ? ಅದೇ ಆನೆ. ಅದರ ಮೇಲೆ ಕುಳಿತಿರುವವನೇ ರಾಜ. ಅವನ ಸುತ್ತಲೂ ಇರುವವರೇ ಪ್ರಜೆಗಳು.

**ಋಭು :-** ಆ ಆನೆ ಮತ್ತು ರಾಜ ಇವರಿಬ್ಬರೂ ನನಗೆ ಒಂದೇ ಆಗಿ ಕಾಣುತ್ತಾರೆ. ನೀನು ಬೇರೆ ಬೇರೆ ಎಂದು ಹೇಳುತ್ತಿರುವಿ. ಆದುದರಿಂದ ನನಗೆ ಬಿಡಿಸಿ ಹೇಳು. ಆನೆ ಯಾವದು ? ರಾಜ ಯಾರು ?

**ನಿದಾಘ :-** ಕೆಳಗೆ ಇದ್ದದ್ದು ಆನೆ. ಮೇಲೆ ಕುಳಿತವ ರಾಜ. ಆ ರಾಜನಿಗೂ ಈ ಆನೆಗೂ ವಾಹ್ಯವಾಹಕ ಸಂಬಂಧ. ಆನೆಯು ವಾಹಕ (ಹೊರುವದು). ರಾಜನು ವಾಹ್ಯ (ಹೊರಲ್ಪಡುವವನು). ಇದನ್ನು ತಿಳಿಯದವರು ಯಾರು ?

**ಋಭು :-** ನನಗೆ ತಿಳಿಯುವಂತೆ ಚೆನ್ನಾಗಿ ಹೇಳು. ಕೆಳಗೆ ಎಂದರೆ ಏನು ? ಮೇಲೆ ಅಂದರೆ ಏನು ? ಋಭುವಿನ ಈ ಪ್ರಶ್ನೆ ಕೇಳಿ ಮೊದಲೇ ಹಸಿವೆಯಿಂದ ಬಳಲುತ್ತಿರುವ ನಿದಾಘನಿಗೆ ಕೋಪ ಬಂದಿತು. ಅವನು ಕೂಡಲೇ ಋಭು ಇದ್ದಲ್ಲಿಗೆ ಬಂದು ಅವನನ್ನು ಬಲವಂತದಿಂದ ಬಾಗಿಸಿ ಅವನ ಬೆನ್ನ ಮೇಲೆ ಕುಳಿತು ಹೇಳಿದನು. ''ನಾನು ಈಗ ನಿನ್ನ ಮೇಲೆ ಕುಳಿತಿದ್ದೇನೆ ಆ ರಾಜನಂತೆ. ನೀನು ಆ ಆನೆಯಂತೆ ನನ್ನ ಕೆಳಗೆ ಇರುವಿ. ನಾನು ಕುಳಿತದ್ದು ಮೇಲೆ. ನೀನು ಇದ್ದದ್ದು ಕೆಳಗೆ ಈಗಲಾದರೂ ತಿಳಿಯಿತೇ ಮೇಲೆ ಎಂದರೇನು ಕೆಳಗೆ ಅಂದರೇನು.

**ಋಭು :-** ವಿಪ್ರೋತ್ತಮನೆ, ನೀನು ರಾಜನಂತೆ ನಾನು ಗಜದಂತೆ, ಇರುವದಾದರೆ ಅದನ್ನೇ ಹೇಳು ಕೇಳುತ್ತೇನೆ. ನೀನು ಅಂದರೆ ಯಾರು, ನಾನು ಅಂದರೆ ಯಾರು? ಅವನ ಈ ಕೊನೆಯ ಪ್ರಶ್ನೆ ಕೇಳಿದ ಕೂಡಲೆ ತಿಳಿಯಿತು- ಆ ನಿದಾಘನಿಗೆ ಇವನು ನನ್ನ ಗುರು ಸಾಕ್ಷಾತಗ ಋಭು ಎಂದು. ತಕ್ಷಣವೇ ಕೆಳಗೆ ಹಾರಿದ. ಅವನ ಚರಣಗಳನ್ನು ಗಟ್ಟಿಯಾಗಿ

ಹಿಡಿದು ನಮಸ್ಕರಿಸಿದ. 'ಸ್ವಾಮಿ, ನೀವು ನನ್ನ ಗುರುಗಳಾದ ಸಾಕ್ಷಾತ್ ಋಭುಮುನಿಗಳೇ. ಇದರಲ್ಲಿ ಸಂದೇಹವಿಲ್ಲ. ತಮ್ಮ ಹೊರತು ಬೇರೆಯವರಿಗೆ ಇಂತಹ ಅದ್ವೈತ ಸಂಸ್ಕಾರವಿಲ್ಲ. ಶಿಷ್ಯನಾದ ನನ್ನ ಮೇಲಿನ ಪ್ರೀತಿಯಿಂದ ತಾವು ಇಲ್ಲಿಗೆ ಬಂದಿದ್ದೀರಿ.

**ಋಭು :-** ನಿದಾಘನಿಗೆ, ನೀನು ಹಿಂದೆ ಮಾಡಿದ ಗುರುಸೇವೆಯಿಂದ ನಾನು ಪ್ರೀತನಾಗಿದ್ದೇನೆ. ನಿನ್ನ ಗುರುವಾದ ಈ ಋಭುವು ನಿನಗೆ ಉಪದೇಶ ಮಾಡಲು ಬಂದಿದ್ದೇನೆ. ಈಗ ನಿನಗೆ ಪರಮಾರ್ಥದ ಸಾರಭೂತವಾದ ಅದ್ವೈತ ತತ್ವವನ್ನು ಸಂಗ್ರಹಿಸಿ ಉಪದೇಶ ನೀಡಿದ್ದೇನೆ, ನೀಡುತ್ತಲಿದ್ದೇನೆ.'' ಎಂದು ಹೇಳಿ, ಋಭುವು ನಿದಾಘನಿಗೆ ನಿಜವಾದ ವಿದ್ಯೆಯನ್ನು ಉಪದೇಶಿಸಿದನು. ಅವನ ಬ್ರಹ್ಮೋಪದೇಶದಿಂದ ನಿದಾಘನು ಆ ಪರಬ್ರಹ್ಮನು ಅದ್ವಿತೀಯ ಎಂದು ತಿಳಿದು ಅದ್ವೈತ ಬೋಧವನ್ನು ಪಡೆದನು. ಸರ್ವಪ್ರಾಣಿಗಳಲ್ಲಿರುವ ಆ ಪರಮಾತ್ಮನು ಒಂದು ಎಂದು ತಿಳಿದು ಅವನನ್ನು ಆರಾಧಿಸಿ, ದಿವ್ಯವಾದ ಮೋಕ್ಷವನ್ನು ಪಡೆದನು. ಧರ್ಮಜ್ಞಾನಿಯಾದ ರಾಜನೇ ನೀನು ಕೂಡ ಸರ್ವಗತನಾದ ಆ ಪರಮಾತ್ಮನ ಸ್ವರೂಪ ತಿಳಿದು, ಸರ್ವರಲ್ಲಿ ಸಮದಷ್ಟಿ ಉಳ್ಳವನಾಗು. ಆಕಾಶವು ಬಿಳಿ, ನೀಲಿ, ಬಣ್ಣಭೇದ ಉಳ್ಳದ್ದಾಗಿ ಕಾಣುವಂತೆ ಭ್ರಾಂತರಿಗೆ ಪರಮಾತ್ಮನು ಒಬ್ಬನೇ ಆದರೂ ಬೇರೆ ಬೇರೆಯಾಗಿ ತೋರುವನು. ಜಗತ್ತಿನಲ್ಲಿರುವ ಎಲ್ಲ ವಸ್ತುಗಳು ಅವನ ಅಧೀನ. ಅವನನ್ನು ಬಿಟ್ಟು ಬೇರೆ ಉತ್ತಮ ವಸ್ತು ಮತ್ತೊಂದು ಇರುವದೇ ಇಲ್ಲ. ನಾನು ನೀನು ಮುಂತಾದ ಸಕಲ ವಸ್ತುಗಳಲ್ಲಿ ಪರಮಾತ್ಮನೊಬ್ಬನೇ ಇರುವನೆಂದು, ಭೇದ ಮೋಹವನ್ನು ಕಳೆದುಕೊಂಡವನು ತನ್ನ ಸ್ವರೂಪ ಪ್ರಕಾಶಹೊಂದುವನು.

ಈ ರೀತಿಯಾಗಿ ಬ್ರಾಹ್ಮಣನು ಹೇಳಿದ್ದು ಕೇಳಿ, ಆ ರಾಜನು ಪರಮಾರ್ಥ ದೃಷ್ಟಿ ಪಡೆದು ಭಗವದ್ರೂಪದಲ್ಲಿ ಭೇದವನ್ನು ಬಿಟ್ಟು ಜನ್ಮಾಂತರ ಪುಣ್ಯದಿಂದ ದಿವ್ಯಗತಿ ಹೊಂದಿ, ಅದೇ ಜನ್ಮದಲ್ಲಿ ಮೋಕ್ಷವನ್ನು ಹೊಂದಿದನು.

*ನಾರದ ಮಹಾಪುರಾಣದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯ ಮುಗಿದುದು*

—○—

## ಸಾಮವೇದ, ಸಂಗೀತ ಮತ್ತು ಸ್ವರಸಾಧನ ಶಿಕ್ಷಾ ವಿವೇಚನೆ

ಅಧ್ಯಾಯ - ೫೦

**ನಾರದ :-** ಪೂಜ್ಯರೇ, ನಾನು ಕೇಳಿದ ಪ್ರಶ್ನೆಗಳಿಗೆಲ್ಲ ಸರಿಯಾಗಿ ಉತ್ತರ ಕೊಟ್ಟಿದ್ದೀರಿ. ಈ ಭಗವತ್ಕಥೆಯನ್ನು ಎಷ್ಟು ಕೇಳಿದರೂ ತೃಪ್ತಿಯಾಗುವದಿಲ್ಲ. ವೇದವ್ಯಾಸರ ಪುತ್ರನಾದ ಶುಕನು ಮಹತ್ತರವಾದ ಸಿದ್ಧಿಯನ್ನು ಪಡೆದ ಸುದ್ದಿಯನ್ನು ಕೇಳಿದ್ದೇನೆ. ದೊಡ್ಡವರ ಸೇವಾ ಶುಶ್ರೂಷೆಗಳಿಲ್ಲದೆ ಮತ್ತು ಜ್ಞಾನಿಗಳ ಅನುಗ್ರಹವಿಲ್ಲದೆ, ದಿವ್ಯಜ್ಞಾನವು ಉಂಟಾಗಲಾರದು. ಅಂತಹ ದಿವ್ಯಜ್ಞಾನವನ್ನು ಈ ವ್ಯಾಸಕುಮಾರನು ಪಡೆದದ್ದು ಹೇಗೆ? ಆ ಶುಕನ ಜನನ ಎಲ್ಲಿ? ಹೇಗೆ? ಅವನು ಆಚರಿಸಿದ ಕರ್ಮಗಳ ರಹಸ್ಯವೇನು ಇದೆಲ್ಲವನ್ನು ನನಗೆ ಹೇಳಿರಿ.

**ಸನಂದನ :-** ಈ ಶುಕಮುನಿಯ ಉತ್ಪತ್ತಿಯನ್ನು ಕೇಳಿದವನೂ ಕೂಡ ಬ್ರಹ್ಮಜ್ಞಾನಿ ಎನಿಸುವನು. ಆ ಶುಕಾಚಾರ್ಯನ ಹುಟ್ಟು ಹಾಗೂ ಚರಿತ್ರೆಗಳನ್ನು ನಿರೂಪಿಸುತ್ತೇನೆ ಕೇಳು.

ಶುಕಮುನಿಯು ತಂದೆ ವ್ಯಾಸರ ಅನುಗ್ರಹದಿಂದ ವೇದ ವೇದಾಂತಗಳನ್ನು ಅರಿತು ಪರಬ್ರಹ್ಮನನ್ನು ತಿಳಿದಿದ್ದಾರೆ. ಜ್ಞಾನಗಳಲ್ಲಿ ಅತ್ಯಂತ ಶ್ರೇಷ್ಠವಾದ ಬ್ರಹ್ಮಜ್ಞಾನವು ಅಂಗಸಹಿತವಾದ ವೇದಗಳನ್ನು ಗುರುಮುಖದಿಂದ ಅಧ್ಯಯನ ಮಾಡಿದಾಗಲೇ ಉಂಟಾಗುವದು. ಜ್ಞಾನ ಕೇವಲ ವೇದಾಧ್ಯಯನ ಕಂಠಪಾಠ ಮಾಡುವದರಿಂದ ಫಲವು ದೊರೆಯಲಾರದು. ವೇದಗಳ ನಿಜವಾದ ತತ್ತ್ವಾರ್ಥ ತಿಳಿಯಬೇಕಾದರೆ- ಆ ವೇದದ ಷಡಂಗಗಳನ್ನು ಸರಿಯಾಗಿ ಅಭ್ಯಾಸ ಮಾಡಿ, ಆ ವೇದಾಂಗಗಳಿಂದಲೇ ವೇದಾರ್ಥನಿರ್ಣಯ ಮಾಡಿಕೊಳ್ಳಬೇಕು. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ ಜ್ಯೋತಿಷ್ಯ, ಛಂದಶ್ಶಾಸ್ತ್ರ ಈ ಆರು ವೇದಾಂಗಗಳಿಂದ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವಣವೇದಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಈ ಆರು ವೇದಾಂಗ ಸಹಿತ ಈ ನಾಲ್ಕು ವೇದಗಳನ್ನು ಗುರುಗಳಿಂದ ಅಧ್ಯಯನ ಮಾಡಿ ಪಂಡಿತನಾದವನು ಮಾತ್ರ 'ಅನೂಚಾನ'- ಎಂದರೆ ಪರಿಪೂರ್ಣ ವೇದವಿಜ್ಞಾನಿ ಎಂದು ಎಣಿಸಲ್ಪಡುವನು. ಬೇರೆ ಕೋಟಿ ಗ್ರಂಥಗಳನ್ನು ಓದಿದರೂ ಅವನು ಅನೂಚಾನ ಪಂಡಿತನಾಗಲಾರನು.

**ನಾರದ :-** ವೇದ, ವೇಂದಾಗ ಪಾರಂಗತನಾದ ಸನಂದನ ಮುನಿಗಳೆ, ಆ ವೇದ, ವೇದಾಂಗಗಳ ಲಕ್ಷಣಗಳನ್ನು ಹೇಳಿರಿ. ತಾವು ಎರಡರಲ್ಲಿಯೂ ಪರಿಣತಪ್ರಜ್ಞರಾದ ಮನೀಷಿ ವರೇಣ್ಯರಾಗಿರುವಿರಿ, ನನಗೆ ಈ ಸಾಂಗವೇದದ ಸ್ವರೂಪ ಹಾಗೂ ಲಕ್ಷಣಗಳನ್ನು ತಿಳಿಸಿರಿ.

**ಸನಂದನ :-** ನಾರದ ನೀನು ಬಹಳ ದೊಡ್ಡಪ್ರಶ್ನೆ ಮಾಡಿದೆ. ಅದೆಲ್ಲವನ್ನು ವಿವರವಾಗಿ ನನಗೆ ಹೇಳಲಿಕ್ಕಾಗದು. ಆ ವೇದ ವೇದಾಂಗಗಳ ಸಾರಭೂತವಾದ ಲಕ್ಷಣವನ್ನು ತಿಳಿಸುತ್ತೇನೆ ಕೇಳು. ಈ ವೇದಾಂಗಗಳಲ್ಲಿ ಮೊದಲನೆಯದು ಶಿಕ್ಷಾ. ಶಿಕ್ಷಾದಲ್ಲಿ ಸ್ವರವೇ ಪ್ರಧಾನ. ಸ್ವರಶಾಸ್ತ್ರವನ್ನು ಪರ್ಯಾಲೋಚಿಸಿದರೆ ಆರ್ಥಿಕ ಗಾಥಿಕ, ಸಾಮಿಕ ಎಂದು ಈ ಸ್ವರಗಳನ್ನು ಪ್ರಯೋಗಿಸಬೇಕೆಂದು ಸಿದ್ಧಾಂತ ಮಾಡಿದ್ದಾರೆ. ವೇದದ ಋಕ್‌ಗಳಲ್ಲಿ ಏಕಾಂತರ ಸ್ವರ, ಗಾಥೆಗಳಲ್ಲಿ ಎರಡು ಅಂತರದ (ದ್ವ್ಯಂತರ) ಸ್ವರವು, ಸಾಮಗಾನದಲ್ಲಿ ತ್ರ್ಯಂತರ (ಮೂರು ಅಂತರ) ಸ್ವರ ಎಂಬುದಾಗಿ ಸ್ವರದ ವ್ಯವಧಾನಗಳನ್ನು ತಿಳಿಯಬೇಕು. ಋಗ್ವೇದ ಮಂತ್ರಗಳನ್ನು ಉಚ್ಚರಿಸುವವರು ಸ್ವರ ಶಾಸ್ತ್ರ ಚೆನ್ನಾಗಿ ತಿಳಿದಿರಬೇಕು. ಇಲ್ಲದಿದ್ದರೆ ಮಂತ್ರಗಳು ಅಪಸ್ವರ ವಾಗುವವು.

**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ**
**ಮಿಥ್ಯಾ ಪ್ರಯುಕ್ತೋನ ತಮರ್ಥಮಾಹ ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ**
**ಯಥೇಂದ್ರಶತ್ರುಃ ಸ್ವರತೋಽಪರಾಧಾತ್**

ಮಂತ್ರವು ಸ್ವರ, ವರ್ಣಹೀನವಾಗಿಯೂ, ತಪ್ಪಾಗಿಯೂ ಪ್ರಯೋಗಿಸಲ್ಪಟ್ಟರೆ ಅದು ತನ್ನ ನೈಜವಾದ ಅರ್ಥವನ್ನು ಬೋಧಿಸಲಾರದು, ಅದೇ ವಜ್ರಾಯುಧವಾಗಿ ಪರಿಣಮಿಸಿ ಯಜಮಾನನನ್ನು ನಾಶ ಮಾಡುವದು. ಹೇಗೆಂದರೆ "ಸ್ವಾಹೇಂದ್ರ ಶತ್ರುರ್ವರ್ಧಸ್ವ" ಎಂಬ ವಾಕ್ಯದಲ್ಲಿನ * ಇಂದ್ರಶತ್ರು ಎಂಬ ಪದವನ್ನು ತಪ್ಪು ಸ್ವರದಿಂದ ಹೇಳಿದ್ದಕ್ಕಾಗಿ ವಕ್ತ್ರಾಭಿಪ್ರಾಯಕ್ಕೆ ವಿರುದ್ಧವಾಗಿ ಇಂದ್ರನೇ ವೃತ್ರಾಸುರನಿಗೆ ಶತ್ರುವಾಗಿ ಪರಿಣಮಿಸಿ ವೃತ್ರಾಸುರನು ಹಾಳಾದನು.

*ಟಿಪ್ಪಣಿ: ''ಇಂದ್ರಜಿತು'' ಎಂಬ ಪದಕ್ಕೆ ತತ್ಪುರುಷ ಅಥವಾ ಬಹುವ್ರೀಹಿ ಎಂಬುದಾಗಿ ಎರಡು ಸಮಾಸಗಳನ್ನು ವಿವಕ್ಷೆ ಮಾಡಬಹುದು. ತತ್ಪುರುಷ ಸಮಾಸವೆಂದಾದರೆ ಇಂದ್ರಸ್ಯ ಶತ್ರುಃ = ಇಂದ್ರನಿಗೆ ಶತ್ರು ಎಂದು ಅರ್ಥವಾಗುತ್ತದೆ. ಒಂದು ವೇಳೆ ಬಹುವ್ರೀಹಿ ಸಮಾಸವೆಂದಾದರೆ ಇಂದ್ರಃ ಶತ್ರುಃ ಯಸ್ಯ ಸಃ = ಇಂದ್ರನೇ ಶತ್ರುವಾಗಿ ಉಳ್ಳವನು ಎಂದು ಅರ್ಥವಾಗುತ್ತದೆ. ವೇದವಾಕ್ಯದಲ್ಲಿ ಸಮಾಸ ಪದದ ಸ್ವರವನ್ನು ನೋಡಿಕೊಂಡು ಇಂತಹ ಸಮಾಸವೆಂದು ನಿರ್ಧರಿಸಬೇಕಾಗುತ್ತದೆ. ಹೇಗೆಂದರೆ ಸಮಾಸದಲ್ಲಿ ಪೂರ್ವಪದವು ಉದಾತ್ತಸ್ವರವಿದ್ದರೆ ಬಹುವ್ರೀಹಿ ಸಮಾಸವೆಂತಲೂ, ಉತ್ತರಪದವು ಉದಾತ್ತವಾದಲ್ಲಿ ತತ್ಪುರುಷ ಸಮಾಸವೆಂದೂ ಹೇಳುವ ವಿಧಾನವಿದೆ. ಇದು ಶಾಬ್ದಿಕ ವಿಧಾನವೆಂದು ತಿಳಿಯಲ್ಪಡುತ್ತದೆ. ಸದ್ಯ '' ಸ್ವಾಹೇಂದ್ರಶತ್ರುರ್ವರ್ಧಸ್ವ'' - ಎಂಬ ವಾಕ್ಯದಲ್ಲಿನ ಇಂದ್ರಶತ್ರು ಎಂಬ ಸಮಾಸದ ಇಂದ್ರಪದವನ್ನೂ ಉದಾತ್ತಯುಕ್ತವಾಗಿ ಹೇಳಿದುದರಿಂದ ಅದು ಬಹುವ್ರೀಹಿ ಸಮಾಸವಾಗಿ ಮೇಲ್ಕಂಡಂತೆ ವೃತಾಸುರನಿಗೆ ಇಂದ್ರನೇ ಶತ್ರು ಎಂದು ಅರ್ಥವಾಗಿ ಇಂದ್ರನಿಂದಲೇ ವೃತಾಸುರನು ಹಾಳಾದನು. ಇಂದ್ರ ಶಬ್ದವನ್ನು ಉದಾತ್ತ ಸ್ವರಾಂತವಾಗಿ ಹೇಳದೇ ಅನುದಾತ್ತವಾಗಿ ಹೇಳಿ ಉತ್ತರ ಪದವನ್ನು ಉದಾತ್ತವಾಗಿ ಹೇಳಿದ್ದರೆ ತತ್ಪುರುಷ ಸಮಾಸವಾಗುತ್ತಿತ್ತು. ಆಗ ವಕ್ತ್ರಭಿಪ್ರಾಯಾನು ಸಾರವಾಗಿ ಅರ್ಥವಾಗುತ್ತಿತ್ತು. ಇಂತಹ ಅನರ್ಥಕ್ಕೆ ಅವಕಾಶವಾಗುತ್ತಿರಲಿಲ್ಲ.

ಸಾಮವೇದಕ್ಕೆ ಸಂಬಂಧಿಸಿದಂತೆ ಸ್ವರಗಳುಳ್ಳ ವ್ಯವಸ್ಥೆಯನ್ನು ಹೇಳುತ್ತೇನೆ ಕೇಳು. ಈ ಸಾಮವೇದವು ಅತ್ಯಂತ ಸುಶ್ರಾವ್ಯವಾಗಿದೆ. ಗಾತ್ರ ಪ್ರಮಾಣದಲ್ಲಿ ಇದು ಸಣ್ಣದೆನಿಸಿದರೂ ಅರ್ಥ ದೃಷ್ಟಿಯಿಂದ ಮಹತ್ತರವೇದವಾಗಿದೆ. ಈ ಸಾಮವೇದ, ತಾನ, ರಾಗ, ಸ್ವರ, ಗ್ರಾಮ ಮೂರ್ಛನಾ ಮುಂತಾದ ಸ್ವರ ಪರಿಕರಗಳು. ಪವಿತ್ರವೂ ಶುದ್ಧಿಕರವೂ ಪುಣ್ಯಕರವೂ ಆಗಿವೆ. ದ್ವಿಜರೆಲ್ಲರೂ ಅಧ್ಯಯನ ಮಾಡುವ ಈ ಮೂರು ವೇದಗಳ ಸರ್ವಸ್ವರೂಪವನ್ನು, ಉಚ್ಚಾರದ ಕ್ರಮವನ್ನು, ಪ್ರಯೋಗ ಪದ್ಧತಿಯನ್ನು ಹೇಳುವ ಶಾಸ್ತ್ರಕ್ಕೆ ಶಿಕ್ಷಾ ಎನ್ನುವರು. ಏಳುಸ್ವರ, ಮೂರು ಗ್ರಾಮಗಳು, ಇಪ್ಪತ್ತೊಂದು ಮೂರ್ಛನೆಗಳು ನಲವತ್ತೊಂಬತ್ತು ತಾನಗಳಿಂದ ಕೂಡಿವೆ. ಷಡ್ಜ, ಋಷಭ, ಗಾಂಧಾರ, ಮಧ್ಯಮ ಪಂಚಮ, ದೈವತ, ನಿಷಾದ ಇವು ಏಳು ಸ್ವರಗಳು (ಇದನ್ನೇ ಈಗಿನ ಸಂಗೀತದಲ್ಲಿ ಪ್ರಯೋಗ ಸೌಕರ್ಯಕ್ಕಾಗಿ ಇವುಗಳ ಮೊದಲಿನ ಅಕ್ಷರ ಮಾತ್ರ ಉಚ್ಚರಿಸಿ ಸ ರಿ ಗ ಮ ಪ ದ ನಿ ಎಂಬುದಾಗಿ ವ್ಯವಹರಿಸುತ್ತಾರೆ.)

ಗಾಂಧಾರ ರಾಗಕ್ಕೆ ಅನುಗುಣವಾಗಿ ಷಡ್ಜ, ಭುವರ್ಲೋಕದಲ್ಲಿ ಮಧ್ಯಮ, ಸ್ವರ್ಗ ಲೋಕದಲ್ಲಿ ಗಾಂಧಾರ ಎಂದು ಮೂರು ಗ್ರಾಮಸ್ಥಾನಗಳ ಅವಸ್ಥಾನ ನಿರ್ಧರಿಸಿದ್ದಾರೆ. ಸ್ವರಗಳ ರಾಗ ಪ್ರಕಾರಗಳ ಆಧಾರದಿಂದ ಗ್ರಾಮರಾಗಗಳನ್ನು ನಿರ್ಧರಿಸುತ್ತಾರೆ. ಮಧ್ಯಮಗ್ರಾಮದಲ್ಲಿ ಇಪ್ಪತ್ತು, ಷಡ್ಜಗ್ರಾಮದಲ್ಲಿ ಹದಿನಾಲ್ಕು ಗಾಂಧಾರ ಗ್ರಾಮದಲ್ಲಿ ಹದಿನೈದು, ಒಟ್ಟು ನಲವತ್ತೊಂಬತ್ತು ತಾನಗಳುಂಟು. ಅಲ್ಲದೆ ನಂದೀ, ಸುಮುಖೀ, ಚಿತ್ರಾ, ಚಿತ್ರವತೀ, ಸುಖಾ, ಮತ್ತು ಬಲಾ ಎಂಬ ಏಳು ದೇವತೆಗಳ ಮೂರ್ಛನೆಗಳು (ಮೂರ್ಛನೆಗಳೆಂದರೆ - ಸ್ವರಗಳ ಆರೋಹಣ ಅವರೋಹಣಗಳು). ಆಪ್ಯಾಯನೀ ವಿಶ್ವಭೃತಾ, ಚಂದ್ರಾ, ಹೈಮಾ, ಕಪರ್ದಿನೀ, ವೇತ್ರೀ ಬಾರ್ಹತೀ ಎಂಬ ಏಳು ಪಿತೃಗಳ ಮೂರ್ಛನೆಗಳು, ಷಡ್ಜದಲ್ಲಿ ಎತ್ತರ ಮಂದ್ರವು ಋಷಭದಲ್ಲಿ ಅಭಿರುದ್ಗತೆಯು, ಗಾಂಧಾರದಲ್ಲಿ ಅಶ್ವಕ್ರಾಂತಾ, ಮಧ್ಯಮದಲ್ಲಿ ಸೌವೀರವು, ಪಂಚಮ ಮತ್ತು ದೈತಗಳಲ್ಲಿ

ಉತ್ತರಾಯತಾ, ನಿಷಾದದಲ್ಲಿ ರಜನೀ ಎಂಬ ಏಳನ್ನು ಋಷಿಗಳ ಮೂರ್ಛನೆಗಳೆಂದು ತಿಳಿಯಬೇಕು. ಗಂಧರ್ವರು ದೇವತೆಗಳ ಸಪ್ತ ಮೂರ್ಛನೆಗಳನ್ನೂ, ಯಕ್ಷರು ಪಿತೃಗಳ ಸಪ್ತಮೂರ್ಛನೆಗಳನ್ನೂ, ಮನುಷ್ಯರು ಋಷಿಗಳ ಸಪ್ತಮೂರ್ಛನೆಗಳನ್ನೂ ಅನುಸರಿಸುತ್ತಾರೆ. ಷಡ್ಜವು ದೇವತೆಗಳನ್ನೂ, ವೃಷಭವು ಋಷಿಗಳನ್ನು ಗಾಂಧಾರವು ಪಿತೃಗಳನ್ನು, ಮಧ್ಯಮ ಸ್ವರವು ಗಂಧರ್ವರನ್ನು, ಪಂಚಮ ಸ್ವರವು ದೇವತೆ, ಪಿತೃ ಮತ್ತು ಋಷಿ ಇವರನ್ನು, ನಿಷಾದ ಸ್ವರವು ಯಕ್ಷರನ್ನು ಧೈವತವು ಪ್ರಾಣಿಗಳನ್ನೂ ಸಂತೋಷಪಡಿಸಿ ಅವುಗಳಿಗೆ ಪ್ರಿಯವಾಗಿದ್ದು, ಪ್ರೇರಕವೂ ಆಗಿದೆ.

ಗಾನದ ಗುಣವೃತ್ತಿಯು ಹತ್ತು ವಿಧವಾಗಿದೆ :-

ರಕ್ತಂ ಪೂರ್ಣಮಲಂಕೃತಂ ಪ್ರಸನ್ನ ವ್ಯಕ್ತಂ ವಿಕ್ರುಷ್ಟಂ
ಶ್ಲಕ್ಷ್ಣಂ ಸಮಂ ಸುಕುಮಾರಂ ಮಧುರಮಿತಿ ಗುಣಾಃ ॥
ತತ್ರ ರಕ್ತಂ ನಾಮ ವೇಣುವೀಣಾಸ್ವರಾಣಾಮೇಕೀ
ಭಾವೋರಕ್ತಮಿತ್ಯುಚ್ಯತೇ ॥
ಪೂರ್ಣಂ ನಾಮ ಸ್ವರಶ್ರುತಿಪೂರ್ಣಾಚ್ಛಂದಃ ಪಾದಾಕ್ಷರಸಂ-
ಯೋಗಾತ್ಪೂರ್ಣಮಿತ್ಯುಚ್ಯತೇ ॥
ಅಲಂಕೃತಂ ನಾಮರಸಿ ಶಿರಸಿ ಕಂಠಯುಕ್ತಉಮಿತ್ಯಲಂಕೃತಂ ॥
ಪ್ರಸನ್ನಂ ನಾಮಾಪಗತಗದ್ಗದಂ ನಿರ್ವಿಶಂಕಂ ಪ್ರಸನ್ನಮಿತ್ಯುಚ್ಯತೇ ॥
ವ್ಯಕ್ತ ನಾಮ ಪದ - ಪದಾರ್ಥ - ಪ್ರಕೃತಿ - ವಿಕಾರಾಗಮ - ಲೋಪ-
ಕೃತದ್ಧಿತ - ಸಮಾಸ - ಧಾತು - ನಿಪಾತೋಪಸರ್ಗ - ಸ್ವರ - ಲಿಂಗ - ವೃತ್ತಿ -
ವಾರ್ತಿಕ - ವಿಭಕ್ತ್ಯರ್ಥ
ವಚನಾನಾಂ ಸಮ್ಯಗುಪಪಾದನಂ ವ್ಯಕ್ತಮಿತ್ಯುಚತೇ ॥
ವಿಕ್ರುಷ್ಟಂ ನಾಮೋಚ್ಚೈರುಚ್ಚಾರಿತಂ ವ್ಯಕ್ತಪದಾಕ್ಷರಂ
ವಿಕ್ರುಷ್ಟಮಿತ್ಯುಚ್ಯತೇ ॥
ಶ್ಲಕ್ಷ್ಣಂ ನಾಮಾದ್ರುತಮವಿಲಂಬಿತಮುಚ್ಚನೀಚಪ್ಲು
ತಸಮಾಹಾರ ಹೇಲತಾ ಲೋಪನಯಾದಿಭಿರುಪಪಾದನಾಭಿಃ
ಶ್ಲಕ್ಷ್ಣಮಿತ್ಯುಚ್ಯತೇ
ಸಮಂನಾಮ ಆವಾಪ-ನಿರ್ವಾಪ-ಪ್ರದೇಶ-ಪ್ರತ್ಯಂತರ-ಸ್ಥಾನಾನಾಂ
ಸಮಾಸಃ ಸಮಮಿತ್ಯುಚ್ಯತೇ ॥
ಸುಕುಮಾರಂ ನಾಮ ಮೃದುಪದವರ್ಣಸ್ವರಕುಹರಣಯುಕ್ತಂ
ಸುಕುಮಾರಮಿತ್ಯುಚ್ಯತೇ ॥
ಮಧುರಂ ನಾಮ ಸ್ವಭಾವೋಪನೀತ ಲಲಿತ ಪದಾಕ್ಷರಗುಣ
ಸಮೃದ್ಧಂ ಮಧುರಮಿತ್ಯುಚ್ಯತೇ ॥
ಏವಮೇತೈರ್ದಶಭಿಃ ಗುಣೈರ್ಯುಕ್ತಂ ಗಾನಂ ಭವತಿ ॥

ರಕ್ತ, ಪೂರ್ಣ, ಅಲಂಕೃತ, ಪ್ರಸನ್ನ, ವ್ಯಕ್ತ, ವಿಕ್ರುಷ್ಟ, ಶ್ಲಕ್ಷ್ಣ, ಸಮ, ಸುಕುಮಾರ ಮತ್ತು ಮಧುರ ಎಂದು ಹತ್ತು ವಿಧ. ಅದರಲ್ಲಿ ವೇಣು, ವೀಣೆ, ಪುರುಷರ ಸ್ವರಗಳನ್ನು ಒಟ್ಟುಗೂಡಿಸುವದರಿಂದ ಹುಟ್ಟುವದಕ್ಕೆ ರಕ್ತವೆಂದು ತಿಳಿಯಲಾಗುತ್ತದೆ. ಸ್ವರ, ಶ್ರುತಿಗಳ ಯುಕ್ತಸಂಯೋಜನೆಯಿಂದ ಛಂದಸ್ಸಿನ ಪಾದಾಕ್ಷರಗಳು ಅರ್ಥಪೂರ್ಣ ವಾದರೆ ಪೂರ್ಣವಾಗುತ್ತವೆ. ಮಧ್ಯಮ ಸ್ಥಾಯಿಯಲ್ಲಿ ಇದ್ದ ಧ್ವನಿಯನ್ನು ಮಂದರ ಸ್ಥಾಯಿಗೆ ತರುವದೇ ಅಲಂಕೃತ, ಗದ್ಗದ ಮತ್ತು ಸಂಶಯಮುಕ್ತ ಸ್ವರವು ಪ್ರಸನ್ನ. ಪದ, ಪದಾರ್ಥ, ಪ್ರಕೃತಿ, ವಿಕಾರ, ಆಗಮ, ಕೃತ್, ತದ್ಧಿತ, ಸಮಾಸ, ಧಾತು, ನಿಪಾತ, ಉಪಸರ್ಗ, ಸ್ವರ ತಿಜಂತ, ವೃತ್ತಿ, ವಾರ್ತಿಕ, ವಿಭಕ್ತ್ಯರ್ಥ ಮತ್ತು ವಚನಗಳನ್ನು ಉಪಪಾದಿಸುವದು 'ವ್ಯಕ್ತ'ವೆನಿಸುತ್ತದೆ. ಧ್ವನಿಯು ಗಟ್ಟಿಯಾಗಿ ಹೊಮ್ಮಿದಾಗ, 'ವಿಕ್ರುಷ್ಟ' ಎನ್ನುತ್ತಾರೆ. ಅತಿವೇಗದಿಂದ ಅಥವಾ ಅತಿ ಸಾವಕಾಶವೂ ಅಲ್ಲದ ಸಮವಾಗಿರುವ ಸ್ವರಕ್ಕೆ ಕಾಲತ್ರಯಕ್ಕನುಗುಣವಾದ ನಿರ್ದಿಷ್ಟ ನಿರ್ದೇಶನವಿರುತ್ತದೆ. ಧ್ವನಿಯನ್ನು ಸ್ವಲ್ಪ ಕಡಿಮೆ ಮಾಡಿ ನಿಲ್ಲಿಸುವ ಪದ್ಧತಿಗೆ 'ಸಮ'ವೆಂದು ಹೆಸರು. ಸ್ಫುಟವಲ್ಲದ, ಪದ ವರ್ಣ ಸ್ವರಗಳನ್ನು ಗಂಟಲಿನಲ್ಲಿ ಜುಲುಮೆಯಿಂದ ಹೊರಡಿಸುವ ರೀತಿಗೆ 'ಸುಕುಮಾರ' ಎಂದು ಹೆಸರು. ಸ್ವಾಭಾವಿಕವಾಗಿ ನಗುಮುಖದಿಂದ ಹೊರಟ ಸುಶ್ರಾವ್ಯ ಆಲಾಪನೆಯು ಮಧುರಗಾನವೆಂದೆನಿಸುವದು. ಹೀಗೆ ಹತ್ತು ಗುಣ ಗಳಿಂದ ಕೂಡಿದಾಗ ಇಂಪಾದ ಗಾಯನವೆನಿಸುವದು. ಗಾನದೋಷಾದಿಗಳು ಹದಿನಾಲ್ಕು ಇದ್ದು-ಶಂಕಿತ, ಭೀತ, ಉದ್ಘೃಷ್ಟ, ಅವ್ಯಕ್ತ, ಅನುನಾಸಿಕ, ಕಾಕಸ್ವರ, ಮೂರ್ಧಗತ, ಸ್ಥಾನ ವಿವರ್ಜಿತ, ವಿರಸ, ವಿಕ ಸ್ವರ, ವಿಶ್ಲಿಷ್ಟ, ವಿಷಮಾಹತ, ವ್ಯಾಕುಲ, ತಾಳಹೀನ ಈ ರೀತಿಯಾಗಿವೆ. ಆಚಾರ್ಯರು ಸಾಮಗಾನವನ್ನು, ಪಂಡಿತರು ಪದಚ್ಛೇದಗಾಯನವನ್ನು, ಹೆಂಗಸರು ಮಧುರ ಗಾಯನವನ್ನು ಜನಸಾಮಾನ್ಯರು ವಿಕ್ರುಷ್ಟಗಾಯನವನ್ನು ಅಪೇಕ್ಷಿಸುವರು.

ಮಧ್ಯಮಗ್ರಾಮದಲ್ಲಿ ಋಷಭಾನಂತರ ಷಡ್ಜದಿಂದ ದೈವತಹಿತ ಪಂಚಮ ನಿಷಾದ ಸಹಿತವಿದ್ದರೆ ಅದಕ್ಕೆ ಷಡ್ಜವೆಂದು ತಿಳಿಯುತ್ತಾರೆ. ಅದರಂತೆ ಮಧ್ಯಮರಾಗದಲ್ಲಿ ಪಂಚಮಸ್ಥಾನ ಬಿಟ್ಟು ಗಾಂಧಾರ, ಋಷಭ, ನಿಷಾದ, ಪಂಚಮಗಳನ್ನು ಸಾಮೂಹಿಕವಾಗಿ ಪಂಚಮಸ್ವರವೆಂದು ತಿಳಿಯುತ್ತಾರೆ. ಮಧ್ಯಮರಾಗವು ಆರಂಭಿಸಿದಾಗ ಪ್ರಚುರವಾಗಿಯೂ, ನಿಷಾದದ ಪುನರುಕ್ತಿಯಾಗಿ, ಧೈವತ್ವದ ಸಕೃದುಕ್ತಿಯೂ ಇರುವದು. ಇದಕ್ಕೆ ಮಧ್ಯಮ ಗ್ರಾಮವೆನ್ನುವರು. ಷಡ್ಜವನ್ನು ಲಘುವಾಗಿ ನಿಷಾದವನ್ನು ಅಧಿಕಾಧಿಕವಾಗಿ ಗಾಂಧಾರರಾಗಾ ಲಾಪನೆ ಮಾಡಬಹುದು. ದೈವತವನ್ನು ಕಂಪನಗೊಳಿಸುತ್ತ ಷಡ್ಜಕ್ಕೆ ಏರಿಸಬಹುದು.

ಪ್ರಾಜ್ಞರು 'ಗಂ' ಎಂಬುದನ್ನು ಗಾನವೆಂದು ತಿಳಿಯುವರು. 'ಧ' ಎಂಬ ಅಕ್ಷರಕ್ಕೆ ವೈಣಿಕನಿಗೆ ವೀಣೆಯನ್ನು ಬಾರಿಸುವ ಸಾಂಕೇತಿಕವು 'ವ' ಎಂಬ ಅಕ್ಷರವು ನುಡಿಸಲು, ಸೂಚಿಸುತ್ತದೆ. ಇದರಿಂದಲೇ ಗಂಧರ್ವಪದ ಉತ್ಪತ್ತಿಯಾಗಿದೆ. ಸಾಮಗಾನ ಮಾಡುವವರು ಪ್ರಥಮಸ್ವರ ಕೊಳಲಿನ(ವೇಣು) ಮಧ್ಯಮ ಸ್ವರವೆಂದೂ ದ್ವಿತೀಯ ಸ್ವರ ಗಾಂಧಾರ, ತೃತೀಯ ಸ್ವರ ಋಷಭವೂ, ನಾಲ್ಕನೆಯದು ಷಡ್ಜ, ಐದನೆಯದು ದೈವತ, ಆರನೆಯದು ನಿಷಾದ, ಏಳನೆಯದು ಪಂಚಮವೆಂದೂ ತಿಳಿಯುತ್ತಾರೆ. ಈಗ ಆಯಾ ಪ್ರಾಣಿಗಳ ಧ್ವನಿಯಲ್ಲಿ ಅಡಗಿದ ಸ್ವರನಾದ, ಅವುಗಳ ಹೆಸರುಗಳನ್ನು ಹೇಳುತ್ತೇನೆ ಕೇಳಿರಿ, ನವಿಲು ಕೂಗಿದಾಗ ಷಡ್ಜವನ್ನೂ, ಗೋವುಗಳು ಅಂಬಾ ಎಂದಾಗ ಋಷಭವನ್ನೂ, ಮೇಕೆ

ಕುರಿಗಳು ಗಾಂಧಾರವನ್ನೂ, ಕ್ರೌಂಚ ಪಕ್ಷಿಯು ಕೂಗಿದಾಗ, ಮಧ್ಯಮ ಸ್ವರದ ಇಂಚರದಿಂದ ಜಗತ್ತಿನಲ್ಲಿ ಸಂದೇಶ ಸಾರುತ್ತದೆ. ಕುದುರೆ ಕೆನೆದಾಗ ದೈವತವನ್ನು, ಆನೆಯು ನಿಷಾದ ಸ್ವರವನ್ನೂ ಹೊರಡಿಸುತ್ತವೆ - ಸ್ವಾಭಾವಿಕವಾಗಿ.

ಮನುಷ್ಯರ ಪ್ರತಿಯೊಂದು ಅವಯವವು ಹೊರಡಿಸುವ ತನ್ನದೇ ಆದ ಸ್ವರಗಳ ರೀತಿಯನ್ನೂ ಹೀಗೆ ಹೇಳಿದ್ದಾರೆ. ಕಂಠದಿಂದ ಷಡ್ಜ, ಕುತ್ತಿಗೆಯಿಂದ ಋಷಭ, ಮೂಗಿನಿಂದ ಗಾಂಧಾರ. ಎದೆಯಿಂದ ಮಧ್ಯಮ ಸ್ವರ ಹೊರಡುತ್ತದೆ. ಎದೆ, ತಲೆ, ಕಂಠಗಳಿಂದ ಪಂಚಮ ಸ್ವರವು ಜನಿಸುತ್ತದೆ. ನಾಸಿಕ, ಕಂಠ, ಎದೆ, ದವಡೆ ಮತ್ತು ಹಲ್ಲು ನಾಲಿಗೆಗಳಿಂದ ಜನಿಸುವ ಆರು ಅವಯವಗಳ ಸಾಮೂಹಿಕ ಕ್ರಿಯೆಯಿಂದ ಹುಟ್ಟುವ ಕಾರಣ ಸ್ವರಕ್ಕೆ ಷಡ್ಜವೆಂದು ಹೆಸರಿಸಿದ್ದಾರೆ. ಸ್ವರ ಹೊರಹೊಮ್ಮುವಾಗ ವಾಯುವಿನ ಚಲನವಲನದಿಂದ ಸ್ವರಗಳು ಹುಟ್ಟುವ ಬಗೆಯನ್ನು ವಿವರಿಸುತ್ತೇನೆ ಕೇಳಿರಿ. ವಾಯುವು ಹೊಕ್ಕಳಿನಲ್ಲಿ ಹುಟ್ಟಿ ಕಂಠ ಕುತ್ತಿಗೆಗಳಲ್ಲಿ ಸಂಚರಿಸುತ್ತದೆ. ಅದು ಎತ್ತಿನ ಸ್ವರ ಹೋಲುವದರಿಂದ ಅದಕ್ಕೆ ಋಷಭ ಎನ್ನುತ್ತಾರೆ. ಅದರಂತೆ ನಾಭಿಯಲ್ಲಿ ಜನಿಸಿದ ಸ್ವರವು ಮೂಗಿನ ಹೊರಳೆಗಳಲ್ಲಿ ಸಂಚರಿಸುವದರಿಂದ ಗಾಂಧಾರರಾಗವನ್ನೂ ಹುಟ್ಟಿಸುತ್ತದೆ. ನಾಭಿಯಿಂದ ಉತ್ಪನ್ನವಾಗಿ ಹೊರಟು ಎದೆಯ ಮಧ್ಯದಲ್ಲಿ ದೊಡ್ಡನಾದ ಮಾಡುವದರಿಂದ ಸ್ವರವು ಮಧ್ಯಮ ಭಾವ ಹೊಂದುತ್ತದೆ. ಅದರಂತೆ ವಾಯುವು ಎದೆ, ಕಂಠ, ತಲೆಗಳಲ್ಲಿ ಸಂಚರಿಸಿ ಪಂಚಮಸ್ವರವನ್ನು ಹುಟ್ಟಿಸುತ್ತದೆ.

ಹಿಂದೆ ದೇವಾಧಿದೇವತೆಗಳಿಗೆ ಗಾನಗಳು ಪ್ರಿಯವಾಗಿದ್ದವು. ಷಡ್ಜಸ್ವರವನ್ನು ಅಗ್ನಿಯೂ, ಋಷಭವನ್ನು ಬ್ರಹ್ಮನೂ ಹಾಡಿರುವರು. ಸೋಮನಿಂದ ಗಾಂಧಾರ, ಮಧ್ಯಮ ಶ್ರೀ ವಿಷ್ಣುವಿನಿಂದಲೂ, ಪಂಚಮವು ನಾರದರಿಂದಲೂ, ಹಾಡಲ್ಪಟ್ಟಿವೆ. ಅಲ್ಲದೆ ಮೊದಲನೆಯ ಸ್ವರಕ್ಕೆ ಬ್ರಹ್ಮನು ಅಭಿಮಾನಿದೇವತೆಯಾದರೆ ಋಷಭಕ್ಕೆ ಅಗ್ನಿಯೂ, ಗಾಂಧಾರಕ್ಕೆ ಕಾಮಧೇನುವು, ಅಭಿಮಾನಿದೇವತೆಗಳೆನಿಸಿದ್ದಾರೆ. ಪಂಚಮ ಸ್ವರಕ್ಕೆ ಚಂದ್ರನು ಅಧಿದೇವನಾಗಿದ್ದಾನೆ. ಚಂದ್ರನ ವೃದ್ಧಿ, ಕ್ಷಯಗಳನ್ನು ಪಂಚಮ ಸ್ವರವು ಹೋಲುವದು (ಅಂದರೆ ಏರು, ಇಳುವನ್ನು ಹೊಂದುತ್ತದೆ) ಅದರಂತೆ ದೈವತ, ನಿಷಾದರಾಗಗಳಿಗೆ ಸೂರ್ಯದೇವನು ಅಧಿದೇವನಾಗಿದ್ದಾನೆ.

ಇನ್ನು ಸಾಧಕನು ಆಯಾಗಾನ ಮಾಡುವಾಗ ಅನುಸರಿಸತಕ್ಕ ಭಾವ, ಭಂಗಿಗಳನ್ನು ನಿರೂಪಿಸುತ್ತೇನೆ, ಕೇಳು. ಸಂಗೀತಕಲಿಯುವ ವಿದ್ಯಾರ್ಥಿಯು ಏಕಾಗ್ರಚಿತ್ತನಾಗಿ, ನಿರ್ಮಲ ಮನಸ್ಸಿನಿಂದ ಗುರುಗಳು ಹೇಳುವ ಸ್ವರ, ಸ್ವರವಿಸ್ತಾರಗಳನ್ನು ಮನನದಿಂದ ಕರಗತ ಮಾಡಿಕೊಳ್ಳಬೇಕು. ಸಾಮಗಾನ ಮಾಡುವ ಮೊದಲು, ಮೊಣಕಾಲುಗಳ ಮೇಲೆ ಹಸ್ತವನ್ನಿಟ್ಟುಕೊಂಡು, ಸ್ವರವ್ಯಂಜನಾದಿಗಳನ್ನು ಉಚ್ಚರಿಸುತ್ತ, ಹೆಬ್ಬೆರಳುಗಳನ್ನು ಇತರ ಬೆರಳುಗಳಲ್ಲಿ ಸಿಲುಕಿಸಿಕೊಳ್ಳಬೇಕು. ಗಾಯನದಾರಂಭಕ್ಕೆ ಪ್ರಣವ ಮಂತ್ರ, ಅನಂತರ ವ್ಯಾಹೃತಿ ಹೇಳಿ, ನಂತರ ಗಾಯತ್ರಿ ಹೇಳಬೇಕು. ತದನಂತರ ಸಂಗೀತ ಆರಂಭಿಸಬೇಕು. ಸಂಗೀತಸಾಧಕನಿಗೆ ಬರಿ ಸ್ವರ, ವ್ಯಂಜನಗಳ ಜ್ಞಾನವಷ್ಟೇ ಸಾಲದು, ಮಾತ್ರೆ (ಅಂದರೆ ಕಣ್ಣುರೆಪ್ಪೆ ಒಂದು ಸಲ ಮುಚ್ಚುವಷ್ಟು ಕಾಲಾವಧಿ) ಹಾಗೂ ಸ್ವರಗಳ ಮಾಹಿತಿಯನ್ನು ಶ್ರಮವಹಿಸಿ ತಿಳಿಯುವದುವಶ್ಯ. ಸವ್ಯಹಸ್ತದ ಬೆರಳುಗಳಿಂದ ಏಕಮಾತ್ರೆ ಅಥವಾ ದ್ವಿಮಾತ್ರೆಗಳನ್ನು ಸೂಚಿಸಬೇಕು.

ಗಾಯನದ ಕಾಲದಲ್ಲಿ ಸಾಧಕನು ಏಕಾಗ್ರಚಿತ್ತದಿಂದದ್ದು, ಮೈಕೈಗಳನ್ನು ಅಲ್ಲಾಡಿಸಬಾರದು, ತೊಡೆ, ಕಾಲುಗಳನ್ನು ಸುಖಾಸನದಲ್ಲಿ ಇಟ್ಟುಕೊಂಡು, ತೊಡೆಗಳ ಮೇಲೆ ಕೈಗಳನ್ನು ಇಟ್ಟುಕೊಳ್ಳಬೇಕು. ಅವುಗಳಲ್ಲಿ ಬಲಗೈಯನ್ನು ಆಕಳಕಿವಿಯಂತೆಯೂ ಎಡಗೈಯನ್ನೂ ವಿಸ್ತಾರವಾಗಿಯೂ ಇಟ್ಟುಕೊಳ್ಳಬೇಕು. ಸ್ವರ ಆಲಾಪ ಗೈಯುವಾಗ, ಸ್ವರಾದಿ ವೃತ್ತಿಗಳು ಬೇರೆ ಬೇರೆ ಸ್ವರಗಳನ್ನು ಸಂಬಂಧಿಸಿದಾಗ ಸೂಕ್ಷ್ಮವಾಗಿ ಏಕರೂಪ ವಾಗಿರಬೇಕು. ಅಂದರೆ 'ವೃತ್ತಿಭೇದ' ಮಾಡಕೂಡದು. ಸ್ವರಗಳನ್ನು ಪುನರಾವೃತ್ತಿ ಗೈದರೂ ಸಮಸ್ವರವಿರಬೇಕು. ಸಾಧಕನು ವರ್ಣಾದಿಗಳನ್ನು ನುಡಿಯುವಾಗ ಅಂಗಚೇಷ್ಟೆ, ಇಂದ್ರಿಯಗಳ ಸ್ವಚ್ಛಂದ ವೃತ್ತಿಗಳನ್ನು ತ್ಯಜಿಸಿ ಪ್ರಶಾಂತ ಮನಸ್ಸುಳ್ಳವ ನಾಗಿರಬೇಕು. ಸ್ವರ ಆಲಾಪ ಮಾಡುವಾಗ, ಗಟ್ಟಿಯಾಗಿ ಧ್ವನಿ ಮಾಡುವದಾಗಲಿ, ಅಥವಾ ಶೀಘ್ರವಾಗಿ ಹೇಳುವದಾಗಲಿ, ದೇಹ ಅಲ್ಲಾಡಿಸುವದಾಗಲಿ ಮಾಡಕೂಡದು. ಸ್ವರಗತವಾದ ಶ್ರುತಿಯನ್ನು ಪ್ರಯಾಸವಿಲ್ಲದೆ ನಿರ್ಣಯಿಸಲು ಬರುವಂತಿರಬೇಕು. ಒಂದು ಸ್ವರವು ಇನ್ನೊಂದನ್ನು ಸಂಧಿಸುವಾಗ ನಡುವೆ ವಿಚ್ಛೇದನಕ್ಕೆ ಅವಕಾಶವಿರದಂತೆ ಅವನು ಸ್ವರೋಚ್ಚಾರ ಮಾಡಬೇಕು. ಸಾಧಕನು ಅಭ್ಯಾಸ ಮಾಡುವಾಗ ದ್ರುತವೃತ್ತಿ ಹಾಗೂ ಪ್ರಯೋಗ ಕಾಲದಲ್ಲಿ ಮಧ್ಯಮ ವೃತ್ತಿ ಹಾಡಬೇಕು. ಶಿಷ್ಯರಿಗೆ ಉಪದೇಶ ಪೂರ್ವಕವಾಗಿ ಸಂಗೀತ ಕಲಿಸುವಾಗ ತಾನು ವಿಲಂಬಿತ ವೃತ್ತಿಯನ್ನು ಆಶ್ರಯಿಸಬೇಕಾಗುತ್ತದೆ. ಈ ರೀತಿಯಾಗಿ ಸಾಮಗಾನದಲ್ಲಿ ಶ್ರಮದಿಂದ ಸಿದ್ಧಿ ಪಡೆದ ಸಂಗೀತಾಚಾರ್ಯರಿಂದ ಶಾಸ್ತ್ರೋಕ್ತವಾಗಿ ಸಾಮಗಾನ ಕಲಿತ ದ್ವಿಜನೇ ಶಿಷ್ಯರಿಗೆ ಸಾಮಗಾನವನ್ನು ಸ್ವಹಸ್ತದಿಂದ ಅಧ್ಯಯನ ಮಾಡಿಸಬೇಕು.

ಸಂಗೀತವೆಂದರೆ ದೇವ, ಗಂಧರ್ವ ಯಕ್ಷರಾದಿಯಾಗಿ ಮೋಹಿತರಾಗುವರೆಂದ ಮೇಲೆ ಮನುಷ್ಯರಂತೂ ಸಹಜವಾಗಿ ಮುಗ್ಧರಾಗುತ್ತಾರೆ. ಆದರಂತೆ ಕ್ರುಷ್ಟಸ್ವರಕ್ಕಾಗಿ ದೇವತೆಗಳೂ. ಪ್ರಥಮ ಸ್ವರದಿಂದ ಮನುಷ್ಯರೂ, ದ್ವಿತೀಯ ಸ್ವರದಿಂದ ಪಶುವರ್ಗವೂ ತೃತೀಯ ಸ್ವರವಾದ (ಗಂಧರ್ವ) ಗಾನದಿಂದ ಗಂಧರ್ವರೂ ಮತ್ತು ಅಪ್ಸರಸ್ತ್ರಿಯರೂ ಸಂತೋಷಿಸುವರು. ಪಿತೃಪರಿವಾರ ಹಾಗೂ ಪಕ್ಷಿಸಂಕುಲಗಳು ಚತುರ್ಥಸ್ವರದಿಂದ ಪ್ರೀತರಾದರೆ ಮಂದ್ರಸ್ವರ ಕೇಳಿದಾಗ ಅಸುರರು, ಪಿಶಾಚಾದಿ ರಾಕ್ಷಸರು ಹರ್ಷಗೊಳ್ಳುತ್ತಾರೆ. ಈ ರೀತಿಯಾಗಿ ಸಾಮಗಾನದಿಂದ ಸಕಲ ಪ್ರಾಣಿಗಳೂ ಸಂತೋಷಿಸಲ್ಪಡುತ್ತದೆ. ಪ್ರತಿಯೊಂದು ರಾಗದಲ್ಲಿ ಶ್ರುತಿಯು ಪ್ರಧಾನವೆನಿಸಿದೆ. ಅಲ್ಲದೆ ಆಯಾರಾಗಗಳಿಗೆ ಯುಕ್ತವಾಗಿ ಶ್ರುತಿ ನೀಡಿದರೆ - ರಾಗಶ್ರೀಯು ರಂಜನೀಯವಾಗಿಯೂ ಆತ್ಮಾನಂದಕಾರಕವಾಗಿಯೂ ಆಗುತ್ತದೆ. ಮಂದ್ರ, ದ್ವಿತೀಯ, ಚತುರ್ಥ, ಅತಿಸಾರ, ಮತ್ತು ತೃತೀಯಾ ಎಂಬ ಐದು ಸ್ವರಗಳಲ್ಲಿ ದೀಪ್ತಾಶ್ರುತಿಯೂ, ಕ್ರುಷ್ಟ ಎಂದರೆ ಸಪ್ತಮ ಸ್ವರದಲ್ಲಿ ಕರುಣಾಶ್ರುತಿಯೂ ವಿಹಿತವಾಗಿದೆ. ದ್ವಿತೀಯ ಶ್ರುತಿಗಳು ಮೃದು, ಮಧ್ಯಮ, ಆಯತಾ, ಎಂಬುದಾಗಿ ವಿಹಿತವಾಗಿವೆ. ಅವುಗಳಿಲ್ಲಿ ಪ್ರತ್ಯೇಕ ಲಕ್ಷಣಗಳಿದ್ದು ಅವುಗಳನ್ನು ವಿವರಿಸುತ್ತೇನೆ. ತೃತೀಯ ಸ್ವರವು ಮುಂದಿದ್ದರೆ, ದ್ವಿತೀಯ ಸ್ವರಕ್ಕೆ ಆಯತಾ ಎಂಬ ಶ್ರುತಿಯೂ, ಚತುರ್ಥಸ್ವರವು ಮುಂದೆ ಬಂದರೆ, ಮೃದು ಶ್ರುತಿಯೂ ಸ್ವರಾಂತವು ಮುಂದೆ ಬಂದಾಗ ಮಧ್ಯಮ ಶ್ರುತಿಯೂ ವಿಹಿತ. ಈ ರೀತಿ ವಿಶೇಷಗಳನ್ನು ನಿರ್ಧರಿಸಿ ಸಾಮಸ್ವರವನ್ನು ಪ್ರಯೋಗಿಸಬೇಕು. ಕ್ರುಷ್ಟಸ್ವರದ ಮುಂದಿನ ದ್ವಿತೀಯ ಸ್ವರದಲ್ಲಿ ಅವಸ್ಥಿರವಾದ ಶ್ರುತಿಯನ್ನು ದೀಪ್ತಾ ಎಂದು ತಿಳಿಯಬೇಕು. ಪ್ರಥಮಸ್ವರದಲ್ಲಿ

ಅವಸ್ಥಿತವಾದರೆ ಮೃದು ಎನಿಸುವದು. ಅದರಂತೆ ಚತುರ್ಥಸ್ವರದಲ್ಲಿ ಅವಸ್ಥಿತವಾದರೆ ಶ್ರುತಿಯೂ ಸಹ ಮೃದು ದೀಪ್ತೆ ಎನಿಸುವದು. ಬೇರೆ ಸ್ವರದಲ್ಲಿ ನಿಂತಾಗ ಅದು ದೀಪ್ತೆಯಾಗುವದು. ಇದೇ ಪ್ರಕಾರವಾಗಿ ಮಂದ್ರದಲ್ಲಿ ಸ್ವರಾಂತರಾಗಮನವಾದಾಗ ದೀಪ್ತೆಯಾಗುವದು. ಇದೇ ರೀತಿಯಾಗಿ ಸಾಮವು ಪೂರ್ತಿಯಾದಾಗ ಯಾವ ಯಾವ ಸ್ವರದಲ್ಲಿ ಅವಸ್ಥಿತವಾಗುವದೇ ಅದು ಆಯಾಯ ಸ್ವರದ ದೀಪ್ತೆಯಾಗುವದು.

ಸಂಗೀತ ಸಾಧಕನು ಅನಿಷಿದ್ಧವೆನಿಸುವ ಕೆಲವು ರೂಢಿಕ್ರಮಗಳನ್ನು ನಿಯಂತ್ರಿಸಿಕೊಳ್ಳಬೇಕು. ಸ್ವರ, ಸ್ವರಾಂತರವು ಮುಗಿಯದಿರುವಾಗ ಹ್ರಸ್ವ, ದೀರ್ಘ, ಘಟ ಇವುಗಳಲ್ಲಿ ಶ್ರುತಿಯನ್ನು ಮಾಡಬಾರದು. ಅದಕ್ಕೆ ಬದಲಾಗಿ ಸ್ವರವನ್ನೇ ಶ್ರುತಿಗೆ ಸಮವಾಗಿ ಹೇಳಬೇಕು. ಸ್ವರವು ಪರಿಸಮಾಪ್ತವಾಗದಿರುವಾಗ ಆಯಾತಾದಿ ಶ್ರುತಿಗಳನ್ನು ಗಾನಮಾಡಬಾರದು. ಅವಿಚ್ಛನ್ನವಾಗಿ ಗಾನ ಮಾಡುತ್ತಿರುವಾಗ ಎರಡು ಸ್ವರಗಳ ಮಧ್ಯದಲ್ಲಿ ಶ್ರುತಿಯನ್ನು ಗಾನ ಮಾಡಬಾರದು. ಹ್ರಸ್ವ, ದೀರ್ಘ, ಘಟ, ಇವುಗಳನ್ನು ಗಾನ ಮಾಡುವಾಗ ಶ್ರುತಿಯನ್ನು ಸೇರಿಸಬಾರದು.

ಸಂಗೀತ ಸಾಧಕನಿಗೆ ಸ್ವರಗಳ ಗುಣಧರ್ಮ, ಹಾಗೂ ಆಯಾ ಸ್ವರಗಳ ಪ್ರಯೋಗ-ಪ್ರಯೋಜನಗಳ ಸಮ್ಯಕ್ ಜ್ಞಾನವಿರುವದು ಅವಶ್ಯ. ಹಾಗೂ ಅಪೇಕ್ಷಣೀಯವಾಗಿದೆ. ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯ ಮತ್ತು ನಿಪಾತ ಎಂಬುದಾಗಿ ಸ್ವರಗಳಲ್ಲಿ ಐದು ಪ್ರಭೇದಗಳಿವೆ. ಋಕ್ಕುಗಳ ಮೂರು ಸ್ವರಗಳು-ಉದಾತ್ತ. ಅನುದಾತ್ತ, ಸ್ವರಿತ ಎಂದು ಉದಾತ್ತ ಹಾಗೂ ಅನುದಾತ್ತ ಮಧ್ಯದಲ್ಲಿ ಉಚ್ಚರಿಸಲ್ಪಡುವ ಸ್ವರಕ್ಕೆ ಸ್ವರಿತವೆಂದು ಹೆಸರು.

★ ತಾಲವ್ಯವಾದ ಇಕಾರ ಉಕಾರಗಳಿಗೆ ಕ್ರಮವಾಗಿ ಅ, ಇ ಭಾವ ಅ, ಉ ಬಾವ ಎಂಬುದಾಗಿ ಎರಡು ಗತಿಗಳಿವೆ. ಅವು ಮತ್ತು ಪದಾಂತ (ಪದಾಂತ, ಅರ್ಧರ್ಚಾಂತ, ಋಗಂತ, ಎಂಬ ಮೂರು) ಶ,ಷ,ಸ,ಹ ಎಂಬ ಊಷ್ಮವರ್ಣಗಳ ಸಂಧಿ ಈ ಐದು ಸ್ಥಾನಗಳನ್ನು ಘಟ ಎಂದು ತಿಳಿಯಬೇಕು.

ಸ್ವರಿತಗಳನ್ನು ಅಭ್ಯಸಿಸುವದು ಸುಲಭ ಸಾಧ್ಯವಲ್ಲ. ಅವುಗಳನ್ನು ಗುರು ಮುಖೇನ ಕಲಿಯಬೇಕಾಗುವದು. ಸ್ವರಿತವು ಏಳು ಜಾತಿಯುಳ್ಳದ್ದಿದೆ. ವರ್ಣಸ್ವರ,ಅತೀತಸ್ವರ, ತ್ರಿವಿಧ ಸ್ವರಿತಗಳು, ಮಾತ್ರಿಕ, ವರ್ಣ, ದೀರ್ಘ ಎಂದು. ಇವುಗಳನ್ನು ಅಭ್ಯಸಿಸಲು ಗಮಕ ಜ್ಞಾನವು ಅತ್ಯವಶ್ಯ. ಸಂಗೀತ ಪ್ರವೀಣರು - ಉದಾತ್ತನುದಾತ್ತ ಸ್ವರಗಳ ಮಧ್ಯವರ್ತಿಯಾದ ಸ್ವರವನ್ನೇ ಸಾಧಾರಣ ಸ್ವರವೆಂದು ಭಾವಿಸಿ ಅದನ್ನೇ ಸ್ವರಿತವೆಂಬ ಸಂಜ್ಞೆಗೆ ವಿಷಯವೆಂದು ಹೇಳುವರು. ಉದಾತ್ತಸ್ವರದಲ್ಲಿ ನಿಷಾದ, ಗಾಂಧಾರ ಸ್ವರಗಳೂ, ಅನುದಾತ್ತದಲ್ಲಿ ಋಷಭ, ದೈವತಸ್ವರಗಳೂ ಅನುಗತವಾಗಿವೆ. ಷಡ್ಜ, ಮಧ್ಯಮ, ಪಂಚಸ್ವರ ಸ್ವರಿತದಿಂದ ಉಂಟಾಗುವವು. ನಾಲಿಗೆಯ ಮುಂಭಾಗದಿಂದ ಪ್ರಯೋಗಿಸಲ್ಪಡುವ ಕ, ಖ ಎಂಬ ವರ್ಣಗಳ ಹಿಂದಿನ ಅರ್ಧವಿಸರ್ಗಗಳು ಸ್ವತಃ ವರ್ಣೈಕ ದೇಶಗಳಾಗಿರುವ ಕಾರಣ ಅವುಗಳನ್ನು ಮಾತ್ರೆಗಳೆಂದು ಪರಿಗಣಿಸುತ್ತಾರೆ. ಸಪ್ತ ಸ್ವರಗಳಿಗೆ ಸಂಗೀತಶಾಸ್ತ್ರದಲ್ಲಿ ಕ್ರಮವಾಗಿ ಜಾತ್ಯ, ಕ್ಷೈಪ್ರ, ಅಭಿನಿಹಿತ, ತೈರೋವ್ಯಂಜನ, ತಿರೋವಿರಾಮ, ಪ್ರಶ್ಲಿಷ್ಟ ಪಾದವೃತ್ತ ಎಂದು ಹೆಸರಿಸಿದ್ದಾರೆ.

ಜಾತ್ಯ, ಕ್ಷೈಪ್ರ, ಅಭಿನಿಹಿತ, ಪ್ರಶ್ಲಿಷ್ಟ ಎಂಬ ನಾಲ್ಕು ಸ್ವರಗಳ ಮುಂದೆ ಉದಾತ್ತನುದಾತ್ತಗಳ ಪೈಕಿ ಯಾವುದಾದರೂ ಒಂದು ಬಂದರೆ, ಶಾಸ್ತ್ರಕ್ಕನುಗುಣವಾಗಿ ಅವು

ಕಂಪಯುಕ್ತವಾಗುತ್ತವೆ. ಕಂಪಗಳಲ್ಲಿ ಎರಡು ವಿಧ. ಹ್ರಸ್ವ ಹಾಗೂ ದೀರ್ಘಕಂಪಗಳೆಂದು. ರೇಫ ಎಂದರೆ 'ರ' ಎಂಬ ವರ್ಣ ಖ ಛ ಠ ಥ ಫ ಎಂಬ ವರ್ಗ ದ್ವಿತೀಯಾಕ್ಷರಗಳು ಮತ್ತು ಘ ಝ ಢ ಧ ಭ ಎಂಬ ವರ್ಗದ ನಾಲ್ಕನೆಯ ಅಕ್ಷರಗಳು ಇವುಗಳಿಗೆ ಯಾವ ಸಂದರ್ಭದಲ್ಲಿಯೂ ದ್ವಿರ್ಭಾವ ಬರುವದಿಲ್ಲ. ನಾಲ್ಕನೆಯ ವರ್ಣವನ್ನು ಆ ವರ್ಗದ ಮೂರನೇಯ ವರ್ಣ ದಿಂದಲೂ, ಎರಡನೇಯ ವರ್ಣವನ್ನು ಮೊದಲನೆಯ ವರ್ಣದಿಂದಲೂ ಸಂಯೋಜನೆ ಮಾಡಿ ಪ್ರಯೋಗಿರುತ್ತಾರೆ. ವರ್ಗಗಳ ಮೊದಲ, ಮಧ್ಯಮ ಹಾಗೂ ಕೊನೆಯ ಅಕ್ಷರಗಳನ್ನು ಆಯಾ ಅಕ್ಷರಗಳನ್ನೇ ಸಂಯುಕ್ತವಾಗಿ ಪ್ರಯೋಗಿಸುತ್ತಾರೆ. ವರ್ಗದ ಗಕಾರ ಮುಂತಾದ ಮಧ್ಯಮಾಕ್ಷರವು ಮೊದಲು ನ ಮುಂತಾದ ಕೊನೆಯ ಅಕ್ಷರವು ಪರದಲ್ಲಿಯೂ ಬಂದಾಗ ಮಧ್ಯದಲ್ಲಿ ಯಮವು ಬರುತ್ತದೆ. ಆಗ ಅದನ್ನು ಪೂರ್ವವರ್ಣಕ್ಕೆ ಅಂಗವಾಗಿ ಉಚ್ಚರಿಸಬೇಕು. ವರ್ಗದ ಕೊನೆಗೆ ಬರುವ ನ ಕಾರಾದಿಗಳು ಶ ವ ಸ ಹ ಯ ರ ಲ ವ ಎಂಬ ಅಕ್ಷರಗಳಿಂದ ಸಂಯುಕ್ತವಾದಾಗ ಯಮಗಳು ನಿವೃತ್ತಿ ಹೊಂದುತ್ತವೆ. ವರ್ಗದ ತೃತೀಯ ಹಾಗೂ ಚತುರ್ಥ ವರ್ಣಗಳು ಸಂಹಿತೆಯಲ್ಲಿ ಸಂಯುಕ್ತವಾಗಿದ್ದರೆ ಪದಕಾಲದಲ್ಲಿ ಉತ್ತರ ಪದವು ಚತುರ್ಥವರ್ಣಾದಿಯಾಗುವದು. ಎರಡು ತೃತೀಯ ವರ್ಣಗಳು ಹ ಕಾರವು, ಇವು ಸಂಹಿತೆಯಲ್ಲಿ ಸೇರಿರುವಾಗ ಪದ ಮಾಡುವ ಕಾಲದಲ್ಲಿ ಹಕಾರಾದಿ ಯಾಗಿಯೇ ಉಳಿಯುತ್ತದೆ. ಇನ್ನು ಸಮಾಸ ಪದವನ್ನು ವಿಭಾಗ ಮಾಡುವ ವಿಧಾನವನ್ನು ವಿವರಿಸುತ್ತೇನೆ. ಕೇಳು.

ಅಧ್ಯಯನ ಮಾಡುವವರು ಯಾವ ಅಕ್ಷರದ ಮುಂದೆ ಇತಿ ಎಂದು ಹೇಳುವರೋ ಅದನ್ನೇ ಸಮಾಸ ಪದಾಂತವೆಂದು ತಿಳಿಯಬೇಕು. ಪುತ್ರ, ಮಿತ್ರ, ಸಖಿ, ಅದ್ರಿ, ಶತಕ್ರತು, ಆದಿತ್ಯ, ವಿಪ್ರ, ಜಾತವೇದಾಃ ಸತ್ಪತಿ, ಗೋಪತಿ, ವೃತ್ರಹಾ, ಎಂಬುದಾಗಿ ಸರ್ವತ್ರ ಪದವಿಭಾಗ ಮಾಡುವದು ಯುಕ್ತವಾಗಿದೆ. ಅದರಂತೆ ವೈಯಾಕರಣಿಗಳು 'ಸ್ವರ್ಯವಃ ದೇವಯವಃ ಆರತಿಂ ದೇವತಾತಯೇ ಚಿಕಿತಿಃ ಚುಕ್ರಧುಃ' ಎಂಬ ಪದಗಳನ್ನು ಸಮಾಸ ಮಾಡುವಾಗ ಇವುಗಳನ್ನು ವಿಭಾಗ ಮಾಡುವದಿಲ್ಲ. ಎರಡು ಸ್ವರಗಳು ಸಂಧಿಯಾಗದೆ ಬಿಟ್ಟಿರುವದಕ್ಕೆ ವಿವೃತ್ತಿ ಎಂದು ಹೆಸರಿಸಿದ್ದಾರೆ. ಈ ವಿವೃತ್ತಿಗಳು ನಾಲ್ಕು ವಿಧಗಳಾಗಿವೆ. ಲಘುವು ಗುರುವನ್ನು ಆಶ್ರಯಿಸಿದಾಗ, ಪೂರ್ವಪದದಲ್ಲಿ ದೀರ್ಘ ಹಾಗೂ ಉತ್ತರ ಪದದಲ್ಲಿ ಹ್ರಸ್ವ ಬಂದಾಗ, ಮೂರನೇಯದು ಪಾಕವತೀ, ಕೊನೆಯದಾಗಿ ಪಿಪೀಲಿಕಾ ಎಂಬುದು. ಸಂಧಿಗಳ ನಿಯಮಾನುಸಾರ ಸ್ವರ ಹಾಗೂ ವ್ಯಂಜನಗಳು ಒಂದರ ಮುಂದೆ ಒಂದು ಬಂದಾಗಲೂ ಸ್ವರಗಳು ಹ್ರಸ್ವ (ಹಾಗೂ ದೀರ್ಘ) ಬಂದಾಗಲೂ ಸಂಧಿಗಳು ಉಂಟಾಗುತ್ತವೆ. ಸ್ವರಲೋಪ, ಸ್ವರಾಗಮ, ಸ್ವರಾದೇಶ ಹೀಗೆ ಅನೇಕ ವಿಧ ಸಂಧಿಗಳಿವೆ.

ಛಂದಶಾಸ್ತ್ರಕ್ಕೆ ಲಘುಗುರುಗಳು ಪರಿಗಣನೆಯು ಪ್ರಧಾನವಾಗಿದೆ. ಪಾದಾಂತ ಛಂದೋಮಾನ, ವೃತ್ತವೆಂದು ಮೂರು ಕಾರಣಗಳು ಲೌಕಿಕಗಳು, ಛಂದಸ್ಸು ಗುರು ಲಘು ಪರಿಜ್ಞಾನದಿಂದ ಗಾಯತ್ರ್ಯಾದಿ ರೂಪವೆಂದು ತಿಳಿಯಲ್ಪಡುತ್ತದೆ. ಗಾಯತ್ರ್ಯಾದಿ ಛಂದಸ್ಸು ಋಕ್ಕುಗಳಿಗೆ ಸ್ವಾಭಾವಿಕವಾಗಿದೆ. ಛಂದೋ ಮಧ್ಯದಲ್ಲಿ ಅಕ್ಷರಪರಿಗಣನೆ ಮಾಡುವಾಗ ಸ್ವರಭಕ್ತಿಯೆನಿಸಿದ ಋ ವರ್ಣದಲ್ಲಿನ ರೇಫವನ್ನು ಪರಿಗಣಿಸಲಾಗುವುದಿಲ್ಲ. ಅಂದರೆ ಪೃಥಕ್ಕಾಗಿಲ್ಲದ ರೇಫವನ್ನು ವರ್ಣವೆಂದು ಪರಿಗಣಿಸಬೇಕು. ಋ ಎಂದು ಒಂದೇ ವರ್ಣದಲ್ಲಿ ರೇಫ ಮಾತ್ರೆಗೆ ವ್ಯಂಜಕವಾದ ಮಾತೃಕ ದೇಶವು ನಿರ್ಧಸಿರಿದಾಗ ಉ ಕಾರವು

ಲಘುವರ್ಣವೆಂದೂ ಋ ಕಾರವು ಶ ಮುಂತಾದ ಊಷ್ಮ ವರ್ಣಗಳಿಂದ ಸಂಯುಕ್ತವಾದಾಗ ಸ್ವರವಾಗಿದ್ದರೂ ಗುರುವರ್ಣವೆಂದು ತಿಳಿಯಬೇಕು. ಋಷಭ, ಗೃಹೀತ, ಬೃಹಸ್ಪತಿ, ಪೃಥಿವ್ಯಾಂ, ನಿರ್ಋತಿ ಎಂಬ ಈ ಪದಗಳಲ್ಲಿ ಋ ಕಾರವು ಸ್ವರವೆಂದು ತಿಳಿಯಬೇಕಾಗುತ್ತದೆ.

ಸ್ವರಭಕ್ತಿಯು ಎರಡು ವಿಧವಾಗಿದ್ದು ಸ್ವರೋದಾ ಹಾಗೂ ವ್ಯಂಜನೋದಾ ಎಂದು ಅಕ್ಷರ ವಿಮರ್ಶಕರು ನಿರ್ಧರಿಸಿದ್ದಾರೆ. ಸ್ವರಭಕ್ತಿಯನ್ನು ಪ್ರಯೋಗಿಸುವಾಗ ಇಕಾರ, ಉಕಾರ, ಗ್ರಸ್ತ ದೋಷ ಎಂಬ ಮೂರು ವಿಧಗಳನ್ನು ವರ್ಜಿಸಬೇಕು. ಸಂಯುಕ್ತ ಅಕ್ಷರ ಭ ಎಂಬ ವರ್ಣದ ಹಿಂದಿನ ವರ್ಣ, ವಿಸರ್ಗ ಸಹಿತ ವರ್ಣ, ಎರಡು ಮಾತ್ರೆಗಳುಳ್ಳದ್ದು ಅಂತ್ಯ ವರ್ಣ, ಅನುಸ್ವಾರ ಸಹಿತವಾದದ್ದು, ಘಂಟ ಎಂಬ ವರ್ಣದ ಹಿಂದಿನ ಅಕ್ಷರ ಇವುಗಳು ಲಘು ವರ್ಣಗಳಾಗುವುದಿಲ್ಲ. ಅಂದರೆ ಇವುಗಳನ್ನು ಗುರುವಾಗಿಯೇ ಪರಿಗಣಿಸಿ ಉಚ್ಚರಿಸಬೇಕು.

ಅಕ್ಷರಗಳ ಹ್ರಸ್ವವರ್ಣವು ಸಂಯುಕ್ತಾಕ್ಷರದ ಹಿಂದೆ ಇಲ್ಲದಿರುವಾಗ ಲಘು ವಾಗುವದು. ಅದೇ ಅಕ್ಷರವು ಸಂಯುಕ್ತಾಕ್ಷರದ ಹಿಂದಿರುವಾಗ ಗುರುವಾಗುವದು. ದೀರ್ಘಾಕ್ಷರಗಳು ಸಹಗುರುವಾಗಿರುವವು. ವಿಭಾಗ ಮಾಡಿದಾಗಲೂ ಕೂಡ ಮುಂದಿರುವ ಸ್ವರವನ್ನು ಗುರುವೆಂದು ಪರಿಗಣಿಸಿ ಉಚ್ಚರಿಸಬೇಕು. ನಾಮ ಪದದಲ್ಲಿ ಅಂತ್ಯ ಮಧ್ಯಗಳನ್ನು ಉದಾತ್ತವೂ, ನಿಪಾತದಲ್ಲಿ ಅನುದಾತ್ತವೂ, ಉಪಸರ್ಗದಲ್ಲಿ ಆದಿಯಲ್ಲಿ ಸ್ವರಿತವೂ, ಆಖ್ಯಾತದಲ್ಲಿ ಎರಡು ನೀಚ ಸ್ವರಗಳು ಬರುತ್ತವೆ.

ಪದಗಳು ಸ್ವರಭೇದದಿಂದ ಎಂಟು ವಿಧಗಳಾಗಿ ವಿಂಗಡಿಸಲ್ಪಟ್ಟಿವೆ - ಅಂತ್ಯೋದಾತ್ತ, ಆದ್ಯುದಾತ್ತ, ಉದಾತ್ತ, ಅನುದಾತ್ತ, ನೀಚಸ್ವರಿತ, ಮಧ್ಯೋದಾತ್ತ, ಸ್ವರಿತದ್ವಿರುದಾತ್ತ ಎಂದು. ಉಕ್ತವಾದ ಸೂಕ್ಷ್ಮ ವಿಷಯದ ಪರಿಜ್ಞಾನವು ಆಚಾರತ್ವದಿಂದ ಉಂಟಾಗುತ್ತದೆ. ಈ ಆಚಾರತ್ವವು ಐದು ವಿಧಾನಗಳಿಂದ ಕೂಡಿದೆ. ಮುಖ (ಹಸ್ತಾಗ್ರದಲ್ಲಿ ದೃಷ್ಟಿ ಯನ್ನಿಡುವದು - ವ್ಯಾಸ-(ಹೆಬ್ಬೆರಳು ಮುಂತಾದವುಗಳಲ್ಲಿ ಸ್ವರ ಸಂಯೋಜನೆ ಮಾಡುವದು) ಕರಣ - ಶಿವಾಶಾಸ್ತ್ರದ ಪರಿಜ್ಞಾನವು. ಪ್ರತಿಜ್ಞಾ-(ಗುರು ಮುಖೇನ ಸಾಂಪ್ರಾದಾಯಿಕವಾಗಿ ಬಂದ ಮಂತ್ರ ಸ್ವರೂಪ ನಿರ್ಧಾರ) ಉಚ್ಚಾರಣೆ-(ಲಕ್ಷಣಯುಕ್ತ ವಾಗಿ ಪ್ರಯೋಗಿಸುವದು) ಸಾಮಸ್ವರಶಾಸ್ತ್ರವು ಅತ್ಯಂತ ಗಹನವಾದ ವಿಷಯವಾಗಿದ್ದು ಅದನ್ನು ಕರಗತ ಮಾಡಿಕೊಳ್ಳು ವದಕ್ಕೆ ತ್ರಿಕರಣಪೂರ್ವಕ ಸತತಾಭ್ಯಾಸ ಅವಶ್ಯವಾಗಿದೆ. ಸಾಮಸ್ವರಶಾಸ್ತ್ರದ ಅಭ್ಯಾಸಿಯು ಶಾಸ್ತ್ರದಲ್ಲಿ ಅನುಸರಿಸತಕ್ಕ ಕೆಲವು ಅನುಷ್ಠಾನ ನಿಯಮಗಳನ್ನು ವಿವರಿಸುತ್ತೇನೆ ಕೇಳು.

ಸಾಧಕನು ತ್ರಿಕಾಲಗಳಲ್ಲಿ ಪಥ್ಯಾಹಾರ ಉಣ್ಣಬೇಕು. ಜಠರಾಗ್ನಿಯನ್ನು ನಿಯಂತ್ರಣ ದಲ್ಲಿಟ್ಟುಕೊಳ್ಳಬೇಕು. ಉಷಃಕಾಲದಲ್ಲಿ ಪ್ರತಿನಿತ್ಯ ವೇದಾಭ್ಯಾಸ ಮಾಡಬೇಕು. ಪ್ರಾತಃಕಾಲದಲ್ಲಿ ಎದ್ದು ಮಾವು, ಮುತ್ತಲ ಬಿಲ್ವ, ಉತ್ತರಣೆ ಮಂತಾದ ಗಿಡಗಳ ಕಟ್ಟಿಗೆಯಿಂದ ದಂತಧಾವನ ಮಾಡಿಕೊಂಡು ಅನಂತರ ಸಂಧ್ಯೋಪಾಸನೆ ಮಾಡಬೇಕು. ಕಂಠ ಮಾಧುರ್ಯ ಹಾಗೂ ಆರೋಗ್ಯವರ್ಧನೆಗೆ ದಿನಾಲೂ ತಪ್ಪದೆ ತ್ರಿಫಲಾ ಚೂರ್ಣವನ್ನು ಊಟದ ವೇಳೆಯಲ್ಲಿ ತಿನ್ನುವದು ಒಳಿತು. ಇದರಿಂದ ಅಗ್ನಿ ಪಾಟವವೂ, ಸ್ವರವರ್ಣ, ಸ್ಫುಟತೆಯೂ, ಉಂಟಾಗುತ್ತದೆ.

ಅಧ್ಯಯನ ಕಾಲದಲ್ಲಿ ಮಂತ್ರಗಳನ್ನು ಮೆಲ್ಲಗೆ ಹೇಳಿ ಅನಂತರ ಮಂದ್ರಾದಿ ಸ್ವರದಿಂದ ಮಂತ್ರಗಳನ್ನು ಸಾಕಷ್ಟು ಉಚ್ಚರಿಸಬೇಕು. ಪ್ರಾತಃಕಾಲದಲ್ಲಿ ಉಸಿರು ಕಟ್ಟುವಂತೆ ಗಟ್ಟಿಯಾದ ಶಬ್ದೋಚ್ಚಾರಣೆಯನ್ನು ಮಾಡಬಾರದು. ಶ್ವಾಸ ನಿರೋಧಿಸಿ, ಹೇಳಿದ

ವಾಕ್ಯದಲ್ಲಿ ಅಕ್ಷರಲೋಪವೂ, ಅಪಸ್ವರವೂ ಉಂಟಾಗುತ್ತದೆ. ಅದರಿಂದ ಸ್ವಾಭಾವಿಕವಾದ ಸ್ವರವರ್ಣಮಾಧುರ್ಯವು ಕ್ಷಯಿಸುತ್ತದೆ. ಅಧ್ಯಯನ ಮಾಡುವವನು, ಮೂಗು, ಕಣ್ಣು, ಕಿವಿ ಮುಂತಾದ ಅಂಗಾಂಗಳನ್ನು ವಕ್ರ ಮಾಡುವವನು, ಭಯಂಕರನಾಗಿರುವವನು, ಜೋಲು ತುಟಿಯುಳ್ಳವನು, ಮೂಗಿನಿಂದ ಮಾತನಾಡುವವನು, ಗೊಗ್ಗರು ಧ್ವನಿಯುಳ್ಳವನು, ಉಗ್ಗುತ್ತ ಮಾತನಾಡುವವನು ವೇದಾಧ್ಯಯನಕ್ಕೆ ಅರ್ಹನಲ್ಲ. ಏಕಾಗ್ರಚಿತ್ತವನು, ಭ್ರಮೆ ರಹಿತನೂ, ಒಳ್ಳೆ ಹಲ್ಲು ತುಟಿಗಳುಳ್ಳವನೂ, ಅಧ್ಯಯನಕ್ಕೆ ಅರ್ಹನು. ಅಷ್ಟೇ ಅಲ್ಲದೆ, ಗರ್ವಿಷ್ಠನೂ, ಕೋಪೋದ್ರಿಕ್ತನೂ, ಗುರುನಿಂದಕನೂ, ರೋಗಿಷ್ಠನೂ, ಸೋಮಾರಿಯೂ, ಚಂಚಲಚಿತ್ತನೂ ಆಗಿದ್ದರೆ ಅವನಿಗೆ ಸಾಮವೇದಾಭ್ಯಾಸದ ಪೂರ್ಣಫಲ ದೊರಕಲಾರದು. ಈ ಶಾಸ್ತ್ರದ ಅಭ್ಯಾಸವನ್ನು ಹಣ ಸಂಪಾದನೆಗೂ, ಕೀರ್ತಿಪಡೆಯಲೂ ಶೀಘ್ರಾತಿಶೀಘ್ರ ಪ್ರಗತಿ ಹೊಂದಲೂ ಪ್ರಯತ್ನಿಸಿದರೆ ಸಾಧಿಸಲಾರದು. ಕ್ರಮವಾಗಿ ಶಾಸ್ತ್ರೋಕ್ತ ರೀತಿಯಿಂದ ನಿಧಾನವಾಗಿ ಅಭ್ಯಾಸಮಾಡಿದಲ್ಲಿ ಸಾಮವೇದದಲ್ಲಿ ಪರಿಣತಿ ಪಡೆಯಬಹುದು. ಅಧ್ಯಯನವನ್ನು ಗಟ್ಟಿಯಾಗಿ ತ್ವರೆಯಿಂದ ಮಾಡುವದು ಶಾಸ್ತ್ರವಿರುದ್ಧವಾಗಿದ್ದು, ಸಾಧಕನಿಗೆ ಅದರಿಂದ ಪ್ರಗತಿ, ಪ್ರತಿಫಲ ದೊರಕಲಾರದು. ವೇದಧ್ಯಯನದ ಕಾಲದ ನಿಯಮಾನುಸಾರ (ವಿಚ್ಛಿನ್ನವಾಗಿ ವೇದಾಕ್ಷರವನ್ನು ಪ್ರಯೋಗಿಸದೆ) ಅಕ್ಷರಗಳನ್ನು ಸ್ವರಬದ್ಧವಾಗಿ ಉಚ್ಚರಿಸಿದರೆ ಅದಕ್ಕೆ ಪೂರ್ಣಫಲ ದೊರೆಯುತ್ತದೆ. ಕುಗ್ಗಿದ ಧ್ವನಿಯಿಂದಾಗಲಿ ಅತಿಖೇದದಿಂದಾಗಲಿ ಆಯಾಸ ಪಡುತ್ತ ಮಂತ್ರೋಚ್ಚಾರ, ಸ್ವರೋಚ್ಚಾರ ಮಾಡಿದರೆ ಶಾಸ್ತ್ರಕ್ಕೆ ವ್ಯತಿರಿಕ್ತಮಾರ್ಗ ಅನುಸರಿಸಿದಂತಾಗುತ್ತದೆ. ಇದರಿಂದ ಹಾನಿ ತಪ್ಪಿದ್ದಲ್ಲ.

ಮುಖ್ಯವಾಗಿ ಗುರು ಸನ್ನಿಧಿಯಲ್ಲಿದ್ದು ಅಧ್ಯಯನ ಮಾಡದೆ, ಪುಸ್ತಕದಲ್ಲಿ ಹೇಳಿದ್ದನ್ನು ಕಂಠಪಾಠಮಾಡಿದರೆ ಈ ವೇದಾಧ್ಯಯನ ಫಲಿಸಲಾರದು. ಅದಕ್ಕಾಗಿ ಗುರುಗಳ ಸೇವೆ ಮಾಡಿ, ಅವರ ಅನುಗ್ರಹ ಸಂಪಾದಿಸಿ, ಅವರು ಪ್ರಸನ್ನರಾಗಿ ಶಾಸ್ತ್ರೋಕ್ತ ರೀತಿಯಿಂದ ಕಲಿಸಿದಾಗ ಅದು ದಿಟವಾದ ವೇದಾಧ್ಯಯನವೆನಿಸುತ್ತದೆ. ಆದುದರಿಂದ ಸಾಧಕನು ವಿಹಿತ ಗಾನ ಅಧ್ಯಯನ ಮಾಡುವವನು, ಸೋಮಾರಿಯಾಗಿರದೆ, ಸತತ ಪ್ರಯತ್ನಶಾಲಿ ಯಾಗಿರಬೇಕು. ತ್ರಿಕಾಲಗಳಲ್ಲೂ ಅಧ್ಯಯನದಲ್ಲಿಯೇ ಎಲ್ಲ ಸಮಯ ಕಳೆಯಬೇಕು. ಸುಖಲೋಲುಪನಾದರೆ ಅವನಿಗೆ ಈ ವೇದಾಧ್ಯಯನದ ಫಲ ದೊರೆಯಲಾರದು.

ಸಾಧಕನು ಈ ವೇದಾಧ್ಯಯನ ಮಾಡುವಾಗ ಅನುಸರಿಸತಕ್ಕ ದೈನಂದಿನ ಕರ್ಮಾನುಷ್ಠಾನಗಳನ್ನು ಹೇಳುತ್ತೇನೆ ಕೇಳು. ಸಾಮವೇದದ ಅಭ್ಯಸಿಯು ವಸಂತಾದಿ ಋತುಗಣಗಳಲ್ಲಿ ಮೂರು ಯಾಮುಗಳಷ್ಟು ನಿದ್ರೆ ಮಾಡಬೇಕು. ವಿದ್ಯಾರ್ಥಿಗಳು ಅದಕ್ಕಿಂತ ಹೆಚ್ಚು ನಿದ್ರೆ ಮಾಡಬಾರದು. ಅವನು ಸಾವಕಾಶವಾಗಿ ಊಟಮಾಡಬಾರದು. ಸ್ತ್ರೀಯರ ಸಂಪರ್ಕದಿಂದ ದೂರವಿರಬೇಕು. ಅವರೊಂದಿಗೆ ಯಾವ ಕಾರಣಕ್ಕೂ ಸಲ್ಲಾಪಾದಿಗಳನ್ನು ಮಾಡಕೂಡದು. ವಿದ್ಯೆ ಕಲಿಯುವಾಗ, ದುರಭಿಮಾನ, ತ್ಯಜಿಸಬೇಕು. ಜನಗಳ ಮಾತಿಗೆ ಭಯಪಡುವವನಿಗೆ ಮತ್ತು ಇಂದು ನಾಳೆ, ನಾಡಿದ್ದು ಎಂದು ದಿನಗಳನ್ನು ದೂಡುತ್ತ ಸೋಮಾರಿಯಾಗಿ ಕಾಲ ತಳ್ಳುವವನಿಗೆ ಈ ವಿದ್ಯೆಯು ದೊರಕಲಾರದು. ಈ ವಿದ್ಯೆ ಕರಗತವಾಗಲಿಕ್ಕೆ ಗುರುವಿನ ಸಂಪೂರ್ಣ ಅನುಗ್ರಹ ಅತ್ಯವಶ್ಯ. ತ್ರಿಕಾಲಗಳಲ್ಲಿಯೂ ಗುರುವಿನ ಗುಲಾಮನಾಗಿ, ಅವರ ಸೇವಾ ಶುಶ್ರೂಷೆಗಳಲ್ಲಿ ತನ್ನ ಆಯುಷ್ಯ ಸವೆಸುವವನಿಗೆ ವಿದ್ಯಾಭಿಮಾನಿದೇವಿಯು ಸಂಪೂರ್ಣ ಅನುಗ್ರಹ ಮಾಡುತ್ತಾಳೆ. ಗುರುಸೇವೆ ಅಥವಾ

ಅಧಿಕಧನ ಇಲ್ಲವೆ ಪ್ರತಿವಿದ್ಯೆ ಈ ಮೂರು ಸಾಧನೆಗಳಿಂದ ವಿದ್ಯಾರ್ಥಿಗೆ ವಿದ್ಯೆ ಲಭಿಸುವದು. ಈ ವೇದಾಭ್ಯಾಸಿಯು ಜೂಜು, ಪುಸ್ತಕ, ಪಾಠ, ನಾಟಕ ನೋಡುವದರಲ್ಲಿ ಸ್ತ್ರೀ ಲೌಲ್ಯ, ಆಲಸ್ಯ, ನಿದ್ರೆ ಎಂಬ ಆರೂ ವಿದ್ಯೆಗೆ ವಿಘ್ನಕಾರಿಗಳೆಂದು ಭಾವಿಸಿ ಅವುಗಳಿಂದ ದೂರವಿರಬೇಕು.

ಗುರುಮುಖೇನ ಪ್ರತಿದಿನವೂ ವಿಹಿತ ಕಾಲದಲ್ಲಿ ವರ್ಣಗಳನ್ನು ಸ್ವರಗಳನ್ನು ಅಸ್ಫುಟವಾಗದಂತೆ, ಸ್ಥಾನಾದಿಗಳ ಸ್ವಭಾವಕ್ಕನುಗುಣವಾಗಿ ಪ್ರಯೋಗಿಸಲು ಕಲಿತು, ಅವುಗಳನ್ನು ತನ್ನ ಸತತ ಸಾಧನೆ, ಸಾಹಸದಿಂದ ಕರಗತ ಮಾಡಿಕೊಳ್ಳಲು ಪ್ರಯತ್ನಿಸುವವನೇ ನಿಜವಾದ ಅಭ್ಯಾಸಿ ಎನಿಸುವನು. ಚೆನ್ನಾಗಿ ವರ್ಣಗಳನ್ನು ಉಚ್ಚರಿಸಲು ಬಂದರೆ ಮಾತ್ರ ಅವನು ಸಾಮವೇದದಲ್ಲಿ ಪ್ರಗತಿ ಪಡೆಯುವವನೆಂಬ ವಿಶ್ವಾಸ ಮಾಡಬಹುದು. ಇಂತಹ ಸಾಧಕನು ಗುರುವಿನ ಪ್ರೀತಿಗೆ ಪಾತ್ರನಾಗುವನಷ್ಟೇ ಅಲ್ಲದೆ ಅದರಿಂದ ಬ್ರಹ್ಮಲೋಕ ಹೊಂದಿ ಪೂಜ್ಯನಾಗುವನು. ನಾರದನೆ ಈ ರೀತಿಯಾಗಿ ಶಿಕ್ಷಾಗ್ರಂಥದ ದಾರಿಯನ್ನು ನಿನಗೆ ಉಪದೇಶಿಸಿರುವೆನು. ಈ ಮೊದಲನೆಯ ವೇದಾಂತವನ್ನು ತಿಳಿದ ಮನುಷ್ಯನು ಮುಕ್ತಿ ಪಡೆದು ಪರಲೋಕದಲ್ಲಿ ಸುಖಿಸುವನು.

ನಾರದ ಮಹಾಪುರಾಣದಲ್ಲಿ ಐವತ್ತನೆಯ ಅಧ್ಯಾಯ ಮುಗಿದುದು



## ಗಣಪತಿ ಪೂಜಾ ಹೋಮ ಶ್ರಾದ್ಧಾದಿ ವಿಧಾನ | ಅಧ್ಯಾಯ - ೫೧

**ಸನಂದ :-** ಮುನಿಶ್ರೇಷ್ಠರೆ, ವೇದದ ಷಡಂಗಗಳಲ್ಲಿ ಶಿಕ್ಷಾ ಶಾಸ್ತ್ರದ ವಿಷಯವನ್ನು ನಿನಗೆ ಸಂಕ್ಷೇಪವಾಗಿ ನಿರೂಪಿಸಿದೆನು. ಈಗ ಕಲ್ಪಗ್ರಂಥದ ವಿಷಯವಾಗಿ ನಿರೂಪಿಸುತ್ತೇನೆ, ಕೇಳು. ಕಲ್ಪಗಳು ಐದು, ನಕ್ಷತ್ರ ಕಲ್ಪ, ವೇದಕಲ್ಪ, ಸಂಹಿತಾ ಕಲ್ಪ, ಅಂಗೀರಸ ಕಲ್ಪ, ಶಾಂತಿ ಕಲ್ಪವೆಂದು ನಕ್ಷತ್ರಗಳಲ್ಲಿ ನಾಯಕನಾದ ಚಂದ್ರನು ಹಿಂದೆ ಈ ನಕ್ಷತ್ರ ಕಲ್ಪದ ಬಗೆಗೆ ವಿಸ್ತಾರವಾಗಿ ಹೇಳಿದನು. ಅದನ್ನೇ ಇಲ್ಲಿ ಸಂಕ್ಷೇಪವಾಗಿ ನಿರೂಪಿಸಲಾಗಿದೆ. ಸಂದರ್ಭಕ್ಕೆ ತಕ್ಕಂತೆ ಇದು ಅವಶ್ಯ ಜ್ಞಾತವ್ಯ ಆದುದರಿಂದಲೇ ನೀ ನಗಾಗಿ ಈಗ ಶ್ರೋತವ್ಯ. ಎರಡನೆಯದಾದ ವೇದಕಲ್ಪದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವ, ಚತುರ್ವೇದ ವಿಧಾನವು ಬಣ್ಣಿಸಲ್ಪಟ್ಟಿದೆ. ಸಂಹಿತಾ ಕಲ್ಪದಲ್ಲಿ ವೇದ ಮಂತ್ರಗಳಿಗೆ ಋಷಿ, ಛಂದಸ್ಸು, ದೇವತೆಗಳನ್ನು ಜ್ಞಾನಿಗಳು ವಿವರಿಸಿದ್ದಾರೆ. ಇದರಂತೆ ಅಂಗಿರಸ ಕಲ್ಪದಲ್ಲಿ ನಾಲ್ಕು ಮುಖದ ಬ್ರಹ್ಮನು ಅಧ್ಯಯನ ಅಧ್ಯಾಪನ ಯಜನ, ಯಾಜನ, ದಾನ, ಪ್ರತಿಗ್ರಹ ಎಂಬ ಷಟ್ಕರ್ಮಗಳನ್ನು ಅಭಿಚಾರ ವಿಧಾನದಿಂದ ವಿಸ್ತಾರವಾಗಿ ನಿರೂಪಿಸಿರುವನು.

ಶಾಂತಿ ಕಲ್ಪದಲ್ಲಿ ದಿವ್ಯ ಭೋಗಗಳ ಪ್ರಾಪ್ತಿಗಾಗಿ ಹಾಗೂ ಅಂತರಿಕ್ಷ ಉತ್ಪಾತಗಳ ಶಮನಕ್ಕಾಗಿ ಪ್ರತ್ಯೇಕವಾಗಿ ಶಾಂತಿಗಳು ಹೇಳಲ್ಪಟ್ಟಿವೆ. ಕಲ್ಪ ಲಕ್ಷಣಗಳಲ್ಲಿ ಈ ಐದು ಕಲ್ಪಗಳ ಸಂಕ್ಷಿಪ್ತ ಲಕ್ಷಣಗಳನ್ನು ಹೇಳಲಾಗಿದೆ. ಇವುಗಳ ವಿಸ್ತೃತವಾದ ಯಥಾರ್ಥ ಲಕ್ಷಣ ವಿಭಾಗಗಳು ಬೇರೆ ಬೇರೆ ಶಾಖೆಗಳಲ್ಲಿ ಬೇರೆ ಬೇರೆಯಾಗಿ ಉಕ್ತವಾಗಿವೆ. ಈಗ ಎಲ್ಲರಿಗೂ ಉಪಯುಕ್ತವಾಗುವ ಮತ್ತು ಮೇಲಿನ ಎಲ್ಲ ಕಲ್ಪಗಳಿಗೆ ಉಪಜೀವ್ಯವಾದ ಗೃಹ್ಯಕಲ್ಪದ ಬಗೆಗೆ ಹೇಳುತ್ತೇನೆ. ಸಾವಧಾನ ಚಿತ್ತದಿಂದ ಕೇಳು.

**ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।**
**ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವಿಮೌ ॥**
**ಕೃತ್ವಾ ಪ್ರೋಕ್ತಾನಿ ಕರ್ಮಾಣಿ ತದೂರ್ಧ್ವಾನಿ ಕರೋತಿ ಯಃ ।**
**ಸೋಽಥ ಶಬ್ದಂ ಪ್ರಯುಂಜೀತ ತದಾನಂತ್ಯಾರ್ಥಮಿಷ್ಯತೇ ॥**

ಮೊದಲು ಓಂಕಾರ ಮತ್ತು 'ಅಥ' ಇವೆರಡೂ ಬ್ರಹ್ಮನ ಕಂಠವನ್ನು ಭೇದಿಸಿಕೊಂಡು ಮೊದಲು ಹೊರಗೆ ಬಂದವು. ಆದುದರಿಂದ ಅವೆರಡು ಶಬ್ದಗಳು ಮಂಗಲಕಾರಕವಾಗಿವೆ.

ಓಂಕಾರವನ್ನುಚ್ಚರಿಸಿ ಉತ್ತಮವಾದ ವಿಹಿತ ಕರ್ಮಗಳನ್ನು ಮಾಡುವವನು ಅಥ ಶಬ್ದವನ್ನು ಪ್ರಯೋಗಿಸಬೇಕು. ಹಾಗೆ ಮಾಡಿದರೆ ಅಂತಹ ಕರ್ಮವು ಅನಂತ ಫಲಪ್ರದವಾಗುವದು. ಎಂದು ಜ್ಞಾನಿಗಳು ಹೇಳುತ್ತಾರೆ. ಪರಿಸಮೂಹನಕ್ಕಾಗಿ ಏಳು ದರ್ಭೆಗಳು ಶಾಖೆಗಳೆಂದು ಹೇಳಲ್ಪಟ್ಟವೆ. ಅದಕ್ಕೂ ಹೆಚ್ಚಾಗಬಾರದು, ಕಡಿಮೆಯಾಗಬಾರದು. ನೆಲದಲ್ಲಿ ಕ್ರಿಮಿ, ಕೀಟ ಹಕ್ಕಿ ಪಕ್ಷಿಗಳು ತಿರುಗುತ್ತಲಿರುತ್ತವೆ. ಅವುಗಳಿಂದ ರಕ್ಷಣೆಗಾಗಿ ಈ ಪರಿಸಮ್ಮೋಹನ ವಿಧಿಯು ಹೇಳಲ್ಪಟ್ಟಿದೆ. ಮೂರು ಸಮಾನ ರೇಖೆಗಳನ್ನು ಹೆಚ್ಚು ಕಡಿಮೆ ಇಲ್ಲದಂತೆ ಮಾಡಬೇಕು. ಹಿಂದೆ ಆ ಭೂಮಿಯು ಮಧು, ಕೈಟಭರೆಂಬ ದೈತ್ಯರ ಮೇದಸ್ಸಿ(ಕೊಬ್ಬು) ನಿಂದ ವ್ಯಾಪಿಸಿತ್ತು. ಅದಕ್ಕಾಗಿಯೇ ಈ ಭೂಮಿಗೆ ಮೇದಿನಿ ಎಂಬ ಹೆಸರು ಬಂದಿದೆ. ಎಲ್ಲೆಲ್ಲಿಯೂ ಆ ದೈತ್ಯರ ಕೊಬ್ಬಿನಿಂದ ಉದ್ದ ಹಬ್ಬಿದ ಈ ನೆಲದ ಮೇಲ್ಪದರು ಅಪವಿತ್ರ, ಅದಕ್ಕಾಗಿ ಯಾವದೇ ಪುಣ್ಯ ಕರ್ಮ ಮಾಡುವಾಗ ಗೋಮಯದಿಂದ ನೆಲವನ್ನು ಸಾರಿಸಬೇಕು.

ಬಂಜೆ ಆಕಳು, ಕರು ಸತ್ತ ಆಕಳಿನ ಗೋಮಯವು ಯಜ್ಞಕ್ಕೆ ನಿಷಿದ್ಧ ಮುಗಿಲಿನಲ್ಲಿ ಯಾವಾಗಲೂ ಹಾರಾಡುವ ಕ್ರೂರ ಪಕ್ಷಿಗಳನ್ನು ಹೊಡೆಯುವದಕ್ಕಾಗಿ ಉದ್ಧರಣೆ ಪಾತ್ರವು ವಿಹಿತವಾಗಿದೆ. ಯಾವಾಗಾದರೊಮ್ಮೆ ಆ ನೆಲಕ್ಕೆ ತಗಲಬಹುದಾದ ಮೂಳೆ, ತೊಗಲು, ಮುಂತಾದ ಅಶುದ್ಧ ಪದಾರ್ಥಗಳಿಂದ ಭೂಮಿಯನ್ನು ಪರಿಶುದ್ಧ ಮಾಡಲಿಕ್ಕಾಗಿ ದರ್ಭೆಯಿಂದ ನೆಲವನ್ನು ಉತ್ಖನನ ಮಾಡಬೇಕು. ನೀರಿನಲ್ಲಿ ಎಲ್ಲ ದೇವತೆಗಳು ಸನ್ನಿಹಿತವಾದ್ದರಿಂದ ಯಜ್ಞ ಮಾಡುವ ಭೂಮಿಯನ್ನು ಜಲದಿಂದ ಪ್ರೋಕ್ಷಣೆ ಮಾಡಬೇಕು. ಹೋಮಕ್ಕಾಗಿ ಅಗ್ನಿಯನ್ನು ಮುತ್ತೈದೆಯರೇ ತರಬೇಕು. ಅದು ಕೂಡ ಮಂಗಲಕರವಾದ ಮಣ್ಣಿನ ಪಾತ್ರೆಯಲ್ಲಿ ಅಗ್ನಿಯನ್ನು ತಂದಬಳಿಕ ಅತ್ಯಲ್ಪ ನೀರಿನ ಹನಿಗಳಿಂದ ಪ್ರೋಕ್ಷಿಸಿ ಆ ಪಾತ್ರಸ್ಥ ಅಗ್ನಿಯನ್ನು ಹೋಮ ಮಾಡಲು ಇಡಬೇಕು. ಹಿಂದೆ ಬ್ರಹ್ಮಾದಿ ದೇವತೆಗಳು ಅಮೃತವು ನಾಶವಾಗಬಾರದೆಂದು ವೇದಿಕೆಯಲ್ಲಿ ಅಗ್ನಿಯನ್ನೂ ಹೊತ್ತಿಸಿ, ಅದು ಆರ(ನಂದ) ಬಾರದೆಂದು ಸಮಿಧೆಗಳನ್ನು ಹಾಕುತ್ತ ಅದನ್ನು ಪ್ರಜ್ವಲಿತವಾಗಿ ಇರಿಸಿದ್ದರು. ಯಜ್ಞಕುಂಡದ ದಕ್ಷಿಣ ಭಾಗದಲ್ಲಿ ದೈತ್ಯದಾನವರ ನೆಲೆ. ಅವರಿಂದ ಯಜ್ಞವನ್ನು ಕಾಪಾಡುವದಕ್ಕಾಗಿ ಆ ದಿಕ್ಕಿನಲ್ಲಿ ಬ್ರಹ್ಮದೇವರನ್ನು ಸ್ಥಾಪಿಸಬೇಕು. 'ಪ್ರಣೀತಾ' ಮುಂತಾದ ಪಾತ್ರಗಳನ್ನು ಉತ್ತರ ದಿಕ್ಕಿನಲ್ಲಿ ಇರಿಸಿ ಪಶ್ಚಿಮ ದಿಕ್ಕಿಗೆ ಯಜಮಾನನು ಉಪವಿಷ್ಟನಾಗಬೇಕು. ಪೂರ್ವದಲ್ಲಿ ಎಲ್ಲ ದ್ವಿಜರು ಋತ್ವಿಜರು ಆಸೀನರಾಗಬೇಕು. ಯಜ್ಞ ಮಾಡುವಾಗ ಯಜಮಾನನು ಎಲ್ಲಿಯೋ ಲಕ್ಷ್ಯವಿಟ್ಟು ಈ ಯಜ್ಞ ಕರ್ಮವನ್ನು ಉದಾಸೀನ ಮಾಡಬಾರದು.

**ದ್ಯೂತೇ ಚ ವ್ಯವಹಾರೇ ಚ ಯಜ್ಞಕರ್ಮಣಿ ಯದ್ಭವೇತ್ ।**
**ಕರ್ತೋರ್ದಾಸೀನಚಿತ್ತಸ್ತತ್ಕರ್ಮ ನಶ್ಯೇದಿತಿ ಸ್ಥಿತಿಃ ॥**

ಜೂಜಾಡುವದು, ವ್ಯವಹಾರ ಮತ್ತು ಯಜ್ಞಕರ್ಮ ಇವುಗಳಲ್ಲಿ ಕರ್ತೃವು ಉದಾಸೀನಚಿತ್ತನಾದರೆ ಕರ್ಮವು ನಷ್ಟವಾಗುವದು. ಯಜ್ಞ ಕಾರ್ಯಕ್ಕಾಗಿ ಬ್ರಹ್ಮ ಮತ್ತು ಆಚಾರ್ಯರ ಸ್ಥಾನಕ್ಕಾಗಿ ಯಜಮಾನನು ತನ್ನ ಶಾಖೆಯವರನ್ನೇ ಆರಿಸಬೇಕು. ಋತ್ವಿಜರು ಮಾತ್ರ ಯಾವ ಶಾಖೆಯವರು ಆದರೂ ಸರಿ. ಯಾರು ಯಾರು ಲಭಿಸುವರೋ ಅವರೆಲ್ಲರನ್ನು ಗೌರವದಿಂದ ಸತ್ಕರಿಸಬೇಕು. ಎರಡು ಬೆರಳು ಉದ್ದ ಇರುವ ಎರಡು 'ಪವಿತ್ರ' ನಾಲ್ಕು ಬೆರಳಿನ ಪರಿಮಿತಿಯುಳ್ಳ 'ಪ್ರೋಕ್ಷಣೆ' ಪಾತ್ರೆ. ಮೂರು ಅಂಗುಲ ಉದ್ದವಾದ ತುಪ್ಪದ ಪಾತ್ರೆ, ಆರು ಅಂಗುಲ ಪರಿಮಿತಿಯುಳ್ಳ ಹೋಮ 'ಚರು' ಮಾಡುವ ಪಾತ್ರೆಗಳನ್ನು ಯಜ್ಞದಲ್ಲಿ ಉಪಯೋಗಿಸಬೇಕು. ಎರಡು ಅಂಗುಲದ ದರ್ಭೆಯಿಂದ 'ಉಪಮಯ 'ಎಂಬ ಸಾಧನವನ್ನು, ಒಂದು ಅಂಗುಲ ದರ್ಭೆಯಿಂದ ಸಂಮಾರ್ಜನವನ್ನೂ ಆರು ಅಂಗುಲ ಸ್ರುವ ಮೂರೂವರೆ ಅಂಗುಲ ಅಳತೆಯ 'ಸ್ರುಕ್' ಒಂದು ಚೋಟ ಉದ್ದದ ಸಮಿಧೆಗಳು ಆರು ಅಂಗುಲದ ಪೂರ್ಣ ಪಾತ್ರೆಯು. ಉತ್ತರದಲ್ಲಿ ಎಂಟು ಮುಷ್ಟಿ ಪರಿಮಿತಿಯ 'ಪ್ರಣೀತಾ' ಎಂಬ ಪಾತ್ರೆಯನ್ನು ವ್ಯವಸ್ಥಿತವಾಗಿ ಸ್ಥಾಪಿಸಬೇಕು. ದೇಶದಲ್ಲಿದ್ದ ಎಲ್ಲ ತೀರ್ಥಗಳು ಸಮುದ್ರಗಳು, ನದಿಗಳು, ಇದರಲ್ಲಿ ಸನ್ನಿಹಿತವಾಗಲಿ ಎಂಬ ಅನುಸಂಧಾನದಿಂದ ಅದರಲ್ಲಿ ನೀರನ್ನು ತುಂಬಬೇಕು. ವೇದಿಕೆಯ ತುಂಬ ದರ್ಭೆಗಳನ್ನು ಹರಡಿ, ದರ್ಭೆಗಳ 'ಪರಿಸ್ತರಣ'ಗಳನ್ನು ಸುತ್ತಲೂ ಇಡಬೇಕು. ಇಂದ್ರನ ವಜ್ರಾಯುಧ, ವಿಷ್ಣುವಿನ ಚಕ್ರ, ಶಿವನ ತ್ರಿಶೂಲ, ಇವು ಮೂರು ದರ್ಭೆಯ ರೂಪದಿಂದ ಪವಿತ್ರ ಛೇದನಗಳಾಗಿರುತ್ತವೆ, 'ಪ್ರೋಕ್ಷಣಿ' ಮತ್ತು 'ಪ್ರಣೀತಾ' ಪಾತ್ರೆಗಳಲ್ಲಿ ನೀರನ್ನು ತುಂಬಬೇಕು. ಒಂದು ಫಲದಷ್ಟು ತುಪ್ಪದ ಪಾತ್ರೆಯನ್ನು ಶುದ್ಧಗೊಳಿಸಬೇಕು. ಯಜ್ಞದಲ್ಲಿ ಕುಂಬಾರನು ಮಾಡಿದ ಮಣ್ಣಿನ ಪಾತ್ರೆ ಉಪಯೋಗಿಸಕೂಡದು. ಸ್ಮೃತಿ ಗ್ರಂಥಗಳಲ್ಲಿ ಕುಂಬಾರನು ಚಕ್ರದಿಂದ ಮಾಡಿದ ಮಣ್ಣಿನ ಪಾತ್ರೆಯು ಆಸುರವೆಂದು ಹೇಳಲಾಗಿದೆ. ಸ್ವಂತ ಕೈಯಿಂದಲೇ ಮಣ್ಣಿನ ಪಾತ್ರೆ ಮಾಡಿದರೆ ಅದು ದೈನಿಕ ಎಂದೆನಿಸುವದು.

ಶುಭಾಶುಭ ಕರ್ಮಗಳಿಗೆಲ್ಲ 'ಸ್ರುವ'ವು ಅತ್ಯಾವಶ್ಯಕ. ಅದನ್ನು ಪರಿಶುದ್ಧಗೊಳಿಸಲು ಮೊದಲು ಬೆಂಕಿಯಲ್ಲಿ ಕಾಯಿಸಬೇಕು. ಅಗ್ನಿ, ಸೂರ್ಯ, ಸೋಮ, ಬ್ರಹ್ಮ, ವಾಯು, ಯಮ, ಈ ಆರು ದೇವತೆಗಳು ಈ 'ಸ್ರುವ'ದ ಪ್ರತಿಯೊಂದು ಅಂಗುಲದಲ್ಲಿಯೂ ಸನ್ನಿಹಿತರಾಗಿರುತ್ತಾರೆ. ಮೊದಲೇ ದರ್ಭೆಗಳಿಂದ ಸಂಮಾರ್ಜನ ಮತ್ತು ಉಪಯಮ ಎಂಬ ಹೋಮ ಸಾಧನೆಗಳನ್ನು ಮಾಡಿಟ್ಟುಕೊಂಡಿರಬೇಕು. ಉಪಯಮವು ಪಂಚಶಾಖೀಯರಿಗೆ ಮಾತ್ರ ಸಂಬಂಧಪಡುತ್ತದೆ. ಶ್ರೀ ಪರ್ಣ, ಬನ್ನಿಯ ಎಲೆ ಬೋರೆ ಗಿಡದ ಎಲೆ, ಮುತ್ತುಗದ ಎಲೆಗಳಿಂದ ಸ್ರುವ ಸ್ರುಕ್ ಎಂಬ ಹೋಮ ಸಾಧನೆಗಳನ್ನು ಮಾಡಬೇಕು. ಪತಿತರು, ನಾಯಿ, ಕತ್ತೆ ಮುಂತಾದ ಪ್ರಾಣಿಗಳು ಹೋಮ ದ್ರವ್ಯಗಳನ್ನು ನೋಡಬಾರದು. ಅಂತಹವರ ದೃಷ್ಟಿದೋಷ ಪರಿಹಾರಕ್ಕಾಗಿ ಆ ಪಾತ್ರೆಗಳಿಗೆ 'ಪ್ರೋಕ್ಷಣೆ' ಮಾಡಬೇಕು. ಪೂರ್ಣ ಪಾತ್ರೆಯನ್ನು ಸ್ಥಾಪನ ಮಾಡದಿದ್ದರೆ ಯಜ್ಞವು ಅಪೂರ್ಣವೆಂದೆನಿಸುವದು. ಎಂಟು ಮುಷ್ಟಿ ಪರಿಮಾಣವುಳ್ಳ ನಾಲ್ಕು 'ಪುಷ್ಕಲ'ಗಳನ್ನು ರಚಿಸಬೇಕು. ಅವು ಪೂರ್ಣ ಪಾತ್ರೆ ಎಂದು ತಿಳಿಯಬೇಕು. ಹೋಮ ನಡೆದ ಕಾಲದಲ್ಲಿ ಯಾರು ಕೂಡಲು ಬಂದರೂ

ಆಸನ ಹಾಕಬಾರದು. ಯಜ್ಞ ಕಾಲದಲ್ಲಿ ಎಲ್ಲಿಯಾದರೂ ಆಸನದಲ್ಲಿ ಕುಳಿತು ಕೊಳ್ಳಬಂದರೆ ಅವರಿಗೆ ಆಸನ ಕೊಡಕೂಡದು. ಯಜ್ಞದಲ್ಲಿ ಅಗ್ನಿಯು ಉದ್ದೀಪಿತ ವಾದಾಗ ಅವನೆದುರು ಬೇರೆಯವರು ಆಸನಾರೂಢರಾಗಬಾರದು.

ಯಜ್ಞ ಪ್ರಾರಂಭದಲ್ಲಿ 'ಸ್ರುಕ್' 'ಸ್ರುವ' ಜಪಮಾಲೆ 'ಶಕ್ತಿ' ಮುಂತಾದ ಆಯುಧಗಳನ್ನು ಧರಿಸಿದ ನಾಲ್ಕು ತೋಳುಗಳುಳ್ಳ ಮೇಷವಾಹನನಾದ ಅಗ್ನಿ ದೇವನನ್ನು ಧ್ಯಾನ ಮಾಡಿ ಹೋಮ ಕರ್ಮಾದಿಗಳನ್ನು ಆಚರಿಸಬೇಕು. ಆ ಹೋಮದಲ್ಲಿ ಎಳ್ಳನ್ನು ಮಿಶ್ರ ಮಾಡಬೇಕು. ಹೋಮ ಕಾಲದಲ್ಲಿ ಮೂರು ಮುದ್ರೆಗಳನ್ನು ಪ್ರಯೋಗಿಸುವ ಸಂಪ್ರದಾಯವಿದೆ. ಅಭಿಚಾರ ಪ್ರಯೋಗದಲ್ಲಿ ಸೂಕರೀ ಮುದ್ರೆ, ಶುಭಕಾರ್ಯ ಸಮಯದಲ್ಲಿ ಹಂಸೀ, ಮೃಗೀ ಮುದ್ರೆ ಉಪಯೋಗಿಸುತ್ತಾರೆ. ಐದೂ ತುದಿ ಬೆರಳುಗಳನ್ನು ಕೂಡಿಸಿ ಅದರಿಂದ ಆಹುತಿಯನ್ನು ಅಗ್ನಿಯಲ್ಲಿ ಹಾಕಿದರೆ ಸೂಕರೀ ಮುದ್ರೆ. ಕನಿಷ್ಠಿಕೆ ಅಂದರೆ ಕಿರುಬೆರಳನ್ನು ಬಿಟ್ಟು ಉಳಿದ ನಾಲ್ಕು ಬೆರಳುಗಳಿಂದ (ತುದಿಗಳಿಂದ ) ಆಹುತಿ ಹಾಕಿದರೆ ಅದು ಹಂಸೀ ಮುದ್ರೆ, ಇನ್ನು ಕೊನೆಯ ಎರಡು ಬೆರಳು ಬಿಟ್ಟು ಮೊದಲಿನ ಮೂರು ಬೆರಳು (ಹೆಬ್ಬರಳು ಮತ್ತು ತೋರುಬೆರಳು, ನಡುಬೆರಳು) ಗಳಿಂದ ಆಹುತಿ ನೀಡಿದರೆ, ಮೃಗೀ ಮುದ್ರೆ ಎನಿಸುವದು. ಋತ್ವಿಜರು ಎಳ್ಳು, ಮೊಸರು, ತುಪ್ಪ, ಜೇನುತುಪ್ಪ ಇವುಗಳ ಸಹಿತವಾಗಿ ಐದೂ ಬೆರಳುಗಳಿಂದ ಆಹುತಿ ನೀಡಿ ಹೋಮ ಮಾಡಬೇಕು. ಪುಣ್ಯಕರ್ಮದಲ್ಲಿ ದರ್ಭೆಯಿಂದ ಮಾಡಿದ ಪವಿತ್ರವನ್ನೂ 'ಅನಾಮಿಕಾ' ಎಂದರೆ ಕಿರಿಬೆರಳಿನ ಪಕ್ಕದ ಬೆರಳಿನಲ್ಲಿ ಇಟ್ಟುಕೊಳ್ಳಬೇಕು.

ಯಾವುದೇ ಶುಭ ಕರ್ಮ ಆರಂಭಿಸುವಾಗ ಮೊದಲು ಗಣಪತಿಯನ್ನು ಪೂಜಿಸಬೇಕು. ಇಲ್ಲದಿದ್ದರೆ ಯಾವ ಕೆಲಸವೂ ನಿರ್ವಿಘ್ನವಾಗಿ ನಡೆಯಲಾರದು. ಪೂಜೆ, ಹೋಮಗಳ ಪ್ರಾರಂಭದಲ್ಲಿ ವಿನಾಯಕನನ್ನು ಪೂಜಿಸದಿದ್ದರೆ ರಾಜನ ಹೊಟ್ಟೆಯಿಂದ ಹುಟ್ಟಿದರೂ ಅರಸನಾಗುವದಿಲ್ಲ. ಮದುವೆಯಾದ ಮಹಿಳೆ ಪತಿಯೊಡನೆ ಮಿಲನ ಹೊಂದಿದರೂ ಮಕ್ಕಳಾಗುವದಿಲ್ಲ. ವ್ಯಾಪಾರಿಗೆ ಲಾಭವಾಗುವದಿಲ್ಲ. ಬೇಸಾಯಗಾರನಿಗೆ ಕೃಷಿ ಫಲದಾಯಕವಾಗುವದಿಲ್ಲ. ಆದುದರಿಂದ ವಿಘ್ನೇಶ್ವರನ ಅನುಗ್ರಹ ಪಡೆಯಲಿಕ್ಕಾಗಿ ವಿಧಿ ಪೂರ್ವಕ ಗಣಪತಿ ಪೂಜೆಯನ್ನು ಮಾಡಿ ದ್ವಿಜರಿಂದ ಸ್ವಸ್ತಿವಾಚನ ಮಾಡಿಸಬೇಕು. ಬ್ರಹ್ಮಾದಿ ದೇವತೆಗಳು ವಿಘ್ನ ನಾಶಕ್ಕಾಗಿ ಹಾಗೂ ನಿರ್ವಿಘ್ನ ಪರಿಸಮಾಪ್ತಿಗಾಗಿ ಈ ಸಿದ್ಧಿವಿನಾಯಕನನ್ನು ನಿಯಮಿಸಿರುವರು. ವಿನಾಯಕನ ಪೂಜೆ ಮಾಡುವವರು ಗಣಪತಿಯ ಅನುಗ್ರಹಕ್ಕೆ ಪಾತ್ರರಾಗುವರು.

ಈ ಗಣಪತಿ ಪೂಜಾ ನಂತರ ಹೋಮ ಮಾಡುವವರು, ನದೀ ಸಂಗಮಸ್ಥಳ ಸರೋವರ, ಗಜಶಾಲೆ ಅಶ್ವಶಾಲೆಗಳ ಬಳಿಯ ಮೃತ್ತಿಕೆಯನ್ನು ತಂದಿಡಬೇಕು. ಗೋರೋಚನ, ಗಂಧ ಗುಗ್ಗುಳ ತಂದಿಡಬೇಕು. ನಾಲ್ಕು ಕಲಶಗಳನ್ನು ತಂದು ಜಲಾಭಿಮಾನಿ ದೇವತೆಗಳ ಆಹ್ವಾನದೊಂದಿಗೆ ಗಣಪತಿಗೆ ಅಭಿಷೇಕ ಮಾಡಬೇಕು. ಗಣಪತಿಯ ತಲೆಯಲ್ಲಿ ದರ್ಭೆತೆಗೆದುಕೊಂಡು ಸುಗಂಧಿ ತೈಲವನ್ನು ಸ್ರುವದಲ್ಲಿ ಹಾಕಿಕೊಂಡು "ಮಿತ್ರಾಯ ಸ್ವಾಹಾ" ಎಂದು ಆಹುತಿ ಹಾಕಬೇಕು. ಅನಂತರ "ಶಾಲಾಯ ಸ್ವಾಹಾ," "ಕಟಂ ಕಟಾಯ ಸ್ವಾಹಾ", "ಕೂಷ್ಮಾಂಡಾಯ ಸ್ವಾಹಾ," "ರಾಜಪುತ್ರಾಯ ಸ್ವಾಹಾ," ಎಂದು ಮಂತ್ರ ಹೇಳಿ

ಆರು ಆಹುತಿಗಳಿಂದ ಹೋಮ ಮಾಡಬೇಕು. ಅನಂತರ ಗಣಪತಿಯ ನಾಮ ಮತ್ತು ಮಂತ್ರಗಳನ್ನು ಉಚ್ಚರಿಸಿ, ನಮಸ್ಕರಿಸಿ, ನಾಲ್ಕು ದಾರಿ ಸೇರುವ ಕೂಟದಲ್ಲಿ ಸೂರ್ಯನಿಗೆ ಬಲಿ ಅರ್ಪಿಸಬೇಕು. ಆ ಬಳಿಕ, ಮೊಸರನ್ನ, ಪಾಯಸ ತಂಬಿಟ್ಟು, ಕಡಬು ಮುಂತಾದ ನೈವೇದ್ಯ ಸಮರ್ಪಿಸಬೇಕು. ನೆಲಕ್ಕೆ ತಲೆಹಚ್ಚಿ ವಂದಿಸಬೇಕು. ಗಣಪತಿಯ ತಾಯಿ ಪಾರ್ವತಿಯನ್ನು ತಂದೆ ಈಶ್ವರನನ್ನು ಧೂಪ, ದೀಪ, ಗಂಧ, ಹೂವಿನ ಹಾರ, ನೈವೇದ್ಯಗಳಿಂದ ಪೂಜಿಸಿ, ದ್ವಿಜರಿಗೆ ಭೋಜನ ಮಾಡಿಸಬೇಕು. ಗುರುಗಳಿಗೆ ಜೋಡು ಬಟ್ಟೆ ದಾನ ನೀಡಬೇಕು. ಹೀಗೆ ಗಣಪತಿ ಪೂಜೆ ಮಾಡಿದನಂತರ ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಕೇತುಗಳೆಂಬ ನವಗ್ರಹಗಳನ್ನು ಸ್ಥಾಪಿಸಬೇಕು.

ತಾಮ್ರ, ಬೆಳ್ಳಿ, ರಕ್ತ ಚಂದನ, ಬಂಗಾರ, ಕಬ್ಬಿಣ, ಉಕ್ಕು, ಸೀಸ, ಹಿತ್ತಾಳೆ, ಶ್ರೀ ಗಂಧ ಮುಂತಾದವುಗಳಿಂದ ನವಗ್ರಹ ಪ್ರತಿಮೆಗಳನ್ನು ಮಾಡಿಸಿ ಆ ಗ್ರಹಗಳ ಬಣ್ಣಕ್ಕೆ ಅನುಸಾರವಾದ ವಸ್ತ್ರ ಹೂಗಳನ್ನು ಸಮರ್ಪಿಸಬೇಕು. ಗಂಧ, ಗುಗ್ಗುಳ, ದೀಪಗಳಿಂದ ಅರ್ಚಿಸಿ ಸೂರ್ಯಾದಿ ನವಗ್ರಹ ದೇವತೆಗಳಿಗೆಲ್ಲ ಚರು ಮಾಡಿ ಆಹುತಿ ನೀಡಬೇಕು. ಸೂರ್ಯನಿಗೆ 'ಆಕೃಷ್ಣೇನ ರಜಸಾ' ಎಂಬ ಮಂತ್ರ ಹೇಳಿ ಎಕ್ಕೆಯ ಕಟ್ಟಿಗೆಗಳಿಂದ ಸಮಿಧೆ ಮಾಡಿ, ಜೇನುತುಪ್ಪ, ಮೊಸರು, ತುಪ್ಪ, ಹಾಲಿನಿಂದ ಎಂಟುನೂರಾ ಇಪ್ಪತ್ತೆಂಟು ಆಹುತಿ ನೀಡಿ ಹೋಮ ಮಾಡಬೇಕು. ಇದರಂತೆ ಚಂದ್ರನಿಗೆ ಮುತ್ತುಗದ ಸಮಿಧೆಗಳಿಂದ ''ಇಮಂ ದೇವಾ'' ಎಂಬ ಮಂತ್ರ ಹೇಳಿ ಎಂಟು ನೂರಾ ಇಪ್ಪತ್ತೆಂಟು ಬಾರಿ ಜೇನುತುಪ್ಪ ಮೊಸರು, ತುಪ್ಪ ಹಾಲಿನಿಂದ ಆಹುತಿ ನೀಡಬೇಕು. ಮಂಗಳನಿಗೆ ಅಗ್ನಿರ್ಮೂರ್ಧಾ ''ಯುವಕಃ ಪುತ್ರಃ'' ಎಂಬ ಮಂತ್ರದಿಂದ ಖದಿರ ವೃಕ್ಷದ ಸಮಿಧೆಗಳಿಂದಲೂ ಬುಧನಿಗೆ ''ಉದ್ಬುಧ್ಯಸ್ವಾಹಾತಿ ಯದಯನ್'' ಎಂಬ ಮಂತ್ರದಿಂದ ಉತ್ತರಣೆ ವೃಕ್ಷದ ಸಮಿಧೆಗಳಿಂದಲೂ, ಗುರುವಿಗೆ 'ಅನ್ನಾತ್ಪರಿಸ್ರುತಃ' ಎಂಬ ಮಂತ್ರದಿಂದ ಹಿಪ್ಪಲಿಗಿಡದ ಸಮಿಧೆಗಳಿಂದಲೂ, ಶುಕ್ರನಿಗೆ 'ಶನ್ನೋದೇವಿ' ಮಂತ್ರದಿಂದ ಅತ್ತಿಗಿಡದ ಸಮಿಧೆಯುಪಯೋಗಿಸಿ, ಶನಿಗ್ರಹಕ್ಕೆ 'ಕಾಂಡಾತ್ಕಾಂಡಾತ್' ಎಂಬ ಮಂತ್ರದಿಂದ ಬನ್ನಿಗಿಡದ ಸಮಿಧೆಗಳಿಂದಲೂ ರಾಹು, ಕೇತುಗಳಿಗೆ ''ಕೇತುಮಕ್ರನ್ ಕೇತವಃ'' ಎಂಬ ಮಂತ್ರದಿಂದ ಹುಲ್ಲು ದೂರ್ವೆಗಳನ್ನೇ ಸಮಿಧೆ ಮಾಡಿಕೊಂಡು ತುಪ್ಪ, ಜೇನುತುಪ್ಪ, ಹಾಲು ಮೊಸರುಗಳಿಂದ ಎಂಟುನೂರಾ ಇಪ್ಪತ್ತೆಂಟು ಸಲ ಹೋಮ ಮಾಡಬೇಕು.

ನವಗ್ರಹಗಳಲ್ಲಿ ಒಂದೊಂದು ದೇವತೆಗೆ ಒಂದೊಂದು ಪಕ್ವಾನ್ನ ಇಷ್ಟವಾಗಿದ್ದು ಅದನ್ನು ನಿವೇದಿಸಿ ದ್ವಿಜರಿಗೆ ಊಟ ಮಾಡಿಸಬೇಕು. ಸೂರ್ಯನಿಗೆ ಸಕ್ಕರೆ, ಚಂದ್ರನಿಗೆ ಪಾಯಸ, ಮಂಗಳನಿಗೆ ತುಪ್ಪ, ಬುಧನಿಗೆ ಖೀರು, ಗುರುವಿಗೆ ಮೊಸರನ್ನ, ಶುಕ್ರನಿಗೆ ತುಪ್ಪ, ಶನಿಗೆ ಹಿಟ್ಟು. ರಾಹುವಿಗೆ ಮಾಂಸ,ಕೇತುವಿಗೆ ಚಿತ್ರಾನ್ನ ಇವುಗಳನ್ನು ನಿವೇದಿಸಿ ಆಯಾ ಜನರಿಗೆ ಕೊಟ್ಟು ಭೋಜನ ಮಾಡಿಸಬೇಕು. ಮತ್ತು ಆ ದೇವತೆಗಳಿಗೆ ಪ್ರಿಯವಾದ ಆಹಾರಪದಾರ್ಥ ದಾನನೀಡಬೇಕು. ಸೂರ್ಯನ ಪ್ರೀತಿಗಾಗಿ ಗೋದಾನ, ಚಂದ್ರನಿಗೆ ಶಂಖ, ಮಂಗಳನಿಗೆ ಕಂಬಳಿ, ಬುಧನಿಗೆ ಕುದುರೆ, ಗುರುವಿಗೆ ಜಿಂಕೆ, ಶುಕ್ರನಿಗೆ ಗೋವು, ಶನಿಗೆ ಕಬ್ಬಿಣ, ರಾಹು ಕೇತುವಿಗೆ ಆಡು ಪ್ರಿಯವಾದ ಪದಾರ್ಥವಾಗಿದ್ದು ಬಡವರಿಗೆ ದಕ್ಷಿಣಾ ರೂಪವಾಗಿ ಅವುಗಳನ್ನು ದಾನ ನೀಡಬೇಕು. ಹಾಗೂ ಒಂದೊಂದು ಸುವರ್ಣನಾಣ್ಯ ದಕ್ಷಿಣೆ ನೀಡಬೇಕು.

ಹೀಗೆ ಗಣಪತಿ ಹಾಗೂ ನವಗ್ರಹ ಪೂಜೆ ಮಾಡುವವನು ಕರ್ಮಸಾಫಲ್ಯ ಹೊಂದಿ ಐಶ್ವರ್ಯ ಹೊಂದುವನು. ಈ ಗ್ರಹ ಪೂಜೆಗಿಂತ ಮೊದಲು ಶುಭಕಾರ್ಯದಲ್ಲಿ ಮಾತೃ ಪೂಜೆ ಮಾಡಬೇಕು. 'ವಸೋಃ ಪವಿತ್ರಂ' ಎಂಬ ಮಂತ್ರದಿಂದ ಜಲಧಾರೆಯನ್ನು ಕಲ್ಪಿಸಿ ಗೌರಿ ಮುಂತಾದ ಮಾತೃ ದೇವತೆಗಳನ್ನು ಪೂಜಿಸಬೇಕು. ವೃದ್ಧಿಕರ್ಮಗಳಲ್ಲಿ ಗೌರೀ ಪದ್ಮಾ ಶಚೀ, ಮೇಧಾ ಸಾವಿತ್ರಿ, ವಿಜಯಾ, ಜಯಾ, ದೇವಸೇನಾ, ಸ್ವಧಾ, ಸ್ವಾಹಾ, ಮಾತೃಕಾ, ವೈಧೃತಿ, ಧೃತಿ, ಪುಷ್ಟಿ, ಹೃಷ್ಟಿ, ಎಂಬ ಹದಿನಾರು ಮಾತೃ ದೇವತೆಗಳನ್ನು ಗಣೇಶನನ್ನೂ, ಕುಲದೇವತೆಯನ್ನೂ ಪೂಜಿಸಬೇಕು. ಈ ಮಾತೃ ದೇವತೆಗಳಿಗೂ ಕುಲದೇವತೆಗೂ ಗಣಪತಿಗೂ ಷೋಡಶೋಪಚಾರ ಪೂಜೆ ಸಲ್ಲಿಸಬೇಕು.

**ಆವಾಹನಂ ತಥಾ ಪಾದ್ಯಂ ಮರ್ಘ್ಯಂ ಸ್ನಾನಂ ಚ ಚಂದನಂ ।**
**ಅಕ್ಷತಾಂ ಶ್ಚೈವ ಪುಷ್ಪಾಣಿ ಧೂಪಂ ದೀಪಂ ಫಲಾನಿ ಚ ॥**
**ನೈವೇದ್ಯಾಚಮನೀಯಂ ಚ ತಾಂಬೂಲಂ ಪೂಗಮೇವ ಚ ।**
**ನೀರಾಜನಂ ದಕ್ಷಿಣಾಂ ಚ ಕ್ರಮಾದ್ದದ್ಯಾಚ್ಚ ತುಷ್ಟಯೇ ॥**

ಈ ಮಾತೃ ದೇವತೆ ಮುಂತಾದವರ ಪ್ರೀತ್ಯರ್ಥವಾಗಿ, ಆವಾಹನೆ, ಪಾದ್ಯ, ಅರ್ಘ್ಯ ಸ್ನಾನ, ಗಂಧ, ಅಕ್ಷತೆ, ಹೂವು, ಧೂಪ, ದೀಪ, ಫಲ, ನೈವೇದ್ಯ, ಆಚಮನೀಯ, ಎಲೆ , ಅಡಿಕೆ, ಮಂಗಳಾರತಿ ಮತ್ತು ದಕ್ಷಿಣೆ ಎಂಬ ಷೋಡಶೋಪಚಾರಗಳನ್ನು ಕ್ರಮವಾಗಿ ಸಮರ್ಪಿಸಬೇಕು. ಸಂಪತ್ತು ಹಾಗೂ ಸಂತಾನಗಳನ್ನು ಬಯಸುವವರು ಮಾಡಬೇಕಾದ ಪಿತೃ ಕಲ್ಪವನ್ನು ಹೇಳುವೆನು. ಪಿತೃಗಳನ್ನು ಉದ್ದೇಶಿಸಿ ಮಾಡಿದ ಶ್ರಾದ್ಧಾದಿ ಕರ್ಮಗಳಿಂದ ಮನುಷ್ಯನು ಇಚ್ಛಿತ ವಾಂಛಿತಗಳನ್ನು ಹೊಂದುವನು. ಪಿತೃಶ್ರಾದ್ಧವನ್ನು ಅಮಾವಾಸ್ಯೆ, ಮಾರ್ಗಶಿರ, ಪುಷ್ಯ, ಮಾಘ, ಪಾಲ್ಗುಣ ಮಾಸಗಳ ಕೃಷ್ಣ ಪಕ್ಷದ ಅಷ್ಟಮಿ ಅಂದರೆ ಅಷ್ಟಕಾ ದಿನಗಳಲ್ಲಿ ಹಾಗೂ ವೃದ್ಧಿ, ಕೃಷ್ಣ ಪಕ್ಷದಲ್ಲಿ ಮಾಡುವದು ವಿಹಿತ. ಅಲ್ಲದೆ ಉತ್ತರಾಯಣ ಹಾಗೂ ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ ಮೇಷ ತುಲಾ ಸಂಕ್ರಮಣಗಳ ಪರ್ವಕಾಲ ದಲ್ಲಿಯೂ, ವ್ಯತೀಪಾತ, ಗಜಚ್ಛಾಯಾಯೋಗ ಸಂಧಿಸಿದಾಗ ಮಾಡಿದರೆ ಪುಣ್ಯ ಪ್ರಾಪ್ತಿ ಹೆಚ್ಚು. ಅದರಲ್ಲಿಯೂ ಸೂರ್ಯ ಚಂದ್ರಾದಿ ಗ್ರಹಣಗಳಲ್ಲಿ ಮಾಡಿದ ಶ್ರಾದ್ಧದಿಂದ ಪಿತೃಗಳಿಗೆ ಸಂತೃಪ್ತಿ ಬರುವದಲ್ಲದೆ ಮಾಡಿದವನ ಸಕಲ ಅಭೀಷ್ಟಗಳು ನೆರವೇರುತ್ತವೆ. ಪರಗತಿ ದೊರೆಯುತ್ತದೆ.

ಶ್ರಾದ್ಧಕ್ಕೆ ಆಮಂತ್ರಿಸಲು ಎಂತಹ ದ್ವಿಜರು ಬೇಕೆಂಬುದನ್ನು ಹೇಳುತ್ತೇನೆ ಕೇಳು. ಸಕಲ ವೇದ, ವೇದಾಂಗ ಪಾರಂಗತನಾದ ಬ್ರಹ್ಮಜ್ಞಾನಿಯಾದ ಯುವಕನು, ಸೋದರಿಯ ಪುತ್ರ, ಋತ್ವಿಕ್ಕು, ಅಳಿಯ, ಯಾಗ ಮಾಡಿದವನು, ಸೋದರಮಾವ, ಮಾವ, ಮಗಳ ಮಗ, ಶಿಷ್ಯ ಸಂಬಂಧಿಗಳಾದ ನೆಂಟರು, ತಪಸ್ವಿಗಳು, ಪಂಚಾಗ್ನಿ ವಿದ್ಯಾನಿಷ್ಠರಾದ ಬ್ರಾಹ್ಮಣರು, ಬ್ರಹ್ಮ ಚಾರಿಗಳು, ತಾಯಿ ತಂದೆ ಸೇವೆಯಲ್ಲಿ ತತ್ಪರರಾದವರೆಲ್ಲರೂ ಶ್ರಾದ್ಧದ ಆಮಂತ್ರಣಕ್ಕೆ ಅರ್ಹರಾಗಿದ್ದಾರೆ. ಇವರು ಮಾಡುವ ಭೋಜನದಿಂದ ಪಿತೃಗಳು ತೃಪ್ತರಾಗಿ ಶ್ರಾದ್ಧವು ಸಫಲವಾಗುವದು.

ಇನ್ನು ಶ್ರಾದ್ಧದ ಆಮಂತ್ರಣಕ್ಕೆ ಅನರ್ಹರಾದವನ್ನು ಸೂಚಿಸುತ್ತೇನೆ. ಅವರೆಂದರೆ ರೋಗಿ, ಅಂಗಹೀನರು, ಪುನರ್ವಿವಾಹದವಳ ಮಗ, ಧರ್ಮದ್ರೋಹಿ, ಪರಸ್ತ್ರೀ ಲೋಲುಪ ವ್ಯಭಿಚಾರಿಣಿಯಲ್ಲಿ ಜನಿಸಿದವ, ಹಣಕ್ಕಾಗಿ ವಿದ್ಯೆ ಮಾರುವ, ಗುರು ನಪುಂಸಕ ಕನ್ನೆಯನ್ನು

ದೂಷಿಸುವವನು, ಜನರಿಂದ ದೋಷಿಯೆಂದು ನಿರ್ಣಯಿಸಲ್ಪಟ್ಟ ವ್ಯಕ್ತಿ. ಅಣ್ಣನಿಗಿಂತ ಮೊದಲು ಮದುವೆ ಆದವನು ತಂದೆ ತಾಯಿಗಳನ್ನು ಪೋಷಿಸಲಾರದವನು, ತನ್ನ ಸೋದರಿ ಅಥವಾ ಮಗಳನ್ನು ಮಾರಿದವನು, ಕಳ್ಳನು, ವಿಹಿತ ಕರ್ಮಾನುಷ್ಠಾನ ಬಾಹಿರನು, ಸುಳ್ಳ ಚಾಡಿಕೋರ, ನೀಚ, ಪರಧರ್ಮೀಯ ಇವರೆಲ್ಲರೂ ಶ್ರಾದ್ಧದ ಭೋಜನಕ್ಕೆ ನಿಷಿದ್ಧರೆಂದು ಪರಿಗಣಿತರಾಗಿದ್ದಾರೆ. ಶ್ರಾದ್ಧ ಕರ್ಮ ಮಾಡುವ ಯಜಮಾನ ಅಥವಾ ಗೃಹಸ್ಥನು ಶ್ರಾದ್ಧದ ಹಿಂದಿನ ದಿನದಿಂದಲೇ ಜಿತೇಂದ್ರಿಯನಾಗಿದ್ದು ಗೌರವಾದರ ಗಳಿಂದ ಬ್ರಾಹ್ಮಣರನ್ನು ಆಮಂತ್ರಿಸಬೇಕು. ತನ್ನ ಶಕ್ತ್ಯಾನುಸಾರ ಇಬ್ಬರು ಅಥವಾ ಒಬ್ಬರನ್ನು ಇಲ್ಲವೇ ಮೂವರನ್ನು (ದ್ವಿಜರನ್ನು) ಶ್ರಾದ್ಧಕ್ಕೆ ಆಹ್ವಾನಿಸಬೇಕು. ಮಾತಾಮಹರಿಗೂ ಕೂಡ ಇದೇ ಪ್ರಕಾರ ಶ್ರಾದ್ಧ ಮಾಡಬೇಕು. ಶ್ರಾದ್ಧದ ಕಾಲಕ್ಕೆ ವಿಶ್ವದೇವತೆಗಳಿಗೆ ಹಸ್ತ ಪ್ರಕ್ಷಾಳನಕ್ಕಾಗಿ ನೀರನ್ನು ದರ್ಭೆಯನ್ನು ಕೊಟ್ಟು ಅವರ ಅಪ್ಪಣೆ ಪಡೆದ ಬಳಿಕ 'ವಿಶ್ವದೇವಾಸ'..ಎಂಬ ಮಂತ್ರದಿಂದ ಅವರನ್ನು ದ್ವಿಜರಲ್ಲಿ ಆವಾಹನೆ ಗೈಯಬೇಕು. ಅನಂತರ ಯವಾಕ್ಷತೆ ಹರಡಿ ಅದರ ಮೇಲೆ ಪವಿತ್ರ ಸಹಿತವಾಗಿ ಪಾತ್ರೆಯನ್ನಿಟ್ಟು ಅದರಲ್ಲಿ 'ಶನ್ನೋದೇವಿ' ಎಂಬ ಮಂತ್ರೋಚ್ಚಾರಗೈಯ್ದು 'ಯವೋಸಿ' ಎಂಬ ಮಂತ್ರದಿಂದ ಯವಗಳನ್ನು ಹಾಕಿ 'ಆಯಾದಿವ್ಯಾ' ಎಂಬ ಮಂತ್ರದಿಂದ ನೀರನ್ನು ಹಾಕಬೇಕು. ನೀರು, ಗಂಧ, ಹೂ ಇವುಗಳನ್ನು ಕೊಟ್ಟು ದೀಪ ಸಹಿತ ಅನ್ನವನ್ನು ಕೊಡಬೇಕು. ಅಪಸವ್ಯ ಮಾಡಿ ಅಪ್ರದಕ್ಷಿಣವಾಗಿ ಪರಿಷೇಚನ ಮಾಡಿ (ಪಿತೃಗಳನ್ನು ಉದ್ದೇಶಿಸಿ ) ವಿಶ್ವದೇವತೆಗಳಿಗೆ ಕೊಟ್ಟ ಎರಡರಷ್ಟು ದರ್ಭೆಯನ್ನು ಪಿತೃಗಳಿಗೆ ಪ್ರದಾನ ಮಾಡಬೇಕು. ''ಉಶಂತಸ್ತ್ವಾ'' ಎಂಬ ಮಂತ್ರೋಚ್ಚಾರದಿಂದ ಪಿತೃಗಳನ್ನು ಆವಾಹನೆ ಮಾಡಿ ಅನಂತರ ಎಳ್ಳಿನ ಅರ್ಘ್ಯ ನೀಡಿ ವಿಧ್ಯುಕ್ತವಾಗಿ ಪಿತೃಗಳಿಗೆ ಎರಡು ಪಾತ್ರೆಗಳನ್ನು ತಲೆಕೆಳಗೆ ಮಾಡಿ ಸ್ಥಾಪಿಸಬೇಕು.

ಬಳಿಕ 'ಪಿತೃಭ್ಯಃ ಸ್ಥಾನಮಸಿ'.. ಎಂಬಿತ್ಯಾದಿ ಮಂತ್ರ ಹೇಳುವಾಗ ಅದನ್ನು ಸರಿಯಾದ ಸ್ಥಿತಿಗೆ ಇಟ್ಟು ಅದರಲ್ಲಿ ಅನ್ನ ಹಾಕಿ ಅದನ್ನು ತೆಗೆದುಕೊಂಡು ಅಗ್ನಿ ಕರಣಕ್ಕೆ ಅಪ್ಪಣೆ ಪಡೆದು ಪಿತೃಯಜ್ಞದಂತೆ ಅಗ್ನಿಯಲ್ಲಿ ಹೋಮಗೈಯಬೇಕು. ಶೇಷಾನ್ನವನ್ನು ಎಲೆಗಳಲ್ಲಿ ಬಡಿಸಬೇಕು. ಅನಂತರ ಅನ್ನ ಪ್ರದಾನ ಗೈದು 'ಪುಥಿವೀ ಪಾತ್ರಂ' ಎಂಬ ಮಂತ್ರದಿಂದ ''ಇದಂ ವಿಷ್ಣುಃ'' ಎಂಬ ಮಂತ್ರೋಚ್ಚಾರಪೂರ್ವಕ ದ್ವಿಜನ ಹೆಬ್ಬೆರಳನ್ನು ಇಡಿಸಬೇಕು. ಈ ಪ್ರಕಾರ ವ್ಯಾಹೃತಿ ಮಂತ್ರ, ಗಾಯತ್ರಿ ಮಂತ್ರ ಮತ್ತು ಮಧುವಾತಾ ಮಂತ್ರಗಳನ್ನು ಅಂದಬಳಿಕ ದ್ವಿಜರಿಗೆ ಭೋಜನ ಮಾಡಲು ಪ್ರಾರ್ಥಿಸಿಕೊಳ್ಳಬೇಕು. ಅವರ ಊಟದ ಸಮಯದಲ್ಲಿ ಅವರಿಗೆ ಇಷ್ಟವಾದದ್ದನ್ನು ಯಥೇಚ್ಛವಾಗಿ ಉಣಬಡಿಸಿ ಅವರು ಸಂತೃಪ್ತವಾಗುವಂತೆ ಭೋಜನ ಮಾಡಿಸಬೇಕು. ಅವರು ಊಟ ಮಾಡಿದ ಎಲೆಯ ಮಗ್ಗುಲಲ್ಲಿ ಪಿತೃಯಜ್ಞದಂತೆ ಪಿಂಡಪ್ರದಾನ ಪೂರೈಸಬೇಕು. ಮಾತಾಮಹರಿಗೂ ಕೂಡ ಇದೇ ಪ್ರಕಾರ ಪಿಂಡಪ್ರದಾನ ಹೇಳಲಾಗಿದೆ. ಅವರ ಊಟವಾದ ನಂತರ 'ಸ್ವಸ್ತಿ'ವಾಚನ ಮಾಡಿಸಿ, ಅಕ್ಷಯೋದಕ ಬಿಟ್ಟು ಶಕ್ತಿಗೆ ಅನುಗುಣವಾಗಿ ತಾಂಬೂಲ ದಕ್ಷಿಣಾದಿಗಳನ್ನು ದ್ವಿಜರಿಗೆ ಕೊಡಬೇಕು. 'ಸ್ವಧಾ' ಮಂತ್ರೋಚ್ಚಾರಣೆಯ ಕಾಲಕ್ಕೆ ಸಕಲ ವಿಪ್ರೋತ್ತಮರಿಗೆ ಭಕ್ತಿಯಿಂದ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಸ್ವಧಾ ಹೇಳಿ ನಂತರ ಶ್ರಾದ್ಧದ ಕರ್ತನು ಪಿಂಡದ ಹತ್ತಿರ ನೀರನ್ನು ಹಾಕಬೇಕು.

ವಿಶ್ವೇದೇವಸ್ಥಾನದಲ್ಲಿ ಆವಾಹಿತರಾದ ವಿಪ್ರರು 'ಪ್ರೀಯಂತಾಂ ವಿಶ್ವೇದೇವಾಃ' ಎಂದು ಮಂತ್ರ ಹೇಳುವಾಗ ಶ್ರಾದ್ಧಮಾಡುವವನು ನಮಗೆ ದಾತೃಗಳು ವೇದ, ಸಂತಾನ ಸೌಲಭ್ಯಗಳು ಹೆಚ್ಚಾಗಲಿ, ಶ್ರದ್ಧೆಯು ನಮ್ಮಲ್ಲಿ ಇನ್ನೂ ಹೆಚ್ಚಾಗಲಿ ದಾನಮಾಡುವಂತಹ ಧನ, ಧಾನ್ಯ, ಸಂಪತ್ತುಗಳೆಲ್ಲ ನಮಗೆ ಹೆಚ್ಚಾಗಿ ದೊರೆಯಲ್ಲಿ ಎಂದು ಪ್ರಾರ್ಥಿಸಬೇಕು. ಅನಂತರ ದೇವತಾವಿಸರ್ಜನಕಾರ್ಯ ಮಾಡಬೇಕು. 'ವಾಜೇ ವಾಜೇ' ಎಂಬ ಮಂತ್ರದಿಂದ ಪಿತೃಗಳನ್ನು ಅಲ್ಲದೆ ವಿಶ್ವೇದೇವತೆಗಳನ್ನು ವಿಸರ್ಜನೆ ಮಾಡಬೇಕು. ಪಿತೃಗಳ ಅರ್ಘ್ಯಪಾತ್ರವನ್ನು ಎತ್ತಿ ಪ್ರದಕ್ಷಿಣೆಗೈದು ದ್ವಿಜರನ್ನು ವಿಸರ್ಜನೆ ಮಾಡಬೇಕು. ಅನಂತರ ಸಕಲ ಬಂಧು ಬಾಂಧವರೊಡನೆ ಕೂಡಿ ಆನಂದದಿಂದ ಊಟಮಾಡಬೇಕು. ಊಟದ ಆರಂಭದಲ್ಲಿ ಪಿತೃಶೇಷವನ್ನು ಭೋಜನ ಮಾಡಬೇಕು. ಏಕೋದ್ದಿಷ್ಟ ವಿಧಾನದ ಶ್ರಾದ್ಧದಲ್ಲಿ ಮೊಸರು, ಬೋರೇ ಹಣ್ಣು, ಯುವ ಸಹಿತವಾದ ಶಾಲ್ಯನ್ನದಿಂದ ಪಿಂಡ ಮಾಡುತ್ತಾರೆ. ಈ ವಿಧಾನದ ಶ್ರಾದ್ಧದಲ್ಲಿ ವಿಶ್ವೇದೇವತೆಗಳು. ಆವಾಹನೆ ಅಗ್ನೌಕರಣಗಳಿಲ್ಲ. ಅಲ್ಲದೆ ಒಬ್ಬ ದ್ವಿಜನಿದ್ದರೂ ಸಾಕು. ಒಂದೇ ದರ್ಭೆಯಿಂದ ನಿರ್ಮಿತವಾದ ಪವಿತ್ರದಿಂದ ಈ ಶ್ರಾದ್ಧದ ಕಾರ್ಯಗಳೆಲ್ಲ ಜರುಗುತ್ತವೆ. ಮತ್ತು ಪವಿತ್ರವನ್ನು ಎಲ್ಲವನ್ನು ಅಪಸವ್ಯ ರೀತಿಯಲ್ಲಿ ಮಾಡಬೇಕಾಗುತ್ತದೆ. ಏಕೋದ್ದಿಷ್ಟ ಶ್ರಾದ್ಧವು ಸಪಿಂಡೀಕರಣದವರೆಗೆ ಸ್ತ್ರೀಯರಿಗೂ ಕರ್ತವ್ಯವಾಗಿದೆ.

**ಸಪಿಂಡೀಕರಣವೆಂದರೆ** - ಮೃತನಾದ ಬಳಿಕ ಒಂದು ವರ್ಷವಾಗುವ ಪೂರ್ವದಲ್ಲಿ ಸಪಿಂಡೀಕರಣವನ್ನು ಮಾಡಿದ್ದಲ್ಲಿ ಅಂತಹವನಿಗೂ ಕೂಡ ವರ್ಷವಾಗುವವರೆಗೂ ಪ್ರತಿ ತಿಂಗಳೂ ತಪ್ಪದೆ ಆ ಬಳಿಕ ಪ್ರತಿವರ್ಷ (ಮೃತನಾದ ದಿನದಂದು) ಶ್ರಾದ್ಧ ಮಾಡಿ ದ್ವಿಜರಿಗೆ ಉದಕುಂಭದ ಜೊತೆಗೆ, ಅನ್ನದಾನ ಮಾಡಿದರೆ, ಅಕ್ಷಯ ಫಲ, ಹನ್ನೊಂದನೆಯ ದಿವಸ ಮೊದಲನೆಯದಾಗಿ ಇಂತಹ ಶ್ರಾದ್ಧಮಾಡುವದು ಶಾಸ್ತ್ರ ವಿಹಿತವೆನಿಸುತ್ತದೆ. ಎಲ್ಲ ಶ್ರಾದ್ಧಾದಿಕರ್ಮಗಳು ಪೂರೈಸಿದ ಬಳಿಕ ಪಿಂಡಗಳನ್ನು ಆಕಳು ಅಥವಾ ದ್ವಿಜರಿಗೆ ನೀಡಬೇಕು. ಒಂದು ವೇಳೆ ಸಾಧ್ಯವಾಗದಿದ್ದರೆ ಅಗ್ನಿ ಅಥವಾ ಜಲದಲ್ಲಿ ಬಿಡಬೇಕು. ದ್ವಿಜರನ್ನು ವಿಸರ್ಜನೆ ಮಾಡುವದಕ್ಕೆ ಮೊದಲು ದ್ವಿಜರು ಉಂಡ ಎಲೆಗಳನ್ನು ಶುದ್ಧಮಾಡಕೂಡದು. ಶ್ರಾದ್ಧದಲ್ಲಿ ನೀಡಲ್ಪಟ್ಟ ಮೊಸರು, ಹಾಲು, ಹಸುವಿನ ತುಪ್ಪ ಮುಂತಾದ ಹವಿಷ್ಯಾನ್ನದಿಂದ ಪಿತೃಗಳು ಒಂದು ತಿಂಗಳ ಪರ್ಯಂತ ಸಂತೃಪ್ತರಾಗಿ ಸುಖಿಸುವರು, ಅದರಲ್ಲೂ ಪಾಯಸದಿಂದ ಒಂದು ವರ್ಷಾವಧಿ ಸುಗ್ರಾಸಭೋಜನ ಉಂಡು ಪರಲೋಕದಲ್ಲಿ ಸುಖಿಸುವರು.

ಶ್ರಾದ್ಧದ ಫಲಾಫಲಗಳನ್ನು ಈಗ ವಿವರಿಸುತ್ತೇನೆ. ಕೇಳು.

ಭಾದ್ರಪದ ಕೃಷ್ಣ ಪಕ್ಷದ ಪಾಡ್ಯ ಹಾಗೂ ಚತುರ್ದಶಿಯನ್ನು ಬಿಟ್ಟು ಉಳಿದ ದಿನ ಶ್ರಾದ್ಧ ಮಾಡಿದವನು ಒಳ್ಳೆಯ ಸಂತಾನ, ವ್ಯವಹಾರದಲ್ಲಿ ಪ್ರಗತಿ, ವ್ಯಾಪಾರದಲ್ಲಿ ಲಾಭ, ಧನಲಾಭ, ಮುಂತಾದವುಗಳನ್ನು ಪಡೆಯುತ್ತಾನೆ. ಅದರಲ್ಲಿಯೂ ಮಖ ನಕ್ಷತ್ರದಿಂದೊಡಗೂಡಿದ ತ್ರಯೋದಶಿ ಶ್ರಾದ್ಧಾದಿ ಕರ್ಮಗೈಯುವವನಿಗೆ ಸಕಲ ಸಂಪತ್ತು ಸೌಭಾಗ್ಯ ದೊರಕುವದಲ್ಲದೆ ಉತ್ತಮಜಾತಿಯಲ್ಲಿ ಜನ್ಮವೆತ್ತುವ ಅರ್ಹತೆ ಬರುತ್ತದೆ. ಚತುರ್ದಶಿಯ ದಿನ ಶಸ್ತ್ರಾಸ್ತ್ರದಿಂದ ಮೃತರಾದವರ ಶ್ರಾದ್ಧಮಾಡಿದಲ್ಲಿ ಸರ್ವಭೋಗಾದಿ

ಗಳನ್ನು ಹೊಂದುತ್ತಾನೆ. ಕೃತ್ತಿಭರಣಿ ನಕ್ಷತ್ರದ ದಿನ ಶ್ರಾದ್ಧಾದಿ ಕರ್ಮನೆರವೇರಿಸಿದವನು ಸಂತಾನ, ಶಕ್ತಿ, ಬುದ್ಧಿಗಳನ್ನು ಪಡೆಯುತ್ತಾನಲ್ಲದೆ ವಿಪುಲ ಸಂಪತ್ತು, ಆರೋಗ್ಯ ಪಡೆಯುತ್ತಾನೆ. ಅವನ ದಾರಿದ್ರ್ಯ ಚಿಂತೆ, ಕಳವಳ, ಅಪಕೀರ್ತಿ, ಅಯೋಗ್ಯತೆಗಳು ನಾಶವಾಗುತ್ತವೆ. ಮುಂದೆ ಅವನು ಉತ್ತಮಗತಿಯನ್ನು ಹೊಂದುವನೆಂಬುದರಲ್ಲಿ ಸಂದೇಹವಿಲ್ಲ.

ಈ ರೀತಿಯಾಗಿ ಆದಿತ್ಯ ರುದ್ರವಸು ಎಂಬ ಶ್ರಾದ್ಧದ ದೇವತೆಗಳು ಗೃಹಸ್ಥನು ಮಾಡುವ ಭಕ್ತಿ ಪರಸ್ಪರವಾದ ಶ್ರಾದ್ಧಾದಿ ಕರ್ಮಗಳಿಂದ ಸಂತುಷ್ಟರಾಗುವದರಿಂದ ಪರಲೋಕದಲ್ಲಿರುವ ಶ್ರಾದ್ಧ ಮಾಡಿದವನ ಪಿತೃಗಳು ಅವನು ನೀಡಿದ ಅನ್ನೋದಕಗಳಿಂದ ಸಂತೃಪ್ತರಾಗಿ ಸುಖಿಸುತ್ತ ಹರಸುವರು. ಹೀಗೆ ಪರಮಸಂತೋಷ ಭರಿತರಾದ ಪಿತೃಗಣವು ಮನುಷ್ಯರಿಗೆ ಸಂಪತ್ತು ವಿದ್ಯೆ, ಸ್ವರ್ಗ ಮೋಕ್ಷಗಳೆಂಬ ನಾನಾ ವಿಧವಾದ ಸುಖಗಳನ್ನು ಮತ್ತು ರಾಜ್ಯ ಅಧಿಕಾರಗಳನ್ನು ಕೊಡುತ್ತಾರೆ.

ಈ ಪ್ರಕಾರವಾಗಿ ಪಿತೃಕಲ್ಪದ ವೈದಿಕ ತಂತ್ರ ಹಾಗೂ ಪುರಾಣಗಳಲ್ಲಿ ಉಕ್ತವಾದ ವಿಷಯವನ್ನು ಸಂಕ್ಷೇಪಿಸಿ ನಿರೂಪಿಸಲಾಗಿದೆ.

ಈ ಕಲ್ಪಾಧ್ಯಾಯವನ್ನು ಇದರಲ್ಲಿ ಬಿತ್ತರಗೊಂಡ ವಿಷಯವನ್ನು ಒಳ್ಳೆ ಭಕ್ತಿಯಿಂದ ಶ್ರವಣ ಮಾಡಿದವನ್ನು ಅಥವಾ ಮನನ ಮಾಡಿದವನು ಇಹದಲ್ಲಿ ಸರ್ವ ವಿಧದ ಸುಖಭೋಗಗಳನ್ನು ಹೊಂದಿ, ಪರಲೋಕದ ಸದ್ಗತಿ ಹೊಂದುವದು ನಿಶ್ಚಿತ. ಅದರಲ್ಲೂ ವಿಶೇಷವಾಗಿ ಶ್ರಾದ್ಧ ಕರ್ಮಾದಿಗಳ ಅನುಷ್ಠಾನಗೈಯುವಾಗ ಈ ಅಧ್ಯಾಯವನ್ನು, ಮನನ ಅಥವಾ ಶ್ರವಣ ಮಾಡುವ ಪುಣ್ಯಜೀವಿಗಳು ಇಹದಲ್ಲಿ ಸರ್ವತಾಪತ್ರಯಗಳಿಂದ ಮುಕ್ತರಾಗಿ ಸುಖ ಸೌಭಾಗ್ಯ ಹೊಂದಿ ಸಕಲ ವಾಂಛಿತಾರ್ಥಗಳನ್ನು ಅನುಭವಿಸಿ, ನಂತರ ಪರಲೋಕದಲ್ಲಿ ಸಂಚಿತ ಪುಣ್ಯ ಪ್ರಭಾವದಿಂದ ಪರಮಸದ್ಗತಿಯನ್ನು ಪಡೆಯುತ್ತಾರೆ.

ಈ ವರೆಗೆ ಶ್ರಾದ್ಧ ಕಲ್ಪವನ್ನು ಸಂಕ್ಷೇಪವಾಗಿ ನಿರೂಪಿಸಿದೆ. ಇನ್ನು ಮುಂದೆ ವೇದಗಳಿಗೆ ಆಧಾರವಾಗಿರುವ ಹಾಗೂ 'ಮುಖ'ವೆಂದು ತಿಳಿಯಲ್ಪಡುವ ವ್ಯಾಕರಣವನ್ನು ನಿನಗೆ ಸಂಕ್ಷೇಪವಾಗಿ ವಿವರಿಸುತ್ತೇನೆ ಸಾವಧಾನದಿಂದ ಕೇಳು.

*ನಾರದ ಮಹಾಪುರಾಣದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿದುದು*

—o—

**ಸನಂದನ** :- ವ್ಯಾಕರಣವು ವೇದಗಳಿಗೆ ಮುಖ. ಶಾಸ್ತ್ರಗಳಿಗೆ ಪ್ರಮುಖ. ವ್ಯಾಕರಣ ಶಾಸ್ತ್ರದಿಂದ ಸಿದ್ಧವಾದ ರೂಪಗಳ ಸೆಲೆ ಹಾಗೂ ನೆಲೆ ವೇದಗಳಾಗಿರುತ್ತವೆ. ಆದುದರಿಂದ ವೇದದ ಯಥಾರ್ಥಜ್ಞಾನವಾಗಲು ವ್ಯಾಕರಣವು ಅತ್ಯಾವಶ್ಯಕ.

**ಸುಪ್‌ತಿಙಂತಂ ಪದಂ ವಿಪ್ರ ಸುಪಾಂ ಸಪ್ತ ವಿಭಕ್ತಯಃ ॥**
**ಸ್ವೌಜಸಃ ಪ್ರಥಮಾ ಪ್ರೋಕ್ತಾ ಸಾ ಪ್ರಾತಿಪದಿಕಾತ್ಮಿಕಾ ॥**

ನಾರದನೆ, ನಾಮಪದ ಮತ್ತು ಕ್ರಿಯಾಪದವಾದುದು ಪದವೆನಿಸುತ್ತದೆ. ಸುಪ್ ಭಕ್ತಿಗಳು ಏಳು ಸು ಔ ಎಂಬುದು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಹೇಳಲಾಗಿದೆ. ಅಲ್ಲದೆ ಅದು ಪ್ರಾತಿಪದಿಕಾರ್ಥವನ್ನು ಹೇಳುತ್ತದೆ. ಲಿಂಗಾದಿಗಳು ಕರ್ಮ ಕರ್ತೃ ಇವು ಉಕ್ತವಾದಾಗ ಸಂಬೋಧನಾರ್ಥದಲ್ಲಿಯೂ ಪ್ರಥಮಾವಿಭಕ್ತಿಯು ಬರುವದುಂಟು. ಆಗ ಅದು ಸಂಬೋಧನ ಪ್ರಥಮಾ ಎಂದು ತಿಳಿಯಲ್ಪಡುತ್ತದೆ. ಪ್ರಾತಿಪದಿಕವೆಂದರೆ - ಧಾತು ಮತ್ತು ಪ್ರತ್ಯಯವಲ್ಲದ ಅರ್ಥಬೋಧಕ ಶಬ್ದ ಅಮ್, ಔಟ್, ಶಸ್ ಎಂಬುದು ದ್ವಿತೀಯಾ ವಿಭಕ್ತಿ ಪ್ರತ್ಯಯವು. ಯಾವದನ್ನು ಮಾಡುತ್ತೇವೆಯೋ ಅದಕ್ಕೆ ಕರ್ಮಪದವೆಂದು ಭಾವಿಸುತ್ತಾರೆ. ವಾಡಿಕೆಯಾಗಿ ಕರ್ಮಪದವು ದ್ವಿತೀಯಾ ವಿಭಕ್ತಿಯನ್ನು ಹೊಂದಿರುತ್ತದೆ. ಅಲ್ಲದೆ 'ಅಂತರಾ' 'ಅಂತರೇಣ' ಎಂಬ ಶಬ್ದಗಳು ಬಂದಾಗ ದ್ವಿತೀಯಾ ವಿಭಕ್ತಿ ಬಂದಿರುತ್ತದೆ. 'ಟಾ, ಭ್ಯಾಂ, ಬಿಸ್' ಎಂಬುದು ತೃತೀಯಾ ವಿಭಕ್ತಿ ಪ್ರತ್ಯಯವು, ತೃತೀಯಾ ವಿಭಕ್ತಿಯು ಕರಣ, ಹಾಗೂ ಕರ್ತೃ ಎಂಬ ಅರ್ಥ ಸೂಚಕವಾಗಿರುತ್ತದೆ. ಕರಣವೆಂದರೆ ಸಾಧನವಾದದ್ದು, ಕಾರ್ಯಮಾಡುವದೇ ಕರ್ತೃವೆನಿಸುವದು ಙೇ, ಭ್ಯಾಂ ಭ್ಯಸ್ ಎಂಬುವುಗಳು ಚತುರ್ಥೀ ವಿಭಕ್ತಿ ಪ್ರತ್ಯಯಗಳಾಗಿದ್ದು ಇದು ಸಂಪ್ರದಾನ ಕಾರಕವಾಗಿದೆ.

**ಸಂಪ್ರದಾನವೆಂದರೆ** - ಸಾಲಕೊಟ್ಟವನೂ, ರುಚ್ಯಾದಿಧಾತು ಪ್ರಯೋಗವಿದ್ದಲ್ಲಿ ಕರ್ತೃವೂ ದಾನ ತೆಗೆದುಕೊಳ್ಳುವವನೂ ಸಂಪ್ರದಾನ ಎನಿಸುವರು ''ಙಸಿ, ಭ್ಯಾಂ, ಭ್ಯಸ್'' ಇವು ಪಂಚಮೀ ವಿಭಕ್ತಿ ಪ್ರತ್ಯಯಗಳೆಂದು ಗುರುತಿಸಿದ್ದಾರೆ. ಇದು ಸಾಮಾನ್ಯವಾಗಿ ಅಪಾದಾನ ಕಾರಕವಾಗಿದೆ. ಯಾವುದರಿಂದ ವಿಭಕ್ತವಾಗುತ್ತದೆಯೋ ಅಂದರೆ ಬೇರೆಯಾಗುತ್ತದೆಯೋ ಅದು ಅಪಾದಾನ. ಎಲೆಯು ಗಿಡದಿಂದ ಬೀಳುವಾಗ ಅದರಿಂದ ಬೇರೆಯಾಗುವದು. ಆಗ ಗಿಡದಿಂದ ಅಪಾದಾನವೆನಿಸುತ್ತದೆ. ಅಲ್ಲದೆ ಯಾರಿಂದ ತೆಗೆದುಕೊಳ್ಳುವನೋ ಅಥವಾ ನಿವಾರಿಸುವನೋ ಅವನು ಕೂಡ ಅಪಾದಾನವೆನಿಸುವನು. ಆದರಂತೆ ಷಷ್ಠಿ ವಿಭಕ್ತಿ ಪ್ರತ್ಯಯಗಳು ಸ್ವಾಮಿ ಭೃತ್ಯ ಭಾವದ ಸೂಚಕವಾಗಿದ್ದು 'ಙಸ್, ಓಸ್, ಆಮ್' ಎಂದು ಪ್ರತ್ಯಯಗಳಿಂದ ಒಡಗೂಡಿವೆ.

ಇವುಗಳು ಪರವಾದರೆ ಅಧಿಕರಣಾರ್ಥ ತೋರಿಸುತ್ತವೆ. ಅಧಿಕರಣವೆಂದರೆ ಆಶ್ರಯ. ರಕ್ಷಾರ್ಥಕ ಧಾತುವನ್ನು ಪ್ರಯೋಗಿಸಿದಾಗ ಭಯೋತ್ಪಾದಕ ಚೋರಾದಿಗಳು ವಾರಣಾರ್ಥಕ ಧಾತುಯೋಗವಿದ್ದಲ್ಲಿ ಇಷ್ಟವಸ್ತುವೂ, ಬೇಡವಾದದ್ದು. ಅಪಾದನವೆಂದು

ಬಣ್ಣಿಸಲಾಗಿದೆ. ಮೇಲಾಗಿ ಪರಿ ಅಪ ಆಜ ಇತರ ಅನ್ಯ ದಿಕ್ ಶಬ್ದ ಮುಂತಾದವುಗಳು ಪರವಾದಲ್ಲಿ ಪಂಚಮೀ ವಿಭಕ್ತಿಯನ್ನು ಉಪಯೋಗಿಸ ಬೇಕಾಗುತ್ತದೆ. ಕರ್ಮವು ಪ್ರವಚನೀಯವೆನಿಸಿದ ಶಬ್ದಗಳು ಮತ್ತು ಅಂತರಾ, ಅಂತರೇಣ ಎಂಬ ಶಬ್ದಗಳು ಬಂದಾಗ ದ್ವಿತೀಯಾ ವಿಭಕ್ತಿ ಉಪಯೋಗಿಸುವದು ಸೂಕ್ತವಾದದ್ದು.

ಜ್ಞಾಪಕ, ಧರ್ಮದ ವಿಶೇಷಾರ್ಥ ಹೊಂದಿರುವ ಅರ್ಥ ಇವುಗಳ ವಿಚಾರವಿದ್ದಲ್ಲಿ ಅನು, ಪರಿ, ಪ್ರತಿ ಇವು ಮತ್ತು ಭಾಗವೆಂಬರ್ಥವನ್ನು ಕೊಡಲಾರದ ಲಕ್ಷಣಾದಿಗಳಲ್ಲಿರುವ ಅಭಿ ಎಂಬುದು, ಸಹಿತ ಎಂಬರ್ಥವನ್ನು ಹೇಳುವ ಅನು ಎಂಬುದು, ಹೀನ ಎಂದು ಅರ್ಥ ಹೇಳುವ ಉಪ ಎಂಬುದು ಕೂಡ ಕರ್ಮಪ್ರವರ್ಚನೀಯ ಎಂಬ ಅರ್ಥವನ್ನು ಹೊಂದುವವು. ಮಾರ್ಗದಿಂದ ಬೇರೆಯಾದ ಹೋಗುವ ಕಾರ್ಯವನ್ನು ಗಮನ ಬೋಧಕವಾದ ಕ್ರಿಯಾಪದದೊಡನೆ ಪ್ರಯೋಗಿಸುವಾಗ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಯೊಡನೆ ಪ್ರಯೋಗಿಸಬೇಕು. ಪ್ರಾಣಭಿನ್ನವಾದ ಮನು ತಿಳಿ ಎಂಬ ಅರ್ಥ ಬೋಧಕವಾದ ದಿವಾದಿಗಣದಲ್ಲಿ ಪಠಿತವಾದ ಧಾತುವಿನಿಂದ ಹೇಳಲ್ಪಟ್ಟ ಕ್ರಿಯೆಯ ಕರ್ಮವು ತಿರಸ್ಕಾರದ ವಿಷಯವಾದಾಗ ದ್ವಿತೀಯಾ ಅಥವಾ ಚತುರ್ಥಿ ವಿಭಕ್ತಿಯನ್ನು ಹೊಂದುತ್ತದೆ.

ನಮಃ ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ ವಷಟ್ ಈ ಶಬ್ದ ಬಂದಾಗ ಮತ್ತು ತಾದರ್ಥ್ಯ ವಿವಕ್ಷಿತವಾದಾಗ ಚತುರ್ಥೀ ವಿಭಕ್ತಿಯನ್ನು ಪ್ರಯೋಗಿಸಬೇಕು. ತುಮುನ್ ಪ್ರತ್ಯಯಾರ್ಥವನ್ನು ಹೇಳುವ ಘ ಇೌಇ ಮುಂತಾದ ಭಾವಾರ್ಥಕ ಪ್ರತ್ಯಯಾಂತ ಶಬ್ದಗಳ ಮೇಲೆ ಚತುರ್ಥಿ ವಿಭಕ್ತಿಯು ಬರುತ್ತದೆ. ಸಹಿತ ಎಂಬ ಅರ್ಥ ವಿವಕ್ಷಿತವಾದಾಗ ಅಮುಖ್ಯವಾದ ವಿಶೇಷಣದ ಮೇಲೆ ತೃತೀಯಾ ವಿಭಕ್ತಿಯು ಬರುತ್ತದೆ. ಸಮಾನ ಕಾಲಿಕವಾದ ಎರಡು ಕ್ರಿಯೆಗಳನ್ನು ಬೋಧಿಸುವಾಗ ಆ ಕ್ರಿಯೆಯ ಕರ್ತೃ ಪದದ ಮೇಲೆ ಸಪ್ತಮಿ ವಿಭಕ್ತಿಯು ಬರುತ್ತದೆ. ಸ್ವಾಮಿ, ಈಶ್ವರ ಅಧಿಪತಿ, ಸಾಕ್ಷಿ,ದಾಯಾದ, ಪ್ರಸೂತ ಈ ಶಬ್ದಗಳು ಬಂದಾಗ ಷಷ್ಠೀ ವಿಭಕ್ತಿ ಪ್ರತ್ಯಯ ಬಳಸುತ್ತಾರೆ. ಅಲ್ಲದೆ ಒಂದು ಸಮೂಹದಿಂದ ಬೇರೆ ಮಾಡಿದ ಎಂದರ್ಥ ಹೇಳುವಲ್ಲಿ ಸಮೂಹವಾಚಕ ಪದದ ಮೇಲೆ ಷಷ್ಠೀ ಮತ್ತು ಸಪ್ತಮೀ ಈ ಎರಡು ವಿಭಕ್ತಿ ಪ್ರತ್ಯಯಗಳನ್ನು ಪ್ರಯೋಗಿಸುವುದು ವಾಡಿಕೆ. ಹೇತು ಶಬ್ದದಿಂದ ಕಾರಣವನ್ನು ಸೂಚಿಸುವುದಿದ್ದಲ್ಲಿ ಅದನ್ನು ಷಷ್ಠೀ ವಿಭಕ್ತಿ ಪ್ರಯೋಗದಿಂದ ಸೂಚಿಸಬೇಕು.

ಸ್ಮರಣಕಾರ್ಯದಲ್ಲಿ ಮತ್ತು ಕೃಧಾತ್ವರ್ಥ ಗುಣಾಧಾನವು ವಿವಕ್ಷಿತವಾದಾಗ ಕೃತಿ ಕರ್ಮದ ಮೇಲೂ ಷಷ್ಠೀ ವಿಭಕ್ತಿಯು ಬರುವದು. ಹಿಂಸಾರ್ಥ ಹೇಳುವ ಧಾತು ಯೋಗವಿದ್ದಲ್ಲಿ ಅದರ ಕರ್ಮದಲ್ಲಿ ಷಷ್ಠೀ ವಿಭಕ್ತಿಯು ಬರುವದು. ಕೃದಂತ ಸಮವಧಾನವಿರುವೆಡೆಯಲ್ಲಿ ಕರ್ತೃ ಕರ್ಮವಾಚಕಗಳ ಮೇಲೆ ಷಷ್ಠೀ ವಿಭಕ್ತಿಯು ಬರುತ್ತದೆ. ನಿಷ್ಠಾದಿ ಪ್ರತ್ಯಯಾಂತ ಶಬ್ದ ಪ್ರಯೋಗವಿದ್ದಲ್ಲಿ ಕರ್ತೃ ಅಥವಾ ಕರ್ಮಕ್ಕೆ ಷಷ್ಠೀ ವಿಭಕ್ತಿ ಬರುವುದಿಲ್ಲ. ಈ ಶಬ್ದಗಳು ಸುಬಾದಿ ವಿಭಕ್ತ್ಯಂತಗಳಾಗಿಯೂ, ಭೂವಾದಿ ಧಾತುಗಳ ಮೇಲೆ ತಿಙ್ ಮೊದಲಾದವುಗಳು ಬಂದ ತಿಙಂತಗಳಾಗಿಯೂ ಎರಡು ವಿಧಗಳಾಗಿವೆ. ಧಾತುವಿನ ಮೇಲೆ ಬರತಕ್ಕ ಲಕಾರಗಳು ಹತ್ತು ವಿಧವಾಗಿದೆ. ಪ್ರತ್ಯಯಗಳನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಪ್ರತ್ಯಯಗಳು ಧಾತುಗಳಿಗೆ ಹೊಂದಿದಾಗ ಪದಪ್ರತ್ಯಯಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಎರಡು ವಿಧ-

ಪರಸ್ಮೈಪದ, ಹಾಗೂ ಆತ್ಮನೇಪದಗಳೆಂದು. ಪರಸ್ಮೈಪದಗಳು-ಪ್ರತ್ಯಯಗಳು ಪ್ರಥಮ ಪುರುಷದಲ್ಲಿ ತಿಪ್ ತಸ್ ಅಂತಿ ಎಂಬುವದಾಗಿಯೂ ಮಧ್ಯಮ ಪುರುಷದಲ್ಲಿ ಸಿಪ್ ಥಸ್, ಥ ಎಂತಲೂ ಉತ್ತಮ ಪುರುಷದಲ್ಲಿ ಮಿಪ್,ವಸ್, ಮಸ್ ಎಂತಲೂ ಕ್ರಮದಿಂದ ಏಕವಚನ, ದ್ವಿವಚನ ಬಹುವಚನಗಳಲ್ಲಿ ಬರುತ್ತವೆ.

ಇದರಂತೆ ಆತ್ಮನೇ ಪದದಲ್ಲಿಯೂ ತೇ ಆತೇ ಅಂತೇ ಎಂಬುದು ಪ್ರಥಮ ಪುರುಷದಲ್ಲಿಯೂ ಸೇ ಅಥೇ ಧ್ವೇ ಎಂದು ಮಧ್ಯಮ ಪುರುಷದಲ್ಲಿ ಮತ್ತು ಏ, ವಹೇ ಮಹೇ ಎಂಬುದು ಉತ್ತಮ ಪುರುಷದಲ್ಲಿ ಬರುತ್ತದೆ. ಇವೆಲ್ಲವೂ ವರ್ತಮಾನ ಕಾಲದ (ಲಟ್) ಪ್ರತ್ಯಯಗಳು ಹೀಗೆ ಅಜಾದಿಗಳಲ್ಲಿ ಬೇರೆ ಪ್ರತ್ಯಯಗಳು ಬರುತ್ತವೆ.

ಸಾಮಾನ್ಯ ನಾಮಪದವನ್ನು ಪ್ರಯೋಗಿಸಿದರೆ ಪ್ರಥಮ ಪುರುಷವಾಗುವದು. ಯುಷ್ಮಚ್ಛಬ್ದವನ್ನು ಉಪಯೋಗಿಸಿದಾಗ ಮಧ್ಯಮಪುರುಷವೂ ಅಸ್ಮಚ್ಛಬ್ದವನ್ನು ಕರ್ತೃವಾಗಿ ಪ್ರಯೋಗಿಸಿದಾಗ ಉತ್ತಮ ಪುರುಷವೂ ಆಗುವುದೆಂದು ತಿಳಿಯಬೇಕು. ಸಾಮಾನ್ಯವಾಗಿ ಭೂ, ವಾ ಹಾಗೂ ಸನ್ ಮುಂತಾದ ಪ್ರತ್ಯಯಾಂತ ವಾದವುಗಳು ಸಹ ಧಾತುಗಳಾಗುತ್ತವೆ. ವರ್ತಮಾನದ ಅರ್ಥದಲ್ಲಿ ಲಟ್ ಅರ್ಥ ರಾತ್ರಿಯ ಹಿಂದೆ ನಡೆದ ವಿಷಯವನ್ನು ಕುರಿತು ಹೇಳುವಾಗ ಮತ್ತು ಮಾ, ಸ್ಮ ಇವುಗಳ ಪ್ರಯೋಗ ಇದ್ದಾಗಲೂ ಲಜ ಎಂಬ ಲಕಾರಗಳನ್ನು ಉಪಯೋಗಿಸಬೇಕು. ಆಶೀವರ್ಚನ ನುಡಿಯುವಾಗ ಧಾತುಗಳ ಮುಂದೆ ಲೋಟ್ ಪ್ರಯತ್ನವು ಬರುತ್ತದೆ. ವಿಧಿ ಹಾಗೂ ಆಶೀರ್ವಾದ ಇವೆರಡರ ಅರ್ಥದಲ್ಲಿ ಹೇಳುವಾಗ ಲಿಙ್ ಪ್ರತ್ಯಯವು ಪರವಾಗುತ್ತದೆ. ಆದುದರಿಂದ ವಿಧಿಲಿಙ್ ಆಶೀರ್ಲಿಙ್ ಎಂದು ಎರಡು ರೀತಿಯಿಂದ ಹೇಳುತ್ತಾರೆ. ಪರೋಕ್ಷ ವೃತ್ತಾಂತ ಹೇಳುವಾಗ ಲಿಟ್ ಪ್ರತ್ಯಯಾಂತ ಕ್ರಿಯಾಪದವನ್ನು, ನಾಳೆ ಜರಗುವ ಘಟನೆಯನ್ನು ಹೇಳುವದಿದ್ದಾಗ ಲುಡಂತ ಕ್ರಿಯಾಪದವನ್ನೂ ಪ್ರಯೋಗಿಸುತ್ತಾರೆ. ಭವಿಷ್ಯತ್ ಕಾಲದ ವಿಚಾರದಲ್ಲಿ ಲೃಟ್ ಪ್ರತ್ಯಯವು ಬರುವುದುಂಟು. ಭೂತಾರ್ಥದಲ್ಲಿ ಲುಙ್ ಪ್ರತ್ಯಯವೂ ಕ್ರಿಯೆಯು ನಿಷ್ಪತ್ತಿ ಆಗದಿರುವಾಗ ಲೃಙ್ ಪ್ರತ್ಯಯದ ಬಳಕೆ ಸೂಕ್ತ. ಇನ್ನು ಅರ್ಥ ವಿಶೇಷದಿಂದ ಬೋಧಿಸುವ ಶಬ್ದವನ್ನು ಅವ್ಯವಹಿತವಾಗಿ ಸೇರಿಸುವದರಿಂದ ಸಿದ್ಧವಾಗುವ ಶಬ್ದರೂಪಗಳನ್ನು ಹೀಗೆ ಹೇಳಬಹುದಾಗಿದೆ. ದಂಡಾಗ್ರಂ, ದಧೀಗ್ರಂ ಮಧೂದಕಂ ಸೇಯಂ, ಮನಿಯೂ ತವಲ್ಕಾರಂ ಸೌಕರಃ ವಧ್ವಾಸನಂ, ಪಿತ್ರರ್ಥಃ ಲವನಃ ವಿಷ್ಣೇಷ ಹರೇವ, ವಿಷ್ಣೋವ ಇತ್ತೇವ -ಇವು ವಿಹಿತ ರೀತಿಯಿಂದ ಸಂಧಿಯಾಗಿ ಸಿದ್ಧವಾದ ಶಬ್ದರೂಪಗಳಾಗಿವೆ. ಪಾಣಿನೀ ಸೂತ್ರದ ಪ್ರಕಾರ ಅವಶ್ಯ ಶಬ್ದ ಸಂಬಂಧಿಯಾದ ಮಕಾರದಿಂದ ಮುಂದಿನ ಈಕಾರಗಳು ಹಾಗೂ ಊಕಾರಗಳ ಪ್ರಗೃಹ್ಯವೆಂಬ ಸಂಜ್ಞೆ ಪಡೆದು, ಹೊಂದಿ ಸಂಧಿಯಾದ ಮೇಲೆ ಪರಿವರ್ತಿತವಾಗದೆ ಯಥಾಪೂರ್ವವತ್ ಇರುತ್ತವೆ. ಆದಕ್ಕೆ/ಪ್ರಕೃತಿ ಭಾವಸಂಧಿ ಎಂದು ಹೆಸರಿಸಿದ್ದಾರೆ. ಅಮೀಅಘಾಃ ವಿಷ್ಣೂಇಮೌ, ನೋ ಅರ್ಮನಃ ಮುಂತಾದವುಗಳನ್ನು ಉದಾಹರಿಸಬಹುದಾಗಿದೆ. ಷಡತ್ರ ವಾಗ್ಪುರಃ ಹರಿಃ ಶೇತೇ ಪ್ರಶ್ನಃ (ಪ್ರಚ್ಛ ಎಂಬ ಧಾತುವಿನ ಛ್ಚಕಾರಕ್ಕೆ ಶಕಾರ ಆದೇಶವಾಗಿ ನಙ್ ಪ್ರತ್ಯಯ ಸೇರಿ ಪ್ರಶ್ನೆ ಎಂಬ ರೂಪವು ಸಿದ್ಧವಾಗಿದೆ. ಅದರಂತೆ ಭವಾನ್ಷಷ್ಠಃ ತಲ್ಲೇಪಃ ಭವಾನ್‌ಶೌರಿಃ ಎಂದೂ ಉದಾಹರಿಸ ಬಹುದಾಗಿದೆ. ಅದರಂತೆ ಗಜ್ಛಾಯಾ, ಕೃಷ್ಣಂ ವಂದೇ ತೇಜಾಂಸಿ ಅವರಕ್ಷಿವಃ ಎಂಬಿತ್ಯಾದಿ

ಉದಾಹರಿಸಬಹುದು. ಅಷ್ಟೇ ಅಲ್ಲದೆ ವಿಷ್ಣುರ್ನಮ್ಯಃ ರವಿರಯಂ ಫಲಂ ಭೋವಷಃ ಹರಿಸ್ಸಥಾ ಈ ರೀತಿಯಾಗಿ ಇನ್ನೂ ಅನೇಕ ಪದಗಳನ್ನು ಸೇರಿಸಿ ಸಂಧಿ ಮಾಡಿದ ಬಳಿಕ ಸಿದ್ಧವಾಗುವ ರೂಪಗಳನ್ನು ವಿವರಿಸಬಹುದು.

'ರಾಮೇಣ' ಇತ್ಯಾದಿ ಎರಡು ಪದಗಳು ಸಿದ್ಧರೂಪ ಶಬ್ದಗಳನ್ನು ಕೂಡಿಸಿ ಹೇಳುವದಕ್ಕೆ ಸಮ್ಯಕ್ ಉದಾಹರಣೆಯಾಗಿದೆಯಷ್ಟೆ. ಅಂದರೆ - ರಾಮನಿಂದ ಹೇಳಲ್ಪಟ್ಟರುವದನ್ನು ಮಾಡುವೆನು. ಯಾವಾಗಲೂ ರಾಮನನ್ನು ಶ್ರದ್ಧಾಪೂರ್ವಕ ಭಜಿಸುವೆನು ಇಲ್ಲವೆ ಅರ್ಚಿಸುವೆನು. ನನ್ನ ಪಾಪಗಳೆಲ್ಲ ರಾಮನಿಂದ ಪರಿಹೃತವಾಗಲಿ ರಾಮನೆ ನಿನಗೆ ವಂದನೆ. ನಾನು ರಾಮನ ದಾಸಾನುದಾಸ. ಅವನಿಂದಲೇ ನನಗೆ ಮೋಕ್ಷ ಲಭಿಸಬೇಕೆಂದು ಇಚ್ಛಿಸುತ್ತೇನೆ. ನನ್ನ ಮನಸ್ಸು ಆತ್ಮಗಳೆಲ್ಲ ಅವನಲ್ಲಿ ಉದಾರವಾದ ಪ್ರೀತಿಯನ್ನು ಹೊಂದಲಿ ರಾಮನೇ ನಿನಗೆ ನಮಸ್ಕಾರ.

**ರಾಮಾನ್ಮುಕ್ತಿರಭೀಪ್ಸಿತಾ ಮಮಸದಾ ರಾಮಸ್ಯ ದಾಸೋಸ್ಮ್ಯಹಂ ॥**
**ರಾಮೇರಂಜತು ಮೇ ಮನಃ ಸವಿಶದಂ ಹೇ ರಾಮ ತುಭ್ಯಂ ನಮಃ॥**

ಸರ್ವ ಮುಂತಾದ ಶಬ್ದಗಳು ಗೋಪಾ, ಪತಿಃ ಹರಿಃ ಭಾನಃ ಸ್ವಯಂಭೂಃ ಕರ್ತಾರಃ ನೌಃ ಸಾಮ್ರಾಟ್, ಚತ್ವಾರಃ ರಾಜಾಃ ಪಂಥಾಃ ಮನಃ ವಟುಃ ಸಃ. ಪುತ್ಯಡ್, ಪುಮಾನ್ ಮಹಾನ್, ಧೀಮಾನ್, ವಿದ್ವಾನ್, ಉಶವಾ, ಅಸೌ ಉಶವಾ ಮುಂತಾದವುಗಳು ಪುಲ್ಲಿಂಗ ಶಬ್ದಗಳಾಗಿವೆ. ರಾಧಾ, ಸರ್ವಾ, ಗತಿಃ, ಗೋಪಿ, ಶ್ರೀಧೇನುಃ ವಧೂಃ, ಸೌರಃ ಉಷಾಗೌಃ, ದೌಃ, ಕ್ಷುತ್, ಕಕುಸ್, ಸವಿತ್ ಅಥವಾ ಸಂವಿದ್ ರುಕ್ ವಿಟ್, ಉದ್ಬಾಃ ಇವು ಸ್ತ್ರೀಲಿಂಗ ಶಬ್ದಗಳಾಗಿವೆ. ಇನ್ನು ನಪುಂಸಕಲಿಂಗ ಶಬ್ದಗಳಾವವೆಂದರೆ - ತಪಃ ಕುಲಂ, ಅತಿ, ಶ್ರಾವಣಿ, ಸೋಮಪಂ ಅಂಬು, ಕರ್ತ್ಯ ಅತಿರಿ, ಅತಿನು ಸ್ವನುಡತ್, ವಿಮಲದ್ಯು, ಚತ್ವಾರಿ, ಇದಂ ಏತತ್, ಬ್ರಹ್ಮ, ಅಹಃ ಅಸ್ಯಕ್, ಏತತ್ ಬೇಭಿತ್ ಗವಾಕ್,ಗವಾಜ್ ಗೋಕ್, ತಿರ್ಯಕ್, ಯಕೃತ್, ಶಕೃತ್, ದದತ್, ಭವತ್, ಪಚತ್, ತುದತ್, ದಿವ್ಯತ್, ಧನುಃ ಪೀಪಠೀ, ಪಯಃ ಅದಃ ಸುಮಾಂಸಿ ಎಂಬಿತ್ಯಾದಿ ರೂಪಗಳು.

ಕೆಲವು ಶಬ್ದಗಳು ಗುಣ ದ್ರವ್ಯ ಕ್ರಿಯೆಗಳಿಗೆ ಅನುಗುಣವಾಗಿ ಯೋಗ ಉಳ್ಳದ್ದಾಗಿ ಮೂರು ಲಿಂಗಗಳಲ್ಲಿಯೂ ರೂಪವನ್ನು ತಾಳುತ್ತವೆ. ಅಂತಹ ಕೆಲವು ಶಬ್ದಗಳನ್ನು ಹೇಳುವೆನು. ಶುಕ್ಲಃ ಶುಚಿಃ ಸುಧೀಃ ಪಟುಃ ಸ್ವಯಂಭೂಃ ಮಾತಾ, ಪಿತಾ, ನಾ ಸತ್ಯಾ, ನಾಗ್ಯಃ ಇವುಗಳು ವಿಕಲ್ಪವಶಾತ್ ಭಿನ್ನಲಿಂಗಗಳಾಗಿ ಮಾರ್ಪಡುವವು, ಇವುಗಳಲ್ಲದೆ ಧನಾ, ಕೃಸೋಮ ಅಗರ್ಹ, ಬಹು, ರಿಮಿಷಸ್ ವಿಷಾ ಶಬ್ದಗಳೂ, ಸಹ, ಮತ್ತು ಅಪರ, ಉಭಯ, ಉಬಾ, ಸರ್ವ, ವಿಶ್ವ, ಅನ್ಯ, ಅಂತರಾ, ಇತರ, ಉತ್ತರ, ನೇಮ, ಅಸಮ, ಸಮ, ಇಷಃ ಉತ್ತರೋತ್ತರ, ಚತುರ, ಯಾವತ್, ತತ್, ಕಿಂ, ದ್ವಯ, ಯಕ್ಷತ್ರ್ ಪ್ರಥಮ ಮುಂತಾದವುಗಳು. ಇನ್ನು ಕೆಲವು ಶಬ್ದಗಳು ಸಾಂದರ್ಭಿಕವಾಗಿ ತ್ರಿಲಿಂಗಗಳ ಸ್ವರೂಪ ಪಡೆದು ಪ್ರಯೋಗಿಸಲ್ಪಡುತ್ತವೆ. ಅವುಗಳೆಂದರೆ - ನೋರಃ ಕತಿಪಯಃ ದ್ವೇ, ತ್ರಯಃ ಶುದ್ಧ, ಸ್ವ, ಏಕ ಭೂ ವಿರೋಧ, ಪರಿ, ವಿಪರ್ಯಾಯ ಮುಂತಾದವುಗಳು.

ಮಗ ಎಂಬ ಅರ್ಥದಲ್ಲಿ ತದ್ಧಿತ ಪ್ರತ್ಯಯಗಳು ಬರುವವು. ಉದಾ ಪಾಂಡವಾಃ ಅಂದರೆ ಪಾಂಡುರಾಜನ ಮಕ್ಕಳು. ಇದೇ ರೀತಿಯಾಗಿ ಶ್ರೈಧರ, ಗಾರ್ಗ್ಯಃ ಆತ್ರೇಯ

ಗಾಂಗೇಯಃ ಎಂಬಿತ್ಯಾದಿಗಳನ್ನು ಸೋದಾಹರಣಾರ್ಥ ಹೇಳಬಹುದಾಗಿದೆ. ಅದರಂತೆ ದೇವತೆ ಎಂಬ ಅರ್ಥದಲ್ಲಿಯೂ ಕೂಡ ಸಂಬಂಧಿ ಎಂಬ ಅರ್ಥದಲ್ಲಿಯೂ ತದ್ಧಿತ ಪ್ರತ್ಯಯಗಳು ಬರುವದುಂಟು.

**ಉದಾ:-** ಐಂದ್ರಂ ಬ್ರಾಹ್ಮಃ ಅಂದರೆ ಇಂದ್ರ ದೇವತಾಕ, ಬ್ರಹ್ಮ ದೇವತಾಕ ಹವಿಸ್ಸು ಎಂದರ್ಥವಾಗುತ್ತದೆ. ಬಲಶಾಲಿ ಎಂಬ ಅರ್ಥ ಸೂಚಿಸುವ ಬಲೀ ಎಂಬುದು ಕ್ರಿಯಾಯೋಗಹೊಂದಿದ ಕರ್ಮಕರ್ತೃಗಳಲ್ಲಿ ಧೌರೇಯಃ ಕಾರುಭಂ ಎಂಬ ತದ್ಧಿತಾಂತ ಶಬ್ದಗಳು ನಿಷ್ಪನ್ನವಾಗಿವೆ. ಅದರಂತೆ ಭವ ಅಂದರೆ ಹುಟ್ಟಿದವನು ಎಂಬ ಅರ್ಥಾನುಸಾರ ಕಾನೀನಃ, ವೈದಿಕಃ ಸ್ವಕಃ ಎಂಬ ಪದಗಳು ಸ್ವಾರ್ಥದಲ್ಲಿ ಚೋರಃ ಎಂಬುದೂ ತುಲ್ಯ ಅಂದರೆ ಸರಿಸಮಾನ ಎಂಬ ಅರ್ಥದಲ್ಲಿ ಚಂದ್ರವತ್ ಎಂಬುದು ನಿಷ್ಪನ್ನವಾಗಿದೆ. ಭಾವಾರ್ಥ ಸೂಚಕ ಪದಗಳಲ್ಲಿ ಸಹ ಬ್ರಾಹ್ಮಣತ್ವಂ ಬ್ರಾಹ್ಮಣತಾ, ಬ್ರಾಹ್ಮಣಂ ಎಂಬ ಶಬ್ದಗಳು ಅಲ್ಲದೆ ಉಳ್ಳವನು ಎಂಬರ್ಥದಲ್ಲಿ ಗೋಮಾನ್, ಧನೀ, ಧನವಾನ್ ಎಂಬ ಶಬ್ದಗಳೂ ಅಳತೆಯಲ್ಲಿ ಕಿಯಾನ್ ಎಂಬುದು ನಿಷ್ಪನ್ನವಾಗಿದೆ. ಜಾತ ಎಂಬ ಅರ್ಥದಲ್ಲಿ ತುಂದಿಲಃ ಶ್ರದ್ಧಾಲುಃ ಹಾಗೂ ಹೆಚ್ಚಿನ ಅರ್ಥ ಸೂಚಿಸುವದಕ್ಕಾಗಿ ದಂತುರಃ, ಇದೆ ಎಂಬರ್ಥದಲ್ಲಿ ಸ್ರಗ್ವೀ, ತಪಸ್ವೀ, ಮೇಧಾವೀ ಮಾಯಾವೀ ಎಂಬವು ನಿಷ್ಪನ್ನವಾಗಿವೆ. ನಿಂದಿತ ಬಹುಬಾಷಣ ಶೀಲ ಎಂಬ ಅರ್ಥ ಸೂಚಿಸುವ ವಾಚಾಲ ವಾಚಾಟ ಎಂಬ ಪದಗಳೂ ಸ್ವಲ್ಪ ಕಡಿಮೆ ಎಂಬ ಅರ್ಥಸೂಚಿಸಲು ಕಲ್ಪ ದೇಶೀಯ ಎಂಬ ಪ್ರತ್ಯಯಗಳು ಹತ್ತುತ್ತವೆ. ಉದಾಹರಣೆಗಾಗಿ ಕವಿಕಲ್ಪಃ ಕವಿದೇಶ್ಯಃ ಮುಂತಾದವುಗಳು ನಿಂದೆಯಲ್ಲಿ ಪಟುಜಾತೀಯಃ ಹೊಗಳಿಕೆಯಲ್ಲಿ ವೈದ್ಯರೂಪಃ ಎಂಬ ಶಬ್ದಗಳು ನಿಷ್ಪನ್ನವಾಗಿವೆ.

ಬಹುಕಾಲದ ಪೂರ್ವದಲ್ಲಿ ಎಂಬ ಅರ್ಥ ಸೂಚಿಸುವದಕ್ಕಾಗಿ ದೃಷ್ಟಚರಃ ಪ್ರಾಚುರ್ಯ ಮುಂತಾದ ಅರ್ಥದಲ್ಲಿ ಅನ್ನಮಯ, ಮೃಣ್ಮಯ, ಸ್ತ್ರೀಮಯ ಎಂದು ಸಿದ್ಧವಾಗಿವೆ. ಜಾತ ಎಂಬ ಅರ್ಥದಲ್ಲಿ ಲಜ್ಜಿತಃ, ಅತಿ ಎಂಬರ್ಥದಲ್ಲಿ ಶ್ರೇಯಾನ್, ಶ್ರೇಷ್ಠಃ ಶುಕ್ಲತರಃ ಕೃಷ್ಣ ತಮಃ ಎಂಬ ತದ್ಧಿತಪ್ರತ್ಯಯಾಂತ ಪದಾದಿಗಳು ರೂಪಿತವಾಗಿವೆ. ಸಾಮಾನ್ಯವಾಗಿ ಕಿಂ ಮುಂತಾದ ಶಬ್ದದ ಮೇಲೆ ಈ ಪ್ರತ್ಯಯಗಳು ಬಂದರೆ ಅವ್ಯಯಗಳಾಗುವವು ಉದಾಃ ಅತಿತರಾಂ ಕಿತರಾಂ ಮುಂತಾದವುಗಳು. ಪರಿಮಾಣಾರ್ಥ ಸೂಚನೆಯಲ್ಲಿ ಜಾನುದಘ್ನಂ ಜಾನುಮಾತ್ರಂ ಎಂಬ ತದ್ಧಿತ ಪ್ರತ್ಯಯಾಂತ ಪದಗಳು, ಬಹಳ ಪದಾರ್ಥಗಳು ಒಟ್ಟಾಗಿರುವಾಗ ಅದರಲ್ಲಿ ಒಂದನ್ನು ಸೂಚಿಸಲು ಕತಮ, ಎರಡರಲ್ಲಿ ಒಂದನ್ನು ಸೂಚಿಸಲು ಕತರಃ ಎಂಬ ಪದಗಳು ರೂಪಿತವಾಗಿವೆ.

ಸಂಖ್ಯಾ ವಿಶೇಷ ನಿರ್ಧರಿಸಿ ಹೇಳುವದಕ್ಕಾಗಿ ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಏಕಾದಶ ಕತಿಪಯ, ಕತಿರ್ಥ. ಕತಿ, ವಿಂಶ, ವಿಂಶತಿತಮ ಶತತಮ ಮುಂತಾದವು ಗಳೂ, ಅಲ್ಲದೆ ಎರಡು ವಿಧ ಮುಂತಾಗಿ ಸಂಖ್ಯೆಯ ಪ್ರಕಾರಾದಿಗಳನ್ನು ನಿರ್ದೇಶಿಸಲು ದ್ವೈಧಾ, ದ್ವಿಧಾ ಎಂಬ ಪದಗಳು ಪ್ರಯೋಗಿಸಲ್ಪಡುತ್ತವೆ. ಇನ್ನು ಕ್ರಿಯೆಯು ಆವೃತ್ತಿಯನ್ನು ಬೋಧನೆ ಮಾಡಲು ಪಂಚ ಕೃತ್ವಃ ದ್ವಿಃ ತ್ರಿಃ ದ್ವಿತಯಃ ತ್ರಿತಯಃ ಎಂಬ ಪದಗಳು, ಸಂಖ್ಯೆಯನ್ನು ಹೇಳುವದಕ್ಕಾಗಿ ದ್ವಯ, ತ್ರಯ ಎಂಬ ಪದಗಳು ಹೇಳಲ್ಪಟ್ಟಿವೆ.

ಅಲ್ಪ ಎಂಬರ್ಥವನ್ನು ಸೂಚಿಸುವಾಗ ಕುಟೀರ, ಸಮೀರ, ಶಂಡಾರ ಇವುಗಳು ಸಮ್ಮತಪದಗಳೆನಿಸುತ್ತವೆ. ಈ ತದ್ಧಿತ ಪ್ರತ್ಯಯಗಳ ರೂಪಾಂತರ ಅಥವಾ ಗತಿ -

ಗಮನಗಳು ವಿಚಿತ್ರ ವಾಗಿದ್ದು ಸಾಧಕನಿಗೆ ಗಮನಾರ್ಹವೆನಿಸಿವೆ. ತದ್ಧಿತಾಂತ ಶಬ್ದಗಳೂ ಬಹು ವಿಧವಾಗಿ ಪ್ರಯೋಗದಲ್ಲಿ ವಿಹಿತವಾಗಿವೆ. ಅವುಗಳನ್ನು ಹೀಗೆ ಉದಾಹರಿಸ ಬಹುದು ಸ್ತ್ರೈಣಃ, ಪೌಷ್ಣಃ, ತುಂಡಿಭಃ, ಕೃಪೀವಲಃ, ಮಲಿನಃ, ವಿಕಟಃ, ಗೋಮೀ, ಉತ್ಕಟಂ, ಅವನಾಟೀ, ನಿಬಿಡ, ನಿಬರೀ, ವಿತ್ತಾರ್ಥಃದಲ್ಲಿ ವಿದ್ಯಾಚಣ, ವಿದ್ಯಾಚುಂಚು, ಸ್ಯಂಗಿಣಃ ಸ್ವಾಮಿ, ವಿಷಮಃ, ರೂಷ್ಯಂ, ಉಪತ್ಯಕಾ, ಅಧಿತ್ಯಕಾ, ಚಿಪಿಟಂ, ಚಿಕ್ವಂ, ವಾತೂಲಃ, ಕುತಪಃ, ವಲಃ ಹಿಮೇಲುಃ ಕಹೋಡಃ ಉಡಪಃ, ಮರೂತಃ ಏಕಾಕೀ, ಜ್ಯೋತ್ಸ್ನಾ, ತಮಿಸ್ರಾ, ಅಷ್ಠೀವತ್, ಅಸಂದೀವತ್, ಚಕ್ರೀವತ್, ತೂಷ್ಣೀಕಾ ಜಲ್ಪತಕೀ ಕಂಭಃ ಕಂಯುಃ ಕೇತಿಃ ಕಂತುಃ ಕಂತಃ ಕಂಪಃ ಶಂವಃ ಶಂತಃಸಂತಿಃ ಶಂಭ ಕವಃ ಶಂಯೋ, ಹಂಯುಃ, ಶುಭಃ ಯುವತ್ ಎಂಬಿತ್ಯಾದಿ ತದ್ಧಿತಾಂತ ಶಬ್ದಗಳು ವಿಹಿತ ರೀತಿಯಲ್ಲಿ ನಾನಾರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತವೆ. ಈಗ ಕೆಲವು ಧಾತುಗಳಿಗೆ ದಶಲಕಾರಗಳಲ್ಲಿ ಆಗುವ ರೂಪಗಳನ್ನು ಹೇಳುತ್ತೇನೆ. ಮೊದಲು ಭೂ ದಾತುವಿನ ದಶಲಕಾರ ರೂಪಗಳನ್ನು ಹೇಳುತ್ತೇನೆ ಹೇಗೆಂದರೆ - ಭವತಿ, ಬಭೂವ, ಭವಿತಾ, ಭವಿಷ್ಯತಿ, ಭವತು, ಅಭವತ್, ಭವೇತ್, ಅಭೂತ್, ಅಭವಿಷ್ಯತ್, ಭವೇತ್ ಎಂದಾಗುತ್ತದೆ. ಹೀಗೆಯೇ ಲಡಾದಿಯಾಗಿ ದಶಲಕಾರ್ಯಗಳಲ್ಲಿ ಅದು ಧಾತುವಿಗೆ (ದ್ವಿತೀಯ ಗಣ) ಜಘಾಸ, ಅತ್ತಿ, ಅತ್ತಾ, ಅತ್ಸ್ಯತಿ, ಅತ್ತು ಆದತ್, ಅದ್ಯಾತ್, ಅಘಸತ್, ಆತ್ಸ್ಯತ್ ಎಂದು ಸಿದ್ಧವಾಗುತ್ತದೆ. ಇದೇ ಪ್ರಕಾರವಾಗಿ, ಹುಧಾತುವಿಗೆ ಜುಹೋತಿ, ಜುಹಾವ ಅಥವಾ ಜುಹವಾಂಚಕಾರ ಹೋತಾ, ಹೋಷ್ಯತಿ, ಅಜುಹೋತ್, ಜುಹಯಾತ್, ಹೂಯಾತ್ ಅಹೌಷೀತ್, ಅಹೋಷ್ಯತ್ ಎಂದು ಮುಂತಾಗಿ ದಶಲಕಾರ ರೂಪಗಳನ್ನು ಹೇಳಬಹುದು. ಅದರಂತೆ ದಿವ್ ಎಂಬ ಧಾತುವಿಗೆ ದೀವ್ಯತಿ, ದಿದೇವ, ದೇವಿತಾ, ದೇವಿಷ್ಯತಿ ದೀವ್ಯತು, ದೀವ್ಯೇತ್ ಅದೇವಿತ್ ಎಂಬುದಾಗಿ ದಶಲಕಾರಗಳು ರೂಪಿತವಾಗುತ್ತವೆ. ಷುಞ್ ಎಂಬ ಧಾತುವಿಗೆ ಸುನೋತಿ, ಸುಷಾವ, ಸೋತಾ, ಸೋಷ್ಯತಿ, ಸುನೋತು, ಅಸುನೋತ್, ಸುನಯಾತ್, ಅಸೋಷ್ಯತ್ ಎಂಬುದಾಗಿ ದಶಲಕಾರಗಳಲ್ಲಿ ಆಗುವ ರೂಪಗಳು. ತುದ ಧಾತುವಿಗೆ ತುದತಿ, ತುತೋದ. ತೋತ್ತಾ, ತೋತ್ಸ್ಯತಿ, ತುದತು, ಅತುದತ್, ತುದ್ಯಾತ್, ತುದೇತ್ ಅತೌತ್ಸೀತ್, ಅತೋತ್ಸ್ಯತ್ ಎಂಬುದಾಗಿ ದಶಲಕಾರದ ರೂಪಗಳು.

ರುಧ ಧಾತುವಿಗೆ ರುಣದ್ಧಿ ರುರೋಧ, ರೋದ್ಧಾ, ರೋತ್ಸ್ಯತಿ, ರುಣದ್ಧು, ಅರುಣತ್, ರುಧ್ಯಾತ್, ಅರೌತ್ಸೀತ್, ಅರೋತ್ಸ್ಯತ್ ಎಂಬುದಾಗಿ ದಶಲಕಾರ ರೂಪಗಳು, ತನು ಧಾತುವಿಗೆ ತನೋತಿ, ತತಾನ, ತನಿತಾ, ತನಿಷ್ಯತಿ, ತನೋತು, ಅತನೋತ್, ತನುಯಾತ್, ಅತನೀತ್ + ಅತಾನೀತ್, ಅತನಿಷ್ಯತ್ ಎಂಬುದಾಗಿ ದಶರೂಪಗಳು, ಕ್ರೀಞ್ ಧಾತುವಿಗೆ ಕ್ರೀಣಾತಿ, ಚಿಕ್ರಾಯ, ಕ್ರೇತಾ, ಕ್ರೇಷ್ಯತಿ, ಕ್ರೀಣಾತು, ಅಕ್ರೀಣಾತ್, ಕ್ರೀಣೀಯಾತ್, ಕ್ರೀಯಾತ್, ಅಕ್ರೈಷೀತ್, ಅಕ್ರೇಷ್ಯತ್ ಎಂಬ ಹತ್ತು ರೂಪಗಳು, ಚುರ ಧಾತುವಿಗೆ ಚೋರಯತಿ, ಚೋರಯಾಮಾಸ, ಚೋರಯಿತಾ, ಚೋರಯಿಷ್ಯತಿ, ಚೋರಯತು, ಅಚೋರಯತ್, ಚೋರಯೇತ್ ಚೋರ್ಯಾತ್, ಅಚೂಚುರತ್, ಅಚೋರಿಷ್ಯತ್ ಎಂಬ ಹತ್ತು ರೂಪಗಳು ಈ ರೀತಿ ಗಣಗಳು ಉದಾಹೃತವಾಗಿವೆ.

ಪ್ರಯೋಜಕ (ಮಾಡಿಸುವವನ)ನ ವ್ಯಾಪಾರವು ವಿವಕ್ಷಿತವಾದಾಗ ಣಿಜಂತ ಧಾತುಗಳನ್ನು ಪ್ರಯೋಗಿಸಬೇಕು. ಉದಾಹರಣೆ - ಭಾವಯತಿ, ಇಚ್ಛೆಯು ತೋರುವಾಗ

ಸನ್ ಪ್ರತ್ಯಯ ಬರುತ್ತದೆ. ಉದಾಃ ಬುಭೂಷತಿ, ಕ್ರಿಯಾಸಮಭಿವ್ಯಾಹಾರ ವಿವಕ್ಷಿತವಾದಾಗ ಭೋಭೂಯತೇ ಎಂದು ಹೇಳಲ್ಪಟ್ಟಿದೆ. ತನ್ನ ಇಚ್ಛೆ ಮತ್ತು ಆಚರಿಸುವದು ಎಂಬರ್ಥದಲ್ಲಿ ಪುತ್ರೀಯತಿ ಮುಂತಾದ ಕ್ರಿಯಾಪದಗಳು ವಿಹಿತವಾಗಿವೆ, ಇತ್ ಎಂಬ ಸಂಜ್ಞೆಯುಳ್ಳ ಪ್ರತ್ಯಯಗಳು ಬರುವವೆಂದು ತಿಳಿಯಬೇಕು. ಉಳಿದ ಆ ಧಾತುಗಳು ಕರ್ತ್ರರ್ಥದಲ್ಲಿ ಪರಸ್ಮೈ ಪದಗಳೆಂದು ಶಾಬ್ದಿಕರಿಂದ ಉಕ್ತವಾಗಿವೆ. ಇಕಾರ ಇತ್ಸಂಜ್ಞೆಯುಳ್ಳ ಮತ್ತು ಸ್ವರಿತೇತ್ತಾದ ಧಾತುವು ಉಭಯ ಪದವನ್ನುಹೊಂದುವದು. ಯಕ್ ಎಂಬುದು ಭಾವಕರ್ಮಾರ್ಥದಲ್ಲಿ ಬರುವದು. ಸೌಕರ್ಯಾತಿಶಯವನ್ನು ಪ್ರಕಾಶ ಪಡಿಸುವದಕ್ಕಾಗಿ ಕರ್ತೃ ವ್ಯಾಪಾರವನ್ನು ವಿವಕ್ಷೆ ಮಾಡದಿರುವಾಗ ಕರ್ಮಾದಿಗಳೇ ಕರ್ತೃತ್ವವನ್ನು ಹೊಂದುವವು. ಉದಾಃ ಓದನಃ ಪಚ್ಯತೇ ಸ್ವಯಂ ಇಲ್ಲಿ ಕರ್ಮವಾದ ಓದನವು ಕರ್ತೃವಾಗಿ ನಿರ್ದೇಶಿಸಲ್ಪಟ್ಟಿದೆ. ಇದೇ ಪ್ರಕಾರ 'ಅಸಿಶ್ಛಿನತ್ತಿ, ಸ್ಥಾಲೀ ಪಚತಿ' ಎಂಬಲ್ಲಿ ಕರಣ ಮತ್ತು ಅಧಿಕರಣಗಳನ್ನು ಕರ್ತೃವಿವಕ್ಷೆಮಾಡಿ ನಿರ್ದೇಶಿಸಿರುತ್ತಾರೆ. ಛೇದನ ಕ್ರಿಯೆಯಲ್ಲಿ ಸಾಧನವಾದದ್ದು ಕತ್ತಿಯು. ಈಗ ಅದೇ ಕರ್ತೃವು. ಹೀಗೆಯೇ ಪಾಕವನ್ನು ಸ್ಥಾಲಿಯಲ್ಲಿ ಮಾಡುವದರಿಂದ ಅದು ಅಧಿಕರಣವು, ಸಕರ್ಮಕ ಧಾತುವಿನ ಮೇಲೆ ಕರ್ತೃ ಕರ್ಮ ಎಂಬರ್ಥದಲ್ಲಿ ಲಕಾರ ಪ್ರತ್ಯಯಗಳು ಬರುವವು. ಅಕರ್ಮಕ ಧಾತುಗಳ ಮೇಲೆ ಕರ್ತೃ ಕರ್ಮ ಎಂಬರ್ಥದಲ್ಲಿ ಲಕಾರ ಪ್ರತ್ಯಯಗಳು ಬರುತ್ತವೆ. ವ್ಯಾಪಾರ ಮತ್ತು ಫಲಗಳು ಒಂದೆಡೆಯಲ್ಲಿ ಇದ್ದರೆ ಆ ಧಾತುವು ಅಕರ್ಮಕವಾಗುವದು. ಫಲವ್ಯಾಪಾರಗಳು ಭಿನ್ನ ಭಿನ್ನ ಸ್ಥಳಗಳಲ್ಲಿ ಇದ್ದಾಗ ಧಾತುವು ಸಕರ್ಮಕವಾಗುವದು. ದುಹ ಮುಂತಾದ ಧಾತುಗಳಿಗೆ ಅಪ್ರಧಾನ ಕರ್ಮಗಳಲ್ಲಿಯೂ ನೀ,ಹೃ ಮುಂತಾದ ಧಾತುಗಳಿಗೆ ಪ್ರಧಾನ ಕರ್ಮದಲ್ಲಿಯೂ ಬುಧ್ಯರ್ಥಕ, ಭಕ್ಷಣಾರ್ಥಕ ಮತ್ತು ಶಬ್ದಕರ್ಮಕ ಧಾತುಗಳಿಗೆ ಪ್ರಯೋಕ್ತೃವಿನ ಇಚ್ಛಾನುಗುಣವಾಗಿಯೂ ಇವುಗಳಲ್ಲದೆ ಣ್ಯಂತ ಧಾತುಗಳಿಗೆ ಪ್ರಯೋಜ್ಯಕರ್ಮದಲ್ಲಿಯೂ ಲಕಾರಾದಿಗಳು ಬರುತ್ತವೆ.

ಧಾತುವು ಫಲ ವ್ಯಾಪಾರಿಗಳನ್ನು ಬೋಧಿಸುತ್ತದೆ. ತಿಙ್ ಪ್ರತ್ಯಯಗಳು ಆಶ್ರಯಾರ್ಥಗಳು., ವ್ಯಾಪಾರವೇ ಪ್ರಧಾನ ಎಂದರೆ ಮುಖ್ಯ ವಿಶೇಷ್ಯವಾಗಿಯೂ, ಫಲವು ಉಪಸರ್ಜನವಾಗಿಯೂ ತಿಙರ್ಥವು ವಿಶೇಷಣವಾಗಿಯೂ ವಾಕ್ಯಾರ್ಥದಲ್ಲಿ ಭಾಸವಾಗುತ್ತದೆ. ಏಧಿತವ್ಯಂ, ಏಧನೀಯಂ ಎಂಬಿವು ಕೃತ್ಯಪ್ರತ್ಯಯಕ್ಕೆ ಉದಾಹರಣೆ. ಭಾವಕರ್ಮಾರ್ಥಗಳಲ್ಲಿ ಕೃತ್ಯ ಪ್ರತ್ಯಯಗಳೂ ಕರ್ತೃ ಎಂಬರ್ಥದಲ್ಲಿ ಕೃತ್ ಪ್ರತ್ಯಯಗಳೂ ವಿಹಿತವಾಗಿವೆ. ಕರ್ತಾ, ಕಾರಕ ಮುಂತಾದವುಗಳು ಉದಾಹರಣೆಗಳಾಗಿವೆ. ಭೂತಾದಿಗಳು ಭೂತಕಾಲದಲ್ಲಿ ನಿರ್ದಿಷ್ಟವಾಗಿವೆ. ಗಮ್ಯಾದಿಗಳು ಭವಿಷ್ಯತ್ಕಾಲದಲ್ಲಿ ಉದಾಹೃತ ಗಳಾಗಿವೆ. ಉಳಿದವು ವರ್ತಮಾನಾರ್ಥದಲ್ಲಿ ವಿಹಿತವಾಗಿವೆ.

ಅಧಿಸ್ತ್ರೀ, ಯಥಾಶಕ್ತಿ ಎಂಬಿವು ಅವ್ಯಯೀಭಾವ ಸಮಾಸವು, ರಾಮಾಶ್ರಿತಃ, ಧಾನ್ಯಾರ್ಥಃ, ಯೂಪದಾರು, ವ್ಯಾಘ್ರಭೀಃ ರಾಜಪುರುಷಃ, ಅಕ್ಷಶೌಂಡಃ ಎಂಬವು ಕ್ರಮವಾಗಿ ದ್ವಿತೀಯಾ, ತೃತೀಯಾ, ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮಿ ತತ್ಪುರುಷ ಸಮಾಸಗಳಿಗೆ ಉದಾಹರಣೆಗಳಾಗಿವೆ. ಪಂಚಗವಂ, ದಶಗ್ರಾಮೀ, ತ್ರಿಫಲ ಎಂಬವು ದ್ವಿಗು ಸಮಾಸವೆಂದು ಉಕ್ತವಾಗಿವೆ. ನೀಲೋತ್ಪಲಂ ಮಹಾಷಷ್ಠೀ ಎಂಬಿವು ಕರ್ಮಧಾರಯ ಸಮಾಸ.

ಕುಲ್ಸಾರ್ಥದಲ್ಲಿ ಅಬ್ರಾಹ್ಮಣ ಎಂಬುದು ನಞ್ ಸಮಾಸದಲ್ಲಿ ವಿಹಿತವಾಗಿದೆ. ಕುಂಭಕಾರ ಮುಂತಾದವುಗಳು ಕೃದ್ವೃತ್ತಿ ಎನಿಸುವವು. ಪ್ರಾಪ್ತೋದಕಃ, ಪಂಚಗುಃ, ರೂಪವದ್ಭಾರ್ಯಃ, ಮಧ್ಯಾಹ್ನಃ, ಸಸುತಃ ಮುಂತಾದವುಗಳು ಅನ್ಯಪದಾರ್ಥ ಪ್ರಧಾನವಾದ ಬಹುವ್ರೀಹಿ ಸಮಾಸಪದವಾಗುತ್ತದೆ. ಸಮುಚ್ಛಯ ವಿವಕ್ಷಿತವಾದಾಗ 'ಗುರುಂಚೇಶಂ ಚ ಭಜಸ್ವ' ಎಂದೂ ಅನ್ವಾಚಯ ವಿವಕ್ಷಿತವಾದಾಗ 'ಭಿಕ್ಷಾಮಟ ಗಾಂ ಚಾಯನ' ಎಂಬುದಾಗಿ ವಾಕ್ಯಗಳನ್ನೇ ಪ್ರಯೋಗಿಸಬೇಕು ಇದು ಸಮಾಸವಾಗುವದಿಲ್ಲ. ಇತರೇತರಯೋಗವು ವಿವಕ್ಷಿತವಾದಾಗ 'ರಾಮಕೃಷ್ಣೌ' ಎಂಬುದಾಗಿ ದ್ವಂದ್ವ ಸಮಾಸವೂ ಸಮಾಹಾರವಾದಾಗ, 'ರಾಮಕೃಷ್ಣಂ'ಎಂಬುದಾಗಿ ದ್ವಂದ್ವ ಸಮಾಸವೂ ವಿಹಿತವಾಗಿರುತ್ತದೆ. ಆದರೆ ರಾಮಕೃಷ್ಣೌ ಎಂಬುದು ಎರಡು ಶಬ್ದಗಳು. ಅದರ ಅರ್ಥವೂ ಆಪಾತತಃ ಎರಡಾಗಿದೆ. ಆದಾಗ್ಯೂ ರಾಮಕೃಷ್ಣ ರೂಪಿಯಾದ ಆ ಬ್ರಹ್ಮನು ಒಬ್ಬನೇ. ಅವನಿಗೆ ಅನೇಕ ರೂಪಗಳಿದ್ದು, ಬ್ರಹ್ಮನೊಬ್ಬನೇ ಎಂದು ತಿಳಿದು ಅವನನ್ನು ಭಕ್ತಿಯಿಂದ ಪೂಜಿಸಬೇಕು.

ನಾರದ ಮಹಾಪುರಾಣದಲ್ಲಿ ಐವತ್ತೆರಡನೆಯ ಅಧ್ಯಾಯ ಮುಗಿದುದು



## ನಿರುಕ್ತಿ ಲಕ್ಷಣ

**ಅಧ್ಯಾಯ - ೫೩**

॥ ಸನಂದ ಉವಾಚ ॥

ನಿರುಕ್ತಂ ತೇ ಪ್ರವಕ್ಷ್ಯಾಮಿ ವೇದಶ್ರೋತ್ರಾಂಗಮುತ್ತಮಂ ॥
ತತ್ಪಂಚವಿಧಮಾಖ್ಯಾತಂ ವೈದಿಕಂ ಧಾತುರೂಪಕಂ ॥
ಕ್ವಚಿದ್ವರ್ಣಾಗಮಸ್ತತ್ರ ಕ್ವಚಿದ್ವರ್ಣ ವಿಪರ್ಯಯಃ ॥
ವಿಕಾರಃ ಕ್ವಾಪಿ ವರ್ಣಾನಾಂ ವರ್ಣನಾಶಃ ಕ್ವಚಿನ್ನತಃ ॥
ತಥಾ ವಿಕಾರನಾಶಾಭ್ಯಾಂ ವರ್ಣಾನಾಂ ಯತ್ರ ನಾರದ ॥
ಧಾತೋರ್ಯೋಗಾತಿಶಾಯೀ ಚ ಸಂಯೋಗಃ ಪರಿಕೀರ್ತಿತಃ ॥
ಸಿದ್ಧೇದ್ವರ್ಣಾಗಮಧ್ವಂಸಃ ಸಿಂಹೋ ವರ್ಣವಿಪರ್ಯಯಾತ್ ॥
ಗೂಢೋಽಽತ್ಮಾ ವರ್ಣವಿಕೃತೇರ್ವರ್ಣನಾಶಾತ್ಪೃಷೋದರಃ ॥
ಭ್ರಮರಾದಿಷು ಶಬ್ದೇಷು ಜ್ಞೇಯೋಯೋಗೋ ಹಿ ಪಂಚಮಃ
ಬಹುಲಂ ಛಂದಸೀತ್ಯುಕ್ತಮತ್ರವಾಚ್ಯಂ ಪುನರ್ವಸೂ ॥

**ಸನಂದನ:-** ನಾರದನೇ, ಅವನ್ನು ಮೇಲೆ ನಿರುಕ್ತವೆಂಬ ವೇದಾಂಗವನ್ನು ಭಾಗ ವಿವರಿಸುವೆನು. ವೇದಾಂಗವು ಐದು ವಿಧವಾಗಿದ್ದು, ಅದರಲ್ಲಿ ವೇದದಲ್ಲಿ ಪ್ರಯೋಗಿಸಲ್ಪಟ್ಟ ಧಾತುರೂಪಾದಿಗಳು ಅಡಗಿವೆ. ಅಲ್ಲಿ ಕೆಲವು ಕಡೆಗಳಲ್ಲಿ ವರ್ಣಗಳು ಹೆಚ್ಚಾಗಿ ಕಂಡು ಬರುವವು. ಇದಕ್ಕೆ ಆಗಮವೆಂದು ಅನ್ನುವರು. ಇನ್ನೂ ಕೆಲವು ಶಬ್ದಗಳಲ್ಲಿ ಒಂದು ವರ್ಣಕ್ಕೆ ಬೇರೊಂದು ವರ್ಣ ಬಂದು ವಿಕಾರವಾಗುತ್ತದೆ. ಮತ್ತೆ ಹಲವಾರು ಶಬ್ದಗಳಲ್ಲಿ ಮೊದಲಿದ್ದ ಕೆಲವು ವರ್ಣಗಳು ಇಲ್ಲವಾಗಿ ಲೋಪ ವೆಂದೆನಿಸಿ ಕೊಳ್ಳುವದುಂಟು. ಶಬ್ದಗಳಲ್ಲಿ ವರ್ಣವಿಕಾರ ನಾಶದ ಪರಿಣಾಮವಾಗಿ ರೂಪವೂ ಬದಲಾವಣೆ ಹೊಂದುವದು (ವ್ಯತ್ಯಾಸವಾಗುವದು). ಅದರಂತೆ ಧಾತುಗಳ ರೂಪಗಳು

ವಿಶೇಷವನ್ನು ಹೊಂದುವದರಿಂದ ಇವುಗಳಿಗೆ ಸಂಯೋಗ ಎಂಬ ಸಂಜ್ಞೆ ನೀಡಲಾಗಿದೆ. ಈಗ ಹಸ ಎಂಬ ಧಾತುವಿನಿಂದ ಉಂಟಾದ ಹಂಸವೆಂಬ ಶಬ್ದವು ಆಗಮದ ರೂಪವಾಗಿದೆ. ಇಲ್ಲಿ ಒಂದು ಅನುಸ್ವಾರವು ಹೆಚ್ಚಾಗಿ ಬಂದಿರುವದು. ಅದರಂತೆ ಹಿಸಿ ಎಂಬ ಧಾತುವಿನಿಂದ ಸಿಂಹ ಶಬ್ದ ನಿರ್ಮಾಣವಾಗಿದೆ. ಇಲ್ಲಿ ಮಾತ್ರ ವರ್ಣಗಳು ವ್ಯತ್ಯಸ್ತವಾಗಿವೆ. ಅದರಂತೆ ಗೂಢೋತ್ಮಾ ಎಂಬ ಶಬ್ದವು ವರ್ಣವಿಕಾರಕ್ಕೆ ಉದಾಹರಣೆ ಎನಿಸಿದೆ. ಇಲ್ಲಿ ಅಕಾರಕ್ಕೆ ಓಕಾರ ಬಂದಿದೆ. ಒಂದು ವರ್ಣವು ಲೋಪವಾಗಿದೆಯಾದ್ದರಿಂದ ಪೃಷೋದರ ಎಂಬ ಶಬ್ದ ತಯಾರಾಗಿದೆ. ವಾಸ್ತವಿಕವಾಗಿ ನಡುವೆ ಒಂದು ದ ಕಾರವು ಬರಬೇಕಾಗಿತ್ತು.

ಭ್ರಮರ ಮುಂತಾದ ಶಬ್ದಗಳಲ್ಲಿ ಇನ್ನೊಂದು ವರ್ಣ ಸಂಯೋಗ ಬಂದಿದೆ. ಸಾಮಾನ್ಯತಃ ವೇದದಲ್ಲಿ ರೂಪಗಳು ವ್ಯತ್ಯಾಸ ಹೊಂದುವದರಿಂದ 'ಬಹುಲಂ' ಎಂದಿಟ್ಟುಕೊಂಡರೆ ಒಳಿತು, ಬಹುಲವೆಂದರೆ - ವಿಧಿ ಶಾಸ್ತ್ರಾನುಸರಣೆ ಇಲ್ಲದಿದ್ದರೂ ಪ್ರಯೋಗವನ್ನು ಅನುಸರಿಸಿ ರೂಪಾದಿಗಳನ್ನು ತರ್ಕ ಮಾಡಬೇಕೆಂದು ಅರ್ಥ. ಈ ಬಹುಲಗ್ರಹಣಕ್ಕೆ ಪುನರ್ವಸೂ, ವೃಷಣ, ಪರಸ್ಮೈಪದ ಮುಂತಾದವುಗಳು ಉದಾಹರಣೆ ಎನಿಸಿವೆ, ಹಾಗೆನ್ನದೆ ಶಾಸ್ತ್ರಾಧಾರದಿಂದ ರೂಪನಿಷ್ಪತ್ತಿ ಮಾಡಿದಾಗ ಇವುಗಳ ರೂಪದಲ್ಲಿ ಹೆಚ್ಚು ಕಡಿಮೆಯಾಗುವದು ಸಹಜವೇ. ಪ್ರ ಮುಂತಾದ ಅವ್ಯಯಗಳಿಗೆ ಕ್ರಿಯಾಪದ ಸಂಬಂಧವಿದ್ದಲ್ಲಿ ಗತಿ ಎಂಬ ಸಂಜ್ಞೆಯಿದೆ. ವಾಡಿಕೆಯಾಗಿ ಇವುಗಳನ್ನು ಕ್ರಿಯಾಪದದ ಹಿಂಬದಿಯಲ್ಲಿಯೇ ಪ್ರಯೋಗ ಮಾಡುವ ವಿಧಾನ ವಿಧಿಸಲಾಗಿದೆ. ವೇದದಲ್ಲಿ ಅದರ ಪರದಲ್ಲಿ, ಮಧ್ಯದಲ್ಲಿ ವ್ಯವಧಾನ ಇದ್ದಾಗ ಬರುತ್ತವೆ. ಎಂಬುದನ್ನು ಗಮನಿಸಬೇಕು.

ವೇದದಲ್ಲಿ ವಿಭಕ್ತಿ ವ್ಯತ್ಯಾಸವು ಬರುವದುಂಟು, ದಧ್ನಾ, ಜುಹೋತಿ, ಕೇತುಃ, ಧ್ವನಯತಿ ಮುಂತಾದವುಗಳು ಉದಾಹರಣೆಗಳೆನಿಸಿವೆ. ವಿಭಕ್ತಿ ಎಂಬುದು ಸುಪ್, ತಿಙ್, ಇವೆರಡಕ್ಕೆ ಸಂಜ್ಞೆಯು, ಇದು ವ್ಯತ್ಯಾಸ ಹೊಂದುವದು, ಈ ಕ್ರಮಕ್ಕೆ 'ನಿಷ್ಪರ್ಕ್ಯ ಮುಂತಾದವುಗಳಲ್ಲದೆ, ಗೃಭಾಯ ಮೊದಲಾದವುಗಳು ಉದಾಹರಣೆಗಳು, ಇದರ ಪ್ರಕಾರ ಸುಪ್ ತಿಙ್, ಉಪಸರ್ಗ, ಸ್ತ್ರೀಲಿಂಗಾದಿ, ಹಾಗೂ ಪ್ರಥಮ ಪುರುಷಾದಿ, ಕಾಲವಾಚಕ ಶಬ್ದ(ವರ್ತಮಾನ) ಕರ್ತೃ ಕರ್ಮ ಪ್ರಯೋಗಗಳೂ, ವ್ಯಂಜನ ಹಾಗೂ ಸ್ವರಗಳೂ ಯಙ್ ಪ್ರತ್ಯಯ ಇವುಗಳೆಲ್ಲ ವ್ಯತ್ಯಾಸವನ್ನು ಹೊಂದುವವೆಂಬುದನ್ನು ವೇದಾಧ್ಯಯನ ಮಾಡಿದಾಗ ಮನಗಾಣಬಹುದು. ಇವೆಲ್ಲವೂ ಬಹುಲಗ್ರಹಣ ಪರಿಣಾಮವೆಂದು ಭಾವಿಸಬೇಕು. ಇದರಂತೆ ಬಹುಲಗ್ರಹಣದಿಂದ ವ್ಯತ್ಯಸ್ತವಾದ ಕೆಲವು ವೈದಿಕ ಶಬ್ದಗಳನ್ನು ಉದಾಹರಿಸ ಬಹುದು - ರಾತೀ, ವಿಭ್ವೀ ಇವುಗಳು ಅನುಕ್ರಮವಾಗಿ ಇ ಕಾರಾಂತ ಹಾಗೂ ಉಕಾರಾಂತ ಶಬ್ದಗಳಾಗಿದ್ದರೂ ವೇದಗಳಲ್ಲಿ ಈ ಕಾರಾಂತ ಎಂದು ಹೇಳಲಾಗಿದೆ. ಅದರಂತೆ ಕದ್ರೂಃ ವಾಜಸನೇಯಿನಃ ಮುಂತಾದವುಗಳಲ್ಲದೆ ಯಶೋಭಾಗ್ಯಃ ದೇವಾಸಃ, ಸರ್ವದೇವತಾಃ, ಅತ್ತಿತ್ಪಾವತಃ, ಅಸ್ಮಾನ್ಮುಖಾಃ, ಗರ್ಭ್ಯಃ, ಉರ್ವಿಯಾ, ಸ್ವಪ್ರಯಾ, ವಾರಾವಧ್ವಾರ್ತ, ವೈವಧೀ, ಏನಂ, ಏವಸಿ, ಸ್ನಾತ್ವೀ, ಗತ್ವಾ ಗೋನಾಂ, ಅಪರಿಹ್ವೃತಾಃ, ತುತರಿಃ, ಬಭೂಥ, ಪ್ರಮಿಣಂತಿ, ಮಿತ್ರಯಃ, ದುರಸ್ವಾ, ಹಾತ್ವಾ, ಸುಧಿತಂ ದಧರ್ತಿ ಮುಂತಾದವುಗಳು, ಸ್ವವದ್ದಿಃ ಧಿಷ್ವ, ಪ್ರಪ್ರಾಯಂ, ಸುಪಥಿಂತರಃ ರಥಿತರೀ, ನಸತಾ ಮುಂತಾದವುಗಳಲ್ಲದೆ ಅಮ್ನಃ, ಭುವರಥೋ, ಎಂಬಿತ್ಯಾದಿಗಳು. ಬ್ರೂಹಿ ಮುಂತಾದವುಗಳು ಔಶ್ರಾವಯೇತ್ ಇತ್ಯಾದಿಗಳಲ್ಲಿ ಪ್ಲುತಶ್ರವಣ, ದಾಶ್ವಾನ್, ಸ್ವತವಾನ್, ತ್ರಿಭಿಷ್ಪಂ, ನೃಭಿಷ್ಪುತಃ ಇತ್ಯಾದಿಗಳು

ವ್ಯತ್ಯಾಸವನ್ನು ಪಡೆದವುಗಳಾಗಿವೆ. ಮೇಲಿನ ಶಬ್ದಗಳೆಲ್ಲ ಬಹುಲಗ್ರಹಣದ ಪರಿಣಾಮದಿಂದಾದ ಶಬ್ದಗಳು. ಬಹುಲಂ ಎಂದು ಹೇಳಿದಾಗ ನಾಲ್ಕು ರೀತಿಯಲ್ಲಿ ರೂಪಸಿದ್ಧಿಯ ಕಾರ್ಯ ನಡೆಯುತ್ತದೆ. ಎಂದು ಭಾವಿಸಬೇಕು. ಕೆಲವು ಕಡೆಗೆ ನಿತ್ಯವಾಗಿ ಬರುತ್ತದೆ, ಇನ್ನು ಕೆಲವು ಕಡೆಗೆ ವಿಭಾಷಾ ಅಥವಾ ವಿಕಲ್ಪದ ಪರಿಣಾಮವಾಗಿ, ಇನ್ನೂ ಕೆಲವು ಕಡೆಗೆ ವಿಲಕ್ಷಣವಾದ ಒಂದು ರೀತಿಯಲ್ಲಿ ಎಲ್ಲ ನಿಯಮಗಳನ್ನು ಉಲ್ಲಂಘಿಸಿ (ಅನ್ಯಥಾ) ಬರುವದು. ಹೀಗೆ ವೈದಿಕ ಶಬ್ದಗಳು ಸಿದ್ಧವಾಗುತ್ತವೆ.

ಭೂ ಮೊದಲಾದ ಧಾತುಗಳು ಪರಸ್ಮೈಪದಗಳೆಂದು ಹೆಸರಾಗಿವೆ. ಏಧ ಮುಂತಾದ ಧಾತುಗಳು ಆತ್ಮನೇಪದಗಳೆಂದು ಹೇಳಲ್ಪಟ್ಟವೆ. ಇವು ಒಟ್ಟನಲ್ಲಿ ಮೂವತ್ತಾರು ಧಾತುಗಳು ಉದಾತ್ತವೆಂಬ ಸಂಜ್ಞೆಯನ್ನು ಹೊಂದಿವೆ. ಆತ ಎಂಬುದೇ ಮೊದಲಾಗಿರುವ ಮೂವತ್ತೆಂಟು ಧಾತುಗಳು ಪರಸ್ಮೈಪದಗಳಾಗಿವೆ. ಅಲ್ಲದೆ ಶೋಕೃ ಮೊದಲಾಗಿರುವ ಸುಮಾರು ನಲವತ್ತೆರಡು ಆತ್ಮನೇಪದಗಳೆಂದು ವಿವರಿಸಲಾಗಿದೆ. ಪಚ್ ಮುಂತಾದವುಗಳು ಐವತ್ತು ಧಾತುಗಳೆಲ್ಲ ಉದಾತ್ತೇತ್‌ಗಳೆಂದು ವರ್ಣಿಸಲಾಗಿದೆ. ವರ್ಚ ಮುಂತಾದ ಇಪ್ಪತ್ತೊಂದು ಅನುದಾತ್ತೇತುಗಳು, ಗುಪ ಮುಂತಾದ ನಲವತ್ತೆರಡು ಧಾತುಗಳು ಉದಾತ್ತೇತ್ತುಗಳೆಂದು ವಿವರಿಸಿದ್ದಾರೆ. ಮೇಲಾಗಿ ಶಬ್ದಶಾಸ್ತ್ರ ಪರಿಣತರಿಂದ, ಧಿಣ್ಣಾದಿ ಹತ್ತು ಧಾತುಗಳು ಅನುದಾತ್ತೇತು ಗಳೆಂದು ವಿಭಾಗಿಸಲ್ಪಟ್ಟವೆ. ಅಣ ಮುಂತಾಗಿ ಇಪ್ಪತ್ತೇಳು ಧಾತುಗಳು ಉದಾತ್ತೇತ್ತುಗಳಾಗಿವೆ. ಅಮಾದಿ ಮೂವತ್ತನಾಲ್ಕು ಧಾತುಗಳು ಇತ್ಸಂಜ್ಞೆಯುಳ್ಳವು ಗಳಾಗಿವೆ. ಮಷ್ಯ ಮೊದಲಾದ ಇಪ್ಪತ್ತೆರಡು ಧಾತುಗಳು ಉದಾತ್ತ ಇತ್ಸಂಜ್ಞೆಯುಳ್ಳವುಗಳು.

ಧಾವು ಎಂಬ ಒಂದೇ ಧಾತುವು ಸ್ವರಿತವೇ ಇತ್ಸಂಜ್ಞೆಯಾಗಿ ಉಳ್ಳದ್ದು. ಕ್ಷುಧ ಮೊದಲಾದ ಐವತ್ತೆರಡು ಧಾತುಗಳು ಅನುದಾತ್ತೇತುಗಳು. ಘಷಿ ಮುಂತಾಗಿ ಎಂಭತ್ತೆಂಟು ಧಾತುಗಳು ಉದಾತ್ತೇತ್‌ಗಳು, ದ್ಯುತಾದಿ ಇಪ್ಪತ್ತೆರಡು ಧಾತುಗಳು ಸಹ ಅನುದಾತ್ತೇತುಗಳಾಗಿವೆ. ಘಟಾದಿ ಗಣದಲ್ಲಿ ಓತ್ತಾದ ಹದಿಮೂರು ಧಾತುಗಳು ಅನುದಾತ್ತವೆ ಇತ್ಸಂಜ್ಞೆಯಾಗಿ ಇರುತ್ತವೆ. ಅವುಗಳಲ್ಲಿ ಜ್ವಲ ಮುಂತಾದ ಐವತ್ತೆರಡು ಧಾತುಗಳು ಉದಾತ್ತೇತ್ತುಗಳೆಂದು ತಿಳಿಯಬೇಕು.

ಈಗ ರಾಜ್ಯ ಧಾತುವು ಸ್ವರಿತೇತ್ತೆಂದು ಹೇಳಲಾಗಿದೆ. ತನು, ಭ್ರಾಜ್ಯ ಮುಂತಾದ ಮೂರು ಧಾತುಗಳು ಅನುದಾತ್ತೇತುಗಳು. ಭಾ ಧಾತು ಮಾತ್ರ ಉದಾತ್ತವಾಗಿದೆ. ಅದರಂತೆ ಸಹ ಧಾತುವು ಕೂಡ ಅನುದಾತ್ತೇತ್ ಎಂದೂ ರಮ ಎಂಬುದು ಒಂದೇ ಆತ್ಮನೆ, ಪದವೆಂದೂ ತಿಳಿಯಬೇಕು. ಸದ ಮೊದಲಾದ ಮೂರು ಉದಾತ್ತೇತುಗಳು. ಕುಚಾದಿಗಳು ಉದಾತ್ತಗಳು. ಹಿಕ್ಕ ಮೊದಲಾದ ಮೂವತ್ತೈದು ಧಾತುಗಳು ಸ್ವರಿತೇತ್ತುಗಳು. ಶಿಇ್, ಭೃಇ್ ಮುಂತಾದ ನಾಲ್ಕು ಧಾತುಗಳೂ ಸಹ ಸ್ವರಿತೇತ್ತುಗಳು. ಧೇಟ್ ಮುಂತಾದ ನಲವತ್ತಾರು ಧಾತುಗಳು ಪರಸ್ಮೈಪದಗಳು. ಸ್ಮಿಜಾದಿ ಹದಿನೆಂಟು ಧಾತುಗಳು ಆತ್ಮನೇಪದಗಳೆಂದು ಹೇಳಲ್ಪಟ್ಟವೆ. ಆ ಬಳಿಕ ಪೂಜ್ ಮುಂತಾದ ಮೂರು ಧಾತುಗಳು ಅನುದಾತ್ತೇತುಗಳೆಂದು ಸಿದ್ಧವಾಗಿವೆ. ಹೃ ಧಾತವು ಪರಸ್ಮೈಪದಿಯು ಸ್ತು ಮುಂತಾದ ಮೂರು ಆತ್ಮನೇಪದಗಳಾಗಿವೆ. ರಭ ಮುಂತಾದ ನಾಲ್ಕು ಧಾತುಗಳು ಅನುದಾತ್ತೇತುಗಳು. ಇಕ್ಷ್ವಿದಾ ಎಂಬುದು ಉದಾತ್ತೇತ್ತಾಗಿದೆ. ಸ್ಕಂಬು ಮುಂತಾದ ಹದಿನೈದು ಪರಸ್ಮೈ ಪದಗಳು ಕಿತಧಾತುವು ಉದಾತ್ತೇತ್ತುವು ಹಾಗೆಯೇ ದಾನ, ಶಾನ ಧಾತುಗಳು ಉಭಯಪದಿಗಳು

(ಸ್ವರಿತೇತ್ತುಗಳು). ಪಚ ಮುಂತಾದ ಸ್ವೌರಿತೇತ್ತುಗಳು ಒಂಭತ್ತು ಇವೆ. ಅಂಕ ಮುಂತಾದವು ಪರಸ್ಮೈಪದಗಳಾಗಿವೆ.

ಮೂರು ಸ್ವರಿತೇತ್ತುಗಳು ವದ, ವಚ, ಧಾತುಗಳು ಪರಸ್ಮೈಪದಗಳು ಭೂ ಮುಂತಾದ ಧಾತುಗಳು ಸಾವಿರದ ಆರು ಇವೆ. ಇವುಗಳೆಲ್ಲ ಭ್ವಾದಿಗಣದವುಗಳೆಂದು ಭಾವಿಸಲಾಗಿದೆ. ವದ ಮತ್ತು ಹನ ಧಾತುಗಳು ಪರಸ್ಮೈಪದಗಳು ದ್ವಿಷ ಮುಂತಾದ ನಾಲ್ಕು ಧಾತುಗಳು ಸ್ವರಿತೇತ್ತುಗಳು. ಇಲ್ಲಿ ಚಕ್ಷಿಜ್ ಎಂಬ ಒಂದು ಧಾತುವು ಮಾತ್ರ ಆತ್ಮನೇ ಪದವಾಗಿದೆ. ಇರಾದಿ ಹದಿಮೂರು ಧಾತುಗಳು ಅನುದಾತ್ತ ಇತ್ಸಂಜ್ಞೆಯೆಂದು ವಿಂಗಡಿಸಲಾಗಿದೆ.

ಶಬ್ದ ಶಾಸ್ತ್ರ ಪ್ರವೀಣರು ಪೂಜ್, ಶೀಜ್ ಎಂಬ ಎರಡು ಧಾತುಗಳು ಪರಸ್ಮೈ ಪದಗಳೆಂದು ಹೇಳುತ್ತಾರೆ. ಷು ಮುಂತಾದ ಏಳು ಧಾತುಗಳು ಪರಸ್ಮೈಪದಗಳೆಂದು ಉಕ್ತವಾಗಿವೆ. ಉರ್ಣುಞ್ ಎಂಬುದು ಸ್ವರಿತೇತ್ರಾಗಿದೆ. ಘ ಮೊದಲಾದ ಮೂರು ಧಾತುಗಳು ಮಾತ್ರ ಪರಸ್ಮೈಪದಗಳಾಗಿವೆ ಎಂಬುದನ್ನು ಗಮನಿಸಬೇಕು. ಷ್ವುಞ ಎಂಬ ಒಂದು ಧಾತುವು ಸ್ವರಿತೇತ್ತಾಗಿದೆ. ರಾ ಮೊದಲಾದ ಹದಿನೆಂಟು ಧಾತುಗಳು ಪರಸ್ಮೈಪದಗಳೆಂದು ವಾಡಿಕೆಯಲ್ಲಿ ತಿಳಿಯಲ್ಪಡುತ್ತದೆ. ಆದರೆ ಇಜ್ ಎಂಬ ಒಂದು ಧಾತು ಆತ್ಮನೇಪದಿಯು. ಇನ್ನು ವಿದ ಮೊದಲಾದ ನಾಲ್ಕು ಧಾತುಗಳು ಪರಸ್ಮೈಪದ ಗಳಾಗಿವೆ. ಹಾಗೆಯೇ ಇಷ್ವಪ್ ಶಯೇ ಈ ಧಾತವು ಮಲಗು ಎಂಬರ್ಥದಲ್ಲಿ ಪರಸ್ಮೈಪದಿ ಯಾಗಿದೆ. ಸ್ಯಮ ಮುಂತಾದವು ಪರಸ್ಮೈಪದಿಗಳೆಂದು ಈ ಹಿಂದೆ ಹೇಳಿದೆಯಷ್ಟೆ! ದೀಧೀಜ್ ವೇವಿಜ್ ಎಂಬ ಎರಡು ಧಾತುಗಳು ಆತ್ಮನೇಪದಗಳಾಗಿವೆ. ಪ್ರಥ ಮೊದಲಾದ ಮೂರು ಧಾತುಗಳು ಉದಾತ್ತೇತ್ತುಗಳೆಂದು ಸೂಚಿಸಲಾಗಿದೆ. ಚರ್ಕರೀತಂ, ಹ್ನುಜ್ ಎಂಬುವು ಆತ್ಮನೇಪದಗಳಾಗಿವೆ. ಇದೇ ರೀತಿಯಲ್ಲಿ ಅದಾದಿಗಯಣದಲ್ಲಿ ಮುನ್ನೂರು ಧಾತುಗಳಿವೆ. ದಾ ಮುಂತಾದ ಧಾತುಗಳು ಪರಸ್ಮೈಪದಗಳು ಭೃಞ ಎಂಬ ಧಾತವು ಸ್ವರಿತೇತ್ತಾಗಿದೆ. ಹಾತ್ ಎಂಬ ಧಾತುವು ಉದಾತ್ತೇತ್ತಾಗಿದೆ. ಮಾಜ್, ಹಜ್, ಎಂಬ ಎರಡು ಧಾತುಗಳು ಅನುದಾತ್ತವೇ ಇತ್ತಾಗಿವುಳ್ಳವುಗಳು. ದಾನ ಧಾತುವು ಸ್ವರಿತ್ತೇತು ಎಂದು ತಿಳಿಯಬೇಕು. ವಾಣ ಮುಂತಾದ ಮೂರು ಧಾತುಗಳು ಸ್ವರಿತೇತ್ತುಗಳೆಂದು ವಿವರಿಸಲ್ಪಟ್ಟಿದ್ದು ಘೃ ಮೊದಲಾದ ಹನ್ನೆರಡು ಧಾತುಗಳೂ ಸಹ ಪರಸ್ಮೈಪದಗಳಾಗಿವೆ. ಇದರಂತೆ ಜುಹೋತ್ಯಾದಿ ಗಣದಲ್ಲಿ ಇಪ್ಪತ್ತೆರಡು ಧಾತುಗಳಿವೆ. ಮುಂದೆ ಉಕ್ತವಾದವುಗಳು ದಿವಾದಿ ಧಾತುಗಳು. ಇವು ಇಪ್ಪತ್ತೈದು ಇದ್ದು ಎಲ್ಲವೂ ಪರಸ್ಮೈಪದಗಳಾಗಿವೆ. ಪೂಜ್, ದೀಜ್ ಎಂಬ ಎರಡು ಧಾತುಗಳು ಆತ್ಮನೇ ಪದಗಳಾಗಿವೆ. ಓಕಾರ ಮುಂತಾಗಿ ಇತ್ತಾಗಿ ಉಳ್ಳ ಪೂಜ್ ಮೊದಲಾದ ಏಳುಧಾತುಗಳು ಆತ್ಮನೇಪದಿಗಳಾಗಿವೆ. ಷೋಮೊದಲಾದವುಗಳು (ಧಾತುಗಳು) ಪರಸ್ಮೈ ಪದಿಗಳಾಗಿವೆ. ಆದರೆ ಜನೀ ಮುಂತಾದ ಹದಿನೈದು ಧಾತುಗಳು ಆತ್ಮನೇಪದಿ ಗಳಾಗಿದ್ದು ಮೃಷ ಮುಂತಾದ ಐದು ಧಾತುಗಳು ಕೂಡ ಸ್ವರಿತೇತ್ತುಗಳೆಂದು ವರ್ಣಿತವಾಗಿವೆ.

ಪದ ಮುಂತಾದ ಹನ್ನೊಂದು ಧಾತುಗಳು ಆತ್ಮನೇಪದಿಗಳೆಂದು ತಿಳಿಯಲ್ಪಟ್ಟಿವೆ ಅಕರ್ಮಕವಾದ ರಾದ್ದ ಧಾತುವು ವೃದ್ಧ್ಯರ್ಥದಲ್ಲಿ ಸ್ವಾದಿ ಚುರಾದಿಗಳಲ್ಲಿಯೂ ಪರಸ್ಮೈಪದಿಯು. ಇವು ದಿವಾದಿಗಳೆಂದು ತಿಳಿಯಬೇಕು. ತುದ ಮುಂತಾದ ಹದಿಮೂರು ಧಾತುಗಳು ಉದಾತ್ತೇತ್ತುಗಳಾಗಿದ್ದು ರಥ ಮುಂತಾದ ಎಂಟು ಧಾತುಗಳು ಪಸಸ್ಮೈಪದಿ ಗಳಾಗಿವೆ. ಸಮ ಮೊದಲಾದ ಮೂವತ್ತೆಂಟು ಧಾತುಗಳು ಉದಾತ್ತೇತ್ತುಗಳಾದರೆ

ದಿವಾದಿಯಲ್ಲಿ ನೂರನಲವತ್ತು ಧಾತುಗಳಿದ್ದುದ್ದು ವರ್ಣಿತವಾಗಿವೆ. ಷೂಜ್ ಮೊದಲಾದ ಒಂಭತ್ತು ಧಾತುಗಳು ಸ್ವರಿತ್ತೇತ್ತುಗಳಾದರೆ ದುನೋತಿ (ದು) ಮುಂತಾದ ಏಳು ಧಾತುಗಳು ಪರಸ್ಮೈಪದಿಗಳಾಗಿವೆ. ಘ ಮೊದಲಾದ ಎರಡು ಧಾತುಗಳು ಅನುದಾತ್ತೇತ್ತುಗಳು. ತಿಕ ಮುಂತಾದ ಹದಿನಾಲ್ಕು ಧಾತುಗಳೂ ಸಹ ಪರಸ್ಮೈಪದಿಗಳೆಂದು ಪರಿಗಣಿತವಾಗಿವೆ.

ಇದೇ ರೀತಿಯಲ್ಲಿ ಸ್ವಾದಿಗಣದಲ್ಲಿ ಮೂವತ್ತೆರಡು ಹಾಗೂ ತುದ ಮೊದಲಾದ ಆರು ಧಾತುಗಳು ಸ್ವರಿತೇತ್ತುಗಳೆಂದು ತಿಳಿಯಬೇಕು. ಋಷೀ ಎಂಬ ಧಾತುವು ಉದಾತ್ತೇತ್ತವಾದುದು. ಜುಷೀ ಮುಂತಾದ ನಾಲ್ಕು ಧಾತುಗಳು ಆತ್ಮನೇಪದಿಗಳು ವ್ರಶ್ಚ ಮುಂತಾದ ನೂರೈದು ಧಾತುಗಳು ಉದಾತ್ತೇತ್ತುಗಳೆಂದು ಸೂಚಿಸಿದ್ದಾರೆ. ಇಷ್ಟೇ ಅಲ್ಲದೆ, ಗೂರೀ ಒಂದು ಧಾತುವು ಉದಾತ್ತೇತ್ತುವೆಂದು ಇಲ್ಲಿ ಹೇಳಲಾಗಿದೆ. ಣೂ ಮುಂತಾದ ನಾಲ್ಕು ಧಾತುಗಳು ಪರಸ್ಮೈಪದಗಳು. ಕುಜ್ ಎಂಬ ಧಾತುವು ಅನುದಾತ್ತೇತ್ತಾದುದು. ಕುಚ ಮುಂತಾದವುಗಳು ಇಲ್ಲಿ ಸೇರಿವೆ. ಧೃಜ್ ಎಂಬೆರಡು ಧಾತುಗಳು ಆತ್ಮನೇಪದಿಗಳು. ಪ್ರಚ್ಛ ಮೊದಲಾದ ಹದಿನಾರು ಧಾತುಗಳು ಪರಸ್ಮೈಪದಿಗಳು.

ಅದರಂತೆ ದೃಜ್, ಧೃಜ್ ಎಂಬೆರಡು ಧಾತುಗಳು ಆತ್ಮನೇಪದಿಗಳು. ಪೃಚ್ಛ ಮೊದಲಾದ ಧಾತುಗಳು ಪರಸ್ಮೈಪದಿಗಳಾಗಿವೆ. ಮಿಲ ಮುಂತಾದ ಆರು ಧಾತುಗಳು ಸ್ವರಿತ್ತೇತ್ತುಗಳು. ಕೃತೀ ಮುಂತಾದ ಮೂರು ಧಾತುಗಳು ಪರಸ್ಮೈಪದಿಗಳು. ಇದೇ ರೀತಿಯಲ್ಲಿ ತುದಾದಿಯಲ್ಲಿ ನೂರ ಐವತ್ತೇಳು ಧಾತುಗಳು. ರುಧ, ಮೊದಲಾದವು ಸ್ವರಿತೇತ್ತುಗಳು. ಕೃತೀ ಎಂಬುದು ಪರಸ್ಮೈಪದಿಯು. ಇ ಇಂಧೀ ಎಂಬ ಧಾತುವಿನ ಮುಂದೆ ಹೇಳಲಾದ ಮೂರು ಧಾತುಗಳು ಉದಾತ್ತೇತ್ತುಗಳಾಗಿವೆ. ಷ್, ಪಿಷ್, ರುಧ ಮುಂತಾದ ಇಪ್ಪತ್ತೈದು ಧಾತುಗಳು ಉದಾತ್ತೇತ್ತುಗಳೆಂದು ಹೇಳಲ್ಪಟ್ಟವೆ. ತನುವೇ ಮೊದಲಾದ ಏಳು ಧಾತುಗಳು ಸ್ವರಿತೇತ್ತುಗಳೆಂದು ಹೇಳಲ್ಪಟ್ಟಿದ್ದು ಮನು, ವನುವೆಂಬೆರಡು ಧಾತುಗಳು ಆತ್ಮನೇ ಪದಿಗಳು, ಕೃಞ್ ಧಾತುವು ಸ್ವರಿತೇತ್ತಾಗಿ ಉಭಯ ಪದವಾಗುವದೂ ಉಂಟು. ಆಮೇಲೆ ಎರಡು ಧಾತುಗಳು ಈ ಗಣದಲ್ಲಿ ಹೇಳಲ್ಪಟ್ಟಿದ್ದು, ಶಬ್ದ ಶಾಸ್ತ್ರ ಪಂಡಿತರು ಈ ಗಣದಲ್ಲಿ ಹತ್ತು ಧಾತುಗಳನ್ನು ಹೆಸರಿಸಿರುತ್ತಾರೆ. ಕ್ರೀಞ್ ಮೊದಲಾದ ಏಳು ಧಾತುಗಳು ಉಭಯ ಪದಿಗಳಿರುತ್ತದೆ.

ಸ್ತಂಭು ಮೊದಲಾದ ನಾಲ್ಕು ಧಾತುಗಳು ಸೌತ್ರ ಧಾತುಗಳು ಪರಸ್ಮೈಪದಿಗಳು. ಕ್ರುಧ ಮುಂತಾದ ಇಪ್ಪತ್ತೆರಡು ಧಾತುಗಳು ಉದಾತ್ತೇತ್ತುವಾಗಿವೆ, ವಜ್ ಧಾತುವು ಆತ್ಮನೇ ಪದಿಯು. ಶ್ರಂಥ ಮುಂತಾದವು ಇಪ್ಪತ್ತೊಂದು ಧಾತುಗಳು ಪರಸ್ಮೈಪದಿಗಳಾಗಿವೆ. ಗ್ರಹ ಧಾತವು ಸ್ವರಿತೇತ್ತುವಾಗಿದೆ. ಇದರಂತೆ ಕ್ರ್ಯಾದಿ ಗಣದಲ್ಲಿ ಐವತ್ತೆರಡು ಧಾತುಗಳು ಪರಿಗಣಿತವಾಗಿದ್ದು ಇ ಕಾರವೇ ಕೊನೆಗೆ ಬರುವ ನೂರ ಐವತ್ತಾರು ಧಾತುಗಳು ಚುರಾದಿ ಗಣದಲ್ಲಿ ಉಕ್ತವಾಗಿವೆ. ಚಿತಿ ಮುಂತಾಗಿ ಹದಿನೆಂಟು ಧಾತುಗಳು ಆತ್ಮನೇಪದಿ ಗಳಾಗಿರುವವು. ಚರ್ಚಾ ಎಂಬುದೇ ಆದಿಯಾಗಿ ಧೃಷೀ ಧಾತುವಿನವರೆಗೆ ಇರುವವು. ಇವುಗಳನ್ನು ಇ್ಯಂತಗಳೆಂದು ತಿಳಿಯಬೇಕು. ಉಭಯ ಪದಿಗಳೆಂದು ವರ್ಣಿತವಾಗಿದೆ. ಇದರಂತೆ ನಲವತ್ತೆಂಟು ಧಾತುಗಳು ಇಲ್ಲಿ ಆಕಾರವೇ ಅಂತ್ಯದಲ್ಲಿ ಇರುವವು. ಪದ ಮುಂತಾದ ಹತ್ತು ಧಾತುಗಳು ಆತ್ಮನೇ ಪದಿಗಳಾಗಿರುತ್ತವೆ. ಇವುಗಳಷ್ಟೇ ಅಲ್ಲದೆ ಸೂತ್ರ ಮುಂತಾದ ಎಂಟು ಧಾತುಗಳು ಇ್ಯಂತಗಳಾಗಿವೆ. ಪ್ರಾತಿಪದಿಕದ ಮೇಲೂ ಧಾತ್ವರ್ಥ ವಿವಕ್ಷೆ

ಮಾಡಿದಾಗ ಕ್ರಿಯಾಪದದ ಪ್ರತ್ಯಯಗಳೂ ಬರುತ್ತವೆ. ಆಗ ಇಷ್ಟವದ್ಭಾವ ಬರುತ್ತದೆ. ಅರ್ಥಾತ್ ಅಂತ್ಯಲೋಪಾದಿಗಳು ಬರುತ್ತವೆ. ಇನ್ನು ಚಿತ್ತಾದಿಧಾತುಗಳ ವಿಚಾರವಾಗಿ ಹೇಳುವದಾದರೆ - ಅದನ್ನು ಮಾಡುತ್ತಾನೆ, ಅದನ್ನು ಆಚರಿಸುತ್ತಾನೆ ಎಂಬ ಅರ್ಥದಲ್ಲಿಯೂ ಮಾಡಿಸುವವನು ಅಥವಾ ಪ್ರೇರೇಪಿಸುವನು ಎಂಬ ಅರ್ಥದಲ್ಲಿಯೂ ಣಿಚ್ ಎಂಬ ಪ್ರತ್ಯಯವು ಬರುವದು. ಈ ರೀತಿಯಾಗಿ ಕರ್ತ್ರರ್ಥದಲ್ಲಿಯೂ ಹಾಗೂ ಕರಣಾರ್ಥದಲ್ಲಿಯೂ ಕ್ರಿಯೆಯನ್ನು ವಿವಕ್ಷೆ ಮಾಡಿದಾಗ ಪ್ರತ್ಯಯಗಳು ಬರುತ್ತವೆ. ಸಂಗ್ರಾಮ ಮುಂತಾದ ಎಂಟು ಧಾತುಗಳು ಯುದ್ಧ ಮೊದಲಾದ ಅರ್ಥಗಳಲ್ಲಿ ಅನುದಾತ್ತೇತ್ತಾಗಿ ಶಬ್ದ ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿವೆ. ಸ್ತೋಮ ಮುಂತಾದ ಆಕಾರಾಂತವಾದ ಹದಿನಾರು ಧಾತುಗಳನ್ನು ಈ ನಾಮಧಾತುಗಳಿಗೆ ದೃಷ್ಟಾಂತ ನೀಡಬಹುದು. ಇದೇ ರೀತಿಯಲ್ಲಿ ಬಹುಲಗ್ರಹಣದಿಂದಲೂ, ಸೂತ್ರ ನಿರ್ದೇಶನದಿಂದ, ವೇದದಲ್ಲಿ ಪ್ರಯೋಗಿಸಿದ ಧಾತುಗಳನ್ನು ಗುರುತಿಸಬೇಕು. ಎಲ್ಲ ಧಾತುಗಳನ್ನು ಸಂದರ್ಭಾನು ಗುಣವಾದ ಎಲ್ಲ ಗಣಗಳಲ್ಲಿ ಸೇರಿಸಬಹುದು. ಅಲ್ಲದೆ ಒಂದೇ ಧಾತುವಿಗೆ ಅನೇಕ ಅರ್ಥಗಳಿರುತ್ತವೆ. ಸನ್ ಮೊದಲಾದ ಪ್ರತ್ಯಯಗಳೇ ಅಂತ್ಯವಾಗಿರುವುಗಳೂ ಧಾತುಗಳೆಂದು ತಿಳಿಯಬೇಕು. ಅದರಂತೆ ನಾಮಪದದ ಮೇಲೆ ಪ್ರತ್ಯಯ ಬಂದರೆ ನಾಮಧಾತುಗಳಾಗುವವು. ಇದೇ ರೀತಿಯಾಗಿ ಧಾತುಗಳು ಲೆಕ್ಕವಿಲ್ಲದಷ್ಟು ನಿರ್ಮಾಣಗೊಳ್ಳ ಬಹುದು. ಈ ರೀತಿಯಲ್ಲಿ ಧಾತುಗಳ ನಿರ್ಮಾಣ ವಿಧಾನ ಹಾಗೂ ಪದಗಳ ವಿಂಗಡನೆ ವಿಧಾನವು ನಡೆಯುತ್ತದೆ. ಸ್ವರವೇ ಅಂತ್ಯವಾಗಿರುವ ಧಾತುಗಳಲ್ಲಿ ಊಕಾರ ಋಕಾರ ಅಂತ್ಯವಾಗಿರುವ ಯೂ, ರು, ಕ್ಷು, ತೀಜ್, ಸ್ನು, ನು ಕ್ಷು, ಶ್ವಿ, ಡೀಙ್,ವೃಙ್, ವೃಞ ಇವುಗಳನ್ನು ಬಿಟ್ಟು ಉಳಿದ ಒಂದು ಸ್ವರವಿರುವ ಧಾತುಗಳು ಅನುದಾತ್ತಗಳೆಂದು ಹೇಳಿದೆ.

ಇನ್ನು ವ್ಯಂಜನಾಂತಗಳಲ್ಲಿ ಅನುದಾತ್ತ ಧಾತುಗಳು ಗಣನೆ ಮಾಡಲ್ಪಡುತ್ತವೆ - ಶಕ್ಲ್, ಪಚ್, ಮುಚಲ್ಯ, ರಿಚ್, ವಚ್, ಸಿಚ್, ರಿಚ್, ಪೃಚ್ಛ, ತ್ಯಜ, ನಿಜರ್, ಭಜ್, ಭಂಜ್, ಭುಸ್ಜ್, ಮಸ್ಜ್, ಯಜ್, ಯುಜ್, ರುಜ್, ರಂಜ್, ವಿಜಿರ್, ಸ್ವಂಜ್, ಸಂಜ್, ಸೃಜ್ ಮುಂತಾದವು. ಅಲ್ಲದೆ ಅದ್, ಕ್ಷುದ್, ಖಿದ್, ಛಿದ್, ತುದ್, ನುದ್, ಪದ್, ಭಿದ್, ತುದ್, ವಿದ್, ವಿನದ್, ಶದ್, ಸದ್, ಸ್ವದ್, ಸ್ಕಂದ್, ಹದ್, ಕುಧ್, ಕ್ರುದ್ ಮುಂತಾದವುಗಳು ಅಲ್ಲದೆ ಬಂಧ್, ಯುಧ್, ರುಧ್, ವ್ಯಧ್, ಶುಧ್, ಸಾಧ್, ಸಿಧ್, ಮನುಹನ್, ಆಪ್, ಕ್ಷಿಪ್, ಛುಪ್, ತಪ್, ತಿಪ್, ತೃಪ್ ಎಂಬಿತ್ಯಾದಿಗಳಲ್ಲದೆ ಲಿಪ್, ಲುಪ್, ದಪ್, ಶಪ್, ಸ್ವಪ್, ಸೃಪ್, ಯಭ್, ರಭ್, ಲಭ್, ಗಮ್, ನಮ್, ಯಂ, ರಂ, ಕ್ರುಷ್, ದಂಶ್, ದಿಶ್, ದೃಶ್, ಮೃಶ್, ರಿಶ್, ರುಶ್, ಲಿಶ್, ವಿಶ್, ಸ್ಪೃಶ್, ಕೃಷ್ ಮುಂತಾದವುಗಳು ಹಾಗೂ, ತ್ರಿಷ್, ತುಷ್, ದ್ವಿಷ್, ದುಷ್, ಪುಷ್, ಪಿಷ್ ವಿಷ್, ಶಿಷ್ ಶುಷ್, ಶ್ಲಿಷ್, ಘಸ್, ವಸ್, ದಿಸ್, ದಿಹ್, ದಸ್, ದುದ್, ನಹ್, ಮಿಹ್, ರುಹ್ ಲಿಹ್, ವಹ್, ಮುಂತಾದವುಗಳು.

ಹೀಗೆ ಹಲಂತ ಧಾತುಗಳಲ್ಲಿ ಅನುದಾತ್ತವಾದ ಧಾತುಗಳು ಹೇಳಿದಂತೆ ನೂರು ಎರಡು ಧಾತುಗಳಿವೆ. ಹಾಗೆಯೇ ಚಾದಿ ಅಂದರೆ ಚ ಮುಂತಾದವುಗಳು ನಿಪಾತವೆನಿಸಿಕೊಳ್ಳುತ್ತವೆ. ಇವುಗಳಲ್ಲಿ ದಿಕ್ಕು, ದೇಶ, ಕಾಲ ಮುಂತಾದ ವಿಶೇಷಾರ್ಥದಲ್ಲಿ ಪ್ರಾದಿಗಳು ಸೇರಿರುತ್ತವೆ. ಇದರಂತೆ ಅನೇಕ ಲಿಂಗಗಳಲ್ಲಿ ಅನೇಕ ಅರ್ಥವಿರುವ ಶಬ್ದಗಳು ಹೇಳಲ್ಪಟ್ಟಿದ್ದು, ಅವುಗಳು ಸಮೂಹದಿಂದ ವಿಭಾಗಿಸಲ್ಪಟ್ಟಿರುತ್ತವೆ. ಅವುಗಳನ್ನು

ಗಣಪಾಠ, ಸೂತ್ರಪಾಠ, ಧಾತುಪಾಠ ಎಂಬಿತ್ಯಾದಿ ರೀತಿಯಲ್ಲಿ ವಿಂಗಡಿಸುತ್ತಾರೆ. ಇದರಂತೆ ವೇದದಲ್ಲಿಯೂ ಹಾಗೂ ಜಗತ್ತಿನಲ್ಲಿ ರೂಢಿಗತವಾದ (ನಿಷ್ಪನ್ನವಾದ) ಶಬ್ದಾದಿಗಳಿಗೆ ವೈದಿಕ ಲೌಕಿಕ ಶಬ್ದಗಳೆಂದು ಕರೆಯುತ್ತಾರೆ. ಈ ಶಬ್ದಗಳ ಪಾಠಾನುಕ್ರಮವು (ಪಾರಾಯಣ) ಶಬ್ದ ಸಂಗ್ರಹದಲ್ಲಿ ಕಾರಣವಾಗಿರುತ್ತದೆ. ಸೌಮ್ಯ ಶಬ್ದಗಳು ಅನಂತ ಸಂಖ್ಯೆಯಲ್ಲಿದ್ದರೂ ಅವುಗಳನ್ನು ಲಘು ಮಾರ್ಗದಿಂದ ಹೇಳಲಾಗಿದೆ. ಈ ಲಘು ಮಾರ್ಗವು ಈ ಪ್ರಕೃತಿ, ಪ್ರತ್ಯಯ, ಆದೇಶ, ಲೋಪ, ಆಗಮ ಮುಂತಾದವುಗಳನ್ನು ತಿಳಿದಿರುವದರಿಂದ ಸಾಧ್ಯವು. ಈ ಪ್ರಕಾರವಾಗಿ ನಿರುಕ್ತವನ್ನು ಸಾಧ್ಯವಾದಷ್ಟು ಸಂಕ್ಷೇಪಿಸಿ ವಿವರಿಸಿದ್ದೇನೆ. ನಾರದನೇ ಅನಂತಾನಂತ ಸಂಖ್ಯೆಯಲ್ಲಿರುವ ಶಬ್ದ ಸಂಪತ್ತಿಯ ಉತ್ಪತ್ತಿ ಪ್ರಯೋಗಗಳನ್ನು ವರ್ಣಿಸಿ ಹೇಳುವದು, ಯಾರಿಗೆ ತಾನೇ ಸಾಧ್ಯ.

ನಾರದ ಮಹಾಪುರಾಣದಲ್ಲಿ ಐವತ್ತಮೂರನೆಯ ಅಧ್ಯಾಯ ಮುಗಿದುದು

—o—

## ಜ್ಯೋತಿರ್ಗಣಿತದ ವಿವರಣೆ

ಅಧ್ಯಾಯ - ೫೪

॥ ಸನಂದನ ಉವಾಚ ॥

**ಜ್ಯೋತಿಷಾಂಗಂ ಪ್ರವಕ್ಷ್ಯಾಮಿ ಯದುಕ್ತಂ ಬ್ರಹ್ಮಣಾ ಪುರಾ ॥**
**ಯಸ್ಯ ವಿಜ್ಞಾನಮಾತ್ರೇಣ ಧರ್ಮಸಿದ್ಧಿರ್ಭವೇನ್ನೃಣಾಂ ॥**
**ತ್ರಿಸ್ಕಂಧಂ ಜ್ಯೌತಿಷಂ ಶಾಸ್ತ್ರಂ ಚತುರ್ಲಕ್ಷಮುದಾಹೃತಂ ॥**
**ಗಣಿತಂ ಜಾತಕಂ ವಿಪ್ರ ಸಂಹಿತಾಸ್ಕಂಧಸಂಜ್ಞಿತಂ ॥**

**ಸನಂದನ:-** ಈಗ ಜ್ಯೋತಿಶ್ಶಾಸ್ತ್ರದ ವಿಷಯದಲ್ಲಿ ವಿಚಾರಗಳನ್ನು ವಿವರಿಸುತ್ತೇನೆ. ಧರ್ಮಕಾರ್ಯಗಳು ಫಲವು ಲಭಿಸಬೇಕಾದರೆ ಜನರು ಜ್ಯೋತಿಶ್ಶಾಸ್ತ್ರದ ಮಹತ್ವವನ್ನು ಅರಿಯಲೇಬೇಕು. ಆದ್ದರಿಂದ ಏಕಾಗ್ರ ಚಿತ್ತನಾಗಿ ಆಲಿಸು. ಜ್ಯೋತಿಷ್ಯವು ಮೂರು ಸ್ಕಂಧದಿಂದ ಒಡಗೂಡಿದ ಶಾಸ್ತ್ರವಾಗಿದೆ. ಇದರಲ್ಲಿ ಸುಮಾರು ನಾಲ್ಕು ಲಕ್ಷ ಗ್ರಂಥಗಳು ಉಪಲಬ್ಧವಿವೆ. ಅವೆಂದರೆ ಒಂದನೆಯದಾಗಿ ಗಣಿತಸ್ಕಂಧ, ಎರಡನೇಯದಾಗಿ ಜಾತಕ ಸ್ಕಂಧ ಹಾಗೂ ಮೂರನೆಯದಾಗಿ ಸಂಹಿತಾ ಸ್ಕಂಧವೆಂದು ಹೇಳುತ್ತಾರೆ. ಇನ್ನು ಪ್ರತಿಯೊಂದು ಸ್ಕಂಧದಲ್ಲಿಯ ವಿವರಗಳನ್ನು ಸಂಕ್ಷೇಪವಾಗಿ ವಿವರಿಸುತ್ತೇನೆ. ಗಣಿತ ಸ್ಕಂಧದಲ್ಲಿ ಗ್ರಹಗಳ ಸ್ಪಷ್ಟವಾದ ಮತ್ತು ಮಧ್ಯಮಗತಿಗಳ ಅಯನ, ಸೂರ್ಯಚಂದ್ರಾದಿ ಗ್ರಹಣಗಳ ವಿಷಯವಾಗಿ ಅಲ್ಲದೆ ಉದಯಾಸ್ತಗಳ ಕಾಲಮಾನವನ್ನು ಕಂಡು ಹಿಡಿಯುವದು. ಮತ್ತು ಛಾಯೆಯಿಂದ ಕ್ರಾಂತ್ಯಾದಿಗಳನ್ನು ತಿಳಿದುಕೊಳ್ಳುವ ವಿಧಾನ ವಿವರಿಸಲಾಗಿದೆ. ಪಾತಾಯನದ ಮುಂತಾದ ಉಪಯುಕ್ತವಾದ ಗ್ರಹಗಣಿತವನ್ನು ವರ್ಣಿಸಲಾಗಿದೆ.

ಜಾತಕ ಸ್ಕಂಧದಲ್ಲಿ ದ್ವಾದಶ ರಾಶಿಗಳ ಪ್ರಭೇದಗಳು, ಗ್ರಹ, ಯೋನಿ ಭೇದ, ವಿಯೋನಿ ಜನ್ಮಗಳು, ನಿಷೇಕಲಗ್ನ, ಬಾಲಾರಿಷ್ಟಾದಿ ಹಾಗೂ ಜಾತಕಾರಿಷ್ಟಗಳ ಬಗ್ಗೆ ವಿಸ್ತೃತ ಬಣ್ಣನೆ ಕಾಣಬಹುದು. ಇಷ್ಟೇ ಅಲ್ಲದೆ, ಆಯುರ್ದಾಯ ನಿರ್ಣಯ, ಗ್ರಹ ದೆಶೆಗಳು, ಕರ್ಮಾಜೀವಗಳನ್ನು ರಾಜಯೋಗಾದಿಗಳನ್ನು ವಿವರಿಸಿದ್ದಲ್ಲದೆ, ನಕ್ಷತ್ರಾದಿ ಮೂಲಕವಾಗಿ

ಉತ್ಪನ್ನವಾಗುವ ಯೋಗಾಯೋಗ ಬಲಾಬಲಗಳನ್ನು ಕಂಡು ಹಿಡಿಯುವ ವಿಧಾನವನ್ನೂ ವಿವರಿಸಲಾಗಿದೆ. ಚಂದ್ರನಿಂದ ಬರುವ ಯೋಗ, ಸಂನ್ಯಾಸ ಯೋಗ, ರಾಶಿಶೀಲ ಬಲಾಬಲಗಳ ನಿರೂಪಣೆ, ಗೋಚರಫಲ, ಗ್ರಹಗಳ ಫಲಗಳನ್ನು ಹಾಗೂ ಆಶ್ರಯ ಯೋಗ, ಮಿಶ್ರಯೋಗ, ಅನಿಷ್ಟಯೋಗ, ಸ್ತ್ರೀಜಾತಕ ನಿರೂಪಣೆ ಮುಂತದವುಗಳ ವಿಸ್ತೃತ ಬಣ್ಣನೆಯನ್ನು ಕಾಣಬಹುದಾಗಿದೆ. ನಷ್ಟವಾದ ಜಾತಕಗಳನ್ನು ಪುನಃ ನಿರ್ಮಿಸುವ ವಿಧಾನವನ್ನು ಸಹ ವಿವರಿಸಲಾಗಿದೆ.

ಮೂರನೆಯದಾಗಿ ಸಂಹಿತಾ ಸ್ಕಂಧದಲ್ಲಿ ಸೂರ್ಯಾದಿ ಗ್ರಹಗಳ ಸಂಚಾರ ಕ್ರಮ, ವರ್ಷಲಕ್ಷಣ, ತಿಥಿ ವಾರಾದಿ ನಕ್ಷತ್ರ ಯೋಗ ಕರಣಗಳ ಉತ್ಪತ್ತಿ ಕ್ರಮ, ಮುಹೂರ್ತ ಲಕ್ಷಣ, ಉಪಗ್ರಹಗಳು, ಸೂರ್ಯ ಸಂಕ್ರಾಂತಿ, ಪುರುಷರ ಲಕ್ಷಣ, ಚಂದ್ರಬಲ ಮತ್ತು ತಾರಾಬಲಗಳ ವಿವರಣೆಯನ್ನು ತಿಳಿದುಕೊಳ್ಳಬಹುದಾಗಿದೆ. ಗೃಹೋಪಯೋಗಿ ಹಾಗೂ ಉಳಿದ ಎಲ್ಲಾ ಧರ್ಮ, ಕರ್ಮಗಳಿಗೆ ಅವಶ್ಯವಿರುವ ಮುಹೂರ್ತಗಳು, ಗರ್ಭಾಧಾನಕಾಲ, ಪುಂಸವನ, ಸೀಮಂತ, ಜಾತಕರ್ಮ, ಅನ್ನಪ್ರಾಶನ, ಚೌಲ, ಕರ್ಣವೇಧನ, ಉಪನಯನ, ಸಮಾವರ್ತನ, ವಿವಾಹ ಮುಂತಾದ ಷೋಡಶ ಕರ್ಮಗಳಿಗೆ ಬೇಕಾಗುವ ಮುಹೂರ್ತಗಳ ಲಕ್ಷಣ, ಹಾಗೆಯೇ ವಿಗ್ರಹ ಪ್ರತಿಷ್ಠಾದಿಗಳಿಗೂ ನೂತನ ಗೃಹ, ಪ್ರಾಸಾದಗಳಿಗೂ ಬೇಕಾದ ಅತಿ ಮುಖ್ಯವೆನಿಸುವ ಮುಹೂರ್ತಗಳು ಹೇಳಲ್ಪಟ್ಟಿವೆ.

ಮೇಲಾಗಿ ಯಾತ್ರೆ, ಪ್ರಯಾಣ, ಮಳೆ, ಬೆಳೆಗಳ ವಿಷಯವಾಗಿ ಅನೇಕ ರೀತಿಯ ವಿಶೇಷ ಮಾಹಿತಿಗಳನ್ನು ತಿಳಿಯಬಹುದಾಗಿದೆ. ಭೂಮಿಯ ಉತ್ಖನನ, ವಜ್ರಾದಿ ಖನಿಜಗಳ ನಿಕ್ಷೇಪ ಮುಂತಾದವುಗಳ ಬಗ್ಗೆ ವಿವರಿಸಲಾಗಿದೆ. ಗಣಿತ ಭಾಗಕ್ಕೆ ಅವಶ್ಯವಾಗಿ ಬೇಕಾಗುವ ಅಂಕಿಗಳು ದಶ ಸಂಖ್ಯೆಯಿಂದ ಗಣಿತವಾದರೆ ಈ ರೀತಿಯಾಗಿ ಸಂಜ್ಞೆಗಳನ್ನು ಹೊಂದುತ್ತವೆ. ಹತ್ತು (೧೦) ನೂರು(೧೦೦), ಸಾವಿರ(೧೦೦೦), ದಶಸಾವಿರ(೧೦,೦೦೦), ಲಕ್ಷ(೧೦,೦೦೦೦), ಪ್ರಯುತ(೧೦೦೦೦೦೦), ಕೋಟಿ(೧೦೦೦೦,೦೦೦), ಅರ್ಬುದ(೧೦೦೦೦೦೦೦೦), ಅಬ್ಜ(೧೦೦೦೦೦೦೦೦೦೦), ಖರ್ವ(೧೦೦೦೦೦೦೦೦೦೦೦), ನಿಖರ್ವ(೧೦೦೦೦೦೦೦೦೦೦೦೦), ಮಹಾ ಪದ್ಮ(೧೦೦೦೦೦೦೦೦೦೦೦೦೦), ಶಂಕು(೧೦೦೦೦೦೦೦೦೦೦೦೦೦೦), ಜಲಧಿ(೧೦೦೦೦೦೦೦೦೦೦೦೦೦೦೦), ಅಂತ್ಯ( ೧೦೦೦೦೦೦೦೦೦೦೦೦೦೦೦೦), ಮಧ್ಯ(೧೦೦೦೦೦೦೦೦೦೦೦೦೦), ಪರಾರ್ಧ(೧೦೦೦೦೦೦೦೦೦೦೦೦೦೦೦೦೦) ಹೀಗೆ ಬೇರೆ ಬೇರೆ ಹೆಸರಿನಿಂದ ಹೇಳಲ್ಪಡುತ್ತವೆ. ಮತ್ತು ಅವುಗಳಿಗೆ ಸಹಾಯಕವೂ ಆಗುತ್ತವೆ. ಈ ಸಂಖ್ಯೆಗಳನ್ನು ಯೋಗ ಮಾಡುವದಕ್ಕೆ ಕ್ರಮ ಸಂಖ್ಯೆಯಿಂದಾಗಲಿ, ವ್ಯತ್ಯಮ ಸಂಖ್ಯೆಯಿಂದಾಗಲಿ ಅವಕಾಶವಿರುವುದು. ಎರಡು ಸಂಖ್ಯೆಗಳನ್ನು ಗುಣಿಸುವದಿದ್ದಾಗ ಗುಣ್ಯದ ಕಡೆಯ ಅಂಕಿಯನ್ನು ಗುಣಕದಿಂದ ಗುಣಿಸಬೇಕು. ಅದರ ಲಬ್ಧಕ್ಕೆ ಉಪಾಂತ್ಯದ ಅಂಕಿಯ ಗುಣಲಬ್ಧವನ್ನು ಕೂಡಿಸಬೇಕು. ಹಾಗೆಯೇ ಗುಣಲಬ್ಧವನ್ನು ಒಂದೇ ಸಾಲಿನಲ್ಲಿ ಇಡುತ್ತಾ ಬರಬೇಕು. ಇದರಂತೆ ಭಾಗಾಕಾರವನ್ನು ಮಾಡುವಾಗ ಭಾಜ್ಯಾಂಕದ ಭಾಜಕದ ಯಾವ ಗುಣಸಂಖ್ಯೆಯಿಂದ ಕಳೆಯಲು ಸಾಧ್ಯವಾದದ್ದೇ(ಗುಣಕ) ಭಾಗಲಬ್ಧ ವೆನಿಸುವದು. ಹೀಗೆ ಗುಣಲಬ್ಧವನ್ನು ಗುಣಕದಿಂದಲೂ ಭಾಗಲಬ್ಧವನ್ನು ಭಾಜ್ಯದಿಂದಲೂ ಸ್ಥಾಪಿಸಬೇಕು. ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದಲೇ ಗುಣಿಸುವ ರೀತಿಗೆ ವರ್ಗ, ಅಥವಾ ಕೃತಿ

ಎಂದು ಜ್ಯೋತಿಷ್ಯದಲ್ಲಿ ಕರೆಯುವದು ವಾಡಿಕೆ. ಆ ವರ್ಗದ ಮೂಲ ಸಂಖ್ಯೆಯೇ ವರ್ಗಮೂಲವೆನಿಸುತ್ತದೆ. ಅಲ್ಲದೆ ವಾಡಿಕೆಯಾಗಿ, ಜ್ಯೋತಿಷ್ಯದಲ್ಲಿ ಅಂಕಿಗಳನ್ನು ಬಲಭಾಗದಿಂದ ಎಡಭಾಗಕ್ಕೆ ಎಣಿಸಲಾಗುತ್ತದೆ. ಇದಕ್ಕೆ 'ಅಂಕಾನಾಂವಾಮತೋ ಗತಿಃ' ಎಂಬ ಶಾಸ್ತ್ರಾಧಾರವೇ ಸಾಕ್ಷಿ.

ವರ್ಗ ಸಂಖ್ಯೆಯಲ್ಲಿ ಕೊನೆಯದಾಗಿಯೂ, ಮತ್ತು ವಿಷಮವಾಗಿಯೂ ಇರುವ ಅಂಕಿ ಮತ್ತು ಅಂಕಿಗಳಿಗೆ ಮೊದಲು ಮೂಲವನ್ನು ಕಂಡು ಹಿಡಿದುಕೊಳ್ಳಬೇಕು. ಆಮೇಲೆ ಆ ಮೂಲವನ್ನು ಎರಡರಿಂದ ಗುಣಿಸಿ, ಆಮೇಲೆ ವಿಷಮ ವಿಷಮ ಸಂಖ್ಯಾ ಪರ್ಯಂತವಾಗಿ ಇರುವ ಅಂಕಿಗಳಲ್ಲಿ ಕಳೆಯಬೇಕು. ಲಬ್ಧವನ್ನು ಎರಡರಿಂದ ಗುಣಿಸಿ ಲಬ್ಧಸ್ಥಾನದಲ್ಲಿಡಬೇಕು. ಇದಕ್ಕೆ ಆನಯನ ಮಾಡುವದು ಎನ್ನುತ್ತಾರೆ. ಈ ಕ್ರಮಕ್ಕೆ ವರ್ಗಮೂಲಸಾಧನಾವಿಧಿ ಎಂದು ಕರೆಯುವದು ವಾಡಿಕೆ. ಹೀಗೆ ಒಂದೇ ಅಂಕಿಯನ್ನು ಅದೇ ಅಂಕಿಯಿಂದ ಗುಣಿಸುವದು ಘನವೆನಿಸುವದು. ಆದರೆ ಅವಶ್ಯವಾಗಿ ಮೂಲವನ್ನು ಅರಿಯಬೇಕು:- ಉದಾ : $4_{x}$ 4 = 64 ಇದೇ ಘನ.

ಘನಮೂಲವನ್ನು ತಿಳಿಯಬೇಕಾದರೆ ಘನದ ಅಂಕಿಗಳಲ್ಲಿ ಮೊದಲನೆಯ ಅಂಕೆಯು ಘನ ಸಂಜ್ಞೆಯುಳ್ಳದ್ದು. ಅದರ ಮುಂದಿನ ಎರಡು ಅಂಕಿಗಳು ಘನಾಂಕಗಳಲ್ಲದವು. ಅದಕ್ಕಿಂತ ಮುಂದಿನ ಅಂಕಿಯು ಘನಸ್ಥಾನದೆಂದು ಗುರುತು ಮಾಡಿಕೊಂಡಿರಬೇಕು. ಅದಕ್ಕಾಗಿ ಘನಾಂಕಗಳ ಮೇಲೆ (1) ಗುರುತು ಮಾಡಿಕೊಂಡಿರಬೇಕು. ಈ ಶಾಸ್ತ್ರದಲ್ಲಿ ಅಂಕಿಗಳನ್ನು ಬಲದಿಂದ ಎಡಕ್ಕೆ ಎಣಿಸಿದಾಗ, ಕೊನೆಯ ಅಂಕಿಯು ಮೊದಲನೆಯ ದಾಗುತ್ತದೆ. ಅದು ಘನಸಂಜ್ಞೆಯನ್ನು ಹೊಂದುವದು. ಅದರ ಪಕ್ಕದಲ್ಲಿರುವ ಅಂಕಿಗಳ ಆ ಘನಸ್ಥಾನದ ಅಂಕಿಗಳು ಪುನಃ ಬೇರೊಂದು ಘನಸ್ಥಾನವನ್ನು ಹೊಂದುವುದು. ಮತ್ತು ಉಳಿದ ಅಂಕಿಗಳು ಆ ಘನಸ್ಥಾನದಲ್ಲಿರುತ್ತವೆ. ಆದರೆ ಅದಕ್ಕಿಂತ ಮುಂದಿನ (ಲೌಕಿಕ ವ್ಯವಹಾರದಂತೆ) ಮೊದಲನೆಯ ಅಂಕಿಯು ಘನಸ್ಥಾನದಲ್ಲಿ ಇರುವದು. ಆದುದರಿಂದ ಹಿಂದೆ ಹೇಳಿದ ಘನ ಮತ್ತು ಅಘನಸ್ಥಾನಗಳ ಗುರುತನ್ನು ಮಾಡಿಕೊಳ್ಳಬೇಕು. ಈ ರೀತಿಯಾಗಿ ಸ್ಥಾನಗಳನ್ನು ಕಂಡು ಹಿಡಿದು ಗುರ್ತಿಸಿದ ಮೇಲೆ ಆ ಘನ ಸ್ಥಾನದಲ್ಲಿ ಕೊನೆಯ ಅಂಕಿಯ ಮಾತ್ರ ಘನಮೂಲವನ್ನು ಪ್ರತ್ಯೇಕವಾಗಿಟ್ಟುಕೊಳ್ಳಬೇಕು. ನಂತರ ಮುಂದಿನ ಘನಸ್ಥಾನ ಪರ್ಯಂತವಾದ ಅಂಕಿಗಳಲ್ಲಿ ಆ ಮೂಲದ ವರ್ಗವನ್ನು ಮೂರರಿಂದ ಗುಣಿಸಿ ಮೊದಲನೆಯ ಘನಮೂಲದಿಂದ ಭಾಗಿಸಬೇಕು. ಆ ಫಲವನ್ನು ಲಬ್ಧದಲ್ಲಿ ಕಲ್ಪಿಸಿಕೊಳ್ಳಬೇಕು. ಈ ಮೂಲಗಳ ಕೃತಿಯಲ್ಲಿ ಮೊದಲನೆಯ ಅಂಕಿಯಿಂದಲೂ ಮೂರ ರಿಂದಲೂ ಸಹ ಗುಣಿಸಿ, ಉಳಿದ ಘನ ಸ್ಥಾನಗಳಲ್ಲಿ ಕಳೆಯಬೇಕು. ಬಂದ ಲಬ್ಧವನ್ನು ಘನಮೂಲದ ಜೊತೆಗೆ ಕೂಡಿಸಿಕೊಳ್ಳಬೇಕು. ಹೀಗೆ ಬರುವ ಲಬ್ಧವೇ ಘನಮೂಲ ವೆನಿಸಿಕೊಳ್ಳುವದು. ಇನ್ನು ಭಿನ್ನ ಪರಿಕ್ರಮದ ರೀತಿಯಿಂದ ಗಣಿತಫಲವನ್ನು ಸಾಧಿಸುವ ಕ್ರಮವನ್ನು ತಿಳಿಸುತ್ತೇನೆ. ಗಣಿತ ಫಲ ಸಾಧಿಸುವ ಕಾಲಕ್ಕೆ ಅದಕ್ಕೂ ಮೊದಲು, ಹಾರ, ಅಂಶ ಮುಂತಾದವುಗಳನ್ನು ತಿಳಿದುಕೊಳ್ಳಬೇಕು. ಭಾಗ ಪ್ರಭಾಗಗಳನ್ನು ತಿಳಿದುಕೊಳ್ಳುವಾಗ ಅಂಶವನ್ನು ಮತ್ತೊಂದು ಅಂಶದಿಂದಲೇ ಗುಣಿಸಬೇಕು. ಹಾಗೆಯೇ ಹಾರವನ್ನು ಮತ್ತೊಂದು ಸಂಖ್ಯೆಯ ಹಾರದಿಂದಲೇ ಗುಣಿಸಿದಾಗ ಅದಕ್ಕೆ ಸುವರ್ಣ ಅನ್ನುತ್ತಾರೆ. ಅಂದರೆ ಹಾರಾಂಶಗಳು ಹೆಚ್ಚು ಕಡಿಮೆಯಾಗುವದಿಲ್ಲ. ಉದಾಹರಣೆಗಾಗಿ 1/3 1/4 ಇಲ್ಲಿ ಮೂರು

(3) ಮತ್ತು ನಾಲ್ಕು ಈ ಅಂಕಿಗಳು ಹಾರಾಂಕಗಳೆಂದು ತಿಳಿಯಬೇಕಾಗುತ್ತದೆ. ಹಾಗೂ (1) ಎಂಬ ಅಂಕಿಯನ್ನು ಎರಡೂ ಕಡೆಗೆ ಅಂಶವೆಂದು ತಿಳಿಯಬೇಕು.

ಅದರಂತೆ ಭಾಗಾನುಬಂಧ ಹಾಗೂ ಭಾಗಾಪವಾಹಗಳನ್ನು ವಿವರಿಸಬೇಕಾದಲ್ಲಿ ಮೊದಲನೆಯದಾಗಿ ಹಾರಕ್ಕಿಂತಲೂ ಅಂಶವು ಹೆಚ್ಚಾದ ಪ್ರಸಂಗದಲ್ಲಿ, ಭಾಗಾಪವಾಹ ಮಾಡಲೇಬೇಕು. ಎರಡನೆಯದಾಗಿ ಹಾರಕ್ಕಿಂತ ಅಂಶವು ಕಡಿಮೆ ಇದ್ದುದಾದರೆ ಭಾಗಾನುಬಂಧ ಮಾಡುವದು ಸೂಕ್ತ. ಭಾಗಾನುಬಂಧ ಮಾಡುವ ಪ್ರಸಂಗದಲ್ಲಿ ಪೂರ್ಣಾಂಕವನ್ನು ಕೆಳಭಾಗದಲ್ಲಿರುವ ಹಾರದಿಂದ ಗುಣಿಸಿ ಮೇಲಿನ ಅಂಶವನ್ನು ಕೂಡಿಸಬೇಕು. ಆದರೆ ಭಾಗಾಪವಾಹ ಮಾಡಬೇಕೆಂದಾಗ ಪೂರ್ಣಾಂಕವನ್ನೂ ಹಾರದಿಂದ ಗುಣಿಸಿದ ನಂತರ ಬಂದ ಸಂಖ್ಯೆಯಲ್ಲಿ ಅಂಶವನ್ನು ಕಳೆಯಬೇಕು.

ಒಟ್ಟಿನಲ್ಲಿ ಹಾರವನ್ನು ಒಂದೇ ಸಂಖ್ಯೆಯನ್ನಾಗಿ ಮಾಡಿಕೊಂಡರೆ ಒಳಿತು. ಅಂದರೆ ಮಾತ್ರ ಹಾರವು ವಿಕಾರವಾಗುವದಿಲ್ಲ. ಹೀಗೆ ಹಾರಾಂಶವನ್ನು ಕ್ರಮಪಡಿಸಿಕೊಂಡ ಬಳಿಕ ಸಂಕಲನ, ಅಥವಾ ವ್ಯವಕಲನಗಳನ್ನು ಮಾಡಬಹುದು. ಒಂದು ವೇಳೆ ಹಾರಾಂಶಗಳೆರಡೂ ಸಮಾನವಾಗಿದ್ದರೆ, ಅದನ್ನು ಪೂರ್ಣ ಸಂಖ್ಯೆಯಿಂದಲೇ ಸಂಕಲನ ಮಾಡಬೇಕು. ಹಾರವಿಲ್ಲದ ರಾಶಿಗೆ ಒಂದು ಎಂಬ ಸಂಖ್ಯೆಯನ್ನು ಹಾರ ಮಾಡಿಕೊಳ್ಳಬೇಕು. ಗುಣಾಕಾರ ಮಾಡುವುದಿದ್ದಾಗ ಗುಣ್ಯ, ಗುಣಕಗಳ ಅಂಶವನ್ನೇ ಪರಸ್ಪರ ಗುಣಿಸಿ ಅವೆರಡೂ ಹಾರಗಳ ಗುಣಕದಿಂದ ಬಂದ ಅಂಕಿಯಿಂದ ಅಂಶಾಹತಿಯನ್ನು ಭಾಗಿಸಿ, ಬಂದದ್ದನ್ನು (ಫಲ) ಬೇರೆಯಾಗಿಯೇ ಇಡಬೇಕು. ಇನ್ನು ಭಾಗಾಹಾರದಲ್ಲಿ ಭಾಜ್ಯದ ಅಂಶ ಮತ್ತು ಹಾರಗಳನ್ನು ಬದಲಾಯಿಸಿ ಕೊಂಡು ಭಾಜ್ಯದ ಅಂಶ ಹಾರಗಳಿಂದ ಗುಣಿಸುವದೇ ಭಿನ್ನಾಂಶದ ಭಾಗಾಹಾರವೆನಿಸುವದು. ಅಷ್ಟೇ ಅಲ್ಲ, ವರ್ಣ ಮತ್ತು ಘನವಾಗಿರುವ ಹಾರಾಂಶಗಳಿಗೆ ವರ್ಗಮೂಲ, ಘನಮೂಲಗಳ ವಿಧಿಗಳಿಂದಲೇ ಬೇರೆಯಾಗಿ ಹಾರಾಂಶಗಳನ್ನು ಕಂಡುಕೊಳ್ಳಬೇಕು. ಶೂನ್ಯವನ್ನು ಗುಣಿಸಿದರಾಗಲಿ, ಭಾಗಿಸಿದರಾಗಲಿ, ಶೇಷ ಮಾತ್ರ ಶೂನ್ಯವೇ ತಾನೇ! ಈ ರೀತಿಯ ಗಣಿತ ವಿಧಾನಕ್ಕೆ ಕ್ರಮಸಂಖ್ಯಾಗಣಿತವೆಂದು ತಿಳಿಯುತ್ತಾರೆ. ಇನ್ನು ಮುಂದೆ ವ್ಯಸ್ತವಿಧಿಯೆಂಬ ವಿಧಾನವನ್ನು ವಿವರಿಸುತ್ತೇನೆ. ಗಮನಿಸು. ವಿಲೋಮ ವಿಧಿ ನಿಯಮದನ್ವಯ ನಿಜವಾದ ರಾಶಿಯನ್ನು ತಿಳಿಯಬೇಕಾದರೆ ಭೇದವನ್ನು ಗುಣವನ್ನಾಗಿಯೂ, ಗುಣವನ್ನು ಭೇದವನ್ನಾಗಿಯೂ ಅಲ್ಲದೆ ವರ್ಗವನ್ನು ಮೂಲವನ್ನಾಗಿಯೂ, ಮೂಲವನ್ನು ವರ್ಗವನ್ನಾಗಿಯೂ, ಬದಲಾಯಿಸಿಕೊಳ್ಳಬೇಕು. ಅದರಂತೆ ಋಣ, ಧನ ಅದಲು ಬದಲು ಮಾಡಬೇಕು. ಋಣಕ್ಕೆ (-) ಈ ಸಂಜ್ಞೆ, ಹಾಗೂ ಧನಕ್ಕೆ ಅಧಿಕ (+) ಚಿಹ್ನೆ ಬಳಸುವದುಂಟು.

ಈಗ ಹಾರವು ಅಂಶಕ್ಕಿಂತ ಅಧಿಕವಾದಲ್ಲಿ ಅಂಶವನ್ನು ಹಾರಕ್ಕೆ ಕೂಡಿಸಬೇಕು. ಅಂಶಕ್ಕಿಂತ ಕಡಿಮೆಯಾದಲ್ಲಿ ಹಾರವನ್ನು ಕಳೆದು ಅದನ್ನೇ ಹಾರವೆಂದು ಭಾವಿಸಬೇಕು. ಇದರಿಂದಾಗಿ ಅಂಶವು ಮಾತ್ರ ಬದಲಾಗುವದಿಲ್ಲ. ಉಳಿದ ಸಂಕಲನ ವ್ಯವಕಲನಾದಿಗಳನ್ನು ಈ ಮೊದಲು ಉಕ್ತವಾದ ರೀತಿಯಲ್ಲೇ ಮುಂದುವರಿಸಬೇಕು. ಇಷ್ಟ ಕರ್ಮದ ಪ್ರಕಾರ ಒಂದು ಉದ್ದಿಷ್ಟವಾದ ರಾಶಿಯನ್ನು ಹೇಗೆ ಕಂಡು ಹಿಡಿಯಬೇಕು ? ತನಗೆ ಬೇಕೆನಿಸಿದ ಒಂದು ಸಂಖ್ಯೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬೇಕು. ಅದನ್ನು ಪ್ರಶ್ನಿಸುವವರು ಹೇಳುವಂತೆ ಗುಣನ ಭಜನಗಳಿಂದ ಹಾರ, ಅಂಶಗಳನ್ನೂ ಅಲ್ಲದೆ ಸಂಕಲನ

ವ್ಯವಕಲಗಳಿಂದ ಮತ್ತೊಂದು ಸಂಖ್ಯೆಯನ್ನು ಸಾಧಿಸಿಕೊಳ್ಳಬೇಕು. ಹಾಗೆ ಸಾಧಿತವಾದ ಅಂಕಿಯಲ್ಲಿ ಮನಸ್ಸಿನಲ್ಲಿಯ ಸಂಖ್ಯೆಯನ್ನು ಗುಣಿಸಿ, ದೃಷ್ಟಾಂಕದಿಂದ ಭಾಗಿಸಿ, ಬರುವದೇ ಉತ್ತರ. ಈ ಪದ್ಧತಿಗೆ ದೃಷ್ಟ ಅಥವಾ ಇಷ್ಟ ಕರ್ಮವೆಂದು ಹೆಸರು.

ಈಗ ಸಂಕ್ರಮಗಣಿತದ ವಿಚಾರ ಹೇಳುತ್ತೇನೆ ಕೇಳು. ಎರಡು ಅಂಕಿಗಳ ಯೋಗ ವಿಯೋಗಾದಿಗಳನ್ನು ಹೇಳಿ, ಇಷ್ಟವಾದ ಎರಡು ಅಂಕಿಗಳನ್ನು ಕಂಡು ಹಿಡಿಯುತ್ತಾರೆ. ಈ ವಿಧಾನಕ್ಕೆ ಸಂಕ್ರಮಗಣಿತ ಎನ್ನುತ್ತಾರೆ. ಈ ವಿಧಾನದ ಪ್ರಕಾರ ಯೋಗದಿಂದ ವಿಯೋಗ ಕಳೆದು ಎರಡನ್ನೂ ಅರ್ಧ ಮಾಡಲಾಗಿ ಎರಡೂ ಅಂಕಿಗಳು ಲಭಿಸುತ್ತದೆ. ಸಂಕ್ರಮಗಣಿತ ಒಂದು ವಿಧವಾದರೆ ಇನ್ನೊಂದು ರೀತಿಯ ವರ್ಗಕರ್ಮ ಎಂಬ ಗಣಿತ ಮಾಡುವ ರೂಢಿಯೂ ಬಂದಿದೆ. ಅದರ ವಿಧಾನ ಹೀಗಿದೆ. ಮನಸ್ಸಿನಲ್ಲಿ ಒಂದು ಅಂಕಿಯನ್ನು ಊಹಿಸಿ, ಅದಕ್ಕೆ ವರ್ಗ ಮಾಡಿ, ಬಂದ ಅಂಕಿಯನ್ನು ಎಂಟರಿಂದ ಗುಣಿಸಬೇಕು. ಅನಂತರ ಅವರಲ್ಲಿ ಒಂದನ್ನು ಕಳೆದು, ಊಹಿಸಿದ ಸಂಖ್ಯೆಯಿಂದ ಭಾಗಾಕಾರ ಮಾಡಬೇಕು. ಬರುವ ಭಾಗಲಬ್ಧವೇ ಒಂದು ಸಂಖ್ಯೆಯಾಗುವದು. ಮತ್ತೆ ಅದರ ವರ್ಗಕ್ಕೆ ಒಂದನ್ನು ಕೂಡಿಸಿ ಅರ್ಧ ಮಾಡಬೇಕು. ಆಗ ಮತ್ತೊಂದು ರಾಶಿಯು ದೊರಕುವದು. ಪ್ರಶ್ನೆ ಮಾಡುವವನು ವರ್ಣ ಸಂಖ್ಯೆಯ ಯೋಗವಿಯೋಗಗಳ ಬೇರೀಜನ್ನು ಕೊಟ್ಟು ಮೂಲ ಸಂಖ್ಯೆ ಕೇಳುವಾಗ ಉಪಯೋಗಿಸಬೇಕಾಗುತ್ತದೆ. ವರ್ಗರಾಶಿಯನ್ನು ಕಂಡುಹಿಡಿಯುವದಾದಲ್ಲಿ ಒಂದು ಎಂಬುದನ್ನೇ ರೂಪವೆಂದು ಭಾವಿಸಿ, ದ್ವಿಗುಣವಾದ ಇಷ್ಟಬಂದ ಸಂಖ್ಯೆಯಿಂದ ಅದನ್ನು ಗುಣಿಸಿಕೊಳ್ಳಬೇಕು. ಅದಕ್ಕೆ ಇಷ್ಟವಾದ ಸಂಖ್ಯೆಯನ್ನು ಸೇರಿಸಿ, ಬರುವ ಲಬ್ಧವೇ ಒಂದು ರಾಶಿಯಾಗುವದು. ಎರಡು ರಾಶಿಗಳ ವರ್ಗಯೋಗ ಮತ್ತು ವರ್ಗಾಂತರ ಇವುಗಳಲ್ಲಿ ಒಂದನ್ನು ಕಳೆದರೆ, ಎರಡೂ ಸಂಖ್ಯೆಗಳೂ ಮತ್ತೊಂದರ ವರ್ಗರೂಪವಾಗುತ್ತವೆ. ಇದೇ ವಿಧಾನವನ್ನು ಬೇರೊಂದು ರೀತಿಯಿಂದಲೂ ಅನುಸರಿಸಬಹುದು. ಇಷ್ಟ ಸಂಖ್ಯೆಯ ವರ್ಗಕ್ಕೆ ವರ್ಗವನ್ನು ಮತ್ತು ಘನವನ್ನು ಕಂಡು ಹಿಡಿದು ಅವುಗಳನ್ನು ಎಂಟರಿಂದ ಗುಣಿಸಿ ಒಂದನ್ನು ಸೇರಿಸಿದರೆ ಆಗ ಅದು ಮೊದಲನೆಯ ರಾಶಿ ಆಗುವದು. ಈ ಪ್ರಕಾರ ವ್ಯಕ್ತ ಅಥವಾ ಅವ್ಯಕ್ತ ಸಂಖ್ಯೆಗಳ ವರ್ಗ ಕ್ರಮವನ್ನು ಕಂಡುಹಿಡಿಯಬಹುದಾಗಿದೆ.

ಇನ್ನು ಗುಣಕರ್ಮದಿಂದ ಇಷ್ಟ ರಾಶಿಯನ್ನು ಕಂಡುಹಿಡಿಯುವ ಕ್ರಮಃ ಪ್ರಶ್ನಿಸುವವನು ಅವ್ಯಕ್ತವಾದ ಒಂದು ರಾಶಿಯನ್ನು ವ್ಯಕ್ತವಾದ ಒಂದು ಅಂಕಿಯನ್ನು ಹೇಳಿ ನಂತರ ರಾಶಿಯ ಸಂಖ್ಯೆಯನ್ನು ಸ್ಪಷ್ಟವಾಗಿ ಹೇಳುವಂತೆ ಪ್ರಶ್ನಿಸುವನು. ಆಗ ಪ್ರಾಶ್ನಿಕನು ಹೇಳುವ ಗುಣಸಂಖ್ಯೆಯನ್ನು ಅರ್ಧಮಾಡಿ, ಅದಕ್ಕೆ ವರ್ಗರೂಪಕೊಟ್ಟು, ನಂತರ ಗುಣದಿಂದ ಗುಣಿತವಾದ ಮೂಲವನ್ನು ಒಂದುಕಡೆ ಕಳೆದು ಮತ್ತೊಂದು ಕಡೆ ಕೂಡಿಸಬೇಕು. ಆಗ ಆ ಎರಡೂ ರಾಶಿಗಳಿಗೂ ವರ್ಗ ಮಾಡಿದರೆ ಪ್ರಾಶ್ನಿಕನು ಕೇಳಿದ ಪ್ರಶ್ನೆಗೆ ಒಪ್ಪುವಂತೆ ಯೋಗ್ಯವಾದ ಸಂಖ್ಯೆಯು ಬರುವದು. ಇದೇ ಪ್ರಶ್ನೆಗೆ ಪ್ರತ್ಯುತ್ತರವಾಗುವದು. ಸಾಮಾನ್ಯವಾಗಿ ಯಾವಾಗ ರಾಶಿಯು ಅಂಶದಿಂದ ಕೂಡಿಕೊಂಡು ಅಥವಾ ಬೇರೆಯಾಗಿ ಆಗುವದೇ ಆ ಸಂಖ್ಯೆಯು ದೃಶ್ಯರಾಶಿ ಎನಿಸಿಕೊಳ್ಳುತ್ತದೆ. ಹಾಗೆಯೇ ಅದನ್ನು ಸರಿನೋಡಬೇಕಾದರೆ (ತಾಳೆ ನೋಡಬೇಕಾದರೆ) ಮೂಲಗುಣಕ್ಕೆ ಭಾಗವನ್ನು ಕೂಡಿಸಿ ಒಂದು ಕಡೆ ಕಳೆದು, ಒಂದನ್ನು ಮತ್ತೊಂದರಿಂದ ಭಾಗಿಸಿದ ಪಕ್ಷದಲ್ಲಿ ಮೊದಲು ಕೊಟ್ಟ ಸಂಖ್ಯೆಯೇ ಲಬ್ಧವಾಗುವದು.

ಈಗ ಇನ್ನೊಂದು ರೀತಿಯ ತ್ರೈರಾಶಿಕ ಗಣಿತ ವಿಧಾನವನ್ನು ವಿವರಿಸುತ್ತೇನೆ ಕೇಳು. ತ್ರೈರಾಶಿ ಎಂದರೆ - ಮೂರು ಸಂಖ್ಯೆಗಳ ಸಹಾಯದಿಂದ ನಾಲ್ಕನೆಯ ಸಂಖ್ಯೆಯನ್ನು ಕಂಡು ಹಿಡಿಯುವದು ಎಂದರ್ಥ. ಆದರೆ ಇದರಲ್ಲಿ ಒಂದು ನಿಯಮವೇನೆಂದರೆ - ಪ್ರಮಾಣ ಮತ್ತು ಇಷ್ಟ ರಾಶಿಗಳು ಒಂದು ಜಾತಿ (ಸಜಾತಿಯವಾಗಿರಬೇಕು) ಹೇಗೆಂದರೆ -(4) ನಾಲ್ಕು ಹಣ್ಣುಗಳಿಗೆ (6) ಆರು ರೂ.ಗಳಾದರೆ (10) ಹತ್ತು ಹಣ್ಣುಗಳಿಗೆ ಬೆಲೆ ಏನು? ಈ ಲೆಕ್ಕದಲ್ಲಿ ನಾಲ್ಕು ಮತ್ತು ಹತ್ತು ಎಂಬ ಸಂಖ್ಯೆಗಳು ಪ್ರಮಾಣ ಮತ್ತು ಇಷ್ಟ ರಾಶಿಗಳಾಗಿವೆ. ಅಂದರೆ ಇವೆರಡೂ ಹಣ್ಣುಗಳ ಎಣಿಕೆಯನ್ನು ಸೂಚಿಸುವ ಸಮಾನ ಜಾತಿಯ ಅಂಕಗಳಾಗಿವೆ. ಇದರ ಉತ್ತರವೇ ಫಲರಾಶಿ. ಇದರಲ್ಲಿ ಮೊದಲು ಹಾಗೂ ಕೊನೆಗೆ ಪ್ರಮಾಣೇಚ್ಛಾ ರಾಶಿಗಳನ್ನು ಇಟ್ಟು, ಮಧ್ಯೆ ಫಲರಾಶಿಯನ್ನು ಇಡಬೇಕು. ಇಷ್ಟ ರಾಶಿಯನ್ನು ಫಲರಾಶಿಯಿಂದ ಗುಣಿಸಿ, ನಂತರ ಪ್ರಮಾಣ ರಾಶಿಯಿಂದ ಭಾಗಿಸಿದಾಗ ಸರಿಯಾದ ಉತ್ತರವು ಸಿಕ್ಕುತ್ತದೆ.

ತ್ರೈರಾಶಿಕದಂತೆ ಪಂಚರಾಶಿಕ ಗಣಿತವೊಂದು ವಿಧಾನವಿದ್ದು ಅದನ್ನು ವಿವರಿಸುತ್ತೇನೆ. ಇದರಲ್ಲಿ ಐದು ರಾಶಿಗಳ ಸಹಾಯದಿಂದ ಆರನೇಯ ರಾಶಿಯನ್ನು ಕಂಡು ಹಿಡಿಯುತ್ತಾರೆ. ಇದರಂತೆ ಪಂಚರಾಶಿ, ಸಪ್ತರಾಶಿ, ನವರಾಶಿ ಮೊದಲಾದವು ಪ್ರಚಾರದಲ್ಲಿವೆ. ಈ ಎಲ್ಲ ವಿಧಾನಗಳಲ್ಲಿ ಫಲರಾಶಿಗಳನ್ನೂ, ಪ್ರಮಾಣೇಚ್ಛಾ ರಾಶಿಗಳನ್ನು ವಿಭಾಗಿಸಿಕೊಂಡು, ಬಹು ರಾಶಿಗಳನ್ನೆಲ್ಲ ಗುಣಿಸಿದ ಲಬ್ಧವನ್ನೂ ಅಲ್ಪರಾಶಿಜವಾದ ಗುಣಲಬ್ಧದಿಂದ ಭಾಗಿಸಿದಾಗ ಬರುವದೇ ಉತ್ತರವಾಗುತ್ತದೆ. ಮಿಶ್ರಕ ವ್ಯವಹಾರ ಗಣಿತ ಕ್ರಮ - ಮಿಶ್ರಕ ವ್ಯವಹಾರ ವೆಂದರೆ, ಮೂಲಧನ ಬಡ್ಡಿ, ಕಾಲ ಇವುಗಳಿಂದ ಮೊತ್ತವನ್ನು ಕಂಡು ಹಿಡಿಯುವದು, ಇದೇ ರೀತಿ ಕಾಲ ಬಡ್ಡಿ, ಅಸಲು ಇವುಗಳನ್ನೂ ಹಾಗೇಯೇ ಕಾಲಮಾನಗಳನೂ ನಿರ್ಧರಿಸಲು ಬರುತ್ತದೆ. ಇವುಗಳಿಂದಾಗಿ ಪ್ರಯೋಗಿಸುವ ಗಣಿತಕ್ಕೆ ಫಲಸಂಖ್ಯೆಯನ್ನು ಗುಣಿಸಿ ಮಿಶ್ರಸಂಖ್ಯೆಯನ್ನು ಸೇರಿಸಿ, ಮೂಲಕಲೆಯಿಂದ ಭಾಗಿಸಿದರೆ ಬರುವ ಸಂಖ್ಯೆಯೇ ಕಾಲರೂಪವಾದ ಉತ್ತರವಾಗುವದು. ಇಲ್ಲವೆ ಇಷ್ಟ ಕರ್ಮದಲ್ಲಿ ಹೇಳಿದ ಪ್ರಕಾರ ವರ್ಗ ಮತ್ತು ಇವುಗಳನ್ನು ಅನುಸರಿಸುವದರಿಂದಲೂ ಸಹ ಇಚ್ಛಾಸಂಖ್ಯೆಯನ್ನು ಕಂಡು ಹಿಡಿಯಬಹುದು. ಇವುಗಳನ್ನು ಎರಡು ರೀತಿಯಿಂದ ಕಂಡು ಹಿಡಿಯಬಹುದಾಗಿದೆ.

ಪ್ರಕ್ಷೇಪರಾಶಿ = ಅಸಲು (1)

ಮಿಶ್ರರಾಶಿ = ಮೊತ್ತ (2)

ಫಲ = ಬಡ್ಡಿ (3)

ಮೂರು ಜನರು ಸ್ವಲ್ಪವಾದ ತಮ್ಮ ಮೂಲ ಬಂಡವಾಳದಿಂದ ಒಂದು ವ್ಯಾಪಾರ ಮಾಡಿದರು. ಅವರು ಕೊನೆಗೆ ಒಂದು ಮೊತ್ತವನ್ನು ಗಳಿಸುವರು. ಆಗ ಮೂರು ಜನರಿಗೂ ಫಲದ ಹಂಚಿಕೆಯು ಹೇಗೆ ಮಾಡಬೇಕೆಂಬುದೇ ಈ ಗಣಿತದ ವಿಧಾನವಾಗಿದೆ. ಇದರಲ್ಲಿ ಪ್ರಕ್ಷೇಪರಾಶಿಗಳನ್ನು ಮಿಶ್ರರಾಶಿಯಿಂದ ಗುಣಿಸಿ ಪ್ರಕ್ಷೇಪಗಳ ಯೋಗದಿಂದ ವಿಭಾಗಿಸಿದರೆ ಫಲವು ಪ್ರತ್ಯೇಕವಾಗಿಯೋ ಬರುತ್ತದೆ.

ಇನ್ನು ಬಾವಿ ಮೊದಲಾದ ಜಲಾಶಯಗಳಲ್ಲಿ ನೀರು ತುಂಬುವ ಕಾಲಾವಧಿಯನ್ನು ಕಂಡು ಹಿಡಿಯುವ ವಿಧಾನ ರಂಜನೀಯವಾಗಿದೆಯಷ್ಟೇ ಅಲ್ಲ ಉದ್ಬೋಧಕವೂ ಆಗಿದೆ. ಬೇರೆ ಬೇರೆ ಜಲರಾಶಿಯು ಒಂದು ಬಾವಿಯನ್ನು ಬೇರೆ ಬೇರೆ ಕಾಲಗಳಲ್ಲಿ

ತುಂಬುವದಾದರೆ ಆ ಜಲರಾಶಿಯು ಒಟ್ಟಾಗಿ ಕಲೆತು ತುಂಬುವದಕ್ಕಾಗಿ ಸಮಯ ಎಷ್ಟು ಬೇಕು? ಎಂದೆನ್ನುವ ಭೇದವನ್ನೂ ಅಂಶಗಳಿಂದ ಭಾಗಿಸಬೇಕು. ಹಾಗೆಯೇ ಮಿಶ್ರವಾದ ರಾಶಿಯಿಂದ ರೂಪವನ್ನು ಭಾಗಿಸಿದರೆ, ಬರುವ ಲಬ್ಧವೇ ಕಾಲರೂಪವಾಗಿ ಬರುವದು. ಹಾಗೆಯೇ ಕ್ರಮವಿಕ್ರಯ ವಸ್ತುಗಳನ್ನು ಕಂಡುಹಿಡಿಯಲು ಮೌಲ್ಯವನ್ನು ಭಾಗದಿಂದ ಗುಣಿಸಿ ಪುಣ್ಯವಸ್ತು ಸಂಖ್ಯೆಯಿಂದ ಭಾಗಿಸಿದಾಗ ಬರುವ ಸಂಖ್ಯೆಯ ಅರ್ಧಭಾಗವೇ ಇಷ್ಟವಾದ ಪುಣ್ಯವಸ್ತುವಿನ ಸಂಖ್ಯೆಯಾಗಿರುತ್ತದೆ.

ಪ್ರತಿ ದಿನ ಎರಡರಷ್ಟಾಗುವ ಧನಸಂಖ್ಯೆಯನ್ನು ಕಂಡು ಹಿಡಿಯುವ ಕ್ರಮ ಹೀಗಿದೆ. ಇಲ್ಲಿ ಉಪಯೋಗಿಸಿರುವ 'ಗಚ್ಛ' ಎಂಬುದು ಸಾಂಕೇತಿಕವಾದ ಪದವೆಂದು ತಿಳಿಯಬೇಕು. ಗಚ್ಛರಾಶಿಯು ವಿಷಮವಾಗಿದ್ದರೆ ಅದರಲ್ಲಿ ಒಂದನ್ನು ಕಳೆದು, ಗುಣಿಸಬೇಕು- ಸಮ ವಾಗಿದ್ದರೆ ಅರ್ಧಭಾಗ ಮಾಡಿ ವರ್ಗಮಾಡಬೇಕು. ಹೀಗೆ ಗಚ್ಛಕ್ಷಯವಾಗುವವರೆಗೂ ಕಳೆದು ಕೊನೆಯಲ್ಲಿ ಯಾವುದು ವ್ಯಸ್ತವಾಗಿರುವದೋ ಅದರಲ್ಲಿ ಮೊದಲಿನ ಗಚ್ಛವನ್ನು ಗುಣಿಸಿದರೆ ಬರುವ ಫಲವೇ ಉತ್ತರ. ಇನ್ನು ಕ್ಷೇತ್ರಗಣಿತದ ಬಗ್ಗೆ ವಿವರಿಸುತ್ತೇನೆ, ಚಿತ್ತವಿಟ್ಟು ಕೇಳು. ಈ ಕ್ಷೇತ್ರಗಣಿತದಲ್ಲಿ ಕೋಟಿ ಕರ್ಣ, ಭುಜ ಎಂಬುದಾಗಿ ಕೆಲವು ಸಂಕೇತ ಗಳಿಂದ ಗೆರೆಗಳನ್ನು ಎಳೆಯಬೇಕು. ತ್ರಿಭುಜ ಅಥವಾ ಚತುರ್ಭುಜ ಕ್ಷೇತ್ರಗಳಲ್ಲಿ ಬಯಸಿದ ಒಂದು ಬಾಹುವಿಗೆ ಭುಜವೆಂದು ಕರೆಯುತ್ತಾರೆ. ಅದಕ್ಕೆ ಎದುರಾದ ಭುಜಕ್ಕೆ ಕೋಟಿ, ಎಂದೂ, ಅವೆರಡನ್ನೂ ಕೂಡಿಸುವ ರೇಖೆಗೆ ಕರ್ಣವೆಂದೆನ್ನುತ್ತಾರೆ. ಇದರಲ್ಲಿ ಯಾವುದಾದರೂ ಎರಡರ ಪ್ರಮಾಣವನ್ನು ಕೊಟ್ಟು, ಮೂರನೆಯದರ ಪ್ರಮಾಣವನ್ನು ಕೇಳುವದೇ ಕ್ಷೇತ್ರಗಣಿತ. ಇದರಲ್ಲಿ ಭುಜ, ಕೋಟಿಗಳ ವರ್ಗಯೋಗಕ್ಕೆ ಪದವನ್ನು ಕಂಡು ಹಿಡಿದರೆ, ಅದು ಕರ್ಣ ಪ್ರಮಾಣವಾಗುತ್ತದೆ. ಕರ್ಣ ಭುಜಗಳ ವರ್ಗಾಂತರವನ್ನು ಮಾಡಿ ಕೊಂಡು, ಮೂಲವನ್ನು ತೆಗೆದರೆ ಬರುವದೇ ಕೋಟಿರೂಪವಾದ ಉತ್ತರವೆನಿಸುತ್ತದೆ. ಇದೇ ಪ್ರಕಾರ ಕೋಟಿ, ಮತ್ತು ಕರ್ಣಗಳ ವರ್ಗಾಂತರ ಮೂಲವೇ ಭುಜವೆನಿಸುತ್ತದೆ.




ಅ, ಆ ರೇಖೆಯು ಭುಜ

ಆ, ಇ ರೇಖೆಯು ಕೋಟಿ

ಅ, ಇ ರೇಖೆಯು ಕರ್ಣ

ತ್ರಿಕೋಣ, ಚತುಷ್ಕೋಣಗಳಲ್ಲಿ ಕರ್ಣದ ವರ್ಗವನ್ನು, ಭುಜಕೋಟಿಗಳ ವರ್ಗ ಸಂಖ್ಯೆಯಿಂದಲೂ, ಎರಡರಿಂದಲೂ ಗುಣಿಸಿ, ಮೂಲವನ್ನು ತೆಗೆದಾಗ ಒಟ್ಟು ಚತುರಸ್ರದ ಪರಿಮಿತಿ (ಸುತ್ತಳತೆ) ಸಿಗುತ್ತದೆ. ಇನ್ನು ವೃತ್ತಾಕಾರವಿರುವ ಕ್ಷೇತ್ರಶರವನ್ನು ಕಂಡುಹಿಡಿಯಬೇಕಾದರೆ - ಜ್ಯಾ ಮತ್ತು ಶರವನ್ನು ಕಂಡು ಹಿಡಿಯಬೇಕಾದರೆ - ಜ್ಯಾ ಮತ್ತು ವ್ಯಾಸ ಇವುಗಳ ಯೋಗ ಮತ್ತು ಅಂತರ ಇವುಗಳನ್ನು ಗುಣಿಸಿ ಮೂಲವನ್ನು ತೆಗೆದು ಅದರಲ್ಲಿ ವ್ಯಾಸ ಪ್ರಮಾಣವನ್ನು ಕಳೆದು ಅರ್ಧ ಮಾಡಬೇಕು. ಅದರಿಂದಲೇ ಶರವು ದೊರೆಯುತ್ತದೆ. ವ್ಯಾಸಾರ್ಧವೇ ತ್ರಿಜ್ಯ. ಈ ತ್ರಿಜ್ಯದಿಂದಲೇ ಪರಿಧಿಯನ್ನು ಆನಯನ ಮಾಡಬಹುದು. ವ್ಯಾಸ ಪ್ರಮಾಣವನ್ನು ಶರದಿಂದ ಕಳೆದು, ಅದನ್ನೇ ಶರ ಪ್ರಮಾಣದಿಂದ

ಗುಣಿಸಿ, ಅದಕ್ಕೆ ಮೂಲವನ್ನು ಕಂಡು ಹಿಡಿದು, ಬಂದದ್ದನ್ನು ಎರಡರಿಂದ ಗುಣಿಸಿದರೆ ಜ್ಯಾ ಪ್ರಮಾಣವು ಗೊತ್ತಾಗುತ್ತದೆ. ಹಾಗೆಯೇ ಜ್ಯಾ ಪ್ರಮಾಣವನ್ನು ಅರ್ಧಮಾಡಿ ಶರದಿಂದ ಭಾಗಿಸಿ, ಬಂದ ಲಬ್ಧಕ್ಕೆ ಶರವನ್ನು ಕೂಡಿಸಿದರೆ, ವ್ಯಾಸ ಪ್ರಮಾಣವು ದೊರೆಯುವದು. ಹೀಗೆ ಶರ, ವ್ಯಾಸ, ಪರಿಧಿ ಇವುಗಳನ್ನು ಪರಸ್ಪರವಾಗಿ ಕಂಡು ಹಿಡಿಯಬಹುದು. ವೃತ್ತ ಕ್ಷೇತ್ರದಲ್ಲಿ ಚಾಪದಿಂದ ಪರಿಧಿ ಪ್ರಮಾಣವನ್ನು ಕಳೆದು, ಅದರಿಂದ ಪರಿಧಿಪ್ರಮಾಣವನ್ನು ಗುಣಿಸಿದರೆ ಬರುವ ಸಂಖ್ಯೆಗೆ ಪ್ರಥಮವೆಂದು ಹೆಸರು. ಪರಿಧಿಯ ವರ್ಗದ ನಾಲ್ಕನೆಯ ಒಂದು ಭಾಗವನ್ನು ಐದರಿಂದ ಗುಣಿಸಿ, ಪ್ರಥಮ ಪ್ರಮಾಣದಿಂದ ಕಳೆದು, ನಾಲ್ಕರಿಂದ ಗುಣಿತವಾದ ವ್ಯಾಸ ಪ್ರಮಾಣದಿಂದ ಗುಣಿಸಿ ಪ್ರಥಮವನ್ನು ಭಾಗಿಸಿದರೆ ಬರುವ ಸಂಖ್ಯೆಗೆ ಜ್ಯಕಾಂಶವೆನ್ನುವರು, ಅದೇ ಸ್ಥೂಲ ಜ್ಯಾವನ್ನು ಕಂಡುಹಿಡಿಯುವ ಕ್ರಮ. ಇನ್ನು ಚಾಪವನ್ನು ಕಂಡು ಹಿಡಿಯುವ ಪ್ರಕಾರವು ಹೀಗಿದೆ. ಜ್ಯಾ ಸಂಖ್ಯೆಯ ನಾಲ್ಕನೆಯ ಒಂದು ಭಾಗವನ್ನು ಐದರಿಂದ ಗುಣಿಸಿ ಪರಿಧಿಯ ವರ್ಗಕ್ಕೆ ಸೇರಿಸಬೇಕು. ಹಾಗೆಯೇ ವ್ಯಾಸ ಪ್ರಾಮಾಣದ ಚತುರ್ಥಾಂಕದಿಂದ ಯುಕ್ತವಾದ ಜ್ಯಾ ಸಂಖ್ಯೆಯಿಂದ ಭಾಗಿಸಿ, ಅದರಿಂದ ಪರಿಧಿಯ ವರ್ಗ ಚತುರ್ಥ ಭಾಗವನ್ನು ಮತ್ತೆ ಭಾಗಿಸಿದರೆ ಉಳಿಯುವ ಶೇಷಾಂಶವೇ ಧನಸ್ಸಾಗುವದು, ಇದನ್ನೇ ಚಾಪವೆಂದು ಕರೆಯುತ್ತಾರೆ.

ಈಗ ಖಾತ ವ್ಯವಹಾರ ಎಂದರೆ ವಿಷಮಾಕಾರದ ಭೂಮಿಯನ್ನು ಸಮಾಕಾರವಾಗಿ ಮಾಡಿ ಅದರ ಘನಪರಿಮಾಣವನ್ನು ಮತ್ತು ವಿಷಮಾಕಾರದ ಘನಪರಿಮಾಣವನ್ನು ಕಂಡು ಹಿಡಿಯುವ ಕ್ರಮ ಹೇಳುತ್ತೇನೆ. ಒಂದು ಪ್ರದೇಶದ ವಿಸ್ತಾರವನ್ನು ಅಂದರೆ ಹಳ್ಳ, ತಿಟ್ಟು ಮುಂತಾದವುಗಳನ್ನು, ಕೂಡಿಸಿ ಆಗಲದ ಪರಿಮಾಣವನ್ನು ಕಂಡು ಹಿಡಿಯಬೇಕು. ಮತ್ತು ಅದರಲ್ಲಿ ಅಡಗಿರುವ ನೀರಿನ ಪ್ರಮಾಣವನ್ನು ಕಂಡುಹಿಡಿಯಲು ಅನುಕೂಲವಾದ ಗಣಿತವು ಇಂತಿದೆ. ವೃತ್ತಾಕಾರದ ಬಾವಿಯ ವೇಧ ಪ್ರಮಾಣವನ್ನು ಅಂಗುಲ್ಯಾತ್ಮಕವಾಗಿ ಪರಿವರ್ತಿಸಿಕೊಂಡು, ಆ ಬಾವಿಯಲ್ಲಿರುವ ನೀರಿನ ವ್ಯಾಸದಿಂದ ಆ ಅಂಗುಲಗಳನ್ನು ಗುಣಿಸಿ, ಉದ್ದದ ಅಳತೆಯನ್ನು ಮೂರು ಸಾವಿರದ ನೂರರಿಂದ ಗುಣಿಸಿದರೆ ಬರುವ ಲಬ್ಧವು ನೀರಿನ ದ್ರೋಣರೂಪವಾಗಿ ಪರಿಣತವಾಗುವದು. ಒಂದು ಧಾನ್ಯರಾಶಿಯ ಉದ್ದ ಮತ್ತು ಅಗಲ ಇವುಗಳ ಅಳತೆಯನ್ನು ಅಂಗುಲ ರೂಪವಾಗಿ ಮಾಡಿಕೊಂಡು, ಪರಸ್ಪರವಾಗಿ ಗುಣಿಸಿ, ಬಂದ ಲಬ್ಧವನ್ನು ನಾಲ್ಕು ಸಾವಿರ ತೊಂಬತ್ತಾರರಿಂದ ಭಾಗಿಸಿದರೆ ಬರುವ ಅಳತೆಯು ದ್ರೋಣರೂಪವಾಗಿ ದೊರೆಯುವದು ರಾಶಿಯ ವ್ಯಾಸಾದಿಗಳನ್ನು ಎಂದಿಗೂ ಅಂಗುಲ ರೂಪವಾಗಿ ಎಣಿಸಕೂಡದು. ಎರಡು ರಾಶಿಗಳ ದ್ರೋಣಾದಿ ಮಾನಗಳನ್ನು ಒಂದಕ್ಕೊಂದು ಗುಣಕಾರ ಮಾಡಿ ಅವುಗಳ ವಿಸ್ತಾರದಿಂದ ಅಂಗುಲ ರೂಪವಾಗಿ ಪರಿವರ್ತಿಸಿಕೊಂಡು ಬಾಗಿಸಿದರೆ ಬರುವ ಲಬ್ದವು ಎರಡು ರಾಶಿಗಳ ದೃಘ್ಯ ಪ್ರಮಾಣ ವಾಗುವದು ಆ ಬಳಿಕ ಅಂಗುಲಗಳನ್ನು ಐನೂರೆಂಭತ್ತೈದರಿಂದ ಭಾಗಿಸಿದರೆ ಬರುವ ಲಬ್ದವು ರಾಶಿಯ ದ್ರೋಣ ರೂಪವಾಸಿತ್ತದೆ. ಒಂದು ದೀಪದ ಕಂಬವನ್ನಿಟ್ಟು ಆ ದೀಪದ ಕಂಬದನೆರಳು ಎಷ್ಟು ಪ್ರಮಾಣವಿದೆ. ಎಂಬುದನ್ನು ಈ ಗಣಿತ ಕ್ರಮದಿಂದ ಅನಯನ ಮಾಡಬಹುದು. ದೀಪದ ತಲೆಭಾಗದ ಮತ್ತು ಶಂಕುವಿನ ತಲೆಭಾಗದ ಮಧ್ಯಭೂಮಿಯ ಪ್ರಮಾಣವನ್ನು ಶಂಕು ಪ್ರಮಾಣದಿಂದ ಗುಣಿಸಿ, ಇದನ್ನು ದೀಪ ಮತ್ತು ಅದರ ಕಂಬದ ಅಂತರದಿಂದ ಭಾಗಿಸಿದರೆ, ಆ ದೀಪದ ನೆರಳಿನ ಪ್ರಮಾಣವು ದೊರೆಯುವದು. ಈಗ

ದೀಪದ ಪರಿಮಾಣವನ್ನು ಕಂಡು ಹಿಡಿಯಬೇಕಾದರೆ, ಶಂಕು ಪ್ರಮಾಣವನ್ನು ನರ(ಶಂಕು) ಮತ್ತು ದೀಪ ಇವುಗಳ ಅಂತರದಿಂದ ಗುಣಿಸಿ, ಛಾಯಾ ಪ್ರಮಾಣದಿಂದ ಭಾಗಿಸಿ, ಬಂದ ಲಬ್ಧಕ್ಕೆ ಶಂಕು ಪ್ರಮಾಣವನ್ನು ಸೇರಿಸಿದ್ದೇ ಆದರೆ, ದೀಪದ ಪ್ರಮಾಣವು ದೊರೆಯುವದು.

ಇನ್ನು ದೀಪ ಮತ್ತು ಶಂಕು ಇವುಗಳ ಅಂತರದಲ್ಲಿರುವ ಭೂಮಾನವನ್ನು ತಿಳಿಯಲು ಈ ರೀತಿ ಗಣಿತ ಮಾಡಬೇಕು. ಛಾಯೆಯ ಪ್ರಮಾಣವನ್ನು ಶಂಕು ಮತ್ತು ದೀಪೋಚ್ಚಯ ಇವುಗಳ ಅಂತರದಿಂದ ಗುಣಿಸಿ, ಶಂಕುವಿನ ಪ್ರಮಾಣದಿಂದ ಭಾಗಿಸಿದರೆ ಬರುವ ಫಲವು ದೀಪ ನರಾಂತರ ರೂಪವಾಗುವದು. ಈಗ ಛಾಯಾ ಮತ್ತು ದೀಪ ಇವುಗಳ ಅಂತರದಿಂದ ದೀಪದ ಎತ್ತರವನ್ನು ತಿಳಿಯಲು ಹೀಗೆ ಗಣಿತ ಮಾಡಬೇಕು. ಛಾಯಾ ಮತ್ತು ದೀಪಾಗ್ರದ ಅಂತರದಿಂದ ಛಾಯಾ ಪ್ರಮಾಣವನ್ನು ಗುಣಿಸಿ ; ಛಾಯಾ ದೀಪಾಗ್ರಾಂತರದಿಂದ ಭಾಗಿಸಿದಾಗ ಬರುವ ಲಬ್ಧವೇ ಭೂ ಪ್ರಮಾಣವಾಗುತ್ತದೆ. ಭೂ ಪ್ರಮಾಣ ಮತ್ತು ಶಂಕು ಪ್ರಮಾಣ ಇವೆರಡನ್ನೂ ಗುಣಿಸಿ, ಪ್ರಭೆಯಿಂದ ಭಾಗಿಸಿದರೆ ಬರುವ ಲಾಭವು ದೀಪಶಿಖೆಯ ಔನ್ನತ್ಯವಾಗುವದು. ಇಷ್ಟನ್ನು ಒಂದು ಕಡೆ ತಿಳಿದ ಮೇಲೆ ಉಳಿದ ಲೆಕ್ಕಗಳನ್ನೆಲ್ಲಾ ತ್ರೈರಾಶಿಕದಿಂದ ಕಂಡು ಹಿಡಿಯಬೇಕು. ತ್ರೈರಾಶಿಕವೆಂಬುದು ಎಲ್ಲ ಗಣಿತಕ್ಕೆ ಆಧಾರ. ಅದು ಸರ್ವ ವಿಧ ಗಣಿತ ಸಾಧಾರಣವಾಗಿರುತ್ತದೆ.

ಇನ್ನು ಮುಂದೆ ಗ್ರಹಮಧ್ಯಗಳನ್ನು ಅಂದರೆ ಭೂಗೋಲದಲ್ಲಿ ನಡೆಯುವ ಗ್ರಹಗಳ ಚಲನವಲನಗಳನ್ನೂ ಅವುಗಳ ಅಂತರ, ಸಾಮಿಪ್ಯ ಮೊದಲಾದವುಗಳನ್ನೂ ಸವಿಸ್ತರವಾಗಿ ವಿವರಿಸುತ್ತೇನೆ ಕೇಳು. ಚತುರ್ಯುಗಗಳ ಪರಿಮಿತಿ ಅಂದರೆ ಕೃತ ತ್ರೇತ, ದ್ವಾಪರ, ಕಲಿ ಈ ನಾಲ್ಕು ಯುಗಗಳ ಒಟ್ಟು ಪರಿಮಿತಿಯು ೪೩,೨೦೦೦೦ ನಲವತ್ತು ಮೂರುಲಕ್ಷ ಇಪ್ಪತ್ತು ಸಾವಿರ ವರ್ಷಗಳಾಗುತ್ತವೆ, ಅದರಲ್ಲಿ (೪/೧೦) ಹತ್ತನೆಯ ನಾಲ್ಕು ಭಾಗ ಅಂದರೆ ೧೭೨೮೦೦೦ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು ಕೃತಯುಗದ ಪ್ರಮಾಣವಾಗುವದು. ತ್ರೇತಾಯುಗದ ಪ್ರಮಾಣ (೩/೧೦) ಹತ್ತನೆಯ ಮೂರು ಭಾಗ ಅಂದರೆ (೧೨೯೬೦೦೦) ಹನ್ನೆರಡು ಲಕ್ಷದ ತೊಂಭತ್ತಾರು ಸಾವಿರ ವರ್ಷಗಳು. ದ್ವಾಪರಯುಗದ ಪ್ರಮಾಣವು ಒಟ್ಟು ಯುಗ ಪ್ರಮಾಣದ (೨/೧೦) ಹತ್ತನೆಯ ಎರಡು ಭಾಗ, ಅಂದರೆ (೮೬೪೦೦) ಎಂಟು ಲಕ್ಷ ಅರವತ್ತುನಾಲ್ಕು ಸಾವಿರ ವರ್ಷಗಳು. ಕಲಿಯುಗದ ಪ್ರಮಾಣವಾದರೋ (೧/೧೦) ಭಾಗ ಅಂದರೆ (೪೩೨೦೦೦) ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರ್ಷಗಳು. ಹೀಗೆ ಕೃತಾದಿ ನಾಲ್ಕು ಯುಗಗಳಿಗೂ ಭಿನ್ನ ಭಿನ್ನವಾದ ಸಂಖ್ಯಾ ಪರಿಮಿತವಾದ ವರ್ಷಗಳಿವೆ. ಇದನ್ನೇ ಹೀಗೆ ಬರೆಯಬಹುದು, ಒಟ್ಟು ಕೃತ, ದ್ವಾಪರ, ತ್ರೇತಾ, ಮತ್ತು ಕಲಿಯುಗಗಳ ಪ್ರಮಾಣ.

ವರ್ಷಗಳು

೪೩೨೦೦೦೦

ಕೃತಯುಗದ ಪ್ರಮಾಣ = ೪/೧೦ ಭಾಗ = ೪೩೨೦೦೦೦ x ೪ = ೧೭೨೮೦೦೦

೧೦

ತ್ರೇತಾ ೩/೧೦ ಭಾಗ = ೪೩೨೦೦೦೦ x ೩ = ೧೨೯೬೦೦೦

೧೦

ದ್ವಾಪರ ೨/೧೦ ಭಾಗ = ೪೩೨೦೦೦೦ x ೨ = ೮೬೪೦೦೦
೧೦

ಕಲಿ ೧/೧೦ ಭಾಗ = ೪೩೨೦೦೦೦ x ೧ = ೪೩೨೦೦೦
೧೦

ಒಂದು ಮನ್ವಂತರಕ್ಕೆ ಎಪ್ಪತ್ತೊಂದು ಮಹಾಯುಗಗಳು ಸೇರುತ್ತವೆ. ಈ ಕೃತಾದಿ ನಾಲ್ಕು ಯಗಗಗಳ ಒಟ್ಟು ಪ್ರಮಾಣಕ್ಕೆ ಮಹಾಯುಗವೆಂದು ಹೆಸರು. ಇಂತಹ ಹದಿನಾಲ್ಕು ಮನ್ವಂತರಗಳಾದರೆ, ಅದು ಬ್ರಹ್ಮನಿಗೆ ಒಂದು ಹಗಲಾಗುವದು. ಬ್ರಹ್ಮನ ರಾತ್ರಿಯೂ, ಹಗಲಿನಷ್ಟೇ ಪರಿಮಾಣವುಳ್ಳದ್ದು ಒಟ್ಟಿನಲ್ಲಿ ಇಪ್ಪತ್ತೆಂಟು ಮನ್ವಂತರಗಳಿಗೆ ಅಂದರೆ (೭ X ೨೮ = ೧೯೮೮) ಮಹಾ ಯುಗಗಳಿಗೆ ಬ್ರಹ್ಮನ ಒಂದು ದಿನವಾಯಿತು. ಆ ರೀತಿಯಾಗಿ ಕೂಡಿದ ನೂರು ವರ್ಷಗಳು ಒಬ್ಬ ಬ್ರಹ್ಮನ ಆಯುಷ್ಯವೆಂದು ತಿಳಿಯಬೇಕು. ಅಂದರೆ ಅಲ್ಲಿಯವರೆಗೂ ಬ್ರಹ್ಮನು ಸೃಷ್ಟ್ಯಾದಿಗಳಿಂದ ಕೂಡಿದ ಲೋಕರಚನೆಯನ್ನು ಮಾಡುತ್ತಿರುವನು.

ಒಂದು ಮಹಾಯುಗದಲ್ಲಿ ಸೂರ್ಯ, ಬುಧ, ಶುಕ್ರ ಎಂಬ ಮೂರು ಗ್ರಹಗಳಿಗೂ, ಕುಜ, ಶನಿ, ಗುರು ಈ ಗ್ರಹಗಳ ಶೀಘ್ರೋಚ್ಚರಗಳಿಗೂ (೪೩೨೦೦೦೦) ನಲವತ್ತುಮೂರು ಲಕ್ಷ ಇಪ್ಪತ್ತುಸಾವಿರ ಭಗಣಗಳಿವೆ. ಅಂದರೆ ಅಷ್ಟು ಸಲದ್ವಾದಶ ರಾಶ್ಯಾತ್ಮಕವಾದ ಭೂಗೋಲದಲ್ಲಿ ಪೂರ್ವಾಭಿಮುಖವಾಗಿ ಗ್ರಹಗಳು ಪ್ರದಕ್ಷಿಣೆ ಹಾಕುತ್ತವೆ ಎಂದು ಅರ್ಥವಾಗುತ್ತದೆ. ಚಂದ್ರನಿಗೆ - ೫೭೭೫೩೩೩೬, ಐದು ಕೋಟಿ ಎಪ್ಪತ್ತೇಳು ಲಕ್ಷದ ಐವತ್ತಮೂರು ಸಾವಿರದ, ಮುನ್ನೂರ ಮೂವತ್ತಾರು ಭಗಣಗಳು ಕುಜನಿಗೆ (೨೨೯೬೮೩೨) ಇಪ್ಪತ್ತೆರಡು ಲಕ್ಷ ತೊಂಭತ್ತಾರು ಸಾವಿರದ ಎಂಟುನೂರ ಮೂವತ್ತೆರಡ ಭಗಣಗಳೂ ಇರುತ್ತವೆ. ಬುಧನ ಶೀಘ್ರೋಚ್ಚಕ್ಕೆ ೧೭೯೩೭೦೬೦ ಭಗಣಗಳೂ, ಶನಿಗೆ ೧೪೬೫೬೮ ಇವೆ. ಚಂದ್ರೋಚ್ಚಕ್ಕೆ ೪೮೮೨೦೩ ಭಗಣಗಳಿವೆ. ಪಶ್ಚಿಮಾಭಿಮುಖವಾಗಿ ಹೋಗತಕ್ಕ ಅದೃಶ್ಯರೂಪವಾದ ಚಂದ್ರಪಾತಕ್ಕೆ ೨೩೨೨೩೮ ಭಗಣಗಳಿವೆ. ಭೂಮಿಯ ಮೇಲೆ ಸೂರ್ಯೋದಯದವರೆಗಿರುವ ಕಾಲಕ್ಕೆ ಅರ್ಕಸಾವನಾವನಾಹಸ್ಸು ಅಥವಾ ಸೌರದಿನವೆನ್ನಲಾಗುವದು. ಅಂತಹ ಸೌರದಿನಗಳು ಮಹಾ ಯುಗಕ್ಕೆ ೧೫೭೭೯೧೭೮೨೮ ಇಷ್ಟಾಗುವವು. ಮತ್ತು ಮಹಾಯುಗಕ್ಕೆ ೧೯೩೩೬ ಅಧಿಕಮಾಸಗಳಿರುತ್ತವೆ. ಹಾಗೆಯೇ ೨೫೦೮೨೨೫೨ ತಿಥಿಕ್ಷಯಗಳಿರುತ್ತವೆ. ಒಂದು ಮಹಾಯುಗದಲ್ಲಿ ೫೧೮೪೦೦೦೦ ಸೌರ ಮಾಸಗಳೂ ೧೯೩೩೩೬ ಚಾಂದ್ರಮಾಸ ಗಳೂ ಇರುತ್ತವೆ. ಪೂರ್ವಾಭಿಮುಖವಾಗಿ ಹೋಗುವ ಸೂರ್ಯ ಮಂದೋಚ್ಚಕ್ಕೆ ಒಂದು ಕಲ್ಪದಲ್ಲಿ ೩೭೮ ಭಗಣಗಳೂ, ಕುಜ ಮಂದೋಚ್ಚಕ್ಕೆ ೨೦೪ ಭಗಣಗಳೂ, ಬುಧ ಮಂದೋಚ್ಚಕ್ಕೆ ೩೬೮ ಭಗಣಗಳೂ, ಬೃಹಸ್ಪತಿ ಮಂದೋಚ್ಚಕ್ಕೆ ೯೦೦ ಭಗಣಗಳೂ, ಶುಕ್ರಮಂದೋಚ್ಚಕ್ಕೆ ೫೩೫ ಭಗಣಗಳೂ ಶನಿಮಂದೋಚ್ಚಕ್ಕೆ ೩೯ ಭಗಣಗಳೂ ಇವೆ. ಈ ಮಂದೋಚ್ಚಗಳಿಗೆಲ್ಲಾ ಪೂರ್ವಾಭಿಮುಖವಾಗಿ ಚಲನೆ ಏರ್ಪಟ್ಟಿರುವುದು.

ಈಗ ಪಶ್ಚಿಮ ಗಮನವುಳ್ಳ ಗ್ರಹಪಾತಗಳಿಗೆ ಈ ರೀತಿ ಭಗಣಗಳು ಉಂಟು. ಒಂದು ಕಲ್ಪದಲ್ಲಿ ಕುಜಪಾತವು ೨೧೪ ಸಾರಿಯೂ, ಬುಧ ಪಾತವು ೪೮೮ ಸಾರಿಯೂ ಗುರು ಪಾತವು ೧೭೪ ಸಾರಿಯೂ, ಶುಕ್ರಪಾತವು ೯೦೩ ಸಾರಿಯೂ ಶನಿ ಪಾತವು ೬೬೨ ಸಾರಿಯೂ, ಭಚಕ್ರವನನ್ನೂ ಸುತ್ತುವವು ಹೀಗೆ ಭಚಕ್ರವನ್ನು ಸುತ್ತುವ ಕಾಲಗಳಿಗೆ ಭಗಣ ಕಾಲವೆಂದು ವ್ಯವಹಾರ ವ್ಯವಸ್ಥಿತವಾಗಿರುತ್ತದೆ.

ಇಷ್ಟ ಕಾಲದವರೆಗೆ ಯುಗಾದಿಯಿಂದ ಕಳೆದುಹೋಗಿರುವ ದಿನಗಳನ್ನು ತಿಳಿಯುವ ಅಹರ್ಗಣಾನಯನ ಕ್ರಮವು ಹೇಗೆಂದರೆ - ಇಷ್ಟ ಕಾಲದವರೆಗೆ ಸೂರ್ಯನಿಗೆ ಕಳೆದುಹೋಗಿರುವ ಭಗಣಗಳನ್ನು ಅಂದರೆ ಸೌರವರ್ಷಗಳನ್ನು ಹನ್ನೆರಡರಿಂದ ಗುಣಿಸಿ, ಬಂದು ಲಬ್ಧಕ್ಕೆ ಇಷ್ಟ ಕಾಲದ ಪರ್ಯಂತ ಕಳೆದಿರುವ ಚೈತ್ರಾದಿಯಾದ ತಿಂಗಳಿನ ಸಂಖ್ಯೆಯನ್ನು ಸೇರಿಸಬೇಕು. ಹೀಗೆ ಮಾಡುವಾಗ ಅದನ್ನು ಎರಡು ಕಡೆಗೆ ಬರೆದುಕೊಂಡಿರಬೇಕು. ಬಳಿಕ ಒಂದು ಕಡೆಯ ಅಂಕಿಯನ್ನು ಯುಗಾದಿ ಮಾಸ ಸಂಖ್ಯೆಯಿಂದ ಗುಣಾಕಾರಮಾಡಿ, ಸೂರ್ಯಮಾಸಗಳಿಂದ ಭಾಗಿಸಬೇಕು. ಬರುವ ಫಲವು ಅಧಿಕ ಮಾಸರೂಪವಾಗುವದು. ಈ ಅಧಿಕ ಮಾಸಸಂಖ್ಯೆಯನ್ನು, ಹಿಂದಿನ ಮಾಸ ಸಂಖ್ಯೆಗೆ ಸೇರಿಸಿ, ಮೂವತ್ತರಿಂದ ಗುಣಿಸಿ ದಿನಗಳನ್ನಾಗಿ ಮಾಡಿಕೊಳ್ಳಬೇಕು. ಇಷ್ಟ ಕಾಲದವರೆಗೆ ತಿಂಗಳಿನಲ್ಲಿ ಕಳೆದ ದಿನಗಳನ್ನು ಸೇರಿಸಬೇಕು. ಬಂದ ಸಂಖ್ಯೆಗಳನ್ನು ಎರಡು ಕಡೆ ಬರೆದುಕೊಂಡು, ಒಂದು ಸಂಖ್ಯೆಯನ್ನು ಯುಗದ ತಿಥಿಕ್ಷಯಗಳಿಂದ ಗುಣಿಸಿ, ಯುಗ ಚಂದ್ರವಾಸರಗಳನ್ನು ಭಾಗಿಸಬೇಕು. ಲಬ್ಧವಾಗಿ ಬಂದ ತಿಥಿಕ್ಷಯಗಳನ್ನು ಮತ್ತೊಂದು ಕಡೆ ಇಟ್ಟಿರುವ ದಿನ ಸಂಖ್ಯೆಯಲ್ಲಿ ಕಳೆಯಬೇಕು. ಉಳಿದ ದಿನಗಳೇ ನಿರಕ್ಷದೇಶವಾದ ಲಂಕಾನಗರಿಯ ಅರ್ಧರಾತ್ರಿಗೆ ಬಂದ ದಿನಗಳು. ಇದನ್ನೇ ಅಹರ್ಗಣ ಎನ್ನುತ್ತಾರೆ. ಹೀಗೆ ಬಂದ ಅಹರ್ಗಣವನ್ನು ಏಳರಿಂದ ಭಾಗಿಸಿದರೆ ಉಳಿದ ಶೇಷಕ್ಕೆ ಸೂರ್ಯಾದಿಯಾಗಿರುವ ವಾರವು ತಿಳಿಯುವದು. ಹಾಗೆಯೇ ಅಹರ್ಗಣ ಸಂಖ್ಯೆಯನ್ನು ಮೂವತ್ತರಿಂದಲೂ ಮುನ್ನೂರರವತ್ತರಿಂದಲೂ ಪ್ರತ್ಯೇಕವಾಗಿ ಭಾಗಿಸಿ, ಕ್ರಮವಾಗಿ ಬಂದ ಲಬ್ಧವನ್ನು ಎರಡು ಮತ್ತು ಮೂರರಿಂದ ಗುಣಿಸಿ ಒಂದನ್ನು ಸೇರಿಸಿ, ಏಳರಿಂದ ಭಾಗಿಸಿದರೆ ಕ್ರಮವಾಗಿ ಮಾಸಾಧಿಪತಿ, ವರ್ಷಾಧಿಪತಿಗಳು ತಿಳಿದು ಬರುವರು. ಇದರ ಆಧಾರದಿಂದ ಯಾವ ಗ್ರಹದ ಗತಭಗಣವನ್ನು ಅರಿಯಬೇಕಾದರೂ ಅಹರ್ಗಣವನ್ನು ಆಯಾ ಗ್ರಹಭಗಣಗಳಿಂದ ಗುಣಿಸಿ ಯುಗಸಾವ ದಿನಗಳಿಂದ ಭಾಗಿಸಿದರೆ, ಬರುವ ಲಬ್ಧವು ಗತಭಗಣವೆನಿಸುವದು. ಮುಂದಿನ ಗಣಿತದಿಂದ ರಾಶಿ ಭಾಗಾದಿಗಳನ್ನು ತಿಳಿದುಕೊಳ್ಳಬೇಕು. ಹಾಗೆ ರಾಶಿ, ಭಾಗ, ಲಿಪ್ತ್ಯಾದಿಗಳಿಂದ ಕೂಡಿದ ಸ್ಫುಟವೆ ಗ್ರಹದ ಮಧ್ಯಸ್ಫುಟವೆನಿಸುವದು. ಇದೇ ರೀತಿ ಪೂರ್ವಗತಿಯುಳ್ಳ ಶೀಘ್ರೋಚ್ಚಾದಿಗಳಿಗೂ ಮಧ್ಯಸ್ಫುಟವನ್ನು ಆನಯನ ಮಾಡಬೇಕು.

ಪಶ್ಚಿಮಗತಿಯುಳ್ಳ ಪಾತಗಳನ್ನು ಗ್ರಹಗಳನ್ನಾಯನ ಮಾಡುವ ರೀತಿಯಲ್ಲಿ ಮಾಡಿ ದ್ವಾದಶರಾಶಿಯಿಂದ ಕಳೆಯಬೇಕು. ಇದರಿಂದ ಪಾತಸ್ಥಾನವು ದೊರೆಯುವದು. ಗೋಲಾಕಾರವಾದ ಭೂಮಿಯ ವ್ಯಾಸವು (೧೬೦೦) ಸಾವಿರದಾರು ನೂರು ಯೋಜನ ವೆಂದು ತರ್ಕಿಸಲಾಗಿದೆ. ಭೂವ್ಯಾಸದ ವರ್ಗಮಾಡಿ, ಹತ್ತರಿಂದ ಗುಣಿಸಿದರೆ ಬರುವ ಸಂಖ್ಯೆಯೇ ಭೂಪರಿಧಿಯೆನಿಸುವದು. ಇದು ಮಧ್ಯಮ ಭೂಪರಿಧಿ. ಇದನ್ನು ದೇಶಾಂತರಗಳಿಗೆ ಸ್ಫುಟ ಭೂಪರಿದಾಯಾಗಿ ಮಾಡಿಕೊಳ್ಳಬೇಕಾದರೆ ಆಯಾ ದೇಶದ ಲಂಬ ಜ್ಯಾದಿಂದ ಗುಣಿಸಿ, ತ್ರಿಜ್ಯದಿಂದ ಭಾಗಿಸಬೇಕು ಲಂಬ ಜ್ಯಾ ಎಂದರೆ - ದ್ವಾದಶಾಂಗುಲ ಪರಿಮಾಣವುಳ್ಳ ಶಂಕು. ಅದರ ಛಾಯಾ ಇವುಗಳ ವರ್ಗಯೋಗ ಮೂಲವಾದ ಅಕ್ಷಕರ್ಣವನ್ನು ಹನ್ನೆರಡರಿಂದ ಗುಣಿಸಿ ತ್ರಿಜ್ಯೆಯಿಂದ ಭಾಗಿಸಿದರೆ, ಅದೇ ಲಂಬ ಜ್ಯಾಯೆನಿಸುವದು. ಸ್ವರೇಖಾ ಮತ್ತು ಸ್ವದೇಶಗಳಿಗಿರುವ ಅಂತರವೇ ರೇಖಾಂತರವು ಅಥವಾ ದೇಶಾಂತರ ಗ್ರಹಗಳ ಗತಿಗಳನ್ನು ಈ ದೇಶಾಂತರ ಯೋಜನೆಗಳಿಂದ ಗುಣಿಸಿ

ಸ್ಫುಟ ಭೂಪರಿಧಿಯಿಂದ ಭಾಗಿಸಿದರೆ ಬರುವ ಕಲಾರೂಪವಾದ ಗತಿಯನ್ನು ಪಶ್ಚಿಮ ದಿಕ್ಕಿನಲ್ಲಿರುವ ದೇಶಗಳ ಗ್ರಹಗಳಿಗೆ ಕೂಡಿಸಬೇಕು. ಪೂರ್ವ ದೇಶಗಳೆಲ್ಲ ಕಳೆಯಬೇಕು. ಇದನ್ನೇ ದೇಶಾಂತರ ಸಂಸ್ಕಾರವೆನ್ನುವರು.

ರಾಕ್ಷಸಾಲಯವಾದ ಲಂಕಾದೇಶ, ದೇವಪರ್ವತವಾದ ಮೇರು, ಇವೆರಡರ ಮೇಲೂ ಹಾದುಹೋಗುವ ಒಂದು ರೇಖೆಯು, ಮಧ್ಯದಲ್ಲಿರುವ ರೋಹೀತಕ ನಗರ, ಅವಂತಿ (ಉಜ್ಜಯನಿ) ಕುರುಕ್ಷೇತ್ರ ಇವುಗಳ ಮೇಲೆ ಹಾದುಹೋಗುವದು. ದೇಶಾಂತರ ನಾಡಿಗಳಿಂದ ಯುಕ್ತವಾದ ಪೂರ್ವದೇಶದ ಅರ್ಧರಾತ್ರಿಯಿಂದ ವಾರಪ್ರವೃತ್ತಿಯು ಉಂಟಾಗುತ್ತದೆ. ಅದೇ ವಾರ ಪ್ರವೃತ್ತಿಯ ಪಶ್ಚಿಮ ದೇಶಗಳಲ್ಲಿಯೂ, ದೇಶಾಂತರ ಕಲಾವಿಶಿಷ್ಟವಾದ ಅನಂತರವೇ ಪ್ರಾರಂಭವಾಗುವದೆಂದು ಅರ್ಥ.

ಗ್ರಹಗಳಿಗೆ ತಾತ್ಕಾಲಿಕೀಕರಣಮಾಡುವ ರೀತಿ : ಸೂರ್ಯೋದಯಕ್ಕೆ ಸರಿಯಾಗಿ ಗಣಿತದಿಂದ ತೆಗೆಯಲಾದ ಗ್ರಹವನ್ನು ಇಷ್ಟಕಾಲಕ್ಕೆ ತರಬೇಕಾದರೆ ಉದಯಾಸ್ತಕಾಲಗಳ ಮಧ್ಯಘಟಿಯನ್ನು ಗ್ರಹಭುಕ್ತಿಯನ್ನು ಗುಣಿಸಿ ಅರವತ್ತರಿಂದ ಭಾಗಿಸಬೇಕು. ಇಚ್ಛಿತ ಕಾಲವು ಉದಯ ಕಾಲಕ್ಕಿಂತ ಮೊದಲು ಇದ್ದರೆ ಕಳೆಯಬೇಕು. ಅನಂತರವಾಗಿದ್ದರೆ ಕೂಡಿಸಬೇಕು. ಇದೇ ಗ್ರಹಗಳನ್ನು ಆ ಕಾಲಕ್ಕೆ ಆನಯನ ಮಾಡುವ ರೀತಿ ಆಗಿದೆ. ಚಂದ್ರಪಾತದಿಂದ ಚಂದ್ರನು ದಕ್ಷಿಣೋತ್ತರವಾಗಿ ಎಳೆಯಲ್ಪಡುವನು. ಇದಕ್ಕೆ ವಿಕ್ಷೇಪ ವೆಂದು ಹೆಸರು. ಇಂಥಹ ಪರಮ ವಿಕ್ಷೇಪವು ಚಂದ್ರನಿಗೆ (೨೭೦) ಇನ್ನೂರೆಪ್ಪತ್ತು ಲಿಪ್ತಿ ಇರುವದು. ಅದು ಭಚಕ್ರಲಿಪ್ತಿಗಳ ೧/೮೧ ಭಾಗವಾಗಿರುವದು ಇದೇ ಚಂದ್ರನಿಗೆ ಪಾತದಿಂದ ಬರುವ ಪರಮ ವಿಕ್ಷೇಪವೆಂದು ತಿಳಿಯಬೇಕು. ಆದರೆ ಸೂರ್ಯನಿಗೆ ಪಾತ ಇಲ್ಲದ ಕಾರಣ ಅವನಿಗೆ ವಿಕ್ಷೇಪವಿಲ್ಲ. ಕೇವಲ ಕ್ರಾಂತಿ ಮಾತ್ರ ಹೊಂದಿರುತ್ತಾನೆ. ಈ ಚಂದ್ರ ವಿಕ್ಷಪದ ನವಾಂಶದ ದ್ವಿಗುಣವೆಂದರೆ ಅರವತ್ತು (೬೦) ಅರವತ್ತು ಕಲೆಯುಗುರುವಿಗೂ (೯೦) ತೊಂಭತ್ತು ಕಲೆಯು ಕುಜನಿಗೂ ಪರಮ ವಿಕ್ಷೇಪವಾಗಿರುವದು.

ಬುಧ, ಶುಕ್ರ, ಶನಿ, ಇವರಿಗೆ ಮಾತ್ರ ಚತುರ್ಗುಣ ಅಂದರೆ ನೂರಿಪ್ಪತ್ತು (೧೨೦) ಕಲೆಯು ಪರಮವಿಕ್ಷೇಪವಾಗಿರುವದು. ಒಂದು ರಾಶಿಯ ಒಟ್ಟು ಕಲೆಯಾದ (೧೮೦೦) ಸಾವಿರ ಎಂಟುನೂರರಲ್ಲಿ (೧/೮) ಎಂಟನೆಯ ಒಂದು ಭಾಗವೇ ಅಂದರೆ (೨೨೫) ಇನ್ನೂರಿಪ್ಪತ್ತೈದು. ಕಲೆಯೇ ಮೊದಲನೆಯ ಜ್ಯಾರ್ಧ. ಅದು ೪೪೯ ನಾನೂರನಲವತ್ತೊಂಭತ್ತಾಗುವದು. ಇದೇ ರೀತಿ (೨೪) ಜ್ಯಾ ಪ್ರಮಾಣಗಳನ್ನು ತಿಳಿಯಬೇಕು. ಹೀಗೆ ಜ್ಯಾರ್ಧಗಳು ೨೪. ಆದರಲ್ಲಿ ಪರಮ ಕ್ರಾಂತಿ ಜ್ಯಾ(೧೩೯೭) ಸಾವಿರದ ಮುನ್ನೂರತೊಂಬತ್ತೇಳು. ಅಭೀಷ್ಟ ಜ್ಯಾವನ್ನು ಪರಮ ಕ್ರಾಂತಿ ಜ್ಯಾದಿಂದ ಗುಣಿಸಿ ತ್ರಿಜ್ಯೆದಿಂದ ಭಾಗಿಸಿದರೆ ಕಲಾತ್ಮಕವಾದ ಕ್ರಾಂತಿಯು ಬರುವದು. ಹಿಂದೆ ಆನಯನ ಮಾಡಿರುವ ಗ್ರಹವನ್ನು ಮಂದೋಚ್ಚಮಧ್ಯದಿಂದ ಕಳೆದರೆ, ಬರುವ ಸ್ಫುಟವು ಮಂದ್ರಕೇಂದ್ರ ಸ್ಫುಟವಾಗುವದು. ಹೀಗೆಯೆ ಶೀಘ್ರೋಚ್ಚದಿಂದ ಕಳೆದ ರಾಶ್ಯಾದಿಕವಾದ ಗ್ರಹವು ಶೀಘ್ರಕೇಂದ್ರವೆಂದೆನಿಸುವದು. ಅಂದರೆ ರಾಶಿತ್ರಯದಿಂದ ಕಳೆದು ಸಮ ವಿಷಮಾಪದಗಳನ್ನು ನಿರ್ಧರಿಸಿಕೊಂಡು, ಅದಕ್ಕೆ ಭುಜಜ್ಯಾ ಮತ್ತು ಕೋಟಿ ಜ್ಯಾ ಸಂಖ್ಯೆಯನ್ನು ತಿಳಿದುಕೊಳ್ಳಬೇಕಾದದ್ದು ಅವಶ್ಯ.

ಮೂರು ರಾಶಿಗಳ ಸಮೂಹವು ಪದವೆಂದು ತಿಳಿಯುತ್ತಾರೆ. ಇದರಲ್ಲಿ ಪ್ರಥಮ ಹಾಗೂ ತೃತೀಯ ರಾಶಿತ್ರಯಗಳಿಗೆ ವಿಷಮಪದವೆಂದೂ ಅಲ್ಲದೆ ಎರಡು ಮತ್ತು ನಾಲ್ಕನೆಯ ರಾಶಿ ತ್ರಯಗಳಿಗೆ ಸಮಪದವೆಂದು ಸಂಕೇತದಿಂದ ಕರೆಯುವದು ರೂಢಿ. ವಿಷಮ ಪದದಲ್ಲಿ ಗ್ರಹಕ್ಕೆ ಗತವಾದ ಜ್ಯಾವನ್ನು ಭುಜ್ಯಾ ಎಂದೂ, ಗಮ್ಯವಾದ ಜ್ಯಾವನ್ನು ಕೋಟಿ ಜ್ಯಾ ಎಂದು ಕರೆಯುತ್ತಾರೆ. ಆದರೆ ಇದು ಸಮಪದದಲ್ಲಿ ಹೆಚ್ಚು ಕಡಿಮೆ ಆಗುವದು. ಒಂದು ಪದದಲ್ಲಿ ಜ್ಯಾ ಸಾಧನೆ ಮಾಡಬೇಕಾದರೆ ಗ್ರಹಭುಕ್ತವಾದ ರಾಶ್ಯಾದಿಗಳನ್ನು ಕಲಾರೂಪಕ್ಕೆ ತಂದು ಅದನ್ನು ೨೨೫ ರಿಂದ ಭಾಗಿಸಬೇಕು. ಅಂದರೆ ಗತವಾದ ಜ್ಯಾ ಸಮೂಹವು ತಿಳಿದು ಬರುವದು. ಗತ ಹಾಗೂ ಗಮ್ಯ ಜ್ಯಾಗಳ ಅಂತರದಿಂದ ಗುಣಿಸಿ, ಇನ್ನೂರ ಇಪ್ಪತ್ತೈದು (೨೨೫) ರಿಂದ ಭಾಗಿಸಿ ಲಬ್ಧವನ್ನು ಗತಜ್ಯಾಸಮುದಾಯಕ್ಕೆ ಕೂಡಿಸಬೇಕು. ಅದೇ ಆ ಗ್ರಹದ ಕ್ರಮಜ್ಯಾ ಆಗುತ್ತದೆ. ಇದೇ ರೀತಿ ಉತ್ಕ್ರಮ ಜ್ಯಾವನ್ನು ಆನಯನ ಮಾಡುವದು ಅವಶ್ಯ. ಈ ಜ್ಯಾ ಸಾಧನೆಯಿಂದ ಧನಸ್ಸನ್ನು ಸಾಧಿಸಬೇಕು. ಆಗ ಯಾವ ಜ್ಯಾ ರಾಶಿಗೆ ಧನಸ್ಸನ್ನು ಆನಯನ ಮಾಡುವದಿದೆಯೋ, ಆ ಜ್ಯಾ ರಾಶಿಯನ್ನು ಅದರ ಮುಂದಿರುವ ಜ್ಯಾ ಪಿಂಡದಿಂದ ಕಳೆದು, ಇನ್ನೂರ ಇಪ್ಪತ್ತೈದರಿಂದ ಗುಣಿಸಿ, ಶುದ್ಧಾಶುದ್ಧ ಜ್ಯಾದ ಅಂತರದಿಂದ ಭಾಗಾಕಾರ ಮಾಡಿ ಬಂದ ಲಬ್ಧವನ್ನು ಇನ್ನೂರಇಪ್ಪತ್ತೈದರವರ್ಗ ಸಂಖ್ಯೆಗೆ ಸೇರಿಸಬೇಕು. ಅದೇ ಆ ಗ್ರಹದ ಧನಸ್ಸು ಅಥವಾ ಚಾಪ ಎನಿಸುವದು.

ಇನ್ನು ಸೂರ್ಯನ ವಿಚಾರ ಸೂರ್ಯನಿಗೆ ಪರಮಾಕರ್ಷಣೆಯಿಂದ ಹುಟ್ಟುವ ಪೂರ್ವಾಪರ ಗಮನ ರೂಪವಾದ ಪರಮಮಂದ ಫಲವು. ಯುಗ್ಮಪದದಲ್ಲಿ ಹದಿನಾಲ್ಕು ಅಂಶಗಳು. ಚಂದ್ರನಿಗೆ ಮೂವತ್ತೆರಡು ಅಂಶಗಳು. ವಿಷಮಪದದಲ್ಲಿ ಇಪ್ಪತ್ತು ಕಲೆಗಳು ಕಡಿಮೆಯಾಗಿರುತ್ತದೆ. ಯುಗ್ಮಪದದಲ್ಲಿ ಕುಜನಿಗೆ ಎಪ್ಪತ್ತೈದು, ಬುಧನಿಗೆ ಮೂವತ್ತು ಗುರುವಿಗೆ ಮೂವತ್ತುಮೂರು, ಶುಕ್ರನಿಗೆ ಹನ್ನೊಂದು, ಶನಿಗೆ ನಲವತ್ತೊಂಬತ್ತು ಕಲೆಗಳಿರುತ್ತವೆ. ವಿಷಮಪದದಲ್ಲಿ ಕುಜನಿಗೆ ಎಪ್ಪತ್ತೆರಡು ಬುಧನಿಗೆ ಇಪ್ಪತ್ತೆಂಟು ಗುರುವಿಗೆ ಹನ್ನೊಂದು, ಶುಕ್ರನಿಗೆ ಹನ್ನೊಂದು, ಶನಿಗೆ ನಲವತ್ತೆಂಟು ಅಂಶಗಳು. ಮಂದ ಪರಿಧ್ಯಂಶಗಳಾಗಿರುತ್ತವೆ. ಅಲ್ಲದೆ ಅಂಗಾರಾದಿಗಳಿಗೆ ಯುಗ್ಮಪದದಲ್ಲಿ ಅಂಗಾರಕನಿಗೆ ಇನ್ನೂರ ಮೂವತ್ತೈದು ಬುಧನಿಗೆ ನೂರ ಮೂವತ್ತುಮೂರು, ಗುರುವಿಗೆ ಎಪ್ಪತ್ತು ಶುಕ್ರನಿಗೆ ಎರಡನೂರಾ ಅರವತ್ತೆರಡು ಶನಿಗೆ ಮೂವತ್ತೊಂಬತ್ತು ಅಂಶಗಳು ಶೀಘ್ರಪದ್ಯಗಳಾಗಿರುತ್ತದೆ, ವಿಷಮಪದದಲ್ಲಿ ಕುಜನಿಗೆ ಎರಡುನೂರ ಮೂವತ್ತೆರಡು ಬುಧನಿಗೆ ನೂರ ಮೂವತ್ತೆರಡು, ಗುರುವಿಗೆ ಎಪ್ಪತ್ತೆರಡು ಶುಕ್ರನಿಗೆ ಎರಡುನೂರಾ ಅರವತ್ತು ಶನಿಗೆ ನಲವತ್ತು ಈ ರೀತಿ ಶೀಘ್ರ ಪರಿಧ್ಯಂಶಗಳಾಗಿವೆ.

ಇನ್ನು ಇಚ್ಛಿತಕೇಂದ್ರದಿಂದ ಪರಿಧಿ ಭಾಗವನ್ನು ಆನಯನ ಮಾಡಬೇಕು. ಆಯಾಗ್ರಹದ ಭುಜಜ್ಯಾವನ್ನು ವಿಷಮ ಸಮಪದ ಕೇಂದ್ರಾಂತರದಿಂದ ಗುಣಿಸಿ ತ್ರಿಜ್ಯೆಯಿಂದ ಭಾಗಿಸಿ, ಬಂದ ಫಲವನ್ನು ಯುಗ್ಮಪದವು ಓಟಪದಕ್ಕಿಂತ ಶೂನ್ಯವಾಗಿದ್ದರೆ ಕೂಡಬೇಕು. ಅಧಿಕವಾಗಿದ್ದರೆ ಕಳೆಯಬೇಕು. ಹಾಗೆ ಮಾಡಿದರೆ ಸ್ಫುಟ ಪರಿಧಿಯು ದೊರಕುವದು. ಬಳಿಕ ಮುದಶೀಘ್ರಾಂತರಸಂಬಂಧದಿಂದ ಬಂದ ಭುಜ ಕೋಟಿಜ್ಯಾಗಳನ್ನು ಸೀಯ ಸ್ಫುಟಪರಿಧಿಯಿಂದ ಗುಣಿಸಿ ಮೂರುನಾರೂ ಅರವತ್ತರಿಂದ ಭಾಗಿಸಿದಾಗ ಬರುವ

ಫಲವೇ ಭುಜಫಲ - ಕೋಟಿಫಲವೆನಿಸುವದು. ಅದನ್ನು ಮಂದಕೇಂದ್ರ ಭುಜಫಲಕ್ಕೇ ಸೇರಿಸಿ, ಧನುರಾನಯನ ಮಾಡಿದರೆ, ಕಲಾದಿಯಾಗಿ ಮಂದಫಲವು ಬರುವದು. ಇದರಂತೆ ಶೀಘ್ರಫಲವನ್ನು ಆನಯನ ಮಾಡಬೇಕು. ಶೀಘ್ರಕೇಂದ್ರವು ಮಕರಾದಿ ಷಡ್ರಾಶ್ಯಂತರ್ಗತ ವಾದಲ್ಲಿ ಶೀಘ್ರಕೋಟಿ ಫಲವನ್ನು ತ್ರಿಜ್ಯಗೆ ಕೂಡಿಸಬೇಕು. ಕರ್ಕಾದಿ ಷಡ್ರಾಶಿಯಲ್ಲಿದ್ದರೆ ಕಳೆಯಬೇಕು. ಇದರಿಂದ ಬರುವ ಫಲವೇ ಶೀಘ್ರಫಲವೆನಿಸುವದು. ಇದು ಮುಂಧಲಾ ನಯನದಲ್ಲಿ ಮಾತ್ರ ಇಲ್ಲ. ಕೋಟಿಫಲ ಸಂಸ್ಕೃತವಾದ ತ್ರಿಜ್ಯದ ಮತ್ತು ಭುಜಫಲಗಳ ವರ್ಗಯೋಗಗಳ ಮೂಲವೇ ಶೀಘ್ರಕರ್ಣವೆನಿಸುವದು. ಭುಜ ಫಲವನ್ನು ತ್ರಿಜ್ಯೆಯಿಂದ ಗುಣಿಸಿ, ಶೀಘ್ರಕರ್ಣದಿಂದ ಭಾಗಿಸಿ,ಬರುವ ಲಬ್ಧಕ್ಕೆ ಜ್ಯಾಸಾಧನೆ ಮಾಡಬೇಕು. ಅದೇ ಕಲಾದಿಯಾದ ಶೀಘ್ರಫಲವು ಈ ಶೀಘ್ರಫಲಾನಯನ ಮಾಡುವದು, ಕುಜಾದಿಗ್ರಹಗಳ ಪ್ರಥಮ ಮತ್ತು ಚತುರ್ಥ ಕರ್ಮಗಳಲ್ಲಿ ಮಾತ್ರವಷ್ಟೇ. ಮಂದಫಲ ಸಂಸ್ಕಾರವನ್ನು ದ್ವಿತೀಯ ತೃತೀಯ ಕರ್ಮಗಳಲ್ಲಿ ಮಾಡಬೇಕು.

ಚಂದ್ರಸೂರ್ಯಾದಿಗಳಿಗೆ ಶೀಘ್ರಫಲಸಂಸ್ಕಾರವಿಲ್ಲ. ಕೇವಲ ಮಂದಫಲ ಸಂಸ್ಕಾರದ ಆಧಾರದಿಂದ ಗ್ರಹವು ಸ್ಪಷ್ಟವಾಗುವದು. ಕುಜಾದಿಗ್ರಹಗಳಿಗೆ ಮಾತ್ರ ನಿಯತವಾದ ಮಧ್ಯಗ್ರಹಗಳಿಗೆ ಮೊದಲು ಶೀಘ್ರಫಲ ಅನಂತರ ಮಂದಫಲ ಮತ್ತೆ ಶೀಘ್ರ ಮತ್ತೆ ಮಂದ ಈ ರೀತಿ ನಾಲ್ಕು ಸಂಸ್ಕಾರದಿಂದ ಸ್ಪಟತ್ವವನ್ನು ತರಬೇಕು. ಎಲ್ಲಾಗ್ರಹಗಳಿಗೂ ಮೇಷಾದಿ ಕೇಂದ್ರಗಳಲ್ಲಿ ಕಲಾತ್ಮಕವಾದ ಶೀಘ್ರ ಮತ್ತು ಫಲಗಳನ್ನು ಮಂದಧನಸಂಸ್ಕಾರ ಮಾಡಬೇಕು.

ಸ್ಪಷ್ಟ ಗ್ರಹಗತಿಯನ್ನು ಸೂರ್ಯನ ಕಲಾತ್ಮಕವಾದ ಮಂದ ಫಲದಿಂದ ಗುಣಿಸಿ ಇಪ್ಪತ್ತೊಂದು ಸಾವಿರದ ಆರುನೂರ ಕಲೆಗಳಿಂದ ಭಾಗಿಸಿ, ಬರುವ ಫಲವನ್ನು ಗ್ರಹಗಳಿಗೆ ಸೂರ್ಯನ ಮಂದ ಫಲಸಂಸ್ಕಾರದಂತೆ ಋಣ ಅಥವಾ ಧನವನ್ನಾಗಿ ಮಾಡಬೇಕು. ಸ್ಪುಟಗ್ರಹವನ್ನು ಆನಯನ ಮಾಡಿದ ರೀತಿಯಲ್ಲಿ ಗ್ರಹಗತಿಗಳಿಗೂ ಭುಜಕೋಟಿಜ್ಯಾಯನ ಪೂರ್ವಕವಾಗಿ ಮಂದ ಫಲ ಮತ್ತು ಶೀಘ್ರ ಫಲಗಳನ್ನು ಆನಯನ ಮಾಡಬೇಕು. ನಂತರ ಮಧ್ಯಗತಿಗೆ ಧನ ಋಣ ಸಂಸ್ಕಾರ ಮಾಡಿದ ರೀತಿಯಲ್ಲಿ ಸ್ಪಷ್ಟಗತಿಯನ್ನು ಕಂಡುಹಿಡಿಯಬೇಕು. ಈಗ ಗ್ರಹಗಳ ವಕ್ರಗತಿಯನ್ನು ಕಂಡು ಹಿಡಿಯುವ ವಿಧಾನ ವಿವರಿಸುತ್ತೇನೆ. ಕೇಳು. ಗ್ರಹಗಳ ವಕ್ರಗತಿಯನ್ನು ಕಂಡುಕೊಳ್ಳಲು ಆಯಾ ಗ್ರಹದ ಭುಜ ಜ್ಯಾವನ್ನು ಗ್ರಹಗತಿಯಿಂದ ಗುಣಿಸಿ ಎರಡುನೂರ ಇಪ್ಪತ್ತೈದರಿಂದ ಭಾಗಿಸಿ ಮಂದ ಪರಿಧ್ಯಂಷಗಳಿಂದ ಗುಣಿಸಿ ಮೂರನೂರ ಅರವತ್ತರಿಂದ ಭಾಗಿಸಬೇಕು. ಬರುವ ಲಬ್ಧವೇ ಕಲಾತ್ಮಕವಾಗಿ ಮಂದಸ್ಪುಟಭುಕ್ತಿಯಾಗುವದು. ಅದನ್ನು ಶೀಘ್ರೋಚ್ಚಭುಕ್ತಿಯಿಂದ ಕಳೆದು ತ್ರಿಜ್ಯಾ ಮತ್ತು ಶೀಘ್ರಕರ್ಣ ಇವುಗಳ ಅಂತರದಿಂದ ಗುಣಿಸಬೇಕು. ಆಗ ಬಂದ ಲಬ್ಧವು ತ್ರಿಜ್ಯೆಗಿಂತ ಅಧಿಕವಾಗಿದ್ದರೆ ಗ್ರಹಭುಕ್ತಿಗೆ ಕೂಡಿಸಬೇಕು. ಕಡಿಮೆಯಾದಲ್ಲಿ ಗ್ರಹಭುಕ್ತಿಯಲ್ಲಿ ಕಳೆಯಬೇಕು. ಉಳಿದ ಅಂಶವೇ ಗ್ರಹದ ವಕ್ರಾಂಶ ಅಥವಾ ವಕ್ರಗತಿಯು. ಹಾಗೆ ಬಂದ ವಕ್ರಗತಿಗಳ ಪರಮಾವಧಿಯು ಕುಜನಿಗೆ ಒಂದುನೂರ ಅರವತ್ತನಾಲ್ಕು, ಬುಧನಿಗೆ ಒಂದು ನೂರಾ ನಾಲ್ವತ್ನಾಲ್ಕು ಗುರುವಿಗೆ ನೂರಮೂವತ್ತು, ಶುಕ್ರನಿಗೆ ನೂರ ಅರವತ್ತಮೂರು, ಶನಿಗೆ ನೂರಹದಿನೈದು ಈ ರೀತಿ ಅಂಶಗಳ ಪರಿಮಾಣದಲ್ಲಿರುತ್ತವೆ. ವಕ್ರಗತಿಯನ್ನು ಮೂರನೂರ ಅರವತ್ತರಿಂದ ಕಳೆಯಲಾಗಿ ಬರುವದೇ ಋಜುಗ್ರಹದ ಸ್ಥಾನ. ವಿಷುವದ್ದಿನದಲ್ಲಿ ಸ್ಥಾಪಿಸಲ್ಪಟ್ಟ ಶಂಕುವಿನ ಛಾಯೆಯಿಂದ ಆ ದಿನದ ಕ್ರಾಂತಿ

ಜ್ಯಾವನ್ನು ಗುಣಿಸಿ ಹನ್ನೆರಡರಿಂದ ಭಾಗಿಸಲಾಗಿ ಬರುವದೇ ಕ್ಷಿತಿಜ್ಯಾ. ಇದಕ್ಕೆ ಕುಜ್ಯಾ ಎಂದೂ ಅನ್ನುತ್ತಾರೆ. ಅಂತಹ ಕ್ಷಿತಿಜ್ಯೆಯನ್ನು ತ್ರಿಜ್ಯೆಯಿಂದ ಗುಣಿಸಿ, ಅಹೋರಾತ್ರಾರ್ಧ ವೃತ್ತದ ಕರ್ಣದಿಂದ (ದುಜ್ಯೆ) ಯಿಂದ ಭಾಗಿಸಿದಾಗ ಆಗ ಚರಜ್ಯಾ ಬರುವದು. ಮುಂದೆ ಈ ಚರಜ್ಯೆಯನ್ನು ಧನುಸ್ಸಾಗಿ ಪರಿವರ್ತಿಸಿದರೆ ಬರುವದೇ ಚರಕಲೆಗಳು. ಉತ್ತರ ಕ್ರಾಂತಿ ಇದ್ದರೆ ದಿನಮಾದದ ಚತುರ್ಥಾಂಶಕ್ಕೆ ಒಂದು ಕಡೆ ಕೂಡಿಸಬೇಕು. ಒಂದು ಕಡೆ ಕಳೆಯಬೇಕು. ಇದರಿಂದ ಹಗಲೂ ಹಾಗೂ ರಾತ್ರಿಗಳ ಮಾನಗಳು ಬರುತ್ತವೆ. ಇದನ್ನು ಎರಡರಿಂದ ಗುಣಿಸಿದರೆ ದಿನಮಾನ ಬರುವದು. ದಕ್ಷಿಣಾ ಕ್ರಾಂತಿಯಾಗಿದ್ದರೆ ಧವರ್ಣವನ್ನು ವ್ಯತ್ಯಾಸ ಮಾಡಬೇಕು.

ಒಂದು ಗ್ರಹಕ್ಕೆ ಸಾವಿರದೆಂಟುನೂರು ನಕ್ಷತ್ರ ಭೋಗ ಕಲೆಗಳು. ಏಳು ನೂರಿಪ್ಪತ್ತು ತಿಥಿಭೋಗ ಕಲೆಗಳು. ಗ್ರಹವು ಯಾವ ನಕ್ಷತ್ರದಲ್ಲಿದೆಯೆಂಬುದನ್ನು ಕಂಡು ಹಿಡಿಯ ಬೇಕಾದರೆ ಗ್ರಹ ಸ್ಪುಟದ ಕಲೆಗಳನ್ನು ಹದಿನೆಂಟನೂರರಿಂದ ಭಾಗಿಸಿದರೆ ಬಂದ ಲಬ್ಧವೇ ಗತ ನಕ್ಷತ್ರಗಳನ್ನು ಅಶ್ವಿನ್ಯಾದಿಯಾಗಿ ತಿಳಿಸುತ್ತದೆ. ಉಳಿದ ಶೇಷದಿಂದ ಎಷ್ಟು ಭಾಗ ಕಳೆದಿದೆ ಎಂಬುದನ್ನು ತ್ರೈರಾಶಿಕದಿಂದ ತಿಳಿಯಬಹುದು. ಹಾಗೆಯೇ ಏಳುನೂರ ಇಪ್ಪತ್ತರಿಂದ ಭಾಗಿಸಿ ತಿಥಿಯನ್ನು ಕಂಡುಹಿಡಿಯಬೇಕು. ಯೋಗವನ್ನು ಸಾಧಿಸಬೇಕಾದರೆ, ಸೂರ್ಯ ಹಾಗೂ ಚಂದ್ರರ ಸ್ಪುಟೈಕ್ಯವನ್ನು ಎಂಟನೂರರಿಂದ ಭಾಗಿಸಿದರೆ ಬರುವ ಲಬ್ಧವು ವಿಷ್ಕಂಭಾದಿಯಾಗಿ ಕಳೆದಿರುವ ಯೋಗವನ್ನು ತಿಳಿಸುವದು. ಉಳಿದ ಶೇಷದಿಂದ ಯೋಗದಲ್ಲಿ ಕಳೆದಿರುವ ಮತ್ತು ಉಳಿದಿರುವ ಘಟಕಗಳನ್ನು ಕಂಡು ಹಿಡಿಯಬೇಕು.

ಸೂರ್ಯ ಚಂದ್ರರ ಸ್ಪುಟಾಂತರ ಕಲೆಗಳನ್ನು ಏಳನೂರ ಇಪ್ಪತ್ತರಿಂದ ಭಾಗಿಸಿ, ಬಂದ ಲಬ್ಧವನ್ನು ಗತತಿಥಿಯೆಂದೂ ಉಳಿದ ಶೇಷವನ್ನು ಅರವತ್ತರಿಂದ ಗುಣಿಸಿ, ರವಿ ಚಂದ್ರಾಂತರದಿಂದ ಭಾಗಿಸಿದರೆ ಬರುವದೇ ಗಮ್ಯತಿಥಿಯ (ಕಾಲ). ಶುಕ್ಲಪ್ರತಿ ಪತ್ತಿನಿಂದ ಹಿಡಿದು ತಿಥಿಗಳು ಎರಡು ಪಕ್ಷಗಳಲ್ಲಿಯೂ ಒಟ್ಟು ಮೂವತ್ತು ಆಗುವವು. ಯಾವಾಗಲೂ ಕೃಷ್ಣ ಪಕ್ಷದ ಚತುರ್ದಶಿಯ ಉತ್ತರಾರ್ಧದಿಂದಲೇ ಸ್ಥಿರಕರಣಗಳು ಆರಂಭವಾಗುವವು. ಶಕುನಿ, ನಾಗವಾನ್, ಚತುಷ್ಪಾತ್, ಕಿಂಸ್ತುಘ್ನ ಈ ನಾಲ್ಕು ಕರಣಗಳೇ ಸ್ಥಿರಕರಣಗಳು. ಇವು ಶುಕ್ಲಪ್ರತಿಪತ್ತಿನ ಪೂರ್ವಾರ್ಧಕ್ಕೆ ಪೂರ್ಣವಾಗಿ ಉತ್ತರಾರ್ಧದಿಂದ ಅಂದರೆ ಶುಕ್ಲ ಪ್ರತಿಪತ್ತಿನ ಉತ್ತರಾರ್ಧದಿಂದ ಬವಾದಿಯಾದ ಏಳು ಚರಕರಣಗಳೂ ಪ್ರಾರಂಭ ವಾಗುವವು. ಬವ, ಬಾಲವ, ಕೌಲವ, ತೈತಿಲ, ಗರಜ, ವಣಿಕ್ ಮತ್ತು ಭದ್ರ ಇವೇ ಏಳು ಚರಕರಣಗಳೆನಿಸುವವು. ದಿಗ್ದೇಶಕಾಲಗಳೆಂಬ ಮೂರು ವಿಷಯಗಳನ್ನು ವಿವರಿಸುವ ತ್ರಿಪ್ರಶ್ನಾಧಿಕಾರವು ಆರಂಭವಾಗುವುದು ಇಲ್ಲಿಂದಲೇ. ಇದರಲ್ಲಿ ಮೊದಲನೆಯದಾಗಿ ದಿಕ್ಕು ಸಾಧನೆಯ ವಿಧಾನ ಹೀಗಿದೆ. ನೀರಿನ ಮಟ್ಟದಂತೆ ಸಮವಾಗಿದ್ದು, ಒಂದು ದೊಡ್ಡ ಕಲ್ಲುಬಂಡೆಯ ಮೇಲೆ ವಜ್ರಗಾರೆಯಿಂದ ಮೊದಲು ಭೂಮಿಯನ್ನು ಸಮಾನವಾಗಿ ಮಾಡಿಕೊಳ್ಳಬೇಕು. ಅದರ ಸುತ್ತಲೂ ಒಂದು ಮಂಡಲಾಕಾರ ಮಾಡಿ, ಅದರಲ್ಲಿ ಮುನ್ನೂರ ಅರವತ್ತು ಭಾಗಗಳನ್ನು ಕಲ್ಪಿಸಿಕೊಂಡು, ಬಳಿಕ ಈ ಮಂಡಲದ ನಡುವೆ ಹನ್ನೆರಡು ಅಂಗುಲ ಪ್ರಮಾಣವುಳ್ಳ ಒಂದು ಶಂಕುವನ್ನು ವಿಷುವದ್ದಿನದಲ್ಲಿ ಸ್ಥಾಪಿಸಬೇಕು. ಅದರ ನೆರಳು ಪೂರ್ವಾಪರಗಳಲ್ಲಿ ಸೂರ್ಯೋದಯ ಸೂರ್ಯಾಸ್ತಗಳಲ್ಲಿ ಎಲ್ಲಿ ಬೀಳುತ್ತದೆಂಬುದನ್ನು ಆ ವೃತ್ತದಲ್ಲಿ ಗುರುತು ಮಾಡಿಕೊಳ್ಳಬೇಕು. ಆ ಎರಡೂ

ಗುರುತುಗಳಿಂದಲೂ ಅವುಗಳ ಅಂತರವನ್ನೇ ವ್ಯಾಸವಾಗಿಟ್ಟುಕೊಂಡು ಮತ್ಸ್ಯ ರೇಖೆಯನ್ನು ಎಳೆಯಬೇಕು. ಅದು ದಕ್ಷಿಣೋತ್ತರವಾಗಿ ಬೀಳುವದು.

ಆ ರೇಖೆಗಳ ಮಧ್ಯಭಾಗವನ್ನು ಒಂದು ಸಮರೇಖೆಯಿಂದ ಗುರುತಿಸಬೇಕು. ಈ ಸಮರೇಖೆಯೇ ನಿಜವಾದ ಪೂರ್ವ - ಪಶ್ಚಿಮ ದಿಕ್ಕುಗಳನ್ನು ಸೂಚಿಸುವ ರೇಖೆಯಾಗುವದು. ಮಧ್ಯ ಸ್ಥಾನದಿಂದ ಭುಜಸೂತ್ರಗಳ ಅಂಗುಲ ಸಂಖ್ಯೆಗಳನ್ನೇ ಮೂಲವಾಗಿಟ್ಟುಕೊಂಡು, ಚತುರಸ್ರಾಕಾರವಾದ ಮಂಡಲವನ್ನು ಮಾಡಬೇಕು. ಈ ಮಂಡಲದಲ್ಲಿ ಇಷ್ಟ ಶಂಕುವಿನ ಛಾಯಾಗ್ರವನ್ನು ಗುರುತು ಮಾಡಿಕೊಳ್ಳಬೇಕು. ಅದರಲ್ಲಿ ಪೂರ್ವಪಶ್ಚಿಮಾಭಿಮುಖವಾಗಿ ಇರುವ ರೇಖೆಗೆ ಸಮಮಂಡಲವೆಂದು ಹೆಸರು. ಅದನ್ನೇ ಉನ್ಮಂಡಲವೆಂದೂ, ವಿಷುವನ್ಮಂಡಲವೆಂದೂ ಕರೆಯುತ್ತಾರೆ. ಆ ಚತುರಸ್ರಾಕಾರದಲ್ಲಿ ಪೂರ್ವ ಪಶ್ಚಿಮವಾದ ರೇಖೆಯನ್ನು ವಿಷವಾಚ್ಛಯೆಯ ಮೇಲೆ ಬರುವಂತೆ ಬರೆಯಬೇಕು. ಇಚ್ಛಿತ ರೇಖೆ ಮತ್ತು ಅಗ್ರ ರೇಖೆಯ ಅಂತರವನ್ನೇ ಅಗ್ರ ಸಂಕೇತದಿಂದ ಕರೆಯುವರು. ಹನ್ನೆರಡು ಅಂಗುಲದ ಶಂಕು ಮತ್ತು ಅದರ ಛಾಯೆ ಇವೆರಡರ ವರ್ಣಯೋಗದ ಮೂಲವೇ ಛಾಯಾಕರ್ಣವಾಗುವದು.

ಆ ಛಾಯಾಕರ್ಣದ ವರ್ಗದಿಂದ ಶಂಕುವರ್ಗವನ್ನು ಕಳೆದರೆ ಬರುವದೇ ಛಾಯಾ ಪ್ರಮಾಣವಾಗುವದು. ಅಥವಾ ಛಾಯಾಕರ್ಣವರ್ಗದಿಂದ ಛಾಯಾ ವರ್ಗವನ್ನು ಕಳೆದ ಬಳಿಕ, ಮೂಲವನ್ನು ತೆಗೆದರೂ ಛಾಯಾ ಪ್ರಮಾಣವು ಬರುವದು. ಒಂದು ಮಹಾ ಯುಗದಲ್ಲಿ ಭಚಕ್ರವು ಪೂರ್ವ ಪಶ್ಚಿಮವಾಗಿ ಆರನೂರು ಸಾರಿ ಚಲನೆಯನ್ನು ಪಡೆದು ಮತ್ತೆ ಯಥಾ ಸ್ಥಾನಕ್ಕೆ ಬಂದು ನಿಲ್ಲುತ್ತದೆ. ಆದ್ದರಿಂದ ಆರುನೂರು ಎಂಬ ಭಚಕ್ರಭ್ರಮಣವನ್ನು ಮಹಾ ಯುಗದ ದಿನಗಳಿಂದ ಭಾಗಿಸಿ ಅಹರ್ಗಣದಿಂದ ಗುಣಿಸಿ ಬಂದ ಸಂಖ್ಯೆಗೆ ಭುಜಾನಯನ ಮಾಡಿ ಮೂರರಿಂದ ಗುಣಿಸಿ, ಹತ್ತರಿಂದ ಭಾಗಿಸಿದರೆ ಅಯನಾಂಶವು ಬರುವದು. ಈ ಅಯನಾಂಶದಿಂದಲೇ ಗ್ರಹ ಮತ್ತು ಛಾಯಾ ಚರಘಟೀ ಇತ್ಯಾದಿಗಳನ್ನು ಸಂಸ್ಕರಿಸಬೇಕಾಗುತ್ತದೆ. ಶಂಕು ಮತ್ತು ಛಾಯಾ ಪ್ರಮಾಣದಿಂದ ತ್ರಿಜ್ಯೆಯನ್ನು ಗುಣಿಸಿ ವಿಷುವತ್ಕರ್ಣದಿಂದ ಭಾಗಿಸಿದಾಗ, ಕ್ರಮವಾಗಿ ಲಂಬಜ್ಯಾ ಮತ್ತು ಅಕ್ಷಜ್ಯಾ ದೊರಕುತ್ತವೆ. ಇವುಗಳಿಗೆ ಧನುಸ್ಸನ್ನು ತೆಗೆದಾಗ ದಕ್ಷಿಣ ಲಂಬಾಂಶ ಮತ್ತು ದಕ್ಷಿಣ ಅಕ್ಷಾಂಶ ಇವುಗಳನ್ನು ತೆಗೆದಂತಾಗುವದು. ಸ್ವದೇಶದ ಅಕ್ಷಾಂಶ ಮತ್ತು ಛಾಯಾ ಇವೆರಡೂ ಒಂದೇ ದಿಕ್ಕಿನಲ್ಲಿದ್ದರೆ, ಆಗ ಸ್ವದೇಶದ ಅಕ್ಷಾಂಶಕ್ಕೆ ಮಧ್ಯಕಾಲದ ಸೂರ್ಯ ಕಾಂತ್ಯಾಂಶಗಳನ್ನು ಕೂಡಿಸಬೇಕು. ಬೇರೆ ದಿಕ್ಕುಗಳಾದರೆ ಕಳೆಯಬೇಕು. ಉಳಿದುದೇ ಸೂರ್ಯನ ನತಾಂಶ. ತೊಂಭತ್ತರಿಂದ ಕಳೆಯಲಾದ ನತಾಂಶವೇ ಉನ್ನತಾಂಶವೆನಿಸುತ್ತದೆ. ಈ ನತಾಂಶಜ್ಯಾವನ್ನು ಮತ್ತು ತ್ರಿಜ್ಯೆಯನ್ನು ಶಂಕು ಪ್ರಮಾಣದಿಂದ ಗುಣಿಸಿಕೋಟಿಜ್ಯಾದಿಂದ ಭಾಗಿಸಿದಾಗ, ಬರುವ ಫಲವು ಛಾಯಾಕರ್ಣರೂಪವಾಗುವದು. ಮತ್ತು ಅಕ್ಷಾಂಶ ಮತ್ತು ನತಾಂಶ ಇವುಗಳ ದಿಕ್ಕು ಒಂದೇ ಆದರೆ ಪರಸ್ಪರ ಕಳೆಯಬೇಕು. ಬೇರೆಯ ದಿಕ್ಕುಗಳಾದರೆ ಕೂಡಿಸಬೇಕು. ಹೀಗೆ ಮಾಡುವದರಿಂದ ಕ್ರಾಂತ್ಯಾಂಶವು ದೊರಕುತ್ತದೆ. ಈ ಕ್ರಾಂತ್ಯಾಶದ ಜ್ಯಾವನ್ನು ತ್ರಿಜ್ಯೆಯಿಂದ ಗುಣಿಸಿ; ಪರಮಕ್ರಾಂತಿಜ್ಯೆಯಿಂದ ಭಾಗಿಸಿ ಬಂದ ಜ್ಯಾ ಸಮೂಹಕ್ಕೆ ಧನುರಾನಯನ ಮಾಡಿದಾಗ ಮಾಷಾದಿ ತ್ರಿರಾಶಿಸ್ಥಿತವಾದ ಸೂರ್ಯನಸ್ಥಾನವು ದೊರಕುವದು.

ಅದನ್ನು ಆರು ರಾಶಿಗಳಿಂದ ಕಳೆದರೆ, ಕರ್ಕಾದಿಯಲ್ಲಿಯೂ, ಆರುರಾಶಿಯನ್ನು ಸೇರಿಸಿದರೆ, ತುಲಾದಿಯಾಗಿಯೂ ಹನ್ನೆರಡರಿಂದ ಕಳೆದರೆ, ಮಕರಾದಿಯಾಗಿಯೂ ಇರುವ ಮಧ್ಯಾಹ್ನಿಕ ಕಾಲದ ಸೂರ್ಯಸ್ಫುಟವಾಗುವದು.

ಅಹೋರಾತ್ರ ಪ್ರಮಾಣಗಳನ್ನು ಕಂಡುಹಿಡಿಯವದಾದರೆ ಗ್ರಹಸ್ಫುಟವನ್ನೆಲ್ಲಾ ಪ್ರಾಣರೂಪವಾಗಿ ಬದಲಾಯಿಸಿಕೊಂಡು, ಹದಿನೆಂಟು ಸಾವಿರದ ಎಂಟುನೂರರಿಂದ ಭಾಗಿಸಿ, ಬಂದ ಲಬ್ಧವನ್ನು ಚಕ್ರಾಸುಗಳಾದ ಇಪ್ಪತ್ತೊಂದು ಸಾವಿರದ ಆರನೂರಕ್ಕೆ ಕೂಡಿಸಿದರೆ, ಆಯಾ ಗ್ರಹಗಳ ಅಹೋರಾತ್ರಾದಿಗಳು ದೊರೆಯುತ್ತವೆ. ನಿರಕ್ಷ ದೇಶವೆಂದರೆ ಅಕ್ಷಾಂಶರಹಿತವಾದ ದೇಶ, ಲಂಕಾ, ಯಮಕೋಟ, ರೋಮಕ, ಸಿದ್ಧಪುರ ಎಂಬ ನಾಲ್ಕು ಊರುಗಳನ್ನು ನಿರಕ್ಷದೇಶಗಳೆಂದು ಶಾಸ್ತ್ರಜ್ಞರು ತೀರ್ಮಾನ ಮಾಡಿದ್ದಾರೆ. ಇಂತಹ ದೇಶಗಳ ಲಗ್ನ ಪ್ರಮಾಣದ ವಿಷಯದಲ್ಲಿ ಗಣಿತಕ್ರಮ ಹೀಗಿದೆ ಏಕರಾಶಿ, ದ್ವಿರಾಶಿ, ತ್ರಿರಾಶಿಗಳ ಜ್ಯಾವನ್ನು ತ್ರಿರಾಶಿದ್ಯುಜ್ಯೆಯಿಂದ ಅಂದರೆ ಸಾವಿರದ ಮುನ್ನೂರ ಎಂಭತ್ತೇಳರಿಂದ ಗುಣಿಸಿ, ಸ್ವಕ್ರಾಂತಿ - ಜ್ಯಾ ಸಂಬಂಧವಾದ ದ್ಯುಜ್ಯೆಯಿಂದ ಭಾಗಿಸಬೇಕು. ಬಂದ ಜ್ಯಾರೂಪವಾದ ಫಲಕ್ಕೆ ಧನುಸ್ಸನ್ನು ಆನಯನಮಾಡಿ ಅವುಗಳನ್ನು ಭಿನ್ನ ಭಿನ್ನ ಸ್ಥಾನಗಳಲ್ಲಿ ಇಡಬೇಕು. ಅದರಲ್ಲಿ ಏಕರಾಶಿಸ್ಥಿತಜ್ಯಾ ಫಲವು ಯಥಾಸ್ಥಿತವಾಗಿರುತ್ತದೆ. ಅದರಲ್ಲಿ ಪ್ರಥಮ ಫಲವನ್ನು ದ್ವಿತೀಯ ಫಲದಲ್ಲಿಯೂ ದ್ವಿತೀಯ ಫಲವನ್ನು ತೃತೀಯ ಫಲದಲ್ಲಿಯೂ ಕಳೆದು, ಬಂದ ಲಬ್ಧವನ್ನು ಎರಡನೇಯ ಮತ್ತು ಮೂರನೆಯ ರಾಶಿ ಫಲವನ್ನಾಗಿ ಗ್ರಹಿಸಬೇಕು, ಇದು ನಿರಕ್ಷ ದೇಶಗಳ ಉದಯಾಸ್ತಗಳಾಗುತ್ತದೆ. ಲಂಕಾದೇಶಕ್ಕೆ-

ಮೇಷ ರಾಶಿಯ ಪ್ರಾಣ ಪ್ರಮಾಣ ಸಾವಿರದಾರುನೂರಾ ಎಪ್ಪತ್ತು (1670)

ವೃಷಭರಾಶಿಯ ಪ್ರಾಣ ಪ್ರಮಾಣ ಸಾವಿರದೇಳನುರ ತೊಂಭತ್ತೈದು (1795)

ಮಿಥುನ ರಾಶಿ ಪ್ರಾಣ ಪ್ರಮಾಣ ಸಾವಿರದೊಂಬೈನೂರ ಮೂವತ್ತೈದು (1935)

ಹೀಗೆ ಬರುವದು. ಅದನ್ನೇ ಸ್ವದೇಶ ಮೇಷಾದಿ ಪ್ರಮಾಣವನ್ನಾಗಿ ಬದಲಾಯಿಸಿಕೊಳ್ಳಬೇಕಾದರೆ, ಸ್ವದೇಶದ ಚರಖಂಡಗಳನ್ನು ಮೇಷಾದಿ ಮಿಥುನಾಂಕವಾಗಿ ಕಳೆದುಕೊಳ್ಳಬೇಕು. ಆಗ ನಮ್ಮ ದೇಶದ ಲಗ್ನ ಪ್ರಮಾಣವಾಗುವದು. ಮೇಷ, ವೃಷಭ, ಮಿಥುನಗಳೇ ವ್ಯತ್ಕ್ರಮವಾಗಿ ಕಟಕ, ಸಿಂಹ, ಕನ್ಯಾ ರಾಶಿಗಳಾಗುವವು. ಹೀಗೆ ಲಬ್ಧವಾದ ಮೇಷಾದಿ ಕನ್ಯಾಂತವಾದ ಆರು ರಾಶಿಗಳು ವ್ಯತ್ಕ್ರಮವಾಗಿ ಅಂದರೆ ಕನ್ಯಾ, ಸಿಂಹ, ಕರ್ಕಾಟಕಾದಿ ರೂಪದಿಂದ ಅವೇ ತುಲಾದಿಷ್ಕಟಗಳಾಗುವವು. ಅಭೀಷ್ಟವಾದ ಕಾಲಕ್ಕೆ ಸೂರ್ಯನನ್ನು ಚಾಲನೆ ಮಾಡಿ, ಆ ರಾಶಿಯಲ್ಲಿ ಗತ ಮತ್ತು ಭೋಗ್ಯವಾದ ಅಸುಗಳನ್ನು ಮೊದಲು ತಿಳಿದುಕೊಳ್ಳಬೇಕು. ಅನಂತರ ಸೂರ್ಯಕ್ರಾಂತರಾಶಿಯ ಮೇಲೆ ಸ್ವದೇಶೋದಯಾಸುಗಳಿಂದ ಗುಣಿಸಿ, ಮೂವತ್ತರಿಂದ ಭಾಗಿಸಿದರೆ ಆ ಲಗ್ನದ ಗತ ಮತ್ತು ಗಮ್ಯವಾದ ಅಸುಗಳು ದೊರೆಯುತ್ತದೆ. ಅಭೀಷ್ಟಕಾಲದಲ್ಲಿ ಸೂರ್ಯೋದಯ ಘಟಕಗಳಿಂದ ಭೋಗ್ಯಾಸುಗಳನ್ನು ಕಳೆದರೆ ಆ ಲಗ್ನದ ಗತಾಸುಗಳು ಗೊತ್ತಾಗುತ್ತವೆ.

ಆ ಲಗ್ನ ಪ್ರಮಾಣದಿಂದ ಗತಾಸುಗಳನ್ನು ಕಳೆದರೆ ಭೋಗ್ಯಾಸುಗಳು ದೊರಕುತ್ತವೆ. ಇಷ್ಟಕಾಲದಿಂದ ಯಾವ ಲಗ್ನದ ಪೂರ್ಣ ಪ್ರಮಾಣವನ್ನು ಕಳೆಯುವದಕ್ಕಾಗು ವುದಿಲ್ಲವೋ

ಅದೇ ಅಭೀಷ್ಟಕಾಲದ ಸೂರ್ಯಕ್ರಾಂತಿರಾಶಿ ಎಂದು ತಿಳಿದು, ಆ ರಾಶಿಯ ಗತಪ್ರಮಾಣವನ್ನು ಮೂವತ್ತರಿಂದ ಗುಣಿಸಿ ಅಶುದ್ಧ ರಾಶಿಮಾನದಿಂದ ಭಾಗಿಸಬೇಕು. ಬಂದ ಲಬ್ಧವನ್ನು ಲಗ್ನದ ಪರಮ ಭಾಗಗಳಲ್ಲಿ ಕಳೆಯುವದೋ ಅಥವಾ ಕೂಡಿಸುವದೋ ಮಾಡಿದರೆ, ಅದು ತತ್ಕಾಲಿಕವಾದ ಕ್ಷಿತಿಜ ಸಂಬಂಧಿಯಾದ ಲಗ್ನವೆನಿಸುವದು. ಅದರಲ್ಲಿ ಅಯನಾಂಶವನ್ನು ಕಳೆಯಬೇಕೆಂಬುದನ್ನು ಮಾತ್ರ ಎಂದಿಗೂ ಮರೆಯಬಾರದು.

ಇದರಿಂದ ದಶಮಲಗ್ನ ಅಥವಾ ಮಧ್ಯಲಗ್ನವನ್ನು ಸಾಧನೆ ಮಾಡಬೇಕಾದರೆ ಅಭೀಷ್ಟಕಾಲಕ್ಕೆ ಸೂರ್ಯನ ಪೂರ್ವ ಅಥವಾ ಪಶ್ಚಿಮನತಾಂಶಗಳನ್ನು ಕಂಡು ಹಿಡಿದು, ಅದಕ್ಕೆ ಲಂಕಾದೇಶದ ಲಗ್ನಪ್ರಮಾಣವನ್ನು ಪೂರ್ವದಿಕ್ಕಿಗೆ ಗತವಾಗಿದ್ದರೆ ಕಳೆಯಬೇಕು. ಪಶ್ಚಿಮ ನತವಾಗಿದ್ದರೆ ಕೂಡಿಸಬೇಕು. ಈ ರೀತಿ ಮಾಡಿದರೆ ದಶಮಲಗ್ನ ಅಥವಾ ಮಧ್ಯಮಲಗ್ನವನ್ನು ಸಾಧನೆ ಮಾಡಿದಂತಾಗುವದು. ಅನಂತರ ಇಷ್ಟಲಗ್ನ ಮತ್ತು ಸೂರ್ಯಸ್ಫುಟ ಇವುಗಳಿಗೆ ಮಧ್ಯ ಇರುವ ಎಲ್ಲಾ ಲಗ್ನ ಪ್ರಮಾಣಗಳನ್ನು ಒಟ್ಟುಗೂಡಿಸಿ ತಾತ್ಕಾಲಿಕವಾಗಿ ಲಗ್ನದ ಭುಕ್ತಾಂಶವನ್ನು ಮಾಡಿ, ಅದನ್ನು ಕೂಡಿಸಿ, ಭೋಗ್ಯಾಂಶವನನು ಕಳೆಯಬೇಕು. ಹೀಗೆ ಕಾಲಸಾಧನೆಯನ್ನು ಮಾಡುವ ಕ್ರಮವನ್ನು ತಿಳಿಯಬೇಕು. ಇನ್ನು ಚಂದ್ರಗ್ರಹಣ, ಸೂರ್ಯಗ್ರಹಣಗಳ ಸಂಭವನೀಯ ಕಾಲ, ಕಾರ್ಯಕಾರಣಾದಿಗಳನ್ನು ವಿವರಿಸುತ್ತೇವೆ ಕೇಳು. ರಾಹುಸ್ಫುಟ ಮತ್ತು ಸೂರ್ಯ ಭುಜಾಂಶಗಳ ಅಂತರವು ಹದಿನಾಲ್ಕಕ್ಕೆ ಕಡಿಮೆಯಾದಲ್ಲಿ ಚಂದ್ರಗ್ರಹಣವಾಗುತ್ತದೆ.

ಆ ಅಂತರವನ್ನು ಹನ್ನೊಂದರಿಂದ ಗುಣಿಸಿ, ಏಳರಿಂದ ಭಾಗಿಸಿದರೆ ಬರುವದೇ ಶರಲಿಪ್ತಿಗಳಾಗುತ್ತವೆ. ಸೂರ್ಯಗ್ರಹಣದಲ್ಲಿ ಸೂರ್ಯನನ್ನು ಚಂದ್ರನೂ ಚಂದ್ರ ಗ್ರಹಣದಲ್ಲಿ ಚಂದ್ರನನ್ನು ಭೂ-ಛಾಯೆಯೂ ಮುಸುಕುವದು. ಸೂರ್ಯಗ್ರಹಣದಲ್ಲಿ ಛಾದ್ಯ, ಸೂರ್ಯ, ಛಾದಕಚಂದ್ರ ಹಾಗೆಯೇ ಚಂದ್ರ, ಗ್ರಹಣದಲ್ಲಿ ಛಾದ್ಯಚಂದ್ರ, ಛಾದಕ ಭೂಭಾಗಗ್ರಾಸ ಪ್ರಮಾಣವನ್ನು ಕಂಡು ಹಿಡಿಯಬೇಕಾದರೆ ಛಾದ್ಯ ಮತ್ತು ಛಾದಕ ಇವುಗಳ ಮಾನಕಲೆಗಳನ್ನು ಒಂದುಗೂಡಿಸಿ ಅದರಲ್ಲಿ ತಾತ್ಕಾಲಿಕವಾದ ಚಂದ್ರವಿಕ್ಷೇಪವನ್ನು ಕಳೆಯಲಾಗಿ ಉಳಿಯುವ ಭಾಗವೇ ಗ್ರಾಸಪ್ರಮಾಣವಾಗುತ್ತದೆ.

ಇನ್ನು ಪೂರ್ಣಗ್ರಹಣದಲ್ಲಿ ಸ್ಥಿತ್ಯರ್ಧ ಮತ್ತು ವಿಮರ್ದಾರ್ಧಗಳನ್ನು ಅನಯನ ಮಾಡಲು ಈ ರೀತಿಯಾಗಿ ಗಣಿತ ಮಾಡುವದು ವಿಧಾನವಾಗಿದೆ : ಛಾದ್ಯ ಮತ್ತು ಛಾದಕಗಳ ಮಾನಯೋಗ ಮತ್ತು ಮಾನಾಂತರ ಇವುಗಳನ್ನು ಎರಡು ಕಡೆ ಇಟ್ಟುಕೊಂಡು, ಕ್ರಮವಾಗಿ, ಎರಡನ್ನೂ ಅರ್ಧಮಾಡಿ ಅವುಗಳ ವರ್ಗದಿಂದ ವಿಕ್ಷೇಪವನ್ನು ಕಳೆಯಬೇಕು. ಅವುಗಳ ಮೂಲವನ್ನು ಕಂಡುಹಿಡಿದು, ಅರವತ್ತರಿಂದ ಗುಣಿಸಿ, ಸೂರ್ಯ, ಚಂದ್ರರ ಗತ್ಯಂತರ ಕಲೆಗಳಿಂದ ಭಾಗಿಸಿದರೆ, ಬರುವ ಫಲಗಳಲ್ಲಿ ಒಂದು ಸ್ಥಿತ್ಯರ್ಧ, ಒಂದು ವಿಮರ್ದಾರ್ಧವಾಗುವದು. ಗ್ರಹಣಾರಂಭಕಾಲದಿಂದ ಗ್ರಹಣ ಬಿಡುವವರೆಗೆ ಇರುವ ಕಾಲಕ್ಕೆ ಸ್ಥಿತಿ ಎಂದು ಹೆಸರಿದೆ. ಸ್ಥಿತ್ಯರ್ಧದಿಂದ ಗ್ರಹಣದ ಪ್ರಾರಂಭದಿಂದ ಮಧ್ಯ ಗ್ರಹಣ ಪರ್ಯಂತವಾಗಿರುವ ಕಾಲವು ತಿಳಿದು ಬರುತ್ತದೆ, ಹಾಗೆಯೇ ಪೂರ್ಣ ಗ್ರಹಣದಲ್ಲಿ ನಿಮೀಲನ, ಉನ್ಮೀಲನ ಕಾಲಗಳ ಅಂತರವೇ ವಿಮರ್ದಕಾಲವೆಂದೆನ್ನುತ್ತಾರೆ. ವಿಮರ್ದಾರ್ಧದಿಂದ ನಿಮೀಲನ ಮತ್ತು ಮಧ್ಯ ಗ್ರಹಣ ಇವುಗಳ ಅಂತರವು ತಿಳಿಯುತ್ತದೆ. ಸಮ್ಮಿಲನವೆಂದರೆ, ಛಾದ್ಯಮಂಡಲದ ಆಚ್ಛಾದನ ಸಮಾಪ್ತಿಯೆಂದೂ, ಉನ್ಮೀಲನವೆಂದರೆ

ಆಚ್ಛಾದಿತನಾದ ಮೇಲೆ ಬಿಡುವದಕ್ಕೆ ಆರಂಭವಾಗುವ ಕಾಲವೆಂದೂ ತಿಳಿಯುತ್ತಾರೆ. ಇನ್ನು ಅಭೀಷ್ಟಗ್ರಾಸದಿಂದ ಇಷ್ಟವಾದ ಕಾಲಾನಯನದ ಕ್ರಮವು ಹೀಗಿದೆ - ಛಾದ್ಯ, ಛಾದಕ, ಮಾನೈಕ್ಯ ಖಂಡದಿಂದ ಅಭೀಷ್ಟಗ್ರಾಸಗಳನ್ನು ಕಳೆಯಬೇಕು. ಉಳಿದ ಸಂಖ್ಯೆಗೆ ವರ್ಗಮಾಡಿ ಅಭೀಷ್ಟ ಗ್ರಾಸಕಾಲಿಕವಾದ ವಿಕ್ಷೇಪವರ್ಗವನ್ನು ಕಳೆದು ಅದಕ್ಕೆ ಮೂಲವನ್ನು ಕಳೆದರೆ ಬರುವುದೇ ಕೋಟಿಕಲೆಯಾಗುವದು. ಈ ಕೋಟಿಕಲೆಗಳಿಗೆ ಹಿಂದೆ ಸ್ಥಿತ್ಯರ್ಧಾನಯನ ಮಾಡಿದ ರೀತಿಯಲ್ಲಿ ಸಂಸ್ಕಾರ ಮಾಡಿದರೆ ಇಷ್ಟ ಕಾಲವು ತಿಳಿದು ಬರುತ್ತದೆ.

ಅದರಂತೆ ವಲನ ಸಾಧನ ಕ್ರಮ ಹೀಗಿರುವದು : ಯಾವಕಾಲಕ್ಕೆ ವಲನ ಮಾಡಬೇಕೋ ಆ ಕಾಲದ ನತಾಂಶಕ್ಕೆ ಜ್ಯಾವನ್ನು ಮಾಡಿ ಅದನ್ನು ಸ್ವದೇಶಿಯ ಅಕ್ಷಜ್ಯೆಯಿಂದ ಗುಣಿಸಿ ತ್ರಿಜ್ಯೆಯಿಂದ ಭಾಗಿಸಿ, ಬರುವ ಫಲಕ್ಕೆ ಧನುರಾಯನ ಮಾಡಿದರೆ ವಲನಾಂಶವು ದೊರೆಯುವದು, ಸಮವೃತ್ತಾಪೇಕ್ಷಯಾ ಕ್ರಾಂತಿವೃತ್ತದಲ್ಲಿ ವಲಿತವಾಗಿರುವ ದಕ್ಷಣೋತ್ತ ರಾಂಶವೇ ವಲನಾಂಶ. ಮಧ್ಯಗ್ರಹಣಕಾಲಜ್ಞಾನಕ್ಕಾಗಿ ತಿಥಿಗೆ ಲಂಬನ ಸಂಸ್ಕಾರವನ್ನು ಸ್ಥಿರೀಕರಣ ಮಾಡಿ ಅನಂತರ ನತ್ಯಂಶ ಕಂಡುಹಿಡಿಯಬೇಕು. ದೃಕ್ಷೇಪವನ್ನು ಸೂರ್ಯ ಚಂದ್ರರ ಮಧ್ಯಗತಿಯ ಅಂತರದಿಂದ ಗುಣಿಸಿ ಹದಿನೈದರಿಂದ ಮತ್ತೆ ಗುಣಿಸಿ ತ್ರಿಜ್ಯೆಯಿಂದ ಭಾಗಿಸಿದರೆ, ಉಳಿಯುವದೇ ನತ್ಯಂಶ, ಈ ನತ್ಯಂಶ ಕಂಡುಹಿಡಿದ ನಂತರ ಸ್ಥಿತ್ಯರ್ಧ, ವಿಮರ್ದಾರ್ಧಗಳನ್ನು ಕಂಡು ಹಿಡಿಯಬೇಕು. ಆ ಕಾಲದ ನತಿ ಮತ್ತು ಶರ ಇವುಗಳನ್ನು ಸಾಧಿಸಿಕೊಂಡು, ಮಧ್ಯಗ್ರಹಣಕಾಲಿಕವಾದ ದಶಮ ಲಗ್ನದಿಂದ ತಿಥ್ಯಾನಯನ ರೀತಿಯಲ್ಲಿ ಹಿಂದೆ ಹೇಳಲಾದ ಕ್ರಮದಿಂದ ಸ್ಥಿತ್ಯರ್ಧ ವಿಮರ್ದಾರ್ಧಗಳನ್ನು ಅಸಕೃದ್ ಶೋಧನೆ ಮಾಡಬೇಕು. ಇದರಿಂದ ಫಲವು ಸ್ಪಷ್ಟವಾಗಿ ಬರುವಂತೆ ನೋಡಿಕೊಳ್ಳಬೇಕು. ಈ ಸ್ಥಿತ್ಯರ್ಧಾದಿಗಳ ಮೂಲಕ ಪೂರ್ಣಗ್ರಹಣದ ಮೂಲಕ ಸ್ಪರ್ಶ ಮೋಕ್ಷಾದಿಗಳನ್ನು ಸರಳವಾಗಿ ಕಂಡು ಹಿಡಿಯಬಹುದು. ಸ್ಥಿತ್ಯರ್ಧದಿಂದ ಅಂದರೆ ಅದರ ಹೀನದಿಂದ ಮತ್ತು ಯುತಿಯಿಂದ ಗ್ರಹಣದ ಕಾಲ, ಹಾಗೂ ಅಂತ್ಯಕಾಲಗಳು ಕಂಡು ಬರುತ್ತವೆ.

ಸೂರ್ಯನಿಗೆ ಹನ್ನೊಂದು ಹತ್ತು ಒಂಭತ್ತು ಈ ರೀತಿ ಕಾಲಾಂಶಗಳಿರುವವು. ಈ ಕಾಲಾಂಶಗಳಿಂದ ಊನ ಮಾಡಿದ ಕಾಲವೇ ಚಂದ್ರನ ಅಸ್ತೋದಯದ ಕಾಲವಾಗುವದು. ಮೊದಲು ಗ್ರಹಬಿಂಬ ಪ್ರಮಾಣವನ್ನು ಅನಂತರ ದೃಗ್ಜ್ಯಾ ಮತ್ತು ಲಂಬಜ್ಯಾವನ್ನು ಕಂಡು ಹಿಡಿದು, ಅವೆರಡೂ ಒಂದೇ ದಿಕ್ಕಿಗೆ ಸಂಬಂಧಿಸಿದರೆ, ಆಗ ಲಂಬಜ್ಯಾ ಮತ್ತು ಬಿಂಬಾಂತರ ಕಲೆಗಳಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಬೇಕು. ಭಿನ್ನ, ದಿಕ್ಕಾದರೆ ಕ್ರಾಂತ್ಯಾಂಶಗಳಿಂದ ಗುಣಿಸಿ, ಪುನಃ ಎರಡರಿಂದ ಹದಿನೈದರಿಂದ ಭಾಗಿಸಿದರೆ ಆಗ ಬಿಂಬ ಪ್ರಮಾಣವು ಬರುವದು. ಆ ಬಿಂಬ ಪ್ರಮಾಣವು ಅಂಗುಲಾತ್ಮಕವಾಗಿರುವದು. ಇದೇ ಸ್ಫುಟಬಿಂಬ ಪ್ರಮಾಣಾನಯನ ಕ್ರಮವೆನಿಸುತ್ತದೆ.

ಸೂರ್ಯ ಬಿಂಬಮಾನದಿಂದ ಚಂದ್ರ ಬಿಂಬ ಪ್ರಮಾಣವನ್ನು ಕಳೆದು ನಂತರ, ಒಂಭೈನೂರರಿಂದ ಭಾಗಿಸಿ, ಚಂದ್ರಬಿಂಬಾಂಗುಲಗಳಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಿದರೆ, ಚಂದ್ರ ಮಂಡಲದಲ್ಲಿ ಕಂಡುಬರುವ ಶುಕ್ಲ ಬಾಗ ಪ್ರಮಾಣವು ತಿಳಿಯುತ್ತದೆ. ಸೂರ್ಯ ಚಂದ್ರ ಕ್ರಾಂತಿಗಳೂ ಪೂರ್ವ ದಿಕ್ಕಿನಲ್ಲಿದ್ದರೆ, ಒಂದನೂರತೊಂಭತ್ತರಿಂದ ಗುಣಿಸಿ ಕರ್ಣಜ್ಯೆಯಿಂದ ಭಾಗಿಸಿ, ಬಂದ ಲಬ್ಧವನ್ನು ಸೂರ್ಯಸ್ಫುಟದಿಂದ ಭಾಗಿಸಿ ಮೂರರಿಂದ ಗುಣಿಸಬೇಕು. ಕರ್ಣವು ತ್ರಿಜ್ಯೆಗಿಂತ ಅಧಿಕವಾಗಿದ್ದರೆ ಋಣ ಮಾಡಬೇಕು. ಕಡಿಮೆಯಾದಲ್ಲಿ

ಧನ ಮಾಡಬೇಕು. ಋಜುಗತಿಯಲ್ಲಿರುವ ಎರಡು ಗ್ರಹಗಳ ಅಂತರವನ್ನು ಅವರ ಗತ್ಯಂತರದಿಂದ ವಿಭಾಗಿಸಿದಾಗ, ಅವರಿಗೆ ಆಗುವ ಯುದ್ಧ ದಿನದ ಅವಧಿಯು ತಿಳಿಯುತ್ತದೆ. ಎರಡು ಗ್ರಹಗಳು ವಕ್ರವಾಗಿದ್ದರೆ ಪರಸ್ಪರವಾಗಿ ಅವುಗಳ ಸ್ಫುಟವನ್ನು ಕೂಡಿಸಿ, ಗತ್ಯಂತರದಿಂದ, ಭಾಗಿಸಿ ಉತ್ತರದಿಕ್ರಾಂತಿಯಿದ್ದರೆ ಪರಸ್ಪರವಾಗಿ ಯುತಿ ಮಾಡಬೇಕು. ದಕ್ಷಿಣಕ್ರಾಂತಿಯಿದ್ದರೆ ಋಣ ಮಾಡಬೇಕು. ಕುಜಾದಿ ಗ್ರಹಗಳಿಗೆ ಸೂರ್ಯ ಗ್ರಹಣೋಕ್ತವಾದ ರೀತಿಯಲ್ಲಿಯೇ ಲಂಬನ ಗಣಿತವನ್ನು ಆನಯನ ಮಾಡಬೇಕು.

ವೈಧೃತಿ ಹಾಗೂ ವ್ಯತೀಪಾತಗಳೆಂಬ ಹೆಸರಿನ ಮಹಾಪಾತಗಳನ್ನು ಆನಯನ ಮಾಡುವ ಬಗೆ ಹೀಗಿದೆ. ಸೂರ್ಯ, ಚಂದ್ರರು ಒಂದೇ ಆಯನದಲ್ಲಿದ್ದು, ಅವರ ಕ್ರಾಂತಿಯೋಗವು ದ್ವಾದಶ ರಾಶಿಗಳಿಗೆ ಸಮನಾಗುವ ಕಾಲಕ್ಕೆ ವೈಧೃತಿ ಎಂದು ಹೆಸರು, ಬೇರೆ ಆಯನದಲ್ಲಿರುವ ಸೂರ್ಯ ಚಂದ್ರರ ಕ್ರಾಂತಿಲಿಪ್ತಿಗಳ ಯೋಗವು ಚಕ್ರಾರ್ಧಕ್ಕೆ ಸರಿಸಮನಾದರೆ ಅದೇ ವ್ಯತೀಪಾತ, ಅಯನಾಂಶ ಸಹಿತವಾಗಿ ದೃಕ್ತುಲ್ಯವಾಗಿರುವ ಸೂರ್ಯ ಚಂದ್ರರ ಸ್ಫುಟೈಕ್ಯವು ದ್ವಾದಶರಾಶ್ಯಾತ್ಮಕವಾದಾಗ ಅಥವಾ ಭಚಕ್ರಾರ್ಧಕ್ಕೆ ಸರಿಸಮ ವಾದಾಗ, ಆ ಎರಡು ಗ್ರಹಗಳಿಗೂ ಕ್ರಾಂತ್ಯಾನಯನ ಮಾಡಬೇಕು. ಬಳಿಕ ಚಂದ್ರನು ಓಜಪದದಲ್ಲಿದ್ದರೆ, ಚಂದ್ರಕ್ರಾಂತಿಗೆ ವಿಕ್ಷೇಪವನ್ನು ಸೇರಿಸಿ ಸ್ಫುಟ ಮಾಡಬೇಕು.

ಆಗ ಸೂರ್ಯಕ್ರಾಂತಿಯು ಚಂದ್ರ ವಿಕ್ಷೇಪಕ್ಕಿಂತ ಅಧಿಕವಾಗಿದ್ದರೆ, ಪಾತವು ಕಳೆದು ಹೋಯಿತೆಂದೂ, ಕಡಿಮೆಯಿದ್ದರೆ ಮುಂದೆ ಬರುವದೆಂದೂ ತಿಳಿದುಕೊಳ್ಳಬೇಕು. ಚಂದ್ರವಿಕ್ಷೇಪಾಪೇಕ್ಷೆಯೂ ಸಮೀಪವಿದ್ದರೆ, ಸೂರ್ಯಸ್ಫುಟದ ನ್ಯೂನಾಧಿಕ್ಯ ತಿಳಿದು ಕೊಂಡು ಅದರಿಂದ ಗತಗಮ್ಯಜ್ಞಾನವನ್ನು ಸಂಪಾದಿಸಬೇಕು. ಇನ್ನು ಕರ್ತೈಷ್ಯಕಾಲವನ್ನು ಕಂಡು ಹಿಡಿಯುವ ರೀತಿಯನ್ನು ವಿವರಿಸುತ್ತೇನೆ ಕೇಳು -

ಮೊದಲು ಎರಡು ಗ್ರಹಗಳಿಗೂ ಸ್ಪಷ್ಟಕ್ರಾಂತಿಯನ್ನು ಆನಯನ ಮಾಡಬೇಕು. ನಂತರ ಸೂರ್ಯ - ಚಂದ್ರರ ಕ್ರಾಂತಿಯಿಂದ ಜ್ಯಾಸಾಧಿಸಿ, ತ್ರಿಜ್ಯೆಯಿಂದ ಗುಣಿಸಿ ಪರಮಕಾಂತಿಜ್ಯೆಯಿಂದ ಭಾಗಿಸಿ, ಬಂದ ಲಬ್ಧಕ್ಕೆ ಧನುರಾನಯನ ಮಾಡಬೇಕು. ಭವಿಷ್ಯತ್ಪಾತವಾಗಿದ್ದರೆ ಅದನ್ನೂ ಚಂದ್ರಸ್ಫುಟಕ್ಕೆ ಸೇರಿಸಬೇಕು. ಗತಪಾತವಾದರೆ ಚಂದ್ರಸ್ಫುಟದಿಂದ ಕಳೆಯಬೇಕು. ಸ್ಪಷ್ಟಚಂದ್ರನಾಗುವದು. ಇನ್ನು ಸ್ಫುಟಸೂರ್ಯಾನಯನ ಮಾಡುವದಿದ್ದರೆ, ಚಂದ್ರ ಸಂಬಂಧಿಯಾದ ಸಂಸ್ಕೃತ ಫಲವನ್ನು ಸ್ಫುಟಸೂರ್ಯಗತಿ ಯಿಂದ ಗುಣಿಸಿ ಚಂದ್ರಗತಿಯಿಂದ ಭಾಗಿಸಿ, ಬಂದ ಫಲವನ್ನು ಚಂದ್ರನಂತೆಯೇ ಸೂರ್ಯಸ್ಫುಟಕ್ಕೆ ಧನರ್ಣ ಸಂಸ್ಕಾರ ಮಾಡಬೇಕು. ಹಾಗೆಯೇ ಚಂದ್ರ ಪಾತಕ್ಕೂ ಫಲಾನಯನಮಾಡಿ, ಧನರ್ಣದಲ್ಲಿ ಮಾತ್ರ ವ್ಯತ್ಯಸ್ತವಾಗಿ ಸಂಸ್ಕಾರ ಮಾಡಬೇಕು. ಹೀಗೆ ಹೇಳಿದ ಗಣಿತ ಕ್ರಮವನ್ನು ಅನೇಕ ಸಾರಿ (ಅಸಕೃತ್) ಸಾಧನ ಮಾಡಿ ನಿರ್ದುಷ್ಟವನ್ನಾಗಿ ಮಾಡಿಕೊಳ್ಳಬೇಕು. ಸೂರ್ಯ, ಚಂದ್ರರ ಸ್ಪಷ್ಟಕಾಂತಿಯು ಸಮವಾಗಿ ಕಂಡುಬಂದಲ್ಲಿ ಆಗಲೇ ಪಾತವು ಸಾಧಿತವಾದಂತೆಯೇ, ಆದರೆ ನಿರಯನನಾದ ಚಂದ್ರನು ಅರ್ಧರಾತ್ರಿಕಾಲಿಕನಾದ್ದರಿಂದ ಸಾಯನಚಂದ್ರನಿಂದ ಆನೀತವಾದ ಕ್ರಾಂತ್ಯಂಶವು ಅರ್ಧರಾತ್ರಿಕನಾದ ಚಂದ್ರನ ಕ್ರಾಂತ್ಯಂಶಕ್ಕಿಂತ ಕಡಿಮೆಯಾಗಿದ್ದರೆ ಪಾತವು ಕಳೆಯಿತೆಂದು ತಿಳಿಯಬೇಕು. ಅಧಿಕವಾಗಿದ್ದರೆ ತಾತ್ಕಾಲಿಕವಾಗಿ ಚಾಲನೆ ಮಾಡಬೇಕು. ಹೀಗೆ ಸ್ಥಿರೀಕೃತವಾದ ಅರ್ಧರಾತ್ರಿಯ ಮತ್ತು ತಾತ್ಕಾಲಿಕ ಚಂದ್ರರ ಅಂತರ ಲಿಪ್ತಿಗಳನ್ನು

ಅರವತ್ತರಿಂದ ಗುಣಿಸಿ, ಚಂದ್ರಭುಕ್ತಿಯಿಂದ ಭಾಗಿಸಿದರೆ ಬರುವ ಕಾಲವೇ ಪಾತಕಾಲ. ಈ ಪಾತಕಾಲಕ್ಕೆ ಗ್ರಹಣದಂತೆ ಸ್ಥಿತ್ಯರ್ಧವನ್ನು ಆನಯನ ಮಾಡಬೇಕು.

ಸೂರ್ಯ ಚಂದ್ರರ ಮಾನಯೋಗಾರ್ಧವನ್ನು ಅರವತ್ತರಿಂದ ಗುಣಿಸಿ, ಅವರ ಭಕ್ತ್ಯಂತರದಿಂದ ಭಾಗಿಸಿದರೆ ಬರುವದೇ ನಾಡೀ ರೂಪವಾದ ಸ್ಥಿತ್ಯರ್ಧವೆನಿಸುವದು. ಪಾತಕಾಲದಲ್ಲಿ ಸ್ಥಿತ್ಯರ್ಧವನ್ನು ಕಳೆದರೆ, ಪಾತಾದಿಕಾಲವೂ, ಸ್ಥಿತ್ಯರ್ಧವನ್ನು ಕೂಡಿಸಿದರೆ ಪಾತಾಂತ್ಯಕಾಲವೂ ತಿಳಿಯುವದು. ಆದ್ಯಂತಕಾಲದ ಮಧ್ಯಗತವಾದ ಕಾಲವು ಅತಿಭಯಂಕರವಾದದ್ದು, ಅಗ್ನಿಯಂತೆ ಸರ್ವವನ್ನು ದಹಿಸುವ ಕಾಲವಾದ್ದರಿಂದ ಈ ಕಾಲದಲ್ಲಿ ಯಾವ ಶುಭಕರ್ಮಗಳನ್ನು ಮಾಡಬಾರದೆಂದು ಶಾಸ್ತ್ರಗಳ ಸ್ಪಷ್ಟ ನಿರ್ದೇಶನವಿದೆ. ನಾರದನೇ, ಇಲ್ಲಿಯವರೆಗೆ ಸಿದ್ಧಾಂತರೂಪವಾದ ಗಣಿತಕ್ರಮವನ್ನು ವಿವರಿಸಿದೆ. ಇನ್ನು ಮುಂದೆ ರಾಶಿ ಸಂಜ್ಞಾಪುರಸ್ಸರವಾಗಿ ವಿವರಿಸಲ್ಪಡುವ ಜಾತಕ ಭಾಗವನ್ನು ಹೇಳುತ್ತೇನೆ, ಕೇಳು.

ನಾರದ ಮಹಾಪುರಾಣದಲ್ಲಿ ಐವತ್ತನಾಲ್ಕನೇ ಅಧ್ಯಾಯ ಮುಗಿದುದು



ಜಾತಕ ನಿರೂಪಣೆ

ಅಧ್ಯಾಯ - ೫೫

॥ ಸನಂದನ ಉವಾಚ ॥

ಮೂರ್ಧಾಸ್ಯ ಬಾಹುಹೃತ್ಕ್ರೋಡಾಂತರ್ಬಸ್ತಿವ್ಯಂಜಸೋ ನಖಃ ॥
ಜಾನುಜಂಘಾಂಘ್ರಿಯುಗಲಂ ಕಾಲಾಂಗಾನಿ ಕ್ರಿಯಾದಯಃ ॥
ಭೌಮಾಸ್ಫುಜಿ ಬುಧೇಂದುಶ್ಚರವಿಸೌಮ್ಯ ಸಿತಾಃ ಕುಜಃ ॥
ಗುರುಮಂದಾರ್ಕಗುರುವೋ ಮೇಷಾದೀನಾಮಧೀಶ್ವರಾಃ ॥

**ಸನಂದನಃ** - ಕಾಲ ಪುರುಷನಿಗೆ ಮೇಷಾದಿ ದ್ವಾದಶರಾಶಿಗಳು ಕ್ರಮದಿಂದ ತಲೆ, ಮುಖ, ತೋಳು, ಹೃದಯ ಜಠರ, ಕಿಬ್ಬೊಟ್ಟೆ, ಗುಹ್ಯ, ಉಗುರು, ಮೊಳಕಾಲು, ಮುಂಗಾಲು, ಎರಡು ಕಾಲು - ಹೀಗೆ ಅವಯವಗಳಾಗಿರುತ್ತವೆ. ಕುಜ, ಶುಕ್ರ, ಬುಧ, ಚಂದ್ರ, ಸೂರ್ಯ, ಬುಧ, ಗುರು, ಶನಿ, ಶನಿ ಗುರು - ಹೀಗೆ ದ್ವಾದಶ ರಾಶಿಗಳಿಗೆ ಕ್ರಮವಾಗಿ ಈ ಗ್ರಹಗಳು ಅಧಿಪತಿಗಳಾಗಿರುತ್ತಾರೆ. ಒಂದು ಲಗ್ನಕ್ಕೆ ಎರಡು ಹೋರೆಗಳು ವಿಷಮ ರಾಶಿಯಲ್ಲಿ ಪ್ರಥಮ ಹೋರೆಗೆ ಆದಿತ್ಯನೂ ದ್ವಿತೀಯ ಹೋರೆಗೆ ಚಂದ್ರನೂ ಅಧಿಪತಿಗಳು. ಆದರೆ ಸಮರಾಶಿಯಲ್ಲಿ ಇದಕ್ಕೆ ವಿರುದ್ಧ ಕ್ರಮವಿರುತ್ತದೆ. ಅಂದರೆ ಮೊದಲನೆಯ ಹೋರೆಗೆ ಚಂದ್ರ ಎರಡನೆಯ ಹೋರೆಗೆ ಸೂರ್ಯ ಅಧಿಪತಿಗಳು. ಒಂದು ಲಗ್ನಕ್ಕೆ ಮೂವತ್ತು ಭಾಗಗಳಿವೆ. ಅವುಗಳಲ್ಲಿ ಹತ್ತು ಹತ್ತು ಭಾಗಗಳಲ್ಲಿ ಒಂದೊಂದು ದ್ರೇಕ್ಕಾಣಕ್ಕೆ ಲಗ್ನಾಧಿಪತಿಯೂ ಎರಡು ಮೂರನೇಯ ದ್ರೇಕ್ಕಾಣಕ್ಕೆ ಪಂಚಮ ಮತ್ತು ಒಂಭತ್ತನೆಯ ರಾಶ್ಯಾಧಿಪತಿಗಳೂ ಒಡೆಯರಾಗಿರುತ್ತಾರೆ. ಇನ್ನು ತ್ರಿಶಾಂಶ ಎಂದರೆ ಒಂದು ರಾಶಿಯ ಮೂವತ್ತನೇಯ ಭಾಗ (೧/೩೦) ವೆಂದು ಹೆಸರು. ರಾಶಿಯು ಓಜವಾದಾಗ ಮೊದಲನೆಯ ಐದು ಭಾಗಗಳಿಗೆ ಕುಜನೂ ಮುಂದಿನ ಎಂಟು ಭಾಗಗಳಿಗೆ ಶನಿಯೂ. ಮುಂದಿನ ನಂತರದ ಏಳು ಭಾಗಗಳಿಗೆ ಶುಕ್ರನೂ, ತ್ರಿಂಶಾಂಶಾಧಿಪತಿಗಳಾಗಿರುವರು. ಯುಗ್ಮರಾಶಿಯಾದಾಗ

ಆದಕ್ಕೆ ವ್ಯಸ್ತ ರೀತಿಯಲ್ಲಿ ಮೊದಲನೇಯ ಒಡೆತನವು ಶುಕ್ರನದೂ, ಮುಂದೆ ಬುಧನಿಗೂ, ನಂತರ ಗುರುವಿಗೂ ಆಮೇಲೆ ಶನಿಗೂ, ನಂತರ ಕುಜನಿಗೂ ಅವರವರ ಹೇಳಿದ ಭಾಗಗಳಿಂದಲೇ ಆಧಿಪತ್ಯ ದೊರೆಯುವದು.

### ತ್ರಿಂಶಾಂಶಗಳ ಪಟ್ಟಿ

| ಹೋರೆ ಆಧಿಪತಿಗಳು | ಭಾಗಗಳು |
|---|---|
| (1) ಕುಜ | - ೫ (ಐದು) |
| (2) ಶನಿ | - ೫ (ಐದು) ಇದು ಓಜರಾಶಿಯಲ್ಲಿ |
| (3) ಗುರು | - ೮ (ಎಂಟು) ತ್ರಿಂಶಾಂಶಗಳು |
| (4) ಬುದ್ಧ | - ೭ (ಏಳು) |
| (5) ಶುಕ್ರ | - ೫ (ಐದು) |

### ಯುಗ್ಮ ರಾಶಿಯಲ್ಲಿ

| | |
|---|---|
| (1) ಶುಕ್ರ | - ೫ (ಐದು) |
| (2) ಬುಧ | - ೭ (ಏಳು) |
| (3) ಗುರು | - ೮ (ಎಂಟು) |
| (4) ಶನಿ | - ೫ (ಐದು) |
| (5) ಕುಜ | - ೫ (ಐದು) |

ಮೇಷ, ಮಕರ, ಕಟಕ ಹಾಗೂ ತುಲಾ ಈ ರಾಶಿಗಳನ್ನೇ ಮೊದಲು ಮಾಡಿಕೊಂಡು ನವಗ್ರಹಗಳು ನವಾಂಶಾಧಿಪತಿಗಳಾಗುವರು. ದ್ವಾದಶಾಂಶಗಳಿಗೆ ರಾಶ್ಯಾದಿಯಾಗಿ ಆಯಾ ರಾಶಿಗಳ ಅಧಿಪತಿಗಳೇ ಒಡೆಯರಾಗಿರುವರು. ಹೀಗೆ ಲಗ್ನ, ಹೋರಾದ್ರೇಕ್ಕಾಣ, ನವಾಂಶ ದ್ವಾದಶಾಂಶ, ತ್ರಿಂಶಾಂಶ ಈ ಆರು ವಿಭಾಗಗಳಿಗೆ ಷಡ್ವರ್ಗಗಳೆಂದು ಹೆಸರು. ಮೇಷ, ವೃಷಭ ಮಿಥುನ,,ಕಟಕ, ಧನು ಇವು ಪೃಷ್ಠೋದಯ ರಾಶಿಗಳು. ಇವುಗಳಿಗೆ ರಾತ್ರಿ ಸಂಜ್ಞೆಗಳಿವೆ. ಉಳಿದ ರಾಶಿಗಳಾದ ಸಿಂಹ, ಕನ್ಯಾ ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಏಳು ರಾಶಿಗಳು ಶೀರ್ಷೋದಯ ರಾಶಿಗಳೆಂದು ಸಂಜ್ಞೆಯನ್ನು ಹೊಂದುವವು. ಇವುಗಳಲ್ಲಿ ಮೀನರಾಶಿಗೆ ಉಭಯೋದಯ ರಾಶಿಯೆಂದು ಸಂಜ್ಞೆ ಇದೆ. ಈ ರಾಶಿಗಳ ಗುಣಧರ್ಮಾನುಸಾರ ಸೌಮ್ಯ ಕ್ರೂರಗಳೆಂದು ವಿಭಾಗ ಮಾಡಿದ್ದಾರೆ. ಅಲ್ಲದೆ ಯಥಾಕ್ರಮವಾಗಿ ಪುಮಾನ್, ಸ್ತ್ರೀ ನಪುಂಸಕ ಎಂಬ ಭೇದವೂ, ಸ್ಥಿರ ಚರ, ದ್ವಿಸ್ವಭಾವ ಎಂಬ ಸಂಕೇತಗಳೂ ಕೊಡಲ್ಪಟ್ಟವೆ ಈ ರಾಶಿಗಳಿಗೆ,ಅಲ್ಲದೆ ಪೂರ್ವಾದಿ ನಾಲ್ಕು ದಿಕ್ಕುಗಳೂ, ಈ ಮೇಷಾದಿ ರಾಶಿಗಳಿಗೆ ಕ್ರಮವಾಗಿ ವ್ಯವಸ್ಥಿತವಾಗಿವೆ.

ಸೂರ್ಯನಿಗೆ - ಮೇಷ ರಾಶಿಯಲ್ಲಿ (೧೦) ಹತ್ತನೆಯ ಭಾಗವು

ಚಂದ್ರನಿಗೆ - ವೃಷಭರಾಶಿಯಲ್ಲಿ (೩) ಮೂರನೆಯ ಭಾಗವು

ಕುಜನಿಗೆ - ಮಕರ ರಾಶಿಯಲ್ಲಿ (೨೮) ಇಪ್ಪತ್ತೆಂಟನೆಯ ಭಾಗವು

ಬುಧನಿಗೆ - ಕನ್ಯಾರಾಶಿಯಲ್ಲಿ (೫) ಐದನೆಯ ಭಾಗವು.

ಶುಕ್ರನಿಗೆ - ಮೀನದಲ್ಲಿ (೨೭) ಇಪ್ಪತ್ತೇಳನೆಯ ಭಾಗವು.

ಶನಿಗೆ - ತುಲಾರಾಶಿಯಲ್ಲಿ (೨೦) ಇಪ್ಪತ್ತನೆಯ ಭಾಗವು.

ಪರಮೋಚ್ಚ ಅಂಶವಾಗಿರುತ್ತದೆ. ಈ ಗ್ರಹಗಳಿಗೆ ಆ ರಾಶಿಗಳು ಉಚ್ಚ ರಾಶಿಗಳೆಂದೂ, ಅದಕ್ಕೆ ಏಳನೆಯ ರಾಶಿಗಳು ನೀಚ ರಾಶಿಗಳೆಂದೂ ಅದರಲ್ಲಿ ಹಿಂದೆ ಹೇಳಿದಂತೆಯೇ ಅಷ್ಟಷ್ಟು ಭಾಗಗಳು ಪರಮ ನೀಚಾಂಶವೆಂದು ಭಾವಿಸಬೇಕು. ಸೂರ್ಯನಿಗೆ ಮೇಷ ರಾಶಿಯ ಉಚ್ಚ. ಅದರಲ್ಲಿ ಹತ್ತನೆಯ ಭಾಗವು ಪರಮೋಚ್ಚವೆನಿಸುವದು. ಹೀಗೆಯೇ ಎಲ್ಲಕ್ಕೂ ತಿಳಿಯಬೇಕು.

### ಸೂರ್ಯಾದಿಗಳಿಗೆ ಉಚ್ಚ ನೀಚ ಅಂಶಗಳನ್ನು ಸೂಚಿಸುವ ವಿವರ

| ಗ್ರಹಗಳು | ಉಚ್ಚ | ಪರಮೋಚ್ಚ ಭಾಗಗಳು | ನೀಚ ಭಾಗ | ಪರಮನೀಚ ಭಾಗಗಳು |
|---|---|---|---|---|
| 1. ಸೂರ್ಯ | ಮೇಷರಾಶಿ | ೧೦ನೇ ಭಾಗ | ತುಲಾರಾಶಿ | ೧೦ನೇ ಭಾಗ |
| 2. ಚಂದ್ರ | ವೃಷಭ " | ೩ನೇ ಭಾಗ | ವೃಶ್ಚಿಕ " | ೩ನೇ ಭಾಗ |
| 3. ಕುಜ | ಮಕರ " | ೨೮ನೇ ಭಾಗ | ಕಟಕ " | ೨೮ನೇ ಭಾಗ |
| 4. ಬುಧ | ಕನ್ಯಾ " | ೧೫ನೇ ಭಾಗ | ಮೀನ " | ೧೫ನೇ ಭಾಗ |
| 5. ಗುರು | ಕಟಕ " | ೫ನೇ ಭಾಗ | ಮಕರ " | ೫ನೇ ಭಾಗ |
| 6. ಶುಕ್ರ | ಮೀನ " | ೨೭ನೇ ಭಾಗ | ಕನ್ಯಾ " | ೨೭ನೇ ಭಾಗ |
| 7. ಶನಿ | ತುಲಾ " | ೨೦ನೇ ಭಾಗ | ಮೇಷ " | ೨೦ನೇ ಭಾಗ |

ಸೂರ್ಯನಿಗೆ ಸಿಂಹ, ಚಂದ್ರನಿಗೆ ವೃಷಭ, ಕುಜನಿಗೆ ಮೇಷ, ಬುಧನಿಗೆ ಕನ್ಯೆ, ಗುರುವಿಗೆ ಧನು, ಶುಕ್ರನಿಗೆ ತುಲಾ, ಶನಿಗೆ ಕುಂಭ, ಮೂಲ ತ್ರಿಕೋಣ ರಾಶಿಗಳಾಗುತ್ತವೆ. ಇವುಗಳಲ್ಲಿ ಕ್ರಮವಾಗಿ ಇಪ್ಪತ್ತು, ಇಪ್ಪತ್ತೇಳು, ಹನ್ನೆರಡು, ಐದು, ಇಪ್ಪತ್ತು ಈ ಸಂಖ್ಯೆಯ ಅಂಶಗಳು ಮೂಲ ತ್ರಿಕೋಣಾಂಶಗಳಾಗುತ್ತವೆ. ಈ ರಾಶಿಗಳಲ್ಲಿ ಮೇಷ, ಮಿಥುನ, ಕನ್ಯಾ, ಧನು ಈ ನಾಲ್ಕು ರಾಶಿಗಳು. ಒಂದು ಐದು ಒಂಭತ್ತನೆಯ ರಾಶಿಗಳಿಗೆ ತ್ರಿಕೋಣರಾಶಿಗಳೆಂತಲೂ. ಒಂದು, ನಾಲ್ಕು ಏಳು ಮತ್ತು ಹತ್ತನೇಯ ರಾಶಿಗಳಿಗೆ ಕೇಂದ್ರರಾಶಿಗಳೆಂದೂ ಸಂಕೇತವಿದೆ. ಕೇಂದ್ರ ಸ್ಥಾನವಾಗಿರುವ ನರ, ಕೀಟ, ಪಶು ಈ ರಾಶಿಗಳು ಬಲಿಷ್ಠ ವಾದವುಗಳೆಂದು ತಿಳಿಯಲಾಗುತ್ತದೆ. ಕೇಂದ್ರರಾಶಿಯ ಮುಂದಿರುವ ರಾಶಿಗೆ ಫಣಪರ ವೆಂದೂ, ಅವರ ಮುಂದಿನ ರಾಶಿಗೆ ಅಪೋಕ್ಲಿಮವೆಂದೂ ಕರೆಯುತ್ತಾರೆ. ಈ ಮೇಷಾದಿರಾಶಿ ಗಳಿಗೆ ಕ್ರಮವಾಗಿ ಕೆಂಪು, ಬಿಳಿ, ಗಿಳಿಹಸಿರು, ಪಾಟಲ, ಧೂಮ್ರವರ್ಣ, ಪಾಂತುರ, ಚಿತ್ರವರ್ಣ, ಕಪ್ಪು ಹಳದಿ, ಪಿಂಗಳ ಬೂದುಬಣ್ಣ, ಬಿಳಿಪು ಮುಂತಾದ ಬಣ್ಣಗಳಿಂದ ಕೂಡಿರುತ್ತದೆ. ನವಗ್ರಹಗಳಲ್ಲೆಲ್ಲ ಸೂರ್ಯನೇ ಕಾಲರೂಪನಾಗಿದ್ದಾನೆ. ಚಂದ್ರನು ಮನೋಧಿದೇವತೆ, ಕುಜನು ಶಕ್ತ್ಯಭಿಮಾನಿ ಗ್ರಹ, ಬುಧನು ವಾಗಧಿಪತಿ, ಜ್ಞಾನಾಧಿಪತಿ ಗುರು, ಸುಖಪ್ರದಾಯಕ ಶುಕ್ರ ಶನಿಯು ದುಃಖ ಉಂಟುಮಾಡುವ ಗ್ರಹಾಧಿಪತಿಗಳಾಗಿದ್ದಾರೆ.

ಸೂರ್ಯಚಂದ್ರರು, ರಾಜರು, ಕುಜನು ಸೇನಾಧಿಪತಿಯಾಗಿದ್ದಾನೆ. ಬುಧನು ಯುವ ರಾಜನೆಂದು ಬಗೆಯಲಾಗುತ್ತದೆ. ಗುರು, ಶುಕ್ರರು ಮಂತ್ರಿದ್ವಯರು. ಶನಿಯು ಸೇವಕ ನಾಗಿದ್ದಾನೆ. ಈ ರೀತಿಯಾಗಿ ಗ್ರಹರಾಜರ ಆಡಳಿತೆಯು ನಡೆಯುತ್ತದೆ. ಈ ಗ್ರಹಗಳ ವರ್ಣ ಗಳು ಹೀಗಿವೆ. ಕೆಂಪು, ಬಿಳಿಪು, ಹಸಿರು, ಹಳದಿ, ಚಿತ್ರ ಕಪ್ಪು ಕ್ರಮದಿಂದ ಆದಿತ್ಯಾದಿ ಶನಿಯ ವರೆಗೆ ಇರುತ್ತವೆ. ಅಂದರೆ ಈ ವರ್ಣವಿರುವ ವಸ್ತುಗಳ ಮೇಲೆ ಅವರದೇ ಆಧಿಪತ್ಯ. ಇಂದ್ರಾದಿ ಅಷ್ಟ ದಿಕ್ಕುಗಳಿಗೂ ಸೂರ್ಯ, ಶುಕ್ರ, ಕುಜ, ರಾಹು, ಶನಿ, ಚಂದ್ರ, ಸೂರ್ಯ, ಕುಜ, ಶನಿ ಮುಂತಾದ ಗ್ರಹಗಳು ಅಧಿಪತಿಗಳೆನಿಸಿದ್ದಾರೆ. ಕಾಂತಿಹೀನ, ಚಂದ್ರ, ಸೂರ್ಯ, ಕುಜ, ಶನಿ ಮುಂತಾದ ಗ್ರಹಗಳು ಪಾಪಗ್ರಹಗಳೆನಿಸಿದ್ದಾರೆ. ಉಳಿದವರು ಶುಭಗ್ರಹಗಳು, ಬುಧ ಶನಿಗಳು ನಪುಂಸಕರು, ಶುಕ್ರ,ಚಂದ್ರರು ಸ್ತ್ರೀಯರು, ಉಳಿದ ಗ್ರಹಗಳೆಲ್ಲ ಪುರುಷ ಗ್ರಹಗಳು, ಕುಜಾದಿ ಗ್ರಹಗಳಿಗೆ ಅಗ್ನಿ, ಭೂಮಿ, ಹಾಲು ನೀರು ಆಕಾಶ ಇವುಗಳೇ ವಾಸಸ್ಥಾನ ಗಳಾಗಿವೆ. ಗುರು ಶುಕ್ರರು ಬ್ರಾಹ್ಮಣ ವರ್ಗಕ್ಕೆ ಸೇರಿದ್ದರೆ ಕುಜ ಹಾಗೂ ಸೂರ್ಯರು ಕ್ಷತ್ರಿಯರು, ಚಂದ್ರನು ವೈಶ್ಯ, ಬುಧ ಮಾತ್ರ ಶೂದ್ರಅಂತ್ಯಜನಾಗಿ ಶನಿಯು ಅಧಿಪತಿಗಳಾಗಿ ಗ್ರಹಮಂಡಲದಲ್ಲಿ ವಿರಾಜಿಸುತ್ತಾರೆ. ಮ್ಲೇಂಛರಿಗೆ ರಾಹು ಅಧಿಪತಿಯೆಂದು ವರ್ಣಿತವಾಗಿದ್ದಾನೆ.

ಗುಣಮಾನದಿಂದ ಚಂದ್ರ, ಸೂರ್ಯ, ಗುರು ಇವರು ಪರಮ ಸಾತ್ವಿಕ ಗುಣವುಳ್ಳವರು, ಕುಜ, ಶನಿಗಳು ತಾಮಸ ಸ್ವಭಾವದವರಿದ್ದು, ಬುಧ, ಶುಕ್ರರು ರಜೋಗುಣ ಹೊಂದಿದವರಾಗಿದ್ದಾರೆ. ಸೂರ್ಯಾದಿ ಸಪ್ತಗ್ರಹಗಳೂ ಕ್ರಮದಿಂದ ದೇವಲೋಕ, ಚಂದ್ರಲೋಕ, ಅಗ್ನಿಲೋಕ, ಶೈಲ, ಭೂ, ಬ್ರಹ್ಮ ಮತ್ತು ಅಂತರಿಕ್ಷ ಇವುಗಳಿಗೆ ಅಭಿಮಾನಿಗಳಾಗಿದ್ದಾರೆ. ಸೂರ್ಯಾದಿಗ್ರಹಗಳಿಗೆ ಸ್ಥೂಲವಸ್ತ್ರ ಹೊಸಬಟ್ಟೆ, ಅಗ್ನಿಯಿಂದ ದಗ್ಧವಾದ ಹರಿದ ವಸ್ತ್ರ, ಬಿಸಿಲಲ್ಲಿ ಒಣಗಿದ ಬಟ್ಟೆ ಚಿತ್ರವಸ್ತ್ರ, ಹೀಗೆ ವಿವಿಧ ರೀತಿಯ ವಸ್ತ್ರಗಳನ್ನು ಹೇಳಲಾಗಿದೆ. ಅಲ್ಲದೆ ತಾಮ್ರ, ಬೆಳ್ಳಿ, ಸೀಸ, ಚಿನ್ನ ಕಂಚು, ಕಬ್ಬಿಣ, ಈ ಧಾತುಗಳು ಸೂರ್ಯಾದಿ ಗ್ರಹಗಳಿಗೆ ಹೇಳಲ್ಪಟ್ಟಿವೆ.

ಅವರ ಸ್ಥಾನಮಾನ ವಿಶೇಷವೆಂದರೆ - ಶಿಶಿರ ಋತುವಿನಿಂದ ಆರಂಭಿಸಿ, ಒಂದೊಂದು ಋತುವಿಗೆ ಕ್ರಮವಾಗಿ ಸೂರ್ಯ, ಶುಕ್ರ, ಅಂಗಾರಕ, ಚಂದ್ರ ಬುಧ, ಮತ್ತು ಗುರುಗಳು ಅಧಿಪತಿಗಳಾಗಿರುವರು. ಶನಿಯು ತನ್ನ ಸ್ಥಾನದಿಂದ ಮೂರು ಮತ್ತು ಹತ್ತನೇಯ ರಾಶಿಗಳನ್ನು ಗುರುವು (೫-೯) ಐದು ಮತ್ತು ಒಂಭತ್ತನೆಯ ರಾಶಿಗಳನ್ನೂ ಅಂಗಾರಕನೂ (೪-೮) ನಾಲ್ಕು ಮತ್ತು ಎಂಟನೆಯ ಮನೆಗಳನ್ನು ವಿಶೇಷವಾಗಿ ದೃಷ್ಟಿ ಇಟ್ಟಿರುತ್ತಾರೆ. ವಾಸ್ತವಿಕವಾಗಿ ಗ್ರಹಾದಿಗಳೆಲ್ಲವೂ ಏಳನೇಯ ಮನೆಯ ಮೇಲೆ ಕಣ್ಣಿರುತ್ತವೆ. ಮತ್ತು ಇದುವೆ, ಪೂರ್ಣದೃಷ್ಟಿಯೆಂದು ಭಾವಿಸಲಾಗುತ್ತದೆ. ಅಯನ, ಕ್ಷಣ ದಿನ, ಋತು ಮಾಸ, ಪಕ್ಷ ವರ್ಷ ಈ ರೀತಿಯಾದ ಕಾಲಾವಧಿಗಳಿಗೆ ಕ್ರಮವಾಗಿ ಸೂರ್ಯಾದಿಗ್ರಹಗಳು ಅಧಿಪತಿಗಳಾಗಿರುತ್ತಾರೆ. ಕಟು, ತಿಕ್ತ, ಕ್ಷಾರ, ಮಿಶ್ರ, ಮಧುರ, ಆಮ್ಲ, ಕಹಿ ರಸಗಳಿಗೂ ಸೂರ್ಯಾದಿಗ್ರಹಗಳೇ ಯಜಮಾನರಾಗಿದ್ದಾರೆ.

ಪ್ರತಿ ಗ್ರಹಗಳೂ ತ್ರಿಕೋಣಾಧಿಪತಿಗಳೂ, ದ್ವಿತೀಯ ಮತ್ತು ವ್ಯಯಾಧಿಪತಿಗಳೂ, ಸುಖ ಮತ್ತು ದಶಮ ಸ್ಥಾನಗಳ ಅಧಿಪತಿಗಳೂ ಮಿತ್ರರೆನಿಸುತ್ತಾರೆ. ಸೂರ್ಯನಿಗೆ ಶನಿ,

ಶುಕ್ರರೂ, ಕುಜನಿಗೆ ಬುಧನೂ, ಬುಧನಿಗೆ ಚಂದ್ರನೂ, ಗುರುವಿಗೆ ಶುಕ್ರ ಮತ್ತು ಬುಧರೂ, ಶುಕ್ರನಿಗೆ ಸೂರ್ಯ ಚಂದ್ರರೂ, ಶನಿಗೂ ಸೂರ್ಯ ಚಂದ್ರರೂ ಶತ್ರುಗಳಾಗುವರು. ಉಳಿದವರು ಮಿತ್ರರೆನಿಸುವರು. ಇವರು ಸ್ವಾಭಾವಿಕ ಮಿತ್ರರು. ಇನ್ನು ಗ್ರಹಗಳಿಗಿರುವ ಸ್ಥಾನಕ್ಕಿಂತ ಮುಂದಿನ ಮೂರು ಸ್ಥಾನ ಹಾಗೂ ಹಿಂದಿನ ಮೂರು ಸ್ಥಾನಗಳಲ್ಲಿರುವ ಇತರ ಗ್ರಹಾದಿಗಳು ಅಲ್ಪಕಾಲೀನ ಮಿತ್ರರೆನಿಸುವರು. ಒಂದೇ ಗ್ರಹಕ್ಕೆ ತಾತ್ಕಾಲೀನ ಹಾಗೂ ಸ್ವಾಭಾವಿಕ ಮಿತ್ರತ್ವವು ಒಮ್ಮೆಲೇ ಬಂದೊದಗಿದರೆ ಆಗ್ರಹವು ಅಧಿಮಿತ್ರನೆಂದು ಕರೆಯಲ್ಪಡುತ್ತದೆ. ಹೀಗೆ ಅಧಿಶತ್ರು, ಮಿತ್ರ ಶತ್ರು, ಶತ್ರುಮಿತ್ರ ಎಂಬಿತ್ಯಾದಿ ವಿಭಾಗಗಳನ್ನು ಹೆಸರಿಸಬಹುದು. ಇನ್ನು ಗ್ರಹಗಳಿಗೆ ಇರುವ ಬಲಾಬಲಗಳ ವೈಖರಿಯನ್ನು ವಿವರಿಸುವೆನು ಕೇಳು ಉಚ್ಚ, ಮೂಲತ್ರಿಕೋಣ ಸ್ವನವಾಂಶ, ಸ್ವಕ್ಷೇತ್ರ ಈ ಸ್ಥಾನಗಳಲ್ಲಿರುವ ಗ್ರಹಗಳು ಸ್ಥಾನಬಲದಿಂದ ಬಲಿಷ್ಠವೆನಿಸುವವು. ದಶಮ ಸ್ಥಾನದಲ್ಲಿರುವ ಸೂರ್ಯ ಕುಜರೂ ನಾಲ್ಕನೆಯ ಸ್ಥಾನದಲ್ಲಿರುವ ಚಂದ್ರ, ಶುಕ್ರರೂ, ಲಗ್ನದಲ್ಲಿರುವ ಬುಧ, ಗುರುಗಳೂ ಸಪ್ತಮ ದಲ್ಲಿರುವ ಶನಿಯೂ ಕ್ರಮವಾಗಿ ಉದ್ಬಲವನ್ನು ಹೊಂದುವರು. ಇದಲ್ಲದೆ ವಕ್ರ ದೃಷ್ಟಿಯ ಗ್ರಹಗಳ ಯುದ್ಧದಲ್ಲಿ ಗೆದ್ದು ಉತ್ತರ ದಿಕ್ಕಿನಲ್ಲಿ ಬಹಳವಾಗಿ ಪ್ರಕಾಶ ಬೀರುವ ಜಯಶಾಲಿ ಗ್ರಹಗಳೂ ದಿಗ್ಬಲ ವಿಶಿಷ್ಟರಾದವರೆಂದು ತಿಳಿಯಬೇಕು.

ರಾತ್ರಿಯಲ್ಲಿ ಚಂದ್ರ ಕುಜ, ಶನಿ ಈ ಮೂರು ಗ್ರಹಗಳೂ ಬಲಶಾಲಿಗಳು. ಬುಧನು ಅಹೋರಾತ್ರಿಗಳೆರಡರಲ್ಲೂ ಸಮನವಾದ ಬಲವುಳ್ಳವನು. ಉಳಿದ ಗ್ರಹಗಳು ಹಗಲಿನಲ್ಲಿ ಮಾತ್ರ ಬಲಶಾಲಿಗಳು. ಶುಭ ಗ್ರಹಗಳು ಶುಕ್ಲಪಕ್ಷದಲ್ಲಿ ಮತ್ತು ಕ್ರೂರವಾದ ಗ್ರಹಗಳು ಕೃಷ್ಣ ಪಕ್ಷದಲ್ಲಿ ಬಲಶಾಲಿಗಳಾಗುತ್ತಾರೆ. ಈ ವಿಧವಾದ ಬಲವನ್ನೇ ಪ್ರಾಜ್ಞರು ಕಾಲಬಲವೆಂದು ಹೇಳುತ್ತಾರೆ. ಇದಲ್ಲದೆ ಸ್ವಾಭಾವಿಕ ಬಲದಲ್ಲಿ ಶನಿ, ಕುಜ, ಬುಧ, ಗುರು, ಶುಕ್ರ, ಚಂದ್ರ, ಸೂರ್ಯ ಈ ಕ್ರಮದಲ್ಲಿ ಗ್ರಹಗಳು ಉತ್ತರೋತ್ತರ ಬಲಶಾಲಿ ಗಳಾಗುವರು. ಬಲಾಧಿಕ್ಯನೇ ಸೂರ್ಯನಾಗುವನು. ಈ ರೀತಿಯಾದ ಆರು ವಿಧ ಬಲಗಳಿಂದ ಕೂಡಿದ ಪಾಪ ಗ್ರಹಗಳೂ ಸಹ ಸೌಮ್ಯ ಗ್ರಹಗಳಂತೆಯೋ ಫಲ ನೀಡುವರು. ದುರ್ಬಲವೆನಿಸಿದ ಶುಭಗ್ರಹಗಳೂ ಪಾಪ. ಪಾಪಫಲಗಳನ್ನೂ ಕೊಡುವರು. ಈಗ ವಿಯೋನಿ ಜನ್ಮಗಳ ಸ್ವರೂಪಕ್ಕೂ ಸೂರ್ಯಾದಿಗಳಿಗೂ ಮೇಷಾದಿ ರಾಶಿಗಳಿಗೂ ಸಂಬಂಧವನ್ನು ಕಲ್ಪಿಸುತ್ತ ಶಾಸ್ತ್ರವು ಮುಂದುವರಿಯುತ್ತದೆ. ನಪುಂಸಕ ಗ್ರಹಗಳ ದೃಷ್ಟಿಯನ್ನು ಪಡೆದ ಸೂರ್ಯಚಂದ್ರರೇ ವಿಯೋನಿಜನ್ಮಗಳ ಉಗಮಕ್ಕೆ ಕಾರಣರು. ಈ ಪಾಪಗ್ರಹಗಳು ಪರಾಂಶಗತರಾದರೆ ಆಗ ಜನಿಸುವ ಪ್ರಾಣಿಗಳು ಕ್ರೂರ ಪ್ರಾಣಿ ಗಳಾಗುವವು. ಅದರಂತೆ ಸೌಮ್ಯ ಗ್ರಹಗಳಿಂದ ಸಾಧು ಪ್ರಾಣಿಗಳು ಉದಯಿಸುತ್ತವೆ. ಆಯಾ ಗ್ರಹಗಳ ಬಲಾಬಲಗಳಂತೆ ವಿಯೋನಿಗಳ ಬಲಾಬಲಗಳನ್ನು ತಿಳಿದುಕೊಳ್ಳಬೇಕು.

ವಿಯೋನಿ ಜನ್ಮವುಳ್ಳ ಪ್ರಾಣಿಗಳ ಅಂಗವನ್ನು ಮೇಷಾದಿ ದ್ವಾದಶ ರಾಶಿಗಳಿಗೆ ಈ ರೀತಿ ವಿಭಾಗ ಮಾಡಬೇಕು. ಮೇಷಾದಿ ದ್ವಾದಶ ರಾಶಿಗಳಿಗೆ ಕ್ರಮವಾಗಿ ತಲೆ, ಮೂಗು, ಮುಖ, ಮತ್ತು ಗಂಟಲು, ಮುಂಗಾಲು ಮತ್ತು ಭುಜ, ಬೆನ್ನು ಎದೆ, ಪಕ್ಕೆ ಕುಕ್ಷೆ, ಅಪಾನ, ಹಿಂಗಾಲು, ಭಗ, ಶಿಶ್ನ, ವೃಷಣಾದಿಗಳು, ಕಟಿ ಪಶ್ಚಾದ್ಭಾಗಗಳು ಬಾಲ ಈ ರೀತಿಯಾಗಿ ಹನ್ನೆರಡೂ ಅವಯವಗಳಿಗೆ ಮೇಷಾದಿಯಾಗಿ ಹನ್ನೆರಡು ರಾಶಿಗಳು ಉಕ್ತವಾಗಿರುವುವು.

ಬಲಯುಕ್ತವಾದ ತಾತ್ಕಾಲಿಕ ನವಾಂಶದಿಂದಲೂ, ಗ್ರಹಯೋಗ, ದೃಷ್ಟಿ ಇವುಗಳಿಂದಲೂ ಪ್ರಾಣಿಗಳ ಬಣ್ಣವನ್ನು ತಿಳಿಯಬೇಕು. ಏಳನೇ ರಾಶಿಯಲ್ಲಿರುವ ಗ್ರಹದ ವರ್ಣವನ್ನೇ ಪ್ರಾಣಿಯ ಬೆನ್ನ ಮೇಲಿರುವ ರೇಖೆಯನ್ನು ಹೇಳಬೇಕು.

ಪಕ್ಷದೆಕ್ಕಾಣದಲ್ಲಿ ಬಲಯುತವಾದ ಗ್ರಹಗಳಿದ್ದು ಚರನವಾಯೋದಯವಾದರೆ ಶನಿ ಚಂದ್ರರ ದೃಷ್ಟಿಯಿಂದಲೂ ಪಕ್ಷಿಜನ್ಮವಾಗುವದೆಂದು ತಿಳಿಯಬೇಕು. ನಿರ್ಬಲ ಲಗ್ನ, ಚಂದ್ರ, ಗುರು ಸೂರ್ಯ ಇವರುಗಳ ಉದಯದ ಪ್ರಶ್ನೆ ಕಾಲದಲ್ಲಿ ಬಂದರೆ ವೃಕ್ಷಾದಿಗಳ ಜನನ ವಿಷಯವೆಂದು ನಿರ್ಧಾರ ಮಾಡಬೇಕು. ಅದರಲ್ಲಿ ಭೂಮಿ, ಜಲ ಮೊದಲಾದ ಬೆಳೆಯುವ ಪ್ರದೇಶಗಳನ್ನು ಸ್ಥಳ, ಜಲ, ರಾಶಿಗಳು ಅವುಗಳ ಅಂಶಗಳು ಇವುಗಳಿಂದ ಕಂಡು ಹಿಡಿಯಬೇಕು. ತಾತ್ಕಾಲಿಕವಾದ ಲಗ್ನದಿಂದ ಸ್ಥಳಾಧಿಪತಿ ಅಥವಾ ಜಲಾಧಿಪತಿಯು ಎಷ್ಟನೆಯ ಸ್ಥಾನದಲ್ಲಿರುವನೋ ಅಷ್ಟು ಸ್ಥಳವಾದ ಜಲದವಾದ ವೃಕ್ಷಗಳ ಸಂಖ್ಯೆಯನ್ನು ಹೇಳಬೇಕು.

ನವಾಂಶಾಧಿಪತಿಗಳಾದ ಸೂರ್ಯಾದಿಗಳಿಂದ ವೃಕ್ಷಗಳ ಪ್ರಭೇದವನ್ನು ವಿವರಿಸಬೇಕು. ಅದರಲ್ಲಿಯೂ ಅಂತಸ್ಸಾರವಾದ ವೃಕ್ಷಗಳು ಸೂರ್ಯನಿಂದಲೂ, ಶನಿಯಿಂದ ಸುಂದರವಲ್ಲದ ಗಿಡಬಳ್ಳಿಗಳೂ ಚಂದ್ರನಿಂದ ಹಾಲುರಸ ತುಂಬಿದ ಗಿಡ ಬಳ್ಳಿಗಳೂ, ಅಂಗಾರಕನಿಂದ ಮುಳ್ಳು ಗಿಡಗಂಟಿಗಳೂ,ಗುರುವಿನಿಂದ ಫಲ ಬಿಡುವ ಗಿಡಗಳೂ, ಬುಧನಿಂದ ಗೊಡ್ಡು ಗಿಡಗಳೂ, ಶುಕ್ರನಿಂದ ಹೂ ಬಿಡುವ ಗಿಡಗಳೂ ಚಂದ್ರನಿಂದ ಎಣ್ಣೆ ಕೊಡುವ ಮರಗಳೂ ಬಿಡುತ್ತವೆ (ಹುಟ್ಟುತ್ತವೆ) ಎಂದು ತಿಳಿಯಬೇಕು. ಕುಜನಿಂದ ಕಹಿ ಮತ್ತು ಒಗರುಳ್ಳ ಗಿಡ ಬಳ್ಳಿಗಳು ಹುಟ್ಟುತ್ತವೆ. ಅದರಲ್ಲಿಯೂ ಒಂದು ವಿಶೇಷವೆಂದರೆ ಶುಭ ಗ್ರಹವು ಪಾಪಾಂಶದಲ್ಲಿದ್ದರೆ, ಕೆಟ್ಟ ಭೂಮಿಯಲ್ಲಿ ಹುಟ್ಟಿದರೂ ಕೂಡ ಫಲ ಭರಿತವಾಗಿ ಸುಂದರವಾಗಿರುವದು. ಪಾಪಗ್ರಹವು ಶುಭಾಂಶದಲ್ಲಿ ಸುಂದರ ಪ್ರದೇಶದಲ್ಲಿ ಹುಟ್ಟಿದ ಮರವೂ ಫಲರಹಿತವಾಗಿ ಕುರೂಪವಾಗಿ ಕಾಣುತ್ತದೆ.

ಗ್ರಹಾದಿಗಳ ದೃಷ್ಟಿಯ ಪರಿಣಾಮವಾಗಿ ಮನುಷ್ಯರ ಅದರಲ್ಲೂ ಸ್ತ್ರೀಯರ ಜೀವನದ ಮೇಲೆ ಪರಿಣಾಮಗಳ ವೃತ್ತಾಂತವನ್ನು ವಿವರಿಸುತ್ತೇನೆ. ಸ್ತ್ರೀಯರ ಪ್ರತಿ ತಿಂಗಳ ಆರ್ತವಕ್ಕೂ ಕುಜ ಹಾಗೂ ಚಂದ್ರರು ಮೂಲ ಕಾರಣರಾಗಿದ್ದಾರೆ. ಗುರುವು ಶುಭ ಸ್ಥಾನಗಳಲ್ಲಿ ಇಲ್ಲದಿದ್ದರೆ ಸ್ತ್ರೀಯು ಸುರತ ಸುಖ ಪಡೆಯಲಾರಳು. ಸಪ್ತಮ ಭಾಗದಲ್ಲಿರುವ ಪ್ರಾಣಿಯು ಯಾವ ರೀತಿಯ ಸಂಭೋಗ ಸುಖ ಹೊಂದುವದೋ ಅದರಂತೆಯೇ ಈ ಹೆಂಗಸು ಸುರತ ಸುಖವನ್ನು ಅನುಭವಿಸುವಳು. ಸಪ್ತಮ ಭಾಗವು ಪಾಪ ಗ್ರಹದಿಂದ ದೃಷ್ಟಿತವಾದಲ್ಲಿ ಕೋಪಿಷ್ಠ ಪತಿಯಿಂದ ಸುರತ ಸುಖ ಪಡೆಯುತ್ತಾಳೆ. ಶುಭಗ್ರಹದ ದೃಷ್ಟಿಯಿದ್ದರೆ, ಸಂತೋಷದಿಂದ ಸುಖವಿಲಾಸ ಅನುಭವಿಸುವಳು. ಗರ್ಭಾಧಾನಕಾಲದಲ್ಲಿ ಸೂರ್ಯ, ಚಂದ್ರ, ಶುಕ್ರ, ಕುಜ ಗ್ರಹಗಳು ಸ್ವಂತ ಸ್ಥಾನ (ಸ್ವಾಂಶ)ದಲ್ಲಿದ್ದಾಗ ಗುರುವು ತ್ರಿಕೋಣದಲ್ಲಿದ್ದರೆ ಸ್ತ್ರೀಯು ಗರ್ಭವತಿ ಆಗುತ್ತಾಳೆ. ಅದರಂತೆ ಸೂರ್ಯ ಚಂದ್ರರಿರುವ ರಾಶಿಗಿಂತ ಏಳನೇಯ ಮನೆಯಲ್ಲಿ ಕುಜ, ಶನಿಗಳಿದ್ದರೆ ದಂಪತಿಗಳು ವ್ಯಾಧ (ರೋಗ) ಪೀಡಿತರಾಗಿ ಪರಿ ಪರಿ ಕಷ್ಟ ಪಡುವರು. ದ್ವಾದಶ ಹಾಗೂ ದ್ವಿತೀಯ ರಾಶಿಗಳಲ್ಲಿ ಕುಜ ಶನಿ ಪ್ರವೇಶದಿಂದ ದಂಪತಿಗಳಿಗೆ ಮರಣ ನಿಶ್ಚಿತ.

ಹಗಲು ಆವಿರ್ಭವಿಸುವ ಜಾತಕಕ್ಕೆ ಸೂರ್ಯನೇ ಪಿತೃಕಾರಕ, ಶುಕ್ರನು ಮಾತೃಕಾರಕ ರಾಗಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಪುರ್ವೋಕ್ತ ಗ್ರಹಗಳೇ ತಂದೆಯ ಸೋದರರಿಗೂ,

ತಾಯಿಯ ಸೋದರಿಯರಿಗೂ ಹಾರಕರಾಗಿರುತ್ತಾರೆ. ರಾತ್ರಿಯ ಜನನದಲ್ಲಿ ರವಿಯು ಪಿತೃವ್ಯಹಾರಕನೆಂದೂ ಶುಕ್ರನು ಮಾತೃಷ್ವಸೃಹಾರಕನೆಂದೂ ತಿಳಿಯಲಾಗುತ್ತದೆ. ಶುಭ ಪ್ರದಾಯಕ ಗ್ರಹಗಳಿಂದ ನೋಡಲ್ಪಡದಿರುವ ಆಧಾನ ಲಗ್ನಕ್ಕೆ ದ್ವಾದಶದಲ್ಲಿ ಪಾಪಗ್ರಹ ಗಳಿದ್ದರೆ, ಗರ್ಭಿಣಿಯಾಗಿ ಮೃತಳಾಗುವಳು ಅಥವಾ ಲಗ್ನದಲ್ಲಿರುವ ಶನಿಯು ಕ್ಷೀಣಚಂದ್ರ ಅಥವಾ ಕುಜನಿಂದ ನೋಡಲ್ಪಟ್ಟರೂ ಗರ್ಭಿಣಿಯು ಮೃತಿ ಹೊಂದುವಳು. ಆಧಾನ ಲಗ್ನ ಮತ್ತು ಚಂದ್ರ ಇವರಿಬ್ಬರೂ ಪಾಪಗೃಹ ಮಧ್ಯವರ್ತಿಗಳಾಗಿ ಶುಭಗ್ರಹಗಳಿಂದ ವೀಕ್ಷಿತ ರಾಗದಿದ್ದರೂ ಗರ್ಭಿಣಿಗೆ ವಿಪತ್ತು ಸಂಭವನೀಯವಿರುತ್ತದೆ. ಲಗ್ನ ಅಥವಾ ಚತುರ್ಥದಲ್ಲಿ ಪಾಪಗ್ರಹಗಳೂ, ಅಷ್ಟಮದಲ್ಲಿ ಅಂಗಾರಕನಿರುವದೂ, ಹಾಗೆಯೇ ಕುಜಸೂರ್ಯರು ಕ್ರಮವಾಗಿ ಚತುರ್ಥ ಮತ್ತ ದ್ವಾದಶ ಸ್ಥಾನಗಳಲ್ಲಿ ಇರುವದೂ, ಕುಜನು ಚತುರ್ಥದಲ್ಲಿದ್ದು ಚಂದ್ರನು ಕ್ಷೀಣನಾಗಿರುವದೂ, ಗರ್ಭಿಣಿಯ ಮರಣಕ್ಕೆ ಸಾಧಕವಾದ ಯೋಗಗಳೆ ನಿಸುವವು. ಕುಜ ಸೂರ್ಯರು, ಲಗ್ನ ಸಪ್ತಮಗಳಲ್ಲಿದ್ದರೆ ಶಸ್ತ್ರನಿಮಿತ್ತದಿಂದ ಮೃತಳಾಗುವಳು. ಕುಜಾದಿಗ್ರಹಗಳು ಯುದ್ಧದಲ್ಲಿ ಸೋತರೂ ಧೂಮಕೇತುಗಳ ಕ್ರೂರ ದೃಷ್ಟಿಯಿಂದಾಗಿ ಪೀಡಿತರಾದರೂ, ಪಾಪಯುಕ್ತ ದೃಷ್ಟವಾದರೂ ಅದೇ ಗ್ರಹವು ಅಧಿಪತಿ ಯಾಗಿರುವ ತಿಂಗಳಲ್ಲಿ ನಾರಿಯರಿಗೆ ಗರ್ಭಸ್ರಾವ ಆಗುವದೆಂದು ಭಾವಿಸಲಾಗುತ್ತದೆ.

ಶುಭಗ್ರಹಗಳನ್ನು ಲಗ್ನದಲ್ಲಿಯೂ ಚಂದ್ರನೊಡನೆ ಸೇರಿದ್ದರೆ ಗರ್ಭಕ್ಕೆ ಕ್ಷೇಮವಾಗುವದು ಹಿತಕರ. ಲಗ್ನ ಮತ್ತು ಚಂದ್ರ ಇವುಗಳಿಂದ ಎರಡು, ನಾಲ್ಕು, ಐದು, ಏಳು, ಒಂಭತ್ತು ಮತ್ತು ಹತ್ತನೆಯ ರಾಶಿಗಳಲ್ಲಿ ಶುಭಗ್ರಹಗಳಿದ್ದು ಮೂರು ಆರು ಮತ್ತು ಹನ್ನೊಂದರಲ್ಲಿ ಪಾಪಗ್ರಹಗಳಿದ್ದರೂ, ಸೂರ್ಯ ದೃಷ್ಟಿ ಪಡೆದಿದ್ದರೆ ಗರ್ಭವು ಪುಷ್ಟವಾಗಿ ಬೆಳೆಯುವದೆಂದು ತಿಳಿಯಬೇಕು. ಆಧಾನ ಅಥವಾ ಪ್ರಶ್ನಲಗ್ನದಲ್ಲಿ ವಿಷಮರಾಶಿಗಳಲ್ಲಿ ಅದರಲ್ಲಿಯೂ ಪುರುಷಾಂಶಗಳಲ್ಲಿ ಬಲಿಷ್ಠವಾದ ಲಗ್ನ, ಗುರು, ಚಂದ್ರ ಇವರಿದ್ದರೆ ಪಂಜನ್ಮವಾಗುವದು, ಸಮರಾಶಿಯಾಗಿ ಯುಗಾಂಶಗಳಲ್ಲಿ ಅದೇ ಲಗ್ನ, ಗುರು, ಅರ್ಕ, ಚಂದ್ರ ಇವರಿದ್ದರೂ ಸ್ತ್ರೀ ಜನನವಾಗುವದೆಂದೂ ತಿಳಿಯಬೇಕಾಗುತ್ತದೆ. ಮತ್ತು ಚಂದ್ರ ಶುಕ್ರರೂ ವಕ್ರಿಯಾದ ಕುಜನೂ, ಬಲಿಷ್ಠರಾಗಿದ್ದು, ದ್ವಿಸ್ವಭಾವರಾಶಿಗತರಾಗಿ, ಬುಧನ ದೃಷ್ಟಿ ಪಡೆದಿದ್ದರೆ ಅವಳಿಮಕ್ಕಳು ಹುಟ್ಟುತ್ತವೆ ಎಂಬುದು ನಿಶ್ಚಿತ. ಅಲ್ಲದೆ ಶನಿಯು ಆಧಾನ ಲಗ್ನದಲ್ಲಿದ್ದರೆ ವಿಷಮ ರಾಶಿಯಲ್ಲಿದ್ದರೆ ಪುರುಷ ಜನನಕ್ಕೆ ಕಾರಣವೆನಿಸುತ್ತದೆ. ಸೂರ್ಯ ಚಂದ್ರರು ಪರಸ್ಪರವಾಗಿ ನೋಡುತ್ತ ಚಂದ್ರನು ಸಮರಾಶಿಯಲ್ಲಿಯೂ ಸೂರ್ಯನು ವಿಷಮರಾಶಿಯಲ್ಲಿಯೂ ಇದ್ದರೆ ಜನಿಸುವವನು ನಪುಂಸಕನಾಗುವನು. ಹಾಗೆಯೇ ಶನಿಯಿಲ್ಲವೆ ಬುಧನು ಸಹ ಸಮವಿಷಮ ರಾಶಿಗಳಲ್ಲಿದ್ದುಕೊಂಡು ಪರಸ್ಪರವಾಗಿ ನೋಡಿದರೂ ನಪುಂಸಕ ಜನನವಾಗುತ್ತದೆ.

ಚಂದ್ರ, ಶುಕ್ರರು ಯುಗ್ಮರಾಶಿಯಲ್ಲಿದ್ದು ಬುಧ, ಕುಜ, ಗುರುಗಳು ವಿಷಮ ರಾಶಿಯಲ್ಲಿದ್ದರೆ ಒಂದು ಗಂಡು ಒಂದು ಹೆಣ್ಣು ಹೀಗೆ ಅವಳಿ ಜವಳಿ ಮಕ್ಕಳಾಗುವರು. ಚಂದ್ರ, ಶುಕ್ರರು ಯುಗ್ಮ ರಾಶಿಯಲ್ಲಿದ್ದು ಬುಧ, ಗುರು, ಕುಜರು, ವಿಷಮ ರಾಶಿಯಲ್ಲಿದ್ದರೆ ಆಗಲೂ, ಪುಂ ಸ್ತ್ರೀ ಸಂಬಂಧವಾದ ಯಮಳ ಪುತ್ರರು ಜನಿಸುವರು. ಲಗ್ನ ಮತ್ತು ಚಂದ್ರ ಇವರು ಸಮರಾಶಿಯಲ್ಲಿದ್ದ ಪುರುಷ ಗ್ರಹಗಳಿಂದ ವೀಕ್ಷಿತವಾದರೂ ಯಮಳ ಪುತ್ರರು

ಜನಿಸುವರು. ಅಥವಾ ಬುಧ ಗುರು, ಕುಜರು ಸಮರಾಶಿಯಲ್ಲಿಯೇ ಇದ್ದು ಬಲಿಷ್ಠರಾಗಿದ್ದರೂ ದ್ವಿ ಸ್ವಭಾವ ನವಾಂಶದಲ್ಲಿರುವ ಕುಜ, ಚಂದ್ರ ಗುರು ಅವರುಗಳನ್ನು ತನ್ನ ನವಾಂಶದಲ್ಲಿರುವ ಬುಧನು ನೋಡಿದರೂ ಮೂರು ಮಂದಿ ಮಕ್ಕಳು ಹುಟ್ಟುತ್ತಾರೆ. ಇನ್ನು ಲಗ್ನವು ಧರ್ಮ ಅಂತ್ಯ ನವಾಂಶದಲ್ಲಿದ್ದು ಬಲಿಷ್ಠರಾದ ಬುಧ, ಶನಿ ಇವರಿಂದಲೂ ಇನ್ನೂ ವೀಕ್ಷಿತರಾದರೆ ಮೂರಕ್ಕಿಂತ ಹೆಚ್ಚು ಮಕ್ಕಳು ಹುಟ್ಟುತ್ತವೆ. ಗರ್ಭಮಾಸಗಳಿಗೆ ಕ್ರಮದಿಂದ ಶುಕ್ರ, ಕುಜ, ಗುರು, ಚಂದ್ರ, ಶನಿ, ಬುಧ, ಸೂರ್ಯ ಈ ಗ್ರಹಗಳು ಅಧಿಪತಿಗಳಾಗಿರುವರು. ಆಯಾ ಗ್ರಹಗಳ ಬಲಾಬಲಗಳ ಮೇಲೆ ಆಯಾ ತಿಂಗಳ ಗರ್ಭ ಪೋಷಣೆಯನ್ನು ತಿಳಿಯಬೇಕು. ಬುಧನು ತ್ರಿಕೋನ ರಾಶಿಯಲ್ಲಿದ್ದು ದುರ್ಬಲರಾದ ಬೇರೆ ಬೇರೆ ಗ್ರಹಗಳಿಂದ ನೋಡಲ್ಪಟ್ಟರೆ, ತಲೆ, ಕಾಲು, ಕೈಗಳು, ಇಮ್ಮಡಿಯಾಗಿ ಜನಿಸುವವು. ವೃಷಭ, ರಾಶಿಯಲ್ಲಿ ಚಂದ್ರನಿದ್ದು ಪಾಪಗ್ರಹಗಳು ಸಂಧಿಯಲ್ಲಿ ಅಂದರೆ ಕರ್ಕಾಟಕ ಮೀನ, ವೃಶ್ಚಿಕ ಈ ರಾಶಿಗಳ ಸಂಧಿಯಲ್ಲಿ ಸೇರಿದ್ದರೆ ಹುಟ್ಟುವ ಮಗುವು ಮೂಕನಾಗುವದು. ಅದೇ ಚಂದ್ರನಿಗೆ ಶುಭಗ್ರಹಗಳ ದೃಷ್ಟಿ ಇದ್ದರೆ ಬಹುಕಾಲದ ಮೇಲೆ ಮಾತು ಬರಬಹುದೆಂದು ತಿಳಿಯಬೇಕು.

ಶನಿ ಹಾಗೂ ಅಂಗಾರಕ ಗ್ರಹಗಳು ಯಾವ ರಾಶಿಯಲ್ಲಿದ್ದರೂ ಗುರುವಿನ ನವಾಂಶದಲ್ಲಿದ್ದರೆ ಮಗುವು ದಂತಸಹಿತವಾಗಿ ಹುಟ್ಟುವದು. ಚಂದ್ರನು ತನ್ನ ರಾಶಿಯಲ್ಲಿದ್ದು ಅದೇ ರಾಶಿಯೇ ಲಗ್ನವಾಗಿ ಶನಿ ಹಾಗೂ ಅಂಗಾರಕ ದೃಷ್ಟಿಯು ಚಂದ್ರನಿಗಿದ್ದರೆ ಶಿಶುವು ಬೆಳವಣಿಗೆಯಾಗದೆ ಹುಟ್ಟುವದು ಅಥವಾ ಗಿಡ್ಡವಾದ ಕೂಸು ಹುಟ್ಟುವದು. ಇನ್ನು ಮೀನ ಲಗ್ನಕ್ಕೆ ಶನಿ ಹಾಗೂ ಚಂದ್ರ ಮತ್ತು ಅಂಗಾರಕರಿಂದ ದೃಷ್ಟಿಕ್ಷೇಪವಿದ್ದರೆ ಮಗುವು ಹೆಳವವಾಗುವದು. ಭಸಂಧಿಯ ಅಂಶಗಳಲ್ಲಿ ಪಾಪಗ್ರಹಗಳಾಗಿ ಚಂದ್ರನಾಗಲಿ ಇದ್ದು ಶುಭ ಗ್ರಹಗಳಿಂದ ವೀಕ್ಷತರಾಗದಿದ್ದರೆ, ಶಿಶುವು ಜಡವಾಗಿದ್ದು ಹುಟ್ಟುವದು. ಲಗ್ನವು ಮಕರಾಂತ್ಯನವಾಂಶವಾಗಿದ್ದು ಶನಿ ಹಾಗೂ ಸೂರ್ಯ ಚಂದ್ರಾದಿ ಗಳಿಂದ ನೋಡಲ್ಪಟ್ಟಿದ್ದರೆ ವಾಮನ ಆಕಾರದ ಶಿಶುವು ಜನಿಸುವದು. ಪಂಚಮ ಮತ್ತು ನವಮರಾಶಿಗಳನ್ನು ಹೊಂದಿದ ಪಾಪಗ್ರಹಗಳಿಂದಲೂ ಅದೇ ದ್ರೇಕ್ಕಾಣಗಳು ಪಾಪಗ್ರಹಾ ಕ್ರಾಂತವಾದಲ್ಲಿ ಹುಟ್ಟುವ ಮಗುವು ಕೈಕಾಲು ಇಲ್ಲದೆ ಜನಿಸುವದು. ಸಿಂಹಲಗ್ನವಾಗಿದ್ದು, ಅದರಲ್ಲಿ ಸೂರ್ಯ ಚಂದ್ರರಿಬ್ಬರೂ ಇದ್ದು ಶನಿ ಮತ್ತು ಅಂಗಾರಕರಿಂದ ನೋಡಲ್ಪಟ್ಟಿದ್ದರೆ ಮಗುವು ಕುರುಡವಾಗಿರುವದು. ಒಮ್ಮೆಲೇ ಶುಭ ಮತ್ತು ಅಶುಭ ಗ್ರಹಗಳಿಂದ ದೃಷ್ಟಿ ಪಾತವಾದಲ್ಲಿ ಮೆಳ್ಳಗಣ್ಣಿನ ಕೂಸು ಹುಟ್ಟುವದು. ಅದರಂತೆ ವ್ಯಯಭಾಗದಲ್ಲಿ ಚಂದ್ರನಿದ್ದರೆ ಎಡಗಣ್ಣಿಗೂ ಸೂರ್ಯನಿದ್ದರೆ ಬಲಗಣ್ಣಿಗೂ ತೊಂದರೆ ದಾಯಕ, ಈವರೆಗೆ ಹೇಳಲಾದ ರೋಗಗಳೆಲ್ಲ ಶುಭಾದಿ ಗ್ರಹಗಳ ದೃಷ್ಟಿಯಿದ್ದರೆ ಅವುಗಳ ಸೋಂಕು ಮಾತ್ರವಿದ್ದು ಅಷ್ಟೊಂದು ಪರಿಣಾಮಕಾರಕವಿರದು. ನಿಷೇಕ ಲಗ್ನದಲ್ಲಿ ಶನಿಯು ಸಪ್ತಮ ಸ್ಥಾನದಲ್ಲಿದ್ದು ಸ್ವಾಂಶದಲ್ಲಿದ್ದಾಗ ನಿಷೇಕವಾದ ಮೂರು ವರ್ಷದಲ್ಲಿ ಮಗುವು ಹುಟ್ಟುವದು.

ಸಪ್ತಮಭಾವದಲ್ಲಿ ಚಂದ್ರನಿದ್ದರೆ ಹನ್ನೆರಡನೆಯ ವರ್ಷದಲ್ಲಿ ಮಗುವು ಜನಿಸುವದು. ಅಲ್ಲದೆ ಆಧಾನಕಾಲದಲ್ಲಿ ಚಂದ್ರನಿಂದ ಕೂಡಿ ದ್ವಾದಶಾಂಶವು ಹೆರಿಗೆಗೆ ಸೂಕ್ತವಾದ ಹತ್ತನೆಯ ತಿಂಗಳಲ್ಲಿ ಯಾವಾಗ ಮತ್ತೆ ಚಂದ್ರನಿಂದ ಆಕ್ರಾಂತವಾಗುವದೋ ಆಗ ಹುಟ್ಟುವದೆಂದು ಹೇಳಬಹುದು. ಆಧಾನಕಾಲದ ಚಂದ್ರ, ದ್ವಾದಶಾಂಶ ಪ್ರವರ್ಣ ದಿಂದ ಜನನ ಕಾಲದ ಇಚ್ಚಿತ ಕಲೆ ಹಾಗೂ ಅನುಪಾತಾದಿಗಳಿಂದ ಅರಿಯ ಬಹುದಾಗಿದೆ.

ತಾಯಿಯ ಸೋದರಿಯರಿಗೂ ಕಾರಕರಾಗಿರುತ್ತಾರೆ. ರಾತ್ರಿಯ ಜನನದಲ್ಲಿ ರವಿಯು ಪಿತೃವ್ಯಕಾರಕನೆಂದೂ ಶುಕ್ರನು ಮಾತೃಷ್ವಸೃಕಾರಕನೆಂದೂ ತಿಳಿಯಲಾಗುತ್ತದೆ. ಶುಭ ಪ್ರದಾಯಕ ಗ್ರಹಗಳಿಂದ ನೋಡಲ್ಪಡದಿರುವ ಆಧಾನ ಲಗ್ನಕ್ಕೆ ದ್ವಾದಶದಲ್ಲಿ ಪಾಪಗ್ರಹ ಗಳಿದ್ದರೆ, ಗರ್ಭಿಣಿಯಾಗಿ ಮೃತಳಾಗುವಳು ಅಥವಾ ಲಗ್ನದಲ್ಲಿರುವ ಶನಿಯು ಕ್ಷೀಣಚಂದ್ರ ಅಥವಾ ಕುಜನಿಂದ ನೋಡಲ್ಪಟ್ಟರೂ ಗರ್ಭಿಣಿಯು ಮೃತಿ ಹೊಂದುವಳು. ಆಧಾನ ಲಗ್ನ ಮತ್ತು ಚಂದ್ರ ಇವರಿಬ್ಬರೂ ಪಾಪಗ್ರಹ ಮಧ್ಯವರ್ತಿಗಳಾಗಿ ಶುಭಗ್ರಹಗಳಿಂದ ವೀಕ್ಷಿತ ರಾಗದಿದ್ದರೂ ಗರ್ಭಿಣಿಗೆ ವಿಪತ್ತು ಸಂಭವನೀಯವಿರುತ್ತದೆ. ಲಗ್ನ ಅಥವಾ ಚತುರ್ಥದಲ್ಲಿ ಪಾಪಗ್ರಹಗಳೂ, ಅಷ್ಟಮದಲ್ಲಿ ಅಂಗಾರಕನಿರುವದೂ, ಹಾಗೆಯೇ ಕುಜಸೂರ್ಯರು ಕ್ರಮವಾಗಿ ಚತುರ್ಥ ಮತ್ತ ದ್ವಾದಶ ಸ್ಥಾನಗಳಲ್ಲಿ ಇರುವದೂ, ಕುಜನು ಚತುರ್ಥದಲ್ಲಿದ್ದು ಚಂದ್ರನು ಕ್ಷೀಣನಾಗಿರುವದೂ, ಗರ್ಭಿಣಿಯ ಮರಣಕ್ಕೆ ಸಾಧಕವಾದ ಯೋಗಗಳೆ ನಿಸುವವು. ಕುಜ ಸೂರ್ಯರು, ಲಗ್ನ ಸಪ್ತಮಗಳಲ್ಲಿದ್ದರೆ ಶಸ್ತ್ರನಿಮಿತ್ತದಿಂದ ಮೃತಳಾಗುವಳು. ಕುಜಾದಿಗ್ರಹಗಳು ಯುದ್ಧದಲ್ಲಿ ಸೋತರೂ ಧೂಮಕೇತುಗಳ ಕ್ರೂರ ದೃಷ್ಟಿಯಿಂದಾಗಿ ಪೀಡಿತರಾದರೂ, ಪಾಪಯುಕ್ತ ದೃಷ್ಟವಾದರೂ ಅದೇ ಗ್ರಹವು ಅಧಿಪತಿ ಯಾಗಿರುವ ತಿಂಗಳಲ್ಲಿ ನಾರಿಯರಿಗೆ ಗರ್ಭಸ್ರಾವ ಆಗುವದೆಂದು ಭಾವಿಸಲಾಗುತ್ತದೆ.

ಶುಭಗ್ರಹಗಳನ್ನು ಲಗ್ನದಲ್ಲಿಯೂ ಚಂದ್ರನೊಡನೆ ಸೇರಿದ್ದರೆ ಗರ್ಭಕ್ಕೆ ಕ್ಷೇಮವಾಗುವದು ಹಿತಕರ. ಲಗ್ನ ಮತ್ತು ಚಂದ್ರ ಇವುಗಳಿಂದ ಎರಡು, ನಾಲ್ಕು, ಐದು, ಏಳು, ಒಂಭತ್ತು ಮತ್ತು ಹತ್ತನೆಯ ರಾಶಿಗಳಲ್ಲಿ ಶುಭಗ್ರಹಗಳಿದ್ದು ಮೂರು ಆರು ಮತ್ತು ಹನ್ನೊಂದರಲ್ಲಿ ಪಾಪಗ್ರಹಗಳಿದ್ದರೂ, ಸೂರ್ಯ, ದೃಷ್ಟಿ ಪಡೆದಿದ್ದರೆ ಗರ್ಭವು ಪುಷ್ಟವಾಗಿ ಬೆಳೆಯುವದೆಂದು ತಿಳಿಯಬೇಕು. ಆಧಾನ ಅಥವಾ ಪ್ರಶ್ನಲಗ್ನದಲ್ಲಿ ವಿಷಮರಾಶಿಗಳಲ್ಲಿ ಅದರಲ್ಲಿಯೂ ಪುರುಷಾಂಶಗಳಲ್ಲಿ ಬಲಿಷ್ಠವಾದ ಲಗ್ನ, ಗುರು, ಚಂದ್ರ ಇವರಿದ್ದರೆ ಪಂಜನ್ಮವಾಗುವದು, ಸಮರಾಶಿಯಾಗಿ ಯುಗಾಂಶಗಳಲ್ಲಿ ಅದೇ ಲಗ್ನ, ಗುರು, ಅರ್ಕ, ಚಂದ್ರ ಇವರಿದ್ದರೂ ಸ್ತ್ರೀ ಜನನವಾಗುವದೆಂದೂ ತಿಳಿಯಬೇಕಾಗುತ್ತದೆ. ಮತ್ತು ಚಂದ್ರ ಶುಕ್ರರೂ ವಕ್ರಿಯಾದ ಕುಜನೂ, ಬಲಿಷ್ಠರಾಗಿದ್ದು, ದ್ವಿಸ್ವಭಾವರಾಶಿಗತರಾಗಿ, ಬುಧನ ದೃಷ್ಟಿ ಪಡೆದಿದ್ದರೆ ಅವಳಿಮಕ್ಕಳು ಹುಟ್ಟುತ್ತವೆ ಎಂಬುದು ನಿಶ್ಚಿತ. ಅಲ್ಲದೆ ಶನಿಯು ಆಧಾನ ಲಗ್ನದಲ್ಲಿದ್ದರೆ ವಿಷಮ ರಾಶಿಯಲ್ಲಿದ್ದರೆ ಪುರುಷ ಜನನಕ್ಕೆ ಕಾರಣವೆನಿಸುತ್ತದೆ. ಸೂರ್ಯ ಚಂದ್ರರು ಪರಸ್ಪರವಾಗಿ ನೋಡುತ್ತ ಚಂದ್ರನು ಸಮರಾಶಿಯಲ್ಲಿಯೂ ಸೂರ್ಯನು ವಿಷಮರಾಶಿಯಲ್ಲಿಯೂ ಇದ್ದರೆ ಜನಿಸುವವನು ನಪುಂಸಕನಾಗುವನು. ಹಾಗೆಯೇ ಶನಿಯಿಲ್ಲವೆ ಬುಧನು ಸಹ ಸಮವಿಷಮ ರಾಶಿಗಳಲ್ಲಿದ್ದುಕೊಂಡು ಪರಸ್ಪರವಾಗಿ ನೋಡಿದರೂ ನಪುಂಸಕ ಜನನವಾಗುತ್ತದೆ.

ಚಂದ್ರ ಶುಕ್ರರು ಯುಗ್ಮರಾಶಿಯಲ್ಲಿದ್ದು ಬುಧ, ಕುಜ, ಗುರುಗಳು ವಿಷಮ ರಾಶಿಯಲ್ಲಿದ್ದರೆ ಒಂದು ಗಂಡು ಒಂದು ಹೆಣ್ಣು ಹೀಗೆ ಅವಳಿ ಜವಳಿ ಮಕ್ಕಳಾಗುವರು. ಚಂದ್ರ ಶುಕ್ರರು ಯುಗ್ಮ ರಾಶಿಯಲ್ಲಿದ್ದು ಬುಧ, ಗುರು, ಕುಜರು, ವಿಷಮ ರಾಶಿಯಲ್ಲಿದ್ದರೆ ಆಗಲೂ, ಪುಂ ಸ್ತ್ರೀ ಸಂಬಂಧವಾದ ಯಮಳ ಪುತ್ರರು ಜನಿಸುವರು. ಲಗ್ನ ಮತ್ತು ಚಂದ್ರ ಇವರು ಸಮರಾಶಿಯಲ್ಲಿದ್ದ ಪುರುಷ ಗ್ರಹಗಳಿಂದ ವೀಕ್ಷಿತವಾದರೂ ಯಮಳ ಪುತ್ರರು

ಜನಿಸುವರು. ಅಥವಾ ಬುಧ ಗುರು, ಕುಜರು ಸಮರಾಶಿಯಲ್ಲಿಯೇ ಇದ್ದು ಬಲಿಷ್ಠರಾಗಿದ್ದರೂ ದ್ವಿ ಸ್ವಭಾವ ನವಾಂಶದಲ್ಲಿರುವ ಕುಜ, ಚಂದ್ರ ಗುರು ಅವರುಗಳನ್ನು ತನ್ನ ನವಾಂಶದಲ್ಲಿರುವ ಬುಧನು ನೋಡಿದರೂ ಮೂರು ಮಂದಿ ಮಕ್ಕಳು ಹುಟ್ಟುತ್ತಾರೆ. ಇನ್ನು ಲಗ್ನವು ಧರ್ಮ ಅಂತ್ಯ ನವಾಂಶದಲ್ಲಿದ್ದು ಬಲಿಷ್ಠರಾದ ಬುಧ, ಶನಿ ಇವರಿಂದಲೂ ಇನ್ನೂ ವೀಕ್ಷಿತರಾದರೆ ಮೂರಕ್ಕಿಂತ ಹೆಚ್ಚು ಮಕ್ಕಳು ಹುಟ್ಟುತ್ತವೆ. ಗರ್ಭಮಾಸಗಳಿಗೆ ಕ್ರಮದಿಂದ ಶುಕ್ರ, ಕುಜ, ಗುರು, ಚಂದ್ರ, ಶನಿ, ಬುಧ, ಸೂರ್ಯ ಈ ಗ್ರಹಗಳು ಅಧಿಪತಿಗಳಾಗಿರುವರು. ಆಯಾ ಗ್ರಹಗಳ ಬಲಾಬಲಗಳ ಮೇಲೆ ಆಯಾ ತಿಂಗಳ ಗರ್ಭ ಪೋಷಣೆಯನ್ನು ತಿಳಿಯಬೇಕು. ಬುಧನು ತ್ರಿಕೋನ ರಾಶಿಯಲ್ಲಿದ್ದು ದುರ್ಬಲರಾದ ಬೇರೆ ಬೇರೆ ಗ್ರಹಗಳಿಂದ ನೋಡಲ್ಪಟ್ಟರೆ, ತಲೆ, ಕಾಲು, ಕೈಗಳು, ಇಮ್ಮಡಿಯಾಗಿ ಜನಿಸುವವು. ವೃಷಭ, ರಾಶಿಯಲ್ಲಿ ಚಂದ್ರನಿದ್ದು ಪಾಪಗ್ರಹಗಳು ಸಂಧಿಯಲ್ಲಿ ಅಂದರೆ ಕರ್ಕಾಟಕ ಮೀನ, ವೃಶ್ಚಿಕ ಈ ರಾಶಿಗಳ ಸಂಧಿಯಲ್ಲಿ ಸೇರಿದ್ದರೆ ಹುಟ್ಟುವ ಮಗುವು ಮೂಕನಾಗುವದು. ಅದೇ ಚಂದ್ರನಿಗೆ ಶುಭಗ್ರಹಗಳ ದೃಷ್ಟಿ ಇದ್ದರೆ ಬಹುಕಾಲದ ಮೇಲೆ ಮಾತು ಬರಬಹುದೆಂದು ತಿಳಿಯಬೇಕು.

ಶನಿ ಹಾಗೂ ಅಂಗಾರಕ ಗ್ರಹಗಳು ಯಾವ ರಾಶಿಯಲ್ಲಿದ್ದರೂ ಗುರುವಿನ ನವಾಂಶದಲ್ಲಿದ್ದರೆ ಮಗುವು ದಂತಸಹಿತವಾಗಿ ಹುಟ್ಟುವದು. ಚಂದ್ರನು ತನ್ನ ರಾಶಿಯಲ್ಲಿದ್ದು ಅದೇ ರಾಶಿಯೇ ಲಗ್ನವಾಗಿ ಶನಿ ಹಾಗೂ ಅಂಗಾರಕ ದೃಷ್ಟಿಯು ಚಂದ್ರನಿಗಿದ್ದರೆ ಶಿಶುವು ಬೆಳವಣಿಗೆಯಾಗದೆ ಹುಟ್ಟುವದು ಅಥವಾ ಗಿಡ್ಡವಾದ ಕೂಸು ಹುಟ್ಟುವದು. ಇನ್ನು ಮೀನ ಲಗ್ನಕ್ಕೆ ಶನಿ ಹಾಗೂ ಚಂದ್ರ ಮತ್ತು ಅಂಗಾರಕರಿಂದ ದೃಷ್ಟಿಕ್ಷೇಪವಿದ್ದರೆ ಮಗುವು ಹೆಳವವಾಗುವದು. ಭಸಂಧಿಯ ಅಂಶಗಳಲ್ಲಿ ಪಾಪಗ್ರಹಗಳಾಗಿ ಚಂದ್ರನಾಗಲಿ ಇದ್ದು ಶುಭ ಗ್ರಹಗಳಿಂದ ವೀಕ್ಷತರಾಗದಿದ್ದರೆ, ಶಿಶುವು ಜಡವಾಗಿದ್ದು ಹುಟ್ಟುವದು. ಲಗ್ನವು ಮಕರಾಂತ್ಯನವಾಂಶವಾಗಿದ್ದು ಶನಿ ಹಾಗೂ ಸೂರ್ಯ ಚಂದ್ರಾದಿ ಗಳಿಂದ ನೋಡಲ್ಪಟ್ಟಿದ್ದರೆ ವಾಮನ ಆಕಾರದ ಶಿಶುವು ಜನಿಸುವದು. ಪಂಚಮ ಮತ್ತು ನವಮರಾಶಿಗಳನ್ನು ಹೊಂದಿದ ಪಾಪಗ್ರಹಗಳಿಂದಲೂ ಅದೇ ದ್ರೇಕ್ಕಾಣಗಳು ಪಾಪಗ್ರಹಾ ಕ್ರಾಂತವಾದಲ್ಲಿ ಹುಟ್ಟುವ ಮಗುವು ಕೈಕಾಲು ಇಲ್ಲದೆ ಜನಿಸುವದು. ಸಿಂಹಲಗ್ನವಾಗಿದ್ದು, ಅದರಲ್ಲಿ ಸೂರ್ಯ ಚಂದ್ರರಿಬ್ಬರೂ ಇದ್ದು ಶನಿ ಮತ್ತು ಅಂಗಾರಕರಿಂದ ನೋಡಲ್ಪಟ್ಟಿದ್ದರೆ ಮಗುವು ಕುರುಡವಾಗಿರುವದು. ಒಮ್ಮೆಲೇ ಶುಭ ಮತ್ತು ಅಶುಭ ಗ್ರಹಗಳಿಂದ ದೃಷ್ಟಿ ಪಾತವಾದಲ್ಲಿ ಮೆಳ್ಳಗಣ್ಣಿನ ಕೂಸು ಹುಟ್ಟುವದು. ಅದರಂತೆ ವ್ಯಯಭಾಗದಲ್ಲಿ ಚಂದ್ರನಿದ್ದರೆ ಎಡಗಣ್ಣಿಗೂ ಸೂರ್ಯನಿದ್ದರೆ ಬಲಗಣ್ಣಿಗೂ ತೊಂದರೆ ದಾಯಕ, ಈವರೆಗೆ ಹೇಳಲಾದ ರೋಗಗಳೆಲ್ಲ ಶುಭಾದಿ ಗ್ರಹಗಳ ದೃಷ್ಟಿಯಿದ್ದರೆ ಅವುಗಳ ಸೋಂಕು ಮಾತ್ರವಿದ್ದು ಅಷ್ಟೊಂದು ಪರಿಣಾಮಕಾರಕವಿರದು. ನಿಷೇಕ ಲಗ್ನದಲ್ಲಿ ಶನಿಯು ಸಪ್ತಮ ಸ್ಥಾನದಲ್ಲಿದ್ದು ಸ್ವಾಂಶದಲ್ಲಿದ್ದಾಗ ನಿಷೇಕವಾದ ಮೂರು ವರ್ಷದಲ್ಲಿ ಮಗುವು ಹುಟ್ಟುವದು.

ಸಪ್ತಮಭಾವದಲ್ಲಿ ಚಂದ್ರನಿದ್ದರೆ ಹನ್ನೆರಡನೆಯ ವರ್ಷದಲ್ಲಿ ಮಗುವು ಜನಿಸುವದು. ಅಲ್ಲದೆ ಆಧಾನಕಾಲದಲ್ಲಿ ಚಂದ್ರನಿಂದ ಕೂಡಿ ದ್ವಾದಶಾಂಶವು ಹೆರಿಗೆಗೆ ಸೂಕ್ತವಾದ ಹತ್ತನೆಯ ತಿಂಗಳಲ್ಲಿ ಯಾವಾಗ ಮತ್ತೆ ಚಂದ್ರನಿಂದ ಆಕ್ರಾಂತವಾಗುವದೋ ಆಗ ಹುಟ್ಟುವದೆಂದು ಹೇಳಬಹುದು. ಆಧಾನಕಾಲದ ಚಂದ್ರ, ದ್ವಾದಶಾಂಶ ಪ್ರವರ್ಣದಿಂದ ಜನನ ಕಾಲದ ಇಚ್ಚಿತ ಕಲೆ ಹಾಗೂ ಅನುಪಾತಾದಿಗಳಿಂದ ಅರಿಯ ಬಹುದಾಗಿದೆ.

ಚಂದ್ರನು ಪ್ರಸವಲಗ್ನವನ್ನು ನೋಡಿದಿದ್ದರೆ ಜನನ ಸಮಯದಲ್ಲಿ ತಂದೆಯು ಪರೋಕ್ಷದಲ್ಲಿದ್ದನೆಂದು ತಿಳಿಯಬೇಕು. ಸೂರ್ಯನು ಚಂದ್ರ ರಾಶಿಯಲ್ಲಿದ್ದು ದಶಮ ಭಾವಕ್ಕಿಂತ ಕಡಿಮೆ ಇದ್ದರೆ ಮಗುವು ಹುಟ್ಟಿದಾಗ ತಂದೆಯು ದೇಶಾಂತರ ದಲ್ಲಿದ್ದನೆಂದು ತಿಳಿಯಬೇಕು. ಹಾಗೆಯೇ ಶನಿಯು ಲಗ್ನದಲ್ಲಿ ಇರುವಾಗಲೂ, ಅಂಗಾರಕನು ಸಪ್ತಮಭಾವದಲ್ಲಿರುವಾಗಲೂ, ಚಂದ್ರನು ಬುಧ ಶುಕ್ರರ ಮಧ್ಯವರ್ತಿ ಯಾಗಿದ್ದಾಗ ಜನನ ಕಾಲದಲ್ಲಿ ಆ ಮಗುವಿನ ತಂದೆಯು ಮನೆಯಲ್ಲಿರುವದಿಲ್ಲವೆಂದು ತರ್ಕಿಸಬೇಕು. ಚಂದ್ರನು ಪಾಪಲಗ್ನದಲ್ಲಾಗಲಿ, ಕುಜದ್ರೇಕ್ಕಾಣದಲ್ಲಾಗಲಿ ಇದ್ದು ಲಗ್ನಾತದ ಎರಡು ಮತ್ತು ಹನ್ನೊಂದನೆಯ ಮನೆಯಲ್ಲಿದ್ದರೆ ಶಿಶುವು ಸರ್ಪದ ಹೋಲಿಕೆಯಲ್ಲಿರುವದು.

ಸೂರ್ಯನು ಚತುಷ್ಪಾದ್ರಾಶಿಯಲ್ಲಿದ್ದು ಉಳಿದ ಗ್ರಹಗಳು ದ್ವಿ ಸ್ವಭಾವರಾಶಿಗತರಾಗಿ ಬಲಿಷ್ಠರಾಗಿದ್ದರೆ, ಒಂದೇ ಜರಾಲಯಕೋಶ (ಗರ್ಭಕೋಶ) ದಲ್ಲಿ ಯಮಳ ಪುತ್ರರು ಹುಟ್ಟುತ್ತಾರೆ. ಮೇಷ, ವೃಷಭ, ಸಿಂಹ ಇವು ಲಗ್ನವಾಗಿ ಆದರಲ್ಲಿ ಶನಿ ಅಥವಾ ಕುಜರಿದ್ದರೆ ಆಯಾರಾಶಿಗೆ ಉಕ್ತವಾದ ಅಂಗಗಳಲ್ಲಿ ನಾಳವೇಷ್ಠವಾಗಿರುವದು. ಹಾಗೆಯೇ ಲಗ್ನಕ್ಕೆ ಗುರು ದೃಷ್ಟಿಯಿಲ್ಲದೆ ಚಂದ್ರನು ಪಾಪಗ್ರಹಗಳ ಸಂಪರ್ಕ ಉಳ್ಳವನಾದರೆ ಮಗು ವ್ಯಭಿಚಾರದಿಂದ ಜನಿಸಿರುವದೆಂದು ತಿಳಿಯಬೇಕು. ಅಲ್ಲದೆ ಸೂರ್ಯನಿಂದ ಕೂಡಿದ ಚಂದ್ರನಿಗಾದರೂ ಗುರುದೃಷ್ಟಿಯಿಲ್ಲದೆ ಚಂದ್ರನಿಗೆ ಪಾಪಾದಿ ಗ್ರಹ ಸಂಪರ್ಕವಿದ್ದರೂ ಮಗುವು ವ್ಯಭಿಚಾರದಿಂದ ಜನಿಸಿರುವದೆಂದು ತಿಳಿಯಬೇಕು. ಪಾಪಗ್ರಹಗಳು ಪಾಪಕ್ಷೇತ್ರಗಳಲ್ಲಿದ್ದು ಸೂರ್ಯನಿಗಿಂತ, ಏಳು, ಒಂಭತ್ತನೆಯ ಭಾವಗಳಲ್ಲಿದ್ದರೆ ಮಗುವು ಹುಟ್ಟಿದಾಗ, ತಂದೆಯು ದೇಶಾಂತರದಲ್ಲಿ ಆಗಲಿ, ಇಲ್ಲವೆ ಅರ್ಧದಾರಿಯಲ್ಲಾಗಲಿ ಬಂಧನಕ್ಕೆ ಒಳಗಾಗುವನು. ಪೂರ್ಣಚಂದ್ರನು ತನ್ನ ರಾಶಿಯಲ್ಲಿದ್ದು ಬುಧನು ಲಗ್ನ ಸಹಿತವಾಗಿ ಶುಭಗ್ರಹವು ಸುಖ ಸ್ಥಾನದಲ್ಲಿರುವಾಗಲಾದರೂ ಅಥವಾ ಲಗ್ನವು ಜಲರಾಶಿಯಾಗಿದ್ದರೂ ಜಲದಲ್ಲಿ ಪ್ರಯಾಣ ಮಾಡುತ್ತಿರುವಾಗ ತಾಯಿಯು ಶಿಶುವನ್ನು ಪಡೆದಿರುವಳೆಂದು ತಿಳಿಯಬೇಕು.

ಜಲರಾಶಿಯಲ್ಲಿರುವ ಪೂರ್ಣಚಂದ್ರನು ಜಲರಾಶಿಯಿಂದ ಜನ್ಮಲಗ್ನವನ್ನು ನೋಡುತ್ತಿದ್ದರೆ ನೀರಿನ ಬಳಿಯಲ್ಲಿಯೇ ಜನನವಾಗುತ್ತದೆ. ಶನಿಯು ಲಗ್ನ ಚಂದ್ರನಿಗೆ ವ್ಯಯಭಾವದಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟಿದ್ದರೆ ಬಂಧನದಲ್ಲಿ ಜನಿಸಿರುವನು. ಶನಿಯು ಕರ್ಕಾಟಕ ಅಥವಾ ವೃಶ್ಚಿಕ ರಾಶಿಯಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟರೆ ಹಳ್ಳದಲ್ಲಿ ಹುಟ್ಟಿದನೆಂದು ತಿಳಿಯಬೇಕು. ಜಲರಾಶಿಯಲ್ಲಿರುವ ಶನಿಯು ಲಗ್ನದಲ್ಲಿದ್ದು ಬುಧ, ಸೂರ್ಯ, ಚಂದ್ರರಿಂದ ನೋಡಲ್ಪಟ್ಟರೆ ಕ್ರಮವಾಗಿ ಕ್ರೀಡಾಭವನ, ಸುರಾಲಯ ಜವಳು ಭೂಮಿ ಮುಂತಾದ ಪ್ರದೇಶಗಳಲ್ಲಿ ಹುಟ್ಟಿದವನೆಂದು ತಿಳಿಯಬೇಕು. ಅದರಂತೆ ನರರಾಶಿಯಲ್ಲಿ ಶನಿ ಇದ್ದು, ಅವನನ್ನು ಕುಜನು ನೋಡಿದರೆ ಸ್ಮಶಾನದಲ್ಲಿ ಜನಿಸಿರುವನೆಂದೂ, ರವಿಯು ನೋಡಿದರೆ ರಾಜಗೃಹ, ದೇವಾಲಯ, ಗೋಶಾಲೆ ಇವುಗಳಲ್ಲಿ ಹುಟ್ಟಿರುವನೆಂದೂ, ಶುಕ್ರ, ಮತ್ತು ಚಂದ್ರ ಇವರು ನೋಡಿದರೆ ಶಿಲ್ಪಾಲಯದಲ್ಲಿ ಜನಿಸಿರುವನೆಂದು ತಿಳಿಯಬೇಕು. ಚಂದ್ರನು ಕುಜ, ಶನಿಗಳಿಗೆ ತ್ರಿಕೋಣದಲ್ಲಿದ್ದರೆ ಕೂಸು ತಾಯಿಯನ್ನು ತೊಲಗುವದು. ಆದರೆ ಅದೇ ಚಂದ್ರನು ಬೃಹಸ್ಪತಿಯಿಂದ ನೋಡಲ್ಪಟ್ಟಿದ್ದಾದರೆ. ಮಗುವು ದೀರ್ಘಾಯುಷಿಯಾಗುವದು. ಚಂದ್ರನು ಪಾಪ ಗ್ರಹಗಳಿಂದ ನೋಡಲ್ಪಟ್ಟಿದ್ದರೆ ಮಾತ್ರ ಮತ್ತು ಕುಜನು

ಸಪ್ತಮದಲ್ಲಿದ್ದರೆ ಮಗುವು ಸಾಯುವದು. ಲಗ್ನದಿಂದ ಲಾಭಸ್ಥಾನದಲ್ಲಿ ಕುಜ ಶನಿಗಳಿದ್ದರೆ ಮಾತ್ರ ವಿಮುಕ್ತವಾಗಿ ಶಿಶುವು ನಾಶವಾಗುವದು. ರವಿದೃಷ್ಟನಾದ ಚಂದ್ರನು ಅಶುಭ ಗ್ರಹಗಳಿಂದ ನೋಡಲ್ಪಟ್ಟರೆ ಆ ಮಗುವು ಪರದೇಶಿಯಂತೆ ಜೀವಿಸುವದು. ಹಿಂದೆ ವರ್ಣಿತವಾದ ಪಿತ್ರಾದಿಕಾರಕ ಗ್ರಹಗಳು ಬಲಿಷ್ಠರಾಗಿದ್ದರೆ ಶಿಶುವು ತಂದೆ ತಾಯಿಗಳ ಬಂಧುಗಳ ಮನೆಯಲ್ಲಿ ಹುಟ್ಟುವದೆಂತು ತಿಳಿಯಬೇಕು. ಶುಭಗ್ರಹಗಳೆಲ್ಲವೂ ನೀಚರಾಶಿಗಳ ಗತರಾಗಿದ್ದರೆ ವೃಕ್ಷ ಸಮೂಹ, ಕೋಟೆ, ಘೌಳಿ ಮುಂತಾದ ಪ್ರದೇಶಗಳಲ್ಲಿ ಶಿಶುವು ಜನಿಸುವದು. ಲಗ್ನ, ಚಂದ್ರರು, ಯಾವ ಗ್ರಹಗಳಿಂದಲೂ ನೋಡಲ್ಪಡದಿದ್ದರೆ ಜನ ಶೂನ್ಯವಾದ ಪ್ರದೇಶದಲ್ಲಿ ಮಗುವು ಜನಿಸುವದೆಂದು ಹೇಳಬೇಕು.

ಚಂದ್ರನು ಶೂನ್ಯಾಂಶ ಗತನಾಗಿದ್ದರೆ ಮಗುವು ಅಂಧಕಾರದಲ್ಲಿ ಜನಿಸುವದು. ಚತುರ್ಥದಲ್ಲಿ ಚಂದ್ರನು ಮಂದದೃಷ್ಟನಾದರೂ ಜಲರಾಶಿಗಳಲ್ಲಿ ಚಂದ್ರನು ಸಂಚರಿಸಿದರೂ ಚಂದ್ರನೂ ಶನಿ ಸಂಬಂಧಿಯಾಗಿದ್ದರೂ ಸೂತಿಕಾಶಯನವು ಅಂಧಕಾರದಲ್ಲಿ ಇರುವದು.

ನೀಚಗ್ರಹಗಳು ಲಗ್ನಗತವಾದರೆ ನೆಲದ ಮೇಲೆ ಸೂತಿಕಾ ಶಯನವಿರುವದು. ಜನನ ಲಗ್ನವು ಶೀರ್ಷೋದಯಾದಿ ಯಾವ ಲಗ್ನದಲ್ಲಿರುತ್ತದೆಯೋ ಅದೇ ರೀತಿಯಲ್ಲಿ ಮಗುವು ಹುಟ್ಟುತ್ತದೆ. ಚಂದ್ರನಿಗಿಂತ ಏಳು, ನಾಲ್ಕನೆಯ ಮನೆಗಳಲ್ಲಿ ಪಾಪಗ್ರಹಗಳಿದ್ದಲ್ಲಿ ತಾಯಿಗೆ ವ್ಯಥೆ. ಜಾತಕದಲ್ಲಿ ಶನಿಯು ಮಾತ್ರವೇ ಹೆಚ್ಚು ಪ್ರಬಲವಾಗಿದ್ದರೆ ಜೀರ್ಣಗ್ರಹದಲ್ಲಿಯೂ, ಸೂರ್ಯನು ಬಲಿಷ್ಠನಾಗಿದದೇರೆ ಮರಗಳು ಹೆಚ್ಚಾಗಿರುವ ಮನೆಯಲ್ಲಿಯೂ, ಚಂದ್ರಬಲಿಷ್ಠನಾದಲ್ಲಿ ಹೊಸಮನೆಯಲ್ಲಿ, ಬುಧ ಬಲಿಷ್ಠನಾಗಿದ್ದರೆ, ಶಿಲಾವೃತಮನೆಯಲ್ಲಿ ಗುರು ಶುಕ್ರರು ಬಲಿಷ್ಠರಾಗಿದ್ದರೆ ರಮ್ಯವಾದ ಮತ್ತು ಚಿತ್ರಯುಕ್ತವಾದ ಮನೆಯಲ್ಲಿ ಜನನವಾಗುವದು. ಮೇಷ, ಕಟಕ, ತುಲಾ, ವೃಶ್ಚಿಕ, ಕುಂಭ, ರಾಶಿಗಳು ಲಗ್ನವಾದರೆ ಸೂತಿಕಾಗ್ರಹವು ಪೂರ್ವ ದಿಕ್ಕಿನಲ್ಲಿರುವದು. ಗುರು ಬುಧ ರಾಶಿಗಳು ಲಗ್ನವಾದರೆ ಉತ್ತರದಿಕ್ಕಿನಲ್ಲಿಯೂ, ವೃಷಭ ಲಗ್ನವಾದರೆ ಪಶ್ಚಿಮದಲ್ಲಿಯೂ, ಮೃಗ ಸಿಂಹಗಳು ಲಗ್ನವಾದರೆ ದಕ್ಷಿಣ ಭಾಗದಲ್ಲಿಯೂ ಸೂತಿಕಾಗೃಹವಿರುವದೆಂದು ತಿಳಿಯಬೇಕು. ಸೂತಿಕಾಗೃಹದಲ್ಲಿ ಮೇಷಾದಿಯಾಗಿ ಹನ್ನೆರಡು ರಾಶಿಗಳು ಒಂದೊಂದು ದಿಕ್ಕಿನಂತೆ ಭಾವಿಸಬೇಕು. ದ್ವಿ ಸ್ವಭಾವ ರಾಶಿಗಳನ್ನು ಮಾತ್ರ ನಾಲ್ಕು ಮೂಲೆ ದಿಕ್ಕುಗಳನ್ನಾಗಿ ಭಾವಿಸಬೇಕು. ಹಾಗೆ ಎರಡು ದಿಕ್ಕುಗಳಿಗೂ ಹನ್ನೆರಡು ರಾಶಿಗಳನ್ನು ಗುರುತಿಸಬೇಕು. ವಾಸ್ತುವಿನ ರಾಶಿ ವಿಭಾಗದಂತೆಯೇ ಸೂತಿಕಾಶಯದಲ್ಲಿಯೂ ಮೂರು, ಆರು, ಒಂಭತ್ತು ಮತ್ತು ಹನ್ನೆರಡನೆಯ ರಾಶಿಗಳಿಂದ ಮಂಚದ ಶಿರಸ್ಸು, ಕಾಲು ಮುಂತಾದವುಗಳನ್ನು ತಿಳಿಯಬಹುದು. ಲಗ್ನ ಚಂದ್ರರಿಗೆ ಮಧ್ಯೆ ಎಷ್ಟು ಗ್ರಹಗಳಿರುವವೊ ಅಷ್ಟು ಜನ ಸೂಲಗಿತ್ತಿಯರು ಪ್ರಸವಕಾಲದಲ್ಲಿದ್ದರೆಂದು ಊಹಿಸಿ ತಿಳಿದುಕೊಳ್ಳಬೇಕು. ಆರು ರಾಶಿಗಳಿಗಿಂತ ಮುಂದಿನ ರಾಶಿಗಳಲ್ಲಿ ಗ್ರಹಗಳಿದ್ದರೆ ಅಷ್ಟು ಜನರು ಅಪರೋಕ್ಷದಲ್ಲಿರುತ್ತಾರೆ. ಮಗುವಿನ ದೇಹವು ಲಗ್ನನವಾಂಶಾಧಿಪತಿಯಂತೆ ವರ್ಣಾದಿಗಳಿಂದ ಕೂಡಿರುವದು. ಲಗ್ನಾಧಿಪತಿಯ ಬಲಾಬಲಗಳಿಂದ ಮಗುವಿನ ದೇಹಶಕ್ತಿಯನ್ನು ಊಹಿಸಬೇಕು. ಅಥವಾ ಚಂದ್ರನ ವಂಶಾಧಿಪತಿಯ ಬಲಾಬಲಗಳಿಂದ ಮಗುವಿನ ಬಣ್ಣವನ್ನು ಹೇಳಬಹುದು. ಹೇಗೆಂದರೆ - ಲಗ್ನಾದಿಗಳಿಗೆ ವಿಭಕ್ತವಾಗಿರುವ ಅಂಗಗಳ ಹ್ರಸ್ವ ದೀರ್ಘಾದಿಗಳನ್ನು ಆಯಾ ರಾಶಿಗಳ ಬಲಾಬಲಗಳಿಂದ ಕಂಡು ಹಿಡಿಯಬೇಕು. ಉದಯ ಲಗ್ನದಿಂದ ನೂರಾ ಎಂಬತ್ತು

ಭಾಗಗಳವರೆಗೆ ಆರು ರಾಶಿಗಳನ್ನು ಸಮ ಭಾಗಗಳನ್ನಾಗಿಯೂ ಮುಂದಿನ ಭಾಗವನ್ನು ದಕ್ಷಿಣಭಾಗವನ್ನಾಗಿಯೂ ತಿಳಿದು ಆಯಾ ರಾಶಿಗಳ ದ್ರೇಕ್ಕಾಣಗಳಿಗೆ ಹೇಳುವ ಅವಯವಗಳನ್ನು ದೇಶಾಂತರಗಳಿಗೆ ವಿಭಾಗಿಸಿಕೊಳ್ಳಬೇಕು.

ಅದರಲ್ಲಿ ಲಗ್ನದಲ್ಲಿ ಪ್ರಥಮ ದ್ರೇಕ್ಕಾಣ ಉದಯವಾದರೆ ಶಿರಸ್ಸು, ಕಣ್ಣು, ಕಿವಿ, ಮೂಗು, ಕಪೋಲ, ದವಡೆ ಮುಂತಾದ ಅಂಗ ವಿಭಾಗವನ್ನು ದ್ವಿತೀಯ ದ್ರೇಕ್ಕಾಣೋದಯವಾದರೆ, ಕಂಠ, ಭುಜ, ತೋಳು, ಪಕ್ಕೆ, ಹೃದಯ, ಉದರ, ನಾಭಿ ಎಂಬ ಅಂಗ ವಿಭಾಗವನ್ನು, ತೃತೀಯ ದ್ರೇಕ್ಕಾಣ ಉದಯವಾದರೆ ಬಸ್ತಿ, ಶಿಶ್ನ ಗುದ ವೃಷಣ, ಊರು, ಮೊಳಕಾಲು ಮೊದಲಾದ ಎಲ್ಲ ಅವಯವಗಳನ್ನು ಎಲ್ಲಾ ದ್ರೇಕ್ಕಾಣಗಳಿಗೆ ಹಂಚಿ ಅದರ ಬಲಾಬಲಗಳಿಂದ ಆಯಾ ಅಂಗಗಳ ಬಲಾಬಲಗಳಿಂದ ತಿಳಿದುಕೊಳ್ಳಬೇಕು. ಆ ಅಂಗರಾಶಿಯಲ್ಲಿ ಪಾಪಗ್ರಹಗಳಿದ್ದರೆ ಆಯಾ ಅವಯವಗಳಲ್ಲಿ ವ್ರಣವಾಗುತ್ತದೆಂದು ತಿಳಿಯಬೇಕು. ಪಾಪಗ್ರಹಗಳ ದೃಷ್ಟಿಯಿದ್ದರೆ ಮಚ್ಚೆ ಉಂಟಾಗುತ್ತದೆ. ಸ್ವಾಂಶದಲ್ಲಿ ಗ್ರಹಗಳಿದ್ದು ಅದು ಸ್ಥಿರ ರಾಶಿಯಾದರೆ ವ್ರಣಾದಿಗಳು ಆಗಂತುಕವೆಂದು ತಿಳಿಯಬೇಕು.

ಆ ರೀತಿಯಲ್ಲಿ ಶನಿಯು ವ್ರಣಾಕಾರನಾಗಿದ್ದರೆ ಕಲ್ಲು, ವಾಯು, ಈ ನಿಮಿತ್ತವಾದ ವ್ರಣಾದಿಗಳೂ, ಕುಜನು ವ್ರಣಾಕಾರನಾದರೆ, ವಿಷ, ಶಸ್ತ್ರ, ಅಗ್ನಿ ಇವುಗಳಿಂದಲೂ ಬುಧನಾದರೆ ಮಣ್ಣಿನಿಂದಲೂ, ಸೂರ್ಯನಾದರೆ ಕಟ್ಟಿಗೆ ಕ್ರೂರ ಪ್ರಾಣಿ ಇವುಗಳಿಂದಲೂ ಚಂದ್ರನಾದರೆ ಶೃಂಗಿಗಳಿಂದಲೂ ಮತ್ತು ನೀರಿನಿಂದಲೂ ವ್ರಣಾದಿಗಳುಂಟಾಗು ವವೆಂದು ತಿಳಿಯಬೇಕು. ಯಾವ ರಾಶಿಯಲ್ಲಿ ಬುಧ ಸಹಿತವಾದ ಗ್ರಹತ್ರಯ ಗಳಿರುವವೋ ಅವು ಶುಭಗ್ರಹಗಳಾಗಿರಲಿ ಅಥವಾ ಪಾಪಗ್ರಹಗಳಾಗಿರಲಿ ಆ ಅಂಗದಲ್ಲಿ ವ್ರಣಾದಿಗಳು ಸಂಭವಿಸಿಯೇ ತೀರುವವು. ವ್ರಣಕಾರಗ್ರಹವು ಷಷ್ಠದಲ್ಲಿದ್ದು ಶುಭಗ್ರಹಗಳಿಂದ ವೀಕ್ಷಿತನಾದರೆ ತಿಲಕಾಕಾರವಾದ ಮಚ್ಚೆ ಹುಟ್ಟುವದು. ಅಶುಭಗ್ರಹ ದೃಷ್ಟನಾದರೆ ಸ್ಥಿರವಾದ ಕಪ್ಪು ಮಚ್ಚೆಯು ಆಯಾ ಅಂಗದಲ್ಲಿ ನಿಲ್ಲುವದು. ಸೂರ್ಯನು ಸ್ವಭಾವದಲ್ಲಿ ಚತುರ ಸಾಕಾರು. ಪಿಂಗಳವಾದ ಕಣ್ಣು ಪಿತ್ಥ ಶರೀರ ಸ್ವಲ್ಪ ಕೂದಲು ಇವು ಸೂರ್ಯನ ಚಿಹ್ನೆಗಳು. ಚಂದ್ರನು ವರ್ತುಲಾಕಾರನು, ವಾತಕಫಾತ್ಮಕನು, ಪ್ರಾಜ್ಞನು, ನಿಧಾನವಾದ ಮಾತು, ಶುಭದೃಷ್ಟಿ ಇವುಗಳುಳ್ಳವನು. ಕುಜನ ದೃಷ್ಟಿಯು ಕ್ರೂರ ಕೆಂಪು ಬಣ್ಣ ಪಿತ್ತ ವಿಕಾರದವನು ಮತ್ತು ಚಪಲ ಸ್ವಭಾವದವನು, ಬುಧನು ವಾತಪಿತ್ತಾದಿ ತ್ರಿಧಾತು ಗಳಲ್ಲಿಯೂ ಸಮನಾದವನು. ಹಾಸ್ಯ, ರುಚಿ ಇವುಗಳನ್ನು ತಿಳಿಯುವನು. ಅರ್ಥದ್ವಯ ಬೋಧಕವಾದ ಮಾತುಗಳುಳ್ಳವನು. ಗುರುವು ಪಿಂಗಳವಾದ ಮೃದು ಕವಚವುಳ್ಳವನು. ದೀರ್ಘಾಕಾರನು, ಕಫ ಸ್ವಭಾವದವನು, ಬುದ್ಧಿವಂತನು, ಶುಕ್ರನು ಸುಂದರನು, ದುಂಡಾದ ಕಣ್ಣುಳ್ಳವನು, ಕಪ್ಪಾದ ಮತ್ತು ಗುಂಗುರು ಕೂದಲುಳ್ಳವನು, ಶನಿಯು ದೀರ್ಘಾಕಾರಿಯೂ, ಕಪಿಲ ದೃಷ್ಟಿಯುಳ್ಳವನು. ಚಂಚಲ ಮತ್ತು ಸೋಮಾರಿಯಾದವನು ಇವುಗಳ ಮೇಲಿಂದ ಹುಟ್ಟಲಿರುವ ಮಗುವಿನ ಲಕ್ಷಣಗಳನ್ನೂ ತಿಳಿಯಲು ಬರುತ್ತದೆ.

ಶನಿ, ರವಿ, ಚಂದ್ರ, ಬುಧ, ಗುರು, ಕುಜ ಇವರು ಕ್ರಮವಾಗಿ ನರ, ಮೂಳೆ, ರಕ್ತ, ಚರ್ಮ, ಶುಕ್ರ ಮಾಂಸ, ಮಜ್ಜಾ, ಮುಂತಾದ ಏಳು ಧಾತುಗಳಿಗೆ ಅಧಿಪತಿಗಳಾಗಿದ್ದಾರೆ. ಪಾಪ ಗ್ರಹಗಳು ಲಗ್ನ ಮತ್ತು ಸಪ್ತಮ ಭಾವದಲ್ಲಿದ್ದು ಚಂದ್ರನು ಕ್ರೂರಯುತನಾಗಿ ಶುಭಗ್ರಹ ಗಳಿಂದ ನೋಡಲ್ಪಡದೆ ಇದ್ದರೆ ಹುಟ್ಟಿದ ಮಗು ಹತವಾಗುವದು. ಹಾಗೆಯೇ

ಕ್ಷೀಣಚಂದ್ರನು ದ್ವಾದಶ ರಾಶಿಯಲ್ಲಿಯೂ ಒಂದು, ಎಂಟನೆಯ ರಾಶಿಯಲ್ಲಿ ಪಾಪಗ್ರಹಗಳೂ, ಕೇಂದ್ರದಲ್ಲಿ ಶುಭ ಗ್ರಹಗಳ ಸಂಬಂಧವಿರುವಿಕೆಯ ಪರಿಣಾಮವಾಗಿ ಬಾಲಾರಿಷ್ಟಕ್ಕೆ ಕಾರಣವಾಗುತ್ತದೆ. ಮೊದಲನೆಯ ಆರು ರಾಶಿ - ಮೇಷ, ಮಿಥುನ, ಕರ್ಕಾಟಕ, ಸಿಂಹ ಮತ್ತು ಕನ್ಯಾ ಈ ರಾಶಿಗಳಲ್ಲಿ ಪಾಪಗ್ರಹಗಳೂ, ಉಳಿದ ಆರು ರಾಶಿಗಳಲ್ಲಿ ಪಾಪ ಗ್ರಹಗಳೂ ಇದ್ದು ವೃಶ್ಚಿಕ ಲಗ್ನವಾಗಿ ಪಾಪಗ್ರಹ ಮಧ್ಯಸ್ಥಿತಿಯೊದಗಿದರೆ ಬಾಲಾರಿಷ್ಟವು ಸಂಭವಿಸುವದು. ಚಂದ್ರನು ಪಾಪಗ್ರಹ ಏಳು , ಹನ್ನೆರಡು ಎಂಟು, ಒಂದು ಈ ರಾಶಿಯಲ್ಲಿದ್ದು ಕೇಂದ್ರಾತಿರಿಕ್ತವಾದ ಸ್ಥಾನಗಳಲ್ಲಿದ್ದ ಶುಭಗ್ರಹಗಳಿಂದ ವೀಕ್ಷಿತನಾಗ ದಿದ್ದರೆ ಬಾಲಾರಿಷ್ಟವು ಒದಗುವದು. ಮತ್ತು ಚಂದ್ರನು ಆರು ಎಂಟು ಮನೆಗಳಲಿದ್ದು ಪಾಪ ಗ್ರಹಗಳಿಂದ ನೋಡಲ್ಪಟ್ಟಿದ್ದರೂ ಮತ್ತು ಯುತನಾದರೂ ಸಹ ಬಾಲಾರಿಷ್ಟ ಬರುವದು.

ಷಷ್ಠಮದಲ್ಲಿರುವ ಚಂದ್ರನು ಪಾಪ ಮತ್ತು ಸೌಮ್ಯ ಗ್ರಹಗಳಿಂದ ಮಿಶ್ರಿತನಾಗಿ ದೃಷ್ಟನಾದರೆ ಮಗುವಿಗೆ ಎಂಟು ವರ್ಷ ಆಯುಸ್ಸೆಂದು ಹೇಳಬಹುದು. ಕ್ಷೀಣಚಂದ್ರನು ಕೇಂದ್ರದಲ್ಲಾಗಲಿ, ಅಷ್ಟಮದಲ್ಲಾಗಲಿ, ಪಾಪಯುಕ್ತನಾಗಲಿ ಅಥವಾ ಪಾಪದೃಷ್ಟನಾಗಲಿ ಆಗಿದ್ದರೆ ಬಾಲಾರಿಷ್ಟ ಉಂಟೆಂದು ಹೇಳಬೇಕು. ಲಗ್ನ, ಸಪ್ತಮ, ಅಷ್ಟಮ ಈ ರಾಶಿಗಳಲ್ಲಿ ಚಂದ್ರನು ಪಾಪಿಯಾಗಿದ್ದರೂ ಶಿಶುವು ಮರಣ ಹೊಂದುವದೆಂದು ತಿಳಿಯಬೇಕು. ಚಂದ್ರನಿಂದ ಅಥವಾ ಲಗ್ನದಿಂದ ನಾಲ್ಕು ಮತ್ತು ಏಳನೆಯ ರಾಶಿಗಳಲ್ಲಿ ಪಾಪಗ್ರಹಯೋಗ ಅಥವಾ ದೃಷ್ಟಿಯಿದ್ದರೆ ಮಗುವು ತನ್ನ ತಾಯಿಯೊಡನೆ ಮರಣ ಹೊಂದುವನು. ಚಂದ್ರನು ರಾಶ್ಯಾಂತದಲ್ಲಿದ್ದು ಶುಭ ಗ್ರಹಗಳಿಂದ ನೋಡಲ್ಪಡದೇ ನವಮ, ಪಂಚಮ ಸ್ಥಾನಗತರಾದ ಕ್ರೂರ ಗ್ರಹಗಳಿಂದ ನೋಡಲ್ಪಟ್ಟರೆ ಮಗುವು ಮರಣ ಹೊಂದುವದು. ಸಪ್ತಮದಲ್ಲಿರುವ ಪಾಪ ಗ್ರಹಗಳೊಡನೆ ಚಂದ್ರಸಹಿತವಾಗಿರುವ ಲಗ್ನದಲ್ಲಿ ಹುಟ್ಟಿದ ಮಗುವಿಗೆ ಕೂಡಲೆ ಮರಣ. ಚಂದ್ರನು ಅಶುಭಸಹಿತವಾಗಿ ರಾಹುಗ್ರಸ್ತನಾದರೂ, ಕುಜನು ಅಷ್ಟಮ ದಲ್ಲಿದ್ದರೂ, ತಾಯಿ ಮಗುವಿಗೂ ಅನಿಷ್ಟ ಸಂಭವಿಸುವದೆಂದು ತಿಳಿಯಬೇಕು. ಲಗ್ನದಲ್ಲಿ ಸೂರ್ಯನಿದ್ದರೆ ಶಸ್ತ್ರಸಂಬಂಧವಾಗಿ ತೊಂದರೆ ಕೊಡುವನು. ಸೂರ್ಯ ಚಂದ್ರರು ಉದಯ ಲಗ್ನದಲ್ಲಿದ್ದು ಐದು, ಒಂಭತ್ತು, ಹನ್ನೆರಡು ಈ ರಾಶಿಗಳಲ್ಲಿರುವ ಪಾಪ ಗ್ರಹಗಳಿಂದ ವೀಕ್ಷಿತನಾದರೆ ಜಾತಕನಿಗೆ ಮರಣವನ್ನು ಹೇಳಬೇಕು. ಕಟಕದಲ್ಲಿ ಚಂದ್ರನೂ, ಗುರುವೂ ಇದ್ದು ಲಗ್ನ ಕೇಂದ್ರಗಳಲ್ಲಿ ಬುಧ ಶುಕ್ರರಿದ್ದು ಉಳಿದ ಗ್ರಹಗಳೆಲ್ಲ ಉಚ್ಚರಾಶಿಮ ಗತರಾದರೆ ಮಗುವಿಗೆ ಪೂರ್ಣಾಯುರ್ಯೋಗವಿದೆ ಎಂದರ್ಥ. ಅಥವಾ ಮೀನ ಲಗ್ನವು ವರ್ಗೋತ್ತ ಮಾಂಕದಲ್ಲಿದ್ದು ವೃಷಭರಾಶಿಯಲ್ಲಿ ಚಂದ್ರನು ಮೂರನೆಯ ಅಂಶದಲ್ಲಿದ್ದು ಉಳಿದ ಗ್ರಹಗಳೆಲ್ಲ ಉಚ್ಚರಾಶಿಯಲ್ಲಿದ್ದರೂ ಮಗುವಿಗೆ ಪೂರ್ಣಾಯುರ್ದಾಯಕವಿರುವದು.

ಚಂದ್ರನು ಶುಭದೃಷ್ಟನೂ, ಬಲಿಷ್ಟನೂ ಆಗಿ ಕೇಂದ್ರದಲ್ಲಿದ್ದರೆ ಆ ಜಾತಕನಿಗೆ ಚಂದ್ರನು ಆಯುಸ್ಸು ಧನಾದಿಗಳನ್ನು ಕೊಡುತ್ತಾನೆ. ಚಂದ್ರನು ಉಚ್ಚದಲ್ಲಿಯೂ, ಸೌಮ್ಯ ಗ್ರಹಗಳು ಸ್ವಕ್ಷೇತ್ರದಲ್ಲಿಯೂ ಲಗ್ನದಲ್ಲಿ ಉಚ್ಚರಾಶಿಕತವಾದ ಗ್ರಹವೂ ಇದ್ದರೆ, ಆ ಮಗುವಿಗೆ ಅರವತ್ತು ವರ್ಷ ಆಯುಸ್ಸು. ಕೇಂದ್ರದಲ್ಲಿ ಸೌಮ್ಯ ಗ್ರಹಗಳಿದ್ದು ಅಷ್ಟಮದಲ್ಲಿ ಗುರುವಿದ್ದರೆ ಜಾತಕನಿಗೆ ಎಪ್ಪತ್ತುವರ್ಷ ಆಯುಸ್ಸು. ಸೌಮ್ಯ ಗ್ರಹಗಳೆಲ್ಲ ಮೂಲ ತ್ರಿಕೋಣಗಳಲ್ಲಿದ್ದು ಗುರುವು ಉಚ್ಚನಾಗಿದ್ದು ಲಗ್ನಾಧಿಪತಿಯು ಬಲಿಷ್ಠನಾಗಿದ್ದರೆ ಆ ಶಿಶುವಿಗೆ ಒಂಬತ್ತು ವರ್ಷ ವಯಸ್ಸು. ವ್ಯಯಾಧಿಪನು ನವಮದಲ್ಲಿಯೂ ಗುರುವು

ಅಷ್ಟಮದಲ್ಲಿಯೂ ಇದ್ದು ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿಗಳು ಕ್ರೂರಯುತರಾಗಿ ಪರಾಜಿತರಾಗಿದ್ದರೆ ಜಾತಕನಿಗೆ ಎಂಭತ್ತು ವರ್ಷ ಆಯುಸ್ಸು. ಲಗ್ನದಲ್ಲಿ ಅಶುಭಗ್ರಹಗಳು ಮತ್ತು ಗುರುವು ಇದ್ದು ಅವರು ಚಂದ್ರನಿಂದ ದೃಷ್ಟರಾಗಿ ಅಷ್ಟಮದಲ್ಲಿ ಯಾವ ಗ್ರಹಗಳೂ ಇಲ್ಲವೆ ನವಮ ಅಥವಾ ಷಷ್ಠದಲ್ಲಿ ಶನಿಯಿದ್ದು ಚಂದ್ರನು ಕೇಂದ್ರದಲ್ಲಿ ಇದ್ದರೆ, ಶಿಶುವಿಗೆ ನೂರುವರ್ಷ ಆಯುಷ್ಯವಿರುವದು. ಗುರುವು ಕಟಕ ರಾಶಿಯಲ್ಲಿದ್ದು ಲಗ್ನ ಕೇಂದ್ರಗಳಲ್ಲಿ ಗುರು ಶುಕ್ರರಿರುತ್ತಾರೆ ವ್ಯಯದಲ್ಲಿ ಮತ್ತು ಅಷ್ಟಮದಲ್ಲಿ ಶುಭಗ್ರಹಗಳಿಲ್ಲದೇ ಹೋದರೆ ಜಾತಕನಿಗೆ ನೂರನಲವತ್ತು ವರ್ಷ ಆಯುಸ್ಸು.

ಲಗ್ನಾಧಿಪತಿಯು ಅಷ್ಟಮದಲ್ಲಿಯೂ ಅಷ್ಟಮಾಧಿಪತಿಯು ಲಗ್ನದಲ್ಲಿಯೂ ಇದ್ದರೆ ಮಗುವಿಗೆ ಐದು ವರ್ಷ ಆಯುಸ್ಸು. ಲಗ್ನದಲ್ಲಿ ಗುರು ಶುಕ್ರರು ಅಷ್ಟಮದಲ್ಲಿ ಬುಧ ಚಂದ್ರರು, ಇದ್ದರೂ ಮಗುವಿಗೆ ಐದೇ ವರ್ಷ ಆಯುಸ್ಸು. ಈವರೆಗೆ ಹೇಳಿದ ಆಯುಷ್ಯವೆಲ್ಲ ಯೋಗದಿಂದ ಹುಟ್ಟುವ ಆಯುರ್ದಾಯವೆಂದು ತಿಳಿಯಬೇಕು. ಇನ್ನು ಗಣಿತದಿಂದ ಬರುವ ಆಯುರ್ದಾಯಮಾನವನು ಹೇಳುವೆನು, ಕೇಳು. ಜಾತಕದಲ್ಲಿ ಸೂರ್ಯನು ಬಲಿಷ್ಠನಾದರೆ ಪೈಂಡಾಯುರ್ದಾಯವನ್ನೂ, ಚಂದ್ರನು ಬಲಿಷ್ಠನಾದರೆ, ನೈಸರ್ಗಿಕಾಯುರ್ದಾಯವನ್ನೂ, ಲಗ್ನವು ಬಲಾಧಿಕವಾದರೆ, ಅಂಶಾಯುರ್ದಾಯವನ್ನೂ ಸಾಧಿಸಬೇಕು. ಪೈಂಡಾಯುರ್ದಾಯದಲ್ಲಿ ಉಚ್ಚತಮ(ಗತರಾದ) ಸೂರ್ಯಾದಿ ಸಪ್ತಗ್ರಹಗಳಿಗೂ, ಕ್ರಮವಾಗಿ ಹತ್ತೊಂಬತ್ತು, ಇಪ್ಪತ್ತೈದು, ಹದಿನೈದು, ಹನ್ನೆರಡು, ಹದಿನೈದು, ಇಪ್ಪತ್ತೊಂದು, ಇಪ್ಪತ್ತು ಇಷ್ಟು ವರ್ಷಗಳು ಉಕ್ತವಾಗಿವೆ. ನೈಸರ್ಗಿಕಾ ಯುರ್ದಾಯದಲ್ಲಿ ಚಂದ್ರ, ಕುಜ, ಬುಧ, ಶುಕ್ರ ರವಿ, ಗುರು ಶನಿ, ಇವರಿಗೆ ಕ್ರಮವಾಗಿ ಒಂದು ಎರಡು, ಒಂಭತ್ತು ಇಪ್ಪತ್ತು ಹದಿನೆಂಟು, ಐವತ್ತು ವರ್ಷಗಳು ಹೇಳಲ್ಪಟ್ಟಿವೆ.

ಹೀಗೆ ಹೇಳಲ್ಪಟ್ಟ ಪರಮಾಯುರ್ದಾಯಗಳು, ಗ್ರಹವು ಉಚ್ಚದಲ್ಲಿದ್ದಾಗ ಮಾತ್ರ ಸಂಭವಿಸುವದು. ಗ್ರಹಸ್ಫುಟವು ಆರುರಾಶಿಗಿಂತ ಕಡಿಮೆಯಾಗಿದ್ದರೆ ದ್ವಾದಶರಾಶಿ ಸಂಖ್ಯೆಯಲ್ಲಿ ಕಳೆದುಕೊಳ್ಳಬೇಕು. ನೀಚರಾಶಿಯಲ್ಲಿರುವ ಗ್ರಹವು ಅರ್ಧ ಆಯುಸ್ಸು ಮಾತ್ರ ಕೊಡುತ್ತದೆ. ಮಧ್ಯ ಇರುವ ಭಾಗಕ್ಕೆ ಅನುಪಾತದಿಂದ ಆಯುರ್ದಾಯವನ್ನೂ ತಿಳಿಯಬೇಕು. ಇದಕ್ಕೆ ನೀಚಾರ್ಧ ಹರಣವೆಂದು ಹೆಸರು. ಶತ್ರುಕ್ಷೇತ್ರದಲ್ಲಿರುವ ಗ್ರಹಕ್ಕೆ ಮೂರನೇಯ ಒಂದು ಭಾಗವು ಕಡಿಮೆ ಆಗುವದು. ಆದರೆ ವಕ್ರವಾಗಿರುವ ಗ್ರಹಕ್ಕೆ ಮಾತ್ರ ಈ ಹರಣವಿಲ್ಲ. ಸೂರ್ಯನೊಂದಿಗೆ ಅಸ್ತವಾಗಿರುವ ಗ್ರಹವು ಅರ್ಧಭಾಗವನ್ನೂ ಮಾತ್ರ ಕೊಡುವದು. ಶುಕ್ರ ಮತ್ತು ಶನಿಗಳಿಗೆ ಈ ಹರಣವಿಲ್ಲ. ಒಂದೇ ಗ್ರಹಕ್ಕೆ ಎರಡು ಮೂರು ರೀತಿ ಹರಣ ಬಂದರೆ ಅಧಿಕವಾದ ಒಂದೇ ಹರಣವನ್ನು ಮಾತ್ರ ಮಾಡಬೇಕು. ಜನ್ಮ ಲಗ್ನದಲ್ಲಿ ಕ್ರೂರಗ್ರಹವಿದ್ದರೆ ಲಗ್ನಸ್ಫುಟದಿಂದ ಸಕಲಾಯುರ್ಧಾಯವನ್ನು ಗುಣಿಸಿ ನೂರೆಂಟರಿಂದ ಭಾಗಿಸಿ ಬಂದ ಲಬ್ಧವನ್ನೂ ಸಕಲಾಯುರ್ದಾಯದಲ್ಲಿ ಕಳೆಯಬೇಕು.

ಶುಭ ಗ್ರಹದೃಷ್ಟಿ ಇದ್ದರೆ ಆ ಲಬ್ಧದಲ್ಲಿ ಅರ್ಧ ಭಾಗವನ್ನು ಮಾತ್ರ ಕಳೆಯಬೇಕು. ಇದಕ್ಕೆ ಕ್ರೂರೋದಯಹರಣವೆಂದು ಹೆಸರು. ಲಗ್ನದಿಂದ ಪಶ್ಚಿಮಾರ್ಧದಲ್ಲಿ ಇರುವ ಪಾಪಗ್ರಹಗಳಿಗೆ ಕ್ರಮದಿಂದ ಒಂದು, ಎರಡು, ಮೂರು, ನಾಲ್ಕು, ಐದು, ಮತ್ತು ಆರು ಈ ಭಾಗಗಳನ್ನು ಅವರ ಆಯುರ್ದಾಯದಲ್ಲಿ ಕಳೆಯಬೇಕು. ಶುಭ ಗ್ರಹಗಳಿಗೆ ಮಾತ್ರ ಅರ್ಧಭಾಗವನ್ನು ಕಳೆಯಬೇಕು. ಇದಕ್ಕೆ ಚಕ್ರಾರ್ಧಹರಣವೆಂದು ಹೆಸರು.

ಈಗ ಅಂಶಾಯುರ್ಧಾಯಕ್ರಮವನ್ನು ವಿವರಿಸುತ್ತೇನೆ.

ಬೇಕಾದ ಗ್ರಹಸ್ಫುಟವನ್ನು ಅರವತ್ತರಿಂದ ಗುಣಿಸಿ, ಲಿಪ್ತಿಗಳನ್ನಾಗಿ ಮಾಡಿಕೊಂಡು ಬಂದದ್ದನ್ನು ಇನ್ನೂರರಿಂದ ಭಾಗಿಸಿ ಬಂದ ಲಬ್ಧವನ್ನು ಹನ್ನೆರಡರಿಂದ ಭಾಗಿಸಿದರೆ ಬರುವುದೇ ವರ್ಷ. ಉಳಿದ ಶೇಷವನ್ನು ಹನ್ನೆರಡರಿಂದ ಗುಣಿಸಿ ತಿಂಗಳುಗಳನ್ನಾಗಿಯೂ ಶೇಷವನ್ನು ಮೂವತ್ತರಿಂದ ಗುಣಿಸಿ, ದಿನಗಳನ್ನಾಗಿಯೂ ಮಾಡಿ ಕೊಳ್ಳಬೇಕು. ಉಳಿದದ್ದನ್ನು ಅರವತ್ತರಿಂದ ಗುಣಿಸಿ ಎರಡನೂರರಿಂದ ಭಾಗಿಸಿದರೆ ಬರುವ ಲಬ್ಧವು ಘಟಿಕಾರೂಪವಾಗುವದು. ಏಳನೆಯ ಎರಡು ಭಾಗವು (೨/೭) ಲಗ್ನದಿಂದ ಬರುವ ಆಯುರ್ದಾಯವಾಗುವದು. ಇದನ್ನು ಮಾಸಾದಿಯಾಗಿ ಆನಯನ ಮಾಡಬಹುದು. ಗ್ರಹಗಳ ಅಂಶದಿಂದ ಬರುವ ಆಯುರ್ದಾಯವಾದ್ದರಿಂದ ಅದಕ್ಕೆ ಅಂಶಾಯುರ್ದಾಯವೆಂಬ ಹೆಸರು ಬಂದಿರುವದು. ಈ ಅಂಶಾಯುರ್ದಾಯಗಳಲ್ಲಿ ಚಕ್ರಪಾತಾದಿ ಹರಣಗಳಿಲ್ಲ. ಇಲ್ಲಿ ಲಗ್ನವು ಮೇಷ ಮೊದಲಗೊಂಡು ಎಷ್ಟನೆಯ ರಾಶಿಯ ನವಾಂಶವು ಲಗ್ನದಲ್ಲಿ ಕಳೆದಿದೆಯೋ ಅಷ್ಟು ಸಂಖ್ಯೆಗಳ ಆಯುರ್ದಾಯವನ್ನು ಕೊಡುತ್ತದೆ. ಲಗ್ನವು ಬಲಿಷ್ಠವಾಗಿದ್ದರೆ ಅನುಪಾತದಿಂದ ಲಗ್ನರಾಶಿ ಸಂಖ್ಯೆಗೆ ಸರಿಯಾಗುವಷ್ಟು ವರ್ಷಗಳ ಆಯುರ್ದಾಯವನ್ನು ಕೊಡುತ್ತದೆ. ಇದರಲ್ಲಿ ಮಾತ್ರ ಲಗ್ನದಲ್ಲಿ ಕ್ರೂರ ಗ್ರಹವಿದ್ದರೂ, ಕ್ರೂರೋದಯ ಹರಣಗಳಿಲ್ಲ. ಕೆಲವರ ಅಭಿಪ್ರಾಯದಂತೆ - ಸೌಮ್ಯಗ್ರಹವಿದ್ದರೆ ಅರ್ಧಹರಣವೆಂದೂ, ಪಾಪಗ್ರಹವಿದ್ದರೆ ಪೂರ್ಣಹರಣವೆಂದೂ ಹೇಳುವಂತೆ ತೋರುತ್ತದೆ. ಈ ಹರಣಾದಿಗಳನ್ನು ತ್ರೈರಾಶಿಕ ರೀತಿಯಲ್ಲಿ ಸಂಸ್ಕಾರ ಮಾಡಬೇಕು.

ಅಂಶಾಯುರ್ದಾಯಾದಲ್ಲಿ ಗಣಿತದ ಕ್ರಮ ಹೀಗಿದೆ. ಗ್ರಹಸ್ಫುಟಕಲೆಗಳನ್ನು ಇನ್ನೂರರಿಂದ ಭಾಗಿಸಿದರೆ ಬರುವ ಲಬ್ಧವು ತಿಂಗಳಾಗುವದು. ಉಳಿದ ಶೇಷವನ್ನು ಮೂವತ್ತಾರರಿಂದ ಗುಣಿಸಿ, ಇನ್ನೂರರಿಂದ ಭಾಗಿಸಿದರೆ ಬರುವದು ದಿನವಾಗುವದು. ಲಗ್ನವು ಬಲಿಷ್ಠವಾದಲ್ಲಿ ಅದರ ಅಂಶದಷ್ಟು ಆಯುಸ್ಸು ಲಗ್ನಕ್ಕೆ ಬರುವದು. ಅದರಂತೆ ಹನ್ನೆರಡು ಮೂವತ್ತು ಇವುಗಳಿಂದ ಗುಣಿಸಿ ಮಾಸ ಮತ್ತು ದಿನ ಇವುಗಳನ್ನು ಆನಯನ ಮಾಡಬೇಕು. ಇದು ಪಿಂಡಾಯುರ್ದಾಯ ಹಾಗೂ ನೈಸರ್ಗಿಕಾಯುರ್ದಾಯಗಳಲ್ಲಿ ಇಲ್ಲ.

ಲಗ್ನ ಮತ್ತು ಸೂರ್ಯ ಚಂದ್ರ ಇವರಲ್ಲಿ ಬಲಿಷ್ಠರಾದವರ ದೆಶೆಯೇ ಮೊದಲನೆಯ ದೆಶೆಯೆಂದು ಕಲ್ಪಿಸಿಕೊಂಡು ಆಯುರ್ದಾಯಾನಯನ ಮಾಡುವುದು ಮತ್ತೊಂದು ವಿಧ. ಅದರಲ್ಲಿ ಪ್ರಥಮ ದಶೆ ಆ ರೀತಿಯಾದ ಮೇಲೆ ಪ್ರಥಮ ದಶಾಧಿಪತಿ ಗ್ರಹಕ್ಕೆ ಕೇಂದ್ರದಲ್ಲಿರುವ ಗ್ರಹವನ್ನು ದ್ವಿತೀಯ ಗ್ರಹವನ್ನಾಗಿ ಭಾವಿಸಬೇಕು. ಕೇಂದ್ರದಲ್ಲಿ ಅನೇಕ ಗ್ರಹಗಳಿದ್ದರೆ ಅವರಲ್ಲಿ ಬಲಾಧಿಕ. ಗ್ರಹದ ದೆಶೆಯು ಪೂರ್ವದಲ್ಲಿಯೂ ಬಲಹೀನ ಗ್ರಹದ ದೆಶೆಯು ಅನಂತರದಲ್ಲಿಯೂ ಆಗುವದೆಂದು ಕಲ್ಪಿಸಿಕೊಳ್ಳಬೇಕು. ಎರಡೂ ಗ್ರಹಗಳ ಬಲವು ಒಂದೇ ಸಮನಾಗಿದ್ದರೆ ಅಧಿಕವರ್ಷಗಳನ್ನು ಕೊಡುವ ದೆಶೆಯು ಮುಂದೆ ಎಂದೂ ಭಾವಿಸಿಕೊಳ್ಳಬೇಕು. ಬಲವೂ ಆಯುರ್ದಾಯವೂ, ಸೌಮ್ಯವಾಗಿರುವ ಗ್ರಹಗಳಲ್ಲಿ ಪ್ರಥಮೋದಿತ ಗ್ರಹದೆಶೆಗಳನ್ನು ಪ್ರಥಮತಃ ಕಲ್ಪಿಸಿಕೊಳ್ಳಬೇಕು. ಕೇಂದ್ರಸ್ಥ ಗ್ರಹಗಳ ದೆಶೆಗಳಾದ ಮೇಲೆ ಫಣಪರ ಅಪೋಕ್ಲಿಮ ಸ್ಥಾನಗಳ ದೆಶೆಗಳು ಯಥಾಕ್ರಮವಾಗಿ ನಡೆಯಬೇಕು. ಕೇಂದ್ರದಲ್ಲಿಗ್ರಹವಿಲ್ಲದಿದ್ದರೆ ಅಪೋಕ್ಲಿಮದಲ್ಲಿಯೂ, ಅಲ್ಲಿಯ ಅಧಿಕ

ಗ್ರಹಗಳಿದ್ದರೆ ಹಿಂದೆ ಹೇಳಿದಂತೆಯೂ ದಶಾವರ್ಷಗಳನ್ನು ಸಾಧಿಸಬೇಕು. ಹೀಗೆ ದಶಾವ್ಯವಸ್ಥೆಯಾದ ಮೇಲೆ ಅಂತರ್ದಶೆಗಳನ್ನು ತಿಳಿಯುವ ಕ್ರಮವು ಈ ರೀತಿಯಾಗಿದೆ. ದಶಾಧಿಪತಿಯೊಂದಿಗೆ ಒಂದೇ ರಾಶಿಯಲ್ಲಿರುವ ಗ್ರಹವು ದಶಾಧಿಪತಿ ಕೊಟ್ಟ ಫಲಕಾಲದಲ್ಲಿ ಅರ್ಧವನ್ನು ತನ್ನ ಅಂತರ್ದಶೆಯನ್ನಾಗಿ ಕೊಡುವನು. ಪಂಚಮ ಮತ್ತು ನವಮ ಸ್ಥಾನಗಳಲ್ಲಿರುವ ಗ್ರಹವು ದೆಶೆಯ ಮೂರನೆಯ ಒಂದು ಭಾಗವನ್ನು ಸಪ್ತಮದಲ್ಲಿರುವ ಗ್ರಹವು ಏಳನೆಯ ಒಂದಂಶವನ್ನೂ ಚತುರ್ಥಾಷ್ಟಮದಲ್ಲಿರುವ ಗ್ರಹಗಳು ದಶಾಫಲದ ಚತುರ್ಥಾಂಶವನ್ನೂ ತಮ್ಮ ಗುಣಗಳಿಂದ ಕೂಡಿಸುತ್ತಾರೆ. ಆದರೆ ಗಣಿತ ಕ್ರಮ ಹೀಗಿದೆ. ಅರ್ಧಾಂಶ, ತೃತೀಯಾಂಶ, ಸಪ್ತಮಾಂಶಾದಿ ಸ್ಥಾನಗಳನ್ನು ಸಮುಚ್ಛೇದಗಳಾಗಿ ಮಾಡಿ, ಅದರ ಕೆಳಗಿರುವ ಛೇದ ಸಂಖ್ಯೆಯನ್ನು ತೆಗೆದು ಹಾಕಿ, ಸಕಲ ಸ್ಥಾನಗಳನ್ನೂ ಮೂಲ ದಶಾವತ್ಸರಗಳಿಂದ ಗುಣಿಸಿ, ಛೇದ ಸಂಖ್ಯಾವಿಹೀನಗಳಾಗಿ ಮೇಲೆ ಇರುವ ಸಂಖ್ಯೆಗಳನ್ನು ಕೂಡಿಸಿ ಆ ಬೇರೀಜನಿಂದ ಭಾಗಿಸಲು ಏಕರಾಶ್ಯಾದಿಗತಗ್ರಹಗಳ ಅಂತರ್ದಶಾ ಕಾಲಗಳು ಯಥಾಂಶವಾಗಿ ಬರುವುದು. ಅದನ್ನೇ ಮಾಸಾದಿಯಾಗಿಯೂ ಆನಯನ ಮಾಡಬೇಕು.

ಹೀಗೆ ಅಂತರ್ದಶಾನಯನ ಮಾಡಿದ ನಂತರ, ಅದರಲ್ಲಿಯೂ ದಶಾವಿಧಿಯನ್ನೇ ಅನುಸರಿಸಿ, ವಿದಶೆ, ಉಪದಶ, ಇವುಗಳನ್ನು ಆನಯನ ಮಾಡಬೇಕು. ಈ ಅಂತರ್ದಶಾಧಿಪತಿಗಳು ದಶಾಧಿಪತಿಗೆ ಶತ್ರುವೇ? ಮಿತ್ರನೇ? ಉಚ್ಚಸ್ಥಾನದಲ್ಲಿದ್ದಾನೆಯೇ? ಅಥವಾ ನೀಚವಾಗಿದ್ದಾನೆಯೇ? ಎಂಬುದನ್ನು ತಿಳಿದುಕೊಂಡು ಫಲಾಫಲಗಳನ್ನು ಊಹಿಸಬೇಕು. ಉಚ್ಚರಾಶಿಯಲ್ಲಿರುವ ಗ್ರಹಗಳು ನಾಲ್ಕರಷ್ಟು ಮತ್ತು ಏಳರಷ್ಟು ಹೆಚ್ಚಾಗಿ ಒಳ್ಳೆಯ ಫಲಗಳನ್ನು ಕೊಡುತ್ತಾರೆ. ಶುಭ ಗ್ರಹಗಳು ತನ್ವಾದಿ ಭಾವಗಳಿದ್ದರೆ ಆ ಗ್ರಹಗಳು ಆಯಾಭಾವದ ಫಲವನ್ನು ಅಭಿವೃದ್ಧಿಗೊಳಿಸಿ, ಫಲಗಳನ್ನು ಕೊಡುವರು. ಅದೇ ಗ್ರಹಗಳು ದುರ್ಬಲವಾಗಿದ್ದರೆ ತಮ್ಮ ತಮ್ಮ ಭಾವದ ಫಲವನ್ನು ನಾಶ ಮಾಡುವದೂ ಉಂಟು. ಗ್ರಹಗಳಿಗೆ ಹಿಂದೆ ಹೇಳಿದ ದ್ರವ್ಯಾದಿಗಳು ಕಾಲದೇಶಾದಿಗಳು ಇವೆಲ್ಲವೂ ಜಾತಕನಿಗೆ ಆಯಾ ಗ್ರಹಗಳ ದಶಮ ಕಾಲದಲ್ಲಿ ಲಭಿಸುವವು.

ನೀಚಾಂಶಗತರಾದ ಗ್ರಹಗಳು ಶತ್ರುಗ್ರಹಗಳಿಂದ ನೋಡಲ್ಪಟ್ಟರೆ ಪಾಪಫಲವನ್ನು ನೀಡುತ್ತಾರೆ. ಗ್ರಹವು ಮಿತ್ರ ಕ್ಷೇತ್ರದಲ್ಲಿದ್ದು ಶುಭಾಂಶಸ್ಥರಾಗಿದ್ದರೆ ಶುಭ ಫಲವನ್ನೇ ತಮ್ಮ ದಶಾಕಾಲದಲ್ಲಿ ಕೊಡುತ್ತಾರೆ. ಯಾವ ಗ್ರಹವು ಅಸ್ತವಾಗದ ಉಚ್ಚರಾಶಿಯಲ್ಲಿದ್ದು ಅಷ್ಟಕವರ್ಗದಿಂದ ಪೂರ್ಣಬಿಂದುಗಳನ್ನು ಪಡೆದಿರುವದೋ ಆ ಗ್ರಹವು ಶುಭಫಲವನ್ನೇ ಕೊಡುತ್ತದೆ. ಅಲ್ಲದೆ ಯಾವದೇ ಗ್ರಹವು ಸ್ವತ್ರಿಕೋಣ, ಸ್ವಕ್ಷೇತ್ರ, ಮಿತ್ರ ಕ್ಷೇತ್ರಗಳಲ್ಲಿರುವದೋ ಅದು ಮಧ್ಯಮವಾದ ಫಲವನ್ನೇ ಕೊಡುತ್ತದೆ. ಅಲ್ಲದೇ ಇವುಗಳಿಂದ ಬರುವ ಫಲವೇ ಶ್ರೇಷ್ಠವಾದದ್ದು. ಇದಕ್ಕೆ ವಿರುದ್ಧವಾಗಿ ನೀಚರಾಶಿ, ನೀಚಾಂಶ, ಶತ್ರುಕ್ಷೇತ್ರ ಮುಂತಾದ ಸ್ಥಾನಗಳಲ್ಲಿರುವ ಗ್ರಹಗಳು ಅಲ್ಪವಾದ ಶುಭವನ್ನು ಅತಿಯಾದ ಅಶುಭಫಲವನ್ನೂ ನೀಡುವರು. ದ್ವಿಸ್ವಭಾವ ರಾಶಿಯ ಲಗ್ನವಾಗಿದ್ದರೆ ದ್ರೇಕ್ಕಾಣಾನುಸಾರವಾಗಿ ಅನಿಷ್ಟ, ಮಿಶ್ರ, ಶ್ರೇಷ್ಠ ಈ ರೀತಿಯಾಗಿ ಫಲವನ್ನು ಕೊಡುವವು. ಚರರಾಶಿಯಲ್ಲಾದರೂ ಇದಕ್ಕೆ ಮಿಥ್ಯವಾಗಿ ಫಲವು ದೊರೆಯುವದು. ಸ್ಥಿರರಾಶಿಯಾದರೆ ಕ್ರಮವಾಗಿ ಅಶುಭ, ಶುಭ, ಮತ್ತು ಮಿಶ್ರ ಈ ರೀತಿಯಾಗಿ? ಫಲವು ದೊರೆಯುವದೆಂದು ಹೇಳಬೇಕು. ಜನ್ಮಲಗ್ನವು ಲಗ್ನಾಧಿಪತಿ, ಗುರು, ಬುಧ ಇವರಿಂದ ಯುಕ್ತವಾಗಿದ್ದರೆ ತನ್ನ

ದಶಾಕಾಲದಲ್ಲಿ ಶುಭಫಲವನ್ನು ಕೊಡುವರು, ಪಾಪಾಂತರವರ್ತಿಯಾಗಿದ್ದು ಪಾಪಗ್ರಹ ಗಳಿಂದಲೇ ಕೂಡಿದ್ದರೆ ಆಗ ಅಶುಭ ಫಲಗಳನ್ನೇ ಕೊಡುವರು. ಈಗ ಅಷ್ಟಕವರ್ಗ ಪ್ರಕರಣದ ಸವಿಸ್ತಾರ ವರ್ಣನೆಯ ವಿಚಾರ ಹೇಳುತ್ತೇನೆ ಕೇಳು.

ಲಗ್ನ ಸಹಿತವಾದ ಸೂರ್ಯಾದಿ ಸಪ್ತಗ್ರಹಗಳೇ ಅಷ್ಟಕವೆನಿಸುತ್ತದೆ. ಇವುಗಳಿಂದ ರಾಶಿಗಳಲ್ಲಿ ಕೊಡಲ್ಪಡುವ ಬಿಂದು (೦) ರೇಖಾ (೧) ಈ ರೂಪವಾದ ಚಿಹ್ನೆಗಳ ಸಮುದಾಯವೇ ಅಷ್ಟಕವರ್ಗವೆನಿಸುವದು, ಜನ್ಮಕಾಲಗಳಲ್ಲಿರುವ ಗೋಚರ ರೀತಿಯಿಂದ ಜಾತಕನಿಗೆ ಶುಭಾಶುಭ ಫಲಗಳನ್ನು ಕೊಡುವವು. ಈ ಫಲಗಳು ಎಷ್ಟರಮಟ್ಟಿಗೆ ಬರುತ್ತವೆ ಎಂಬುದನ್ನು ಹೇಳಲು ಈ ಅಷ್ಟಕ ವರ್ಗಗಳು ಸಹಾಯಕ ವಾಗುವವು. ಬಿಂದುವು ಅಧಿಕವಾಗಿದ್ದರೆ ಒಳ್ಳೆಯ ಫಲವು ದೊರೆಯುವದೆಂದೂ ರೇಖೆಯು ಅಧಿಕವಾಗಿದ್ದರೆ ಕೆಟ್ಟಫಲಗಳು ದೊರೆಯುವದೆಂದೂ ತಿಳಿಯಬೇಕು.

ಈಗ ಸೂರ್ಯಾದಿ ಗ್ರಹಗಳಿಗೆ ದೊರೆಯುವ ಬಿಂದುಗಳನ್ನು ಆಯಾರೇಖೆಗೆ ಸರಿಯಾಗಿ ಹೇಳಲಾಗಿವೆ. ಉಳಿದ ರಾಶಿಗಳಲ್ಲಿ ರೇಖಾಯೋಜನ ಮಾಡಬೇಕು. ಸೂರ್ಯನು ತನ್ನ ಸ್ಥಾನದಿಂದ ಒಂದು, ಹನ್ನೊಂದು, ನಾಲ್ಕು, ಎಂಟು, ಎರಡು ಹತ್ತು, ಒಂಭತ್ತು, ಏಳು ಈ ಸ್ಥಾನಗಳಲ್ಲಿ ಬಂದಾಗ ಶುಭಾಶುಭಫಲ ಕೊಡುತ್ತಾನೆ. ಅದಕ್ಕೆ ವಿರುದ್ಧವಾಗಿದ್ದರೆ ಕೆಟ್ಟ ಫಲ ನೀಡುತ್ತಾನೆ. ಅಂದರೆ ಶುಭಫಲ ನೀಡುವ ರಾಶಿಗಳಲ್ಲಿ ಬಿಂದು ಚಿಹ್ನೆಯನ್ನು ಅಶುಭ ಪ್ರದಾಯಕ ರಾಶಿಗಳಲ್ಲಿ ರೇಖಾಚಿಹ್ನೆಯನ್ನು ವಿನ್ಯಾಸ ಮಾಡಬೇಕು. ಎಲ್ಲಾ ಗ್ರಹಗಳಿಗೂ ಮುಂದೆ ಇದೇ ರೀತಿ ಮಾಡಬೇಕು. ಹಾಗೇ ಸೂರ್ಯನು ತನ್ನ ಸ್ಥಾನದಿಂದಲೂ ಮೇಲೆ ಹೇಳಿದಂತೆಯೇ ಒಂದು, ಹನ್ನೊಂದು ಮುಂತಾದ ರಾಶಿಗಳಲ್ಲಿ ಬಿಂದುಗಳನ್ನು ಉಳಿದ ರಾಶಿಗಳಲ್ಲಿ ರೇಖೆಯನ್ನೂ ಇಡಿಸುತ್ತಾನೆ. ಶುಕ್ರನಿರುವ ಸ್ಥಾನದಿಂದ ಏಳು, ಹನ್ನೆರಡು, ಆರು, ಈ ರಾಶಿಗಳಲ್ಲಿಯೂ ಗುರುವಿನ ರಾಶಿಯಿಂದ ಒಂಭತ್ತು, ಐದು, ಹನ್ನೊಂದು, ಆರು. ಈ ಆರು ರಾಶಿಗಳಲ್ಲಿಯೂ ಚಂದ್ರನಿರುವ ರಾಶಿಯಿಂದ ಹತ್ತು, ಮೂರು, ಹನ್ನೊಂದು, ಆರು ಈ ರಾಶಿಗಳಲ್ಲಿಯೂ, ಬುಧನಿರುವ ಸ್ಥಾನದಿಂದ ಹತ್ತು, ಮೂರು, ಹನ್ನೊಂದು, ಆರು ಈ ಸ್ಥಾನಗಳಲ್ಲಿಯೂ ಹನ್ನೆರಡು, ಒಂಭತ್ತು ಐದನೆಯ ಸ್ಥಾನದಲ್ಲಿಯೂ, ಚಂದ್ರಸ್ಥಾನದಿಂದ ಹತ್ತು, ಮೂರು,ಹನ್ನೊಂದು, ಆರು, ನಾಲ್ಕು, ಹನ್ನೆರಡು, ಈ ರಾಶಿಗಳಲ್ಲಿಯೂ, ಸೂರ್ಯನು ಶುಭಫಲ ನೀಡುತ್ತಾನೆ. ಇದು ಸೂರ್ಯಾಷ್ಟಕವೆನಿಸುವದು. ಇನ್ನು ಚಂದ್ರನು ಲಗ್ನದಿಂದ ಆರು, ಮೂರು, ಹತ್ತು, ಹನ್ನೊಂದನೆಯ ಸ್ಥಾನ, ಕುಜಸ್ಥಾನದಿಂದ ಆರು, ಮೂರು, ಹತ್ತು ಹನ್ನೊಂದು, ಎರಡು ಐದು, ಒಂಭತ್ತು ಹಾಗೂ ತಾನಿರುವ ಸ್ಥಾನದಿಂದ ಆರು, ಮೂರು, ಹತ್ತು, ಹನ್ನೊಂದು , ಏಳು, ಒಂದು ಸೂರ್ಯನಿರುವ ಸ್ಥಾನದಿಂದ ಆರು, ಮೂರು, ಹತ್ತು, ಹನ್ನೊಂದು, ಎಂಟು, ಏಳು, ಶನಿಯಿರುವ ಸ್ಥಾನದಿಂದ, ಆರು, ಮೂರು, ಹನ್ನೊಂದು ಐದು, ಬುಧ ಸ್ಥಾನದಿಂದ ಐದು, ಮೂರು, ಹನ್ನೊಂದು, ಎಂಟು, ಒಂದು, ನಾಲ್ಕು, ಏಳು, ಹತ್ತು, ಶುಕ್ರಸ್ಥಾನದಿಂದ ಏಳು, ಒಂಭತ್ತು, ನಾಲ್ಕು, ಐದು ಮೂರು, ಹನ್ನೊಂದು, ಹತ್ತು ಈ ಸ್ಥಾನದಲ್ಲಿ ಶುಭಫಲಗಳನ್ನು ನೀಡುವನು. ಕುಜನು ಸೂರ್ಯನಿಂದ ಮೂರು, ಆರು, ಹತ್ತು ಹನ್ನೊಂದು, ಐದು, ಲಗ್ನದಿಂದ ಮೂರು, ಆರು, ಹತ್ತು ಹನ್ನೊಂದು, ಚಂದ್ರನಿಂದ ಮೂರು, ಆರು ಆರು, ಹನ್ನೊಂದು ಎರಡು, ಶನಿಸ್ಥಾನದಿಂದ ಒಂಭತ್ತು, ಹನ್ನೊಂದು ಎಂಟು ಒಂದು ನಾಲ್ಕು ಏಳು, ಹತ್ತು ಬುಧನಿಂದ ಆರು, ಮೂರು ಐದು ಶುಕ್ರನಿಂದ ಆರು, ಹನ್ನೆರಡು

ಹನ್ನೊಂದು ಎಂಟು ಗುರುವಿನಿಂದ ಹತ್ತು,ಹನ್ನೆರಡು, ಹನ್ನೊಂದು, ಆರು, ಈ ರಾಶಿಗಳಲ್ಲಿ ಶುಭಫಲಗಳನ್ನು ಕೊಡುತ್ತಾನೆ.

ಬುಧನು ಶುಕ್ರಸ್ಥಾನದಿಂದ ಎರಡು, ಒಂದು, ಹನ್ನೊಂದು ಎಂಟು, ಒಂಭತ್ತು, ನಾಲ್ಕು ಮೂರು, ಐದು, ಶನಿ ಮತ್ತು ಅಂಗಾರಕ ಸ್ಥಾನದಿಂದ ಎರಡು, ಒಂದು, ಹನ್ನೊಂದು, ಎಂಟು, ಒಂಭತ್ತು, ನಾಲ್ಕು, ಹತ್ತು ಏಳು, ಗುರುಸ್ಥಾನದಿಂದ ಹನ್ನೆರಡು, ಆರು, ಹನ್ನೊಂದು ಎಂಟು ಸೂರ್ಯನಿಂದ ಒಂಭತ್ತು ಹನ್ನೊಂದು, ಆರು, ಐದು, ಹನ್ನೆರಡು, ತನ್ನ ಸ್ಥಾನದಿಂದ ಒಂಭತ್ತು, ಹನ್ನೊಂದು, ಆರು, ಐದು, ಹನ್ನೆರಡು, ಒಂದು ಹತ್ತು, ಮೂರು, ಚಂದ್ರ ಸ್ಥಾನದಿಂದ ಆರು, ಎರಡು, ಹನ್ನೊಂದು, ಎಂಟು ನಾಲ್ಕು, ಹತ್ತು, ಲಗ್ನದಿಂದ ಆರು, ಎರಡು, ಹನ್ನೊಂದು, ಎಂಟು, ನಾಲ್ಕು, ಹತ್ತು ಒಂದು ಈರಾಶಿಗಳಲ್ಲಿ ಶುಭ ಫಲಾದಿಗಳನ್ನು ನೀಡುವರು.

ಗುರುವು ಕುಜಸ್ಥಾನದಿಂದ ಹತ್ತು, ಎರಡು, ಒಂದು, ಎಂಟು, ಏಳು, ಹನ್ನೊಂದು, ನಾಲ್ಕು, ತನ್ನ ಸ್ಥಾನದಿಂದ ಹತ್ತು ಎರಡು, ಒಂದು, ಎಂಟು, ಏಳು, ಹನ್ನೊಂದು ನಾಲ್ಕು ಮೂರು, ಸೂರ್ಯನಿಂದ ಹತ್ತು ಎರಡು, ಒಂದು, ಎಂಟು, ಏಳು, ಹನ್ನೊಂದು, ನಾಲ್ಕು, ಮೂರು, ಒಂಭತ್ತು, ಶುಕ್ರನಿಂದ ಐದು, ಎರಡು, ಒಂಭತ್ತು ಹತ್ತು ಹನ್ನೊಂದು, ಆರು ಚಂದ್ರನಿಂದ ಏಳು, ಹನ್ನೊಂದು ಎರಡು, ಒಂಭತ್ತು, ಐದು, ಶನಿಯಿಂದ ಮೂರು, ಆರು, ಐದು, ಹನ್ನೆರಡು ಬುಧನಿಂದ ಹತ್ತು, ಐದು, ಆರು, ಎರಡು, ನಾಲ್ಕು, ಹನ್ನೊಂದು, ಒಂದು, ಒಂಭತ್ತು ಲಗ್ನದಿಂದ ಹತ್ತು, ಐದು, ಆರು, ಎರಡು, ನಾಲ್ಕು ಹನ್ನೊಂದು, ಒಂಭತ್ತು ಒಂದು, ಏಳು, ಈ ರಾಶಿಗಳಲ್ಲಿ ಶುಭ ಫಲ ಇರುತ್ತದೆ.

ಶುಕ್ರನು ಲಗ್ನದಿಂದ ಒಂದು, ಎರಡು, ಮೂರು, ನಾಲ್ಕು, ಐದು, ಹನ್ನೊಂದು, ಎಂಟು, ಒಂಭತ್ತು, ಚಂದ್ರನಿಂದ ಒಂದು, ಎರಡು, ಮೂರು, ನಾಲ್ಕು, ಐದು, ಹನ್ನೊಂದು, ಎಂಟು ಒಂಭತ್ತು, ಹನ್ನೆರಡು, ತನ್ನ ಸ್ಥಾನದಿಂದ ಒಂದು, ಎರಡು, ಮೂರು, ನಾಲ್ಕು, ಐದು, ಹನ್ನೊಂದು, ಎಂಟು, ಒಂಭತ್ತು ಹತ್ತು ಶನಿಯಿಂದ ನಾಲ್ಕು, ಮೂರು, ಐದು, ಒಂಭತ್ತು, ಹತ್ತು ಎಂಟು, ಹನ್ನೊಂದು, ಸೂರ್ಯನಿಂದ ಹನ್ನೊಂದು ಹನ್ನೆರಡು, ಗುರುವಿನಿಂದ ಒಂಭತ್ತು, ಹತ್ತು, ಹನ್ನೊಂದು, ಎಂಟು, ಐದು, ಬುಧನಿಂದ ಐದು, ಮೂರು, ಹನ್ನೊಂದು, ಒಂಭತ್ತು, ಕುಜನಿಂದ ಮೂರು, ಒಂಭತ್ತು. ಆರು, ಐದು, ಹನ್ನೊಂದು, ಹನ್ನೆರಡು, ಈ ಸ್ಥಾನಗಳಲ್ಲಿ ಶುಭ ಫಲ ನೀಡುತ್ತಾನೆ.

ಶನಿಯು ತನ್ನ ಸ್ಥಾನದಿಂದ ಐದು, ಮೂರು, ಹನ್ನೊಂದು, ಆರು, ಕುಜನಿಂದ ಮೂರು, ಐದು, ಹನ್ನೊಂದು ಆರು, ಹತ್ತು ಹನ್ನೆರಡು, ಸೂರ್ಯನಿಂದ ಒಂದು, ನಾಲ್ಕು ಏಳು, ಹತ್ತು ಹನ್ನೊಂದು, ಎಂಟು, ಎರಡು ಲಗ್ನದಿಂದ ಮೂರು, ಆರು ಹತ್ತು ಹನ್ನೊಂದು, ಒಂದು, ನಾಲ್ಕು, ಬುಧನಿಂದ ಒಂಭತ್ತು, ಹನ್ನೊಂದು, ಆರು, ಹತ್ತು, ಹನ್ನೆರಡು, ಎಂಟು, ಚಂದ್ರನಿಂದ ಮೂರು, ಆರು, ಹನ್ನೊಂದು, ಶುಕ್ರನಿಂದ ಆರು, ಹನ್ನೆರಡು, ಹನ್ನೊಂದು, ಗುರುವಿನಿಂದ ಹನ್ನೊಂದು, ಹನ್ನೆರಡು, ಐದು, ಆರು ಈ ರಾಶಿಗಳಲ್ಲಿ ಶುಭ ಫಲ. ಮೇಲೆ ವಿವರಿಸಿದ ಶುಭಪ್ರದ ರಾಶಿಗಳಲ್ಲಿ ಬಿಂದುಗಳನ್ನೂ ಉಳಿದ ರೇಖೆಗಳನ್ನು ಹಾಕಬೇಕು.

ಈ ಅಷ್ಟಕವರ್ಗದಿಂದ ಬಿಂದು ಅಧಿಕವಾಗಿ ಕಂಡುಬಂದ ರಾಶಿಗಳಲ್ಲಿ ಸಂಚರಿಸುವ ಗ್ರಹವು ಧನಪ್ರಾಪ್ತಿ. ಸುಖ, ಇಷ್ಟಾರ್ಥಸಿದ್ಧಿ, ಮುಂತಾದ ಶುಭಫಲ ನೀಡುವವು, ರೇಖಾಧಿಕವಾದ ರಾಶಿಗಳಲ್ಲಿ ಸಂಚರಿಸುವ ಗ್ರಹವು ಕಷ್ಟ, ಅರ್ಥಹಾನಿ, ಕ್ಲೇಶ, ಮುಂತಾದವುಗಳನ್ನು ಕೊಡುವದು. ಈಗ ಕರ್ಮಾಜೀವ ಪ್ರಕಾರವೆಂದರೇನೆಂಬುದನ್ನು ವಿವರಿಸುತ್ತೇನೆ - ಲಗ್ನದಿಂದ ಹತ್ತನೇ ಸ್ಥಾನವೇ ಕರ್ಮ ಸ್ಥಾನವೆಂದು ಕರೆಯುತ್ತಾರೆ. ಮಾನವನ ಜೀವನದ ಆಗು-ಹೋಗು ಪ್ರಗತಿ - ವಿಗತಿಗಳನ್ನು ಗ್ರಹಸ್ಥಿತಿಯಿಂದ ವಿವರಿಸಲು ಸಾಧ್ಯ. ಲಗ್ನ ಅಥವಾ ಚಂದ್ರರಾಶಿ. ಇವುಗಳಿಂದ ದಶಮ ಸ್ಥಾನದಲ್ಲಿರುವ ಗ್ರಹವು ಧನ ಪ್ರದಾಯಕ. ಅಲ್ಲಿ ಬೇರಾವ ಗ್ರಹವು ಇಲ್ಲದಿದ್ದರೆ ಲಗ್ನ ಚಂದ್ರ ಸೂರ್ಯರಿಗೆ ದಶಮಾಧಿಪತಿಗಳು ಇರುವ ನವಾಂಶಧಿಪತಿಗಳು ಧನಪ್ರದರಾಗುತ್ತಾರೆ. ದಶಮ ಭಾಗದಲ್ಲಿರುವ ಸೂರ್ಯಾದಿ ಗ್ರಹಗಳು ಕ್ರಮದಿಂದ ತಂದೆ ತಾಯಿ, ಶತ್ರು, ಮಿತ್ರ, ಭಾತೃ, ಸ್ತ್ರೀ, ಸೇವಕ, ಇವರ ಮೂಲಕ ಧನವನ್ನು ಕೊಡಿಸುತ್ತಾರೆ. ಸೂರ್ಯಾಂಶದಲ್ಲಿದ್ದರೆ ಹುಲ್ಲು ಕಡ್ಡಿ, ಬಂಗಾರ, ಎಣ್ಣೆ, ಔಷಧ ಮುಂತಾದವುಗಳಿಂದ ಧನಪ್ರಾಪ್ತಿ. ಹಾಗೆಯೇ ಚಂದ್ರಾಂಶದಲ್ಲಿದ್ದರೆ ಕೃಷಿ, ಜಲಜವಸ್ತುಗಳು, ಸ್ತ್ರೀಯ ಆಶ್ರಯ ಇವುಗಳಿಂದ ಧನವು ಲಭಿಸುತ್ತದೆ. ಕುಜಾಂಶದಲ್ಲಿದ್ದರೆ ಧಾತುಗಳು, ಅಸ್ತ್ರಗಳು, ಸಾಹಸಗಳಿಂದ ಜೀವನ ನಡೆಸುವನು, ಬುಧಾಂಶದಲ್ಲಿ ಕಾವ್ಯ, ಶಿಲ್ಪಾದಿಗಳಿಂದಲೂ, ಗುರ್ವಂಶದಲ್ಲಿ ದೇವ, ದ್ವಿಜಾಶ್ರಯದಿಂದಲೂ ಶುಕ್ರಾಂಶದಲ್ಲಿ ಬೆಳ್ಳಿ, ಗೋವುಗಳು, ರತ್ನ ಇವುಗಳಿಂದಲೂ, ಶೂನ್ಯಾಂಶದಲ್ಲಿ ಹಿಂಸಾದಿಗಳು ನೀಚಾಶ್ರಯದಿಂದ ಜೀವನ ನಡೆಯುವದು. ಈಗ ರಾಜಯೋಗಗಳ ಬಗ್ಗೆ ವಿಚಾರ ವಿವರಿಸುತ್ತೇನೆ. ಕೇಳು,ಕುಜ, ಶನಿ, ಸೂರ್ಯ, ಗುರು ಈ ನಾಲ್ವರಲ್ಲಿ ಮೂವರು ಉಚ್ಚರಾಗಿದ್ದರೆ ಅದು ರಾಜಯೋಗವೆನಿಸುತ್ತದೆ. ಲಗ್ನವು ಸ್ವನವಾಂಶವಾಗಿದ್ದರೆ ಚಂದ್ರ ವರ್ಜಿತಗಳಾದ ನಾಲ್ಕು, ಐದು, ಆರು ಗ್ರಹಗಳಿಂದ ನೋಡಲ್ಪಟ್ಟದ್ದರೆ, ಪ್ರತ್ಯೇಕವಾಗಿ ಇಪ್ಪತ್ತೆರಡು ರಾಜಯೋಗಗಳು ಹುಟ್ಟುತ್ತವೆ. ಶನಿಯು ಕುಂಭದಲ್ಲಿಯೂ ವೃಷಭದಲ್ಲಿ ಚಂದ್ರನೂ, ಇದ್ದು, ಆ ರಾಶಿಗಳೇ ಲಗ್ನವಾಗಿರುವಾಗ ಬುಧ, ಗುರು, ಕುಜ ಇವರು ಮಿಥುನ ಸಿಂಹ ಮತ್ತು ವೃಶ್ಚಿಕ ರಾಶಿಗಳಲ್ಲಿರುವಾಗ ಹುಟ್ಟಿದವರು ರಾಜರಾಗುವರು. ಎಲ್ಲ ಗ್ರಹಗಳೂ ಮೂರು, ಹನ್ನೊಂದು, ಮತ್ತು ಲಗ್ನ ಈ ಮೂರು ರಾಶಿಯಲ್ಲಿದ್ದರೂ ರಾಜಯೋಗ ಆಗುವದಿಲ್ಲ. ಬುಧನು ವಿಧ್ಯಯುತನಾಗಿ ಶುಭ ಗ್ರಹಗಳಿಗೆಲ್ಲಾ ಬಲಿಷ್ಟರಾಗಿದ್ದು, ಎರಡು, ಒಂಭತ್ತು ಈ ಮನೆಗಳಲ್ಲಿಯೂ ಮೂರು, ಆರು, ಹತ್ತು, ಹನ್ನೊಂದನೆಯ ಉಪಚಯ ಸ್ಥಾನಗಳಲ್ಲಿಯೂ ಉಳಿದ ಗ್ರಹಗಳೆಲ್ಲ ಇದ್ದರೆ ರಾಜಯೋಗವೆನಿಸುತ್ತದೆ. ಶನಿ, ಚಂದ್ರ ಗುರುಗಳು ಹತ್ತು, ಹನ್ನೊಂದನೆಯ ಹನ್ನೆರಡನೆಯ ಭಾಗದಲ್ಲಿದ್ದು ಬುಧ, ಕುಜರು ದ್ವಿತೀಯದಲ್ಲಿಯೂ ಶುಕ್ರ ಸೂರ್ಯರು ಚತುರ್ಥದಲ್ಲಿಯೂ ಇದ್ದಾಗ ಜನಿಸಿದವನು ಧನಿಕನು ಅಥವಾ ರಾಜನಾಗುವನು. ವೃಷಭದಲ್ಲಿ ಚಂದ್ರನೂ, ಗುರು ಶನಿಗಳು ದ್ವಿತೀಯ ಷಷ್ಠಸ್ಥಾನ ಗಳಲ್ಲಿಯೂ ಉಳಿದವರು ಲಾಭಸ್ಥಾನದಲ್ಲಿಯೂ ಇದ್ದರೆ ಅದೂ ರಾಜಯೋಗವೇ ಸರಿ.

ನಾಲ್ಕನೇಯ ಸ್ಥಾನದಲ್ಲಿ ಗುರುವೂ ಹತ್ತರಲ್ಲಿ ರವಿ, ಚಂದ್ರರೂ, ಲಗ್ನದಲ್ಲಿ ಶನಿಯೂ ಇದ್ದರೆ ಅಥವಾ ಲಗ್ನದಲ್ಲಿ ಕುಜ ಶನಿಗಳು ಇದ್ದು, ಚಂದ್ರ ಗುರು ಶುಕ್ರ ರವಿ, ಬುಧ ಇವರು ಶುಭಸ್ಥಾನದಿಂದ ಶುಭಭಾವಗಳಲ್ಲಿದ್ದರೂ ಅದು ರಾಜಯೋಗವೆಂದು

ತಿಳಿಯಬೇಕು. ಈ ರಾಜಯೋಗವು ಯೋಗಕಾರಕವಾದ ಗ್ರಹಗಳ ದಶಾಭುಕ್ತಿ ಕಾಲಗಳಲ್ಲಿ ಸಂಭವಿಸುತ್ತದೆ. ಯೋಗವು ಪ್ರಬಲವಾಗಿರುವಾಗ ಗ್ರಹಗಳು ಶತ್ರುಕ್ಷೇತ್ರ ಗತವಾಗಿದ್ದರೆ ಮುಖಂಡನಾಗುತ್ತಾನೆ. ಇನ್ನು ಮುಂದೆ ನಾಭಸಯೋಗದ ಬಗ್ಗೆ ವಿವರಿಸುತ್ತೇನೆ, ಏಕಚಿತ್ತದಿಂದ ಕೇಳು. ಗ್ರಹಗಳು ಜನನಕಾಲದಲ್ಲಿ ಚಾರವಶದಿಂದ ಸೇರುವ ಯೋಗಗಳಿಗೆ ನಾಭಸಯೋಗ ಗಳೆಂದು ಕರೆಯುತ್ತಾರೆ. ಲಗ್ನಕ್ಕೆ ಹತ್ತಿರ ಇರುವ ಎರಡು ಕೇಂದ್ರಗಳಲ್ಲಿಯೇ ಎಲ್ಲ ಗ್ರಹಗಳೂ ಇದ್ದರೆ ಗದಯೋಗವೆನಿಸುವದು. ಎಲ್ಲ ಗ್ರಹಗಳೂ ಲಗ್ನ ಮತ್ತು ಸಪ್ತಮದಲ್ಲಿದ್ದರೆ ಶಕಟಯೋಗವೆನಿಸುವದು. ಗ್ರಹಗಳೆಲ್ಲ ದಶಮ, ಚತುರ್ಥಗಳಲ್ಲಿ ಇದ್ದರೆ ಆಗ ವಿಹಗಯೋಗ ಬರುತ್ತದೆ. ಗ್ರಹಗಳು ಒಂಭತ್ತು, ಐದು, ಒಂದು ಈ ರಾಶಿಗಳಲ್ಲಿ ಇದ್ದಾಗ ಆಗ ಶೃಂಗಾಟಕಯೋಗ ಒದಗುತ್ತದೆ. ಲಗ್ನವನ್ನು ಬಿಟ್ಟು ಎಲ್ಲ ಗ್ರಹಗಳೂ ತ್ರಿಕೋಣರಾಶಿಗಳಲ್ಲಿದ್ದರೆ ಅದಕ್ಕೆ ಹಲಯೋಗವೆನ್ನುತ್ತಾರೆ.

ಆದರಂತೆ ಅಂದರೆ ಶಕಟಯೋಗದಂತೆ ಶುಭಗ್ರಹಗಳೂ, ವಿಹಗಯೋಗದಂತೆ ಪಾಪ ಗ್ರಹಗಳೂ ಮಿಲಿತವಾಗಿದ್ದರೆ ವಜ್ರಯೋಗವೆಂದೂ, ಇದಕ್ಕೆ ತದ್ವಿರುದ್ಧವಾದಾಗ ಯುವ ಯೋಗವೆಂದೂ ಅನ್ನುತ್ತಾರೆ. ನಾಲ್ಕು ಕೇಂದ್ರಗಳಲ್ಲಿಯೂ ಶುಭ ಮತ್ತು ಪಾಪಗ್ರಹಗಳು ಮಿಶ್ರವಾಗಿ ಸೇರಿದ್ದರೆ ಕಲಮಯೋಗವೆಂತಲೂ, ಆದೇ ಗ್ರಹಗಳು ಕೇಂದ್ರಾತಿರಿಕ್ತ ಸ್ಥಳಗಳಲ್ಲಿ ಸೇರಿದ್ದರೆ ವಾಪೀಯೋಗವೆಂದೂ ಕರೆಯುತ್ತಾರೆ. ಹಾಗೆಯೇ ಆ ಗ್ರಹಗಳೇ ಲಗ್ನ, ದ್ವಿತೀಯ, ತೃತೀಯ ಮತ್ತು ಚತುರ್ಥ ಸ್ಥಾನಗಳಲಿದ್ದರೆ ಶರಯೋಗ ಅಥವಾ ಇಷು ಯೋಗವೆನ್ನುತ್ತಾರೆ. ಏಳು, ಎಂಟು, ಒಂಭತ್ತು ಮತ್ತು ಹತ್ತು ಈ ಮನೆಗಳಲ್ಲಿ ಎಲ್ಲ ಗ್ರಹ ಗಳಿದ್ದರೆ ಶಕ್ತಿಯೋಗವೆನ್ನುತ್ತಾರೆ. ಹತ್ತು ಹನ್ನೊಂದು ಮತ್ತು ಹನ್ನೆರಡು, ಮತ್ತು ಒಂದು ಈ ರಾಶಿಗಳಲ್ಲಿ ಎಲ್ಲ ಗ್ರಹಗಳೂ ಇದ್ದರೆ ಅದನ್ನು ದಂತಯೋಗವೆನ್ನುತ್ತಾರೆ. ಒಂದೊಂದು ಕೇಂದ್ರದಿಂದಲೂ ಕ್ರಮವಾಗಿ ಏಳು ರಾಶಿಗಳಲ್ಲಿ ಎಲ್ಲ ಗ್ರಹಗಳೂ ಇದ್ದಾಗ ನಾಲ್ಕು ಕೇಂದ್ರಗಳಿಂದಲೂ ಸೌಕ, ಕೂಟ, ಛತ್ರ, ಚಾಪ ಎಂಬ ನಾಲ್ಕು ಯೋಗಗಳು ಹುಟ್ಟುತ್ತವೆ.

ಲಗ್ನದಿಂದ ದ್ವಿತೀಯಸ್ಥಾನದಿಂದ ಒಂದು ಮನೆಯನ್ನು ಬಿಟ್ಟು ಒಂದು ಮನೆಯಲ್ಲಿ ಒಟ್ಟು ಆರು ರಾಶಿಗಳಲ್ಲಿ ಏಳು ಗ್ರಹಗಳಿದ್ದರೆ ಅದನ್ನು ಸಮುದ್ರ ಯೋಗವೆಂದು ಕರೆಯುತ್ತಾರೆ. ಸೂರ್ಯಾದಿ ಸಪ್ತಗ್ರಹಗಳು ಒಬ್ಬರ ಜೊತೆಗೆ ಒಬ್ಬರು ಸೇರದೇ ಸಾಲಾಗಿದ್ದರೆ ವೀಣಾಯೋಗವೆಂದೂ, ಆರು ರಾಶಿಗಳಲ್ಲಿ ಏಳುಗ್ರಹಗಳಿದ್ದರೆ ದಾಮನೀಯೋಗ ವೆಂದೂ, ಐದು ರಾಶಿಗಳಲ್ಲಿದ್ದರೆ ಪಾಶಯೋಗವೆಂದೂ, ಅದೇ ಏಳು ಗ್ರಹಗಳು ನಾಲ್ಕೇ ರಾಶಿಗಳಲ್ಲಿದ್ದರೆ ಕೇದಾರಯೋಗವೆಂದೂ, ಮೂರು ರಾಶಿಗಳಲ್ಲೆ ಎಲ್ಲ ಗ್ರಹಗಳಿದ್ದರೆ ಯುಗಯೋಗವೆಂದೂ, ಒಂದೇ ರಾಶಿಯಲ್ಲಿ ಏಳು ಗ್ರಹಗಳು ಇದ್ದರೆ ಗೋಳಯೋಗವೆಂದೂ, ಕರೆಯಲ್ಪಡುತ್ತದೆ.

ಇನ್ನು ಸ್ಥಿರ ರಾಶಿಗಳಲ್ಲೆ ಎಲ್ಲ ಗ್ರಹಗಳು ಇದ್ದರೆ ಮುಸಲಯೋಗವೆನಿಸುವದು. ಅದೇ ಗ್ರಹಗಳು ಚರರಾಶಿಗಳಲ್ಲಿದ್ದರೆ ರಜ್ಜುಯೋಗವಾಗುತ್ತದೆ. ಸಪ್ತಗ್ರಹಾದಿಗಳು ದ್ವಿಸ್ವಭಾವರಾಶಿಯಲ್ಲಿದ್ದರೆ ನಲಯೋಗವೆನಿಸುವದು. ಕೇಂದ್ರಸ್ಥಾನದಲ್ಲಿ ಮಾತ್ರ ಗ್ರಹಗಳೆಲ್ಲಾ ಇದ್ದರೆ ಆಗ ಮೂಲಾಯೋಗವಾಗುತ್ತದೆ. ಆದರೆ ಪಾಪಗ್ರಹಗಳು ಕೇಂದ್ರ ಸ್ಥಾನದಲ್ಲಿದ್ದರೆ ಅದನ್ನು ಸರ್ಪಯೋಗವೆಂದು ಕರೆಯುತ್ತಾರೆ. ಪ್ರತಿಯೊಂದು ಯೋಗಗಳಲ್ಲಿ ಜನಿಸಿದವರ ಗುಣಸ್ವಭಾವಗಳ, ಭಾಗ್ಯ, ಭೋಗಾದಿಗಳ ಅನುಭವ ಕಥನ

ನಿರೂಪಿಸುತ್ತೇನೆ. ಕೇಳು. ರಜ್ಜು ಯೋಗದಲ್ಲಿ ಹುಟ್ಟಿದವನು ಸ್ಥಿರ ಬುದ್ಧಿಯುಳ್ಳವನಿದ್ದು, ಅಂಗಹೀನನಾಗಿರುವನು ಸರ್ಪಯೋಗದಲ್ಲಿ ಹುಟ್ಟಿದವನು. ತುಂಬಾ ಅಸೂಯಾಪರ ನಾಗುವನು. ಮುಸಲಯೋಗದಲ್ಲಿ ಜನಿಸಿದವನು ಧನವಂತ ಹಾಗೂ ಮರ್‍ಯಾದೆಯುಳ್ಳ ವನಾಗುತ್ತಾನೆ. ನಲಯೋಗದಲ್ಲಿ ಹುಟ್ಟಿದವನು ಭೋಗದಿಂದ ಸುಖಪಡುವನು. ಕೇದಾರಯೋಗದಲ್ಲಿ ಜನಿಸಿದವನು ಕೃಷಿಯಿಂದ ಜೀವಿಸುತ್ತಾನೆ. ಶೂಲಯೋಗದಲ್ಲಿ ಹುಟ್ಟಿದವನು ಶೂರಾಧಿಶೂರನಾಗುತ್ತಾನೆ. ಯುಗಯೋಗದಲ್ಲಿ ಜನಿಸಿದವನು ನಪುಂಸಕನಾಗುವನು. ಗೋಲಯೋಗದಲ್ಲಿ ಹುಟ್ಟಿದವನು ದರಿದ್ರನೂ, ಕೊಳಕೂ ಆಗಿರುತ್ತಾನೆ. ಚಕ್ರಯೋಗದಲ್ಲಿ ಜನಿಸಿದವು ರಾಜವಂದ್ಯನಾಗುತ್ತಾನೆ. ಸಮುದ್ರ ಯೋಗದಲ್ಲಿ ಹುಟ್ಟಿದವನು ರಾಜಭೋಗ ಪಡೆಯುತ್ತಾನೆ. ಅರ್ಧಚಂದ್ರಯೋಗದಲ್ಲಿ ಜನಿಸಿದವನು ಸುಂದರಕಾಯ ಪಡೆಯುವನು. ಚಾಮರಯೋಗದಲ್ಲಿ ಹುಟ್ಟುವವನು ಸುಖಿಯೂ, ಶೂರನೂ ಆಗುತ್ತಾನೆ. ಛತ್ರಯೋಗ ಸಂಜಾತನು ಪರೋಪಕಾರಿಯಾಗಿ ಬಾಳುವನು. ಕೂಟಯೋಗದಲ್ಲಿ ಹುಟ್ಟಿದವನು ಅಸತ್ಯವಾದಿಯಾಗುತ್ತಾನೆ. ಸೌಕಾ ಯೋಗದಲ್ಲಿ ಹುಟ್ಟಿದವನು ಕೀರ್ತಿವಂತನಾಗುತ್ತಾನೆ. ಯೂಥ ಯೋಗದಲ್ಲಿ ಹುಟ್ಟಿದವನು ತ್ಯಾಗಿ, ಶರಯೋಗದಲ್ಲಿ ಜನಿಸಿದವನು ಹಿಂಸಾಚಾರಿಗಳಿಗೆ ರಾಜನಾಗುವನು. ಶಕ್ತಿಯೋಗವು ನೀಚನನ್ನಾಗಿಯೂ, ಆಲಸಿಯನ್ನಾಗಿಯೂ ಮಾಡುತ್ತದೆ. ದಂಡಯೋಗ ವುಳ್ಳವನು ದಟ್ಟದರಿದ್ರನಾಗಿ ಪ್ರೇಯಸಿಯಿಂದ ವಿರಹ ಹೊಂದುವನು.

ಸೂರ್ಯನನ್ನು ಚಂದ್ರನಿಗೆ ಬಿಟ್ಟು ದ್ವಾದಶಗಳಲ್ಲಿರುವ ಕುಜಾದಿ ಪಂಚಗ್ರಹಗಳಿಂದ ಸುನಾಫಾದಿ ಯೋಗಗಳು ಹುಟ್ಟುತ್ತವೆ. ಚಂದ್ರನಿಗೆ ದ್ವಿತೀಯದಲ್ಲಿ ತಾರಾಗ್ರಹವಿದ್ದರೆ ಸುನಾಫಾ ಯೋಗ ಉಂಟಾಗುವದು. ದ್ವಾದಶದಲ್ಲಿ ತಾರಾಗ್ರಹವಿದ್ದರೆ ಅನಫಾಯೋಗ ಉಂಟಾಗುತ್ತದೆ. ದ್ವಿತೀಯ ಮತ್ತು ದ್ವಾದಶ ಎರಡೂ ಕಡೆಯಲ್ಲಿಯೂ ಅಂದರೆ - ದ್ವಿತೀಯ ದ್ವಾದಶ, ಮತ್ತು ದ್ವಿತೀಯ ದ್ವಾದಶ ಈ ರೀತಿ ಗ್ರಹಗಳಿಲ್ಲದಿದ್ದರೆ ಆಗ ಕೇಮದ್ರುಮಯೋಗ ಉಂಟಾಗುತ್ತದೆ. ಕೇಮದ್ರುಮ ಮತ್ತು ಸುನಫಾ ಯೋಗದಲ್ಲಿ ಜನಿಸಿದವ ತ್ಯಾಗಿ, ಭೋಗಿ ಅಲ್ಲದೆ ಸ್ವಯಾರ್ಜಿತ ದ್ರವ್ಯದಿಂದ ಜೀವಿಸುವವನೂ ಆಗುತ್ತಾನೆ. ಅನಫಾಯೋಗ ಸಂಜಾತನು ನಿರೋಗಿ ಹಾಗೂ ಚಾರಿತ್ರ್ಯವುಳ್ಳವನಾಗುತ್ತಾನೆ. ದುರಧುರಾಯೋಗದಲ್ಲಿ ಹುಟ್ಟಿದವನು ತ್ಯಾಗಿಯೂ ಸುಖಿಯೂ, ಧನಿಕನೂ, ದಾನಶೀಲನೂ ಆಗುತ್ತಾನೆ. ಕೇಮದ್ರುಮ ಯೋಗದಲ್ಲಿ ಹುಟ್ಟಿದವನು ದರಿದ್ರ ಹಾಗೂ ಮಲಿನತೆಯುಳ್ಳವನಾಗುತ್ತಾನೆ.

ಜಾತಕದಲ್ಲಿ ಸೂರ್ಯನು ಚಂದ್ರನಿಂದ ಕೂಡಿದ್ದರೆ ಯಂತ್ರ ಮತ್ತು ಕಲ್ಲು ಕೆಲಸಗಳಲ್ಲಿ ಅಭಿರುಚಿ ಹೊಂದುತ್ತಾನೆ. ಕುಜನಿದ್ದರೆ ಪಾಪಿಷ್ಠ, ಬುಧನಿದ್ದರೆ ನಿಪುಣ, ಗುರುವು ಕೂಡಿದ್ದರೆ (ಸೂರ್ಯನೊಂದಿಗೆ) ಕ್ರೂರನಾಗುತ್ತಾನೆ. ಶುಕ್ರಸಹಿತನಾದ ಸೂರ್ಯನು ಶಸ್ತ್ರಾಗಾರ ರಕ್ಷಕನನ್ನಾಗಿಯೂ, ಶನಿಸಹಿತವಾಗಿದ್ದಲ್ಲಿ ಧಾತು ಕುಶಲಿಯನ್ನಾಗಿ ಮಣ್ಣಿನ ಕೆಲಸದಲ್ಲಿ ಅಭಿರುಚಿ ಉಳ್ಳವನನ್ನಾಗಿ ಮಾಡುವನು. ಚಂದ್ರನು ಕುಜ ಸಂಬಂಧಿಯಾಗಿದ್ದರೆ ಅಡವು ಇಡುವ ವ್ಯವಹಾರ, ಸ್ತ್ರೀ ವಿಕ್ರಯಗಳಲ್ಲಿ ತೊಡಗುವನು, ಬುಧಯುಕ್ತ ಚಂದ್ರನಿದ್ದರೆ ಪ್ರಿಯವಾದಿಯಾಗುವನು. ಗುರುಯುಕ್ತ ಚಂದ್ರನಿದ್ದರೆ ಶತ್ರು ಸಂಹಾರಕನಾಗುತ್ತಾನೆ. ಹಾಗೂ ಕುಲಕ್ಕೆ ತಿಲಕಪ್ರಾಯನಾಗುತ್ತಾನೆ. ಶುಕ್ರನೊಡನೆ ಚಂದ್ರನಿದ್ದರೆ ನೇಕಾರವಿದ್ಯೆಯಲ್ಲಿ ಪಾರಂಗತನಾಗುತ್ತಾನೆ. ಜಾತಕನು ಶನಿಯೊಡನಿರುವ ಚಂದ್ರನಿಂದ ಎರಡನೆಯ ಹೆಂಡತಿಯ

ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಾಗುತ್ತಾನೆ. (ಪುನರ್ಭೂಸುತ) ಕುಜನು ಬುಧಯುಕ್ತನಾದರೆ ವರ್ತಕ, ಹಾಗೂ ಮಲ್ಲಯುದ್ಧ ವಿಶಾರದನೆನಿಸುತ್ತಾನೆ. ಗುರುಯುಕ್ತನಾಗಿದ್ದರೆ. ಮುಖಂಡನಾಗುವನು. ಶುಕ್ರಸಹಿತ ನಾದರೆ ಜೂಜಾಟದಲ್ಲಿ ವ್ಯಸನಿಯಾಗುವನು. ಶನಿಸಂಬಂಧಿಸಿದರೆ ಅಸತ್ಯವಾದಿ ಯಾಗುವನು. ಗುರುವು ಶುಕ್ರಯುತನಾದರೆ ವಿದ್ವಾಂಸ, ಶನಿಸಹಿತನಾದರೆ ಪವಾಡಪುರುಷ ನಾಗುವನು. ಶುಕ್ರನು ಶನಿಯಿಂದ ಕೂಡಿದ್ದರೆ ಭೂಮಿ ಅಧಿಕಾರ ಧನಗಳಿಂದ ಗಣ್ಯನಾಗುವನು. ಒಂದೇ ರಾಶಿಯಲ್ಲಿ ಬಲಿಷ್ಠರಾದ ನಾಲ್ಕು, ಐದು, ಆರು, ಏಳು, ಈ ಸಂಖ್ಯೆಯ ಗ್ರಹಗಳು ಸೇರಿರುವದರಿಂದ ಜಾತಕನು ಸನ್ಯಾಸಿ ಯಾಗುವನೆಂದು ತಿಳಿಯಬೇಕು. ಅಲ್ಲದೆ ಅತಿ ಬಲಿಷ್ಠರಾದ ಕುಜ, ಬುಧ, ಗುರು, ಚಂದ್ರ, ಶುಕ್ರ, ಶನಿ ಈ ಗ್ರಹಗಳಿಂದ ಕ್ರಮವಾಗಿ, ಬೌದ್ಧ ದೀಕ್ಷೆ, ವೈಷ್ಣವ ದೀಕ್ಷೆ, ಸನ್ಯಾಸ, ಶೈವ ದೀಕ್ಷೆ ನಗ್ನ ದೀಕ್ಷೆ,ವಾನಪ್ರಸ್ಥ ದೀಕ್ಷೆ ಎಂಬ ಪ್ರವ್ರಜ್ಯಾ ಯೋಗಗಳು ಲಭಿಸುತ್ತವೆ. ಆದರೆ ಈ ಗ್ರಹಗಳು ದುರ್ಬಲರಾದಾಗ ಸನ್ಯಾಸವು ಚ್ಯುತಿ ಹೊಂದುವದು, ಮೇಲೆ ಹೇಳಿದ ಗ್ರಹಗಳು ಅಸ್ತವಾಗಿದ್ದರೆ, ಅವರು ದೀಕ್ಷೆಯನ್ನು ಪಡೆಯದೆ ಆ ದೀಕ್ಷೆಯನ್ನು ಪಡೆದಿರುವವರ ಹತ್ತಿರ ವಿನಯದಿಂದ ಬಂದು ಸೇರುವರು. ಶನಿಯು ಲಗ್ನಾಧಿಪತಿಯನ್ನು ನೋಡಿದರೂ ಚಂದ್ರನು ಕುಜ ಅಥವಾ ಸೂರ್ಯರ ಅಂಶದಲ್ಲಿದ್ದು ಶನಿಯಿಂದ ನೋಡಲ್ಪಟ್ಟಿದ್ದರೂ ತಾನೇ ಸನ್ಯಾಸ ದೀಕ್ಷೆ ಹೊಂದುವರು.

ಇನ್ನು ಮುಂದೆ ನಕ್ಷತ್ರದಲ್ಲಿ ಜನಿಸಿದವರ ಫಲವನ್ನು ನಿರೂಪಣೆ ಮಾಡುವೆನು ಅಶ್ವಿನೀ ನಕ್ಷತ್ರದಲ್ಲಿ ಜನಿಸಿದವನು ಸುರೂಪಿಯೂ, ಅಲಂಕಾರ ಪ್ರಿಯನೂ ಆಗುವನು. ಭರಣೀ ನಕ್ಷತ್ರದಲ್ಲಿ ಜನಿಸಿದನು ದಕ್ಷನೂ, ಮತ್ತು ಸತ್ಯವಾದಿಯೂ ಆಗುವನು. ಕೃತ್ತಿಕಾನಕ್ಷತ್ರದಲ್ಲಿ ಜನಿಸಿದವನು ಭೋಗಾಭಿಲಾಷಿಯಾಗುವನು. ರೋಹಿಣಿ ನಕ್ಷತ್ರದಲ್ಲಿ ಹುಟ್ಟಿದವನು ಸ್ಥಿರಬುದ್ಧಿಯವನೂ, ಹಿತನುಡಿ ಆಡುವವನೂ ಆಗಿರುವನು. ಮೃಗಶಿರಾ ನಕ್ಷತ್ರದಲ್ಲಿ ಜನಿಸಿದವನು ಧನಿಕನೂ ಭೋಗಿಯೂ ಆಗುವನು. ಆರಿದ್ರಾ ನಕ್ಷತ್ರದಲ್ಲಿ ಹುಟ್ಟಿದವನು ಹಿಂಸಕನೂ, ಮೋಸಗಾರನೂ ಆಗುತ್ತಾನೆ.

ಪುನರ್ವಸು ನಕ್ಷತ್ರ ಸಂಜಾತನು ಇಂದ್ರಿಯ ನಿಗ್ರಹಿಯಾಗುವನು. ಪುಷ್ಯ ನಕ್ಷತ್ರದಲ್ಲಿ ಹುಟ್ಟಿದವನು ಕವಿಯೂ ಹಾಗೂ ಸುಖಿಯೂ ಆಗುವನು. ಅಲ್ಲದೆ ಅಶ್ಲೇಷಾ ನಕ್ಷತ್ರ ಸಂಜಾತನು ಧೂರ್ತನೂ ಮೋಸಗಾರನೂ ಆಗುವನು ಅಲ್ಲದೆ ಪಾಪಾತ್ಮನೂ ಸರ್ವ ಭಕ್ಷಕನೂ ಆಗುವನು. ಮಖ ನಕ್ಷತ್ರದಲ್ಲಿ ಹುಟ್ಟಿದವನು ಸೇವಕರು ದಾಸ ದಾಸಿಯರಿಂದ ಸೇವಿಸಲ್ಪಟ್ಟು ಭೋಗಾದಿಗಳನ್ನು ಹೊಂದುವನು. ಪುಬ್ಬಾ ನಕ್ಷತ್ರದಲ್ಲಿ ಜನಿಸಿದವನು ಪ್ರಿಯವಾದಿ, ದಾನಿ ಹಾಗೂ ಸೇವಾಭಾವನೆಯುಳ್ಳವನಾಗುವನು. ಉತ್ತರಾ ನಕ್ಷತ್ರದಲ್ಲಿ ಹುಟ್ಟಿದವನು ಸೌಭಾಗ್ಯಶಾಲಿಯಾಗಿಯೂ ವಿದ್ಯೆ ಸಂಪತ್ತುಗಳನ್ನು ಹೊಂದಿ ಸುಖಿಸುವನು. ಹಸ್ತಾ ನಕ್ಷತ್ರದಲ್ಲಿ ಹುಟ್ಟಿದವನು ಉತ್ಸಾಹಶೀಲನಾಗಿ ಒರಟಾಗಿರುವ ನಡೆ ನುಡಿ ಉಳ್ಳವನಾಗಿರುವನು ಮತ್ತು ಮದ್ಯಪಾನಿಯಾಗಿರುವನು. ಚಿತ್ತಾ ನಕ್ಷತ್ರದಲ್ಲಿ ಜನಿಸಿದವನು ಉತ್ತಮ ಕಣ್ಣುಳ್ಳವನಾಗಿರುವನು. ಸ್ವಾತಿ ನಕ್ಷತ್ರ ಸಂಜಾತನು ವಿನೀತನಾಗಿ ದಯಾಳುವಾಗಿ ಬಾಳುವನು. ಆದರೆ ಧರ್ಮದೇವರುಗಳಲ್ಲಿ ಶ್ರದ್ಧೆ ಇರುವದಿಲ್ಲ. ವಿಶಾಖೆಯಲ್ಲಿ ಹುಟ್ಟಿದವನು ಜಿಪುಣನಾಗಿಯೂ, ಪಟುವಾಗಿಯೂ ಕೋಪಿಷ್ಠನೂ ಆಗಿರುವನು. ಅನುರಾಧಾ ನಕ್ಷತ್ರದಲ್ಲಿ ಹುಟ್ಟಿದವನು ಧನಿಕ ಹಾಗೂ ದೇಶಾಂತರ ಗಮನ

ಮಾಡುವವನೂ ಆಗುವನು. ಜ್ಯೇಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು ಸದಾ ಸಂತೋಷಿ ಹಾಗೂ ಧರ್ಮಾತ್ಮನಾಗಿರುವನು. ಮೂಲಾ ನಕ್ಷತ್ರದಲ್ಲಿ ಹುಟ್ಟಿದವನು ಮಾನಯುಕ್ತನಾಗಿಯೂ ಸುಖಿಯೂ, ಧನಿಕನೂ ಆಗಿ ಬಾಳುವನು. ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು ಮಾನಶೀಲನಾಗಿ ಸುಖ ಸಂತೋಷಗಳನ್ನು ಹೊಂದುವನು. ಉತ್ತರಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು ನಮ್ರನೂ ಧಾರ್ಮಿಕ ಭಾವನಾಜೀವಿಯೂ ಆಗಿರುವನು. ಶ್ರವಣಾ ನಕ್ಷತ್ರದಲ್ಲಿ ಹುಟ್ಟಿದವನು ಧನಿಕನೂ, ಭೋಗಿಯೂ, ಖ್ಯಾತಿವಂತನೂ ಆಗುವನು. ಧನಿಷ್ಠಾ ನಕ್ಷತ್ರ ಸಂಜಾತನು ದಾನಿಯೂ ಶೂರನೂ ಆಗುವನು. ಶತಭಿಷಾನಕ್ಷತ್ರದಲ್ಲಿ ಹುಟ್ಟಿದವನು ಶತ್ರು ನಾಶಕನಾಗಿ ಹಾಗೂ ವ್ಯಸನಿಯಾಗಿ ಬದುಕುವನು. ಪೂರ್ವಾಭಾದ್ರಾ ನಕ್ಷತ್ರದಲ್ಲಿ ಹುಟ್ಟಿದವನು ವಾಚಾಳಿ ಮತ್ತು ಸುಂದರ ಹಾಗೂ ಸುಖಿ ಆಗುವನು. ಉತ್ತರಾಭಾದ್ರನಕ್ಷತ್ರದಲ್ಲಿ ಹುಟ್ಟಿದವನು ಶೂರನು ಧನಿಕನೂ ಆಗುವನು. ರೇವತಿ ನಕ್ಷತ್ರದಲ್ಲಿ ಹುಟ್ಟಿದವನು ಸೌಂದರ್ಯ ಶೌರ್ಯಗಳಿಂದಲೂ ಹಾಗೂ ಶುಚಿತ್ವದಿಂದಲೂ ಹೆಸರುವಾಸಿಯಾಗುವನು.

ಈಗ ಮೇಷಾದಿ ರಾಶಿಗಳಲ್ಲಿ ಚಂದ್ರನಿರುವಾಗ ಹುಟ್ಟಿದವನ ಲಕ್ಷಣ, ಗುಣ, ಸ್ವಭಾವ ಹಾಗೂ ಅವನು ಹೊಂದುವ ಫಲಾಫಲಗಳನ್ನು ವಿವರಿಸುತ್ತೇನೆ.

1. ಮೇಷ ರಾಶಿಯಲ್ಲಿ ಜನಿಸಿದವನು ಕಾಮುಕನೂ, ಶೂರನು ಮತ್ತು ಕೃತಜ್ಞಗುಣ ಉಳ್ಳವನೂ ಆಗುತ್ತಾನೆ.
2. ವೃಷಭದಲ್ಲಿ ಹುಟ್ಟಿದವನು ಸುಂದರನೂ, ತ್ಯಾಗಿ ಹಾಗೂ ಶಾಂತನಾಗುವನು.
3. ಮಿಥುನದಲ್ಲಿ ಹುಟ್ಟಿದವನು ಶಾಸ್ತ್ರಗಳಲ್ಲಿ ಹಾಗೂ ಸ್ತ್ರೀ, ದ್ಯೂತಾದಿಗಳಲ್ಲಿ ಆಸಕ್ತನಾಗುವನು.
4. ಕಟಕ ರಾಶಿಯಲ್ಲಿ ಜನಿಸಿದವನು ಕುಳ್ಳನಾಗಿದ್ದು ವಿಷಯಲೋಲುಪನಾಗುವನು.
5. ಸಿಂಹ ರಾಶಿಯಲ್ಲಿ ಜನಿಸಿದವನು ಸ್ತ್ರೀ ದ್ವೇಷಿಯಾಗಿದ್ದು, ಕೋಪಿಯೂ, ಶೂರನೂ ಮತ್ತು ಸುಖಿಯೂ ಆಗುವನು.
6. ಕನ್ಯಾ ರಾಶಿಯಲ್ಲಿ ಹುಟ್ಟಿದವನು ಧರ್ಮಾತ್ಮನೂ ಮೃದು ಸ್ವಭಾವದವನೂ ವಿದ್ವಾಂಸನೂ ಆಗುವನು.
7. ತುಲಾ ರಾಶಿಯಲ್ಲಿ ಹುಟ್ಟಿದವನು ಪ್ರಾಜ್ಞನೂ ದೀರ್ಘಾಕಾರನೂ ಮತ್ತು ಧನಿಕನೂ ಆಗುವನು.
8. ವೃಶ್ಚಿಕ ರಾಶಿಯಲ್ಲಿ ಹುಟ್ಟಿದವನು, ರೋಗಿಯೂ ಪೂಜ್ಯನೂ ಮತ್ತು ಸದಾ ಗಾಯಗಳುಳ್ಳವನು ಆಗುವನು.
9. ಧನುರಾಶಿಯಲ್ಲಿ ಹುಟ್ಟಿದವನು ಕವಿಯೂ, ಶಿಲ್ಪಿಯೂ ಧನಿಕನೂ ಆಗುವನು.
10. ಮಕರರಾಶಿಯಲ್ಲಿ ಹುಟ್ಟಿದವನು, ಸೋಮಾರಿಯೂ ಮತ್ತು ಸದಾ ದೇಶ ಸಂಚಾರದಲ್ಲಿಯೇ ಅಭಿರುಚಿಯುಳ್ಳವನು ಆಗುತ್ತಾನೆ.
11. ಕುಂಭ ರಾಶಿಯಲ್ಲಿ ಹುಟ್ಟಿದವನು, ಪರಸ್ತ್ರೀ, ಪರಧನ ಇವುಗಳನ್ನು ಅಪಹರಿಸುವವನಾಗು.
12. ಮೀನ ರಾಶಿಯಲ್ಲಿ ಹುಟ್ಟಿದವನು ಶತ್ರುಗಳಿಂದ ತಿರಸ್ಕೃತನಾಗಿ ಸ್ತ್ರೀ ವಿವರ್ಜಿತ ನಾಗುವನು.

ಈವರೆಗೆ ಹೇಳಿದ ಫಲಗಳು ಜನ್ಮ ಕಾಲದಲ್ಲಿ ಚಂದ್ರನಿರುವ ರಾಶಿಯೂ ರಾಶ್ಯಧಿಪತಿಯೂ ಮತ್ತು ಚಂದ್ರನೂ ಬಲಿಷ್ಠರಾಗಿದ್ದರೆ ಮಾತ್ರ ಪೂರ್ತಿಯಾಗಿ ಸಿದ್ಧಿಸುವದೆಂದು ತಿಳಿಯಬೇಕು. ಒಂದು ವೇಳೆ ರಾಶ್ಯಧಿಪತಿಯು ದುರ್ಬಲನಾಗಿದ್ದರೆ ವಿರುದ್ಧವಾದ ಫಲಗಳು ಲಭಿಸುವವು.

ಸೂರ್ಯನು ಮೇಷಾದಿಯಾದ ದ್ವಾದಶರಾಶಿಗಳಲ್ಲಿದ್ದರೆ ಜಾತಕನು ಕ್ರಮವಾಗಿ ಖ್ಯಾತಿಯುಳ್ಳವನು, ಸ್ತ್ರೀದ್ವೇಷಿಯು, ಧನಿಕನು, ಕ್ರೂರನು, ಅಜ್ಞ ಅಥವಾ ದಡ್ಡನು, ಕವಿಯು, ವೀರನು, ಪೂಜ್ಯನು, ನಿಪುಣನು, ದರಿದ್ರನು, ಮತ್ತು ಸ್ನೇಹಿತರಿಲ್ಲದವನು ಆಗುವನು. ಕುಜನು ಸಿಂಹದಲ್ಲಿದ್ದರೆ ಜಾತಕನು ದರಿದ್ರನಾಗುವನು. ಕುಜನು ಕಟಕ ದಲ್ಲಿದ್ದರೆ, ಧನಿಕನಾಗುವನು. ಮೇಷ. ವೃಶ್ಚಿಕಗಳಲ್ಲಿ ಕುಜನಿದ್ದರೆ ಶ್ರೀಮಂತನಾಗುವನು. ಮಿಥುನ ಕನ್ಯಾರಾಶಿಗಳಲ್ಲಿದ್ದರೆ ಕೃತಜ್ಞನೆನಿಸುವನು. ಇದೇ ಕುಜನು ಧನುಸ್ಸು ಮೀನ ರಾಶಿಗಳಲ್ಲಿ ಇದ್ದರೆ ತುಂಬಾ ಪ್ರಖ್ಯಾತಿ ಹೊಂದುವನು. ಕುಜನು ತುಲಾ ವೃಷಭ ರಾಶಿಗಳಲ್ಲಿದ್ದರೆ ಪರದಾರಾಸಕ್ತನಾಗುವನು. ಕುಜನು ಮಕರದಲ್ಲಿದ್ದರೆ ಹೆಚ್ಚು ಮಕ್ಕಳು ಮತ್ತು ಐಶ್ವರ್ಯ ಇವುಗಳು ಉಂಟಾಗುವವು. ಕುಂಭ ರಾಶಿಯಲ್ಲಿ ಕುಜನಿದ್ದರೆ ದುಃಖಿಯು, ಅನೃತವಾದಿಯು ಆಗುವನು. ಬುಧನು ಸೂರ್ಯನ ಮನೆಯಲ್ಲಿದ್ದರೆ ಗೌರವ, ಧನುಗಳುಳ್ಳನಾಗಿರುವನು. ಬುಧನು ಚಂದ್ರನ ಮನೆಯಲ್ಲಿದ್ದರೆ ಸ್ತ್ರೀ ಸುವರ್ಣ ಸಂತಾನಗಳಿಂದ ಸುಖಿಸುವನು. ಬುಧನು ಕುಜನ ಮನೆಯಲ್ಲಿದ್ದರೆ ಜಾತಕನು ಸೇನಾಧಿಪತಿ ಆಗುವನು.

ಬುಧನು ಗುರುವಿನ ಮನೆಯಲ್ಲಿದ್ದರೆ ಸ್ತ್ರೀ, ಅರ್ಥ, ಸಂತಾನ ಇವರಿಂದ ಕೂಡಿರುವನು. ಶುಕ್ರನ ರಾಶಿಯಲ್ಲಿ ಬುಧನಿದ್ದರೆ ದಕ್ಷನೂ ಒಡೆಯನೂ ಆಗಿರುವನು. ಬುಧನು ಶನಿಗ್ರಹದಲ್ಲಿದ್ದರೆ ಸೇವಕರಿಗೆ ಒಡೆಯನಾಗಿರುವನು. ಗುರುವು ಸೂರ್ಯನ ರಾಶಿಯಲ್ಲಿದ್ದರೆ ಮಂಡಲಾಧಿಪತಿಯಾಗುವನು. ಚಂದ್ರನ ರಾಶಿಯಲ್ಲಿದ್ದರೆ ಅರ್ಥ, ಸೌಖ್ಯ, ಇವುಗಳಿಂದ ಕೂಡಿರುವನು. ಕುಜನ ಮನೆಯಲ್ಲಿದ್ದರೆ ಸುವರ್ಣಾಧಿಪತಿಯಾಗುವನು. ಬುಧನ ಮನೆಯಲ್ಲಿದ್ದರೆ ಸ್ತ್ರೀವಿತ್ತವನ್ನು ಹೊಂದುವನು. ಶುಕ್ರನ ಮನೆಯಲ್ಲಿದ್ದರೆ ಶೋಕಹೀನವಾಗುವನು. ಶನಿಯ ಮನೆಯಲ್ಲಿದ್ದರೆ ಬಂಧುದ್ವೇಷಿಯೂ ಮತ್ತು ಪಾಪಿಷ್ಠನೂ ಆಗುವನು. ಶುಕ್ರನು ಸೂರ್ಯನ ರಾಶಿಯಲ್ಲಿದ್ದರೆ ಅರ್ಥಪತಿಯಾಗುವನು. ಚಂದ್ರನ ಮನೆಯಲ್ಲಿದ್ದರೆ ಪ್ರಾಜ್ಞನಾಗುವನು. ಕುಜನ ಮನೆಯಲ್ಲಿದ್ದರೆ ಸುಖ ಮತ್ತು ದುಃಖಗಳನ್ನು ಸಮವಾಗಿ ಹೊಂದುವನು. ಖ್ಯಾತಿಶೀಲನು ಆಗುವನು. ಬುಧನ ಮನೆಯಲ್ಲಿದ್ದರೆ ಸ್ತ್ರೀಯರಿಂದ ಜಿತನಾಗುವನು. ಗುರುವಿನ ಮನೆಯಲ್ಲಿದ್ದರೆ ಅಂಗಹೀನರಿಂದ ದ್ರವ್ಯವನ್ನು ಗಳಿಸುತ್ತಾನೆ. ಶನಿಯ ಮನೆಯಲ್ಲಿದ್ದರೆ ಸ್ನೇಹದಿಂದ ಸೌಖ್ಯವನ್ನು ಪಡೆಯುವನು. ಶನಿಯು ಸೂರ್ಯನ ರಾಶಿಯಲ್ಲಿದ್ದರೆ ಅಂಗಹೀನರಿಂದ ಧನ ಪ್ರಾಪ್ತಿಯಾಗುವದು. ಚಂದ್ರನ ರಾಶಿಯಲ್ಲಿದ್ದರೆ ಅಷ್ಟಪುತ್ರ ಪ್ರಾಪ್ತಿ ಉಂಟೆಂದು ತಿಳಿಯಬೇಕು. ಕುಜನ ಮನೆಯಲ್ಲಿದ್ದರೆ ಯಾವಾಗಲೂ ಹೆಚ್ಚು ಮಂದಿ ಸ್ನೇಹಿತರಿಂದ ಕೂಡಿರುವನು. ಬುಧನ ಮನೆಯಲ್ಲಿದ್ದರೆ ಸುಖಿಯಾಗಿರುವನು. ಗುರುವಿನ ಮನೆಯಲ್ಲಿದ್ದರೆ ಸತ್ಪುತ್ರರು, ಸತೀ ಸ್ತ್ರೀ ಮತ್ತು ಧನ ಇವುಗಳಿಂದ ಯುಕ್ತನಾಗುವನು. ಶುಕ್ರನ ಮನೆಯಲ್ಲಿದ್ದರೆ ರಾಜ ಸದೃಶನಾಗುವನು. ಮೇಷ ಲಗ್ನವಾಗಲಿ, ರಾಶಿಯಾಗಲಿ, ಕುಜಾದಿ ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಜಾತಕನು ರಾಜ, ವಿದ್ವಾಂಸ, ರಾಜಸದೃಶ ಗುಣವಂತ, ಕಳ್ಳ ದರಿದ್ರ ಇವರಂತೆ ಆಗುವನು, ವೃಷಭ ರಾಶಿ, ಅಥವಾ ಲಗ್ನ ಇವು ಕುಜಾದಿ

ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮದಿಂದ ಬಡವ, ಕಳ್ಳ ಹಾಗೂ ದರಿದ್ರ, ರಾಜ ಇವರಂತೆ ಆಗುವನು. ಹಾಗೆಯೇ ಮಿಥುನವು ಕುಜಾದಿ ದೃಷ್ಟವಾದರೆ ಕಬ್ಬಿಣದ ವ್ಯಾಪಾರಿ, ರಾಜ, ವಿದ್ವಾಂಸ, ಧೀರ, ನೇಕಾರ, ದರಿಂದ್ರ ಆಗುವನು. ಕಟಕ ರಾಶಿಯು ಕುಜಾದಿ ಪರ್ಯಂತ ಸೂರ್ಯ ದೃಷ್ಟವಾದರೆ ಕವಿ, ವಿದ್ವಾಂಸ, ಯೋಧ, ನೇತ್ರವ್ಯಾಧಿ ಈ ಫಲಗಳನ್ನು ಹೊಂದುವನು. ಸಿಂಹ ರಾಶಿಯು ಬುಧಾದಿ ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಜಾತಕನು ಜೋತಿರ್ಜ್ಞನು, ನರೇಂದ್ರನೂ, ಹಜಾಮನೂ, ನೃಪನೂ ಆಗುವರು. ಕನ್ಯಾರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಅರಸ, ಸೇನಾಪತಿ ಪವಾಡಪುರುಷನಾಗುವನು. ಶನಿ, ರವಿ, ಕುಜರಿಂದ ದೃಷ್ಟವಾದರೆ ಸ್ತ್ರೀಯ ಅಶ್ರಯದಿಂದ ಜೀವಿಸುವವನೂ ಆಗುವನು. ತುಲಾ ರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಅರಸನೂ, ಅಕ್ಕಸಾಲಿಗನೂ, ವ್ಯಾಪಾರಿಯೂ, ರವಿ ಕುಜ ಶನಿಗಳಿಂದ ದೃಷ್ಟನಾದರೆ ಪರಕಾರ್ಯ ವಿಮುಖನೂ ಆಗುವನು.

ವೃಶ್ಚಿಕ ರಾಶಿಯು ಬುಧಾದಿ ಗ್ರಹಗಳಿಂದ ದೃಷ್ಟವಾದರೆ ಅವಳಿ ಮಕ್ಕಳಿಗೆ ತಂದೆಯಾಗುವನು. ವಿನೀತನಾಗುವನು, ಅಗಸನೂ ದರಿದ್ರನೂ, ರಾಜನೂ ಆಗುವನು. ಅದರಂತೆ ಧನು ರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಸ್ವಜನ ಭೃತ್ಯನೂ, ಪೃಥ್ವೀಪಾಲಕನೂ, ಜನಾಶ್ರಯನೂ, ಪಾಪಗ್ರಹ ದೃಷ್ಟನಾದರೆ ಢಾಂಭಿಕ, ಪರಕಾರ್ಯ ವಿಮುಖನಾಗುವನು. ಮಕರ ರಾಶಿಯು ಬುಧಾದಿಗ್ರಹಗಳಿಂದ ದೃಷ್ಟವಾದರೆ ಕ್ರಮವಾಗಿ ಭೂಪನೂ, ರಾಜನೂ, ಪಂಡಿತನೂ ಧನಿಕ ಇಲ್ಲವೆ ದರಿದ್ರನಾಗುವನು. ಕುಂಭ ರಾಶಿಯು ಬುಧಾದಿಗಳಿಂದ ದೃಷ್ಟವಾದರೆ ಪರಸ್ತ್ರೀಗಮನ ಮುಂತಾದ ಫಲಗಳು ದೊರಕುತ್ತವೆ. ಮೀನ ರಾಶಿಯೂ ಬುಧಾದಿಗಳಿಂದ ದೃಷ್ಟವಾದರೆ ಹಾಸ್ಯಗಾರ, ರಾಜ, ವಿದ್ವಾಂಸ, ಇವರಾಗಿಯೂ, ಪಾಪಗ್ರಹಗಳಿಂದ ನೋಡಲ್ಪಟ್ಟರೆ ಪಾಪಚಾರ ಉಳ್ಳವನೂ ಆಗುವನು. ಹೋರಾ, ದೃಕ್ಕಾಣ, ನವಾಂಶ ತ್ರಿಶಾಂಶಗಳಲ್ಲಿ ಸೇರಿರುವ ಚಂದ್ರನು ಅದೇ ಹೋರಾದಿಗಳಲ್ಲಿ ಇರುವ ಶುಭಗ್ರಹಗಳಿಂದ ವೀಕ್ಷಿತನಾದರೆ ಶುಭಫಲವನ್ನು ಅಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೆ ಅಶುಭಫಲವನ್ನು ಕೊಡುತ್ತಾನೆ. ಚಂದ್ರನು ಕುಜಾಂಶದಲ್ಲಿದ್ದ ಸೂರ್ಯಾದಿ ಗ್ರಹಗಳಿಂದ ನೋಡಲ್ಪಟ್ಟರೆ ನರಾಧಿಕಾರಿ, ಹಿಂಸೆಯ ಮಾತನಾಡುವವ, ಯುದ್ಧಾಭಿಲಾಷಿ, ಕಲಹಪ್ರಿಯ,ಕುಶಲ ಮುಂತಾದ ಫಲ ಪಡೆಯುವನು. ಶುಕ್ರಾಂಶದಲ್ಲಿದ್ದ ಚಂದ್ರನನ್ನು ರವ್ಯಾದಿಗಳು ನೋಡಿದರೆ ಕ್ರಮವಾಗಿ ಮೂರ್ಖ, ಸ್ತ್ರೀಲಂಪಟ, ಕವಿ ಸುಖಾಭಿಲಾಷಿ ಈ ರೀತಿ ಫಲಗಳನ್ನು ಹೊಂದುವನು.

ಸಿಂಹಾಂಶದಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಕ್ರಮವಾಗಿ ಕೋಪಿಷ್ಠ, ರಾಜಪ್ರಿಯ, ಪುತ್ರಹೀನ, ಅತಿ ಹಿಂಸಕ ಮುಂತಾದ ಫಲಗಳನ್ನು ಹೊಂದುವನು. ಗುರ್ವಂಶದಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಕ್ರಮವಾಗಿ ಬಲಿಷ್ಠ, ಹಾಸ್ಯಜ್ಞ, ಮಂತ್ರಿ, ಧರ್ಮಶೀಲ ಈ ರೀತಿಯಾದ ಫಲವನ್ನು ಹೊಂದುತ್ತಾನೆ. ಶನ್ಯಂಶದಲ್ಲಿರುವ ಚಂದ್ರನನ್ನು ಸೂರ್ಯಾದಿಗ್ರಹಗಳು ನೋಡಿದರೆ ಕ್ರಮವಾಗಿ ಅಲ್ಪಾಪತ್ಯ, ಧನಿಕನಾಗಿಯೂ ಕಷ್ಟಪಡುವವನೂ, ಮಾನಧನ, ತುಲಾಭಾರ ದಲ್ಲಿ ಅನುರಕ್ತ, ಕಪಟ ದುಷ್ಟ, ಸ್ತ್ರೀಯಾಭಿಲಾಷಿ,,ಕ್ರೋಧಿ ಮುಂತಾದ ಫಲ ಹೊಂದುವರು. ಸೂರ್ಯನು ಚಂದ್ರಾದಿ ಗ್ರಹಗಳಿಂದ ನೋಡಲ್ಪಟ್ಟರೂ ಹಿಂದೆ ಹೇಳಿದಂತೆ ಫಲವನ್ನು ಹೊಂದುತ್ತಾನೆ. ಚಂದ್ರನು ವರ್ಗೋತ್ತಮಾಂಶ, ಸ್ವಾಂಶ, ಪರಾಂಶ, ಇವುಗಳಲ್ಲಿ ಉತ್ತಮ ಮಧ್ಯಮ, ಅಲ್ಪ

**ಈ ರೀತಿಯಿಂದ ಫಲಪ್ರದವಾಗುವನು. ಅಂಶಾಧಿಪತಿಯು ಬಲಿಷ್ಠನಾಗಿದ್ದರೆ ಶುಭಫಲವನ್ನೂ, ದುರ್ಬಲನಾದರೆ ಅಶುಭಫಲವನ್ನೂ ರಾಶ್ಯಾಧಿಪತಿಯ ದೃಷ್ಟಿಯಿಂದ ಶುಭಾಶುಭ ರೂಪವಾದ ಫಲವನ್ನು ಹೊಂದುವರು.**

ಸೂರ್ಯನು ಲಗ್ನದಲ್ಲಿದ್ದರೆ ಶೂರನೂ, ಆಲಸಿಯೂ, ಹೀನದೃಷ್ಟಿಯುಳ್ಳವನೂ, ಮತ್ತು ದಯಹೀನನು ಆಗುವನು. ಮೇಷದಲ್ಲಿದ್ದರೆ, ಧನಿಕನೂ ಕತ್ತಲೆಗಟ್ಟಿದ ಕಣ್ಣುಳ್ಳವನು ಆಗುವನು. ಸಿಂಹದಲ್ಲಿದ್ದರೆ ನಿಶಾಂಧನೂ, ನೀಚ ರಾಶಿಯಲ್ಲಿದ್ದರೆ ದರಿದ್ರನು, ಕಟಕದಲ್ಲಿದ್ದರೆ ಹೂಗಣ್ಣನೂ ದ್ವಿತೀಯ ರಾಶಿಯಲ್ಲಿದ್ದರೆ ಧನಶಾಲಿಯೂ ರಾಜರಿಂದ ಶಿಕ್ಷಿಸಲ್ಪಡುವವನೂ, ರೋಗಿಯೂ ಆಗುವನು. ಪಂಚಮದಲ್ಲಿದ್ದರೆ ಧನ ಸಂತಾನ ಇವುಗಳಿಂದ ಬಿಡಲ್ಪಡುವನು. ಷಷ್ಠಿಯಲ್ಲಿದ್ದರೆ ಶತ್ರುಗಳಿಂದ ಸೋಲಲ್ಪಡುವವನು. ಸಪ್ತಮದಲ್ಲಿ ಇದ್ದರೆ ಪ್ರಿಯರನ್ನು ಗೆಲ್ಲುವನು. ಅಷ್ಟಮದಲ್ಲಿದ್ದರೆ ಅಲ್ಪ ದೃಷ್ಟಿಯುಳ್ಳವನಾಗುವನು, ನವಮದಲ್ಲಿದ್ದರೆ ಮಕ್ಕಳು, ಧನ ಸೌಖ್ಯಹೊಂದುವನು. ದಶಮದಲ್ಲಿದ್ದರೆ ವಿದ್ಯೆ, ಐಶ್ವರ್ಯಗಳನ್ನೂ, ಏಕಾದಶದಲ್ಲಿದ್ದರೆ ಧನವನ್ನು ಹೊಂದುವನು. ಹನ್ನೆರಡನೇಯ ಸ್ಥಾನ, ವ್ಯಯಸ್ಥಾನದಲ್ಲಿದ್ದರೆ ಪಾತಿತ್ಯವನ್ನು ಹೊಂದುವನು. ಚಂದ್ರನು ಲಗ್ನದಲ್ಲಿದ್ದರೆ ಮೂಕ, ಕಿವುಡ ಇಲ್ಲವೆ ಸೇವಕನಾಗುವನು. ಇದೇ ಚಂದ್ರನು ಸ್ವಕ್ಷೇತ್ರದಲ್ಲಿದ್ದರೆ ಧನಿಕನಾಗುವನು. ದ್ವಿತೀಯದಲ್ಲಿದ್ದರೆ ಧನಿಕನೂ ಕುಟುಂಬಿಯೂ ಆಗುವನು. ತೃತೀಯದಲ್ಲಿದ್ದರೆ ಹಿಂಸಕನಾಗುವನು. ಚತುರ್ಥದಲ್ಲಿದ್ದರೆ ಸಾಧುವಾಗುವನು. ಪಂಚಮದಲ್ಲಿದ್ದರೆ ಹೆಣ್ಣು ಮಕ್ಕಳು ಹೆಚ್ಚಾಗುವರು. ಷಷ್ಠದಲ್ಲಿದ್ದರೆ ಅಲ್ಪಕಾಮ ಉಳ್ಳವನೂ ಅಲ್ಪಾಗ್ನಿ ಉಳ್ಳವನೂ ಆಗುವನು. ಚಂದ್ರನು ಸಪ್ತಮದಲ್ಲಿದ್ದರೆ ಅಸೂಯಾಪರನೂ, ಅಷ್ಟಮದಲ್ಲಿದ್ದರೆ ರೋಗಿಯೂ, ನವಮಸ್ಥಾನದಲ್ಲಿದ್ದರೆ ಮಿತ್ರಧಷ್ವತನಾಗಿಯೂ, ಲಾಭಸ್ಥಾನದಲ್ಲಿದ್ದರೆ ಕೀರ್ತಿ, ಹಣ ಬುದ್ಧಿ, ಇವುಗಳನ್ನು ಪಡೆಯುವನು. ದಶಮದಲ್ಲಿದ್ದರೆ ಧರ್ಮಬುದ್ಧಿ ಧನವುಳ್ಳವನು. ಹನ್ನೆರಡನೆಯ ಸ್ಥಾನದಲ್ಲಿದ್ದರೆ ಅಂಗಹೀನನಾಗುತ್ತಾನೆ. ಇವೇ ಚಂದ್ರನಿಂದ ಬರುವ ಭಾವಫಲಗಳು. ಕುಜನು ಲಗ್ನದಲ್ಲಿದ್ದರೆ ಗಾಯಗೊಂಡ ಶರೀರದವನಾಗಿಯೂ, ದ್ವಿತೀಯದಲ್ಲಿದ್ದರೆ ನೀಚಾನ್ನ, ಭೋಗಿಯಾಗಿಯೂ, ನವಮದಲ್ಲಿದ್ದರೆ ಪಾಪಿಯಾಗುವನು. ಉಳಿದ ಮೂರು, ನಾಲ್ಕು, ಐದು, ಆರು, ಏಳು, ಎಂಟು, ಹತ್ತು ಹನ್ನೊಂದು, ಹನ್ನೆರಡು, ಈ ಸ್ಥಾನ ಗಳಲ್ಲಿದ್ದರೆ ಸೂರ್ಯನಂತೆಯೇ ಫಲಕೊಡುವನು.

ಬುಧನು ಲಗ್ನದಲ್ಲಿದ್ದರೆ ಪಂಡಿತನೂ, ದ್ವಿತೀಯದಲ್ಲಿದ್ದರೆ ಧನಿಕನೂ, ತೃತೀಯದಲ್ಲಿದ್ದರೆ ದುಷ್ಟನೂ, ಚತುರ್ಥದಲ್ಲಿದ್ದರೆ ಪಂಡಿತನೂ, ಪಂಚಮದಲ್ಲಿದ್ದರೆ ಮಂತ್ರಿಯೂ, ಷಷ್ಠದಲ್ಲಿದ್ದರೆ ಶತ್ರುರಹಿತನೂ, ಸಪ್ತಮದಲ್ಲಿದ್ದರೆ ಧರ್ಮಜ್ಞನೂ, ಅಷ್ಟಮದಲ್ಲಿದ್ದರೆ ವಿಖ್ಯಾತನೂ, ಮುಂದಿನ ಭಾವಗಳಲ್ಲಿ ಅಂದರೆ, ನವಮ, ದಶಮ, ಏಕಾದಶ ದ್ವಾದಶ ಸ್ಥಾನಗಳಲ್ಲಿದ್ದರೆ ಸೂರ್ಯನಂತೆ ಫಲ ನೀಡುವರು.

ಗುರುವು ಲಗ್ನಾದಿ ದ್ವಾದಶ ಭಾವಗಳಲ್ಲಿಯೂ, ಕ್ರಮವಾಗಿ ಪಾಂಡಿತ್ಯ, ವಾಚಾಲತ್ವ,ಕಾರ್ಪಣ್ಯ, ಸೌಖ್ಯ, ಬುದ್ಧಿಶಾಲಿತ್ವ, ಶತ್ರುರಾಹಿತ್ಯ, ಪಿತೃಋಣಾಧಿಕ್ಯ, ನೀಚತ್ವ, ಐಶ್ವರ್ಯ, ಲಾಭ, ದುಷ್ಟತನ ಮುಂತಾದ ಫಲ ನೀಡುವನು. ಶುಕ್ರನು ತನ್ವಾದಿ ಭಾವಗಳಲ್ಲಿದ್ದರೆ ಕ್ರಮವಾಗಿ ಕಾಮಿಯೂ, ಸುಖಿಯೂ, ಕಲಹಶಾಲಿಯೂ,

ಸುರತಾಭಿಲಾಷಿಯೂ ಸುಖಿಯೂ, ಮಕ್ಕಳಿಲ್ಲದವನೂ ಮುಂತಾದ ಫಲ ಪಡೆಯುವನು. ಶನಿಯು ಲಗ್ನಾದಿ ದ್ವಾದಶ ಭಾಗಗಳಲ್ಲಿ ಕ್ರಮವಾಗಿ ನಿತ್ಯದಾರಿದ್ರ್ಯ, ರೋಗ,ಕಾಮ, ಮಾಲಿನ್ಯ ಮುಂತಾದ ಫಲ ಕೊಡುವನು. ಜಾತಕನಿಗೆ ತುಲಾ, ಧನಸ್ಸು, ಮಕರ, ಕುಂಭ, ಮೀನ ಇವುಗಳಲ್ಲಿ ಲಗ್ನವಾಗಿದ್ದರೆ ರಾಜನಿಗೆ ಸಮಾನನೂ, ಗ್ರಾಮಾಧಿಪತಿಯೂ ಸುಂದರನೂ, ಆಗುವನು ಈ ರೀತಿಯಾಗಿ ಕ್ರಮವಾಗಿ ಫಲವು ದೊರೆಯುವದು. ಯಾವ ಗ್ರಹವೇ ಆಗಲಿ, ಉಚ್ಚರಾಶಿಯಲ್ಲಿದ್ದರೆ ಪೂರ್ಣ ಫಲವನ್ನೂ, ಮೂಲ ತ್ರಿಕೋನದಲ್ಲಿದ್ದರೆ ಮುಕ್ಕಾಲು ಫಲವನ್ನೂ ಸ್ವಕ್ಷೇತ್ರದಲ್ಲಿದ್ದರೆ ಅರ್ಧ ಫಲವನ್ನು ಮಿತ್ರಕ್ಷೇತ್ರದಲ್ಲಿದ್ದರೆ ಕಾಲು ೧/೪ ಫಲವನ್ನು ಶತ್ರುಕ್ಷೇತ್ರದಲ್ಲಿದ್ದರೆ ಅಲ್ಪ ಫಲವನ್ನೂ ಕೊಡುವದೆಂದು ತಿಳಿಯಬೇಕು. ಜನ್ಮಕಾಲದಲ್ಲಿ ಸ್ವಕ್ಷೇತ್ರಗತರಾದ ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು ಈ ಗ್ರಹಗಳಿಂದ ಕ್ರಮವಾಗಿ ಕುಲಕ್ಕೆ ಸಮಾನನೂ, ಕಲಾಧಿಪನೂ ಬಂಧು ಪೂಜ್ಯನೂ, ಧನಿಕನೂ ಸುಖಿಯೂ ಭೋಗಿಯೂ ರಾಜನಾಗುವದೇ ಮುಂತಾದ ಫಲ ಉಂಟಾಗುವವು. ಮಿತ್ರಕ್ಷೇತ್ರಗಳಲ್ಲಿ ಒಂದು ಗ್ರಹವಿದ್ದರೆ ಪರಾಧೀನ ಜೀವಿಯಾಗುವನು ಅಲ್ಲದೆ ಎರಡು ಗ್ರಹಗಳಿದ್ದರೆ ಸ್ನೇಹಿತರಿಂದ ಪೋಷಿಸಲ್ಪಡುವವನೂ ಮೂರು ಗ್ರಹಗಳಿದ್ದರೆ ತನ್ನ ಜೀವನವನ್ನು ತಾನೆ ನಡೆಸಿಕೊಳ್ಳುವವನೂ, ನಾಲ್ಕು ಗ್ರಹಗಳಿದ್ದರೆ ಬಂಧುಗಳಿಂದ ರಕ್ಷಿಸಲ್ಪಡುವವನು, ಐದು ಗ್ರಹಗಳಿದ್ದರೆ ಗಣಗಳಿಗೆ ಒಡೆಯನೂ, ಆರು ಗ್ರಹವಿದ್ದರೆ ಸೇನಾಪತಿಯು. ಏಳಿದ್ದರೆ ಮಾನವಾಧಿಪನೂ (ರಾಜನು) ಆಗುವನು. ಪಾಪಾದಿಗ್ರಹಗಳು ವಿಷಮರಾಶಿಯಲ್ಲಿದ್ದರೆ - ಸೂರ್ಯ ಹೋರೆಯಲ್ಲಿದ್ದರೆ ಜಾತಕನು ಬಲಿಷ್ಠನಾಗಿಯೂ, ಉತ್ಸಾಹಿಯಾಗಿಯೂ ತೇಜಸ್ವಿಯೂ ಆಗುವನು. ಶುಭ ಗ್ರಹಗಳು ಚಂದ್ರಹೋರೆಯಲ್ಲಿ ಸಮರಾಶಿಗತರಾದಾಗ ಕಾಂತಿಯುಳ್ಳವನೂ, ಸೌಭಾಗ್ಯ ಮತ್ತು ಭೋಗಗಳಿಂದ ಯುಕ್ತನೂ ಬುದ್ಧಿವಂತನೂ ಆಗುವನು.

ಸಮರಾಶಿಯಲ್ಲಿ ಪಾಪಗ್ರಹವು ಸೂರ್ಯಹೋರೆಯಲ್ಲಿದ್ದರೆ ಮಧ್ಯಮ ಫಲ ದೊರೆಯುವದು. ಸೌಮ್ಯ ಗ್ರಹವು ವಿಷಮರಾಶಿಯಲ್ಲಿ ಸೂರ್ಯ ಹೋರೆಯಲ್ಲಿದ್ದರೂ ಮಧ್ಯಮ ಫಲ ದೊರೆಯುತ್ತದೆ. ಚಂದ್ರ ಸ್ವದ್ರೇಕ್ಕಾಣ ಮತ್ತು ಮಿತ್ರದ್ರೇಕ್ಕಾಣಗತನಾದರೆ ಜಾತಕನು ಸುರೂಪಿಯಾಗುವನು. ಅನ್ಯ ದ್ರೇಕ್ಕಾಣದಲ್ಲಿ ದ್ರೇಕ್ಕಾಣಾಧಿಪತಿಗಳಿಗೆ ಸಮಾನವಾದ ಫಲಗಳನ್ನು ಕೊಡುವನು. ಚಂದ್ರನು ಸರ್ಪದ್ರೇಕ್ಕಾಣದಲ್ಲಿದ್ದರೆ ಆಯುರ್ವರ್ಧನೆ, ದ್ರೇಕ್ಕಾಣದಲ್ಲಿದ್ದರೆ ಪ್ರಾಣಿಹಿಂಸಕನು, ಚತುಷ್ಪಾದ್ದೇಕ್ಕಾಣದಲ್ಲಿದ್ದರೆ ಗುರುಪತ್ನಿ ಗಮನ ಮಾಡುವವನೂ, ಷಷ್ಠದ್ರೇಕ್ಕಾಣದಲ್ಲಿದ್ದರೆ ದೇಶ ಸಂಚಾರಿಯೂ ಆಗುವನು.

ಮೇಷಾದಿ ನವಾಂಶಗಳಲ್ಲಿ ಜನಿಸಿದವರು ಕ್ರಮವಾಗಿ ಕಳ್ಳ, ಭೋಗಿ, ಪಂಡಿತ, ಆಢ್ಯ, ರಾಜ, ಷಂಡ, ಶೂರ, ಶ್ರಮಜೀವಿ, ಸೇವಕ ಹಿಂಸಕ, ಮಂತಾದ ಫಲ ಹೊಂದುವರು. ಆದರೆ ವರ್ಗ ಉತ್ತಮಾಂಶದಲ್ಲಿದ್ದಾಗ ಶುಭಫಲ ಹೊಂದುತ್ತಾನೆ. ದ್ವಾದಶಾಂಶಗಳ ಫಲವು ರಾಶಿಫಲಗಳಂತೆಯೇ ದೊರೆಯುತ್ತದೆ. ಕುಜನು ತನ್ನ ತ್ರಿಶಾಂಶದಲ್ಲಿದ್ದರೆ ಭಾರ್ಯಾ ಸಮೇತನೂ, ವೀರ್ಯ ಭೂಷಣ ಶೂರನೂ, ಸಾಹಸಿಯೂ, ಖ್ಯಾತನಾಮನೂ ಆಗುವನು. ಶನಿಯು ತನ್ನ ತ್ರಿಶಾಂಶದಲ್ಲಿರುವಾಗ ರೋಗಿಯೂ ಅನ್ಯಭಾರ್ಯಾರತನೂ, ದುಃಖಿಯೂ, ಗ್ರಹಪರಿವಾರ ಪೋಷಕನೂ ಆಗುವನು. ಗುರುವು ಸ್ವತ್ರಿಶಾಂಶದಲ್ಲಿದ್ದರೆ, ಧನ, ಕೀರ್ತಿ, ಸೌಖ್ಯ, ಇವುಗಳಿಂದ ಕೂಡಿದವನಾಗಿ, ತೇಜಸ್ವಿಯೂ, ಆರೋಗ್ಯವಂತನೂ ಆಗುವನು.

ಬುಧನು ಸ್ವತ್ರಿಂಶಾಂಶದಲ್ಲಿದ್ದರೆ ಬುದ್ಧಿ, ಕಲೆ ವಾಕ್‌ಚಾತುರ್ಯ, ಸಾಹಸಾದಿ ಕಾರ್ಯಗಳಲ್ಲಿ ಆಸಕ್ತನಾಗಿರುವನು. ಶುಕ್ರನು ತನ್ನ ತ್ರಿಶಾಂಶದಲ್ಲಿರುವಾಗ ಅಧಿಕ ಮಕ್ಕಳು, ಸೌಖ್ಯ, ಆರೋಗ್ಯ, ಸೌಂದರ್ಯ, ಐಶ್ವರ್ಯ ಹೊಂದುವನು. ಮತ್ತು ಸುಂದರನೂ ವಿಷಯ ಲಂಪಟನೂ ಆಗುವನು. ಕುಜ ತ್ರಿಂಶಾಂಶೆಯಲ್ಲಿ ಸೂರ್ಯನಿದ್ದರೆ ಕ್ರೂರ, ಚಂದ್ರನಿದ್ದರೆ ಹಿಂಸಕ ಆಗುವನು. ಗುರು ತ್ರಿಶಾಂಶದಲ್ಲಿ ಸೂರ್ಯನಿದ್ದರೆ ಗುಣಶಾಲಿ, ಚಂದ್ರನಿದ್ದರೆ ಆಢ್ಯನೂ, ಬುಧ ತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಸುಖಿಯೂ, ಚಂದ್ರನಿದ್ದರೆ ಪಂಡಿತನೂ, ಶುಕ್ರ ತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಸುಂದರಾಂಗನೂ, ಚಂದ್ರನಿದ್ದರೆ ಸರ್ವ ಜನಪ್ರಿಯನೂ ಆಗುವನು. ಗ್ರಹಗಳು ಕಾರಕಗಳಾಗಬೇಕಾದರೆ ಉಚ್ಚ, ಮೂಲ ತ್ರಿಕೋಣ, ಸ್ವಕ್ಷೇತ್ರ ಮುಂತಾದ ಸ್ಥಳದಲ್ಲಿರಬೇಕು. ಅದರಂತೆ ಕೇಂದ್ರಾದಿಗಳಲ್ಲಿರುವ ಗ್ರಹಗಳು ಅಷ್ಟು ಅವಶ್ಯವಲ್ಲ. ಆದರೆ ದಶಮಕೇಂದ್ರದಲ್ಲಿರುವ ಗ್ರಹವು ಮಾತ್ರ ಕಾರಕ ಸಂಜ್ಞೆಯನ್ನು ಪಡೆಯುವುದು. ಯಾರ ಜನನವು ವರ್ಗೋತ್ತಮಾಂಶಗತವಾಗಿದ್ದರೆ, ಆ ಸಮಯದಲ್ಲಿ ವೇಶಿ ಸ್ಥಾನಗಳಲ್ಲಿ ಶುಭ ಗ್ರಹಗಳಿದ್ದು ಕೇಂದ್ರದಲ್ಲಿ ಶೂನ್ಯವಾಗಿದ್ದರೆ, ಅವನ ಜನ್ಮವು ಶುಭಪ್ರದವಾಗುವದೆಂದು ತಿಳಿಯಬೇಕು. ಸೂರ್ಯನಿರುವ ರಾಶಿಗೆ ಎರಡನೆಯ ಸ್ಥಾನವನ್ನು ವೇಶಿಸ್ಥಾನವೆಂದು ಕರೆಯುವರು. ಗುರು ಲಗ್ನಾಧಿಪತಿ ರಾಜ್ಯಾಧಿಪತಿ ಇವರು ಕೇಂದ್ರದಲ್ಲಿದ್ದರೆ ಮಧ್ಯಮ ಫಲ ಅಂದರೆ ಮಧ್ಯಮ ವಯಸ್ಸಿನಲ್ಲಿ ಫಲ ಕೊಡುವರು.

ದಶಾನಾಥನು ದಶಾಪ್ರದೇಶದಲ್ಲಿದ್ದು ಪೃಷ್ಠೋದಯ ರಾಶಿಗಳಲ್ಲಿದ್ದರೆ ಫಲವನ್ನು ಅಂತ್ಯದಲ್ಲಿಯೂ, ಉಭಯೋದಯ ರಾಶಿಗಳಲ್ಲಿದ್ದರೆ, ದಶಮದಲ್ಲಿಯೂ ಶೀರ್ಷೋದಯ ರಾಶಿಗಳಲ್ಲಿದ್ದರೆ ದಶಾದಿಗಳಲ್ಲಿಯೂ ಫಲ ಕೊಡುವನು. ಸೂರ್ಯ ಮತ್ತು ಕುಜರು ಅಷ್ಟಕರ್ಮ ಫಲವನ್ನು ಆದಿಯಲ್ಲಿಯೂ, ಗುರು ಶುಕ್ರರು ಮಧ್ಯಕಾಲದಲ್ಲಿಯೂ ಶನಿ ಚಂದ್ರರು ಅಂತ್ಯಕಾಲದಲ್ಲಿಯೂ, ಬುಧನು ಸರ್ವ ಕಾಲದಲ್ಲಿಯೂ ಕೊಡುವವರಾಗುತ್ತಾರೆ. ಜನ್ಮದಿಂದಾಗಲಿ, ರಾಶಿಯಿಂದಾಗಲಿ ಪಂಚಮ, ಸಪ್ತಮ ರಾಶಿಗಳು ಶುಭ ಗ್ರಹಗಳಿಂದ ಯುಕ್ತವಾಗಿಯೋ ಅಥವಾ ದೃಷ್ಟವಾಗಿದ್ದರೆ ಜಾತಕನಿಗೆ ಪುತ್ರ ಮತ್ತು ಪತ್ನಿಯರಿಂದ ಸೌಖ್ಯ. ಒಂದು ವೇಳೆ ಹಾಗಿಲ್ಲದಿದ್ದರೆ ಪುತ್ರ ಕಳತ್ರಾಭಾವವನ್ನು ಹೇಳಬೇಕು. ಜನ್ಮಲಗ್ನವಾದ ಕನ್ಯಾರಾಶಿಯಲ್ಲಿ ಸೂರ್ಯನಿರುವಾಗ ಶನಿಯು ಕಳತ್ರ ಸ್ಥಾನವಾದ ಮಿಥುನದಲ್ಲಿದ್ದಾಗ ಪತ್ನಿಯು ಸಾಯುವಳೆಂದು ಅರ್ಥ.

ಕನ್ಯಾಲಗ್ನದಲ್ಲಿ ಸೂರ್ಯನಿದ್ದು ಪುತ್ರಸ್ಥಾನದಲ್ಲಿ ಕುಜನಿದ್ದರೆ ಪುತ್ರ ಮರಣ ಖಂಡಿತ. ಶುಕ್ರನಿಗೆ ಚತುರ್ಥಾಷ್ಟಮ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಪತ್ನಿಯು ಅಗ್ನಿಯಿಂದ ಸುಟ್ಟುಕೊಳ್ಳುವಳು. ಶುಕ್ರನು ಪಾಪಗ್ರಹಗಳ ಮಧ್ಯದಲ್ಲಿದ್ದರೆ ಎತ್ತರವಾದ ಸ್ಥಳದಿಂದ ಪತ್ನಿಯು ಬಿದ್ದು ಸಾಯುವಳು. ಶುಕ್ರನು ಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೆ ಬಂಧನ ಸಂಬಂಧದಿಂದಾಗಿ ಹೆಂಡತಿಯು ಸಾಯುತ್ತಾಳೆ. ಚಂದ್ರ ಸೂರ್ಯರು ಲಗ್ನದಿಂದ ದ್ವಾದಶ, ಷಷ್ಠದಲ್ಲಿರುವಾಗ ಹುಟ್ಟಿದವನು ಒಕ್ಕಣ್ಣಿನವನಾಗುವನು. ಶುಕ್ರ ಸೂರ್ಯರು ಸಪ್ತಮದಲ್ಲಿರುವಾಗ ಹುಟ್ಟಿದವನು ಅಂಗಹೀನ ಪತ್ನಿಯನ್ನು ಪಡೆಯುವನು. ಶನಿಯು ಲಗ್ನದಲ್ಲಿರುವಾಗ ಶುಕ್ರನು ಚಕ್ರಸಂಧಿಗಳಾದ ಕಟಕ, ವೃಶ್ಚಿಕ, ಮೀನ ರಾಶಿಗಳ ಅಂತ್ಯಾಂಶದಲ್ಲಿದ್ದರೆ ಮತ್ತು ಪಂಚಮ ಸ್ಥಾನವು ಶುಭಗ್ರಹಗಳಿಂದ ದೃಷ್ಟವಾಗಿದ್ದರೆ ಜಾತಕನು ವಂಧ್ಯಾಪತಿಯಾಗುವನು.

ಇನ್ನು ಕ್ಷೀಣವಾದ ಚಂದ್ರನು ಪಂಚಮದಲ್ಲಿದ್ದು ದ್ವಾದಶ ಸಪ್ತಮ ಮತ್ತು ಜನ್ಮಲಗ್ನಗಳಲ್ಲಿ ಪಾಪಗ್ರಹಗಳಿದ್ದರೆ ಜಾತಕನಿಗೆ ಪುತ್ರ, ಮತ್ತು ಪತ್ನಿಯರಿಲ್ಲದೆ ಜನ್ಮವನ್ನು ಕಳೆಯಬೇಕಾಗುತ್ತದೆ. ಶನಿ, ಕುಜರ ಪರ್ವದಲ್ಲಿ ಶುಕ್ರನು ಲಗ್ನಾತ್‌ಸಪ್ತಮದಲ್ಲಿರುವಾಗ ಮತ್ತು ಶನಿ, ಕುಜ ಇವರಲ್ಲೊಬ್ಬರಿಂದ ನೋಡಲ್ಪಟ್ಟರೆ, ಜಾತಕನು ವ್ಯಭಿಚಾರಿಯಾಗುವನು. ಏಕರಾಶಿಗತರಾದ ಶುಕ್ರ, ಚಂದ್ರರಿಗೆ ಸಪ್ತಮದಲ್ಲಿ ಶನಿ, ಕುಜರಿದ್ದರೆ ಪತ್ನಿ ಮತ್ತು ಪುತ್ರ ವಿಹೀನನಾಗಿ ಬಾಳುವನು. ಪುರುಷಗ್ರಹ, ಸ್ತ್ರೀಗ್ರಹ ಇವೆರಡೂ ಒಂದೇ ರಾಶಿಯಲ್ಲಿದ್ದು ಅದಕ್ಕೆ ಸಪ್ತಮದಲ್ಲಿ ಶನಿ, ಕುಜರು ಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೆ ಆ ದಂಪತಿಗಳು ವೃದ್ಧಾಪ್ಯದಲ್ಲಿ ಸುಖ ಸಂತೋಷಗಳಿಂದ ಕಾಲ ಕಳೆಯುವರು. ಲಗ್ನದಿಂದ ಹತ್ತು, ಏಳು, ನಾಲ್ಕು ಈ ಮನೆಗಳಲ್ಲಿ ಚಂದ್ರ, ಶುಕ್ರ ಮತ್ತು ಇತರ ಪಾಪಗ್ರಹಗಳಿದ್ದಾಗ ಜಾತಕನು ವಂಶನಾಶಗೈಯ್ಯುವನು. ಅಂದರೆ ಸಂತಾನ ವಿಹೀನನಾಗುವನು. ಬುಧನಿಂದ ಕೂಡಿದ ದ್ರೇಕ್ಕಾಣವು ಯಾವ ರಾಶಿಗೆ ಸಂಬಂಧಿಸುವದೋ ಆ ರಾಶಿಯು ಲಗ್ನ ಕೇಂದ್ರದಲ್ಲಿರುವ ಶನಿಯಿಂದ ನೋಡಲ್ಪಟ್ಟಿದ್ದರೆ ಜಾತಕನು ಶಿಲ್ಪಿಯಾಗುವನು. ಶುಕ್ರನು ದ್ವಾದಶದಲ್ಲಿದ್ದು ಶೂನ್ಯಾಂಶದಲ್ಲಿದ್ದರೆ, ದಾಸಿಯ ಮಗನಾಗುವನು. ಸೂರ್ಯ ಚಂದ್ರರು ಸಪ್ತಮದಲ್ಲಿದ್ದರೆ ಶನಿಯಿಂದ ವೀಕ್ಷಿತನಾದರೆ ಕೀಳು ಕಾರ್ಯ ಪ್ರವೃತ್ತನಾಗುವನು.

ಶುಕ್ರ ಕುಜರು ಸಪ್ತಮದಲ್ಲಿದ್ದು, ಪಾಪಗ್ರಹಗಳಿಂದ ನೋಡಲ್ಪಟ್ಟರೆ, ಜಾತಕನು ವಾತಾದಿ ರೋಗಿಯಾಗುವನು. ಚಂದ್ರನು ಕಟಕ ವೃಶ್ಚಿಕಾಂಶಗತನಾಗಿದ್ದು ಪಾಪಯುತನಾಗಿದ್ದರೆ ಗುಹ್ಯರೋಗಿಯಾಗುವನು. ಕುಜ, ಶನಿ, ಹನ್ನೆರಡು, ಮೂರು ಈ ಸ್ಥಾನಗಳಲ್ಲಿದ್ದು ಚಂದ್ರನೂ ಸಪ್ತಮದಲ್ಲಿ ಸೂರ್ಯನು ಇರುವಾಗ ಹುಟ್ಟಿದವನು ಕುಷ್ಠರೋಗಿಯಾಗುವನು. ಚಂದ್ರನು ದಶಮದಲ್ಲಿಯೂ ಕುಜನು ಸಪ್ತಮದಲ್ಲಿಯೂ ಶನಿಯು ಸೂರ್ಯನಿಂದ ಎರಡನೆಯ ಸ್ಥಾನದಲ್ಲಿಯೂ ಇದ್ದರೆ ಜಾತಕನು ಅಂಗಹೀನನಾಗುತ್ತಾನೆ. ಸೂರ್ಯ ಚಂದ್ರರು ಪರಸ್ಪರಾಂಶಗಳಲ್ಲಿದ್ದರೆ ಶೂಲ ರೋಗಿಯೂ ಏಕದಶಾಂಶದಲ್ಲಿ ಸೇರಿದ್ದರೆ ಕೃಶನೂ ಆಗುವನು. ಲಗ್ನದಿಂದ ಎಂಟು, ಆರು, ಎರಡು, ಮತ್ತು ಹನ್ನೆರಡು, ಈ ರಾಶಿಗಳಲ್ಲಿ ಕ್ರಮದಿಂದ ರವಿ, ಚಂದ್ರ, ಕುಜ, ಶನಿಗಳು ಇದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೆ ಜಾತಕನು ಅಂಧನಾಗುವನು. ಪಾಪಗ್ರಹಗಳು ಪಂಚಮಯುಕ್ತರಾಗಿದ್ದರೆ ಜಾತಕನಿಗೆ ಕಿವಿ ಶೂಲೆ ಸಪ್ತಮದಲ್ಲಿ ಶನಿಯೂ ಇದ್ದರೆ ಬೇನೆ ಬರುವದು. ಸಪ್ತಮದಲ್ಲಿದ್ದರೆ ಹಲ್ಲಿನರೋಗಬರುವುದು. ಲಗ್ನದಲ್ಲಿ ಗುರುವೂ ರಾಶಿಗಳಲ್ಲಿದ್ದರೂ ಜಾತಕನು ವಾತರೋಗಿಯಾಗುವನು. ಕುಜನು ನಾಲ್ಕು, ಏಳು, ಲಗ್ನದಲ್ಲಿದ್ದು, ಶನಿ ಸಂಬಂಧಿಯಾಗಿದ್ದರೂ, ಕುಜನು ಪಂಚಮದಲ್ಲಿಯೂ ಬುಧನು ಸಪ್ತಮದಲ್ಲಿಯೂ ಇದ್ದರೆ ಉನ್ಮಾದ ರೋಗಿಯಾಗುವನು.

ಪಾಪಗ್ರಹಗಳು ಐದು, ಒಂಭತ್ತು, ಎರಡು, ಹನ್ನೆರಡು, ಈ ಮನೆಗಳಲ್ಲಿದ್ದು ಶುಭ ಗ್ರಹಗಳಿಂದ ದೃಷ್ಟರಾಗಿದ್ದರೆ ಜಾತಕನು ರಾಜಬಂಧನಕ್ಕೊಳಗಾಗುವನು. ಅದೇ ರೀತಿ ಪಾಪಗ್ರಹಗಳು ದ್ವಿತೀಯದಲ್ಲಿದ್ದು ಅಶುಭ ಗ್ರಹಗಳಿಂದ ನೋಡಲ್ಪಟ್ಟರೆ ಸರ್ಪ ದಿಂದಲೋ ಅಥವಾ ಕೊಲೆಯಿಂದಲೋ ಸಾಯುವನು. ಚಂದ್ರನು ಶನಿಸಹಿತವಾಗಿ ಕುಜ ದೃಷ್ಟನಾಗಿದ್ದರೆ ಅಪಸ್ಮಾರ ರೋಗಿ, ವಾಕ್‌ಸ್ಥಾನದಲ್ಲಿ ಈ ರೀತಿ ಗ್ರಹಗಳಿದ್ದರೆ ಜಾತಕನು ದುರ್ವಚನಯುಕ್ತನಾಗಿ ಕ್ಷಯರೋಗಿ ಆಗುವನು. ಸೂರ್ಯ, ಶನಿ, ಕುಜ ಇವರು

ಸ್ವಕ್ಷೇತ್ರಗತರಾಗಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಉತ್ತಮ, ಮಧ್ಯಮ, ಅಧಮ ಈ ದರ್ಜೆಯ ಸೇವಕನಾಗುವನು. ಅದೇ ರೀತಿ ಸ್ತ್ರೀ ಜಾತಕದಲ್ಲಿದ್ದರೆ ಆಕೆಯು ವ್ಯಭಿಚಾರ ಪ್ರವೃತ್ತಳಾಗುವಳು. ಇನ್ನು ಮೇಲೆ ಸ್ತ್ರೀ ಜಾತಕದ ಬಗ್ಗೆ ವಿವರಿಸುತ್ತೇನೆ ಕೇಳು.

ಪುರುಷ ಜಾತಕಗಳಿಗೆ ಹೇಳಿದ ಫಲಗಳೆಲ್ಲ ಸಮಂಜಸವಾಗಿದ್ದರೆ ಸ್ತ್ರೀ ಜಾತಕಗಳಿಗೂ ಹೇಳಬಹುದು. ಆದರೆ ಭರ್ತೃವಿನ ಮರಣವನ್ನು ಜನ್ಮ ಲಗ್ನದಿಂದ ಎಂಟನೆಯ ಸ್ಥಾನದಲ್ಲಿಯೂ ಪತಿಯ ಇತರ ವಿಷಯಗಳನ್ನೂ ಸಪ್ತಮ ಸ್ಥಾನದಲ್ಲಿಯೂ ಲಗ್ನ ಮತ್ತು ಚಂದ್ರ ಇವರಿಂದಲೇ ಶರೀರ ಸೌಂದರ್ಯಾದಿಗಳನ್ನೂ ಅರಿಯಬೇಕು. ಸ್ತ್ರೀಯ ಜನ್ಮ ಲಗ್ನವು ಯುಗ್ಮ ರಾಶಿಯಲ್ಲಿ ಸೇರಿದ್ದರೆ ಸ್ತ್ರೀಯ ಸ್ವಭಾವವು ಕೇವಲ ಶೀಲಯುತವಾದದ್ದೆಂದು ಹೇಳಬೇಕು. ಲಗ್ನ ಚಂದ್ರರು ಓಜರಾಶಿಯಲ್ಲಿದ್ದರೆ ಸ್ತ್ರೀಯು ಪುರುಷ ಸ್ವಭಾವದಲ್ಲಿರುವಳೆಂದೂ, ಅದೇ ಓಜರಾಶಿಗಳು ಪಾಪಗ್ರಹಗಳಿಂದ ನೋಡಲ್ಪಟ್ಟಿದ್ದರೆ ಗುಣರಹಿತಳಾಗಿ ಪುಂಶ್ಚಲಿಯಂತಿರುವಳೆಂದೂ ಅರ್ಥ ಸ್ತ್ರೀಯು ಜನ್ಮರಾಶಿ ಅಥವಾ ಲಗ್ನವು ಕುಜ, ಶನಿ, ಗುರು, ಶುಕ್ರ ಇವರ ಸ್ಥಾನಗಳಲ್ಲಿ ಒಂದಾಗಿದ್ದರೆ. ಕ್ರಮವಾಗಿ ಬಾಲ್ಯದಲ್ಲಿಯೇ ದುರ್ನಡತೆಯುಳ್ಳವಳೂ, ದಾಸಿಯೂ, ಸಾಧ್ವಿಯೂ ಆತುರವುಳ್ಳವಳೂ ಆಗುವಳು.

ಲಗ್ನವು ಓಜರಾಶಿಯಾಗಿ ಪಾಪಗ್ರಹಯುತವಾಗಿದ್ದರೆ ಅವರ ನಡತೆ ದುಷ್ಟವಾದದ್ದು. ಇದು ಕುಜ ತ್ರಿಂಶಾಂಶದಲ್ಲಿದ್ದರೆ ಮಾತ್ರ ಫಲವೆಂದು ತಿಳಿಯಬೇಕು. ಶುಕ್ರ ಗ್ರಹಗಳಲ್ಲೊಂದು ಲಗ್ನವಾಗಿದ್ದರೆ ಕ್ರೂರವಾದ ಮಾತುಗಳುಳ್ಳವಳೂ, ಎರಡನೆಯ ಮದುವೆಯಾಗುವವಳೂ, ಗುಣಾಢ್ಯಗಳೂ ಆಗುವಳು. ಬುಧ ಗ್ರಹಗಳು ಲಗ್ನವಾಗಿ ಕುಜ ತ್ರಿಂಶಾಂಶದಲ್ಲಿದ್ದರೆ ಕ್ಲೀಬಳೂ, ಗುಣವತಿಯೂ ಆಗುವಳು. ಚಂದ್ರರಾಶಿಯಲ್ಲಿದ್ದರೆ ಸ್ವಚ್ಛಂದವರ್ತಿನಿಯೂ, ಶಿಲ್ಪಜ್ಞಾನವುಳ್ಳವಳೂ ಆಗುವಳು. ಸಿಂಹರಾಶಿಯಲ್ಲಿ ಜನಿಸಿ ಕುಜ ತ್ರಿಂಶಾಂಶದಲ್ಲಿದ್ದರೆ ವಾಚಾಳಿಯೂ ವ್ಯಭಿಚಾರಿಣಿಯೂ ಆಗುವಳು. ಅಲ್ಲದೆ ಗಂಡಸಿನಂತೆ ಧೀರಳೂ ಆಗುವಳು. ಗುರುಸ್ಥಾನವು ಲಗ್ನವಾದರೆ ಗುಣಾಢ್ಯಳೂ, ಅಲ್ಪರತಿ ಉಳ್ಳವಳೂ ಆಗುವಳು. ಶನಿಗ್ರಹವು ಲಗ್ನವಾದರೆ ದಾಸಿಯೂ, ನೀಚ ಸೇವಾಸಕ್ತಳೂ ಅನಪತ್ಯಳೂ ಆಗುವಳು. ಚಂದ್ರ ಮತ್ತು ಲಗ್ನ ಇವರಿರುವ ತ್ರಿಂಶಾಂಶಾಧಿಪತಿಗಳ ಬಲಾಬಲಗಳನ್ನು ತಿಳಿದು ಸ್ತ್ರೀ ಸ್ವಭಾವವನ್ನು ಅರಿಯಬೇಕು. ಶನಿ ಶುಕ್ರರು ಯಾವ ರಾಶಿಯಲ್ಲಿದ್ದರೂ ಶನ್ಯಂಶದಲ್ಲಿ ಶುಕ್ರನೂ, ಶುಕ್ರಾಂಶದಲ್ಲಿ ಶನಿಯೂ ಇದ್ದರೆ ಸ್ತ್ರೀಯರು ಸ್ತ್ರೀಯರಿಂದಲೇ ಕಾಮೇಚ್ಛೆಯನ್ನು ಪೂರೈಸಿಕೊಳ್ಳುವಳು. ಲಗ್ನದಿಂದಾಗಲಿ, ಚಂದ್ರನಿಂದಾಗಲಿ, ಸಪ್ತಮದಲ್ಲಿ ಬುಧ ಶನಿಗಳಿದ್ದರೆ, ಪತಿಯು ಷಂಢನಾಗುವನು. ಬುಧ ಶನಿಗಳು ಸಪ್ತಮ ಭಾಗದಲ್ಲಿ ಚರರಾಶಿಯಲ್ಲಿದ್ದರೆ ಪರದೇಶ ಸಂಚಾರಿಯಾಗುವಳು. ಸಪ್ತಮದಲ್ಲಿ ಸೂರ್ಯನಿದ್ದರೆ ಪತಿಯಿಂದ ದೂಷಿತಳಾಗುವಳು. ಕುಜನಿದ್ದರೆ ಬಾಲವಿಧವೆಯಾಗುವಳು. ಶನಿಯು ಸಪ್ತಮದಲ್ಲಿದ್ದು ಪಾಪದೃಷ್ಟನಾದರೆ ಕನ್ಯೆಯಾಗಿದ್ದರೂ ಮುದುಕಿಯಂತೆ ಕಾಣುವಳು. ಸಪ್ತಮದಲ್ಲಿ ಪಾಪಗ್ರಹಗಳು ಇದ್ದರೆ ವಿಧವೆಯಾಗುವಳು. ಶುಭ ಮತ್ತು ಪಾಪಗ್ರಹಗಳೆರಡೂ ಮಿಶ್ರವಾಗಿದ್ದರೆ ಎರಡು ಮದುವೆಯಾಗುವಳು.

ಸ್ತ್ರೀ ಜನ್ಮ ಲಗ್ನದ ಸಪ್ತಮ ಭಾಗವು ಕ್ರೂರ ಗ್ರಹಾಕ್ರಾಂತವಾಗಿ ಹೀನಬಲವುಳ್ಳದ್ದಾಗಿದ್ದರೆ ಪತಿಯಿಂದ ತ್ಯಜಿಸಲ್ಪಡುವಳು. ಕುಜ ಶುಕ್ರರು ಪರಸ್ಪರಾಂಶಗತರಾಗಿದ್ದರೇ ಅನ್ಯ

ಪುರುಷನನ್ನು ವರಿಸುವಳು. ಸಪ್ತಮದಲ್ಲಿ ಚಂದ್ರನಿದ್ದರೆ ಪತಿಯನುಜ್ಞೆಯಿಂದ ವ್ಯಭಿಚಾರ ಮಾಡುವಳು. ಲಗ್ನವು ಶನಿ, ಅಂಗಾರಕ ಇವರ ಕ್ಷೇತ್ರಗಳಲ್ಲೊಂದಾಗಿ ಅಲ್ಲಿ ಶುಕ್ರ, ಚಂದ್ರರಿದ್ದರೆ ಬಂಧಕಿಯಾಗುವಳು, ಸಪ್ತಮ ಭಾವವು ಕುಜಕ್ಷೇತ್ರವಾಗಿ ಲಗ್ನವು ಕುಜ ತ್ರಿಂಶಾಂಶವಾಗಿದ್ದರೆ ತಾಯಿಯೊಡನೆ ವ್ಯಬಿಚಾರ ಮಾಡುವಳು. ಸಪ್ತಮಸ್ಥಾನವು ಶನಿಯಿಂದ ನೋಡಲ್ಪಟ್ಟರೆ ವ್ಯಾಧಿಯಿಂದ ಕೂಡಿದ ಯೋನಿವುಳ್ಳವಳಾಗುವಳು. ಇದೇ ಶನಿಯು ಸದ್ಗ್ರಹಾಂಶದಲ್ಲಿದ್ದರೆ ಪತಿವ್ರತೆಯು ಪ್ರಿಯಾನುರಾಗಿಣಿಯೂ ಆಗುವಳು. ಇದೇ ಶನಿಯು ಸದ್ಗ್ರಹಾಂಶದಲ್ಲಿದ್ದರೆ ಪತಿವ್ರತೆಯ ಪ್ರಿಯಾನುರಾಗಿಣಿಯೂ ಆಗುವಳು. ಸಪ್ತಮರಾಶಿಯು ಶನಿಗ್ರಹವಾಗಿದ್ದು ಶನ್ಯಂಶದಲ್ಲಿ ಗ್ರಹವಿದ್ದರೂ ಗಂಡನು ವೃದ್ಧನೂ ಮತ್ತು ಮೂರ್ಖನೂ ಆಗುವನು. ಕುಜ ಕ್ಷೇತ್ರವಾದರೆ ಪತಿಯು ಸ್ತ್ರೀಲೋಲನಾಗುವನು. ಬುಧ ಕ್ಷೇತ್ರವಾದರೆ ವಿದ್ವಾಂಸನೂ ನಿಪುಣನೂ, ಗುರುಕ್ಷೇತ್ರವಾದರೆ, ಜಿತೇಂದ್ರಿಯನೂ, ಗುಣಶಾಲಿಯೂ, ಚಂದ್ರ ಕ್ಷೇತ್ರವಾದರೆ ಕಾಮಿಯೂ, ಮೃದು ಸ್ವಭಾವದವನೂ, ಶುಕ್ರಕ್ಷೇತ್ರವಾದರೆ ಸೌಭಾಗ್ಯವಂತನೂ ಶನಿಕ್ಷೇತ್ರವಾದರೆ ಮೃದು ಸ್ವಭಾವಿ ಆಗುವನು.

ಶುಕ್ರ ಚಂದ್ರರು ಲಗ್ನದಲ್ಲಿದ್ದರೆ ಸುಖವುಳ್ಳವಳೂ, ಅಸೂಯಾಸ್ವಭಾವದವಳೂ ಆಗುವಳು. ಬುಧ ಚಂದ್ರರು ಲಗ್ನದಲ್ಲಿದ್ದರೆ ನಿಪುಣೆಯೂ, ಗುಣೆಯೂ ಆಗುವಳು. ಲಗ್ನದಲ್ಲಿ ಶುಕ್ರ, ಬುಧರಿದ್ದರೆ ಸುಭಗೆ ಹಾಗೂ ಕಲಾಪ್ರವೀಣೆಯಾಗುವಳು. ಲಗ್ನದಲ್ಲಿ ಮೂರು ಶುಭಗ್ರಹಗಳಿದ್ದರೆ ಅನೇಕ ಸೌಖ್ಯ ಹಾಗೂ ಧನವಂತಳಾಗುವಳು. ಅಷ್ಟಮ ರಾಶಿಯಲ್ಲಿ ಕ್ರೂರಗ್ರಹಗಳಿದ್ದು ಅಷ್ಟಮಾಂಶದಲ್ಲಿ ಗ್ರಹಗಳಿಗೆ ಇರುವಷ್ಟು ಅಂತರದಷ್ಟು ವರ್ಷಗಳ ವೈಧವ್ಯವಾಗಲಿ ಅಥವಾ ಸ್ವಯಂಮರಣ ಸಂಭವವಿರುವದು, ಶುಭಗ್ರಹಗಳು ದ್ವಿತೀಯ ಸ್ಥಾನದಲ್ಲಿಯೂ, ಪಾಪಗ್ರಹಗಳು ಅಷ್ಟಮ ಗ್ರಹದಲ್ಲಿಯೂ ಇದ್ದರೆ ನಾರಿಯು ಸುಮಂಗಲಿಯಾಗಿಯೇ ಸಾಯುವಳು. ಚಂದ್ರನು ಕನ್ಯಾ, ವೃಶ್ಚಿಕ, ವೃಷಭ, ಸಿಂಹಗಳಲ್ಲಿರುವಾಗ ಜನಿಸುವವಳಿಗೆ ಮಕ್ಕಳು ಸ್ವಲ್ಪ ಶನಿಯು ಬಲಾಧಿಕನಾಗಿರದೇ ಬುಧ, ಶುಕ್ರ, ಚಂದ್ರರಿಂದಲೂ, ಬಲಹೀನರಾದ ರವಿ, ಕುಜ ಗುರುಗಳಿಂದಲೂ ನೋಡಲ್ಪಟ್ಟವನಾಗಿ ಓಜರಾಶಿಯ ಲಗ್ನವಾಗಿದ್ದರೆ ಸ್ತ್ರೀಯು ಗಂಡಸಿನಂತೆ. ಆಕಾರವುಳ್ಳವಳೂ ಕುರೂಪಿಣಿಯೂ ಆಗುವಳು. ಗುರು, ಕುಜ, ಶುಕ್ರ ಮತ್ತು ಬುಧರು ಬಲಿಷ್ಠರಾಗಿದ್ದು ಯುಗ್ಮರಾಶಿಯು ಲಗ್ನದಾಗಿದ್ದರೆ ಸ್ತ್ರೀಯು ಶಾಸ್ತ್ರಜ್ಞಳೂ, ಬ್ರಹ್ಮವಾದಿನಿಯೂ ಆಗುವಳು. ಪಾಪಗ್ರಹವು ಸಪ್ತಮದಲ್ಲಿಯೂ, ನವಮಸ್ಥಾನದಲ್ಲಿ ಮತ್ತೊಂದು ಪ್ರವ್ರಜ್ಯಾಯೋಗಕರವಾದ ಗ್ರಹವು ಇರುವದಾದರೆ ಆ ಹೆಂಗಸು ಸನ್ಯಾಸಿಯಾಗುವಳು. ಈ ಸ್ತ್ರೀ ಜಾತಕಕ್ಕೆ ಹೇಳಿದ ಫಲಗಳನ್ನು ಸ್ತ್ರೀಯ ವಿವಾಹಕಾಲ ದಲ್ಲಿಯೂ ಪ್ರಶ್ನೆ ಕಾಲದಲ್ಲಿಯೂ ತಿಳಿಯಬಹುದು.

ಇನ್ನು ನಿರ್ಯಾಣವಿಷಯವನ್ನು ತಿಳಿಯಬೇಕಾದರೆ ಅಷ್ಟಮ ಸ್ಥಾನದ ಬಲಾಬಲಗಳನ್ನು ನೋಡಿ ನಿರ್ಧರಿಸಬೇಕು. ಅಷ್ಟಮದಲ್ಲಿ ಪಾಪಗ್ರಹಗಳಿದ್ದರೂ, ಪಾಪ ಗ್ರಹಗಳಿಂದ ಆ ಅಷ್ಟಮಸ್ಥಾನವು ದೃಷ್ಟವಾಗಿದ್ದರೂ ಆಯಾ ಗ್ರಹಗಳಿಗೆ ಹೇಳಿದ ವ್ಯಾಧಿಯೇ ಬಂದು ಜಾತಕನು ಅವುಗಳಿಂದ ಮರಣಹೊಂದುವನು. ಅನೇಕ ಗ್ರಹಗಳು ಅಷ್ಟಮದಲ್ಲಿದ್ದು, ಅನೇಕ ಗ್ರಹಗಳಿಂದ ನೋಡಲ್ಪಟ್ಟಿದ್ದರೆ ಜಾತಕನು ನಾನಾ ವಿಧ ರೋಗಗಳಿಂದ ಮರಣಹೊಂದುವನು. ಸೂರ್ಯಾದಿಗ್ರಹಗಳಿಂದ ದೃಷ್ಟವಾಗಿದ್ದರೆ ಕ್ರಮವಾಗಿ ನೀರು, ಅಗ್ನಿ,

ಆಯುಧ, ಜ್ವರ, ದೀರ್ಘ ರೋಗ, ಬಾಯಾರಿಕೆ, ಹಸಿವು ಇವುಗಳಿಂದ ಮರಣ ಕಾರಣತ್ವ ಉಂಟಾಗುವದೆಂದು ಹೇಳಿದೆ.

ಸೂರ್ಯ ಹಾಗೂ ಅಂಗಾರಕನು ದಶಮ ಚತುರ್ಥದಲ್ಲಿ ಇದ್ದರೆ ಶೈಲಾಗ್ರ ಪತನದಿಂದ ಶಶಿ, ಶನಿ, ಅಂಗಾರಕ ಇವರು ಹತ್ತು, ಏಳು, ನಾಲ್ಕು ಈ ಸ್ಥಾನಗಳಲ್ಲಿದ್ದರೆ ಬಾವಿಯಲ್ಲಿ ಬೀಳುವದರಿಂದಲೂ, ಕನ್ಯಾರಾಶಿಯಲ್ಲಿ ಚಂದ್ರ ಸೂರ್ಯರಿದ್ದು ಪಾಪಗ್ರಹಗಳಿಂದ ನೋಡಲ್ಪಟ್ಟಿದ್ದರೆ ಸ್ವಜನರಿಂದಲೂ, ದ್ವಿಸ್ವಭಾವಲಗ್ನದಲ್ಲಿ ಸೂರ್ಯ, ಶನಿಗಳಿದ್ದರೆ ನೀರಿನಿಂದಲೂ ಮರಣ ಉಂಟಾಗುವದು. ಚಂದ್ರನು ಪಾಪಗ್ರಹಗಳ ಮಧ್ಯದಲ್ಲಿ ಕುಜಕ್ಷೇತ್ರಗಳಲ್ಲಿದ್ದರೆ ಶಸ್ತ್ರ ಅಗ್ನಿ ಇವುಗಳಿಂದಲೂ, ಮಕರದಲ್ಲಿ ಚಂದ್ರನೂ ಕರ್ಕಾಟಕದಲ್ಲಿ ಶನಿಯೂ ಇದ್ದರೆ ಜಲೋದರ ರೋಗದಿಂದಲೂ ಮರಣ ಸಂಭವಿಸುವದು. ಕನ್ಯಾರಾಶಿಯಲ್ಲಿ ಚಂದ್ರನಿದ್ದರೆ ರಕ್ತಸ್ರಾವದಿಂದಲೂ ಶನಿಯಿದ್ದರೆ ಅಗ್ನಿಪಾತದಿಂದಲೂ, ಪಾಪಗ್ರಹಾದಿಗಳು ಶುಭಗ್ರಹಗಳಿಂದ ನೋಡಲ್ಪಡದೇ ಪಂಚಮ ಮತ್ತು ನವಮಸ್ಥಾನಗಳಲ್ಲಿದ್ದರೆ ಕೊಲೆಯಿಂದಲೂ ಜಾತಕನಿಗೆ ಮರಣ.

ಅಶುಭಗ್ರಹಗಳು ಶುಭಗ್ರಹಗಳಿಂದ ನೋಡಲ್ಪಡದೇ ಪಂಚಮ ಮತ್ತು ನವಮ ಸ್ಥಾನದಲ್ಲಿದ್ದರೆ ಬಂಧನದಿಂದಲೂ, ಅಷ್ಟಮದಲ್ಲಿ ಸರ್ಪಾದಿಗಳಿಂದಲೂ, ದ್ರೇಕ್ಕಾಣದಲ್ಲಿ ಪಾಪಗ್ರಹಗಳಿದ್ದರೆ ನಿಗಳ ಬಂಧನದಿಂದಲೂ, ಕನ್ಯೆಯಲ್ಲಿ ಶುಕ್ರನೂ, ಮೇಷದಲ್ಲಿ ರವಿಯೂ ಇದ್ದು, ಮೀನಲಗ್ನವಾಗಿದ್ದರೆ ಸ್ತ್ರೀಯಿಂದ ಮರಣ ಹೊಂದುವನು. ಚತುರ್ಥದಲ್ಲಿ ಸೂರ್ಯನೂ, ದಶಮದಲ್ಲಿ ಕುಜನೂ, ಇದ್ದು ಕ್ಷೀಣಚಂದ್ರನಿಂದ ನೋಡಲ್ಪಟ್ಟರೆ ಶೂಲದಿಂದ ತಿನಿಯಲ್ಪಟ್ಟವನಾಗಿ, ಶನಿಯಿಂದ ವೀಕ್ಷಿತನಾದರೆ ಕಟ್ಟಿಗೆಯಿಂದ ಹೊಡೆಯಲ್ಪಟ್ಟು ಮರಣ ಸಂಭವಿಸುವದು. ಕ್ಷೀಣ ಚಂದ್ರ, ರವಿ, ಕುಜ, ಶನಿ, ಗ್ರಹಗಳಿಂದ ಎಂಟು, ಒಂಭತ್ತು, ಒಂದು, ಐದನೆಯ ಮನೆಗಳಲ್ಲಿ ಅದೇ ಗ್ರಹಗಳು, ಚಂದ್ರ, ಕುಜ, ಶನಿ, ರವಿ ಇವರು ಕ್ರಮವಾಗಿದ್ದರೆ ಹೊಗೆ, ಬೆಂಕಿ, ಬಂಧನ, ಶಸ್ತ್ರಗಳಿಂದ ಹತನಾಗುವನು. ಚತುರ್ಥಸ್ಥಾನದಲ್ಲಿ ಅಂಗಾರಕನೂ ಸಪ್ತಮಸ್ಥಾನದಲ್ಲಿ ಸೂರ್ಯನೂ ದಶಮಸ್ಥಾನದಲ್ಲಿ ಶನಿಯೂ ಇದ್ದರೆ ಅಗ್ನಿ, ಆಯುಧ, ರಾಜಕೋಪ, ಮುಂತಾದವುಗಳಿಂದ ಮರಣಿಸುವನು. ದ್ವಿತೀಯದಲ್ಲಿ ಶನಿಯು ಚತುರ್ಥದಲ್ಲಿ ಚಂದ್ರನೂ ದಶಮದಲ್ಲಿ ಕುಜನೂ ಇದ್ದರೆ ಘಾಯಾದಿಗಳಿಂದಲೂ ಕ್ರಿಮಿ ಕೀಟಕಗಳಿಂದಲೂ, ಸಾಯುವನು.

ಸೂರ್ಯನು ದಶಮದಲ್ಲಿಯೂ ಕುಜನು ಚತುರ್ಥದಲ್ಲಿಯೂ ಬರುವಾಗ, ವಾಹನದಿಂದಲೂ, ಕುಜನು ಸಪ್ತಮದಲ್ಲಿಯೂ ಶನಿ, ಚಂದ್ರ, ಸೂರ್ಯರು, ಲಗ್ನದಲ್ಲಿಯೂ ಇರುವಾಗ ಯಂತ್ರಪೀಡನದಿಂದ ಸಾಯುವರು. ತುಲಾದಲ್ಲಿ ಮೇಷದಲ್ಲಿ ಶನಿಯೂ ಮಕರದಲ್ಲಿ ಚಂದ್ರನೂ ಇರುವಾಗ ಅಮೇಧ್ಯದ ಮಧ್ಯದಲ್ಲಿ ಮರಣಿಸುವನು. ಕ್ಷೀಣ ಚಂದ್ರನು ಬಲಿಷ್ಠನಾದ ಕುಜವೀಕ್ಷಿತನಾಗಿ ಶನಿಯು ಅಷ್ಟಮದಲ್ಲಿರುವಾಗ ಗುಹ್ಯ ರೋಗದಿಂದಲೂ ಕ್ರಿಮಿಗಳಿಂದಲೂ, ಶಸ್ತ್ರಾಗ್ನಿ ಬಾಧೆಯಿಂದಲೂ ಸಾಯುವನು. ಕುಜ ಸಹಿತನಾದ ಚತುರ್ಥದಲ್ಲಿಯೂ ಇರುವಾಗ ಹುಟ್ಟಿದವನು ಪಕ್ಷಿಯಿಂದ ಮೃತನಾಗುವನು. ಲಗ್ನದಲ್ಲಿ ಶನಿಯೂ ಪಂಚಮದಲ್ಲಿ ಅಂಗಾರಕನೂ, ಅಷ್ಟಮದಲ್ಲಿ ಶನಿಯೂ, ನವಮದಲ್ಲಿ ಚಂದ್ರನೂ ಇರುವಾಗ ಪರ್ವತದಿಂದ ಬಿದ್ದು ಅಥವಾ ಸಿಡಿಲಿನಿಂದ ಹೊಡೆಯಲ್ಪಟ್ಟು ಸಾಯುವನು. ಜಾತಕನು ಯಾವ ದ್ರೇಕ್ಕಾಣದಲ್ಲಿ ಹುಟ್ಟುವನೋ ಅದರಿಂದ

ಇಪ್ಪತ್ತೆರಡನೆಯ ದ್ರೇಕ್ಕಾಣಕ್ಕೆ ಯಾರು ಸ್ವಾಮಿಯಾಗಿರುವರೋ ಆ ಗ್ರಹಕ್ಕೆ ಹೇಳಲಾದ ಅಗ್ನಿ ಜಲಾದಿಗಳಿಂದ ಜಾತಕನಿಗೆ ಮರಣ ಬರುವದು. ಲಗ್ನ, ಹೋಮ ನವಮಾಂಶಗಳ ಅಧಿಪತಿಗಳು ವಿಶೇಷವಾಗಿರುವ ರಾಶಿ ಸದೃಶವಾದ ಪ್ರದೇಶಗಳಲ್ಲಿ ಮರಣವಾಗುವದೆಂದು ಊಹಿಸಬೇಕು. ಮತ್ತು ಅಷ್ಟಮಸ್ಥಾನದಲ್ಲಿರುವ ಗ್ರಹಾದಿಗಳ ದೃಷ್ಟಿಯಿಂದಾಗಿ ಮರಣದ ಸೂಚನೆ ಕಾಣಬಹುದು. ಜಾತಕನು ಹುಟ್ಟುವಾಗ ಲಗ್ನದಲ್ಲಿ ಎಷ್ಟು ನವಾಂಶಗಳು ಕಳೆದುಹೋಗಿರುತ್ತವೆಯೋ ಅಷ್ಟು ಕಾಲ ಮರಣ ಸಮಯದಲ್ಲಿ ಮೂರ್ಛೆ ಹೊಂದಿರುತ್ತಾನೆಂದು ತಿಳಿಯಬೇಕು. ಲಗ್ನವು ಸ್ವಸ್ವಾಮಿ ದೃಷ್ಟವಾಗಿದ್ದರೆ ದ್ವಿಗುಣಿತವಾಗಿಯೂ, ಶುಭಗ್ರಹಾದಿಗಳಿಂದ ನೋಡಲ್ಪಡದಿದ್ದರೆ ತ್ರಿಗುಣಿತವಾಗಿಯೂ ಇರುವ ಸಮಯವನ್ನು ಮರಣಕಾಲದಲ್ಲಿ ಜಾತಕನು ಮೂರ್ಛೆಯಲ್ಲಿ ಕಳೆಯುತ್ತಾನೆ.

ಇಪ್ಪತ್ತೆರಡನೆಯ ದ್ರೇಕ್ಕಾಣವು ಪಾಪಗ್ರಹವಾಗಿದ್ದರೆ ಮೃತದೇಹವು ಅಗ್ನಿಯಲ್ಲಿಯೂ, ಶುಭಗ್ರಹ ದ್ರೇಕ್ಕಾಣವಾದರೆ ನೀರಿನಲ್ಲಿ, ಮಿಶ್ರದ್ರೇಕ್ಕಾಣವಾದರೆ ಒಣಗಿ ಹೋಗುವಿಕೆಯಿಂದಲೂ ನಾಶವಾಗುವದು. ವ್ಯಾಳದ್ರೇಕ್ಕಾಣವಾದರೆ ಅಂದರೆ ಕರ್ಕಾಟಕದ ಒಂದು, ಮೂರು, ವೃಶ್ಚಿಕದ ಒಂದು, ಎರಡು, ಮೀನದ ಎರಡು ಈ ದ್ರೇಕ್ಕಾಣಗಳಾದರೆ ಮೃತದೇಹವು ದುಷ್ಟ ಪ್ರಾಣಿಗಳಿಂದ ಭಕ್ಷಿತವಾಗುವದು. ಗುರು, ಚಂದ್ರ, ಸೂರ್ಯ, ಕುಜ, ಶನಿ, ಬುಧರು ಈ ಗ್ರಹಗಳಿಗೆ ಕ್ರಮವಾಗಿ ದೇವ, ಪಿತೃ, ತಿರ್ಯಕ್, ನರಕ ಈ ಲೋಕಗಳು ಹೇಳಲ್ಪಟ್ಟಿವೆ. ಈ ಲೋಕಗಳನ್ನು ಸೂರ್ಯ ಚಂದ್ರರ ದ್ರೇಕ್ಕಾಣಾಧಿಪತಿಯಿಂದ ನಿರ್ಧರಿಸಿ ಅಲ್ಲಿಂದ ಭೂಲೋಕಕ್ಕೆ ಬಂದು ಜನಿಸಿದವೆಂದು ಅರ್ಥ. ಜನನ ಕಾಲದಲ್ಲಿ ಆರು, ಏಳು, ಎಂಟನೆಯ ಸ್ಥಾನಗಳು ಗ್ರಹವರ್ಜಿತಗಳಾದರೆ ಷಷ್ಠಾಷ್ಟಮ ಭಾವಗಳಲ್ಲಿ ಯಾವ ದ್ರೇಕ್ಕಾಣಗಳಿರುವವೋ ಅವುಗಳಲ್ಲಿ ಯಾವದು ಬಲಿಷ್ಠವಾಗಿರುವದೋ ಅಂತಹವರ ಲೋಕವನ್ನು ಜಾತಕನು ಮರಣಾನಂತರ ಹೊಂದುವನು. ಷಷ್ಠಾಷ್ಟಮಗಳಲ್ಲಾಗಲೀ ಕೇಂದ್ರಗಳಲ್ಲಾಗಲಿ ಇರುವ ಗುರುವು ಉಚ್ಚಸ್ಥಾನ ಗತನಾಗಿದ್ದರೆ ಮತ್ತು ಮಿಕ್ಕ ಗ್ರಹವಂಚಿತನಾದರೆ ಜಾತಕನು ಮೃತನಾಗಿ ಶಾಶ್ವತವಾದ ಮುಕ್ತಿಯನ್ನು ಹೊಂದುವನೆಂದು ಅರಿಯಬೇಕು.

ಇನ್ನು ನಷ್ಟ ಜಾತಕವನ್ನು ಕಂಡು ಹಿಡಿಯುವ ಉಪಾಯಗಳನ್ನು ವಿವರಿಸುತ್ತೇನೆ : ಆಧಾನಕಾಲ ಅಥವಾ ಜನ್ಮಕಾಲ ಇವುಗಳು ತಿಳಿಯದೆ ಹೋದಲ್ಲಿ ಗಣಕನು ಪ್ರಶ್ನೆ ಮಾಡುವವನ ಪ್ರಶ್ನ ಲಗ್ನದಿಂದಲೇ ಜಾತಕವನ್ನು ನಿರ್ಮಿಸಬಹುದು. ಕೇಳುಗನು ಲಗ್ನ ಪ್ರಥಮ ಹೋರೆಯಲ್ಲಿ ಪ್ರಶ್ನೆ ಮಾಡಿದರೆ, ಉತ್ತರಾಯಣದಲ್ಲಿಯೂ ದ್ವಿತೀಯ ಹೋರೆಯಲ್ಲಿ ಪ್ರಶ್ನೆ ಮಾಡಿದರೆ ದಕ್ಷಿಣಾಯದಲ್ಲಿಯೂ ಜನಿಸಿದನೆಂದು ತಿಳಿಯಬೇಕು. ಪ್ರಶ್ನೆ ಕಾಲದ ಮೂರು ದ್ರೇಕ್ಕಾಣಗಳಿಂದ ಕ್ರಮವಾಗಿ ಗುರುವು ಒಂದು ಐದು ಒಂಭತ್ತನೆಯ ರಾಶಿಗಳಲ್ಲಿರುವನೆಂದು ನಿಶ್ಚಯಿಸಿ ಗುರುಚಾರದಿಂದ ಜಾತಕನ ವಯಸ್ಸನ್ನು ಊಹಿಸಿ ಹೇಳಬೇಕು. ಮತ್ತು ಪ್ರಶ್ನೆ ಲಗ್ನದ ದ್ವಾದಶಾಂಶಕ್ಕನುಗುಣವಾಗಿ ಇಷ್ಟನೆಯ ಆರಾಶಿಗಳಲ್ಲಿ ಜನ್ಮ ಕಾಲದಲ್ಲಿ ಗುರುವು ಇರುವನೆಂದೂಊಹಿಸಬಹುದು. ಪ್ರಶ್ನೆ ಲಗ್ನದಲ್ಲಿರುವ ಸೂರ್ಯಾದಿ ಗ್ರಹಗಳಿಂದ ಜನನ ಕಾಲದಲ್ಲಿ ಗ್ರೀಷ್ಮಾದಿ ಋತುಗಳನ್ನು ಕಂಡು ಹಿಡಿಯಬೇಕು. ಅಯನಗಳಿಗೆ ಋತುಗಳಿಗೆ ವ್ಯತ್ಯಾಸವಾಗಿ ಬಂದರೆ ಚಂದ್ರ, ಬುಧ, ಗುರುಗಳಿಗೆ ಶುಕ್ರ, ಕುಜ ಶನಿಗಳ ಋತುಗಳನ್ನು ವ್ಯತ್ಯಸ್ತವಾಗಿ ಹೇಳಬಹುದು. ದ್ರೇಕ್ಕಾಣದ ಪೂರ್ವಾರ್ಧವು ಋತುವಿನ ಮೊದಲನೆಯ ತಿಂಗಳೆಂದೂ ಅಪರಾರ್ಧವು ಎರಡನೆಯ

ತಿರುಳೆಂದೂ ತಿಳಿಯಬೇಕು. ದ್ರೇಕ್ಕಾಣಕ್ಕೆ ಬಂದಿರುವ ತಿರುಳಿನ ಅನುಪಾತದಿಂದ ತಿಥಿಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ರಾತ್ರಿ ಸಂಜ್ಞಕವಾದ ಲಗ್ನಗಳಿಂದ ರಾತ್ರಿ ಜನನವೆಂದೂ ತಿಳಿಯಬೇಕು. ಚಂದ್ರ ನವಾಂಶಕ್ಕೆ ಸಂಬಂಧಿಸಿದ ನಕ್ಷತ್ರವೇ ಜನನ ನಕ್ಷತ್ರವೆನಿಸುವದು. ಪ್ರಶ್ನೆ ಕಾಲದಲ್ಲಿ ಲಗ್ನ ಚಂದ್ರರಿಗೆ ಎಷ್ಟು ಅಂತರವಿರುವದೋ ಅಷ್ಟೇ ಅಂತರವನ್ನು ಚಂದ್ರರಾಶಿಗೆ ಸೇರಿಸಿ ಬರುವ ರಾಶಿಯೇ ಜನ್ಮಲಗ್ನವೆಂದು ನಿರ್ಧರಿಸಬೇಕು.

ಈಗ ಪ್ರಕಾರಾಂತರದಿಂದ ನಷ್ಟ ಜಾತಕವನ್ನು ಆನಯನ ಮಾಡಲು ಮೇಷಾದಿ ದ್ವಾದಶ ರಾಶಿಗಳು ಕ್ರಮವಾಗಿ ಏಳು, ಹತ್ತು, ಎಂಟು, ನಾಲ್ಕು, ಹತ್ತು, ಐದು, ಏಳು, ಎಂಟು, ಒಂಭತ್ತು, ಹದಿನೈದು, ಹನ್ನೊಂದು, ಹನ್ನೆರಡು, ಈ ಸಂಖ್ಯೆಗಳನ್ನು ರಾಶಿಗುಣಕವೆಂದು ಸೂರ್ಯಾದಿ ಗ್ರಹಗಳಿಗೆ ಕ್ರಮವಾಗಿ ಐದು, ಐದು, ಎಂಟು, ಐದು, ಹತ್ತು ಏಳು, ಐದು, ಈ ಸಂಖ್ಯೆಗಳನ್ನು ಗ್ರಹಗುಣಕವೆಂದೂ ತೀರ್ಮಾನಿಸಿರುವರು. ಇದನ್ನು ತಿಳಿದು ಪ್ರಶ್ನಲಗ್ನ ಸ್ಫುಟವನ್ನು ಲಿಪ್ತಿ ಮಾಡಿ ರಾಶಿ ಮತ್ತು ಗ್ರಹಗುಣಕ ಸಂಖ್ಯೆಗಳಿಂದ ಗುಣಿಸಿ ಪುನಃ ಬಂದ ಲಬ್ಧವನ್ನು ಏಳರಿಂದ ಗುಣಿಸಿ, ಒಂಭತ್ತನ್ನು ಕಳೆದು ಇಪ್ಪತ್ತೇಳರಿಂದ ಭಾಗಿಸಿದರೆ ಉಳಿಯುವದು ನಕ್ಷತ್ರವಾಗುವುದು. ಹೀಗೆಯೇ ಏಳರಿಂದ ಭಾಗಿಸಿ, ವಾರವನ್ನು ನೂರಿ ಪ್ಪತ್ತರಿಂದ ಭಾಗಿಸಿ, ಜಾತಕನ ಆಯುಸ್ಸನ್ನು ಎರಡರಿಂದ ಭಾಗಿಸಿ ಪಕ್ಷವನ್ನೂ ಹದಿನೈದರಿಂದ ಭಾಗಿಸಿ, ತಿಥಿಯನ್ನೂ ಎರಡರಿಂದ ಭಾಗಿಸಿ ಅಹೋರಾತ್ರ್ಯಾದಿಗಳನ್ನು ಕಂಡು ಹಿಡಿಯಬೇಕು.

ಇನ್ನು ಮೇಲೆ ಮೇಷಾದಿ ದ್ವಾದಶರಾಶಿಗಳಲ್ಲಿಯೂ ಕ್ರಮವಾಗಿ ಮೂವತ್ತಾರು ದ್ರೇಕ್ಕಾಣಗಳ ಸ್ವರೂಪವು ಕ್ರಮವಾಗಿ ವಿವರಿಸಲ್ಪಡುವದು.

1. ದ್ರೇಕ್ಕಾಣ ಒಂದು:ಪುರುಷ, ಪರುಶುಧಾರಿ, ಕೃಷ್ಣವರ್ಣ, ರಕ್ತನೇತ್ರ, ರಕ್ಷಣದಕ್ಷ.
2. ದ್ರೇಕ್ಕಾಣ ಎರಡು : ಸ್ತ್ರೀ : ತೃಷಾರ್ತೆ, ಏಕಪಾದ ಉಳ್ಳವಳು, ರಕ್ತವಸ್ತ್ರ ಧಾರಿಣಿ, ಘಂಟಾಕೃತಿ ಉಳ್ಳವಳು.
3. ದ್ರೇಕ್ಕಾಣ ಮೂರು : ಕಪಿಲವರ್ಣ, ಅಂಧ ದೃಷ್ಟಿ, ಕ್ರೂರ ಕ್ಷತದೇಹ, ರಕ್ತವಸ್ತ್ರಧಾರಿ.
4. ದ್ರೇಕ್ಕಾಣ ನಾಲ್ಕು : ಹಸಿವು ಮತ್ತು ಬಾಯಾರಿಕೆಯುಳ್ಳದ್ದು, ಸುಟ್ಟ ಬಟ್ಟೆಯುಳ್ಳದ್ದು ಗುಂಗುರು ಕೂದಲು ಉಳ್ಳವರು.
5. ದ್ರೇಕ್ಕಾಣ ಐದೂ : ಮಲಿನ ಕ್ಷುಧಾರ್ತ, ಕೃಷ್ಯಾದಿಕರ್ಮಗಳಲ್ಲಿ ದಕ್ಷನಾದವನು
6. ದ್ರೇಕ್ಕಾಣ ಆರು : ಆನೆಯಂತಿರುವ ದೇಹ, ಶರಭಾಕಾರ, ಪಿಂಗಲವರ್ಣ, ದುಃಖಿತ ಮನಸ್ಸು.
7. ದ್ರೇಕ್ಕಾಣ ಏಳು : ಸೂಕ್ಷ್ಮ ಬುದ್ಧಿಯುಳ್ಳವಳು, ಸುಂದರಿ, ಸಾಧ್ವೀಮಣಿ, ಎತ್ತಿದ ಕೈಯುಳ್ಳವಳು, ಪುತ್ರಸಂತಾನ ಇಲ್ಲದವಳು.
8. ದ್ರೇಕ್ಕಾಣ ಎಂಟು : ಉದ್ಯಾನ ಸಂಚಾರಿ, ಕವಚ, ಧನಸ್ಸು, ಇವುಗಳುಳ್ಳವನು ಗರುಡಾಕೃತಿ ಉಳ್ಳವನು, ಕ್ರೀಡೇಚ್ಛಾಶಾಲೀ.
9. ದ್ರೇಕ್ಕಾಣ ಒಂಭತ್ತು : ನಾಟ್ಯಶಾಸ್ತ್ರಜ್ಞ, ವರುಣಾಕಾರ, ಬಹುರತ್ನ, ಧನುಸ್ಸು ಇವುಗಳುಳ್ಳವಳು.

10. ದ್ರೇಕ್ಕಾಣ ಹತ್ತು : ಆನೆಯಂತಿರುವ ಮುಖ, ಮತ್ತು ಕತ್ತುಳ್ಳದ್ದು, ಹಂದಿಯ ಮುಖ, ಕಾಡಿನಲ್ಲಿ ಚಂದನವೃಕ್ಷವನ್ನು ಆಶ್ರಯಿಸಿದುದು.

11. ದ್ರೇಕ್ಕಾಣ ಹನ್ನೊಂದು : ಅರಣ್ಯ ಸಂಚಾರಿ, ಪದ್ಮಾರ್ಚಿತೆ, ಮುತ್ತುಗದ ಕೊಂಬೆ ಹಿಡಿದಿರುವವಳು ತಲೆಗೆದರಿಕೊಂಡಿರುವವಳು, ಅರಚಿಕೊಳ್ಳುವ ಸ್ವಭಾವ ಉಳ್ಳವಳು.

12. ದ್ರೇಕ್ಕಾಣ ಹನ್ನೆರಡು : ಅವಲಕ್ಕಿಯನ್ನು ತಿನ್ನುವವನು, ಸಮಬದ್ಧನು, ನೌಕೆಯಲ್ಲಿ ನಿಂತುಕೊಂಡಿರುವವನು, ಸ್ವರ್ಣಾದಿಗಳಿಂದ ಅಲಂಕೃತನಾದವನು.

13. ದ್ರೇಕ್ಕಾಣ ಹದಿಮೂರು : ನಾಯಿ, ನರಿ, ಹದ್ದು, ಇವುಗಳನ್ನು ಹಿಡಿದು, ಶಾಲ್ಮಲೀವೃಕ್ಷದ ಹತ್ತಿರ ನಿಂತು ಕೂಗಿಕೊಳ್ಳುವವನ ಆಕೃತಿ ಉಳ್ಳದ್ದು.

14. ದ್ರೇಕ್ಕಾಣ ಹದಿನಾಲ್ಕು : ಧನುರ್ಧಾರಿ, ಕೃಷ್ಣಾಜಿನವನ್ನು ಧರಿಸಿರುವವನು. ಸಿಂಹದಂತೆ ಗಂಭೀರವಾದ ಗಜರ್ದನೆ ಮಾಡತಕ್ಕವನು, ಕುದುರೆಯಂತೆ ಆಕೃತಿ ಉಳ್ಳವನು, ರೋಗಿಯು.

15. ದ್ರೇಕ್ಕಾಣ ಹದಿನೈದು : ಹಣ್ಣು, ಮಾಂಸ, ಇವುಗಳನ್ನು ಧರಿಸಿರುವವನು, ಗಡ್ಡ ಉಳ್ಳವನು, ಕರಡಿಯಂತೆ ಮುಖ ಉಳ್ಳವನು, ಕಪಿಯಂತೆ ನಡೆಯುವವನು.

16. ದ್ರೇಕ್ಕಾಣ ಹದಿನಾರು : ಹೂವು ಹಣ್ಣು ಇವುಗಳನ್ನು ಧರಿಸಿ ಮಲಿನ ವಸ್ತ್ರವನ್ನುಟ್ಟಿರುವ ಸ್ತ್ರೀ ರೂಪವು.

17. ದ್ರೇಕ್ಕಾಣ ಹದಿನೇಳು : ಆದಾಯ ವ್ಯಯಗಳನ್ನು ಲೆಕ್ಕ ಹಾಕುವವನು ಲೇಖಕ ಪುರುಷಾಕೃತಿ.

18. ದ್ರೇಕ್ಕಾಣ ಹದಿನೆಂಟು : ಗೌರವರ್ಣವುಳ್ಳ ಹೆಂಗಸು, ಶುಭ್ರವಾದ ವಸ್ತ್ರವನ್ನುಡ ತಕ್ಕವಳು. ಕೈಯಲ್ಲಿ ಗಡಿಗೆ ಹಿಡಿದಿರುವವಳು. ದೇವಾಲಯದಲ್ಲಿ ಸಂಚರಿಸುವವಳು.

19. ದ್ರೇಕ್ಕಾಣ ಹತ್ತೊಂಬತ್ತು : ತೂಕ ಮಾಡುವ ಪುರುಷ, ಒರೆಗಲ್ಲು, ಮಚ್ಚು ಹಿಡಿದಿರುವವ.

20. ದ್ರೇಕ್ಕಾಣ ಇಪ್ಪತ್ತು : ಹಸಿವು ಮತ್ತು ಬಾಯಾರಿಕೆಯಿಂದ ಕೊರಗುವವನು ಕುಂಬಾರ, ಗೃಧ್ರಮುಖ, ಹೆಂಡತಿಮಕ್ಕಳ ಚಿಂತನೆ ಮಾಡುವವ.

21. ದ್ರೇಕ್ಕಾಣ ಇಪ್ಪತ್ತೊಂದು : ಧನುರ್ಧಾರಿಯಾಗಿ ಕಿನ್ನರರಂತೆ ಸುವರ್ಣ ವಸ್ತ್ರಾಭರಣ ಧರಿಸಿ ಮೃಗ ಹಿಂಬಾಲಿಸುವವ.

22. ದ್ರೇಕ್ಕಾಣ ಇಪ್ಪತ್ತೆರಡು : ಸ್ತ್ರೀ ದ್ರೇಕ್ಕಾಣ, ಆಭರಣವಿಹೀನಳೂ, ಸರ್ಪದಷ್ಟವಾದ ಪಾದವುಳ್ಳವಳು. ಸಮುದ್ರದಿಂದ ಬರುತ್ತಿರುವವಳು.

23. ದ್ರೇಕ್ಕಾಣ ಇಪ್ಪತ್ತಮೂರು : ಸುಖಾಭಿಲಾಷಿಣೀ ಸರ್ಪಾವೃತಾಂಗಿ, ಗಂಡನನ್ನು ಹುಡುಕುವವಳು. ಮೀನ ಆಕೃತಿಉಳ್ಳವಳು.

24. ದ್ರೇಕ್ಕಾಣ ಇಪ್ಪತ್ನಾಲ್ಕು : ಆಮೆಯಂತೆ ಮುಖವುಳ್ಳವನು, ಮಲಯ ಪರ್ವತದ ರಕ್ಷಕ ಸಿಂಹಾಕೃತಿ, ಚತುಷ್ಪಾದ ದ್ರೇಕ್ಕಾಣ

25. ದ್ರೇಕ್ಕಾಣ ಇಪ್ಪತ್ತೈದು : ನರಮುಖಿ, ಕುದುರೆ ಮೈ ಉಳ್ಳದ್ದು, ಧನುರ್ಧಾರಿ ಯಜ್ಞ ಸಂಬಂಧಿ ಉಪಕರಣ ಹಾಕಿದವನು.

26. ದ್ರೇಕ್ಕಾಣ ಇಪ್ಪತ್ತಾರು : ಸಂಪಿಗೆ ಹೂವಿನಂತೆ ಹೊಳೆಯುವವಳು ಸಮುದ್ರದಿಂದ ಎದ್ದು ಬರುವವಳು, ವೃದ್ಧಿ ಹೊಂದುವ ಸ್ವಭಾವದವಳು.

27. ದ್ರೇಕ್ಕಾಣ ಇಪ್ಪತ್ತೇಳು : ಉದ್ದವಾದ ಗಡ್ಡ ಮತ್ತು ಮೀಸೆ ಉಳ್ಳವನು. ಸಂಪಿಗೆ ಹೂವಿನ ಮೈ ಬಣ್ಣ. ದಂತವನ್ನು ಹಿಡಿದಿರುವವನು, ಪೀತಾಂಬರ ಧಾರಿ.

28. ದ್ರೇಕ್ಕಾಣ ಇಪ್ಪತ್ತೆಂಟು : ಹಂದಿಯಂತಿರುವ ದೇಹ, ಮೊಸಳೆಯಂತಿರುವ ಹಲ್ಲು, ಕ್ರೂರಮುಖಿ ಈ ಸ್ವಭಾವದ ನರಾಕಾರ.

29. ದ್ರೇಕ್ಕಾಣ ಇಪ್ಪತ್ತೊಂಭತ್ತು : ಕಲಾಭಿಜ್ಞಳು, ಶ್ಯಾಮಲಾಂಗಿ, ಭೂಷಣಾಲಂಕೃತೆ.

30. ದ್ರೇಕ್ಕಾಣ ಮೂವತ್ತು : ಭಾಂಡ, ಕಂಬಳಿ, ಚಾಪ, ಬತ್ತಳಿಕೆ, ಕಿರೀಟ ಧರಿಸಿದ ಕಿಂನರ ಸದೃಶನಾದ ಮನುಷ್ಯ.

31. ದ್ರೇಕ್ಕಾಣ ಮೂವತ್ತೊಂದು : ಉಣ್ಣೆ, ಸರಾಯಿ, ನೀರು ಇವುಗಳಿಂದ ದ್ರವ್ಯಾರ್ಜನೆ ಮಾಡುವವನು, ಅಜಿನಧಾರಿ, ಗೃಧ್ರಕ್ಕೆ ಸಮಾನವಾದ ಮುಖಿ ಉಳ್ಳವನು.

32. ದ್ರೇಕ್ಕಾಣ ಮೂವತ್ತೆರಡು : ದಗ್ಧ ಶಾಲ್ಮಲೀ ವನದಲ್ಲಿ ಬಂಡಿಯಲ್ಲಿ ಲೋಹದ ಅದುರುಗಳನ್ನು ತರುವವಳು ಮಲಿನ ವಸ್ತ್ರಧಾರಿಣಿ.

33. ದ್ರೇಕ್ಕಾಣ ಮೂವತ್ತುಮೂರು : ಶ್ಯಾಮಲವರ್ಣ, ಕಿವಿಯಲ್ಲಿ ತುಂಬಾ ಕೂದಲು ಉಳ್ಳವಳು, ಲೋಹಮಿಶ್ರಿತ ಮಡಿಕೆಗಳನ್ನು ಹಿಡಿದು ಸಂಚರಿಸುವ ನರಾಕೃತಿ.

34. ದ್ರೇಕ್ಕಾಣ ಮೂವತ್ತನಾಲ್ಕು : ಶಂಖ ಮುಂತಾದ ವಸ್ತುಗಳನ್ನು ಧರಿಸಿರುವವನು. ಹಡಗದಲ್ಲಿ ಕುಳಿತಿರುವವನು. ಹೆಂಡತಿಗಾಗಿ ಅಲಂಕಾರ ವಸ್ತು ತರುತ್ತಿರುವವನು.

35. ದ್ರೇಕ್ಕಾಣ ಮೂವತ್ತೈದು : ಎತ್ತರವಾಗಿ ಕಟ್ಟಿದ ಧ್ವಜಪಟವುಳ್ಳವನು, ಸಖರಿಂದ ಕೂಡಿದವನು. ಸಂಪಿಗೆಯ ಹೂವಿನಂತೆ ಮುಖವುಳ್ಳವನು.

36. ದ್ರೇಕ್ಕಾಣ ಮೂವತ್ತಾರು : ಹಳ್ಳದ ಬಳಿಯಲ್ಲಿ ಹಾವಿನಿಂದ ಸುತ್ತಲ್ಪಟ್ಟ ದೇಹವುಳ್ಳ ನರಾಕೃತಿಉಳ್ಳವನು. ನಗ್ನನು, ಕಳ್ಳರಿಂದಲೂ, ಬೆಂಕಿಯಿಂದಲೂತೊಂದರೆಪಟ್ಟವನು.

ಹೀಗೆ ಮೇಷಾದಿಯಾಗಿರುವ ಮೂವತ್ತಾರು ದ್ರೇಕ್ಕಾಣಗಳ ಸ್ವರೂಪವನ್ನು ವಿವರಿಸಿದೆನು. ಇದರ ಸ್ವರೂಪ ಜ್ಞಾನದಿಂದ ಜಾತಕ ಪ್ರಶ್ನೆ ಮುಂತಾದ ಲಗ್ನಗಳಿಂದ ಫಲಾ ಫಲಗಳನ್ನು ಅರಿಯಬಹುದು. ಇಲ್ಲಿಯವರೆಗೆ ಜಾತಕ ಭಾಗಕ್ಕೆ ಸಂಬಂಧಿಸಿದ ಜ್ಯೋತಿಷ್ಯಾದಿ ವಿಷಯವನ್ನೆಲ್ಲವನ್ನು ನಿನಗೆ ಸಾಧ್ಯಂತವಾಗಿ ನಿರೂಪಿಸಿರುವೆನು. ಇನ್ನು ಮುಂದೆ ಲೋಕ ಹಿತಕ್ಕಾಗಿ ಹಾಗೂ ಸರ್ವಜನೋಪಯೋಗಿಯಾದ ಸಂಹಿತಾ ಭಾಗವನ್ನು ವಿವರಿಸುತ್ತೇನೆ.

ನಾರದ ಮಹಾಪುರಾಣದಲ್ಲಿ ಐವತ್ತೈದನೆಯ ಅಧ್ಯಾಯ ಮುಗಿದುದು

—o—

# ರಾಶಿ ನಕ್ಷತ್ರಗಳ ಫಲಾಫಲಗಳು

## ಅಧ್ಯಾಯ - ೫೬

**॥ ಸನಂದ ಉವಾಚ ॥**

**ಕ್ರಮಾಚ್ಚೈತ್ರಾದಿ ಮಾಸೇಷು ಮೇಷಾದ್ಯಾಃ ಸಂಕ್ರಮಾ ಮತಾಃ ॥**
**ಚೈತ್ರಶುಕ್ಲಪ್ರತಿಪದಿ ಯೋ ವಾರಃ ಸ ನೃಪಃ ಸ್ಮೃತ ॥**
**ಮೇಷಪ್ರವೇಶೇ ಸೇನಾನೀಃ ಕರ್ಕಟೇ ಸಸ್ಯಪೋ ಭವೇತ್ ॥**
**ಸಮೋದ್ಯಧೀಶ್ವರಃ ಸೂರ್ಯೋ ಮಧ್ಯಮಶ್ಚೋತ್ತಮೋ ವಿದುಃ ॥**
**ನೇಷ್ಟಃ ಕುಜೋ ಬುಧೋ ಜೀವೋ ಭೃಗು ಸ್ತ್ವತಿ ಶುಭಂಕರಃ ॥**
**ಅಧಮೋ ರವಿಜೋ ವಾಚ್ಯೇ ಜ್ಞಾತ್ವಾ ಚೈ ಷಾಂ ಬಲಾಬಲಮ್ ॥**

**ಸನಂದ:-** ಚೈತ್ರಾದಿಯಾದ ಚಾಂದ್ರಮಾಸಗಳಿಗೆ ಕ್ರಮವಾಗಿ ಮೇಷಾದಿ ಸೌರ ರಾಶಿಗಳು ಸಂಭವಿಸುವವು. ಅಥವಾ ಮೇಷಾದಿಯಾದ ಸಂಕ್ರಮಣಗಳಾದರೂ ಆಯಾ ಮಾಸಗಳಿಗೆ ಸಂಬಂಧಪಡುವವು. ಚೈತ್ರ ಶುದ್ಧ ಪಾಡ್ಯಮಿ ತಿಥಿಯು ಯಾವ ವಾರದಲ್ಲಿ ಬರುವದೋ ಆ ವಾರಾಧಿಪತಿಯೇ ಆ ವರ್ಷಕ್ಕೆ ರಾಜನಾಗುವನು. ಮೇಷಾದಿಯು ಯಾವ ವಾರದಲ್ಲಿ ಸಂಭವಿಸುವದೋ ಆ ವಾರಾಧಿಪತಿಯು ಸೇನಾಧಿಪತಿಯಾಗುವನು, ರವಿಯು ರಾಜನಾದರೆ, ಸಮಸ್ಥಿತಿಯಲ್ಲಿಯೂ, ಚಂದ್ರನು ರಾಜನಾದರೆ ಉತ್ತಮ ರೀತಿಯಲ್ಲಿಯೂ ಕುಜನು ರಾಜನಾದರೆ, ಅಧಮ ಸ್ಥಿತಿಯಲ್ಲಿಯೂ, ಬುಧ, ಗುರು, ಶುಕ್ರ ಇವರು ರಾಜರಾದರೆ ಅತ್ಯುತ್ತಮ ಮಾರ್ಗದಿಂದಲೂ ಶನಿಯು ರಾಜನಾದರೆ ಹೀನ ಸ್ಥಿತಿಯಲ್ಲಿಯೂ ಆ ವರ್ಷವನ್ನು ನಡೆಸುವರು. ಮತ್ತು ಆಯಾ ಗ್ರಹಗಳ ಬಲಾಬಲಗಳಿಂದಲೂ ವರ್ಷ ಫಲವನ್ನು ಹೇಳಬೇಕು.

ಮೇಷ ಸಂಕ್ರಮಣ ಕಾಲದಲ್ಲಿ ರವಿ ಮಂಡಲವು ಸ್ವಲ್ಪ ದಂಡಾಕಾರ, ಮುಂಡಾಕಾರ ಮತ್ತು ಸ್ವಲ್ಪ ಕಾಗೆಯ ಆಕಾರ ಈ ರೀತಿಯಾಗಿ ಕಂಡು ಬಂದರೆ ಆ ವರ್ಷದಲ್ಲಿ ದೇಶಕ್ಕೆ ರೋಗ, ಚೋರ, ದ್ರವ್ಯ ಇವುಗಳಿಂದ ಭಯವಿದೆ. ಛತ್ರ ಧ್ವಜ ಪತಾಕೆ ಇವುಗಳ ಆಕಾರದಲ್ಲಿ ಸೂರ್ಯ ಮಂಡಲದಲ್ಲಿ ಧೂಮ್ರವರ್ಣವಾಗಲಿ, ಜ್ವಾಲೆಯ ಆಕಾರವಾಗಲಿ ಕಂಡು ಬಂದರೆ ಜಗತ್ತಿಗೆ ಹಾನಿ ಎಂದು ಅರ್ಥ. ಸೂರ್ಯ ಮಂಡಲದಲ್ಲಿ ಕಾಣುವ ಬಿಳುಪು, ಕೆಂಪು, ಹಳದಿ, ಕಪ್ಪು ಈ ಬಣ್ಣಗಳು ಕ್ರಮವಾಗಿ ಬ್ರಾಹ್ಮಣಾದಿ ವರ್ಣಗಳಿಗೆ ತೊಂದರೆದಾಯಕ, ನಾನಾವರ್ಣಗಳು ಸೂರ್ಯಮಂಡಲದಲ್ಲಿ ಕಾಣಿಸಿಕೊಂಡರೆ ಆಗ ರಾಜರಿಗೆ ತೊಂದರೆ. ಸೂರ್ಯನಕಿರಣಗಳು ಕೆಂಪಾಗಿ ಊರ್ಧ್ವಮುಖವಾಗಿ ಕಂಡಾಗ ಸೇನಾಪತಿಗೆ ಹಾನಿಯುಂಟು. ಪೀತವರ್ಣದಿಂದ ಮೇಲಕ್ಕೆ ಹರಡದಿದ್ದರೆ ರಾಜಪುತ್ರನಿಗೆ, ಶ್ವೇತವರ್ಣದಿಂದ ಹರಡಿದ್ದರೆ ಪುರೋಹಿತನಿಗೂ, ಚಿತ್ರವರ್ಣದಿಂದ ಕಂಡು ಬಂದರೆ ಪ್ರಜೆಗಳಿಗೂ ಕಷ್ಟವಾಗುವದು. ಸೂರ್ಯನ ಕಿರಣವು ಧೂಮ್ರವರ್ಣದಲ್ಲಿ ಪಸರಿಸಿದರೆ ರಾಜರಿಗೂ, ಪಿಂಗಳ ವರ್ಣದಿಂದ ಕಿರಣಗಳು ಜಗತ್ತಿಗೆ ಹರಡುವದಾದರೆ ಅನಾವೃಷ್ಟಿ ಉಂಟಾಗಿ ಅನರ್ಥ ಸಂಭವಿಸುವದು. ಶಿಶಿರ ಋತುವಿನಲ್ಲಿ ಸೂರ್ಯನು ಕೆಂಪಾಗಿಯೂ ವಸಂತ ಋತುವಿನಲ್ಲಿ ಕುಂಕುಮ ವಣದದಿಂದಲೂ ಗ್ರೀಷ್ಮ ಋತುವಿನಲ್ಲಿ ಶುಭ್ರವಾಗಿಯೂ, ವರ್ಷ ಋತುವಿನಲ್ಲಿ

ಚಿತ್ರವರ್ಣವಾಗಿಯೂ, ಶರದೃತುವಿನಲ್ಲಿ ಪದ್ಮರಾಗದ ಬಣ್ಣದಂತೆಯೂ ಹೇಮಂತ ಋತುವಿನಲ್ಲಿ ರಕ್ತವರ್ಣವಾಗಿಯೂ ಕಂಡುಬಂದರೆ ಸೂರ್ಯನಿಂದ ಜಗತ್ತಿಗೆ ಶುಭಫಲ ಉಂಟಾಗುವದೆಂದು ಊಹಿಸಬೇಕು. ಹೇಮಂತ ಋತುವಿನಲ್ಲಿ ಹಳದಿಯಾಗಿಯೂ, ವರ್ಷ ಋತುವಿನಲ್ಲಿ ಶುಭ್ರವಾಗಿಯೂ, ಗ್ರೀಷ್ಮ ಋತುವಿನಲ್ಲಿ ರಕ್ತವರ್ಣವಾಗಿಯೂ ಕಂಡು ಬರುವ ರವಿಯು ಕ್ರಮವಾಗಿ ರೋಗ ಅನಾವೃಷ್ಟಿ ಭಯ ಇವುಗಳನ್ನು ಕೊಡುವನು. ಅರ್ಧ ಕಾಮನ ಬಿಲ್ಲಿನಂತೆ ಕಂಡು ಬರುವ ಸೂರ್ಯನು ರಾಜರಿಗೆ ಪರಸ್ಪರ ದ್ವೇಷ ಹೆಚ್ಚಿಸುವನು. ಮೊಲದ ರಕ್ತದಂತೆ ಹೊಳೆಯುವ ಸೂರ್ಯನಿಂದ ದೇಶದಲ್ಲಿ ಯುದ್ಧವಾಗುವದು.

ನವಿಲುಗರಿಯಂತೆ ಹೊಳೆಯುವ ಸೂರ್ಯನಿಂದ ಹನ್ನೆರಡು ವರ್ಷ ಅನಾವೃಷ್ಟಿ. ಚಂದ್ರನಂತೆ ಸೌಮ್ಯವಾಗಿ ಕಂಡು ಬಂದ ಸೂರ್ಯನಿಂದ ರಾಜಪರಿವರ್ತನೆಯಾಗುವದು. ಸೂರ್ಯನು ಕಪ್ಪಾಗಿ ಕಂಡು ಬಂದರೆ ದೇಶಕ್ಕೆ ಕ್ರಿಮಿಭಾಧೆ ಇದೆ. ಭಸ್ಮರಾಶಿಯಂತಿದ್ದರೆ ಇತರ ರಾಷ್ಟ್ರಗಳಿಂದಲೂ, ಸೂರ್ಯಮಂಡಲದಲ್ಲಿ ರಂಧ್ರವು ಕಾಣಿಸಿದರೆ ಮಹಾರಾಜರಿಂದ ದೇಶವು ನಾಶವಾಗುವದು. ಗಡಿಗೆಯ ಆಕಾರದಲ್ಲಿ ತೋರಿಬರುವ ರವಿಯಿಂದ ಕ್ಷುಧಾಬಾಧೆ, ತೋರಣಾಕಾರವಾಗಿ ಕಂಡು ಬಂದ ರವಿಯಿಂದ ದೇಶಕ್ಷೋಭೆ, ಖಂಡಾಕಾರದಿಂದ ಕಂಡಾಗ ರಾಜನಾಶ ಖಂಡಿತ.

ಸುರ್ಯೋದಯ ಹಾಗೂ ಅಸ್ತಕಾಲಗಳಲ್ಲಿ ಸಿಡಿಲು, ಉಲ್ಕಾಪಾತ ಕಂಡು ಬಂದರೆ ರಾಜವಧೆಯಾಲಿ, ನೃಪಯುದ್ಧವಾಗಲಿ ಆಗುವದೆಂದು ತಿಳಿಯಬೇಕು. ಪಕ್ಷಾದಿಯಲ್ಲಾಗಲಿ, ಪಕ್ಷಾಂತದಲ್ಲಾಗಲಿ ಸೂರ್ಯ ಚಂದ್ರರಿಗೆ ಪರಿವೇಷ ಉಂಟಾದರೆ ರಾಜರು ದೇಶಕ್ಕೆ ಬದಲಾಗುವರು. ಉದಯಾಸ್ತ ಕಾಲಗಳಲ್ಲಿ ಸೂರ್ಯ ಚಂದ್ರರು ರಕ್ತವರ್ಣದಿಂದ ಕಂಡರೂ, ದೇಶಕ್ಕೆ ರಾಜರು ಬದಲಾಯಿಸಬೇಕು. ಉದಯಾಸ್ತ ಕಾಲಗಳಲ್ಲಿ ರವಿ ಮಂಡಲವು ಶಸ್ತ್ರಾಕಾರದಿಂದ ಕಂಡು ಬಂದರೆ ಶಸ್ತ್ರಾದಿಗಳು ಭಯವೂ ಕತ್ತೆ, ಒಂಟೆ, ಇವುಗಳ ಆಕಾರ ಹೋಲಿಸಿದರೆ ದೇಶಕ್ಕೆ ಯುದ್ಧ ಭಯ. ಮೀನ ಮತ್ತು ಮೇಷ ಮಾಸಗಳಲ್ಲಿ ದಕ್ಷಿಣ ಶೃಂಗೋನ್ನತಿಯುಳ್ಳ ಚಂದ್ರನು ಲೋಕಕ್ಕೆ ಶುಭಕರವೆನಿಸುವನು. ಹಾಗೆಯೇ ಮಿಥುನ, ಮಕರ ಮಾಸಗಳಲ್ಲಿ ಉತ್ತರ ಶೃಂಗೋನ್ನತಿಯುಳ್ಳ ಚಂದ್ರನು ಶುಭಕರನು. ವೃಷಭ, ಕುಂಭ ಮಾಸಗಳಲ್ಲಿ ಸಮಶೃಂಗವೂ, ಕರ್ಕಾಟಕ ಧನುರ್ಮಾಸಗಳಲ್ಲಿ ಶರಾಕಾರದ ಶೃಂಗವೂ, ಮಕರ, ಸಿಂಹ ಮಾಸಗಳಲ್ಲಿ ಧನುರಾಕಾರದ-ಶೃಂಗವೂ, ತುಲಾ ಕಟಕ ಮಾಸಗಳಲ್ಲಿ ಶೂಲಾಕಾರದ ಶೃಂಗವೂ ಲೋಕಕ್ಕೆ ಶುಭಕರ.

ಇದಕ್ಕೆ ವಿರುದ್ಧ ಆಕಾರಗಳಲ್ಲಿ ಕಂಡು ಬಂದರೆ ಚಂದ್ರ ಶೃಂಗವು ಲೋಕಕ್ಕೆ ದುರ್ಭಿಕ್ಷ ಕಲಹ, ಮುಂತಾದ ಕೆಟ್ಟ ಫಲ ನೀಡುವದು. ಪೂರ್ವಾಷಾಢ, ಉತ್ತರಾಷಾಢ, ಮೂಲಾ, ಜ್ಯೇಷ್ಠಾ, ಈ ನಕ್ಷತ್ರಗಳಲ್ಲಿರುವ ಚಂದ್ರನು ದಕ್ಷಿಣ ಶೃಂಗೋನ್ನತಿಯಲ್ಲಿದ್ದರೆ ಲೋಕಕ್ಕೆ ಅಗ್ನಿಭಯವು. ವಿಶಾಖಾ, ಅನುರಾಧಾ ಈ ನಕ್ಷತ್ರಗಳಲ್ಲಿರುವ ಚಂದ್ರನು ದಕ್ಷಿಣ ಶೃಂಗೋನ್ನತಿಯಲ್ಲಿದ್ದರೆ ಲೋಕದಲ್ಲಿ ಪಾಪಕಾರ್ಯಗಳು ಹೆಚ್ಚಾಗುವದೆಂದು ತಿಳಿಯಬೇಕು. ಮಘಾ, ವಿಶಾಖಾ, ಈ ನಕ್ಷತ್ರಗಳಲ್ಲಿ ಚಂದ್ರನು ಉತ್ತರ ಶೃಂಗೋನ್ನತಿಯಲ್ಲಿದ್ದರೆ ಮಧ್ಯಮಫಲ. ರೇವತಿ ಉತ್ತರಾಭಾದ್ರಾ, ಆರಿದ್ರಾ ಈ ನಕ್ಷತ್ರಗಳನ್ನು ಬಿಟ್ಟು ಸಮಶೃಂಗನಿದ್ದರೆ ಶುಭಕರನಾಗುವನು. ಜ್ಯೇಷ್ಠಾ ನಕ್ಷತ್ರದಿಂದ ಹಿಡಿದು ಒಂಭತ್ತು ನಕ್ಷತ್ರ

ಬಿಟ್ಟು ಉಳಿದ ನಕ್ಷತ್ರಗಳಿಂದ ಸಮಶೃಂಗನಾಗಿದ್ದರೂ ಚಂದ್ರನು ಶುಭಕರನು. ಭರಣಿ, ಜ್ಯೇಷ್ಠಾ, ಆಶ್ಲೇಷಾ, ಪೂರ್ವಾಷಾಢಾ ಈ ನಕ್ಷತ್ರಗಳಲ್ಲಿ ಚಂದ್ರನು ಸಮಶೃಂಗನಾಗಿದ್ದರೆ ಮಧ್ಯಮವಾದ ಫಲಗಳನ್ನು ಕೊಡುತ್ತಾನೆ.

ಸ್ಥಿರ ನಕ್ಷತ್ರಗಳಲ್ಲಿಯೂ ಪುನರ್ವಸು, ವಿಶಾಖಾ ಈ ನಕ್ಷತ್ರಗಳಲ್ಲಿಯೂ ಸರ್ವಶೃಂಗದಲ್ಲಿರುವ ಚಂದ್ರನು ಅರ್ಥಪ್ರದನು. ಉಳಿದ ನಕ್ಷತ್ರಗಳಲ್ಲಿ ಚಂದ್ರನು ಸಮಫಲಗಳನ್ನು ಕೊಡುವನು. ಶುಕ್ಲಪಕ್ಷದಲ್ಲಿ ಯಮಶೃಂಗದಿಂದ ಕಂಡು ಬರುವ ಚಂದ್ರನು ಸಾಮಾನ್ಯವಾಗಿ ಶುಭನಲ್ಲ. ಅದರ ಫಲವಾಗಿ ಲೋಕಕ್ಕೆ ಇರುವೆಯೇ ಮೊದಲಾದ ಕ್ರಿಮಿಗಳ ಬಾಧೆಯು ಹೆಚ್ಚುವದು. ಚಂದ್ರ ಶೃಂಗವು ದಕ್ಷಿಣೋನ್ನತಿಯಲ್ಲಿದ್ದರೆ ಗ್ರೀಷ್ಮ ಋತುವಿನಿಂದ ಕ್ರಮವಾಗಿ ಕಾರ್ಯಹಾನಿ. ಕಾರ್ಯವೃದ್ಧಿ. ಕಾರ್ಯಹಾನಿ, ಕಾರ್ಯವೃದ್ಧಿ, ಸುಭಿಕ್ಷ್ಯ. ಪಾಪಿಗಳ ನಾಶ ಈ ರೀತಿಯಾಗಿ ಆರು ಋತುಗಳಲ್ಲಿ ಆರು ಫಲಗಳು ಲಭಿಸುವವು. ಚಂದ್ರ ಶೃಂಗವು ಅಧೋಮುಖವಾಗಿ ಕಂಡಾಗ ಶಸ್ತ್ರಭಯ, ದಂತಾಕಾರವಾಗಿ ಕಂಡರೆ ಯುದ್ಧಭಯ.

ಚಂದ್ರಮಂಡಲವಾಗಲಿ, ಚಂದ್ರ ಶೃಂಗನಾಗಲಿ, ಕುಜಾದಿಗ್ರಹಗಳಿಂದ ಪ್ರತಿಹತ ವಾದರೆ ಕ್ರಮವಾಗಿ ಕ್ಷೇಮ, ಅರ್ಥವೃದ್ಧಿ, ವೃಷ್ಟಿ, ಭೂಪಾಲನಾಶ, ಜನನಾಶ, ಈ ಫಲಗಳು ಲಭಿಸುತ್ತವೆ. ಕುಜಗ್ರಹವು ಇರುವ ನಕ್ಷತ್ರಕ್ಕಿಂತ ಏಳು, ಎಂಟು, ಒಂಭತ್ತು ಈ ನಕ್ಷತ್ರಗಳಿಗೆ ಉಷ್ಣವೆಂದು ಹೆಸರಿದೆ. ಈ ನಕ್ಷತ್ರಗಳಿಂದ ಲೋಕಕ್ಕೆ ಪ್ರಜಾಪೀಡೆ, ಅಗ್ನಿಯ ಭಯ ಇವುಗಳು ಸಂಭವಿಸುತ್ತವೆ. ಹತ್ತು, ಹನ್ನೊಂದು ಮತ್ತು ಹನ್ನೆರಡನೆಯ ನಕ್ಷತ್ರಗಳು ಜಲ, ಕ್ರೂರ ಮತ್ತು ವಕ್ರವೆಂಬ ಹೆಸರುಗಳನ್ನು ಕ್ರಮವಾಗಿ ಪಡೆಯುತ್ತವೆ. ಇವು ಕ್ರಮವಾಗಿ ಸಸ್ಯ, ವೃಷ್ಟಿ, ನಾಶ ಇವುಗಳನ್ನು ಹೆಚ್ಚಿಸುವವು. ಹದಿಮೂರು ಮತ್ತು ಹದಿನಾಲ್ಕನೆಯ ನಕ್ಷತ್ರಗಳು ಬಾಲಾಸ್ಯ ಚಕ್ರಗಳೆಂಬ ಹೆಸರಿನಿಂದ ಇರುವವು. ಇವು ಸಸ್ಯ ವೃಷ್ಟಿಗಳನ್ನು ಕ್ರಮವಾಗಿ ನಾಶಮಾಡುವವು. ಹದಿನೈದು ಮತ್ತು ಹದಿನಾರನೆಯ ನಕ್ಷತ್ರಗಳು ರುಧಿರಾನನಗಳೆಂಬ ಸಂಜ್ಞೆಯನ್ನು ಹೊಂದಿರುವವು. ಇವುಗಳು ಲೋಕಕ್ಕೆ ದುರ್ಭಿಕ್ಷೆ, ಕ್ಷುದ್ಭಯ, ರೋಗ ಮುಂತಾದವುಗಳನ್ನು ತರುತ್ತವೆ. ಹದಿನೇಳು ಮತ್ತು ಹದಿನೆಂಟನೆಯ ನಕ್ಷತ್ರಗಳು ಮುಸಲಗಳೆಂಬ ಹೆಸರಿನಿಂದ ದುರ್ಭಿಕ್ಷ. ಧನಧಾನ್ಯನಾಶ, ಭಯಗಳನ್ನು ತರುತ್ತವೆ ಲೋಕಕ್ಕೆ. ಫಲ್ಗುನೀ ನಕ್ಷತ್ರಗಳಲ್ಲಿ ಉದಯಿಸಿ ಉತ್ತರಾಷಾಢದಲ್ಲಿ ವಕ್ರಿಯಾಗಿ ರೋಹಿಣಿಯಲ್ಲಿ ಅಸ್ತನಾಗುವ ಕುಜನು ಲೋಕತ್ರಯವನ್ನು ನಾಶಮಾಡುವನು. ಶ್ರವಣ ನಕ್ಷತ್ರದಲ್ಲಿ ಉದಯವಾಗಿ ಪುಷ್ಯಾನಕ್ಷತ್ರದಲ್ಲಿ ವಕ್ರಿಯಾದ ಕುಜನು ಗೋವು, ಅಶ್ವ ಇವುಗಳಿಗೆ ಹಾನಿಪ್ರದನಾಗುವನು. ಯಾವ ದಿಕ್ಕಿನಲ್ಲಿ ಉದಯಿಸುವನೋ ಆ ದಿಕ್ಕಿನ ರಾಜರುಗಳಿಗೆ ಭಯಪ್ರದನಾಗುವನು. ಮಘಾನಕ್ಷತ್ರದಲ್ಲಿ ಉದಯಿಸಿ ಅಲ್ಲಿಯೇ ಬಂದರೆ ಆ ಮಖಾನಕ್ಷತ್ರದಲ್ಲಿಯೇ ವಕ್ರಿಯಾದರೆ ಲೋಕಕ್ಕೆ ವೃಷ್ಟಿಯಿಲ್ಲದೆ ಶಸ್ತ್ರಾದಿಗಳಿಂದ ಭಯ ಒದಗುವದು. ಮತ್ತು ದೇವತೆಗಳಿಗೂ ರಾಜರುಗಳಿಗೂ ಹಿಂಸೆ ಉಂಟಾಗುವದು. ಮಘಾ, ವಿಶಾಖಾ, ರೋಹಿಣಿ, ನಕ್ಷತ್ರಗಳಲ್ಲಿ ವಕ್ರಿಯಾದ ಕುಜನು ಗಂಡು ನಕ್ಷತ್ರಗಳಲ್ಲಿ ಸಂಚರಿಸಿದಂತೆ ಆಗುವನು. ಅದರ ಫಲವಾಗಿ ಲೋಕಕ್ಕೆ ದುರ್ಭಿಕ್ಷ, ಮರಣ, ರೋಗ ಮುಂತಾದವುಗಳನ್ನು ಕೊಡುತ್ತಾನೆ.

ಕುಜನು ಉತ್ತರಾಯಣದಲ್ಲಿ, ಉತ್ತರಾಷಾಢ, ಉತ್ತರಾಭಾದ್ರಾ, ರೋಹಿಣಿ ಮೂಲಾ, ಶ್ರವಣ ಈ ನಕ್ಷತ್ರಗಳಲ್ಲಿ ಸಂಚರಿಸುವಾಗ ವೃಷ್ಟಿಗೆ ಪ್ರತಿಬಂಧಕನಾಗುವನು, ದಕ್ಷಿಣಾಯಣದಲ್ಲಿ ರೋಹಿಣಿ ನಕ್ಷತ್ರದಲಿ ಸಂಚರಿಸುವಾಗ ಆ ರೀತಿಯಲ್ಲಿಯೇ ಅನುಗ್ರಹ ಪ್ರದನಾಗುವನು. ಎಲ್ಲಾ ನಕ್ಷತ್ರಗಳಲ್ಲಿಯೂ ಉತ್ತರದಿಗ್ಗಾಮಿಯಾದ ಕುಜನೇ ಶುಭಕರನು. ದಕ್ಷಿಣದಿಗ್ಗಾಮಿಯಾದಾಗ ಫಲ ಪ್ರದನಾಗುವನು. ಚಂದ್ರ, ಅಂಗಾರಕ ಸಮಾಗಮವು ಪ್ರಬಲವಾದ ಮಹೋತ್ಸವಕ್ಕೆ ಕಾರಣವಾಗುವದೆಂದು ಅರ್ಥ.

ಧನಿಷ್ಠಾ, ಶ್ರವಣಾ, ವಿಶಾಖಾ, ಮೃಗಶಿರ, ರೋಹಿಣಿ, ಈ ನಕ್ಷತ್ರಗಳಲ್ಲಿ ಬುಧನು ಅನಾವೃಷ್ಟಿ ಅಗ್ನಿಭಯ, ರಾಜಯುದ್ಧ ಮುಂತಾದ ಅನರ್ಥಗಳನ್ನು ಕೊಡುವನು. ಆ ಕಾರಾಮಧ್ಯಗತನಾದರೆ ಬುಧನು ಅತಿವೃಷ್ಟಿಯಿಂದ ಲೋಕವನ್ನು ಪೀಡಿಸುವನು. ಆರಿದ್ರಾದಿಂದ ಮಘಾ ನಕ್ಷತ್ರಪರ್ಯಂತವಾಗಿ ಬುಧನು ದೃಗ್ಗೋಚರನಾದರೆ ದುರ್ಭಿಕ್ಷ ಕಲಹ, ರೋಗ, ಅನಾವೃಷ್ಟಿ ಇತ್ಯಾದಿಗಳು ಸಂಭವಿಸುವವು. ಹಸ್ತ, ಚಿತ್ತ ಸ್ವಾತಿ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಈ ನಕ್ಷತ್ರಗಳಲ್ಲಿ ಸಂಚರಿಸುವ ಬುಧನು ಕ್ಷೇಮ, ಸುಭಿಕ್ಷ, ಆರೋಗ್ಯ ಮುಂತಾದ ಸತ್ಫಲಗಳನ್ನು ಕೊಡುವನು. ಉತ್ತರಾಭಾದ್ರಾ, ಉತ್ತರ, ಕೃತ್ತಿಕಾ, ಭರಣಿ ಮುಂತಾದ ನಕ್ಷತ್ರಗಳಲ್ಲಿ ಸಂಚರಿಸುವ ಬುಧನು ವೈದ್ಯರಿಗೂ, ನಾವಿಕರಿಗೂ, ವಣಿಜರಿಗೂ ಬಾಧೆ ತರುವನು, ಪೂರ್ವಾತ್ರಯಗಳಲ್ಲಿ ನಕ್ಷತ್ರಮಧ್ಯಗತನಾಗಿ ಸಂಚರಿಸುವ ಬುಧನು ಹಸಿವು, ಶಸ್ತ್ರಬಾಧೆ, ಬೆಂಕಿ ಇವುಗಳಿಂದ ಪ್ರಾಣಿಗಳನ್ನು ಪೀಡಿಸುವನು. ಭರಣಿ ಕೃತ್ತಿಕೆ, ಆರಿದ್ರಾ, ಈ ನಕ್ಷತ್ರಗಳಲ್ಲಿ ಬುಧನ ಗತಿ ಪ್ರಾಕೃತಗತಿ ಎಂದೆನ್ನುವರು. ಆರಿದ್ರಾ, ಮೃಗಶಿರಸ ಆಶ್ಲೇಷಾ ಮಘಾ ಈ ನಕ್ಷತ್ರಗಳಲ್ಲಿ ಕಾಣುವ ಗತಿಗೆ ಮಿಶ್ರಗತಿ ಎನ್ನುವರು. ಪೂರ್ವಫಲ್ಗುಣೀ, ಉತ್ತರಫಲ್ಗುಣೀ ಪುಷ್ಯ ಪುನರ್ವಸು ಈ ನಕ್ಷತ್ರಗಳ ಸಂಚಾರಕ್ಕೆ ಸಂಕ್ಷಿಪ್ತಗತಿ ಎಂದು ಹೆಸರು. ಪೂರ್ವಾಭಾದ್ರಾ, ಉತ್ತರಾಭಾದ್ರಾ, ರೇವತಿ ಈ ನಕ್ಷತ್ರ ಗಳಲ್ಲಿ ತೋರಿಬರುವ ಸಂಚಾರಕ್ಕೆ ತೀಕ್ಷ್ಣಗತಿ ಎಂದು ಹೆಸರು.

ಭರಣಿ, ವಿಶಾಖಾ, ಪೂರ್ವಾಷಾಢಾ, ಮೂಲಾ, ರೇವತಿ, ರೋಹಿಣಿ, ಈ ನಕ್ಷತ್ರಗಳ ಸಂಚಾರಕ್ಕೆ ಘೋರಗತಿ ಎಂದು ಹೆಸರು. ವಿಶಾಖಾ, ಅನುರಾಧಾ, ಹಸ್ತ, ಶ್ರವಣ ಧನಿಷ್ಠ, ಪೂರ್ವಾಷಾಢ ಈ ನಕ್ಷತ್ರಗಳ ಸಂಚಾರಕ್ಕೆ ವಾಮಗತಿಯೆಂದು ರೂಢಿಯಿದೆ. ಹಿಂದೆ ಹೇಳಿದ ಪ್ರಾಕೃತವೇ ಮೊದಲಾದ ಗತಿಗಳಲ್ಲಿ ಸಂಚರಿಸುವ ಸೂರ್ಯನು ಎಷ್ಟು ದಿವಸ ಉದಯವಾಗಿ ದೃಗ್ಗೋಚರನಾಗುವನೋ ಅಷ್ಟು ದಿವಸ ಆಸಕ್ತನೂ ಆಗಿರುವನು. ಮೇಲೆ ಹೇಳಿದ ಆರುಗತಿಗಳಲ್ಲಿಯೂ ಕ್ರಮವಾಗಿ ನಲವತ್ತು, ಮೂವತ್ತು, ಹದಿನಾಲ್ಕು, ಒಂಭತ್ತು, ಹನ್ನೊಂದು, ಹದಿನೈದು ಈ ಸಂಖ್ಯೆಯ ದಿನಗಳು ಬುಧನಿಗೆ ಉದಯಾಸ್ತ ಕಾಲಗಳಿರುವವು. ಪ್ರಕೃತಿಗತಿಯಲ್ಲಿ ಬುಧನು ಜನರಿಗೆ ಕ್ಷೇಮ, ಸೌಖ್ಯ, ಆರೋಗ್ಯ ಮುಂತಾದವುಗಳನ್ನು ಮಿಶ್ರ ಸಂಕ್ಷೇಪಗಳಲ್ಲಿ ಮಧ್ಯಮವಾದ ಫಲವನ್ನು ಇತರಗತಿಯಲ್ಲಿ ವೃಷ್ಟಿಪ್ರದ ರೂಪವಾದ ಫಲವನ್ನು ಕೊಡುವದು. ವೈಶಾಖ, ಶ್ರಾವಣ, ಪುಷ್ಯ, ಆಷಾಢ, ಈ ಮಾಸಗಳಲ್ಲಿ ಬುಧೋದಯವಾದರೆ ಜಗತ್ತಿಗೆ ಅನಿಷ್ಟಫಲವು, ಇತರ ಮಾಸಗಳಲ್ಲಿ ಆಗುವ ಬುಧೋದಯವು ಶಸ್ತ್ರಾಸ್ತ್ರಗಳ ಭಯ ತರುತ್ತದೆ. ಉದಯ ಕಾಲದಲ್ಲಿ ಬುಧನ ಬಿಂಬವು ಬೆಳ್ಳಿಯಂತೆಯೂ ಸ್ಫಟಿಕದಂತೆಯೂ ಹೊಳೆಯುತ್ತಿರುವದು. ಸೂರ್ಯ ಸಂಪರ್ಕ ದಿಂದ ಉದಿತನಾದ ಬೃಹಸ್ಪತಿಗ್ರಹವು ಯಾವ ನಕ್ಷತ್ರದಲ್ಲಿ ತೋರಿಬರುವದೋ ಆ ನಕ್ಷತ್ರದ ಹೆಸರೇ ಆ ವರ್ಷಕ್ಕೆ ಬರುವುದು.

ಅದೇ ರೀತಿಯಲ್ಲಿ ಬೃಹಸ್ಪತಿ ನಕ್ಷತ್ರದಿಂದ ಹುಟ್ಟುವ ತಿಂಗಳುಗಳ ಫಲವೇನೆಂದರೆ ಕಾರ್ತೀಕ, ಮಾರ್ಗಶಿರ, ಈ ಮಾಸಗಳು, ದುಷ್ಪಫಲಪ್ರದಗಳಾಗುವವು. ಪುಷ್ಯ, ಮಾಘ, ಮಾಸಗಳು ಶುಭ ಫಲಪ್ರದಗಳು. ಫಾಲ್ಗುಣನ ಮತ್ತು ಚೈತ್ರ ಈ ಮಾಸಗಳು ಮಧ್ಯಮ ವಾದ ಫಲಗಳನ್ನು ಕೊಡುತ್ತವೆ. ವೈಶಾಖ ಮಾಸವು ಶುಭಫಲವಾದದ್ದೆಂದು ಹೇಳಿದೆ.

ಜ್ಯೇಷ್ಠ ಮಾಸವು ಮಧ್ಯಮ ಫಲಪ್ರದವೆಂದೂ ಶ್ರಾವಣವು ಉತ್ತಮ ಫಲವೆಂದೂ, ಭಾದ್ರಪದ ಆಶ್ವಯುಜ ಮಾಸಗಳು ಅತ್ಯುತ್ತಮ ಫಲಪ್ರದವೆಂದೂ ಅರ್ಥ. ಗುರುವು ಉತ್ತರಾಯಣದಲ್ಲಿ ಸಂಚರಿಸುವ ನಕ್ಷತ್ರಗಳು ಅಶುಭಫಲಪ್ರದಗಳಾಗಿಯೂ ಮಧ್ಯಭಾಗದ ನಕ್ಷತ್ರಗಳು ಮಧ್ಯಮ ಫಲಪ್ರದವೆಂದೂ ತಿಳಿಯಲಾಗುತ್ತದೆ. ಪೀತ, ಅಗ್ನಿವರ್ಣ, ಹಸರು, ಕೆಂಪು ಈ ಬಣ್ಣಗಳಿಂದ ಕೂಡಿದ ಗುರುವು ಲೋಕಕ್ಕೆ ಕ್ರಮವಾಗಿ ವ್ಯಾಧಿ, ಅಗ್ನಿ ಚೋರ ಮುಂತಾದ ಭಯ ತರುವನು. ಧೂಮ್ರ, ವರ್ಣದ ಗುರುವು ಅನಾವೃಷ್ಟಿಯ ಸೂಚಕನು. ವರ್ಷದ ಮೊದಲ ಭಾಗದಲ್ಲಿ ಕೃತ್ತಿಕಾ ಮತ್ತು ರೋಹಿಣಿ ನಕ್ಷತ್ರಗಳಲ್ಲಿ ಸಂಚರಿಸುವ ಗುರುವು ಹಗಲು ಪ್ರವೇಶಿಸಿದರೆ ರಾಜ, ರಾಣಿ ಮತ್ತು ರಾಜ್ಯ ಇವರುಗಳಿಗೆ ತೊಂದರೆ ಗುರು ಉತ್ತರವೆಂಬ ಪುರುಷನಿಗೆ ಕೃತ್ತಿಕೆಯೇ ಶರೀರ. ರೋಹಿಣೀ ಪಾದಯಗಲ, ಮಘಾ ನಕ್ಷತ್ರವೇ ಹೃದಯ. ಈ ರೀತಿ ಏರ್ಪಟ್ಟಿದೆ. ಶರೀರ ಸ್ಥಾನದ ನಕ್ಷತ್ರವು ಕ್ರೂರ ಗ್ರಹಾಕ್ರಾಂತವಾದರೆ ದುರ್ಭಿಕ್ಷ, ಅಗ್ನಿ, ವಾಯು ಇವುಗಳಿಂದ ಭಯ ಉಂಟಾಗುವದು. ಸಾಭಿಭೂತವಾದ ನಕ್ಷತ್ರವು ಕ್ರೂರ ಗ್ರಹಾಕ್ರಾಂತವಾದರೆ ಹಸಿವು ಬಾಯಾರಿಕೆ ಭಯವು ತಪ್ಪುವದಿಲ್ಲ. ಪುಷ್ಯಾ ನಕ್ಷತ್ರವು ಕ್ರೂರಗ್ರಹ ವಿಶಿಷ್ಟವಾದರೆ ಹಣ್ಣು, ಹಂಪಲುಗಳು, ಕಾಯಿಪಲ್ಲೆಗಳು, ಗಡ್ಡೆ ಗೆಣಸುಗಳು ಮುಂತಾದ ಪದಾರ್ಥಗಳು ಕ್ಷಯವಾಗುವವು. ಮತ್ತು ಸಮಾಜದ ಮುಖಂಡರೆನಿಸುವವರಿಗೆ ತೊಂದರೆ. ಮೇಲೆ ಹೇಳಿದ ನಕ್ಷತ್ರಗಳು ಶುಭ ಗ್ರಹಾಕ್ರಾಂತವಾದರೆ ಸಸ್ಯವೃದ್ಧಿ, ಪ್ರಜಾರೋಗ್ಯ ಉಂಟಾಗುತ್ತವೆ. ಗುರುವು ಯುದ್ಧದಲ್ಲಿ ವಿಜಯಿಯಾಗಿ ಪ್ರಕಾಶಿಸಿದರೆ ದ್ವಿಜವರ್ಗಕ್ಕೂ ಪಶು ರಾಜ ಸ್ತ್ರೀ ಇವರಿಗೂ ಅತಿಶಯ ಸೌಖ್ಯ ಉಂಟು. ಗುರುವು ಮಘಾದಿಯಾಗಿ ನಕ್ಷತ್ರಗಳಲ್ಲಿ ಸಂಚರಿಸುವಾಗ ಕ್ರಮವಾಗಿ ದಾರಿದ್ರ್ಯ, ಅನಾವೃಷ್ಟಿ, ಸರ್ಪಭಯ, ರೋಗ ಮುಂತಾದ ಫಲಗಳು ಲಭಿಸುತ್ತವೆ. ಶುಕ್ರನ ಅಶ್ವಿನ್ಯಾದಿ ಮೂರು ಮೂರು ನಕ್ಷತ್ರಗಳ ಸಂಚಾರ ಮಾರ್ಗಕ್ಕೆ ಒಂದೊಂದು ವೀಥಿಯೆಂದು ಹೆಸರು. ಹಾಗೆ ಇಪ್ಪತ್ತೇಳು ನಕ್ಷತ್ರಗಳಿಗೆ ಒಂಭತ್ತು ವೀಥಿಗಳಾಗುವುವು. ಇವು ದಕ್ಷಿಣಾಯಣ, ಉತ್ತರಾಯಣ ಮಧ್ಯಾಯಣ ಈ ಭಾಗಗಳಲ್ಲಿ ಪ್ರತ್ಯೇಕವಾದ ಫಲಗಳನ್ನು ಕೊಡುತ್ತವೆ. ಈ ವೀಥಿಕ್ರಮವಾಗಿ ನಾಗ, ಇಭ, ಐರಾವತ, ವೃಷಭ, ಉಷ್ಟ್ರ ಖರ, ಮೃಗ, ಅಜ ಮತ್ತು ದಹನಗಳೆಂದು ಕರೆಯಲ್ಪಡುತ್ತವೆ.

ಉತ್ತರಾಯಣದಲ್ಲಿ ಈ ವೀಥಿಯಲ್ಲಿ ಸಂಚರಿಸುವ ಶುಕ್ರನು ಧಾನ್ಯ, ಅರ್ಥ, ವೃಷ್ಟಿ, ಸಸ್ಯ ಇವುಗಳ ಅಭಿವೃದ್ಧಿಯನ್ನು ಕೊಡುವನು. ಮಧ್ಯಮ ಮಾರ್ಗದಲ್ಲಿ ಮಧ್ಯಮ ಫಲವನ್ನು ದಕ್ಷಿಣಾಯಣ ಮಾರ್ಗದಲ್ಲಿ ಫಲವು ಶುಕ್ರನಿಂದ ಲೋಕಕ್ಕೆ ಉಂಟಾಗುವದು. ಮಘಾದಿಯಾಗಿ ಐದು ನಕ್ಷತ್ರಗಳಲ್ಲಿ ಶುಕ್ರನು ಸಂಚರಿಸುವಾಗ ಪೂರ್ವದಿಗ್ಭಾಗದಲ್ಲಿ ವೃಷ್ಟಿಯು ಅಧಿಕವಾಗಿರುತ್ತದೆ. ಸ್ವಾತೀತ್ರಯದಲ್ಲಿರುವಾಗ ಪಶ್ಚಿಮದಲ್ಲಿ ವೃಷ್ಟಿ ಉಂಟಾಗುವುದು. ಪೂರ್ವ, ಪಶ್ಚಿಮ ದಿಕ್ಕುಗಳಲ್ಲಿ ನಕ್ಷತ್ರ ವ್ಯತ್ಯಾಸವಾದಾಗ ಅನಾವೃಷ್ಟಿ ಉಂಟಾಗುವದು. ಅಲ್ಲದೆ ವಾತಾದಿ ಪೀಡೆಗಳೇ ಜಾಸ್ತಿಯಾಗುತ್ತವೆ. ಕೃಷ್ಣಾಷ್ಟಮಿ, ಕೃಷ್ಣ

ಚತುರ್ದಶಿ ಅಮಾವಾಸ್ಯಾ, ಇವುಗಳಲ್ಲಿ ಶುಕ್ರನು ಉದಯಾಸ್ತಗಳನ್ನು ಪಡೆದರೆ ವೃಷ್ಟಿಯು ಅಧಿಕವಾಗಿ ಭೂಮಿಗೆ ಬೀಳುವದು. ಗುರು ಪರಸ್ಪರ ಸಪ್ತಮ ರಾಶಿಗತರಾಗಿ ಪೂರ್ವ ವೀಥಿಯಲ್ಲಿದ್ದರೆ ಅನಾವೃಷ್ಟಿ ದುರ್ಭಿಕ್ಷಗಳ ಬಾಧೆ.

ಕುಜ, ಬುಧ, ಶನಿ, ಗುರು, ಶುಕ್ರರಿಗಿಂತ ಮುಂದಿನ ನಕ್ಷತ್ರಗಳಲ್ಲಿದ್ದರೆ ಕ್ರಮವಾಗಿ ಯುದ್ಧ ಅತಿವಾಯು, ದುರ್ಭಿಕ್ಷ, ಜಲನಾಶ, ಇವುಗಳು ಲಭಿಸುವವು ಪೂರ್ವಾಷಾಢಾ, ಅನುರಾಧಾ, ಉತ್ತರಾ, ಆಶ್ಲೇಷಾ, ಜ್ಯೇಷ್ಠಾ ಈ ನಕ್ಷತ್ರಗಳಲ್ಲಿ ಸಂಚರಿಸುವ ಶುಕ್ರನು ಭಿಕ್ಷವನ್ನುಂಟು ಮಾಡುವನು. ಮೂಲಾ ನಕ್ಷತ್ರದಲ್ಲಿರುವ ಶುಕ್ರನು ಶಾಸ್ತ್ರವೃದ್ಧಿ ವೃಷ್ಟಿವೃದ್ಧಿಗಳನ್ನು ಕೊಡುವನು. ಉತ್ತರಾಭಾದ್ರಾ ಮತ್ತು ರೇವತಿ ಈ ನಕ್ಷತ್ರಗಳಲ್ಲಿ ಶುಕ್ರನು ಭಯವನ್ನುಂಟು ಮಾಡುವನು. ಶನಿಯು ಶ್ರವಣ, ಸ್ವಾತಿ, ಹಸ್ತ, ಆರಿದ್ರಾ ಭರಣಿ, ಪುಬ್ಬ ಈ ನಕ್ಷತ್ರಗಳಲ್ಲಿ ಸಂಚರಿಸುವಾಗ ಸುಭಿಕ್ಷೆ, ಆರೋಗ್ಯ, ಸಸ್ಯ ಇವುಗಳನ್ನು ವೃದ್ಧಿಪಡಿಸುವನು. ಶನಿಯು ಉದಯವಾಗುವ ನಕ್ಷತ್ರದಿಂದ ಒಂದು ನಕ್ಷತ್ರವು ಶನಿ ವತ್ಸರ ಪುರುಷನಿಗೆ ಮುಖವಾಗಿಯೂ ಎರಡು ನಕ್ಷತ್ರಗಳು ಗುದವಾಗಿಯೂ, ಮೂರು ನಕ್ಷತ್ರಗಳು ಶಿರಸ್ಸಾಗಿಯೂ, ಎರಡು ಕಣ್ಣುಗಳಾಗಿಯೂ, ಐದು ಹೃದಯವಾಗಿಯೂ ನಾಲ್ಕು ಬಲಗೈಗಳಾಗಿಯೂ, ಮೂರು ಎರಡುಪಾದಗಳಾಗಿಯೂ, ನಾಲ್ಕು ನಕ್ಷತ್ರಗಳು ಎಡ ಮತ್ತು ಬಲಗೈಗಳಾಗಿಯೂ ಆಗುವವು. ಮೇಲೆ ಹೇಳಿದ ಅಂಗ ವಿಭಾಗಗಳಲ್ಲಿ ಸಂಚರಿಸುವ ಶನಿಯು ಕ್ರಮವಾಗಿ ರೋಗ, ಲಾಭ, ಹಾನಿ, ಲೋಭ, ಸುಖ, ಬಂಧನ ಆಯಾಸ, ಶ್ರೇಷ್ಠವಾದ ಯಾತ್ರೆ, ಧನಲಾಭ, ಬಹುಪತ್ನೀಲಾಭ, ವಿಜಯ ಈ ಫಲಗಳನ್ನು ಕೊಡುವನು. ಆದರೆ ಶನಿಯು ವಕ್ರನಾಗಿ ಈ ನಕ್ಷತ್ರಗಳಲ್ಲಿ ಸಂಚರಿಸಿದರೆ ಪೂರ್ಣ ಫಲ ಉಂಟು. ಋಜುಗತಿಯಲ್ಲಿ ಮಧ್ಯಮನಾಗಿಯೂ, ಶೀಘ್ರ ಗತಿಯಲ್ಲಿ ವಿರುದ್ಧವಾಗಿಯೂ ಫಲಗಳುಂಟಾಗುವವೆಂದು ತಿಳಿಯಬೇಕು. ಅಮೃತಪಾನಾಸಕ್ತನಾಗಿ ಅಡಗಿದ ರಾಕ್ಷಸನು ವಿಷ್ಣು ಚಕ್ರದಿಂದ ಕತ್ತರಿಸಲ್ಪಟ್ಟ ರುಂಡವೇ ರಾಹು. ಅಮೃತಪಾನದ ಫಲವಾಗಿ ಅಮರತ್ವ ಬಂತು, ಮುಂದೆ ಗ್ರಹ ಸ್ಥಾನ ಪಡೆಯಿತು. ಸೂರ್ಯ ಚಂದ್ರರ ಮತ್ತು ರಾಹು ಗ್ರಹದ ಸ್ಫುಟೈಕ್ಯ ಮತ್ತು ಶರಾಭಾವ ಇವುಗಳಿಂದ ಗಣಿತ ರೀತಿಯಾಗಿ ಗ್ರಹಣ ಸಂಭವಿಸುವದು. ಈ ಕಾಲದಲ್ಲಿ ಈ ರಾಹು ಗ್ರಹವು ತನಗೆ ದ್ರೋಹ ಮಾಡಿದ ಸೂರ್ಯ ಚಂದ್ರರನ್ನು ನುಂಗುವನು. ಸೂರ್ಯ ಚಂದ್ರ ಗ್ರಹಗಳಿಗೆ ಆರು ತಿಂಗಳಿಗಿಂತ ಹೆಚ್ಚಿನ ಅಂತರವಿದ್ದರೆ ಕ್ರಮವಾಗಿ ಬ್ರಹ್ಮ, ಇಂದ್ರ, ಇಂದು, ಕುಬೇರ, ವರುಣ ಅಗ್ನಿ, ಯಮ, ಇವರು ಪರ್ವಾಧಿಪತಿಗಳೆನಿಸುವರು. ಆರು ತಿಂಗಳ ಅಂತರಕ್ಕೆ ಬ್ರಹ್ಮನೇ ಪರ್ವಾಧಿಪತಿ, ಬ್ರಾಹ್ಮ ಪರ್ವದಲ್ಲಿ ಪಶು, ಸಸ್ಯ, ದ್ವಿಜ, ವೃದ್ಧಿ, ಹೆಚ್ಚುವದು.

ಇನ್ನು ಏಳು ತಿಂಗಳ ಅಂತರಕ್ಕೆ ಚಂದ್ರನು ಪರ್ವಾಧಿಪತಿ ಎನಿಸುವನು. ಆದುದರಿಂದ ಶ್ಲೇಷ್ಮ ಪೀಡೆಯೊದಗಿ ಉಳಿದ ಫಲವೆಲ್ಲ ಬ್ರಾಹ್ಮಪರ್ವದಂತೆ ನಡೆಯುವದು. ಇಂದ್ರನು ಪರ್ವೇಶನಾದಾಗ ರಾಜರ ದ್ವೇಷವೂ ಸಸ್ಯನಾಶವೂ ಉಂಟಾಗುವದು. ಕುಬೇರನು ಪರ್ವಾಧಿಪತಿ ಯಾದಾಗ ಶ್ರೀಮಂತನಿಗೆ ಧನಹಾನಿಯೂ ಧಾನ್ಯವೃದ್ಧಿಯೂ ಹೆಚ್ಚುವದು. ವರುಣನು ಪರ್ವಾಧಿಕಾರಿಯಾದ ರಾಜರಿಗೆ ಅಮಂಗಲವಾದರೆ ಇತರರಿಗೆ ಮಂಗಲ. ಅಗ್ನಿಯು ಪರ್ವಾಧಿಪತಿಯಾದರೆ ಅತಿವೃಷ್ಟಿ, ಸಸ್ಯ ವೃದ್ಧಿ, ಪ್ರಜಾ ಪ್ರೇಮಿ, ಯಮನ ಪರ್ವಾಧಿಪತ್ಯದಲ್ಲಿ ಅನಾವೃಷ್ಟಿ ಸಸ್ಯ ಹಾನಿ ದುರ್ಭಿಕ್ಷ ಇವುಗಳು ಒದಗುವವು. ಆರು ತಿಂಗಳಿಗೆ ಮುಂಚೆ

ಗ್ರಹಗಳು ಸಂಭವಿಸಿದರೆ ಸಸ್ಯಹಾನಿ ರಾಜರಿಗೆ ಭಯ ಪುಷ್ಪಹಾನಿ (ಧಷ್ಟ ಪುಷ್ಪಜನರು) ಇವುಗಳು ಸಂಭವಿಸುತ್ತದೆ. ಅತಿಮೇಲಾದರೆ ಸಸ್ಯನಾಶಭಯ. ಒಂದೇ ತಿಂಗಳಲ್ಲಿ ಸೂರ್ಯ-ಚಂದ್ರಾದಿಗ್ರಹಣಗಳು ಬಂದರೆ ರಾಜರಲ್ಲಿ ದ್ವೇಷ, ಪದಾರ್ಥಗಳ ಬೆಲೆ ಹೆಚ್ಚುವಿಕೆ, ಮತ್ತು ಅನಾವೃಷ್ಟಿ ಮುಂತಾದ ಫಲಗಳು. ಗ್ರಸ್ತೋದಯವಾದರೆ ರಾಜನಾಶವೂ, ಗ್ರಸ್ತಾಸ್ತವಾದರೆ ಧ್ಯಾನ್ಯ ನಾಶವೂ ಸಂಪೂರ್ಣ ಗ್ರಹಣ ಒದಗಿದರೆ ಹಸಿವು, ಬಾಯಾರಿಕೆ, ಅಗ್ನಿ, ಭಯ, ಇವುಗಳು ಜನರಿಗೆ ಹೆಚ್ಚಾಗುವವು.

ಅಂತರಿಕ್ಷದಲ್ಲಿ ಕಂಡು ಬರುವ ಧೂಮಕೇತವು ಹ್ರಸ್ವವಾಗಿದ್ದು ಶುಭವರ್ಣವುಳ್ಳದ್ದಾದ ಅದು ವೃಷ್ಟಿ ಪ್ರದವೆಂದೂ, ದೀರ್ಘಾಕಾರವಾಗಿ ಬೇಗ ಅದೃಶ್ಯವಾಗುವ ಕೇತುವು ವೃಷ್ಟಿನಾಶಕವೆಂದು ತಿಳಿಯಬೇಕು. ಇಂದ್ರ ಧನುಸ್ಸಿನಂತಿರುವ ಧೂಮಕೇತುವು ಅನಿಷ್ಟಪ್ರದವಾಗುವದು. ಎರಡು, ಮೂರು ಅಥವಾ ನಾಲ್ಕು ಶೂಲಗಳ ಆಕಾರದಲ್ಲಿ ಕಂಡುಬರುವ ಧೂಮಕೇತುವು ರಾಜ್ಯಕ್ಕೆ ಅನಿಷ್ಟಕಾರಕ. ಮಣಿಗಳ ಹಾರದಂತೆ ಹೊಳೆಯುವ ಕೆಲವು ಧೂಮಕೇತುಗಳು, ಸೂರ್ಯಪುತ್ರರೆಂದು ಪ್ರಸಿದ್ಧವಾಗಿರುವವು. ಇವು ಸಾಮಾನ್ಯವಾಗಿ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿಯೇ ತೋರಿಬರುವವು. ಇದರಿಂದ ರಾಜರಿಗೆ ತುಂಬಾ ತೊಂದರೆಯಾಗುವದು. ಈ ಧೂಮಕೇತುಗಳು ಬಿದಿರಿನ ಮಳೆಯಂತೆಯೂ, ಗಿಳಿಯಕೊಕ್ಕಿನಂತೆಯೂ, ಮರದಂತೆಯೂ ಕಂಡುಬರುತ್ತ ಅಗ್ನಿ ಜ್ವಾಲೆಗಳನ್ನೆರಚುವವು. ಇವು ಅನಿಷ್ಟಫಲ ಪ್ರದವಾದವುಗಳೆಂದು ಹಿಂದೆಯೇ ಹೇಳಿದೆ. ಇನ್ನು ಚಂದ್ರ ಸಂಬಂಧವಾದ ಕೇತುಗಳು ಭೂಸಂಬಂಧವಾದ ಕೇತುಗಳು ಜಲ ತೈಲದಂತೆ ವಿವಿಧವರ್ಣದಲ್ಲಿಯೂ ತುಲಾಕಾರದಲ್ಲಿಯೂ ಕಂಡು ಬರುವವು. ಭೂಮಿಯ ಉತ್ಪಾತಗಳು ಕ್ಷುದ್ಭಯವನ್ನುಂಟು ಮಾಡುವವು. ಚಂದ್ರ ಕೇತುಗಳು ಶುಭಫಲಗಳನ್ನು ಕೊಡುತ್ತದೆ. ಇನ್ನು ವರ್ಣತ್ರಯ ವಿಶಿಷ್ಟವಾಗಿಯೂ, ಮೂರು ಮೂಲೆಗಳಳ್ಳದ್ದಾಗಿಯೂ ಮತ್ತು ಬ್ರಹ್ಮಾಂಡಾಕಾರದಲ್ಲಿಯೂ, ಕೆಲವು ಕೇತುಗಳಿರುವವು. ಇವು ಬೃಹಸ್ಪತಿ ಕೇತುಗಳೆಂದು ಹೇಳಲ್ಪಡುವವು. ಇವುಗಳಿಂದ ಪ್ರಜೆಗಳಿಗೆ ಅನಿಷ್ಟ, ಈಶಾನ್ಯ ದಿಕ್ಕಿನಲ್ಲಿ ಶ್ವೇತವರ್ಣದಿಂದ ಗೋಚರವಾಗುವ ಕೆಲವು ಧೂಮ ಕೇತುಗಳು ಶುಕ್ರಗ್ರಹಕ್ಕೆ ಸಂಬಂಧಿಸಿದವುಗಳೆಂದು ಅರ್ಥ. ಶನಿ ಸಂಬಂಧವಾದ ಧೂಮಕೇತುಗಳು ಶಿಖಾರಹಿತವಾಗಿ ಕಪ್ಪು ಬಣ್ಣದಿಂದ ಕಾಣಿಸಿಕೊಳ್ಳುವವು. ಇವುಗಳೂ ಸಹ ಅನಿಷ್ಟ ಫಲಗಳನ್ನು ಕೊಡುವವು. ಇವುಗಳಿಗೆ ಭೀಮಕೇತುಗಳೆಂದು ಕರೆಯುತ್ತಾರೆ. ಗುರುಯುತಗಳಾದ ಕೇತುಗಳಿಗೆ ವಿಕಟಗಳೆಂದು ಹೆಸರು. ಈ ಕೇತುಗಳು ದಕ್ಷಿಣೋತ್ತರ ಭಾಗಗಳಲ್ಲಿ ಕಂಡು ಬರುವವು. ಬುಧ ಸಂಬಂಧವಾದ ಕೇತುಗಳು ಅತ್ಯಂತ ಸೂಕ್ಷ್ಮಗಳಾಗಿದ್ದರೂ ಚೋರ, ಭಯ, ರೋಗಾದಿಗಳನ್ನು ಹಬ್ಬಿಸುವವು. ಕುಜ ಸಂಬಂಧಿಯಾದ ಕೇತುಗಳಿಗೆ ಕುಂಕುಮಕೇತುಗಳೆಂದೂ ಹೆಸರು. ಇವು ಕೆಂಪಾಗಿಯೂ, ಶೂಲಾಕಾರದಲ್ಲಿಯೂ ಇದ್ದು ಅನಿಷ್ಟವಾದ ಫಲಗಳನ್ನು ಲೋಕಕ್ಕೆ ಕೊಡುವವು. ಇನ್ನು ಅಗ್ನಿ ವರ್ಣದಂತೆ ಶೋಭಿಸುವ ಆಗ್ನೇಯಕೇತುಗಳು ಲೋಕಕ್ಕೆ ಶುಭ ಫಲಗಳನ್ನು ಕೊಡುತ್ತವೆ.

ಆಗ್ನೇಯಕೇತುಗಳಿಗೆ ವಿಶ್ವರೂಪಕೇತುಗಳೆಂದು ಹೆಸರು. ಸೌರಕೇತುಗಳು ಕೆಂಪಾಗಿಯೂ ಶಾಮಲವರ್ಣಗಳಾಗಿಯೂ ಕಾಣಿಸುತ್ತವೆ. ಇವು ಲೋಕಕ್ಕೆ ಅನಿಷ್ಟ ಫಲಕೊಡುತ್ತವೆ. ಶುಕ್ರ ಸಂಬಂಧವಾದ ಧೂಮಕೇತುಗಳು ನಕ್ಷತ್ರದಂತೆ ಕಾಣಿಸಿಕೊಂಡು ಜಗತ್ತಿಗೆ ಶುಭಫಲನೀಡುತ್ತವೆ. ಕೃತ್ತಿಕಾನಕ್ಷತ್ರ ಮಧ್ಯದಲ್ಲಿ ಉದಯಿಸುವ ಧೂಮಕೇತುವು

ಕ್ಷಯವನ್ನುಂಟುಮಾಡುವವು, ಪ್ರಾಸಾದ, ಶೈಲ, ವೃಕ್ಷ ಇವುಗಳ ಪ್ರದೇಶದಲ್ಲಿ ಕಂಡು ಬರುವ ಧೂಮಕೇತುಗಳು ರಾಜರಿಗೆ ಅನಿಷ್ಟವನ್ನುಂಟು ಮಾಡುತ್ತವೆ. ಕನ್ನೈದಿಲೆಯಂತೆ ಕಂಡು ಬರುವ ಕೌಮುದಕೇತುಗಳು ಲೋಕಕ್ಕೆ ಶುಭಕಾರಕ. ಸಂಧ್ಯಾಕಾಲಗಳಲ್ಲಿ ಕಾಣುವ ಸುಳಿಯಂತಿರುವ ಧೂಮಕೇತುಗಳು ಇಷ್ಟವಾದ ಫಲಗಳನ್ನುಂಟು ಮಾಡುತ್ತವೆ. ವರ್ಷಗಣನೆಯಲ್ಲಿ ಬ್ರಹ್ಮ, ದೇವ, ಮನು, ಪಿತೃ, ಸೌರ, ಸಾವನ, ಚಾಂದ್ರ, ನಕ್ಷತ್ರ ಮತ್ತು ಗುರುಮಾನಗಳೆಂದು ಒಂಭತ್ತು ವಿಧವಾದ ಮಾನಗಳುಂಟು, ಅವುಗಳಲ್ಲಿ ಐದು ಮಾನಗಳು ಮಾತ್ರ ವ್ಯವಹಾರದಲ್ಲಿದೆ. ಒಂದೊಂದು ಮಾನವೂ ಒಂದೊಂದು ಕಾಲಕ್ಕೆ ಕಾರ್ಯಾನುಕೂಲವಾಗಿವೆ. ಸೌರಮಾನದಿಂದ ಗ್ರಹಗಳ ಚಾರವನ್ನೂ, ವೃಷ್ಟಿ ವಿಧಾನ ಮತ್ತು ಸ್ತ್ರೀಗರ್ಭಮಾಸ ನಿಶ್ಚಯ ಇವುಗಳನ್ನು ಸಾವನಮಾನದಿಂದಲೂ, ವೃಷ್ಟಿ ಗರ್ಭಾದಿಗಳನ್ನು ನಾಕ್ಷತ್ರಮಾನದಿಂದಲೂ ವಿವಾಹ ಉಪನಯನ ಕ್ಷೌರಾದಿ ಕರ್ಮಗಳು ತಿಥಿ ವರ್ಷ, ಇವುಗಳ ಅಧಿಪತಿಗಳ ನಿರ್ಣಯ, ಪರ್ವ ತಿಥಿ, ಉಪವಾಸ, ತಿಥಿಗಳು, ವಾಸ್ತು ಪೂಜಾದಿಗಳು ಮುಂತಾದವುಗಳನ್ನು ಚಾಂದ್ರಮಾನದಿಂದ ನಿರ್ಣಯಿಸಬೇಕು. ಪ್ರಭವಾದಿ ಅರವತ್ತು ವರ್ಷಗಳ ಲಕ್ಷಣವನ್ನು ಗುರುಮಾನದಿಂದ ಗುಣಿಸಬೇಕು.

ಗುರು ಸಂಚರಿಸುವ ಮಧ್ಯಮಾಚಾರದಿಂದ ವರ್ಷವನ್ನು ಆ ವರ್ಷಕ್ಕೆ ಹನ್ನೆರಡು ಸಂಖ್ಯೆಯ ಮಾಸಗಳನ್ನು ಗುರುಚಾರದಿಂದಲೇ ನಿರ್ಣಯಿಸಬೇಕು. ಹಿಂದೆ ಹೇಳಿದ ಅರವತ್ತು ಸಂವತ್ಸರಗಳ ಹೆಸರು ಈ ರೀತಿಯಾಗಿವೆ. (೧) ಪ್ರಭವ (೨) ವಿಭವ (೩) ಶುಕ್ಲ (೪) ಪ್ರಮೋದೂತ (೫) ಪ್ರಜೋತ್ಪತ್ತಿ (೬) ಅಂಗಿರಸ (೭) ಶ್ರೀಮುಖ (೮) ಭಾವ (೯) ಯುವ (೧೦) ಧಾತೃ (೧೧) ಈಶ್ವರ (೧೨)ಬಹುಧಾನ್ಯ (೧೩) ಪ್ರಮಾಥಿ (೧೪) ವಿಕ್ರಮ (೧೫) ವಿಷ್ಣು (೧೬) ಚಿತ್ರಭಾನು (೧೭) ಸ್ವರ್ಭಾನು (೧೮) ತಾರಣ (೧೯) ಪಾರ್ಥಿವ (೨೦) ವ್ಯಯ (೨೧) ಸರ್ವಜಿತು (೨೨) ಸರ್ವಧಾರಿ (೨೩) ವಿರೋಧಿ (೨೪) ವಿಕೃತಿ (೨೫) ಖರ (೨೬) ನಂದನ (೨೭) ವಿಜಯ (೨೮) ಜಯ (೨೯) ಮನ್ಮಥ (೩೦) ದುರ್ಮುಖಿ (೩೧) ಹೇವಿಳಂಬಿ (೩೨) ವಿಳಂಬಿ (೩೩) ವಿಕಾರಿ (೩೪) ಶಾರ್ವರಿ (೩೫) ಪ್ಲವ (೩೬) ಶುಭಕೃತ್ (೩೭) ಶೋಭಕೃತ್ (೩೮) ಕ್ರೋಧಿ (೩೯) ವಿಶ್ವಾವಸು (೪೦) ಪರಾಭವ (೪೧)ಪ್ಲವಂಗ (೪೨)ಕೀಲಕ (೪೩)ಸೌಮ್ಯ (೪೪)ಸಾಧಾರಣ (೪೫)ವಿರೋಧಿಕೃತ್ (೪೬)ಪರಿಧಾವೀ (೪೭) ಪ್ರಮಾದಿ (೪೮) ಆನಂದ (೪೯) ರಾಕ್ಷಸ (೫೦) ನಳ (೫೧) ಪೈಂಗಳ (೫೨)ಕಾಳಯುಕ್ತಿ (೫೩)ಸಿದ್ಧಾರ್ಥಿ (೫೪)ರೌದ್ರಿ (೫೫)ದುರ್ಮತಿ (೫೬)ದುಂದುಭಿ (೫೭)ರುಧಿರೋದ್ಗಾರಿ (೫೮)ರಕ್ತಾಕ್ಷಿ (೫೯) ಕ್ರೋಧನ (೬೦) ಅಕ್ಷಯ.

ಈ ಅರವತ್ತು ಸಂವತ್ಸರಗಳು ತಮ್ಮ ಹೆಸರಿನಂತೆ ಫಲನೀಡುವವು. ಇದರಲ್ಲಿ ಐದು ವರ್ಷಗಳಿಗೆ ಒಂದೊಂದು ಯುಗ. ಯುಗಗಳು ಹನ್ನೆರಡು ಅವುಗಳಲ್ಲಿ ಕ್ರಮವಾಗಿ (೧) ವಿಷ್ಣು (೨) ಗುರು (೩) ಇಂದ್ರ (೪) ಕುಜ (೫) ತ್ವಷ್ಟ್ಟ (೬) ಅಹಿರ್ಬುಧ್ನ್ಯ (೭) ಪಿತೃಗಳು (೮) ವಿಶ್ವದೇವತೆಗಳು (೯) ಚಂದ್ರ (೧೦) ಇಂದ್ರಾಗ್ನಿ (೧೧) ಅಶ್ವಿನೀದೇವತೆಗಳು (೧೨) ಭಗ ಇತ್ಯಾದಿ.

ಈ ರೀತಿಯಾಗಿ ದೇವತೆಗಳು ಆಯಾ ಯುಗಗಳಿಗೆ ಅಭಿಮಾನಿದೇವತೆಗಳಾಗುವರು. ಹೀಗೆ ಯುಗಾಧಿಪತಿಗಳು, ವರ್ಷಾಧಿಪತಿಗಳು, ಸೇನಾಧಿಪತಿ, ಸಸ್ಯಾಧಿಪತಿ ಮುಂತಾದವರ

ಬಲಾಬಲಗಳನ್ನು ಚಾರವಶದಿಂದ ಸರಿಯಾಗಿ ತಿಳಿದುಕೊಂಡು ವರ್ಷಫಲ ತಿಳಿಯಬೇಕು. ಮಕರಾದಿಯಾದ ಆರು ಸೌರಮಾಸಗಳಿಗೆ ಉತ್ತರಾಯಣವೆಂದು ಹೆಸರು. ಆ ಕಾಲವೇ ದೇವತೆಗಳಿಗೆ ಹಗಲು. ಕಟಕಾದಿಯಾದ ಆರು ಮಾಸಗಳು ರಾತ್ರಿಯಾಗಿ ದಕ್ಷಿಣಾಯನ ವಾಗಿರುವವು. ಗೃಹ ಪ್ರವೇಶ, ವಿವಾಹ, ದೇವ ಪ್ರತಿಷ್ಠಾಪನೆ, ಉಪಯನಯ ಮುಂತಾದ ಕರ್ಮಗಳನ್ನು ಮಾಘಾದಿಯಾದ ಉತ್ತರಾಯಣದಲ್ಲಿ ಮಾಡಬೇಕು. ದಕ್ಷಿಣಾಯನದಲ್ಲಿ ಮಾಡುವದು ಉತ್ತಮವಲ್ಲ. ಮಾಘಮಾಸದಿಂದ ಎರಡೆರಡು ತಿಂಗಳಿಗೆ ಒಂದೊಂದು ಋತುವಿನಂತೆ ಶಿಶಿರಾದಿಯಾಗಿ ಆರು ಋತುಗಳು ಆರಂಭ ವಾಗುವವು. ಶಿಶಿರ, ವಸಂತ ಮತ್ತು ಗ್ರೀಷ್ಮ ಋತುಗಳು ಉತ್ತರಾಯಣದಲ್ಲಿಯೂ ವರ್ಷ, ಶರತ ಮತ್ತು ಹೇಮಂತ ಈ ಮೂರು ಋತುಗಳು ದಕ್ಷಿಣಾಯನದಲ್ಲಿಯು ಬರುವವು. ಚಾಂದ್ರಮಾಸಕ್ಕೆ ಅಮಾವಾಸ್ಯೆಯೂ ಸೌರಮಾಸಕ್ಕೆ ಸಂಕ್ರಾಂತಿಯೂ ಅವಧಿಭೂತ ವಾಗಿರುವವು. ಅಂದರೆ ಶುಕ್ಲ ಪಾಡ್ಯದಿಂದ ಚಾಂದ್ರ ಮಾಸವೂ ಮೇಷಾದಿ ಸಂಕ್ರಮಣ ಪ್ರಾರಂಭದಿಂದ ಸೌರ ಮಾಸವೂ ಹುಟ್ಟುವದು. ಚಂದ್ರನು ನಕ್ಷತ್ರಗಳಲ್ಲಿ ಸಂಚರಿಸುವ ಮೂವತ್ತು ಸಾವಿರ ದಿವಸಗಳಿಗೆ ನಾಕ್ಷತ್ರಮಾನವೆಂದು ಹೆಸರಿದೆ.

ಮಧು, ಮಾಧವ, ಶುಕ್ರ, ಶುಚಿ, ನಭಾ, ನಭಸ್ಯ, ಇಕ್ಷ, ಊರ್ಜ, ಸಹಾ ಸಹಸ್ಯಕ, ತಪ, ತಪಸ್ಯೆ, ಎಂಬ ಹನ್ನೆರಡು ಹೆಸರುಗಳು ಚೈತ್ರಾದಿಯಾದ ದ್ವಾದಶ ಮಾಸಗಳಿಗೆ ಕ್ರಮವಾಗಿ ಸಲ್ಲುವವು. ಯಾವ ಪೂರ್ಣಮಾಸದಲ್ಲಿ ಯಾವ ನಕ್ಷತ್ರವು ಸಂಬಂಧಿಸುವದೋ ಅದೇ ಹೆಸರು ಪೂರ್ತಿ ಆ ತಿಂಗಳಿಗೂ ಮತ್ತು ಪೂರ್ಣಮಾ ತಿಥಿಗೂ ಅನ್ವಯಿಸುವದು. ಒಂದು ತಿಂಗಳಿನಲ್ಲಿ ಬರುವ ಶುಕ್ಲಪಕ್ಷ, ಕೃಷ್ಣಪಕ್ಷಗಳು ದೇವ ಮತ್ತು ಪಿತೃಗಳಿಗೆ ಸಂಬಂಧಪಟ್ಟಿವೆ. ಶುಕ್ಲಪಕ್ಷವು ಶುಭಕರ್ಮಕ್ಕಾಗಿ ಕೃಷ್ಣ ಪಕ್ಷವು ಅಶುಭ ಕಾರ್ಯಕ್ಕಾಗಿ ಪ್ರಶಸ್ತ.

ತಿಥಿಗಳಿಗೆ ಅಧಿಪತಿಗಳು ಕ್ರಮವಾಗಿ ಪ್ರತಿಪತ್ತಿನಿಂದ -

೧. ಬ್ರಹ್ಮ ಮತ್ತು ಅಗ್ನಿ ೨. ವಿಷ್ಣು ೩. ಪಾರ್ವತಿ ೪. ಯಮ ಮತ್ತು ಗಣಪತಿ ೫. ನಾಗ ಮತ್ತು ಚಂದ್ರರು ೬. ಸ್ಕಂದ (ಕುಮಾರಸ್ವಾಮಿ) ೭. ಸೂರ್ಯ ಮತ್ತು ಚಂದ್ರರು ೮. ಮಹೇಂದ್ರವಾಸವರು ೯. ನಾಗ ಮತ್ತು ದುರ್ಗಿ ೧೦. ದಂಡಧರನಾದ ಯಮ ೧೧. ಶ್ರೀ ವಿಷ್ಣುಗಳು ಹರಿ ಮತ್ತು ಸೂರ್ಯರು ೧೨. ಕಾಮನ ೧೩. ಕಲಿ ೧೪. ಚಂದ್ರ ೧೫. ಪಿತೃದೇವತೆಗಳು ಈ ರೀತಿಯಾಗಿ ಆಯಾ ಪರ್ಯಂತ ತಿಥ್ಯಾಧಿಪತಿಗಳು ಪ್ರತ್ಯೇಕವಾಗಿರುವರು. ಪ್ರತಿಪತ್ತಿಯಿಂದ ಕ್ರಮವಾಗಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬುದಾಗಿ ಐದೈದು ತಿಥಿಗಳು ನಂದಾದಿ ಸಂಜ್ಞೆಗಳನ್ನು ಪಡೆಯುವವು. ಅದರಲ್ಲಿ ಮೊದಲನೆಯವು ಐದು ಅಶುಭವೆನಿಸುವವು. ಮಧ್ಯದ ಐದು ತಿಥಿಗಳು ಮಧ್ಯಮ ಕೊನೆಯ ಐದು ತಿಥಿಗಳು ಉತ್ತಮ ಈ ರೀತಿಯಾದ ಫಲವನ್ನು ಶುಕ್ಲಪಕ್ಷದಲ್ಲಿ ಕೊಡುವವು. ಕೃಷ್ಣ ಪಕ್ಷದಲ್ಲಿ ಮೊದಲಿನ ಐದು ತಿಥಿಗಳು ಶುಭಫಲಪ್ರದಾಯಕ. ಮಧ್ಯದ ತಿಥಿಗಳು ಮಧ್ಯಮ ಫಲವನ್ನು ಕೊಡುವವು. ಕೊನೆಯ ಐದು ತಿಥಿಗಳು ಅಶುಭ ಫಲವನ್ನು ಕೊಡುವವು. ಪೂರ್ಣಮಾ ತಿಥಿಯಲ್ಲಿ ಪ್ರತಿಪತ್ಸಂಬಂಧದಿಂದ ಚಂದ್ರನು ಕಲಾಹೀನನಾಗಿ ಉದಯಿಸಿದರೆ ಆ ತಿಥಿಗೆ ಅನುಮತಿ ಎಂದೂ ಪೂರ್ಣಚಂದ್ರನಾಗಿ ಉದಯಿಸಿದರೆ ರಾಕಾ ಎಂದು ಹೆಸರುಂಟಾಗುವದು. ಹಾಗೆಯೇ ದರ್ಶದಲ್ಲಿಯೂ ಪ್ರತಿಪತ್ಸಂಬಂಧದಿಂದ ಚಂದ್ರ

ಕಲೆಯು ಕಂಡು ಬಂದರೆ, ಸಿನೀವಾಲೀ ಎಂದು, ಚಂದ್ರಕಲಾ ಸಂಪರ್ಕವಿಲ್ಲದಿದ್ದರೆ ಕುಹೂ ಎಂಬ ಎರಡು ಬಗೆಯ ಸಂಜ್ಞೆಗಳುಂಟಾಗುವದು. ೧) ಕಾರ್ತಿಕ ಶುದ್ಧ ನವಮಿಯು ಕೃತಯುಗಾದಿಯ ಅಥವಾ ಕೃತಯುಗ ಪ್ರಾರಂಭವಾದ ದಿವಸವಾಗುವದು. ೨) ಮಾಘ ಕೃಷ್ಣ ಅಮಾವಾಸ್ಯೆ ತಿಥಿಯು ದ್ವಾಪರಯುಗಾದಿಯಾಗಿರುವದು. ೩) ಭಾದ್ರಪದ ಕೃಷ್ಣ ತ್ರಯೋದಶಿ ತಿಥಿಯೇ ಕಲಿಯುಗದ ಆದಿಯಾಗಿರುವದು. ಈ ರೀತಿ ಕೃತಾದಿ ನಾಲ್ಕು ಯುಗಗಳ ಪ್ರಾರಂಭದ ದಿನಗಳನ್ನು ತಿಳಿಯಬೇಕು.

೧) ಕಾರ್ತಿಕ ಶುದ್ಧ ದ್ವಾದಶಿ ೨) ಅಶ್ವಯುಜ ಶುದ್ಧ ನವಮಿ ೩) ಚೈತ್ರ ಶುದ್ಧ ತೃತೀಯಾ ೪) ಭಾದ್ರಪದ ಶುದ್ಧ ತೃತೀಯಾ ೫) ಪುಷ್ಯ ಶುದ್ಧ ಏಕಾದಶಿ ೬) ಆಷಾಢ ಕೃಷ್ಣಾಷ್ಟಮಿ ೭) ಮಾಘಶುದ್ಧ ಸಪ್ತಮಿ ೮) ಭಾದ್ರಪದ ಕೃಷ್ಣಾಷ್ಟಮಿ ೯) ಶ್ರಾವಣ ಬಹುಳ ಅಮಾವಾಸ್ಯೆ ೧೦) ಫಾಲ್ಗುಣ ಶುದ್ಧ ಪೂರ್ಣಿಮಾ ೧೧) ಆಷಾಢ ಶುದ್ಧ ಪೂರ್ಣಿಮಾ ೧೨) ಕಾರ್ತಿಕ ಶುದ್ಧ ಪೂರ್ಣಿಮಾ ೧೩) ಜ್ಯೇಷ್ಠ ಶುದ್ಧ ಪೂರ್ಣಿಮಾ ೧೪) ಚೈತ್ರ ಶುದ್ಧ ಪೂರ್ಣಿಮಾ.

ಮೇಲ್ಕಾಣಿಸಿದ ಈ ಹದಿನಾಲ್ಕು ತಿಥಿಗಳು ಮನ್ವಾದಿಗಳೆಂದು ಗಣಿಸಲ್ಪಟ್ಟಿವೆ. ಈ ತಿಥಿಗಳಲ್ಲಿ ಮಾನವ ಕೃತವಾದ ಶ್ರಾದ್ಧವು ಅತ್ಯಂತ ಪುಣ್ಯಫಲವಾಗಿದೆ. ಭಾದ್ರಪದ ಕೃಷ್ಣ ತ್ರಯೋದಶಿಯಲ್ಲಿ ಚಂದ್ರನು ಮಘಾ ನಕ್ಷತ್ರದಲ್ಲಿಯೂ, ರವಿಯು ಹಸ್ತ ನಕ್ಷತ್ರದಲ್ಲಿಯೂ ಇದ್ದರೆ ಆತಿಥಿಗೆ ಗಜಚ್ಛಾಯಾ ತಿಥಿ ಎಂದು ಹೆಸರು. ಈ ತಿಥಿಯು ಕುಂಬಾಕರವೆಂದು ಹೆಸರಾಗಿದೆ. ಒಂದೇ ದಿನದಲ್ಲಿ ಮೂರು ತಿಥಿಗಳು ಸಂಭವಿಸಿದರೆ ಅದಕ್ಕೆ ಅವಮಾಹಸ್ಸು ಅಥವಾ ತಿಥಿಕ್ಷಯವೆಂದು ಹೆಸರು ಬರುವದು. ಒಂದೇ ತಿಥಿಯು ಮೂರು ದಿನಗಳಲ್ಲಿದ್ದರೆ ಅದಕ್ಕೆ ತ್ರಿದ್ಯುಸ್ಪೃಕ್ ಎಂದು ಕರೆಯಲಾಗುವದು. ಅದರಲ್ಲಿ ಅಧಿಕಾಂಶವಿರುವ ದಿನವೇ ಆ ತಿಥಿಶಬ್ದವಾಚ್ಯವಾಗುವದು. ಯಾವ ದಿನದಲ್ಲಿ ಸೂರ್ಯೋದಯದಿಂದ ಅಸ್ತಮಾನ ಪರ್ಯಂತವಾಗಿ ತಿಥಿಯಿರುವದೋ ಆ ದಿನವೇ ಪುಣ್ಯ ತಿಥಿಯುಳ್ಳದ್ದೆಂದು ತಿಳಿಯಬೇಕು. ಆ ತಿಥಿಯನ್ನು ಅಖಂಡ ತಿಥಿಯೆಂದೂ, ಉಳಿದ ದಿನಗಳನ್ನು ಖಂಡ ತಿಥಿಗಳೆಂದೂ ತಿಳಿಯಬೇಕು. ಪ್ರತಿಪದಾ ತಿಥಿಗಳ ಪೂರ್ಣ ಕಾಲಗಳಲ್ಲಿ ೧/೧೫ ಹದಿನೈದನೆಯ ಒಂದು ಭಾಗದ ಕಾಲಕ್ಕೆ ಕ್ಷಣಕಾಲವೆಂದು ಹೆಸರು ಅದರ ಅರ್ಧ ಭಾಗಕ್ಕೆ ಅರ್ಧಕ್ಷಣವೆಂದೂ ಕಾಲವನ್ನು ವ್ಯವಹರಿಸಬೇಕು. ಸೂರ್ಯಾದಿ ಗ್ರಹಗಳಲ್ಲಿ ಸೂರ್ಯನು ಸ್ಥಿರಗ್ರಹ, ಚಂದ್ರನು ಚರಗ್ರಹ, ಕುಜನು ಕ್ರೂರ ಗ್ರಹ. ಬುಧನಿಗೆ ಸಾಹಚರ್ಯದಿಂದ ಎಲ್ಲ ಗುಣಗಳು ಒದಗುವವು. ಗುರುವು ಲಘುಗ್ರಹ. ಶುಕ್ರನು ಮೃದುಗ್ರಹ, ಶನಿಯು ತೀವ್ರಗ್ರಹ, ಈ ರೀತಿಯಾಗಿ ಗುಣ ವಿಭಾಗ ಮಾಡಿಕೊಳ್ಳಬೇಕು. ನಿರಕ್ಷ ದೇಶವೆನಿಸಿದ ಲಂಕೆಯಲ್ಲಿ ವಾರೋದಯ ಪ್ರವೃತ್ತಿಯನ್ನು ಕಂಡು ಹಿಡಿದು ಸ್ವದೇಶಕ್ಕೆ ಅದನ್ನು ದೇಶಾಂತರ ಸಂಸ್ಕಾರಗಳಿಂದ ಆನಯನಮಾಡಿ ಅಲ್ಲಿಂದ ಸ್ವದೇಶದ ವಾರ ಪ್ರವೃತ್ತಿಯಲ್ಲಿ ಕಂಡುಕೊಳ್ಳಬೇಕು. ಗ್ರಹಾದಿಗಳು ಬಲಿಷ್ಠವಾದರೆ ಕಾರ್ಯಕ್ಕೆ ಬಲ, ಸಿದ್ಧಿಗಳನ್ನೂ, ದುರ್ಬಲವಾಗಿದ್ದರೆ ಹಾನಿಯನ್ನೂ, ತಂದೊಡ್ಡುವವು. ಸೋಮ, ಬುಧ, ಗುರು, ಶುಕ್ರವಾರಗಳು ಸಕಲ ಕರ್ಮಗಳಿಗೂ ಶುಭಕಾರಕ. ಉಳಿದ ವಾರಗಳು ಅಶುಭಕಾರಕ. ಸೂರ್ಯಾದಿಗ್ರಹಗಳು ಕ್ರಮವಾಗಿ ರಕ್ತ, ಗೌರ, ಲೋಹಿತ, ಗರಿಕೆಯ ಹಸಿರು, ಪೀತ, ಶ್ವೇತ, ಕಪ್ಪು ಈ ಬಣ್ಣಗಳುಳ್ಳವೆಂದೂ ಈ ಬಣ್ಣಗಳಲ್ಲಿ ಆಯಾ ಗ್ರಹಗಳಿಗೆ ಇಷ್ಟ

ಉಂಟೆಂದೂ ತಿಳಿಯಬೇಕು. ಭಾನುವಾರಾದಿಯಾಗಿ ಮುಂದೆ ಹೇಳಿರುವ ಯಾಮಗಳಲ್ಲಿ ಅರ್ಧಯಾಮ ಕಾಲವು ಯಮಕಂಟಕ. ಗುಳಿಕ ಮತ್ತು ಅರ್ಧ ಪ್ರಹಾರ ಈ ರೀತಿಯಾಗಿ ಮೂರು ಪ್ರಕಾರದ ಕಾಲಗಳಾಗಿರುವವು. ಅವುಗಳನ್ನು ಸರಿಯಾಗಿ ನಿರ್ಣಯಿಸಿಕೊಳ್ಳಬೇಕು.

ಭಾನುವಾರದಲ್ಲಿ ಐದು, ಏಳು, ನಾಲ್ಕು.
ಸೋಮವಾರದಲ್ಲಿ ನಾಲ್ಕು, ಆರು, ಏಳು.
ಮಂಗಳವಾರದಲ್ಲಿ ಮೂರು, ಐದು, ಎರಡು.
ಬುಧವಾರದಲ್ಲಿ ಎರಡು, ನಾಲ್ಕು ಐದು.
ಗುರುವಾರದಲ್ಲಿ ಒಂದು, ಮೂರು, ಎಂಟು.
ಶುಕ್ರವಾರದಲ್ಲಿ ಏಳು, ಎರಡು, ಮೂರು.
ಶನಿವಾರದಲ್ಲಿ ಎಂಟು, ಒಂದು, ಆರು.

ಈ ಯಾಮಗಳಲ್ಲಿ ಅರ್ಧ ಭಾಗಕಾಲಕ್ಕೆ ಕ್ರಮವಾಗಿ ಯಮಕಂಟಕ, ಗುಳಿಕ, ಅರ್ಧ ಪ್ರಹಾರ ಮುಂತಾದ ಕುಲಿಕಾ, ಉಪಕುಲಿಕಾ ಕಾಲಗಳು ಶುಭಕರ್ಮಗಳಿಗೆ ನಿಷಿದ್ಧವಾಗಿವೆ. ಪ್ರತಿವಾರಕ್ಕೂ ಆಯಾ ವಾರಾಧಿಪತಿಯೇ ಮೊದಲನೆಯ ಕಾಲ ಹೋರಾಧಿಪತಿಯಾಗುವನು. ಅವನಿಂದ ಆರನೆಯ ಹೋರಾಧಿಪತಿಯು ದ್ವಿತೀಯ ಕಾಲಹೋರಾಧಿಪತಿ ಯಾಗುವನು. ಹೀಗೆ ಪ್ರತಿವಾರಗಳಲ್ಲಿಯೂ ಹಗಲು ಹನ್ನೆರಡು ಅಂದರೆ (೨ ೧/೨) ಎರಡೂವರೆ ಘಳಿಗೆ ಒಂದು ಕಾಲಹೋರೆಯಂತೆ ಆಯಾ ಹೋರೆಗೆ ಕ್ರಮವಾಗಿ ಅಧಿಪತಿಗಳನ್ನು ತಿಳಿಯಬೇಕು. ಈಗ ಇಪ್ಪತ್ತೆಂಟು ನಕ್ಷತ್ರಗಳಿಗೂ ಕ್ರಮವಾಗಿ ಅಧಿಪತಿಗಳ ಬಗ್ಗೆ ವಿವರಿಸುತ್ತೇನೆ ಕೇಳು.

ಅಶ್ವಿನಿ ದೇವತೆಗಳು, ಕಾಲ, ಅಗ್ನಿ, ಬ್ರಹ್ಮ, ಚಂದ್ರ, ರುದ್ರ, ಅದಿತಿ, ಗುರು, ನಾಗ, ಪಿತೃ, ಭಗ, ಅರ್ಯಮ, ರವಿ, ತ್ವಷ್ಟಾ, ವಾಯು, ಇಂದ್ರಾಗ್ನಿ, ಮಿತ್ರ, ಶಕ್ರ, ದನುಜ, ವರುಣ, ವಿಶ್ವ, ಬ್ರಹ್ಮ, ಶ್ರೀಶ, ವಸು, ತೋಯಪ, ಅಜಚರಣ, ಅಹಿರ್ಬುಧ್ನ್ಯ, ಪೂಷಾ ಹೀಗೆ ಅಶ್ವಿನಿಯಾದಿಯಾಗಿ ಇಪ್ಪತ್ತೆಂಟು ನಕ್ಷತ್ರಗಳಿಗೆ ಅಧಿಪತಿಗಳಾಗಿದ್ದಾರೆ. ಪುಬ್ಬಾ, ಪೂರ್ವಾಷಾಢಾ, ಪೂರ್ವಭಾದ್ರಾ, ಮಘಾ, ಆಶ್ಲೇಷಾ, ಕೃತ್ತಿಕಾ, ವಿಶಾಖಾ, ಭರಣಿ, ಮೂಲಾ ಇವು ಒಂಭತ್ತು ಅಧೋಮುಖವಾದ ನಕ್ಷತ್ರಗಳು, ಈ ನಕ್ಷತ್ರಗಳಲ್ಲಿ ಸೂರ್ಯನಿರ್ರವಾಗ, ಬಿಲಪ್ರವೇಶ, ಗಣಿತ, ಭೂತ ಸಾಧನಗಳು, ಲೇಖನ ಕಾರ್ಯಗಳು, ಶಿಲ್ಪಕರ್ಮ, ಕಲಾಕರ್ಮ, ಕೂಪಖನನ, ನಿಕ್ಷೇಪೋದ್ಧರಣ, ಮುಂತಾದ ಕೆಲಸಗಳನ್ನು ಮಾಡಬೇಕು. ಅನುರಾಧಾ, ಮೃಗಶಿರ, ಚಿತ್ರ, ಹಸ್ತ, ಜ್ಯೇಷ್ಠಾ, ಪುನರ್ವಸು, ರೇವತಿ, ಅಶ್ವಿನಿ, ಸ್ವಾತಿ ಈ ಒಂಭತ್ತು ನಕ್ಷತ್ರಗಳು ತಿರ್ಯಙ್ಮುಖ ನಕ್ಷತ್ರಗಳು. ಇವುಗಳಲ್ಲಿ ಕೃಷಿಕರ್ಮ, ಪ್ರವಾಹದ ಅಡಚಣೆ, ಬೇಲಿಯನ್ನು ಹಾಕುವದು, ಆನೆ, ಒಂಟೆ, ಕತ್ತೆ, ಎತ್ತು, ರಥ, ನಾವೆ, ಎಮ್ಮೆ, ಕುದುರೆ, ಇವುಗಳನ್ನು ಮತ್ತು ಇವುಗಳ ಮೇಲೆ ಸಂಚರಿಸುವದು, ಮುಂತಾದ ಕಾರ್ಯ ನಡೆಸಬಹುದು. ರೋಹಿಣಿ, ಶ್ರವಣ, ಆರಿದ್ರ, ಪುಷ್ಯ, ಶತಭಿಷ, ಧನಿಷ್ಠ, ಉತ್ತರಾಷಾಢ, ಉತ್ತರಾಭಾದ್ರ, ಉತ್ತರಾ ಈ ಒಂಭತ್ತು ನಕ್ಷತ್ರಗಳು ಊರ್ಧ್ವಾಸ್ಯವುಳ್ಳವುಗಳು. ಅಂದರೆ - ಊರ್ಧ್ವಮುಖವುಳ್ಳವುಗಳು. ಇವುಗಳಲ್ಲಿ ನೃಪಾಭಿಷೇಕ, ಮಾಂಗಲ್ಯ ಧಾರಣ, ಸ್ವಯಂವರ, ಧ್ವಜಪಟಸ್ಥಾಪನೆ, ಪ್ರಾಸಾದ, ತೋರಣ, ಆರಾಮ, ಪ್ರಾಕಾರ ಇವುಗಳ ನಿರ್ಮಾಣ ಕಾರ್ಯಕೈಕೊಳ್ಳಬೇಕು. ಅಶ್ವಿನ್ಯಾದಿಗಳಲ್ಲಿ ರೋಹಿಣೀ, ಉತ್ತರಾ, ಉತ್ತರಾಷಾಢಾ,

ಉತ್ತರಾಭಾದ್ರ, ಈ ನಕ್ಷತ್ರಗಳಿಗೆ ಸ್ಥಿರನಕ್ಷತ್ರಗಳೆಂದೂ ಹಸ್ತ, ಅಶ್ವಿನಿ, ಪುಷ್ಯ ಇವುಗಳಿಗೆ ಕ್ಷಿಪ್ರನಕ್ಷತ್ರಗಳೆಂದೂ, ವಿಶಾಖಾ, ಕೃತಿಕಾ ಇವುಗಳಿಗೆ ಸಾಧಾರಣ ನಕ್ಷತ್ರಗಳೆಂದೂ, ಶತಭಿಷಾ, ಪುನರ್ವಸು, ಪೂರ್ವಾಷಾಢಾ, ಪುಷ್ಯ, ಶ್ರವಣ ಇವುಗಳಿಗೆ ಚರನಕ್ಷತ್ರಗಳೆಂದೂ, ಮೃಗಶಿರ, ಅನುರಾಧಾ, ಚಿತ್ರಾ, ರೇವತಿ ಇವುಗಳಿಗೆ ಮೃದು ನಕ್ಷತ್ರಗಳೆಂದೂ ಪೂರ್ವಾ ಫಾಲ್ಗುನಿ, ಪೂರ್ವಾಷಾಢಾ, ಪೂರ್ವಾಭಾದ್ರಾ ಮಘಾ ಭರಣೀ ಇವುಗಳಿಗೆ ಉಗ್ರನಕ್ಷತ್ರ ಗಳೆಂದೂ, ಮೂಲಾ, ಆರಿದ್ರಾ, ಆಶ್ಲೇಷಾ, ಜ್ಯೇಷ್ಠಾ, ಇವು ತೀಕ್ಷ್ಣವಾದ ನಕ್ಷತ್ರಗಳೆಂದೂ ಸಂಜ್ಞೆ ಪಡೆದಿವೆ. ಇವುಗಳು ತಮ್ಮ ಹೆಸರಿಗನುಗುಣವಾಗಿ ಫಲಾಫಲಗಳನ್ನು ಕೊಡುತ್ತವೆ.

ಚಿತ್ರಾ, ಪುನರ್ವಸು, ಪೂರ್ವಾಷಾಢಾ, ಶ್ರವಣಾ, ರೇವತಿ, ಅನುರಾಧಾ, ಶತಭಿಷ, ಮೃಗಶಿರ, ಪುಷ್ಯ ಈ ನಕ್ಷತ್ರಗಳು ಮಕ್ಕಳ ಕಿವಿಚುಚ್ಚುವದಕ್ಕೆ ಪ್ರಶಸ್ತವಾಗಿರುತ್ತವೆ. ಅನುರಾಧಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ (ಉತ್ತರಾತ್ರಯಗಳು) ಈ ನಕ್ಷತ್ರಗಳು ಪ್ರಯಾಣಾದಿಗಳಿಗೆ ಶ್ರೇಷ್ಠಗಳೆನಿಸಿರುವವು. ಆದರೆ ಅಮಾವಾಸ್ಯಾ, ಚತುರ್ದಶಿ ಇವುಗಳಲ್ಲಿ ಪ್ರಯಾಣಾದಿಗಳನ್ನೂ ಪಶು ವಿಕ್ರಯಾದಿಗಳನ್ನೂ ಮಾಡಬಾರದು.

ರೇವತಿಯಿಂದ ಆರು ನಕ್ಷತ್ರಗಳವರೆಗೆಪೂರ್ವಾರ್ಧಯುಂಜಿ ಎಂದೂ, ಅಲ್ಲಿಂದ ಹನ್ನೆರಡು ನಕ್ಷತ್ರಗಳು ಮಧ್ಯಯುಂಜಿ ಎಂದೂ ಮುಂದಿನ ಒಂಭತ್ತು ನಕ್ಷತ್ರಗಳು ಪರಾರ್ಧಯುಂಜಿ ಎಂದೂ ಸಂಜ್ಞೆಗಳನ್ನು ಹೊಂದಿರುವವು. ದಂಪತಿಗಳ ನಕ್ಷತ್ರಗಳು ಒಂದೇ ಅಂಶದಲ್ಲಿ ಸೇರಿದವುಗಳಾದರೆ ಅನ್ಯೋನ್ಯಾನುರಾಗಿಗಳಾಗಿರುವರೆಂದು ತಿಳಿಯಬೇಕು. ಶತಭಿಷಾ, ಆರಿದ್ರಾ, ಆಶ್ಲೇಷಾ, ಸ್ವಾತಿ, ಭರಣಿ, ಜ್ಯೇಷ್ಠಾ ಈ ನಕ್ಷತ್ರಗಳಿಗೆ ಜಘನ್ಯ ನಕ್ಷತ್ರಗಳೆಂದೂ ಪುನರ್ವಸು ವಿಶಾಖಾ ಈ ನಕ್ಷತ್ರಗಳಿಗೆ ಬೃಹತ್ತಾರೆಗಳೆಂದೂ ಉಳಿದ ನಕ್ಷತ್ರಗಳಿಗೆ ಸಮ ನಕ್ಷತ್ರಗಳೆಂದೂ ಸಂಜ್ಞೆ ಉಂಟು.

ನಕ್ಷತ್ರಗಳಂತೆ ವಿಷ್ಕಂಭಾದಿ ಇಪ್ಪತ್ತೇಳು ಯೋಗಗಳಿವೆ :

೧)ವಿಷ್ಕಂಭ ೨)ಪ್ರೀತಿ ೩)ಆಯುಷ್ಮನ್ ೪)ಸೌಭಾಗ್ಯ ೫)ಶೋಭನ ೬)ಅತಿಗಂಡ ೭) ಸುಕರ್ಮ ೮) ಧೃತಿ ೯) ಶೂಲ ೧೦) ಗಂಡ ೧೧) ವೃದ್ಧಿ ೧೨) ಧ್ರುವ ೧೩) ವ್ಯಾಘಾತ ೧೪) ಹರ್ಷಣ ೧೫) ವಜ್ರ ೬) ಸಿದ್ಧಿ ೧೭) ವ್ಯತೀಪಾತ ೧೮) ಪರಾಯ ೧೯) ಪರಿಘ ೨೦) ಶಿವ ೨೧) ಸಿದ್ಧ ೨೨) ಸಾಧ್ಯ ೨೩) ಶರಧಿ ೨೪) ಶುಕ್ಲ ೨೫) ಬ್ರಹ್ಮ ೨೬) ಇಂದ್ರ ೨೭) ವೈಧೃತಿ ಇವುಗಳಲ್ಲದೆ ಹನ್ನೊಂದು ಕರಣಗಳು

೧) ಬವ ೨) ಬಾಲವ ೩) ಕೌಲವ ೪) ತೈತಿಲ ೫) ಗರಜ ೬) ವಣಿಕ್ ೭) ಭದ್ರಾ ೮) ಶಕುನಿ ೯) ಚತುಷ್ಪಾತ್ ೧೦) ನಾಗವಾನ್ ೧೧) ಕಿಂಸ್ತುಘ್ನ. ತಿಥ್ಯರ್ಧವೇ ಅದು ಒಂದು ತಿಥಿಗೆ ಎರಡು ಕರಣಗಳು ಸೇರುತ್ತವೆ. ಬವಾದಿ ಕರಣಗಳಿಗೆ ಕ್ರಮವಾಗಿ ೧) ಇಂದ್ರ ೨) ಪ್ರಜಾಪತಿ ೩) ಮಿತ್ರ ೪) ತ್ವಷ್ಟ್ಟ ೫) ಹರಿ ೬) ಕೀನಾಶ ೭) ಕಲಿ ೮) ರುದ್ರ ೯) ಭೂ ೧೦) ಅಹಿ ೧೧) ಮರುತ್ತ ಎಂಬುದಾಗಿ ಈ ದೇವತೆಗಳು ಅಧಿಪತಿ ಗಳಾಗುವರು. ಅದರಲ್ಲಿ ಬವ ಕರಣದಿಂದ ವಣಿಕ್ಕರಣದ ವರೆಗಿರುವ ಆರು ಶುಭಕರಣ ಗಳೆನಿಸುವವು. ಯಾವ ಪಕ್ಷದಲ್ಲಿ ಆಗಲಿ, ಭದ್ರಾ ಕರಣವು ಶುಭ ಕರ್ಮಗಳಿಗೆ ಶ್ರೇಷ್ಠವಾದುದಲ್ಲ. ಈ ವಿಷ್ಟಿ ಕರಣದಲ್ಲಿ ಮೊದಲನೆಯ ಐದು ಗಳಿಗೆಗಳು ಮುಖವೆಂದೂ, ಮುಂದಿನ ಒಂದು ಗಳಿಗೆಯು ಕಂಠಭಾಗವೆಂದೂ ಹನ್ನೊಂದು ಗಳಿಗೆಗಳು. ವಕ್ಷೋಭಾಗ

ವೆಂದೂ ನಾಲ್ಕು ಗಳಿಗೆಗಳು ನಾಭಿಯೆಂದೂ, ಆರು ಗಳಿಗೆಗಳು ಕಟಿ ಭಾಗವೆಂದೂ ಮೂರು ಗಳಿಗೆಗಳು ಬಾಲವೆಂದೂ, ಒಟ್ಟು ಮೂವತ್ತು ಗಳಿಗೆಗಳೂ ಈ ಪ್ರಕಾರ ನಿರ್ಣೀತವಾಗಿವೆ. ಅದರಲ್ಲಿ ಮುಖದಲ್ಲಿ ಕಾರ್ಯ ಹಾನಿಯೂ ಗಲದಲ್ಲಿ ಮೃತ್ಯುವೂ, ವಕ್ಷ ಸ್ಥಳದಲ್ಲಿ ದಾರಿದ್ರ್ಯವೂ, ಕಟಿಯಲ್ಲಿ ಉನ್ಮತ್ತತೆಯೂ, ನಾಭಿಯಲ್ಲಿ ನಾಶವೂ ಪುಚ್ಛಭಾಗದಲ್ಲಿ ಜಯವೂ ಲಭಿಸುವದೆಂದು ತಿಳಿಯಬೇಕು. ಅಂದರೆ ವಿಷ್ಟಕರಣದಲ್ಲಿ ತ್ಯಾಜ್ಯ ಘಟಿಕೆಗಳನ್ನು ಈ ಫಲದಿಂದ ತಿಳಿಯಬೇಕು. ಇನ್ನುಳಿದವು ಸ್ಥಿರಕರಣಗಳಾಗುವವು.

ಅಹಃ ಪ್ರಮಾಣವನ್ನು ಹದಿನೈದು ಭಾಗ ಮಾಡಿದರೆ ಒಂದೊಂದು ಭಾಗಕ್ಕೂ ಒಂದೊಂದು ಮುಹೂರ್ತವೆಂದು ಹೆಸರು. ಹಾಗೆ ಹಗಲು ಹದಿನೈದು ರಾತ್ರಿ ಹದಿನೈದು ಮುಹೂರ್ತಗಳು ದೊರಕುವವು. ಕ್ರಮವಾಗಿ ಈ ಮೂವತ್ತು ಮುಹೂರ್ತಗಳ ಅಧಿಪತಿಗಳು ಈ ರೀತಿ ಇರುವರು.

೧) ರುದ್ರ ೨) ಅಹಿ ೩) ಮಿತ್ರ ೪) ಪಿತೃ ೫) ವಸು ೬) ವರುಣ ೭) ವಿಶ್ವೇದೇವತೆಗಳು ೮) ವಿಧಾತೃ ೯) ಬ್ರಹ್ಮ ೧೦) ಇಂದ್ರ ೧೧) ರುದ್ರ ೧೨) ಅಗ್ನಿ ೧೩) ತೋಯಪ ೧೪) ಅರ್ಯಮಾ ೧೫) ಭಗ ಈ ಹದಿನೈದು ಮಂದಿಯೂ ದಿವಾಮುಹೂರ್ತಧಿಪತಿಗಳು. ೧) ಈಶ ೨) ಅಜಾಪತ್ ೩) ಅಹಿರ್ಬುಧ್ನ್ಯ ೪) ಯೂಪ ೫) ಅಬ್ಧಿಪ ೬) ವಹ್ನಿ ೭) ಧಾತೃ ೮) ಇಂದ್ರ ೯) ಅದಿತಿ ೧೦) ಇಜ್ಯ ೧೧) ವಿಷ್ಣು ೧೨) ಅರ್ಕ ೧೩) ತ್ವಷ್ಟ್ರ ೧೪) ವಾಯು ೧೫) ಭಗ ಈ ಹದಿನೈದು ಮಂದಿ ದೇವತೆಗಳು ರಾತ್ರಿ ಮುಹೂರ್ತಗಳಿಗೆ ಅಧಿಪತಿಗಳೆಂದೂ ತಿಳಿಯಬೇಕು. ಒಂದು ಮುಹೂರ್ತಕ್ಕೆ ಎರಡುವರೆ ಗಳಿಗೆಯಂತೆ ಹಗಲಿನಲ್ಲಾಗುವ ಹನ್ನೆರಡು ಮುಹೂರ್ತಗಳಿಗೆ ಕ್ರಮವಾಗಿ ೧) ಅರ್ಯಮ ೨) ರಾಕ್ಷಸ ೩) ಬ್ರಹ್ಮ ೪) ಪಿತೃ ೫) ಅಗ್ನಿ ೬) ಅಭಿಜಿತ್ ೭) ರಾಕ್ಷಸ ೮) ರಾಕ್ಷಸ ೯) ಬ್ರಾಹ್ಮ ೧೦) ಪಿತೃ ೧೧) ಭರ್ಗ ೧೨) ಅಜ ಮುಹೂರ್ತಗಳೆಂದು ಹೆಸರು. ಪ್ರತಿ ವಾರಗಳಲ್ಲಿಯೂ ಬರುವ ದುರ್ಮುಹೂರ್ತಗಳನ್ನು ಅಶುಭಕರ್ಮಗಳಲ್ಲಿ ತ್ಯಾಜ್ಯ ಮಾಡಬೇಕು. ಯಾವ ನಕ್ಷತ್ರದಲ್ಲಿ ಯಾವ ಕರ್ಮವನ್ನಾಚರಿಸಬೇಕೋ ಆ ನಕ್ಷತ್ರಾಧಿಪತಿಯ ಮುಹೂರ್ತವೇ ಆ ಕರ್ಮಕ್ಕೆ ಶ್ರೇಷ್ಠವಾದುದು. ಯಾತ್ರಾದಿಗಳಲ್ಲೂ ಇದನ್ನೇ ಗಮನಿಸಬೇಕು. ಸೂರ್ಯನಿರುವ ನಕ್ಷತ್ರಕ್ಕಿಂತ ಮುಂದಿನ ಏಳನೆಯ ನಕ್ಷತ್ರಕ್ಕೆ ಭೂಕಂಪವೆಂದೂ, ಐದನೆಯದಕ್ಕೆ ವಿದ್ಯುತ್ ಎಂದೂ, ಎಂಟನೆಯದಕ್ಕೆ ಶೂಲವೆಂದೂ ಹತ್ತನೆಯದಕ್ಕೆ ಅಶನಿ ಎಂದೂ, ಹದಿನೆಂಟನೆಯದಕ್ಕೆ ಕೇತುವೆಂದೂ, ಹದಿನೈದನೆಯದಕ್ಕೆ ದಂಡವೆಂದೂ, ಹತ್ತೊಂಭತ್ತನೆಯದಕ್ಕೆ ಉಲ್ಕಾ ಎಂದೂ, ಹದಿನಾಲ್ಕನೆಯದಕ್ಕೆ ನಿರ್ಘಾತವೆಂದೂ ಹೆಸರುಂಟು. ಇಪ್ಪತ್ತೊಂದನೆಯ ನಕ್ಷತ್ರಕ್ಕಿಂತ ಮುಂದಕ್ಕೆ ಕ್ರಮವಾಗಿ ಮೋಹ, ನಿರ್ಘಾತ, ಕಂಪ, ಕುಲಿಶ, ಪರಿವೇಷಣಗಳೆಂಬ ಸಂಜ್ಞೆಗಳಿರುವವು. ಸೂರ್ಯನಿಂದ ಲಬ್ಧ ಸಂಜ್ಞೆಯುಳ್ಳ ನಕ್ಷತ್ರಗಳಲ್ಲಿ ಚಂದ್ರನಿರುವಾಗ ಶುಭಕರ್ಮಗಳನ್ನು ಮಾಡುವದು ಶ್ರೇಯಸ್ಕರವಲ್ಲ.

ಸೂರ್ಯನು ಚಿತ್ರಾ, ಅನುರಾಧಾ, ಧನಿಷ್ಠಾ ಈ ನಕ್ಷತ್ರಗಳಲ್ಲಿರುವಾಗಲೂ, ದುಷ್ಟನಕ್ಷತ್ರ ಸಹಿತವಾಗಿ ಚಂದ್ರನಿರುವಾಗಲೂ ಹುಟ್ಟುವ ಯೋಗವು ದುಷ್ಟಯೋಗವೆನಿಸುತ್ತದೆ. ಚಂಡೀಶ, ಚಂಡಾಯುಧ ಮುಂತಾದ ಇವುಗಳ ಸಂಬಂಧದಿಂದ ಹದಿಮೂರು ಯೋಗಗಳು ಹುಟ್ಟುತ್ತವೆ. ಈ ತಿಥಿ, ವಾರ, ಸಂಬಂಧದಿಂದ ಹುಟ್ಟುವ ಕ್ರಕಟಯೋಗವು ಸಕಲ ಮಂಗಳ

ಕರ್ಮಗಳಿಗೂ ನಿಷಿದ್ಧ. ಭಾನುವಾರವು ಸಪ್ತಮಿಯಲ್ಲಿ, ಬುಧವಾರವು ಪ್ರತಿಪತ್ತಿನಲ್ಲಿಯೂ ಬಂದರೆ ಕ್ರಕಚಯೋಗ ಉಂಟಾಗುವದು. ಭಾನುವಾರದಲ್ಲಿ ಅಶ್ವಿನ್ಯಾದಿಯಾಗಿ ಅಭಿಜಿತ್ಸಹಿತವಾದ ಇಪ್ಪತ್ತೆಂಟು ನಕ್ಷತ್ರಗಳು ಸೇರಿದರೆ ಕ್ರಮವಾಗಿ ಇಪ್ಪತ್ತೆಂಟು ಯೋಗಗಳು ಹುಟ್ಟುವವು.

೧) ಸಂವರ್ತ ೨) ಆನಂದ ೩) ಕಾಲದಂಡ ೪) ಧೂಮ್ರ ೫) ಧಾತ್ರ ೬) ಸುಧಾಕರ ೭) ಧ್ವಾಂಕ್ಷ ೮) ಧ್ವಜ ೯) ಶ್ರೀವತ್ಸ ೧೦) ವಜ್ರ ೧೧) ಮುದ್ಗರ ೧೨) ಛತ್ರಕ ೧೩) ಮಿತ್ರ ೧೪) ಮಾನಸ ೧೫) ಪದ್ಮ ೧೬) ಲಂಬಕ ೧೭) ಉತ್ಪಾತ ೧೮) ಮೃತ್ಯು ೧೯) ಕಾಣ ೨೦) ಸಿದ್ಧಿ ೨೧) ರಭ ೨೨) ಮೃತ್ಯು ೨೩) ಮುಸಲ ೨೪) ಅಂತಕ ೨೫) ಕುಂಜರ ೨೬) ರಾಕ್ಷಸ ೨೭) ಸ್ಥೈರ್ಯ ೨೮) ವರ್ಧಮಾನ ಎಂಬ ಯೋಗಗಳು ಅರ್ಥವತ್ತಾದ ಫಲಗಳನ್ನು ಕೊಡುವವು. ಸೋಮವಾರದಲ್ಲಿ ಮೃಗರಾಶಿಯಾದಿಯಾಗಿಯೂ, ಮಂಗಳವಾರದಲ್ಲಿ ಆಶ್ಲೇಷಾದಿಯಾಗಿಯೂ, ಬುಧವಾರ ಹಸ್ತಾದಿಯಾಗಿಯೂ, ಗುರುವಾರದಲ್ಲಿ ಅನುರಾಧಾದಿಯಾಗಿಯೂ ಶುಕ್ರವಾರದಲ್ಲಿ ಉತ್ತರಾಷಾಢಾ ನಕ್ಷತ್ರವೇ ಮೊದಲಾಗಿ ಶನಿವಾರದಲ್ಲಿ ಶತಭಿಷಾದಿಯಾಗಿ ಮೇಲೆ ಹೇಳಿದ ಇಪ್ಪತ್ತೆಂಟು ಯೋಗಗಳು ಪ್ರತಿವಾರದಲ್ಲಿಯೂ ಹುಟ್ಟುವವು. ಭಾನುವಾರದಲ್ಲಿ ಹಸ್ತ ನಕ್ಷತ್ರವು, ಸೋಮವಾರದಲ್ಲಿ ಮೃಗಶಿರ, ಮಂಗಳವಾರದಲ್ಲಿ ಅಶ್ವಿನಿ ನಕ್ಷತ್ರ, ಬುಧವಾರದಲ್ಲಿ ಅನುರಾಧಾ ನಕ್ಷತ್ರ, ಗುರುವಾರ ಪುಷ್ಯ ನಕ್ಷತ್ರ ಶನಿವಾರದಲ್ಲಿ ರೋಹಿಣಿ ನಕ್ಷತ್ರ ಇವುಗಳ ಸಂಬಂಧದಿಂದ ಸಿದ್ಧಿಯೋಗವು ಹುಟ್ಟುವದು. ಭಾನುವಾರ ಮತ್ತು ಮಂಗಳವಾರಗಳಲ್ಲಿ ನಂದಾತಿಥಿಯೂ, ಶುಕ್ರವಾರ ಮತ್ತು ಸೋಮವಾರಗಳಲ್ಲಿ ಭದ್ರಾತಿಥಿಯೂ ಬುಧವಾರ ಮತ್ತು ಗುರುವಾರಗಳಲ್ಲಿ ಜಯಾತಿಥಿಯೂ, ಶನಿವಾರದಲ್ಲಿ ಪೂರ್ಣಾತಿಥಿಯೂ ಸೇರಿದರೆ ಶುಭಸಿದ್ಧಿಯೋಗಗಳಾಗುತ್ತವೆ.

೧) ಶುಕ್ರವಾರದಲ್ಲಿ ನಂದಾತಿಥಿ
೨) ಬುಧವಾರದಲ್ಲಿ ಭದ್ರಾ ತಿಥಿ
೩) ಕುಜವಾರದಲ್ಲಿ ಜಯಾತಿಥಿ
೪) ಶನಿವಾರದಲ್ಲಿ ರಿಕ್ತಾ ತಿಥಿ
೫) ಗುರುವಾರದಲ್ಲಿ ಪೂರ್ಣಾ ತಿಥಿ

ಸೇರುವದರಿಂದ ಸಿದ್ಧಿಯೋಗಗಳಾಗುತ್ತವೆ.

೧) ಸೋಮವಾರದಲ್ಲಿ ಏಕಾದಶಿ
೨) ಭಾನುವಾರದಲ್ಲಿ ದ್ವಾದಶಿ
೩) ಗುರುವಾರದಲ್ಲಿ ಷಷ್ಠೀ
೪) ಬುಧವಾರದಲ್ಲಿ ತದಿಗೆ
೫) ಶುಕ್ರವಾರದಲ್ಲಿ ಅಷ್ಟಮಿ
೬) ಶನಿವಾರ ನವಮಿ
೭) ಮಂಗಳವಾರ ಪಂಚಮಿ

ಸೇರುವದರಿಂದ ದಗ್ಧಯೋಗಗಳೆಂಬ ಹೆಸರು ಬರುವದು. ಇದೇ ರೀತಿ ವಾರಗಳಲ್ಲಿ ಬೇರೆ ಬೇರೆ ನಕ್ಷತ್ರಗಳು ಸೇರುವದರಿಂದ ಅನಿಷ್ಟಯೋಗಗಳು ಉಂಟಾಗುತ್ತವೆ.

೧) ಭಾನುವಾರದಲ್ಲಿ - ಭರಣೀ ನಕ್ಷತ್ರ
೨) ಸೋಮವಾರದಲ್ಲಿ - ಚಿತ್ರಾ
೩) ಮಂಗಳವಾರದಲ್ಲಿ - ಪೂರ್ವಾಷಾಢಾ
೪) ಬುಧವಾರದಲ್ಲಿ - ಧನಿಷ್ಠಾ
೫) ಗುರುವಾರದಲ್ಲಿ - ಉತ್ತರಾ
೬) ಶುಕ್ರವಾರದಲ್ಲಿ - ಜ್ಯೇಷ್ಠಾ
೭) ಶನಿವಾರದಲ್ಲಿ - ರೇವತಿ

ಸೇರಿದರೆ ಅನಿಷ್ಟಯೋಗಗಳುಂಟಾಗುತ್ತವೆ. ಭಾನುವಾರದಾದಿಯಾಗಿ ಏಳು ವಾರಗಳಲ್ಲಿ ಕ್ರಮವಾಗಿ ವಿಶಾಖಾ ನಕ್ಷತ್ರಾದಿಯಾಗಿ ಪೂರ್ವಾಷಾಢಾ, ಧನಿಷ್ಠಾ, ರೇವತಿ, ರೋಹಿಣಿ, ಪುಷ್ಯ, ಉತ್ತರಾಫಾಲ್ಗುಣೀ ಈ ರೀತಿ ನಾಲ್ಕು ನಾಲ್ಕು ನಕ್ಷತ್ರಗಳು ಸೇರುವದರಿಂದ ಕ್ರಮವಾಗಿ ೧) ಉತ್ಪಾತ ೨) ಮೃತ್ಯು ೩) ಕಾಣ ೪) ಸಿದ್ಧಿ ಎಂಬ ನಾಲ್ಕು ಯೋಗಗಳು ಹುಟ್ಟುವವು. ಆದರೆ ತಿಥಿ ವಾರ ಸಂಬಂಧದಿಂದ ಹುಟ್ಟುವ ಯೋಗಗಳು. ಬಾಧ್ಯ ಶುಭಪ್ರದಗಳಲ್ಲಿ ಮತ್ತು ನಕ್ಷತ್ರಯೋಗಗಳಿಂದ ಹುಟ್ಟುವ ಯೋಗ ಹೂಣ, ವಂಗದೇಶಗಳಿಗೆ ವಿಶೇಷ ಫಲಪ್ರದವಾಗಿದೆ. ಪಾರಕ್ಷನ ಯೋಗದಲ್ಲಿ ಭಾನುವಾರಾದಿಯಾಗಿ ಬರುವ ದುರ್ಯೋಗಗಳಿಗೆ ಕ್ರಮವಾಗಿ ಘೋರಾ ಅಷ್ಟಾಕ್ಷಿ ಮಹೋದರೀ, ಮಂದಾ, ಮಂದಾಕಿನಿ, ಮಿಶ್ರ ರಾಕ್ಷಸನಿಕಾ ಎಂಬ ಹೆಸರಿನಿಂದ ಶೂದ್ರ, ತಸ್ಕರ, ವೈಶ್ಯ, ಬ್ರಾಹ್ಮಣ, ರಾಜ, ಗೋವು ಮುಂತಾದವರಿಗೆ ಅಶುಭ ಫಲ ಕೊಡುತ್ತವೆ. ಉಳಿದವರಿಗೆ ಶುಭಫಲ ನೀಡುತ್ತವೆ. ಈ ಯೋಗಗಳು ಪೂರ್ವಾಹ್ಣದಲ್ಲಿ ರಾಜರಿಗೂ, ಮಧ್ಯಾಹ್ನದಲ್ಲಿ ವಿಪ್ರರಿಗೂ, ಅಪರಾಹ್ಣ ದಲ್ಲಿ ವೈಶ್ಯರಿಗೂ, ಅಸ್ತಮಯ ಕಾಲದಲ್ಲಿ ಶೂದ್ರರಿಗೂ, ಪ್ರದೋಷ ಕಾಲಗಳಲ್ಲಿ ಪಿಶಾಚಿ ಗಳಿಗೂ ರಾತ್ರಿಯಲ್ಲಿ ರಾಕ್ಷಸರಿಗೂ ಅಪರಾಹ್ಣದಲ್ಲಿ ನಾಟ್ಯಕಾರರಿಗೂ ಅಶುಭವಾಗಿವೆ.

ಸೂರ್ಯ ಸಂಕ್ರಮಣವು ಉಷಃಕಾಲದಲ್ಲಿ ಆದರೆ ಗೊಲ್ಲರನ್ನೂ, ಸಂಧ್ಯಾಕಾಲದಲ್ಲಿ ಬ್ರಹ್ಮಚಾರಿಗಳನ್ನೂ ಪೀಡಿಸುವದು. ಹಗಲಾದರೆ ಲೋಕಕ್ಕೆ ಅಪಾಯ, ಕಲಹಗಳನ್ನುಂಟು ಮಾಡುತ್ತದೆ. ರಾತ್ರಿಯಲ್ಲಿಸೂರ್ಯ ಸಂಕ್ರಮಣವಾಗುವದಾದರೆ ಲೋಕಕ್ಕೆ ಸುಭಿಕ್ಷ. ಸಂಧ್ಯಾಕಾಲದಲ್ಲಾದರೆ ವೃಷ್ಟಿ ಪ್ರತಿಬಂಧಕವನ್ನು ಉಂಟು ಮಾಡುವದು. ಬವಾದಿಯಾಗಿ ಹನ್ನೊಂದು ಕರಣದಲ್ಲಿ ಉಂಟಾಗುವ ಸಂಕ್ರಾಂತಿ ಪುರುಷನು ಕ್ರಮವಾಗಿ ಸಿಂಹ, ಹುಲಿ, ಹಂದಿ, ಕತ್ತೆ, ಆನೆ, ಎಮ್ಮೆ, ಕುದುರೆ, ನಾಯಿ, ಆಡು, ಎತ್ತು, ಪಾದಾಚಾರಿ, ಈ ರೀತಿಯಾದ ವಾಹನಗಳನ್ನು ಹೊಂದಿರುವನೆಂದು ತಿಳಿಯಬೇಕು. ಹಾಗೆಯೇ ಕರಣ ಕ್ರಮದಲ್ಲಿ ಭುಶುಂಡಿ ಗದೆ, ಖಡ್ಗ, ದಂಡ, ಬಿಲ್ಲು, ತೋಮರ, ಹಂತ ಪಾಶ, ಅಂಕುಶ ಶಸ್ತ್ರ ಈ ಆಯುಧಗಳನ್ನು ಬಾಣಗಳನ್ನು ಕೈಲಿ ಹಿಡಿದುಕೊಂಡಿರುವನೆಂದು ತಿಳಿಯಬೇಕು. ಮೇಲೆ ಹೇಳಿದ ಕರಣಕ್ರಮದಂತೆ ಸಂಕ್ರಾಂತಿ ಪುರುಷನು ಅನ್ನ, ಪಾಯಸ, ಭಿಕ್ಷಾನ್ನ, ಗಂಜಿಯಿಂದ ಕೂಡಿದ ಹಾಲು, ಮೊಸರು ಮೃಷ್ಟಾನ್ನ, ಬೆಲ್ಲ, ಮಧು, ಅಜ್ಯ, ಹವಿಸ್ಸು, ಸಕ್ಕರೆ ಈ ರೀತಿಯಾದ ಆಹಾರವನ್ನು ಭಕ್ಷಿಸುವನೆಂದು ತಿಳಿಯಬೇಕು.

ಬವಾದಿಕರಣಕ್ಕೆ ಗೋವುಗಳ ಕೊಟ್ಟಿಗೆಯೂ, ಕೌಲವ ಮತ್ತು ಶಕುನಿಕರಣಗಳಿಗೆ ಅಂತರಿಕ್ಷವೂ ಕಿಂಸ್ತುಘ್ನಕ್ಕೆ ಊರ್ಧ್ವ ಪ್ರದೇಶಗಳೂ, ಚತುಷ್ಪಾತ್ಕರಣಕ್ಕೆ ತಿಲ ವಿಶಿಷ್ಟ ಭೂಮಿಯೂ, ನಾಗವಾನ್ಕರಣದಲ್ಲಿ ಸುಪ್ತಾವಸ್ಥೆಯೂ ಹೇಳಲ್ಪಟ್ಟಿರುವುದು. ಸಂಕ್ರಾಂತಿ ಪುರುಷನಿಂದ ಧರ್ಮ, ಆಯುಸ್ಸು, ವೃಷ್ಟಿ ಇವುಗಳ ಸಮತ್ವವೂ ಶ್ರೇಷ್ಠತೆಯೂ ನಷ್ಟವೂ ಉಂಟಾಗುವವು. ಆಯುಧ, ವಾಹನ, ಆಹಾರ, ಜಾತಿ, ಇವುಗಳಿಂದ ಆಯಾ ಆಯುಧಾದಿ ವರ್ಗಗಳಿಗೆ ಕೊಂದರೆ ಉಂಟಾಗುವದೆಂದು ಹೇಳಬೇಕು. ಸುಪ್ತಾವಸ್ಥೆ, ಉಪವೇಷಣಾವಸ್ಥೆಗಳಿಂದ ಸಂಕ್ರಾಂತಿ ಪುರುಷನು ಲೋಕಕ್ಕೆ ಕ್ಷೇಮಕರನು. ಅಂಧಕ, ಮಂದಕ, ಮಧ್ಯ, ಸುಲೋಚನ ಮುಂತಾದ ಅವಸ್ಥೆಗಳಿಂದ ಅದಕ್ಕೆ ವಿರುದ್ಧವಾದ ಫಲಗಳೂ ಸಂಭವಿಸುವವು. ಸ್ಥಿರರಾಶಿ ಸಂಕ್ರಮಣಗಳಿಗೆ ವಿಷ್ಣುಪದವೆಂದೂ, ದ್ವಿಸ್ವಭಾವರಾಶಿ ಸಂಕ್ರಮಣಗಳಿಗೆ ಷಡಶೀತಿ ಎಂದೂ ತುಲಾ ಮತ್ತು ಮೇಷ ಸಂಕ್ರಾಂತಿಗಳಿಗೆ ವಿಷುವತ್ತೆಂದೂ ಸಂಜ್ಞೆಗಳುಂಟು. ಕಟಕ ಮತ್ತು ವಿಷ್ಣುಪದ ಸಂಕ್ರಮಣಗಳಿಗೆ ಮೊದಲಿನ ಹದಿನಾರು ಗಳಿಗೆಗಳೂ, ಮಕರ ಮತ್ತು ಷಡಶೀತಿಯ ಮುಖಾಂತರ ಮುಂದಿನ ಹದಿನಾರು ಗಳಿಗೆಗಳೂ, ವಿಷುವತ್ಸಂಕ್ರಮಣದಲ್ಲಿ ಮಾತ್ರ ಮಧ್ಯಭಾಗದ ಹದಿನಾರು ಗಳಿಗೆಗಳೂ ಪುಣ್ಯಕಾಲವೆನಿಸುವವು. ಸಂಧ್ಯಾಕಾಲಾನಂತರ ಮೂರು ಗಳಿಗೆಯ ಮೇಲೆ ಅಥವಾ ಉದಯಾತ್ಪೂರ್ವ ಮೂರು ಗಳಿಗೆಯಲ್ಲಾಗಲೀ ಸಂಕ್ರಮಣವಾದರೆ ಆ ಸಂದರ್ಭವು ದಕ್ಷಿಣಾಯನವಾಗಿದ್ದಲ್ಲಿ ಪೂರ್ವದಿನವೂ ಉತ್ತರಾಯಣವಾದರೆ ಪರದಿನವೂ ಪುಣ್ಯಕಾಲವೆನಿಸುವದು. ಸಂಕ್ರಮಣವಾಗುವ ನಕ್ಷತ್ರ ಚಂದ್ರನ ಬಲಾಬಲಗಳನ್ನು ತಿಳಿದು ಆ ನಕ್ಷತ್ರದವರಿಗೆ ಫಲಾಫಲಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ಚಂದ್ರನ ಬಲಕ್ಕನುಗುಣವಾಗಿ ಅವರಿಗೆ ಫಲ ದೊರೆಯುವದು.

ಆಯನಸ್ಥಾನದ ಅಂಶ ಎಷ್ಟು ಹಿಂದಾಗಿರುತ್ತದೆಯೋ ಅಷ್ಟು ದಿನ ಹಿಂದೆಯೇ ಆಯನ ಸಂಕ್ರಾಂತಿಯಾಗುತ್ತದೆ. ಅದಕ್ಕೆ ಅಂಗದಿನವೆಂದು ಹೆಸರು. ಸಂಕ್ರಮಣ ಕಾಲದ ನಕ್ಷತ್ರವಾಗಲಿ, ರಾಶಿಯಾಗಲಿ, ಜನ್ಮ ನಕ್ಷತ್ರ ಅಥವಾ ಜನ್ಮ ರಾಶಿಯಾಗಲಿ ವ್ರತಬಂಧ (ಉಪನಯನ) ವಿವಾಹ ಮುಂತಾದ ಕರ್ಮಗಳಿಗೆ ಅಷ್ಟು ಪ್ರಶಸ್ತವಲ್ಲ. ತದ್ದೋಷಶಮನಾರ್ಥವಾಗಿ ಬಳ್ಳಿನ ಮೇಲೆ ಮಂಡಲವನ್ನು ಅದರೊಳಗೆ, ತ್ರಿಶೂಲಾತರ್ಗತವಾದ ತ್ರಿಕೋಣವನ್ನು ಬರೆಯಬೇಕು. ನಂತರ ಆ ತ್ರಿಕೋಣದ ಮೇಲೆ ಸುವರ್ಣವನ್ನಿಟ್ಟು ದಾನ ಮಾಡಬೇಕು.

ತಾರಾಬಲ ಮತ್ತು ಚಂದ್ರಬಲದಿಂದ ಚಂದ್ರನ ಬಲಾಬಲಗಳನ್ನು, ಸಂಕ್ರಮಣ ಕಾಲದ ರಾಶ್ಯಾದಿಗಳಿಂದ ಸೂರ್ಯನ ಬಲಾಬಲಗಳನ್ನು, ಹಾಗೆಯೇ ಇತರ ಗ್ರಹಗಳ ಬಲವನ್ನು ಉಪನಯನಾದಿಗಳಲ್ಲಿ ಮೊದಲು ತಿಳಿದುಕೊಳ್ಳಬೇಕು. ಜನ್ಮರಾಶ್ಯಪೇಕ್ಷೆ ಯಿಂದ ಮೂರು, ಆರು, ಹತ್ತು, ಹನ್ನೊಂದರಲ್ಲಿ, ಸೂರ್ಯನು, ಒಂಭತ್ತು, ಐದು, ನಾಲ್ಕು, ಹನ್ನೆರಡು ಈ ಸ್ಥಾನಗಳಲ್ಲಿಇರತಕ್ಕ ಶನಿ, ಭಿನ್ನರಾದ ಇತರ ಗ್ರಹಗಳಿಂದ ವಿದ್ಧನಾಗದಿದ್ದರೆ ಶುಭಪ್ರದನಾಗುವನು. ಹಾಗೆಯೇ ಚಂದ್ರನು ಮೂರು, ಆರು, ಏಳು, ಹನ್ನೊಂದು ಈ ಸ್ಥಾನಗಳಲ್ಲಿ ಶುಭನು, ಆದರೆ ಹನ್ನೆರಡು, ನಾಲ್ಕು, ಒಂಭತ್ತರಲ್ಲಿರುವ ಬುಧ ವರ್ಜಿತರಾದ ಇತರ ಗ್ರಹಗಳಿಗಿಂತ ಈ ಚಂದ್ರನಿಗೆ ವೇಧ ಇರಕೂಡದು. ಕುಜನು ಮೂರು, ಆರು ಹನ್ನೊಂದರಲ್ಲಿ ಶುಭಕರನೆನಿಸುವನು. ಐದು, ಹನ್ನೆರಡು, ಒಂಭತ್ತರಲ್ಲಿರುವ ಶನಿ, ಬುಧ, ಸೂರ್ಯ ಇವರಿಂದ ಕುಜನು ದೃಷ್ಟನಾಗಿರಬೇಕು. ಎರಡು, ಹನ್ನೊಂದು, ಆರು,

ಎಂಟು, ಹತ್ತರಲ್ಲಿರುವ ಬುಧನು ಐದು, ಮೂರು, ಒಂಭತ್ತು ಮತ್ತು ಎಂಟರಲ್ಲಿರುವ ಚಂದ್ರ ರಹಿತನೆಂದು ಬುಧಗ್ರಹಗಳಿಂದ ಅವಲೋಕಿತನಾಗಿದ್ದರೆ ಶುಭಪ್ರದನು. ಹಾಗೆಯೇ ಗುರುವೂ, ಎರಡು, ಐದು, ಏಳು, ಒಂಭತ್ತು ಮತ್ತು ಹನ್ನೊಂದರಲ್ಲಿದ್ದು ಹನ್ನೆರಡು ಎಂಟು, ಹತ್ತು, ನಾಲ್ಕು ಮತ್ತು ಮೂರನೆಯ ಮನೆಗಳಲ್ಲಿರುವ ಇತರ ಗ್ರಹಗಳಿಂದ ವಿದ್ಧನಾಗಿದ್ದರೆ, ಶುಭಪ್ರದ, ಶುಕ್ರನೂ, ಜನ್ಮರಾಶ್ಯಪೇಕ್ಷೆಯಿಂದ ಐದು, ಒಂಭತ್ತು, ಹನ್ನೆರಡು ಮತ್ತು ಹನ್ನೊಂದರಲ್ಲಿದ್ದು ಎಂಟು, ಏಳು, ಆರು, ಹತ್ತು, ಒಂಭತ್ತು ಹನ್ನೊಂದರಲ್ಲಿರುವ ಇತರ ಗ್ರಹಗಳಿಂದ ಯುಕ್ತನಾಗಿದ್ದರೆ ಶುಭಕರನೆನಿಸುವನು. ಸೂರ್ಯಾದಿ ನವಗ್ರಹ ತೃಪ್ತಿಗಾಗಿ ಮನುಷ್ಯನು ಕ್ರಮವಾಗಿ ಮಣಿ ಮತ್ತು ಹವಳ, ಪಚ್ಚೆ, ಪುಷ್ಯರಾಗ, ವಜ್ರ, ನೀಲ, ಗೋಮೇಧಿಕ ವೈಡೂರ್ಯ, ಈ ನವರತ್ನಗಳನ್ನು ಧರಿಸಬೇಕು. ಚಂದ್ರನು ಮಾಸದ ಶುದ್ಧ ಪ್ರತಿಪದೆಯಲ್ಲಿ ಜಾತಕನಿಗೆ ಶುಭಫಲಪ್ರದನಾದರೆ ಆ ಪಕ್ಷವೆಲ್ಲ ಅವನಿಗೆ ಶುಭವಾದದ್ದೆಂದೂ, ಕೃಷ್ಣ ಪಕ್ಷದ ಪ್ರತಿಪತ್ತಿನಲ್ಲಿ ಅಶುಭವಾಗಿದ್ದರೆ ಆಗಲೂ ಶುಭಫಲಪ್ರದನೆಂದೂ ತಿಳಿಯಬೇಕು. ಆದರೆ ಶುಕ್ಲಪಕ್ಷದಲ್ಲಿ ಶುಭನಾದ ಚಂದ್ರನು, ಐದು, ಒಂಭತ್ತು, ಎರಡು, ಹನ್ನೆರಡು, ಎಂಟು, ನಾಲ್ಕು ಈ ಸ್ಥಾನಗಳಲ್ಲಿರುವ ಇತರ ಗ್ರಹಗಳಿಂದ ವಿದ್ಧನಾಗಿರಬಾರದು. ಹಾಗಾದರೆ ಮಾತ್ರ ಅವನು ಶುಭಕಾರಕ.

ಜನ್ಮಾದಿಯಾಗಿ ತಾರಾಬಲವು ಜನ್ಮ, ಸಂಪತ್, ವಿಪತ್, ಕ್ಷೇಮಾ, ಪ್ರತ್ಯಖಕ್, ಸಾಧನ, ವಧ, ಮಿತ್ರ, ಪರಮಮಿತ್ರ, ಎಂದು ಒಂಭತ್ತುವಿಧವಾಗಿರುವದು. ಅದರಲ್ಲಿ ಒಂದು, ಮೂರು, ಐದು, ಏಳು ಈ ತಾರೆಗಳು ಅಶುಭ, ಅವುಗಳಿಗೆ ಕ್ರಮವಾಗಿ ಶಾಕ, ಬೆಲ್ಲ, ಉಪ್ಪು, ಸ್ವರ್ಣಸಹಿತವಾದ ತಿಲ ಇವುಗಳನ್ನು ದಾನ ಮಾಡಿದರೆ ಆದರ ದೋಷವು ನಿವೃತ್ತಿ ಹೊಂದುವದು. ಕೃಷ್ಣ ಪಕ್ಷದಲ್ಲಿ ತಾರಾಬಲವನ್ನೂ ಶುಕ್ಲಪಕ್ಷದಲ್ಲಿ ಚಂದ್ರಬಲವನ್ನೂ ನೋಡಬೇಕು. ಚಂದ್ರನಿಗೆ ಪ್ರತಿರಾಶಿಯಲ್ಲಿಯೂ ಹನ್ನೆರಡು ಅವಸ್ಥೆಗಳಿರುವವು. ಈ ಅವಸ್ಥೆಗಳು ಹೆಸರಿಗೆ ತಕ್ಕಂತೆ ಯಾತ್ರೆ ವಿವಾಹ ಮುಂತಾದ ಕರ್ಮಗಳಲ್ಲಿ ಫಲಗಳನ್ನು ಕೊಡುತ್ತವೆ. ಈ ಅವಸ್ಥೆಯನ್ನು ಕಂಡು ಹಿಡಿಯಬೇಕಾದರೆ ಚಂದ್ರನಿರುವ ನಕ್ಷತ್ರದ ಗತ ಘಟಿಗಳನ್ನು ಅರವತ್ತರಿಂದ ಗುಣಿಸಿ, ತಾತ್ಕಾಲಿಕ ಘಳಿಗೆಗಳನ್ನು ಸೇರಿಸಿ ಮತ್ತೆ ನಾಲ್ಕರಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಿದರೆ ಕ್ರಮವಾಗಿ ಬರುವ ಲಬ್ಧಗಳೇ ಈ ಅವಸ್ಥೆಗಳಾಗುವವು. ಈ ದ್ವಾದಶಾವಸ್ಥೆಗಳು ಕ್ರಮವಾಗಿ ಪ್ರವಾಸ, ನಷ್ಟ, ಮೃತಿ, ಜಯ, ಹಾಸ್ಯ, ರತಿ, ಮುದ, ಹಸಿವು, ಭೋಜನ, ಜ್ವರ, ಕಂಪ, ಸುಸ್ಥಿತಿ ಎಂಬ ಹೆಸರಿನಿಂದ ಫಲಗಳನ್ನು ಕೊಡುತ್ತವೆ.

೧) ಪಟ್ಟಾಭಿಷೇಕ, ಪ್ರಯಾಣ, ಸಂಧಿ, ಯುದ್ಧ, ಒಡವೆ ಮತ್ತು ಗಣಿಗಳ ಕೆಲಸ ಇವುಗಳನ್ನು ಮೇಷಲಗ್ನದಲ್ಲಿ ನಡೆಸುವದು ಶ್ರೇಯಸ್ಕರ.

೨) ಮಂಗಳ ಕರ್ಮ, ಸ್ಥಿರಕಾರ್ಯಗಳು ನೀರು, ಮನೆ, ಕೃಷಿ, ವ್ಯಾಪಾರ, ಪಶು ವಿಕ್ರಯ ಇವುಗಳಿಗೆ ವೃಷಭ ಲಗ್ನವು ಪ್ರಶಸ್ತವಾಗಿದೆ.

೩) ಕಲೆ ವಿಜ್ಞಾನ, ಶಿಲ್ಪ, ಭೂಷಣ, ಯುದ್ಧ, ಅಭ್ಯಾಸ, ಗಜಾಭಿಷೇಕ, ವಿವಾಹಾದಿಕರ್ಮಗಳಿಗೆ ಮಿಥುನ ಲಗ್ನ ಪ್ರಶಸ್ತ.

೪) ಬಾವಿ, ಕೆರೆ, ಏರಿ, ಪುಷ್ಟಿಕರ್ಮಗಳು, ಲೇಖನಕಾರ್ಯ ಇವುಗಳನ್ನು ಕಟಕ ಲಗ್ನದಲ್ಲಿ ಮಾಡುವದು ಉತ್ತಮ.

೫) ಕಬ್ಬು, ಇತರ ಧಾನ್ಯ, ವ್ಯಾಪಾರ, ಕೃಷಿ, ಸೇವಾಕರ್ಮ ಸ್ಥಿರ ಕಾರ್ಯಾರಂಭ ಸಾಹಸದ ಕಾರ್ಯ ಇವುಗಳಿಗೆ ಸಿಂಹ ಲಗ್ನವು ಪ್ರಶಸ್ತ.

೬) ವಿದ್ಯಾ, ಶಿಲ್ಪ, ಔಷಧಿ, ಒಡವೆ, ಪುಷ್ಟಿಕರವಾದ ಕಾರ್ಯ ಇವುಗಳನ್ನು ಹೊಂದಲು ಕನ್ಯಾ ಲಗ್ನವು ಉತ್ತಮ.

೭) ಕೃಷಿ, ವ್ಯಾಪಾರ, ಪ್ರಯಾಣ, ಪಶು ವಿಕ್ರಯ ವಿವಾಹಾದಿ ವ್ರತಗಳು ತೂಕಮಾಡುವ ಕಾರ್ಯ ಇವುಗಳಿಗೆ ತುಲಾಲಗ್ನ ಪ್ರಶಸ್ತ.

೮) ಸ್ಥಿರ ಕಾರ್ಯಗಳು, ರಾಜಸೇವಾ, ರಾಜ್ಯಾಭಿಷೇಕ, ಕಳ್ಳತನ ಇವುಗಳಿಗೆ ವೃಶ್ಚಿಕ ಲಗ್ನ ಉತ್ತಮವಾಗಿದೆ.

೯) ವ್ರತ, ಉಪನಯನ, ವಿವಾಹ, ಪ್ರಯಾಣ, ಆನೆ, ಶಿಲ್ಪ ಕಲೆ ಚರಸ್ಥಿರ ಮಿಶ್ರಕಾರ್ಯ ಇವುಗಳನ್ನು ಧನುಲಗ್ನದಲ್ಲಿ ಮಾಡುವದು ವಿಹಿತ.

೧೦) ಧನುರ್ಬಂಧನ, ಮೋಕ್ಷಗಳು, ಅಸ್ತ್ರವಿದ್ಯೆ, ಕೃಷಿ, ಗೋವು, ಕುದುರೆ ಇವುಗಳಿಗೆ ಸಂಬಂಧಿಸಿದ ಕಾರ್ಯಗಳು, ಪ್ರಯಾಣ, ಪಶು, ಸೇವಕರು, ಇವರುಗಳನ್ನು ಸ್ವೀಕರಿಸುವದು ಮುಂತಾದ ಕರ್ಮಗಳಿಗೆ ಮಕರಲಗ್ನ ವಿಹಿತವಾದದ್ದು.

೧೧) ಕೃಷ್ಷಿ, ವ್ಯಾಪಾರ, ಪಶು, ನೀರು ಶಿಲ್ಪಕಾರ್ಯ, ಕಲಾದಿಗಳು, ಜಲಪಾತ್ರ, ಪರಿಗ್ರಹ, ಅಸ್ತ್ರ ಶಸ್ತ್ರಾದಿಗಳ ಸಂಗ್ರಹ ಇವುಗಳಿಗೆ ಕುಂಭ ಲಗ್ನವು ಉತ್ತಮವಾಗಿದೆ.

೧೨) ಉಪನಯನ, ವಿವಾಹ, ಅಭಿಷೇಕ, ಜಲಸ್ಥಾಪನ, ಭಾಷಣ ಪರಿಗ್ರಹ ಜಲಪಾತ್ರ ಪರಿಗ್ರಹ, ಅಶ್ವಕರ್ಮ ಇವುಗಳಿಗೆ ಮೀನ ಲಗ್ನ ಪ್ರಶಸ್ತ ಈ ರೀತಿ ಹನ್ನೆರಡು ಲಗ್ನಗಳಲ್ಲಿಯೂ ವಿಹಿತವಾಗಿರುವ ಕಾರ್ಯಗಳನ್ನು ಮಾಡುವದರಿಂದ ಶ್ರೇಯಸ್ಸುಂಟೆಂದು ತಿಳಿಯಬೇಕು.

ಮೇಲೆ ಸೂಚಿಸಿದ ಮೇಷಾದಿ ಲಗ್ನಗಳು ಶುಭಗ್ರಹ ಯುಕ್ತಗಳಾಗಿ ಶುದ್ಧಗಳೆನಿಸದಿದ್ದರೆ, ಶುಭಪ್ರದವಾಗುತ್ತವೆ. ಪಾಪಗ್ರಹಗಳಿಂದ ಕೂಡಿದ್ದರೆ ಅಶುಭ ಫಲ ನೀಡುತ್ತವೆ. ವೃಷಭ, ಮಿಥುನ, ಕಟಕ, ಕನ್ಯಾ, ಮೀನ ಮತ್ತು ಧನುಸ್ಸು, ಈ ಲಗ್ನಗಳಿಂದ ಶುಭ ಗ್ರಹಾಧಿಪತಿಗಳನ್ನು ಹೊಂದಿದ್ದರಿಂದ ಶುಭಲಗ್ನಗಳೆನಿಸುವವು. ಉಳಿದ ಲಗ್ನಗಳು ಅಂದರೆ, ಮೇಷ, ಸಿಂಹ, ಮುಂತಾದವು ಪಾಪಲಗ್ನಗಳೆನಿಸುವವು. ಲಗ್ನದಲ್ಲಿ ಬಲಿಷ್ಠ ಗ್ರಹವು ಇದ್ದುದಾದರೆ ಆ ಗ್ರಹಕ್ಕೆ ಸಂಬಂಧಿಸಿದ ಫಲ ದೊರೆಯುವದು. ಯಾವ ಗ್ರಹದ ದೃಷ್ಟಿಯಾಗಲೀ ಯೋಗವಾಗಲಿ ಇಲ್ಲದೆ ಇರುವ ಲಗ್ನವು ತನ್ನ ಸ್ವಭಾವವನ್ನೇ ಫಲವನ್ನಾಗಿ ಕೊಡುತ್ತವೆ. ಲಗ್ನಾದಿಭಾಗದಲ್ಲಿ ಪೂರ್ಣಫಲವೂ, ಮಧ್ಯಭಾಗದಲ್ಲಿ ಮಧ್ಯಫಲವೂ ಅಂತ್ಯದಲ್ಲಿ ತುಚ್ಛಫಲವೂ ಉಂಟಾಗುವದು. ಸಕಲ ಕರ್ಮಗಳಿಗೂ ಮೊದಲು ಲಗ್ನಬಲವೂ, ಅನಂತರ ಚಂದ್ರ ಬಲವೂ ಇರಬೇಕು. ಒಂದು ವೇಳೆ ಚಂದ್ರ ಬಲವಿಲ್ಲದಿದ್ದರೆ ಲಗ್ನಾತ್ಸಪ್ತಮದಲ್ಲಿಯಾದರೂ ಬಲಿಷ್ಠಗ್ರಹಗಳಿದ್ದು ಅದರಿಂದ ಲಗ್ನವು ಬಲಿಷ್ಠವೆನಿಸಿರಬೇಕು. ಸಕಲ ಗ್ರಹಗಳಿಗೂ ಚಂದ್ರನೇ ಆಧಾರಭೂತನಾದವನು. ಆಧಾರಭೂತನಾದ ಚಂದ್ರನ ಬಲವಿದ್ದರೆ ಸಕಲ ಗ್ರಹಗಳೂ ಬಲಿಷ್ಠವೆಂದೇ ತಿಳಿಯಬೇಕು. ಚಂದ್ರನು ಶುಭಫಲಪ್ರದನಾದರೆ ಇತರ ಸಕಲ ಗ್ರಹಗಳೂ ಶುಭಪ್ರದರೇ ಆಗುವರು. ಆದರೆ ಧನಾಧಿಪತಿ ಅಂದರೆ ದ್ವಿತೀಯಾಧಿಪತಿ ಮಾತ್ರ ಹಾಗಾಗುವದಿಲ್ಲ. ಲಗ್ನವು

ಬಲಿಷ್ಠವಾಗಿದ್ದರೆ ಆ ಲಗ್ನಾಂಶದಲ್ಲಿರುವ ಗ್ರಹಗಳೆಲ್ಲ ಆ ಲಗ್ನದ ಫಲವನ್ನೇ ಕೊಡುವವು. ಆದರೆ ದ್ವಿತೀಯಾಧಿಪತಿ ಮಾತ್ರ ಆ ಫಲವನ್ನು ಕೊಡುವದಿಲ್ಲ. ಅದೇ ರೀತಿ ಸಕಲ ಭಾವಗಳನ್ನು ಆಯಾ ಫಲಗಳಿಗೆ ಆಯಾ ಭಾವಗಳನ್ನೇ ಲಗ್ನಗಳೆಂದು ಭಾವಿಸಿ, ಫಲಾಫಲಗಳನ್ನು ವಿಚಾರಮಾಡಬೇಕು. ಗುಣಭರಿತವಾದ ಲಗ್ನವು ಕ್ಷಿಪ್ರದಲ್ಲಿಯೇ ಫಲಕೊಡುವದು. ದೋಷವು ಕಡಿಮೆಯಾಗಿ ಗುಣವು ಅಧಿಕವಾದರೆ ಲಗ್ನದ ಫಲವು ಸತತವಾಗಿ ದೊರೆಯುವದು. ದೋಷಾಧಿಕ್ಯದಿಂದ ಲಗ್ನವು ದುಷ್ಟವಾಗಿದ್ದರೆ ಲಗ್ನದ ಫಲವು ಅಶುಭದಾಯಕವಾಗುವದು.

ರಾತ್ರಿಯ ಮೊದಲನೆಯ ಮತ್ತು ನಾಲ್ಕನೆಯ ಯಾಮಗಳು ಗರ್ಭಾಧಾನಕ್ಕೆ ಪ್ರಶಸ್ತವಾದ ಕಾಲವಲ್ಲ. ಗರ್ಭಾಧಾನಕಾಲದಲ್ಲಿ ಚಂದ್ರನು ಓಜರಾಶಿಯಲ್ಲಿದ್ದು ಲಗ್ನವು ಸಂಗ್ರಹವೀಕ್ಷಿತವಾಗಿದ್ದರೆ ಪುಂಜನನವಾಗುವದು. ಯುಗ್ಮತಿಥಿಯಲ್ಲಿ ಮತ್ತು ಯುಗ್ಮ ಲಗ್ನದಲ್ಲಿ ಸ್ತ್ರೀಯನ್ನು ಪ್ರವೇಶಮಾಡಿದವನು ಸ್ತ್ರೀ ಶಿಶುವನ್ನು ಪಡೆಯುವನು. ಆದರೆ ರೇವತಿ, ಮೂಲಾ, ಆಶ್ಲೇಷಾ ಮಘಾ ನಕ್ಷತ್ರಗಳಲ್ಲಿ ಸ್ತ್ರೀ ಸಂಬಂಧಮಾಡಕೂಡದು. ಪ್ರಥಮ ಗರ್ಭದಲ್ಲಿ ಎರಡು ಅಥ ಮೂರನೆಯ ತಿಂಗಳಲ್ಲಿ ಪುಂಸವನವನ್ನೂ, ಆರು, ಎಂಟನೆಯ ತಿಂಗಳಲ್ಲಿ ಸೀಮಂತವನ್ನೂ ಮಾಡಬೇಕು. ಆ ದಿನಗಳಲ್ಲಿ ದಂಪತಿಗಳಿಗೆ ತಾರಾಬಲ, ಚಂದ್ರಬಲ ಸರಿಯಾಗಿ ಇರುವಂತೆ ಲಗ್ನವನ್ನು ನಿರ್ಣಯಿಸಬೇಕು. ಪುಂಸವನ, ಸೀಮಂತಾದಿಗಳಿಗೆ ರಿಕ್ತಾತಿಥಿ, ಪರ್ವದಿನ ಮಂಗಳವಾರ, ಗುರುವಾರ, ಭಾನುವಾರಗಳೂ ತೀಕ್ಷ್ಣ ಮತ್ತು ಮಿಶ್ರ ನಕ್ಷತ್ರಗಳಲ್ಲಿ ಸೂರ್ಯನಿರುವದು ಅಷ್ಟು ಪ್ರಶಸ್ತವಲ್ಲ. ಚಂದ್ರನು ಪುಂರಾಶಿಯಲ್ಲಿ ಇರುವಾಗ ಅಷ್ಟಮ ಶುದ್ಧಿಯಿದ್ದು ಲಗ್ನದಲ್ಲಿ ಶುಭಗ್ರಹವಿರುವಾಗ, ಪಾಪಗ್ರಹಗಳ ದೃಷ್ಟಿ ಇಲ್ಲದೇ ಶುಭ ಗ್ರಹಗಳ ದೃಷ್ಟಿಯೇ ಇರುವಾಗ ಸೀಮಂತಕರ್ಮ ನಡೆಸುವದು. ಯೋಗ್ಯ ಸೀಮಂತ ಲಗ್ನದಿಂದ ಐದು, ಒಂಭತ್ತು, ಒಂದು, ನಾಲ್ಕು, ಏಳು ಹತ್ತು ಈ ಮನೆಗಳಲ್ಲಿ ಶುಭಗ್ರಹಗಳಿರಬೇಕು. ಮೂರು, ಆರು, ಹನ್ನೊಂದನೆಯ ಸ್ಥಾನಗಳಲ್ಲಿ ಪಾಪಗ್ರಹಗಳಿರಬೇಕು. ಚಂದ್ರನು ಹನ್ನೆರಡು ಮತ್ತು ಆರು ಈ ರಾಶಿಗಳಲ್ಲಿ ಇರಕೂಡದು. ಲಗ್ನದಿಂದ ಹನ್ನೆರಡು, ಐಧು, ಎಂಟನೆಯ ಮನೆಗಳಲ್ಲಿ ಒಂದು ಕ್ರೂರ ಗ್ರಹವಿದ್ದರೂ ಅದು ಸೀಮಂತಿನಿಯಾದ ಸ್ತ್ರೀಯನ್ನಾಗಲಿ ಅಥವಾ ಆಕೆಯ ಗರ್ಭವನ್ನಾಗಲಿ ಕೊಲ್ಲುವದು. ಆದ್ದರಿಂದ ಸೀಮಂತಕ್ಕೆ ನಿರ್ದುಷ್ಟಾದ ಲಗ್ನವನ್ನಿಡಬೇಕು.

ಮಗುವು ಹುಟ್ಟಿದ ಕಾಲದಲ್ಲಿಯೋ ಅಥವಾ ಜಾತಾಶೌಚ ನಿವೃತ್ತಿಯಾದ ಮೇಲೋ ಜಾತಕ ಕರ್ಮವನ್ನು ಮಾತ ಪಿತೃಗಳು ಪೂಜಾಪೂರ್ವಕ ನಡೆಸಬೇಕು. ಸೂತಕಾಂತ್ಯ ಕಾಲದಲ್ಲಿ ಅವರವರ ಕುಲಪದ್ಧತಿಯಂತೆ ನಾಮಕರಣ ಮಾಡುವದು ಉತ್ತಮ, ಚೆನ್ನಾಗಿ ಆಲೋಚಿಸಿ, ಮಂಗಳಕರವಾದ ಹೆಸರನ್ನು ಮಗುವಿಗೆ ಇಡುವದು ಒಳ್ಳೆಯದು. ಕಾರಣಾಂತರಗಳಿಂದ ಸಕಾಲದಲ್ಲಿ ನಾಮಕರಣ ಮಾಡಲು ಸಾಧ್ಯವಾಗದಿದ್ದರೆ ಗುರು, ಶುಕ್ರರು ಅಸ್ತವಿಲ್ಲದಿರುವಾಗ ಉತ್ತರಾಯಣದಲ್ಲಿ ಚರ, ಸ್ಥಿರ, ಮೃದು, ಕ್ಷಿಪ್ರ ಈ ನಕ್ಷತ್ರಗಳಲ್ಲಿ ಶುಭವಾದ ದಿನ ಚಂದ್ರಬಲ, ತಾರಾಬಲಗಳನ್ನು ಚೆನ್ನಾಗಿ ನಿರ್ಣಯಿಸಿ, ತಂದೆಯ ಮನೆಯಲ್ಲಿಯೇ ಮಗುವಿಗೆ ನಾಮಕರಣ ಮಾಡಬಹುದು. ಹೆಣ್ಣು ಮಕ್ಕಳಿಗೆ ಐದು, ಏಳು, ಮೊದಲಾದ ವಿಷಮ ತಿಂಗಳಲ್ಲಿಯೂ ಗಂಡುಮಕ್ಕಳಿಗೆ ಎಂಟು, ಆರು ಮುಂತಾದ ಸಮ ತಿಂಗಳಲ್ಲಿಯೂ ಶುಭಲಗ್ನ, ಶುಭಾಂಶ, ಅಷ್ಟಮಶುದ್ಧಿ ಇರುವ ಲಗ್ನ

ಇಂತಹ ಸಮಯದಲ್ಲಿ ಅನ್ನ ಪ್ರಾಶನ ಮಾಡಿಸಬೇಕು. ಅನ್ನ ಪ್ರಾಶನಕ್ಕೆ ರಿಕ್ತಾ ತಿಥಿ, ಕ್ಷಯ ತಿಥಿ, ನಂದಾ ತಿಥಿಗಳು, ದ್ವಾದಶಿ ಅಷ್ಟಮಿ ಇವುಗಳನ್ನು ಬಿಟ್ಟು ಉಳಿದ ತಿಥಿಗಳು ಪ್ರಶಸ್ತವಾದವು. ಚರ, ಸ್ಥಿರ, ಮೃದು, ಕ್ಷಿಪ್ರ ನಕ್ಷತ್ರಗಳೂ, ಲಗ್ನಾಷ್ಟಕ ಶುದ್ಧಿ, ಲಗ್ನದಶಮಶುದ್ಧಿ ಅಥವಾ ಶುಭಗ್ರಹ ಸಂಬಂಧ, ಮೂರು, ಆರು, ಹನ್ನೊಂದರಲ್ಲಿ, ಪಾಪಗ್ರಹಗಳಿರುವದು, ಒಂದು ಐದು, ಒಂಬತ್ತು, ಏಳು, ನಾಲ್ಕು ಹತ್ತರಲ್ಲಿ ಶುಭಗ್ರಹಗಳಿರುವದು ಅನ್ನಪ್ರಾಶನಕ್ಕೆ ಪ್ರಶಸ್ತ ಕಾಲವೆಂದು ತಿಳಿಯಬೇಕು.

ಮಗುವಿಗೆ ಚೂಡಾಕರ್ಮ ಮಾಡಲು ಜನ್ಮತಃ ಮೂರು ಅಥವಾ ಐದು ವರ್ಷಗಳು ಸೂಕ್ತ. ಅದನ್ನು ಸ್ವಶಾಖಾನುಸಾರವಾಗಿ, ಕುಲಪದ್ಧತಿಯಂತೆ ನಡೆಸಬೇಕು. ಉತ್ತರಾಯಣದಲ್ಲಿ ಗುರು ಶುಕ್ರಾಸ್ತವಿಲ್ಲದಿರುವ, ಪರ್ವ, ರಿಕ್ತಾತಿಥಿಗಳನ್ನು ಬಿಟ್ಟು ಶುಕ್ರವಾರ, ಗುರು, ಬುಧ, ಚಂದ್ರವಾರಗಳಲ್ಲಿ, ಅಶ್ವಿನಿ, ಪುನರ್ವಸು, ಪುಷ್ಯ, ರೋಹಿಣಿ, ಜ್ಯೇಷ್ಠ, ರೇವತಿ ಮುಂತಾದ ಶುಭ ನಕ್ಷತ್ರಗಳಲ್ಲಿ ಚೌಲ ಮಾಡಿಸಬಹುದು. ಇದೇ ರೀತಿ ಉಪನಯನಕ್ಕೂ ಇರಬೇಕು. ಅಲ್ಲದೆ ಉಪನಯನಕ್ಕೆ ಹಸ್ತಾ, ಚಿತ್ರಾ, ಸ್ವಾತಿ, ಶ್ರವಣ, ಧನಿಷ್ಠ, ಶತಭಿಷ ನಕ್ಷತ್ರಗಳು ಪ್ರಶಸ್ತವಾಗಿವೆ.

ಚೌಲೋಪನಯನಗಳಿಗೆ ಮಾತ್ರ ಜನ್ಮ ನಕ್ಷತ್ರ ಹೆಚ್ಚು ಪ್ರಶಸ್ತ. ಉಳಿದ ಕರ್ಮಗಳಿಗೆ ಜನ್ಮ ನಕ್ಷತ್ರ ಪ್ರಶಸ್ತವಲ್ಲ. ಚೌಲೋಪನಯನ ಲಗ್ನಾದಿಗಳು ಅಷ್ಟಮ ಶುದ್ಧಿಯಿಂದಲೂ, ಶುಭಾಂಶಗಳಿಂದಲೂ ಕೂಡಿರಬೇಕು. ಜನ್ಮಲಗ್ನದಿಂದ ಎಂಟನೆಯ ರಾಶಿಯು ಚೌಲೋಪನಯನ ಲಗ್ನವಾಗಿರಕೂಡದು, ಚಂದ್ರನು ಆರು, ಎಂಟು, ಹನ್ನೆರಡನೆಯ ಮನೆಗಳಲ್ಲಿರಕೂಡದು. ದ್ವಿತೀಯ ಮತ್ತು ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹಗಳೂ, ಮೂರು, ಆರು, ಹನ್ನೊಂದನೆಯ ಮನೆಗಳಲ್ಲಿ ಪಾಪಗ್ರಹಗಳಿರಬೇಕು. ಅಭ್ಯಂಜನ ಸ್ನಾನಾನಂತರ ಸಂಧ್ಯಾಕಾಲದಲ್ಲಿ, ದಾರಿಯಲ್ಲಿ ರಾತ್ರಿವೇಳೆಯಲ್ಲಿ ಊಟದ ನಂತರ, ಯುದ್ಧರಂಗದಲ್ಲಿ, ಕೆಲಸದಲ್ಲಿರುವಾಗ, ಪ್ರಯಾಣ ಮಾಡುವಾಗ, ಅಲಂಕೃತನಾಗಿರುವಾಗ, ನವಮಿ ತಿಥಿಯಲ್ಲಿ ಕ್ಷೌರಮಾಡಿಸಿ ಕೊಳ್ಳಬಾರದು. ರಾಜರು ಪ್ರತಿ ಪಂಚಮಿಯಲ್ಲಿ ಕ್ಷೌರ ಕರ್ಮಕ್ಕೆ ವಿಹಿತವಾದ ನಕ್ಷತ್ರಗಳಲ್ಲಿ ಈ ಕರ್ಮವನ್ನು ಮಾಡಿಸಿಕೊಳ್ಳಬೇಕು. ಆದರೆ ರಾಜಾಜ್ಞೆ, ಬ್ರಾಹ್ಮಣಾಜ್ಞೆ, ಯಜ್ಞ, ದೊಡ್ಡವರ ಮರಣ, ಬಂಧನ, ಮೋಕ್ಷ ಕಾಲ ಮುಂತಾದ ಅವಶ್ಯ ಸಂದರ್ಭಗಳಲ್ಲಿ ಯಾವ ತಿಥಿ ವಾರ ನಕ್ಷತ್ರಗಳನ್ನು ನೋಡಬೇಕಾಗಿಲ್ಲ. ಮದುವೆಗೆ ಹೇಳಿದ ದಿನ, ವಾರ, ನಕ್ಷತ್ರಗಳಲ್ಲಿ ಕ್ಷೌರಮಾಡಿಸಬಹುದು. ಸರ್ವ ಶುಭಕರ್ಮಗಳಿಗೂ ಪ್ರಾರಂಭದಲ್ಲಿ ಕ್ಷೌರವನ್ನು ಮಾಡಿಸುವದು ಮಂಗಲಕರ. ಮತ್ತು ಉದ್ವಾಹಾದಿ ಕರ್ಮಗಳಲ್ಲಿ ಅಂಕುರಾರ್ಪಣ ಕರ್ಮವನ್ನಾಚರಿಸುವದು ತುಂಬಾ ಪ್ರಶಸ್ತವಾದದ್ದು. ಬ್ರಾಹ್ಮಣವಟ್ಟುವಿಗೆ ಜನ್ಮಾಷ್ಟಮ ಅಥವಾ ಗರ್ಭಾಷ್ಟಮ ವರ್ಷಗಳಲ್ಲಿ, ಕ್ಷತ್ರಿಯನಿಗೆ ಹನ್ನೊಂದನೆಯ ವರ್ಷದಲ್ಲಿಯೂ, ವೈಶ್ಯನಿಗೆ ಹನ್ನೆರಡನೆಯ ವರ್ಷದಲ್ಲಿಯೂ ಮಾಡುವ ಉಪನಯನವು ಪ್ರಶಸ್ತವಾದದ್ದು. ಆದರೆ ವೇದ ಶಾಸ್ತ್ರಾದಿಗಳಲ್ಲಿ ನೈಪುಣ್ಯ ಅಪೇಕ್ಷಿಸುವ ಕಾಮ್ಯಬುದ್ಧಿಯಿಂದ ಐದನೆಯ ವಯಸ್ಸಿನಲ್ಲಿ ಬೇಕಾದರೂ ಉಪನಯನವನ್ನು ಮಾಡಬಹುದು. ಹಾಗೆಯೇ ಶ್ರೀಕಾಮನಾದವನಿಗೆ ಆರನೇಯ ವರ್ಷವೂ ಪ್ರಶಸ್ತವಾಗಿದೆ. ಉಪನೀತವಾಗುವ ವಟುವಿಗೆ ಶುಕ್ರನ ಬಲವಿದ್ದರೂ, ಗುರುಬಲವಿದ್ದೇ ಇರಬೇಕು. ಅದನ್ನು ನೋಡಿ ಹಿಂದೆ ಹೇಳಿದ ಕಾಲವು

ಅತೀತವಾಗದಂತೆ ಉಪನಯ ಮಾಡಬೇಕು. ಉಪನಯನ ಕಾಲದಲ್ಲಿ ಗುರು ಶುಕ್ರರು ಅಸ್ತವಾಗಿರಕೂಡದು. ಉತ್ತರಾಯಣವಾಗಿರಬೇಕು. ಗುರು, ಶುಕ್ರ, ಕುಜ, ಬುಧರ ಕ್ರಮವಾಗಿ ವೇದಾಧಿಪತಿಗಳಾಗಿರುವದರಿಂದ ಅವರು ಆಯಾ ಶಾಖೆಗಳಿಗೆ ಬಲಿಷ್ಠರಾಗಿರಬೇಕು. ವಸಂತ, ಗ್ರೀಷ್ಮ, ಶರದೃತುಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣದವರಿಗೆ ಕ್ರಮವಾಗಿ ಪ್ರಶಸ್ತವಾದವುಗಳು. ಮಾಘಾದಿ ಐದು ತಿಂಗಳುಗಳು ಸಾಧಾರಣವಾಗಿ ಎಲ್ಲರಿಗೂ ಶ್ರೇಷ್ಠವಾದವುಗಳೆಂದು ತಿಳಿಯಬೇಕು.

ಮಾಘ, ಫಾಲ್ಗುಣ, ಮಾಸಗಳಲ್ಲಿ ಉಪನೀತನಾದ ವಟುವು ಕುಲಾಚಾರ, ಧರ್ಮಗಳಿಂದ ಪರಿಪೂರ್ಣನೆನಿಸುವನು. ಚೈತ್ರದಲ್ಲಿ ವಿಧಿವಿಜ್ಞನಾಗಿಯೂ, ಶ್ರೀಮಂತನಾಗಿಯೂ, ವೇದಾಂಗಗಳಲ್ಲಿ ನಿಪುಣನಾಗಿಯೂ ಆಗುವನು. ವೈಶಾಖದಲ್ಲಿ ಧನವಂತನೂ, ವೇದಶಾಸ್ತ್ರಾದಿಗಳಲ್ಲಿ ಪಾರಂಗತನೂ ಆಗುವನು. ಜ್ಯೇಷ್ಠದಲ್ಲಿ ಉಪನೀತನಾದ ವಟುವು ಬಲಿಷ್ಠನೂ, ವೇದಜ್ಞನೂ ಆಗುವನು. ಉಪನಯನಕ್ಕೆ ಶುಕ್ಲಪಕ್ಷ ದ್ವಿತೀಯಾ, ತೃತೀಯಾ, ಪಂಚಮಿ, ತ್ರಯೋದಶಿ, ದಶಮೀ, ಸಪ್ತಮೀ ಈ ತಿಥಿಗಳು ಪ್ರಶಸ್ತವಾದವು. ಏಕಾದಶಿ, ಷಷ್ಠಿ, ದ್ವಾದಶಿ ತಿಥಿಗಳು ಮಧ್ಯಮವಾಗಿದ್ದು, ಉಳಿದವು ಅಧಮವಾಗಿವೆ. ಕೃಷ್ಣಪಕ್ಷದಲ್ಲಿ ಬಿದಿಗೆ ತದಿಗೆ ಪಂಚಮಿ ಈ ಮೂರನ್ನು ಬಿಟ್ಟು ಉಳಿದೆಲ್ಲಾ ಅಪ್ರಶಸ್ತವಾಗಿವೆ.

ಹಸ್ತ, ಚಿತ್ರ, ಸ್ವಾತಿ, ರೇವತಿ, ಪುಷ್ಯ, ಆರಿದ್ರಾ, ಪುನರ್ವಸು ಉತ್ತರಾತ್ರಯ ಶ್ರವಣ, ಧನಿಷ್ಠ, ಶತಭಿಷ್, ಅಶ್ವಿನಿ, ಅನುರಾಧಾ, ರೋಹಿಣಿ ಈ ನಕ್ಷತ್ರಗಳು ಉಪನಯನಕ್ಕೆ ಯೋಗ್ಯವಾಗಿವೆ. ವಟುವಿನ ಜನ್ಮ ನಕ್ಷತ್ರದಿಂದ ಹತ್ತನೆಯ ನಕ್ಷತ್ರವು ಕರ್ಮ ನಕ್ಷತ್ರವೆಂದೂ ಹದಿನಾರನೆಯದಕ್ಕೆ ಸಂಘಾತ ನಕ್ಷತ್ರವೆಂದೂ ಹದಿನೆಂಟನೆಯದಕ್ಕೆ ಸಮುದಯವೆಂದೂ ಇಪ್ಪತ್ಮೂರನೆಯದಕ್ಕೆ ವಿನಾಶನವೆಂದೂ, ಇಪ್ಪತ್ತೈದನೆಯದಕ್ಕೆ ಮಾನಸವೆಂದೂ ಹೆಸರು. ಈ ನಕ್ಷತ್ರಗಳಲ್ಲಿ ಶುಭಕರ್ಮಗಳನ್ನಾಚರಿಸಬಾರದು.. ಗುರು, ಬುಧ, ಶುಕ್ರವಾರಗಳು, ಪ್ರಶಸ್ತವಾದವು. ಭಾನು, ಸೋಮವಾರಗಳು ಮಧ್ಯಮ, ಉಳಿದ ವಾರಗಳು ನಿಂದಿತಗಳು. ಅಹಃ ಪ್ರಮಾಣದ ಮೂರನೆಯ ಒಂದು ಭಾಗದಲ್ಲಿ ದೈವಕಾರ್ಯಗಳನ್ನು, ಎರಡನೆಯ ಭಾಗದಲ್ಲಿ ಮಾನುಷ ಕಾರ್ಯಗಳನ್ನೂ, ಮೂರನೆಯ ಭಾಗದಲ್ಲಿ ಪಿತೃಕಾರ್ಯಗಳನ್ನು ಆಚರಿಸಬೇಕು. ಗುರು, ಚಂದ್ರ ಅಥವಾ ವೇದಾಧಿಪತಿ ಇವರಲ್ಲಿ ಯಾರೊಬ್ಬರೂ ನೀಚಾಂಶದಲ್ಲಯಾಗಲಿ, ನೀಚರಾಶಿಯಲ್ಲಾಗಲಿ, ಶತ್ರುನವಾಂಶದಲ್ಲಾಗಲಿ ಇದ್ದರೆ ಉಪನೀತನು ಕಲಾಶೀಲಗಳಿಂದ ವಿವರ್ಜಿತನಾಗುವನು. ಅಭಿಶತ್ರು ರಾಶಿಯಲ್ಲಾಗಲಿ, ಆ ಅಂಶದಲ್ಲಾಗಲಿ, ಗುರು, ಶುಕ್ರ ಮತ್ತು ಶಾಖಾಧಿಪತಿಗಳು ಇದ್ದರೆ ವಟುವು ಮಹಾಪಾತಕಿಯಾಗಿ ಪಾಪಕಾರ್ಯಗಳನ್ನು ಎಸಗುತ್ತಾನೆ. ಈ ಗ್ರಹಗಳು ಉಚ್ಚ, ಉಚ್ಚಾಂಶ, ಸ್ವಕ್ಷೇತ್ರ, ಕೇಂದ್ರ, ತ್ರಿಕೋಣ ಇವುಗಳಲ್ಲಿ ಇದ್ದದ್ದೇ ಆದರೆ ಉಪನೀತ ವಟುವು ಧನಿಕನೂ, ವೇದ, ವೇದಾಂಗ ಮುಂತಾದವುಗಳಲ್ಲಿಪಾರಂಗತ ಆಗುತ್ತಾನೆ.

ಮೇಲೆ ಹೇಳಿರುವ ಗ್ರಹಗಳು ಪರಮೋಚ್ಚರಾಶಿಯಲ್ಲಿ ಪರಮೋಚ್ಚ ಭಾಗದಲ್ಲಿರುವಾಗ ಲಗ್ನಕ್ಕೆ ಅಷ್ಟಮಶುದ್ಧಿ ಇರುವದಾದರೆ ವಟುವು ವೇದಶಾಸ್ತ್ರ ಸಂಪನ್ನನಾಗುವನು. ಅಲ್ಲದೆ ಅಧಿಮಿತ್ರರ ರಾಶಿಯಲ್ಲಾಗಲಿ, ಅಂಶದಲ್ಲಾಗಲಿ ಅವರ ಉಚ್ಚರಾಶಿಯಲ್ಲಾಗಲಿ ಇರುವದಾದರೆ ವಿದ್ಯಾಧನ ಯುಕ್ತನಾಗುವನು. ಉಪನಯನದಲ್ಲಿ ಶಾಖಾಧಿಪತಿಯ ವಾರ, ಅವನ ಬಲ, ಅವನ ಲಗ್ನ ಇವು ಮೂರು ಪ್ರಶಸ್ತವಾದವುಗಳು. ಆ

ಸಮಯದಲ್ಲಿ ಉಪನಯನವಾದ ವಟುವು ವೇದಪಾರಂಗತನಾಗುವನು. ಆದರೆ ಚಂದ್ರನು ಪಾಪಾಂಶದಲ್ಲಾಗಲಿ, ಸ್ವಾಂಶದಲ್ಲಾಗಲಿ ಇರುವನಾದರೆ ವಟುವು ದರಿದ್ರನಾಗಿ ನಿತ್ಯ ದುಃಖಿಯಾಗುವನು. ಶ್ರವಣ ಅಥವಾ ಪುನರ್ವಸು ನಕ್ಷತ್ರದಲ್ಲಿ ಚಂದ್ರನಿದ್ದು ಕಟಕಾಂಶಗತನಾಗಿದ್ದರೆ, ವಟುವು, ವೇದ, ಶಾಸ್ತ್ರ ಧನಧಾನ್ಯ ಇವುಗಳಿಂದ ಯುಕ್ತನಾಗುವನು. ಶುಭಲಗ್ನ, ಶುಭಾಂಶ, ಅಷ್ಟಮಶುದ್ಧಿ, ಲಗ್ನಕ್ಕೆ ಶುಭ ಗ್ರಹಯೋಗ ಅಥವಾ ಶುಭಗ್ರಹಗಳ ದೃಷ್ಟಿ, ಗುರು, ಶನಿ, ಚಂದ್ರ, ಶುಕ್ರ, ಕುಜ ಈ ಗ್ರಹಗಳು ಬಲಿಷ್ಠವಾಗಿರುವದು, ಅಥವಾ ಷಡ್ಬಲ ವಿಶಿಷ್ಟರಾದ ನಾಲ್ಕು ಗ್ರಹಗಳ ಯೋಜನೆ, ಇಪ್ಪತ್ತೊಂದು ಮಹಾ ದೋಷಗಳಿಲ್ಲದಿರುವದು, ಶುಭಗ್ರಹ ಲಗ್ನಗಳು ಇವೆಲ್ಲವೂ ಉಪನಯನಕ್ಕೆ ಪ್ರಶಸ್ತವಾದವು. ಶುಭಗ್ರಹಗಳು ಶುಭನವಾಂಶಗತ ವಾಗಿರಬೇಕು. ರಾಶಿಗಳು ಶುಭಗ್ರಹಗಳ ಸಂಬಂಧಿಗಳಾಗಿರಬೇಕು. ಆದರೆ ಶುಭಗ್ರಹಯುಕ್ತವಾಗಿದ್ದರೂ ಕಟಕಾಂಶವು ಮಾತ್ರ ಉಪನಯನಕ್ಕೆ ಪ್ರಶಸ್ತವಲ್ಲ. ವೃಷಭ, ಮಿಥುನ ಕನ್ಯಾ ತುಲಾ ಈ ನಕ್ಷತ್ರಗಳು ಪ್ರಶಸ್ತವಾದವು. ಉಪನಯನ ಲಗ್ನಕ್ಕೆ ಮೂರು, ಆರು, ಹನ್ನೊಂದು ಇವುಗಳಲ್ಲಿ ಪಾಪಗ್ರಹಗಳಿರಬೇಕು. ಆರು, ಎಂಟು, ಹನ್ನೆರಡು ಈ ಸ್ಥಾನಗಳಲ್ಲಿ ಶುಭಗ್ರಹ ಗಳಿರಬಾರದು. ಒಂದು, ಆರು, ಎಂಟು, ಹನ್ನೆರಡು ಈ ಸ್ಥಾನಗಳಲ್ಲಿ ಚಂದ್ರನಿರಕೂಡದು. ಚಂದ್ರನು ಉಚ್ಚರಾಶಿಗತನಾಗಿದ್ದರೂ ಉಪನಯನ ಲಗ್ನದಲ್ಲಿರಕೂಡದು. ಹಾಗಿರುವದಾದರೆ ವಟುವು ದರಿದ್ರನೂ, ಕ್ಷಯರೋಗಿಯೂ ಆಗುವನು.

ಲಗ್ನಾತ್ ಕೇಂದ್ರದಲ್ಲಿ ರವಿ ಕುಜರಿದ್ದರೆ ಪಿತೃನಾಶವಾಗುವದು, ಮೇಲೆ ಹೇಳಿದ ದೋಷಗಳಿಲ್ಲದ ಲಗ್ನವೇ ಉಪನಯನಕ್ಕೆ ಪ್ರಶಸ್ತವಾದುದು. ಕೃಷ್ಣ ಪಕ್ಷಗಳ ಗ್ರಹ ತಿಥಿಯಲ್ಲಿ ಉಪನಯನ ಮಾಡಬಾರದು. ಆದರೆ ವಸಂತ ಋತುವಿನಲ್ಲಿ ಈ ತಿಥಿಗಳು ದೂಷ್ಯವಲ್ಲ. ಅನಧ್ಯಯನ ತಿಥಿಗಳಲ್ಲಿ ಭದ್ರಾಕರಣ, ಷಷ್ಠಿ, ಈ ತಿಥಿಗಳು ವ್ರತಕ್ಕೆ ಶ್ರೇಷ್ಠ ವಲ್ಲ. ತ್ರಯೋದಶಿಯಿಂದ ನಾಲ್ಕು ತಿಥಿಗಳು, ಸಪ್ತಮಿಯಿಂದ ಮೂರು ತಿಥಿಗಳು ಮತ್ತು ಚತುರ್ಥಿ ಒಟ್ಟು ಎಂಟು ತಿಥಿಗಳಿಗೆ ಗಳಗ್ರಹ ತಿಥಿಗಳೆಂದು ಹೆಸರು. ಈಗ ಸಮಾವರ್ತನೆಗೆ ಯಾವ ಯಾವ ಮುಹೂರ್ತಗಳು ಶುಭಕಾರಕಗಳಾಗಿವೆ ಎಂಬುದನ್ನು ಹೇಳುತ್ತೇನೆ ಕೇಳು.

ಉತ್ತರಾಯಣದಲ್ಲಿ ಗುರು ಶುಕ್ರಾಸ್ತಮಯಗಳಿಲ್ಲದಿರುವಾಗ, ವಿದ್ಯಾಭ್ಯಾಸ ಸಮಾಪ್ತಿಯಾದ ಮೇಲೆ ಗುರುವೃಂದದಿಂದ ಸ್ವಗೃಹಕ್ಕೆ ಬಂದು ಜಿತೇಂದ್ರಿಯಾಗಿ ಸಮಾವರ್ತನೆಯನ್ನು ಮಾಡಿಕೊಳ್ಳಬೇಕು. ಇದಕ್ಕೆ ಚಿತ್ರಾ ಉತ್ತರಾ ಪುಷ್ಯ, ಪುನರ್ವಸು ರೇವತಿ, ಶ್ರವಣ, ಅನುರಾಧ, ರೋಹಿಣಿ ಈ ನಕ್ಷತ್ರ ಸೂಕ್ತ. ಅಲ್ಲದೆ ಭಾನು, ಸೋಮ, ಬುಧ, ಗುರು ಮತ್ತು ಶುಕ್ರವಾರಗಳೂ ಅದೇ ಗ್ರಹ, ಕಾಲ ಹೋರೆಗಳೂ ಪ್ರಶಸ್ತ. ಪಾಡ್ಯ ಪರ್ವದಿನಗಳು, ರಿಕ್ತತಿಥಿಗಳು, ಅಮಾವಾಸ್ಯೆ, ಅಷ್ಟಮ್ಯಾದಿಯಾಗಿ ಮೂರು ತಿಥಿಗಳು - ಇವುಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಸಮಾವರ್ತನೆ ಕರ್ಮಾಂಗ ಭೂತವಾದ ಮುಂಡನ ಮಾಡಿಸಿಕೊಳ್ಳಬೇಕು. ಮಾನವ ಜನ್ಮದಲ್ಲಿ ಎಲ್ಲಾ ಆಶ್ರಮಗಳಿಗಿಂತ ಗೃಹಸ್ಥಾಶ್ರಮವೇ ಶ್ರೇಷ್ಠವಾದದ್ದು. ಈ ಆಶ್ರಮದಲ್ಲಿ ಶೀಲವತಿಯಾದ ಕನ್ಯಾ ಸಂಬಂಧದಿಂದ ಅನೇಕ ಸುಖಗಳು ಲಭಿಸುತ್ತವೆ. ಅಂತಹ ಶೀಲ, ಸಂಪನ್ನ ಗುಣಗಳುಳ್ಳ ಕನ್ಯೆಯು ತನಗೆ ಲಭಿಸಬೇಕಾದರೆ ಬ್ರಾಹ್ಮ ಪ್ರೋಕ್ತವಾದ ಶುಭಲಗ್ನದಲ್ಲಿ ಅಂಥ ಕನ್ಯೆಯೊಂದಿಗೆ ವಿವಾಹಾದಿ ಕರ್ಮಗಳನ್ನು ಮಾಡಿಕೊಳ್ಳಬೇಕು.

ಕನ್ಯಾಗೃಹದಲ್ಲಿ ಕನ್ಯೆಯ ತಂದೆಯು ಪುಷ್ಪ ತಾಂಬೂಲ ಗಂಧಾಕ್ಷತೆಗಳನ್ನು ತಯಾರಿಸಿಕೊಂಡು, ಶುಭ್ರ ವಸ್ತ್ರಧಾರಿಯಾಗಿ, ವೃದ್ಧಾಶೀರ್ವಾದವನ್ನು ಪಡೆದು, ಪ್ರಣವ ಪೂರ್ವಕವಾಗಿ ಕನ್ಯಾವರಣಕ್ಕೆ ಸಂಕಲ್ಪಮಾಡಬೇಕು. ಕುಲ ಶೀಲ, ವಯಸ್ಸು, ರೂಪ,. ದ್ರವ್ಯ, ವಿದ್ಯೆ ಮೊದಲಾದವುಗಳಿಂದ ಉತ್ತಮನೆನಿಸುವ ವರನಿಗೆ ವಯಸ್ಸಿನಲ್ಲಿ ಅವನಿಗಿಂತ ಚಿಕ್ಕವಳಿರುವ ಕನ್ಯೆಯನ್ನು ಅರ್ಪಿಸಬೇಕು. ವಿವಾಹಕ್ಕೆ ಮುಂಚೆ ತ್ರಿಲೋಕಸುಂದರಿಯೂ ದಿವ್ಯ ಮಾಲಾದಿಗಳಿಂದ ಅಲಂಕೃತಳೂ, ಸರ್ವ ಸಂಪನ್ನಳೂ, ಸರ್ವಾಭರಣ ಭೂಷಿತಳೂ ಅಮೂಲ್ಯ ರತ್ನ ಮಾಲೆಗಳನ್ನು ಧರಿಸಿ, ದಿಗಂತವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗುತ್ತಿರುವವಳೂ ಆದ ಶಚೀದೇವಿಯನ್ನು ವಧುವು ಪೂಜಿಸಬೇಕು. ಪೂಜೆ ಮಾಡಿದ ನಂತರ ಕೊನೆಯಲ್ಲಿ 'ಎಲೌ ಇಂದ್ರಾಣಿ ದೇವಿಯೇ, ದೇವೇಂದ್ರನ ಪ್ರಿಯ ಪತ್ನಿಯಾದ ನಿನಗೆ ನಮಸ್ಕಾರ ಮಾಡುವೆನು. ದೇವಿಯೇ ನೀನು ನನಗೆ ಈ ವಿವಾಹ ಕರ್ಮದಿಂದ ಸಮಸ್ತ ಐಶ್ವರ್ಯ, ಪುತ್ರ ಪೌತ್ರಾದಿ ಸಂಸಾರವೃದ್ಧಿಯೂ ಸಕಲ ಪ್ರಾಧಾನ್ಯಗಳೂ ಮತ್ತು ಸೌಮಂಗಲ್ಯವೂ ಉಂಟಾಗುವಂತೆ ಅನುಗ್ರಹಿಸು' ಎಂದು ಪ್ರಾರ್ಥಿಸಬೇಕು.

ವಧುವಿನ ಸಮವಯಸ್ಸಿನಲ್ಲಿಯೂ ವರನ ವಿಷಮ ವಯಸ್ಸಿನಲ್ಲಿಯೂ ವಿವಾಹ ಮಾಡುವದು ಒಳ್ಳೆಯದು. ಇದಕ್ಕೆ ವಿರುದ್ಧವಾಗಿ ನಡೆಯುವದು ಅಶುಭಕರ. ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠಮಾಸಗಳು ವಿವಾಹಕ್ಕೆ ಯೋಗ್ಯ, ಕಾರ್ತಿಕ ಮಾರ್ಗಶಿರಗಳು ಮಧ್ಯಮ, ಉಳಿದ ತಿಂಗಳುಗಳು ಅಪ್ರಶಸ್ತ. ಸೂರ್ಯನು ಆರಿದ್ರಾ ನಕ್ಷತ್ರವನ್ನು ಪ್ರವೇಶ ಮಾಡಿದನಂತರ ಹತ್ತು ನಕ್ಷತ್ರಗಳು ಸೂರ್ಯನಿಗೆ ಕಳೆಯುವವರೆಗೆ ವಿವಾಹ, ದೇವತಾಪ್ರತಿಷ್ಠೆ, ಉಪನಯನ ಮುಂತಾದವುಗಳನ್ನು ನಡೆಸಬಾರದು. ಗುರು ಶುಕ್ರ ಅಸ್ತಗಳು, ಉದಯದ ಮೊದಲು ಬರುವ ಬಾಲ್ಯತ್ವ, ವೃದ್ಧತ್ವಾದಿಗಳು ಗುರುವಿನ ಸಿಂಹರಾಶಿ ಸಂಚಾರ ಕಾಲ ಇವುಗಳನ್ನು ವಿವಾಹಕ್ಕೆ ಪ್ರಶಸ್ತವಾದ ಸಮಯಗಳಲ್ಲವೆಂದು ತಿಳಿಯಬೇಕು. ಶುಕ್ರನು ಪಶ್ಚಿಮೋದಿತನಾದರೆ ಹತ್ತು ದಿನಗಳು, ಪ್ರಾಗುದಿತನಾದರೆ ಮೂರು ದಿನಗಳೂ ಶುಕ್ರನಿಗೆ ಶಿಶುತ್ವವಿರುವದು. ಹಾಗೆಯೇ ಅಸ್ತಕ್ಕೆ ಮುಂಚೆ ಐದು ದಿನಗಳೂ ಪ್ರಾಗಸ್ತದಲ್ಲಿ ಹದಿನೈದು ದಿನಗಳೂ ಶುಕ್ರನಿಗೆ ವೃದ್ಧತ್ವವಿರುವದು. ಗುರುವಿಗೆ ಸರ್ವದಾ ಬಾಲ್ಯವೃದ್ಧತ್ವಗಳು ಹದಿನೈದು ದಿವಸಗಳಾಗಿಯೇ ಇರುತ್ತವೆ.

ಹರಿಯ ಶಯನದಿಂದ ಉತ್ಥಾನ ದ್ವಾದಶಿಯವರೆಗೆ ಮಂಗಳ ಕಾರ್ಯ ನಡೆಸುವದು ಪ್ರಶಸ್ತವಲ್ಲ. ಅನಂತರ ಮಂಗಳಕಾರ್ಯ ನಡೆಸಬಹುದು. ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನ ಇವು ವಿವಾಹಕ್ಕೆ ಪ್ರಶಸ್ತವಲ್ಲ. ಅಲ್ಲದೆ ಜ್ಯೇಷ್ಠಪುತ್ರಿ ಮತ್ತು ಜ್ಯೇಷ್ಠ ಪುತ್ರನಿಗೆ ಜ್ಯೇಷ್ಠಮಾಸದಲ್ಲಿ ವಿವಾಹಮಾಡಬಾರದು. ಅಂತೂ ಯಾವ ರೀತಿಯಲ್ಲಿಯೂ ತ್ರಿಜ್ಯೇಷ್ಠ ಬರದಂತೆ ವಿವಾಹವನ್ನು ನಡೆಸಬೇಕು. ಏಕಜ್ಯೇಷ್ಠವಾದರೆ ಶುಭ, ಉತ್ಪಾತಗ್ರಹಣ, ಇವುಗಳು ಸಂಭವಿಸಿದ ಮೇಲೆ ಏಳು ದಿನ ವಿವಾಹ ಕರ್ಮಗಳನ್ನು ಮಾಡಬಾರದು. ಪೂರ್ಣ ಗ್ರಾಸವಲ್ಲದ ಗ್ರಹಣದಲ್ಲಿ ಮೂರು ದಿನಗಳನ್ನು ಮಾತ್ರ ಬಿಟ್ಟು ನಂತರ ಶುಭಕರ್ಮಗಳನ್ನು ಜರುಗಿಸಬಹುದು. ಹಾಗೆ ಹೇಳಿದ ತ್ರಿದ್ಯುಸ್ಪೃಕ್, ಕ್ಷಯತಿಥಿಗಳು, ಇವುಗಳು ವಿವಾಹಕ್ಕೆ ವರ್ಜ್ಯವೆನಿಸಿವೆ. ಸಂಧ್ಯಾಕಾಲಗಳಲ್ಲಿ ಗ್ರಸ್ತಾಸ್ತ ಅಥವಾ ಗ್ರಸ್ತೋದಯಗಳು ಸಂಭವಿಸಿದರೆ ಐದು ದಿನಗಳನ್ನು, ಅರ್ಧರಾತ್ರಿಯ ಪೂರ್ಣ ಗ್ರಹಣದಲ್ಲಿ ಏಳುದಿನಗಳನ್ನು ಬಿಟ್ಟು ಮಾಡುವದು ಶ್ರೇಯಸ್ಕರವಾಗಿದೆ.

ಸಮಯದಲ್ಲಿ ಉಪನಯನವಾದ ವಟುವು ವೇದಪಾರಂಗತನಾಗುವನು. ಆದರೆ ಚಂದ್ರನು ಪಾಪಾಂಶದಲ್ಲಾಗಲಿ, ಸ್ವಾಂಶದಲ್ಲಾಗಲಿ ಇರುವನಾದರೆ ವಟುವು ದರಿದ್ರನಾಗಿ ನಿತ್ಯ ದುಃಖಿಯಾಗುವನು. ಶ್ರವಣ ಅಥವಾ ಪುನರ್ವಸು ನಕ್ಷತ್ರದಲ್ಲಿ ಚಂದ್ರನಿದ್ದು ಕಟಕಾಂಶಗತನಾಗಿದ್ದರೆ, ವಟುವು, ವೇದ, ಶಾಸ್ತ್ರ ಧನಧಾನ್ಯ ಇವುಗಳಿಂದ ಯುಕ್ತನಾಗುವನು. ಶುಭಲಗ್ನ, ಶುಭಾಂಶ, ಅಷ್ಟಮಶುದ್ಧಿ, ಲಗ್ನಕ್ಕೆ ಶುಭ ಗ್ರಹಯೋಗ ಅಥವಾ ಶುಭಗ್ರಹಗಳ ದೃಷ್ಟಿ, ಗುರು, ಶನಿ, ಚಂದ್ರ, ಶುಕ್ರ, ಕುಜ ಈ ಗ್ರಹಗಳು ಬಲಿಷ್ಠವಾಗಿರುವದು, ಅಥವಾ ಷಡ್ಬಲ ವಿಶಿಷ್ಟರಾದ ನಾಲ್ಕು ಗ್ರಹಗಳ ಯೋಜನೆ, ಇಪ್ಪತ್ತೊಂದು ಮಹಾ ದೋಷಗಳಿಲ್ಲದಿರುವದು, ಶುಭಗ್ರಹ ಲಗ್ನಗಳು ಇವೆಲ್ಲವೂ ಉಪನಯನಕ್ಕೆ ಪ್ರಶಸ್ತವಾದವು. ಶುಭಗ್ರಹಗಳು ಶುಭನವಾಂಶಗತ ವಾಗಿರಬೇಕು. ರಾಶಿಗಳು ಶುಭಗ್ರಹಗಳ ಸಂಬಂಧಿಗಳಾಗಿರಬೇಕು. ಆದರೆ ಶುಭಗ್ರಹಯುಕ್ತವಾಗಿದ್ದರೂ ಕಟಕಾಂಶವು ಮಾತ್ರ ಉಪನಯನಕ್ಕೆ ಪ್ರಶಸ್ತವಲ್ಲ. ವೃಷಭ, ಮಿಥುನ ಕನ್ಯಾ ತುಲಾ ಈ ನಕ್ಷತ್ರಗಳು ಪ್ರಶಸ್ತವಾದವು. ಉಪನಯನ ಲಗ್ನಕ್ಕೆ ಮೂರು, ಆರು, ಹನ್ನೊಂದು ಇವುಗಳಲ್ಲಿ ಪಾಪಗ್ರಹಗಳಿರಬೇಕು. ಆರು, ಎಂಟು, ಹನ್ನೆರಡು ಈ ಸ್ಥಾನಗಳಲ್ಲಿ ಶುಭಗ್ರಹ ಗಳಿರಬಾರದು. ಒಂದು, ಆರು, ಎಂಟು, ಹನ್ನೆರಡು ಈ ಸ್ಥಾನಗಳಲ್ಲಿ ಚಂದ್ರನಿರಕೂಡದು. ಚಂದ್ರನು ಉಚ್ಚರಾಶಿಗತನಾಗಿದ್ದರೂ ಉಪನಯನ ಲಗ್ನದಲ್ಲಿರಕೂಡದು. ಹಾಗಿರುವದಾದರೆ ವಟುವು ದರಿದ್ರನೂ, ಕ್ಷಯರೋಗಿಯೂ ಆಗುವನು.

ಲಗ್ನಾತ್ ಕೇಂದ್ರದಲ್ಲಿ ರವಿ ಕುಜರಿದ್ದರೆ ಪಿತೃನಾಶವಾಗುವದು, ಮೇಲೆ ಹೇಳಿದ ದೋಷಗಳಿಲ್ಲದ ಲಗ್ನವೇ ಉಪನಯನಕ್ಕೆ ಪ್ರಶಸ್ತವಾದುದು. ಕೃಷ್ಣ ಪಕ್ಷಗಳ ಗ್ರಹ ತಿಥಿಯಲ್ಲಿ ಉಪನಯನ ಮಾಡಬಾರದು. ಆದರೆ ವಸಂತ ಋತುವಿನಲ್ಲಿ ಈ ತಿಥಿಗಳು ದೂಷ್ಯವಲ್ಲ. ಅನಧ್ಯಯನ ತಿಥಿಗಳಲ್ಲಿ ಭದ್ರಾಕರಣ, ಷಷ್ಠಿ, ಈ ತಿಥಿಗಳು ವ್ರತಕ್ಕೆ ಶ್ರೇಷ್ಠ ವಲ್ಲ. ತ್ರಯೋದಶಿಯಿಂದ ನಾಲ್ಕು ತಿಥಿಗಳು, ಸಪ್ತಮಿಯಿಂದ ಮೂರು ತಿಥಿಗಳು ಮತ್ತು ಚತುರ್ಥಿ ಒಟ್ಟು ಎಂಟು ತಿಥಿಗಳಿಗೆ ಗಳಗ್ರಹ ತಿಥಿಗಳೆಂದು ಹೆಸರು. ಈಗ ಸಮಾವರ್ತನೆಗೆ ಯಾವ ಯಾವ ಮುಹೂರ್ತಗಳು ಶುಭಕಾರಕಗಳಾಗಿವೆ ಎಂಬುದನ್ನು ಹೇಳುತ್ತೇನೆ ಕೇಳು.

ಉತ್ತರಾಯಣದಲ್ಲಿ ಗುರು ಶುಕ್ರಾಸ್ತಮಯಗಳಿಲ್ಲದಿರುವಾಗ, ವಿದ್ಯಾಭ್ಯಾಸ ಸಮಾಪ್ತಿಯಾದ ಮೇಲೆ ಗುರುವೃಂದದಿಂದ ಸ್ವಗೃಹಕ್ಕೆ ಬಂದು ಜಿತೇಂದ್ರಿಯಾಗಿ ಸಮಾವರ್ತನೆಯನ್ನು ಮಾಡಿಕೊಳ್ಳಬೇಕು. ಇದಕ್ಕೆ ಚಿತ್ರಾ ಉತ್ತರಾ ಪುಷ್ಯ, ಪುನರ್ವಸು ರೇವತಿ, ಶ್ರವಣ, ಅನುರಾಧ, ರೋಹಿಣಿ ಈ ನಕ್ಷತ್ರ ಸೂಕ್ತ. ಅಲ್ಲದೆ ಭಾನು, ಸೋಮ, ಬುಧ, ಗುರು ಮತ್ತು ಶುಕ್ರವಾರಗಳೂ ಅದೇ ಗ್ರಹ, ಕಾಲ ಹೋರೆಗಳೂ ಪ್ರಶಸ್ತ. ಪಾಡ್ಯ ಪರ್ವದಿನಗಳು, ರಿಕ್ತತಿಥಿಗಳು, ಅಮಾವಾಸ್ಯೆ, ಅಷ್ಟಮ್ಯಾದಿಯಾಗಿ ಮೂರು ತಿಥಿಗಳು - ಇವುಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಸಮಾವರ್ತನೆ ಕರ್ಮಾಂಗ ಭೂತವಾದ ಮುಂಡನ ಮಾಡಿಸಿಕೊಳ್ಳಬೇಕು. ಮಾನವ ಜನ್ಮದಲ್ಲಿ ಎಲ್ಲಾ ಆಶ್ರಮಗಳಿಗಿಂತ ಗೃಹಸ್ಥಾಶ್ರಮವೇ ಶ್ರೇಷ್ಠವಾದದ್ದು. ಈ ಆಶ್ರಮದಲ್ಲಿ ಶೀಲವತಿಯಾದ ಕನ್ಯಾ ಸಂಬಂಧದಿಂದ ಅನೇಕ ಸುಖಗಳು ಲಭಿಸುತ್ತವೆ. ಅಂತಹ ಶೀಲ, ಸಂಪನ್ನ ಗುಣಗಳುಳ್ಳ ಕನ್ಯೆಯು ತನಗೆ ಲಭಿಸಬೇಕಾದರೆ ಬ್ರಾಹ್ಮ ಪ್ರೋಕ್ತವಾದ ಶುಭಲಗ್ನದಲ್ಲಿ ಅಂಥ ಕನ್ಯೆಯೊಂದಿಗೆ ವಿವಾಹಾದಿ ಕರ್ಮಗಳನ್ನು ಮಾಡಿಕೊಳ್ಳಬೇಕು.

ಕನ್ಯಾಗೃಹದಲ್ಲಿ ಕನ್ಯೆಯ ತಂದೆಯು ಪುಷ್ಪ ತಾಂಬೂಲ ಗಂಧಾಕ್ಷತೆಗಳನ್ನು ತಯಾರಿಸಿಕೊಂಡು, ಶುಭ್ರ ವಸ್ತ್ರಧಾರಿಯಾಗಿ, ವೃದ್ಧಾಶೀರ್ವಾದವನ್ನು ಪಡೆದು, ಪ್ರಣವ ಪೂರ್ವಕವಾಗಿ ಕನ್ಯಾವರಣಕ್ಕೆ ಸಂಕಲ್ಪಮಾಡಬೇಕು. ಕುಲ ಶೀಲ, ವಯಸ್ಸು, ರೂಪ,. ದ್ರವ್ಯ, ವಿದ್ಯೆ ಮೊದಲಾದವುಗಳಿಂದ ಉತ್ತಮನೆನಿಸುವ ವರನಿಗೆ ವಯಸ್ಸಿನಲ್ಲಿ ಅವನಿಗಿಂತ ಚಿಕ್ಕವಳಿರುವ ಕನ್ಯೆಯನ್ನು ಅರ್ಪಿಸಬೇಕು. ವಿವಾಹಕ್ಕೆ ಮುಂಚೆ ತ್ರಿಲೋಕಸುಂದರಿಯೂ ದಿವ್ಯ ಮಾಲಾದಿಗಳಿಂದ ಅಲಂಕೃತಳೂ, ಸರ್ವ ಸಂಪನ್ನಳೂ, ಸರ್ವಾಭರಣ ಭೂಷಿತಳೂ ಅಮೂಲ್ಯ ರತ್ನ ಮಾಲೆಗಳನ್ನು ಧರಿಸಿ, ದಿಗಂತವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗುತ್ತಿರುವವಳೂ ಆದ ಶಚೀದೇವಿಯನ್ನು ವಧುವು ಪೂಜಿಸಬೇಕು. ಪೂಜೆ ಮಾಡಿದ ನಂತರ ಕೊನೆಯಲ್ಲಿ 'ಎಲೌ ಇಂದ್ರಾಣಿ ದೇವಿಯೇ, ದೇವೇಂದ್ರನ ಪ್ರಿಯ ಪತ್ನಿಯಾದ ನಿನಗೆ ನಮಸ್ಕಾರ ಮಾಡುವೆನು. ದೇವಿಯೇ ನೀನು ನನಗೆ ಈ ವಿವಾಹ ಕರ್ಮದಿಂದ ಸಮಸ್ತ ಐಶ್ವರ್ಯ, ಪುತ್ರ ಪೌತ್ರಾದಿ ಸಂಸಾರವೃದ್ಧಿಯೂ ಸಕಲ ಪ್ರಾಧಾನ್ಯಗಳೂ ಮತ್ತು ಸೌಮಂಗಲ್ಯವೂ ಉಂಟಾಗುವಂತೆ ಅನುಗ್ರಹಿಸು' ಎಂದು ಪ್ರಾರ್ಥಿಸಬೇಕು.

ವಧುವಿನ ಸಮವಯಸ್ಸಿನಲ್ಲಿಯೂ ವರನ ವಿಷಮ ವಯಸ್ಸಿನಲ್ಲಿಯೂ ವಿವಾಹ ಮಾಡುವದು ಒಳ್ಳೆಯದು. ಇದಕ್ಕೆ ವಿರುದ್ಧವಾಗಿ ನಡೆಯುವದು ಅಶುಭಕರ. ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠಮಾಸಗಳು ವಿವಾಹಕ್ಕೆ ಯೋಗ್ಯ, ಕಾರ್ತಿಕ ಮಾರ್ಗಶಿರಗಳು ಮಧ್ಯಮ, ಉಳಿದ ತಿಂಗಳುಗಳು ಅಪ್ರಶಸ್ತ. ಸೂರ್ಯನು ಆರಿದ್ರಾ ನಕ್ಷತ್ರವನ್ನು ಪ್ರವೇಶ ಮಾಡಿದನಂತರ ಹತ್ತು ನಕ್ಷತ್ರಗಳು ಸೂರ್ಯನಿಗೆ ಕಳೆಯುವವರೆಗೆ ವಿವಾಹ, ದೇವತಾಪ್ರತಿಷ್ಠೆ, ಉಪನಯನ ಮುಂತಾದವುಗಳನ್ನು ನಡೆಸಬಾರದು. ಗುರು ಶುಕ್ರ ಅಸ್ತಗಳು, ಉದಯದ ಮೊದಲು ಬರುವ ಬಾಲ್ಯತ್ವ, ವೃದ್ಧತ್ವಾದಿಗಳು ಗುರುವಿನ ಸಿಂಹರಾಶಿ ಸಂಚಾರ ಕಾಲ ಇವುಗಳನ್ನು ವಿವಾಹಕ್ಕೆ ಪ್ರಶಸ್ತವಾದ ಸಮಯಗಳಲ್ಲವೆಂದು ತಿಳಿಯಬೇಕು. ಶುಕ್ರನು ಪಶ್ಚಿಮೋದಿತನಾದರೆ ಹತ್ತು ದಿನಗಳು, ಪ್ರಾಗುದಿತನಾದರೆ ಮೂರು ದಿನಗಳೂ ಶುಕ್ರನಿಗೆ ಶಿಶುತ್ವವಿರುವದು. ಹಾಗೆಯೇ ಅಸ್ತಕ್ಕೆ ಮುಂಚೆ ಐದು ದಿನಗಳೂ ಪ್ರಾಗಸ್ತದಲ್ಲಿ ಹದಿನೈದು ದಿನಗಳೂ ಶುಕ್ರನಿಗೆ ವೃದ್ಧತ್ವವಿರುವದು. ಗುರುವಿಗೆ ಸರ್ವದಾ ಬಾಲ್ಯವೃದ್ಧತ್ವಗಳು ಹದಿನೈದು ದಿವಸಗಳಾಗಿಯೇ ಇರುತ್ತವೆ.

ಹರಿಯ ಶಯನದಿಂದ ಉತ್ಥಾನ ದ್ವಾದಶಿಯವರೆಗೆ ಮಂಗಳ ಕಾರ್ಯ ನಡೆಸುವದು ಪ್ರಶಸ್ತವಲ್ಲ. ಅನಂತರ ಮಂಗಳಕಾರ್ಯ ನಡೆಸಬಹುದು. ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನ ಇವು ವಿವಾಹಕ್ಕೆ ಪ್ರಶಸ್ತವಲ್ಲ. ಅಲ್ಲದೆ ಜ್ಯೇಷ್ಠಪುತ್ರಿ ಮತ್ತು ಜ್ಯೇಷ್ಠ ಪುತ್ರನಿಗೆ ಜ್ಯೇಷ್ಠಮಾಸದಲ್ಲಿ ವಿವಾಹಮಾಡಬಾರದು. ಅಂತೂ ಯಾವ ರೀತಿಯಲ್ಲಿಯೂ ತ್ರಿಜ್ಯೇಷ್ಠ ಬರದಂತೆ ವಿವಾಹವನ್ನು ನಡೆಸಬೇಕು. ಏಕಜ್ಯೇಷ್ಠವಾದರೆ ಶುಭ, ಉತ್ಪಾತಗ್ರಹಣ, ಇವುಗಳು ಸಂಭವಿಸಿದ ಮೇಲೆ ಏಳು ದಿನ ವಿವಾಹ ಕರ್ಮಗಳನ್ನು ಮಾಡಬಾರದು. ಪೂರ್ಣ ಗ್ರಾಸವಲ್ಲದ ಗ್ರಹಣದಲ್ಲಿ ಮೂರು ದಿನಗಳನ್ನು ಮಾತ್ರ ಬಿಟ್ಟು ನಂತರ ಶುಭಕರ್ಮಗಳನ್ನು ಜರುಗಿಸಬಹುದು. ಹಾಗೆ ಹೇಳಿದ ತ್ರಿದ್ಯುಸ್ಪೃಕ್, ಕ್ಷಯತಿಥಿಗಳು, ಇವುಗಳು ವಿವಾಹಕ್ಕೆ ವರ್ಜ್ಯವೆನಿಸಿವೆ. ಸಂಧ್ಯಾಕಾಲಗಳಲ್ಲಿ ಗ್ರಸ್ತಾಸ್ತ ಅಥವಾ ಗ್ರಸ್ತೋದಯಗಳು ಸಂಭವಿಸಿದರೆ ಐದು ದಿನಗಳನ್ನು, ಅರ್ಧರಾತ್ರಿಯ ಪೂರ್ಣ ಗ್ರಹಣದಲ್ಲಿ ಏಳುದಿನಗಳನ್ನು ಬಿಟ್ಟು ಮಾಡುವದು ಶ್ರೇಯಸ್ಕರವಾಗಿದೆ.

ಮಾಸಾಂತ್ಯದ ಐದು ದಿನಗಳು ರಿಕ್ತತಿಥಿ, ಅಷ್ಟಮಿ, ವ್ಯತೀಪಾತ, ವೈಧೃತಿ, ಪರಿಘಾರ್ಧಕಾಲ ಇವುಗಳು ವಿವಾಹಕ್ಕೆ ಪ್ರಶಸ್ತವಲ್ಲ. ರೇವತಿ, ಉತ್ತರಾತ್ರಯ, ಅನುರಾಧಾ, ಸ್ವಾತಿ, ಮೃಗಶಿರಾ, ಹಸ್ತ, ಮಘಾ, ಮೂಲಾ ನಕ್ಷತ್ರಗಳು ಪಾಪಗ್ರಹ ವಿದ್ಧಗಳಾಗಿದ್ದರೆ ವಿವಾಹಕ್ಕೆ ಪ್ರಶಸ್ತವಾಗುವವು. ವಿವಾಹದಲ್ಲಿ ದಂಪತಿಗಳಿಗೆ ಗುರು ಮತ್ತು ಸೂರ್ಯರ ಬಲವಿರಬೇಕು. ದುರ್ಬಲವಾಗಿರುವ ಗ್ರಹಗಳಿಗಾಗಿ ಶಾಂತಿಯನ್ನು ನಡೆಸಬೇಕು. ಗೋಚರ, ವೇಧಜ, ಅಷ್ಟವರ್ಗದ ಈ ಮೂರು ಬಲಗಳು ಉತ್ತರೋತ್ತರವಾಗಿ ಅಧಿಕ ಬಲವುಳ್ಳವು ಗಳು, ಅದರಲ್ಲಿ ಗೋಚರ ಬಲವು ಬಹಳ ಸ್ಥೂಲವಾದದ್ದು, ಚಂದ್ರ, ತಾರಾಬಲ ಪಂಚಾಂಗಗಳ ಬಲ ಇವುಗಳನ್ನು ನೋಡಿ ವಿವಾಹ ಲಗ್ನವನ್ನು ನಿರ್ಣಯಿಸಬೇಕು. ತಿಥಿ, ವಾರ, ನಕ್ಷತ್ರ, ಯೋಗ ಕರಣ ಇವು ಉತ್ತರೋತ್ತರ ಬಲವತ್ತರಗಳು. ಇವುಗಳಿಗಿಂತ ಮುಹೂರ್ತವು ಬಲಿಷ್ಠವಾದುದು. ಅದಕ್ಕಿಂತ ಲಗ್ನವು ಪರಮ ಬಲಿಷ್ಠ. ಅದರಲ್ಲಿ ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ, ತ್ರಿಂಶಾಂಶ, ಇವು ಉತ್ತರೋತ್ತರವಾಗಿ ಬಲಿಷ್ಠವಾದವುಗಳು. ಇವೆಲ್ಲವುಗಳು ಶುಭಗ್ರಹ ವೀಕ್ಷಿತಗಳೋ ಯುತಗಳೋ ಆಗಿದ್ದರೆ ತುಂಬಾ ಪ್ರಶಸ್ತ.

ವಿವಾಹಲಗ್ನದಲ್ಲಿ ಸೂರ್ಯ, ಚಂದ್ರ, ಗುರು, ಇವರೇ ಮೊದಲಾದ ಐದು ಗ್ರಹಗಳು ಷಡ್ಬಲಯುಕ್ತರಾಗಿದ್ದರೆ ಅದು ಪ್ರಶಸ್ತ ಲಗ್ನವೆಂದೂ, ಅಲ್ಲದೆ ನಾಲ್ಕು ಗ್ರಹಗಲೂ ಬಲಿಷ್ಠವಾದರೂ ಸಹ ಪ್ರಶಸ್ತವೆಂದು ತಿಳಿಯಲು ಅಭ್ಯಂತರವಿಲ್ಲ. ಸಪ್ತಮಶುದ್ಧಿ ಏಕವಿಂಶತಿ ದೋಷರಾಹಿತ್ಯ ಇವು ಲಗ್ನಕ್ಕೆ ಅತ್ಯಗತ್ಯವಾಗಿರಬೇಕು. ಇಪ್ಪತ್ತೊಂದು ಮಹಾ ದೋಷಗಳೆಂದರೆ - ಪ್ರಥಮದೋಷ - ಪಂಚಾಂಗಶುದ್ಧಿ, ಇಲ್ಲದಿರುವದು. ಗುರು ಶುಕ್ರರ ಉದಯಾಸ್ತಗಳು ದ್ವಿತೀಯ ದೋಷ, ಸೂರ್ಯ ಸಂಕ್ರಮಣ ಶುದ್ಧಿಯೇ ಮೂರನೆಯ ದೋಷ - ಪಾಪಗ್ರಹ ಷಡ್ವರ್ಗಗಳಿದ್ದರೆ ನಾಲ್ಕನೆಯ ದೋಷ, ಕುಜ, ಶುಕ್ರರು ಆರನೆಯ ರಾಶಿಯಲ್ಲಿರುವದು ಐದನೆಯ ದೋಷ, ಹೀಗೆಯೇ ಗಂಡಾಂತರ ಕರ್ತರೀ ದೋಷ. ಹನ್ನೆರಡು, ಆರು, ಎಂಟು ಈ ರಾಶಿಗಳಲ್ಲಿ ಗ್ರಹಸಹಿತವಾಗಿ ಚಂದ್ರನಿರುವದು. ದಂಪತಿಗಳ ಅಷ್ಟಮರಾಶಿಯು ಲಗ್ನವಾಗುವದು, ವಿಷಘಟಿಕೆ ಗಳಿರುವದು. ದುರ್ಮುಹೂರ್ತ, ವಾರದೋಷ, ಖಾರ್ದೂರಿಕಾ ಚಕ್ರದಲ್ಲಿ ಸಮಪಾದ ಇರುವಿಕೆ, ಗ್ರಹಣ, ಉತ್ಪಾತಗಳಾಗುವ ನಕ್ಷತ್ರ, ಕ್ರೂರಗ್ರಹ ವಿಧವಾದ ನಕ್ಷತ್ರ, ಕ್ರೂರಗ್ರಹಯುತವಾದ ಲಗ್ನ, ಕ್ರೂರಾಂಶ, ಮಹಾಪಾತ, ವೈಧೃತಿ, ಇವು ಏಕವಿಂಶತಿ ದೋಷಗಳು. ತಿಥಿ, ವಾರ ನಕ್ಷತ್ರ, ಯೋಗ, ಕರಣ, ಈ ಐದು ಅಂಶಗಳು ಶುದ್ಧಗಳಾಗಿ ದೋಷರಹಿತವಾಗಿರುವದೇ ಪಂಚಾಂಗಶುದ್ಧಿ, ಇವುಗಳಲ್ಲಿ ಯಾವುದಾದರೊಂದು ದೋಷವಿರುವದು ವಿಷಸಿಕ್ತವಾದ ಹಾಲಿನ ಗಡಿಗೆಯಂತೆ ದೋಷಯುಕ್ತವಾಗಿರುವದು. ಈ ಪಂಚಕಾದಿ ದೋಷಗಳಿಲ್ಲ ದಿರುವಂತೆ ವಿವಾಹ ಮುಹೂರ್ತ ಶೋಧಿಸಿ ತೆಗೆಯಬೇಕು. ವಿವಾಹಲಗ್ನ ಮತ್ತು ನವಾಂಶ ಇವು ಆಯಾ ರಾಜ್ಯಾಧಿಪತಿಗಳಿಂದ ವೀಕ್ಷಿತವಾಗಿದ್ದರೆ ಶ್ರೇಷ್ಠ. ಅಥವಾ ಶುಭಗ್ರಹ ಗಳಿಂದಾಗಲಿ, ಮಿತ್ರಗ್ರಹಗಳಿಂದಾಗಲಿ ದೃಷ್ಟಗಳಾಗಿರಬೇಕು. ಹಾಗಲ್ಲದೇ, ಶತ್ರುಗ್ರಹ ವೀಕ್ಷಿತಗಳಾದರೆ ದಂಪತಿಗಳಿಗೆ ಅಶುಭ ಮತ್ತು ವಧೂ-ವರರ ರಾಶಿಗಳಾಗಲಿ ಪರಸ್ಪರ ಏಳನೆಯದಾಗಿ ಮೈತ್ರೀಯುತವಾಗಿದ್ದರೆ ಸರಿ, ಅಲ್ಲದಿದ್ದರೆ ದಂಪತಿಗಳಿಗೆ ಅಶುಭ, ಸೂರ್ಯ ಸಂಕ್ರಮಣದ ಕಾಲದಿಂದ ಹಿಂದಿನ ಮತ್ತು ಮುಂದಿನ ಹದಿನಾರು ಗಳಿಗೆಗಳನ್ನು ಬಿಟ್ಟು, ವಿವಾಹಾದಿ

ಕಾರ್ಯಗಳಿಗೆ ಲಗ್ನವನ್ನಿಡಬೇಕು. ಈ ಮಂಗಳ ಕಾರ್ಯಗಳಿಗೆಲ್ಲ ನಿಶ್ಚಯಿಸಿರುವ ಲಗ್ನಕ್ಕೆ ಸಂಪೂರ್ಣ ಷಡ್ವರ್ಗ ಬಲವಿರಬೇಕು. ವಿವಾಹಕ್ಕೆ ಆರನೆಯ ಸ್ಥಾನದಲ್ಲಿ ಶುಕ್ರನಿದ್ದರೆ ಅದಕ್ಕೆ ಭೃಗುಷಟ್ಕ ದೋಷವೆಂದು ಹೆಸರು. ಶುಕ್ರನು ಆಸ್ಥಾನದಲ್ಲಿ ಉಚ್ಚನಾಗಿ ಶುಭಯುಕ್ತನಾಗಿದ್ದರೂ ಆ ಲಗ್ನವು ತ್ಯಾಜ್ಯ. ಹಾಗೆಯೇ ಅಷ್ಟಮದಲ್ಲಿ ದೋಷಕರವೆಂದು ತಿಳಿಯಬೇಕು. ವಿವಾಹ ಲಗ್ನದಲ್ಲಿ ಮೂರು ಶುಭಗ್ರಹಗಳಿದ್ದು, ಅದೇ ಕುಜನು ಉಚ್ಚಸ್ಥಾನದಲ್ಲಿದ್ದರೆ ಕುಜಾಷ್ಟಮ ದೋಷ ವಿರುವುದಿಲ್ಲ. ಪೂರ್ಣ ಮತ್ತು ನಂದ ತಿಥಿಗಳ ಸಂಧಿಕಾಲದಲ್ಲಿ ಎರಡುಗಳಿಗೆಗಳಿಗೆ ಗಂಡಾಂತರ ಕಾಲವೆಂದೂ ಹೆಸರು. ಅದು ಯಾತ್ರೆ, ವಿವಾಹ, ಉಪನಯನ ಮುಂತಾದವು ಗಳಿಗೆ ಯೋಗ್ಯವಲ್ಲ. ಕಟಕ ಮತ್ತು ಸಿಂಹ ವೃಶ್ಚಿಕ ಮತ್ತು ಧನುಸ್ಸು. ಮೀನ ಮತ್ತು ಮೇಷ ರಾಶಿಗಳ ಸಂಧಿಕಾಲವನ್ನು ಅರ್ಧಗಳಿಗೆಯವರಿಗೆ ಗಂಡಾಂತರ ಕಾಲವೆಂದು ತಿಳಿಯಬೇಕು. ಆ ಕಾಲದಲ್ಲಿ ನಡೆವ ಕರ್ಮಗಳು ಮೃತಿಪ್ರದಗಳಾಗುವವು, ಆಶ್ಲೇಷ ಜ್ಯೇಷ್ಠ, ರೇವತಿ ಈ ನಕ್ಷತ್ರಗಳ ಕೊನೆಯ ಹದಿನಾರು ಗಳಿಗೆಗಳನ್ನು ಮುಂದಿನ ಆದಿಯ ಹದಿನಾರು ಗಳಿಗೆಗಳನ್ನು ಭಸಂಧಿ ಕಾಲವೆಂದು ತಿಳಿಯುತ್ತಾರೆ. ಅದು ಗಂಡಾಂತರ ಕಾಲವೆನಿಸುತ್ತದೆ, ಈ ಮೂರು ತಿಥಿ, ವಾರ ಗಂಡಾಂತರ ಕಾಲವನ್ನು ದೂಷ್ಯಕಾಲವೆಂದು ತಿಳಿಯಬೇಕು. ಲಗ್ನದ ಮುಂದಿನ ಹಾಗೂ ಹಿಂದಿನ ರಾಶಿಗಳಲ್ಲಿ ವಕ್ರ ಮತ್ತು ಋಜುಗತಿಯ ಗ್ರಹಗಳು ಕ್ರಮವಾಗಿ ಆ ಲಗ್ನವು ದಂಪತಿಗಳಿಗೆ ಮೃತಿಪ್ರದ, ಅದ್ದರಿಂದ ದೋಷಯುಕ್ತ ಲಗ್ನವನ್ನು ಬಿಡಬೇಕು.

ಕರ್ತರಿದೋಷವಿಶಿಷ್ಟವಾದ ಲಗ್ನವು ಅನೇಕ ಶುಭಗ್ರಹಗಳಿಂದ ಕೂಡಿದ್ದರೂ ಅದನ್ನು ದೂರಮಾಡಬೇಕು. ಚಂದ್ರನು ವಿವಾಹ ಲಗ್ನಕ್ಕಿಂತ ಆರು, ಹನ್ನೆರಡು, ಎಂಟನೆಯ ರಾಶಿಗಳಲ್ಲಿದ್ದು ಉಚ್ಚನಾಗಿದ್ದರೂ, ನೀಚನಾಗಿದ್ದರೂ ಲಗ್ನವು ಗುರು ಶುಕ್ರಸಮನ್ವಿತವಾಗಿದ್ದರೂ ಆ ಲಗ್ನವು ವಿವಾಹಕ್ಕೆ ಪ್ರಶಸ್ತವಲ್ಲ. ಅದು ದಂಪತಿಗಳಿಗೆ ಮೃತ್ಯುಪ್ರದವಾಗುವದು. ಚಂದ್ರನು ಗ್ರಹಯುಕ್ತನಾಗಿದ್ದರೆ ಸಗ್ರಹಚಂದ್ರನೆಂಬ ದೋಷಬರುವದು. ಇದು ವಿವಾಹಕ್ಕೆ ಪ್ರಬಲ ದೋಷ. ಚಂದ್ರನು ರವಿಯುಕ್ತ ನಾಗಿದ್ದರೂ ದಾರಿದ್ರ್ಯವು. ಶುಭಯುಕ್ತನಾಗಿದ್ದರೆ ಮರಣವೂ, ವ್ಯಾಧಿಯೂ, ಬುಧನಿಂದ ಕೂಡಿದ್ದರೆ ಬಂಜೆತನವೂ, ಗುರುಯುಕ್ತನಾಗಿದ್ದರೆ ದಾರಿದ್ರ್ಯವೂ, ಶುಕ್ರಯುಕ್ತನಾಗಿದ್ದರೆ ದ್ವಿಕಳತ್ರಯೋಗವೂ ಶನಿಯುಕ್ತನಾಗಿದ್ದರೆ ಸನ್ಯಾಸವೂ, ರಾಹುಯುಕ್ತನಾಗಿದ್ದರೆ ಮೂಲನಾಶವೂ ಕೇತು ಸಂಬಂಧದಿಂದ ಬಡತನವೂ ಮತ್ತು ನಿತ್ಯ ಕಷ್ಟಗಳೂ ಲಭಿಸುವವು. ಇದು ಸಗ್ರಹದೋಷ ವಿಶಿಷ್ಟನಾದ ಚಂದ್ರನಿಂದ ಬರುವ ಫಲ.

ಚಂದ್ರನು ಪಾಪಗ್ರಹಗಳಿಂದ ಕೂಡಿದ್ದರೆ ದಂಪತಿಗಳಿಗೆ ಮರಣ. ಶುಭಗ್ರಹ ಯುತನಾಗಿ ಚಂದ್ರನು ಉಚ್ಚ ಅಥವಾ ನೀಚ ಅಥವಾ ನೀಚಕ್ಷೇತ್ರದಲ್ಲಿದ್ದರೆ ಲಗ್ನವು ಅಷ್ಟು ದೋಷಯುಕ್ತವಲ್ಲ. ದಂಪತಿಗಳಿಗೆ ಆದರಿಂದ ಶ್ರೇಯಸ್ಸುಂಟು. ಪಾಪಗ್ರಹ ಯುತನಾದ ಚಂದ್ರನು ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರ ಮುಂತಾದ ಶುಭಸ್ಥಾನ ಗಳಲ್ಲಿದ್ದರೂ ದಂಪತಿಗಳಿಗೆ ಶುಭಪ್ರನಲ್ಲ ದಂಪತಿಗಳ ಅಷ್ಟಮ ಲಗ್ನದಲ್ಲಾಗಲಿ ಅಷ್ಟಮರಾಶಿಯಲ್ಲಾಗಲಿ ಚಂದ್ರನಿರುವದೂ, ಅಥವಾ ಆದೇ ವಿವಾಹ ಲಗ್ನವಾಗುವದೂ, ವಿವಾಹಕ್ಕೆ ಅಷ್ಟು ಯೋಗ್ಯವಲ್ಲ. ಶುಭಗ್ರಹ ಯುತವಾಗಿದ್ದರೂ ಆ ಲಗ್ನಗಳು ಅಷ್ಟು ಪ್ರಶಸ್ತವಲ್ಲ. ಕೇವಲ ಲಗ್ನಮಾತ್ರವಲ್ಲದೇ ಆ ಅಂಶವೂ ದುಷ್ಟವೆನಿಸುವದು, ದಂಪತಿಗಳ ಜನ್ಮಲಗ್ನಕ್ಕಿಂತ

ಹನ್ನೆರಡನೇಯ ರಾಶಿಯು ವಿವಾಹಕ್ಕೆ ಯೋಗ್ಯವಾದುದಲ್ಲ. ಅದರಿಂದ ಅರ್ಥಹಾನಿ ಸಂಭವಿಸುತ್ತದೆ. ಅದಕ್ಕಾಗಿ ಆ ರಾಶಿಯನ್ನೂ (ಅಂಶವನ್ನು) ತ್ಯಜಿಸಬೇಕು. ಆದರೆ ದಂಪತಿಗಳ ಜನ್ಮಲಗ್ನವಾಗಲಿ, ಜನ್ಮರಾಶಿಯಾಗಲಿ ವಿವಾಹಕ್ಕೆ ಪ್ರಶಸ್ತವಾಗಿದೆ. ಆದರೆ ದಂಪತಿಗಳ ಜನ್ಮಲಗ್ನಕ್ಕೆ ಬರುವ ಉಪನಯರಾಶಿಗಳು ವಿವಾಹ ಲಗ್ನವಾದರೆ ಬಹಳ ಯೋಗ್ಯ. ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಕ್ರಮವಾಗಿ ಐವತ್ತು, ಇಪ್ಪತ್ತುನಾಲ್ಕು, ಮೂವತ್ತು, ನಲವತ್ತು, ಹದಿನಾಲ್ಕು ಇಪ್ಪತ್ತೊಂದು, ಮೂವತ್ತು, ಇಪ್ಪತ್ತು, ಮೂವತ್ತೆರಡು, ಮೂವತ್ತು, ಇಪ್ಪತ್ತು, ಹದಿನೆಂಟು, ಇಪ್ಪತ್ತೊಂದು ಇಪ್ಪತ್ತು, ಹದಿನಾಲ್ಕು, ಹತ್ತು, ಹದಿನಾಲ್ಕು, ಐವತ್ತಾರು, ಇಪ್ಪತ್ತುನಾಲ್ಕು, ಇಪ್ಪತ್ತು, ಹತ್ತು, ಹದಿನೆಂಟು, ಹತ್ತು, ಹದಿನಾರು, ಇಪ್ಪತ್ತನಾಲ್ಕು, ಮೂವತ್ತು ಇಷ್ಟು ಗಳಿಗೆಗಳು ಆದಮೇಲೆ ಮುಂದಿನ ನಾಲ್ಕು ಗಳಿಗೆಗಳು ವಿಷಗಳಿಗೆಗಳೆಂದು ತಿಳಿಯಬೇಕು. ಆ ಕಾಲದಲ್ಲಿ ವಿವಾಹಾದಿ ಕರ್ಮಗಳು ನಿಷಿದ್ಧವಾಗುತ್ತವೆ.

ರವಿವಾರಾದಿಗಳಲ್ಲಿ ಹಿಂದೆ ಹೇಳಲಾದ ನಿಂದ್ಯಮುಹೂರ್ತ ಕಾಲಗಳಲ್ಲಿ ವಾರ ದೋಷಗಳಿರುವ ವೇಳೆಯಲ್ಲಿ ಉಳಿದ ಎಷ್ಟೇಗುಣಗಳು ಕಂಡು ಬಂದರೂ ವಿವಾಹಾದಿ ಗಳನ್ನು ಮಾಡಬಾರದು. ಖರ್ಜೂರಿಕಾ ಚಕ್ರದ ರೀತಿಯಿಂದ ಬಂದ ಏಕಾರ್ಗಲ ದೋಷ ಯುಕ್ತವಾದ ನಕ್ಷತ್ರಕ್ಕೆ ಸಂಬಂಧಿಸಿದ ಲಗ್ನವು ಅನೇಕ ಶುಭಗ್ರಹಯುತ ವಾಗಿದ್ದರೂ ವಿಷಯುಕ್ತ ಕ್ಷೀರರಾಶಿಯಂತೆ ಅಶುಭ, ಶುಭಕರ್ಮಗಳ ಆಚರಣೆ, ಗ್ರಹಣ, ಉತ್ಪಾತ ಇವುಗಳು ಬಂದ ನಕ್ಷತ್ರವನ್ನು ಮೂರು ಋತುಗಳಕಾಲ ಪೂರ್ತಿಯಾಗಿ ಉಪಯೋಗಿಸ ಬಾರದು. ಆ ನಕ್ಷತ್ರವು ಅರ್ಧ ಉರಿದ ಕೊಳ್ಳಿಯಂತೆ ಅಪ್ರಯೋಜಕವಾಗುವದು.

ಮಂಗಳಕಾರ್ಯಗಳಲ್ಲಿ ಕ್ರೂರ ಗ್ರಹಗಳಿಂದ ವಿದ್ಧವಾದ ನಕ್ಷತ್ರಗಳನ್ನು ಬಳಸಬಾರದು. ಒಂದು ನಕ್ಷತ್ರದ ಒಂದು ಪಾದವು ಕ್ರೂರಾಕ್ರಾಂತವಾದರೂ ಪೂರ್ತಿ ಆ ನಕ್ಷತ್ರವನ್ನೇ ಬಿಡಬೇಕು. ಸುರಾಬಿಂದುವಿನಿಂದ ಅಪವಿತ್ರವಾದ ಪಂಚಗವ್ಯದಂತೆ ಪೂರ್ತಿ ನಕ್ಷತ್ರವೇ ದುಷ್ಟವಾಗುವದು. ನವಾಂಶದಲ್ಲಿ ತುಲಾ, ಮಿಥುನ, ಕನ್ಯಾ ಧನುಸ್ಸಿನ ಅಪರಾರ್ಧ, ವೃಷಭ ಈ ಅಂಶಗಳು ಸೂಕ್ತವಾಗಿವೆ. ವರ್ಗೋತ್ತಮಾಂಶಗಳು ಮಾತ್ರ ಅಂತ್ಯಾಂಶಗಳಾದರೂ ಶ್ರೇಷ್ಠವೆನಿಸುತ್ತವೆ. ಉಳಿದ ನವಾಂಶಗಳೂ ಶುಭಕಾರ್ಯಗಳಲ್ಲಿ ತ್ಯಾಜ್ಯ. ಪಾಪ ನವಾಂಶಯುತ ಲಗ್ನವನ್ನೇ ಬಿಡಬೇಕು. ವ್ಯತೀಪಾತ, ವೈಧೃತಿಗಳೆಂಬಬ ಮಹಾಪಾತಗಳಿಂದ ಕೂಡಿದ ದಿನವೂ ಎಷ್ಟೇ ಶುಭವಾಗಿದ್ದರೂ ದೂರ ಮಾಡಬೇಕು. ಈ ರೀತಿ ಇರುವ ಶುಭಲಗ್ನದಲ್ಲಿ ವಧೂವರರು ಪರಸ್ಪರ ನೋಡಬೇಕು. ವಿವಾಹ ಮಂಟಪವು ನಾಲ್ಕು ಮೊಳ ಎತ್ತರಾಗಿಯೂ ಚಚ್ಚೌಕವಾಗಿಯೂ ಇರಬೇಕು. ಆ ನಾಲ್ಕು ದಿಕ್ಕುಗಳಲ್ಲಿ ನಯವಾದ ನಾಲ್ಕು ಕಂಬಗಳಿರಬೇಕು. ಆ ಮಂಟಪಕ್ಕೆ ನಾಲ್ಕು ಕಡೆಗಳಲ್ಲಿ ಮೆಟ್ಟಿಲುಗಳಿರಬೇಕು. ಪೂರ್ವ ಅಥವಾ ಉತ್ತರಕ್ಕೆ ದೊಡ್ಡದಾದ ಪ್ರವೇಶಸ್ಥಾನ ವಿರಬೇಕು. ಬಾಳೆಯ ಕಂಬವನ್ನು ಕಂಬಕ್ಕೆ ಕಟ್ಟಿರಬೇಕು. ಚಿತ್ರಕಲಶ ಗಳಿಂದಲೂ ವಿಚಿತ್ರವಾದ ತೋರಣಗಳಿಂದಲೂ ಅಲಂಕೃತಗೊಂಡಿರಬೇಕು. ನೆಲಕ್ಕೆ ಮನೋಹರವಾಗಿ ಪುಷ್ಪಗಳನ್ನು ವಿರಚಿಸಬೇಕು. ನಿರೀಕ್ಷಣ ಕಾಲದಲ್ಲಿ ಬ್ರಾಹ್ಮಣರು ಮುತ್ತೈದೆಯರು ವಧೂ-ವರರನ್ನು ಆಶೀರ್ವದಿಸುತ್ತಿರಬೇಕು. ಮಂಗಳ ವಾದ್ಯಗಳು ಇಂಪಾಗಿ ಧ್ವನಿಗೈಯುತ್ತಿರುವಾಗ ಅಗ್ನಿವೇದಿಕೆ ಸಮೀಪ ವಧು-ವರರನ್ನು ಕರೆದು ತರಬೇಕು. ಇನ್ನು ವಿವಾಹದಲ್ಲಿ ವಧೂವರರ ನಕ್ಷತ್ರಗಳು ರಾಶಿ, ವಶ್ಯ, ವರ್ಣ, ತಾರಾ, ಯೋನಿ, ಗ್ರಹಮೈತ್ರಿ, ನಾಡಿ, ಗಣ ಎಂಬ ಎಂಟು ಕೂಟಗಳು ಅನುಕೂಲವಾಗಿರಬೇಕು. ಈ ಕೂಟಗಳಿಂದ

ಅನುಕೂಲವಾಗಿರುವ ದಂಪತಿಗಳ ಯೋಜನೆಯು ಪುತ್ರ ಕ್ಷೇತ್ರಾದಿಗಳನ್ನು ಕೊಡುವದು. ಒಂದೇ ರಾಶಿಗೆ ಸೇರಿದ ದಂಪತಿಗಳ ನಕ್ಷತ್ರಗಳು ಬೇರೆಯಾಗಿರಬೇಕು. ಹೀಗಿದ್ದರೆ ಸಂಬಂಧ ಅನ್ಯೋನ್ಯ, ರಾಶಿಗಳು ಬೇರೆಯಾಗಿದ್ದು ನಕ್ಷತ್ರ ಒಂದೇ ಆಗಿದ್ದರೆ ಮಧ್ಯಮ, ಒಂದೇ ನಕ್ಷತ್ರ ಒಂದೇ ರಾಶಿಯಾಗಿರುವದು ಅಧಮ. ಪುರುಷನ ನಕ್ಷತ್ರ ಸ್ತ್ರೀ ನಕ್ಷತ್ರಕ್ಕಿಂತ ಒಂಭತ್ತು ನಕ್ಷತ್ರಗಳೊಳಗಿದ್ದರೆ ಅಶುಭ. ಹದಿನೆಂಟು ನಕ್ಷತ್ರಗಳೊಳಗಿದ್ದರೆ ಮಧ್ಯಮ. ಕೊನೆಯ ಒಂಭತ್ತು ನಕ್ಷತ್ರಗಳೊಳಗೆ ಸೇರಿದ್ದರೆ ಶುಭ. ಇದನ್ನೇ ಸ್ತ್ರೀ ದೀರ್ಘಕೂಟವೆನ್ನುತ್ತಾರೆ. ಭರಣೀ, ರೋಹಿಣಿ, ಆರಿದ್ರಾ, ಪೂರ್ವಾತ್ರಯ, ಉತ್ತರಾತ್ರಯ ಈ ನಕ್ಷತ್ರಗಳು ಮನುಷ್ಯವರ್ಗಕ್ಕೆ ಸೇರಿದವು. ಅಶ್ವಿನಿ, ಮೃಗಶಿರ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನುರಾಧಾ, ಶ್ರವಣಾ, ರೇವತಿ ನಕ್ಷತ್ರಗಳು ದೇವಗಣಕ್ಕೆ ಸೇರಿದವು. ಕೃತ್ತಿಕಾ, ಆಶ್ಲೇಷಾ, ಮಘಾ, ಚಿತ್ರಾ, ವಿಶಾಖಾ, ಜ್ಯೇಷ್ಠಾ, ಮೂಲ ಧನಿಷ್ಠಾ ಶತಭಿಷ್ಠಾ ಇವು ರಾಕ್ಷಸಗಣಕ್ಕೆ ಸೇರಿದ ನಕ್ಷತ್ರಗಳು. ಸ್ತ್ರೀ ಪುರುಷರ ನಕ್ಷತ್ರಗಳು ಜನ್ಮ. ನಕ್ಷತ್ರಗಳು ಏಕಗಣೈಕ್ಯಗಳಾದರೆ ಶುಭ. ದೇವ ಮನುಷ್ಯಗಣಗಳಾದರೆ ಮಧ್ಯಮವೆನಿಸುವದು. ದೇವ ರಾಕ್ಷಸಗಣಗಳಾಗಿದ್ದರೆ ಅಧಮವೆನಿಸುವದು. ಪುರುಷ ರಾಶಿಯು ಸ್ತ್ರೀ ರಾಶಿಯಿಂದ ಆರನೆಯದಾಗಿದ್ದರೆ ಮೃತ್ಯುಕರವಾದ ಷಷ್ಠಾಷ್ಟಕದೋಷವೂ ಐದನೆಯದಾದರೆ ಅನಪತ್ಯತ್ವಪ್ರದವಾದ ಪಂಚಮ ನವಮ ದೋಷವೂ ಎರಡನೆಯದಾದರೆ ದಾರಿದ್ರ್ಯ ಪ್ರದವಾದ ದ್ವಿರ್ದ್ವಾದಶ ದೋಷವೂ ಬರುವದು. ಈ ದೋಷಗಳನ್ನು ಬಿಟ್ಟು ಕನ್ಯಾ ವಿವಾಹ ಮಾಡಬೇಕು.

ಅಶ್ವಿನ್ಯಾದಿಯಾಗಿ ನಕ್ಷತ್ರಗಳಿಗೆ ಕ್ರಮವಾಗಿ ಕುದುರೆ, ಆನೆ, ಆಡು, ಸರ್ಪ, ಹಾವು, ನಾಯಿ, ಬೆಕ್ಕು, ಆಡು, ಇಲಿ, ಎತ್ತು, ಎಮ್ಮೆ, ಹುಲಿ, ಜಿಂಕೆ, ನಾಯಿ, ಕಪಿ, ಕೀರ, ಸಿಂಹ, ಕುದುರೆ, ಹಸು ಈ ರೀತಿಯಾಗಿ ಯೋನಿಗಳು ಹೇಳಲ್ಪಟ್ಟಿವೆ. ಇವುಗಳಲ್ಲಿ ನಾಯಿ, ಜಿಂಕೆ, ಹಾವು, ಮುಂಗಸಿ, ಆಡು, ಕಪಿ, ಸಿಂಹ, ಆನೆ, ಹಸು, ಹುಲಿ, ಇಲಿ, ಬೆಕ್ಕು, ಎಮ್ಮೆ, ಕುದುರೆ ಇವು ಪರಸ್ಪರ ವೈರಿಗಳಾದ ಪ್ರಾಣಿಗಳು, ಈ ವೈರಿವರ್ಗಕ್ಕೆ ಸ್ತ್ರೀ ಪುರುಷರ ನಕ್ಷತ್ರಗಳು ಸೇರಿರಕೂಡದು. ಇದನ್ನೇ ಯೋನಿಕೂಟವೆಂದು ಹೇಳುವರು.

ಮೀನ, ವೃಶ್ಚಿಕ, ಕಟಕ ಈ ರಾಶಿಗಳು ಬ್ರಾಹ್ಮಣ ವರ್ಗದವು. ಮೇಷ, ಧನುಸ್ಸು ಸಿಂಹಗಳು ಕ್ಷತ್ರಿಯವರ್ಗಕ್ಕೆ ಸೇರಿದವು. ವೃಷಭ, ಮಕರ, ಕನ್ಯಾ ರಾಶಿಗಳು ವೈಶ್ಯ ಜಾತಿಯವು. ಉಳಿದ ಮೂರು ಅಂದರೆ ಮಿಥುನ, ಸಿಂಹ, ತುಲಾ, ರಾಶಿಗಳು, ಶೂದ್ರವರ್ಗಕ್ಕೆ ಸೇರಿದವುಗಳು. ಪುಂ ರಾಶಿಯ ವರ್ಣಕ್ಕೆ ಸಮವಾಗಿಯೋ ಅಥವಾ ಸ್ವಲ್ಪ ಕಡಿಮೆಯಾಗಿಯೋ ಇರುವದು ಒಳ್ಳೆಯದು, ಇದನ್ನೇ ಮಾಟಕೂಟವೆಂದು ಹೇಳುವರು. ಇನ್ನು ನಾಡೀ ಕೂಟದಲ್ಲಿ ತ್ರಿನಾಡಿ, ಚತುರ್ನಾಡಿ, ಪಂಚನಾಡಿ ಎಂಬ ಹೆಸರಿನಿಂದ ನಾಡೀಕೂಟವು ಮೂರು ವಿಧವಾಗಿರುವದು. ತ್ರಿನಾಡಿಯನ್ನು ಅಶ್ವಿನ್ಯಾದಿಯಾಗಿಯೂ ಚತುರ್ನಾಡಿಯನ್ನು ಕೃತ್ತಿಕಾದಿಯಾಗಿಯೂ, ಪಂಚನಾಡಿಯನ್ನು ಮೃಗಶಿರಾದಿ ಯಾಗಿಯೂ ಎಣಿಸಬೇಕು. ವಧೂವರರ ನಕ್ಷತ್ರಗಳು ಒಂದೇ ನಾಡಿಯಲ್ಲಿ ಇರಬೇಕು. 'ತ್ರಿನಾಡೀ ಸರ್ವದೇಶೇಷು' ಎಂಬ ನಿಯಮಾನುಸಾರವಾಗಿ ತ್ರಿನಾಡೀ ಕೂಟವೇ ಈಗ ಪ್ರಸಿದ್ಧವಾಗಿರುವದು, ವಿವಾಹಾದಿಗಳು, ಬ್ರಾಹ್ಮ, ಪ್ರಾಜಾಪತ್ಯ, ದೈವ, ಆರ್ಷ ಎಂಬುದಾಗಿ ನಾಲ್ಕು ವಿಧಗಳಿವೆ. ಇವುಗಳಿಗೆ ಉಕ್ತವಾಗಿರುವ ಕಾಲಗಳಲ್ಲಿಯೇ ಆಚರಿಸುವದರಿಂದ ಅವುಗಳಿಗೆ ಹೇಳಿರುವ ಫಲವು ದೊರೆಯುವದು. ಇವಲ್ಲದೇ ಗಂಧರ್ವ, ಆಸುರ, ಪೈಶಾಚ, ರಾಕ್ಷಸ,

ಎಂದೂ ಬೇರೆ ಬೇರೆಯಾದ ರೀತಿಗಳಿವೆ. ಉದಯ ಲಗ್ನಕ್ಕಿಂತ ನಾಲ್ಕನೆಯದು ಅಭಿಜಿನ್ ಲಗ್ನವೆಂದೂ, ಏಳನೇಯದು ಗೋಧೂಳಿ ಲಗ್ನವೆಂದೂ ನಿಶ್ಚಿತವಾಗಿವೆ. ಇವೆರಡೂ ವಿವಾಹಕ್ಕೆ ಪ್ರಶಸ್ತವಾದವುಗಳು. ಪೂರ್ವ ದೇಶದವರಿಗೂ ಕಳಿಂದ ದೇಶದವರಿಗೂ, ಗೋಧೂಳಿ ಲಗ್ನವು ಶ್ರೇಷ್ಠವಾದದ್ದು. ಅಭಿಜಿತ್‌ಲಗ್ನವು ಪೂರ್ವದೇಶದಲ್ಲಿಯೂ ಶ್ರೇಷ್ಠವೆನಿಸಿವೆ. ಸೂರ್ಯನು ಭೂಮಧ್ಯವನ್ನು ಹೊಂದಿದಾಗ ಬರುವ ಲಗ್ನವು ಅಭಿಜಿತ್‌ಲಗ್ನವೆನಿಸುವದು. ಸರ್ವದೋಷಾಪಹಾರಕ.

ಮಗನ ಮದುವೆಯ ಅನಂತರ ಆರು ತಿಂಗಳಾದ ಮೇಲೆ ಮಗಳ ಮದುವೆ ಮಾಡಬೇಕು. ಮಗಳ ಮದುವೆಯಾದ ಮೇಲೆ ಮಗನಿಗೆ ಉಪನಯನ ಮಾಡಕೂಡದು. ಉಪನಯನ ನಂತರ ವಿವಾಹ ಮಾಡುವದೇ ಮಂಗಳಕರ. ಆರು ತಿಂಗಳ ಒಳಗೆ ಸಹೋದರಿಯರಿಬ್ಬರ ಮದುವೆಯಾದರೆ ಅವರಲ್ಲಿ ಒಬ್ಬಳು ಮೂರು ವರ್ಷದೊಳಗೆ ವಿಧವೆಯಾಗುತ್ತಾಳೆ. ಒಬ್ಬನೇ ವರನಿಗೆ ಇಬ್ಬರು ಅಕ್ಕ-ತಂಗಿಯರನ್ನು ಕೊಟ್ಟು ಮದುವೆ ಮಾಡಬಾರದು. ಅಣ್ಣ-ತಮ್ಮಂದಿರಿಗೆ ಅಕ್ಕ-ತಂಗಿಯರನ್ನು ಕೊಟ್ಟು ಮದುವೆ ಮಾಡಬಾರದು.

ಒಂದೇ ಲಗ್ನ ವಿರುವಾಗ ಸಹೋದರಿಯರಿಗೆ ವಿವಾಹವನ್ನು, ಸೋದರರಿಗೆ ಉಪನಯನವನ್ನು ಮಾಡಬಾರದು. ಹಗಲು ಹುಟ್ಟಿದವನಿಂದ ತಂದೆಗೂ, ರಾತ್ರಿಯಲ್ಲಿ ಹುಟ್ಟಿದ ಮಗುವಿನಿಂದ ತಾಯಿಗೂ ಬಾಧಕ ಉಂಟು. ಸಂಧ್ಯಾಕಾಲದಲ್ಲಿ ಜನಿಸುವದು ತನಗೂ ಬಾಧಕವಾಗುವದು. ಗಂಡಕಾಲದಲ್ಲಿ ಜನನವಾಗಿರುವದು ಇವೆಲ್ಲಕ್ಕೂ ಹೆಚ್ಚಿನ ದುಷ್ಫಲವನ್ನು ಕೊಡುವದು. ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಮಗನಾಗಲಿ, ಮಗಳಾಗಲಿ ಅವರ ಮಾವನಿಗೆ ತೊಂದರೆಯನ್ನುಂಟು ಮಾಡುವರು. ಆದರೆ ಮೂಲಾಂತ್ಯ ಪಾದದಲ್ಲಾಗುವ ಜನನವು ಈ ದೋಷವನ್ನು ತರುವದಿಲ್ಲ. ಆಶ್ಲೇಷಾ ನಕ್ಷತ್ರದ ಆದಿಪಾದವನ್ನು ಬಿಟ್ಟು ಉಳಿದ ಪಾದಗಳು ಶ್ವಶ್ರುವಿನಾಶಕರಗಳು. ಜ್ಯೇಷ್ಠಾಂತ್ಯದಲ್ಲಿ (ಪಾದದಲ್ಲಿ) ಜನನದಿಂದ ಅಣ್ಣನಿಗೆ ಬಾಧಕವಿಲ್ಲ. ಮೂಲಾ, ಪೂರ್ವಾಷಾಢಾ ನಕ್ಷತ್ರಗಳಲ್ಲಿ ಹುಟ್ಟಿದ ಹೆಣ್ಣು ಮಗುವಿನಿಂದ ತಾಯಿಗಾಗಲಿ, ತಂದೆಗಾಗಲಿ, ಬಾಧಕವಾಗಲಾರದು. ಜ್ಯೇಷ್ಠ ನಕ್ಷತ್ರೋದ್ಭವಗಳು ಗಂಡನ ಅಣ್ಣನಿಗೂ ವಿಶಾಖಾ ನಕ್ಷತ್ರದಲ್ಲಿ ಜನಿಸಿದವಳು ಮೈದುನನಿಗೂ ಹಾನಿಪ್ರದಳು. ವಿವಾಹವಾದ ದಿನದಿಂದ ಆರು ಎಂಟು, ಏಳು, ಹತ್ತು ಈ ದಿನಗಳು ವಧೂಪ್ರವೇಶಕ್ಕೆ ಯೋಗ್ಯವಾದವುಗಳು. ವಿವಾಹಾನಂತರ ಎರಡನೆಯ ವರ್ಷದಲ್ಲಿಯೂ, ಜನ್ಮಲಗ್ನ, ಜನ್ಮಮಾಸ, ಜನ್ಮದಿನ, ಶುಕ್ರಾಸ್ತಸಮಯ ಈ ಕಾಲಗಳಲ್ಲಿ ಪತಿಗೃಹ ಪ್ರಯಾಣವು ಸ್ತ್ರೀಯರಿಗೆ ಶುಭಕರವಲ್ಲವೆಂದು ಹೇಳಲಾಗಿದೆ. ಸಕಲ ದೇವತಾ ಪ್ರತಿಷ್ಠೆಗಳಿಗೂ ಉತ್ತರಾಯಣವೇ ಶ್ರೇಷ್ಠವಾದುದು. ಆ ಗುರು ಶುಕ್ರಾಸ್ತಗಳಿರಕೂಡದು. ಮಾಘಾದಿ ಪಂಚಮಾಸಗಳಲ್ಲಿ ಚೈತ್ರಮಾಸವು ದೇವತಾ ಪ್ರತಿಷ್ಠೆಗೆ ಯೋಗ್ಯವಲ್ಲ. ಶುಕ್ಲಪಕ್ಷ ಮತ್ತು ಕೃಷ್ಣಪಕ್ಷದ ಅಷ್ಟಮಿಯ ಒಳಗಿರುವ ತಿಥಿಗಳು ಶ್ರೇಷ್ಠವಾದವುಗಳು. ಯಾವ ದೇವತೆಗೆ ಯಾವ ತಿಥಿಗಳು ಹೇಳಲಾಗಿದೆಯೋ ಆ ತಿಥಿಗಳೇ ಆಯಾ ದೇವತೆಗಳ ಪ್ರತಿಷ್ಠಾಕಾರ್ಯಗಳಿಗೆ ಯೋಗ್ಯವಾದವುಗಳೆಂದು ತಿಳಿಯಬೇಕು.

ಬಿದಿಗೆ, ತದಿಗೆ, ಪಂಚಮಿ, ಷಷ್ಠಿ, ಸಪ್ತಮಿ, ದಶಮಿಯಿಂದ ಮುಂದಿನ ನಾಲ್ಕು ತಿಥಿಗಳು ಪೂರ್ಣಮಾಸಿ ಈ ತಿಥಿಗಳು ದೇವತಾಪ್ರತಿಷ್ಠೆಗೆ ಪ್ರಶಸ್ತವಾದವು. ಉತ್ತರಾತ್ರಯ ಪುನರ್ವಸು, ಮೃಗಶಿರ, ರೇವತಿ, ಹಸ್ತಾ, ಚಿತ್ರಾ, ಸ್ವಾತಿ, ಪುಷ್ಯ, ಅಶ್ವಿನಿ, ರೋಹಿಣಿ, ಶತಭಿಷ,

ಶ್ರವಣಾ ಅನುರಾಧಾ, ಧನಿಷ್ಠಾ ಈ ನಕ್ಷತ್ರಗಳು ಸಕಲದೇವತಾ ಪ್ರತಿಷ್ಠೆಗಳಿಗೂ ಶ್ರೇಷ್ಠವಾದವುಗಳೆಂದು ತಿಳಿಯಬೇಕು. ಮಂಗಳವಾರವೊಂದನ್ನು ಬಿಟ್ಟು ಉಳಿದ ವಾರಗಳಲ್ಲಿ ದೇವತಾಪ್ರತಿಷ್ಠೆಯನ್ನು ಮಾಡಬಹುದು. ಪ್ರತಿಷ್ಠೆ ಮಾಡುವ ಯಜಮಾನನಿಗೆ ರವಿಬಲವಿರಬೇಕು. ಚಂದ್ರ ತಾರಾಬಲಗಳಿಂದ ಶ್ರೇಷ್ಠವೆನಿಸಿದ ದಿನದಲ್ಲಿ ಪೂರ್ವಾಹ್ನದ ಶುಭಲಗ್ನದಲ್ಲಿ ದೇವತಾಪ್ರತಿಷ್ಠೆಯನ್ನು ಮಾಡಬೇಕು. ಕರ್ತೃವಿನ ಜನ್ಮಲಗ್ನಾಷ್ಟಮ ರಾಶಿಯನ್ನು ಪ್ರತಿಷ್ಠಾಲಗ್ನವನ್ನಾಗಿ ಇಡಕೂಡದು. ಪ್ರತಿಷ್ಠಾ ಮುಹೂರ್ತಕ್ಕೆ ಶುಭಗ್ರಹವಿದ್ದ, ದೃಷ್ಟವೂ ಆಗಿರುವ ಎಲ್ಲಾ ರಾಶಿಗಳೂ ಶ್ರೇಷ್ಠವಾದವು. ಪಂಚಾಂಗ ಶುದ್ಧಿಯಿಂದಿರುವ ದಿನದಲ್ಲಿ ಅಷ್ಟಮಶುದ್ಧಿಯಿರುವ ಲಗ್ನದಲ್ಲಿ, ಚಂದ್ರ, ಸೂರ್ಯ, ಕುಜ, ರಾಹು, ಕೇತು ಮತ್ತು ಶನಿ ಈ ಗ್ರಹಗಳಿಲ್ಲದಿರುವಾಗ ದೇವತಾ ಪ್ರತಿಷ್ಠೆಯನ್ನು ಮಾಡಬೇಕು. ಈ ಗ್ರಹಗಳು ಲಗ್ನದಲ್ಲಿದ್ದರೆ ಕರ್ತೃವಿಗೆ ಮೃತ್ಯು ಧನಧಾನ್ಯನಾಶವೂ ಆಗುತ್ತದೆ. ಉಳಿದ ಗ್ರಹಗಳು ಲಗ್ನದಲ್ಲಿದ್ದರೆ ಧನಧಾನ್ಯಾದಿಗಳು ಅಭಿವೃದ್ಧಿ ಹೊಂದುತ್ತವೆ. ದ್ವಿತೀಯದಲ್ಲಿರುವ ಪಾಪಗ್ರಹಗಳು ಕೆಟ್ಟಫಲವನ್ನು, ಚಂದ್ರ-ಬುಧರು ದ್ರವ್ಯರೂಪವಾದ ಫಲವನ್ನು ಕೊಡುತ್ತಾರೆ. ತೃತೀಯದಲ್ಲಿರುವ ಗ್ರಹಗಳು ಪುತ್ರ - ಪೌತ್ರಾದಿ ಫಲ ನೀಡುವರು. ಚತುರ್ಥದಲ್ಲಿರುವ ಗ್ರಹಗಳು ಶುಭಫಲಗಳನ್ನು, ಪಾಪಗ್ರಹಗಳು ಪಾಪಫಲಗಳನ್ನು ಕೊಡುತ್ತವೆ. ಪಂಚಮದಲ್ಲಿ ಕ್ರೂರಗ್ರಹಗಳಿದ್ದರೆ ಗ್ಲಾನಿಯನ್ನು ಶುಭಗ್ರಹಗಳು ಮಾತ್ರ ಸಂಪತ್ತು ಕೊಡುತ್ತವೆ. ಷಷ್ಠಸ್ಥಾನದಲ್ಲಿ ಶುಭಗ್ರಹಗಳಿದ್ದರೆ ಶತ್ರುವೃದ್ಧಿಯನ್ನು ಪಾಪಗ್ರಹಗಳು ಶತ್ರುಕ್ಷಯವನ್ನು ಮಾಡುವವು. ಸಪ್ತಮದಲ್ಲಿ ಪಾಪಗ್ರಹಗಳಿದ್ದರೆ ವ್ಯಾಧಿಯನ್ನುಂಟು ಮಾಡುತ್ತವೆ. ಸೌಮ್ಯಗ್ರಹಗಳು ಶುಭಫಲ ಕೊಡುತ್ತವೆ. ಅಷ್ಟಮ ಸ್ಥಾನದಲ್ಲಿರುವ ಎಲ್ಲ ಗ್ರಹಗಳೂ ಕರ್ತೃವಿಗೆ ಅನಿಷ್ಟವನ್ನುಂಟು ಮಾಡುವವು. ಕ್ರೂರಗ್ರಹಗಳು ನವಮದಲ್ಲಿದ್ದರೆ ಪಾಪಫಲವನ್ನೂ ಶುಭಗ್ರಹಗಳು ಸನ್ಮಂಗಲವನ್ನೂ ಉಂಟು ಮಾಡುವವು. ದಶಮ ಸ್ಥಾನದಲ್ಲಿ ಅಶುಭ ಗ್ರಹಗಳಿದ್ದರೆ ದುಃಖವನ್ನು, ಚಂದ್ರ ಮತ್ತು ಇತರ ಶುಭಗ್ರಹಗಳು ದಶಮಸ್ಥಾನದಲ್ಲಿದ್ದರೆ ಒಳ್ಳೆ ಫಲವನ್ನು ಕೊಡುವವು. ಏಕಾದಶ ಸ್ಥಾನದಲ್ಲಿರುವ ಗ್ರಹಗಳು ಶುಭಪ್ರದರೇ ಆಗುವರು. ದ್ವಾದಶ ಸ್ಥಾನದಲ್ಲಿರುವ ಪಾಪ ಗ್ರಹಗಳು ಕರ್ತೃವಿಗೆ ಬಹು ವ್ಯಯವನ್ನುಂಟು ಮಾಡುವರು. ಋತ್ವಿಕ್ಕುಗಳಿಗೆ ಮಂತ್ರನಷ್ಟವನ್ನು ಸ್ತ್ರೀಯರ ಸೌಂದರ್ಯನಾಶವನ್ನು ಉಂಟು ಮಾಡುವರು. ಅದಕ್ಕಾಗಿಯೇ ಅಶುಭ ಲಗ್ನದಲ್ಲಿ ಮಾಡಿದ ದೇವತಾಪ್ರತಿಷ್ಠೆಯು ಮೃತ್ಯು ಪ್ರಾಯವು. ಪ್ರತಿಷ್ಠಾಲಗ್ನದಲ್ಲಿ ಅಲ್ಪದೋಷವು ಇರುವದಾದರೆ ಸಹ ಅದರಿಂದ ಕರ್ತೃವಿಗೆ ಸಕಲೇಷ್ಟ ಸಾಧನಗಳು ದೊರಕುವವು.

ದೇವರಗುಡಿ ಮುಂತಾದ ಪುಣ್ಯ ಕ್ಷೇತ್ರಗಳನ್ನು ಕಟ್ಟಿಸುವ ಮೊದಲು ಭೂಮಿ ಪರೀಕ್ಷಿಸಬೇಕು. ಭೂಪರೀಕ್ಷೆಯು ಭೂಮಿಯ ವಾಸನೆ, ಬಣ್ಣ, ರುಚಿ ಇವುಗಳಿಂದ ತಿಳಿಯುವದು. ಜೇನು, ಹೂವು, ಹುಳಿ, ಮಾಂಸ ಇವುಗಳ ವಾಸನೆಯು ಬ್ರಾಹ್ಮಣಾದಿ ಚಾತುರ್ವರ್ಣ್ಯಗಳಿಗೆ ಕ್ರಮವಾಗಿ ಶುಭಕರ. ಹಾಗೆಯೇ ಬಿಳುಪು, ಕೆಂಪು, ಹಳದಿ, ಕಪ್ಪು ಈ ವರ್ಣಗಳು ಸಿಹಿ ಕಹಿ, ವಗರು, ಕಷಾಯ ಈ ರಸಗಳೂ ಬ್ರಾಹ್ಮಣಾದಿ ವರ್ಣಗಳಿಗೆ ಕ್ರಮವಾಗಿ ವಿಧಿಸಲ್ಪಟ್ಟಿವೆ. ಈಶಾನ್ಯದಿಕ್ಕಿನಲ್ಲಿ ಅಥವಾ ಪೂರ್ವದಲ್ಲಿ ಮಾಡುವ ಒಂದು ಹಳ್ಳವೇ ಕಟ್ಟಡಕ್ಕೆ ಒಳ್ಳೆಯದು. ಇತರ ದಿಕ್ಕುಗಳಲ್ಲಿ ಮಾಡುವದರಿಂದ ಕರ್ತೃವಿಗೆ ಹಾನಿ ನಿಶ್ಚಿತ, ಅಲ್ಲಿ ಮೊದಲು

ಇಪ್ಪತ್ತುನಾಲ್ಕು ಅಂಗುಲ ಪರಿಮಿತಿಯಲ್ಲಿ ಸಮಗರ್ತ ಒಂದನ್ನು ನಿರ್ಮಿಸಬೇಕು. ಆ ಗರ್ತವು ಮರುದಿನ ಅಧಿಕಪ್ರಮಾಣವಾಗಿ ಕಂಡುಬಂದರೆ ಶುಭಫಲಾಧಿಕವೆಂದೂ, ನ್ಯೂನವಾಗಿ ಕಂಡರೆ ಫಲಹೀನವೆಂದೂ ಅರ್ಥ. ಮತ್ತು ಸಮವಾಗಿ ಕಂಡರೆ ಸಮಫಲವೆಂದು ತಿಳಿಯಬೇಕು. ನೀರನ್ನು ಹಿಂದಿನ ಸಾಯಂಕಾಲ ಗರ್ತಕ್ಕೆ ತುಂಬಿ ಮರುದಿನ ಪ್ರಾತಃಕಾಲ ನೋಡಿದಾಗ ಜಲವು ಕಂಡುಬಂದರೆ ಶುಭಫಲವೆಂದೂ ಕೆಸರಾಗಿದ್ದರೆ ಸಮಫಲವೆಂದೂ, ನೀರು ಇಂಗಿದ್ದರೆ ಅಶುಭಫಲವೆಂದೂ ತಿಳಿಯಬೇಕು. ಈ ರೀತಿ ಭೂಲಕ್ಷಣವನ್ನು ತಿಳಿದು ದಿಕ್ಸಾಧನಕ್ಕಾಗಿ ಆ ಸ್ಥಳದಲ್ಲಿ ಸಮಮಂಡಲ ಮಾಡಬೇಕು.

ಅದರ ಮಧ್ಯದಲ್ಲಿ (೧೨) ಹನ್ನೆರಡು ಅಂಗುಲಾತ್ಮಕವಾದ ಶಂಕುವೊಂದನ್ನು ನೆಡಬೇಕು. ಅದರ ಸುತ್ತಲೂ ಚೌಕವಾಗಿ ಮಂಡಲವನ್ನು ಮಾಡಿ ಅದನ್ನು ಆರು ಭಾಗವಾಗಿ ವಿಭಾಗಿಸಿಕೊಳ್ಳಬೇಕು. ಅವುಗಳನ್ನು ಆರು ರೇಖೆಗಳಿಂದ ಗುರ್ತಿಸಿ ಅದನ್ನು ಪ್ರಾಕಾರ ಸ್ಥಾನವನ್ನಾಗಿ ತಿಳಿಯಬೇಕು. ಪೂರ್ವಾದಿಯಾದ ಚತುರ ಪ್ರಾಕಾರವಾದ ರೇಖೆಗಳಲ್ಲಿ ಸಮಪ್ರಮಾಣದಿಂದ ಎಂಟು ಸ್ಥಾನಗಳನ್ನು ಗುರುತಿಸಿ ಅದರಲ್ಲಿ ಒಂದನ್ನು ಪ್ರತಿದಿಕ್ಕಿನಲ್ಲಿಯೂ ದ್ವಾರ ಸ್ಥಾನವನ್ನಾಗಿ ಭಾವಿಸಬೇಕು. ಹೀಗೆ ಗೃಹಗಳಲ್ಲಿ ದ್ವಾರ ನಿರ್ಮಾಣವಾದ ಮೇಲೆ ಅದರ ದ್ವಿಗುಣಿತದಲ್ಲಿ ಉತ್ತರದಲ್ಲಿ ದಕ್ಷಿಣ ಅಥವಾ ಪಶ್ಚಿಮದಿಕ್ಕಿನಲ್ಲಿ ಒಂದು ಕವಾಟ ಅಂದರೆ ಹೆಬ್ಬಾಗಿಲನ್ನು ನಿರ್ಮಿಸಬೇಕು.

ಮನೆಯನ್ನು ಕಟ್ಟುವ ಪ್ರಾಕಾರದ ಒಳಭಾಗದ ಭೂಮಿಯನ್ನು ಊರ್ಧ್ವಾಧೋರೇಖೆಗಳಿಂದ ಒಂಭತ್ತರಿಂದ ಪೂರ್ವಾಪರ ರೇಖೆಯಾದ, ಒಂಭತ್ತರಿಂದಲೂ ಒಟ್ಟು ಎಂಭತ್ತೊಂದು ಸ್ಥಾನಗಳಾಗುವಂತೆ ಸರ್ವತೋಭದ್ರ ಮಂಡಲ ರಚಿಸಬೇಕು. ಅದರ ಮಧ್ಯದಲ್ಲಿ ಬರುವ ಒಂಭತ್ತು ಸ್ಥಾನಗಳಿಗೆ ಬ್ರಹ್ಮಸ್ಥಾನವೆಂದು ಹೆಸರು. ಅದು ವಾಸ್ತು ಪುರುಷನ ಶಿರಸ್ಥಾನಕ್ಕೆ ಯೋಗ್ಯ ಪ್ರದೇಶವಲ್ಲ. ಅಥವಾ ಗೃಹಾರಂಭ ಕಾರ್ಯವನ್ನು ಅಲ್ಲಿಂದ ಪ್ರಾರಂಭಿಸಕೂಡದು, ಸುತ್ತಲೂ ಬರುವ ಮೂವತ್ತೆರಡು ಮನೆಗಳು ಪ್ರಾಕಾರಕ್ಕೆ ಸಮಾನಾಂತರದಲ್ಲಿರುವವು. ಪಿಶಾಚಾಂಶಕ್ಕೆ ಸೇರಿದವು. ಈ ಅಂಶದಲ್ಲಿ ಗೃಹಾರಂಭ ಮಾಡಿದರೆ ದುಃಖ, ಶೋಕ, ಭಯ, ಉಂಟಾಗುವವು. ಉಳಿದ ಭಾಗದಲ್ಲಿ ಗೃಹಾರಂಭ ಮಾಡಿದರೆ ಪುತ್ರ, ಪೌತ್ರಾದಿ ಅಭಿವೃದ್ಧಿಯನ್ನುಂಟು ಮಾಡುವದು. ವಾಸ್ತುರೇಖೆಯಲ್ಲಿ ಶಿರಸ್ಥಾನವು ದಿಕ್ಕು ಮತ್ತು ವಿದಿಕ್ಕುಗಳ ಮಧ್ಯ ಇರಬೇಕು. ಅದರಲ್ಲಿ ಬ್ರಾಹ್ಮೀ ಭಾಗ, ಪಿಶಾಚಿಭಾಗ, ಮರ್ಮಸಂಧಿಗಳು ಇವುಗಳನ್ನು ಆಯಾ ಪ್ರಕರಣಗಳಲ್ಲಿ ಹೇಳಿರುವಂತೆ ಸರಿಯಾಗಿ ನಿರ್ದಿಷ್ಟವಾದ ಸ್ಥಾನಗಳಿಂದ ಕಾರ್ಯಾರಂಭ ಮಾಡಬೇಕು. ಮರ್ಮಸ್ಥಾನಗಳಿಂದ ಕಾರ್ಯಾರಂಭ ಮಾಡುವದು ವಿಹಿತವಲ್ಲ. ಗೃಹಾರಂಭಕ್ಕೆ ಫಾಲ್ಗುಣ, ವೈಶಾಖ, ಮಾಘ, ಶ್ರಾವಣ, ಕಾರ್ತಿಕ ತಿಂಗಳುಗಳು ಶ್ರೇಷ್ಠವಾದವು.

ಯಜಮಾನನ ನಕ್ಷತ್ರಕ್ಕಿಂತ ವಾಸ್ತುವಿನ ನಕ್ಷತ್ರವು ಮೂರನೆಯದಾದರೆ ಧನಕ್ಷಯ. ಐದನೇಯದಾದರೆ ಹೆಚ್ಚು ನಾಶ. ಏಳನೇಯದಾದರೆ ಆತ್ಮಕ್ಷಯ ಉಂಟಾಗುತ್ತವೆ. ಅದರಂತೆ ರಾಶಿಗಳು ದ್ವಿದ್ವಾದಶಾಂಶವಾದರೆ ದಾರಿದ್ರ್ಯ, ನವಮಪಂಚಮವಾದರೆ ಪುತ್ರನಾಶವೂ ಷಷ್ಠಾಷ್ಟಕವಾದರೆ ಮೃತ್ಯುಭಯ, ಉಳಿದ ರಾಶಿಗಳಾದರೆ ಶುಭವೂ ಉಂಟಾಗುವದು. ಸೂರ್ಯ ಅಂಗಾರಕ ಇತರ ತಾರಾಂಶವಾದರೆ ಅಗ್ನಿಭಯವೂ ಹೆಚ್ಚುವದು, ಉಳಿದ ವಾರಾಂಶಗಳೂ ಶುಭಕರಗಳೆಂದು ತಿಳಿಯಬೇಕು.

ಇನ್ನು ವಾಸ್ತುಪುರುಷನು ಭಾದ್ರಪದಾದಿಯಾಗಿ ಮೂರು ಮೂರು ತಿಂಗಳೂ ಪೂರ್ವಾದಿಯಾದ ದಿಕ್ಕುಗಳಲ್ಲಿ ಶಿರಸ್ಸನ್ನಿಟ್ಟು ಅಪ್ರದಕ್ಷಿಣೆಯಾಗಿ ತಿರುಗುವನು. ಆದ್ದರಿಂದಲೇ ವಾಸ್ತುಪುರುಷನು ಚರರೂಪಿಯು. ಅವನ ಉದರವು ಬಹುದೊಡ್ಡದು, ಅವನ ಮುಖವು ಯಾವ ಕಡೆಯಲ್ಲಿ ಇರುತ್ತದೆಯೋ ಅದೇ ಮುಖದ ಗೃಹವಿರಬೇಕು. ತದ್ವಿರುದ್ಧವಾಗಿದ್ದರೆ ಆ ಮನೆಗೆ ರೋಗ, ಶೋಕಾದಿ ಉಪದ್ರವ ಹೆಚ್ಚಾಗುವದು. ಅದೇ ಮುಖವುಳ್ಳ ಗೃಹಕ್ಕೆ ಯಾವ ಅಶುಭ ಸಂಕೇತಗಳು ಕಾಣಲಾರವು. ಮನೆಯನ್ನು ಕಟ್ಟಲು ಮೊದಲು ದುಂಡಾದ ಇಟ್ಟಿಗೆಯನ್ನು ಸುವರ್ಣರೇಣುಧಾನ್ಯ, ಶೈವಲವನ್ನೂ ಗೃಹಮಧ್ಯದಲ್ಲಿ ಇರಿಸಬೇಕು. ಮತ್ತು ಒಂದು ಹಳ್ಳವನ್ನು ತೋಡಬೇಕು. ಶಂಕು ಪ್ರಮಾಣದ ಅರ್ಧಭಾಗವನ್ನು ನಾಭಿ ಪ್ರದೇಶವೆಂದೂ. ಅದರ ಮೇಲಿನ ಅಂಗುಲ ತ್ರಯವನ್ನು ಕುಕ್ಷಿಯೆಂದೂ, ಭಾವಿಸಿ, ಅದನ್ನು ಸ್ಥಾಪಿಸಬೇಕು. ಈ ಶಂಕು ಸ್ಥಾಪನೆಯಿಂದ ಪುತ್ರ ಪೌತ್ರಾದಿಗಳು ಅಭಿವೃದ್ಧಿಯನ್ನು ಹೊಂದುವರು. ಈ ಇಪ್ಪತ್ತನಾಲ್ಕು ಇಪ್ಪತ್ತೈದು, ಹದಿನಾರು, ಹನ್ನೆರಡು, ಅಂಗುಲಗಳು ಕ್ರಮವಾಗಿ ಬ್ರಾಹ್ಮಣಾದಿ ನಾಲ್ಕು ಜಾತಿಯವರಿಗೂ ಕುಕ್ಷಿ ಪ್ರಮಾಣವಾಗಿ ಎಣಿಸಲ್ಪಟ್ಟಿವೆ. ಈ ಶಂಕುವನ್ನು ಸುವರ್ಣ, ವಸ್ತ್ರ ಮುಂತಾದವುಗಳಿಂದ ಅಲಂಕರಿಸಿ ಪೂಜಿಸಬೇಕು. ಕಗ್ಗಲಿ, ಅರ್ಜುನ, ಸಾಲ, ಅಥವಾ ನೊಗಗಳನ್ನು ಮಾಡುವ ವೃಕ್ಷವಿಶೇಷಗಳು.ಇವುಗಳಲ್ಲಿ ಯಾವುದಾದರೂ ಒಂದರಿಂದ ಶಂಕು ನಿರ್ಮಿಸಬೇಕು. ಈ ಶಂಕುವನ್ನು ಮೂರು ಭಾಗವಾಗಿ ಗುರ್ತುಮಾಡಿಕೊಂಡು ಮೊದಲನೆಯ ಭಾಗವನ್ನು ಚೌಕಾಗಿಯೂ ಎರಡನೆಯ ಭಾಗವನ್ನು ಎಂಟು ಏಣುಗಳುಳ್ಳದ್ದನ್ನಾಗಿಯೂ, ಮೂರನೇಯದನ್ನು ಹದಿನಾಲ್ಕು ಮೂಲೆಗಳುಳ್ಳ ದ್ದಾಗಿಯೂ ಮಾಡಬೇಕು. ಅವು ಮೃದುವಾಗಿಯೂ ಮತ್ತು ಕಚ್ಚಿಲ್ಲದ್ದಾಗಿಯೂ ಇರಬೇಕು.

ಹೀಗೆ ಎಲ್ಲ ಲಕ್ಷಣಗಳಿಂದ ಶುದ್ಧವಾಗಿರುವ ಶಂಕುವನ್ನು ಷಡ್ವರ್ಗ ಶುದ್ಧಿಯಿರುವ ಶುಭದಿನದಲ್ಲಿ ಭೂಸ್ಥಾಪನೆ ಮಾಡಬೇಕು. ಮೃದು, ಕ್ಷಿಪ್ರ ಮತ್ತು ಧ್ರುವ ನಕ್ಷತ್ರಗಳಿರುವ ದಿನದಲ್ಲಿಯೂ, ರಿಕ್ತ ಮತ್ತು ಅಶುಭತಿಥಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿಯೂ ಸೂರ್ಯ, ಕುಜ ಇವರ ರಾಶಿಗಳನ್ನೂ, ಚರಲಗ್ನಗಳನ್ನೂ ಬಿಟ್ಟು ಉಳಿದ ರಾಶಿ ಮತ್ತು ಲಗ್ನಗಳಲ್ಲಿಯೂ, ಲಗ್ನಾಷ್ಟಮವು ಪಾಪಗ್ರಹಾದಿಗಳಿಂದ ಕ್ರಾಂತವಾಗದೇ ಇರುವ ಶುದ್ಧಿಯಿಂದಿರುವಾಗ ಶುಭಲಗ್ನ ಶುಭಗ್ರಹನಿರೀಕ್ಷಿತವಾದ ಮುಹೂರ್ತದಲ್ಲಿ ಈ ಶಂಕುಸ್ಥಾಪನೆ ಮಾಡಬೇಕು.

ಶಂಕುಸ್ಥಾಪನಾ ಸಮಾರಂಭದಲ್ಲಿ ಮಂಗಳ ವಾದ್ಯ ಪುರಸ್ಸರವಾಗಿ ವೃದ್ಧ ಸುವಾಸಿನಿಯರೊಡನೆ, ಬ್ರಾಹ್ಮಣರೊಡನೆ ಪುಣ್ಯಾಹವಾಚನ ನೆರವೇರಿಸಬೇಕು. ಶಂಕುಸ್ಥಾಪನ ಲಗ್ನದ ಒಂದು, ನಾಲ್ಕು, ಏಳು, ಹತ್ತು, ಐದು ಮತ್ತು ಒಂಭತ್ತು ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಗಳೂ ಇರಬೇಕು. ಲಗ್ನಾಂಶದಲ್ಲಿ ಅಥವಾ ಷಷ್ಠದಲ್ಲಾಗಲಿ ಚಂದ್ರನಿರಬಾರದು. ಇಂತಹ ಶುಭಕಾಲದಲ್ಲಿ ದೈವಜ್ಞನನ್ನು ಪೂಜಿಸುವದರ ಮೂಲಕ ಆತನ ಅನುಗ್ರಹವನ್ನು ಪಡೆದು ಶಂಕುಸ್ಥಾಪನೆಯನ್ನು ಮಾಡಬೇಕು. ಲಘುಕಾರ್ಯಗಳೆಲ್ಲ ಮುಗಿದ ಮೇಲೆ ಗುರುಕಾರ್ಯವನ್ನು ಆರಂಭಿಸಬೇಕು. ಲಘುಪಥದಲ್ಲಿಯೇ ಮನೆಯ ಹೊರ ಸುತ್ತಿನಲ್ಲಿ ಜಗುಲಿಯನ್ನು ನಿರ್ಮಿಸಬೇಕು. ಆ ಜಗುಲಿಯು ಪೂರ್ವಾದಿಯಾದ ಪ್ರವೇಶಾಕಾರದಲ್ಲಿ

ಬರಬೇಕು. ಷೋಡಶವಿಧವಾದ ಗೃಹಗಳಲ್ಲಿಯೂ ಪೂರ್ವದಿಕ್ಕಿನಲ್ಲಿ ಸ್ನಾನದ ಮನೆ ಆಗ್ನೇಯದಲ್ಲಿ ಅಡಿಗೆಮನೆ, ದಕ್ಷಿಣಭಾಗದಲ್ಲಿ, ಶಯನಗೃಹ, ನೈಋತ್ಯದಲ್ಲಿ ಶಸ್ತ್ರ ಗೃಹ, ಪಶ್ಚಿಮದಲ್ಲಿ ಭೋಜನಗೃಹ, ವಾಯುವ್ಯದಲ್ಲಿ ಧಾನ್ಯಗೃಹ, ಉತ್ತರದಲ್ಲಿ ದೇವರಮನೆ ಈಶಾನ್ಯದಲ್ಲಿ ಕ್ಷೀರಗೃಹ ಈ ರೀತಿಯಾಗಿ ಗೃಹಭಾಗಗಳಿಗೆ ದಿಗ್ವ್ಯವಸ್ಥೆಯಿರಬೇಕು. ಶಯ್ಯಾಗೃಹಕ್ಕೆ ಸಂಬಂಧಿಸಿದಂತೆ ಶಸ್ತ್ರಾಗಾರ, ಮಲಮೂತ್ರಾದಿಗಳ ಮನೆ ಇವುಗಳಿರಬೇಕು. ಊಟದಮನೆಗೆ ಸಂಬಂಧಿಸಿದಂತೆ ಆಭರಣಗೃಹವಿರಬೇಕು. ಧಾನ್ಯಗೃಹಕ್ಕೆ ಹತ್ತಿರದಲ್ಲಿ ಅಂತಃಪುರ ಶೃಂಗಾರ ಗೃಹಗಳಿರಬೇಕು. ಒಟ್ಟಿನಲ್ಲಿ ಗೃಹನಿರ್ಮಾಣವು ಈಶಾನ್ಯಾದಿಯಾಗಿ ನಿರ್ಮಾಣವಾದರೆ ಒಳಿತು. ಇಂತಹ ಗೃಹಗಳಲ್ಲಿ ಎಲ್ಲಿಯಾದರೂ ನಿಧಿಯನ್ನು, ಶಸ್ತ್ರವನ್ನು ಇಟ್ಟುಕೊಳ್ಳಬಹುದು. ಮನೆಯ ಪಶ್ಚಿಮ ಮತ್ತು ದಕ್ಷಿಣ ಭಾಗದಲ್ಲಿ ಗೃಹಪಾದಗಳೂ ಗೃಹ ಸ್ತಂಭಗಳೂ ಒಂದೇ ಸಮನಾದ ಆಕಾರದಲ್ಲಿರಬೇಕು. ಗೋಡೆಯ ಅಳತೆಗೆ ಮೀರದಂತೆಯೂ ಕಡಿಮೆಯಾಗದಂತೆಯೂ ಅವುಗಳು ರಚಿಸಲ್ಪಟ್ಟಿರಬೇಕು. ಈ ರೀತಿಯಾದ ಲಕ್ಷಣಗಳಿಂದ ಕೂಡಿದ ಗೃಹನಿರ್ಮಾಣವನ್ನು ಮಾಡುವದು ಶ್ರೇಯಸ್ಕರವಾದುದು. ಈಗ ಹೊಸ ಮನೆ ಕಟ್ಟಿದ ನಂತರ ಅದಕ್ಕೆ ಮಾಡಬೇಕಾದ ವಾಸ್ತು ಪೂಜಾ ವಿಧಿಯನ್ನು ತಿಳಿಸುವೆನು.

ಹೊಸಮನೆಯ ಮಧ್ಯಭಾಗದಲ್ಲಿ ಅಕ್ಕಿಯ ರಾಶಿಯ ಮೇಲೆ ಪೂರ್ವಾಪರವಾಗಿ ಹತ್ತು ರೇಖೆಗಳನ್ನು, ದಕ್ಷಿಣೋತ್ತರವಾಗಿ ಹತ್ತು ರೇಖೆಗಳನ್ನು ಹಾಕಿ - ಎಂಬತ್ತೊಂದು ಮನೆಗಳನ್ನು ಮಂಡಲ ಮಾಡಿಕೊಳ್ಳಬೇಕು. ಅದರಲ್ಲಿ ಮುಂದೆ ಹೇಳಿದ ನಲವತ್ತೈದು ಜನ ದೇವತೆಗಳನ್ನು ಆವಾಹನೆ ಮಾಡಬೇಕು. . ಹೊರಭಾಗದಲ್ಲಿ ಮೂವತ್ತೆರಡು ದೇವತೆಗಳಿಗೂ ಒಳಭಾಗದಲ್ಲಿ ಹದಿಮೂರು ದೇವತೆಗಳಿಗೂ ಸ್ಥಾನವಿರಬೇಕು. ಇವುಗಳ ಸ್ಥಾನ ಮತು ಹೆಸರು ಈ ರೀತಿಯಾಗಿರುವದು. ಹೊರಭಾಗದಲ್ಲಿ ಈಶಾನ್ಯದಿಂದ ಹಿಡಿದು ಮೂವತ್ತೆರಡು ದೇವತೆಗಳನ್ನು ಆಹ್ವಾನಿಸಬೇಕು. ಈ ದೇವತೆಗಳ ಹೆಸರು ಈ ರೀತಿ ಇರಬೇಕು. ಕೃಪೀಟಯೋನಿ, ಪರ್ಜನ್ಯ, ಜಯಂತ, ಪಾಕಶಾಸನ, ಸೂರ್ಯ, ಚಂದ್ರ, ಮೃಗ, ಆಕಾಶ, ವಾಯು, ಪೂಷಾ, ನೈರೃತಿ, ಗೃಹಾಕ್ಷತ, ದಂಡಧರ, ಗಂಧರ್ವ, ಭೃಗು, ರಾಜಕ, ಮೃಗ, ಪಿತೃಗಣಾಧೀಶ, ದೌವಾರಿಕ, ಸೋಮ, ಸೂರ್ಯ, ಅದಿತಿ, ದಿತಿ ಹೀಗೆ ಮೂವತ್ತೆರಡು ದೇವತೆಗಳನ್ನು ಆಹ್ವಾನಿಸಬೇಕು. (ಇಲ್ಲಿ ಇಪ್ಪತ್ತುಮೂರು ಹೆಸರುಗಳು ಮಾತ್ರವಿದ್ದು ಬಾಕಿಯವುಗಳು ಬಿಟ್ಟು ಹೋಗಿವೆ. ಇದಕ್ಕೆ ಮೂಲಪ್ರತಿ ಲಭ್ಯವಾಗಿರುವದಿಲ್ಲ) ಇದಲ್ಲದೆ ಈಶಾನ್ಯಾದಿ ನಾಲ್ಕು ಕೋಣಗಳಿಗೆ ಅಬ್ದೇವತಾ, ಸಾವಿತ್ರಿ, ಜಯ, ರುದ್ರ ಎಂಬ ನಾಲ್ಕು ದೇವತೆಗಳನ್ನು ಅರ್ಯಮ, ಸವಿತೃ, ಬಿಂಬ, ವಿವಸ್ವಾನ್, ವಸುಧಾಧಿಪ, ಮಿತ್ರ, ರಾಜಯಕ್ಷ್ಮ, ಪೃಥ್ವೀಧರ ಎಂಬ ಎಂಟು ದೇವತೆಗಳನ್ನು ಮಧ್ಯಭಾಗದಲ್ಲಿರುವ ಬ್ರಹ್ಮನ ಸುತ್ತಲೂ ಸ್ಥಾಪಿಸಬೇಕು. ಈ ರೀತಿ ಬ್ರಹ್ಮನೂ ಸೇರಿ ವಾಸ್ತುಮಂಡಲದಲ್ಲಿ ನಲವತ್ತೈದು ದೇವತೆಗಳಾಗುವರು. ಅದರಲ್ಲಿ ಹೊರಭಾಗದ ಇಪ್ಪತ್ತು ದೇವತೆಗಳನ್ನು ಎರಡೆರಡು ಪದಗಳಲ್ಲಿಯೂ, ಅರ್ಯಮ, ವಿವಸ್ವಾನ್, ವಸುಧಾಧಿಪ, ಮಿತ್ರ, ರಾಜಯಕ್ಷ್ಮ, ಪೃಥ್ವೀಧರ ಮತ್ತು ಬ್ರಹ್ಮನ ಸುತ್ತಲೂ ಇರುವ ನಾಲ್ಕು ದೇವತೆಗಳನ್ನು ಮೂರು ಪದಗಳಲ್ಲಿ ಆವಾಹಿಸಬೇಕು. ಮಧ್ಯೆ ಬ್ರಹ್ಮನನ್ನು ಒಂದು, ಎರಡು, ಮೂರು, ಪದಗಳಲ್ಲಿಟ್ಟು ಪೂಜಿಸಬೇಕು. ವಾಸ್ತುಮಂತ್ರ ತಿಳಿದವನು,

ಆ ಮಂತ್ರದಿಂದ ವಾಸ್ತುಪುರುಷನನ್ನು, ಬ್ರಾಹ್ಮಮಂತ್ರದಿಂದ ಬ್ರಹ್ಮನನ್ನು ಆವಾಹಿಸಿ, ದೂರ್ವಾಕ್ಷತೆ, ಶ್ವೇತವಸ್ತ್ರದ್ವಯ ಇವುಗಳನ್ನು ಸಮರ್ಪಿಸಬೇಕು. ಆವಾಹನಾದಿ ಷೋಡಶೋಪಚಾರಗಳಿಂದ ವಾಸ್ತು ಪುರುಷನನ್ನೂ ಬ್ರಹ್ಮನನ್ನೂ ಪೂಜಿಸಿ, ಮೂರು ವಿಧವಾದ ಅನ್ನಗಳನ್ನು ನಿವೇದನ ಮಾಡಬೇಕು. ಅನಂತರ ತಾಂಬೂಲಾದಿ ಸಮರ್ಪಿಸಿ, ವಾಸ್ತುಪುರುಷನನ್ನು ಪ್ರಾರ್ಥಿಸಿಕೊಳ್ಳಬೇಕು.

'ಎಲೈ ವಾಸ್ತುಪುರುಷನೆ! ನೀನು ಸರ್ವದಾ ಭೂಮಿಯಲ್ಲಿ ಮಲಗಿರುವವನಲ್ಲವೆ? ಪ್ರಭುವೇ ನನ್ನ ಮನೆಯು ಸರ್ವಕಾಲದಲ್ಲಿ ಧನಧಾನ್ಯಾದಿಗಳಿಂದ ತುಂಬಿರುವಂತೆ ಅನುಗ್ರಹಿಸು' ಎಂದು ಭಕ್ತಿಯಿಂದ ಪ್ರಾರ್ಥನೆ ಸಲ್ಲಿಸಿ ಪುರೋಹಿತನಿಗೂ ಹಾಗೂ ಅಲ್ಲಿ ಬಂದ ಬ್ರಾಹ್ಮಣರಿಗೂ ಯಥಾಶಕ್ತಿ ದಕ್ಷಿಣಾದಿಗಳನ್ನು ಕೊಟ್ಟು ಅವರನ್ನು ತೃಪ್ತಿಪಡಿಸಬೇಕು. ಈ ರೀತಿಯಾಗಿ ಯಾರು ವಾಸ್ತುಪೂಜೆಯನ್ನು ಮಾಡುವರೋ ಅವರು ಪುತ್ರ, ಧನ, ಧಾನ್ಯ, ಆರೋಗ್ಯ ಮುಂತಾದ ಸಕಲೈಶ್ವರ್ಯಗಳನ್ನು ತಪ್ಪದೆ ಪಡೆಯುವರು, ಯಾರು ವಾಸ್ತುಪೂಜೆ ಮಾಡದೇ ಗೃಹಪ್ರವೇಶ ಮಾಡುವರೋ ಅವರು ಸಕಲ ರೋಗಾದಿಗಳಿಂದಲೂ ನಾನಾ ವಿಧ ಕ್ಲೇಶಗಳಿಂದಲೂ ನರಳುವರು. ಬಾಗಿಲಿಲ್ಲದೇ ಮೇಲು ಹೊದಿಕೆಯೂ ಇಲ್ಲದೆ, ವಾಸ್ತುಹೋಮ ದಿಗ್ಬಲಿಗಳು ನಡೆಯದೆ ಇರುವ ಮನೆಗೆ ಯಾರೂ ಪ್ರವೇಶ ಮಾಡಬಾರದು. ಅಂತಹ ಮನೆಯು ಸಕಲ ವಿಪತ್ತುಗಳ ತವರುಮನೆಯೆಂದು ಭಾವಿಸಬೇಕು. ಆದಕಾರಣ ಸುಖವನ್ನು, ಧನಧಾನ್ಯಾದಿ ಸಂಪತ್ತನ್ನು ಬಯಸುವ ಮನುಷ್ಯನು ನೂತನ ಗೃಹಪ್ರವೇಶ ಸಮಯದಲ್ಲಿ ತಪ್ಪದೆ ವಾಸ್ತುಪೂಜೆ ಮಾಡಬೇಕು.

ಇನ್ನು ರಾಜರನ್ನು ಸುಖ ಪ್ರಯಾಣ, ಇಷ್ಟಾರ್ಥಗಳನ್ನು ಹೊಂದುವ ಶುಭ ಮುಹೂರ್ತಗಳನ್ನು ವಿವರಿಸಿ ಹೇಳುವೆನು ಕೇಳು.

ಜನ್ಮಕಾಲಾದಿಗಳನ್ನು ಸರಿಯಾಗಿ ತಿಳಿದರೆ ಜಾತಕದಿಂದ ಫಲ ತಿಳಿಯುವದು ಸುಲಭ. ಹಾಗೆಯೇ ಜಾತಕಗಳಿಲ್ಲದವರು ಪ್ರಶ್ನೆ, ಯಾತ್ರಾ ಶಕುನ ಇತ್ಯಾದಿಗಳಿಂದ ಫಲವನ್ನು ಊಹಿಸಿಕೊಳ್ಳಬೇಕು. ಇವಾವುದರಿಂದಲೂ ತಿಳಿಯದೆ ಫಲವನ್ನು ಅನುಭವಿಸುವದು ಹುಳವು ಅಕ್ಷರವನ್ನು ಕೊರೆದಂತೆ ಆಕಸ್ಮಿಕವೆಂದು ತಿಳಿಯಬೇಕಷ್ಟೆ. ಷಷ್ಠಿ, ಅಷ್ಟಮಿ, ದ್ವಾದಶಿ, ರಿಕ್ತ ತಿಥಿಗಳು, ಅಮಾವಾಸ್ಯಾ, ಪೂರ್ಣಿಮಾ, ಶುಕ್ಲಪಕ್ಷ, ಪಾಡ್ಯ ಈ ತಿಥಿಗಳಲ್ಲಿ ಪ್ರಯಾಣಮಾಡುವದರಿಂದ ದಾರಿದ್ರ್ಯ, ಕಾರ್ಯನಾಶವೂ ಸಂಭವಿಸುವದು. ಅನುರಾಧಾ, ಪುನರ್ವಸು, ಮೃಗಶಿರ, ಹಸ್ತ, ರೇವತಿ, ಅಶ್ವಿನಿ, ಸ್ವಾತಿ, ಧನಿಷ್ಠಾ, ಪುಷ್ಯ, ಉತ್ತರಾ, ಉತ್ತರಾಷಾಢಾ ಉತ್ತರಾಭಾದ್ರ ಈ ನಕ್ಷತ್ರಗಳು ಪ್ರಯಾಣಕ್ಕೆ ಶ್ರೇಷ್ಠವಾದವುಗಳು. ಇಂತಹ ನಕ್ಷತ್ರಗಳಲ್ಲಿ ಪ್ರಯಾಣ ಮಾಡುವದರಿಂದ ಯಾತ್ರಾಫಲಗಳು ಮಾನವರಿಗೆ ಸಿದ್ಧಿಸುವವು.

ಶನಿವಾರ ಮತ್ತು ಸೋಮವಾರಗಳಲ್ಲಿ ಪೂರ್ವದಿಕ್ಕಿಗೂ, ಗುರುವಾರದಲ್ಲಿ ದಕ್ಷಿಣಕ್ಕೂ, ಭಾನು, ಶುಕ್ರವಾರಗಳಲ್ಲಿ ಪಶ್ಚಿಮಕ್ಕೂ, ಮಂಗಳ, ಬುಧವಾರಗಳಲ್ಲಿ ಉತ್ತರಕ್ಕೂ ಪ್ರಯಾಣ ಮಾಡಕೂಡದು. ಜ್ಯೇಷ್ಠಾ, ಪೂರ್ವಾಭಾದ್ರಾ, ರೋಹಿಣಿ, ಉತ್ತರಾ, ಈ ನಕ್ಷತ್ರಗಳು ಪೂರ್ವಾದಿಯಾಗಿ ನಾಲ್ಕು ದಿಕ್ಕುಗಳ ಶೂಲನಕ್ಷತ್ರಗಳು. ಅನುರಾಧಾ, ಹಸ್ತಾ, ಪುಷ್ಯ, ಅಶ್ವಿನಿ ಈ ನಾಲ್ಕು ನಕ್ಷತ್ರಗಳು ದಿಗ್ದ್ವಾರಗಳು, ಕೃತ್ತಿಕಾ ನಕ್ಷತ್ರಾದಿಯಾಗಿ ಉಳಿದ ಏಳು ಏಳು ನಕ್ಷತ್ರಗಳು ಕ್ರಮವಾಗಿ ದಿಕ್ಕುಗಳ ಬಾಗಿಲುಗಳಾಗಿ ಆಗುಳಿಯಂತೆ

ಇರತಕ್ಕವುಗಳು. ಈ ನಕ್ಷತ್ರಗಳನ್ನು ದಾಟಿ, ಅಗ್ನಿ ದಿಕ್ಕಿಗೆ ಪ್ರಯಾಣಮಾಡಕೂಡದು. ಕೃತ್ತಿಕಾದಿಯಾದ ಮೂರು ಮೂರು ನಕ್ಷತ್ರಗಳು ಕ್ರಮವಾಗಿ ಏದಿಕ್ಕುಗಳಾಗುವವು.

ಮೇಷಾದಿ ರಾಶಿಗಳು ಆಯಾ ದಿಕ್ಕುಗಳಿಗೆ ರಾಶಿಗಳೆನಿಸುವವು. ದಿಗಧಿಪತಿಯು ಲಲಾಟಗತನಾಗಿದ್ದರೆ ಪ್ರಯಾಣ ಮಾಡುವವನು ಮತ್ತೆ ಹಿಂದಿರುಗಿ ಬರುತ್ತಾನೆಂಬ ಭರವಸೆ ಇರುವದಿಲ್ಲ. ಪೂರ್ವದಿಕ್ಕಿಗೆ ಪ್ರಯಾಣ ಮಾಡುವವನಿಗೆ ಲಗ್ನಸ್ಥನಾದ ಸೂರ್ಯನು ಲಲಾಟಗತನಾಗುವನು. ಆಗ್ನೇಯಕ್ಕೆ ಹೋಗುವವನಿಗೆ ಲಗ್ನಾತ್ ಹನ್ನೊಂದು ಮತ್ತು ಹನ್ನೆರಡನೆಯ ರಾಶಿಯಲ್ಲಿರುವ ಶುಕ್ರನು ಲಲಾಟಸ್ಥನಾಗುವನು. ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡುವವನಿಗೆ ಹತ್ತಿರದಲ್ಲಿರುವ ಕುಜನು, ನೈರುತ್ಯ ದಿಕ್ಕಿಗೆ ಪ್ರಯಾಣ ಮಾಡುವವನಿಗೆ ಒಂಭತ್ತು ಮತ್ತು ಎಂಟನೆಯ ಸ್ಥಾನದಲ್ಲಿರುವ ರಾಹುವು ಲಲಾಟಸ್ಥನಾಗುವನು. ಪಶ್ಚಿಮ ದಿಕ್ಕನ್ನು ಕುರಿತು ಹೋಗುವವನಿಗೆ ಸಪ್ತಮ ಶನಿಯು ಲಲಾಟಸ್ಥನಾಗುವನು. ವಾಯುವ್ಯ ದಿಕ್ಕಿಗೆ ಹೋಗುವವನಿಗೆ ಪಂಚಮ, ಷಷ್ಠ, ಈ ಸ್ಥಾನದಲ್ಲಿರುವ ಚಂದ್ರನು ಲಲಾಟಸ್ಥಾನಕ್ಕೆ ಬರುವನು. ಉತ್ತರದಿಕ್ಕಿಗೆ ಪ್ರಯಾಣ ಮಾಡುವವನಿಗೆ ಲಗ್ನದಿಂದ ನಾಲ್ಕನೆಯ ಸ್ಥಾನಗತನಾದ ಬುಧನು ಲಲಾಟಸ್ಥನಾಗುವನು. ಈಶಾನ್ಯ ದಿಕ್ಕಿಗೆ ಪಯಮಿಸುವವನಿಗೆ ದ್ವಿತೀಯ ಮತ್ತು ತೃತೀಯ ಸ್ಥಾನಗತನಾದ ಗುರುವು ಲಲಾಟಸ್ಥಿತಿಗೆ ಬರುವನೆಂದು ತಿಳಿಯಬೇಕು. ಜೀವಿತದಲ್ಲಿ ಅಪೇಕ್ಷೆ ಉಳ್ಳವನು ಈ ಲಲಾಟಸ್ಥ ಗ್ರಹಗಳು ಸಂಬಂಧಿಸಿದಾಗ ಎಂದೂ ಪ್ರಯಾಣ ಮಾಡಬಾರದು. ಇದರಿಂದ ತಪ್ಪದೆ ಹಾನಿಯು ಸಂಭವಿಸುವದು.

ವಿಲೋಮವಾಗಿ ಚಲಿಸುವ ಗ್ರಹವು ಯಾತ್ರಾ ಲಗ್ನದಲ್ಲಿದ್ದರೆ ರಾಜನಿಗೆ ಪ್ರಯಾಣದಲ್ಲಿ ಭಂಗ ಬರುವದು. ಅಥವಾ ವಿಲೋಮ ಗ್ರಹವಿರುವ ಅಂಶದಲ್ಲಿಯೂ ರಾಜನು ಪ್ರಯಾಣ ಮಾಡಬಾರದು. ಸೂರ್ಯ ಚಂದ್ರರಿರುವ ರಾಶಿಗಿಂತ ಆರು ರಾಶಿಗಳಲ್ಲೊಂದನ್ನುಪ್ರಯಾಣ ಲಗ್ನವಾಗಿಟ್ಟು, ಅದು ಸೂರ್ಯಾಯನವಾದಲ್ಲಿ ಹಗಲೂ ಚಂದ್ರಾಯನವಾಗಿದ್ದರೆ ರಾತ್ರಿಯೂ ಪ್ರಯಾಣ ಮಾಡಬೇಕು. ಇದಕ್ಕೆ ವಿರುದ್ಧವಾಗಿ ಯಾತ್ರೆಗೆ ಹೊರಡುವದು ಶುಭಕರವಲ್ಲ. ಶುಕ್ರಾಸ್ತದಲ್ಲಿ ಮಾಡುವ ಪ್ರಯಾಣವು ಕಾರ್ಯಹಾನಿ ತರುವದು. ಪ್ರತಿ ಶುಕ್ರ ಎಂದರೆ ಪಶ್ಚಾದುದಯ ಶುಕ್ರನಿರುವಾಗ ಪ್ರಯಾಣ ಮಾಡುವದರಿಂದ ಸೋಲು ಖಂಡಿತ. ಪ್ರತಿ ಶುಕ್ರ ಕೃತವಾದ ದೋಷವನ್ನು ಯಾವ ಗ್ರಹಾದಿಗಳೂ ಪರಿಹರಿಸಲಾರವು.

ವಶಿಷ್ಠ, ಕಶ್ಯಪ, ಅತ್ರಿ, ಭಾರದ್ವಾಜ, ಗೌತಮ ಈ ಗೋತ್ರದವರಿಗೆ ಶುಕ್ರಾಸ್ತ ಕೃತವಾದ ದೋಷವಿರುವದಿಲ್ಲ. ಒಂದೇ ಊರಿನಲ್ಲಿ ವಿವಾಹ, ದುರ್ಭಿಕ್ಷ, ರಾಜಯುದ್ಧ, ಬ್ರಾಹ್ಮಣಕ್ಷೋಭೆ, ರಾಜರಿಗೆ ಬಂದಿರುವ ಆಪತ್ತು ಇಂತಹ ಸಂದರ್ಭಗಳಲ್ಲಿ ಪ್ರತಿಶುಕ್ರದೋಷ ನೋಡಬೇಕಾಗಿಲ್ಲ. ಶುಕ್ರನು ನೀಚರಾಶಿಯಲ್ಲಿರುವದು ಶತ್ರುಕ್ಷೇತ್ರ ದಲ್ಲಿರುವದು, ವಕ್ರಿಯವಾಗಿ ಯುದ್ಧದಲ್ಲಿ ಸೋಲುವಿಕೆ, ಈ ಸ್ಥಿತಿಯಲ್ಲಿರುವಾಗ ಪ್ರಯಾಣ ನಿಷಿದ್ಧ. ಶುಕ್ರನು ಉಚ್ಚಂಗತನಾದಾಗ ಪ್ರಯಾಣ ಶುಭಕರ. ಜನ್ಮಲಗ್ನಾಪೇಕ್ಷಯಾ, ಅಷ್ಟಮಲಗ್ನ, ಅಷ್ಟಮರಾಶಿ, ಲಗ್ನಾಧಿಪತಿಯು ಶತ್ರುಕ್ಷೇತ್ರ ಅಥವಾ ಶತ್ರುಗ್ರಹಸ್ಥರಾಶಿ, ಇವುಗಳಲ್ಲಿ ಪ್ರಯಾಣ ಮಾಡುವದು ಮೃತ್ಯುಕರ. ಆದರೆ ಜನ್ಮಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿಗಳು ಪರಸ್ಪರ ಮಿತ್ರರಾಗಿದ್ದರೆ. ಅಂತಹ ಜನ್ಮಾಷ್ಟಲಗ್ನಗಳಲ್ಲಿ ಪ್ರಯಾಣ ಮಾಡುವದು ದೋಷಕರವಲ್ಲ. ಕ್ರೂರ ಗ್ರಹಾವಲೋಕಿತವಾದ ದ್ವಿಸ್ವಭಾವ ರಾಶಿಯೂ,

ಶುಭಗ್ರಹಯುಕ್ತವೂ, ದೃಷ್ಟವೂ ಆದ ಸ್ಥಿರರಾಶಿಯೂ ಪ್ರಯಾಣಕ್ಕೆ ಮುಖ್ಯವಲ್ಲ. ಧನಿಷ್ಠ, ರೇವತಿ, ಆರಿದ್ರಾದಿ ನಕ್ಷತ್ರಗಳೆಂದರೆ ಆರಿದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಘಾ ಈ ನಕ್ಷತ್ರಗಳೂ ಇವುಗಳಲ್ಲಿ ಹುಲ್ಲು ಇವುಗಳನ್ನು ಸಂಗ್ರಹಿಸುವದೂ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡುವದೂ ಶಯ್ಯಾಗೃಹಾದಿಗಳನ್ನು ನಿರ್ಮಿಸುವದೂ ಅಷ್ಟು ಶ್ರೇಷ್ಠವಲ್ಲ. ಜನ್ಮ ಲಗ್ನ, ಅಥವಾ ಜನ್ಮರಾಶಿ ಅಥವಾ ತದಧಿಪತಿಗಳು ಇರುವ ರಾಶಿ ಇವುಗಳಲ್ಲೊಂದನ್ನು ಪ್ರಯಾಣ ಲಗ್ನವನ್ನಾಗಿ ಮಾಡಿಕೊಂಡು ಅದರ ಕೇಂದ್ರಗಳಲ್ಲಿ ಮತ್ತು ಷಷ್ಠಸ್ಥಾನದಲ್ಲಿ ಶತ್ರುಗ್ರಹಗಳಿರುವಾಗ ಪ್ರಯಾಣ ಮಾಡಿದರೆ ಶತ್ರುನಾಶವಾಗುವನು, ಅಥವಾ ಲಗ್ನವು ಶೀರ್ಷೋದಯವಾಗಿದ್ದು ಪ್ರಯಾಣ ಮಾಡುವ ದಿಕ್ಕಿನ ಲಗ್ನವೂ ಅದೇ ಆಗಿದ್ದು ಶುಭಾಂಶದಲ್ಲಿ ಪ್ರಯಾಣ ಮಾಡಿದರೆ ಶತ್ರುಕ್ಷಯವಾಗುವದು. ಶತ್ರುವಿನ ಜನ್ಮ ಲಗ್ನ ಅಥವಾ ಜನ್ಮರಾಶಿಯ ಅಷ್ಟಮ ಲಗ್ನ ಅಥವಾ ತದಧಿಪತಿಯಿರುವ ಲಗ್ನ ಇವುಗಳಲ್ಲಿ ಪ್ರಯಾಣ ಮಾಡಿದರೆ ಶತ್ರುನಾಶವಾಗುವದು. ಮೀನಲಗ್ನ ಅಥವಾ ಮೀನಾಂಶದಲ್ಲಿ ಪ್ರಯಾಣ ಮಾಡುವದರಿಂದ ದಾರಿಯೂ ಬಳಸಾಗುವದು. ಕುಂಭ ಲಗ್ನ ಮತ್ತು ಕುಂಭಾಂಶಗಳು ಪ್ರಯಾಣಕ್ಕೆ ನಿಷಿದ್ಧವಾದವು.

ಜಲಲಗ್ನವು, ಜಲಾಂಶ, ಜಲಯೋನಿರಾಶಿಗಳು ಇವುಗಳಲ್ಲಿ ಪ್ರಯಾಣ ಮಾಡುವದರಿಂದ ಶುಭಕರ. ಯಂತ್ರಲಗ್ನಕ್ಕಿರುವ ದ್ವಾದಶಭಾವಗಳಿಗೂ ಕ್ರಮವಾಗಿ ಲಗ್ನವನ್ನು ಬಿಟ್ಟು ಮೂರ್ತಿ, ಕೋಶ, ಧನ್ವಿ, ವಾಹನ, ಮಂತ್ರ, ಶತ್ರುವರ್ಣ, ಆಯುಸ್ಸು, ಧನುಸ್ಸು, ವ್ಯಾಪಾರ, ಪ್ರಾಪ್ತಿ, ಅಪ್ರಾಪ್ತಿ ಎಂಬ ಸಂಕೇತಗಳಿವೆ. ಇವುಗಳಲ್ಲಿ ಪ್ರಾಪ್ತಿಭಾವವನ್ನು, ಸೂರ್ಯ, ಕುಜರನ್ನು ಬಿಟ್ಟು ಉಳಿದ ಪಾಪಗ್ರಹಗಳು ನಾಶ ಮಾಡುತ್ತವೆ. ಶುಭಗ್ರಹಗಳು ಶತ್ರುವನ್ನೂ, ವ್ಯಾಪಾರವನ್ನೂ ನಾಶ ಮಾಡುತ್ತವೆ. ಅಸ್ತಂಗತನಾದ ಶುಕ್ರನು ಮೂರ್ತಿಭಾವವನ್ನು, ಚಂದ್ರನು ದಕ್ಷಿಣ ದಿಗ್ಗಾಮಿಯಾದವನನ್ನು ಬಿಟ್ಟು ಉಳಿದ ದಿಕ್ಕುಗಳಿಗೆ ಪ್ರಯಾಣ ಮಾಡುವ ಜನಗಳಿಗೆ ಮೃತ್ಯುವನ್ನೂ ತೊಂದರೆಯನ್ನೂ ಕೊಡುವನು.

ಪಂಚಾಂಗ ಶುದ್ಧಿಯಿಲ್ಲದ ದಿನದಲ್ಲಿಯೂ, ಅಭಿಜಿತ್ ಲಗ್ನದಲ್ಲಿ ಪ್ರಯಾಣ ಮಾಡಿದರೆ ಕಾರ್ಯಸಿದ್ಧಿ ಉಂಟು. ಯಾತ್ರಾದಿಯೋಗಗಳು ವಿಚಿತ್ರವಾಗಿವೆ. ಕ್ಷತ್ರಿಯರಿಗೆ ಯಾತ್ರಾಫಲವು ಲಗ್ನಯೋಗಗಳಿಂದಲೂ, ಬ್ರಾಹ್ಮಣರಿಗೆ ನಕ್ಷತ್ರಯೋಗಗಳಿಂದಲೂ, ಉಳಿದವರಿಗೆ ಮುಹೂರ್ತ ಬಲದಿಂದಲೂ ಕಳ್ಳರಿಗೆ ಶಕುನದಿಂದಲೂ ಫಲ ದೊರೆಯುವದು. ಬುಧ, ಶುಕ್ರ ಮತ್ತು ಗುರುಗಳಲ್ಲಿ ಒಂದು ಗ್ರಹವು ಲಗ್ನ ಕೇಂದ್ರ ಅಥವಾ ತ್ರಿಕೋಣಗಳಲ್ಲಿದ್ದರೆ ಅದರಲ್ಲಿಯೂ ಶ್ರೇಷ್ಠವಾದ ಅಧಿಯೋಗವೆನಿಸುವದು.

ಈ ಅಧಿಯೋಗದಲ್ಲಿ ಪ್ರಯಾಣ ಮಾಡುವದರಿಂದ ಕ್ಷೇಮ, ಸರ್ವಸಿದ್ಧಿ ಲಭಿಸುತ್ತವೆ. ಇಂತಹ ಯೋಗದಿಂದ ಯುಕ್ತವಾದ ಲಗ್ನದಲ್ಲಿಯೂ ಚಂದ್ರ, ಶನಿ ಮತ್ತು ಸೂರ್ಯರು ಕ್ರಮವಾಗಿ ಶತ್ರು, ವ್ಯಾಪಾರ ಶತ್ರು, ಮೂರ್ತಿ ಭಾವಗಳಲ್ಲಿದ್ದರೆ ಯುದ್ಧಕ್ಕಾಗಿ ಹೋರಾಟ ರಾಜನಿಗೆ ನಿಜವಾಗಿ ಜಯ ದೊರೆಯುವದು ಖಂಡಿತ. ಅಥವಾ ಲಗ್ನ ಚತುರ್ಥ, ಸಪ್ತಮ ತೃತೀಯ ಮತ್ತು ಷಷ್ಠಸ್ಥಾನಗಳಲ್ಲಿ ಕ್ರಮವಾಗಿ ಶುಕ್ರ, ರವಿ, ಬುಧ, ಶನಿ, ಕುಜ ಇವುಗಳು ಇರುವಾಗ ಹೊರಟ ರಾಜನಿಗೆ ಶತ್ರು ಸೈನ್ಯವೂ ಸೋಲುವದು. ಲಗ್ನದಲ್ಲಿ ಗುರುವೂ, ದ್ವಿತೀಯ ಮತ್ತು ಏಕಾದಶಸ್ಥಾನಗಳಲ್ಲಿ ಇತರ ಗ್ರಹಗಳೂ ಇದ್ದರೆ ಶತ್ರುನಾಶ. ಲಗ್ನದಲ್ಲಿ ಶುಕ್ರಲಾಭಾಸ್ಥಾನದಲ್ಲಿ ರವಿ, ಚತುರ್ಥದಲ್ಲಿ ಚಂದ್ರ ಹೀಗಿರುವಾಗ ಪ್ರಯಾಣ ಮಾಡಿದರೆ

ಸಿಂಹವು ಆನೆಗಳನ್ನು ಕೊಲ್ಲುವಂತೆ ಶತ್ರುಗಳನ್ನು ರಾಜನು ನಾಶಮಾಡುವನು.

ಶುಕ್ರನು ಲಗ್ನದಲ್ಲಿ ಉಚ್ಚನಾಗಿರುವಾಗ ಚಂದ್ರನು ಉಚ್ಚರಾಶಿಯಲ್ಲಾಗಲಿ, ಲಾಭದಲ್ಲಾಗಲಿ ಇರುವಾಗ ಪ್ರಯಾಣಮಾಡಿದ ರಾಜನು ಶತ್ರುಗಳನ್ನು ಸದೆಬಡೆಯುವನು. ಸೌಮ್ಯಗ್ರಹಗಳು ತ್ರಿಕೋಣ ಮತ್ತು ಕೇಂದ್ರಗಳಲ್ಲಿದ್ದು ಕ್ರೂರಗ್ರಹಗಳು ಆರು, ಮೂರು, ಹನ್ನೊಂದರಲ್ಲಿ ಇದ್ದಾಗ ಪ್ರಯಾಣ ಮಾಡಿದರೆ, ಸಂಪತ್ತು ತಾನಾಗಿಯೇ ಹಿಂಬಾಲಿಸುತ್ತದೆ. ಮತ್ತು ಗುರು, ಸೂರ್ಯ, ಚಂದ್ರರು ಕ್ರಮದಿಂದ ಲಗ್ನ, ಷಷ್ಠಸ್ಥಾನ ಮತ್ತು ಅಷ್ಟಮರಾಶಿ ಇವುಗಳಲ್ಲಿದ್ದರೆ ಆಗ ಪ್ರಯಾಣ ಮಾಡಿದ ರಾಜನ ಶತ್ರು ಸೈನ್ಯವು ರಣದಲ್ಲಿ ಉಂಟಾದ ಸ್ನೇಹದಂತೆ ಉತ್ತರಕ್ಷಣದಲ್ಲಿಯೇ ಮಾಯವಾಗುವದು. ಅಥವಾ ಮೂರು, ಆರು ಮತ್ತು ಹನ್ನೊಂದರಲ್ಲಿ ಶನಿ, ಕುಜರು ಅಥವಾ ಬಲಿಷ್ಠರಾದ ಗ್ರಹಗಳು ಇದ್ದರೆ ಪ್ರಯಾಣ ಮಾಡಿದಾಗ ಶತ್ರುಭೂಮಿಯು ಕೈವಶವಾಗುವದು. ಗುರುವು ಉಚ್ಚನಾಗಿ ಲಗ್ನದಲ್ಲಿದ್ದು ಚಂದ್ರನು ಉಚ್ಚನಾಗಿ ಲಾಭದಲ್ಲಿರುವಾಗ ದಿಗ್ವಿಜಯಕ್ಕೆ ಹೊರಟ ರಾಜನು ಶತ್ರುಗಳ ದೇಶವನ್ನು ನಾಶಗೈಯುವನು. ಮತ್ತು ಶುಕ್ರನು ಶೀರ್ಷೋದಯದಲ್ಲಿದ್ದು ಲಗ್ನಗತವಾದಲ್ಲಿ, ಗುರು ಲಾಭದಲ್ಲಿದ್ದರೆ ಪ್ರಯಾಣ ಮಾಡಿದ ರಾಜನು ಶತ್ರುಗಳನ್ನು ಸುಲಭವಾಗಿ ಗೆಲ್ಲುವನು. ಅಥವಾ ಶುಕ್ರನು ಕೇಂದ್ರ ಅಥವಾ ತ್ರಿಕೋಣ ರಾಶಿಯಲ್ಲಿದ್ದು ಗುರು ಲಗ್ನದಲ್ಲಿದ್ದಾಗ ದಿಗ್ವಿಜಯಕ್ಕಾಗಿ ಹೊರಟ ರಾಜನು ವಿಜಯಶಾಲಿಯಾಗುವನು.

ಇನ್ನು ಲಗ್ನದಲ್ಲಿ ಬುಧನೂ, ಕೇಂದ್ರಗಳಲ್ಲಿ ಶುಭಗ್ರಹಗಳೂ ಇದ್ದು, ನಕ್ಷತ್ರವು ಅನುಕೂಲವಾಗಿರುವ ಮುಹೂರ್ತದಲ್ಲಿ ದಿಗ್ವಿಜಯಕ್ಕೆ ಹೊರಟ ರಾಜನು ಶತ್ರುಪರಿವಾರವನ್ನು ಸಮೂಲ ನಾಶಗೈಯುವನು. ತ್ರಿಕೋಣಗಳಲ್ಲಿ ಶುಭಗ್ರಹಗಳು, ಕೇಂದ್ರದಲ್ಲಾಗಲಿ, ಲಾಭಸ್ಥಾನದಲ್ಲಾಗಲಿ ಚಂದ್ರ ಅಥವಾ ಬುಧರೂ ಇದ್ದರೆ ರಾಜನು ಶತ್ರುಗಳನ್ನು ನಿಗ್ರಹಮಾಡುವನು. ಶುಭಗ್ರಹಗಳು ಸ್ವಕ್ಷೇತ್ರಗತವಾಗಿದ್ದ ಚಂದ್ರನುಕೇಂದ್ರ ತ್ರಿಕೋಣ ಅಥವಾ ಏಕಾದಶ ಸ್ಥಾನಗತನಾಗಿದ್ದರೆ ಅಗ್ನಿಯು ಹತ್ತಿಯ ರಾಶಿಯನ್ನು ಸುಡುವಂತೆ ರಾಜನು ಶತ್ರುಗಳನ್ನು ಅನಾಯಾಸವಾಗಿ ನಿಗ್ರಹಿಸುವನು. ಚಂದ್ರನು ಸ್ವಕ್ಷೇತ್ರದಲ್ಲಿಯೂ ಗುರುವು ಕೇಂದ್ರದಲ್ಲಿಯೂ ಇದ್ದರೆ ಮಂತ್ರವು ಪ್ರಣವದೊಡನೆ ಕೂಡಿದ ಹಾಗೆ ಯೋಗವು ಬಲಿಷ್ಠವಾಗಿ ಶತ್ರುವೃಂದವನ್ನು ನಾಶಮಾಡುವದು. ಶುಕ್ರನು ವರ್ಗೋತ್ತಮಗತನಾಗಿ ಲಗ್ನದಲ್ಲಿ ಯಾವ ಸಂಬಂಧವೂ ಇಲ್ಲದೆ ಇರುವಾಗ ದಿಗ್ವಿಜಯಕ್ಕೆ ಹೊರಟ ರಾಜನು ಹರಿಸ್ಮರಣೆಯು ಪಾಪರಾಶಿಯನ್ನು ತೊಲಗಿಸುವಂತೆ ಶತ್ರುಗಳನ್ನು ಸುಲಭವಾಗಿ ಹೊಡೆದು ಓಡಿಸುವನು. ಕೇಂದ್ರ ತ್ರಿಕೋಣಗಳು ಶುಭಗ್ರಹಕ್ರಾಂತರಾಗಿ ಚಂದ್ರನು ವರ್ಗೋತ್ತಮಸ್ಥಾನದಲ್ಲಿರುವಾಗ ಪ್ರಯಾಣ ಮಾಡಿದವನು, ಶತ್ರುಸಮೂಹಕ್ಕೆ ಮಣ್ಣು ಮುಕ್ಕಿಸುತ್ತಾನೆ. ಗುರುವು ಮಿತ್ರಕ್ಷೇತ್ರಗತನಾಗಿ ಕೇಂದ್ರದಲ್ಲಿದ್ದು ಶುಕ್ರನು ಹಾಗೆಯೇ ತ್ರಿಕೋಣದಲ್ಲಿದ್ದರೆ ರಾಜನು ಶತ್ರುಗಳನ್ನು ಧ್ವಂಸಮಾಡುವನು. ಶುಕ್ರನು ಕೇಂದ್ರ ತ್ರಿಕೋಣಗತನಾಗಿ ವರ್ಗೋತ್ತಮಾಂಶದಲ್ಲಿ ಇರುವದಾದರೆ, ಆಗ ಪ್ರಯಾಣ ಮಾಡಿದವನು ಗಂಗೆಯು ಮಾನವರ ಸಕಲ ಪಾಪ ತೊಳೆಯುವಂತೆ ರಾಜನು ಶತ್ರುಜಾಲವನ್ನು ಮುಳುಗಿಸಿ ಬಿಡುವನು. ಈ ರೀತಿಯಾಗಿ ಇಲ್ಲಿಯವರೆಗೆ ಹೇಳಿದ ರಾಜಯೋಗಗಳಲ್ಲಿ ಪ್ರಯಾಣ ಮಾಡಿದರೆ ಪಾಪಾಗ್ನಿಯು ಶತ್ರು ಸ್ತ್ರೀಯರ ಕಣ್ಣೀರಿನ ಕೋಡಿಯಿಂದ ಶಾಂತವಾದೀತು.

ಆಶ್ವಯುಜ ಶುದ್ಧ ದಶಮಿ ತಿಥಿಗೆ ವಿಜಯದಶಮಿಯೆಂದು ಕರೆಯುವರು. ಆ ದಿವಸ ದಿಗ್ವಿಜಯಕ್ಕಾಗಿ ಹೊರಟ ರಾಜನಿಗೆ ಸ್ನೇಹ ಅಥವಾ ವಿಜಯಗಳು ದೊರಕುವವೇ ಹೊರತು ಪರಾಜಯ ಎಂದೂ ಲಭಿಸದು. ನಿಮಿತ್ತಗಳಿಂದಲೂ ಶಕುನಗಳಿಂದಲೂ ಮನೋದಾರ್ಢ್ಯ ಪಡೆಯಬಹುದು. ಶೂರರಿಗೆ ಮನೋನಿಶ್ಚಯಕ್ಕಿಂತ ಬೇರೆಯದಾದ ಕಾರ್ಯಸಿದ್ಧಿಯು ಬೇಕಿಲ್ಲ. ಉತ್ಸವ ಉಪನಯನ, ವಿವಾಹ, ದೇವತಾಪ್ರತಿಷ್ಠಾಪನೆ, ಅಶೌಚ, ಸೂತಕ, ಇವುಗಳು ಪೂರ್ತಿಯಾಗದ ಹೊರತು ಮಧ್ಯೆ, ಪ್ರಯಾಣ ಮಾಡಬಾರದು. ಪ್ರಯಾಣ ಕಾಲದಲ್ಲಿ ಎಮ್ಮೆಗಳು ಬೆಕ್ಕುಗಳು ಜಗಳವಾಡಿದರೆ ಅಥವಾ ಹೆಂಡತಿಯು ಕಲಹಕ್ಕೆ ನಿಂತರೆ ಅಥವಾ ಹೆಂಡತಿಯು ಬಹಿಷ್ಠೆಯಾದರೆ ಅಥವಾ ಉಟ್ಟ ಬಟ್ಟೆಯು ಜಾರಿದರೆ ಅಥವಾ ಕೆಟ್ಟ ಮಾತುಗಳು ಬಾಯಿಂದ ಬಂದರೆ ಪ್ರಯಾಣ ಮಾಡಬಾರದು. ಜಯಗಳಿಸಬೇಕೆಂಬ ಅರಸನು ಪೂರ್ವಾದಿ ದಿಕ್ಕುಗಳಿಗೆ ಪ್ರಯಾಣ ಮಾಡುವಾಗ ಕ್ರಮವಾಗಿ ತುಪ್ಪದ ಅನ್ನ, ಎಳ್ಳು ಹುಡಿ ಅನ್ನ, ಮೀನಿನಿಂದ ಕೂಡಿದ ಪಕ್ವಾನ್ನ ಪಾಯಸ, ಈ ಆಹಾರ ಊಟಮಾಡಬೇಕು.

ಇನ್ನು ವಾರ ಸಿದ್ಧಿ ಗಾಗಿ ಭಾನುವಾರಾದಿಯಾಗಿ ಕ್ರಮದಿಂದ ಸಜ್ಜಿಗೆ ಪರಮಾನ್ನ, ಗಂಜಿ, ಹಾಲು, ಮೊಸರು, ಎಳ್ಳನ್ನ, ಇವುಗಳನ್ನು ಉಂಡು ಹೊರಡಬೇಕು. ಅಶ್ವಿನ್ಯಾದಿಯಾಗಿ ಇಪ್ಪತ್ತೇಳು ನಕ್ಷತ್ರಗಳಿಗೆ ಕ್ರಮವಾಗಿ ಕುಲ್ಮಾಷ, ಎಳ್ಳನ್ನ, ಮೊಸರು, ಜೇನು ತುಪ್ಪ ಹಾಗೂ ಮೃಗಮಾಂಸಾನ್ನ, ಮಾಂಸಸಾರ, ಪಾಯಸ, ಪಕ್ಷಿ, ಮೃಗಗಳ ಮಾಂಸ, ಮೊಲದ ಮಾಂಸ, ಪೌಷ್ಟಿ ಪ್ರಿಯಂಗು, ಒಬ್ಬಟ್ಟು, ಚಿತ್ರ ವಿಚಿತ್ರವಾದ ಮೊಟ್ಟೆಗಳು. ಹಣ್ಣು, ಆಮೆಯ ಮಾಂಸ, ನಾಯಿಯ ಮಾಂಸ, ಬೆಕ್ಕಿನ ಮಾಂಸ, ಹವಿಸ್ಸು, ಎಳ್ಳನ್ನ, ಹೆಸರನ್ನ, ಅಕ್ಕಿಯ ಹಿಟ್ಟು, ಮೀನಿನ ಅನ್ನ, ಚಿತ್ರಾನ್ನ, ಮೊಸರನ್ನ, ಇವುಗಳನ್ನು ಊಟ ಮಾಡಬೇಕು. ಆನೆ, ಪಟ್ಟದ ಕುದುರೆ, ರಥ, ಸೇನಾನಿ, ಇವುಗಳೊಂದಿಗೆ ವಿಜಯಯಾತ್ರೆ ಮಾಡಬೇಕು. ದಿಗ್ವಿಜಯ ಪ್ರಯಾಣಕ್ಕೆ ಮೊದಲು ರಾಜನು ಅಗ್ನಿಯಲ್ಲಿ ವಿಧಿಪೂರ್ವಕ ದಿಕ್ಪಾಲಕರಿಗೆ ತಿಲದಿಂದ ಆಹುತಿ ನೀಡಿ, ಈ ಮೂಲಕ ಅಗ್ನಿಯನ್ನು ಆರಾಧಿಸಿ ದೇವ, ಬ್ರಾಹ್ಮಣರಿಗೆ ನಮಸ್ಕಾರ ಮಾಡಿ ಅವರ ಆಶೀರ್ವಾದ ಪಡೆದು, ಪ್ರಯಾಣ ಆರಂಭಿಸಬೇಕು. ದಿಕ್ಪಾಲಕರ ಮಾರ್ಗವನ್ನನುಸರಿಸಿ ವಸ್ತ್ರಗಂಧಾದಿಗಳನ್ನು ಅವರವರ ಮಂತ್ರಗಳನ್ನು ಉಚ್ಚರಿಸಿ ಅರ್ಚನೆ ಮಾಡಿ ಪ್ರಾರ್ಥಿಸಬೇಕು. ಇಂದ್ರನು ವಜ್ರಪಾಣಿಯಾಗಿ ಸುವರ್ಣದಿಂದ ಶಚೀದೇವಿಯೊಡನೆ ಐರಾವತ ಎಂಬ ಆನೆಯನ್ನು ಹತ್ತಿ ದಿವ್ಯಾಭರಣಗಳಿಂದ ಪ್ರಕಾಶಿಸುತ್ತಿರುವನು. ಅಗ್ನಿಗೆ ಏಳು ಕೈಗಳು, ಏಳು ನಾಲಿಗೆಗಳು. (ಆರು ಮುಖ) ಮೇಷವೇ ಅವನ ವಾಹನ. ಸ್ವಾಹಾದೇವಿಯು ಅಗ್ನಿಯ ಪತ್ನಿಯು. ಇವನು ಕೆಂಪುಬಣ್ಣದಿಂದ ಸ್ರುಕ್, ಸ್ರುವಗಳನ್ನೇ ಆಯುಧಗಳನ್ನಾಗಿ ಧರಿಸಿರುವನು.

ಯಮನು ದಂಡಧಾರಿಯೂ, ಕೆಂಪಾದ ಕಣ್ಣುಳ್ಳವನು ಮಹಿಷವಾಹನನು ಶ್ಯಾಮಲದೇವಿಯಪತಿ ಎನಿಸಿ ಊರ್ಧ್ವಮುಖಿಯಾಗಿ ರಕ್ತವರ್ಣದಿಂದ ಶೋಭಿಸುವನು ನಿಋತಿಯು ಖಡ್ಗ ಚರ್ಮ ಇವುಗಳನ್ನು ಧರಿಸಿ ನೀಲವರ್ಣ ವಿಶಿಷ್ಟನಾಗಿ ನರವಾಹನನೆಂದು ಪ್ರಸಿದ್ಧ ಪಡೆದು ಊರ್ಧ್ವಕೇಶ, ವಿರೂಪವಾದ ಕಣ್ಣು, ಉದ್ದವಾದ ಕತ್ತು ಇವುಗಳಿಂದ ಶೋಭಿಸುತ್ತಿರುವನು. ವರುಣನಿಗೆ ನಾಗಪಾಶಗಳೇ ಆಯುಧ ಪೀತವರ್ಣದಿಂದಲೂ ವಾಹನವಾದ ಮೊಸಳೆಯಿಂದಲೂ ಪ್ರಕಾಶಿಸುತ್ತಿರುವನು ಕಾಲಿಕಾಪತಿಯಾಗಿ ರತ್ನಾಭರಣ ಭೂಷಿತನೆನಿಸಿಕೊಂಡಿರುವನು. ವಾಯುವು ಪ್ರಾಣಗಳಲ್ಲಿ ಪ್ರಾಣರೂಪದಿಂದ ಸಂಚರಿಸತಕ್ಕವನು, ಎರಡು ಭುಜಗಳೂ, ಕೈಯಲ್ಲಿ ದಂಡವೂ ಇರುವದು. ಕೃಷ್ಣಮೃಗವೇ

ವಾಯುವಿಗೆ ವಾಹನವಾಗಿರುವದು. ಅಂಜನಾದೇವಿಯು ವಾಯುವಿಗೆ ಪತ್ನಿ. ಕುಬೇರನು ಅಶ್ವಾರೂಢನಾಗಿ ಕುಂಭವನ್ನೇ ಕೈಯಲ್ಲಿ ಹಿಡಿದು, ಹೊರಡುವನು. ಇವನು ಸುವರ್ಣಕಾಂತಿಯಿಂದ ಶೋಭಿಸುವ ದ್ವಿಬಾಹುವುಳ್ಳವನು ಚಿತ್ರಲೇಖಾ ದೇವಿಯು ಅವನ ಪತ್ನಿ. ಇವನು ಯಕ್ಷ ಮತ್ತು ಗಂಧರ್ವರಿಗೆ ರಾಜನು.

ಈಶಾನನು ಗೌರೀಪತಿಯು, ವೃಷಭಾರೂಢನಾಗಿ ಇವನು ಪಿನಾಕಪಾಣಿಯೆನಿಸಿ ಶ್ವೇತವರ್ಣದಿಂದಲೂ, ನಾಗಯಜ್ಞೋಪವೀತದಿಂದಲೂ ಮೆರೆಯುವ ಚಂದ್ರ ಶೇಖರನೇ ಈಶಾನನೆಂದು ತಿಳಿಯಬೇಕು. ಈ ರೀತಿ ಅಷ್ಟದಿಕ್ಪಾಲಕರ ಸ್ವರೂಪವನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡಬೇಕು. ರಾಜರು ಪ್ರಯಾಣ ಮಾಡುವಾಗ ತನ್ನ ಶರೀರಾದ್ಯಂತ ಜನರಿಗೆ ಕಾಣದಂತೆಯೂ ಛತ್ರಿ, ಚಾಮರ, ಧ್ವಜ, ಶಸ್ತ್ರಾಸ್ತ್ರ ಇವುಗಳಿಂದ ರಾಜನ ಸ್ಥಾನವನ್ನು ಜನರು ಊಹಿಸುವಂತೆಯೂ ಇರಬೇಕು. ತಾನು ಹೊರಟು ಸೇರುವ ಪ್ರದೇಶವು ತಾನಿರುವ ಪ್ರದೇಶಕ್ಕಿಂತ ಇನ್ನೂರು ಮಾರು (ದಂಡ) ಪ್ರಮಾಣದಲ್ಲಿರಬೇಕು. ತಾನು ಪ್ರಯಾಣ ಮಾಡುವದಾದರೆ ನಲವತ್ತಕ್ಕೆ ಮೀರದಂತೆಯೂ ಹನ್ನೆರಡು ದಂಡಕ್ಕೆ ಕಡಿಮೆ ಇಲ್ಲದಂತೆಯೂ ಪ್ರಯಾಣ ಮಾಡಬಹುದು. ಶತ್ರು ದೇಶದಲ್ಲಿ ಆರು, ಏಳು, ದಿನಗಳು ಒಟ್ಟಾಗಿ ವಾಸಮಾಡಕೂಡದು. ಐದು ದಿನಗಳಾದ ಮೇಲೆ ಮುಂದೆ ಪ್ರಯಾಣಮಾಡಲು ಮತ್ತೊಂದು ಶುಭಲಗ್ನವನ್ನು ನೋಡಬೇಕು. ಅಕಾಲದಲ್ಲಿ ಒದಗುವ ಮಿಂಚು, ಗುಡುಗು, ಸಿಡಿಲು, ಮಳೆ ಉತ್ಪಾತತ್ರಯಗಳು ಇವುಗಳನ್ನು ನೋಡಿದ ಮೇಲೆ ಏಳು ದಿನ ಸ್ಥಳಬಿಟ್ಟು ಕದಲಕೂಡದು. ಹದ್ದು,ಗರುಡ ಮತ್ತು ಬಿಳಿಯ ಹಕ್ಕಿಗಳು ಪ್ರಯಾಣಕಾಲದಲ್ಲಿ ಎಡಭಾಗಕ್ಕೆ ಹೋಗುವದು. ಹೊಂಬಣ್ಣದ ಹಕ್ಕಿಗಳೂ, ಭರದ್ವಾಜ ಪಕ್ಷಿ, ಇವು ಬಲಕ್ಕೆ ಹೋಗುವದು ಶುಭ ಸೂಚಕ. ಜಿಂಕೆಯನ್ನು ಬಿಟ್ಟು ನಾಲ್ಕು ಕಾಲಿನ ಪ್ರಾಣಿಗಳು ಎಡಕ್ಕೆ ಹೋಗುವದು ಒಳ್ಳೆಯದು. ಪ್ರಯಾಣ ಕಾಲದಲ್ಲಿ ಕೋಳಿಯಿಂದ ವೀಕ್ಷಿತವಾಗುವದೂ, ಹಂದಿ, ಮೊಲ, ಗೋಧಾ, ಸರ್ಪ ಇವುಗಳನ್ನು ಸ್ಮರಿಸಿಕೊಳ್ಳುವದು ಶುಭ. ಕಣ್ಣಿಲ್ಲದ ಪ್ರಾಣಿಗಳನ್ನೂ ಕಪಿ, ಕರಡಿ ಇವುಗಳನ್ನು ಕಂಡರೆ ಅಶುಭ.

ನವಿಲು, ಆಡು, ಮುಂಗಲಿ, ಗುಬ್ಬಚ್ಚಿ, ಪಾರಿವಾಳ ಇವು ಶುಭಕರ. ಇವುಗಳ ದರ್ಶನದಿಂದಲೇ ಪ್ರಯಾಣದ ಫಲಗಳು ಅನಾಯಾಸವಾಗಿ ಸಿಗುವವು. ಪ್ರಯಾಣ ಕಾಲದಲ್ಲಿ ಅಳುವಿನ ಶಬ್ದ ಅಶುಭ. ರೋದನಯುತವಾದ ಪ್ರಯಾಣದಲ್ಲಿ ಹೊರಟವನು ಹೆಣದಂತಾಗುವನು. ಪ್ರಯಾಣಕಾಲದಲ್ಲಿ ಜಾತಿಭ್ರಷ್ಟರು, ನಪುಂಸಕರು, ಜಟಾಧಾರಿಗಳೂ ಮದ್ಯಪಾನಿಗಳು, ಔಷಧಪಾನದಿಂದ ಮೂರ್ಛೆ ಹೊಂದಿದವರು, ತೈಲಾಭ್ಯಂಜನ ಮಾಡಲಿರುವವರು, ಮಾಂಸ, ಮೂಳೆ, ಚರ್ಮ ಇವುಗಳಲ್ಲಿ ವ್ರಣ ಹೊಂದಿದವರು, ಬೆಲ್ಲ,ಹತ್ತಿ, ಉಪ್ಪು, ಶತ್ರುಗಳ ಮಾತನಾಡುವವನೂ, ಹುಲ್ಲು, ಹಾವು, ಬಂಜೆ, ಕುಳ್ಳ, ಕಾಷಾಯವಸ್ತ್ರಧಾರಿ, ತಲೆಕೆದರಿಕೊಂಡಿರುವವನು, ಹಸಿವಿನಿಂದ ಇವ ಮನುಷ್ಯ, ದಿಗಂಬರ ಇವರನ್ನು ನೋಡಿ ಪ್ರಯಾಣ ಮಾಡಿದರೆ ಶುಭವಲ್ಲ. ಇನ್ನು ಉರಿಯುವ ಬೆಂಕಿ, ಶ್ರೇಷ್ಠವಾದ ಕುದುರೆ, ಚಾಮರ, ಪಲ್ಲಕ್ಕಿ, ಭಕ್ಷ್ಯ, ಗಂಧ, ಪುಷ್ಪ, ತಾಂಬೂಲ, ವೇಶ್ಯಾಸ್ತ್ರೀ, ಕಬ್ಬು, ಹಣ್ಣು, ಮೃಷ್ಟಾನ್ನ, ಜೇನುತುಪ್ಪ, ಮೊಸರು, ಹಸು, ಮದ್ಯ, ಮಾಂಸ, ಸುಣ್ಣ, ಬಿಳಿಯಬಟ್ಟೆ, ಶಂಖ, ಎತ್ತು, ಧ್ವಜ, ಮುತ್ತೈದೆ, ಪೂರ್ಣಕುಂಭ, ರತ್ನದಗಿಂಡಿ, ಗೋವು, ಬ್ರಾಹ್ಮಣ, ಭೇರಿ, ತಮ್ಮಟೆ, ಗಂಟೆ, ಮೀನ ಇವುಗಳ ಧ್ವನಿ, ವೇದಮಂತ್ರ ಪಠಣ, ಮಂಗಳ

ವಾದ್ಯ, ವಿವಾಹ ಇವುಗಳು ಗೋಚರವಾದರೆ ಪ್ರಯಾಣ ಹಿತಕರ ಹಾಗೂ ಲಾಭದಾಯಕವಾಗುವದು.

ಪ್ರಾರಂಭದಲ್ಲಿ ಅಪಶಕುನವೇನಾದರೂ ಒದಗಿದರೆ ಒಡನೆಯೇ ಇಷ್ಟದೇವತೆಗಳನ್ನು ಧ್ಯಾನಮಾಡಿ ಅನಂತರ ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ಇದಲ್ಲದೆ ಪ್ರಯಾಣ ಕಾಲದಲ್ಲಿ ಯಾವಾಗಲೂ ಸೀನು ಬರುವದು ಒಳ್ಳೆಯದಲ್ಲ. ಹಸುವು ಸೀನಿದರೆ ಪ್ರಯಾಣವು ನಿದಾನವಾಗುವದು. ಬಾಲಕರು, ವೃದ್ಧರು, ರೋಗಿಗಳು, ಯಾನಾರೂಢರು ಸೀತರೆ ಯಾವ ವಿಧದ ದೋಷಾದಿಗಳಿಲ್ಲ. ಶತ್ರು ರಾಜ್ಯದಲ್ಲಿ ಸಿಕ್ಕಿದ ಪರಸ್ತ್ರೀಯರನ್ನೂ, ದೇವ ಬ್ರಾಹ್ಮಣರ ಸ್ವತ್ತನ್ನು ಅಪಹರಿಸಬಾರದು. ಮತ್ತು ಅಲ್ಲಿ ಸಿಕ್ಕಿದ ಸ್ತ್ರೀಯರನ್ನೂ, ಆಯುಧರಹಿತರಾದವರನ್ನೂ ಕೊಲ್ಲಬಾರದು.

ಹೊಸಮನೆಯ ಪ್ರವೇಶವನ್ನು ಉತ್ತರಾಯಣ ಕಾಲದಲ್ಲಿಯೇ ಮಾಡಬೇಕು. ಪ್ರವೇಶದ ಹಿಂದಿನ ದಿವಸ ವಾಸ್ತುಪೂಜಾ ದಿಗ್ಬಲಿ ಮುಂತಾದವುಗಳನ್ನು ಮಾಡಬೇಕು. ಅದರಲ್ಲಿಯೂ ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ ಈ ನಾಲ್ಕು ತಿಂಗಳು ಬಹಳ ಶ್ರೇಷ್ಠವಾದವುಗಳು. ಆಶ್ವಯುಜ ಮತ್ತು ಕಾರ್ತಿಕ ಮಾಸಗಳಲ್ಲಿ ಗೃಹಪ್ರವೇಶ ಮಾಡುವದು ಮಧ್ಯಮವಾದುದು. ನವಾಗಾರ ಪ್ರವೇಶಕ್ಕೆ ಮೃಗಶಿರ, ಪುಷ್ಯ, ರೇವತಿ, ಚಿತ್ರ, ಅನುರಾಧ, ಸ್ಥಿರನಕ್ಷತ್ರಗಳು ಇವು ಪ್ರಶಸ್ತವಾದವು. ಗುರು ಶುಕ್ರಾಸ್ತಕಾಲಗಳನ್ನು ಬಿಟ್ಟು ಭಾನು ಮತ್ತು ಮಂಗಳವಾರಗಳನ್ನು ತ್ಯಜಿಸಿ, ರಿಕ್ತತಿಥಿ ಮತ್ತು ಅಶುಭತಿಥಿಗಳನ್ನು ದೂರಮಾಡಿ ಉಳಿದ ಕಾಲಗಳಲ್ಲಿ ಹೊಸಮನೆಗೆ ಹೋಗಬೇಕು. ರಾತ್ರಿಯಾಗಲಿ, ಹಗಲಾಗಲಿ ಶುಭ ಮುಹೂರ್ತವು ಸಿಕ್ಕಿದಾಗ ಹೊಸಮನೆಗೆ ಹೋಗಬೇಕು.

ಚಂದ್ರ ತಾರಾಬಲ ಕೂಡಿರಬೇಕು. ಪೂರ್ವಾಹ್ನದಲ್ಲಿ ಪಂಚಾಂಗಶುದ್ಧಿ ಇರುವ ದಿನದಲ್ಲಿ ಸ್ಥಿರಲಗ್ನ, ಸ್ಥಿರಾಂಶ, ಅಷ್ಟಮಶುದ್ಧಿ, ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹಗಳೂ ಮೂರು, ಆರು ಮತ್ತು ಹನ್ನೊಂದರಲ್ಲಿ ಪಾಪಗ್ರಹಗಳು ಇರುವಿಕೆ ಚಂದ್ರನು ಲಗ್ನ, ಹನ್ನೆರಡು, ಎಂಟು, ಆರು ಈ ರಾಶಿಗಳಲ್ಲಿ ಇಲ್ಲದಿರುವಿಕೆ ಇವುಗಳನ್ನು ನೋಡಿಕೊಂಡು ಯಜಮಾನನ ಜನ್ಮಲಗ್ನ ಅಥವಾ ಅದರ ಉಪಚಯರಾಶಿಗಳಲ್ಲಿ ಹೊಸಮನೆಯನ್ನು ಪ್ರವೇಶಿಸಬೇಕು. ಇದರಿಂದ ಮನೆಯಲ್ಲಿ ಸಕಲ ಸನ್ಮಂಗಳಗಳೂ ಉಂಟಾಗುವವು. ಇದಕ್ಕೆ ವಿರುದ್ಧವಾಗಿರುವ ಲಗ್ನದಲ್ಲಿ ಪ್ರವೇಶಿಸಿರುವದರಿಂದ ದಾರಿದ್ರ್ಯವೇ ಮೊದಲಾದ ದುಷ್ಫಲಗಳು ಸಂಭವಿಸುತ್ತವೆ.

ಇನ್ನು ಗೃಹಪ್ರವೇಶಕ್ಕೆ ಮೊದಲು ಹೊಸಮನೆಯನ್ನು ಅಲಂಕರಿಸಿ ಅಲ್ಲಿ ಮಂಗಳವಾದ್ಯ ನಡೆಯುತ್ತಿರುವಂತೆ ಏರ್ಪಡಿಸಬೇಕು. ಮನೆಗೆ ಹೋಗುವಾಗ ಸೂರ್ಯನು ಎಡಭಾಗಕ್ಕೆ ಬರುವಂತೆ ಮಾಡಿಕೊಂಡು ಪೂರ್ಣ ಕುಂಭದೊಂದಿಗೆ ಪ್ರವೇಶಿಸಬೇಕು. ಮಳೆಯ ನಕ್ಷತ್ರ ಹುಟ್ಟುವಾಗ ಜಲರಾಶಿಗತವಾಗಿದ್ದು ಅಥವಾ ಕೇಂದ್ರರಾಶಿಯಲ್ಲಿದ್ದು ಶುಕ್ಲಪಕ್ಷದಲ್ಲಿ ಶುಭಗ್ರಹ ದೃಷ್ಟವಾಗಿದ್ದರೆ ಈ ಮಳೆಯು ಅತಿಶಯವಾಗಿ ವರ್ಷಿಸುವದು. ಪಾಪಗ್ರಹ ವೀಕ್ಷಿತವಾದ ಶುಕ್ರ ಸಂಬಂಧಿಯಾಗಿ ಹೀಗೆ ಹೇಳಲಾದ ಗುಣಗಳಿಂದ ಕೂಡಿದ್ದರೆ ಅಲ್ಪವೃಷ್ಟಿಯಾಗುತ್ತದೆ. ವರ್ಷಋತುವಿನಲ್ಲಿ ಚಂದ್ರನು ಶುಕ್ರನಿರುವ ಸ್ಥಾನಕ್ಕಿಂತ ಏಳು ರಾಶಿಗಳೊಳಗೆ ಇದ್ದು ಶುಭಗ್ರಹ ವೀಕ್ಷಿತನಾಗಿದ್ದರೂ ಅಥವಾ ಶನಿಯ ಸ್ಥಾನಕ್ಕಿಂತ ತ್ರಿಕೋಣ ಅಥವಾ ಸಪ್ತಮ ರಾಶಿಯಲ್ಲಿದ್ದರೂ ವೀಕ್ಷಿತನಾಗಿದ್ದರೂ ಅಥವಾ ಶನಿಯ

ಸ್ಥಾನಕ್ಕಿಂತ ತ್ರಿಕೋಣ ಅಥವಾ ಸಪ್ತಮ ರಾಶಿಯಲ್ಲಿದ್ದರೂ ಮಳೆಯು ಬಹಳ ಬರುವದು. ಶುಕ್ರನು ಬುಧ ಸಮೀಪಸ್ಥನಾಗಿದ್ದರೆ ಹುಟ್ಟಿದ ಮಳೆಯು ತತ್ಕಾಲದಲ್ಲಿ ಮಾತ್ರ ವರ್ಷಿಸಿ, ಆಮೇಲೆ ಶೂನ್ಯವಾಗುವದು. ಆದರೆ ಶುಕ್ರ, ಬುಧರ, ಮಧ್ಯೆ ರವಿಯು ಇರುವದಾದರೆ ವೃಷ್ಟಿಯೇ ನಿಂತು ಹೋದೀತು. ಶುಕ್ರನು ವರ್ಷಋತುವಿನಲ್ಲಿ ಮಘಾದಿ ಐದು ನಕ್ಷತ್ರಗಳಲ್ಲಿಯೂ ಸ್ವಾತಿ, ವಿಶಾಖಾ, ಅನುರಾಧಾ ಈ ನಕ್ಷತ್ರಗಳಲ್ಲಿ ಸಂಚರಿಸಿದರೆ ಆಗ ಮಳೆಯು ವಿಪರೀತವಾಗಿ ಬರುವದು. ಇತರ ನಕ್ಷತ್ರಗಳಲ್ಲಿರುವದಾದರೆ ವೃಷ್ಟಿಯು ನಿಂತುಹೋಗುವದು. ಸೂರ್ಯನ ಮುಂದೆ, ಹಿಂದೆ ಮತ್ತು ಅತ್ಯಂತ ಸಮೀಪದಲ್ಲಿ ಇತರ ಗ್ರಹಗಳಿದ್ದರೆ ವೃಷ್ಟಿಯು ಸಮೃದ್ಧಿಯಾಗಿ ಬೀಳುವದು. ಆದರೆ ಆ ಗ್ರಹಗಳು ವಕ್ರವಾಗಿದ್ದರೆ ಬರುವ ಮಳೆಯೂ ನಿಂತುಹೋಗುವದು. ಶುಕ್ರನು ದಕ್ಷಿಣಾಯನದಲ್ಲಿ ಸೂರ್ಯನಿಗಿಂತ ವಾಮಭಾಗದ ಕ್ರಾಂತಿಯಲ್ಲಿರುವವನಾದರೆ ವೃಷ್ಟಿಪ್ರದನಾಗುವನು. ಭಾನುವಿನ ಉದಯಾಸ್ತ ಕಾಲಗಳಲ್ಲಿ ಆರಿದ್ರಾ, ನಕ್ಷತ್ರವನ್ನು ಪ್ರವೇಶಿಸಿದರೆ ಅತಿವೃಷ್ಟಿ ಖಂಡಿತ. ಸಂಧ್ಯಾಕಾಲದಲ್ಲಿ ಪ್ರವೇಶಿಸಿದರೆ ಸಸ್ಯವೃದ್ಧಿ, ಸಂಪತ್ತಿನ ಏಳ್ಗೆ ಆಗುವದು. ಅರ್ಧ ರಾತ್ರಿಯಲ್ಲಿ ಪ್ರವೇಶ ಮಾಡಿದರೆ ಅಲ್ಪವೃಷ್ಟಿಯಾಗಿ ಬೆಳೆಗಳ ಬೆಲೆಗಳು ಗಗನಕ್ಕೇರುವವು. ದಿನ ಮಧ್ಯದಲ್ಲಿ ಪ್ರವೇಶ ಮಾಡಿದರೆ ಸಸ್ಯ ಸಮೃದ್ಧಿ ಹಾಗೂ ಸುಭಿಕ್ಷವಾಗವದು. ವರ್ಷಪ್ರವೇಶ ಕಾಲದಲ್ಲಿ ಚಂದ್ರ, ಗುರು, ಬುಧ, ಶುಕ್ರರು ಕೇಂದ್ರಗಳಲ್ಲಿದ್ದರೆ ಆ ವರ್ಷ ಪ್ರಜೆಗಳಿಗೆ ಯಾವ ಭೀತಿಗಳು ಇಲ್ಲ. ಪೂರ್ವಾಷಾಢ ನಕ್ಷತ್ರದಲ್ಲಿ ಸಂಚರಿಸುವ ಸೂರ್ಯನಿಗೆ ಮೇಘಪರಿಘ ಉಂಟಾದರೆ ಆರಿದ್ರಾ ಮಳೆಯಿಂದ ಹಿಡಿದು ಮೂಲಾಮಳೆ ಪೂರ್ತಿಯಾಗಿ ನಿತ್ಯವೂ ಮಳೆ ಸುರಿಯುವದು. ರೇವತಿ ಮಳೆಯು ಚೆನ್ನಾಗಿ ಮಳೆಗರೆದರೆ ಅಲ್ಲಿಂದ ಮುಂದೆ ಹತ್ತು ಮಳೆಗಳು ವೃಷ್ಟಿಪ್ರದಗಳಾಗುವದಿಲ್ಲ. ಸಿಂಹಮಾಸದಲ್ಲಿ ಗುಡುಗು ಬಂದರೂ ಕರ್ಕಾಟಕದಲ್ಲಿ ಗುಡುಗದೇ ಇದ್ದರೂ ಆ ಮಾಸಗಳಲ್ಲಿ ಮಳೆಯೇ ಬರುವದಿಲ್ಲ. ಆದರೆ ಕನ್ಯಾ ಸಂಕ್ರಮಣ ದಿನ ಗರ್ಜನೆಯಾದರೆ ಅತ್ಯಂತ ಬಿರುಸಿನ ಮಳೆ ಬರುವದು ಖಂಡಿತ. ಉತ್ತರಾಭಾದ್ರೆ ಮೊದಲ ಬೆಳೆಯನ್ನು, ರೇವತಿಯು ಕೊನೆಯ ಬೆಳೆಯನ್ನು ಭರಣಿಯು ಸಕಲ ಬೆಳೆಗಳನ್ನು ಅಭಿವೃದ್ಧಿ ಮಾಡುವವು. ಅಶ್ವಿನಿಯು ಸಕಲ ಬೆಳೆಗಳನ್ನು ನಾಶಮಾಡುವದು.

ಗುರುವಿನ ಸ್ಥಾನಕ್ಕಿಂತ ಸಪ್ತಮ ಸ್ಥಾನದಲ್ಲಿರುವ ಶುಕ್ರನು ಪ್ರತ್ಯಗ್ಗ್ರನದಿಂದ ಕೂಡಿದ್ದರೆ ಅಂದರೆ ಅನುಲೋಮಗತಿಯಲ್ಲಿದ್ದರೆ ಎಲ್ಲ ಋತುವಿನಲ್ಲಿಯೂ ಅತಿವೃಷ್ಟಿ ಸಂಭವಿಸುವದು. ದುರ್ಬಲನಾಗಿರುವ ಶುಕ್ರನು ಚಂದ್ರನಿರುವ ನಕ್ಷತ್ರದಿಂದ ಏಳು ನಕ್ಷತ್ರಗಳೊಳಗಿದ್ದರೆ ಮಳೆಗಾಲದಲ್ಲಿ ಮಾತ್ರ ಅತಿವೃಷ್ಟಿಯು ಸಂಭವಿಸುವದು, ಉತ್ತರಾ ಮಳೆಯಲ್ಲಿ ಚಂದ್ರನಿಗೆ ಪರಿವೇಷ ಸಂಭವಿಸಿದರೆ ಮಿಂಚು ಗುಡುಗು ಮಂಡೂಕಾದಿಗಳು (ಕಪ್ಪೆ) ಮಾತ್ರ ಹೆಚ್ಚಿ ವೃಷ್ಟಿ ಶೂನ್ಯವಾಗುವದು. ಅಲ್ಲದೆ ಪಶ್ಚಿಮ ದಿಕ್ಕಿಗೆ ವಾಲಿದ ಮೇಘರಾಜಿಯು ಕೇವಲ ಆರ್ಭಟದಿಂದಲೇ ಮುಗಿದು ಹೋಗುವದು. ದಕ್ಷಿಣಕ್ಕೆ ಜೋತುಬಿದ್ದಿರುವ ಮೇಘದಿಂದ ಕೂಡಲೇ ವೃಷ್ಟಿಯಾಗುವದು.

ಬೆಕ್ಕುಗಳು ಲೋಹಯುತವಾದ ಭೂಮಿಯನ್ನು ಉಗುರುಗಳಿಂದ ಕೆದರುವದರಿಂದ ರಸ್ತೆಯಲ್ಲಿರುವ ಅರಿಯದ ಮಕ್ಕಳು ಸೇತುವೆ ಕಟ್ಟಿ ಆಟವಾಡಿದರೂ ಮಳೆ ಬರುವ ಸಂಭವ ತೋರುವದು. ಅಲ್ಲದೆ ಇರುವೆಗಳ ಸಾಲು ಭಿನ್ನ ಭಿನ್ನವಾಗಿ ಕಂಡಾಗ, ಮಿಂಚುಹುಳುಗಳು

ಅಧಿಕವಾಗಿ ಹಾರಾಡುವಾಗ, ಸರ್ಪಗಳು ಮರವನ್ನು ಏರಿದರೆ, ಮಳೆ ಬರುವ ಸೂಚನೆ ಉಂಟು. ಸೂರ್ಯನಾಗಲಿ, ಚಂದ್ರನಾಗಲಿ, ಉದಯಾಸ್ತಗಳಲ್ಲಿ ಜೇನುತುಪ್ಪದ ಬಣ್ಣಗಳಲ್ಲಿ ಕಂಡುಬಂದರೂ ಮಳೆಬರುವ ಮುನ್ಸೂಚನೆಯು.

ಇನ್ನು ಕೂರ್ಮಾಕಾರದಲ್ಲಿ ಪೂರ್ವಾಭಿಮುಖವಾಗಿ ಇರುವಂತೆ ಕೂರ್ಮ ಚಕ್ರವನ್ನು ಬರೆದು ಅದರ ಅವಯವಗಳಲ್ಲಿ ಒಂಭತ್ತು ಭಾಗವನ್ನು ಮಾಡಿದರೆ ಆ ಭಾಗಗಳೇ ನವಖಂಡಗಳೆನಿಸುತ್ತವೆ. ಅಂದರೆ ಪ್ರಾಙ್ಮುಖವಾದ ಭೂಭಾಗವನ್ನು ಅದರ ಅವಯವಾನುಸಾರವಾದ ದಿಕ್ಕುಗಳಲ್ಲಿ ಒಂಭತ್ತು ಖಂಡಗಳಾಗಿ ವಿಭಾಗಿಸಬಹುದು. ಅದರ ನಾಭಿಮಂಡಲವೇ ಪಾಂಚಾಲದೇಶ. ಮುಂಭಾಗದ ಮುಖ ಮಂಡಲವೇ ಮಗಧ ಲಾಟದೇಶಗಳು. ಬಾಹುಮಂಡಲದಲ್ಲಿ ಬರುವದೇ ಸ್ತ್ರೀ ಕಳಿಂಗ ಮತ್ತು ಕಿರಾತದೇಶಗಳು. ಪಾರ್ಶ್ವಮಂಡಲಕ್ಕೆ ಅವಂತಿ ಮತ್ತು ದ್ರಾವಿಡ ಹಾಗೂ ಭಿಲ್ಲ ದೇಶಗಳು. ಪಾದಮಂಡಲದಲ್ಲಿ ಗೌಡ, ಕೊಂಕಣ, ಸಾಲ್ವ, ಆಂಧ್ರ, ಪೌಂಡ್ರ, ಈ ದೇಶಗಳು ಅಡಗಿರುತ್ತವೆ. ಪುಚ್ಛಮಂಡಲದಲ್ಲಿ ಸಿಂಧು, ಕಾಶೀ, ಮಹಾರಾಷ್ಟ್ರ, ಸೌರಾಷ್ಟ್ರ ಈ ದೇಶಗಳು ಇವೆ, ಪಾದಮಂಡಲದಲ್ಲಿ ಪುಲಿಂದ, ಚೀನ, ಯವನ, ಗುರ್ಜರ ದೇಶಾದಿಗಳಿವೆ. ಅದರ ಪಾರ್ಶ್ವಮಂಡಲದಲ್ಲಿ ಕುರು, ಕಾಶ್ಮೀರ, ಮಾದ್ರೇಯ, ಮತ್ಸ್ಯ ದೇಶಗಳಿವೆ. ಅಂಗ, ವಂಗ, ಬಾಹ್ಲಿಕ, ಕಾಂಭೋಜ ದೇಶಗಳೇ ಪಾಣಿಮಂಡಲದಲ್ಲಿವೆ. ಈ ಒಂಭತ್ತು ಭಾಗಗಳಿಗೂ ಕೃತ್ತಿಕಾದಿಯಾದ ಇಪ್ಪತ್ತೇಳು ನಕ್ಷತ್ರಗಳನ್ನು ಮೂರು ಮೂರರಂತೆ ಹಂಚಿದರೆ ಯಾವ ಯಾವ ಭಾಗದಲ್ಲಿ ಶುಭನಕ್ಷತ್ರಗಳು ಸೇರುವವೋ ಆ ದೇಶವು ಸಾಧು ದೇಶವೆಂದೂ ತಿಳಿಯಬೇಕು. ಶುಭದೇಶಗಳಲ್ಲಿ ಸರ್ವದಾ ದೇವತೆಗಳು ಸಂಚರಿಸುತ್ತಾ, ನರ್ತನಮಾಡುತ್ತ ಕಾಂತಿಯನ್ನು ಬೀರುತ್ತ ಶಬ್ದಗಳಿಂದ ಗೋಚರಿಸುತ್ತ ಜನರನ್ನು ಸುಖಸಂತೋಷ ತೃಪ್ತಿಕರವಾಗಿ ಅನುಗ್ರಹಿಸುತ್ತ ಇರುತ್ತಾರೆ. ಒಟ್ಟಿನಲ್ಲಿ ಆ ದೇಶವು ಸ್ವರ್ಗದ ಸೀಮೆಯಂತೆ ಸುಖ, ಸಮೃದ್ಧಿಗಳಿಂದ ತುಂಬಿರುತ್ತದೆ.

ಆದರೆ ದುಷ್ಟ ದೇಶಗಳಲ್ಲಿ ಅಗ್ನಿ, ಧೂಮ, ರಕ್ತ, ಹಾಲು, ನೀರು ಇವುಗಳು ಅತಿಯಾಗಿ ಸುರಿಯುತ್ತಿರುತ್ತವೆ. ಎಲ್ಲರೂ ಅಧೋಮುಖಗಾಮಿಗಳಾಗಿಯೂ ಇರುವರು. ಚಿತ್ರ ಚಂಡಾಲರಾಗಿ ನರಕಸದೃಶ ಜೀವನ ಮಾಡುವರು. ಅಲ್ಲಿ ಹಗಲಿನಲ್ಲಿ ನಕ್ಷತ್ರಗಳು ಕಾಣುವವು. ಕಾಷ್ಠ, ತೃಣ, ರಕ್ತ, ಇವು ಭೂಮಿಗೆ ಬೀಳುವದೂ, ಉಲ್ಕಾಪಾತಗಳಾಗುವದೂ ಉತ್ಪಾತವೆನಿಸುವವು. ಹಗಲಿನಲ್ಲಿಯೇ ಸರ್ವತ್ರ ಧೂಮ ಹರಡುವದು, ರಾತ್ರಿಯಲ್ಲಿ ಭೂಕಂಪಗಳಾಗುವದು, ಅಗ್ನಿಯಿಲ್ಲದೆ, ಕೆಂಡಗಳು, ಕಾಣುವದು. ಸೌದೆ ಇಲ್ಲದೆ ಉರಿ ಏಳುವದು. ರಾತ್ರಿಯಲ್ಲಿ ಕಾಮನ ಬಿಲ್ಲು ಕಾಣುವದು, ಬಿಳಿಯ ಕಾಗೆಯ ಮೇಲೆ ಕಪ್ಪೆ ಕೂತಂತೆ ಕಾಣುವದೂ ಉತ್ಪಾತ ಸೂಚಕಗಳಾಗಿವೆ.

ಇದಲ್ಲದೆ ಗೋವು, ಆನೆ, ಕುದುರೆ, ಒಂಟೆ ಇವುಗಳ ದೇಹದಲ್ಲಿ ಬೊಬ್ಬೆ ಗಳೇಳುವದು. ಎರಡು ಮತ್ತು ಮೂರು ತಲೆಗಳುಳ್ಳ ಪ್ರಾಣಿ ಜನಿಸುವದು. ಪ್ರಾತಃಕಾಲದಲ್ಲಿ ಸೂರ್ಯಮಂಡಲವು ನಾಲ್ಕಾರು, ಭಾಗಗಳಾಗಿ ಕಂಡು ಬರುವದೂ, ನರಿಗಳು ಗ್ರಾಮದಲ್ಲಿ ಬಂದು ವಾಸಿಸುವದೂ, ಧೂಮಕೇತುಗಳು ಗೋಚರಿಸುವದೂ, ದೇಶಕ್ಕೆ ಹಾನಿಯನ್ನು ಸೂಚಿಸುವವು. ರಾತ್ರಿಯಲ್ಲಿ ಕಾಗೆಗಳ ಗುಂಪೂ. ಹಗಲಿನಲ್ಲಿ ಪಾರಿವಾಳಗಳ ಗುಂಪೂ, ಆ ಕಾಲದಲ್ಲಿ ಮರಗಳು ಹೂತು ಫಲ ಬಿಡುವದೂ ಇವೆಲ್ಲ ಅನಿಷ್ಟ

ಸೂಚಕಗಳಾಗಿವೆ. ಅದರ ನಿವಾರಣೆ ಕಾರ್ಯವನ್ನು ಶಾಂತಿಕರ್ಮಗಳಿಂದ ಜರುಗಿಸ ಬಹುದು. ಇದೇ ರೀತಿ ಸಂಭವಿಸುವ ಕೆಲವು ಮಹೋತ್ಪಾತಗಳು ಅನೇಕ ಸ್ಥಾನಗಳನ್ನು ನಾಶಮಾಡುತ್ತವೆ. ದೇಶಕ್ಕೆ ದೇಶವೇ ಅರಾಜಕವಾಗಿ ಕೊನೆಗೆ ಪಾಳಾಗುವದೂ ಉಂಟು.

ಹಲವಾರು ದುರ್ನಿಮಿತ್ತಗಳು ಜನರಿಗೆ ಮೃತ್ಯುಪ್ರದಗಳೆನಿಸುತ್ತವೆ. ಕೆಲವು ಶತ್ರುಗಳಿಗೆ ಭಯಜನಕವಾಗಿವೆ. ಮತ್ತೆ ಕೆಲವು ದುರ್ನಿಮಿತ್ತಗಳು ಹಾಗೂ ಉತ್ಪಾತಗಳಿಂದ ದೇಶಕ್ಕೆ ಭಯ, ಕೀರ್ತಿ, ಮೃತ್ಯು, ನಾಶ, ಸುಖ, ದುಃಖ, ಐಶ್ವರ್ಯ, ಧನಹಾನಿ, ಮಧುವಿನ ವೃದ್ಧಿ, ಹಾವುಗಳ ಭಯ ಮುಂತಾದ ಫಲಗಳು ಕಾಣಬರುತ್ತವೆ. ಇಂತಹ ಉತ್ಪಾತ ಸಂದರ್ಭದಲ್ಲಿ ವಿದ್ವಾಂಸರು, ದೈವಜ್ಞರು ಕಾಲೋಚಿತವಾದ ಹಾಗೂ ಕಲ್ಪೋಕ್ತವಾದ ಶಾಂತ್ಯಾದಿ ಧರ್ಮಕಾರ್ಯಗಳನ್ನು ಜರುಗಿಸುವದು ಅವಶ್ಯ. ಇದರಿಂದ ದೇಶಕ್ಕೆ ಸಕಲ ಸನ್ಮಂಗಳ, ಸುಭಿಕ್ಷಗಳುಂಟಾಗಿ ಜನಸಾಮಾನ್ಯರು ನೆಮ್ಮದಿಯಿಂದ ಸುಖ ಜೀವನ ನಡೆಸಲು ಸಾಧ್ಯವಾಗುವದು. ನಾರದನೆ ಇಲ್ಲಿಯವರೆಗೆ ಜ್ಯೋತಿಷ್ಯ ವಿಷಯವಾಗಿ ವಿವರವಾಗಿ ಹೇಳಿದೆ. ಇನ್ನು ಮುಂದೆ ಛಂದಃಶಾಸ್ತ್ರ ಕುರಿತು ಕೆಲವು ಉಪಯುಕ್ತ ವಿಚಾರವನ್ನು ನಿನಗೆ ಹೇಳುವೆನು.

ನಾರದ ಮಹಾಪುರಾಣದಲ್ಲಿ ಐವತ್ತಾರನೆಯ ಅಧ್ಯಾಯ ಮುಗಿದುದು



## ಸಂಕ್ಷಿಪ್ತ ಛಂದೋವರ್ಣನ

**ಅಧ್ಯಾಯ - ೫೭**

**॥ ಸನಂದನ ಉವಾಚ ॥**

**ವೈದಿಕಂ ಲೌಕಿಕಂ ಚಾಪಿ ಛಂದೋ ದ್ವಿವಿಧಮುಚ್ಯತೇ।**
**ಮಾತ್ರವರ್ಣವಿಭೇಧೇನ ತಚ್ಚಾಪಿ ದ್ವಿವಿಧಂ ಪುನಃ**
**ಮಯೌ ರಸೌ ತಜೌ ಭನೌ ಗುರುರ್ಲಘುರಪಿ ದ್ವಿಜ ।**
**ಕಾರಣಂ ಛಂದಸಿ ಪ್ರೋಕ್ತಾಶ್ಛಂದಃಶಾಸ್ತ್ರವಿಶಾರದೈಃ ॥**

**ಸನಂದನ:-** ಛಂದಸ್ಸು ವೈದಿಕ ಮತ್ತು ಲೌಕಿಕವೆಂಬುದಾಗಿ ಎರಡು ವಿಧ ಹೇಳಲ್ಪಟ್ಟಿದೆ. ಆ ಎರಡು ಛಂದಸ್ಸು ಮಾತ್ರಾಛಂದಸ್ಸು, ವರ್ಣಛಂದಸ್ಸು, ಎಂಬುದಾಗಿ ಪುನಃ ಎರಡು ಪ್ರಭೇದಗಳನ್ನು ಒಳಗೊಂಡಿದೆ. ನಾರದನೆ, ಮಗಣ, ಯಗಣ, ರಗಣ ಸಗಣ, ತಗಣ, ಜಗಣ, ಭಗಣ, ನಗಣ, ಗುರು, ಲಘು ಇವುಗಳೇ ಛಂದಸ್ಸಿಗೆ ಕಾರಣೀಭೂತವೆನಿಸಿವೆ. ಎಂದು ಛಂದಸ್ಸು ಶಾಸ್ತ್ರವನ್ನರಿತವರು ಹೇಳಿರುತ್ತಾರೆ.

ಇನ್ನು ವರ್ಣಛಂದಸ್ಸಿನಲ್ಲಿ ಮೂರು ಅಕ್ಷರಗಳಿಗೆ ಒಂದು ಗಣವೆಂದು ಹೆಸರು. ಅಕ್ಷರಗಳು ಗುರು ಲಘು ಎಂಬುದಾಗಿ ಎರಡು ಪ್ರಕಾರಗಳಲ್ಲಿವೆ. ಮೂರು ಗುರ್ವಕ್ಷರ ಉಳ್ಳದ್ದು ಮಗಣವೆಂದೂ, ಮೊದಲನೆಯ ಅಕ್ಷರವು ಲಘುವಾಗಿದ್ದರೆ ಯಗಣವೆಂದು, ಮಧ್ಯದಲ್ಲಿ ಲಘು ವರ್ಣವಿದ್ದಾಗ ರಗಣವೆಂದೂ, ಅಂತ್ಯದಲ್ಲಿ ಗುರುವಿದ್ದರೆ ಸಗಣವೆಂದು ಗುರುತಿಸಲ್ಪಡುತ್ತದೆ. ಕೊನೆಗೆ ಲಘುವಿದ್ದರೆ ತಗಣವೆಂದೂ ಪ್ರಸಿದ್ಧಿ ಪಡೆದಿದೆ. ಮಧ್ಯದಲ್ಲಿ ಗುರುವಿದ್ದಲ್ಲಿ ಜಗಣವೆಂದು ಎಣಿಸಲ್ಪಡುತ್ತದೆ. ಭಗಣವು ಆದಿಯಲ್ಲಿ ಗುರು

ವಾಗಿರುವದು. ಮೂರು ಲಘುಗಳಿದ್ದರೆ ಅದಕ್ಕೆ ನಗಣವೆಂದು ಕರೆಯುತ್ತಾರೆ. ಈ ರೀತಿಯಾಗಿ ವರ್ಣಾನುಸಾರವಾಗಿ ಗಣಗಳನ್ನು ಗುರುತಿಸಿ ಅದಕ್ಕೆ ಪ್ರತ್ಯೇಕ ಹೆಸರಿನಿಂದ ಕರೆಯುವದು ವಾಡಿಕೆ. ಆದರೆ ಆರ್ಯಾದಿವೃತ್ತಿಗಳಲ್ಲಿ ಐದು ಗಣಗಳು ಹೇಳಲ್ಪಟ್ಟಿವೆ. ಇವು ನಾಲ್ಕು ನಾಲ್ಕು ಲಘುಗಳಿಂದ ಕೂಡಿವೆ. ಇವುಗಳಲ್ಲಿ ಎರಡು ಗುರ್ವಕ್ಷರವಿರುವದು ಪ್ರಮುಖ ಲಕ್ಷಣ. ಹಾಗೂ ಮೊದಲನೆಯದಾಗಿ ಎಣಿಸಲ್ಪಡುತ್ತದೆ. ಎರಡು ಲಘುಗಳಿದ್ದು ಕೊನೆಗೆ ಗುರು ಒಂದೇ ಇದ್ದರೆ ಅದು ಎರಡನೆಯದು. ಆರಂಭದಲ್ಲಿ ಲಘು ಹಾಗೂ ಕೊನೆಗೆ ಲಘು ಮತ್ತು ಮಧ್ಯದಲ್ಲಿ ಗುರು ಬಂದರೆ ಮೂರನೆಯದು. ಅದರಂತೆ ಆರಂಭಕ್ಕೆ ಗುರು ಕೊನೆಗೆ ಎರಡು ಲಘುಗಳು ಬಂದಾಗ ನಾಲ್ಕನೆಯ ಗಣವಾಗುವದು. ನಾಲ್ಕು ಲಘುಗಳಿಂದ ಕೂಡಿದ ಅಕ್ಷರ ಸಮೂಹವು ಐದನೇಯ ಗಣವೆಂದು ಎಣಿಸಲ್ಪಡುತ್ತದೆ.

ಸಂಯುಕ್ತಾಕ್ಷರ, ವಿಸರ್ಗ, ಅನುಸ್ವಾರ, ಇವುಗಳ ಹಿಂದಿನ ಅಕ್ಷರವೂ, ದೀರ್ಘಾಕ್ಷರವೂ ಸಹ ಗುರು ಎನಿಸುವದು. ಉಳಿದ ವರ್ಣಗಳು ಲಘುಗಳೆಂದು ಎಣಿಸಲ್ಪಡುತ್ತವೆ. ಪದ್ಯದ ನಾಲ್ಕನೆಯ ಒಂದು ಭಾಗವು ಪಾದವೆಂದೆನಿಸಿಕೊಳ್ಳುತ್ತದೆ. ಪದ್ಯದಲ್ಲಿ ವಿರಾಮ ಸ್ಥಾನಕ್ಕೆ 'ಯತಿ' ಎಂದು ಕರೆಯುತ್ತಾರೆ.

ಪದ್ಯವು ಸಮವೃತ್ತ, ಅರ್ಧಸಮವೃತ್ತ, ವಿಷಮವೃತ್ತ ಎಂಬುದಾಗಿ ಮೂರು ತರಹದ್ದಾಗಿದೆ. ಪದ್ಯದ ನಾಲ್ಕು ಪಾದಗಳಲ್ಲಿಯೂ ಸಮವಾಗಿ ವರ್ಣಗಣ ನಿಯಮವಿದ್ದರೆ ಅದಕ್ಕೆ ಸಮವೃತ್ತವೆಂದು ಕರೆಯುತ್ತಾರೆ. ಒಂದು ಮೂರನೆಯ ಪಾದಗಳಲ್ಲಿ ಸಮವಾಗಿಯೂ, ಎರಡು ನಾಲ್ಕನೆಯ ಪಾದಗಳಲ್ಲಿ ಸಮವಾಗಿಯೂ, ಗಣನಿಯಮವಿದ್ದರೆ ಅದು ಅರ್ಧ ಸಮವೃತ್ತವು. ನಾಲ್ಕು ಪಾದಗಳಲ್ಲಿಯೂ ಬೇರೆ ಬೇರೆ ಲಕ್ಷಣವಿದ್ದರೆ ಅದು ವಿಷಯ ವೃತ್ತವಾಗಿರುತ್ತದೆ. ಒಂದು ಅಕ್ಷರವುಳ್ಳ ಪಾದದಿಂದ ಆರಂಭಿಸಿ ಒಂದೊಂದೇ ಅಕ್ಷರವನ್ನು ಹೆಚ್ಚಿಸುತ್ತ ಇಪ್ಪತ್ತಾರು ಅಕ್ಷರದವರೆಗೂ ಆಗುವ ಪಾದಗಳಲ್ಲಿ ಬೇರೆ ಬೇರೆ ಛಂದಸ್ಸು ಉಂಟಾಗುತ್ತದೆ. ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿಗಿಂತ ಹೆಚ್ಚಾದ ಅಕ್ಷರಗಳಿದ್ದರೆ ಅದನ್ನು ಚಂಡವೃಷ್ಟಿ ಮುಂತಾದ ದಂಡಕಗಳೆಂದು ಕರೆಯುತ್ತಾರೆ. ಮೂರು ಅಥವಾ ಆರು ಪಾದಗಳಿಂದ ಕೂಡಿರುವದು ಗಾಥಾ ಎನಿಸುವದು ಕ್ರಮವಾಗಿ ಇವುಗಳ ಹೆಸರು ಹೇಳುತ್ತೇನೆ ಕೇಳು.

ಸಾಮಾನ್ಯವಾಗಿ ಗಾಥಾಗಳಲ್ಲಿ ಉಕ್ತಾ, ಅತ್ಯುಕ್ತಾ, ಮಧ್ಯ, ಪ್ರತಿಷ್ಠಾ, ಸುಪ್ರತಿಷ್ಠಾ, ಗಾಯತ್ರೀ, ಉಷ್ಣಿಕ್ ಅನುಷ್ಟುಪ್, ಪಂಕ್ತಿ, ಬೃಹತೀ, ತ್ರಿಷ್ಟುಪ್, ಜಗತೀ ಅತಿಜಗತೀ, ಶಕ್ವರೀ, ಅತಿಶಕ್ವರೀ, ಅಷ್ಟೀ, ಅತ್ಯಷ್ಟಿ, ಧೃತಿ, ವಿಧೃತಿ, ಕೃತಿ, ಪ್ರಕೃತಿ, ಆಕೃತಿ, ಸಂಕೃತಿ, ವಿಕೃತಿ, ಉತ್ಕೃತಿ ಹೀಗೆ ಏಕಾಕ್ಷರಾದಿ ಛಂದಸ್ಸುಗಳ ಹೆಸರುಗಳನ್ನು ಕೊಡಲಾಗಿದೆ. ಇವುಗಳ ಭೇದವು ಪ್ರಸ್ತಾರದನ್ವಯ ಉಲ್ಲೇಖಿಸಿದಾಗ ತಿಳಿದುಬರುತ್ತದೆ.

ಪ್ರಸ್ತಾರ ಬರೆಯುವಾಗ ಎಷ್ಟು ಅಕ್ಷರ ವೃತ್ತವೋ ಅಷ್ಟನ್ನೂ ಗುರುವಾಗಿ ಎಣಿಸಿ ಮೊದಲು ಅವುಗಳನ್ನು ಸಾಲಾಗಿ ಬರೆಯಬೇಕು. ಆಮೇಲೆ ಕೆಳಗಿನ ಸಾಲಿನಲ್ಲಿಯ ಮೊದಲನೆಯ ಅಕ್ಷರದ (ಗುರ್ವಕ್ಷರ) ಕೆಳಗೆ ಒಂದು ಲಘುವನ್ನೂ ನಂತರ ಮೇಲೆ ಗುರುವನ್ನೂ ಬರೆಯಬೇಕು. ಬಳಿಕ ಮೂರು ಅಕ್ಷರದ ಪಾದವೆಂದೆಣಿಸಿದರೆ ಒಂದನೆಯದು ಲಘು ಉಳಿದವುಗಳು ಗುರುಗಳಾಗುವವು. ಇದೇ ಪ್ರಕಾರ ಮೂರು ಲಘು ಅಕ್ಷರ

ಬರುವವರೆಗೂ ರೇಖಾವಿನ್ಯಾಸ (ಪ್ರಸ್ತಾರ) ಮಾಡಬೇಕು. ಈ ರೇಖಾ ವಿನ್ಯಾಸಕ್ಕೆ ಪರ್ಯಾಯವಾಗಿ ಪ್ರಸ್ತಾರ ಉಲ್ಲೇಖನವೆಂದು ಕರೆಯುವದು ಪರಂಪರೆಯಾಗಿದೆ. ಗುರುವನ್ನು! ಅಥವಾ (-) ಚಿಹ್ನೆಯಿಂದಲೂ ಲಘುವನ್ನು(ಟ) ಚಿಹ್ನೆಯಿಂದಲೂ ಛಂದಃ ಶಾಸ್ತ್ರಜ್ಞರು ತೋರಿಸುತ್ತಾರೆ.

ಈಗ ಮೇಲಿನ ವಿಷಯವನ್ನು ಮನವರಿಕೆಮಾಡಿಕೊಡಲು ಈ ಕೆಳಗಿನ ಉದಾಹರಣೆ ಕೊಡಬಹುದು. ಮೂರು ಅಕ್ಷರ ಪಾದವುಳ್ಳ ಮಧ್ಯ ಛಂದಸ್ಸಿನ ಪ್ರಭೇದವನ್ನು ತಿಳಿಸುವದಕ್ಕಾಗಿ ಪ್ರಸ್ತಾರವನ್ನು ಈ ರೀತಿ ಬರೆಯಬಹುದಾಗಿದೆ.

| | | |
|---|---|---|
| ಪ್ರಥಮಭೇದ | U U U | ಮಗಣ |
| ದ್ವಿತೀಯ ಭೇದ | - U U | ಯಗಣ |
| ತೃತೀಯ ಭೇದ | U - U | ರಗಣ |
| ಚತುರ್ಥಭೇದ | - - U | ಸಗಣ |
| ಪಂಚಮಭೇದ | U U - | ತಗಣ |
| ಷಷ್ಠಮಭೇದ | - U - | ಜಗಣ |
| ಸಪ್ತಮಭೇದ | U - - | ಭಗಣ |
| ಅಷ್ಟಮಭೇದ | - - - | ನಗಣ |

ಈ ರೀತಿಯಾಗಿ ಪ್ರತಿಯೊಂದು ವೃತ್ತದಲ್ಲಿ ಪ್ರಸ್ತಾರವನ್ನು ಹಾಕಿದರೆ ಇಪ್ಪತ್ತಾರು ಛಂದಸ್ಸಿನವರೆಗು ಅವುಗಳ ಪ್ರಭೇದ ಲಕ್ಷಣಗಳನ್ನು ಸರಿಯಾಗಿ ಕಂಡುಕೊಳ್ಳಬಹುದು. ಅಲ್ಲದೆ ಪ್ರಸ್ತಾರ ಉಲ್ಲೇಖದಿಂದ ಸುಲಭವಾಗಿ ವೃತ್ತವನ್ನೂ ತಿಳಿಯಬಹುದು. ಆಮೇಲೆ ಉದ್ದಿಷ್ಟವನ್ನು ಹೇಳಿದೆ. ಉದ್ದಿಷ್ಟವೆಂದರೆ ಈ ಛಂದಸ್ಸಿನಲ್ಲಿ ಈ ವೃತ್ತವು ಎಷ್ಟನೆಯದು ಎಂದು ಯಾವುದನ್ನು ಉದ್ದೇಶಿಸಿ ಕೇಳಲ್ಪಡುವದೋ ಅದು ಎಂದು ಭಾವ, ಅದರ ಪ್ರಸ್ತಾರಕ್ರಮ ಯಾವ ವೃತ್ತವನ್ನು ಹೇಳುವನೋ ಅವುಗಳ ಗುರು ಲಘುಗಳನ್ನು ಸಾಲಾಗಿ ಬರೆದುಕೊಳ್ಳಬೇಕು. ಆಮೇಲೆ ಆದಿಯಿಂದ ಗುರುವಿನ ಮೇಲಾಗಲಿ ಲಘುವಿನ ಮೇಲಾಗಲಿ ಒಂದನ್ನು ಬರೆದು ಆಮೇಲೆ ಎರಡನೆ ವರ್ಣದ ಮೇಲೆ ದ್ವಿಗುಣಿತವಾಗಿ ಬರೆಯಬೇಕು. ಹೀಗೆ ದ್ವಿಗುಣಿತವಾಗಿ ಬರೆಯುತ್ತ ಹೋಗಬೇಕು. ಆಮೇಲೆ ಲಘುವಿನ ಮೇಲಿರುವ ಸಂಖ್ಯೆಗಳನ್ನೆಲ್ಲ ಕೂಡಿಸಿ ಬಂದ ಮೊತ್ತಕ್ಕೆ ಒಂದನ್ನು ಕೂಡಿಸಿದರೆ ಅದು ಉದ್ದಿಷ್ಟವಾಗುವದು. ಉದಾಹರಣೆ - ಮಧ್ಯಛಂದಸ್ಸಿನಲ್ಲಿ ಜಗಣವು ಎಷ್ಟನೆಯ ವೃತ್ತವೆಂದರೆ ಆಗ ಅದನ್ನು ವಿನ್ಯಾಸಮಾಡಿಕೊಳ್ಳಬೇಕು. -1ಒ2-3 ॥ ಇಲ್ಲಿ ಲಘುವಿನ ಮೇಲಿರುವ ಸಂಖ್ಯೆಯ ಮೊತ್ತವು ಐದು ಇದಕ್ಕೆ ಒಂದನ್ನು (೬) ಆರು ಆಗುವದು. ಆಗ ಆರನೆಯ ವೃತ್ತವೆಂದು ತಿಳಿಯಬೇಕು.

ಈಗ ಲಗಕ್ರಿಯೆಯನ್ನು ವಿವರಿಸಿದೆ:- ಲಗಕ್ರಿಯೆಯೆಂದರೆ ಆಯಾಯ ಛಂದಸ್ಸಿನ ಪ್ರಭೇದಗಳಲ್ಲಿ ಒಂದೊಂದು ಲಘು ಗುರುಗಳುಳ್ಳ ವೃತ್ತಗಳು ಎಷ್ಟು? ಎರಡು, ಲಘು, ಗುರುಗಳು ಇರುವ ವೃತ್ತಗಳೆಷ್ಟು? ಎಂದು ತಿಳಿಯುವ ಕ್ರಮ. ಅದು ಹೇಗೆಂದರೆ -

ಉದ್ದಿಷ್ಟವಾದ ಛಂದಸ್ಸು ಎಷ್ಟು ಅಕ್ಷರಗಳುಳ್ಳದ್ದು ಎಂದು ಮೊದಲು ನಿಶ್ಚಯಿಸಿಕೊಂಡಿರಬೇಕು. ಆಮೇಲೆ ಅವುಗಳ ಜ್ಞಾಪಕಕ್ಕಾಗಿ ಅವುಗಳಿಗೆ ಒಂದು, ಎರಡು, ಮೂರು ಎಂದು ಕ್ರಮವಾಗಿ ಸಂಖ್ಯೆಯನ್ನಿಡಬೇಕು.

ಹೀಗೆ ಸಂಖ್ಯೆಯನ್ನು ನಿಯಮಿಸಿದ ಮೇಲೆ ಒಂದೊಂದು ಸಂಖ್ಯೆಯನ್ನೇ ಮೇಲೆ ಮೇಲೆ ಬರೆಯಬೇಕು. ಅಡ್ಡವಾಗಿ ಬರೆಯಬಾರದು. ಹೀಗೆ ಸಂಪೂರ್ಣ ಸಂಖ್ಯೆಯನ್ನು ಮೇಲೆ ಮೇಲೆ ಬರೆದ ಮೇಲೆ ಅವುಗಳ ಮೇಲೆ ಒಂದು ಸಂಖ್ಯೆಯನ್ನು ಹೆಚ್ಚಾಗಿ ಬರೆಯಬೇಕು. ಆಮೇಲೆ ಅತ್ಯಂತವಾಗಿ ಕೆಳಗೆ ಬರೆದ ಮೊದಲನೆಯ ಒಂದು ಸಂಖ್ಯೆಯನ್ನು ಮೇಲಿರುವ ಎರಡನೆಯ ಸಂಖ್ಯೆಯೊಡನೆ ಕೂಡಿಸಿ ಎರಡನೆಯ ಸಂಖ್ಯೆಯ ಪಕ್ಕಕ್ಕೆ ದಕ್ಷಿಣದಲ್ಲಿ ಬರೆಯಬೇಕು. ಆಮೇಲೆ ಮೊತ್ತವಾದ ಬಲಗಡೆ ಬರೆದ ಮೂರನೆಯ ಸಂಖ್ಯೆಗೆ ಕೆಳಗಿನ ಒಂದನ್ನು ಕೂಡಿಸಿ ಬಂದ ನಾಲ್ಕನ್ನು ಮೂರರ ಪಕ್ಕದಲ್ಲಿ ಬಲಕ್ಕೆ ಬರೆಯಬೇಕು. ಎಷ್ಟು ಸಂಖ್ಯೆಯುಳ್ಳ ವೃತ್ತವೋ ಅಷ್ಟು ಬರುವವರೆಗೂ ಒಂದನ್ನು ಕೂಡಿಸುತ್ತಾ ಬರೆಯಬೇಕು. ಆಗ ಎರಡು ಬರೆದ ಪಂಕ್ತಿಯಲ್ಲಿ ಆರು ಅಕ್ಷರದ ಪಾದಛಂದಸ್ಸಿನಲ್ಲಿ ಎರಡು ಮೂರು ನಾಲ್ಕು ಐದು ಆರು ಆಗುತ್ತದೆ. ಆಮೇಲೆ ಕ್ರಮವಾಗಿ ಮೇಲೆ ಮೇಲೆ ಬರೆದ ಮೂರನೆ ಅಂಕಿಗೆ ಕೆಳಗೆ ಎರಡನೆ ಸಂಖ್ಯೆಯ ಬಲಗಡೆ ಬರೆದ ಮೂರನ್ನು ಕೂಡಿಸಿ ಮೂರರ ಪಕ್ಕಕ್ಕೆ ಬರೆಯಬೇಕು. ಹೀಗೆ ಕೊನೆಯ ಆರನ್ನು ಮಾತ್ರ ಬಿಟ್ಟು ಕೋಣವನ್ನು ಹೊಂದಿರುವ ಸಂಖ್ಯೆಯನ್ನೇ ಕೂಡಿಸಬೇಕು. ಆಗ ಮೂರನೆಯ ಸಾಲಿನಲ್ಲಿ ಮೂರು ಆರು ಹತ್ತು ಹದಿನೈದು ಆಗುತ್ತದೆ. ಆಮೇಲೆ ಮೇಲಿನ ನಾಲ್ಕನೆಯ ಸಂಖ್ಯೆಗೆ ಮೂರನೆಯ ಸಾಲಿನ ಕೋಣದಲ್ಲಿರುವ ಆರನ್ನು ಕೂಡಿಸಬೇಕು. ಬಂದ ಹತ್ತು ಸಂಖ್ಯೆಯನ್ನು ಅದರ ಬಲಕ್ಕೆ ಬರೆಯಬೇಕು. ಆ ಮೇಲೆ ಅದಕ್ಕೆ ಕೆಳಗೆ ಕೋಣದಲ್ಲಿರುವ ಹತ್ತನ್ನು ಕೂಡಿಸಿದರೆ ಇಪ್ಪತ್ತು ಆಗುತ್ತದೆ. ಅದನ್ನು ಬಲದಲ್ಲಿ ಬರೆಯಬೇಕು. ಮುಂದಿನ ಹದಿನೈದು ಉಪಾಂತ್ಯವಾದುದರಿಂದ ಅದನ್ನು ಇಲ್ಲವೆಂದು ಭಾವಿಸಬೇಕು. ಎಲ್ಲಾ ವೃತ್ತದಲ್ಲಿಯೂ ಉಪಾಂತ್ಯವನ್ನು ತ್ಯಜಿಸಿ ಕೋಣದಲ್ಲಿರುವ ಕೆಳಗಿನ ಸಂಖ್ಯೆಗಳನ್ನು ಕೂಡಿಸಿ ಬಲಗಡೆ ಬರೆಯಬೇಕು. ಪ್ರಕೃತ ಐದನೆಯ ಸಂಖ್ಯೆಗೆ ಕೋಣದಲ್ಲಿರುವ ಹತ್ತರೊಡನೆ ಸೇರಿಸುವುದರಿಂದ ಹದಿನೈದು ಸಂಖ್ಯೆಯಾಗುತ್ತದೆ. ಇದನ್ನು ಅದರ ದಕ್ಷಿಣ ಪಾರ್ಶ್ವದಲ್ಲಿ ಬರೆಯಬೇಕು. ಇಪ್ಪತ್ತು ಕೆಳಗಿನ ಕೋಣದಲ್ಲಿದ್ದರೂ ಉಪಾಂತ್ಯವಾಗುವದರಿಂದ ತ್ಯಜಿಸಬೇಕು. ಮೇಲಿನ ಆರನೆಯ ಸ್ಥಾನಕ್ಕೆ ಕೆಳಗಿನ ಕೋಣದಲ್ಲಿ ಹದಿನೈದು ಸಂಖ್ಯೆ ಇದ್ದರೂ ಅದು ಉಪಾಂತ್ಯ ವಾದುದರಿಂದ ಇಲ್ಲವೆಂದು ಭಾವ, ಹೀಗೆ ಬರೆದ ಕೊನೆಯ ಸಂಖ್ಯೆಯನ್ನು ನೋಡಿ ಗುರು ಲಘುಗಳನ್ನು ನಿಶ್ಚಯಿಸಬೇಕು. ಕೆಳಗಿನ ಒಂದು ಸಂಖ್ಯೆಯನ್ನೂ ಸರ್ವ ಲಘು ಸಂಖ್ಯೆಯುಳ್ಳದ್ದನ್ನೂ ಮೇಲಿನ ಸೇರಿಸಿಕೊಂಡ ಒಂದು ಸಂಖ್ಯೆಯನ್ನು ಸರ್ವಗುರುವುಳ್ಳ ಒಂದು ವೃತ್ತವೆಂದೂ ಊಹಿಸಬೇಕು. ಎರಡನೆಯ ಸಾಲಿನಲ್ಲಿ ಒಂದು ಸಂಖ್ಯೆಯನ್ನು ಒಂದು ಗುರುವುಳ್ಳ ೬ ಆರು ವೃತ್ತಗಳೆಂದೂ ಮೂರನೆಯ ಸಾಲಿನಲ್ಲಿ ಬಂದ ಸಂಖ್ಯೆಯನ್ನು ಎರಡು ಗುರುವುಳ್ಳಗಳನ್ನಾಗಿಯೂ ಊಹಿಸಬೇಕು. ಹೀಗೆಯೇ ಒಂದೊಂದನ್ನು ಹೆಚ್ಚಿಸಬೇಕು. ಉದಾಹರಣೆಗಾಗಿ ಗಾಯತ್ರೀ ಛಂದಸ್ಸು ಸ್ವೀಕರಿಸಲ್ಪಟ್ಟಿದೆ.

| | | | | |
|---|---|---|---|---|
| ೧ | | | | |
| ೬ | | | | |
| ೫ | ೧೫ | | | |
| ೪ | ೧೦ | ೨೦ | | |
| ೩ | ೬ | ೧೦ | ೧೫ | |
| ೨ | ೩ | ೪ | ೫ | ೬ |
| ೧ | | | | |

ಆರು ಗುರುವಿರುವದು ಒಂದು
ಐದು ಗುರುವಿರುವದು ಆರು
ನಾಲ್ಕು ಗುರುವಿರುವದು ಹದಿನೈದು
ಮೂರು ಗುರುವಿರುವದು ಇಪ್ಪತ್ತು
ಎರಡು ಗುರುವಿರುವದು ಹದಿನೈದು
ಒಂದು ಗುರುವಿರುವದು ಆರು ವೃತ್ತ
ಸರ್ವಲಘುವುಳ್ಳದ್ದು ಒಂದು ವೃತ್ತ

ಮುನಿಶ್ರೇಷ್ಠನೇ! ಈ ರೀತಿಯಾಗಿ ಸುಲಭೋಪಾಯಗಳು ಸ್ವಲ್ಪವೇ ನಿರ್ದಿಷ್ಟಗಳಾಗಿವೆ. ಛಂದಸ್ಸಿನ ಲಕ್ಷಣಗಳೂ ಕಡಿಮೆಯಾಗಿ ನಿರ್ದಿಷ್ಟವಾಗಿವೆ. ಹಿಂದೆ ಹೇಳಿದ ಪ್ರಕಾರವನ್ನನುಸರಿಸಿ ಹೇಳುವದಾದರೆ ಇವುಗಳಿಗೆ ಪಾರವೇ ಇಲ್ಲ.

ನಾರದ ಮಹಾಪುರಾಣದಲ್ಲಿ ಐವತ್ತೇಳನೆಯ ಅಧ್ಯಾಯ ಮುಗಿದುದು

—o—

## ಶುಕಚರಿತಂ

## ಅಧ್ಯಾಯ - ೫೮

**ನಾರದರು ಹೇಳುತ್ತಾರೆ:-** ಸನಂದನರೇ, ಸಕಲ ವೇದವೇದಾಂಗಗಳ ವಿಚಾರವನ್ನು ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ನಿಮ್ಮಿಂದ ಕೇಳಿದ್ದಾಯಿತು. "ಈಗ ಶುಕ್ರಾಚಾರ್ಯರ ಜನನ ವೃತ್ತಾಂತವನ್ನು ನನಗೆ ತಾವು ವಿಸ್ತಾರವಾಗಿ ಹೇಳಬೇಕು." ಎಂದು ಕೇಳಿದಾಗ ಸನಂದನರು ಶುಕವೃತ್ತಾಂತವನ್ನು ಹೇಳಲಾರಂಭಿಸಿದರು. ಹಿಂದೆ ಒಂದಾನೊಂದು ಕಾಲದಲ್ಲಿ ಮಹಾದೇವನು ಕರ್ಣಿಕಾರ ವನಗಳಿಂದ ಕೂಡಿದ ಮೇರುಶಿಖರದಲ್ಲಿ ಭೂತಗಣಗಳೊಡನೆ ವಿಹರಿಸುತ್ತಿದ್ದನು. ಪಾರ್ವತಿದೇವಿಯೂ ಮಹಾದೇವನ ಜೊತೆಗಿದ್ದಳು. ಆಗ ಅಲ್ಲಿಯೇ ಕೃಷ್ಣದ್ವೈಪಾಯನ ಎಂದು ಪ್ರಸಿದ್ಧರಾದ ವೇದವ್ಯಾಸ ಮಹರ್ಷಿಗಳು ತಪಸ್ಸು ಮಾಡುತ್ತಿದ್ದರು. ಅಗ್ನಿ, ಭೂಮಿ, ಜಲ, ವಾಯು, ಆಕಾಶಗಳಲ್ಲೆಲ್ಲ ವ್ಯಾಪಿಸುವ ಉತ್ತಮನಾದ ಮಗನನ್ನು ಪಡೆಯಬೇಕೆಂದು ನೂರು ವರುಷ ವಾಯುವನ್ನು ಮಾತ್ರ ಸೇವಿಸುತ್ತ ತಪಸ್ಸು ಮಾಡುತ್ತಿದ್ದಾಗ, ಮಹೇಶ್ವರನು ವ್ಯಾಸರ ಇಷ್ಟಾರ್ಥವನ್ನು ನೆರವೇರಿಸಬೇಕೆಂದು ಮನಸ್ಸು ಮಾಡಿದನು. ಮಹೇಶ್ವರನು ಪ್ರತ್ಯಕ್ಷವಾಗಿ ನಗುತ್ತ "ವ್ಯಾಸಮುನಿಯೇ, ನಿನಗೆ ಬೆಂಕಿ, ವಾಯು, ಭೂಮಿ, ಜಲ ಆಕಾಶಗಳಂತೆ ಪರಿಶುದ್ಧನಾದ ಮಗನು ಹುಟ್ಟುವನು" ಎಂದು ವರವನ್ನು ಕೊಟ್ಟು ಅಂತರ್ಧಾನ ಹೊಂದಿದನು.

ಈ ರೀತಿಯಾಗಿ ವರವನ್ನು ಪಡೆದು ಅನಂತರ ಸತ್ಯವತೀ ಕುಮಾರರಾದ ವ್ಯಾಸರು ಅಗ್ನಿಯನ್ನು ಉತ್ಪಾದಿಸಬೇಕೆಂಬ ಅಪೇಕ್ಷೆಯಿಂದ ಎರಡು ಅರಣಿಗಳನ್ನು ತೆಗೆದುಕೊಂಡು ಕಡೆದರು. ಆಗ ಅಲ್ಲಿಯೇ ಗಿಣಿಯ ರೂಪವನ್ನು ತಾಳಿದ್ದ ಘೃತಾಚಿ ಎಂಬ ಅಪ್ಸರಾ ಸ್ತ್ರೀಯು ವ್ಯಾಸರ ಕಣ್ಣಿಗೆ ಬಿದ್ದಳು. ಅವಳನ್ನು ನೋಡಿದ ಕೂಡಲೆ ವ್ಯಾಸರಿಗೆ ಮನೋವಿಕಾರ

ಉಂಟಾಗಿ ಅವರ ತೇಜಸ್ಸು ಅರಣಿಯಲ್ಲಿ ಬಿದ್ದಿತು. ಅದನ್ನೇ ಕಡೆದಾಗ ಅಲ್ಲಿಯೇ ಮಹಾತಪಸ್ವಿಯಾದ ಶುಕಮುನಿಯು ಹುಟ್ಟಿದನು. ಈ ರೀತಿಯಾಗಿ ಆಶ್ಚರ್ಯಕರವಾದ ರೀತಿಯಿಂದ ಶುಕಮುನಿಗಳ ಜನ್ಮವುಂಟಾಯಿತು. ಆಗ ಪಾವನೆಯಾದ ಗಂಗೆಯು ಬಂದು ಶುಕನಿಗೆ ಸ್ನಾನ ಮಾಡಿಸಿದಳು. ಆಕಾಶದಿಂದ ಶುಕನಿಗಾಗಿ ಕೃಷ್ಣಾಜಿನವು ಬಿದ್ದಿತು. ಗಂಧರ್ವಗಾನ, ಅಪ್ಸರಾಸ್ತ್ರೀಯರ ನರ್ತನಗಳಾದವು. ಪುಷ್ಪವೃಷ್ಟಿಯಾಯಿತು. ಮಹಾದೇವನು ಸತೀ ದೇವಿಯೊಡನೆ ಬಂದು ಆ ಮುನಿಪುತ್ರನಿಗೆ ಸ್ವತಃ ಉಪನಯನ ಮಾಡಿದನು. ದೇವೇಂದ್ರನು ಅಲ್ಲಿಗೆ ಬಂದು ವಟುವಿಗೆ ಕಮಂಡಲುವನ್ನು ಕೊಟ್ಟನು. ದೇವತೆಗಳು ವಸ್ತ್ರಗಳನ್ನು ಕೊಟ್ಟರು. ಸಾವಿರಾರು ಹಂಸಗಳು, ನೀರುಹಕ್ಕಿಗಳು, ಗಿಳಿ ಮುಂತಾದವುಗಳು ಪ್ರದಕ್ಷಿಣೆಯಾಗಿ ಸುತ್ತುತ್ತಿದ್ದವು. ಹೀಗೆ ಬ್ರಹ್ಮಚರ್ಯವ್ರತಧಾರಿಯಾದ ಶುಕಮಹಾಮುನಿಯು ಅಲ್ಲಿಯೇ ವಾಸಮಾಡಿದನು. ತನ್ನ ತಂದೆಯಾದ ವೇದವ್ಯಾಸರಂತೆ ಆ ಶುಕಮುನಿಗೂ ಹುಟ್ಟಿದಕೂಡಲೆ ಸಕಲ ವೇದ ವೇದಾಂಗಗಳೂ ಸನ್ನಿಹಿತವಾದವು. ವೇದವ್ಯಾಸರು ಬೃಹಸ್ಪತ್ಯಾಚಾರ್ಯರಲ್ಲಿ ಶುಕಮುನಿಗೆ ಅಧ್ಯಾಪನ ಮಾಡಿಸಿದರು. ಅಲ್ಲಿ ವೇದ ವೇದಾಂಗ, ರಹಸ್ಯ ವಿದ್ಯೆಗಳನ್ನೆಲ್ಲ ಓದಿ ಶುಕಮುನಿಯು ಗುರುದಕ್ಷಿಣೆಯನ್ನು ಕೊಟ್ಟು ಮರಳಿದನು. ಅನಂತರ ಪರಮ ವಿರಕ್ತನಾದ ಶುಕಮುನಿಯು ಕಠಿಣವಾದ ತಪಸ್ಸನ್ನು ಮಾಡತೊಡಗಿದನು. ಲೋಕದ ಕಡೆ ಮುಖ ತಿರುಗಿಸಿ ಆ ಶುಕಮುನಿಯು ಮೋಕ್ಷಧರ್ಮವನ್ನೇ ವಿಚಾರ ಮಾಡುತ್ತ ತನ್ನ ತಂದೆಯ ಬಳಿಗೆ ಬಂದು ಮನಸ್ಸಿಗೆ ಶಾಂತಿಯನ್ನು ಕೊಡುವ ಉಪದೇಶವನ್ನು ಮಾಡೆಂದು ಕೇಳಿದಾಗ ವೇದವ್ಯಾಸರು ಸಾಂಖ್ಯಯೋಗ ಶಾಸ್ತ್ರಗಳನ್ನು ಸಮಗ್ರವಾಗಿ ಉಪದೇಶಿಸಿದರು. ಅನಂತರ ''ಮೋಕ್ಷಶಾಸ್ತ್ರ ಪಾರಂಗತನಾದ ಮಿಥಿಲಾ ದೇಶದ ರಾಜನಾದ ಜನಕನಿಂದ ಮೋಕ್ಷ ಮಾರ್ಗವನ್ನು ಸಂಪೂರ್ಣವಾಗಿ ತಿಳಿ!'' ಎಂದು ಮಗನಿಗೆ ಹೇಳಿದರು. ಶುಕನು ಜನಕನ ಬಳಿಗೆ ಹೊರಟಾಗ ವ್ಯಾಸರು ಶುಕನನ್ನು ಕುರಿತು ''ನೀನು ಯೋಗ ಸಾಮರ್ಥ್ಯವನ್ನು ತೋರಿಸುತ್ತಾ ಆಕಾಶ ಮಾರ್ಗದಿಂದ ಜನಕನ ಬಳಿಗೆ ಹೋಗಬೇಡ. ಮನುಷ್ಯ ಮಾರ್ಗದಿಂದಲೇ ಮಿಥಿಲಾ ಪಟ್ಟಣಕ್ಕೆ ಹೋಗು. ವಿಷಯಗಳನ್ನು ಕಣ್ತಪ್ಪಿಯೂ ನೋಡಬೇಡ. ಜನಕಮಹಾರಾಜನು ನಮ್ಮ ಗೃಹಸ್ಥನೇ ಆದರೂ ಅವನಲ್ಲಿ ಅಹಂಕಾರ ತೋರಿಸಬೇಡ. ಆ ರಾಜನ ಮನೆಯಲ್ಲಿಯೇ ವಾಸ ಮಾಡಿ ನಿನ್ನ ಸಂಶಯಗಳನ್ನೆಲ್ಲ ಪರಿಹರಿಸಿಕೋ'' ಎಂದು ಹೇಳಿದರು. ತಂದೆಯ ಉಪದೇಶದಂತೆಯೇ ಮಹಾಯೋಗೀಶ್ವರನಾದ ಶುಕನು ಕಾಲುನಡಿಗೆಯಿಂದಲೇ ಅನೇಕ ದೇಶಗಳನ್ನು ದಾಟಿ ವಿದೇಹ ದೇಶಕ್ಕೆ ಬಂದು ಜನಕ ಮಹಾರಾಜನ ಅರಮನೆಯ ಬಳಿಗೆ ಬಂದನು. ಅಲ್ಲಿ ದ್ವಾರಪಾಲಕರು ತಡೆದಾಗ ಶುಕಮುನಿಯು ಹಸಿವು ಬಾಯಾರಿಕೆಗಳಿಲ್ಲದೇ ಬಿಸಿಲಿನಲ್ಲಿಯೇ ನಿಂತು ಭಗವಂತನನ್ನು ಧ್ಯಾನಿಸುತ್ತಿದ್ದನು. ಮಧ್ಯಾಹ್ನದ ಸೂರ್ಯನಂತೆ ಹೊಳೆಯುತ್ತ ನಿಂತಿದ್ದ ಶುಕಮುನಿಯನ್ನು ನೋಡಿ ದ್ವಾರಪಾಲಕರಲ್ಲಿ ಒಬ್ಬನು ಅವನಿಗೆ ಕೈಮುಗಿದು ನಮಸ್ಕರಿಸಿ ಅರಮನೆಯ ಎರಡನೆಯ ಪ್ರಾಕಾರದವರೆಗೆ ಕರೆದುಕೊಂಡು ಹೋಗಿ ಬಿಟ್ಟನು. ಅಲ್ಲಿ ಒಂದು ಉದ್ಯಾನವನವನ್ನು ತೋರಿಸಿ ಅಲ್ಲಿ ಯೋಗ್ಯಾಸನದಲ್ಲಿ ಕುಳ್ಳಿರಿಸಿ ರಾಜನ ಬಳಿಗೆ ಹೋಗಿ ಶುಕಾಚಾರ್ಯರ ವೃತ್ತಾಂತವನ್ನೆಲ್ಲ ವಿಜ್ಞಾಪಿಸಿದನು. ಜನಕ ಮಹಾರಾಜನು ಶುಕಮುನಿಯ ಭಾವವನ್ನು ತಿಳಿಯುವುದಕ್ಕಾಗಿ ಅವನ ಸೇವೆಗೆಂದು ಐವತ್ತಕ್ಕಿಂತ ಹೆಚ್ಚು ಯುವತಿಯರನ್ನು

ಕಳುಹಿಸಿದನು. ಮನೋಹರ ಕೇಶ, ಒಳ್ಳೆಯ ಮೈಕಟ್ಟಿನಿಂದ ಕೂಡಿದ ಬಂಗಾರದ ಬಣ್ಣದ ಆ ಯುವತಿಯರು ಸರಸಲ್ಲಾಪಮಾಡುತ್ತ ಶುಕಮುನಿಗೆ ಪಾದ್ಯ, ಅರ್ಘ್ಯ, ಮುಂತಾದವುಗಳನ್ನು ಅರ್ಪಿಸಿ, ಒಳ್ಳೆಯ ಅನ್ನದಿಂದ ಅವನಿಗೆ ತೃಪ್ತಿಯನ್ನು ಉಂಟು ಮಾಡಿದರು. ಅನಂತರ ಅವನಿಗೆ ಪಟ್ಟಣದ ಒಂದೊಂದೇ ಉದ್ಯಾನವನ್ನು ತೋರಿಸಿ, ಆಟವಾಡುತ್ತಾ ನಗುತ್ತಾ, ಸಂಗೀತ ಗಾನ ಮಾಡುತ್ತಾ ಶುಕಮುನಿಯನ್ನು ಸುತ್ತುವರಿದುಕೊಂಡೇ ಇದ್ದರು. ಆದರೆ ಶುಕನು ಧ್ಯಾನಯೋಗದಲ್ಲಿ ಆಸಕ್ತನಾಗಿದ್ದು, ಆ ಸೇವೆಗಳಿಂದ ಸಂತೋಷ ಪಡಲೂ ಇಲ್ಲ, ಕೋಪವನ್ನೂ ತೋರಲಿಲ್ಲ. ಸಂಧ್ಯಾಕಾಲದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ಸಂಧ್ಯಾವಂದನೆ ಮಾಡಿ ಪವಿತ್ರವಾದ ಆಸನದಲ್ಲಿ ಕುಳಿತು ಮೋಕ್ಷೋಪಾಯವನ್ನೇ ಚಿಂತಿಸುತ್ತಿದ್ದನು. ಮಧ್ಯರಾತ್ರಿಯವರೆಗೆ ಧ್ಯಾನದಲ್ಲಿಯೇ ನಿರತನಾಗಿದ್ದು ಆ ಮೇಲೆ ಅಲ್ಲಿಯೇ ನಿದ್ರಿಸಿದನು. ಪ್ರಾತಃಕಾಲದಲ್ಲಿ ಎದ್ದು ಶೌಚಸ್ನಾನಾದಿಗಳನ್ನು ಪೂರೈಸಿ ಸುಂದರ ಸ್ತ್ರೀಪರಿವಾರಯುಕ್ತನಾಗಿದ್ದರೂ ಧ್ಯಾನವನ್ನೇ ಮಾಡುತ್ತಿದ್ದನು. ಹೀಗೆ ಹಗಲು - ರಾತ್ರಿಗಳನ್ನು ಕಳೆದನು.

ನಾರದ ಮಹಾಪುರಾಣದಲ್ಲಿ ಐವತ್ತೆಂಟನೇಯ ಅಧ್ಯಾಯ ಮುಗಿದುದು

—○—

## ಮೋಕ್ಷಜ್ಞಾನ

ಅಧ್ಯಾಯ - ೫೯

**ಸನಂದರು ಹೇಳುತ್ತಾರೆ:-** ನಾರದನೇ, ಅನಂತರ ಜನಕಮಹಾರಾಜನು, ಮಂತ್ರಿಗಳು, ಅಂತಃಪುರಸ್ತ್ರೀಯರು ಮತ್ತು ಪುರೋಹಿತರನ್ನು ಮುಂದಿಟ್ಟುಕೊಂಡು ಜಲಕುಂಭವನ್ನು ತಾನೇ ತಲೆಯಮೇಲೆ ಹೊತ್ತುಕೊಂಡು ಶುಕಾಚಾರ್ಯರು ಇರುವಲ್ಲಿಗೆ ಬಂದನು. ಶುಕಾಚಾರ್ಯರಿಗೆ ಆಸನವನ್ನು ಕೊಟ್ಟು ಕುಳ್ಳಿರಿಸಿ ಪಾದ್ಯ, ಅರ್ಘ್ಯಗಳನ್ನು ಕೊಟ್ಟು ಗೋವನ್ನು ಸಮರ್ಪಿಸಿದನು. ಕುಶಲ ಪ್ರಶ್ನೆಯ ಅನಂತರ ಜನಕನು ನೆಲದಲ್ಲಿಯೇ ಕುಳಿತು ಶುಕನು ತನ್ನಲ್ಲಿಗೆ ಬರಲು ಕಾರಣವೇನೆಂದು ಕೇಳಿದನು. ಶುಕನು ನನ್ನ ತಂದೆಯು ಜನಕಮಹಾರಾಜನಲ್ಲಿಗೆ ಹೋಗಿ ಮೋಕ್ಷಧರ್ಮ ತಿಳಿದುಕೊ ಎಂದು ಅಪ್ಪಣೆ ಮಾಡಿದ್ದಾನೆ. ಆದ್ದರಿಂದ ನಾನು ಇಲ್ಲಿಗೆ ಬಂದಿದ್ದೇನೆ. ನನಗೆ ವಿಸ್ತಾರವಾಗಿ ಮೋಕ್ಷದ ವಿಷಯವನ್ನು ತಿಳಿಸಬೇಕು'' ಎಂದನು.

ಜನಕನ ಉಪದೇಶ ಪ್ರಾರಂಭವಾಯಿತು. ''ಬ್ರಾಹ್ಮಣನು ಉಪನಯನವಾದ ಮೇಲೆ ಬ್ರಹ್ಮಚರ್ಯಾನುಷ್ಠಾನ ಮಾಡುತ್ತ ಗುರುಕುಲದಲ್ಲಿ ವೇದಾಧ್ಯಯನ ಮಾಡಬೇಕು. ಅನಂತರ ಗುರುದಕ್ಷಿಣೆ ಕೊಟ್ಟು ಸಮಾವರ್ತನ ಮಾಡಿಕೊಂಡು ಮದುವೆ ಮಾಡಿಕೊಳ್ಳಬೇಕು. ಮಕ್ಕಳು ಮೊಮ್ಮಕ್ಕಳನ್ನು ನೋಡಿ ಅನಂತರ ವಾನಪ್ರಸ್ಥಾಶ್ರಮವನ್ನು ಅವಲಂಬಿಸಬೇಕು. ಅನಂತರ ಅಗ್ನಿಯನ್ನು ತನ್ನಲ್ಲಿಯೇ ಆರೋಪಿಸಕೊಂಡು ಸನ್ಯಾಸಿಯಾಗಬೇಕು.'' ಶುಕನು ಕೇಳಿದನು - ''ಹೃದಯದಲ್ಲಿ ಜ್ಞಾನ, ವಿಜ್ಞಾನಗಳು ದೃಢವಾದಾಗ ಎಲ್ಲ ಆಶ್ರಮಗಳಲ್ಲಿಯೂ ಕ್ರಮವಾಗಿ ಇದ್ದು ಕೊನೆಗೆ ಸನ್ಯಾಸಿಯಾಗಬೇಕೇ''? ಜನಕನೆಂದನು - ''ಸಂಸಾರ ಸಮುದ್ರದಾಟುವದಕ್ಕೆ ಜ್ಞಾನವೇ ದೋಣಿ. ಗುರುವೇ ದಾಟಿಸುವವನು. ಆದ್ದರಿಂದ ಗುರುಕುಲವಾಸ ಅವಶ್ಯ. ಪರಿಶುದ್ಧಾತ್ಮನು ಬ್ರಹ್ಮಚರ್ಯಾಶ್ರಮದಲ್ಲಿಯೇ ಮೋಕ್ಷವನ್ನು ಪಡೆಯಬಹುದು. ಸಕಲ ಪ್ರಾಣಿಗಳಲ್ಲಿಯೂ ಪರಮಾತ್ಮ

ನಿದ್ದಾನೆ. ಎಲ್ಲವೂ ಅವನನ್ನೇ ಆಶ್ರಯಿಸಿವೆ ಎಂದು ತಿಳಿದವನು ಗಾಳಿಯಿಂದ ಪಕ್ಷಿಯು ಮೇಲಕ್ಕೆ ಹಾರುವಂತೆ ದೇಹಬಂಧನವನ್ನು ಕಳಚಿ ಪರಲೋಕಕ್ಕೆ ಹೋಗಿ ಶಾಶ್ವತವಾದ ಮುಕ್ತಿಯನ್ನು ಪಡೆಯುತ್ತಾನೆ. ಯಯಾತಿ ರಾಜನು ಈ ವಿಷಯದಲ್ಲಿ ಅನೇಕ ಗಾದೆಗಳನ್ನು ಹೇಳಿದ್ದಾನೆ. "ಬ್ರಹ್ಮರತ್ನವು ಆತ್ಮನಲ್ಲಿಯೇ ಇದೆ. ಅದನ್ನು ಬೇರೆ ಸ್ಥಳದಲ್ಲಿ ಹುಡುಕ ಬೇಕಾಗಿಲ್ಲ. ಮನಸ್ಸಮಾಧಾನದಿಂದ ಅದನ್ನು ನೋಡಬಹುದು. ಬಂಗಾರ-ಕಬ್ಬಿಣ, ಸುಖ-ದುಃಖ, ಶೀತ-ಉಷ್ಣ, ಮಾನ- ಅಪಮಾನಗಳು ಸಮಾನ ಎಂದು ಆದಾಗ ಬ್ರಹ್ಮಪ್ರಾಪ್ತಿಯಾಗುತ್ತದೆ. ಕತ್ತಲಾದ ಮನೆಯನ್ನು ಬೆಳಗುವ ದೀಪದಂತೆ ಬುದ್ಧಿಯೇ ಆತ್ಮನನ್ನು ಬೆಳಗುವ ಮಹಾದೀಪ." ಇವೆಲ್ಲ ಯಯಾತಿಯ ಉದ್ಗಾರಗಳು. ಶುಕಮುನಿಯೇ ನೀನು ಎಲ್ಲವನ್ನು ತಿಳಿದಿರುವೆ. ನರ್ತನ ಗಾನಗಳಲ್ಲಿ ಉತ್ಸಾಹವಿಲ್ಲ ನಿನಗೆ. ಯಾರಿಂದಲೂ ಭಯವಿಲ್ಲ. ಯಾರಲ್ಲಿಯೂ ಅಭಿಮಾನವಿಲ್ಲ. ಪ್ರಶಂಸೆಯಿಂದ ಹಿಗ್ಗಿಲ್ಲ. ನಿಂದೆಯಿಂದ ಕುಗ್ಗಿಲ್ಲ. ನೀನು ಮೋಕ್ಷದ ದಾರಿಯಲ್ಲಿಯೇ ಇದ್ದವನು. ಇನ್ನೇನು ಬೇಕು ಕೇಳು? ಎಂದು ಜನಕಮಹಾ ರಾಜನು ಕೇಳಿದನು. ಶುಕನು ಕೃತಾರ್ಥನಾದನು. ಸುಖಶಾಂತಿಗಳನ್ನು ಪಡೆದು ಸುಮ್ಮನೆ ಉತ್ತರಾಭಿಮುಖವಾಗಿ ನಡೆದನು. ಹಿಮವಂತನನ್ನು ಕಂಡನು. ಅಲ್ಲಿ ಪೈಲ ಮುಂತಾದವರಿಗೆ ಅಧ್ಯಯನ ಮಾಡಿಸುತ್ತಿದ್ದ ತನ್ನ ತಂದೆಯನ್ನು ನೋಡಿ ಭಕ್ತಿಯಿಂದ ಪಾದಕ್ಕೆರಗಿದನು. ಜನಕ ರಾಜನೊಡನೆ ನಡೆದ ಸಂಭಾಷಣೆಯನ್ನು ತಂದೆಗೆ ಹೇಳಿದನು. ವ್ಯಾಸನು ಸಂತೋಷದಿಂದ ಮಗನನ್ನು ಅಪ್ಪಿಕೊಂಡನು. ಪಕ್ಕದಲ್ಲಿ ಕುಳ್ಳರಿಸಿಕೊಂಡನು. ಪೈಲ ಮುಂತಾದ ಶಿಷ್ಯರು ವ್ಯಾಸರಿಂದ ವೇದಾಧ್ಯಯನ ಮಾಡಿ ಮೇರುವಿನಿಂದ ಕೆಳಗಿಳಿದು ಭರತ ಭೂಮಿಯಲ್ಲಿ ವೇದಾಧ್ಯಾಪನದಲ್ಲಿ ಆಸಕ್ತರಾದರು.

*ನಾರದ ಮಹಾಪುರಾಣದಲ್ಲಿ ಎಂಬ ಐವತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ಸನತ್ಕುಮಾರರ ಧರ್ಮೋಪದೇಶ

**ಅಧ್ಯಾಯ - ೬೦**

**ಸನಂದರು ಹೇಳುತ್ತಾರೆ:-** ಪೈಲ ಮುಂತಾದವರು ಹೊರಟು ಹೋದ ಮೇಲೆ ವ್ಯಾಸರು ಶುಕನೊಡನೆ ಏಕಾಂತದಲ್ಲಿ ಧ್ಯಾನಾಸಕ್ತರಾಗಿ ಕುಳಿತಿದ್ದರು. ಆಗ ಅಶರೀರವಾಣಿಯಾಯಿತು. "ವ್ಯಾಸಮಹರ್ಷಿಯೇ, ವೇದಘೋಷವಿಲ್ಲದೆ ಈ ಪರ್ವತಕ್ಕೆ ಶೋಭೆಯಿಲ್ಲ. ನೀನೀಗ ಮಗನೊಡನೆ ಸಂತುಷ್ಟನಾಗಿ ವೇದಾಧ್ಯಯನ ಮಾಡು." ವ್ಯಾಸರು ಮಗನೊಡನೆ ವೇದಾಧ್ಯಯನ ಮಾಡಲಾರಂಭಿಸಿದರು. ಬಹುಕಾಲ ಅವರಿಬ್ಬರು ವೇದಾಧ್ಯಯನ ಮಾಡುತ್ತಿದ್ದಾಗ ಸಮುದ್ರದ ಗಾಳಿಯಿಂದ ಸಹಿತವಾಗಿ ಬಿರುಗಾಳಿಯು ಬೀಸಿತು. ವ್ಯಾಸರು 'ಈಗ ಅನಧ್ಯಾಯ. ವೇದಾಧ್ಯಯನ ಬೇಡವೆಂದು ಮಗನನ್ನು ತಡೆದರು. ಶುಕನು ತಂದೆಯನ್ನು ಕುರಿತು "ವಾಯುವು ಎಲ್ಲಿದೆ ಏತಕ್ಕೆ ಉಂಟಾಯಿತು? ವಾಯುವಿನ ವ್ಯಾಪಾರವನ್ನೆಲ್ಲ ಹೇಳಿರಿ" ಎಂದು ಕೇಳಿದನು. ವ್ಯಾಸರೆಂದರು - "ಮಗು, ನೀನು ದಿವ್ಯಚಕ್ಷುಃಸಂಪನ್ನನಾಗಿರುವೆ. ನಿನಗೀಗ ವಾಯುವಿನ ವಿಚಾರವನ್ನು ತಿಳಿಸುವೆನು. ವಿಷ್ಣು ಮಾರ್ಗವು ದೇವಯಾನ, ತಮೋಮಾರ್ಗವು ಪಿತೃಯಾನ, ಇಲ್ಲೆಲ್ಲ ಬೀಸುವ ವಾಯುಗಳು ಏಳು ವಿಧವಾಗಿವೆ. ಈ ವಾಯುಮಾರ್ಗಗಳಲ್ಲಿ ಸಾಧ್ಯರೆಂಬ ದೇವಗಣಗಳಿವೆ. ಅವರಿಗೆ

ಸಮಾನನು ಮಗನು. ಸಮಾನನಿಗೆ ಉದಾನನು, ಉದಾನನಿಗೆ ವ್ಯಾನನು, ಅವನಿಗೆ ಅಪಾನನು, ಅಪಾನನಿಗೆ ಪ್ರಾಣನು ಮಕ್ಕಳು. ಪ್ರಾಣನಿಗೆ ಮಕ್ಕಳಿಲ್ಲ. ಮೇಘಸಮೂಹಗಳನ್ನು ಮೊದಲನೇ ಮಾರ್ಗದಲ್ಲಿ ನಡೆಸುವವನು ಆವಹ. ಮಿಂಚುಗಳ ಕಾಂತಿಯಿಂದ ಕೂಡಿದ ಮೇಘಸಹಿತ ವಾಯುವೇ ಪ್ರವಹ. ಚಂದ್ರಾದಿ ತೇಜಸ್ಸುಗಳನ್ನು ಹುಟ್ಟಿಸುವ ಆಕಾಶದಲ್ಲಿರುವ ಮೇಘಗಳಿಗೆ ನಾಲ್ಕು ಸಮುದ್ರಗಳಿಂದ ನೀರನ್ನೊದಗಿಸಿ ಅವುಗಳನ್ನು ಪರ್ಜನ್ಯ ದೇವತೆಗಳಿಗೆ ಕೊಟ್ಟು ಮಳೆಗರೆಯಿಸುವ ಮೂರನೆಯ ವಾಯುವೇ ಉದ್ವಹ. ಮಹಾಮೇಘಗಳನ್ನು ಕರಗಿಸುವ, ದೇವತೆಗಳ ವಿಮಾನಗಳನ್ನು ಆಕಾಶದಲ್ಲಿ ಧರಿಸುವ, ಬೆಟ್ಟಗಳನ್ನು ಉರುಳಿಸುವ ನಾಲ್ಕನೆಯ ವಾಯುವೇ ಸಂವಹ. ಶೀಘ್ರಗಾಮಿಯಾದ ಯಾವ ವಾಯುವಿನಿಂದ ವೃಕ್ಷರಸಗಳು ರೋಗಕಾರಿಗಳು ಆಗುತ್ತವೆಯೋ ಅವನೇ ವಿವಹನೆಂಬ ಐದನೇಯ ವಾಯುವು ಸೂರ್ಯನು ಭೂಮಿಯಲ್ಲಿ ವ್ಯಾಪಿಸುವಂತೆ ಮಾಡುವ, ಚಂದ್ರನನ್ನು ತೃಪ್ತನನ್ನಾಗಿ ಮಾಡುವ ಅಮೃತಕ್ಕೆ ದಿವ್ಯನಿಧಿಯಾದ ಬಲಿಷ್ಠವಾದ ಆರನೇ ವಾಯುವೇ ಪರಿವಹನು. ಮರಣಕಾಲದಲ್ಲಿ ಪ್ರಾಣಿಗಳ ಪ್ರಾಣಗಳನ್ನು ಅಪಹರಿಸುವ ಮೃತ್ಯು ಯಮಧರ್ಮರಿಗೂ ನೀತಿ ಮಾರ್ಗವನ್ನು ತಿಳಿಸುವ, ಧ್ಯಾನಾಭ್ಯಾಸರತರನ್ನು ಮುಕ್ತಿ ಮಾರ್ಗಕ್ಕೆ ಒಯ್ಯುವ ಏಳನೇ ವಾಯುವೇ ಪರಾವಹ ಎಂಬ ಉತ್ತಮವಾಯುವು. ಇಂತಹ ಪವಮಾನ ವಾಯುವಿನಿಂದ ಈ ಪರ್ವತವೂ ನಡುಗೀತು. ವಿಷ್ಣುವಿನ ನಿಶ್ವಾಸದ ವಾಯುವು ವೇಗವಾಗಿ ಹೊರಬಂದಾಗ ಜಗತ್ತು ವ್ಯಥೆಗೊಳಗಾಗುತ್ತದೆ. ಹೀಗೆ ಬಹಳವಾಗಿ ಗಾಳಿ ಬೀಸಿದಾಗ ಬ್ರಹ್ಮಜ್ಞಾನಿಗಳು ವೇದವನ್ನು ಪಠಿಸುವದಿಲ್ಲ, ಬಿರುಗಾಳಿ ಬೀಸಿದಾಗ ವೇದಾಧ್ಯಯನ ಕೇಳಿಸುವದಿಲ್ಲ, ಬಾಧಿತವಾಗುತ್ತದೆ.'' ವೇದವ್ಯಾಸರು ಹೀಗೆ ಹೇಳಿ ''ಬಿರುಗಾಳಿ ನಿಂತ ಮೇಲೆ ನೀನು ಅಧ್ಯಯನ ಮಾಡು ಎಂದು ಶುಕನಿಗೆ ತಿಳಿಸಿ ಸ್ನಾನಕ್ಕಾಗಿ ಆಕಾಶಗಂಗೆಗೆ ಹೊರಟರು. ಶುಕನು ವೇದಾಧ್ಯಯನ ಮಾಡುತ್ತಾ ಇದ್ದನು. ಸ್ವಲ್ಪ ಹೊತ್ತಿನಲ್ಲಿ ಅಲ್ಲಿಗೆ ಬಂದ ಸನತ್ ಕುಮಾರನನ್ನು ಶುಕನು ಸತ್ಕರಿಸಿ ಮೋಕ್ಷಕ್ಕೆ ಸಾಧಕವಾದ ತತ್ವವನ್ನು ಉಪದೇಶಿಸುವಂತೆ ಕೇಳಿದನು. ಸನತ್ಕುಮಾರನು ಹೀಗೆಂದನು -

**ನಾಸ್ತಿ ವಿದ್ಯಾಸಮಂ ಚಕ್ಷುಃ ನಾಸ್ತಿ ವಿದ್ಯಾಸಮಂ ತಪಃ ।**
**ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಂ ॥**

ವಿದ್ಯೆಗೆ ಸಮಾನವಾದ ಕಣ್ಣಿಲ್ಲ. ವಿದ್ಯಾಭ್ಯಾಸಕ್ಕೆ ಸಮಾನವಾದ ತಪಸ್ಸಿಲ್ಲ. ಆಶೆಗೆ ಸಮಾನವಾದ ದುಃಖವಿಲ್ಲ. ತ್ಯಾಗಕ್ಕೆ ಸಮಾನವಾದ ಸುಖವಿಲ್ಲ. ಪಾಪಕರ್ಮವನ್ನು ಬಿಟ್ಟು ಪುಣ್ಯಕರ್ಮವನ್ನು ಮಾಡುತ್ತಾ ಸದಾಚಾರಿಯಾಗಿರುವದು ಉತ್ತಮವಾದ ಶ್ರೇಯೋ ಮಾರ್ಗವು. ಮನುಷ್ಯ ಜನ್ಮವನ್ನು ಹೊಂದಿದವನು ವಿಷಯಾಸಕ್ತನಾದರೆ ದುಃಖ ಪರಿಹಾರವು ಅಸಾಧ್ಯ, ಮೋಹವು ಬಲೆ. ಕಾಮ-ಕ್ರೋಧಗಳು ಶ್ರೇಯಸ್ಸಿಗೆ ವಿಘ್ನಗಳು-

**ನಿತ್ಯಂ ಕ್ರೋಧಾತ್ ತಪೋ ರಕ್ಷೇತ್ ಶ್ರಿಯಂ ರಕ್ಷೇಚ್ಚ ಮತ್ಸರಾತ್ ।**
**ವಿದ್ಯಾಂ ಮಾನಾವಮಾನಾಭ್ಯಾಂ ಆತ್ಮಾನಂ ತು ಪ್ರಮಾದತಃ ॥**

ಕೋಪವನ್ನು ಬಿಟ್ಟು ತಪಸ್ಸನ್ನೂ, ಹೊಟ್ಟೆ ಕಿಚ್ಚನ್ನು ಬಿಟ್ಟು ಸಂಪತ್ತನ್ನೂ, ಮಾನಾಪಮಾನಗಳನ್ನು ಪರಿಗಣಿಸದೇ ವಿದ್ಯೆಯನ್ನೂ, ಆಲಸ್ಯವನ್ನು ತ್ಯಜಿಸಿ ಆತ್ಮನನ್ನೂ ರಕ್ಷಿಸಿಕೊಳ್ಳಬೇಕು. ಪರರಿಗೆ ದ್ರೋಹ ಮಾಡದಿರುವುದು ಉತ್ತಮ ಧರ್ಮವು. ಕ್ಷಮೆಯೇ

ಉತ್ತಮ ಬಲವು. ಆತ್ಮತತ್ತ್ವಜ್ಞಾನವೇ ಉತ್ತಮ ಜ್ಞಾನವು. ಸತ್ಯವಚನವೇ ಪರಮ ಹಿತವು. ನಿಷಿದ್ಧ ವಿಷಯಗಳನ್ನು ನೋಡಬಾರದು. ಮುಟ್ಟಬಾರದು. ಸರ್ವಪ್ರಾಣಿಗಳೊಡನೆ ಸ್ನೇಹದಿಂದ ವರ್ತಿಸಬೇಕು. ಆಶೆಯನ್ನು ಬಿಟ್ಟಿರಬೇಕು. ಕರ್ಮಫಲಗಳ ಆಶೆಯನ್ನು ಬಿಟ್ಟು ಪರಮಾತ್ಮನ ಪ್ರೀತಿಯ ಉದ್ದೇಶದಿಂದ ಮಾತ್ರ ಕರ್ಮವನ್ನು ಮಾಡಬೇಕು. ಜೇಡರ ಹುಳವು ತಾನೇ ನಿರ್ಮಿಸಿದ ತಂತುಗಳ ಮಧ್ಯದಲ್ಲಿ ತಾನಿರುವಂತೆ ಮೋಹತಂತುಗಳಿಂದ ಸುತ್ತುವರಿದ ಜೀವನು ತನ್ನನ್ನು ತಾನು ತಿಳಿದಿಲ್ಲ. ಮಕ್ಕಳು, ಹೆಂಡತಿ ಮುಂತಾದವರ ಮೇಲಿನ ಅಭಿಮಾನದಿಂದ ಜಂತುಗಳು ನಾಶವಾಗುತ್ತವೆ. ಎಲ್ಲವನ್ನು ಬಿಟ್ಟು ಲೋಕಾಂತರಕ್ಕೆ ಹೋಗಲೇಬೇಕಾಗಿರುವಾಗ ನಿರರ್ಥಕವಾದ ಬಾಹ್ಯವಸ್ತುಗಳ ಮೋಹದಿಂದ ಏನು ಉಪಯೋಗ? ತನ್ನನ್ನು ಉದ್ಧಾರ ಮಾಡತಕ್ಕ ಸುಖವನ್ನಷ್ಟೇ ಸಂಪಾದಿಸಬೇಕು. ಪುಣ್ಯಪಾಪಗಳೆರಡರ ಹೊರತು ಮತ್ತಾವ ಐಹಿಕ ಸಂಪತ್ತೂ ಲೋಕಾಂತರಕ್ಕೆ ಹೋಗುವಾಗ ಬೆನ್ನ ಹಿಂದೆ ಬರುವದಿಲ್ಲ. ಪ್ರಕೃತಿ, ಮಹತ್ತತ್ವ, ಅಹಂಕಾರತತ್ವ, ಎಂಬ ಮೂರು ತತ್ವಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಪಂಚತನ್ಮಾತ್ರಗಳು, ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳು ಘ್ರಾಣ, ರಸನ, ಚಕ್ಷುಸ್ಸು, ತ್ವಕ್, ಶ್ರೋತ್ರ, ವಾಗಿಂದ್ರೀಯ, ಪಾಣಿ, ಪಾದ, ಪಾಯು, ಉಪಸ್ಥ ಮತ್ತು ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳು, ಪುರುಷ, ಒಟ್ಟು ವ್ಯಕ್ತಾವ್ಯಕ್ತಗಳೆಂಬ ಇಪ್ಪತ್ತೈದು ತತ್ತ್ವಗಳನ್ನೂ, ಸುಖ ದುಃಖ ಜೀವನ ಮರಣಗಳನ್ನೂ ಸರಿಯಾಗಿ ತಿಳಿಯುವವನೇ ಜ್ಞಾನಿಯು. ದುಃಖ ಪಡದೇ ಸಾಧನವನ್ನು ಮಾಡಲು ಪ್ರಾರಂಭಿಸಬೇಕು. ಶಬ್ದಾದಿ ವಿಷಯದಲ್ಲಿ ಅತ್ಯಂತ ಆಸಕ್ತನಾಗಬಾರದು. ಅಂತಹವನಿಗೇ ಮುಕ್ತಿಯಾಗುತ್ತದೆ. ಧನಿಕನಿಗೇ ಆಘಲಿ ದರಿದ್ರನಿಗೇ ಆಗಲಿ ಉಪಭೋಗ ಕಾಲದಲ್ಲಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಉತ್ತಮವಾದ ಗಂಧಾದಿ ವಿಷಯಗಳಿಂದ ಸ್ವಲ್ಪ ಸುಖದ ಅನುಭವ ಉಂಟಾಗುತ್ತದೆ. ಉಪಭೋಗದ ಅನಂತರ ಅವುಗಳಲ್ಲಿ ಏನೂ ಸಾರವಿಲ್ಲವೆಂದು ತಿಳಿದುಬರುತ್ತದೆ. ಪ್ರಾಣಿಗಳಿಗೆ ಒಬ್ಬರು ಇನ್ನೊಬ್ಬರಿಗೆ ಸಹವಾಸವಾಗುವುದಕ್ಕೆ ಮೊದಲು ಯಾವ ದುಃಖವೂ ಇರುವದಿಲ್ಲ. ಆದರೆ ಸಹವಾಸದನಂತರ ವಿಯೋಗ ಉಂಟಾದಾಗ ಎಲ್ಲರಿಗೂ ದುಃಖ ಉಂಟಾಗುತ್ತದೆ. ಆದುದರಿಂದ ವಿವೇಕಿಯಾದ ಮನುಷ್ಯನು ತನ್ನ ಸ್ವರೂಪದಲ್ಲಿಯೇ ನಿರತನಾಗಿದ್ದು ಎಂದೂ ಶೋಕಿಸಬಾರದು. ಧೈರ್ಯದಿಂದ ಗುಹ್ಯೇಂದ್ರಿಯ ಮತ್ತು ಉದರಗಳನ್ನು, ನೇತ್ರದಿಂದ ಹಸ್ತಪಾದಗಳನ್ನು, ಮನಸ್ಸಿನ ಮೂಲಕ ಕಣ್ಣು ಮತ್ತು ಕಿವಿಗಳನ್ನು, ಸದ್ವಿದ್ಯೆಯಿಂದ ಮನಸ್ಸು ಮತ್ತು ಮಾತುಗಳನ್ನು ರಕ್ಷಿಸಿಕೊಳ್ಳಬೇಕು. ಪರಿಚಿತ ಮತ್ತಿತರ ಎಲ್ಲಾ ಜನರಲ್ಲಿ, ವಸ್ತುಗಳಲ್ಲಿ ಆಸಕ್ತಿಯನ್ನು ದೂರಮಾಡಿ ಶಾಂತಭಾವದಿಂದ ಜೀವನ ನಡೆಸುವವನೇ ಸುಖಿಯು, ವಿದ್ವಾಂಸನು. ಯಾವನು ಅಧ್ಯಾತ್ಮ ವಿದ್ಯೆಯಲ್ಲಿ ಅನುರಕ್ತನಾಗಿದ್ದು, ನಿಷ್ಕಾಮನಿದ್ದು ಭೋಗಾಸಕ್ತಿಯಿಂದ ದೂರವಾಗಿರುತ್ತಾನೋ, ಮತ್ತು ಯಾವಾಗಲೂ ಏಕಾಂತ ಜೀವನ ನಡೆಸುತ್ತಾನೋ ಅವನೇ ಸುಖಿ. ಯಾವಾಗ ಮನುಷ್ಯನು ಸುಖವನ್ನು ದುಃಖವೆಂದೂ, ದುಃಖವನ್ನು ಸುಖವೆಂದೂ, ತಿಳಿಯತೊಡಗುತ್ತಾನೊ, ಆ ಅವಸ್ಥೆಯಲ್ಲಿ ಬುದ್ಧಿ, ಸುನೀತಿ ಮತ್ತಿತರ ಯಾವ ಪುರುಷ ಪ್ರಯತ್ನಗಳೂ ಅವನನ್ನು ಕಾಪಾಡಲಾರವು - ಆದುದರಿಂದ ಮನುಷ್ಯನು ಜ್ಞಾನಪ್ರಾಪ್ತಿಗೋಸ್ಕರ ತನ್ನ ಸ್ವಭಾವಕ್ಕೆ ಅನುಗುಣವಾಗಿ ಪ್ರಯತ್ನ ಮಾಡಬೇಕು. ಒಳ್ಳೆಯ ಪ್ರಯತ್ನ ಮಾಡುವ ಯಾವನೂ ದುಃಖಿಯಾಗುವುದಿಲ್ಲ.''

**ಸನಂದರು ಹೇಳುತ್ತಾರೆ:-** ವ್ಯಾಸಪುತ್ರರಾದ ಶುಕಮುನಿಗಳಿಗೆ ಹೀಗೆ ಉಪದೇಶಿಸಿ ಅವರ ಅನುಮತಿಯನ್ನು ಪಡೆದು ಸನತ್ಕುಮಾರರು ಶುಕಮುನಿಗಳಿಂದ ಪೂಜಿತರಾಗಿ ಅಲ್ಲಿಂದ ಹೊರಟು ಹೋದರು. ಯೋಗಿ ಶ್ರೇಷ್ಠರಾದ ಶುಕಮುನಿಗಳು ತನ್ನ ಸ್ವರೂಪಸ್ಥಿತಿಯನ್ನು ಸರಿಯಾಗಿ ತಿಳಿದು, ಬ್ರಹ್ಮಸ್ವರೂಪದ ಅನುಸಂಧಾನದಲ್ಲಿ ಉತ್ಸುಕರಾಗಿ ತನ್ನ ತಂದೆಯ ಬಳಿಗೆ ಹೋದರು. ತಂದೆಯನ್ನು ಕಂಡು ಅವರಿಗೆ ನಮಸ್ಕಾರ ಮಾಡಿ ಪ್ರದಕ್ಷಿಣೆ ಹಾಕಿ ಬಂದು ಕೈಲಾಸದ ಕಡೆಗೆ ನಡೆದರು. ವ್ಯಾಸರು 'ಮಗನೇ! ಒಂದು ಕ್ಷಣವಾದರೂ ನಿಲ್ಲು' ಎಂದು ಕೂಗಿದರು. ಅಭಿಮಾನರಹಿತರಾದ ಶುಕನು ಅಲ್ಲಿ ನಿಲ್ಲದೇ ಮೋಕ್ಷ ಚಿಂತನೆ ಮಾಡುತ್ತಾ ಹೊರಟುಹೋದರು.

ನಾರದ ಮಹಾಪುರಾಣದಲ್ಲಿ ಅರವತ್ತನೇಯ ಅಧ್ಯಾಯ ಮುಗಿದುದು



## ಶುಕಮುನಿಗೆ ಶ್ರೀ ಹರಿಯ ಸಾಕ್ಷಾತ್ಕಾರ — ಅಧ್ಯಾಯ - ೬೧

**ಸನಂದನು ಹೇಳುತ್ತಾರೆ:-** ದೇವರ್ಷಿಯೇ, ಕೈಲಾಸ ಪರ್ವತದ ಮೇಲೇರಿ, ಜ್ಞಾನಿಯಾದ ಶುಕಮುನಿಗಳು ಸೂರ್ಯೋದಯ ಸಮಯಕ್ಕೆ ಸರಿಯಾಗಿ ಸ್ಥಿರಾಸನದಲ್ಲಿ ಕುಳಿತು ಯೋಗಾಸಕ್ತರಾದರು. ಆಗ ಅವರು ಅಸಂಗನಾದ ಪರಮಾತ್ಮನ ದರ್ಶನ ಮಾಡಿದರು. ಪರಮಾತ್ಮನ ದರ್ಶನವಾದ ಕೂಡಲೇ ಶುಕಮುನಿಗಳು ಜೋರಾಗಿ ಉನ್ಮುಕ್ತರಾಗಿ ನಕ್ಕರು. ಅನಂತರ ಅವರು ವಾಯುವಿನಂತೆ ಆಕಾಶದಲ್ಲಿ ಸಂಚರಿಸ ಕೊಡಗಿದರು. ಆಗ ಉದಯಕಾಲದ ಸೂರ್ಯನಂತೆ ಅವರು ಹೊಳೆಯುತ್ತಿದ್ದರು. ಅವರು ಮನೋವೇಗ ವಾಯು ವೇಗದಿಂದ ಮುಂದುವರಿಯುತ್ತಿದ್ದರು. ಆಗ ಅವರನ್ನು ಕಂಡ ಎಲ್ಲರೂ ತಮ್ಮ ಶಕ್ತ್ಯಾನುಸಾರವಾಗಿ, ಸಂದರ್ಭಕ್ಕೆ ಅನುಗುಣವಾಗಿ ಪೂಜಿಸಿದರು. ದೇವತೆಗಳ ಪುಷ್ಪವೃಷ್ಟಿ ನಡೆಯಿತು. ಗಂಧರ್ವರು ಅಪ್ಸರೆಯರು, ಮಹರ್ಷಿ, ಸಿದ್ಧರು ಆಶ್ಚರ್ಯ ಚಕಿತರಾದರು. ಅವರು ಹೊಗೆಯಿಲ್ಲದ ಬೆಂಕಿಯಂತೆ ಉದ್ದೀಪ್ತರಾಗಿ ಬ್ರಹ್ಮ ಸ್ವರೂಪಾನುಸಂಧಾನದಲ್ಲಿ ಲೀನರಾಗಿದ್ದರು. ಮುಂದೆ ಹೋಗುತ್ತಿರುವ ಶುಕ ಮುನಿಗಳು ಹಿಮಾಲಯ ಶಿಖರದಂತೆ ಬೆಳ್ಳಿಯ ಬಣ್ಣದ ಹಾಗೂ ಮೇರು ಶಿಖರದಂತೆ ಹೊಂಬಣ್ಣದ, ಎರಡು ಶಿಖರಗಳನ್ನು ಕಂಡರು. ಮೇಲೆ ಮತ್ತು ಪಾರ್ಶ್ವಗಳಲ್ಲಿ ನೂರು ನೂರು ಯೋಜನ ವಿಸ್ತಾರವುಳ್ಳ ಆ ಪರ್ವತ ಶಿಖರಗಳೆರಡೂ ಒಂದು ಮತ್ತೊಂದರೊಡನೆ ಸೇರಿದಂತಿದ್ದುವು. ಶುಕ ಮುನಿಗಳು ಅವುಗಳ ಮಧ್ಯದಲ್ಲಿ ಹೋದರು. ಆ ಪರ್ವತ ಶಿಖರಗಳು ಶುಕಮುನಿಗಳ ಗಮನವನ್ನು ತಡೆಯಲಿಲ್ಲ. ಹೀಗೆ ಯೋಗ ಪ್ರಭಾವವನ್ನು ತೋರಿಸುತ್ತಾ ಶುಕಮುನಿಗಳು ಆಕಾಶದಲ್ಲಿ ಸಂಚರಿಸುತ್ತಾ ದೇವಗಂಗೆಯನ್ನು ನೋಡಿದರು. ಅಲ್ಲಿ ಅಪ್ಸರೆಯರು ವಸ್ತ್ರವಿಲ್ಲದೆ ಸ್ನಾನ ಮಾಡುತ್ತಿದ್ದರು. ಆದರೆ ನಿರ್ವಿಕಾರರಾದ ಶುಕರನ್ನು ನೋಡಿ ಲಜ್ಜೆಯನ್ನು ಹೊಂದದೆ ಹಾಗೆಯೇ ಇದ್ದರು.

### ವ್ಯಾಸರ ಪುತ್ರಸ್ನೇಹ

ಶುಕಮುನಿಗಳು ಶೀಘ್ರವಾಗಿ ಹೋಗುತ್ತಿದ್ದ ವಿಷಯವನ್ನು ತಿಳಿದು ತಂದೆ ವ್ಯಾಸರು ಪುತ್ರ ವಾತ್ಸಲ್ಯದಿಂದ ಮಗನನ್ನು ಹಿಂಬಾಲಿಸಿದರು. ಆದರೆ ಶುಕಮುನಿಗಳು

ವಾಯುವೇಗಕ್ಕಿಂತಲೂ ಹೆಚ್ಚು ವೇಗದಿಂದ ಹೋಗುತ್ತಾ ಇದ್ದುದರಿಂದ ವ್ಯಾಸರಿಗೆ ಪುತ್ರನನ್ನು ಸಂಧಿಸಲು ಆಗಲಿಲ್ಲ. ಮುಂದೆ ಹೋಗುತ್ತಾ ಇರುವಾಗ ಅಲ್ಲಿದ್ದ ಮುನಿಗಳೂ ಸಿದ್ಧರೂ ವ್ಯಾಸರಿಗೆ ಶುಕನು ಆ ದಾರಿಯಾಗಿ ಹೋದ ವೃತ್ತಾಂತವನ್ನು ಹೇಳಿದರು. ಮಗನ ಅದರ್ಶನದಿಂದ ವಿಹ್ವಲರಾದ ವ್ಯಾಸರು ಮೂರು ಲೋಕಕ್ಕೂ ಕೇಳಿಸುವಂತೆ ಉಚ್ಚ ಧ್ವನಿಯಿಂದ 'ಶುಕಾ' ಎಂದು ಕೂಗಿದರು. ಧಾರ್ಮಿಕನಾದ ಶುಕನು 'ಭೋಃ' ಎಂದು ಪರ್ವತ, ವೃಕ್ಷ, ಲತೆ ಮುಂತಾದವುಗಳಲ್ಲಿದ್ದು ಉತ್ತರಕೊಟ್ಟನು. ಅಂದಿನಿಂದ ಇದುವರೆಗೂ ಪರ್ವತ ಗುಹೆಗಳಲ್ಲಿ ಏನಾದರೂ ಶಬ್ದವಾದರೆ ಹಿಂದೆ ಶುಕರು ಪ್ರತಿ ಧ್ವನಿಕೊಟ್ಟಂತೆ ಅವುಗಳು ಅದೇ ಶಬ್ದದಿಂದ ಪ್ರತಿ ಧ್ವನಿಕೊಡುತ್ತವೆ. ವ್ಯಾಸರು ಅಪರಿಮಿತ ಮಹಿಮೆಯುಳ್ಳ ಮಗನ ಮಹಿಮೆಯನ್ನು ನೆನೆಯುತ್ತಾ ಮಂದಾಕಿನೀ ತೀರದಲ್ಲಿಯೇ ಕುಳಿತರು. ಆಗ ಮಹಾದೇವರು ಅಲ್ಲಿಗೆ ಬಂದು 'ಬ್ರಹ್ಮಜ್ಞಾನಿಯಾದ ವ್ಯಾಸಮುನಿಯೇ! ನೀನು ಮಗನ ವಿಷಯದಲ್ಲಿ ಏಕೆ ವ್ಯಾಕುಲಚಿತ್ತನಾಗಿದ್ದೀಯೆ! ಶುಕನು ಬ್ರಹ್ಮಜ್ಞಾನಿಯಾಗಿ ಪರಮಗತಿಯನ್ನು ಹೊಂದಿರುವನು. ಅವನು ಪುನಃ ನಿನ್ನ ಬಳಿಗೆ ಬರಲಾರನು, ಎಂದು ವ್ಯಾಸ ಮುನಿಯನ್ನು ಸಂತೈಸಿದರು. ಹೀಗೆ ಸಮಾಧಾನ ಹೊಂದಿದ ವ್ಯಾಸಮುನಿಗಳು ತನ್ನ ಆಶ್ರಮಕ್ಕೆ ಹಿಂತಿರುಗಿದರು. ಬ್ರಹ್ಮಜ್ಞಾನಿಯಾದ ನಾರದನೇ, ತರುವಾಯ ಇನ್ನೊಂದು ಬಾರಿ ವ್ಯಾಸರು ನರನಾರಾಯಣರನ್ನು ನೋಡಲು ಬದರಿಕಾಶ್ರಮಕ್ಕೆ ಬಂದರು. ಅಲ್ಲಿ ಶುಕನನ್ನು ಸ್ಮರಿಸುತ್ತಾ ತಪಸ್ಸನ್ನು ಪ್ರಾರಂಭಿಸಿದರು. ವ್ಯಾಸರು ಅಲ್ಲಿರುವಾಗಲೇ ಪರಮಜ್ಞಾನಿ ಗಳಾದ ಶುಕರು ನೀನು (ನಾರದರು) ಹಿಂದೆ ಹೋಗಿದ್ದ ಶ್ವೇತದ್ವೀಪಕ್ಕೆ ಹೋದರು.

## ಶ್ವೇತದ್ವೀಪ ಮತ್ತು ವೈಕುಂಠಗಳಲ್ಲಿ ಶುಕಮುನಿಗಳು ವಿಷ್ಣುವನ್ನು ಸ್ತುತಿಸಿದರು

ಶ್ವೇತದ್ವೀಪದಲ್ಲಿ ಶುಕರು ಮೊದಲು ನಾರಾಯಣನ ಪ್ರಭಾವವನ್ನು ಕಂಡರು, ಅನಂತರ ವೇದಗಮ್ಯನಾದ, ಹಾಗೂ ವೇದಗಳಿಗೂ ದೂರನಾದ ಪರಮ ಸುಂದರತಮನಾದ ನಾರಾಯಣನ ಮಂದಹಾಸಭರಿತ ಮುಖಚಂದಿರನನ್ನು ಕಂಡು ಸ್ತುತಿ ಮಾಡಲಾರಂಭಿಸಿದರು. ಭಗವಂತನು ಪ್ರಸನ್ನನಾಗಿ ಇಂತೆಂದನು - ''ಯೋಗೀಂದ್ರ, ಎಲ್ಲಾ ದೇವತೆಗಳಿಗೂ ನಾನು ಅದೃಶ್ಯನು, ಆದರೆ ನೀನು ನನ್ನನ್ನು ಕಂಡೆ. ಬ್ರಹ್ಮಚಾರಿಯಾದ ಶುಕನೇ, ಸನತ್ಕುಮಾರರು ಹೇಳಿದ ಯೋಗದಿಂದ ನೀನು ಸಿದ್ಧನಾದೆ. ವಾಯು ಮಾರ್ಗದಲ್ಲಿ ನಿಂತು ಮನ ಬಂದಂತೆ ಎಲ್ಲಾ ಲೋಕಗಳನ್ನು ನೋಡು.''

ಶುಕಮುನಿಗಳು ವಾಸುದೇವನಿಗೆ ನಮಿಸಿ ಅಲ್ಲಿಂದ ಸರ್ವವಂದಿತ ಗೋವಿಂದ ಮಂದಿರ ವೈಕುಂಠಕ್ಕೆ ತೆರಳಿದರು. ಅಲ್ಲಿ ವಿಮಾನ ಸಂಚಾರಿ ದೇವತೆಗಳು ಕಾಣಸುತ್ತಿದ್ದರು. ಆ ದಿವ್ಯಧಾಮದ ಪ್ರಕಾಶದಿಂದಲೇ ಸಮಸ್ತಲೋಕಗಳೂ ಪ್ರಕಾಶಗೊಂಡಿದ್ದುವು. ಅದರ ಸುತ್ತಲೂ ವಿರಜಾ ಎಂಬ ನದಿಯು ಹರಿಯುತ್ತಿತ್ತು. ಕಮಲ ಪೂರ್ಣವಾದ ಸುಜಲಭರಿತ ಸುಂದರ ಕಾಸಾರಗಳು ಅಲ್ಲಿವೆ. ಅವುಗಳ ಸೋಪಾನಗಳೇ ಸುವರ್ಣರತ್ನ ಖಚಿತವಾದ ಹವಳದಿಂದ ನಿರ್ಮಿತವಾಗಿವೆ. ಚತುರ್ಭುಜದಾರಿಗಳಾದ, ನಾನಾಭರಣ ಭೂಷಿತರಾದ, ವಿಷ್ವಕ್‌ಸೇನನ ಅನುಯಾಯಿಗಳಾದ ಕುಮುದ ಮುಂತಾದ ದ್ವಾರಪಾಲಕರು ಅಲ್ಲಿದ್ದಾರೆ. ಅವರಲ್ಲಿ ಯಾರೂ ಶುಕಮುನಿಯನ್ನು ತಡೆಯಲಿಲ್ಲ. ಒಳಗೆ ಹೋಗಿ ಅವರು ಸಿದ್ಧ ಸಾಧ್ಯ ಸೇವಿತನಾದ, ಚತುರ್ಭುಜಧಾರಿ, ಪೀತಾಂಬರಧಾರಿ, ಶ್ರೀಮತ್ಸಕೌಸ್ತುಭಶೋಭಿತ ದಿವ್ಯ

ವಿಗ್ರಹನಾದ ಶ್ರೀ ಮನ್ನಾರಾಯಣನನ್ನು ಕಂಡರು.ಶಂಖ, ಚಕ್ರ, ಗದಾ ಪದ್ಮಗಳು ಮೂರ್ತಿಮತ್ತಾಗಿ ಆ ಪರಮಾತ್ಮನನ್ನು ಸೇವಿಸುತ್ತಿದ್ದವು. ಸೊಂಟದಲ್ಲಿ ಒಡ್ಯಾಣ ಎಡಹೆಗಲಲ್ಲಿ ಯಜ್ಞೋಪವೀತ, ಕೈಗಳಲ್ಲಿ ಕಡಗಗಳು, ಭುಜಗಳಲ್ಲಿ ಅಂಗದಗಳು, ಶಿರಸ್ಸಿನಲ್ಲಿ ಮಂಡಲಾಕಾರವಾದ ಕಿರೀಟ, ಕಾಲುಗಳಲ್ಲಿ ಕಾಲ್ಗೆಜ್ಜೆಗಳು, ಇವುಗಳಿಂದ ಅಲಂಕೃತನಾದ ಶ್ರೀಹರಿಯನ್ನು ನೋಡಿ ಶುಕುಮುನಿಗಳು ಭಕ್ತಿಭಾವದಿಂದ ಭಗವಂತನನ್ನು ಸ್ತುತಿಸಿದರು.

## ಶುಕರು ಮಾಡಿದ ಸ್ತೋತ್ರ

ಲೋಕಸಾಕ್ಷಿಯಾದ ವಾಸುದೇವ ನಿನಗೆ, ನಮಸ್ಕಾರ,ಜಗದ್ ಬೀಜ, ಪರಿಪೂರ್ಣ, ಶೇಷ ಶಯನ, ಶ್ವೇತದ್ವೀಪನಿವಾಸ ನಿನಗೆ ನಮಸ್ಕಾರ. ಹಂಸ, ಮತ್ಸ್ಯ, ವರಾಹ, ನರಸಿಂಹ, ರೂಪಧಾರಿ, ಧ್ರುವನ ಆರಾಧ್ಯದೇವ ಸಾಂಖ್ಯಯೋಗ ಸ್ವಾಮಿ, ನಿನಗೆ ನಮಸ್ಕಾರ. ಕೂರ್ಮರೂಪ, ಪೃಥುಚಕ್ರವರ್ತಿಯಲ್ಲಿ ವಿಶೇಷ ರೂಪದಿಂದ ಸನ್ನಿಹಿತ, ಆನಂದ ಸ್ವರೂಪ, ಋಷಭರೂಪ, ಜಗತ್ ಸೃಷ್ಟಿ ಸ್ಥಿತಿ ಸಂಹಾರಕರ್ತ ನಿನಗೆ ನಮಸ್ಕಾರ; ಭೃಗುನಂದನ ಪರಶುರಾಮ, ರಘುನಂದನ ಶ್ರೀರಾಮ, ಪರಾತ್ಪರ, ಶ್ರೀಕೃಷ್ಣ, ವೇದವ್ಯಾಸ, ಬುದ್ಧ, ಕಲ್ಕಿ ನಿನಗೆ ನಮಸ್ಕಾರ. ವಾಸುದೇವ, ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ನಾಲ್ಕು ವ್ಯೂಹರೂಪಗಳೂ ನಿನ್ನವೇ, ನೀನೇ ಆಗಿರುವೆ. ನರನಾರಾಯಣ, ಶಿವವಿಷ್ಣು, ವಿಷ್ಣು ಎಂಬ ರೂಪಗಳೂ ನಾಮಗಳೂ ನಿನ್ನವೇ ಆಗಿವೆ. ವಿಶ್ವರೂಪ! ಇಂದ್ರಿಯ ಪ್ರೇರಕ, ಪುಂಡರೀಕಾಕ್ಷ, ಚತುರ್ವೇದ ಪ್ರತಿಪಾದ್ಯ, ದೈತ್ಯನಾಶನ, ನಿರಂಜನ, ಶರಣಾಗತವತ್ಸಲ, ನಿನಗೆ ನಮಸ್ಕಾರ. ನೀನು ನನ್ನನ್ನು ರಕ್ಷಿಸು.

ನಿರಂಜನಾಯ ನಿತ್ಯಾಯ ಹ್ಯವ್ಯಯಾಯಾಕ್ಷರಾಯ ಚ ।
ನಮಸ್ತೇ ಪಾಹೀ ಮಾಮೀಶ ಶರಣಾಗತವತ್ಸಲ ॥

ಶುಕಮುನಿಯ ಸ್ತೋತ್ರವನ್ನು ಕೇಳಿ ಭಗವಂತನು ಇಂತೆಂದನು, "ವ್ರತ ಪಾರಂಗತನಾದ, ವ್ಯಾಸ ಕುಮಾರ ಶುಕಮುನಿಯೇ, ನನ್ನ ಜ್ಞಾನ ಭಕ್ತಿಗಳನ್ನು ಹೊಂದಿದ ನಿನ್ನ ವಿಷಯದಲ್ಲಿ ನಾನು ಪ್ರಸನ್ನನಾಗಿರುವೆನು. ಹಿಂದೆ ನೀನು ಶ್ವೇತ ದೀಪದಲ್ಲಿ ಯಾವ ರೂಪವನ್ನು ನೋಡಿರುವೆಯೋ ಅವನೇ ನಾನು. ನೀನು ನನ್ನ ಪರಮಭಕ್ತನಾಗಿ ಮೋಕ್ಷ ಧರ್ಮವನ್ನು ಚಿಂತಿಸಿ ಅನುಷ್ಠಾನ ಮಾಡಿ ಸಿದ್ಧನಾಗಿರುವೆ. ಸಮಸ್ತ ಲೋಕಶ್ರಯನಾದ ನನ್ನ ಭಕ್ತಿಯು ದುರ್ಲಭವು. ಅದನ್ನು ಹೊಂದಿದ ಮೇಲೆ ಇನ್ನೇನೂ ಬೇಕಾಗಿಲ್ಲ. ಭೂಲೋಕದಲ್ಲಿ ನರನಾರಾಯಣರು ಕಲ್ಪಾವಸಾನದವರೆಗೆ ತಪೋನಿಷ್ಠರಾಗಿರುವರು. ಅವರ ಪ್ರೇರಣೆಯಂತೆ ನಿನ್ನ ತಂದೆಯಾದ ವ್ಯಾಸ ಮುನಿಯು ಭಾಗವತ ಶಾಸ್ತ್ರವನ್ನು ಮಾಡುವನು. ನೀನು ಭೂಲೋಕಕ್ಕೆ ಹೋಗಿ ಅದನ್ನು ಅಧ್ಯಯನ ಮಾಡು. ವ್ಯಾಸ ಮುನಿಯು ನಿನ್ನ ವಿಯೋಗದಿಂದ ದುಃಖಿತನಾಗಿ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿರುವನು. ನಿನಗೆ ಪ್ರಿಯನಾದ ಅವನನ್ನು ಪ್ರಸನ್ನಗೊಳಿಸು.

ಈ ಮಾತನ್ನು ಕೇಳಿ ಶುಕನು ನಾರಾಯಣನನ್ನು ನಮಸ್ಕರಿಸಿ ಬಂದ ಮಾರ್ಗದಲ್ಲಿಯೇ ಹಿಂತಿರುಗಿ ತಂದೆಯ ಬಳಿಗೆ ಹಿಂದಿರುಗಿದನು. ಶುಕನನ್ನು ನೋಡಿದ ಕೂಡಲೇ ವ್ಯಾಸರು ಸಂತುಷ್ಟರಾಗಿ ತಪಸ್ಸನ್ನು ನಿಲ್ಲಿಸಿದರು. ಅವರು ನರನಾರಾಯಣರನ್ನು ನಮಸ್ಕರಿಸಿ

ಶುಕನೊಡನೆ ಆಶ್ರಮಕ್ಕೆ ಬಂದರು. ''ಅಪ್ಪಾ, ನಿಮ್ಮಿಂದಲೇ ಭಾಗವತ ಸಂಹಿತೆಯನ್ನು ಶ್ರವಣ ಮಾಡಬೇಕೆಂದು ನಾರಾಯಣನ ಅಪ್ಪಣೆಯಾಗಿದೆ. ಆದುದರಿಂದ ನೀವು ಭಾಗವತವನ್ನು ರಚಿಸಿ ಉಪದೇಶಿಸಬೇಕು.''

ಈ ರೀತಿ ಶುಕನ ಪ್ರಾರ್ಥನೆಯನ್ನು ಕೇಳಿ ವ್ಯಾಸರು ವೇದ ಸಮಾನವಾದ ಹರಿ ಭಕ್ತಿವರ್ಧಕವಾದ, ಆಖ್ಯಾನ ಉಪಾಖ್ಯಾನಗಳನ್ನು ಒಳಗೊಂಡ, ದಿವ್ಯವಾದ ಭಾಗವತವನ್ನು ರಚಿಸಿ ನಿವೃತ್ತಿ ಧರ್ಮನಿರತನಾದ ಶುಕಮುನಿಗೆ ಅಧ್ಯಾಪನ ಮಾಡಿಸಿದರು.

**ಆತ್ಮಾರಾಮೋಽಪಿ ಭಗವಾನ್ ಪಾರಾಶರ್ಯಾತ್ಮಜಃ ಶುಕಃ ।**
**ಅಧೀತವಾನ್ ಸಂಹಿತಾಂ ನಿತ್ಯಂ ವಿಷ್ಣುಜನಪ್ರಿಯಾಂ ॥**

ಪೂಜ್ಯನಾದ ವ್ಯಾಸಕುಮಾರನಾದ ಶುಕನು ಆತ್ಮಾರಾಮನಾಗಿದ್ದರೂ ವಿಷ್ಣು ಭಕ್ತರಿಗೆ ಪ್ರಿಯವಾದ ಆ ಭಾಗವತ ಸಂಹಿತೆಯನ್ನು ಅಧ್ಯಯನ ಮಾಡಿದನು. ನಾರದನೇ, ಈ ರೀತಿಯಾಗಿ ಪಠನ ಶ್ರವಣ ಮಾಡುವವರಿಗೆ ಹರಿಭಕ್ತಿವರ್ಧಕವಾದ ಮೋಕ್ಷ ಧರ್ಮಗಳನ್ನು ನಿನಗೆ ತಿಳಿಸಿರುವೆನು.

*ನಾರದ ಮಹಾಪುರಾಣದಲ್ಲಿ ಅರವತ್ತೊಂದನೆಯ ಮುಗಿದುದು*



# ನಾರದ ಮಹಾಪುರಾಣದಲ್ಲಿ ತೃತೀಯ ಪಾದ

## ತಂತ್ರಭಾಗವತದ ನಿರೂಪಣೆ

**ಅಧ್ಯಾಯ - ೬೨**

**ಶೌನಕನು ಹೇಳುತ್ತಾನೆ:-** 'ಸಕಲಕಲಾಭಿಜ್ಞನಾದ, ಸಾಧುವಾದ, ಜ್ಞಾನಿಯಾದ ಸೂತನೇ, ನಮಗೆ ಕೃಷ್ಣ ಕಥೆಯನ್ನು ಹೇಳಿದ ನೀನು ಬಹುಕಾಲ ಬದುಕಿರು. ನಾರದನು ಸನಂದನನು ಹೇಳಿದ ಮೋಕ್ಷ ಧರ್ಮಗಳನ್ನು ಕೇಳಿದ ಮೇಲೆ ಏನು ಪ್ರಶ್ನೆ ಮಾಡಿದನು! ಸನಕಾದಿ ಋಷಿಗಳು ಲೋಕೋದ್ಧಾರಕ್ಕಾಗಿಯೇ ಈ ಲೋಕದಲ್ಲಿ ಸಂಚರಿಸುತ್ತಿರುವರು. ನಾರದನೂ ಕೃಷ್ಣಧ್ಯಾನ ಪರಾಯಣನು. ಅವರು ಒಂದೆಡೆ ಸೇರಿದಾಗ ಯಾವ ಕಥೆಯು ಪ್ರಸಕ್ತವಾಯಿತು?'

**ಸೂತನೆಂದನು -** ಸನಂದನನು ಉಪದೇಶ ಮಾಡಿದ ಮೋಕ್ಷಧರ್ಮಗಳನ್ನು ಕೇಳಿದ ಮೇಲೆ ನಾರದರು ಕೇಳಿದರು. 'ಮುನಿಶ್ವರರೇ! ಯಾವ ಮಂತ್ರಗಳಿಂದ ವಿಷ್ಣುವಿನ ಆರಾಧನೆಯನ್ನು ಮಾಡಬೇಕು! ವಿಷ್ಣು ಭಕ್ತರು ಯಾವ ದೇವತೆಗಳನ್ನು ಪೂಜಿಸಬೇಕು! ಭಾಗವತ ತಂತ್ರ, ಗುರುಶಿಷ್ಯರ ಕರ್ತವ್ಯವನ್ನು ಪಾಲನೆ ಮಾಡಲು ಪ್ರೇರಿಸುವ ದೀಕ್ಷೆ, ಬೆಳಗಿನಿಂದ ಮಾಡಬೇಕಾದ ಕರ್ತವ್ಯ ಎಲ್ಲವನ್ನುಹೇಳಿರಿ. ಯಾವ ಯಾವ ಮಾಸಗಳಲ್ಲಿ, ಯಾವ ಜಪ, ಹೋಮ, ವ್ರತಚರಣೆಗಳಿಂದ ಪರಮಾತ್ಮನು ಸಂತುಷ್ಟನಾಗುವನು? ಇವೆಲ್ಲವನ್ನು ನನಗೆ ಹೇಳಿರಿ.'' ಮಹಾತ್ಮರಾದ ನಾರದರ ಮಾತನ್ನು ಕೇಳಿ ಪೂಜ್ಯನಾದ ಸನತ್ಕುಮಾರನು ಹೇಳಿದನು. ''ನಾರದನೇ, ನಿನಗೆ ನಾನು ತಂತ್ರಭಾಗವತದ ವರ್ಣನೆಯನ್ನು ಮಾಡುವೆನು. ಇದನ್ನು ತಿಳಿದ ಭಕ್ತನು ವಿಷ್ಣುವನ್ನೇ ಹೊಂದುತ್ತಾನೆ. ಅದರಲ್ಲಿಯೂ ಮೊದಲು ಶೈವ ತಂತ್ರದಲ್ಲಿ ಮೂರು ಪದಾರ್ಥಗಳು ಮತ್ತು ನಾಲ್ಕು ಪಾದಗಳಿವೆ. ಪತಿ, ಪಶು, ಪಾಶ ಇವು ಮೂರು ಪದಾರ್ಥಗಳು, ಭೋಗ, ಮೋಕ್ಷ, ಕ್ರಿಯಾ ಮತ್ತು ಚರ್ಯಾ ಇವು ನಾಲ್ಕು ಪಾದಗಳು (ಸಾಧನಗಳು) ಶಿವನೇ ಪಶುಪತಿಯು. ಜೀವರೇ ಪಶುಗಳು.

ಸ್ವರೂಪಜ್ಞಾನವುಂಟಾಗದೆ ಮೋಹಾದಿಯುಕ್ತರಾದ ಅನ್ಯಥಾ ಜ್ಞಾನಿಗಳಾದ ಜೀವರು ಪಶುಗಳಂತೆ ಇರುವರು. ಈ ಪಶುಗಳ ಪಾಶವು ಐದು ವಿಧ - ಅವುಗಳ ಲಕ್ಷಣವನ್ನೆಲ್ಲಾ ಪ್ರತ್ಯೇಕವಾಗಿ ಹೇಳುತ್ತೇನೆ. ಪಶುಗಳು ವಿಜ್ಞಾನಾಕಲ, ಪ್ರಲಯಾಕಲ ಮತ್ತು ಸಕಲ ಎಂದು ಮೂರು ವಿಧವಾಗಿದ್ದಾರೆ. ಇವರಲ್ಲಿ ವಿಜ್ಞಾನಾಕಲರು ಮಲ ಮತ್ತು ಕರ್ಮವೆಂಬ ಪಾಶದ್ವಯಬದ್ಧರು. ಸಕಲ ಪಶುಗಳು ಮಲ-ಮಾಯಾ ಕರ್ಮಗಳೆಂಬ ಮೂರು ಪಾಶಗಳಿಂದ ಬದ್ಧರು. ವಿಜ್ಞಾನಾಕಲುಷ ಪಶುಗಳು ಸಮಾಪ್ತಕಲುಷರು, ಅಸಮಾಪ್ತಕಲುಷರೆಂದು ಎರಡು ವಿಧ. ಪ್ರಲಯಾಕಲ ಪಶುಗಳು ಪಕ್ವಮಲರು ಮತ್ತು ಅಪಕ್ವಮಲರು ಎಂದು ಎರಡು ವಿಧ. ವಿಜ್ಞಾನಾಕಲ ಮತ್ತು ಪ್ರಲಯಾಕಲ ಎಂಬ ಎರಡು ವಿಧವಾದ ಪಶುಗಳು ಶುದ್ಧಮಾರ್ಗದಲ್ಲಿರುತ್ತಾರೆ. ಸಕಲ ಪಶುಗಳು ಕಲಾ ಮುಂತಾದ ತತ್ತ್ವಗಳಿಗೆ ಅಧೀನರಾಗಿ ಬೇರೆ ಬೇರೆ ಲೋಕಗಳಲ್ಲಿ ತಮ್ಮ ಕರ್ಮಾನುಸಾರವಾಗಿ ತಿರ್ಯಕ್ ಮನುಷ್ಯಾದಿ ಶರೀರಗಳನ್ನು ಹೊಂದಿ ತಿರುಗುತ್ತಾ ಇರುತ್ತಾರೆ. ಮಲಜ, ಕರ್ಮಜ, ಮಾಯೇಯ, (ಮಾಯಾಜನ್ಯ) ತಿರೋಧಾನ ಶಕ್ತಿಜ, ಮತ್ತು ಬಿಂದುಜ ಎಂಬುದಾಗಿ

ಪಾಶವು ಐದು ವಿಧ. ಹೊಟ್ಟು ಆವರಿಸಿರುವಂತೆ ಮಲವು ಪುರುಷನ ದೃಕ್‌ಶಕ್ತಿ (ಜ್ಞಾನ) ಕ್ರಿಯಾಶಕ್ತಿಗಳನ್ನು ಆಚ್ಛಾದಿಸಿರುತ್ತದೆ. ಇದೇ ಜೀವಾತ್ಮರಿಗೆ ದೇಹಾಂತರ ಪ್ರಾಪ್ತಿಗೆ ಕಾರಣವಾಗಿರುತ್ತದೆ. ಕರ್ಮವೇ ಧರ್ಮ ಅಧರ್ಮ ಎಂಬ ಹೆಸರಿನಿಂದ ವಿಚಿತ್ರವಾದ ಫಲವನ್ನು ಕೊಡುತ್ತದೆ. ಕರ್ಮವು ಪ್ರವಾಹ ರೂಪದಿಂದ ನಿತ್ಯವಾಗಿದೆ. ಬೀಜಾಂಕುರ ನ್ಯಾಯದಿಂದ ಇದು ಅನಾದಿಯಾಗಿದೆ. ಈ ರೀತಿ ಮಲಜ ಕರ್ಮಜ ಪಾಶಗಳನ್ನು ಹೇಳಿದ್ದಾಯಿತು. ಬಿಂದುಜ ಪಾಶವು ಅಪರಾ ಮುಕ್ತಿಸ್ವರೂಪವಾಗಿದೆ ಮತ್ತು ಶಿವ ಸ್ವರೂಪವನ್ನು ಉಂಟುಮಾಡತಕ್ಕದ್ದಾಗಿದೆ. ಸತ್‌ಚಿತ್ ಆನಂದ ಸ್ವರೂಪನಾದ ಸರ್ವವ್ಯಾಪಿಯಾದ ಪರಮಾತ್ಮನೇ ಸಮಸ್ತ ಜೀವರಿಗೂ ಕಾರಣನಾಗಿದ್ದಾನೆ. ಅವನು ಮನದಲ್ಲಿದ್ದರೂ ಪ್ರಕಟನಾಗಲಾರ. ದೃಕ್‌ಶಕ್ತಿ ಮತ್ತು ಕ್ರಿಯಾಶಕ್ತಿಗಳು ಉತ್ತಮವಾದ ಶೈವತೇಜಸ್ಸುಗಳಾಗಿವೆ. ಜೀವರನ್ನು ಪಶು ಸಮುದಾಯದಿಂದ ಮುಕ್ತರನ್ನಾಗಿ ಮಾಡತಕ್ಕ ಏಕಾಂತ ಸ್ವರೂಪವಾದ ಆದ್ಯಶಕ್ತಿಯು ಚಿದ್ರೂಪವಾಗಿದೆ. ಇದೇ ಶಿವತತ್ತ್ವವು. ಇದು ಸರ್ವಾನುಗ್ರಹವಾಗಿದೆ. ಈಶತತ್ತ್ವ ಮತ್ತು ವಿದ್ಯಾತತ್ತ್ವ ಎಂಬ ಎರಡು ತತ್ತ್ವಗಳೂ ಶಿವಸ್ವರೂಪವೇ ಆಗಿವೆ. ಅನಂತ7, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ ಮತ್ತು ಶಿಖಂಡಿ ಎಂಬ ಎಂಟು ವಿದ್ಯೇಶ್ವರರು ಈಶತತ್ತ್ವವನ್ನು ಆಶ್ರಯಿಸಿರುತ್ತಾರೆ. ಏಳುಕೋಟಿ ಮಂತ್ರಗಳು ವಿದ್ಯಾತತ್ತ್ವವನ್ನು ಆಶ್ರಯಿಸಿರುತ್ತವೆ. ಈಶ್ವರನೇ ಬಿಂದು ರೂಪದಿಂದ ಸುಶೋಭಿತನಾಗಿ ಉಪಾದಾನಕಾರಣನಾಗುತ್ತಾನೆ.

ಮಾಯಾಪಾಶವೂ ಉಪಾದಾನವಾಗಿದೆ. ಅದು ನಿತ್ಯ, ಮತ್ತು ಕಲ್ಯಾಣಮಯ ವಾಗಿದೆ. ಮಾಯೆಯು ಸ್ವಭಾವತಃ ಮೋಹಜನಕವಾಗಿದೆ. ಇದಕ್ಕಿಂತಲೂ ಸೂಕ್ಷ್ಮವಾದ ವ್ಯಾಪಕವಾದ ಮಾಯೆಯನ್ನು 'ಪರಾಮಾಯಾ' ಎಂದು ಹೇಳುತ್ತಾರೆ. ಮಾಯೆಯ ಮೂಲಕವಾಗಿಯೇ ಈಶ್ವರನು ಜೀವರಿಗೆ ಶರೀರ ಮತ್ತು ಇಂದ್ರಿಯಗಳನ್ನು ಸೃಷ್ಟಿಸಿರುತ್ತಾನೆ. ಈ ಮಾಯೆ ಯಿಂದ ಕಾಲ, ನಿಯತಿ, ಕಲಾ ವಿದ್ಯಾ, ರಾಗ, ಪ್ರಕೃತಿ, ಗುಣ ಎಂಬ ಸಪ್ತ ಗ್ರಂಥಿಗಳು ಪರಂಪರೆಯಿಂದ ಉತ್ಪನ್ನವಾಗುತ್ತವೆ. ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳಿಂದಾಗಿ ಬುದ್ಧಿಯೂ ಸಾತ್ವಿಕ ರಾಜಸ, ತಾಮಸ ಎಂದು ಮೂರು ವಿಧ. ಅವ್ಯಕ್ತದಿಂದ ಹುಟ್ಟಿದ ಮಹತ್ತತ್ವದಿಂದ ಅಹಂಭಾವ ವೃತ್ತಿಯುಳ್ಳ ಅಹಂಕಾರತತ್ತ್ವವು ಹುಟ್ಟಿದೆ. ಅಹಂಕಾರತತ್ತ್ವವೂ ತೈಜಸ, ರಾಜಸ ಮತ್ತು ತಾಮಸ ಎಂದು ಮೂರು ವಿಧ. ತೈಜಸಾಹಂಕಾರದಿಂದ ಮನಸ್ಸು, ಮತ್ತು ಜಾನೇಂದ್ರಿಯಗಳು, ರಾಜಸಾಹಂಕಾರದಿಂದ ಕರ್ಮೇಂದ್ರಿಯಗಳೂ, ತಾಮಸಾಹಂಕಾರ ದಿಂದ ಪಂಚಭೂತ ಕಾರಣವಾದ ಪಂಚತನ್ಮಾತ್ರಗಳೂ ಉತ್ಪನ್ನವಾಗುತ್ತವೆ, ಮನಸ್ಸಿಗೆ ಇಚ್ಛಾ ಮತ್ತು ಸಂಕಲ್ಪಗಳೇ ವ್ಯಾಪಾರಗಳು. ಅದು ಬಾಹ್ಯೇಂದ್ರಿಯ ರೂಪಗಳನ್ನು ಧರಿಸಿ ಭೋಕ್ತನಿಗೆ ಭೋಗವನ್ನುಂಟು ಮಾಡುತ್ತದೆ. ಮನಸ್ಸು ಸಂಕಲ್ಪರೂಪದಿಂದ ಹೃದಯ ದೊಳಗಿದ್ದು ಇಂದ್ರಿಯಗಳಲ್ಲಿ ವಿಷಯ ಗ್ರಹಣಶಕ್ತಿಯನ್ನು ಉತ್ಪಾದಿಸುವದರಿಂದ ಅಂತಃಕರಣ ವೆನಿಸಿಗೊಳ್ಳುತ್ತದೆ. ಮನಸ್ಸು ಬುದ್ಧಿ, ಅಹಂಕಾರ ಈ ಮೂರು ಅಂತಃಕರಣದ ಪ್ರಭೇದಗಳು-ಇಚ್ಛಾ, ಬೋಧ, ಸಂರಂಭ (ಅಹಂಭಾವ) ಇವು ಮೂರು ಕ್ರಮವಾಗಿ ಇವುಗಳ ವ್ಯಾಪಾರಗಳು.

ಕಿವಿ, ತ್ವಚೆ, ಕಣ್ಣು, ನಾಲಿಗೆ, ಮೂಗು ಇವು ಜ್ಞಾನೇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸಗಂಧಗಳು ಇವುಗಳಿಗೆ ಗ್ರಾಹ್ಯ ವಿಷಯಗಳು. ವಾಕ್, ಪಾಣಿ, ಪಾದ, ಪಾಯು,

ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳಿಗೆ, ಕ್ರಮವಾಗಿ ಮಾತಾಡುವದು, ವಸ್ತುಗಳ ಸ್ವೀಕಾರ, ಚಲನ, ಮಲ ವಿಸರ್ಜನ. ಆನಂದಾನುಭವವೆಂಬ ಐದು ವ್ಯಾಪಾರಗಳು. ಶಬ್ದ ತನ್ಮಾತ್ರಾದಿ ಪಂಚತನ್ಮಾತ್ರಗಳಿಂದ ಆಕಾಶಾದಿ ಪಂಚಭೂತಗಳು ಉತ್ಪನ್ನವಾಗಿವೆ. ಶಬ್ದವು ಆಕಾಶದ ಮುಖ್ಯಗುಣ. ಅದು ಉಳಿದ ನಾಲ್ಕು ಭೂತಗಳಿಗೆ ಸಾಮಾನ್ಯ ಗುಣ, ಹೀಗೆಯೇ ಸ್ಪರ್ಶ, ರೂಪ, ರಸ, ಕ್ರಮವಾಗಿ ವಾಯು, ತೇಜಸ್, ಜಲ, ವಿಶೇಷ ಗುಣಗಳೆಂದೂ ಉಳಿದವುಗಳಿಗೆ ಸಾಮಾನ್ಯ ಗುಣಗಳೆಂದೂ ತಿಳಿಯಬೇಕು. ಗಂಧವು ಕೇವಲ ಪೃಥ್ವಿಯ ವಿಶೇಷಗುಣವಾಗಿದೆ. ಆಕಾಶಾದಿ ಪಂಚಮಹಾಭೂತಗಳಿಗೆ ಕ್ರಮವಾಗಿ ಅವಕಾಶದಾನ, ಚೇಷ್ಟಾ, ಪಾಶ. ಸಂಗ್ರಹ ಮತ್ತು ಮತ್ತು ಧಾರಣಗಳೇ ಕಾರ್ಯಗಳು. ವಾಯುವಿಗೆ ಅನುಷ್ಣಾಶೀತಸ್ಪರ್ಶವು, ಜಲದಲ್ಲಿ ಶೀತ ಸ್ಪರ್ಶವು, ತೇಜಸ್ಸಿನಲ್ಲಿ ಉಷ್ಣ ಸ್ಪರ್ಶವೂ ಇವೆ. ಅಗ್ನಿಯಲ್ಲಿ ಭಾಸ್ಕರ ಶುಕ್ಲರೂಪ, ತೇಜಸ್ಸಿನಲ್ಲಿ ಅಭಾಸ್ವರ ಶುಕ್ಲರೂಪವಿದೆ. ಪೃಥಿವಿಯಲ್ಲಿ ಶುಕ್ಲಾದಿ ಅನೇಕ ರೂಪಗಳಿವೆ. ರೂಪವು ಕೇವಲ ಮೂರು ಭೂತಗಳಲ್ಲಿದೆ. ಜಲದಲ್ಲಿ ಕೇವಲ ಮಧುರ ರಸವಿದೆ. ಪೃಥಿವಿಯಲ್ಲಿ ಆರು ವಿಧ ರಸಗಳೂ ಇವೆ. ಅಲ್ಲಿ ಸುರಭಿ ಅಸುರಭಿ ಎಂಬ ಎರಡು ವಿಧವಾದ ಗಂಧಗಳೂ ಇವೆ. ಸಂಪೂರ್ಣ ಚರಾಚರ ಜಗತ್ತು ಪಂಚಭೂತಮಯವಾಗಿದೆ. ದೇಹದಲ್ಲಿರುವ ಎಲುಬು, ಮಾಂಸ, ಕೇಶ, ತ್ವಚೆ, ಉಗುರು ಮತ್ತು ಹಲ್ಲುಗಳು ಪೃಥಿವಿಯ ಅಂಶಗಳು, ಮೂತ್ರ, ರಕ್ತ, ಕಫ, ಬೆವರು, ವೀರ್ಯಗಳು ಜಲಾಂಶಗಳು, ಹೃದಯ, ನೇತ್ರ, ಪಿತ್ತಗಳಲ್ಲಿ ತೇಜಸ್ಸಿನ ಅಂಶವಿದೆ. ಪ್ರಾಣಾದಿಗಳಲ್ಲಿ ವಾಯುವಿನ ವ್ಯಾಪಾರವಿದೆ, ಎಲ್ಲಾ ನಾಡಿಗಳಲ್ಲಿಯೂ ಗರ್ಭಾಶಯದಲ್ಲಿಯೂ ಆಕಾಶತತ್ತ್ವವು ವ್ಯಾಪವಾಗಿದೆ. ಕಲೆಯಿಂದ ಆರಂಭಿಸಿ ಪೃಥ್ವೀ ಪರ್ಯಂತರವಾದ ತತ್ತ್ವಸಮುದಾಯವು ಸಂಪೂರ್ಣ ಬ್ರಹ್ಮಾಂಡಕ್ಕೆ ಕಾರಣವಾಗಿದೆ. ಈ ರೀತಿ ಪ್ರತ್ಯೇಕ ಪುರುಷನಲ್ಲಿಯೂ ನಿಯತಿ ಕಲಾ ಮುಂತಾದ ತತ್ತ್ವಗಳು ಜೀವನ ಕರ್ಮವಶದಿಂದ ಪ್ರಾಪ್ತವಾದ ಶರೀರದಲ್ಲಿ ವ್ಯಾಪಾರವನ್ನು ಮಾಡುತ್ತಿರುತ್ತವೆ. ಇದೇ ಮಾಯೆಯ ಪಾಶ.

ತಿರೋಧಾನ ಶಕ್ತಿಪಾಶವು ಭೂಮಂಡಲದಲ್ಲಿ ಸ್ಥಾವರ - ಜಂಗಮ ರೂಪದಿಂದ ಇರುತ್ತದೆ. ಪರ್ವತ ವೃಕ್ಷಾದಿಗಳು ಸ್ಥಾವರಗಳು. ಜಂಗಮವು ಸ್ವೇದಜ, ಅಂಡಜ, ಜರಾಯುಜವೆಂದು ಮೂರು ವಿಧ. ಒಟ್ಟು ನಲವತ್ತೆಂಟು ಲಕ್ಷ ಯೋನಿಗಳಲ್ಲಿ ಜೀವನು ಕರ್ಮವಶನಾಗಿ ತಿರುಗುತ್ತಾ, ಎಂದೋ ಒಂದು ಬಾರಿ ಸಮಸ್ತ ಪುರುಷಾರ್ಥ ಸಾಧಕವಾದ ಮನುಷ್ಯನ ಜನ್ಮವನ್ನು ಹೊಂದುತ್ತಾನೆ. ಬಹಳ ಹೆಚ್ಚಾದ ಪುಣ್ಯದಿಂದ ಭಾರತ ವರ್ಷದಲ್ಲಿ ಬ್ರಾಹ್ಮಣಾದಿ ದ್ವಿಜ ಕುಲದಲ್ಲಿ ಜನ್ಮವನ್ನು ತಾಳುತ್ತಾನೆ. ಸ್ತ್ರೀ-ಪುರುಷರ ಸಮಾಗಮವಾದಾಗ ಶುಕ್ರಶೋಣಿತವು ಮಿಶ್ರವಾಗಿ ಎರಡೂ ಸೇರಿದ ಒಂದು ತೊಟ್ಟು ಗರ್ಭಕೋಶವನ್ನು ಸೇರಿ ಶರೀರ ಉತ್ಪನ್ನವಾಗುತ್ತದೆ. ಶುಕ್ರಭಾಗವು ಅಧಿಕವಾದರೆ ಗಂಡು, ಶೋಣಿತ ಭಾಗವು ಅಧಿಕವಾಗಿದ್ದರೆ ಹೆಣ್ಣು ಶಿಶುವು ಜನಿಸುತ್ತದೆ. ಕರ್ಮಪಾಶ ಬದ್ಧನಾದ ಯಾವನೋ ಒಬ್ಬ ಸಕಲ ಜೀವನು ಕಲೆಯಿಂದ ಸಹಿತನಾಗಿ ಜೀವಭಾವವನ್ನು ಹೊಂದಿ ಶರೀರದಲ್ಲಿ ಪ್ರವೇಶಿಸುತ್ತಾನೆ. ಗರ್ಭದಲ್ಲಿ ದುಃಖವನ್ನು ಅನುಭವಿಸುತ್ತಾ ಪೂರ್ವಜನ್ಮಗಳ ಶುಭಾಶುಭಗಳನ್ನು ಸ್ಮರಿಸುತ್ತಾ ಪೂರ್ಣ ಗರ್ಭವಾದ ಮೇಲೆ ಮಾತೃಯೋನಿಯಿಂದ ತಲೆಕೆಳಗಾಗಿ ಬರುತ್ತಾನೆ. ಹುಟ್ಟಿದ ಒಂದು ಕ್ಷಣ ಸುಮ್ಮನಿದ್ದು ಅನಂತರ ಅಳಲು ಆರಂಭಿಸುತ್ತಾನೆ. ಕ್ರಮೇಣ ಬಾಲ್ಯವನ್ನು ಕಳೆದು, ಅಂಗಾಂಗಳ ನ್ಯೂನತೆಗಳನ್ನು ಸರಿಪಡಿಸಿಕೊಂಡು ಯೌವನವನ್ನು ಹೊಂದುತ್ತಾನೆ. ಇಂತಹ ಲೋಕಕ್ಕೆಲ್ಲಾ ಉಪಕಾರ

ಮಾಡಲು ಅನುಕೂಲವಾದ ಮನುಷ್ಯ ಜನ್ಮವನ್ನು ಹೊಂದಿದಾಗಲೂ ಆತ್ಮೋದ್ಧಾರ ಮಾಡಿಕೊಳ್ಳದಿರುವವನು ಪರಮ ಪಾಪಿಯು. ಆಹಾರ, ನಿದ್ರೆ, ಭಯ ಮೈಥುನಗಳು ಪಶುಗಳಿಗೂ ಮನುಷ್ಯರಿಗೂ ಸಮಾನವಲ್ಲವೇ? ಇವುಗಳಲ್ಲಿಯೇ ಆಸಕ್ತನಾದವನು ಮೂರ್ಖ, ಆತ್ಮಘಾತಕ. ತನ್ನ ಬಂಧವನ್ನು ನಾಶಪಡಿಸಿಕೊಳ್ಳಲು ಪ್ರಯತ್ನಪಡುವುದೇ ಮನುಷ್ಯನ ಉತ್ಕರ್ಷ. ಪಾಶಬಂಧನದ ನಾಶವಾದರೋ ಮಂತ್ರದೀಕ್ಷೆಯಿಂದಲೇ ಸಾಧ್ಯ. ಮಂತ್ರದೀಕ್ಷೆಯಿಂದ ಪರಿಶುದ್ಧನಾದ ಆತ್ಮನು ನೈಜರೂಪವಾದ ಜ್ಞಾನದಿಂದ ಈಶ್ವರನ ಧ್ಯಾನಮಾಡಿ ಸಾಕ್ಷಾತ್ಕರಿಸುವನು. ಶಿವ ಮಂತ್ರಗಳಿಂದ ಈಶ್ವರನ ಪೂಜೆ ಮಾಡುವನು. ದೀಕ್ಷಿತನು ತಂತ್ರದಲ್ಲಿ ಹೇಳಿರುವಂತೆ ಜಾತಿ ಧರ್ಮಾನುಷ್ಠಾನಮಾಡುತ್ತಾ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಯಾವ ಜಾತಿ ಮತ್ತು ಆಶ್ರಮದಲ್ಲಿದ್ದು ದೀಕ್ಷೆಯನ್ನು ಪಡೆಯುವನೋ, ಅದನ್ನು ಉಲ್ಲಂಘಿಸುವ ಯೋಚನೆಯನ್ನೂ ಎಂದೂ ಮಾಡಬಾರದು. ವರ್ಣಾಶ್ರಮ ಧರ್ಮದಲ್ಲಿದ್ದು ಕರ್ಮಗಳನ್ನು ಮಾಡುವವನಿಗೆ ಕರ್ಮ ಬಂಧನವಿಲ್ಲ. ದೀಕ್ಷಿತನು ಮಂತ್ರಸಿದ್ಧಿಯನ್ನು ಪಡೆದು ತನ್ನ ಅಪೇಕ್ಷಿತ ಭೋಗಗಳನ್ನು ಆಯಾ ಲೋಕದಲ್ಲಿ ಪಡೆದು ಅನಂತರ ಮೋಕ್ಷವನ್ನು ಪಡೆಯುವನು. ಯಾವನು ದೀಕ್ಷಾ ಸ್ವೀಕಾರಮಾಡಿಯೂ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುವದಿಲ್ಲವೋ ಅವನು ಕೆಲವು ಸಮಯದವರೆಗೆ ಪಿಶಾಚನಾಗುತ್ತಾನೆ. ಆದ್ದರಿಂದ ಲೋಪವಿಲ್ಲದಂತೆ ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸುವವನು ವಿಚ್ಛೇದನವಿಲ್ಲದೆ ದೀಕ್ಷಾ ಮಂತ್ರ ಜಪ ಮಾಡುತ್ತಿದ್ದರೆ ಅವನಿಗೆ ಮೋಕ್ಷವುಂಟಾಗುತ್ತದೆ. ಗುರುಭಕ್ತನ ದೀಕ್ಷೆಯಿಂದ ಗುರು ಮೂರ್ತ್ಯಂತರ್ಗತನಾದ ಈಶ್ವರನು ಅವನಿಗೆ ಸದ್ಗತಿಯನ್ನು ಕೊಡುವನು. ಕಪಟಿಯು ಗುರುಭಕ್ತಿಹೀನನು ಮಾಡಿದ ಕರ್ಮ ನಿಷ್ಫಲ. ಅವನು ಪ್ರಾಯಶ್ಚಿತ್ತಕ್ಕೆ ಅರ್ಹ. ತ್ರಿಕರಣಗಳಿಂದ ಗುರಭಕ್ತನಾದವನಿಗೆ ಪ್ರಾಯಶ್ಚಿತ್ತವಿಲ್ಲ. ಹೆಜ್ಜೆ ಹೆಜ್ಜೆಗೂ ಅವನಿಗೆ ಸಿದ್ಧಿಯಾಗುತ್ತದೆ. ಹೀಗೆ ಗುರುಭಕ್ತಿಯುಳ್ಳವನಾಗಿ ಸರ್ವಸ್ವವನ್ನು ನಿವೇದಿಸುತ್ತಿರುವ ಶಿಷ್ಯನಿಗೆ ಮಿಥ್ಯಾಮಂತ್ರಗಳ ಉಪದೇಶ ಮಾಡುವ ಗುರುವೂ ಪ್ರಾಯಶ್ಚಿತ್ತಾರ್ಹನೇ ಸರಿ.

ನಾರದ ಮಹಾಪುರಾಣದಲ್ಲಿ ಅರವತ್ತೆರಡನೆಯ ಅಧ್ಯಾಯ ಮುಗಿದುದು

—o—

## ಮಂತ್ರ, ಮಂತ್ರದೋಷ, ಗುರುಶಿಷ್ಯಲಕ್ಷಣ — ಅಧ್ಯಾಯ - ೬೩

**ಸನತ್ಕುಮಾರು:-** ನಾನೀಗ ಜೀವನ ಪಾಶವಿಚ್ಛೇದಕ್ಕಾಗಿ ಅಭೀಷ್ಟ ಪ್ರದಾಯಕವಾದ ಮಂತ್ರಗಳಿಗೆ ವೀರ್ಯವನ್ನು ತುಂಬುವ ದೀಕ್ಷಾವಿಧಿಯನ್ನು ಹೇಳುತ್ತೇನೆ. ದಿವ್ಯ ಭಾವವನ್ನು ಕೊಟ್ಟು ಪಾಪಕ್ಷಯವನ್ನು ಮಾಡುವುದರಿಂದ ಅದನ್ನು ದೀಕ್ಷೆಯೆಂದು ಹೇಳುತ್ತಾರೆ.

**ದಿವ್ಯಂ ಭಾವಂ ಯತೋ ದದ್ಯಾತ್ ಕ್ಷಿಣುಯಾದ್ದುರಿತಾನಿ ಚ ।**
**ಅತೋ ದೀಕ್ಷೇತಿ ಸಾ ಪ್ರೋಕ್ತಾ ಸರ್ವಾಗಮ ವಿಶಾರದೈಃ ॥**

ಮನನ ಅಂದರೆ ಸರ್ವಜ್ಞಾನ. ತ್ರಾಣ ಅಂದರೆ, ಸಂಸಾರಿಗಳಾದ ಜೀವರ ಮೇಲೆ ಅನುಗ್ರಹ. ಈ ಮನನ ತ್ರಾಣಗಳಿಗೆ ಸಾಧಕವಾದುದರಿಂದ ಕೆಲವು ವಿಶೇಷವಾದ ಅಕ್ಷರಗಳ ರಾಶಿಯನ್ನು 'ಮಂತ್ರ'ವೆಂದು ಹೇಳುತ್ತಾರೆ.

**ಮನನಂ ಸರ್ವವೇದಿತ್ವಂ ತ್ರಾಣಂ ಸಂಸಾರ್ಯನುಗ್ರಹಃ ।**
**ಮನನಾತ್ ತ್ರಾಣಧರ್ಮತ್ವಾತ್ ಮಂತ್ರ ಇತ್ಯಭಿಧೀಯತೇ ॥**

ಮಂತ್ರಗಳು ಸ್ತ್ರೀ, ಪುರುಷ ಮತ್ತು ನಪುಂಸಕವೆಂದು ಮೂರು ವಿಧ. ಕೊನೆಯಲ್ಲಿ ಎರಡು 'ಠ' ಅಂದರೆ ಸ್ವಾಹಾಂತ ಮಂತ್ರಗಳು ಸ್ತ್ರೀ ಮಂತ್ರಗಳು. 'ಹುಂಫಟ್' ಎಂಬ ಅಕ್ಷರಗಳಿಂದ ಕೊನೆಯಾಗುವ ಮಂತ್ರಗಳು ಪುರುಷ ಮಂತ್ರಗಳು. 'ನಮಃ' ಎಂದು ಕೊನೆಯಾಗುವ ಮಂತ್ರಗಳು ನಪುಂಸಕ ಮಂತ್ರಗಳು. ಎಲ್ಲಾ ಮಂತ್ರಗಳಿಗೂ ದೇವತೆಗಳು ಪುರುಷರು. ಎಲ್ಲಾ ವಿದ್ಯೆಗಳಿಗೂ ದೇವತೆಗಳು ಸ್ತ್ರೀಯರು. ಶಾಂತಿ, ವಶ್ಯ, ಸ್ತಂಭನ, ದ್ವೇಷಣ, ಉಚ್ಚಾಟನ ಮತ್ತು ಮಾರಣವೆಂಬ ಆರು ಕರ್ಮಗಳಲ್ಲಿ ಈ ಮಂತ್ರಗಳ ಪ್ರಯೋಗವಾಗುತ್ತದೆ. ರಾಂ ಮತ್ತು ಸ್ವಾಹಾದಿಂದ ಆದ್ಯಂತದಲ್ಲಿ ಕೂಡಿರುವ ಮಂತ್ರಗಳು ಆಗ್ನೇಯ ಮಂತ್ರಗಳು. ಭೃಗುಬೀಜ 'ಸಂ', ಪೀಯೂಷ ಬೀಜ 'ವಂ' ಇವುಗಳಿಂದ ಕೂಡಿದ ಮಂತ್ರಗಳು ಸೋಮ ಮಂತ್ರಗಳು. ಈ ಪ್ರಕಾರ ಎಲ್ಲಾ ಮಂತ್ರಗಳೂ ಅಗ್ನೀಷೋಮಾತ್ಮಕವೆಂದು ತಿಳಿಯಬೇಕು. ಬಲಭಾಗದ 'ಪಿಂಗಳಾ' ನಾಡಿಯಲ್ಲಿ ಶ್ವಾಸ ಸಂಚಾರವಾಗುತ್ತಿರುವಾಗ 'ಆಗ್ನೇಯ' ಮಂತ್ರಗಳೂ ಎಡಭಾಗದ 'ಇಡಾ' ನಾಡಿಯಲ್ಲಿ ಶ್ವಾಸ ಸಂಚಾರವಾಗುವಾಗ ಸೋಮ ಮಂತ್ರಗಳೂ ಜಾಗ್ರತವಾಗಿರುತ್ತವೆ. ಎರಡೂ ನಾಡಿಗಳಲ್ಲಿ ಶ್ವಾಸ ಸಂಚಾರವಾಗುತ್ತಿರುವಾಗ ಎಲ್ಲಾ ಮಂತ್ರಗಳೂ ಜಾಗ್ರತವಾಗಿರತ್ತವೆ. ಆದರೆ ಈ ರೀತಿಯ ವಾಯುಸಂಚಾರವಿಲ್ಲದಿರುವಾಗ ಮಾಡಿದ ಮಂತ್ರ ಜಪವು ವ್ಯರ್ಥವಾಗುತ್ತದೆ. ಅನುಲೋಮ ಕ್ರಮದಲ್ಲಿ ಮಂತ್ರವನ್ನು ಹೇಳುವಾಗ ಅನುಸ್ವಾರಸಹಿತವಾಗಿಯೂ, ವಿಲೋಮ ಕ್ರಮದಲ್ಲಿ ಹೇಳುವಾಗ ವಿಸರ್ಗಸಹಿತ ವಾಗಿಯೂ ಹೇಳಬೇಕು. ಈ ರೀತಿ ಹೇಳಿದರೆ ದೇವತಾ ಪ್ರಬೋಧವುಂಟಾಗಿ ಬೇಗನೆ ಸಿದ್ಧಿಯುಂಟಾಗುವದು. ಕ್ರೂರ ಕರ್ಮಗಳಲ್ಲಿ ಆಗ್ನೇಯ ಮಂತ್ರಗಳನ್ನೂ, ಸೌಮ್ಯ ಕರ್ಮಗಳಲ್ಲಿ ಸೌಮ್ಯ ಮಂತ್ರಗಳನ್ನೂ ಉಪಯೋಗಿಸಬೇಕು. ಶಾಂತ, ಜ್ಞಾನ ಮತ್ತು ಅತ್ಯಂತ ರೌದ್ರ ಎಂದು ಮಂತ್ರಗಳು ಮೂರು ವಿಧ. ಶಾಂತ ಮಂತ್ರದಲ್ಲಿಯೂ 'ಹುಂ ಫಟ್' ಎಂಬ ಪಲ್ಲವವನ್ನು ಜೋಡಿಸಿದಾಗ 'ರೌದ್ರ'ವಾಗುತ್ತದೆ.

## ಮಂತ್ರ ದೋಷಗಳು

ಛಿನ್ನತಾ ಮುಂತಾದವುಗಳು ನಲವತ್ತೆಂಟು ಮಂತ್ರ ದೋಷಗಳು. ದೋಷಯುಕ್ತ ಮಂತ್ರಗಳು ಸಾಧಕನನ್ನು ರಕ್ಷಿಸುವದಿಲ್ಲ. ಮಂತ್ರದ ಆದಿ ಮಧ್ಯ ಅಥವಾ ಅಂತ್ಯದಲ್ಲಿ ಸಂಯುಕ್ತ ವಿಯುಕ್ತ ಅಥವಾ ಅಥವಾ ಸ್ವರಸಹಿತ ಮೂರು ನಾಲ್ಕು ಅಥವಾ ಐದು ಅಗ್ನಿ ಬೀಜಗಳ (ರಂ) ಪ್ರಯೋಗವಿದ್ದರೆ ಆ ಮಂತ್ರವು 'ಛಿನ್ನ' ಮಂತ್ರ. ಆದಿ ಅಂತ್ಯ ಮಧ್ಯಗಳಲ್ಲಿ ಎರಡು ಬಾರಿ ಭೂಮಿಬೀಜ 'ಲಂ' ಇದ್ದರೆ 'ರುದ್ರ' 'ಮಂತ್ರ'. ಇದು ಬಹಳ ಕ್ಲೇಶದಿಂದ ಸಿದ್ಧಿದಾಯಕವು. ಮೂರು ಬಾರಿ ಪ್ರಣವ ಕವಚಗಳು 'ಹುಂ' ಪ್ರಯೋಗವಿದ್ದ ಮಂತ್ರವು 'ಲಕ್ಷ್ಮೀ'ಯುಕ್ತ. ಲಕ್ಷ್ಮೀಹೀನವಾದ ಮಂತ್ರವು ಶಕ್ತಿಹೀನ. ದೀರ್ಘಕಾಲದಲ್ಲಿ ಫಲಪ್ರದ. ಆದಿಯಲ್ಲಿ ಕಾಮಬೀಜ 'ಕ್ಲೀಂ'. ಮಧ್ಯದಲ್ಲಿ ಮಾಯಾ ಬೀಜ (ಹ್ರೀಂ). ಅಂತ್ಯದಲ್ಲಿ ಅಂಕುಶ ಬೀಜ (ಕ್ರೋಂ) ಇದ್ದ ಮಂತ್ರವು 'ಪರಾಙ್ಮುಖ'. ಬಹಳ ಕಾಲದ ನಂತರ ಫಲಪ್ರದ. ಆದಿ ಮಧ್ಯ ಅಂತ್ಯಗಳಲ್ಲಿ ಸಕಾರ ಯುಕ್ತ ಮಂತ್ರವು ಬಧಿರ (ಕಿವುಡು). ಬಹಳ ಕಷ್ಟಪಟ್ಟರೆ ಸ್ವಲ್ಪ

ಫಲವನ್ನು ಕೊಡುತ್ತದೆ. ರೇಫ, ಮಕಾರ ಅನುಸ್ವಾರಗಳಿಲ್ಲದ ಪಂಚಾಕ್ಷರ ಮಂತ್ರವು 'ನೇತ್ರಹೀನ'. ಅದು ಕಷ್ಟಪಟ್ಟರೂ ಫಲಪ್ರದವಲ್ಲ. ಆದಿ ಮಧ್ಯ ಅಂತ್ಯಗಳಲ್ಲಿ ಹಂಸಬೀಜ 'ಸಂ' ಪ್ರಸಾದ. ಹಾಗೂ ವಾಗ್ ಬೀಜ 'ಐಂ ಇವುಗಳಿದ್ದರೆ ಹಂಸ ಮತ್ತು ಚಂದ್ರ ಬಿಂದು ಅಥವಾ ಸಕಾರ, ಫಕಾರ ಅಥವಾ ಹುಂ ಇದ್ದರೆ, 'ಮಾ, ಪ್ರಾನಮಾಮಿ' ಎಂಬ ಪದಗಳಿಲ್ಲದಿದ್ದರೆ ಅದು 'ಶೀಲಿತ' ಮಂತ್ರ. ಮಧ್ಯ ಅಂತ್ಯಗಳಲ್ಲಿ ಪ್ರಾನಮಾಮಿ ಪದಗಳಿಲ್ಲದ ಫಟ್ ಮತ್ತು ಲಕಾರಗಳಿಲ್ಲದ ಮಂತ್ರವು ಸ್ತಂಭಿತ. ಅದು ಸಿದ್ಧಿ ವಿಘ್ನಪ್ರದ. ಮಂತ್ರ ಕೊನೆಯಲ್ಲಿ ಅಗ್ನಿಬೀಜ 'ರಂ' ಒಡನೆ ವಾಯುಬೀಜ 'ಯಂ' ಇದ್ದು ಏಳು ಅಕ್ಷರಗಳಿದ್ದರೆ ಅದು 'ದಗ್ಧ' ಮಂತ್ರ. ೨,೪,೬, ಅಕ್ಷರಗಳಿದ್ದು ಅಸ್ತ್ರಾಯ 'ಫಟ್' ಇದ್ದರೆ ಆ ಮಂತ್ರ 'ತ್ರಸ್ತ'. ಆದಿಯಲ್ಲಿ ಪ್ರಣವರಹಿತ ಹಕಾರ ಅಥವಾ ಶಕ್ತಿ ಇದ್ದರೆ ಅದು 'ಭೀತ' ಮಂತ್ರ. ಆದಿ ಮಧ್ಯಾಂತಗಳಲ್ಲಿ 'ಮ' ಇದ್ದರೆ ಮಲಿನ. ಇವೆಲ್ಲವೂ ಅತ್ಯಂತ ಕ್ಲೇಶದಿಂದ ಸಿದ್ಧಿದಾಯಕ. ಮಂತ್ರಮಧ್ಯದಲ್ಲಿ 'ದ' ಕೊನೆಯಲ್ಲಿ ೨ ಕ್ರೋಧ ಬೀಜಗಳು 'ಹುಂ ಹುಂ'ಜೊತೆಗೆ 'ಫಟ್' ಅಸ್ತ್ರವಿದ್ದರೆ ಅದು ತಿರಸ್ಕೃತ'. ಕೊನೆಯಲ್ಲಿ 'ಮ' 'ಯ' ಮತ್ತು ಹೃದಯವಿದ್ದರೆ, ಮಧ್ಯದಲ್ಲಿ 'ವಷಟ್' ಮತ್ತು 'ವೌಷಟ್' ಇದ್ದರೆ ಅದು 'ಭೇದಿತ'. ಅತಿಕ್ಲೇಶದಿಂದ ಫಲದಾಯಕವಾದ ಇದನ್ನು ಬಿಡಬೇಕು. ಹೀಗೆಯೇ ಸುಷುಪ್ತ ಮದೋನ್ಮತ್ತ. ಮೂರ್ಛಿತ, ಹತವೀರ್ಯ, ಭ್ರಾಂತ, ಪ್ರಧ್ವಸ್ತ, ಬಾಲಕ, ಕುಮಾರ, ಯುವಕ, ಪ್ರೌಢ, ವೃದ್ಧ, ನಿಸ್ತ್ರಿಂಶಕ, ನಿರ್ಬೀಜ, ಸಿದ್ಧಿಹೀನ, ಮಂದ, ಕೂಟ, ನಿರಾಶಂಕ, ಸತ್ವಹೀನ, ಕೇಕರ, ಬೀಜಹೀನ, ಭೂಮಿತ, ಆಲಿಂಗಿತ, ಮೋಹಿತ, ಕ್ಷಧೂರ್ತ, ಅತಿದೀಪ್ತ, ಅಂಗಹೀನ, ಅತಿಕ್ರುದ್ಧ, ಅತಿಕ್ರೂರ, ವ್ರೀಡಿತ, ಪ್ರಶಾಂತಮಾನಸ, ಸ್ಥಾನಭ್ರಷ್ಟ, ವಿಕಲ, ಅತಿವೃದ್ಧ, ಅತಿನಿಸ್ನೇಹ, ಪೀಡಿತ, ಎಂದು ೪೬ ಮಂತ್ರದೋಷಗಳು.

ಈ ದೋಷಗಳನ್ನು ತಿಳಿಯದೇ ಮಂತ್ರವನ್ನು ಜಪಿಸಿದವರಿಗೆ ಸಿದ್ಧಿಯುಂಟಾಗುವುದಿಲ್ಲ. ಯೋನಿಮುದ್ರಾಸನದಲ್ಲಿ ಕುಳಿತು ಯಾವ ಮಂತ್ರವನ್ನು ಜಪಿಸಿದರೂ. ಸಿದ್ಧಿಯುಂಟಾಗುತ್ತದೆ. ಎಡಗಾಲಿನ ಹಿಮ್ಮಡಿಯನ್ನು ಪೃಷ್ಠದಲ್ಲಿಟ್ಟು ಬಲಹಿಮ್ಮಡಿ ಯನ್ನು ಧ್ವಜದ ಮೇಲೆ ಸ್ಥಾಪಿಸಿ ಕೂಡುವುದಕ್ಕೆ 'ಯೋನಿಮುದ್ರಾಸನ'ವೆಂದು ಹೆಸರು.

## ಆಚಾರ್ಯ ಮತ್ತು ಶಿಷ್ಯನ ಲಕ್ಷಣ

ಕುಲಕ್ರಮದಿಂದ ಬಂದಿರುವರಾದ ನಿತ್ಯದಲ್ಲಿಯೂ ಮಂತ್ರಾನುಷ್ಠಾನ ತತ್ಪರನಾಗಿ ತನ್ನ ಗುರುಗಳ ಆಜ್ಞೆಯನ್ನು ಪಾಲಿಸುವವನೂ, ಶ್ರೀಮಂತ, ಅಭಿಷಿಕ್ತ, ಸುಂದರ, ಸೌಮ್ಯ-ಮುಖಿ, ಶಾಂತ, ಸತ್ಕುಲ, ಪ್ರಸೂತ, ಸುಲಭ, ಮಂತ್ರತಂತ್ರಾರ್ಥಜ್ಞನೂ, ನಿಗ್ರಹಾನುಗ್ರಹ ಸಮರ್ಥನೂ, ಆಶೆ ಇಲ್ಲದವನೂ, ಮನನಶೀಲನೂ, ಇಂದ್ರಿಯನಿಗ್ರಹ ಉಳ್ಳವನೂ, ಹಿತವಾಗಿ ನುಡಿಯುವವನೂ, ವಿವೇಚನಶೀಲನೂ, ತತ್ವನಿರ್ಣಯವನ್ನು ಮಾಡಲು ಸಮರ್ಥನೂ, ವಿನೀತನೂ, ಒಳ್ಳೆಯ ವೇಷವನ್ನು ಧರಿಸಿದವನೂ, ಆಶ್ರಮ ಧರ್ಮನಿಷ್ಠನೂ, ಧ್ಯಾನಪರನೂ, ಸಂಶಯಪರಿಹಾರಕನೂ, ಜ್ಞಾನಿಯೂ ಮತ್ತು ಯಾವಾಗಲೂ ವಿಹಿತಾನುಷ್ಠಾನದಲ್ಲಿ ಆಸಕ್ತನಾಗಿ ಇರುವವನೂ ಆಚಾರ್ಯನಾಗಲು ಅರ್ಹನಾಗುತ್ತಾನೆ. ಶಾಂತನಾಗಿ, ವಿನೀತ, ಶುದ್ಧಾತ್ಮ, ಸಮಸ್ತ ಲಕ್ಷಣಸಂಪನ್ನನೂ ಶಮಾದಿ ಸಾಧನ ಸಂಪನನ್ನೂ, ಆಸ್ತಿಕ, ಸ್ಥಿರಬುದ್ಧಿಯುಳ್ಳವನೂ, ಶುದ್ಧವಾದ ಅನ್ನಪಾನಾದಿಗಳಿಂದ ಕೂಡಿರುವವನೂ,

ಧರ್ಮಿಷ್ಠನೂ, ನಿರ್ಮಲಚಿತ್ತನೂ, ನಿರ್ಮಲ ಧೃಢವ್ರತನೂ, ಸದಾಚಾರಿಯೂ ಕೃತಜ್ಞನೂ, ಪಾಪಭೀರುವೂ, ಗುರುಧ್ಯಾನ ಸ್ತೋತ್ರ. ಕಥೆಗಳಲ್ಲಿ ಆಸಕ್ತನೂ, ಆದವನು ಶಿಷ್ಯನಾಗಲು ಅರ್ಹನು, ಈ ಗುಣಗಳಿಲ್ಲದ ಶಿಷ್ಯನು ಗುರುಗಳಿಗೆ ದುಃಖವನ್ನು ಕೊಡುವವನಾಗುತ್ತಾನೆ.

ನಾರದ ಮಹಾಪುರಾಣದಲ್ಲಿ ಅರವತ್ತಮೂರನೆಯ ಅಧ್ಯಾಯ ಮುಗಿದುದು



## ಮಂತ್ರಶೋಧನದ ಕ್ರಮ ಮತ್ತು ಪಂಚಾಯತನ ಪೂಜಾಕ್ರಮ

**ಅಧ್ಯಾಯ - ೬೪**

**ಸನತ್ಕುಮಾರ:-** ಗುರುವು ಶಿಷ್ಯನನ್ನು ಪರೀಕ್ಷಿಸಿ ಮಂತ್ರಶೋಧನೆಯನ್ನು ಮಾಡಬೇಕು. ಪೂರ್ವದಿಂದ ಪಶ್ಚಿಮಕ್ಕೆ, ದಕ್ಷಿಣದಿಂದ ಉತ್ತರಕ್ಕೆ ೫-೫ ರೇಖೆಗಳನ್ನು ಬರೆಯಬೇಕು. ಈ ರೀತಿ ಬರೆದಾಗ ನಾಲ್ಕು ಕೋಷ್ಟಕಗಳ ನಾಲ್ಕು ಸಮುದಾಯವಾಗುತ್ತದೆ. ಅವುಗಳಿಗೆ ಕ್ರಮವಾಗಿ ಎಡದಿಂದ ಬಲಕ್ಕೆ ಅಂಕಗಳನ್ನು ಹಾಕಿದಾಗ ೧೬ ಕೋಷ್ಟಕಗಳಾಗುತ್ತವೆ. ಮೊದಲನೆಯ ಕೋಷ್ಟಕದಲ್ಲಿ 'ಅ' ಬರೆದು ಅದರ ಆಗ್ನೇಯದಲ್ಲಿ ಅದರಿಂದ ೫ನೆಯ ಅಕ್ಷರ ಬರೆಯಬೇಕು. ಹೀಗೆ ಎಲ್ಲಾ ಕೋಷ್ಟಕಗಳಲ್ಲಿಯೂ ಅಕ್ಷರಗಳನ್ನು ಬರೆದು ಮಂತ್ರ ಶೋಧನ ಮಾಡಬೇಕು. ಸಾಧಕನ ಹೆಸರಿನ ಮೊದಲನೆ ಅಕ್ಷರವು ಯಾವ ಕೋಷ್ಟಕದಲ್ಲಿದೆಯೋ ಅಲ್ಲಿಂದ ಪ್ರದಕ್ಷಿಣಾಕಾರವಾಗಿ ಲೆಕ್ಕಮಾಡಿದಾಗ ಮಂತ್ರದ ಮೊದಲನೆಯ ಅಕ್ಷರವು ಎಲ್ಲಿದೆಯೋ ಅಲ್ಲಿಯವರೆಗೆ ಲೆಕ್ಕಮಾಡಬೇಕು. ಅದೇ ಚೌಕದಲ್ಲಿ ಮಂತ್ರದ ಆದ್ಯಾಕ್ಷರವಿದ್ದರೆ ಅದು ಸಿದ್ಧ ಚತುಷ್ಟ. ಎರಡನೆ ಚೌಕದಲ್ಲಿದ್ದರೆ 'ಸಾಧ್ಯ'. ಮೂರನೆಯದರಲ್ಲಿದ್ದರೆ ಸುಸಿದ್ಧ, ನಾಲ್ಕನೆಯದರಲ್ಲಿದ್ದರೆ 'ಅರಿ' ಎನಿಸುವದು. ಸಾಧಕನ ಹೆಸರಿನ ಅಕ್ಷರ ಮಂತ್ರದ ಆದ್ಯಾಕ್ಷರ ಮೊದಲನೆಯ ಕೋಷ್ಟಕದಲ್ಲಿದ್ದರೆ 'ಸಿದ್ಧ ಸಿದ್ಧ' ಎಂದು ಕರೆಯಲಾಗುತ್ತದೆ. ಮೊದಲನೆಯದರ ೩ನೆಯ ಕೋಷ್ಟಕದಲ್ಲಿದ್ದರೆ ಸುಸಿದ್ಧ, ಸಿದ್ಧ, ನಾಲ್ಕನೆಯದರದಲ್ಲಿದ್ದರೆ 'ಸಿದ್ಧಾರಿ' ಎರಡನೆಯ ಚೌಕದ ೧, ೨, ೩, ೪ರಲ್ಲಿ ಮಂತ್ರಾಕ್ಷರಗಳಿದ್ದಾಗ ಕ್ರಮಶಃ ಸಾಧ್ಯಸಿದ್ಧ, ಸಾಧ್ಯಸಾಧ್ಯ, ಸಾಧ್ಯಸುಸಿದ್ಧ, ಸಾಧ್ಯಾರಿ ಎಂದು ಹೆಸರು. ಮೂರನೆಯ ಚೌಕದಲ್ಲಿ ಕ್ರಮವಾಗಿ ಆ ಮಂತ್ರಾಕ್ಷರಕ್ಕೆ ಸುಸಿದ್ಧ ಸಿದ್ಧ, ಸಾಧ್ಯ, ಸುಸಿದ್ಧ ಸುಸಿದ್ಧ, ಸುಸಿದ್ಧಿ ಅರಿ ಎಂಬ ಸಂಜ್ಞೆಯು ಬರುತ್ತದೆ. ಹೀಗೆಯೇ ನಾಲ್ಕನೆಯ ಚೌಕದಲ್ಲಿ ಅರಿಸಿದ್ಧ, ಅರಿಸಾಧ್ಯ, ಅರಿಸುಸಿದ್ಧ, ಅರಿಅರಿ, ಎಂಬ ಸಂಜ್ಞೆಗಳು, ಸಿದ್ಧ ಸಿದ್ಧ ಮಂತ್ರವು ಶಾಸ್ತ್ರೋಕ್ತ ಸಂಖ್ಯೆಯಿಂದ ಜಪ ಮಾಡಿದಾಗ ಸಿದ್ಧಿಯನ್ನುಂಟು ಮಾಡಿದರೆ, ಸಿದ್ಧ ಸಾಧ್ಯ, ಮಂತ್ರವು ಇಮ್ಮಡಿ ಜಪದಿಂದಲೂ, ಸಿದ್ಧಿಪ್ರದವಾಗುತ್ತದೆ. 'ಸಾಧ್ಯಾರಿ'ಯು ಬಂಧು ನಾಶಕ, ಸುಸಿದ್ಧ ಅರ್ಧ ಜಪದಿಂದ ಸಿದ್ಧಿಪ್ರದ. ಸುಸಿದ್ಧ ಸಾಧ್ಯವು ದ್ವಿಗುಣ ಜಪದಿಂದ, ಸುಸಿದ್ಧ ಸುಸಿದ್ಧವು ಮಂತ್ರ ಪ್ರಾಪ್ತಿ ಮಾತ್ರದಿಂದ ಸಿದ್ಧಿಪ್ರದ, ಸುಸಿದ್ಧಾರಿ ಕುಟುಂಬ ನಾಶಕ, ಅರಿಸಿದ್ಧ ಪುತ್ರನಾಶಕ, ಅರಿಸಾಧ್ಯ ಕನ್ಯಾನಾಶಕ, ಅರಿಸುಸಿದ್ಧ, ಸ್ತ್ರೀನಾಶಕ, ಅರಿಅರಿ, ಸಾಧಕನಾಶಕವಾಗಿದೆ.

| | | | |
|---|---|---|---|
| ೧<br>ಅ ಕ<br>ಥ-ಹ- | ೨<br>ಉ<br>ಜ ಪ | ೩<br>ಆ<br>ಖ ದ | ೪<br>ಊ<br>ಚ ಫ |
| ೫<br>ಓ<br>ಜ ಬ | ೬<br>ಲ್ರ<br>ಝ ಮ | ೭<br>ಔ<br>ಢ ಶ | ೮<br>ಲ್ರೄ<br>ಞ ಯ |
| ೯<br>ಈ<br>ಧ ನ | ೧೦<br>ಋ<br>ಜ ಭ | ೧೧<br>ಇ<br>ಗ ಧ | ೧೨<br>ಋ<br>ಥ ಬ |
| ೧೩<br>ಅಃ<br>ತ ಸ | ೧೪<br>ಐ<br>ಠ ಲ | ೧೫<br>ಅಂ<br>ಣ ಷ | ೧೬<br>ಐ<br>ಟ ರ |

ಮುನಿಯೇ, ಮಂತ್ರಶೋಧನದ ಬೇರೆ ಪ್ರಕಾರಗಳೂ ಇವೆ. ಅದರಲ್ಲಿ ಇದು ಆ ಕ ಥ ಹ ಚಕ್ರ. ಒಳ್ಳೆಯ ಸಮಯದಲ್ಲಿ ಪವಿತ್ರಸ್ಥಾನದಲ್ಲಿ ಗುರುವು ಶಿಷ್ಯನಿಗೆ ದೀಕ್ಷೆ ಕೊಡಬೇಕು. ಪ್ರಾತಃಕಾಲದ ನಿತ್ಯಾಹ್ನಿಕ ಮಾಡಿ ಗುರುಪಾದುಕೆಗಳಿಗೆ ನಮಸ್ಕಾರ ಮಾಡಿ, ವಸ್ತ್ರಾದಿಗಳಿಂದ ಗುರುಪೂಜೆ ಮಾಡಿ ಮಂತ್ರವನ್ನು ಉಪದೇಶಿಸುವಂತೆ ಪ್ರಾರ್ಥಿಸಬೇಕು. ಗುರುವು ಪುಣ್ಯಾಹವಾಚನ ಪೂರ್ವಕವಾಗಿ ಯಜ್ಞ ಮಂಟಪವನ್ನು ಪ್ರವೇಶಿಸಿ, ಅರ್ಘ್ಯಜಲದಿಂದ ದ್ವಾರವನ್ನು ಪ್ರೋಕ್ಷಿಸಿ ಕರತಾಲದಿಂದ ಭೂತೋಚ್ಚಾಟನ ಮಾಡಬೇಕು. ಬೇರೆ ಬೇರೆ ಬಣ್ಣಗಳಿಂದ ಸರ್ವತೋಭದ್ರ ಮಂಡಲವನ್ನು ಬರೆದು ಅದರಲ್ಲಿ ವಹ್ನಿ ಮಂಡಲ ಮತ್ತು ಅದರ ಕಲೆಗಳ ಪೂಜೆಯನ್ನು ಮಾಡಿ ಅದರ ನಂತರ ಅಸ್ತ್ರಮಂತ್ರೋಚ್ಚಾರಣ ಮಾಡಿ, ಅಲ್ಲಿ ಶುಭ್ರವಾದ ಕಲಶವನ್ನು ಸ್ಥಾಪಿಸಿ, ಸೂರ್ಯಕಲೆಗಳನ್ನು ಪೂಜಿಸಬೇಕು. ಶುದ್ಧ ಜಲದಿಂದ ಕಲಶವನ್ನು ತುಂಬಿ ಚಂದ್ರ ಕಲೆಗಳನ್ನು ಆವಾಹಿಸಬೇಕು. ಧೂಮ್ರಾ, ಅರ್ಚಿ, ಊಷ್ಮಾ, ಜ್ವಾಲನೀ, ವಿಸ್ಫುಲಿಂಗಿನೀ, ಸುಶ್ರೀ, ಸುರೂಪಾ, ಕಪಿಲಾ, ಹವ್ಯಕವ್ಯವಾಹಾ ಇವು ಅಗ್ನಿಯ ೧೦ ಕಲೆಗಳು, ತಪಿನೀ, ತಾಪಿನಿ, ಧೂಮ್ರಾ, ಮರೀಚಿ, ಜ್ವಾಲಿನಿ, ರುಚಿ, ಸುಷುಮ್ನಾ, ಭೋಗದಾ, ವಿಶ್ವಾಸಾ, ಬೋಧಿನಿ, ಧಾರಿಣೀ, ಇವು ೧೨ ಸೂರ್ಯಕಲೆಗಳು. ಅಮೃತಾ, ಮಾನದಾ, ಪೂಷಾ, ತುಷ್ಟಿ, ಪುಷ್ಟಿ, ರತಿ, ಧೃತಿ, ಶಶಿನಿ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ ಪ್ರೀತಿ, ಅಂಗದಾ, ಪೂರ್ಣಾ, ಅಮೃತಾ ಇವು ೧೬ ಚಂದ್ರ ಕಲೆಗಳು.

ಕಲಶದೊಳಗೆ ಸರ್ವೌಷಧಿಗಳನ್ನು ಹಾಕಿ ಎರಡು ಬಟ್ಟೆಗಳಿಂದ ಅದನ್ನು ಆಚ್ಛಾದಿಸಿ, ನವರತ್ನ ಮತ್ತು ಪಂಚ ಪಲ್ಲವಗಳನ್ನು ಅದರಲ್ಲಿ ಹಾಕಬೇಕು. ಹಲಸು, ಮಾವು, ಆಲ, ಅರಳಿ ಮತ್ತು ಇವು ಐದು ಪಲ್ಲವಗಳು. ಮುತ್ತು, ಮಾಣಿಕ್ಯ, ವೈಢೂರ್ಯ, ಗೋಮೇಧಿಕ, ವಜ್ರ, ಹವಳ, ಪದ್ಮರಾಗ, ಮರಕತ, ನೀಲ ಇವು ನವರತ್ನಗಳು, ಅದರಲ್ಲಿ ಇಷ್ಟದೇವತೆಯ ಆವಾಹನ ಮಾಡಿ ವಿಧಿವತ್ತಾಗಿ ಪೂಜಿಸಿ ಅನಂತರ ವಸ್ತ್ರಾಭರಣಗಳಿಂದ ಅಲಂಕೃತನಾದ ಶಿಷ್ಯನನ್ನು ವೇದಿಕೆಯಲ್ಲಿ ಕುಳ್ಳಿರಿಸಿ ಪ್ರೋಕ್ಷಣೀ ಪಾತ್ರೆಯ ನೀರಿನಿಂದ ಪ್ರೋಕ್ಷಿಸಬೇಕು. ಭೂತೋಚ್ಚಾಟನ ಗೈದು, ಶಿಷ್ಯನ ದೇಹದಲ್ಲಿ ಭೂತಶುದ್ಧ್ಯಾದಿಗಳನ್ನು ಮಾಡಿ, ನ್ಯಾಸವನ್ನು

ಮಾಡಿ ಶಿರಸ್ಸಿನ ಮೇಲೆ ಚಿಗುರನ್ನಿಟ್ಟು, ಮೂಲ ಮಂತ್ರವನ್ನು ಜಪಿಸುತ್ತ ಮೂಲಮಂತ್ರದಿಂದ ನೂರೆಂಟು ಬಾರಿ ಅಭಿಮಂತ್ರಿತ ಜಲದಿಂದ ಪ್ರಿಯ ಶಿಷ್ಯನಿಗೆ ಅಭಿಷೇಕವನ್ನು ಮಾಡಬೇಕು, ಅಭಿಷೇಕ ಮಾಡಿ ಮಿಕ್ಕ ಜಲದಿಂದ ಶಿಷ್ಯನು ಆಚಮನ ಮಾಡಿ, ಬೇರೆ ವಸ್ತ್ರವನ್ನು ಧರಿಸಿ ಗುರುವಿಗೆ ನಮಸ್ಕರಿಸಿ ಪರಿಶುದ್ಧನಾಗಿ ಮುಂಭಾಗದಲ್ಲಿ ಕುಳಿತುಕೊಳ್ಳಬೇಕು. ಗುರುವು ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಉಪದೇಶಿಸಬೇಕಾದ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು. ಅನಂತರ ''ನಮೋಽಸ್ತು'' ಎಂಬ ಅಕ್ಷರಪ್ರದಾನ ಮಾಡಬೇಕು. ಶಿಷ್ಯನು ಗುರುಪೂಜೆ ಮಾಡಿದ ತರುವಾಯ ಗುರುವು ಶಿಷ್ಯನ ತಲೆಯಮೇಲೆ ಗಂಧ ಸಹಿತವಾದ ಹಸ್ತವನ್ನಿಟ್ಟು, ಅವನ ಕಿವಿಯಲ್ಲಿ ಎಂಟಾವರ್ತಿ ವಿದ್ಯೆಯನ್ನು ಹೇಳಬೇಕು. ಈ ರೀತಿ ವಿದ್ಯೆಯನ್ನು ಸ್ವೀಕರಿಸಿದಮೇಲೆ ಶಿಷ್ಯನು ಗುರುಗಳ ಪಾದದ ಮೇಲೆ ಬೀಳಬೇಕು.

ಉತ್ತಿಷ್ಠ ವತ್ಸ ಮುಕ್ತೋಽಸಿ ಸಮ್ಯಗಾಚಾರವಾನ್ ಭವ ।
ಕೀರ್ತಿ ಶ್ರೀಕಾಂತಿ ಪುತ್ರಾಯುರ್ಬಲಾರೋಗ್ಯಂ ಸದಾಸ್ತು ತೇ ॥

ವತ್ಸ, ಏಳು ಮುಕ್ತನಾಗಿರುವೆ. ಸಮೀಚೀನವಾದ ಆಚಾರ ಉಳ್ಳವನಾಗು. ನಿನಗೆ ಯಾವಾಗಲೂ ಕೀರ್ತಿ, ಸಂಪತ್ತು, ಕಾಂತಿ, ಪುತ್ರ (ಶಿಷ್ಯ) ಆಯುಸ್ಸು ಶಕ್ತಿ ಮತ್ತು ಆರೋಗ್ಯಗಳು ಲಭಿಸಲಿ ಎಂದು ಗುರುವು ಆಶೀರ್ವದಿಸಬೇಕು. ಅನಂತರ ಶಿಷ್ಯನು ಗಂಧ ಪುಷ್ಪಾದಿಗಳಿಂದ ಗುರುವನ್ನು ಪೂಜಿಸಿ ಧನಲೋಭಮಾಡದೆ ಗುರು ದಕ್ಷಿಣೆಯನ್ನು ಕೊಡಬೇಕು. ಅಂದಿನಿಂದ ಧನ, ದೇಹ, ಪುತ್ರ, ಪತ್ನಿ ಸಹಿತನು ಆಗಿ ಗುರುಸೇವಾನಿರತನಾಗಬೇಕು.

## ಪಂಚಾಯತನ ಪೂಜಾಕ್ರಮ

ತನ್ನ ಇಷ್ಟದೇವತೆಯನ್ನು ಮಧ್ಯದಲ್ಲಿಟ್ಟು ಪುಷ್ಪಾಂಜಲಿಯನ್ನು ಸಮರ್ಪಿಸಿ ಪೂಜಿಸಬೇಕು. ಅನಂತರ ಕ್ರಮವಾಗಿ ಅಗ್ನಿ, ನಿಋತಿ, ವಾಗೀಶರನ್ನು ಪೂಜಿಸಬೇಕು. ಮಧ್ಯದಲ್ಲಿ ವಿಷ್ಣು, ಸುತ್ತಲೂ ಗಣೇಶ, ಸೂರ್ಯ, ಪಾರ್ವತಿ, ಶಿವ ಇದು ವಿಷ್ಣು ಪಂಚಾಯತನ. ಮಧ್ಯದಲ್ಲಿ ಈಶ್ವರ ಸುತ್ತಲೂ ಸೂರ್ಯ, ಗಣೇಶ, ಪಾರ್ವತಿ, ವಿಷ್ಣು ಇದು ಶಿವಪಂಚಾಯತನ. ಮಧ್ಯದಲ್ಲಿ ದುರ್ಗಾ, ಸುತ್ತಲೂ ಈಶ್ವರ, ಗಣೇಶ, ಸೂರ್ಯ, ವಿಷ್ಣು ಇದು ದುರ್ಗಾ ಪಂಚಾಯತನ. ಮಧ್ಯ ಗಣೇಶ ಸುತ್ತಲೂ ಈಶ್ವರ, ಪಾರ್ವತಿ, ಸೂರ್ಯ, ವಿಷ್ಣು ಇದು ಗಣೇಶ ಪಂಚಾಯತನ. ಮಧ್ಯೆ ಸೂರ್ಯ, ಸುತ್ತಲೂ ಗಣೇಶ, ವಿಷ್ಣು, ಅಂಬಿಕಾ, ಈಶ್ವರ ಇದು ಸೂರ್ಯಪಂಚಾಯತನ. ಈ ಪ್ರಕಾರ ನಿತ್ಯವೂ ದೇವ ಪಂಚಾಯತನವನ್ನು ಪೂಜಿಸಬೇಕು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಶೌಚಾದಿಗಳನ್ನು ಮಾಡಿ ಹಾಸಿಗೆಯಲ್ಲಿ ಕುಳಿತು ಸಾವಿರದಳದ ಬಿಳಿಯ ಕಮಲದ ಕರ್ಣಿಕೆಯಲ್ಲಿರುವ ಚಂದ್ರಮಂಡಲದ ಮಧ್ಯದಲ್ಲಿ ಅಕಥಾದಿ ತ್ರಿಕೋಣದ ನಡುವೆ ವರಾಭಯ ಹಸ್ತ, ಎರಡು ಕಣ್ಣುಗಳು, ಬಿಳಿಯ ಗಂಧಮಾಲ್ಯಯುಕ್ತ, ಎಡದಲ್ಲಿ ಶಕ್ತಿಹಸ್ತನೂ ಗುರುವನ್ನು ಧ್ಯಾನಿಸಿ ಮಾನಸಿಕ ಪೂಜೆಯನ್ನು ಮಾಡಿ, ಪಾದುಕಾ ಮಂತ್ರವನ್ನು ಹತ್ತು ಬಾರಿ ಜಪಿಸಬೇಕು, ಈ ಪಾದುಕಾ ಮಂತ್ರವು ಸ್ಥೂಲ, ಮಧ್ಯಮ, ಲಘು, ಲಘುತರ, ಸಾಮಾನ್ಯ ಎಂದು ಐದು ವಿಧ. ''ಓಂ ಐಂ ಹ್ರೀಂ, ಶ್ರೀಂ ಅಮುಕಾನಂದನಾಯ ಶ್ರೀಪಾದುಕಾಂ ಪೂಜಯಾಮಿ'' ಇದು ಸಾಮಾನ್ಯ ಪಾದುಕಾ ಮಂತ್ರ.

**ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ ।**
**ತತ್ಪದಂ ದರ್ಶಿತಂ ಯೇನ ತಸ್ಮೈಶ್ರೀ ಗುರವೇ ನಮಃ ॥**

**ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।**
**ಚಕ್ಷುರುನ್ಮೀಲಿತಂ ಯೇನ ತಸ್ಮೈಶ್ರೀ ಗುರವೇ ನಮಃ ॥**

**ನಮೋಽಸ್ತು ಗುರವೇ ತಸ್ಮಾ ಇಷ್ಟದೇವಸ್ವರೂಪಿಣೇ ।**
**ಯಸ್ಯ ವಾಗಮೃತಂ ಹಂತಿ ವಿಷಂ ಸಂಸಾರಸಂಜ್ಞಕಂ ॥**

ಚರಾಚರಾತ್ಮಕವಾದ ಈ ಅಖಂಡ ಭೂಮಂಡಲವನ್ನು ವ್ಯಾಪಿಸಿರುವ ಭಗವಂತನ ಸ್ವರೂಪವನ್ನು ತಿಳಿಸಿದ ಶ್ರೀ ಗುರುವಿಗೆ ನಮಸ್ಕಾರ. ಅಜ್ಞಾನದ ಕತ್ತಲೆಯಲ್ಲಿ ಕುರುಡನಂತಿರುವ ಜೀವನಿಗೆ ಜ್ಞಾನಾಂಜನದ ಕಡ್ಡಿಯಿಂದ ಕಣ್ಣುಗಳನ್ನು ಬರಿಸಿದ ಶ್ರೀಗುರುವಿಗೆ ನಮಸ್ಕಾರ. ಇಷ್ಟ ದೇವತಾ ಸ್ವರೂಪನಾದ,ಸಂಸಾರವೆಂಬ ಸರ್ಪದ ವಿಷವನ್ನು ನಾಶಮಾಡಿರುವ, ವಚನಾಮೃತ ಪಾನ ಮಾಡಿಸುವ ಶ್ರೀಗುರುವಿಗೆ ನಮಸ್ಕಾರ, ಎಂದು ಗುರು ನಮಸ್ಕಾರ ಮಾಡಿ ಭಕ್ತಿಯಿಂದ ಸ್ತೋತ್ರಮಾಡಬೇಕು.

'ವಿದ್ಯಾಸಿದ್ಧಿಗಾಗಿ ಅನೇಕ ಶರೀರ ಧಾರಿಯಾದ ಸ್ವಾಮೀ ಭಗವಂತ, ಗುರು ರೂಪಿಯಾದ ಶಿವನಾಮಕನಾದ ನಿನಗೆ ನಮೋ ನಮಃ. ನವಾಯತನ ರೂಪ, ಪರಮಾರ್ಥೈಕರೂಪ, ಅಜ್ಞಾನತಿಮಿರನಾಶಕ, ಸೂರ್ಯ, ಜ್ಞಾನಮಯ, ಸ್ವತಂತ್ರ, ಪ್ರಕಾಶ ಪ್ರಕಾಶ, ಜ್ಞಾನ ಜ್ಞಾನ, ನಿನಗೆ ಹಿಂದೆ ಮುಂದೆ ಮೇಲೆ ಕೆಳಗೆ ಎಲ್ಲಾ ಭಾಗದಲ್ಲಿ ನಮಸ್ಕಾರ''. ಈ ರೀತಿ ದೇವರನ್ನು ಸ್ತುತಿಸಿ ಸಕಲ ಕೃತ್ಯಗಳನ್ನು ಗುರುಗಳಿಗೆ ನಿವೇದಿಸಬೇಕು.

**ಪ್ರಾತಃ ಪ್ರಭೃತಿಸಾಯಾಂತಂ ಸಾಯಾದಿ ಪ್ರಾತರಂತತಃ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥**

ಜಗದೊಡೆಯನೇ, ಬೆಳಗಿನಿಂದ ಸಂಜೆಯವರೆಗೆ, ಸಂಜೆಯಿಂದ ಬೆಳಗಿನವರೆಗೆ ನಾನು ಏನೇನು ಮಾಡುತ್ತೇನೋ ಅದೆಲ್ಲವೂ ನಿನ್ನ ಪೂಜೆಯಾಗಲಿ.

ಅನಂತರ ಮೂಲಾಧಾರದಿಂದ ಬ್ರಹ್ಮರಂಧ್ರದವರೆಗೆ ಮೂಲವಿದ್ಯೆಯ ಚಿಂತನವನ್ನು ಮಾಡಬೇಕು, ಮೂಲಾಧಾರದಿಂದ ಕೆಳಭಾಗದಲ್ಲಿ ಗೋಲಾಕಾರ ವಾಯುಮಂಡಲವಿದೆ. ಅಲ್ಲಿ ವಾಯು ಬೀಜ ಯಕಾರವಿದೆ. ಅಲ್ಲಿಂದ ವಾಯುವು ಪ್ರವಾಹಿತವಾಗುತ್ತಿದೆ. ಅದಕ್ಕಿಂತ ಮೇಲೆ ಅಗ್ನಿಯ ತ್ರಿಕೋಣ ಮಂಡಲವಿದೆ. ಅಗ್ನಿ ಬೀಜ 'ರ' ಕಾರದಿಂದ ಅಗ್ನಿಯು ಪ್ರಕಟವಾಗುತ್ತದೆ.

ಹಿಂದೆ ಹೇಳಿದ ವಾಯು ಮತ್ತು ಅಗ್ನಿಗಳ ಜೊತೆಗಿರುವ ಮೂಲಾಧಾರದಲ್ಲಿ ಮಲಗಿರುವ ಸರ್ಪದಂತಿರುವ 'ಕುಲಕುಂಡಲಿನಿ'ಯನ್ನು ಧ್ಯಾನಿಸಬೇಕು. ಸ್ವಯಂ ಭೂಲಿಂಗವನ್ನು ಸುತ್ತಿಕೊಂಡಿರುವ, ಪ್ರಕಾಶಮಾನವಾದ, ಕಮಲತಂತುವಿಗೆ ಸಮಾನವಾದ, ಕೋಟಿ ಮಿಂಚುಗಳಂತೆ ಹೊಳೆಯುವ, ಸೂಕ್ಷ್ಮವಾದ ಕುಲಕುಂಡಲಿನಿಯನ್ನು ಧ್ಯಾನಿಸಿ, ಅದನ್ನು 'ಹುಂ' ಎಂಬ ಕೂರ್ಚಬೀಜೋಚ್ಚಾರಣದಿಂದ ಎಬ್ಬಿಸಬೇಕು. ಗುರೂಪದೇಶ ಪ್ರಕಾರ ಸುಷುಮ್ನಾ ನಾಡಿಯ ಮೂಲಕ ಆರು ಚಕ್ರಗಳ ಭೇದನ ಮಾಡಿ ಆ ಕುಲಕುಂಡಲಿನಿಯನ್ನು ಬ್ರಹ್ಮರಂಧ್ರದವರೆಗೆ ತೆಗೆದುಕೊಂಡು ಹೋಗಬೇಕು. ಅಲ್ಲಿ

ಅಮೃತ ನಿಮಗ್ನನಾಗಿ ಆತ್ಮ ಚಿಂತನ ಮಾಡಬೇಕು. ಮಾನಸಿಕ ಉಪಚಾರದಿಂದ ಪೂಜಿಸಿ ಪ್ರಾರ್ಥಿಸಬೇಕು. "ಆದಿದೇವ, ಲಕ್ಷ್ಮೀಕಾಂತ, ವಿಷ್ಣೋ ಮೂರುಲೋಕದ ಚೈತನ್ಯವು ನಿನ್ನಿಂದ ವ್ಯಾಪ್ತವಾಗಿದೆ, ನಿನ್ನ ಆಜ್ಞೆಯಿಂದ ಬೆಳಿಗ್ಗೆ ಎದ್ದು, ನಿನ್ನ ಪ್ರಿಯ ಕಾರ್ಯ ಮಾಡಲು, ಸಂಸಾರಯಾತ್ರೆಯನ್ನು ಅನುಸರಿಸುತ್ತೇನೆ.

**ತ್ರೈಲೋಕ್ಯ ಚೈತನ್ಯಮಯಾದಿದೇವ**
**ಶ್ರೀನಾಥ ವಿಷ್ಣೋ ಭವದಾಜ್ಞಯೈವ**
**ಪ್ರಾತಃ ಸಮುತ್ಥಾಯ ತವ ಪ್ರಿಯಾರ್ಥಂ**
**ಸಂಸಾರಯಾತ್ರಾಮನುವರ್ತಯಿಷ್ಯೇ ॥**

ದ್ವಿಜಶ್ರೇಷ್ಠ, ಇಷ್ಟದೇವತೆಯು ಬೇರೆಯಾಗಿದ್ದರೆ, ಹಿಂದಿನ ಶ್ಲೋಕದಲ್ಲಿ 'ವಿಷ್ಣೋ' ಎಂಬ ಸ್ಥಳದಲ್ಲಿ ಬೇರೆ ಪದಗಳನ್ನು ಹಾಕಿ ಸೇರಿಸಿಕೊಳ್ಳಬಹುದು. ಅನಂತರ ಸಂಪೂರ್ಣ ಸಿದ್ಧಿಗೋಸ್ಕರ ಅಜಪಾ ಗಾಯತ್ರಿಯನ್ನು ಅರ್ಪಿಸಬೇಕು. ಹಗಲು ರಾತ್ರಿ ಸೇರಿಸಿ ಜೀವನು ೨೧,೬೦೦ ಬಾರಿ ಅಜಪಾ ಗಾಯತ್ರಿಯ ಜಪ ಮಾಡುತ್ತಾನೆ. ಈ ಮಂತ್ರದ ಋಷಿ, ಹಂಸ, ಗಾಯತ್ರೀ ಛಂದಸ್ಸು, ಪರಮಹಂಸನೇ ದೇವತೆ, 'ಹಂ' ಬೀಜ 'ಸಃ' ಶಕ್ತಿ. ಸೂರ್ಯ, ಸೋಮ, ನಿರಂಜನ, ನಿರಾಭಾಸ, ಧರ್ಮ, ಜ್ಞಾನ ಈ ಪದಗಳ ಪೂರ್ವದಲ್ಲಿ 'ಹಂಸ'. ಕೊನೆಯಲ್ಲಿ 'ಆತ್ಮನೇ' ಎಂಬ ಪದಗಳನ್ನು ಸೇರಿಸಿ ಷಡಂಗನ್ಯಾಸ ಮಾಡಿಕೊಳ್ಳಬೇಕು. (ಹಂಸಃ' ಸೂರ್ಯಾತ್ಮನೇ ಹೃದಯಾಯ ನಮಃ ಈ ರೀತಿ) 'ಹ' ಕಾರವು ಸೂರ್ಯನಂತೆ ತೇಜಸ್ವಿಯಾಗಿ ಹೊರಗೆ ಹೊರಡುತ್ತದೆ. ಸಕಾರವು ಅದರಂತೆಯೇ ಒಳಗೆ ಪ್ರವೇಶ ಮಾಡುತ್ತದೆ. ಈ ರೀತಿ ಧ್ಯಾನ ಮಾಡಿ ವಹ್ನಿ ಮತ್ತು ಅರ್ಕ ಮಂಡಲಗಳ ವಿಭಾಗ ಪೂರ್ವಕವಾಗಿ ಜಪವನ್ನು ಅರ್ಪಿಸಬೇಕು. ಮೂಲಾಧಾರದಲ್ಲಿ ಬಂಧೂಕ ಪುಷ್ಪದಂತಹ ಕೆಂಪು ಕಮಲವಿದೆ. ಅದರ ನಾಲ್ಕು ದಳಗಳಲ್ಲಿ 'ವ, ಶ, ಷ, ಸ' ಎಂಬ ನಾಲ್ಕು ಅಕ್ಷರಗಳು ಅಂಕಿತವಾಗಿವೆ. ಅಲ್ಲಿ ಶಕ್ತಿ ಸಹಿತ ಗಣಪತಿ ವಿರಾಜಿಸುತ್ತಿದ್ದಾನೆ. ನಾಲ್ಕು ಹಸ್ತಗಳಲ್ಲಿ ಪಾಶ, ಅಂಕುಶ, ಸುಧಾಪಾತ್ರ, ಮೋದಕಗಳನ್ನು ಧರಿಸಿರುತ್ತಾನೆ. ಈ ವಾಕ್‌ಪತಿ ಗಣೇಶನಿಗೆ ೬ ಸಾವಿರ ಜಪವನ್ನು ಅರ್ಪಿಸಬೇಕು. ಹವಳ ವರ್ಣದ ಸ್ವಾಧಿಷ್ಠಾನ ಚಕ್ರವು ಆರುದಳದ ಕಮಲದ ಆಕಾರದಲ್ಲಿದೆ. ಅದರ ದಳಗಳಲ್ಲಿ 'ಬ, ಭ, ಮ, ಯ, ರ, ಲ' ಅಕ್ಷರಗಳು ಅಂಕಿತವಾಗಿವೆ. ಅದರಲ್ಲಿ ಕಮಲೋದ್ಭವ ಬ್ರಹ್ಮನು ಹಂಸಾರೂಢನಾಗಿ ವಿರಾಜಿಸುತ್ತಾನೆ. ಸ್ರುವ, ಅಕ್ಷಮಾಲಾಧಾರಿಯಾದ, ವಾಮಭಾಗದಲ್ಲಿ ಬ್ರಾಹ್ಮೀಶಕ್ತಿ ಸುಶೋಭಿತನಾದ, ವಿದ್ಯಾಧಿಪತಿಯಾದ ಬ್ರಹ್ಮನು ಅಲ್ಲಿರುತ್ತಾನೆ. ಅವನಿಗೆ ೬ ಸಾವಿರ ಜಪವನ್ನು ನಿವೇದಿಸಬೇಕು. ಹತ್ತು ದಲದ ಕಮಲಾಕಾರವಾದ ಮಣಿಪೂರ ಚಕ್ರದಲ್ಲಿ ಶಂಖ, ಚಕ್ರ, ಗದಾ, ಪದ್ಮ ಧಾರಿಯಾದ ಲಕ್ಷ್ಮೀ ಸಹಿತನಾದ ನಾರಾಯಣನು ವಿರಾಜಿಸುತ್ತಿದ್ದಾನೆ. ಅವನಿಗೆ ಆರು ಸಾವಿರ ಜಪವನ್ನು ಅರ್ಪಿಸಬೇಕು. ದ್ವಾದಶದಲ ಕಮಲ ರೂಪದ ಅನಾಹತ ಚಕ್ರದಲ್ಲಿ 'ಕ, ಖ, ಗ, ಘ ಙ, ಚ ಛ, ಜ, ಝ, ಞ, ಟ, ಠ' ಎಂಬ ಹನ್ನೆರಡು ಅಕ್ಷರಗಳು ಇವೆ. ಅಲ್ಲಿ ಶೂಲ, ಅಭಯ, ವರ, ಅಮೃತಕಲಶಗಳನ್ನು ಧರಿಸಿದ ವೃಷಭಾರೂಢನಾದ, ವಾಮಭಾಗದಲ್ಲಿ ಪಾರ್ವತೀ ಸಹಿತನಾದ, ವಿದ್ಯಾಧಿಪತಿಯಾದ ರುದ್ರನು ವಿರಾಜಿಸುತ್ತಿದ್ದಾನೆ. ಅವನಿಗೆ ಆರು ಸಾವಿರ ಜಪವನ್ನು ನಿವೇದಿಸಬೇಕು. ಹದಿನಾರು ದಳಗಳಿಂದ ಕೂಡಿದ ಬಿಳೀ ಕಮಲದ

ರೂಪದಲ್ಲಿರುವ ವಿಶುದ್ಧಿ ಚಕ್ರದ ದಳಗಳಲ್ಲಿ 'ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ' ಹದಿನಾರು ಅಕ್ಷರಗಳಿವೆ. ಅಲ್ಲಿ ಮಹಾಜ್ಯೋತಿ ಸ್ವರೂಪನಾದ, ಪ್ರಾಣ ಶಕ್ತಿಯುಕ್ತನಾದ, ಇಂದ್ರಿಯಾಧಿಪತಿಯಾದ ಈಶ್ವರನು ವಿರಾಜಿಸುತ್ತಿದ್ದಾನೆ. ಅವನಿಗೆ ಒಂದು ಸಹಸ್ರಜಪವನ್ನು ಅರ್ಪಿಸಬೇಕು. ಅಜ್ಞಾ ಚಕ್ರವು ಎರಡು ದಳದ ಕಮಲದಂತಿದೆ. ಅಲ್ಲಿ 'ಹ, ಕ್ಷ' ಅಕ್ಷರಗಳು ಅಂಕಿತವಾಗಿವೆ. ಪರಾಶಕ್ತಿ ಸಹಿತನಾಗಿ ಅಲ್ಲಿ ರಾಜಿಸುತ್ತಿರುವ ಸದಾಶಿವನಿಗೆ ಒಂದು ಸಾವಿರ ಜಪವನ್ನು ಅರ್ಪಿಸಬೇಕು. ಸಹಸ್ರಾರ ಚಕ್ರದಲ್ಲಿ ಸಹಸ್ರದಲಯುಕ್ತ ಮಹಾಕಮಲವಿದೆ. ಅಲ್ಲಿ ನಾದ ಬಿಂದು ಸಹಿತವಾದ ಸಮಸ್ತಮಾತೃಕಾ ವರ್ಣಗಳಿವೆ. ಅಲ್ಲಿರುವ ವರಾಭಯ ಸೂಚಕ ಹಸ್ತಯುಕ್ತ ಪರಮ ಗುರುವಿಗೆ ಒಂದು ಸಾವಿರ ಜಪವನ್ನು ಅರ್ಪಿಸಬೇಕು. ಅನಂತರ ಬೊಗಸೆಯಲ್ಲಿ ನೀರನ್ನು ತುಂಬಿ 'ಸ್ವಭಾವದಿಂದ ನಡಿಯುವ ೨೧,೬೦೦ ಅಜಪಾಗಾಯತ್ರಿಯನ್ನು ಹಿಂದೆ ಹೇಳಿದಂತೆ ವಿಭಾಗಿಸಿ, ಜಪಸಂಕಲ್ಪ ಮಾಡಿದ್ದರಿಂದ ಮೋಕ್ಷಪ್ರದನಾದ ಶ್ರೀಮನ್ನಾರಾಯಣನು ನನ್ನಲ್ಲಿ ಪ್ರಸನ್ನವಾಗಲಿ' ಎಂದು ನೀರನ್ನು ಬಿಡಬೇಕು. ಈ ಅಜಪಾಗಾಯತ್ರಿಯ ಸಂಕಲ್ಪ ಮಾತ್ರದಿಂದ ಮನುಷ್ಯನು ಮಹಾ ಪಾಪಗಳಿಂದ ಮುಕ್ತನಾಗುತ್ತಾನೆ. ''ನಾನು ಪರಿಪೂರ್ಣನು (ಬ್ರಹ್ಮಜ್ಞನು) ಸಂಸಾರಿಯಲ್ಲ. ನಿತ್ಯಮುಕ್ತನು. ಶೋಕವು ನನ್ನನ್ನು ಮುಟ್ಟಲಾರದು. ನಾನು ಸಚ್ಚಿದಾನಂದ ಸ್ವರೂಪಸರೂಪನು'' ಎಂದು ಚಿಂತಿಸಬೇಕು. ಅನಂತರ ದೈಹಿಕ ಕೃತ್ಯಗಳನ್ನು ಮುಗಿಸಿ ದೇವತಾ ಪೂಜೆಯನ್ನು ಮಾಡಬೇಕು. ಅದರ ವಿಧಾನವನ್ನು ಮತ್ತು ಸದಾಚಾರವನ್ನು ಮುಂದೆ ಹೇಳುವೆವು.

ನಾರದ ಮಹಾಪುರಾಣದಲ್ಲಿ ಅರವತ್ತನಾಲ್ಕನೆಯ ಅಧ್ಯಾಯ ಮುಗಿದುದು



## ಶೌಚಾಚಾರ - ದೇವತಾಪೂಜಾದಿಗಳು

**ಅಧ್ಯಾಯ - ೬೫**

**ಸನತ್ಕುಮಾರರು ಹೇಳುತ್ತಾರೆ:-** ಅನಂತರ ಎಡ ಅಥವಾ ಬಲದ ಮೂಗಿನ ಹೊಳ್ಳೆಗಳಲ್ಲಿ ಯಾವುದರಲ್ಲಿ ಶ್ವಾಸವು ಚಲಿಸುತ್ತದೆಯೋ ಆ ಭಾಗದ ಎಡ ಅಥವಾ ಬಲಭಾಗದ ನೆಲದ ಮೇಲೆ ನಿಂತು ಪ್ರಾರ್ಥಿಸಬೇಕು.

**ಸಮುದ್ರಮೇಖಲೇ ದೇವಿ ಪರ್ವತಸ್ತನಮಂಡಲೇ ।**
**ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥**

ಭೂದೇವಿ! ಸಮುದ್ರ ನಿನ್ನ ಒಡ್ಯಾಣ, ಪರ್ವತಗಳು ಸ್ತನಮಂಡಲ. ನಾನು ಕಾಲಿನಿಂದ ನಿನ್ನನ್ನು ಸ್ಪರ್ಶಿಸುತ್ತೇನೆ. ಆ ಅಪರಾಧವನ್ನು ಕ್ಷಮಿಸು. ನಿನಗೆ ನಮಸ್ಕಾರ.

**ಗಚ್ಛಂತು ಋಷಯೋ ದೇವಾಃ ಪಿಶಾಚಾ ಯೇ ಚ ಗುಹ್ಯಕಾಃ ।**
**ಪಿತೃಭೂತಗಣಾಃ ಸರ್ವೇ ಕರಿಷ್ಯೇ ಮಲಮೋಚನಂ ॥**

ಮನೆಯಿಂದ ನೈಋತ್ಯ ದಿಕ್ಕಿಗೆ ಹೋಗಿ, ಇಲ್ಲಿರುವ ಋಷಿಗಳು, ದೇವತೆಗಳು, ಪಿಶಾಚರು, ಯಕ್ಷರು, ಪಿತೃಭೂತಗಳು ಹೊರಟು ಹೋಗಲಿ. ನಾನಿಲ್ಲಿ ಮಲತ್ಯಾಗ ಮಾಡುವೆನು. ಈ ರೀತಿ ಹೇಳಿ ಮೂರು ಬಾರಿ ಚಪ್ಪಾಳೆ ತಟ್ಟಿ ತಲೆಯನ್ನು ಬಟ್ಟೆಯಿಂದ ಮುಚ್ಚಿಕೊಂಡು ಮಲತ್ಯಾಗ ಮಾಡಬೇಕು. ರಾತ್ರಿ ದಕ್ಷಿಣ ದಿಕ್ಕಿಗೂ ಹಗಲು ಉತ್ತರ ದಿಕ್ಕಿಗೂ ಮುಖ ಮಾಡಿರಬೇಕು.

ಅನಂತರ ಮಣ್ಣು ಜಲಗಳಿಂದ ಕೈಕಾಲು ಮಲದ್ವಾರಗಳನ್ನು ಶುದ್ಧೀಕರಿಸಿ ಹನ್ನೆರಡು ಬಾರಿ ಬಾಯಿ ಮುಕ್ಕಳಿಸಬೇಕು. ಅನಂತರ ದಂತ ಕಾಷ್ಠ ಪ್ರಾರ್ಥನಾ.

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶು ವಸೂನಿ ಚ ।**
**ಶ್ರಿಯಂ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥**

ವನಸ್ಪತಿಯೇ ನೀನು ನಿನಗೆ ಆಯುಸ್ಸು, ಬಲ, ಕೀರ್ತಿ, ತೇಜಸ್ಸು, ಸಂತಾನ, ಪಶು, ಧನ, ಲಕ್ಷ್ಮೀ, ಜ್ಞಾನಶಕ್ತಿ ಮತ್ತು ಧಾರಣ ಶಕ್ತಿಯನ್ನು ಕೊಡು'' ಎಂದು ಪ್ರಾರ್ಥಿಸಿ ೧೨ ಅಂಗುಲದ ಕಾಷ್ಠದಿಂದ ಏಕಾಗ್ರ ಚಿತ್ತದಿಂದ ಹಲ್ಲು ಮತ್ತು ವಸಡುಗಳನ್ನು ಶೋಧಿಸಿ ಮುಖಶುದ್ಧಿಯನ್ನು ಮಾಡಿಕೊಳ್ಳಬೇಕು. ಅನಂತರ ದೇವತಾ ಸಂಕೀರ್ತನ ಮಾಡುತ್ತ ನದೀ ಜಲಾಶಯಾದಿಗಳಿಗೆ ಸ್ನಾನಕ್ಕಾಗಿ ಹೋಗಬೇಕು. ಜಲಾಶಯಕ್ಕೆ ನಮಸ್ಕಾರ ಮಾಡಿ ಬಟ್ಟೆ ಮುಂತಾದ್ದನ್ನು ದಡದಲ್ಲಿಟ್ಟು ಮೂಲ ಮಂತ್ರ ಅಭಿಮಂತ್ರಿತವಾದ ಮೃತ್ತಿಕೆಯನ್ನು ಸೊಂಟದಿಂದ ಕಾಲಿನವರೆಗೆ ಹಚ್ಚಿ ಅನಂತರ ಅದನ್ನು ತೀರ್ಥದ ನೀರಿನಿಂದ ತೊಳೆಯಬೇಕು. ಆ ಬಳಿಕ ಐದಾವರ್ತಿ ಪಾದಗಳನ್ನು ತೊಳೆದುಕೊಂಡು ಪುನಃ ನಾಭಿಯ ವರೆಗಿನ ಆಳದ ನೀರಿನಲ್ಲಿ ನಿಂತು ಎಡಕ್ಕೆ ಮಣಿಕಟ್ಟು, ಅಂಗೈ ಅದರ ಅಗ್ರಭಾಗಗಳಿಗೆ ಮೃತ್ತಿಕೆಯನ್ನು ಲೇಪಿಸಿ. ದೊಟ್ಟನಿಂದ ಗಂಗೆಯ ಮೃತ್ತಿಕೆಯನ್ನು ತೆಗೆದುಕೊಂಡು ಮಂತ್ರಜ್ಞಾನಿಯು ಪುನಃ 'ಫಟ್' ಎಂಬ ಮಂತ್ರದಿಂದ ತನ್ನ ತಲೆಯಸುತ್ತ ತಿರುಗಿಸಿ ಎಸೆಯಬೇಕು. ಪುನಃ ತೀರ್ಥ ಮೃತ್ತಿಕೆಯನ್ನು ಷಡಂಗಗಳಲ್ಲಿ ಮಂತ್ರಗಳಿಂದ ಲೇಪಿಸಬೇಕು. ನೀರಿನಲ್ಲಿ ಚೆನ್ನಾಗಿ ಮುಳುಗಿ ಚೆನ್ನಾಗಿ ತೊಳೆದು ಮಲಸ್ನಾನ ಮಾಡಬೇಕು. ಅಸಂಖ್ಯಾತರಾದ ಸೂರ್ಯರಂತೆ ಪ್ರಕಾಶಿಸುವ ತನ್ನ ಆಭರಣ ಆಯುಧಗಳನ್ನು ಧರಿಸಿರುವ ಮಂತ್ರಮೂರ್ತಿಯಾದ ಶ್ರೀ ಹರಿಯನ್ನು ಧ್ಯಾನಿಸಬೇಕು. ಆ ಸ್ವಾಮಿಯ ಪಾದೋದಕ ಸಂಭೂತವಾದ ಜಲಧಾರೆಯು ಬ್ರಹ್ಮರಂಧ್ರ ದಿಂದ ತನ್ನ ಶರೀರದಲ್ಲಿ ಪ್ರವೇಶಿಸುತ್ತದೆಯೆಂದು ಚಿಂತಿಸಿ ತನ್ನ ದೇಹದ ಮಲವೆಲ್ಲ ತೊಳೆದು ಹೋಯಿತೆಂದು ಭಾವಿಸಬೇಕು. ಈ ಮಂತ್ರ ಜಪಮಾಡಿದವನು ನಿರ್ಮಲ ಸ್ಫಟಿಕ ಸಮಾನನಾಗುವನು. ಅನಂತರ ಮಂತ್ರಸ್ನಾನ ಮಾಡಬೇಕು. ದೇಶಕಾಲ ಸಂಕೀರ್ತನ ಮಾಡಿ ಆರು ಅಂಗಗಳಿಂದ ಪ್ರಾಣಾಯಾಮ ಮಾಡಿ, ಮುಷ್ಟಿಮುದ್ರೆಯನ್ನು ಪ್ರದರ್ಶಿಸಿ ಸೂರ್ಯಮಂಡಲದಿಂದ ತೀರ್ಥಗಳನ್ನು ಆಹ್ವಾನಿಸಬೇಕು.

**ಬ್ರಹ್ಮಾಂಡೋದರ ತೀರ್ಥಾನಿ ಕರೈಃ ಸ್ಪೃಷ್ಟಾನಿ ತೇ ರವೇ ।**
**ತೇನ ಸತ್ಯೇನ ಮೇ ದೇವ ತೀರ್ಥಂ ದೇಹಿ ದಿವಾಕರ ॥**

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು ॥**

ಸೂರ್ಯದೇವ! ಬ್ರಹ್ಮಾಂಡದ ಮಧ್ಯದಲ್ಲಿರುವ ಎಲ್ಲ ತೀರ್ಥಗಳೂ ನಿನ್ನ ಕಿರಣಗಳಿಂದ ವ್ಯಾಪ್ತವಾಗಿವೆ. ಆದುದರಿಂದ ನೀನು ಪ್ರಸನ್ನನಾಗಿ ತೀರ್ಥವನ್ನು ಕರುಣಿಸು ನನಗೆ. ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಕಾವೇರಿ! ನೀವು ಈ ಜಲದಲ್ಲಿ ಸನ್ನಿಧಾನವನ್ನಿಡಿರಿ, ಎಂದು ಪ್ರಾರ್ಥಿಸಿ 'ವಂ' ಎಂದು ಜಲವನ್ನು ಸುಧಾಬೀಜಯುಕ್ತವನ್ನಾಗಿ ಮಾಡಿ ಗೋಮುದ್ರೆಯನ್ನು ತೋರಿಸಿ ಅಮೃತವಾಯಿತು ಎಂದು

ಭಾವಿಸಿ 'ಹುಂ' ಎಂಬ ಕವಚದಿಂದ ಆಚ್ಛಾದಿಸಿ 'ಫಟ್' ಅಸ್ತ್ರದಿಂದ ರಕ್ಷಿಸಿ ಚಕ್ರ ಮುದ್ರೆಯನ್ನು ತೋರಿಸಿ ಅಗ್ನಿ ಸೂರ್ಯ ಚಂದ್ರ ಮಂಡಲಗಳನ್ನು ಚಿಂತಿಸಬೇಕು. ಅಮೃತ ಬೀಜಯುಕ್ತವಾದ ಸೂರ್ಯ ಮಂತ್ರದಿಂದ ಮತ್ತು ಮೂಲಮಂತ್ರದಿಂದ ಅಭಿಮಂತ್ರಿಸಿ ಹೃದಯದಿಂದ ದೇವತೆಯನ್ನು ಆವಾಹಿಸಿ ಮಾನಸೋಪಚಾರ ಪೂಜಾಗಳಿಂದ ಪೂಜಿಸಬೇಕು. ಸಂಪೂರ್ಣ ಭೂತಗಳಿಗೂ ಮತ್ತು ಶ್ರೀಮನ್ನಾರಾಯಣನಿಗೂ ಆಧಾರವಾಗಿರುವ ಜಲವನ್ನು ನಾನು ನಮಸ್ಕರಿಸುತ್ತೇನೆ, ಎಂದು ಜಲಕ್ಕೆ ನಮಸ್ಕಾರ ಮಾಡಿ ಶರೀರದ ಸಪ್ತೇಂದ್ರಿಯಗಳನ್ನು ಮುಚ್ಚಿಕೊಂಡು ಜಲದಲ್ಲಿ ಮೂರು ಬಾರಿ ಮುಳುಗಿ ಮೇಲೆ ಬಂದು ಕುಂಭ ಮುದ್ರೆಯಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಮೂಲ ಮಂತ್ರ ಮತ್ತು ಮುಂದೆ ಹೇಳುವ ನಾಲ್ಕು ಮಂತ್ರಗಳಿಂದ ತನ್ನ ಶರೀರವನ್ನು ಪ್ರೋಕ್ಷಿಸಿಕೊಳ್ಳಬೇಕು.

ಸಿಸೃಕ್ಷೋರ್ನಿಖಿಲಂ ವಿಶ್ವಂ ಮುಹುಃ ಶುಕ್ರಂ ಪ್ರಜಾಪತೇಃ ।
ಮಾತರಃ ಸರ್ವಭೂತಾನಾಂ ಆಪೋ ದೇವ್ಯಃ ಪುನಂತು ಮಾಂ॥ ೧ ॥

ಸಮಸ್ತ ಜಗತ್ತನ್ನು ಸೃಷ್ಟಿಸಲು ಬಯಸುವ ಬ್ರಹ್ಮನ ವೀರ್ಯವು ಮತ್ತು ಸಮಸ್ತ ಭೂತ ಜನನಿಯರಾದ ಜಲಾಭಿಮಾನಿ ದೇವತೆಗಳೂ ನನ್ನನ್ನು ಪರಿಶುದ್ಧಗೊಳಿಸಲಿ.

ಅಲಕ್ಷ್ಮೀರ್ಮಲರೂಪಾ ಯಾ ಸರ್ವ ಭೂತೇಷು ಸಂಸ್ಥಿತಾ ॥
ಕ್ಷಾಲಯಂತಿ ಚ ತಾಂ ಸ್ಪರ್ಶಾದಾಪೋ ದೇವ್ಯಃ ಪುನಂತು ಮಾಮ್॥ ೨ ॥

ಸಕಲ ಪ್ರಾಣಗಳಲ್ಲಿ ನೆಲೆಸಿರುವ ಮಲರೂಪವಾದ ದರಿದ್ರ ದೇವತೆಯನ್ನು ಸ್ಪರ್ಶಮಾತ್ರದಿಂದ ತೊಳೆಯುವ ಜಲದೇವತೆಗಳು ನನ್ನನ್ನು ಪರಿಶುದ್ಧಗೊಳಿಸಲಿ.

ಯನ್ಮೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋರಾಪಸ್ತದ್ಧಂತು ವೋ ನಮಃ ॥ ೩ ॥

ಕೂದಲು, ಬೈತಲೆ, ಶಿರಸ್ಸು, ಹಣೆ, ಕಿವಿಗಳೂ ಮತ್ತು ಕಣ್ಣುಗಳು ಇವುಗಳಲ್ಲಿ ಇರುವ ನನ್ನ ದೌರ್ಭಾಗ್ಯವನ್ನು ಜಲದೇವತೆಗಳು ನಾಶಪಡಿಸಲಿ. ನಿಮಗೆ ನಮಸ್ಕಾರ.

ಆಯುರಾರೋಗ್ಯಮೈಶ್ವರ್ಯಮರಿಪಕ್ಷಕ್ಷಯಃ ಶುಭಂ ।
ಸಂತೋಷ ಕ್ಷಾಂತಿರಾಸ್ತಿಕ್ಯಂ ವಿದ್ಯಾ ಭವತು ವೋ ನಮಃ ॥

ಜಲದೇವತೆಗಳೇ! ನಿಮಗೆ ನಮಸ್ಕಾರ. ಆಯುಷ್ಯ, ಆರೋಗ್ಯ ಐಶ್ವರ್ಯ, ಶತ್ರುನಾಶ, ಶ್ರೇಯಸ್ಸು, ಸಂತೋಷ, ಸಹಿಷ್ಣುತೆ, ಆಸ್ತಿಕ್ಯ ಮತ್ತು ವಿದ್ಯೆ ಇವು ನನಗೆ ಲಭಿಸುವಂತೆ ಮಾಡಿರಿ. ಇವೇ ನಾಲ್ಕು ಮಂತ್ರಗಳು. ಭೂಮಿಯಲ್ಲಿರುವ ತೀರ್ಥಗಳೆಲ್ಲ ಬ್ರಾಹ್ಮಣರ ಬಲಗಾಲಿನಲ್ಲಿರುವದರಿಂದ ಬ್ರಾಹ್ಮಣರ ಪಾದ ಧೂಳಿಯನ್ನು ಧಾರಣಮಾಡಿ ಶಾಲಿಗ್ರಾಮ ಶಿಲಾತೀರ್ಥವನ್ನು ಪಾನ ಮಾಡಬೇಕು. ನಿಷಿದ್ದವನ್ನು ಮಾಡಬಾರದು. ಇದೇ ವಿಧಿಯು. ಹೀಗೆ ಸ್ನಾನ ಮುಗಿದ ಮೇಲೆ ಪ್ರೋಕ್ಷಿತವಾದ ಶುದ್ಧ ವಸ್ತ್ರಗಳಲ್ಲಿ ಒಂದನ್ನು ಉಟ್ಟು ಮತ್ತೊಂದನ್ನು ಹೊದೆದು ಸಂಧ್ಯಾವಂದನಾದಿಗಳನ್ನು ಮಾಡಬೇಕು.

ಅಶಕ್ತನಾದವನು ಅಘಮರ್ಷಣ ಮಂತ್ರದಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಅತ್ಯಂತ ಅಶಕ್ತನು ಭಸ್ಮ ಅಥವಾ ರಜಸ್ಸು (ತುಲಸೀ ಮೂಲ ಧೂಳಿ) ಇವುಗಳನ್ನು ಲೇಪಿಸಿಕೊಳ್ಳಬೇಕು. ಸ್ನಾತನು ಕೇಶವಾಯಸ್ವಾಹಾ, ನಾರಾಯಣಾಯಸ್ವಾಹಾ, ಮಾಧವಾಯ

ಸ್ವಾಹಾ, ಎಂದು ಉಚ್ಚರಿಸುತ್ತ ಆಚಮನ ಮಾಡಿ ಗೋವಿಂದಾಯ ನಮಃ ವಿಷ್ಣವೇ ನಮಃ ಎಂದು ಕೈಯನ್ನು ತೊಳೆದು ಮಧಸೂಧನಾಯ ನಮಃ, ತ್ರಿವಿಕ್ರಮಾಯನಮಃ ಎಂದು ತುಟಿಗಳನ್ನು ನೀರಿನಿಂದ ಒರಸಿಕೊಳ್ಳಬೇಕು. ವಾಮನಾಯನಮಃ, ಶ್ರೀಧರಾಯನಮಃ ಮುಖ ಮತ್ತು ಎರಡು ಕೈಗಳನ್ನು ಮುಟ್ಟುವುದು' ಹೃಷಿಕೇಶಾಯನಮಃ ಪದ್ಮನಾಭಾಯನಮಃ ಎಂದು ಎರಡು ಕಾಲುಗಳನ್ನು ಸ್ಪರ್ಶಿಸುವದು, ದಾಮೋದರಾಯನಮಃ ಶಿರಸ್ಸನ್ನು ಮುಟ್ಟುವುದು. ಸಂಕರ್ಷಣಾಯ ನಮಃ ಮುಖ, ವಾಸುದೇವಾಯನಮಃ ಪ್ರದ್ಯುಮ್ನಾಯ ನಮಃ ಬಲ ಎಡದ ಮೂಗಿನ ಹೊಳ್ಳೆಗಳು, ಅನಿರುದ್ಧಾಯನಮಃ ಪುರುಷೋತ್ತಮಾಯ ನಮಃ ಎರಡೂ ಕಣ್ಣುಗಳು, ಅಧೋಕ್ಷಜಾಯನಮಃ, ನೃಸಿಂಹಾಯನಮಃ ಎರಡು ಕಿವಿಗಳು, ಅಚ್ಯುತಾಯನಮಃ, ನಾಭಿ, ಜನರ್ದನಾಯ ನಮಃ, ಎದೆ, ಹರಯೇನಮಃ, ವಿಷ್ಣವೇ ನಮಃ ಎರಡು ಹೆಗಲುಗಳು ಇವುಗಳನ್ನು ಮುಟ್ಟಬೇಕು. ಇದು ವೈಷ್ಣವಾಚಮನ, ಮೊದಲು ಓಂಕಾರ, ಚತುರ್ಥ್ಯಂತ ನಾಮ, ನಮಃ ಪದ, ಇವಿಷ್ಟು ಇರಬೇಕು. 'ಹಾಂ ಆತ್ಮತತ್ವಾಯ ಸ್ವಾಹಾ,'' ಹ್ರೀಂ ವಿದ್ಯಾತತ್ವಾಯ ಸ್ವಾಹಾ, ಹೂಂ ಶಿವತತ್ವಾಯ ಸ್ವಾಹಾ, ಎಂಬುದಾಗಿ ಮಾಡುವ ಆಚಮನವು ಶೈವಾಚಮನವು. ''ಐಂ ಆತ್ಮತತ್ತಾಯ ಸ್ವಾಹಾ, ಹ್ರೀಂ ವಿದ್ಯಾತತ್ವಾಯ ಸ್ವಾಹಾ,'' ''ಶ್ರೀಂ ಶಿವತತ್ವಾಯ ಸ್ವಾಹಾ'' ಇದು ಶಕ್ತ್ಯಾಚಮನವು.

ಹಣೆಯಲ್ಲಿ ಗದಾಕಾರ, ಹೃದಯದಲ್ಲಿ ನಂದಕಾಕಾರ, ಭುಜಗಳಲ್ಲಿ ಶಂಖ ಚಕ್ರಗಳನ್ನೂ ಧರಿಸಬೇಕು. ತಲೆಯ ಮೇಲೆ ಶಾರ್ಙ್ಗ ಬಾಣ ಚಿಹ್ನೆ, ಇರಬೇಕು. ಕಿವಿಗಳ ಕೆಳಗೆ ಎಡು ಪಾರ್ಶ್ವಗಳಲ್ಲಿ, ನಾಭಿಯ ಸರಿಯಾದ ಹಿಂಭಾಗದ ಬೆನ್ನಿನಲ್ಲಿ ತಿಲಕ ಧಾರಣ ಆವಶ್ಯಕ. ತೀರ್ಥಮೃತ್ತಿಕೆ ಗೋಪೀಚಂದನಗಳಿಂದ ತಿಲಕಧಾರಣ ಮಾಡಬೇಕು. ಶೈವರು, ತ್ರ್ಯಂಬಕಮಂತ್ರದಿಂದ ಅಗ್ನಿಹೋತ್ರದ ಭಸ್ಮವನ್ನು ತೆಗೆದುಕೊಂಡು ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ, ಈಶಾನ, ನಾಮಗಳಿಂದ ಕ್ರಮವಾಗಿ, ಹಣೆ, ಹೆಗಲು, ಹೊಟ್ಟೆ, ಭುಜ, ಹೃದಯಗಳಲ್ಲಿ ತ್ರಿಪುಂಡ್ರ ಧರಿಸಬೇಕು. ವೈದಿಕ ಸಂಧ್ಯೆಯನಂತರ ಮಂತ್ರಸಾಧಕನು ತಾಂತ್ರಿಕ ಸಂಧ್ಯಾವಂದನ ಮಾಡಬೇಕು. ಜಲದಲ್ಲಿ ತೀರ್ಥಾವಾಹನ, ದರ್ಭೆಯಿಂದ ಮೂರು ಬಾರಿ, ಭೂಮಿ ಪ್ರೋಕ್ಷಣ, ಅದೇ ಜಲದಿಂದ ಏಳುಬಾರಿ ಶಿರಸ್ಸನ್ನು ಪ್ರೋಕ್ಷಿಸುವುದು, ಪ್ರಾಣಾಯಾಮ ಷಡಂಗ ನ್ಯಾಸ ಮಾಡಿ ಎಡಗೈಯಲ್ಲಿ ನೀರು ಹಿಡಿದು ಬಲಗೈಯಿಂದ ಅದನ್ನು ಮುಚ್ಚಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿಗಳ ಹಂ, ಯಂ, ರಂ ವಂ ಲಂ ಎಂಬ ಬೀಜ ಮಂತ್ರಗಳಿಂದ ಅಭಿಮಂತ್ರಿಸಿ, ಮೂಗಿನಹತ್ತಿರ ತೆಗೆದುಕೊಂಡು ಹೋಗಿ ಇಡಾನಾಡಿಯಿಂದ ಆ ನೀರನ್ನು ಒಳಕ್ಕೆ ಸೆಳೆದಂತೆ ಮಾಡಿ, ಪಿಂಗಳಾನಾಡಿಯಿಂದ ಹೊರಕ್ಕೆ ಬಿಟ್ಟಂತೆ ಮಾಡಿ, ತನ್ನೆದುರು ವಜ್ರಮಯ ಶಿಲೆಯಿದೆಯೆಂದು ಭಾವಿಸಿ 'ಫಟ್' ಎಂಬ ಅಸ್ತ್ರಮಂತ್ರದಿಂದ ಆ ನೀರನ್ನು ನೆಲಕ್ಕೆ ಬಡಿಯಬೇಕು. ಇದೇ ಅಘಮರ್ಷಣ, ಸಕಲ ಪಾಪನಾಶಕ. ಕೈಕಾಲು ತೊಳೆದು ಆಚಮನ ಮಾಡಿ, ತಾಮ್ರಪಾತ್ರೆಯಲ್ಲಿ ಪುಷ್ಪ ಚಂದನಗಳನ್ನು ಹಾಕಿ ಮೂಲ ಮಂತ್ರೋಚ್ಚಾರಣ ಮಾಡುತ್ತಾ ಸೂರ್ಯಾಂತರ್ಗತ ನಾರಾಯಣನಿಗೆ ಮೂರು ಅರ್ಘ್ಯಕೊಡಬೇಕು. ಅನಂತರ ಸೂರ್ಯ ಮಂಡಲಾಂತರ್ಗತ ನಾರಾಯಣನ ಧ್ಯಾನ ಮಾಡಿ ೧೦೮ ಅಥವಾ ೨೮ ಗಾಯತ್ರೀ ಜಪ ಮಾಡಿ ಗುಹ್ಯಾತಿಗುಹ್ಯ ಗೋಪ್ತ್ರೀ ಎಂಬ ಮಂತ್ರದಿಂದ ಜಪವನ್ನು ಅರ್ಪಿಸಿ ಗಾಯತ್ರಿ ಧ್ಯಾನ ಮಾಡಬೇಕು. ದೇವ, ಋಷಿ, ಪಿತೃ, ಇಷ್ಟದೇವತೆ ಗುರು ಪರಂಪರೆ ಇವರಿಗೆ ತರ್ಪಣ ಕೊಡಬೇಕು. ''ಸಾಂಗಂ

ಸಾಯುಧಂ ವೈನತೇಯಂ ತರ್ಪಯಾಮಿ'' ಎಂದು ಗರುಡ ತರ್ಪಣ, ನಾರದ, ಪರ್ವತ, ಜಿಷ್ಣು, ನಿಶಠ, ಉದ್ಧವ, ದಾರುಕ ವಿಷ್ವಕ್ಸೇನ, ಶೈಲೇಯರನ್ನು ತರ್ಪಿಸಿ, ಸೂರ್ಯಾರ್ಘ್ಯಪ್ರದಾನ ಮಾಡಿ, ಕೈಕಾಲುತೊಳೆದುಕೊಂಡು, ಅಗ್ನಿಗೃಹಕ್ಕೆ ಬಂದು ಗಾರ್ಹಪತ್ಯಾದಿ ಅಗ್ನಿಗಳನ್ನು ಹೋಮಿಸಬೇಕು. ಅನಂತರ ದ್ವಾರಪೂಜಾ. ನಂದ, ಸುನಂದ, ಚಂಡ, ಪ್ರಚಂಡ, ಪ್ರಬಲ, ಬಲ, ಭದ್ರ, ಸುಭದ್ರ, ಇವರು ವೈಷ್ಣವ ದ್ವಾರಪಾಲಕರು. ನಂದಿ, ಭೃಂಗಿ, ರಿಟಿ, ಸ್ಕಂದ, ಗಣೇಶ, ಉಮಾಮಹೇಶ್ವರ, ನಂದೀ ವೃಷಭ, ಮಹಾಕಾಲ ಇವರು ಶೈವ ದ್ವಾರಪಾಲಕರು. ಬ್ರಾಹ್ಮೀ, ಮಾಹೇಶ್ವರೀ, ಕೌಮಾರಿ ವೈಷ್ಣವೀ, ವಾರಾಹೀ, ಇಂದ್ರಾಣಿ, ಚಾಮುಂಡಾ ಇವರು ಮಾತೃಕೆಯರು ಮತ್ತು ದ್ವಾರಪಾಲಿಕೆಯರು. ಆಯಾ ಹೆಸರಿನ ಮೊದಲನೆಯ ಅಕ್ಷರಕ್ಕೆ ಅನುಸ್ವಾರ ಹಚ್ಚಿ ಚತುರ್ಥಿಅಂತವಾಗಿ 'ನಮಃ' ಎಂದು ಹೇಳಿ ಇವರನ್ನು ಪೂಜಿಸುವದು. ಉದಾ - ನಂ ನಂದನಾಯ ನಮಃ ಇತ್ಯಾದಿ.

## ವೈಷ್ಣವ ಮಾತೃಕಾನ್ಯಾಸ

ಕೀರ್ತಿ ಸಹಿತ ಕೇಶವ, ಕಾಂತಿ ಸಹಿತ ನಾರಾಯಣ, ತುಷ್ಟಿ ಸಹಿತ ಮಾಧವ, ಪುಷ್ಟಿ ಸಹಿತ ಗೋವಿಂದ, ಧೃತಿ ವಿಷ್ಣು, ಶಾಂತಿ ಮಧುಸೂದನ, ಕ್ರಿಯಾ ವಿಕ್ರಮ, ದಯಾವಾಮನ, ಮೇಧಾಶ್ರೀಧರ, ಹರ್ಷಾಹೃಷಿಕೇಶ, ಶ್ರದ್ಧಾಪದ್ಮನಾಭ, ಲಜ್ಜಾದಾಮೋದರ, ಲಕ್ಷ್ಮೀವಾಸುದೇವ, ಸರಸ್ವತೀ ಸಂಕರ್ಷಣ, ಪ್ರೀತಿಪ್ರದ್ಯುಮ್ನ, ರತಿ ಅನಿರುದ್ಧ, ಜಯಾಚಕ್ರೀ, ದುರ್ಗಾಗದೀ, ಪ್ರಭಾಶಾಂಗ್ರೀ, ಸತ್ಯಾಖಡ್ಗೀ, ಚಂಡಾಶಂಖೀ, ವಾಣಿಹಲೀ, ವಿಲಾಸಿನೀಮುಸಲೀ, ವಿಜಯಾಶೂಲಿ, ವಿರಜಾಪಾಶಿ, ವಿಶ್ವಾಅಂಕುಶೀ, ವಿನದಾಮುಕುಂದ, ಸುನಂದಾನಂದಜ, ಸ್ಮೃತಿನಂದೀ, ವೃದ್ಧಿನರ, ಸಮೃದ್ಧಿ ಸಹಿತನರಕಜಿತ್, ಶುದ್ಧಿಹರಿ, ಬುದ್ಧಿಕೃಷ್ಣ, ಭುಕ್ತಿಸತ್ಯ, ಮುಕ್ತಿ - ಸಾತ್ವಿಕ, ಕ್ಷಮಾಶೌರಿ, ರಮಾಸೂರ, ಉಮಾಜನಾರ್ದನ, ಕ್ಲೇದಿನೀ ಭೂಧರ, ಕ್ಲಿನ್ನಾವಿಶ್ವಮೂರ್ತಿ, ವಸುಧಾ-ವೈಕುಂಠ, ವಸುದಾಪುರುಷೋತ್ತಮ, ಪರಾಬಲೀ, ಪರಾಯಣಾಬಲಾನುಜ, ಸೂಕ್ಷ್ಮಾಬಾಲ, ಸಂಧ್ಯಾವೃಷಹಂತೃ, ಪ್ರಜ್ಞಾವೃಷ, ಪ್ರಭಾಹಂಸ, ನಿಶಾವರಾಹ, ಧಾರಾವಿಮಲ, ವಿದ್ಯುತ್ - ನೃಸಿಂಹ, ಎಂಬ ಪತ್ನೀ ಸಹಿತ ವಿಷ್ಣುರೂಪಗಳ ನ್ಯಾಸಮಾಡಬೇಕು. ನಾರಾಯಣೋ ಋಷಿಃ, ಅಮೃತಾದ್ಯಾಗಾಯತ್ರೀ ಛಂದಃ, ವಿಷ್ಣುರ್ದೇವತಾ'' ಎಂದು ಮೊದಲು ಹೇಳುವುದು. ಕಲಶ ದರ್ಪಣ ಚಕ್ರಾದಿ ಆಯುಧಶೋಭಿತ, ಲಕ್ಷ್ಮೀಸಹಿತ, ವಿದ್ಯುತ್ ಸಮಾನಅಂಗಕಾಂತಿಯುಕ್ತ, ದಿವ್ಯಾಭರಣ ಭೂಷಿತ ಪರಮಾತ್ಮನ ಧ್ಯಾನಮಾಡುವುದು.

ಹ್ರೀಂ ಶ್ರೀಂ ಕ್ಲೀಂ ಸಂಪುಟಿತವಾಗಿ ಅಕಾರಾದಿಗಳ ನ್ಯಾಸ ಹೀಗೆ - ಓಂ ಶ್ರೀಂ ಹ್ರೀಂ ಕ್ಲೀಂ ಶ್ರೀಂ ಹ್ರೀಂ ಕೇಶವಕೀರ್ತಿಭ್ಯಾಂನಮಃ (ಹಣೆಯಲ್ಲಿ) ಹೀಗೆ ನ್ಯಾಸ. ಅ ಹಣೆ, ಆ ಮುಖ, ಇ ಈ ಬಲ - ಎಡಗಣ್ಣುಗಳು. ಉ ಊ ಬಲ - ಎಡಕಿವಿಗಳು, ಋ ೠ ಬಲ - ಎಡ ಮೂಗು, ಌ, ೡ ಬಲ-ಎಡ ಕಪೋಲಗಳು, ಏ ಐ ಮೇಲು - ಕೆಳಗಿನ ತುಟಿಗಳು, ಓ ಔ ಮೇಲೆ - ಕೆಳಗಿನ ಹಲ್ಲುಗಳು, ಅಂ ನಾಲಿಗೆಯ ಬುಡ, ಅಃ ಕತ್ತು, ಬಲತೋಳು ಕ ವರ್ಗ, ಎಡತೋಳು ಚ ವರ್ಗ, ಟ-ತ ವರ್ಗಗಳು ಎರಡು ಕಾಲುಗಳು, ಪ-ಫ ಎಡಬಲ ಹೊಟ್ಟೆ, ಬ ಬೆನ್ನು, ಭ ನಾಭಿ, ಮ ಹೃದಯ, ಯ ರ ಲ ವ ಶ ಷ ಸ ಸಪ್ತ ಧಾತುಗಳು, ಹ ಪ್ರಾಣ, ಳ ಆತ್ಮ, ಕ್ಷ ಶ್ರೋಧಃ- ಈ ಸ್ಥಳಗಳಲ್ಲಿ ಆಯಾ ಅಕ್ಷರಗಳಿಂದ ನ್ಯಾಸ ಮಾಡಬೇಕು. ಹೀಗೆಯೇ

ಆಯಾ ದೇವತೋಪಾಸಕರು ಶೈವ, ಗಾಣಪತ್ಯ, ಕಲಾಮಾತೃಕಾನ್ಯಾಸವನ್ನೂ ಆಯಾ ದೇವತಾಭಕ್ತರು ಮಾಡಿಕೊಳ್ಳಬೇಕು. ಅನಂತರ ಮೂಲಮಂತ್ರದಿಂದ ಅಂಗನ್ಯಾಸವನ್ನು ಮಾಡಿ, ಇಷ್ಟ ದೇವತೆಯನ್ನು ಧ್ಯಾನಿಸಿ ಪೂಜೆ ಮಾಡಬೇಕು.

## ದೇವಪೂಜಾ ವಿಧಿ

ಎಡಭಾಗದಲ್ಲಿ ತ್ರಿಕೋಣ ಅಥವಾ ಷಟ್‌ಕೋಣ ಮಂಡಲ ರಚಿಸಿ ಅದರ ಮೇಲೆ ಪಾತ್ರೆಯನ್ನಿಟ್ಟು ಜಲತುಂಬಿ ಅಭಿಮಂತ್ರಿಸಿ, ಆ ನೀರಿನಿಂದ ಎಲ್ಲವನ್ನು ಪ್ರೋಕ್ಷಿಸುವುದು. ಇನ್ನೊಂದು ತ್ರಿಕೋಣಮಂಡಲಮಾಡಿ ಅದನ್ನು ಪೂಜಿಸಿ ಅಲ್ಲಿ ತ್ರಿಪಾದೀ ಪೀಠ ಇಡುವುದು. ಶಂಖ ಪೂಜೆ, ಕಲಶಪೂಜೆಗಳಲ್ಲಿ ಮುದ್ರಾಪ್ರದರ್ಶನ ಅವಶ್ಯಕ. ಶಂಖ ಮುಸಲ, ಚಕ್ರ, ಪರಮೀಕರಣ, ಮಹಾಮುದ್ರಾ, ಗಾರುಡಿ, ಗಾಲಿನೀ ಇತ್ಯಾದಿ ಮುದ್ರೆಗಳಿವೆ. ಪೀಠ ಪೂಜೆಯನಂತರ ಇಷ್ಟದೇವತೆಯನ್ನು ಪ್ರತಿಮೆಯಲ್ಲಿ ಧ್ಯಾನಿಸಿ ಆವಾಹಿಸಬೇಕು. ಶಾಲಿಗ್ರಾಮದಲ್ಲಿ ಆವಾಹನ ವಿಸರ್ಜನಗಳಿಲ್ಲ.

''ಸಾಲಿಗ್ರಾಮೇ ಸ್ಥಾಪಿತಾಯಾಂ ನಾವಾಹನ ವಿಸರ್ಜನೇ.'' ಇಷ್ಟ ದೇವತಾ ಧ್ಯಾನ ಮಾಡಿ ಪುಷ್ಪಾಂಜಲಿ ಅರ್ಪಿಸುತ್ತಾ.

ಯಸ್ಯ ದರ್ಶನಮಿಚ್ಛಂತಿ ದೇವಾಃ ಸ್ವಾಭೀಷ್ಟಸಿದ್ಧಯೇ ।
ತಸ್ಮೈ ತೇ ಪರಮೇಶಾಯ ಸ್ವಾಗತಂ ಸ್ವಾಗತಂ ಚ ತೇ ॥

ಕೃತಾರ್ಥೋಽನುಗ್ರಹಿತೋಽಸ್ಮಿ ಸಫಲಂ ಜೀವಿತಂ ಮಮ ।
ಆಗತೋ ದೇವ ದೇವೇಶ ಸುಖಾಗತಮಿದಂ ಪುನಃ ॥

ದೇವತೆಗಳೂಅಭೀಷ್ಟಸಿದ್ಧಿಗಾಗಿನಿನ್ನದರ್ಶನಾಪೇಕ್ಷಿಗಳು, ಅಂತಹನಿನಗೆಸ್ವಾಗತ, ನಾನು ಧನ್ಯ, ನನ್ನ ಜೀವನಸಫಲ. ದೇವದೇವನು ಬಂದನು. ನಿನಗೆಪುನಃಪುನಃಸುಸ್ವಾಗತ. ಅನಂತರ ಪಾದ್ಯ ಅರ್ಘ್ಯ, ಆಚಮನೀಯ, ಮಧುಪರ್ಕ, ಪುನರಾಚಮನೀಯಸ್ನೇಹೋ- ದ್ವರ್ತನ, ಸ್ನಾನ, ಅಭಿಷೇಕ, ವಸ್ತ್ರ, ಉತ್ತರೀಯ, ಯಜ್ಞೋಪವೀತ, ಅಲಂಕಾರ, ಗಂಧ, ಪುಷ್ಪ ಈ ಉಪಚಾರ ಗಳಿಂದಪೂಜೆಯಾಗಲಿ, ತುಳಸಿ, ದವನ, ಕಮಲ, ಮರಗುವಿಷ್ಣುಕ್ರಾಂತಿ, ಗರಿಕೆ, ಅಪಾಮಾರ್ಗ, ಇವು ಪೂಜೆಗೆ ಉತ್ತಮ. ಹೂವುಗಳು, ತುಲಸಿಯು ಸದಾ ಶುದ್ಧ, ಧೂಪ, ದೀಪ ನೈವೇದ್ಯ, ತಾಂಬೂಲಗಳನ್ನು ಅರ್ಪಿಸಿಆವರಣದೇವತೆಗಳನ್ನು ಪೂಜಿಸಬೇಕು.

ದೋರ್ಭ್ಯಾಂ ಪದ್ಭ್ಯಾಂ ಚ ಜಾನುಭ್ಯಾಂ ಉರಸಾ ಶಿರಸಾ ದೃಶಾ ।
ಮನಸಾ ವಚಸಾ ಚೇತಿ ಪ್ರಣಾಮೋಽಷ್ಟಾಂಗ ಈರಿತಃ ॥

ಬಾಹುಭ್ಯಾಂ ಸಾಂಘ್ರಿ ಜಾನುಭ್ಯಾಂ ಶಿರಸಾ ವಚಸಾ ಪಿ ವಾ ।
ಪಂಚಾಂಗಕಃ ಪ್ರಣಾಮಃ ಸ್ಯಾತ್ ಪೂಜಾಯಾಂ ಪ್ರವರಾವುಭೌ ॥

ಎರಡು ತೋಳು, ಎರಡು ಕಾಲು, ಎರಡು ಮೊಣಕಾಲು, ಎದೆ, ತಲೆ, ದೃಷ್ಟಿ, ಮನಸ್ಸು ಮಾತು ಈ ಎಂಟರಿಂದ ಮಾಡುವ ಪ್ರಣಾಮ ಸಾಷ್ಟಾಂಗ ನಮಸ್ಕಾರ. ಎರಡು ತೋಳು, ಎರಡು ಮೊಣಕಾಲು, ತಲೆ ಅಥವಾ ಮಾತು ಇವುಗಳ ಪ್ರಣಾಮ ಪಂಚಾಂಗ ನಮಸ್ಕಾರ. ಪೂಜೆಯಲ್ಲಿ ಎರಡೂ ಶ್ರೇಷ್ಠವೇ ಆಗಿವೆ. ವಿಷ್ಣುವಿಗೆ ನಾಲ್ಕು ಪ್ರದಕ್ಷಿಣೆ ಶಿವನಿಗೆ ಅರ್ಧ, ದುರ್ಗಾದೇವಿಗೆ ಒಂದು ಗಣೇಶನಿಗೆ ಮೂರು. ಸೂರ್ಯನಿಗೆ ಏಳು.

**ಮಾಂ ಮದೀಯಂ ಚ ಸಕಲಂ ವಿಷ್ಣವೇತೇ ಸಮರ್ಪಯೇ ಓಂ ತತ್ಸತ್ ।**

ನನ್ನನ್ನು ನನ್ನದೆಲ್ಲವನ್ನು ವಿಷ್ಣುವಿಗೆ ಅರ್ಪಿಸುತ್ತೇನೆ. ಎಂದು ಹೇಳಿ ಪ್ರಾರ್ಥಿಸಬೇಕು.

**ಅಜ್ಞಾನಾದ್ವಾ ಪ್ರಮಾದಾದ್ವಾ ವೈಕಲ್ಯಾತ್ ಸಾಧನಸ್ಯ ವಾ ।**
**ಯನ್ನ್ಯೂನ ಮತಿರಿಕ್ತಂ ಚ ತತ್ಸರ್ವಂ ಕ್ಷಂತು ಮರ್ಹಸಿ ॥**

**ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಂ ।**
**ಪೂಜಾಂ ಚೈವ ನ ಜಾನಾಮಿ ಕ್ಷಮಸ್ವ ಪುರುಷೋತ್ತಮ ॥**

ಭಗವನ್, ಅಜ್ಞಾನ, ಪ್ರಮಾದ, ಸಾಧನಗಳ ಕೊರತೆಯಿಂದ ಹೆಚ್ಚುಕಮ್ಮಿಯಾಗಿರಬಹುದು. ಅದನ್ನು ಕ್ಷಮಿಸು, ನನಗೆ ಆವಾಹನ ತಿಳಿಯದು, ವಿಸರ್ಜನ ಪೂಜೆಗಳೂ ತಿಳಿಯವು. ಪುರುಷೋತ್ತಮ ಕ್ಷಮಿಸು. ಅನಂತರಪುಷ್ಪಾಂಜಲಿಯನ್ನು ಸಮರ್ಪಿಸಿದೇವತಾವಿಸರ್ಜನೆಮಾಡಿ

**ಅಕಾಲ ಮೃತ್ಯು ಹರಣಂ ಸರ್ವವ್ಯಾಧಿ ವಿನಾಶನಂ ।**
**ಸರ್ವ ಪಾಪಕ್ಷಯಕರಂ ವಿಷ್ಣು ಪಾದೋದಕಂ ಶುಭಂ ॥**

ಅಕಾಲ ಮೃತ್ಯುನಾಶಕ, ಸಮಸ್ತ ರೋಗ ಪರಿಹಾರಕ, ಸರ್ವಪಾಪ ಕ್ಷಯಕರ ವಿಷ್ಣು ತೀರ್ಥ ಎಂದು ಹೇಳುತ್ತ ಮೂರು ಬಾರಿ ತೀರ್ಥಪ್ರಾಶನ ಮಾಡಬೇಕು. ಶಿವ ನಿರ್ಮಾಲ್ಯ ನೈವೇದ್ಯವು ಗ್ರಹಣ ಯೋಗ್ಯವಲ್ಲ, ಶಾಲಗ್ರಾಮ ಸನ್ನಿಹಿತವಾದ ನಾರಾಯಣನಿಗೆ ನಿವೇದಿತವೆಲ್ಲವೂ ಸ್ವೀಕಾರಾರ್ಹ.

## ಪೂಜೆ ಐದು ವಿಧ

೧. **ಆತುರೀ ಪೂಜಾ:-** ರೋಗಾದಿಯುಕ್ತ ಮನುಷ್ಯನು ಸ್ನಾನ ಜಪಾದಿಗಳನ್ನು ಮಾಡದೆ ಆರಾಧ್ಯ ದೇವತೆಯ ಪೂಜೆ ಪ್ರತಿಮೆ ಅಥವಾ ಸೂರ್ಯ ಮಂಡಲ ದರ್ಶನ ನಮಸ್ಕಾರಗಳನ್ನು ಮಾಡಿ ಮಂತ್ರಸ್ಮರಣ ಪೂರ್ವಕ ಪುಷ್ಪಾಂಜಲಿಯನ್ನು ಅರ್ಪಿಸಬೇಕು. ರೋಗನಿವೃತ್ತಿಯಾದ ಮೇಲೆ ಸ್ನಾನ ನಮಸ್ಕಾರ ಮಾಡಿ, ಗುರು ಪೂಜೆಗೈದು ಪೂಜಾ ವಿಚ್ಛೇದ ದೋಷವು ನನಗೆ ಬರದಿರಲಿ ಎಂದು ಪ್ರಾರ್ಥಿಸಬೇಕು. ಬ್ರಾಹ್ಮಣ ಪೂಜೆ ಮಾಡಿ ದಕ್ಷಿಣ ಕೊಟ್ಟು ಅವರಿಂದ ಆಶೀರ್ವಾದ ಪಡೆದು ಅನಂತರ ದೇವರ ಪೂಜೆ ಪ್ರಾರಂಭಿಸಬೇಕು. ಇದು ಆತುರೀ ಪೂಜಾ.

೨. **ಸೌತಿಕೀ ಪೂಜಾ:-** ಜಾತಾಶೌಚ ಮೃತಾಶೌಚಗಳಲ್ಲಿ ಸ್ನಾನ ಮಾಡಿ ಮನಸಾ ಸಂಧ್ಯೆಯನ್ನು ಮಾಡಿ ಸೂತಕ ಕಳೆದಮೇಲೆ ಮೊದಲಿನಂತೆ ಗುರುಬ್ರಾಹ್ಮಣರ ಆಶೀರ್ವಾದವನ್ನು ಪಡೆದು ಪೂಜೆ ಮಾಡಬೇಕು.

ತತ್ರ ಸ್ನಾತ್ವಾ ಮಾನಸೀಂ ತು ಕೃತ್ವಾ ಸಂಧ್ಯಾಂ ಸಮಾಹಿತಃ ।
ಮನಸೈವ ಯಜೇದ್ದೇವಂ ಮನಸೈವ ಜಪೇನ್ಮನುಮ್ ॥
ನಿವೃತ್ತೇ ಸೂತಕೇ ಪ್ರಾಗ್ವತ್ ಸಂಪೂಜ್ಯ ಚ ಗುರುಂ ದ್ವಿಜಾನ್ ।
ತೇಷಾಮನುಜ್ಞಾಮಾದಾಯ ತತೋ ನಿತ್ಯಂ ಕ್ರಮ ಚರೇತ್ ॥

೩. **ತ್ರಾಸೀ ಪೂಜಾ:-** ದುಷ್ಟರಿಂದ ತ್ರಾಸ ಉಂಟಾದಾಗ ಲಭ್ಯವಾದಷ್ಟು ಉಪಚಾರ ಗಳಿಂದ ಅಥವಾ ಮಾನಸಿಕ ಉಪಚಾರಗಳಿಂದ ಪರಮಾತ್ಮನ ಪೂಜೆ ಮಾಡುವುದೇ ತ್ರಾಸೀ ಪೂಜಾ.

**೪. ಸಾಧನಾಭಾವಿನೀ:-** ಪೂಜಾ ಸಾಮಾಗ್ರಿಗಳನ್ನು ಸೇರಿಸುವ ಶಕ್ತಿ ಇಲ್ಲದಾಗ, ಸುಲಭ ಸಾಧ್ಯವಾದ ಪತ್ರ, ಪುಷ್ಪ, ಫಲಗಳಿಂದ, ಅಥವಾ ಮಾನಸಿಕ ಉಪಚಾರಗಳಿಂದ ಪರಮಾತ್ಮನನ್ನು ಪೂಜಿಸುವುದು.

**೫. ದೌರ್ಬೋಧೀ:-** ಹೆಂಗಸು, ಮುದುಕ, ಬಾಲಕ, ಅಜ್ಞಾನಿಗಳು ತಮ್ಮ ಸ್ವಲ್ಪ ಜ್ಞಾನವನ್ನು ಅನುಸರಿಸಿ ಮಾಡುವ ಪೂಜೆ. ದೇವ ಪೂಜಾನಂತರ ಬಲಿ ಹರಣ ವೈಶ್ವ ದೇವಾದಿಗಳನ್ನು ಮಾಡಿ ಬ್ರಾಹ್ಮಣ ಭೋಜನ ಮಾಡಿಸುವುದು. ತಾನೂ ಪ್ರಸಾದ ಸ್ವೀಕರಿಸಿ ಆಚಮನ, ಮುಖ ಶುದ್ಧಿ (ತಾಂಬೂಲ ಚರ್ವಣ) ಮಾಡಿಕೊಂಡು ವಿಶ್ರಾಂತಿ ಸ್ವೀಕರಿಸಬೇಕು. ಅನಂತರ ಪುರಾಣಶ್ರವಣ. ಮೇಲೆ ಹೇಳಿದ ಮುಖ್ಯ ಕಲ್ಪವನ್ನು ಅನುಸರಿಸುವ ಸಾಮರ್ಥ್ಯ ಉಳ್ಳವನು ಅನುಕಲ್ಪವನ್ನು ಅನುಸರಿಸಬಾರದು.

ನಾರದ ಮಹಾಪುರಾಣದಲ್ಲಿ ಅರವತ್ತೈದನೇ ಅಧ್ಯಾಯ ಮುಗಿದುದು

—o—

## ಅಷ್ಟಾಕ್ಷರ ಮಂತ್ರ

ಅಧ್ಯಾಯ - ೬೬

"ಓಂ ನಮೋ ನಾರಾಯಣಾಯ ಎಂಬುದೇ ನಾರಾಯಣ ಅಷ್ಟಾಕ್ಷರ ಮಂತ್ರ. ಸಾಧ್ಯ ನಾರಾಯಣ ಋಷಿ, ಗಾಯತ್ರೀ ಛಂದಸ್ಸು. ವಿಷ್ಣು ದೇವತೆ ಓಂ ಬೀಜ, ನಮಃಶಕ್ತಿ. ಮನೋರಥ ಪ್ರಾಪ್ತಿಗೆ ವಿನಿಯೋಗ. 'ಕ್ರುದ್ಧೋಲ್ಕಾಯ ಹೃದಯಾಯ ನಮಃ, ಮಹೋಲ್ಕಾಯ ಶಿರಸೇ ಸ್ವಾಹಾ, ವೀರೋಲ್ಕಾಯ ಶಿಖಾಯೈ ವೌಷಟ್, ದ್ಯೂಲ್ಕಾಯ (ಅತ್ಯುಲ್ಕಾಯ) ಕವಚಾಯ ಹುಂ, ಸಹಸ್ರೋಲ್ಕಾಯ ಅಸ್ತ್ರಾಯ ಫಟ್. ಇದೇ ಪಂಚಾಂಗನ್ಯಾಸ. ಮಂತ್ರದ ಆರು ವರ್ಣಗಳಿಂದ ಷಡಂಗ ನ್ಯಾಸ ಗೈದು ಉಳಿದ ಎರಡು ವರ್ಣಗಳಿಂದ, ಹೊಟ್ಟೆ ಮತ್ತು ಬೆನ್ನುಗಳಲ್ಲಿ ನ್ಯಾಸ ಮಾಡಬೇಕು. 'ಓಂ ನಮಃ ಸುದರ್ಶನಾಯ ಅಸ್ತ್ರಾಯ ಫಟ್' ಎಂಬ ಹನ್ನೆರಡು ಅಕ್ಷರದ ಸುದರ್ಶನ ಮಂತ್ರದಿಂದ ದಿಗ್ಬಂಧನ ಮಾಡಬೇಕು. ವಿಭೂತಿ ಪಂಜರವೆಂಬ ದಶಾವೃತ್ತಿಮಯನ್ಯಾಸವಿದೆ. ಮೂಲಮಂತ್ರದ ಅಕ್ಷರಗಳಿಂದ ಮೂಲಾಧಾರ, ಹೃದಯ, ಮುಖ, ಎರಡು ಭುಜಗಳು, ಎರಡು ಪಾದಗಳ ಮೂಲಭಾಗ, ನಾಸಿಕಾ ಇವುಗಳಲ್ಲಿ ನ್ಯಾಸ - ಇದು ಪ್ರಥಮಾವೃತ್ತಿ. ಕಂಠ, ಹೊಕ್ಕಳು, ಹೃದಯ, ಎರಡು ಸ್ತನಗಳು, ಪಾರ್ಶ್ವಭಾಗ, ಹಿಂಭಾಗಗಳಲ್ಲಿ ನ್ಯಾಸವೇ ದ್ವಿತೀಯಾವೃತ್ತಿ. ತಲೆ, ಮುಖ, ಎರಡು ಕಣ್ಣುಗಳು, ಎರಡು ಕಿವಿಗಳು. ಎರಡು ಮೂಗಿನ ಹೊಳ್ಳೆಗಳು, ಇವುಗಳಲ್ಲಿ ನ್ಯಾಸ - ಇದು ತೃತೀಯಾವೃತ್ತಿ. ಎರಡು ಭುಜಗಳು, ಎರಡು ಕಾಲುಗಳ ಬೆರಳುಗಳು ಇವುಗಳಲ್ಲಿ ಮಾಡುವ ನ್ಯಾಸವು ನಾಲ್ಕನೆಯ ಆವೃತ್ತಿ, ಧಾತು, ಪ್ರಾಣ, ಹೃದಯಗಳಲ್ಲಿ ಐದನೆಯ ಆವೃತ್ತಿ. ತಲೆ, ಕಣ್ಣು, ಮುಖ, ಹೃದಯ, ಹೊಟ್ಟೆ, ತೊಡೆ, ಜಂಘಾ, ಎರಡು ಕಾಲುಗಳಲ್ಲಿ ನ್ಯಾಸ೬, ೭, ೮ನೆಯ ಆವೃತ್ತಿಯು. ಹೃದಯ, ಹೆಗಲು, ತೊಡೆ, ಕಾಲುಗಳಲ್ಲಿ ೪ ವರ್ಣಗಳ ನ್ಯಾಸವು, ಚಕ್ರ, ಶಂಖ, ಗದಾ, ಪದ್ಮ ಮುದ್ರೆಗಳಲ್ಲಿ ೪ ವರ್ಣಗಳ ನ್ಯಾಸವು ಇದು ಹತ್ತನೆಯ ಆವೃತ್ತಿ. ಇದನ್ನು ವಿಭೂತಿ ಪಂಜರನ್ಯಾಸ ಎನ್ನುತ್ತಾರೆ.

ಮೂರ್ತಿ ಪಂಜರನ್ಯಾಸವು ಈ ರೀತಿ೧) ಹಣೆಯಲ್ಲಿ ಓಂ ಅಂಕೇಶ ವಾಯು ಧಾತ್ರೇನಮಃ ಹೊಟ್ಟೆಯಲ್ಲಿ ಓಂ ನಂ ಆಂ ನಾರಾಯಣಾಯ ಅರ್ಯಮ್ಣೆ ನಮಃ

೩) ಹೃದಯದಲ್ಲಿ ಓಂಮೋಂಇಂಮಾಧವಾಯ ಮಿತ್ರಾಯನಮಃ, ೪) ಕಂಠಕೂಪದಲ್ಲಿ ಓಂ ಭಂಈಂಗೋವಿಂದಾಯವರುಣಾಯನಮಃ,೫) ಬಲಪಾರ್ಶ್ವ ಓಂಗಂಉಂವಿಷ್ಣವೇಅಂಶವೇ ನಮಃ, ೬) ಬಲ ಹೆಗಲು ಓಂ ವಂ ಊಂ ಮಧುಸೂಧನಾಯ ಭಗಾಯನಮಃ೭) ಕುತ್ತಿಗೆಯ ಬಲಭಾಗ ಓಂ ತೇ ಏಂ ತ್ರಿವಿಕ್ರಮಾಯ ವಿವಸ್ವತೇ ನಮಃ ೮) ಎಡಪಾರ್ಶ್ವ - ಓಂ ವಾಂ ಐಂ ವಾಮನಾಯ ಇಂದ್ರಾಯನಮಃ ೯) ಎಡಹೆಗಲು ಓಂ ಸುಂ ಓಂ ಶ್ರೀಧರಾಯ ಪೂಷ್ಣೇನಮಃ ೧೦) ಕತ್ತಿನ ಎಡಭಾಗ ಓಂ ದೇಂ ಔಂ ಹೃಷಿಕೇಶಾಯ ನಮಃ ೧೧) ಬೆನ್ನು ಓಂ ವಾಂ ಅಂ ಪದ್ಮನಾಭಾಯ ತ್ವಷ್ಣೇ ನಮಃ೧೨) ಹೆಕ್ಕತ್ತು (ಮಣಿಶಿರ) ಓಂ ಯಂ ಅಃ ದಾಮೋದರಾಯ ವಿಷ್ಣವೇ ನಮಃ. ಶಿರಸ್ಸಿನಲ್ಲಿ ದ್ವಾದಶಾಕ್ಷರ ಮಂತ್ರದ ಪೂರ್ಣನ್ಯಾಸ, ಕಿರೀಟ ಮಂತ್ರದಿಂದ ವ್ಯಾಪಕನ್ಯಾಸ. (ಓಂ) 'ಕಿರೀಟಕೇಯೂರ ಹಾರ ಮಕರಕುಂಡಲ ಶಂಖ ಚಕ್ರ ಗದಾಂಭೋಜ ಹಸ್ತ ಪೀತಾಂಬರಧರ ಶ್ರೀ ವತ್ಸಾಂಕಿತವಕ್ಷಃಸ್ಥಲ ಶ್ರೀ ಭೂಮಿ ಸಹಿತ, ಸ್ವಾತ್ಮ ಜ್ಯೋತಿರ್ಮಯ ದೀಪ್ತಾಕಾರಾಯಸಹಸ್ರಾದಿತ್ಯತೇಜಸೇನಮಃ' ಇದು(೨೫) ಅಕ್ಷರಗಳಕಿರೀಟಮಂತ್ರ.

**ಉದ್ಯತ್ ಕೋಟ್ಯರ್ಕಸದೃಶಂ ಶಂಖಂ ಚಕ್ರಂ ಗದಾಂಬುಜಂ ।**
**ದಧತಂ ಚ ಕರೈರ್ಭೂಮಿ ಶ್ರೀಭ್ಯಾಂ ಪಾರ್ಶ್ವದ್ವಯಾಂಚಿತಂ ॥**
**ಶ್ರೀವತ್ಸವಕ್ಷಸಂ ಭ್ರಾಜತ್ ಕೌಸ್ತುಭಾಮುಕ್ತ ಕಂಧರಂ ।**
**ಹಾರಕೇಯೂರ ವಲಯಾಂಗದಂ ಪೀತಾಂಬರಂ ಸ್ಮರೇತ್ ॥**

ಉದಯಿಸುವ ಕೋಟಿಸೂರ್ಯರ ಕಾಂತಿ, ನಾಲ್ಕು ಭುಜಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ. ಭೂ-ಶ್ರೀದೇವಿಯರು ಎರಡು ಪಾರ್ಶ್ವಗಳಲ್ಲಿ ಶೋಭಿಸುತ್ತಿದ್ದಾರೆ. ಎದೆಯಲ್ಲಿ ಶ್ರೀವತ್ಸ, ಕತ್ತಿನಲ್ಲಿ ಕೌಸ್ತುಭಮಣಿ, ಹಾರ, ಕೇಯೂರ, ಅಂಗದಾದಿ ದಿವ್ಯಾಭರಣ, ಪೀತಾಂಬರ ಇವುಗಳಿಂದ ಶೋಭಿಸುವ ವಿಷ್ಣುವನ್ನು ಧ್ಯಾನಿಸಬೇಕು. ಮಂತ್ರಗಳಲ್ಲಿರುವ ವರ್ಣ ಸಂಖ್ಯೆಯಷ್ಟು ಲಕ್ಷ ಜಪ ಶ್ರೇಷ್ಠ. ಒಂದು ಲಕ್ಷ ಜಪದಿಂದ ಆತ್ಮಶುದ್ಧಿ. ಎರಡು ಲಕ್ಷ ಜಪದಿಂದ ಮಂತ್ರ ಶುದ್ಧಿ, ಮೂರು ಲಕ್ಷ ಜಪದಿಂದ ಸ್ವರ್ಗಲೋಕ. ನಾಲ್ಕು ರಿಂದ ವಿಷ್ಣು ಸಾಮೀಪ್ಯ, ಐದರಿಂದ ನಿರ್ಮಲ ಜ್ಞಾನ, ಆರರಿಂದ ವಿಷ್ಣುವಿನಲ್ಲಿ ಸ್ಥಿರಬುದ್ಧಿ. ಏಳರಿಂದ ವಿಷ್ಣುಸಾರೂಪ್ಯ. ೮ ಲಕ್ಷಜಪ ಮುಗಿಯುವಾಗ ಪರಮಶಾಂತಿ ಎಂಬ ಮೋಕ್ಷ ಪ್ರಾಪ್ತಿಯಾಗುತ್ತದೆ. ಜೇನಿನಲ್ಲಿ ಅದ್ದಿದ ಕಮಲಗಳಿಂದ ದಶಾಂಶಹೋಮ, ಪೀಠಪೂಜೆ - ಮಂಡೂಕಾಯನಮಃ ಎಂದು ಆರಂಭಿಸಿ ವಿಮಲಾ, ಉತ್ಕರ್ಷಣಿ - ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎಂಬ ಒಂಭತ್ತು ಪೀಠಶಕ್ತಿಗಳು, ''ಓಂ ನಮೋ ಭಗವತೇ ವಿಷ್ಣವೇ ಸರ್ವ ಭೂತಾತ್ಮನೇ ವಾಸುದೇವಾಯ ಸರ್ವಾತ್ಮ ಸಂಯೋಗ ಯೋಗ ಪದ್ಮ ಪೀಠಾಯ ನಮಃ'' ಇದು ಮೂವತ್ತಾರು ಅಕ್ಷರಗಳ ಪೀಠಮಂತ್ರ. ಕಮಲವನ್ನು ಚಿಂತಿಸಿ ಅದರ ಕೇಸರಗಳಲ್ಲಿ ಆರು ಅಂಗಗಳ ಪೂಜೆ ಮಾಡಬೇಕು. ಅಷ್ಟದಲ ಕಮಲದ ಪೂರ್ವಾದಿ ದಲಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರನ್ನೂ ಆಗ್ನೇಯಾದಿ ಕೋಣಗಳಲ್ಲಿ ಶಾಂತಿ,ಶ್ರೀ, ರತಿ, ಸರಸ್ವತಿಯರೆಂಬ ಅವರ ಶಕ್ತಿಗಳನ್ನೂ ಪೂಜಿಸಬೇಕು. ವಾಸುದೇವ, ಸುವರ್ಣಕಾಂತಿ, ಸಂಕರ್ಷಣ ಪೀತವರ್ಣ, ಪ್ರದ್ಯುಮ್ನ ತಮಾಲ ಶ್ಯಾಮ, ಅನಿರುದ್ಧ, ಇಂದ್ರನೀಲಕಾಂತಿ. ಎಲ್ಲರೂ ಪೀತಾಂಬರಧರರೂ, ಶಂಖ-ಚಕ್ರ-ಗದಾ-ಪದ್ಮ ಧರಿಸಿರುವ ಚತುರ್ಭುಜರು. ಶಾಂತಿಯ ವರ್ಣ ಬಿಳಿ. ಶ್ರೀಯ ವರ್ಣ

ಬಂಗಾರದ್ದು. ಸರಸ್ವತೀ ಹಾಲಿನಂತೆ ಇರುವಳು. ರತಿಯು ಗರಿಕೆಯ ಹುಲ್ಲಿನಂತೆ ಹಸುರು. ಕಮಲದಲಗಳ ಅಗ್ರಭಾಗದಲ್ಲಿ ಕೆಂಪುಬಣ್ಣದ ಚಕ್ರ. ಬಿಳೀ ಬಣ್ಣದ ಶಂಖ, ಹಳದೀ ಬಣ್ಣದ ಗದೆ, ಚಿನ್ನದ ಬಣ್ಣದ ಕಮಲ, ಶ್ಯಾಮ ವರ್ಣದ ಕೌಸ್ತುಭ, ಕಪ್ಪಾದ ಮುಸಲ, ಬಿಳಿಯ ಖಡ್ಗ 'ಉಜ್ವಲ ವನಮಾಲೆಯನ್ನು ಆವಾಹಿಸಬೇಕು. ಇವುಗಳ ಹೊರಭಾಗದಲ್ಲಿ ಕೈ ಮುಗಿದು ನಿಂತಿರುವ ಕುಂಕುಮ ವರ್ಣದ ಗರುಡನು ದೇವರ ಎದುರಾಗಿ ನಿಂತಿರುತ್ತಾನೆ. ಬಲ ಭಾಗದಲ್ಲಿ ಮುತ್ತಿನ ಬಣ್ಣದ ಶಂಖ ನಿಧಿ, ಎಡಭಾಗದಲ್ಲಿ ಮಾಣಿಕ್ಯ ವರ್ಣದ ಪದ್ಮನಿಧಿ. ಪಶ್ಚಿಮದಲ್ಲಿ ಧ್ವಜಪೂಜೆ. ಆಗ್ನೇಯದಲ್ಲಿ ರಕ್ತವರ್ಣದ ವಿಘ್ನೇಶನನ್ನೂ ನೈಋತ್ಯದಲ್ಲಿ ಶ್ಯಾಮ ವರ್ಣದ ಆರ್ಯನನ್ನೂ ವಾಯವ್ಯ ಕೋಣದಲ್ಲಿ ಶ್ಯಾಮ ವರ್ಣದ ದುರ್ಗೆಯನ್ನೂ, ಈಶಾನ್ಯ ಕೋಣದಲ್ಲಿ ಹಳದಿ ಬಣ್ಣದ ಸ್ಕಂದನನ್ನೂ ಪೂಜಿಸಬೇಕು. ಇದರ ಹೊರಗಡೆ ಆಯುಧಸಹಿತರಾದ ಇಂದ್ರಾದಿ ದಿಕ್ಪಾಲಕರಿರುತ್ತಾರೆ. ದೂರ್ವಾದಲ ಶ್ಯಾಮಲೆಯಾದ ಭತ್ತದ ಗೊಂಚಲನ್ನು ಹಿಡಿದಿರುವ ಧರಣೀ ದೇವಿಯನ್ನು ಚಿಂತಿಸಬೇಕು. ಬಲಭಾಗದಲ್ಲಿ ಪೂರ್ಣ ಚಂದ್ರ ಸಮಾನೆಯಾದ ವೀಣಾಪುಸ್ತಕ ಧಾರಿಣಿಯಾದ ಸರಸ್ವತೀ ಇರುತ್ತಾಳೆ. ಬೆಳಿಗ್ಗೆ ಎದ್ದು ಇಪ್ಪತ್ತೈದು ಬಾರಿ ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಜಲಪಾನ ಮಾಡಿದರೆ ಪಾಪ ಪರಿಹಾರ, ಜ್ಞಾನ ಪ್ರಾಪ್ತಿ,ರೋಗ ಪರಿಹಾರಗಳಾಗುತ್ತವೆ. ಚಂದ್ರ-ಸೂರ್ಯ ಗ್ರಹಣ ಸಮಯದಲ್ಲಿ ಎಂಟು ಸಾವಿರ ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಬ್ರಾಹ್ಮೀಘೃತವನ್ನು ಸಂಸ್ಕರಿಸಿ ಪಾನ ಮಾಡಿದರೆ ಧಾರಣ ಶಕ್ತಿ' ಕವಿತ್ವ, ವಾಕ್-ಸಿದ್ಧಿಗಳು ಉಂಟಾಗುತ್ತವೆ. ಮಂತ್ರಗಳಲ್ಲಿ ಉತ್ತಮೋತ್ತಮವು ನಾರಾಯಣ ಮಂತ್ರವು.

**'ಓಂ ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹೀ, ತನ್ನೋ ವಿಷ್ಣುಃ ಪ್ರಚೋದಯಾತ್' ಇದು ವಿಷ್ಣು ಗಾಯತ್ರೀ, ಸಮಸ್ತ ಪಾಪನಾಶಕ. 'ಓಂ ನಮೋ ಭಗವತೇ ವಾಸುದೇವಾಯ' ಇದು ವಾಸುದೇವ ದ್ವಾದಶಾಕ್ಷರ ಮಂತ್ರ.**

### ಶ್ರೀ ರಾಮ, ಸೀತಾ, ಲಕ್ಷ್ಮಣ, ಭರತ, ಶತ್ರುಘ್ನ ಸಂಬಂಧಿಯಾದ ಮಂತ್ರಗಳು

ಸನತ್ಕುಮಾರರು ಹೇಳುತ್ತಾರೆ. 'ರಾಮ್-ರಾಮಾಯನಮಃ' ಇದು ರಾಮ ಷಡಕ್ಷರ ಮಂತ್ರ. ಇದಕ್ಕೆ ಬ್ರಹ್ಮನು ಋಷಿ. ಶ್ರೀರಾಮನು ದೇವತೆ. ರಾಮ್ ಬೀಜ, ನಮಃ ಶಕ್ತಿ. ಸಂಪೂರ್ಣ ಮನೋರಥ ಪ್ರಾಪ್ತಿಗೋಸ್ಕರ ಇದರ ವಿನಿಯೋಗ.

**ಕಾಲಾಂಭೋಧರ ಕಾಂತಿಂ ಚ ವೀರಾಸನ ಸಮಾಸ್ಥಿತಮ್ ।**
**ಜ್ಞಾನಮುದ್ರಾಂ ದಕ್ಷ ಹಸ್ತೇ ದಧತಂ ಜಾನುನೀ ಪರಮ್ ॥**
**ಸರೋರುಹ ಕರಾಂ ಸೀತಾಂ ವಿದ್ಯುದಾಭಾಂ ಚ ಪಾರ್ಶ್ವಗಾಂ ॥**
**ಪಶ್ಯಂತೀಂ ರಾಮ ವಕ್ತ್ರಾಬ್ಜಂ ವಿವಿಧಾಕಲ್ಪ ಭೂಷಿತಾಮ್ ॥**

ಮೋಡದಂತಹ ಕಾಂತಿಯುಳ್ಳ ವೀರಾಸನದಲ್ಲಿ ಕುಳಿತಿರುವ, ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿ, ಎಡಗೈಯನ್ನು ಎಡಮೊಣಕಾಲು ಮೇಲಿಟ್ಟಿರುವವನು ರಾಮ. ಎಡಭಾಗದಲ್ಲಿ ಮಿಂಚಿನ ಕಾಂತಿಯ ವಿವಿಧಾಭರಣಗಳಿಂದ ಅಲಂಕೃತಳಾದ, ಕೈಯಲ್ಲಿ ಕಮಲವನ್ನು ಹಿಡಿದು ರಾಮನನ್ನು ನೋಡುತ್ತಿರುವ ಸೀತೆ ಇವರನ್ನು ಧ್ಯಾನ ಮಾಡಬೇಕು.

ಆರು ಲಕ್ಷ ಜಪಿಸಿ, ಕಮಲಗಳಿಂದ ದಶಾಂಶ ಹೋಮ, ಬ್ರಾಹ್ಮಣ ಭೋಜನ ಮಾಡಿಸಬೇಕು. 'ಶ್ರೀ ಸೀತಾಯೈ ಸ್ವಾಹಾ' ಇದು ಜಾನಕೀ ಮಂತ್ರ. ರಾಮನ ಎದುರಿನಲ್ಲಿ

ಶುರ್ಙ್ಗ ಧನುಸ್ಸಿನ ಪೂಜೆ, ಪಾರ್ಶ್ವಗಳಲ್ಲಿ ಬಾಣಗಳ ಪೂಜೆ, ಸುತ್ತಲೂ ಹನುಮಂತ, ಸುಗ್ರೀವ, ಭರತ, ವಿಭೀಷಣ, ಲಕ್ಷ್ಮಣ, ಅಂಗದ ಶತ್ರುಘ್ನ, ಜಾಂಬವಂತ ಇವರನ್ನು ಪೂಜಿಸಬೇಕು. ಹನುಮಂತನು ಶ್ರೀ ರಾಮನ ಎದುರು ಪುಸ್ತಕವನ್ನು ಓದುತ್ತಿದಾನೆ. ಭರತ, ಶತ್ರುಘ್ನರು ಚಾಮರವನ್ನು ಬೀಸುತ್ತಿದ್ದಾರೆ. ಲಕ್ಷ್ಮಣನು ಎರಡೂ ಕೈಗಳಿಂದ ಛತ್ರಿಯನ್ನು ಹಿಡಿದು ನಿಂತಿದ್ದಾನೆ. ಈ ರೀತಿ ಧ್ಯಾನ ಮಾಡಿ ಪೂಜೆ ಮಾಡಬೇಕು. ಅನಂತರ ಅಷ್ಟದಲ ಪದ್ಮದ ಮುಂಭಾಗದಲ್ಲಿ ಸೃಷ್ಟಿ, ಜಯಂತ, ವಿಜಯ, ಸುರಾಷ್ಟ್ರ, ರಾಷ್ಟ್ರಪಾಲ, ಅಕೋಪ, ಧರ್ಮಪಾಲ ಮತ್ತು ಸುಮಂತ್ರರ ಪೂಜೆಯನ್ನು ಮಾಡಿ ಅದರ ಹೊರಭಾಗದಲ್ಲಿ ಆಯುಧ ಸಹಿತ ದಿಕ್ಪಾಲಕರ ಪೂಜೆಯನ್ನು ಮಾಡಬೇಕು. ತುಪ್ಪದಲ್ಲಿ ಅದ್ದಿದ ಗರಿಕೆಯಿಂದ ಹೋಮ ಮಾಡಿದರೆ ರೋಗ ಪರಿಹಾರ. ಕೆಂಪು ಕಮಲಗಳಿಂದ ಹೋಮ ಮಾಡಿದರೆ ಬಯಸಿದಷ್ಟು ಧನಪ್ರಾಪ್ತಿ. ಮುತ್ತುಗದ ಹೂವುಗಳಿಂದ ಹೋಮ ಮಾಡಿದರೆ ಮೇಧಾಶಕ್ತಿ ಪ್ರಾಪ್ತಿಯಾಗುತ್ತದೆ. ಪ್ರತಿದಿವಸ ಪ್ರಾತಃಕಾಲ ರಾಮ ಷಡಕ್ಷರದಿಂದ ಅಭಿಮಂತ್ರಿತವಾದ ಜಲವನ್ನು ಒಂದು ವರ್ಷ ಪಾನ ಮಾಡಿದವನು 'ಕವಿಸಮ್ರಾಟ್' ಆಗುತ್ತಾನೆ. ಈ ಮಂತ್ರದಿಂದ ಅಭಿಮಂತ್ರಿತವಾದ ಅನ್ನವನ್ನು ಭುಂಜಿಸಿದರೆ ರೋಗ ಶಾಂತಿ. ರೋಗ ಪರಿಹಾರಕ್ಕಾಗಿ ಹೇಳಿದ ಔಷಧಿಯನ್ನು ಈ ಮಂತ್ರದ ಮೂಲಕ ಹೋಮಿಸಿದರೆ ರೋಗ ಪರಿಹಾರವಾಗುತ್ತದೆ. ಹಾಲನ್ನು ಮಾತ್ರ ಸೇವಿಸುತ್ತ, ನದೀ ತಟದಲ್ಲಿ ಅಥವಾ ಗೋಶಾಲೆಯಲ್ಲಿ ಒಂದು ಲಕ್ಷ ಮಂತ್ರ ಜಪಮಾಡಿ ಘೃತ ಸಹಿತವಾದ ಕ್ಷೀರ ಪಾಯಸದಿಂದ ಆಹುತಿಯನ್ನು ಕೊಟ್ಟರೆ ಮನುಷ್ಯನು ವಿದ್ಯಾನಿಧಿ ಯಾಗುತ್ತಾನೆ. 'ಓಂ ರಾಮಚಂದ್ರಾಯ ನಮಃ' ಓಂ ರಾಮಭದ್ರಾಯ ನಮಃ' ಇವೆರಡು ಅಷ್ಟಾಕ್ಷರ ಮಂತ್ರಗಳು. ಇವುಗಳ ಕೊನೆಯಲ್ಲಿ 'ಓಂ ಜೋಡಿಸಿದರೆ ನವಾಕ್ಷರ ಮಂತ್ರ ಗಳಾಗುತ್ತವೆ. 'ಹುಂ ಜಾನಕೀ ವಲ್ಲಭಾಯ ಸ್ವಾಹಾ' ಇದು ದಶಾಕ್ಷರ ರಾಮ ಮಹಾಮಂತ್ರ.

**ಅಯೋಧ್ಯಾನಗರೇ ರತ್ನ ಚಿತ್ರ ಸೌವರ್ಣ ಮಂಡಪೇ ।**
**ಮಂದಾರಪುಷ್ಪೈರಾಬದ್ಧ ವಿತಾನೇ ತೋರಣಾನ್ವಿತೇ ॥**

**ಸಿಂಹಾಸನ ಸಮಾಸೀನಂ ಪುಷ್ಪಕೋಪರಿ ರಾಘವಮ್ ।**
**ರಕ್ಷೋಭಿ ರ್ಹರಿಭಿ ರ್ದೇವೈಃ ಸುವಿಮಾನ ಗತೈಃ ಶುಭೈಃ ॥**

**ಸಂಸ್ತೂಯಮಾನಂ ಮುನಿಭಿಃ ಪ್ರಹ್ವೈಶ್ಚ ಪರಿಸೇವಿತಮ್ ॥**
**ಸೀತಾಲಂಕೃತ ವಾಮಾಂಗಂ ಲಕ್ಷ್ಮಣೇನೋಪಶೋಭಿತಮ್ ॥**

**ಶ್ಯಾಮಂ ಪ್ರಸನ್ನ ವದನಂ ಸರ್ವಾಭರಣಭೂಷಿತಮ್ ।**

ಅಯೋಧ್ಯಾನಗರದಲ್ಲಿ ರತ್ನ ಖಚಿತವಾದ ಸುವರ್ಣ ಮಂಟಪ ಒಂದಿದೆ. ಮಂದಾರ ಪುಷ್ಪಗಳ ಮೇಲ್ಕಟ್ಟು, ತೋರಣಗಳಿಂದ ಅಲಂಕೃತವಾದ ಮಂಟಪದ ಒಳಗೆ ಇರುವ ಪುಷ್ಪಕ ವಿಮಾನದಲ್ಲಿರುವ ಸಿಂಹಾಸನದಲ್ಲಿ ಶ್ರೀರಾಮನು ವಿರಾಜಿಸುತ್ತಿದ್ದಾನೆ. ಅಲ್ಲಿ ಒಂದು ಭಾಗದಲ್ಲಿ ದೇವತೆಗಳು, ವಾನರರು, ರಾಕ್ಷಸರು, ಮಹರ್ಷಿಗಳು ಪರಮಾತ್ಮನ ಸ್ತೋತ್ರ ಮಾಡುತ್ತಾ ಸೇವಿಸುತ್ತಿದ್ದಾರೆ. ಶ್ರೀರಾಮನ ಎಡಭಾಗದಲ್ಲಿ ಸೀತೆ, ಬಲಭಾಗದಲ್ಲಿ ಲಕ್ಷ್ಮಣರು ಶೋಭಿಸುತ್ತಿದ್ದಾರೆ. ಶ್ಯಾಮ, ಪ್ರಸನ್ನವದನ ಸರ್ವಾಭರಣಾಲಂಕೃತ

ಶ್ರೀರಾಮಚಂದ್ರನು ಮಧ್ಯದಲ್ಲಿ ವಿರಾಜಿಸುತ್ತಿದ್ದಾನೆ. ಈ ಮಂತ್ರವನ್ನು ಹತ್ತು ಲಕ್ಷ ಭಾರಿ ಜಪಿಸಿ, ಕಮಲ ಪುಷ್ಪಗಳಿಂದ ದಶಾಂಶ ಹೋಮ ಮಾಡಬೇಕು. ಬ್ರಹ್ಮನೇ ಋಷಿ, ವಿರಾಟ್ ಛಂದಸ್ಸು - ರಾಕ್ಷಸಮರ್ದನ ಶ್ರೀ ರಾಮ ಚಂದ್ರನೇ ದೇವತೆ. 'ರಾಮಾಯ ಧನುಷ್ಪಾಣಯೆ ಸ್ವಾಹಾ' ಇದು ದಶಾಕ್ಷರ ರಾಮ ಮಂತ್ರ (ಓಂ) 'ನಮೋ ಭಗವತೇ ರಾಮಚಂದ್ರಾಯ-' ಅಥವಾ ರಾಮ ಭದ್ರಾಯ ಇದು ದ್ವಾದಶಾಕ್ಷರ ರಾಮಮಂತ್ರ. ಶ್ರೀ ರಾಮ ಜಯ ರಾಮ ಜಯ ಜಯ ರಮ ಇದು ಹದಿಮೂರು ಅಕ್ಷರಗಳ ರಾಮ ಮಂತ್ರ. 'ಓಂ ನಮೋ ಭಗವತೇ ರಾಮಾಯ ಮಹಾ ಪುರುಷಾಯ ನಮಃ' ಇದು ಹದಿನೆಂಟು ಅಕ್ಷರಗಳ ಮಂತ್ರ. ಇದಕ್ಕೆ ವಿಶ್ವಾಮಿತ್ರ ಋಷಿ ಧೃತಿ ಛಂದಸ್ಸು, ಶ್ರೀ ರಾಮನೇ ದೇವತೆ.

ನಿಶ್ಶಾಣ ಭೇರೀ ಪಟಹ ಶಂಖ ತೂರ್ಯಾದಿ ನಿಸ್ವನೈಃ ।
ಪ್ರವೃತ್ತ ನೃತ್ಯೇ ಪರಿತೋ ಜಯ ಮಂಗಲ ಭಾಷಿತೇ ॥
ಚಂದನಾಗರು ಕಸ್ತೂರೀ ಕರ್ಪೂರಾದಿ ಸುವಾಸಿತೇ ।
ಸಿಂಹಾಸನೇ ಸಮಾಸೀನಂ ಪುಷ್ಪಕೋಪರಿ ರಾಘವಂ ॥
ಸೌಮಿತ್ರಿ ಸೀತಾಸಹಿತಂ ಜಟಾಮುಕುಟ ಶೋಭಿತಂ ।
ಚಾಪಬಾಣಧರಂ ಶ್ಯಾಮಂ ಸಸುಗ್ರೀವ ವಿಭೀಷಣಂ
ಹತ್ವಾ ರಾವಣ ಮಾಯಾಂತಂ ಕೃತ ತ್ರೈಲೋಕ್ಯ ರಕ್ಷಣಂ ॥

ರಾವಣ ಸಂಹಾರ ಮಾಡಿ ತ್ರೈಲೋಕ್ಯವನ್ನು ರಕ್ಷಿಸಿ ಹಿಂತಿರುಗುವ ಸಮಯ. ಸೀತಾ ಲಕ್ಷ್ಮಣ ಸಹಿತನಾದ ರಾಮ ಪುಷ್ಪಕ ವಿಮಾನದಲ್ಲಿ ಸಿಂಹಾಸನದಲ್ಲಿ ಮಂಡಿತನಾಗಿದ್ದಾನೆ. ತಲೆಯಲ್ಲಿ ಜಟಾಮುಕುಟ, ಕೈಯಲ್ಲಿ ಧನುರ್ಬಾಣ, ಶ್ಯಾಮ ವರ್ಣಅವನದು. ವಿಜಯ ಸೂಚಕವಾದ, ನಿಸ್ಸಾಣ, ಭೇರೀ, ಶಂಖ, ನಗಾರಿ, ತುತ್ತೂರಿ, ಧ್ವನಿ ಸಹಿತವಾದ ನೃತ್ಯ ಆರಂಭವಾಗಿದೆ. ಜಯಕಾರ ಮಂಗಲ ಸ್ತೋತ್ರ ಮಧ್ಯದಲ್ಲಿ ಚಂದನ, ಅಗುರು ಕಸ್ತೂರೀ, ಕರ್ಪೂರಾದಿಗಳ ಸುವಾಸನೆಯು ಹರಡುತ್ತಿದೆ. ಇದು ಧ್ಯಾನ ಹದಿನೆಂಟು ಲಕ್ಷ ಜಪಿಸಬೇಕು. ಘೃತ ಮಿಶ್ರಿತ ಕ್ಷೀರಪಾಯಸದಿಂದ ದಶಾಂಶ ಹೋಮ.

ಓಂ ರಾಂ ಶ್ರೀಂ ರಾಮಭದ್ರ ಮಹೇಷ್ವಾಸ ರಘುವೀರನೃಪೋತ್ತಮ ।
ದಶಾಸ್ಯಾಂತಕ ಮಾಂ ರಕ್ಷ ದೇಹಿಮೇ ಪರಮಾಂ ಶ್ರಿಯಂ ॥

ಬೀಜಾಕ್ಷರಗಳನ್ನು ಬಿಟ್ಟು ಇದು ಮೂವತ್ತೆರಡು ಅಕ್ಷರಗಳ ಮಂತ್ರ. ಮೂರು ಲಕ್ಷ ಮಂತ್ರ ಜಪ. ಕ್ಷೀರಪಾಯಸದಿಂದ ಹೋಮ. 'ಓಂ ಹ್ರೀಂ ಶ್ರೀಂ ಶ್ರೀಂ ದಾಶರಥಾಯ ನಮಃ' ಇದು ಹನ್ನೊಂದು ಅಕ್ಷರಗಳ ಮಂತ್ರ. 'ತ್ರೈಲೋಕ್ಯನಾಥಾಯ ನಮಃ' ಅಷ್ಟಾಕ್ಷರ ಮಂತ್ರ. 'ರಾಮಾಯ ನಮಃ' ಪಂಚಾಕ್ಷರ ಮಂತ್ರ. 'ರಾಮಚಂದ್ರಾಯ ಸ್ವಾಹಾ' 'ರಾಮ ಭದ್ರಾಯ ಸ್ವಾಹಾ' ಸಪ್ತಾಕ್ಷರ ಇವೆರಡು ಮಂತ್ರಗಳು 'ರಾಂ' ಇದು ಏಕಾಕ್ಷರ ಮಂತ್ರ.

ಓಂ ನಮೋ ಬ್ರಹ್ಮಣ್ಯಸೇವ್ಯಾಯ ರಾಮಾಯಾಕುಂಠ ತೇಜಸೇ ।
ಉತ್ತಮ ಶ್ಲೋಕ ಧುರ್ಯಾಯ ನ್ಯಸ್ತ ದಂಡಾರ್ಪಿತಾಂಘ್ರಯೇ ॥

ಇದು ಮೂವತ್ತೆರಡು ಅಕ್ಷರಗಳ ಮಂತ್ರ. "ದಾಶರಥಾಯ ವಿದ್ಮಹೇ, ಸೀತಾ ವಲ್ಲಭಾಯ ಧೀಮಹಿ, ತನ್ನೋರಾಮಃ ಪ್ರಚೋದಯಾತ್" ಇದು ರಾಮ ಗಾಯತ್ರೀ.

'ಶ್ರೀಂ ಸೀತಾಯೈ ಸ್ವಾಹಾ' ಇದು ಸೀತಾ ಷಡಕ್ಷರ ಮಂತ್ರ. ಇದಕ್ಕೆ ವಾಲ್ಮೀಕಿಯು ಋಷಿ. ಶ್ರೀಂ ಬೀಜ, ಸ್ವಾಹಾ ಶಕ್ತಿ.

**ತತೋ ಧ್ಯಾಯೇನ್ಮಹಾದೇವೀಂ ಸೀತಾಂ ತ್ರೈಲೋಕ್ಯಪೂಜಿತಾಂ।**
**ತಪ್ತಹಾಟಕವರ್ಣಾಭಾಂ ಪದ್ಮಯುಗ್ಮಾಂ ಕರದ್ವಯೇ॥**

**ಸದ್ರತ್ನ ಭೂಷಣ ಸ್ಫೂರ್ಜದ್ ದಿವ್ಯದೇಹಾಂ ಶುಭಾತ್ಮಿಕಾಂ।**
**ನಾನಾವಸ್ತ್ರಾಂ ಶಶಿಮುಖೀಂ ಪದ್ಮಾಕ್ಷೀಂ ಮುದಿತಾಂತರಾಂ।**

**ಪಶ್ಯಂತೀಂ ರಾಘವಂ ಪುಣ್ಯಾಂ ಶಯ್ಯಾಯಾಂ ಷಡ್ಗುಣೇಶ್ವರೀಂ॥**

'ಸೀತೆಯ ಧ್ಯಾನವಿದು. ಸೀತೆಯ ಕಾಂತಿ ಪುಟಹಾಕಿದ ಚಿನ್ನದ್ದು. ಎರಡು ಕೈಗಳಲ್ಲಿ ಎರಡು ಕಮಲಗಳು, ರತ್ನಮಯ ಆಭರಣಗಳಿಂದ ದಿವ್ಯದೇಹ ಪ್ರಕಾಶಿಸುತ್ತಿದೆ. ನಾನಾವಸ್ತ್ರ ಭೂಷಿತಳಾದ ದೇವಿಯ ಮುಖವು ಚಂದ್ರನನ್ನು ನಾಚಿಸುತ್ತದೆ. ಕಣ್ಣುಗಳು ಕಮಲದಂತೆ. ಅಂತಃಕರಣವು ಆನಂದೋಲ್ಲಸಿತ: ಷಡ್ಗುಣೈಶ್ವರ್ಯ ಸಂಪನ್ನಳವಳು, ಶಯ್ಯೆಯಲ್ಲಿ ಪ್ರಾಣೇಶ್ವರ ರಾಮಚಂದ್ರನನ್ನು ನೋಡುತ್ತಿದ್ದಾಳೆ. ಆರುಲಕ್ಷ ಮಂತ್ರ ಜಪ. ಕಮಲಗಳಿಂದ ದಶಾಂಶ ಹೋಮ. ಇದರಿಂದ ಸಂಪೂರ್ಣ ಸಿದ್ಧಿ ಪ್ರಾಪ್ತಿ. 'ಲಂ ಲಕ್ಷ್ಮಣಾಯ ನಮಃ' ಇದು ಸಪ್ತಾಕ್ಷರ ಮಂತ್ರ, ಅಗಸ್ತ್ಯನು ಋಷಿ. ಗಾಯತ್ರೀ ಛಂದಸ್ಸು. ಲಕ್ಷ್ಮಣನೇ ದೇವತೆ.

**ದ್ವಿಭುಜಂ ಸ್ವರ್ಣ ರುಚಿರತನುಂ ಪದ್ಮನಿಭೇಕ್ಷಣಂ।**
**ಧನುರ್ಬಾಣಕರಂ ರಮಸೇವಾಸಂಸಕ್ತಮಾನಸಂ॥**

"ಎರಡು ಭುಜಗಳು, ಚಿನ್ನದಂತಹ ಮೈಬಣ್ಣ, ಕೈಯಲ್ಲಿ ಬಿಲ್ಲುಬಾಣಗಳು. ರಾಮಸೇವೆಯಲ್ಲಿ ನೆಲೆನಿಂತ ಮಾನಸ." ಇಂತಹ ಲಕ್ಷ್ಮಣನನ್ನು ಧ್ಯಾನಿಸಬೇಕು. ಏಳು ಲಕ್ಷ ಜಪ. ಮಧುಪ್ಲುಡ ಪಾಯಸದಿಂದ ಹೋಮ. ಸಾವಿರದಎಂಟು ಅಥವಾ ನೂರಎಂಟು 'ಭಂ ಭರತಾಯ ನಮಃ' 'ಶಂ ಶತ್ರುಘ್ನಯನಮಃ' ಇವೆರಡು ಭರತ ಶತ್ರುಘ್ನರ ಮಂತ್ರಗಳು.

ನಾರದ ಮಹಾಪುರಾಣದಲ್ಲಿ ಆರವತ್ತಾರನೇ ಅಧ್ಯಾಯ ಮುಗಿದುದು

—o—

## ಹನುಮಂತನ ರಹಸ್ಯ ಮಂತ್ರಗಳು

**ಅಧ್ಯಾಯ - ೬೭**

**ಹನುಮಂತನ ಉಪಾಸನೆ:-** ಹೌಂ ಹಸ್ಫೇ (ಸ್ಫ್ರೇಂ) ಖ್ ಪ್ರೇಂ ಹಸ್ರೌಹಸ್ ಖ್ ಫ್ರೇಂ ಹ್‌ಸೌಂ ಹನುಮತೇನಮಃ, "ಇದು ಹನ್ನೆರಡು ಅಕ್ಷರಗಳ ಹನುಮನ್ಮಂತ್ರ. ಇದಕ್ಕೆ ಶ್ರೀ ರಾಮನೇ ಋಷಿ, ಜಗತೀ ಛಂದಸ್ಸು. ಹನುಮಂತನು ದೇವತೆ.

**ಉದ್ಯತ್ ಕೋಟ್ಯರ್ಕ ಸಂಕಾಶಂ ಜಗತ್ಪ್ರ ಕ್ಷೋಭ ಕಾರಕಮ್।**
**ಶ್ರೀ ರಾಮಾಂಘ್ರಿ ಧ್ಯಾನನಿಷ್ಠಂ, ಸುಗ್ರೀವ ಪ್ರಮುಖಾರ್ಚಿತಮ್॥**

**ವಿತ್ರಾಸಯಂತಂ ನಾದೇನ ರಾಕ್ಷಸಾನ್ ಮಾರುತಿಂ ಭಜೇ॥**

ಉದಯಿಸುತ್ತಿರುವ ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸು, ಜಗತ್ತನ್ನು ಕ್ಷೋಭೆಗೊಳಿಸುವ ಶಕ್ತಿ ಇವುಗಳಿಂದ ಕೂಡಿದವನು ಪವನ ಕುಮಾರ. ಸುಗ್ರೀವಾದಿ

ವಾನರರು ಅವನನ್ನು ಗೌರವಿಸುತ್ತಿದ್ದಾರೆ, ಶ್ರೀ ರಾಮನ ಧ್ಯಾನದಲ್ಲಿ ತಲ್ಲೀನನಾದ ಅವನು ರಾಕ್ಷಸರನ್ನು ಸಿಂಹನಾದದಿಂದ ಹೆದರಿಸಬಲ್ಲವನು. ಈ ಮಂತ್ರ ಜಪವನ್ನು ಹನ್ನೆರಡು ಸಾವಿರ ಬಾರಿ ಮಾಡಿ ಮೊಸರು,ಹಾಲು, ತುಪ್ಪ ಸೇರಿಸಿದ ತುಪ್ಪದಿಂದ ದಶಾಂಶ ಆಹುತಿ ಕೊಡಬೇಕು "ರಾಮಭಕ್ತಾಯ ನಮಃ, ಮಹಾ ತೇಜಸೇ ನಮಃ, ಕಪಿರಾಜಾಯ ನಮಃ, ಮಹಾಬಲಾಯ ನಮಃ, ದ್ರೋಣಾದ್ರಿಹಾರಕಾಯ ನಮಃ, ಮೇರು ಪೀಠಾರ್ಚನ ಕಾರಕಾಯ ನಮಃ, ದಕ್ಷಿಣಾಶಾ ಭಾಸ್ಕರಾಯ ನಮಃ, ಸರ್ವ ವಿಘ್ನನಾಶಕಾಯ ನಮಃ" ಈ ನಾಮಗಳಿಂದ ಪೂಜಿಸಿ ಸುಗ್ರೀವ, ಅಂಗದ, ನೀಲ. ಜಾಂಬವಂತ. ನಲ. ಸುಷೇಣ, ದ್ವಿವಿದ ಮತ್ತು ಮೈಂದರನ್ನೂ ಪೂಜಿಸಬೇಕು. ಹತ್ತು ದಿನಗಳಲ್ಲಿ ರಾತ್ರಿ ಒಂಭೈನೂರು ಬಾರಿ ಮಂತ್ರವನ್ನು ಜಪಿಸಿದರೆ ರಾಜ ಭಯ ಶತ್ರು ಭಯಗಳು ನಾಶವಾಗುತ್ತವೆ. ನೂರು ಎಂಟು ಬಾರಿ ಈ ಮಂತ್ರದಿಂದ ಅಭಿಮಂತ್ರಿತವಾದ ಜಲವನ್ನು ಪಾನ ಮಾಡುವುದು ವಿಷನಾಶಕ, ಜ್ವರ ನಾಶಕವೂ ಆಗುತ್ತದೆ. 'ಹನುಮತೇ ನಮಃ' ಇದು ಆರು ಅಕ್ಷರಗಳ ಹನುಮಂತನ ಮಂತ್ರ. 'ನಮೋ ಭಗವತೇ ಆಂಜನೇಯಾಯ ಮಹಾಬಲಾಯ' ಇದು ಹದಿನೆಂಟು ಅಕ್ಷರಗಳ ಹನುಮಂತನ ಮಂತ್ರ. ಈ ಮಂತ್ರವನ್ನು ಒಂದು ಲಕ್ಷ ಸಂಖ್ಯೆಯಲ್ಲಿ ಜಪಿಸಿ ದಶಾಂಶ ಹೋಮವನ್ನು ಮಾಡಿದರೆ ಸರ್ವಾಭೀಷ್ಟ ಸಿದ್ಧಿಯುಂಟಾಗುತ್ತದೆ.

## ದೀಪದಾನ ವಿಧಿ

**ಸನತ್ಕುಮಾರರು ಹೇಳುತ್ತಾರೆ** - ದೀಪ ಪಾತ್ರ, ತೈಲ ಬತ್ತಿ ಇವುಗಳ ಪ್ರಮಾಣಗಳನ್ನು ಸರಿಯಾಗಿ ತಿಳಿದು, ದೀಪದಾನ ಕೊಡಬೇಕು. ಗೋದಿ, ಎಳ್ಳು, ಉದ್ದು, ಹೆಸರು ಮತ್ತು ಅಕ್ಕಿ ಹಿಟ್ಟಿನಿಂದ ದೀಪದ ಪಾತ್ರೆಯನ್ನು ತಯಾರಿಸಿ ಎಳ್ಳೆಣ್ಣೆ ಮುಂತಾದವುಗಳನ್ನುತುಂಬಿ ಹನುಮಂತನನ್ನು ಉದ್ದೇಶಿಸಿ ದೀಪದಾನ ಕೊಡಬೇಕು. "ಹನುಮಂತನೇ ಉತ್ತರಾಭಿಮುಖವಾದ ಈ ದೀಪವನ್ನು ಸ್ವೀಕರಿಸಿ ನನ್ನ ಮನೋರಥವನ್ನು ಪೂರ್ಣಗೊಳಿಸು' ಎಂದು ಪ್ರಾರ್ಥಿಸಬೇಕು. ಗೋಮಯ, (ಆಕಳ ಸಗಣಿ)ಮೃತ್ತಿಕೆ, (ಮಣ್ಣು) ಮಸಿ, ಅರಗು, ದರದ, ಕೆಂಪುಗಂಧ, ಜೇನುತುಪ್ಪ, ಕಸ್ತೂರಿ, ಮೊಸರು, ಹಾಲು, ಬೆಣ್ಣೆ, ತುಪ್ಪ ಈ ಹದಿಮೂರು ವಸ್ತುಗಳನ್ನು ಸಂದರ್ಭಕ್ಕೆ ಅನುಗುಣವಾಗಿ ಉಪಯೋಗಿಸಬೇಕು. ಕಳೆದು ಹೋದ ಪದಾರ್ಥವನ್ನು ಪುನಃ ಪಡೆಯಲು ಎಮ್ಮೆಯ ಸಗಣಿ, ದೂರಕ್ಕೆ ಹೋದವರನ್ನು ಬೇಗನೆ ಬರುವಂತೆ ಮಾಡುವುದು ಮುಂತಾದ ಕಾರ್ಯಕ್ಕೆ ಹಸುವಿನ ಸಗಣಿ ಪ್ರಶಸ್ತ.

ಮಣ್ಣು ನಾಲ್ಕು ವಿಧ - ಬಿಳಿ, ಹಳದಿ, ಕೆಂಪು, ಕಪ್ಪು, ಗೋಪೀಚಂದನ, ಅರಿದಳ, ಕಾವಿ ಮುಂತಾದವುಗಳು ಗ್ರಾಹ್ಯ. ಗೋಪೀಚಂದನದಿಂದ ಚದುರ ಮನೆಯನ್ನು ಮಾಡಿ ಅದರಲ್ಲಿ ಎಮ್ಮೆಯ ಸಗಣಿಯಿಂದ ಹನುಮಂತನ ಮೂರ್ತಿಯನ್ನು ಬರೆಯಬೇಕು. ಬಾಲದಲ್ಲಿ ಬೀಜ ಮತ್ತು ಕ್ರೋಧಾಕ್ಷರ 'ಹ್ರಂ' ಬರೆದು, ಮೂರ್ತಿಗೆ ತೈಲಾಭಿಷೇಕ ಮಾಡಿ, ಬೆಲ್ಲದ ತಿಲಕವಿಟ್ಟು, ಶಾಲವೃಕ್ಷರಸದ ಧೂಪವನ್ನು ತೋರಿಸಿ. ಐದು ಬತ್ತಿಯ ದೀಪವಿಟ್ಟು ಮೊಸರು, ಅನ್ನ ನಿವೇದಿಸಿದರೆ, ನೈವೇದ್ಯ ಸಮಯದಲ್ಲಿ, 'ಮಾ, ಮಾ, ಮಾ,' ಎಂದು ಉಚ್ಚರಿಸಿದರೆ ಕಳೆದು ಹೋದ ಎಮ್ಮೆ, ಹಸು, ಮುಂತಾದ್ದು ಬೇಗನೆ ಸಿಗುತ್ತದೆ. ಕಳ್ಳರು, ದುಷ್ಟ ಪ್ರಾಣಿಗಳಿಂದ ಭಯವುಂಟಾದಾಗ ತಾಲ ಪತ್ರದಿಂದ ನಾಲ್ಕು ಬಾಗಿಲುಳ್ಳ ಮಂಗಲಕರವಾದ ಮನೆಯನ್ನು ರಚಿಸಿ ಪೂರ್ವ ಬಾಗಿಲಿನಲ್ಲಿ ಆನೆ. ದಕ್ಷಿಣದಲ್ಲಿ ಕೋಣವನ್ನು, ಪಶ್ಚಿಮದಲ್ಲಿ ಸರ್ಪವನ್ನು ಉತ್ತರದಲ್ಲಿ ಹುಲಿಯನ್ನು ಬರೆದು ಇದೇ

ಕ್ರಮದಲ್ಲಿ ಕತ್ತಿ, ಚೂರಿ, ದಂಡ, ಮುದ್ಗರ, (ಕುಸುರೂರು) ಬರೆದು ಮಧ್ಯದಲ್ಲಿ ಎಮ್ಮೆಯ ಸಗಣಿಯಿಂದ. ಕೈಯಲ್ಲಿ ಡಮರು, ಹೆದರಿದ ಕಣ್ಣುಗಳಿಂದ ಕೂಡಿದ ಮೂರ್ತಿಯನ್ನು ಬರೆದು ಹಾಲಿನಿಂದ ಅಭಿಷೇಕಿಸಿ ಕೆಂಪು ಸುಗಂಧ ಲೇಪಿಸಿ, ಜಾಜೀ ಹೂವುಗಳಿಂದ ಪೂಜೆ ಮಾಡಿ, ಧೂಪ, ತುಪ್ಪದ ದೀಪ ಒಪ್ಪಿಸಿ ಪಾಯಸಾನ್ನ ನಿವೇದಿಸಬೇಕು. 'ಹೂಂಫಟ್' ಎಂದು ಅನಂತರ ಏಳು ದಿನ ಹೀಗೆಯೇ ಮಾಡುತ್ತಾ ಜಪಿಸಿದರೆ ಮಹಾ ಭಯ ಪರಿಹಾರ. ಇವೆರಡು ಪ್ರಯೋಗಗಳನ್ನು ಮಂಗಳವಾರ ಪ್ರಾರಂಭಿಸುವುದು ಒಳ್ಳೆಯದು. ಶತ್ರು ಸೈನ್ಯದಿಂದ ಭಯವು ಸಂಭವಿಸಿದಾಗ ಕಾವಿ ಬಣ್ಣದಿಂದ ಒಂದು ಮಂಡಲವನ್ನು ರಚಿಸಿ, ಅದರಲ್ಲಿ ಸ್ವಲ್ಪ ಬಗ್ಗಿರುವ ತಾಳ ವೃಕ್ಷವನ್ನು ಬರೆಯಬೇಕು. ಅಲ್ಲಿ ಬಲಗೈಯಲ್ಲಿ ಜ್ಞಾನ ಮುದ್ರೆಯನ್ನೂ, ಎಡಗೈಯಲ್ಲಿ ತಾಳ ವೃಕ್ಷದ ಅಗ್ರ ಭಾಗವನ್ನೂ ಹಿಡಿದು ಜೋಲುತ್ತಿರುವ ಹನುಮಂತನ ವಿಗ್ರಹವನ್ನು ಬರೆಯಬೇಕು. ತಾಳ ವೃಕ್ಷದ ಬುಡದಲ್ಲಿ ಒಂದು ಮೊಳ ದೂರದಲ್ಲಿ ಚೌಕಾಕಾರದ ಮಂಡಲವನ್ನು ರಚಿಸಿ ಅಲ್ಲಿ ದಕ್ಷಿಣದ ಕಡೆಗೆ ನೋಡುತ್ತಿರುವ ಅಂಜಲೀಬದ್ಧನಾದ ಹನುಮಂತನ ಸುಂದರ ಮೂರ್ತಿಯನ್ನು ಬರೆದು ನೀರಿನಿಂದ ಸ್ನಾನ ಮಾಡಿಸಿ ಗಂಧಾದಿಗಳನ್ನು ಅರ್ಪಿಸಿ ಹುಗ್ಗಿ ತುಪ್ಪವನ್ನು ನಿವೇದಿಸಬೇಕು. 'ಕಿಲಿ ಕಿಲಿ' ಜಪವನ್ನು ಮಾಡಬೇಕು. ಹೀಗೆ ಪ್ರತಿ ದಿನವೂ ಮಾಡಿದರೆ ಪರಸ್ಥಳಕ್ಕೆ ಹೋದವರು ಬೇಗನೆ ಹಿಂತಿರುಗುತ್ತಾರೆ. ತತ್ವಜ್ಞಾನ ಪ್ರದವಾದ ಹನುಮಂತನ ಮತ್ತೊಂದು ಮಂತ್ರವು ಹೀಗಿದೆ.......................

**'ಓಂ ನಮೋ ಹನುಮತೆ ಮಮ ಮದನ ಕ್ಷೋಭಂ ಸಂಹರ,**
**ಆತ್ಮತತ್ವಂ ಪ್ರಕಾಶಯ, ಹುಂ, ಫಟ್ ಸ್ವಾಹಾ.'**

ಈ ಮಂತ್ರಕ್ಕೆ ವಸಿಷ್ಠ ಋಷಿ. ಅನುಷ್ಟಪ್ ಛಂದಸ್ಸು, ಹನುಮಂತನೇ ದೇವತೆ. ಹನುಮಂತನ ಎಡಗೈ ಮೊಣಕಾಲಿನ ಮೇಲಿದೆ. ಜ್ಞಾನಮುದ್ರೆಯನ್ನು ಧರಿಸಿ ಆ ಕೈಯನ್ನು ಎದೆಯ ಹತ್ತಿರ ಇಟ್ಟುಕೊಂಡಿದ್ದಾನೆ. ಉದಯ ಕಾಲದ ಕೋಟಿ ಸೂರ್ಯರಂತೆ ಕಾಂತಿಯುಳ್ಳ ಅಧ್ಯಾತ್ಮ ಚಿಂತನ ಮಾಡುತ್ತಿರುವ ಜ್ಞಾನ ದಾತೃವಾದ ಹನುಮಂತನನ್ನು ಧ್ಯಾನಿಸಬೇಕು. ಒಂದು ಲಕ್ಷ ಜಪ, ಘೃತ ಮಿಶ್ರಿತ ತಿಲದಿಂದ ದಶಾಂಶ ಆಹುತಿ ಆಗಬೇಕು. ಕಾಮ ವಿಕಾರ ನಾಶ. ತತ್ವಜ್ಞಾನ ಪ್ರಾಪ್ತಿಯೇ ಈ ಮಂತ್ರದ ಫಲ, ಭೂತಗಳನ್ನು ಓಡಿಸುವ ಆಂಜನೇಯ ಮಂತ್ರ -

**"ಓಂ ಶ್ರೀಂ ಮಹಾಂಜನಾಯ ಪವನ ಪುತ್ರ, ಆವೇಶಯ,**
**ಆವೇಶಾಯ ಓಂ, ಶ್ರೀ ಹನುಮತೇ ಫಟ್"**

**ಆಂಜನೇಯಂ ಪಾಟಲಾಸ್ಯಂ ಸ್ವರ್ಣಾದ್ರಿ ಸಮ ವಿಗ್ರಹಮ್ ।**
**ಪಾರಿಜಾತ ದ್ರು ಮೂಲಸ್ಥಂ ಚಿಂತಯೇತ್ ಸಾಧಕೋತ್ತಮಃ ॥**

ಕೆಂಪು ಮುಖ, ಚಿನ್ನದ ಬೆಟ್ಟದಂತಹ ಕಾಂತಿಯುಳ್ಳ ಹನುಮಂತನು ಪಾರಿಜಾತ ಮರದ ಕೆಳಗೆ ಕೂತಿದ್ದಾನೆ. ಇಂತಹ ಹನುಮಂತನ ಧ್ಯಾನವನ್ನು ಮಾಡಬೇಕು. ಒಂದು ಲಕ್ಷ ಜಪ ಜೇನು-ಸಕ್ಕರೆ ಮಿಶ್ರಿತವಾದ ಎಳ್ಳಿನಿಂದ ದಶಾಂಶ ಹೋಮ, ಮಾಡಿದರೆ ಪಿಶಾಚವು ಅಳುತ್ತಾ ಅವನನ್ನು ಬಿಟ್ಟು ಓಡಿಹೋಗುತ್ತದೆ, ಇವೆಲ್ಲವೂ ರಹಸ್ಯವಾದ ಹನುಮಂತನ ಮಂತ್ರಗಳು.

*ನಾರದ ಮಹಾಪುರಾಣದಲ್ಲಿ ಅರವತ್ತೇಳನೆಯ ಅಧ್ಯಾಯ ಮುಗಿದುದು*

**ಸನತ್ಕುಮಾರರು ಹೇಳುತ್ತಾರೆ:-** "ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀ ಜಲ ವಲ್ಲಭಾಯ ಸ್ವಾಹಾ' ಇದು ಹದಿನೆಂಟು ಅಕ್ಷರಗಳ ಮಂತ್ರ. ಇದಕ್ಕೆ ನಾರದ ಋಷಿ ಗಾಯತ್ರೀ ಛಂದಸ್ಸು. ಶ್ರೀ ಕೃಷ್ಣನೇ ದೇವತೆ. ಏಕಾಗ್ರಚಿತ್ತನಾಗಿ ವೃಂದಾವನವನ್ನು ಚಿಂತಿಸಿ ಅಲ್ಲಿರುವ ವೃಕ್ಷಗಳಲ್ಲಿ ಹಂಸ, ಕೋಗಿಲೆ, ಗಿಳಿ ಪಾರಿವಾಳ ಮುಂತಾದ ಪಕ್ಷಿಗಳು ಕಿಲಿ ಕಿಲಿ ಸದ್ದು ಮಾಡುತ್ತಿವೆ. ನವಿಲುಗಳು ಕುಣಿಯುತ್ತಿವೆ. ಯಮುನೆಯ ತರಂಗಗಳ ಜಲ ಬಿಂದುಗಳನ್ನು ಹೊತ್ತಿರುವ ಗಾಳಿಯು ಬೀಸುತ್ತಿದೆ. ಅಲ್ಲಿರುವ ಕಲ್ಪವೃಕ್ಷದ ಕೆಳಗೆ ಚಿನ್ನದ ಜಗಲಿಯ ಮೇಲೆ ರತ್ನಮಯ ಪೀಠವಿದೆ. ಆ ಪೀಠದಲ್ಲಿ ಇರುವ ಅಷ್ಟದಲ ಕಮಲದಲ್ಲಿ ಮುಕುಂದನು ಶೋಭಿಸುತ್ತಿದ್ದಾನೆ. ಅವನದು ಅರಳಿದ ನೀಲ ಕಮಲದಕಾಂತಿ. ನವಿಲು ಗರಿಯ ಕಿರೀಟ, ಸೊಂಟದಲ್ಲಿ ಪೀತಾಂಬರ, ಎದೆಯಲ್ಲಿ ಕೌಸ್ತುಭ, ಶ್ರೀ ವತ್ಸಗಳು, ಸುತ್ತಲೂ ವೃಂದಾವನದ ಸುಂದರಿಯರು. ಗೋವುಗಳು ಸುತ್ತಲೂ ಇವೆ. ಶ್ರೀ ಕೃಷ್ಣನು ಕೊಳಲನ್ನು ಊದುತ್ತಿದ್ದಾನೆ. ಈ ರೀತಿ ಕೃಷ್ಣನನ್ನು ಧ್ಯಾನಿಸಬೇಕು.

ಶ್ರೀ ಕೃಷ್ಣನ ತ್ರಿಕಾಲ ಪೂಜೆಯೂ ಅಭೀಷ್ಟದಾಯಕವಾಗಿದೆ. ಪ್ರಾತಃಕಾಲ ಶ್ರೀ ಕೃಷ್ಣನನ್ನು ಹೀಗೆ ಧ್ಯಾನಿಸಬೇಕು. 'ಒಂದು ಸುಂದರವಾದ ಉದ್ಯಾನದಲ್ಲಿ ಚಿನ್ನದ ಭೂಮಿಯಲ್ಲಿ ರತ್ನದ ಮಂಟಪವಿದೆ. ಅಲ್ಲಿ ಕಲ್ಪವೃಕ್ಷದ ಕೆಳಗೆ ರತ್ನಮಯ ಕಮಲ ಪೀಠದಲ್ಲಿ ಒಂದು ಸುಂದರವಾದ ಮಗುವಿದೆ. ಅದರ ಅಂಗಕಾಂತಿ ಇಂದ್ರ ನೀಲಮಣಿಯಂತಿದೆ. ಕಪ್ಪಾದ ಗುಂಗುರ ಕೂದಲುಗಳು, ಅಲ್ಲಾಡುತ್ತಿರುವ ಚಿನ್ನದ ಕುಂಡಲಗಳಿಂದ ಕಪೋಲಗಳೂ ಸುಂದರವಾಗಿ ಕಾಣಿಸುತ್ತಿವೆ. ಮಾಟವಾದ ಮೂಗು, ಮುಖದಲ್ಲಿ ಮಂದಹಾಸ, ಕುತ್ತಿಗೆಯಲ್ಲಿ ಬಂಗಾರದ ಸರದಲ್ಲಿ ವ್ಯಾಘ್ರನಖ, ಮೈಯಲ್ಲೆಲ್ಲಾ ಗೋಧೂಳಿ. ಗುಂಡಾದ ಪುಷ್ಟವಾದ ಅಂಗಗಳು, ಸೊಂಟದಲ್ಲಿ ಝಣತ್ಕಾರ ಮಾಡುತ್ತಿರುವ ಉಡಿಗೆಜ್ಜೆ. ಬಲಗೈಯಲ್ಲಿ ಪಾಯಸದ ಪಾತ್ರೆ, ಎಡಗೈಯಲ್ಲಿ ಆಗತಾನೇ ಕಡೆದ ಬೆಣ್ಣೆ, ಗೊಲ್ಲರು, ಗೊಲ್ಲತಿಯರು, ಗೋವುಗಳು ಸುತ್ತಲೂ ಇದ್ದಾರೆ, ಭೂಮಿ ಭಾರರಾದ ಪೂತನಾದಿ ದುಷ್ಟರ ಸಂಹಾರಕನು ಇವನು. "ಹೀಗೆ ಧ್ಯಾನಿಸಿ ಮೊಸರು, ಬೆಲ್ಲ ನಿವೇದಿಸಿ ಒಂದು ಸಾವಿರ ಮಂತ್ರವನ್ನು ಹೀಗೆ ಜಪಿಸಬೇಕು.

ಸ್ಮರೇತ್ ಶಿಶಿರಿತಂ ವೃಂದಾವನಂ ಮಂತ್ರಸಮಾಹಿತಃ।
ಸ್ಮರೇತ್ ತದಂತೇ ಗೀರ್ವಾಣ ಭೂರುಹಂ ಸುಮನೋಹರಂ ॥

ತದಧಃ ಸ್ವರ್ಣವೇದ್ಯಾಂ ಚ ರತ್ನಪೀಠಮನುತ್ತಮಂ।
ರತ್ನಕುಟ್ಟಿಮಪೀಠೇಽಸ್ಮಿನ್ನರುಣಂ ಕಮಲಂ ಸ್ಮರೇತ್ ॥

ಅಷ್ಟಪತ್ರಂ ಚ ತನ್ಮಧ್ಯೇ ಮುಕುಂದಂ ಸಂಸ್ಮರೇತ್ ಸ್ಥಿತಂ।
ಫುಲ್ಲೇಂದೀವರಕಾಂತಂ ಚ ಕೇಕಿಬರ್ಹಾವತಂಸಕಮ್ ॥

**ಪೀತಾಂಶುಕಂ ಚಂದ್ರಮುಖಿಂ ಸರಸೀರುಹನೇತ್ರಕಂ ।**
**ಕೌಸ್ತುಭೋದ್ಭಾಸಿತಾಂಗಂ ಚ ಶ್ರೀವತ್ಸಾಂಕಂ ಸುಭೂಷಿತಮ್ ॥**

**ವ್ರಜಸ್ತ್ರೀ ನೇತ್ರ ಕಮಲಾಭ್ಯರ್ಚಿತಂ ಗೋಗಣಾವೃತಂ ।**
**ಗೋಪವೃಂದಯುತಂ ವಂಶೀಂ ವಾದಯಂತಂ ಸ್ಮರೇತ್ಸುಧೀಃ ॥**

ಗೊಲ್ಲರು, ಗೊಲ್ಲತಿಯರು, ಗೋವುಗಳು ಇವುಗಳ ಮಧ್ಯದಲ್ಲಿ ಮೇಘಶ್ಯಾಮನಾದ, ನವಿಲುಗರಿಯ ಕಿರೀಟವನ್ನು ಧರಿಸಿರುವ ಕೃಷ್ಣನು ನಿಂತಿದ್ದಾನೆ, ದಿವ್ಯಾಂಗರಾಗವನ್ನು ಧರಿಸಿದ್ದಾನೆ, ಎಡಗೈಯಲ್ಲಿ ಶಂಖ, ಬಲಗೈಯಲ್ಲಿ ಚಾವಟಿ ಹಿಡಿದು ಭಕ್ತರ ಮನೋಭಿಲಾಷೆಯನ್ನು ಪೂರೈಸಲು ಸನ್ನದ್ಧವಾಗಿರುವ ಶ್ರೀ ಕೃಷ್ಣನನ್ನು ಪೂಜಿಸಬೇಕು. ಇದು ಮಧ್ಯಾಹ್ನದ ಧ್ಯಾನ.

*ನಾರದ ಮಹಾಪುರಾಣದಲ್ಲಿ ಅರವತ್ತೆಂಟನೇಯ ಅಧ್ಯಾಯ ಮುಗಿದುದು*

## ಸಂಧ್ಯಾಕಾಲದ ಶ್ರೀ ಕೃಷ್ಣನ ಧ್ಯಾನ

**ಅಧ್ಯಾಯ - ೬೯**

**ಸಾಯಂಕಾಲದ ಧ್ಯಾನ:-** ಸಾಯಂಕಾಲ ಶ್ರೀ ಕೃಷ್ಣನು ದ್ವಾರಕೆಯಲ್ಲಿ ಒಂದು ಸುಂದರ ಭವನದಲ್ಲಿ ಶೋಭಿಸುತ್ತಿದ್ದಾನೆ. ಆ ಮನೆಯ ಸುತ್ತಮುತ್ತಲೂ ಎಂಟು ಸಾವಿರ ಮನೆಗಳಿವೆ. ಅದರ ಸುತ್ತಲೂ ಸರೋವರಗಳು. ಅಲ್ಲಿ ಹಂಸ, ಸಾರಸ ಮುಂತಾದ ಪಕ್ಷಿಗಳು, ಕಮಲ, ಉತ್ಪಲ ಮುಂತಾದ ಹೂವುಗಳೂ ಇವೆ. ಭವನದ ಮಧ್ಯದಲ್ಲಿರುವ ಸುವರ್ಣಮಯ ಕಮಲದ ಆಕೃತಿಯ ಸುಂದರ ಸಿಂಹಾಸನದಲ್ಲಿ ತ್ರಿಭುವನ ಮೋಹನನಾದ ಶ್ರೀ ಕೃಷ್ಣನು ಕುಳಿತಿದ್ದಾನೆ. ತತ್ವಜ್ಞಾನಾಪೇಕ್ಷಿಗಳಾದ ಮುನಿಗಳು ಅವನ ಸುತ್ತಲೂ ಕುಳಿತು ಉಪದೇಶವನ್ನು ಪಡೆಯುತ್ತಿದ್ದಾರೆ.

**"ಸಾಯಾಹ್ನೇ ದ್ವಾರವತ್ಯಾಂ ತು ಚಿತ್ರೋದ್ಯಾನೋಪಶೋಭಿತೇ ।**
**ಹೇಮಾಂಭೋಜಾಸನಾಸಿನಂ ಕೃಷ್ಣಂ ತ್ರೈಲೋಕ್ಯ ಮೋಹನಂ ॥**

**ಚಾರು ಪ್ರಸನ್ನ ವದನಂ ಸ್ಫುರನ್ಮಕರಕುಂಡಲಂ ।**
**ಶ್ರೀವತ್ಸವಕ್ಷಸಂ ಭ್ರಾಜತ್ ಕೌಸ್ತುಭಂ ಸುಮನೋಹರಮ್ ॥**

**ಹೃತ ವಿಶ್ವಂಭರಾ ಭೂರಿ ಭಾರಂ ಮುದಿತಮಾನಸಮ್ ।**
**ಶಂಖ ಚಕ್ರ ಗದಾಪದ್ಮ ರಾಜದ್ಭುಜ ಚತುಷ್ಟಯಮ್ ॥**

ಭೂಮಿಯ ಭಾರವನ್ನು ಪರಿಹರಿಸಿದ, ಪರಮಾನಂದ, ಪರಿಪೂರ್ಣನಾದ, ಶಂಖ, ಚಕ್ರ, ಗದಾಧಾರಿಯಾದ ಶ್ರೀ ಕೃಷ್ಣನನ್ನು ಸಾಯಂಕಾಲ ಧ್ಯಾನಿಸಬೇಕು.

*ನಾರದ ಮಹಾಪುರಾಣದಲ್ಲಿ ಅರವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

**ರಾತ್ರೌ ಚೇತ್ ಮದನಾಕ್ರಾಂತ ಚೇತಸಂ ನಂದನಂದನಂ ।**
**ಯಜೇದ್ರಾಸ ಪರಿಶ್ರಾಂತಂ ಗೋಪೀಮಂಡಲ ಮಧ್ಯಗಂ ॥**

**ಕಾಂಚೀನೂಪುರಹಾರ ಕಂಕಣಯುತಂ ಕೇಯೂರಭೂಷಾನ್ವಿತಂ ।**
**ಗೋಪೀನಾಂ ದ್ವಿತಯಾಂತರೇ ಸುಲಲಿತಂ ವನ್ಯಪ್ರಸೂನಸ್ರಜಂ ॥**

**ಅನ್ಯೋನ್ಯಂ ವಿನಿಬದ್ಧ ಗೋಪದಯಿತಾದೋರ್ವಲ್ಲಿವೀತಂ ಲಸದ್-**
**-ರಾಸಕ್ರೀಡನ ಲೋಲುಪಂ ಮನಸಿಜಾಕ್ರಾಂತಂ ಮುಕುಂದಂ ಭಜೇತ್ ॥**

ನಂದನ ನಂದನ ಶ್ರೀ ಕೃಷ್ಣನು ರಾಸಕ್ರೀಡೆಯಾಡಿ ಬಳಲಿದವನಂತೆ ಗೋಪಿಯರ ಮಧ್ಯದಲ್ಲಿ ನಿಂತಿದ್ದಾನೆ. ಯಮುನೆಯ ಮಳಲು ದಿನ್ನೆಗಳು ಚಂದ್ರನ ಕಿರಣಗಳಿಂದ ಪ್ರಕಾಶಿತವಾಗಿವೆ. ಹೂವುಗಳ ಪರಾಗ - ಸೌರಭ ಭರಿತವಾದ ವಾಯುವು ಮೆಲ್ಲ ಮೆಲ್ಲನೆ ಬೀಸುತ್ತಿದೆ. ದುಂಬಿಗಳು ಮಕರಂದ ರಸಪಾನ ಮಾಡಿ ಮದಿಸಿ ಗುಂಯ್ ಗುಡುತ್ತಾ ಓಡಾಡುತ್ತಿವೆ. ಮಲ್ಲಿಗೆಯ ಸುವಾಸನೆಯು ಎಲ್ಲೆಡೆ ಹರಡುತ್ತಿದೆ. ಮುಗುಳ್ನಗೆಯ ಪ್ರಭೆಯನ್ನು ಬೀರುತ್ತಾ ಶ್ರೀ ಕೃಷ್ಣನು ಮೆಲ್ಲನೆ ಕೊಳಲನ್ನೂದುತ್ತಿದ್ದಾನೆ. ಕಪ್ಪಾದ ಮೋಡದಂತಹ ಮೈಕಾಂತಿ, ಹುಬ್ಬುಗಳಲ್ಲಿ ಸ್ವಲ್ಪ ಚಲನೆ, ತಲೆಯಲ್ಲಿ ನವಿಲುಗರಿಯ ಕಿರೀಟ, ಚಲಿಸುತ್ತಿರುವ ಕುಂಡಲಗಳಿಂದ ಪ್ರಕಾಶಿಸುತ್ತಿರುವ ಕಪೋಲಗಳು, ಸೊಂಟದ ಪಟ್ಟಿ, ಕಾಲ್ಗೆಜ್ಜೆ, ಹಾರ, ತೋಳ್ಬಂದಿ, ಕಡಗ, ಭುಜಕಿರೀಟಗಳಿಂದ ಅಲಂಕೃತನಾದ ಗೋಪಿಯರ ಮಧ್ಯದಲ್ಲಿ ನಿಂತು ಶ್ಯಾಮ ಸುಂದರನು ಭಕ್ತರಿಗೆ ತನ್ನ ದಿವ್ಯದರ್ಶನವನ್ನು ಕೊಡುತ್ತಿದ್ದಾನೆ. ಕಂಠದಲ್ಲಿ ವನಮಾಲೆಯಿದೆ. ಗೋಪಿಯರು ಒಬ್ಬರು ಇನ್ನೊಬ್ಬರು ಕೈ ಹಿಡಿದು ನರ್ತನ ಮಾಡುತ್ತಾ ಸುತ್ತಲೂ ತಿರುಗುತ್ತಾ ಇದ್ದಾರೆ. ಬಳ್ಳಿಗಳಿಂದ ಸುಂದರ ವೃಕ್ಷದಂತೆ ಶ್ರೀ ಕೃಷ್ಣನು ಮಧ್ಯದಲ್ಲಿ ನಿಂತಿದ್ದಾನೆ. ರಾಸಲೀಲಾರತನಾದ ಇಂತಹ ಶ್ರೀ ಕೃಷ್ಣನನ್ನು ಭಜಿಸಬೇಕು. ಅನೇಕ ಶ್ರುತಿಗಳಿಂದ ಕೂಡಿದ ಸಪ್ತಸ್ವರಗಳ ಮೂರ್ಛನೆ ಮತ್ತು ತಾನಗಳೊಂದಿಗೆ ಶ್ರೀ ಕೃಷ್ಣನು ಗೋಪಿಕಾಸ್ತ್ರೀಯರೊಡನೆ ಕುಣಿಯುತ್ತಿದ್ದಾನೆ. ಆಭರಣಗಳ ಮಂಜುಗುಂಜಾರವದಿಂದ ಮಾಧವನ ಮೈಯೆಲ್ಲಾ ಝೇಂಕಾರಮಯ ವೆಂಬಂತೆ ಆಗಿದೆ. ಇಬ್ಬಿಬ್ಬರು ಗೋಪಿಯರ ಮಧ್ಯದಲ್ಲಿ ಮತ್ತೊಬ್ಬನಾಗಿಯೂ ಕೃಷ್ಣನು ಕಂಗೊಳಿಸುತ್ತಿದ್ದಾನೆ. ಇಂತಹ ಶ್ರೀ ಕೃಷ್ಣನ ಧ್ಯಾನ ಮಾಡಿ ಪೂಜಿಸುವುದು. ಧನಕಾಮನೆಯುಳ್ಳವನು ಹಿಂದೆ ಹೇಳಿದ ಕೇಶವ - ಕೀರ್ತಿ ಇತ್ಯಾದಿ ಹದಿನಾರು ದೇವತೆಗಳ ಪೂಜೆ ಮಾಡಿ ಕಲ್ಲು ಸಕ್ಕರೆ, ಹಾಲು, ತುಪ್ಪ ನಿವೇದಿಸಬೇಕು. ಹದಿನಾರು ಪಾತ್ರೆಗಳಲ್ಲಿ ಕೇಶವಾದಿಗಳಿಗೆ ಸಕ್ಕರೆ ಹಾಲು ಅರ್ಪಿಸಬೇಕು. ಸುತ್ತಿನ ನಮಸ್ಕಾರ ಪ್ರಾರ್ಥನೆಗಳನ್ನೂ ಮಾಡಬೇಕು.ಇದರಿಂದ ಸರ್ವ ಸಮೃದ್ಧಿಯುಂಟಾಗುತ್ತದೆ.

ನಾರದ ಮಹಾಪುರಾಣದಲ್ಲಿ ಎಪ್ಪತ್ತನೇಯ ಅಧ್ಯಾಯ ಮುಗಿದುದು

—o—

ಮತ್ತೊಂದು ರಹಸ್ಯವಾದ ೧೫ ಉತ್ತಮವಾದ ಮೋಕ್ಷ ದೊರಕಿಸುವ ರಹಸ್ಯಹೀಗಿದೆ.

**ಶ್ರೀ ಮತ್ಕುಂದೇಂದು ಗೌರಂ ಸರಸಿಜ ನಯನಂ ಶಂಖಚಕ್ರೇ ಗದಾಬ್ಜೇ**
**ಬಿಭ್ರಾಣಂ ಹಸ್ತ ಪದ್ಮೈಃ ನವನಲಿನಲಸನ್ಮಾಲಯಾ ದೀಪ್ಯಮಾನಂ ।**
**ವಂದೇ ವೇದ್ಯಂ ಮುನೀಂದ್ರೈಃ ಕನಕಮಣಿಲಸದ್ದಿವ್ಯ ಭೂಷಾಭಿರಾಮಂ**
**ದಿವ್ಯಾಂಗಾಲೇಪ ಭಾಸಂ ಸಕಲಭಯಹರಂ ಪೀತವಸ್ತ್ರಂ ಮುರಾರಿಂ ॥**

"ಕುಂದ ಚಂದ್ರನಂತೆಧವಲ ವರ್ಣದ, ಕಮಲದಂತಹ ಕಣ್ಣುಳ್ಳ, ಶಂಖ ಚಕ್ರ ಗದಾ ಪದ್ಮಗಳನ್ನು ಹಸ್ತ ಪದ್ಮಗಳಲ್ಲಿ ಧರಿಸಿರುವವನು ನಮ್ಮ ಮುರಾರಿ. ಅವನ ಕತ್ತಿನಲ್ಲಿ ಆಗ ತಾನೇ ಅರಳಿದ ಕನ್ನೈದಿಲೆ ಹೂವಿನ ಮಾಲೆಯಿದೆ. ಚಿಕ್ಕ ರತ್ನಗಳಿಂದ ಖಚಿತವಾದ ದಿವ್ಯಾಲಂಕಾರ ಭಾಸಿತನಾಗಿ, ದಿವ್ಯ ಸುಗಂಧ ವಸ್ತುವನ್ನು ಧರಿಸಿರುವ ಹರಿಯು ಸಕಲ ಭಯಹರನಾಗಿದ್ದಾನೆ. ಇಂತಹ ಪೀತಾಂಬರಧಾರಿಯಾದ ಮುರಾರಿಗೆ ನನ್ನ ವಂದನೆಗಳು.

ಈ ಧ್ಯಾನವನ್ನು ಮಾಡಿ ಆದಿ ಪುರುಷ ಕೃಷ್ಣನು ತನ್ನ ಹೃದಯಕಮಲದಲ್ಲಿ ವಿರಾಜಿಸುತ್ತಿದ್ದಾನೆ ಎಂದೂ ಭಾವಿಸಬೇಕು. ಹನ್ನೆರಡು ಲಕ್ಷ ಮಂತ್ರವನ್ನು ಜಪಿಸಿ ಕ್ಷೀರ ವೃಕ್ಷದ ಸಮಿಧೆಯಿಂದ ಅಥವಾ ಮಧುಘೃತ ಮಿಶ್ರವಾದ ಕ್ಷೀರದಿಂದ ಹನ್ನೆರಡು ಸಾವಿರ ಆಹುತಿ ಕೊಡಬೇಕು. ಪ್ರತಿದಿನ ಮೂರು ಸಾವಿರ ಮಂತ್ರ ಜಪ ಮಾಡಬೇಕು. ಈ ಮಂತ್ರದ ಸಿದ್ಧಿಯಿಂದ ಭವಸಾಗರ ತರಣವು ಉಂಟಾಗುತ್ತದೆ.

"ಹ್ರೀಂ ಶ್ರೀಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀಜನ ವಲ್ಲಭಾಯ ಸ್ವಾಹಾ." ಇದು ಇಪ್ಪತ್ತು ಅಕ್ಷರಗಳ ಮಂತ್ರ. ಶಾಲಗ್ರಾಮ, ಮಣಿ, ಯಂತ್ರ ಅಥವಾ ಮಂಡಲಗಳಲ್ಲಿ ಈ ಮಂತ್ರದಿಂದ ಶ್ರೀ ಕೃಷ್ಣನ ಆರಾಧನೆಯನ್ನು ಮಾಡಿದವನಿಗೆ ಪರಮಗತಿ ಪ್ರಾಪ್ತವಾಗುತ್ತದೆ. ಈ ಮಂತ್ರಕ್ಕೆ ಬ್ರಹ್ಮನೆ ಋಷಿ. ಗಾಯತ್ರೀ ಛಂದಸ್ಸು. ಶ್ರೀ ಕೃಷ್ಣನೇ ದೇವತೆ. ಕ್ಲೀಂ ಬೀಜ. ಸ್ವಾಹಾ ಶಕ್ತಿ. ದ್ವಾರಕಾ ಪಟ್ಟಣದಲ್ಲಿ ಸಾವಿರ ಸೂರ್ಯರಂತೆ ಪ್ರಕಾಶಿಸುವ ಸುಂದರವಾದ ಭವನಗಳು ಮತ್ತು ಕಲ್ಪವೃಕ್ಷಗಳಿಂದ ಆವೃತವಾದ ಒಂದು ರತ್ನಮಯ ಮಂಟಪವು ಇದೆ. ಅದರ ಸ್ತಂಭಗಳು ಜಾಜ್ವಲ್ಯಮಾನವಾದ ರತ್ನಗಳಿಂದ ರಚಿತವಾಗಿವೆ. ಅದರ ಬಾಗಿಲು ತೋರಣ ಗೋಡೆಗಳೂ ಸಹ ಪ್ರಕಾಶಿಸುವ ರತ್ನಗಳಿಂದ ನಿರ್ಮಿತವಾಗಿವೆ. ಅಲ್ಲಿ ಅರಳಿರುವ ಸುಂದರ ಪುಷ್ಪಗಳ ಚಿತ್ರದಿಂದ ಸುಶೋಭಿತವಾದ ಮೇಲ್ಕಟ್ಟುಗಳಲ್ಲಿ ಮುತ್ತಿನ ಗೊಂಚಲುಗಳು ಜೋಲಾಡುತ್ತಿವೆ. ಮಂಟಪದ ಮಧ್ಯಭಾಗವು ಅನೇಕ ರತ್ನಗಳಿಂದ ನಿರ್ಮಿತವಾಗಿದೆ. ಅಲ್ಲಿರುವ ಒಂದು ಕಲ್ಪವೃಕ್ಷದಿಂದ ದಿವ್ಯ ರತ್ನಗಳು ಸುರಿಯುತ್ತಿರುತ್ತವೆ. ಆ ಮರದ ಕೆಳಗೆ ರತ್ನಮಯವಾದ ದೀಪಗಳ ಸಾಲಿನಿಂದ ದಿವ್ಯಪ್ರಕಾಶವು ಹರಡುತ್ತಿದೆ. ಅಲ್ಲಿ ರತ್ನಮಯ ಸಿಂಹಾಸನದ ಮೇಲೆ ಉದಯಿಸುತ್ತಿರುವ ಸೂರ್ಯನಂತೆ ಅರುಣ ಪ್ರಭೆಯಿಂದ ಕೂಡಿದ ಕಮಲವಿದೆ. ಆ ಕಮಲಾಸನದಲ್ಲಿ ಸುವರ್ಣ ವರ್ಣದ ಕೋಟಿ ಸೂರ್ಯಚಂದ್ರ, ವಿದ್ಯುತ್ತುಗಳಿಗೆ ಸಮಾನ ಪ್ರಕಾಶವುಳ್ಳ ಸರ್ವಾಂಗ

ಸುಂದರನಾದ ಸರ್ವಾಭರಣ ಭೂಷಿತನಾದ ಶ್ರೀ ಕೃಷ್ಣನು ವಿರಾಜಮಾನನಾಗಿದ್ದಾನೆ. ಚಿಗುರೆಲೆಯಂತಿರುವ ತನ್ನ ಎಡಗಾಲಿನ ತುದಿಯಿಂದ ಅವನು ಒಂದು ಕಲಶವನ್ನು ಸ್ಪರ್ಶಿಸುತ್ತಿದ್ದಾನೆ. ಆ ಕಲಶದಿಂದ ರತ್ನ ಜಲಧಾರೆಯು ಉಕ್ಕುತ್ತಿದೆ. ಅವನ ಬಲಭಾಗದಲ್ಲಿ ರುಕ್ಮಿಣಿ, ಎಡಭಾಗದಲ್ಲಿ ಸತ್ಯಭಾಮೆ ಇಬ್ಬರೂ ಕೈಗಳಲ್ಲಿ ದಿವ್ಯ ಕಲಶಗಳನ್ನು ಹಿಡಿದುಕೊಂಡಿದ್ದಾರೆ. ಆ ಕಲಶಗಳಿಂದ ರತ್ನ ರಾಶಿಮಯವಾದ ಜಲಧಾರೆಯು ಶ್ರೀ ಕೃಷ್ಣನ ಮೇಲೆ ಬೀಳುತ್ತಿದೆ. ನೀಲಾ, ಸುನಂದಾ ಎಂಬಿಬ್ಬರು ಬೇರೆ ಬೇರೆ ಕಲಶಗಳನ್ನು ಎತ್ತಿ ಕೊಡುತ್ತಿದ್ದಾರೆ. ಇವರಿಬ್ಬರ ಬಲ ಎಡ ಭಾಗಗಳಲ್ಲಿ ನಿಂತಿರುವ ಮಿತ್ರವಿಂದೆ ಮತ್ತು ಲಕ್ಷ್ಮಣೆಯರೂ ಕೂಡ ಕಲಶಗಳನ್ನು ರುಕ್ಮಿಣೀ ಸತ್ಯಭಾಮೆಯರ ಕೈಯಲ್ಲಿ ತುಂಬಿ ಕೊಡುತ್ತಿದ್ದಾರೆ. ಅವರಿಗೂ ಹಿಂಭಾಗದಲ್ಲಿ ಬಲ ಎಡ ಭಾಗಗಳಲ್ಲಿ ನಿಂತಿರುವ ಜಾಂಬುವತಿ ಮತ್ತು ಸುಶೀಲೆಯರು ರತ್ನ ಪೂರ್ಣ ಕಲಶಗಳನ್ನು ತುಂಬಿ ಕೊಡುತ್ತ ಇದ್ದಾರೆ. ಇನ್ನೂ ಹೊರಗಿನ ಆವರಣದಲ್ಲಿ ಹದಿನಾರು ಸಾವಿರ ಕೃಷ್ಣನ ಹೆಂಡತಿಯರು ಕೈಯಲ್ಲಿ ಕಲಶಗಳನ್ನು ಹಿಡಿದು ನಿಂತಿದ್ದಾರೆ. ಅದರ ಹೊರಭಾಗದಲ್ಲಿ ಭೂಮಿಯನ್ನು ಸಂಪತ್ತಿನಿಂದ ತುಂಬುವ ಎಂಟು ನಿಧಿಗಳಿವೆ. ಈ ರೀತಿಯಾಗಿ ಧ್ಯಾನ ಮಾಡಿ ಐದು ಲಕ್ಷ ಜಪವನ್ನು ಮಾಡಿ ರಕ್ತ ಕಮಲಗಳಿಂದ ದಶಾಂಶ ಹೋಮವನ್ನು ಮಾಡಬೇಕು. ಇದರಿಂದ ಸಮಸ್ತ ಸಮೃದ್ಧಿಯೂ ಉಂಟಾಗುತ್ತದೆ. ''ಗೋಪೀ ಜನ ವಲ್ಲಭಾಯ ಸ್ವಾಹಾ'' ಇದು ದಶಾಕ್ಷರ ಮಂತ್ರ. ಇದಕ್ಕೆ ನಾರದ ಋಷಿ. ವಿರಾಟ ಛಂದಸ್ಸು. ಶ್ರೀ ಕೃಷ್ಣನೇ ದೇವತೆ! ಶ್ರೀ ಕೃಷ್ಣನನ್ನು ಧ್ಯಾನ ಮಾಡುತ್ತ ಈ ಮಂತ್ರವನ್ನು ಜಪಿಸಿದರೆ ರೋಗ ಪರಿಹಾರವಾಗುತ್ತದೆ.

ನಾರದ ಪುರಾಣದಲ್ಲಿ ಎಪ್ಪತ್ತೊಂದನೇಯ ಅಧ್ಯಾಯ ಮುಗಿದುದು



## ಶ್ರೀಕೃಷ್ಣ ಮಂತ್ರ ಮತ್ತು ವ್ಯಾಸ ಮಂತ್ರಗಳು | ಅಧ್ಯಾಯ - ೭೨

**ಸನತ್ಕುಮಾರರು ಹೇಳುತ್ತಾರೆ:-** ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯ ಗೋವಿಂದಾಯ ಸ್ವಾಹಾ, ಇದು ಹನ್ನೆರಡು ಅಕ್ಷರಗಳ ಮಂತ್ರ. ಧ್ಯಾನ, ಹೋಮ, ಪೂಜೆ ಇತ್ಯಾದಿಗಳನ್ನು ಮಾಡಿ ಸಿದ್ಧಿಯನ್ನು ಪಡೆದರೆ ಈ ಮಂತ್ರವು ಎಲ್ಲ ಅಭೀಷವನ್ನೂ ಕೊಡುತ್ತದೆ. ''ಶ್ರೀಂ ಹ್ರೀಂ ಕ್ಲೀಂ ಗೋಪೀಜನ ವಲ್ಲಭಾಯ ಸ್ವಾಹಾ ಕ್ಲೀಂ ಹ್ರೀಂ ಶ್ರೀಂ'' ಎಂದು ಹೇಳಿದಾಗ ಹದಿನಾರು ಅಕ್ಷರಗಳ ಮಂತ್ರವಾಗುತ್ತದೆ. ಮೊದಲು 'ಹ್ರೀಂ ಶ್ರೀಂ' ಮಾತ್ರ ಜೋಡಿಸಿ ಹೇಳಿದರೆ ಹನ್ನೆರಡು ಅಕ್ಷರಗಳ ಮಂತ್ರ ಆಗುತ್ತದೆ. ಪರಮಾತ್ಮನ ಧ್ಯಾನ ಮಾಡುತ್ತ ಹತ್ತು ಲಕ್ಷ ಮಂತ್ರ ಜಪವನ್ನು ಮಾಡಿ ತುಪ್ಪದಿಂದ ದಶಾಂಶ ಹೋಮವನ್ನು ಮಾಡಬೇಕು. ಆಗ ಸಮಸ್ತ ಸಂಪತ್ತುಗಳೂ ಸೌಭಾಗ್ಯವೂ ಸಿದ್ಧಿಸುತ್ತವೆ.

''ಐಂ ಕ್ಲೀಂ ಕೃಷ್ಣಾಯ ಹ್ರೀಂ ಗೋವಿಂದಾಯ ಶ್ರೀ ಗೋಪೀಜನವಲ್ಲಭಾಯ ಸ್ವಾಹಾ ಹ್ ಸೋಮ್'' ಇದು ಇಪ್ಪತ್ತೆರಡು ಅಕ್ಷರಗಳ ಮಂತ್ರ. ಇದು ವಾಕ್‌ಸಿದ್ಧಿಯನ್ನು ಕೊಡುತ್ತದೆ. ಇದಕ್ಕೆ ನಾರದನು ಋಷಿ, ಗಾಯತ್ರೀ ಛಂದಸ್ಸು. ವಿದ್ಯಾದಾತನಾದ ಗೋಪಾಲನೇ ದೇವತೆ. ಎಡಭಾಗದ ಮೇಲಿನ ಕೈಯಲ್ಲಿ ಪುಸ್ತಕ. ಬಲಭಾಗದ ಮೇಲಿನ ಕೈಯಲ್ಲಿ ಅಕ್ಷಮಾಲಾ. ಕೆಳಭಾಗದ ಎರಡೂ ಕೈಗಳಿಂದ ಕೊಳಲನ್ನು ಹಿಡಿದ ಶ್ರೀ ಕೃಷ್ಣನನ್ನು ಧ್ಯಾನಿಸಬೇಕು. ಕೃಷ್ಣನ ಅನುಗ್ರಹದಿಂದ ಹಿಂದೆ ಓದದೆ ಇದ್ದ ಶಾಸ್ತ್ರವೂ ಕೂಡ ತಾನಾಗಿಯೇ ಹೊಳೆಯುತ್ತದೆ.

ಓಂ ಕೃಷ್ಣ ಕೃಷ್ಣ ಮಹಾ ಕೃಷ್ಣ ಸರ್ವಜ್ಞ ತ್ವಂ ಪ್ರಸೀದ ಮೇ।
ರಮಾರಮಣ ವಿದ್ಯೇಶ ವಿದ್ಯಾಮಾಶು ಪ್ರಯಚ್ಛ ಮೇ॥

ಕೃಷ್ಣ, ಕೃಷ್ಣ, ಮಹಾಕೃಷ್ಣ, ನೀನು ಸರ್ವಜ್ಞ. ನನ್ನಲ್ಲಿ ಪ್ರಸನ್ನನಾಗು. ರಮಾರಮಣ ವಿದ್ಯೇಶ್ವರ ನನಗೆ ಬೇಗನೆ ವಿದ್ಯೆಯನ್ನು ಕೊಡು. ಇದು ಮೂವತ್ತೆರಡು ಅಕ್ಷರಗಳ ಮಹಾ ವಿದ್ಯಾಪ್ರದ ಮಂತ್ರ. ಇದಕ್ಕೆ ನಾರದ ಋಷಿ ಅನುಷ್ಟುಪ್ ಛಂದಸ್ಸು. ಶ್ರೀ ಕೃಷ್ಣನೇ ದೇವತೆ.

ದಿವ್ಯೋದ್ಯಾನೇ ವಿವಸ್ವತ್ಪ್ರತಿಮ ಮಣಿಮಯೇ ಯೋಗಪೀಠೇ।
ಮಧ್ಯೇ ಯಃ ಸರ್ವ ವೇದಾಂತಮಯ ಸುರತರೋಃ ಸನ್ನಿವಿಷ್ಟೋ ಮುಕುಂದಃ॥

ವೇದೈಃ ಕಲ್ಪದ್ರುರೂಪೈಃ ಶಿಖರಶತಸಮಾಲಂಬಿಕೋಶೈಶ್ಚತುರ್ಭಿಃ।
ನ್ಯಾಯೈಸ್ತರ್ಕೈಃ ಪುರಾಣೈಃ ಸ್ಮೃತಿಭಿರಭಿವೃತಸ್ತಾದೃಶೈಶ್ಚಾಮರಾದ್ಯೈಃ॥

ದದ್ಯಾದ್ ಬಿಭ್ರತ್ ಕರಾಗ್ರೈ ರರಿದರಮುರಲೀ ಪುಷ್ಪಬಾಣೇಷುಚಾಪಾ।
ನಕ್ಷಸ್ಸ್ರಕ್ ಪೂರ್ಣಕುಂಭೌ ಸ್ಮರಲಲಿತವಪುರ್ದಿವ್ಯ ಭೂಷಾಂಗರಾಗಃ॥

ವ್ಯಾಖ್ಯಾಂ ವಾಮೇ ವಿತನ್ವನ್ ಸ್ಫುಟರುಚಿರಪದೋ ವೇಣುನಾ ವಿಶ್ವಮಾತ್ರೇ
ಶಬ್ದ ಬ್ರಹ್ಮೋದ್ಭವೇನ ಶ್ರಿಯಮರುಣ ರುಚಿರ್ಬಲ್ಲವೀವಲ್ಲಭೋ ನಃ॥

ದಿವ್ಯೋದ್ಯಾನದಲ್ಲಿ ಇರುವ ಸೂರ್ಯನಂತೆ ಪ್ರಕಾಶಮಾನವಾದ ರತ್ನಮಯ ಮಂಟಪದಲ್ಲಿ ಸರ್ವ ವೇದಾಂತಮಯನಾದ ಚತುರ್ಮುಖ ಶಿಖರವುಳ್ಳ ಕಲ್ಪವೃಕ್ಷದ ಕೆಳಗೆ ಯೋಗಪೀಠ ಸಿಂಹಾಸನದ ಮೇಲೆ ಮುಕುಂದನು ಮುರಲೀಧರನಾಗಿ ವಿರಾಜಮಾನ ನಾಗಿದ್ದಾನೆ. ಛತ್ರ, ಚಾಮರಾದಿ ರೂಪದಲ್ಲಿ ನ್ಯಾಯ ಪುರಾಣ ಮುಂತಾದ ವಿದ್ಯೆಗಳು ಪರಮಾತ್ಮನನ್ನು ಸುತ್ತುವರೆದಿವೆ. ಶಂಖ, ಚಕ್ರ, ಕೊಳಲು ಪುಷ್ಪಬಾಣ ಕಬ್ಬಿನ ಧನುಸ್ಸನ್ನು ಹಿಡಿದಿರುವ ಕೃಷ್ಣನು ಮೇಲಿನ ಎರಡು ಕೈಗಳಲ್ಲಿ ಕಲಶಗಳನ್ನು ಹಿಡಿದಿದ್ದಾನೆ. ಒಂದು ಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದಿದ್ದಾನೆ. ಕೊಳಲಿನಿಂದ ಸ್ಪಷ್ಟವಾಗಿ ಪದಗಳ ಉಚ್ಚಾರಣೆ ಯಾಗುತ್ತಿದೆ. ಇಂತಹ ಕೃಷ್ಣನು ನಮಗೆ ವಿದ್ಯಾ ಲಕ್ಷ್ಮಿಯನ್ನು ಪ್ರದಾನ ಮಾಡಲಿ'' ಎಂದು ಧ್ಯಾನ ಮಾಡಿ ಒಂದು ಲಕ್ಷ ಜಪಿಸಿ ಹಾಲಿನಿಂದ ದಶಾಂಶ ಹೋಮ ಮಾಡಬೇಕು. ''ಓಂ ನಮೋ ಭಗವತೇ ನಂದಪುತ್ರಾಯ ಆನಂದ ವಪುಷೇ ಗೋಪೀಜನ ವಲ್ಲಭಾಯ ಸ್ವಾಹಾ'' ಇಪ್ಪತ್ತೆಂಟು ಅಕ್ಷರಗಳ ಮಂತ್ರ. ಸಂಪೂರ್ಣ ಇಷ್ಟಪ್ರದಾಯಕ ಮಂತ್ರವು.

''ನಂದಪುತ್ರಾಯ ಶ್ಯಾಮಲಾಂಗಾಯ ಬಾಲವಪುಷೇ ಕೃಷ್ಣಾಯ ಗೋವಿಂದಾಯ ಗೋಪೀಜನ ವಲ್ಲಭಾಯ ಸ್ವಾಹಾ,'' ಇದು ಮೂವತ್ತೆರಡು ಅಕ್ಷರಗಳ ಮಂತ್ರ. ಇವೆರಡೂ ಮಂತ್ರಗಳಿಗೂ ನಾರದ ಋಷಿ. ಮೊದಲನೆಯದಕ್ಕೆ ಉಷ್ಣಿಕ್ ಛಂದಸ್ಸು. ಎರಡನೆಯದಕ್ಕೆ ಅನುಷ್ಟುಪ್ ಛಂದಸ್ಸು. ನಂದನಂದನ ಶ್ರೀ ಕೃಷ್ಣನೇ ದೇವತೆ. ''ಲೀಲಾದಂಡ ಗೋಪೀಜನ ಸಂಸಕ್ತ ದೋರ್ದಂಡ ಬಾಲರೂಪ ಮೇಘಶ್ಯಾಮ ಭಗವನ್ ವಿಷ್ಣೋ ಸ್ವಾಹಾ । ಇದು ಇಪ್ಪತ್ತೊಂಬತ್ತು ಅಕ್ಷರಗಳ ಮಂತ್ರ. ಇದಕ್ಕೆ ನಾರದ ಋಷಿ. ಅನುಷ್ಟುಪ್ ಛಂದಸ್ಸು. ಲೀಲಾ ದಂಡ ಹರಿಯು ದೇವತೆ.

ಸಮ್ಮೋಹಯಂಶ್ಚ ನಿಜವಾಮಕರಸ್ಥಲೀಲಾ-
ದಂಡೇನ ಗೋಪಯುವತೀಃ ಪರಸುಂದರೀಶ್ಚ॥

ದಿಶ್ಯಾನ್ನಿಜಪ್ರಿಯ ಸಖಾಂಸಗದಕ್ಷಹಸ್ತೋ ।
ದೇವಃ ಶ್ರೀಯಂ ನಿಹತ ಕಂಸ ಉರುಕ್ರಮೋ ನಃ ॥

ತನ್ನ ಎಡಗೈಯಲ್ಲಿ ಹಿಡಿದಿರುವ ಲೀಲಾದಂಡದಿಂದ ಬಗೆಬಗೆಯ ಆಟಗಳನ್ನು ತೋರಿಸಿ ಪರಮ ಸುಂದರಿಯರಾದ ಗೋಪಸ್ತ್ರೀಯರಿಗೆ ಮೋಹವನ್ನುಂಟು ಮಾಡುತ್ತಿರುವ ಹಾಗೂ ಬಲಗೈಯನ್ನು ಪ್ರಿಯ ಸ್ನೇಹಿತನ ಹೆಗಲಿನ ಮೇಲೆ ಇಟ್ಟಿರುವ ಕಂಸನಾಶಕನಾದ. ಮಹಾಪರಾಕ್ರಮಿಯಾದ, ಭಗವಂತನಾದ ಶ್ರೀ ಕೃಷ್ಣನು ನಮಗೆ ಸಂಪತ್ತನ್ನು ಕೊಡಲಿ. ಎಂಬುದಾಗಿ ಧ್ಯಾನಮಾಡಿ ಪೂಜಿಸಿದರೆ ಸ್ಥಿರ ಲಕ್ಷ್ಮೀ ಪ್ರಾಪ್ತಿಯಾಗುತ್ತದೆ. "ಗೋವಲ್ಲಭಾಯ ಸ್ವಾಹಾ" ಎಂಬುದು ಏಳು ಅಕ್ಷರಗಳ ಮಂತ್ರ. ಇದರ ಧ್ಯಾನವು ಹೀಗಿದೆ:-

ಧ್ಯೇಯೋ ಹರಿಃ ಸ ಕಪಿಲಾಗಣ ಮಧ್ಯಸಂಸ್ಥಃ ।
ತಾ ಆಹ್ವಯನ್ ದಧದದಕ್ಷಿಣದೋಷ್ಣವೇಣುಮ್ ॥
ಪಾಶಂ ಸ ಯಷ್ಟಿಮಪರತ್ರ ಪಯೋದ ನೀಲಃ ।
ಪೀತಾಂಬರೋಽಹಿರಿಪುಪಿಚ್ಛಕೃತಾವತಂಸಃ ॥

ಕಪಿಲ ಗೋವುಗಳ ಮಧ್ಯದಲ್ಲಿ ನಿಂತು ಅವುಗಳನ್ನು ಕರೆಯುತ್ತಾನೆ. ಬಲ ಕೈಯಲ್ಲಿ ಹಗ್ಗ ಮತ್ತು ದಂಡ. ಅಂಗಕಾಂತಿಯು ಮೇಘದಂತೆ, ಪೀತಾಂಬರ ಧರಿಸಿ ನವಿಲಗರಿಯ ಕಿರೀಟವನ್ನು ಧರಿಸಿದ್ದಾನೆ. ಅಂತಹ ಶಾಮಸುಂದರ ಶ್ರೀ ಹರಿಯ ಧ್ಯಾನವನ್ನು ಮಾಡಬೇಕು. ಏಳು ಲಕ್ಷ ಮಂತ್ರ ಜಪ, ಹಸುವಿನ ಹಾಲಿನಿಂದ ದಶಾಂಶ ಹೋಮ, ಸುವರ್ಣ ಪಿಂಗಲ, ಗೌರ ಪಿಂಗಲ, ರಕ್ತ ಪಿಂಗಲ, ಗುಡ ಪಿಂಗಲ, ಬಭ್ರುಪಿಂಗಲ, ಉತ್ತಮಾ, ಕಪಿಲಾ, ಚತುಷ್ಕ ಪಿಂಗಲ, ಪೀತಪಿಂಗಲಾ ಎಂಬ ೮ ಜಾತಿಯ ಗೋವುಗಳನ್ನು ಪೂಜಿಸಬೇಕು. ಹಸುವಿನ ಹಾಲಿನಿಂದ ೧೦೮ ಬಾರಿ ಆಹುತಿ ಕೊಡಬೇಕು. ಈ ಮಂತ್ರ ಜಪ ಮಾಡುವ ಸಾಧಕನು ಹದಿನೈದು ದಿವಸಗಳಲ್ಲಿ ಮುಕ್ತನಾಗುತ್ತಾನೆ.

"ಓಂ ನಮೋ ಭಗವತೇ ಶ್ರೀ ಗೋವಿಂದಾಯ" ಇದು ದ್ವಾದಶಾಕ್ಷರ ಮಂತ್ರ. ಇದಕ್ಕೆ ನಾರದ ಋಷಿ, ಗಾಯತ್ರಿ ಛಂದಸ್ಸು, ಗೋವಿಂದನೇ ದೇವತೆ, ನಾಲ್ಕು, ಐದು ಮತ್ತು ಸಂಪೂರ್ಣಮಂತ್ರದಿಂದ ಪಂಚಾಂಗನ್ಯಾಸ.

ಧ್ಯಾಯೇತ್ ಕಲ್ಪದ್ರುಮೂಲಾಶ್ರಿತ ಮಣಿವಿಲಸದ್ದಿವ್ಯ ಸಿಂಹಾಸನಸ್ಥಂ
ಮೇಘಶ್ಯಾಮಂ ಪಿಶಂಗಾಂಶುಕಮತಿ ಸುಭಗಂ ಶಂಖವೇತ್ರೇ ಕರಾಭ್ಯಾಮ್॥
ಬಿಭ್ರಾಣಂ ಗೋಸಹಸ್ರೈರ್ವೃತಮಮರಪತಿಂ ಪ್ರೌಢಹಸ್ತೈಕಕುಂಭ-
ಪ್ರಶ್ಚ್ಯೋತತ್ಸೌಧಧಾರಾಸ್ನಪಿತಮಭಿನವಾಂಭೋಜಪತ್ರಾಭನೇತ್ರಂ ॥

ದಿವ್ಯ ಕಲ್ಪವೃಕ್ಷದ ಕೆಳಗೆ ಅನೇಕ ವಿಧದ ಮಣಿಗಳಿಂದ ಸುಶೋಭಿತವಾದ ದಿವ್ಯ ಸಿಂಹಾಸನದಲ್ಲಿ ಶ್ರೀ ಕೃಷ್ಣನು ವಿರಾಜಿಸುತ್ತಿದ್ದಾನೆ. ಮೇಘ ಸಮವಾದ ಅಂಗಕಾಂತಿ ಪೀತಾಂಬರವನ್ನು ಧರಿಸಿದ್ದಾನೆ. ಶಂಖ ಮತ್ತು ಬೆತ್ತಗಳನ್ನು ಕೈಯಲ್ಲಿ ಹಿಡಿದಿದ್ದಾನೆ. ಸಾವಿರಾರು ಗೋವುಗಳು ಸುತ್ತಲೂ ನಿಂತಿವೆ. ಎಲ್ಲ ದೇವತೆಗಳಿಗೂ ಅವನೇ ರಕ್ಷಕ. ಒಬ್ಬ ಪ್ರೌಢನು ಕೈಯಲ್ಲಿ ಕಲಶವನ್ನು ಎತ್ತಿ ಹಿಡಿದು ಅಮೃತ ಧಾರೆಯಿಂದ ಭಗವಂತನಿಗೆ ಸ್ನಾನ ಮಾಡಿಸುತ್ತಿದ್ದಾನೆ. ಅರಳಿದ ತಾವರೆಯ ಕಂಗಳ ಶ್ರೀಕೃಷ್ಣನು ಬಹು ಸುಂದರನಾಗಿ ಕಾಣಿಸುತ್ತಿದ್ದಾನೆ. ಹೀಗೆ ಧ್ಯಾನಿಸಬೇಕು.

ಅನಂತರ ಹನ್ನೆರಡು ಲಕ್ಷ ಮಂತ್ರ ಜಪಿಸಿ ಅದರ ದಶಾಂಶ ಹೋಮ ಮಾಡಿ ಗೋಶಾಲೆಯಲ್ಲಿರುವ ಭಗವಂತನನ್ನು ಪೂಜಿಸಬೇಕು. ಪ್ರತಿಮೆಯಲ್ಲಿಯೂ ವೈಷ್ಣವ ಪೀಠದಲ್ಲಿರುವ ಮೂಲ ಮಂತ್ರದಿಂದ ಮೂರ್ತಿಯನ್ನು ನಿರ್ಮಿಸಿ ಅದರಲ್ಲಿ ಭಗವಂತನ ಆವಾಹನ ಮತ್ತು ಪ್ರತಿಷ್ಠೆಯನ್ನು ಮಾಡಬೇಕು, ಮೊದಲು ಗುರು ಪೂಜೆ ಅನಂತರ ಕೃಷ್ಣನ ಪೂಜೆ ಮಾಡಬೇಕು. ಭಗವಂತನ ಪಾರ್ಶ್ವಗಳಲ್ಲಿ ರುಕ್ಮಿಣೀ ಸತ್ಯಭಾಮೆಯರು. ಎದುರು ಇಂದ್ರ, ಹಿಂಭಾಗದಲ್ಲಿ ಕಾಮಧೇನು ಇವುಗಳನ್ನು ಪೂಜಿಸಿ ಕೇಸರಗಳಲ್ಲಿ ಅಂಗಪೂಜೆ ಮಾಡಬೇಕು. ಕಮಲದ ಅಷ್ಟದಲಗಳಲ್ಲಿ ಕಾಲಿಂದಿ ಮುಂತಾದ ಎಂಟು ಮಂದಿ ಪಟ್ಟ ಮಹಿಷಿಯರನ್ನು ಪೂಜಿಸಿ ಪೀಠದ ಮೂಲೆಗಳಲ್ಲಿ ಕೃಷ್ಣನ ಸೊಂಟದ ಕಿಂಕಿಣಿ (ಕಿರುಗೆಜ್ಜೆ) ಮತ್ತು ಹಗ್ಗ (ಕೃಷ್ಣನನ್ನು ಬಂಧಿಸುವ ರಜ್ಜು)ಗಳನ್ನು ಪೂಜಿಸಬೇಕು. ಹಿಂಭಾಗದಲ್ಲಿ ಕೊಳಲು, ಮುಂಭಾಗದಲ್ಲಿ ಶ್ರೀ ವತ್ಸ, ಕೌಸ್ತುಭ ವನಮಾಲೆಗಳನ್ನು ಪೂಜಿಸಬೇಕು. ಎಂಟು ದಿಕ್ಕುಗಳಲ್ಲಿ ಪಾಂಚಜನ್ಯ, ಗದಾ, ಚಕ್ರ, ವಸುದೇವ, ದೇವಕಿ, ನಂದಗೋಪ, ಯಶೋದಾ, ಗೋವುಗಳು, ಗೋಪ ಗೋಪಿಕೆಯರು ಇವರೆಲ್ಲರನ್ನು ಪೂಜಿಸಬೇಕು. ಅದರ ಹೊರಭಾಗದಲ್ಲಿ ಇಂದ್ರಾದಿ ದಿಕ್ಪಾಲಕರು ಅದಕ್ಕೂ ಹೊರಭಾಗಲ್ಲಿ ವಜ್ರಾದಿ ಆಯುಧಗಳು. ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ಕುಮುದ, ಕುಮುದಾಕ್ಷ, ಪುಂಡರೀಕಾ, ವಾಮನ, ಶಂಕುಕರ್ಣ, ಸರ್ವನೇತ್ರ, ಸುಮುಖ ಸುಪ್ರತಿಷ್ಠಿತ ಎಂಬ ದಿಗ್ಗಿಜಗಳನ್ನು ವಿಷ್ವಕ್‌ಸೇನನನ್ನು ಪೂಜಿಸಬೇಕು. ತ್ರಿಕಾಲಗಳಲ್ಲಿ ಈ ರೀತಿ ಗೋವಿಂದನ ಪೂಜೆಯನ್ನು ಮಾಡುವವನು ನಿರ್ಭಯನೂ ಚಿರಾಯುವೂ ಧನಧಾನ್ಯ ಸಂಪನ್ನನೂ ಆಗುತ್ತಾನೆ, ಗೋಕುಲನಾಥಾಯ ನಮಃ, ಇದು ಅಷ್ಟಾಕ್ಷರ ಮಹಾಮಂತ್ರ. ಇದಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು. ಶ್ರೀ ಕೃಷ್ಣನೇ ದೇವತೆ. ಇದರ ಎರಡೆರಡು ಅಕ್ಷರಗಳಿಂದ ಮತ್ತು ಸಂಪೂರ್ಣ ಮಂತ್ರದಿಂದ ಪಂಚಾಂಗನ್ಯಾಸ ಮಾಡಬೇಕು.

**ಪಂಚ ವರ್ಷ ಮತಿಲೋಲಮಂಗನೇ**
**ಧಾವಮಾನಮತಿಚಂಚಲೇಕ್ಷಣಂ ।**
**ಕಿಂಕಿಣೀವಲಯ ಹಾರನೂಪುರೈ**
**ರಂಜಿತಂ ನಮತ ಗೋಪ ಬಾಲಕಂ ॥**

ಐದು ವರ್ಷದ ವಯಸ್ಸಿನ ಚಂಚಲಗತಿಯ ಕೃಷ್ಣನು ಅಂಗಳದಲ್ಲಿ ಓಡಾಡುತ್ತ ಇದ್ದಾನೆ. ಚಂಚಲವಾದ ಕಣ್ಣುಗಳು, ಕಾಲ್ಗೆಜ್ಜೆ, ಕಡಗ, ಹಾರ, ನೂಪುರ ಮುಂತಾದ ಆಭರಣಗಳಿಗೆ ಅವನೇ ಶೋಭೆಯನ್ನುಂಟು ಮಾಡುತ್ತಿದ್ದಾನೆ. ಇಂತಹ ಪರಮ ಸುಂದರ ಗೋಪಾಲನಿಗೆ ನಮಸ್ಕಾರ ಮಾಡಿರಿ. ಇಂತಹ ಧ್ಯಾನವನ್ನು ಮಾಡಿ ಎಂಟು ಲಕ್ಷ ಮಂತ್ರ ಜಪವನ್ನು ಮಾಡಿ ಪಲಾಶ ಸಮಿಧ ಅಥವಾ ಕ್ಷೀರ ಪಾಯಸದಿಂದ ದಶಾಂಶ ಹೋಮ ಮಾಡಬೇಕು, ವೈಷ್ಣವ ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯ ಸಂಕಲ್ಪ ಮಾಡಿ ಅದರಲ್ಲಿ ಸ್ಥಿರ ಚಿತ್ತನಾದ ಮಂತ್ರ ಸಾಧಕನು ಶ್ರೀ ಕೃಷ್ಣನ ಆವಾಹನ ಮತ್ತು ಪೂಜೆಯನ್ನು ಮಾಡಬೇಕು. ನಾಲ್ಕು ದಿಕ್ಕುಗಳ ಮತ್ತು ವಿದಿಕ್ಕುಗಳ ಕೇಸರಗಳಲ್ಲಿ ಅಂಗ ಪೂಜೆ ಮಾಡಿ ಪುನಃ ದಿಕ್ಕುಗಳಲ್ಲಿ ವಾಸುದೇವ, ಬಲಭದ್ರ, ಪ್ರದ್ಯುಮ್ನ, ಅನಿರುದ್ಧರನ್ನು, ವಿದಿಕ್ಕುಗಳಲ್ಲಿ ರುಕ್ಮಿಣಿ, ಸತ್ಯಭಾಮಾ, ಲಕ್ಷಣಾ ಮತ್ತು ಜಾಂಬವತಿಯರನ್ನು ಪೂಜಿಸಬೇಕು. ಇದರ

ಹೊರಭಾಗದಲ್ಲಿ ಲೋಕಪಾಲಕರು ಮತ್ತು ಆಯುಧಪೂಜೆ ಮಾಡಿದ ಈ ಮಂತ್ರದ ಸಾಧಕನಿಗೆ ಸಿದ್ಧಿಯುಂಟಾಗುತ್ತದೆ. "ಓಂ ಶ್ರೀಂ ಕ್ಲೀಂ ಶ್ರೀ ಕೃಷ್ಣಾಯ ಗೋವಿಂದಾಯ ಗೋಪೀಜನ ವಲ್ಲಭಾಯ ಶ್ರೀಂ ಶ್ರೀಂ ಶ್ರೀ" ಇದು ಇಪ್ಪತ್ತು ಮೂರು ಅಕ್ಷರಗಳ ಮಂತ್ರ. ಋಷಿ ಛಂದಸ್ಸು ದೇವತೆಗಳು ಹಿಂದಿನಂತೆಯೇ.

ಮಾಧವೀ ಮಂಡಪಾಸೀನೌ ಗರುಡೇನಾಭಿಪಾಲಿತೌ ।
ದಿವ್ಯ ಕ್ರೀಡಾಸು ನಿರತೌ ರಾಮಕೃಷ್ಣೌ ಸ್ಮರನ್ ಜಪೇತ್ ॥

ಮಾಧವೀ ಲತಾಮಂಟಪದಲ್ಲಿ ಕುಳಿತು ದಿವ್ಯಕ್ರೀಡಾತತ್ಪರರಾದ ಗರುಡನಿಂದ ಸೇವಿತರಾದ ಬಲರಾಮಕೃಷ್ಣರನ್ನು ಸ್ಮರಿಸುತ್ತ ಮಂತ್ರವನ್ನು ಜಪಿಸಬೇಕು. ವಿಷ್ಣುಭಕ್ತರನ್ನು ಪೂಜಿಸಬೇಕು.

'ಕೃಃ' ಇದು ಏಕಾಕ್ಷರ ಕೃಷ್ಣ ಮಂತ್ರ. 'ಕೃಷ್ಣ' ಇದು ಎರಡು ಅಕ್ಷರ ಮಂತ್ರ. ಇದಕ್ಕೆ ಕ್ಲೀಂ ಜೋಡಿಸಿದಾಗ 'ಕ್ಲೀಂ ಕೃಷ್ಣ' ಎಂದು ಮೂರು ಅಕ್ಷರಗಳ ಮಂತ್ರವು ಆಗುತ್ತದೆ. 'ಕೃಷ್ಣಾಯ ನಮಃ' ಇದು ಪಂಚಾಕ್ಷರೀ ಮಂತ್ರ' 'ಕ್ಲೀಂ ಕೃಷ್ಣಾಯ ಕ್ಲೀಂ' ಇದು ಇನ್ನೊಂದು ಪಂಚಾಕ್ಷರೀ ಮಂತ್ರ ಗೋಪಾಲಾಯ ಸ್ವಾಹಾ ಇದು ಆರು ಅಕ್ಷರಗಳ ಮಂತ್ರ 'ಕೃಷ್ಣಯ ಗೋವಿಂದಾಯ' ಇದು ಏಳು ಅಕ್ಷರಗಳ ಮಂತ್ರ. ಸರ್ವಸಿದ್ಧಿಪ್ರದಾಯಕ, 'ಕ್ಲೀಂ ಹ್ರೀಂ ಕ್ಲೀಂ ಕೃಷ್ಣಾಯ ಕ್ಲೀಂ' ಇದು ಮತ್ತೊಂದು ನವಾಕ್ಷರ ಮಂತ್ರ. 'ಕೃಷ್ಣಾಯ ಗೋವಿಂದಾಯನಮಃ ಕ್ಲೀಂ 'ಕೃಷ್ಣಾಯ ಗೋವಿಂದಾಯ' ಕ್ಲೀಂ' ಇವೆರಡು ನವಾಕ್ಷರ ಮಂತ್ರಗಳು. 'ಕ್ಲೀಂ ಗ್ಲೌಂ ಕ್ಲೀಂ ಶ್ಯಾಮಲಾಂಗಾಯ ನಮಃ 'ಬಾಲ ವಪುಷೇ ಕೃಷ್ಣಾಯ ಸ್ವಾಹಾ' ಇವೆರಡು ದಶಾಕ್ಷರ ಮಂತ್ರಗಳು. 'ಬಾಲವಪುಷೇ ಕ್ಲೀಂ ಕೃಷ್ಣಾಯಸ್ವಾಹಾ' ಇದು ಹನ್ನೊಂದು ಅಕ್ಷರಗಳ ಮಂತ್ರ.

ಶ್ರೀ ವೃಂದಾವಿಪಿನ ಪ್ರತೋಲಿಷು ನಮತ್‌ಸಂಫುಲ್ಲವಲ್ಲೀತತಿ-
ಷ್ವಂತರ್ಜಾಲವಿಘಟ್ಟನೈಃ ಸುರಭಿಣಾ ವಾತೇನ ಸಂಸೇವಿತೇ ।
ಕಾಲಿಂದೀ ಪುಲಿನೇ ವಿಹಾರಿಣಮಥೋ ರಾಧೈಕಜೀವಾತುಕಂ
ವಂದೇ ನಂದ ಕಿಶೋರಮಿಂದುವದನಂ ಸ್ನಿಗ್ಧಾಂಬುದಾಡಂಬರಂ ॥

"ವೃಂದಾವನದ ಬೀದಿಗಳಲ್ಲಿ ಬಾಗಿರುವ, ಅರಳಿದ ಹೂವಿನ ಸುವಾಸನೆಯನ್ನು ಬೀರುವ ಬಳ್ಳಿಗಳಿವೆ. ಅವುಗಳ ಸುವಾಸನೆಯನ್ನು ಹೊತ್ತು ತರುವ ಗಾಳಿಯು ಬೀಸುತ್ತಿದೆ. ಆ ಗಾಳಿಯಿಂದ ಯಮುನಾ ನದಿಯ ಮಳಲು ದಿನ್ನೆಗಳೂ ಪರಿಮಳ ಮಿಳಿತವಾಗಿವೆ. ಅಲ್ಲಿ ರಾಧೆಯ ಸರ್ವಸ್ವ, ನಂದಗೋಪನಕಂದ, ಇಂದುವದನ, ನೀಲ ಮೇಘಶ್ಯಾಮ ಕೃಷ್ಣ ಕಿಶೋರ ಓಡಾಡುತ್ತಿದ್ದಾನೆ. ಅವನನ್ನು ನಮಸ್ಕರಿಸುತ್ತೇನೆ." ಈ ಮಂತ್ರಗಳಿಂದ ಪೂಜೆಯನ್ನು ಹಿಂದಿನಂತೆಯೇ ಮಾಡಬೇಕು.

ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇಃ ।
ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ॥

ಮೂವತ್ತೆರಡು ಅಕ್ಷರಗಳ ಈ ಮಂತ್ರಕ್ಕೆ ನಾರದ ಋಷಿ, ಗಾಯತ್ರೀ ಮತ್ತು ಅನುಷ್ಟುಪ ಛಂದಸ್ಸುಗಳು, ಪುತ್ರ ಪ್ರದಾತನಾದ ಶ್ರೀ ಕೃಷ್ಣನೇ ದೇವತೆ. ನಾಲ್ಕು ಪಾದಗಳು, ಮತ್ತು ಸಂಪೂರ್ಣ ಮಂತ್ರದಿಂದ ನ್ಯಾಸಮಾಡಬೇಕು.

ವಿಜಯೇನ ಯುತೋ ರಥೇ ಸ್ಥಿತಃ ದ್ರುತಮಾನೀಯ ಸಮುದ್ರಮಧ್ಯತಃ ।
ಪ್ರದದತ್ ತನಯಾನ್ ದ್ವಿಜನ್ಮನೇ ಸ್ಮರಣೀಯೋ ವಸುದೇವನಂದನಃ ॥

''ದೇವಕೀ ಪುತ್ರ, ಗೋವಿಂದ, ವಾಸುದೇವ, ಜಗದೀಶ್ವರ, ನಾನು ನಿನಗೆ ಶರಣಾಗತನಾಗಿದ್ದೀನೆ. ನನಗೆ ಪುತ್ರ ದಾನ ಮಾಡು' ಎಂದು ಮಂತ್ರಾರ್ಥ.

ಅರ್ಜುನನ ಜೊತೆಗೆ ರಥದಲ್ಲಿ ಕುಳಿತು, ಕ್ಷೀರ ಸಮುದ್ರ ಮಧ್ಯದಿಂದ ಬ್ರಾಹ್ಮಣನ ಮೃತ ಪುತ್ರರನ್ನು ಬದುಕಿಸಿ ತಂದು ಒಪ್ಪಿಸುವ ವಸುದೇವನಂದನ ಶ್ರೀ ಕೃಷ್ಣನ ಸ್ಮರಣೆಯನ್ನು ಮಾಡಬೇಕು. ಎಂದು ಧ್ಯಾನ ಶ್ಲೋಕದ ಅರ್ಥ. ಹೀಗೆ ಧ್ಯಾನಿಸಿ ಮಂತ್ರಾರ್ಥವನ್ನು ಸ್ಮರಿಸುತ್ತಾ ಒಂದು ಲಕ್ಷ ಜಪಿಸಿ, ತುಪ್ಪ ಕಲ್ಲುಸಕ್ಕರೆ, ಜೇನು ಮುಂತಾದ ಮಧುರ ಪದಾರ್ಥ ಮಿಶ್ರಿತವಾದ ಎಳ್ಳಿನಿಂದ ಹತ್ತು ಸಾವಿರ ಹೋಮ ಮಾಡಬೇಕು. ವೈಷ್ಣವ ಪೀಠದಲ್ಲಿ ಅಂಗ, ದಿಕ್ಪಾಲಕರು, ಆಯುಧಗಳಿಂದ ಸಹಿತನಾದ ಶ್ರೀ ಕೃಷ್ಣನ ಪೂಜೆ ಮಾಡಬೇಕು. ಬಂಜೆಯಾದ ಸ್ತ್ರೀಗೂ ಕೂಡ ಈ ಮಂತ್ರ ಸಿದ್ಧಿಯಿಂದ ಪುತ್ರ ಪ್ರಾಪ್ತಿಯಾಗುತ್ತದೆ. 'ಓಂ ಹ್ರೀಂ ಹಂಸಃ ಸೋಽ ಹಂ ಸ್ವಾಹಾ' ಇದು ಅಷ್ಟಾಕ್ಷರ ಮಂತ್ರ. ಇದಕ್ಕೆ ಬ್ರಹ್ಮನು ಋಷಿ, ಪರಮಗಾಯತ್ರೀ ಛಂದಸ್ಸು, ಜ್ಯೋತಿ ಸ್ವರೂಪ ಪರಬ್ರಹ್ಮನೇ ದೇವತೆ. ಪ್ರಣವ (ಓಂ) ಬೀಜ ಸ್ವಾಹಾ ಶಕ್ತಿ. 'ಸ್ವಾಹಾ ಹೃದಯಾಯ ನಮಃ, ಸೋಽಹಂ ಶಿರಸೇ ಸ್ವಾಹಾ, ಹಂಸಃ ಶಿಖಾಯ್ಯೆವೌ ಷಟ್, ಹುಲ್ಲೇಖಾ ಕವಚಾಯ ಹುಂ, ಓಂ ನೇತ್ರಾಭ್ಯಾಂ ವೌಷಟ್, ಹರಿಹರ ಅಸ್ತ್ರಾಯ ಫಟ್, ಇದು ಅಂಗನ್ಯಾಸ.

ಸ ಬ್ರಹ್ಮಾ ಸ ಶಿವೋ ವಿಪ್ರಃ ಸ ಹರಿಃ ಸ ಏವ ದೇವರಾಟ್ ।
ಸ ಸರ್ವರೂಪಃ ಸರ್ವಾಖ್ಯಃ ಸೋಽಕ್ಷರಃ ಪರಮ ಸ್ವರಾಟ್ ॥

'ಬ್ರಾಹ್ಮಣ ಶ್ರೇಷ್ಠ, ಆ ಶ್ರೀ ಕೃಷ್ಣನೇ ಬ್ರಹ್ಮ ಹರಿ, ಶಿವ, ಇಂದ್ರ ಮುಂತಾದ ಎಲ್ಲ ಶಬ್ದಗಳಿಂದ ವಾಚ್ಯನು. ಅವನು ಎಲ್ಲರಲ್ಲಿಯೂ ಬಿಂಬರೂಪಿಯಾಗಿರುವನು. ಎಲ್ಲ ನಾಮಗಳೂ ಅವನಿಗೇ ಸೇರುತ್ತವೆ. ಅವನೇ ಪ್ರಕಾಶಮಾನನಾದ ಅವಿನಾಶಿಯಾದ ಪರಮಾತ್ಮನಾಗಿದ್ದಾನೆ. ಈ ರೀತಿ ಧ್ಯಾನ ಮಾಡಿ ಎಂಟು ಲಕ್ಷ ಜಪ, ದಶಾಂಶ ಹೋಮ ಮಾಡಬೇಕು. ಪ್ರಣವಾತ್ಮಕ ಪೀಠದಲ್ಲಿ ಅಂಗ ಆವರಣ ದೇವತಾ ಸಹಿತ ಪೂಜೆ ಮಾಡಬೇಕು. ಈ ಮಂತ್ರ ಸಿದ್ಧಿಯಿಂದ 'ತತ್ತ್ವಮಸಿ' ಇತ್ಯಾದಿ ವೇದಾಂತ ವಾಕ್ಯಗಳ ಯಥಾರ್ಥ ಜ್ಞಾನ ಪ್ರಾಪ್ತಿಯಾಗುತ್ತದೆ. 'ಕ್ಲೀಂ ಹೃಷೀಕೇಶಾಯನಮಃ' ಈ ಅಷ್ಟಾಕ್ಷರ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಹೃಷೀಕೇಶನೇ ದೇವತೆ, ಸಮಸ್ತ ಮನೋರಥ ಪ್ರಾಪ್ತಿಗೋಸ್ಕರ ಇದನ್ನು ವಿನಿಯೋಗಿಸಬೇಕು. 'ಕ್ಲೀಂ' ಬೀಜ, 'ಆಯ' ಶಕ್ತಿ. ಬೀಜ ಮಂತ್ರದಿಂದಲೇ ಷಡಂಗನ್ಯಾಸ. ಒಂದ ಲಕ್ಷ ಜಪ, ತುಪ್ಪದಿಂದ ದಶಾಂಶ ಹೋಮ, ಸಂಮೋಹನೀ ಹೂವುಗಳಿಂದ ತರ್ಪಣ. ಇದರಿಂದ ಸಮಸ್ತ ಇಷ್ಟಾರ್ಥ ಸಿದ್ಧಿಯಾಗುತ್ತದೆ. 'ಶ್ರೀಂ ಶ್ರೀಧರಾಯ ತ್ರೈಲೋಕ್ಯ ಮೋಹನಾಯ ನಮಃ' ಈ ಹದಿಮೂರು ಅಕ್ಷರದ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಶ್ರೀಧರ ದೇವತೆ 'ಶ್ರೀಂ ಬೀಜ, ಆಯಶಕ್ತಿ, ಬೀಜದಿಂದಲೇ ಷಡಂಗನ್ಯಾಸ. ಒಂದು ಲಕ್ಷ ಜಪ. ತುಪ್ಪದಿಂದ ದಶಾಂಶ ಹೋಮ. ಸುವಾಸನೆಯಿಂದ ಕೂಡಿದ ಶ್ವೇತ ಪುಷ್ಪಗಳಿಂದ ಪೂಜಾ ಹೋಮ ಮಾಡಬೇಕು. ಪರಮಾತ್ಮನ ಸಾರೂಪ್ಯ ಪ್ರಾಪ್ತಿಯೇ ಫಲ. 'ಅಚ್ಯುತಾನಂತ ಗೋವಿಂದಾಯ ನಮಃ' ಇದು ಒಂದು ಮಂತ್ರ,

'ಅಚ್ಯುತಾಯ ನಮಃ', 'ಅನಂತಾಯನಮಃ', 'ಗೋವಿಂದಾಯನಮಃ', ಇವು ಮೂರು ಮಂತ್ರಗಳು. ಮೊದಲನೆಯದಕ್ಕೆ ಶೌನಕ ಋಷಿ, ವಿರಾಟ್ ಛಂದಸ್ಸು, ಉಳಿದ ಮೂರು ಮಂತ್ರಗಳಿಗೆ ಪರಾಶರ, ವ್ಯಾಸ, ನಾರದರು ಕ್ರಮವಾಗಿ ಋಷಿಗಳು, ವಿರಾಟ್ ಛಂದಸ್ಸು, ಪರಬ್ರಹ್ಮರೂಪಿಯಾದ ಶ್ರೀ ಕೃಷ್ಣನೇ ದೇವತೆ. ಹಿಂದಿನಂತೆಯೇ ಬೀಜ ಮತ್ತು ಶಕ್ತಿ.

ಶಂಖ ಚಕ್ರಧರಂ ದೇವಂ ಚತುರ್ಬಾಹುಂ ಕಿರೀಟಿನಂ ।
ಸರ್ವೈರಪ್ಯಾಯುಧೈರ್ಯುಕ್ತಂ ಗರುಡೋಪರಿ ಸಂಸ್ಥಿತಂ ॥

ಸನಕಾದಿ ಮುನೀಂದ್ರೈಸ್ತು ಸರ್ವದೇವೈರುಪಾಸಿತಂ ।
ಶ್ರೀ ಭೂಮಿ ಸಹಿತಂ ದೇವಮುದಯಾದಿತ್ಯಸನ್ನಿಭಂ ।
ಪ್ರಾತರುದ್ಯತ್ ಸಹಸ್ರಾಂಶುಮಂಡಲೋಪಮಕುಂಡಲಂ ॥

ಸರ್ವಲೋಕಸ್ಯ ರಕ್ಷಾರ್ಥಮನಂತಂ ನಿತ್ಯಮೇವ ಹಿ ।
ಅಭಯಂ ವರದಂ ದೇವಂ ಪ್ರಯಚ್ಛಂತಂ ಮುದಾನ್ವಿತಂ ॥

'ಭಗವಂತನಾದ ಅಚ್ಯುತನು ಶಂಖ ಚಕ್ರಗಳನ್ನು ಧರಿಸಿರುತ್ತಾನೆ. ಚತುರ್ಬಾಹು, ಕಿರೀಟ ಧಾರಿ, ಪ್ರಕಾಶಮಾನ, ಗರುಡಾರೂಢ, ಸನಕಾದಿ ಮುನೀಶ್ವರರಿಂದ ಉಪಾಸಿತ ನಾಗಿದ್ದಾನೆ. ಎಡಬಲಗಳಲ್ಲಿ ಶ್ರೀ ದೇವಿ ಭೂದೇವಿಯರಿದ್ದಾರೆ. ಉದಯಿಸುವ ಸೂರ್ಯಸಮಾನವಾದ ತೇಜಸ್ಸು, ಕಿವಿಗಳ ಕುಂಡಲಗಳೆರಡು ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾಗಿವೆ. ಪರಮಾನಂದ ಪರಿಪೂರ್ಣ, ವರದಾಯಕ, ಸಮಸ್ತ ಜಗತ್ಪಾಲಕ, ಅಭಯಪ್ರದ ಅನಂತ' ಎಂದು ಧ್ಯಾನಿಸಿ ಏಕಾಗ್ರಚಿತ್ತನಾಗಿ ಮಂತ್ರ ಜಪ ಮಾಡಬೇಕು. ವೈಷ್ಣವ ಪೀಠದಲ್ಲಿ ಪ್ರಥಮಾವರಣದಲ್ಲಿ ಅಂಗಪೂಜಾ, ದ್ವಿತೀಯಾ ವರಣದಲ್ಲಿ ಚಕ್ರಶಂಖ, ಗದಾ, ಖಡ್ಗ, ಮುಸಲ, ಧನುಸ್ಸು, ಪಾಶ, ಅಂಕುಶಗಳ ಪೂಜೆ, ಮೂರನೆಯ ಆವರಣದಲ್ಲಿ, ಸನಕಾದಿ ನಾಲ್ಕು ಮಂದಿ ಸಿದ್ಧ ಪುರುಷರು, ಪರಾಶರ, ವ್ಯಾಸ, ನಾರದ, ಶೌನಕ, ಇವರ ಪೂಜೆ, ನಾಲ್ಕನೆಯ ಆವರಣದಲ್ಲಿ ದಿಕ್ಪಾಲಕರ ಪೂಜೆ, ಈ ಮಂತ್ರಗಳ ಒಂದು ಲಕ್ಷ ಜಪ,ತುಪ್ಪದಿಂದ ದಶಾಂಶ ಹೋಮ, ಈ ಮಂತ್ರಗಳ ಸಿದ್ಧಿಯಾದರೆ ಮನೋಭೀಷ್ಟ ಸಿದ್ಧಿಯಾಗುತ್ತದೆ. ಬೇಲದ ಮರದ ಕೆಳಗೆ ಶ್ರೀ ಮಹಾವಿಷ್ಣುವಿನ ಸ್ಮರಣೆ ಮಾಡುತ್ತಾ ರೋಗಿಯನ್ನು ಸ್ಪರ್ಶಿಸಿ ಹತ್ತುಸಾವಿರ ಬಾರಿ ಈ ಮಂತ್ರ ಜಪಿಸಿದರೆ ರೋಗಿಯು ರೋಗ ಮುಕ್ತನಾಗುತ್ತಾನೆ.

## ವೇದವ್ಯಾಸ ಮಂತ್ರ

'ವ್ಯಾಂ ವೇದ ವ್ಯಾಸಾಯ ನಮಃ' ಇದು ವೇದವ್ಯಾಸಾಷ್ಟಾಕ್ಷರಮಂತ್ರ, ಇದಕ್ಕೆ ಬ್ರಹ್ಮನು ಋಷಿ, ಅನುಷ್ಟುಪ್ ಛಂದಸ್ಸು, ಸತ್ಯವತೀನಂದನ ವ್ಯಾಸನೇ ದೇವತೆ, ವ್ಯಾಂ ಬೀಜ, ನಮಃ ಶಕ್ತಿ, ವ್ಯಾಂ ವ್ಯೀಂ ವ್ಯೂಂ, ವ್ಯೈಂ, ವ್ಯೌಂ, ವ್ಯಃ, ಇವುಗಳಿಂದ ಅಂಗನ್ಯಾಸ.

ವ್ಯಾಖ್ಯಾಮುದ್ರಿಕಯಾ ಲಸತ್ಕರತಲಂ ಸದ್ಯೋಗಪೀಠಸ್ಥಿತಂ,
ವಾಮೇ ಜಾನುತಲೇ ದಧಾನಮಪರಂ ಹಸ್ತಂ ಸುವಿದ್ಯಾನಿಧಿಂ ।

ವಿಪ್ರವ್ರಾತವೃತಂ ಪ್ರಸನ್ನಮನಸಂ ಪಾಥೋರುಹಾಂಗದ್ಯುತಿಂ
ಪಾರಾಶರ್ಯ ಮತೀವ ಪುಣ್ಯಚರಿತಂ ವ್ಯಾಸಂ ಸ್ಮರೇತ್ ಸಿದ್ಧಯೇ ॥

ಬಲಗೈಯಲ್ಲಿ ವ್ಯಾಖ್ಯಾನ ಮುದ್ರೆಯಿದೆ, ಎಡಗೈಯನ್ನು ಎಡಮೊಣಕಾಲಿನ ಮೇಲೆ ಇಟ್ಟುಕೊಂಡು, ಯೋಗಪೀಠದಲ್ಲಿ ವಿರಾಜಮಾನರಾದ ಉತ್ತಮ ವಿದ್ಯಾನಿಧಿಯಾದ. ಬ್ರಾಹ್ಮಣ ಸಮೂಹದಿಂದ ಸುತ್ತುವರಿಯಲ್ಪಟ್ಟ, ಪ್ರಸನ್ನ ಚಿತ್ತರಾದ ನೀಲ ಕಮಲದಂತಹ ಅಂಗಕಾಂತಿಯುಳ್ಳ, ಪುಣ್ಯಚರಿತರಾದ, ಪರಾಶರ ಮುನಿಗಳಿಂದ ಆವಿರ್ಭೂತರಾದ ಶ್ರೀವೇದವ್ಯಾಸರನ್ನು ಸಿದ್ಧಿಗಾಗಿ ಸ್ಮರಿಸಬೇಕು. ಹೀಗೆ ಧ್ಯಾನಮಾಡಿ ಎಂಟು ಸಾವಿರ ಮಂತ್ರ ಜಪ ಮಾಡಿ, ಪಾಯಸದಿಂದ ದಶಾಂಶ ಹೋಮ ಮಾಡಿ, ಹಿಂದೆ ಹೇಳಿದಂತೆ ಪೀಠ ಪೂಜೆ ಮಾಡಬೇಕು. ಅಂಗಪೂಜೆಯನ್ನು ಮಾಡಿ, ಅನಂತರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಪೈಲ, ವೈಶಂಪಾಯನ, ಜೈಮಿನಿ ಮತ್ತು ಸುಮಂತುಗಳನ್ನು, ಈಶಾನಾದಿ ಕೋಣಗಳಲ್ಲಿ ಕ್ರಮವಾಗಿ ಶುಕ, ರೋಮ, ರೋಮಹರ್ಷಣ, ಉಗ್ರಶ್ರವಸ್ಸು, ಮತ್ತಿತರ ಋಷಿಗಳು ಇವರನ್ನು, ಅದರ ಹೊರಗಿನ ಆವರಣದಲ್ಲಿ ಇಂದ್ರಾದಿ ದಿಕ್ಪಾಲಕರನ್ನೂ ವಜ್ರಾದಿ ಆಯುಧಗಳನ್ನೂ ಪೂಜಿಸಬೇಕು. ಮಂತ್ರಸಿದ್ಧಿಯನ್ನು ಪಡೆದವನು ಕವಿತಾಶಕ್ತಿ, ವ್ಯಾಖ್ಯಾಶಕ್ತಿ, ಉತ್ತಮ ಸಂತಾನ. ಕೀರ್ತಿಗಳನ್ನು ಹೊಂದುತ್ತಾನೆ.

*ನಾರದ ಮಹಾಪುರಾಣದಲ್ಲಿ ಎಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಯುಗಲ ಶರಣಾಗತಿ ಮಂತ್ರ, ಯುಗಲಸಹಸ್ರನಾಮ ಸ್ತೋತ್ರ

**ಅಧ್ಯಾಯ - ೭೩**

**ಸನತ್ಕುಮಾರ:-** ನಾರದರೇ, ಹಿಂದಿನ ಜನ್ಮದಲ್ಲಿ ನೀವು ಸಾಕ್ಷಾತ್ ಶಂಕರನಿಂದ ಯುಗಲಶರಣಾಗತಿ ಮಂತ್ರದ ಉಪದೇಶವನ್ನು ಪಡೆದಿದ್ದೀರಿ, ಈಗ ಅದು ನಿಮಗೆ ನೆನಪಿಗೆ ಬರುತ್ತಿದೆಯೇ? ನೀವು ಮರೆತಿದ್ದರೆ ಮತ್ತೆ ನೆನಪಿಸಿಕೊಳ್ಳಿರಿ. ಅದು ಈಗ ನಿಮಗೆ ನೆನಪಿಗೆ ಬರಬಹುದು. ಸ್ಮರಿಸಿರಿ.

**ಸೂತರು:-** ಬ್ರಾಹ್ಮಣರೇ! ಪರಮಜ್ಞಾನಿಗಳಾದ ಸನತ್ಕುಮಾರರು ಹೀಗೆ ಹೇಳಿದ ಕೂಡಲೇ ನಾರದರು ಧ್ಯಾನಮಗ್ನರಾದರು. ತಮ್ಮ ಹಿಂದಿನ ಜನ್ಮದ ಚರಿತ್ರೆಯನ್ನು ತಿಳಿದರು. ಮುಖದಿಂದ ಒಳಗಿನ ಪ್ರಸನ್ನತೆಯನ್ನು ಸೂಚಿಸುತ್ತ ಅವರು ಹೇಳಿದರು. 'ಪೂಜ್ಯರೇ! ಪೂರ್ವಕಲ್ಪದ ವೃತ್ತಾಂತವು ನನ್ನ ಸ್ಮರಣೆಗೆ ಬಂದಿತು. ಆದರೆ ಯುಗಲ ಮಂತ್ರದ ಪ್ರಾಪ್ತಿಯು ಹೇಗೆ ಆಯಿತು' ಎಂಬ ವಿಷಯವು ನೆನಪಿಗೆ ಬರುತ್ತಿಲ್ಲ. ಮಹಾತ್ಮರಾದ ನಾರದರ ಮಾತನ್ನು ಕೇಳಿ ಭಗವಾನ್ ಸನತ್ಕುಮಾರರು ಹಿಂದಿನ ಎಲ್ಲ ವಿಷಯವನ್ನು ಯಥಾವತ್ತಾಗಿ ಹೇಳಲಾರಂಭಿಸಿದರು.

**ಸನತ್ಕುಮಾರರು:-** ನಾರದರೇ ಕೇಳಿರಿ - ಈ ಸಾರಸ್ವತ ಕಲ್ಪಕ್ಕಿಂತ ಇಪ್ಪತ್ತೈದನೇಯ ಹಿಂದಿನ ಕಲ್ಪದ ವಿಷಯವಿದು. ಆಗ ನೀವು ಕಶ್ಯಪರ ಮಗನಾಗಿ ಹುಟ್ಟಿದ್ದಿರಿ. ಆಗಲೂ ನಿಮ್ಮ ಹೆಸರು ನಾರದ ಎಂದೇ ಇದ್ದಿತು. ಒಂದು ದಿನ ನೀವು ಶ್ರೀ ಕೃಷ್ಣನ ತತ್ತ್ವವನ್ನು ತಿಳಿಯಲು ಕೈಲಾಸದಲ್ಲಿ ಪರಮೇಶ್ವರನನ್ನು ಭೆಟ್ಟಿಯಾಗಿದ್ದಿರಿ. ಮಹಾದೇವರು ಯಾವ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿದ್ದರೊ, ಅದರ ವಿಷಯವನ್ನೆಲ್ಲ ಯಥಾವತ್ತಾಗಿ ನಾರದರಿಗೆ ತಿಳಿಸಿದರು. ಆಗ ನೀವು ಶ್ರೀ ಹರಿಯ ನಿತ್ಯ ಲೀಲೆಯನ್ನು ನೋಡುವ ಉಪಾಯವನ್ನು ಹೇಳಬೇಕೆಂದು ಪುನಃ ಪ್ರಾರ್ಥಿಸಿದಿರಿ. ಆಗ ಸದಾಶಿವನು ಈ ರೀತಿ ಹೇಳಿದನು.

"ಗೋಪೀಜನವಲ್ಲಭ ಚರಣಾನ್ ಶರಣಂ ಪ್ರಪದ್ಯೇ" - ಗೋಪೀಜನವಲ್ಲಭ ಶ್ರೀ ರಾಧಾಕೃಷ್ಣರ ಪಾದಗಳನ್ನು ಶರಣು ಹೊಂದುತ್ತೇನೆ ಎಂಬ ಒಂದು ಮಂತ್ರವಿದೆ. ಈ ಮಂತ್ರಕ್ಕೆ ಸುರಭಿ ಋಷಿ, ಗಾಯತ್ರೀ, ಛಂದಸ್ಸು. ಗೋವಿಂದವಲ್ಲಭ ಶ್ರೀ ಕೃಷ್ಣನೇ ದೇವತೆ. 'ಪ್ರಪನ್ನೋಽಸ್ಮಿ' ಶರಣಾಗತನಾಗಿದ್ದೇನೆ ಎಂದು ಹೇಳಿ ಭಗವಂತನ ಶರಣಾಗತಿರೂಪವಾದ ಭಕ್ತಿಗಾಗಿ ಈ ಮಂತ್ರದ ವಿನಿಯೋಗವೆಂದು ತಿಳಿಯಬೇಕು. ಈ ಮಂತ್ರದ ಸಿದ್ಧವಾದ ಆದಿಯ ಶೋಧನವಾಗಿಲ್ಲ. ಆದುದರಿಂದ ನ್ಯಾಸ ಮುಂತಾದವುಗಳ ಕಲ್ಪನೆ ಮಾಡಲು ಸಾಧ್ಯವಿಲ್ಲ. ಈ ಮಂತ್ರದ ಚಿಂತನ ಮಾತ್ರದಿಂದ ಪರಮಾತ್ಮನ ಲೀಲಾವಿಭೂತಿಯ ಪ್ರಕಾಶವಾಗುತ್ತದೆ. ಪರಮಭಕ್ತಿಯಿಂದ ಗುರುವಿನಿಂದ ಈ ಮಂತ್ರವನ್ನು ಸ್ವೀಕರಿಸಿ ಗುರುವಿನ ಕೃಪೆಯು ತನ್ನಲ್ಲಿ ಪೂರ್ಣವಾಗಿ ಇದೆಯೆಂದು ತಿಳಿದು ಸ್ವಧರ್ಮಪಾಲನ ಮಾಡುತ್ತ ಸೇವೆಯಿಂದ ಗುರುವನ್ನು ಸಂತೋಷಪಡಿಸಬೇಕು. ಭಯಪರಿಹಾರಕವಾದ ಸಾಧು ಪುರುಷರ ಧರ್ಮಾಚರಣೆಯನ್ನು ಕಲಿಯಬೇಕು. ಇಹಪರಲೋಕಗಳ ಚಿಂತೆಯನ್ನು ಬಿಟ್ಟು ಆ ಧರ್ಮಗಳನ್ನು ತನ್ನ ಆಚರಣೆಗೆ ಒಳಪಡಿಸಿ ಜೀವಿಸಬೇಕು. "ಈ ಲೋಕದ ಸುಖ, ಭೋಗ ಮತ್ತು ಆಯುಸ್ಸು ಪೂರ್ವ ಕರ್ಮಗಳ ಅಧೀನವಾಗಿವೆ. ಕರ್ಮಾನುಸಾರವಾಗಿ ಅವುಗಳ ವ್ಯವಸ್ಥೆಯನ್ನು ಭಗವಾನ್ ಶ್ರೀ ಕೃಷ್ಣನು ಮಾಡುವನು" ಇಂಥ ದೃಢನಿಶ್ಚಯವನ್ನು ಮಾಡಿ ತನ್ನ ಮನಸ್ಸು ಬುದ್ಧಿಯ ಮೂಲಕ ಯಾವಾಗಲೂ ನಿತ್ಯ ಲೀಲಾಮಯನಾದ ಶ್ರೀಕೃಷ್ಣನನ್ನು ಚಿಂತಿಸಬೇಕು. ದಿವ್ಯವಾದ ಅರ್ಚಾ ವಿಗ್ರಹಗಳ ರೂಪದಲ್ಲಿಯೂ ಭಗವಂತನ ಅವತಾರವಾಗುತ್ತದೆ. ಆದ್ದರಿಂದ ಆ ವಿಗ್ರಹಗಳ ಸೇವೆಯ ಮೂಲಕವಾಗಿ ಯಾವಾಗಲೂ ಶ್ರೀ ಕೃಷ್ಣನ ಆರಾಧೆಯನ್ನು ಮಾಡಬೇಕು. ಭಗವಂತನ ರಕ್ಷಣೆಯನ್ನು ಅಪೇಕ್ಷಿಸುವ ಭಕ್ತರು ಅನನ್ಯ ಭಾವದಿಂದ ಭಗವಂತನ ಚಿಂತೆಯನ್ನು ಮಾಡಬೇಕು. ಜ್ಞಾನಿಗಳು ಭಗವಂತನೇ ತಮಗೆ ರಕ್ಷಕನೆಂದು ತಿಳಿದು ದೇಹ - ಗೇಹ ಮುಂತಾದ ವಸ್ತುಗಳಲ್ಲಿ ಉದಾಸೀನರಾಗಿರಬೇಕು. ಗುರು, ಸಾಧು, ಸಜ್ಜನರು, ಶಿವ, ವಿಷ್ಣು, ವೇದ ಮುಂತಾದವುಗಳ ನಿಂದೆಯನ್ನು ಮಾಡಬಾರದು. ದೇವರ ಹೆಸರನ್ನು ಹೇಳುತ್ತ ಪಾಪ ಮಾಡುವುದು, ದೇವರ ನಾಮ ಮಾಹಾತ್ಮ್ಯವನ್ನು ಅರ್ಥವಾದ ಅಂದರೆ ಬರೀ ಹೊಗಳಿಕೆ ಎಂದು ತಿಳಿಯುವುದು, ಭಗವನ್ನಾಮ ಸಂಕೀರ್ತನೆಯ ಸಮಯದಲ್ಲಿ ನಾಸ್ತಿಕ್ಯವಾದವನ್ನು ಅವಲಂಬಿಸಿ ಅವಿಶ್ವಾಸವನ್ನು ಹರಡುವುದು, ಸೋಮಾರಿ ಮತ್ತು ನಾಸ್ತಿಕನಾದವನಿಗೆ ಭಗವಂತನ ನಾಮವನ್ನು ಉಪದೇಶಿಸುವದು, ಭಗವಂತನ ನಾಮವನ್ನು ಮರೆತು ಬಿಡುವುದು ಅಥವಾ ಭಗವನ್ನಾಮದಲ್ಲಿ ಆದರ, ಗೌರವಗಳು ಇಲ್ಲದಿರುವುದು ಇವು ಹತ್ತು ಬಹಳ ಭಯಂಕರವಾದ ದೋಷಗಳು. ಮಗು ನಾರದನೇ, ಈ ದೋಷಗಳನ್ನು ತ್ಯಜಿಸಬೇಕು. ನಾನು ಪರಮಾತ್ಮನನ್ನು ಶರಣು ಹೊಂದಿದ್ದೇನೆ. ಎಂಬ ಭಾವದಿಂದ ಹೃದಯದಲ್ಲಿರುವ ಶ್ರೀಹರಿಯನ್ನು ಚಿಂತಿಸುತ್ತಾ ಅವನು ಯಾವಾಗಲೂ ನನ್ನನ್ನು ಕಾಪಾಡುತ್ತಾನೆ, ಮುಂದೆಯೂ ನನ್ನನ್ನು ಕಾಪಾಡುವನು, ಎಂಬ ವಿಶ್ವಾಸವನ್ನು ಇಟ್ಟುಕೊಳ್ಳಬೇಕು. ದೇವರನ್ನು ಈ ರೀತಿ ಪ್ರಾರ್ಥಿಸಬೇಕು. 'ರಾಧಾನಾಥ, ಸ್ವಾಮಿ, ಮಾತು' ಮನಸ್ಸು ಮತ್ತು ಕಾರ್ಯಗಳೆಲ್ಲವೂ ನಿನ್ನವು' 'ರಾಧೇ, ಶ್ರೀಕೃಷ್ಣ ಪ್ರೇಯಸಿ, ನಾನು ನಿನ್ನ ದಾಸನು, ನೀವಿಬ್ಬರೂ ನನಗೆ ಆಶ್ರಯರಾಗಿದ್ದೀರಿ.'

'ಶ್ರೀ ಹರಿಯೆ ತಂದೆ ತಾಯಿ, ಅವನ ಭಕ್ತರು, ಸ್ನೇಹಿತರು, ಪ್ರೇಯಸಿಯರು ಎಲ್ಲರೂ ಯಾವಾಗಲೂ ಇದ್ದಾರೆ' ಎಂದು ಜ್ಞಾನಿಗಳಾದವರು ಭಾವಿಸಬೇಕು. ಅಸುರ ಸಂಹಾರದ ಲೀಲಾಕಾರ್ಯವು ಮಾತ್ರ ಯಾವಾಗಲೂ ಆಗುತ್ತಾ ಇರುವುದಿಲ್ಲ. ಶ್ರೀ ಕೃಷ್ಣನಿಗೆ ಶ್ರೀದಾಮ ಮುಂತಾದ ಹನ್ನೆರಡು ಮಂದಿ ಸ್ನೇಹಿತರಿದ್ದಾರೆ. ರಾಧೆಗೆ ಸುಶೀಲಾ ಮುಂತಾದ ಮೂವತ್ತು

ಎರಡು ಮಂದಿ ಗೆಳತಿಯರಿದ್ದಾರೆ. ವತ್ಸ ನಾರದ, ಸಾಧಕನು ತನ್ನನ್ನು ಹೀನನೆಂದು ತಿಳಿಯಬಾರದು. ತಾನು ಶ್ರೀ ಹರಿಯ ಸೇವೆಗೆ ಅನುರೂಪನಾದ ಸೇವಕನೆಂದು ತಿಳಿಯಬೇಕು. ಶ್ರೀಕೃಷ್ಣನಸೇವೆಯಿಂದಉಂಟಾಗುವಆನಂದವೇತನಗೆಅತ್ಯಂತಉಚಿತವಾದಪ್ರಸಾದವೆಂದು ಭಾವಿಸಬೇಕು. ಬೆಳಿಗ್ಗೆ ಬ್ರಾಹ್ಮಮುಹೂರ್ತದಿಂದ ಆರಂಭಿಸಿ ಅರ್ಧರಾತ್ರಿಯವರೆಗೆ, ಮಲಗುವವರೆಗೆ. ಆಯಾಸಮಯಕ್ಕೆ ಅನುಗುಣವಾಗಿಶ್ಯಾಮಸುಂದರಶ್ರೀಕೃಷ್ಣ ಮತ್ತು ಅವನ ಪರಮ ಪ್ರೇಯಸಿ ರಾಧೆಯರ ಆಯಾ ಸಮಯಕ್ಕೆ ಯೋಗ್ಯವಾದ ಸೇವೆಯನ್ನು ಮಾಡಬೇಕು. ಪ್ರತಿದಿನವೂ ಏಕಾಗ್ರಚಿತ್ತನಾಗಿ ಯುಗಲ ಸಹಸ್ರನಾಮ ಸ್ತೋತ್ರವನ್ನು ಪಠಿಸಬೇಕು. ಮುನೀಶ್ವರ! ಶರಣಾಗತರಾದ ಭಕ್ತರಿಗೆ ಇದು ಅತ್ಯುತ್ತಮವಾದ ಸಾಧನವು. ನಾನು ನಿನ್ನೆದುರು ಈರಹಸ್ಯವಾದತತ್ತ್ವವನ್ನು ಪ್ರಕಾಶಗೊಳಿಸಿದ್ದೇನೆ.

**ಸನತ್ಕುಮಾರರು:-** ನಾರದ! ಆಗ ನೀನು ಪುನಃ ಭಗವಂತನಾದ ಸದಾಶಿವನನ್ನು ಕುರಿತು ಕೇಳಿದೆ. 'ಪ್ರಭುವೇ! ಯುಗಲ ಸಹಸ್ರನಾಮವೆಂದರೆ ಯಾವುದು!' 'ಮಹಾಮುನಿಯೇ ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ಪರಮೇಶ್ವರನು ಯುಗಲ ಸಹಸ್ರನಾಮವನ್ನು ಹೇಳಿದ್ದಾನೆ. ಈಗ ನೀನು ನನ್ನಿಂದ ಅದನ್ನು ಕೇಳು.

'ರಮಣೀಯವಾದ ವೃಂದಾವನದಲ್ಲಿಯ ಯಮುನಾ ನದಿಯ ದಡದಲ್ಲಿ ಒಂದು ಸುಂದರವಾದ ದಿವ್ಯವಾದ ಕಲ್ಪವೃಕ್ಷದ ಮೂಲದಲ್ಲಿ ಶ್ರೀ ಕೃಷ್ಣ - ರಾಧೆಯರು ಮರಕ್ಕೆ ಒರಗಿ ನಿಂತಿದ್ದಾರೆ.' ಎಂದು ಧ್ಯಾನಿಸುತ್ತ ಈ ಯುಗಲ ಸಹಸ್ರನಾಮದ ಪಾರಾಯಣ ಮಾಡಬೇಕು.

ಈ ಸಹಸ್ರನಾಮ ಯುಗಲಸ್ತೋತ್ರದಲ್ಲಿ ಐದು ನೂರು ಶ್ರೀ ಕೃಷ್ಣನ ನಾಮಗಳನ್ನು ಐದು ನೂರು ರಾಧೆಯ ನಾಮಗಳನ್ನೂ ಹೇಳಿ ರಾಧಾಕೃಷ್ಣರ ಮಹಿಮೆಯನ್ನು ಪಾಡಲಾಗಿದೆ. ಇದರಲ್ಲಿ ಮೊದಲನೆಯದಾದ ಶ್ರೀ ಕೃಷ್ಣನ ನಾಮಸ್ತೋತ್ರ ದಲ್ಲಿಯಂತೂ ಕೃಷ್ಣಾವತಾರದ ಮೊದಲಿನಿಂದ ಕೊನೆಯವರೆಗಿನ ಸಂಪೂರ್ಣ ಚರಿತ್ರೆಯನ್ನೇ ಸಂಕ್ಷೇಪವಾಗಿ ನಿರೂಪಿಸ ಲಾಗಿದೆ. ಇದು ಅತ್ಯಂತ ಸರಳ ಸಂಸ್ಕೃತ ಭಾಷೆಯಲ್ಲಿ ಇದ್ದುದರಿಂದ ಲಕ್ಷವಿಟ್ಟು ಓದಿದ ಮಾತ್ರಕ್ಕೆ ಕೃಷ್ಣನ ಚರಿತ್ರೆಯನ್ನು ಬಲ್ಲ ಎಂಥವರಿಗೂ ಅರ್ಥವಾಗುವಂತಿದೆ. ಆದುದರಿಂದ ಈ ಕೃಷ್ಣನಾಮಸ್ತೋತ್ರದ್ದಾಗಲಿ ಮತ್ತು ಮುಂದಿನ ರಾಧಾನಾಮ ಸ್ತುತಿಯದಾಗಲಿ ಕನ್ನಡ ಅರ್ಥವನ್ನು ಕೊಟ್ಟಿಲ್ಲ. ಆದರೆ ರಾಧಾಕೃಷ್ಣಯುಗಲ ಸಹಸ್ರನಾಮ ಸ್ತೋತ್ರವು ಅತ್ಯಂತ ಪುಣ್ಯಪ್ರದವೂ ಫಲಪ್ರದವೂ ಆದುದರಿಂದ ಜನರಿಗೆ ಪಾರಾಯಣ ಪಠಣ ಮುಂತಾದುದಕ್ಕೆ ಅನುಕೂಲವಾಗಲಿ ಎಂದು ಆ ಎರಡೂ ಸ್ತುತಿಗಳಿಂದ ಒಡಗೂಡಿದ ಈ ಯುಗಲನಾಮ ಸ್ತೋತ್ರವನ್ನು ಇಡಿ ಕಿಡಿಯಾಗಿಯೇ ಇಲ್ಲಿ ಕೊಡಲಾಗಿದೆ. ಆಸ್ತಿಕರು ಇದನ್ನು ಪ್ರತಿದಿನವೂ ತ್ರಿಕಾಲದಲ್ಲಿ ಪಠಿಸಿ ಶ್ರೀ ರಾಧಾಕೃಷ್ಣರ ಪರಮಾನುಗ್ರಹಕ್ಕೆ ಪಾತ್ರರಾಗಬೇಕು.

## ರಾಧಾಕೃಷ್ಣ ಯುಗಲ ಸಹಸ್ರನಾಮ ಸ್ತೋತ್ರ

**ದೇವಕೀನಂದನಃ ಶೌರಿರ್ವಾಸುದೇವೋ ಬಲಾನುಜಃ ।**
**ಗದಾಗ್ರಜಃ ಕಂಸಹಂತಾ, ಕಂಸಸೇವಕ ಮೋಹನಃ ॥೧॥**

**ಭಿನ್ನಾರ್ಗಲೋ ಭಿನ್ನಲೋಹಃ ಪಿತೃವಾಹ್ಯಃ ಪಿತೃಸ್ತುತಃ ।**
**ಮಾತೃಸ್ತುತಃ ಶಿವಧ್ಯೇಯೋ ಯಮುನಾ ಜಲ ಭೇದನಃ ॥೨॥**

ವ್ರಜವಾಸೀ ವ್ರಜಾನಂದೀ ನಂದಬಾಲೋ ದಯಾನಿಧಿಃ ।
ಲೀಲಾಬಾಲಃ ಪದ್ಮನೇತ್ರೋ ಗೋಕುಲೋತ್ಸವ ಈಶ್ವರಃ ॥ ೩ ॥

ಗೋಪಿಕಾನಂದನಃ, ಕೃಷ್ಣೋ, ಗೋಪಾನಂದಃ, ಸತಾಂ ಗತಿಃ ।
ಬಕಪ್ರಾಣ ಹರೋ, ವಿಷ್ಣುರ್ಭಕ್ತಿ ಮುಕ್ತಿ ಪ್ರದೋ, ಹರಿಃ ॥ ೪ ॥

ಬಲೀ ಬಲೀಶಯ ಶಯಃ, ಶ್ಯಾಮಲಃ ಸರ್ವ ಸುಂದರಃ
ಪದ್ಮನಾಭೋ, ಹೃಷೀಕೇಶಃ, ಕ್ರೀಡಾ ಮನುಜ ಬಾಲಕಃ ॥ ೫ ॥

ಲೀಲಾ ವಿಧ್ವಸ್ತ ಶಕಟೋ ವೇದಮಂತ್ರಾಭಿಷೇಚಿತಃ
ಯಶೋದಾನಂದನಃ, ಕಾಂತೋ, ಮುನಿಕೋಟಿ ನಿಷೇವಿತಃ ॥ ೬ ॥

ನಿತ್ಯಂ ಮಧುವನಾವಾಸೀ ವೈಕುಂಠಸ್ಸಂಭವಃ ಕ್ರತುಃ ।
ರಮಾಪತಿರ್ಯದುಪತಿರ್ಮುರಾರಿ ರ್ಮಧುಸೂದನಃ ॥ ೭ ॥

ಮಾಧವೋ ಮಾನಹಾರೀ ಚ ಶ್ರೀಪತಿ ರ್ಭೂಧರಃ ಪ್ರಭುಃ
ಬೃಹದ್ವನ ಮಹಾಲೀಲೋ ನಂದಸೂನುರ್ಮಹಾಸನಃ ॥ ೮ ॥

ತೃಣಾವರ್ತ ಪ್ರಾಣಹಾರೀ ಯಶೋದಾ ವಿಸ್ಮಯಪ್ರದಃ
ತ್ರೈಲೋಕ್ಯ ವಂದ್ಯಃ ಪದ್ಮಾಕ್ಷಃ ಪದ್ಮಹಸ್ತಃ ಪ್ರಿಯಂಕರಃ ॥ ೯ ॥

ಬ್ರಹ್ಮಣ್ಯೋ ಧರ್ಮಗೋಪ್ತಾ ಚ ಭೂಪತಿಃ ಶ್ರೀಧರಃ ಸ್ವರಾಟ್
ಅಜಾಧ್ಯಕ್ಷಃ ಶಿವಾಧ್ಯಕ್ಷೋ ಧರ್ಮಾಧ್ಯಕ್ಷೋ ಮಹೇಶ್ವರಃ ॥೧೦॥

ವೇದಾಂತವೇದ್ಯೋ ಬ್ರಹ್ಮಸ್ಥಃ ಪ್ರಜಾಪತಿರಮೋಘ ದೃಕ್
ಗೋಪೀಕರಾವಲಂಬೀ ಚ ಗೋಪ ಬಾಲಕ ಸುಪ್ರಿಯಃ ॥ ೧೧ ॥

ಬಲಾನುಯಾಯೀ ಬಲವಾನ್ ಶ್ರೀದಾಮ ಪ್ರಿಯ ಆತ್ಮವಾನ್
ಗೋಪೀ ಗೃಹಾಂಗಣ ರತಿರ್ಭದ್ರಃ ಸುಶ್ಲೋಕ ಮಂಗಲಃ ॥ ೧೨ ॥

ನವನೀತಹರೋ, ಬಾಲೋ, ನವನೀತ ಪ್ರಿಯಾಶನಃ
ಬಾಲವೃಂದೀ, ಮರ್ಕವೃಂದೀ,ಚಕಿತಾಕ್ಷಃ, ಪಲಾಯಿತಃ ॥ ೧೩ ॥

ಯಶೋದಾತನಯಃ, ಕಂಪೀ, ಮಾಯಾ ರುದಿತ ಶೋಭನಃ
ದಾಮೋದರೋಽಪ್ರಮೇಯಾತ್ಮಾ, ದಯಾಲುರ್ಭಕ್ತ ವತ್ಸಲಃ ॥ ೧೪ ॥

ಉಲೂಖಲೇ ಸುಬದ್ಧೋ, ನಮ್ರಶಿರಾ, ಗೋಪೀ ಕದರ್ಥಿತಃ
ವೃಕ್ಷಭಂಗೀ, ಶೋಕಭಂಗೀ ಧನದಾತ್ಮಜ ಮೋಕ್ಷಣಃ ॥ ೧೫ ॥

ದೇವರ್ಷಿ ವಚನ ಶ್ಲಾಘೀ, ಭಕ್ತವಾತ್ಸಲ್ಯ ಸಾಗರಃ
ವ್ರಜ ಕೋಲಾಹಲಕರೋ ವ್ರಜಾನಂದ ವಿವರ್ಧನಃ ॥ ೧೬ ॥

ಗೋಪಾತ್ಮಾ, ಪ್ರೇರಕಃ, ಸಾಕ್ಷೀ, ವೃಂದಾವನ ನಿವಾಸಕೃತ್
ವತ್ಸಪಾಲೋ, ವತ್ಸಪತಿರ್ಗೋಪದಾರಕ ಮಂಡನಃ ॥ ೧೭ ॥

ಬಾಲಕ್ರೀಡೋ, ಬಾಲರತಿರ್ಬಾಲಕಃ ಕನಕಾಂಗದೀ
ಪೀತಾಂಬರೋ, ಹೇಮಮಾಲೀ ಮಣಿಮುಕ್ತಾವಿಭೂಷಣಃ ॥ ೧೮ ॥

ಕಿಂಕಿಣೀ, ಕಟಕೀ, ಸೂತ್ರೀ, ನೂಪುರೀ, ಮುದ್ರಿಕಾನ್ವಿತಃ
ವತ್ಸಾಸುರ ಪ್ರತಿಧ್ವಂಸೀ, ಬಕಾಸುರ ವಿನಾಶನಃ ॥ ೧೯ ॥

ಅಘಾಸುರ ವಿನಾಶೀ, ಚ ವಿನಿದ್ರೀಕೃತ ಬಾಲಕಃ
ಆದ್ಯ, ಆತ್ಮಪ್ರದಃ, ಸಂಗೀ ಯಮುನಾತೀರ ಭೋಜನಃ ॥ ೨೦ ॥

ಗೋಪಾಲ ಮಂಡಲೀ ಮಧ್ಯಃ, ಸರ್ವ ಗೋಪಾಲ ಭೂಷಣಃ
ಕೃತ ಹಸ್ತತಲ ಗ್ರಾಸೋ, ವ್ಯಂಜನಾಶ್ರಿತ ಶಾಖಿಕಃ ॥ ೨೧ ॥

ಕೃತ ಬಾಹುಶೃಂಗ ಯಷ್ಟಿರ್ಗುಂಜಾಲಂಕೃತ ಕಂಠಕಃ
ಮಯೂರ ಪಿಚ್ಛ ಮುಕುಟೋ ವನಮಾಲಾ ವಿಭೂಷಿತಃ ॥ ೨೨ ॥

ಗೈರಿಕಾ ಚಿತ್ರಿತ ವಪುರ್ನವ ಮೇಘ ವಪುಸ್ಮರಃ
ಕೋಟಿ ಕಂದರ್ಪಲಾವಣ್ಯೋ, ಲಸನ್ಮಕರಕುಂಡಲಃ ॥ ೨೩ ॥

ಆಜಾನುಬಾಹುರ್ಭಗವಾನ್, ನಿದ್ರಾ ರಹಿತ ಲೋಚನಃ
ಕೋಟಿ ಸಾಗರ ಗಾಂಭೀರ್ಯಃ ಕಾಲವಾಹಃ, ಸದಾಶಿವಃ ॥ ೨೪ ॥

ವಿರಂಚಿ ಮೋಹನ ವಪುರ್ಗೋಪವತ್ಸ ವಪುರ್ಧರಃ
ಬ್ರಹ್ಮಾಂಡ ಕೋಟಿ ಜನಕೋ, ಬ್ರಹ್ಮ ಮೋಹ ವಿನಾಶಕಃ ॥ ೨೫ ॥

ಬ್ರಹ್ಮಾ, ಬ್ರಹ್ಮೇಡಿತ, ಸ್ವಾಮೀ, ಶಕ್ರ ದರ್ಪ ವಿನಾಶಕಃ
ಗಿರಿ ಪೂಜೋಪದೇಷ್ಟಾ ಚ ಧೃತಗೋವರ್ಧನಾಚಲಃ ॥ ೨೬ ॥

ಪುರಂದರೇಡಿತಃ, ಪೂಜ್ಯಃ, ಕಾಮಧೇನು ಪ್ರಪೂಜಿತಃ
ಸರ್ವತೀರ್ಥಾಭಿಷಿಕ್ತಃ, ಶ್ರೀ ಗೋವಿಂದೋ, ಗೋಪರಕ್ಷಕಃ ॥ ೨೭ ॥

ಕಾಲಿಯಾರ್ತಿಕರೋಽಕ್ರೂರೋ ನಾಗಪತ್ನೀಡಿತೋ, ವಿರಾಟ್
ಧೇನುಕಾರಿಃ, ಪ್ರಲಂಬಾರಿ ರ್ವೃಷಾಸುರ ವಿಮರ್ದನಃ ॥ ೨೮ ॥

ಮಯಾಸುರಾತ್ಮಜ ಧ್ವಂಸೀ, ಕೇಶೀ ಕಂಠ ವಿದಾರಕಃ
ಯಜ್ಞ ಗೋಪ್ತಾ ಗೋಪ ಗೋಪ್ತಾ ದಾವಾಗ್ನಿ ಪರಿಶೋಷಕಃ ॥ ೨೯ ॥

ಗೋಪಕನ್ಯಾ ವಸ್ತ್ರಹಾರೀ, ಗೋಪಕನ್ಯಾ ವರಪ್ರದಃ
ಯಜ್ಞಪತ್ನ್ಯನ್ನಭೋಜೀ ಚ ಮುನಿ ದುಃಖಾಪಹಾರಕಃ ॥ ೩೦ ॥

ಜಲೇಶ ಮಾನಮಥನಃ, ನಂದ ಗೋಪಾಲ ಜೀವನಃ
ಗಂಧರ್ವಶಾಪ ಮೋಕ್ತಾ, ಚ ಶಂಖಚೂಡ ಶಿರೋಹರಃ ॥ ೩೧ ॥

ವಂಶೀ, ವಟೀ ವೇಣುನಾದೀ, ಗೋಪೀ ಚಿಂತಾಪಹಾರಕಃ
ಸರ್ವಗೋಪ್ತಾ ಸಮಾಹ್ವಾನಃ ಸರ್ವಗೋಪೀ ಮನೋರಥಃ ॥ ೩೨ ॥

ವ್ಯಂಗ್ಯ ಧರ್ಮ ಪ್ರವಕ್ತಾ ಚ ಗೋಪೀ ಮಂಡಲ ಮೋಹನಃ
ರಾಸಕ್ರೀಡಾರಸಾಸ್ವಾದೀ ರಸಿಕೋ ರಾಧಿಕಾಧವಃ ॥ ೩೩ ॥

ಕಿಶೋರೀ ಪ್ರಾಣನಾಥಃ, ಶ್ರೀ ವೃಷಭಾನುಸುತಾ ಪ್ರಿಯಃ
ಸರ್ವ ಗೋಪೀ ಜನಾನಂದೀ, ಗೋಪೀಜನ ವಿಮೋಹನಃ ॥ ೩೪ ॥

ಗೋಪಿಕಾ ಗೀತ ಚರಿತೋ, ಗೋಪೀ ನರ್ತನಲಾಲಸಃ
ಗೋಪಿಸ್ಕಂಧಾಶ್ರಿತಕರೋ, ಗೋಪಿಕಾ ಚುಂಬನ ಪ್ರಿಯಃ ॥ ೩೫ ॥

ಗೋಪಿಕಾ ಮಾರ್ಜಿತ ಮುಖಃ, ಗೋಪೀ ವ್ಯಜನ ವೀಜಿತಃ
ಗೋಪಿಕಾ ಕೇಶ ಸಂಸ್ಕಾರೀ, ಗೋಪೀಕಾ ಪುಷ್ಪ ಸಂಸ್ತರಃ ॥ ೩೬ ॥

ಗೋಪಿಕಾ ಹೃದಯಾಲಂಬೀ, ಗೋಪೀವಹನ ತತ್ಪರಃ
ಗೋಪಿಕಾ ಮದಹಾರೀ, ಚ ಗೋಪೀಕಾ ಪರಮಾರ್ಚಿತಃ ॥ ೩೭ ॥

ಗೋಪಿಕಾ ಕೃತ ಸಲ್ಲೀಲಃ, ಗೋಪಿಕಾ ಸಂಸ್ಮೃತಪ್ರಿಯಃ
ಗೋಪಿಕಾವಂದಿತ ಪದೋ, ಗೋಪಿಕಾ ವಶವರ್ತನಃ ॥ ೩೮ ॥

ರಾಧಾಪರಾಜಿತಃ, ಶ್ರೀಮಾನ್, ನಿಕುಂಜೇಷು ವಿಹಾರವಾನ್
ಕುಂಜಪ್ರಿಯಃ, ಕುಂಜವಾಸೀ ವೃಂದಾವನ ವಿಕಾಸನಃ ॥ ೩೯ ॥

ಯಮುನಾ ಜಲ ಸಿಕ್ತಾಂಗಃ, ಯಮುನಾ ಸೌಖ್ಯ ದಾಯಕಃ
ಶಶಿ ಸಂಸ್ತಂಭನಃ, ಶೂರಃ, ಕಾಮೀ, ಕಾಮಾವಮೋಹನಃ ॥ ೪೦ ॥

ಕಾಮಾದ್ಯಃ ಕಾಮನಾಥಶ್ಚ, ಕಾಮಮಾನಸಭೇದನಃ
ಕಾಮದಃ, ಕಾಮರೂಪಶ್ಚ ಕಾಮಿನೀ ಕಾಮ ಸಂಚಯಃ ॥ ೪೧ ॥

ನಿತ್ಯಕ್ರೀಡೋ, ಮಹಾಲೀಲಃ, ಸರ್ವ ಲೋಕಗತಃ, ಪರಃ
ಪರಮಾತ್ಮಾ, ಪರಾಧೀಶಃ, ಸರ್ವ ಕಾರಣ, ಕಾರಣಃ ॥ ೪೨ ॥

ಗೃಹೀತನಾರದ ವಚಾ, ಅಕ್ರೂರ ಪರಿಚಿಂತಿತಃ
ಅಕ್ರೂರ ವಂದಿತ ಪದೋ, ಗೋಪಿಕಾ ತೋಷಕಾರಕಃ ॥ ೪೩ ॥

ಅಕ್ರೂರ ವಾಕ್ಯಸಂಗ್ರಾಹೀ, ಮಧುರಾ ವಾಸಕಾರಣಃ
ಅಕ್ರೂರತಾಪ ಶಮನೋ, ರಜಕಾಯುಃ ಪ್ರಣಾಶನಃ ॥ ೪೪ ॥

ಮಧುರಾನಂದ ದಾಯೀ, ಚ ಕಂಸವಸ್ತ್ರ ವಿಲುಂಠನಃ
ಕಂಸ ವಸ್ತ್ರ ಪರೀಧಾನಃ, ಗೋಪೀವಸ್ತ್ರಪ್ರದಾಯಕಃ ॥ ೪೫ ॥

ಸುದಾಮ ಗೃಹ ಗಾಮೀ, ಚ ಸುದಾಮ ಪರಿಪೂಜಿತಃ
ತಂತು ವಾಯಕ ಸಂಪ್ರೀತಃ, ಕುಬ್ಜಾ ಚಂದನ ಲೇಪನಃ ॥ ೪೬ ॥

ಕುಬ್ಜಾ ರೂಪ ಪ್ರದೋ, ವಿಜ್ಞೋ, ಮುಕುಂದೋ, ವಿಷ್ಟರಶ್ರವಾಃ
ಸರ್ವಜ್ಞೋ, ಮಥುರಾಲೋಕೀ, ಸರ್ವಲೋಕಾಭಿನಂದನಃ ॥ ೪೭ ॥

ಕುವಲಯಾಪೀಡ ಹಂತಾ, ಚ ದಂತಸ್ಕಂಧೋ, ಬಲಾಗ್ರಣೀಃ
ಕಲ್ಕಿರೂಪಧರೋ, ಧೀರೋ, ದಿವ್ಯ ವಸ್ತ್ರಾನುಲೇಪನಃ ॥ ೪೮ ॥

ಮಲ್ಲರೂಪೋ, ಮಹಾಕಾಲಃ, ಕಾಮರೂಪೀ, ಬಲಾನ್ವಿತಃ
ಕಂಸ ತ್ರಾಸ ಕರೋ, ಭೀಮೋ, ಮುಷ್ಟಿಕಾಂತಶ್ಚ, ಕಂಸಹಾ ॥ ೪೯ ॥

ಚಾಣೂರಘ್ನೋಽ ಭಯಹರಃ, ಶಲಾರಿಸ್ತೋಶಲಾಂತಕಃ
ವೈಕುಂಠವಾಸೀ ಕಂಸಾರಿಃ ಸರ್ವ ದುಷ್ಟ ನಿಷೂದನಃ ॥ ೫೦ ॥

ದೇವದುಂದುಭಿ ನಿರ್ಘೋಷೀ, ಪಿತೃಶೋಕನಿವಾರಣಃ
ಯಾದವೇಂದ್ರಃ ಸತಾಂ ನಾಥೋ, ಯಾದವಾರಿಪ್ರಮರ್ದನಃ ॥ ೫೧ ॥

ಶೌರೀ, ಶೋಕವಿನಾಶೀ, ಚ ದೇವಕೀ ತಾಪ ನಾಶನಃ
ಉಗ್ರಸೇನ ಪರಿತ್ರಾತಾ, ಚೋಗ್ರಸೇನಾಭಿಪೂಜಿತಃ ॥ ೫೨ ॥

ಉಗ್ರಸೇನಾಭಿಷೇಚೀ, ಯಶ್ಚೋಗ್ರಸೇನ ದಯಾಪರಃ
ಸರ್ವ ಸಾತ್ವತ ಸಾಕ್ಷೀ, ಚ ಯದೂನಾಮಭಿನಂದನಃ ॥ ೫೩ ॥

ಸರ್ವ ಮಾಥುರ ಸಂಸೇವ್ಯಃ, ಕರುಣೋ, ಭಕ್ತಬಾಂಧವಃ
ಸರ್ವ ಗೋಪಾಲ ಧನದೋ, ಗೋಪೀ ಗೋಪಾಲಲಾಲಸಃ ॥ ೫೪ ॥

ಶೌರೀ, ದತ್ತೋಪವೀತೀ, ಚೈವೋಗ್ರಸೇನ, ದಯಾಕರಃ
ಗುರುಭಕ್ತೋ, ಬ್ರಹ್ಮಚಾರೀ, ನಿಗಮಾಧ್ಯಯನೇ ರತಃ ॥ ೫೫ ॥

ಸಂಕರ್ಷಣ ಸಹಾಧ್ಯಾಯೀ, ಸುದಾಮಸ್ಯ ಪ್ರಿಯಃ ಸಖಾ
ವಿದ್ಯಾನಿಧಿಕಲಾಕೋಶಃ, ಮೃತ ಪುತ್ರ ಪ್ರದಾಯಕಃ ॥ ೫೬ ॥

ಚಕ್ರೀ, ಪಾಂಚಜನೀ, ಸರ್ವ ಪಾಪಿ ನಾರಕಿ ಮೋಚನಃ
ಯಮಾರ್ಚಿತಃ, ಪರೋ, ದೇವೋ, ನಾಮೋಚ್ಚಾರವಶೋಽಚ್ಯುತಃ ॥ ೫೭ ॥

ಕುಬ್ಜಾ ವಿಲಾಸೀ, ಸುಭಗೋ, ದೀನಬಂಧೂ ರನೌಪಮಃ
ಅಕ್ರೂರ ಗೃಹ ಗೋಪ್ತಾ, ಚ ಪ್ರತಿಜ್ಞಾ ಪಾಲಕಃ ಶುಭಃ ॥ ೫೮ ॥

ಜರಾಸಂಧ ಜಯೀ, ವಿದ್ವಾನ್, ಯವನಾಂತೋ, ದ್ವಿಜಾಶ್ರಯಃ
ಮುಚಕುಂದ, ಪ್ರಿಯಕರಃ, ಜರಾಸಂಧ ಪಲಾಯಿತಃ ॥ ೫೯ ॥

ದ್ವಾರಕಾ ಜನಕೋ, ಗೂಢೋ, ಬ್ರಹ್ಮಣ್ಯಃ, ಸತ್ಯಸಾಗರಃ
ಲೀಲಾಧರಃ, ಪ್ರಿಯಕರೋ, ವಿಶ್ವಕರ್ಮಾ, ಯಶಃಪ್ರದಃ ॥ ೬೦ ॥

ರುಕ್ಮಿಣೀ, ಪ್ರಿಯಸಂದೇಶೋ, ರುಕ್ಮಿ, ಶೋಕ ವಿವರ್ಧನಃ
ಚೈದ್ಯಶೋಕಾವಹಃ, ಶ್ರೇಷ್ಠೋ, ದುಷ್ಟ ರಾಜ್ಯವಿನಾಶನಃ ॥ ೬೧ ॥

ರುಕ್ಮಿ ವೈರೂಪ್ಯ ಕರಣೋ, ರುಕ್ಮಿಣೀವಚನೇ, ರತಃ
ಬಲಭದ್ರ ವಚೋಗ್ರಾಹೀ, ಮುಕ್ತರುಕ್ಮೀ, ಜನಾರ್ದನಃ ॥ ೬೨ ॥

ರುಕ್ಮಿಣೀ ಪ್ರಾಣನಾಥಃ, ಶ್ರೀ ಸತ್ಯಭಾಮಾಪತಿಃ, ಸ್ವಯಮ್
ಭಕ್ತಪಕ್ಷೀ, ಭಕ್ತವಶ್ಯೋಹ್ಯಕ್ರೂರ ಮಣಿದಾಯಕಃ ॥ ೬೩ ॥

ಶತಧನ್ವಪ್ರಾಣಹಾರೀ, ಋಕ್ಷರಾಜ,ಸುತಾಪ್ರಿಯಃ
ಸತ್ರಾಜಿತ್ತನಯಾಕಾಂತೋ, ಮಿತ್ರವಿಂದಾSಪಹಾರಕಃ ॥ ೬೪ ॥

ಸತ್ಯಾಪತಿರ್ಲಕ್ಷಣಾಜಿತ್, ಪೂಜ್ಯೋ, ಭದ್ರಾ ಪ್ರಿಯಂಕರಃ
ನರಕಾಸುರಘಾತೀ, ಚ ಲೀಲಾ ಕನ್ಯಾಹರೋ ಜಯೀ ॥ ೬೫ ॥

ಮುರಾರಿ ಮದನಾಶೋ ವೈ ಧರಿತ್ರೀ ದುಃಖ ನಾಶನಃ
ವೈನತೇಯೀ ಸ್ವರ್ಗಗಾಮೀ, ಅದಿತ್ಯಾಃ ಕುಂಡಲಪ್ರದಃ ॥ ೬೬ ॥

ಇಂದ್ರಾರ್ಚಿತೋ, ರಮಾಕಾಂತೋ, ವಜ್ರಿಭಾರ್ಯಾ ಪ್ರಪೂಜಿತಃ
ಪಾರಿಜಾತಾಪಹಾರೀ, ಚ ಶಕ್ರಮಾನಾಪಹಾರಕಃ ॥ ೬೭ ॥

ಪ್ರದ್ಯುಮ್ನಜನಕಃ, ಸಾಂಬತಾತೋ ಬಹುಸುತೋ ವಿಧುಃ
ಗರ್ಗಾಚಾರ್ಯೋಪನೀತಶ್ಚ, ಧರ್ಮಾಧಾರೋ, ಧರಾಧರಃ ॥ ೬೮ ॥

ದ್ವಾರಕಾಮಂಡನಃ, ಶ್ಲೋಕ್ಯಃ, ಸುಶ್ಲೋಕ್ಯೋ, ನಿಗಮಾಲಯಃ
ಪೌಂಡ್ರಕ ಪ್ರಾಣಹಾರೀ, ಚ ಕಾಶೀರಾಜ ಶಿರೋ ಹರಃ ॥ ೬೯ ॥

ಅವೈಷ್ಣವ ವಿಪ್ರದಾಹೀ, ಸುದಕ್ಷಿಣ ಭಯಾವಹಃ
ಜರಾಸಂಧ ವಿದಾರೀ, ಚ ಧರ್ಮನಂದನ ಯಜ್ಞಕೃತ್ ॥ ೭೦ ॥

ಶಿಶುಪಾಲ ಶಿರಚ್ಛೇದೀ, ದಂತ ವಕ್ತ್ರ ವಿನಾಶನಃ
ವಿದೂರಥಾಂತಕಃ, ಶ್ರೀಶಃ ಶ್ರೀದೋ ದ್ವಿವಿದನಾಶನಃ ॥ ೭೧ ॥

ರುಕ್ಮಿಣೀ ಚಿತ್ತಹಾರೀ, ಚ ರುಕ್ಮಿಣೀ ಮಾನವರ್ಧನಃ
ದೇವರ್ಷಿಶಾಪಹರ್ತಾ, ಚ ದ್ರೌಪದೀ ವಾಕ್ಯಪಾಲಕಃ ॥ ೭೨ ॥

ದುರ್ವಾಸೋ ಭಯಹಾರೀ, ಚ ಪಾಂಚಾಲೀ ಸ್ಮರಣಾಗತಃ
ಪಾರ್ಥದೂತಃ, ಪಾರ್ಥಮಂತ್ರೀ, ಪಾರ್ಥದುಃಖೌಘನಾಶನಃ ॥ ೭೩ ॥

ಪಾರ್ಥಮಾನಾಪಹಾರೀ, ಚ ಪಾರ್ಥಜೀವನ ದಾಯಕಃ
ಪಾಂಚಾಲೀ ವಸ್ತ್ರದಾತಾ, ಚ ವಿಶ್ವಪಾಲಕ ಪಾಲಕಃ ॥ ೭೪ ॥

ಶ್ವೇತಾಶ್ವಸಾರಥಿಸ್ಸತ್ಯಸಾಧ್ಯೋ ಸತ್ಯೋ ಭಯಾಪಹಃ
ಸತ್ಯಸಂಧಃ ಸತ್ಯರತಿಸ್ಸತ್ಯಪ್ರಿಯ ಉದಾರಧೀಃ ॥ ೭೫ ॥

ಮಹಾಸೇನ ಜಯೀ, ಚೈವ ಶಿವಸೈನ್ಯವಿನಾಶನಃ
ಬಾಣಾಸುರ ಭುಜಚ್ಛೇತ್ತಾ, ಬಾಣ ಬಾಹುವರಪ್ರದಃ ॥ ೭೬ ॥

ತಾರ್ಕ್ಷ್ಯಮಾನಾಪಹಾರೀ, ಚ ತಾರ್ಕ್ಷ್ಯತೇಜೋ ವಿವರ್ಧನಃ
ಶಾಮಸ್ಸ್ವರೂಪ ಧಾರೀ ಚ ಸತ್ಯಭಾಮಾಮುದಾವಹಃ ॥ ೭೭ ॥

ರತ್ನಾಕರ ಜಲಕ್ರೀಡಃ, ವ್ರಜಲೀಲಾ ಪ್ರದರ್ಶಕಃ
ಸ್ವಪ್ರತಿಜ್ಞಾ ಪರಿಧ್ವಂಸೀ, ಭೀಷ್ಮಾಜ್ಞಾ ಪರಿಪಾಲಕಃ ॥ ೭೮ ॥

ವೀರಾಯುಧ ಹರಃ, ಕಾಲಃ, ಕಾಲಿಕೇಶೋ, ಮಹಾಬಲಃ
ಬರ್ಬರೀಕ ಶಿರೋಹಾರೀ, ಬರ್ಬರೀಕ ಶಿರಃಪ್ರದಃ ॥ ೭೯ ॥

ಧರ್ಮಪುತ್ರಜಯೀ, ಶೂರ, ದುರ್ಯೋಧನ ಮದಾಂತಕಃ
ಗೋಪಿಕಾ ನಿತ್ಯ ಸಂಬಂಧಃ ನಿತ್ಯಕ್ರಿಡೋ ವ್ರಜೇಶ್ವರಃ ॥ ೮೦ ॥

ರಾಧಾಕುಂಡರತಿರ್ಧನ್ಯಃ ಸದಾಂದೋಲ ಸಮಾಶ್ರಿತಃ
ಸದಾ ಮಧುವನಾನಂದೀ ಸದಾ ವೃಂದಾವನಪ್ರಿಯಃ ॥ ೮೧ ॥

ಅಶೋಕವನ ಸನ್ನದ್ಧಃ, ಸದಾತಿಲಕ ಸಂಗತಃ
ಸದಾ ಗೋವರ್ಧನ ರತಿಃ, ಸದಾ ಗೋಕುಲವಲ್ಲಭಃ ॥ ೮೨ ॥

ಭಾಂಡೀರ ವಟ ಸಂವಾಸೀ, ನಿತ್ಯಂ ವಂಶೀವಟ ಸ್ಥಿತಃ
ನಂದಗ್ರಾಮ ಕೃತಾವಾಸೋ, ವೃಷಭಾನು ಗೃಹಪ್ರಿಯಃ ॥ ೮೩ ॥

ಗೃಹೀತ ಕಾಮಿನೀ ರೂಪೋ, ನಿತ್ಯಂ ರಾಸ ವಿಲಾಸ ಕೃತ್
ಬಲ್ಲವೀ ಜನ ಸಂಗೋಪ್ತಾ, ಬಲ್ಲವೀ ಜನ ವಲ್ಲಭಃ ॥ ೮೪ ॥

ದೇವಶರ್ಮ ಕೃಪಾಕರ್ತಾ, ಕಲ್ಪಪಾದಪ ಸಂಸ್ಥಿತಃ
ಶಿಲಾಸುಗಂಧ ನಿಲಯಃ, ಪಾದಚಾರೀ ಘನಚ್ಛವಿಃ ॥ ೮೫ ॥

ಅತಸೀ ಕುಸುಮ ಪ್ರಖ್ಯಃ, ಸದಾ ಲಕ್ಷ್ಮೀಕೃಪಾಕರಃ
ತ್ರಿಪುರಾರಿ ಪ್ರಿಯಕರ, ಉಗ್ರಧನ್ವಾ ಽ ಪರಾಜಿತಃ ॥ ೮೬ ॥

ಷಟ್ಪುರ ಧ್ವಂಸ ಕರ್ತಾ, ಚ ನಿಕುಂಭ ಪ್ರಾಣಹಾರಕಃ
ವಜ್ರನಾಭ ಪುರಧ್ವಂಸೀ, ಪೌಂಡ್ರಕ ಪ್ರಾಣಹಾರಕಃ ॥ ೮೭ ॥

ಬಹುಲಾಶ್ವ ಪ್ರೀತಿಕರ್ತಾ, ಚ ದ್ವಿಜವರ್ಯ ಪ್ರಿಯಂಕರಃ
ಶಿವ ಸಂಕಟ ಹಾರೀ ಚ ವೃಕಾಸುರ ವಿನಾಶನಃ ॥ ೮೮ ॥

ಭೃಗು ಸತ್ಕಾರ ಕಾರೀ ಚ ಶಿವಸಾತ್ವಿಕತಾ ಪ್ರದಃ
ಗೋಕರ್ಣ ಪೂಜಕಃ ಸಾಂಬ ಕುಷ್ಠ ವಿಧ್ವಂಸ ಕಾರಣಃ ॥ ೮೯ ॥

ವೇದಸ್ತುತೋ, ವೇದವೇತ್ತಾ ಯದುವಂಶ ವಿವರ್ಧನಃ
ಯದುವಂಶ ವಿನಾಶೀ ಚಾಪ್ಯುದ್ಧವೋದ್ಧಾರ ಕಾರಕಃ ॥ ೯೦ ॥

## ರಾಧಾಸ್ತೋತ್ರಮ್

ಶ್ರೀ ರಾಧಾಽರಾಧಕಾನಂದಾ ವೃಷಭಾನು ತನೂದ್ಭವಾ
ವೃಂದಾವನೇಶ್ವರೀ ಪುಣ್ಯಾ, ಕೃಷ್ಣ ಮಾನಸ ಹಾರಿಣೀ, ॥ ೧ ॥

ಪ್ರಗಲ್ಭಾ ಚತುರಾ ಕಾಮ ಕಾಮಿನೀ ಹರಿಮೋಹಿನೀ
ಮಾಧ್ವೀ ಚ ಮಧುರಾ ಚೈವ ಕಿಶೋರೀ ಕನಕಪ್ರಭಾ ॥ ೨ ॥

ಜಿತಚಂದ್ರಾ ಜಿತಮೃಗಾ ಜಿತಸಿಂಹಾ ಜಿತದ್ವಿಪಾ
ಜಿತರಂಭಾ ಜಿತಪಿಕಾ ಗೋವಿಂದ ಹೃದಯೋದ್ಭವಾ ॥ ೩ ॥

ಜಿತಬಿಂಬಾ ಜಿತಶುಕಾ ಜಿತಪದ್ಮಾ ಕುಮಾರಿಕಾ
ಶ್ರೀ ಕೃಷ್ಣಾಕರ್ಷಣಾ ದೇವೀ ನಿತ್ಯಯುಗ್ಮ ಸ್ವರೂಪಿಣೀ ॥ ೪ ॥

ನಿತ್ಯಂ ವಿಹಾರಿಣೀ ಕಾಂತಾ ರಸಿಕಾ ಕೃಷ್ಣವಲ್ಲಭಾ
ಆಮೋದಿನೀ ಮೋದವತೀ ನಂದ ನಂದನ ಭೂಷಿತಾ ॥ ೫ ॥

ದಿವ್ಯಾಂಬರಾ ದಿವ್ಯಹಾರಾ ಮುಕ್ತಾ ಮಣಿ ವಿಭೂಷಿತಾ
ಕುಂಜಪ್ರಿಯಾ ಕುಂಜವಾಸಾ ಕುಂಜನಾಯಕ ನಾಯಿಕಾ ॥ ೬ ॥

ಚಾರುರೂಪಾ ಚಾರುವಕ್ತ್ರಾ ಚಾರುಹೇಮಾಂಗದಾ ಶುಭಾ
ಶ್ರೀಕೃಷ್ಣ ವೇಣು ಸಂಗೀತಾ ಮುರಲೀ ಹಾರಿಣೀ ಶಿವಾ ॥ ೭ ॥

ಭದ್ರಾ ಭಗವತೀ ಶಾಂತಾ ಕುಮುದಾ ಸುಂದರೀ ಪ್ರಿಯಾ
ಕೃಷ್ಣಕ್ರೀಡಾ ಕೃಷ್ಣರತಿಃ ಶ್ರೀಕೃಷ್ಣ ಸಹಚಾರಿಣೀ ॥ ೮ ॥

ವಂಶೀವಟ ಪ್ರಿಯಸ್ಥಾನಾ ಯುಗ್ಮಾ ಯುಗ್ಮಸ್ವರೂಪಿಣೀ
ಭಾಂಡೀರವಾಸಿನೀ ಶುಭ್ರಾ ಗೋಪೀನಾಥ ಪ್ರಿಯಾ ಸಖೀ ॥ ೯ ॥

ಶ್ರುತಿ ನಿಶ್ವಸಿತಾ ದಿವ್ಯಾ ಗೋವಿಂದ ರಸದಾಯಿನೀ
ಶ್ರೀ ಕೃಷ್ಣ ಪ್ರಾರ್ಥಿನೀ ಶಾಂತಾ ಮಹಾನಂದ ಪ್ರದಾಯಿನೀ ॥ ೧೦ ॥

ವೈಕುಂಠ ಜನ ಸಂಸೇವ್ಯಾ ಕೋಟಿಲಕ್ಷ್ಮೀ ಸುಖಾವಹಾ
ಕೋಟಿಕಂದರ್ಪ ಲಾವಣ್ಯಾ ರತಿಕೋಟಿ ರತಿಪ್ರದಾ ॥ ೧೧ ॥

ಭಕ್ತಿಗ್ರಾಹ್ಯಾ ಭಕ್ತಿರೂಪಾ ಲಾವಣ್ಯಸರಸೀ ರಮಾ
ಬ್ರಹ್ಮ ರುದ್ರಾದಿ ಸಂರಾಧ್ಯಾ ನಿತ್ಯಂ ಕೌತೂಹಲಾನ್ವಿತಾ ॥ ೧೨ ॥

ನಿತ್ಯಲೀಲಾ ನಿತ್ಯಕಾಮಾ ನಿತ್ಯ ಶೃಂಗಾರ ಭೂಷಿತಾ
ನಿತ್ಯವೃಂದಾವನ ರಸಾ ನಂದನಂದನ ಸಂಯುತಾ ॥ ೧೩ ॥

ಗೋಪಿಕಾ ಮಂಡಲೀ ಯುಕ್ತಾ ನಿತ್ಯಂ ಗೋಪಾಲ ಸಂಗತಾ
ಗೋರಸ ಕ್ಷೇಪಿಣೀ ಶೂರಾ ಸಾನಂದಾಽನಂದದಾಯಿನೀ ॥ ೧೪ ॥

ಮಹಾಲೀಲಾ ಪ್ರಕೃಷ್ಟಾ ಚ ನಾಗರೀ ನಗಚಾರಿಣೀ
ನಿತ್ಯಮಾಘೂರ್ಣಿತಾ ಪೂರ್ಣ ಕಸ್ತೂರೀ ತಿಲಕಾನ್ವಿತಾ ॥ ೧೫ ॥

ಪದ್ಮಾ ಶ್ಯಾಮಾ ಮೃಗಾಕ್ಷೀ ಚ ಸಿದ್ಧಿರೂಪಾ ರಸಾವಹಾ
ಕೋಟಿ ಚಂದ್ರಾನನಾ ಗೌರೀ ಕೋಟಿ ಕೋಕಿಲ ಸುಸ್ವರಾ ॥ ೧೬ ॥

ಶೀಲ ಸೌಂದರ್ಯ ನಿಲಯಾ ನಂದನಂದನ ಲಾಲಿತಾ
ಅಶೋಕವನ ಸಂವಾಸಾ ಭಾಂಡೀರ ವನ ಸಂಗತಾ ॥೧೭॥

ಕಲ್ಪದ್ರುಮ ಲತಾವಿಷ್ಟಾ ಕೃಷ್ಣಾ ವಿಶ್ವಾ ಹರಿಪ್ರಿಯಾ
ಅಜಗಮ್ಯಾ ಭವಾಗಮ್ಯಾ ಗೋವರ್ಧನ ಕೃತಾಲಯಾ ॥೧೮॥

ಯಮುನಾತೀರ ನಿಲಯಾ ಶಶ್ವದ್ಗೋವಿಂದ ಜಲ್ಪಿನೀ
ಶಶ್ವನ್ಮಾನವತೀ ಸ್ನಿಗ್ಧಾ ಶ್ರೀ ಕೃಷ್ಣ ಪರಿವಂದಿತಾ ॥೧೯॥

ಕೃಷ್ಣ ಸ್ತುತಾ ಕೃಷ್ಣ ವ್ರತಾ ಶ್ರೀ ಕೃಷ್ಣ ಹೃದಯಾಲಯಾ
ದೇವ ದ್ರುಮ ಫಲಾ ಸೇವ್ಯಾ ವೃಂದಾವನರಸಾಲಯಾ ॥೨೦॥

ಕೋಟಿ ತೀರ್ಥಮಯೀ ಕೋಟಿ ಪುಣ್ಯತೀರ್ಥ ಫಲಪ್ರದಾ
ಕೋಟಿ ಯೋಗ ಸುದುಷ್ಪ್ರಾಪ್ಯಾ ಕೋಟಿಯಜ್ಞ ದುರಾಶ್ರಯಾ ॥೨೧॥

ಮನಸಾ ಶಶಿಲೇಖಾ ಚ ಶ್ರೀಕೋಟಿ ಸುಭಗಾಽನಘಾ
ಕೋಟಿ ಮುಕ್ತ ಸುಖಾ ಸೌಮ್ಯಾ ಲಕ್ಷ್ಮೀ ಕೋಟಿ ವಿಲಾಸಿನೀ ॥೨೨॥

ತಿಲೋತ್ತಮಾ ತ್ರಿಕಾಲಸ್ಥಾ ತ್ರಿಕಾಲಜ್ಞಾಪ್ಯಧೀಶ್ವರೀ
ತ್ರಿವೇದಜ್ಞಾ ತ್ರಿಲೋಕಜ್ಞಾ ತುರೀಯಾಂತ ನಿವಾಸಿನೀ ॥೨೩॥

ದುರ್ಗಾರಾಧ್ಯಾ ರಮಾರಾಧ್ಯಾ ವಿಶ್ವಾರಾಧ್ಯಾ ಚಿದಾತ್ಮಿಕಾ
ದೇವಾರಾಧ್ಯಾ ಪರಾರಾಧ್ಯಾ ಬ್ರಹ್ಮಾರಾಧ್ಯಾ ಪರಾತ್ಮಿಕಾ ॥೨೪॥

ಶಿವಾರಾಧ್ಯಾ ಪ್ರೇಮಸಾಧ್ಯಾ ಭಕ್ತಾರಾಧ್ಯಾ ರಸಾತ್ಮಿಕಾ
ಕೃಷ್ಣಪ್ರಾಣಾರ್ಪಿಣೀ ಭಾಮಾ ಶುದ್ಧ ಪ್ರೇಮ ವಿಲಾಸಿನೀ ॥೨೫॥

ಕೃಷ್ಣಾಽರಾಧ್ಯಾ ಭಕ್ತಿ ಸಾಧ್ಯಾ ಭಕ್ತವೃಂದ ನಿಷೇವಿತಾ
ವಿಶ್ವಾಽಧಾರಾ ಕೃಪಾಽಧಾರಾ ಜೀವಾಽಧಾರಾಽತಿನಾಯಿಕಾ ॥೨೬॥

ಶುದ್ಧಪ್ರೇಮಮಯೀ ಲಜ್ಜಾ ನಿತ್ಯಶುದ್ಧಾ ಶಿರೋಮಣಿಃ
ದಿವ್ಯರೂಪಾ ದಿವ್ಯಭೋಗಾ ದಿವ್ಯವೇಷಾ ಮುದಾನ್ವಿತಾ ॥೨೭॥

ದಿವ್ಯಾಂಗನಾಽವೃಂದ ಸಾರಾ ನಿತ್ಯನೂತನಯೌವನಾ
ಪರಬ್ರಹ್ಮಾಽವೃತಾ ಧ್ಯೇಯಾ ಮಹಾರೂಪಾ ಮಹೋಜ್ವಲಾ ॥೨೮॥

ಕೋಟಿ ಸೂರ್ಯ ಪ್ರಭಾ ಕೋಟಿ ಚಂದ್ರಬಿಂಬಾಧಿಕಛವಿಃ
ಕೋಮಲಾವೃತ ವಾಗಾದ್ಯಾ ವೇದಾದ್ಯಾ ವೇದ ದುರ್ಲಭಾ ॥೨೯॥

ಕೃಷ್ಣಸಕ್ತಾ ಕೃಷ್ಣ ಭಕ್ತಾ ಚಂದ್ರಾವಲಿನಿಷೇವಿತಾ
ಕಲಾ ಷೋಡಶ ಸಂಪೂರ್ಣಾ ಕೃಷ್ಣದೇಹಾರ್ಧಧಾರಿಣೀ ॥೩೦॥

ಕೃಷ್ಣ ಬುದ್ಧಿಃ ಕೃಷ್ಣಸಾರಾ ಕೃಷ್ಣ ರೂಪ ವಿಹಾರಿಣೀ
ಕೃಷ್ಣ ಕಾಂತಾ ಕೃಷ್ಣ ಧನಾ ಕೃಷ್ಣ ಮೋಹನ ಕಾರಿಣೀ ॥೩೧॥

ಕೃಷ್ಣದೃಷ್ಟಿಃ ಕೃಷ್ಣಗೋತ್ರಾ ಕೃಷ್ಣದೇವೀ ಕುಲೋದ್ವಹಾ
ಸರ್ವಭೂತ ಸ್ಥಿತಾತ್ಮಾ ಚ ಸರ್ವ ಲೋಕ ನಮಸ್ಕೃತಾ ॥ ೩೨ ॥

ಕೃಷ್ಣ ದಾತ್ರೀ ಪ್ರೇಮ ದಾತ್ರೀ ಸ್ವರ್ಣ ಗಾತ್ರೀ ಮನೋರಮಾ
ನಗದಾತ್ರೀ ಯಶೋದಾತ್ರೀ ಮಹಾದೇವೀ ಶುಭಂಕರೀ ॥ ೩೩ ॥

ಶ್ರೀ ಶೇಷದೇವ ಜನನೀ ಅವತಾರ ಗಣ ಪ್ರಸೂಃ
ಉತ್ಪಲಾಂಕಾಽರವಿಂದಾಽಕಾ ಪ್ರಾಸಾದಾಂಕಾಽ ದ್ವಿತೀಯಕಾ ॥ ೩೪ ॥

ರಥಾಂಕಾ ಕುಂಜರಾಂಕಾ ಚ ಕುಂಡಲಾಂಕ ಪದ ಸ್ಥಿತಾ
ಛತ್ರಾಂಕಾ ವಿದ್ಯುದಂಕಾ ಚ ಪುಷ್ಪ ಮಾಲಾಂಕಿತಾ ಸತೀ ॥ ೩೫ ॥

ದಂಡಾಂಕಾ ಮುಕುಟಾಂಕಾ ಚ ಪೂರ್ಣ ಚಂದ್ರ ರುಚಾಂಕಿಕಾ
ಕೃಷ್ಣಾನ್ನಾಹಾರ ಪಾಕಾ ಚ ವೃಂದಾ ಕುಂಜ ವಿಹಾರಿಣೀ ॥ ೩೬ ॥

ಕೃಷ್ಣ ಪ್ರಬೋಧನ ಕರೀ ಕೃಷ್ಣ ಶೇಷಾನ್ನ ಭೋಜನೀ
ಪದ್ಮಕೇಸರಿ ಮಧ್ಯಸ್ಥಾ ಸಂಗೀತಾಗಮ ವೇದಿನೀ ॥ ೩೭ ॥

ಅಣಿಮಾದಿ ಗುಣೈಶ್ವರ್ಯಾ ದೇವ ವೃಂದ ವಿಮೋಹಿನೀ
ಸರ್ವಾನಂದ ಪ್ರದಾ ಸರ್ವಾ ಸುವರ್ಣ ಲತಿಕಾಕೃತಿಃ ॥ ೩೮ ॥

ಕೃಷ್ಣಾಭಿಸಾರ ಸಂಕೇತಾ ಮಾಲಿನೀ ನೃತ್ಯ ಪಂಡಿತಾ
ಗೋಪೀ ಸಿಂಧು ಸಕಾಶಾಪ್ಯಾ ಗೋಪ ಮಂಡಪ ಶೋಭಿನೀ ॥ ೩೯ ॥

ಶ್ರೀ ಕೃಷ್ಣಪ್ರೀತಿದಾಽಭೀತಾ ಪ್ರತ್ಯಂಗ ಪುಲಕಾಂಚಿತಾ
ಶ್ರೀ ಕೃಷ್ಣಾಲಿಂಗನ ರತಾ ಗೋವಿಂದ ವಿರಹಾಕ್ಷಮಾ ॥ ೪೦ ॥

ಅನಂತ ಗುಣ ಸಂಪನ್ನಾ ಕೃಷ್ಣ ಕೀರ್ತನ ಲಾಲಸಾ
ಬೀಜತ್ರಯ ಮಯೀ ಮೂರ್ತಿಃ ಕೃಷ್ಣಾನುಗ್ರಹ ವಾಂಛಿನೀ ॥ ೪೧ ॥

ವಿಮಲಾದಿ ನಿಷೇವ್ಯಾ ಚ ಲಲಿತಾದ್ಯರ್ಚಿತಾ ಸತೀ
ಪದ್ಮ ವೃಂದ ಸ್ಥಿತಾ ಹೃಷ್ಟಾ ತ್ರಿಪುರಾ ಪರಿಸೇವಿತಾ ॥ ೪೨ ॥

ವೃಂದಾವತ್ಯರ್ಚಿತಾ ಶ್ರದ್ಧಾ ದುರ್ಜ್ಞೇಯಾ ಭಕ್ತವತ್ಸಲಾ
ದುರ್ಲಭಾ ಸಾಂದ್ರ ಸೌಖ್ಯಾತ್ಮಾ ಶ್ರೇಯೋಹೇತುಃ ಸುಭೋಗದಾ ॥ ೪೩ ॥

ಸಾರಂಗಾ ಶಾರದಾ ಬೋಧಾ ಸದ್ವೃಂದಾವನ ಚಾರಿಣೀ
ಬ್ರಹ್ಮಾನಂದಾ ಚಿದಾನಂದಾ ಧ್ಯಾನಾನಂದಾಽರ್ಧಮಾತ್ರಿಕಾ ॥ ೪೪ ॥

ಗಂಧರ್ವಾಸುರತಜ್ಞಾ ಚ ಗೋವಿಂದ ಪ್ರಾಣ ಸಂಗಮಾ
ಕೃಷ್ಣಾಂಗ ಭೂಷಣಾ ಸ್ವರ್ಣ ಭೂಷಣಾ ರತ್ನ ಭೂಷಿತಾ ॥ ೪೫ ॥

ಶ್ರೀ ಕೃಷ್ಣ ಹೃದಯಾವಾಸಾ ಮುಕ್ತಾ ಕನಕ ನಾಸಿಕಾ
ಸದ್ರತ್ನ ಕಂಕಣ ಯುತಾ ಶ್ರೀಮನ್ನೀಲ ಗಿರಿಸ್ಥಿತಾ ॥ ೪೬ ॥

ಸ್ವರ್ಣ ನೂಪುರ ಸಂಪನ್ನಾ ಸ್ವರ್ಣಕಿಂಕಿಣಿ ಮಂಡಿತಾ
ಅಶೇಷಾ ರಾಸ ಕುತುಕಾ ರಂಭೋರುಸ್ತನು ಮಧ್ಯಮಾ ॥ ೪೭ ॥

ಪರಾಕೃತಿಃ ಪರಾನಂದಾ ಪರ ಸ್ವರ್ಗ ವಿಹಾರಿಣೀ
ಪ್ರಸೂನ ಕಬರೀ ಚಿತ್ರಾ ಮಹಾಸಿಂಧೂರ ಸುಂದರೀ ॥ ೪೮ ॥

ಕೈಶೋರ ವಯಸಾ ಬಾಲಾ ಪ್ರಮದಾಕುಲ ಶೇಖರಾ
ಕೃಷ್ಣಾಧರ ಸುಧಾಽಸ್ವಾದಾ ಶ್ಯಾಮಾ ಪ್ರೇಮವಿನೋದಿನೀ ॥ ೪೯ ॥

ಶಿಖಿ ಪಿಚ್ಛಲಸಚ್ಚೂಡಾ ಸ್ವರ್ಣ ಚಂಪಕ ಭೂಷಿತಾ
ಕುಂಕುಮಾಲಕ್ತ ಕಸ್ತೂರೀ ಮಂಡಿತಾ ಚಾಪರಾಜಿತಾ ॥ ೫೦ ॥

ಹೇಮಹಾರಾನ್ವಿತಾ ಪುಷ್ಪಾಹಾರಾಢ್ಯಾ ರಸವತೀ ತಥಾ
ಮಾಧುರ್ಯ ಮಧುರಾ ಪದ್ಮಾ ಪದ್ಮ ಹಸ್ತಾ ಸುವಿಶ್ರುತಾ ॥ ೫೧ ॥

ಭ್ರೂ ಭಂಗಾಭಂಗ ಕೋದಂಡ ಕಟಾಕ್ಷ ಶರಸಂಧಿನೀ
ಶೇಷದೇವ ಶಿರಸ್ಥಾ ಚ ನಿತ್ಯ ಸ್ಥಲ ವಿಹಾರಿಣೀ ॥ ೫೨ ॥

ಕಾರುಣ್ಯ ಜಲ ಮಧ್ಯಸ್ಥಾ ನಿತ್ಯ ಮುಕ್ತಾಽತಿಪಾವನೀ
ಅಷ್ಟಭಾಷಾವತೀ ಚಾಷ್ಟನಾಯಿಕಾ ಲಕ್ಷಣಾವತೀ ॥ ೫೩ ॥

ಸುನೀತಿಜ್ಞಾ ಶ್ರುತಿಜ್ಞಾ ಚ ಸರ್ವಜ್ಞಾ ದುಃಖಹಾರಿಣೀ
ರಜೋಗುಣೇಶ್ವರೀ ರಮ್ಯಾ ಶರಚ್ಚಂದ್ರ ನಿಭಾನನಾ ॥ ೫೪ ॥

ಕೇತಕೀ ಕುಸುಮಾಭಾಸಾ ಸದಾ ಸಿಂಧು ವನ ಸ್ಥಿತಾ
ಹೇಮ ಪುಷ್ಪಾಧಿಕ ಕರಾ ಪಂಚಶಕ್ತಿಮಯೀ ಹಿತಾ ॥ ೫೫ ॥

ಸ್ತನಕುಂಭೀ ನರಾಢ್ಯಾ ಚ ಕ್ಷೀಣಾಽಪುಣ್ಯಾ ಯಶಸ್ವಿನೀ
ವೈರಾಜ ಸೂರ್ಯಜನನೀ ಶ್ರೀಶಾ ಭುವನ ಮೋಹಿನೀ ॥ ೫೬ ॥

ಮಹಾಶೋಭಾ ಮಹಾಮಾಯಾ ಮಹಾ ಶಾಂತಿರ್ಮಹಾಸ್ಮೃತಿ
ಮಹಾಮೋಹಾ ಮಹಾವಿದ್ಯಾ ಮಹಾಕೀರ್ತಿರ್ಮಹಾರತಿಃ ॥ ೫೭ ॥

ಮಹಾಧೈರ್ಯಾ ಮಹಾವೀರ್ಯಾ ಮಹಾಶಕ್ತಿರ್ಮಹಾದ್ಯುತಿಃ
ಮಹಾಗೌರೀ ಮಹಾಸಂಪತ್ ಮಹಾಭೋಗ ವಿಲಾಸಿನೀ ॥ ೫೮ ॥

ಸಮಯಾ ಭಕ್ತಿದಾಽಶೋಕಾ ವಾತ್ಸಲ್ಯ ರಸದಾಯಿನೀ
ಸುಹೃದ್ ಭಕ್ತಿಪ್ರದಾ ಸ್ವಚ್ಛಾ ಮಾಧುರ್ಯ ರಸ ವರ್ಷಿಣೀ ॥ ೫೯ ॥

ಭಾವ ಭಕ್ತಿ ಪ್ರದಾ ಶುದ್ಧಪ್ರೇಮ ಭಕ್ತಿ ವಿಧಾಯಿನೀ
ಗೋಪರಾಮಾ ಚಾಭಿರಾಮಾ ಕ್ರೀಡಾರಾಮಾ ಪರೇಶ್ವರೀ ॥ ೬೦ ॥

ನಿತ್ಯಾರಾಮಾ ಹ್ಯಾತ್ಮರಾಮಾ ಕೃಷ್ಣರಾಮಾ ರಮೇಶ್ವರೀ
ಏಕಾನೇಕ ಜಗದ್ವ್ಯಾಪ್ತಾ ವಿಶ್ವಲೀಲಾ ಪ್ರಕಾಶಿನೀ ॥ ೬೧ ॥

ಸರಸ್ವತೀಶಾ ದುರ್ಗೇಶಾ ಜಗದೀಶಾ ಜಗದ್ವಿಧಿಃ
ವಿಷ್ಣು ವಂಶ ನಿವಾಸಾ ಚ ವೃಷ್ಣಿವಂಶ ಸಮುದ್ಭವಾ ॥ ೬೨ ॥

ವಿಷ್ಣು ವಂಶ ಸ್ತುತಾ ಕರ್ತ್ರೀ ಸದಾವಿಷ್ಣು ವಶಾವನೀ
ಆರಾಮಸ್ಥಾ ವನಸ್ಥಾ ಚ ಸೂರ್ಯಪುತ್ರ್ಯವ ಗಾಹಿನೀ ॥ ೬೩ ॥

ಪ್ರೀತಿಸ್ಥಾ ನಿತ್ಯಯಂತ್ರಸ್ಥಾ ಗೋಲೋಕಸ್ಥಾ ವಿಭೂತಿದಾ
ಸ್ವಾನುಭೂತಿಸ್ಥಿತಾಽವ್ಯಕ್ತಾ ಸರ್ವಲೋಕ ನಿವಾಸಿನೀ ॥ ೬೪ ॥

ಅಮೃತಾ ಚೈವಾದ್ಭುತಾ ಶ್ರೀಮನ್ನಾರಾಯಣ ಸಮೀಹಿತಾ
ಅಕ್ಷರಾ ಚಾಪಿ ಕೂಟಸ್ಥಾ ಮಹಾಪುರುಷ ಸಂಭವಾ ॥ ೬೫ ॥

ಔದಾರ್ಯ ಭಾವ ಸಾಧ್ಯಾ ಚ ಸ್ಥೂಲ ಸೂಕ್ಷ್ಮಾದಿ ರೂಪಿಣೀ
ಶಿರೀಷಪುಷ್ಪ ಮೃದುಲಾ ಗಾಂಗೇಯ ಮುಕುರ ಪ್ರಭಾ ॥ ೬೬ ॥

ನೀಲೋತ್ಪಲ ಜಿತಾಕ್ಷೀ ಚ ಸದ್ರತ್ನ ಕಬರಾನ್ವಿತಾ
ಪ್ರೇಮ ಪರ್ಯಂಕ ನಿಲಯಾ ತೇಜೋಮಂಡಲ ಮಧ್ಯಗಾ ॥ ೬೭ ॥

ಕೃಷ್ಣಾಂಗ ಗೋಪನಾಭೇದಾ ಲೀಲಾವರಣ ನಾಯಿಕಾ
ಸುಧಾ ಸಿಂಧು ಸಮುಲ್ಲಾಸಾಽಮೃತ ಸ್ಯಂದ ವಿಧಾಯಿನೀ ॥ ೬೮ ॥

ಕೃಷ್ಣಚಿತ್ತಾ ಸುಚಿತ್ತಾ ಚ ಪ್ರೇಮಚಿತ್ತಾ ಹರಿಪ್ರಿಯಾ
ಕಿಂಚನಗುಣಗ್ರಾಮಾ ಕೃಷ್ಣಲೀಲಾ ಅಮಲಾಪಹಾ ॥ ೬೯ ॥

ರಾಸ ಸಿಂಧು ಶಶಾಂಕಾ ಚ ರಾಸಮಂಡಲ ಮಂಡಿನೀ
ನತವ್ರತಾ ಶ್ರೀ ಹರೀಚ್ಛಾ ಸುಮೂರ್ತಿಃ ಸುರ ವಂದಿತಾಃ ॥ ೭೦ ॥

ಗೋಪೀ ಚೂಡಾಮಣಿ ಗೋಪೀಗಣೇಡ್ಯಾ ವಿರಜಾಧಿಕಾ
ಗೋಪಪ್ರೇಷ್ಠಾ ಗೋಪಕನ್ಯಾ ಗೋಪನಾರೀ ಸುಗೋಪಿಕಾ ॥ ೭೧ ॥

ಗೋಪಧಾಮಾ ಸುದಾಮಾಂಬಾ ಗೋಪಾಲೀ ಗೋಪಮೋಹಿನೀ
ಗೋಪಭೂಷಾ ಕೃಷ್ಣಭೂಷಾ ಶ್ರೀ ವೃಂದಾವನ ಚಂದ್ರಿಕಾ ॥ ೭೨ ॥

ವೀಣಾದಿ ಘೋಷ ನಿರತಾ ರಾಸೋತ್ಸವ ವಿಕಾಸಿನೀ
ಕೃಷ್ಣಚೇಷ್ಟಾಽಪರಿಜ್ಞಾತಾ ಕೋಟಿ ಕಂದರ್ಪ ಮೋಹಿನೀ ॥ ೭೩ ॥

ಶ್ರೀ ಕೃಷ್ಣ ಗುಣ ಗಾನಾಢ್ಯಾ ದೇವಸುಂದರಿ ಮೋಹಿನೀ
ಕೃಷ್ಣ ಚಂದ್ರ ಮನೋಜ್ಞಾ ಚ ಕೃಷ್ಣ ದೇವ ಸಹೋದರೀ ॥ ೭೪ ॥

ಕೃಷ್ಣಾಭಿಲಾಷಿಣೀ ಕೃಷ್ಣ ಪ್ರೇಮಾನುಗ್ರಹ ವಾಂಛಿನೀ
ಕ್ಷೇಮಾ ಚ ಮಧುರಾಲಾಪಾ ದಿವ್ಯೋ ಮಾತಾದಿಭದ್ರಿಕಾ ॥ ೭೫ ॥

ಪ್ರಕೃತಿಃ ಪರಮಾನಂದಾ ನೀಪ ದ್ರುಮ ತಲಸ್ಥಿತಾ
ಕೃಪಾಕಟಾಕ್ಷಾ ಬಿಂಬೋಷ್ಠೀ ರಂಭಾ ಚಾರು ನಿತಂಬಿನೀ ॥ ೭೬ ॥

ಸ್ಮರಕೇಲಿ ನಿದಾನಾ ಚ ಗಂಡ ತಾಟಂಕ ಮಂಡಿತಾ
ಹೇಮಾದ್ರಿ ಕಾಂತಿ ರುಚಿರಾ ಪ್ರೇಮಾಢ್ಯಾ ಮದಮಂಥರಾ ॥ ೭೭ ॥

ಕೃಷ್ಣಚಿಂತಾ ಪ್ರೇಮಚಿಂತಾ ರತಿಚಿಂತಾ ಚ ಕೃಷ್ಣದಾ
ರಾಸಿಚಿಂತಾ ಭಾವಚಿಂತಾ ಶುದ್ಧ ಚಿಂತಾ ಮಹಾರಸಾ ॥ ೭೮ ॥

ಕೃಷ್ಣಾऽದೃಷ್ಟತ್ರುಟಿಯುಗಾ ದೃಷ್ಟಿ ಪಕ್ಷ್ಮ ವಿನಿಂದಿನೀ
ಕಂದರ್ಪ ಜನನೀ ಮುಖ್ಯಾ ವೈಕುಂಠ ಗತಿ ದಾಯಿನೀ ॥ ೭೯ ॥

ರಾಸಭಾವಾ ಪ್ರಿಯಾಶ್ಲಿಷ್ಟಾ ಪ್ರೇಷ್ಠಾ ಪ್ರಥಮ ನಾಯಿಕಾ
ಶುದ್ಧಾ ಸುಧಾದೇಹಿನೀ ಚ ಸುಂದರೀ ರಸಮಂಜರೀ ॥ ೮೦ ॥

ಸುಪ್ರಭಾವಾ ಶುಭಾಚಾರ ಸ್ವರ್ಣದೀ ನರ್ಮದಾಂಬಿಕಾ
ಗೋಮತೀ ಚಂದ್ರಭಾಗೇಡ್ಯಾ ಸರಯೂ ತಾಮ್ರಪರ್ಣಿಸೂಃ ॥ ೮೧ ॥

ನಿಷ್ಕಲಂಕ ಚರಿತ್ರಾ ಚ ನಿರ್ಗುಣಾ ಚ ನಿರಂಜನಾ ॥ ೮೨ ॥

*ಶ್ರೀ ರಾಧಾಕೃಷ್ಣ ಯುಗಲ ಸಹಸ್ರ ನಾಮಸ್ತೋತ್ರಂ ಸಂಪೂರ್ಣಮ್*

ಈ ರಾಧಾಕೃಷ್ಣ ಯುಗಲ ಸಹಸ್ರನಾಮ ಸ್ತೋತ್ರವನ್ನು ಪ್ರತಿ ದಿನವೂ ಭಕ್ತಿಯಿಂದ ಪಠಿಸಿದರೆ ಬಯಸಿದ ಭೋಗ ಭಾಗ್ಯಗಳನ್ನೆಲ್ಲ ಶ್ರೀ ಕೃಷ್ಣ ಪರಮಾತ್ಮನು ಕರುಣಿಸುವನು. ಈ ದಿವ್ಯ ಸ್ತೋತ್ರದ ನಿತ್ಯಪಾರಾಯಣದಿಂದ ರಾಧಾಮಾಧವರಲ್ಲಿ ಅವಿಚ್ಛಿನ್ನ ಭಕ್ತಿ ಉಂಟಾಗಿ ಮುಕ್ತಿಯು ಕರಗತವಾಗುವದು. ಇದನ್ನು ಪಠಿಸುವವರ ಬುದ್ಧಿಯು ಎಂದೂ ಕುಂಠಿತವಾಗುವದಿಲ್ಲ. ರಾಧಾ ಕೃಷ್ಣರ ಪ್ರೇಮ ಸುಧೆಯ ಸಾಗರದಲ್ಲಿ ಇದರಿಂದ ನಿತ್ಯವೂ ವಿಹರಿಸಬಹುದು. ಈ ಯುಗಲ ಸ್ತೋತ್ರದ ಪಠಣ ಪಾರಾಯಣಗಳಿಂದ ಮಾನವರ ಸರ್ವ ಮನೋರಥಗಳೂ ಸಿದ್ಧಿಸುವಲ್ಲಿ ಸಂದೇಹವಿಲ್ಲ. ನಾರದನೇ, ಇದೇ ಯುಗಲ ರೂಪಿಯಾದ ರಾಧಾಕೃಷ್ಣರ ಯುಗಲ ಸಹಸ್ರ ನಾಮ ಸ್ತೋತ್ರವು. ಪ್ರಯತ್ನ ಪೂರ್ವಕವಾಗಿ ಇದನ್ನು ಪಠಿಸಿದರೆ ವೃಂದಾವನ ವಾಸ ಪುಣ್ಯ ಪ್ರಾಪ್ತಿ. ಸಮಸ್ತ ಪಾಪ ಪರಿಹಾರ, ಇಚ್ಛಿಸಿದ ಭೋಗಗಳ ಪ್ರಾಪ್ತಿ ಇವು ಆಗುತ್ತವೆ. ರಾಧಾ ಮಾಧವರಲ್ಲಿ ಭಕ್ತಿಯುಂಟಾಗುತ್ತದೆ. ಅಕುಂಠಿತ ಮೇಧಾ ಶಕ್ತಿಯುಳ್ಳ, ರಾಧಾ ಪ್ರೇಮ ಸುಧಾ ಸಿಂಧುವಿನಲ್ಲಿ ನಿತ್ಯ ವಿಹಾರ ಮಾಡುತ್ತಿರುವ ಶ್ರೀ ಕೃಷ್ಣನಿಗೆ ನಮಸ್ಕಾರ. ರಾಧೆಯು ಜಗತ್ತಿನ ಸೃಷ್ಟಿ ಕಾರಣಳು, ಸ್ಥಿತಿ ಸಂಹಾರಗಳಿಗೂ ಕಾರಣಳು. ಎಲ್ಲರಿಗೂ ಅಧೀಶ್ವರಿಯು, ಭೋಗ ಮೋಕ್ಷಪ್ರದವಾದ ರಾಧಾಕೃಷ್ಣರ ಸಹಸ್ರನಾಮವನ್ನು ನಾರದನೇ ನಿನಗೆ ನಾನು ಹೇಳಿದ್ದೇನೆ.

*ನಾರದ ಮಹಾಪುರಾಣ ಪೂರ್ವಭಾಗ ಎಪ್ಪತ್ತಮೂರನೇಯ ಅಧ್ಯಾಯ ಮುಗಿದುದು*

—o—

# ನಾರದ ಮಹಾಪುರಾಣದಲ್ಲಿ ನಾಲ್ಕನೆಯ ಪಾದ

ನಾರದ - ಸನಾತನ ಸಂವಾದ

ಅಧ್ಯಾಯ - ೭೪

## ಹದಿನೆಂಟು ಪುರಾಣಗಳ ವಿಷಯ ನಿರೂಪಣೆ

ದೇವರ್ಷಿ ನಾರದರು ವಿನಯದಿಂದ ಸನಾತನರಿಗೆ ನಮಸ್ಕಾರ ಮಾಡಿ ಕೇಳುತ್ತಾರೆ. ಬ್ರಹ್ಮನ್, ತಾವು ಪುರಾಣಜ್ಞರಲ್ಲಿ ಶ್ರೇಷ್ಠರು. ಜ್ಞಾನ ವಿಜ್ಞಾನ ತತ್ಪರರು. ಆದ್ದರಿಂದ ತಾವು ನನಗೆ ಪುರಾಣಗಳ ವಿಭಾಗಗಳನ್ನು ಸರಿಯಾಗಿ ತಿಳಿಸಬೇಕು. ಈ ವಿಷಯವನ್ನು ತಿಳಿದರೆ ಎಲ್ಲವನ್ನು ತಿಳಿದಂತೆ, ಎಲ್ಲವನ್ನೂ ಮಾಡಿದಂತೆ. ಪುರಾಣಗಳ ಪಠಣದಿಂದ ವರ್ಣ, ಆಶ್ರಮ ಮತ್ತು ಆಚಾರಗಳ ಜ್ಞಾನವುಂಟಾಗುತ್ತದೆ. ಪ್ರಭುವೇ! ಪುರಾಣಗಳೆಷ್ಟು? ಅವುಗಳಲ್ಲಿ ಒಂದೊಂದರ ಶ್ಲೋಕ ಸಂಖ್ಯೆ ಎಷ್ಟು? ಅಲ್ಲಿ ಯಾವ ಯಾವ ಉಪಾಖ್ಯಾನಗಳಿವೆ? ಇವನ್ನೂ, ನಾಲ್ಕು ವರ್ಣಗಳಿಗೆ ಸಂಬಂಧಪಟ್ಟ ವ್ರತ ಕಥೆಗಳನ್ನೂ, ಸೃಷ್ಟಿ ಕ್ರಮದಿಂದ ಬೇರೆ ಬೇರೆ ವಂಶಗಳಲ್ಲಿ ಹುಟ್ಟಿದ ಮಹಾಪುರುಷರ ಜೀವನ ಕಥೆಗಳನ್ನೂ ಸರಿಯಾಗಿ ತಿಳಿಸಿರಿ. ತಮ್ಮ ಹೊರತು ನನ್ನ ಸಂದೇಹ ಪರಿಹರಿಸುವವರು ಮತ್ತಾರೂ ಇಲ್ಲ.

**ಸೂತರು :-** ಬ್ರಾಹ್ಮಣ ಶ್ರೇಷ್ಠರೇ! ನಾರದರ ಮಾತನ್ನು ಕೇಳಿ; ವಕ್ತೃಗಳಲ್ಲಿ ಶ್ರೇಷ್ಠರಾದ ಸನಾತನರು ಒಂದು ಕ್ಷಣ ನಾರಾಯಣನ ಧ್ಯಾನ ಮಾಡಿ ಅನಂತರ ಹೇಳಿದರು.

**ಸನಾತರು :-** ಮುನಿಶ್ರೇಷ್ಠನಾದ ನಾರದನೇ! ನಿನಗೆ ಧನ್ಯವಾದಗಳು. ಲೋಕೋಪಕಾರಕವಾದ ಪುರಾಣಗಳನ್ನು ಕೇಳಬೇಕೆಂಬ ನೈಷ್ಠಿಕ ಬುದ್ಧಿಯು ನಿನಗೆ ಉತ್ಪನ್ನವಾಗಿದೆ. ಸಂತೋಷ.

ಬ್ರಹ್ಮದೇವರು ಮರೀಚ್ಯಾದಿಗಳಿಗೆ ಬ್ರಹ್ಮ ಪುರಾಣದ ಪರಿಚಯ ಮಾಡಿಸಿದರು.

ಒಂದಾನೊಂದು ಕಾಲದಲ್ಲಿ ಪುತ್ರ ಸ್ನೇಹ ಪರಿಪೂರ್ಣನಾದ ಪರಮೇಷ್ಠಿಯು ತನ್ನ ಮಕ್ಕಳಾದ ಮರೀಚಿ ಮುಂತಾದವರಿಗೆ ಹೇಳಿದ ವಿಷಯವನ್ನೇ ಹೇಳುತ್ತೇನೆ. ವೇದಶಾಸ್ತ್ರ ಜ್ಞಾನ ಸಂಪನ್ನ, ವೇದಾಂಗ ಪಾರಂಗತ ಮರೀಚಿ ಮುನಿಯು ತನ್ನ ತಂದೆಯಾದ, ಲೋಕಕ್ಕೆ ತಂದೆಯಾದ ಬ್ರಹ್ಮದೇವರನ್ನು ನಮಸ್ಕರಿಸಿ ನೀನು ಕೇಳಿದಂತೆಯೇ ಪ್ರಶ್ನೆ ಕೇಳಿದರು.

**ಮರೀಚಿ ಋಷಿ:-** ದೇವ ದೇವೇಶ್ವರ, ಭಗವಂತ, ಸಮಸ್ತ ಲೋಕಗಳ ಉತ್ಪತ್ತಿಕಾರಣ! ಸರ್ವಮಂಗಳದಾಯಕ, ನನಗೆ ಪುರಾಣಗಳ ಉತ್ಪತ್ತಿ, ಲಕ್ಷಣ, ಪ್ರಮಾಣ ಅವುಗಳನ್ನು ಹೇಳಿದವರು, ಮತ್ತು ಕೇಳಿದವರು ಯಾರು ಯಾರು? ಈ ವಿಷಯಗಳನ್ನೆಲ್ಲ ದಯವಿಟ್ಟು ಹೇಳಬೇಕು.

**ಬ್ರಹ್ಮದೇವರು:-** ವತ್ಸ! ಸಮಸ್ತ ಚರಾಚರ ಪ್ರಪಂಚದ ಪರಿಜ್ಞಾನವನ್ನುಂಟು ಮಾಡುವ ಪುರಾಣ ವಾಙ್ಮಯದ ಸಂಗ್ರಹವನ್ನು ನಿನಗೀಗ ಹೇಳುತ್ತೇನೆ ಕೇಳು. ಹಿಂದೆ ಎಲ್ಲ ಕಲ್ಪಗಳಲ್ಲಿಯೂ ನೂರು ಕೋಟಿ ಶ್ಲೋಕ ವಿಸ್ತಾರವಾದ ಪುರಾಣವು ಒಂದೇ ಆಗಿತ್ತು. ಪುರಾಣವು ಧರ್ಮಾದಿ ನಾಲ್ಕು ಪುರುಷಾರ್ಥಗಳಿಗೂ ಮೂಲ. ಎಲ್ಲಾ ಶಾಸ್ತ್ರಗಳಿಗೂ

ಉದ್ಗಮಸ್ಥಾನ. ಆದರೆ ಕಾಲಬಲದಿಂದ ಅಷ್ಟನ್ನೂ,ಗ್ರಹಿಸುವ ಮತ್ತು ಧರಿಸುವ ಶಕ್ತಿಯು ಲೋಕಕ್ಕೆ ಇಲ್ಲವೆಂದು ತಿಳಿದು ಭಗವಂತನಾದ ನಾರಾಯಣನು ಪ್ರತಿಯೊಂದು ಚತುರ್ಯುಗದಲ್ಲಿಯೂ ವ್ಯಾಸರೂಪದಿಂದ ಅವಿರ್ಭವಿಸುತ್ತಾನೆ. ದ್ವಾಪರಯುಗದಲ್ಲಿ ನಾಲ್ಕು ಲಕ್ಷ ಶ್ಲೋಕಗಳಲ್ಲಿ ಪುರಾಣ ಸಂಗ್ರಹವನ್ನು ಮಾಡಿ ಅದನ್ನು ಹದಿನೆಂಟು ಭಾಗವನ್ನಾಗಿ ಮಾಡಿದನು. ಭೂಲೋಕದಲ್ಲಿ ಇಷ್ಟೇ ಪುರಾಣ ಭಾಗ ಪ್ರಚಾರದಲ್ಲಿರುತ್ತದೆ. ಇಂದಿಗೂ ದೇವಲೋಕದಲ್ಲಿ ನೂರು ಕೋಟಿ ಶ್ಲೋಕ ವಿಸ್ತಾರವಾದ ಪುರಾಣವು ಪ್ರಚಾರದಲ್ಲಿದೆ.

೧) ಬ್ರಹ್ಮ ೨) ಪದ್ಮ ೩) ವಿಷ್ಣು ೪) ವಾಯು ೫) ಭಾಗವತ ೬) ನಾರದ ೭) ಮಾರ್ಕಂಡೇಯ ೮) ಅಗ್ನಿ ೯) ಭವಿಷ್ಯ ೧೦) ಬ್ರಹ್ಮವೈವರ್ತ ೧೧) ಲಿಂಗ ೧೨) ವಾರಾಹ ೧೩) ಸ್ಕಂದ ೧೪) ವಾಮನ ೧೫) ಕೂರ್ಮ ೧೬) ಮತ್ಸ್ಯ ೧೭) ಗರುಡ ೧೮) ಬ್ರಹ್ಮಾಂಡ ಎಂಬುದಾಗಿ ಪುರಾಣಗಳು ಹದಿನೆಂಟು ಇವೆ. ಈಗ ಸಂಕ್ಷಿಪ್ತವಾಗಿ ಒಂದೊಂದು ಪುರಾಣದ ಕಥೆಯನ್ನೂ ಅದನ್ನು ಹೇಳುವವರು ಮತ್ತು ಕೇಳುವವರು ಯಾರೆಂಬುದನ್ನೂ ಹೇಳುತ್ತೇನೆ.

**೧) ಬ್ರಹ್ಮ ಪುರಾಣ:-** ಶ್ರೀ ವ್ಯಾಸರು ಮೊದಲು ಬ್ರಹ್ಮ ಪುರಾಣವನ್ನು ರಚಿಸಿದರು. ಇದು ಧರ್ಮ ಅರ್ಥ ಕಾಮ ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳಿಗೂ ಸಾಧಕವಾಗಿದೆ. ನಾನಾ ಅಖ್ಯಾನ ಇತಿಹಾಸಗಳಿಂದ ಕೂಡಿದ ಈ ಪುರಾಣದ ಶ್ಲೋಕ ಸಂಖ್ಯೆ ಹತ್ತು ಸಾವಿರ. ಇದರಲ್ಲಿ ದೇವತೆಗಳು ಅಸುರರು ದಕ್ಷ ಮೊದಲಾದ ಪ್ರಜಾಪತಿಗಳ ಉತ್ಪತ್ತಿಯನ್ನು ಹೇಳಿ ಅನಂತರ ಸೂರ್ಯವಂಶದ ವರ್ಣನೆಯನ್ನು ಕೊಡಲಾಗಿದೆ. ಅದೇ ಸಂದರ್ಭದಲ್ಲಿ ಚತುರ್ವ್ಯೂಹರೂಪಿಯಾದ ಶ್ರೀ ರಾಮಚಂದ್ರನ ಕಥೆಯನ್ನು ನಿರೂಪಿಸಲಾಗಿದೆ. ಚಂದ್ರವಂಶದ ನಿರೂಪಣೆಯನ್ನು ಮಾಡುವ ಸಂದರ್ಭದಲ್ಲಿ ಶ್ರೀ ಕೃಷ್ಣನ ಚರಿತ್ರೆಯನ್ನು ಇಲ್ಲಿ ಹೇಳಿದ್ದಾರೆ. ಎಲ್ಲ ದ್ವೀಪ, ವರ್ಷಗಳ (ಖಂಡಗಳು) ಪಾತಾಲ ಸ್ವರ್ಗಲೋಕಗಳ ವರ್ಣನೆಯೂ ಇಲ್ಲಿ ಬಂದಿದೆ. ನರಕ ವರ್ಣನೆ, ಸೂರ್ಯನ ಸ್ತುತಿ ಮತ್ತು ಕಥೆ, ಪಾರ್ವತಿಯ ಜನ್ಮ ಮತ್ತು ವಿವಾಹ ಕಥೆಗಳೂ ಇಲ್ಲಿವೆ. ದಕ್ಷ ಪ್ರಜಾಪತಿಯ ಕಥೆ ಮತ್ತು ಏಕಾಮ್ರೇಶ್ವರ ವರ್ಣನೆಯಲ್ಲಿ ಬ್ರಹ್ಮ ಪುರಾಣದ ಪೂರ್ವ ಭಾಗವು ಸಮಾಪ್ತವಾಗುತ್ತದೆ.

ಉತ್ತರಭಾಗದಲ್ಲಿ ಯಾತ್ರಾವಿಧಿಯನ್ನು ಹೇಳುತ್ತ ಪುರುಷೋತ್ತಮ ಕ್ಷೇತ್ರ ಮಾಹಾತ್ಮ್ಯವನ್ನು, ಅದೇ ಸಂದರ್ಭದಲ್ಲಿ ವಿಸ್ತಾರವಾಗಿ ಶ್ರೀ ಕೃಷ್ಣ ಚರಿತ್ರೆಯನ್ನೂ ಹೇಳಿದ್ದಾರೆ. ಯಮಲೋಕ ವರ್ಣನೆ, ಪಿತೃಶ್ರಾದ್ಧವಿಧಿ, ವರ್ಣಾಶ್ರಮ ಧರ್ಮ ನಿರೂಪಣೆ, ವೈಷ್ಣವಧರ್ಮ ಪ್ರತಿಪಾದನ, ಯುಗ ನಿರೂಪಣೆ, ಪ್ರಲಯವರ್ಣನ ಯೋಗನಿರೂಪಣ, ಸಾಂಖ್ಯ ಸಿದ್ಧಾಂತ ಪ್ರತಿಪಾದನ, ಬ್ರಹ್ಮವಾದದ ದಿಗ್ದರ್ಶನ, ಪುರಾಣ ಪ್ರಶಂಸಾ ಮೊದಲಾದ ವಿಷಯಗಳೂ ಇಲ್ಲಿ ಬಂದಿವೆ. ಈ ರೀತಿ ಸಮಸ್ತ ಪಾಪನಾಶಕವಾದ ಆನಂದ ಪ್ರದವಾದ ಬ್ರಹ್ಮ ಪುರಾಣದ ಎರಡು ಭಾಗಗಳ ವಿಷಯ ಸಂಕ್ಷೇಪವನ್ನು ಹೇಳಿದ್ದಾಯಿತು. ಸೂತಶೌನಕ ಸಂವಾದರೂಪವಾದ ಈ ಪುರಾಣವು ಭೋಗ ಮೋಕ್ಷ ಪ್ರದವಾಗಿದೆ. ಈ ಪುರಾಣವನ್ನು ಬರೆದು ವೈಶಾಖ ಶುದ್ಧ ಪೂರ್ಣಿಮೆಯ ದಿವಸ ಅನ್ನವಸ್ತ್ರ ಅಲಂಕಾರ ಸಹಿತವಾಗಿ ಪಂಡಿತನನ್ನು ಪೂಜಿಸಿ ಜಲಧೇನು ಸುವರ್ಣಸಹಿತವಾಗಿ ಭಕ್ತಿಪೂರ್ವಕವಾಗಿ ದಾನಮಾಡಿದರೆ ಚಂದ್ರ ಸೂರ್ಯ ನಕ್ಷತ್ರಗಳಿರುವವರೆಗೆ ಬ್ರಹ್ಮಲೋಕದಲ್ಲಿ ವಾಸವು

ಪ್ರಾಪ್ತವಾಗುತ್ತದೆ. ಬ್ರಹ್ಮ ಪುರಾಣದ ಈ ಅನುಕ್ರಮಣಿಕೆಯ ಪಾರಾಯಣ ಅಥವಾ ಶ್ರವಣ ಮಾಡುವವನಿಗೆ ಸಮಸ್ತ ಪುರಾಣಗಳ ಪಾರಾಯಣ ಮತ್ತು ಶ್ರವಣ ಮಾಡಿದ ಫಲವು ಬರುತ್ತದೆ. ಇಂದ್ರಿಯಗಳನ್ನು ನಿಗ್ರಹಿಸಿ ಹವಿಷ್ಯಾನ್ನವನ್ನು ಭುಂಜಿಸುತ್ತ ಸಮಗ್ರ ಬ್ರಹ್ಮ ಪುರಾಣವನ್ನು ಪಾರಾಯಣ ಮಾಡುವವನಿಗೆ ಬ್ರಹ್ಮಲೋಕದಪ್ರಾಪ್ತಿಯಾಗುತ್ತದೆ. ಈ ಪುರಾಣದ ಕೀರ್ತನದಿಂದಲೇ ಬಯಸಿದ ಇಷ್ಟಾರ್ಥ ಪ್ರಾಪ್ತಿಯಾಗುತ್ತದೆ.

## ಪದ್ಮ ಪುರಾಣದ ಲಕ್ಷಣ ಮತ್ತು ಅದರ ವಿಷಯಾನುಕ್ರಮಣಿಕೆ

ಪ್ರಸನ್ನವಾದ ಮನಸ್ಸಿನಿಂದ ಪದ್ಮ ಪುರಾಣದ ಪಾರಾಯಣ ಮತ್ತು ಶ್ರವಣವು ಬಹುಪುಣ್ಯಪ್ರದವಾಗಿದೆ. ಮನುಷ್ಯನಿಗೆ ಪಂಚೇಂದ್ರಿಯಗಳಿರುವಂತೆ ಪದ್ಮಪುರಾಣದಲ್ಲಿ ಪಂಚಖಂಡಗಳಿವೆ. ಇಲ್ಲಿ ಮಹರ್ಷಿಗಳಾದ ಪುಲಸ್ತ್ಯರು ಭೀಷ್ಮರಿಗೆ ಸೃಷ್ಟಿ ಮೊದಲಾದ ಕ್ರಮದಿಂದ ನಾನಾ ಉಪಾಖ್ಯಾನ ಮತ್ತು ಇತಿಹಾಸಗಳ ಮೂಲಕವಾಗಿ ಧರ್ಮವನ್ನು ನಿರೂಪಿಸುತ್ತಾರೆ. ವಿಸ್ತಾರವಾಗಿ ಪುಷ್ಕರ ತೀರ್ಥ ಮಾಹಾತ್ಮ್ಯ, ಬ್ರಹ್ಮಯಜ್ಞ ವಿಧಿ, ವೇದಪಾಠಲಕ್ಷಣ, ನಾನಾದಾನ ವ್ರತಗಳ ನಿರೂಪಣ, ಪಾರ್ವತೀವಿವಾಹ, ತಾರಕಾಸುರನ ಕಥೆ, ಗೋಮಾಹಾತ್ಮ್ಯ, ಕಾಲಕೇಯದೈತ್ಯರ ವಧ, ಗ್ರಹಪೂಜಾವಿಧಿ ಮತ್ತು ದಾನವಿಧಿಗಳು ಈ ಪುರಾಣದ ಮೊದಲನೆಯ ಸೃಷ್ಟಿ ಖಂಡದಲ್ಲಿವೆ.

## ಭೂಮಿಖಂಡ ಮತ್ತು ಸ್ವರ್ಗಖಂಡ

ಮಾತಾಪಿತೃಗಳ ಪೂಜೆಯ ವಿಷಯದಲ್ಲಿ ಶಿವಶರ್ಮನ ಪ್ರಾಚೀನ ಕಥೆ, ಸುವತ್ರನ ಕಥೆ, ವೃತ್ರಾಸುರವಧದ ಕಥೆ, ಪೃಥುವೇನ ಮತ್ತು ಸುನೀಥೆಯರ ಕಥೆ, ಸುಕಲೋಪಾಖ್ಯಾನ, ಧರ್ಮೋಪಾಖ್ಯಾನ, ಪಿತೃ ಸೇವೆಯ ವಿಷಯದ ಉಪಾಖ್ಯಾನ, ನಹುಷಕಥಾ, ಯಯಾತಿಚರಿತ್ರ, ಗುರುತೀರ್ಥನಿರೂಪಣ, ರಾಜ ಮತ್ತು ಜೈಮಿನಿಗಳ ಸಂವಾದದಲ್ಲಿ ಬರುವ ಅತ್ಯಂತ ಆಶ್ಚರ್ಯಕರವಾದ ಕಥೆ, ಅಶೋಕಸುಂದರಿಯ ಕಥೆ, ಹುಂಡದೈತ್ಯನವಧ, ಕಾಮೋದಾ ಎಂಬವಳ ಕಥೆ, ವಿಹುಂಡ ದೈತ್ಯನ ವಧ, ಚ್ಯವನರ ಜೊತೆಗೆ ಕುಂಜಲನ ಸಂವಾದ, ಸಿದ್ಧೋಪಾಖ್ಯಾನ, ಈ ಖಂಡದ ಫಲವಿಚಾರ ಇವೆಲ್ಲವೂ ಸೂತ ಶೌನಕ ಸಂವಾದರೂಪವಾದ ಪದ್ಮಪುರಾಣದ ಭೂಮಿಖಂಡದಲ್ಲಿ ಬರುತ್ತವೆ. ಬ್ರಹ್ಮಾಂಡದ ಉತ್ಪತ್ತಿ, ಪೃಥ್ವಿಸಹಿತವಾದ ಸಮಸ್ತ ಲೋಕಗಳ ಸ್ಥಿತಿ, ತೀರ್ಥಗಳ ವರ್ಣನೆ ಇವು ಸ್ವರ್ಗಖಂಡದಲ್ಲಿ ಬರುತ್ತವೆ. ನರ್ಮದಾ ನದಿಯ ಉತ್ಪತ್ತಿ, ನರ್ಮದೆಯ ಬೇರೆ ಬೇರೆ ತೀರ್ಥಗಳ ವರ್ಣನೆ. ಕುರುಕ್ಷೇತ್ರಾದಿ ತೀರ್ಥಗಳ ಪುಣ್ಯಕರವಾದ ಕಥೆ, ಯಮುನೆಯ ಕಥೆ. ಕಾಶೀ ಮಾಹಾತ್ಮ್ಯ ವರ್ಣನೆ, ಗಯಾ ಮತ್ತು ಪ್ರಯಾಗದ ಪುಣ್ಯಕರವಾದ ಮಾಹಾತ್ಮ್ಯದ ನಿರೂಪಣ, ವರ್ಣ ಮತ್ತು ಆಶ್ರಮಗಳಿಗೆ ಅನುಕೂಲವಾದ ಕರ್ಮಯೋಗದ ವಿಸ್ತರಣ, ಪುಣ್ಯಕರ್ಮಕಥೆಯನ್ನು ಅವಲಂಬಿಸಿ ವ್ಯಾಸ ಜೈಮಿನಿ ಸಂವಾದ. ಸಮುದ್ರಮಂಥನ ಕಥೆ, ವ್ರತಕಥೆಗಳು, ಕಾರ್ತಿಕ ಮಾಸದ ಕೊನೆಯ ಐದು ದಿನಗಳಲ್ಲಿ ಮಾಡಬೇಕಾದ ಭೀಷ್ಮ ಪಂಚಕದ ಮಾಹಾತ್ಮ್ಯೆ, ಸರ್ವಾಪರಾಧನಿವಾರಕ ಸ್ತೋತ್ರ, ಸಮಸ್ತ ಪಾಪನಾಶಕವಾದ ವಿಷಯಗಳೆಲ್ಲವೂ ಈ ಖಂಡದಲ್ಲಿ ಬಂದಿವೆ.

## ಪಾತಾಲಖಂಡ

ರಾಮಾಶ್ವಮೇಧ ಪ್ರಸಂಗದಲ್ಲಿ ಮೊದಲು ರಾಮನ ರಾಜ್ಯಾಭಿಷೇಕ, ಅಗಸ್ತ್ಯಾದಿ ಮಹರ್ಷಿಗಳ ಆಗಮನ, ಪುಲಸ್ತ್ಯ ವಂಶದ ವರ್ಣನೆ, ಅಶ್ವಮೇಧ ಯಾಗೋಪದೇಶ, ಅಶ್ವಮೇಧದ ಕುದುರೆಯ ಸಮಸ್ತ ಭೂಮಂಡಲ ಸಂಚಾರ, ಅನೇಕ ರಾಜರ ಪುಣ್ಯಕರವಾದ ಕಥೆ, ಜಗನ್ನಾಥನ ಮಹಿಮೆ, ಸರ್ವಪಾಪನಾಶಕವಾದ ವೃಂದಾವನದ ಮಾಹಾತ್ಮ್ಯ, ಕೃಷ್ಣಾವತಾರದ ನಿತ್ಯಲೀಲೆಗಳ ನಿರೂಪಣ, ವೈಶಾಖ ಸ್ನಾನ ದಾನ ಪೂಜೆಗಳ ಫಲ, ಭೂಮಿ ವರಾಹ ಸಂವಾದ, ಯಮಬ್ರಾಹ್ಮಣ ಕಥಾ, ರಾಜದೂತ ಸಂವಾದ, ಶ್ರೀ ಕೃಷ್ಣಸ್ತೋತ್ರ, ಶಂಭುಸಮಾಗಮ, ದಧೀಚಿಯ ಕಥೆ, ಭಸ್ಮಮಾಹಾತ್ಮ್ಯ, ಉತ್ತಮವಾದ ಶಿವಮಾಹಾತ್ಮ್ಯ, ದೇವರಾತಪುತ್ರನ ಉಪಾಖ್ಯಾನ, ಪುರಾಣಜ್ಞನ ಪ್ರಶಂಸೆ, ಗೌತಮೋಪಾಖ್ಯಾನ, ಶಿವಗೀತಾ, ಕಲ್ಪಾಂತರದಲ್ಲಿ ಭರದ್ವಾಜಾಶ್ರಮದಲ್ಲಿ ಶ್ರೀ ರಾಮಕಥಾ, ಇತ್ಯಾದಿ ವಿಷಯಗಳು ಪಾತಾಲಖಂಡದಲ್ಲಿ ಅಂತರ್ಗತವಾಗಿವೆ. ಯಾವಾಗಲೂ ಇದರ ಶ್ರವಣ ಮತ್ತು ಪಾರಾಯಣ ಮಾಡುವವನಿಗೆ ಸಮಸ್ತ ಪಾಪನಾಶವಾಗಿ ಸಂಪೂರ್ಣ ಅಭೀಷ್ಟಪ್ರಾಪ್ತಿಯಾಗುತ್ತದೆ.

## ಪದ್ಮ ಪುರಾಣದ ಪಂಚಮ ಖಂಡ

ಐದನೆಯ ಖಂಡದ ವಿಷಯಗಳು ಹೀಗಿವೆ. ಮೊದಲು ಈಶ್ವರನು ಪಾರ್ವತೀ ದೇವಿಗೆ ಹೇಳಿದ ಪರ್ವತೋಪಾಖ್ಯಾನವಿದೆ. ಅನಂತರ ಜಾಲಂಧರಕಥೆ, ಶ್ರೀ ಶೈಲಾದಿ ಕ್ಷೇತ್ರ ಮಾಹಾತ್ಮ್ಯ ವರ್ಣನ, ಅನಂತರ ಸಗರರಾಜನ ಪುಣ್ಯಕರವಾದ ಕಥೆಯಿದೆ. ಇದರ ನಂತರ ಗಂಗಾ, ಪ್ರಯಾಗ ಕಾಶೀ ಗಯಾ ಇವುಗಳ ಬಹಳ ಪುಣ್ಯದಾಯಕವಾದ ಮಾಹಾತ್ಮ್ಯವಿದೆ. ಆದರನಂತರ ಅನ್ನಾದಿ ದಾನಮಾಹಾತ್ಮ್ಯ ಮತ್ತು ಮಹಾದ್ವಾದಶೀ ವ್ರತದ ಉಲ್ಲೇಖವಿದೆ. ಇದಾದ ಮೇಲೆ ಇಪ್ಪತ್ತುನಾಲ್ಕು ಏಕಾದಶಿಗಳ ಮಾಹಾತ್ಮ್ಯವು ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ. ವಿಷ್ಣು ಧರ್ಮನಿರೂಪಣ, ವಿಷ್ಣು ಸಹಸ್ರನಾಮ, ಕಾರ್ತಿಕ ವ್ರತಮಾಹಾತ್ಮ್ಯ, ಮಾಘಸ್ನಾನಫಲ, ಜಂಬೂದ್ವೀಪದ ತೀರ್ಥಗಳ ಮಹಿಮಾ ವರ್ಣನ, ಸಾಭ್ರಮತೀ (ಸಾಬರಮತಿ)ನದಿಯ ಮಾಹಾತ್ಮ್ಯ, ನೃಸಿಂಹೋತ್ಪತ್ತಿ ಕಥಾ, ದೇವಶರ್ಮಾ ಮೊದಲಾದವರ ಉಪಾಖ್ಯಾನ, ಗೀತಾಮಾಹಾತ್ಮ್ಯಗಳು ಅನಂತರ ವರ್ಣಿತವಾಗಿವೆ. ಮಂತ್ರರತ್ನಕಥನ. ತ್ರಿಪಾದ್ವಿಭೂತಿ ವರ್ಣನ, ಮತ್ಸ್ಯಾದಿ ಅವತಾರಗಳ ಕಥೆ, ಅಷ್ಟೋತ್ತರ ಶತದಿವ್ಯರಾಮನಾಮ ಮತ್ತು ಆದರ ಮಹಿಮಾ ವರ್ಣನ, ಭೃಗುಮಹರ್ಷಿಯು ಭಗವಂತನಾದ ಶ್ರೀಹರಿಯ ವೈಭವವನ್ನು ಪರೀಕ್ಷೆ ಮಾಡಿದುದು ಎಂಬ ವಿಷಯಗಳು ಐದನೆಯ ಪದ್ಮಪುರಾಣದ ಉತ್ತರ ಖಂಡದಲ್ಲಿ ಬಂದಿವೆ. ಹೀಗೆ ಐದು ಖಂಡಗಳಿಂದ ಕೂಡಿದ ಪದ್ಮ ಪುರಾಣದ ಶ್ರವಣ ಮಾಡತಕ್ಕ ಮಾನವನು, ಇಹದಲ್ಲಿ ಬಯಸಿದ ಭೋಗಗಳನ್ನೆಲ್ಲಾ ಪಡೆದು ಕೊನೆಗೆ ವೈಕುಂಠ ಲೋಕವನ್ನೇ ಹೊಂದುತ್ತಾನೆ. ಐವತ್ತೈದು ಸಾವಿರ ಶ್ಲೋಕಗಳಿಂದ ಕೂಡಿದ ಈ ಪದ್ಮ ಪುರಾಣವನ್ನು ಬರೆದು, ಪುರಾಣಜ್ಞನಾದ ವಿದ್ವಾಂಸನನ್ನು ಕರೆದು ಸತ್ಕರಿಸಿ ಜ್ಯೇಷ್ಠಶುದ್ಧ ಪೂರ್ಣಿಮಾದಿನ ಸುವರ್ಣ ಕಮಲ ಸಹಿತವಾಗಿ ದಾನಮಾಡಬೇಕು. ಹೀಗೆ ದಾನಮಾಡಿದವನು ದೇವತೆಗಳಿಂದಲೂ ವಂದಿತನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ. ಪದ್ಮಪುರಾಣದ ಈ ಅನುಕ್ರಮಣಿಕೆಯ ಪಾರಾಯಣ ಮತ್ತು ಶ್ರವಣ ಮಾಡಿದವನೂ ಸಮಸ್ತ ಪದ್ಮಪುರಾಣದ ಶ್ರವಣದ ಫಲವನ್ನು ಪಡೆಯುತ್ತಾನೆ.

## ವಿಷ್ಣು ಪುರಾಣದ ಸ್ವರೂಪ ಮತ್ತು ವಿಷಯಾನುಕ್ರಮಣಿಕಾ

**ಬ್ರಹ್ಮದೇವರು:-** ವತ್ಸ! ಈಗ ವಿಷ್ಣು ಪುರಾಣದ ವಿಷಯಾನುಕ್ರಮಣಿಕೆಯನ್ನು ಹೇಳುತ್ತೇನೆ. ಈ ಪುರಾಣದ ಶ್ಲೋಕ ಸಂಖ್ಯೆ ಇಪ್ಪತ್ತುಮೂರು ಸಾವಿರ. ಇದರ ಪೂರ್ವಭಾಗದಲ್ಲಿ ಶಕ್ತಿ ಪುತ್ರರಾದ ಪರಾಶರರು ಮೈತ್ರೇಯರಿಗೆ ಆರು ಅಂಶಗಳನ್ನು ಹೇಳಿದ್ದಾರೆ. ಇದರ ಮೊದಲನೆಯ ಅಂಶದಲ್ಲಿ ಈ ಪುರಾಣದ ಅವತರಣಿಕಾ, ಆದಿಕಾರಣ ಸರ್ವದೇವತೋತ್ಪತ್ತಿ, ಸಮುದ್ರಮಂಥನ, ದಕ್ಷಾದಿವಂಶವರ್ಣನ, ಧ್ರುವ ಮತ್ತು ಪೃಥುರಾಜರ ಚರಿತ್ರೆ, ಪ್ರಾಚೇತಸರ ಉಪಾಖ್ಯಾನ, ಪ್ರಹ್ಲಾದನ ಕಥೆ, ಬ್ರಹ್ಮದೇವರು, ದೇವತೆ, ತಿರ್ಯಕ್, ಮನುಷ್ಯ ಮೊದಲಾದ ವರ್ಗದಲ್ಲಿ ಪ್ರಧಾನ ವ್ಯಕ್ತಿಗಳಿಗೆ ಬೇರೆ ಬೇರೆ ರಾಜ್ಯಾಧಿಕಾರಗಳನ್ನು ಕೊಟ್ಟಿದ್ದು, ಈ ಎಲ್ಲಾ ವಿಷಯಗಳಿವೆ. ಪ್ರಿಯವ್ರತ ವಂಶವರ್ಣನ, ದ್ವೀಪ ಮತ್ತು ವರ್ಷಗಳ ವರ್ಣನ, ಪಾತಾಲ ಮತ್ತು ನರಕಗಳ ನಿರೂಪಣ, ಸಪ್ತಸ್ವರ್ಗಗಳ ನಿರೂಪಣ, ಬೇರೆ ಬೇರೆ ಲಕ್ಷಣಗಳಿಂದ ಕೂಡಿದ ಸೂರ್ಯಾದಿಗ್ರಹಗಳ ಗತಿ ನಿರೂಪಣ, ಭರತ ಚರಿತ್ರ, ಮುಕ್ತಿಮಾರ್ಗ ನಿದರ್ಶನ, ನಿದಾಘ - ಋಭು ಸಂವಾದ ಈ ವಿಷಯಗಳು ಎರಡನೆಯ ಅಂಶದಲ್ಲಿ ಬರುತ್ತವೆ.

ಮನ್ವಂತರವರ್ಣನ, ವೇದವ್ಯಾಸಾವತಾರ, ನರಕದಿಂದ ಉದ್ಧಾರ ಮಾಡತಕ್ಕ ಕರ್ಮಗಳ ವಿವರಣ, ಸಗರ ಮತ್ತು ಔರ್ವರ ಸಂವಾದ ಪ್ರಸಂಗದಿಂದ ಸರ್ವಧರ್ಮ ನಿರೂಪಣ, ಶ್ರಾದ್ಧ ಕಲ್ಪ ಮತ್ತು ವರ್ಣಾಶ್ರಮಧರ್ಮ, ಸದಾಚಾರ ನಿರೂಪಣ, ಮಾಯಾಮೋಹನಕಥೆ, ಈ ಎಲ್ಲಾ ವಿಷಯಗಳು ಮೂರನೆಯ ಅಂಶದಲ್ಲಿ ಬಂದಿವೆ. ಸೂರ್ಯಚಂದ್ರವಂಶವರ್ಣನೆ, ಬೇರೆ ಬೇರೆ ರಾಜರ ವೃತ್ತಾಂತವರ್ಣನ ಇವು ನಾಲ್ಕನೆಯ ಅಂಶದಲ್ಲಿ ಪ್ರತಿಪಾದಿತವಾಗಿವೆ. ಶ್ರೀ ಕೃಷ್ಣಾವತಾರದ ವಿಷಯದಲ್ಲಿ ಪ್ರಶ್ನೆ ಗೋಕುಲದಕಥೆ, ಬಾಲ್ಯಾವಸ್ಥೆಯಲ್ಲಿಯೇ ಶ್ರೀಕೃಷ್ಣನು ಪೂತನಾ ಮೊದಲಾದವರನ್ನು ವಧಿಸಿದುದು, ಕೌಮಾರಾವಸ್ಥೆಯಲ್ಲಿ ಅಘಾಸುರಾದಿಸಂಹಾರ, ಕಿಶೋರಾವಸ್ಥೆಯಲ್ಲಿ ಕಂಸನ ಸಂಹಾರ, ಮಥುರಾಪುರದಲ್ಲಿ ಮಾಡಿದ ಲೀಲೆಗಳು, ಅನಂತರ ತಾರುಣ್ಯದಲ್ಲಿ ದ್ವಾರಕೆಯಲ್ಲಿ ಮಾಡಿದ ಲೀಲೆಗಳು, ಅನೇಕ ದೈತ್ಯರ ವಧೆ, ಬೇರೆ ಬೇರೆ ಸುಂದರಿಯರ ಜತೆಗೆ ವಿವಾಹ, ಯೋಗೀಶ್ವರರಿಗೂ ಈಶ್ವರನಾದ ಶ್ರೀಕೃಷ್ಣನು ದ್ವಾರಕೆಯಲ್ಲಿದ್ದು ಶತ್ರುಗಳನ್ನು ವಧಿಸಿ ಈ ರೀತಿ ಭೂಮಿಯ ಭಾರವನ್ನು ಇಳಿಸಿದ್ದು, ಅಷ್ಟಾವಕ್ರೋಪಾಖ್ಯಾನ ಇವಿಷ್ಟೂ ವಿಷ್ಣು ಪುರಾಣದ ಐದನೆಯ ಅಂಶದಲ್ಲಿ ಬರುವ ವಿಷಯಗಳು, ಕಲಿಯುಗದ ಚರಿತ್ರೆ, ನಾಲ್ಕು ವಿಧವಾದ ಮಹಾಪ್ರಲಯ, ಕೇಶಿಧ್ವಜನು ಖಾಂಡಿಕ್ಯ ಜನಕನಿಗೆ ಬ್ರಹ್ಮಜ್ಞಾನೋಪದೇಶ ಮಾಡಿದುದು ಈ ವಿಷಯಗಳನ್ನು ವಿಷ್ಣುಪುರಾಣದ ಆರನೆಯ ಅಂಶದಲ್ಲಿ ಹೇಳಲಾಗಿದೆ. ವಿಷ್ಣು ಪುರಾಣದ ಉತ್ತರ ಭಾಗ-ಶೌನಕಾದಿಗಳು ಆದರದಿಂದ ಕೇಳಿದಾಗ ಸೂತರು, ವಿಷ್ಣು ಧರ್ಮೋತ್ತರವೆಂದು ಪ್ರಸಿದ್ಧವಾದ ಪುರಾಣದಲ್ಲಿ ಧರ್ಮ ಸಂಬಂಧಿಯಾದ ನಾನೋಪಾಖ್ಯಾನಗಳನ್ನು ಹೇಳಿದ್ದಾರೆ. ಅನೇಕ ಪುಣ್ಯ ವ್ರತಗಳು, ಯಮನಿಯಮಗಳು, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ವೇದಾಂತ, ಜ್ಯೋತಿಷ, ವಂಶವರ್ಣನ ಸ್ತೋತ್ರ, ಮಂತ್ರ, ಎಲ್ಲರಿಗೂ ಉಪಕಾರಕವಾದ ಅನೇಕ ವಿದ್ಯೆಗಳು ಇವುಗಳನ್ನು ಹೇಳಿದ್ದಾರೆ. ಈ ರೀತಿ ವಿಷ್ಣು ಪುರಾಣವು ಸಮಸ್ತ ಶಾಸ್ತ್ರ ಸಿದ್ಧಾಂತಗಳ ಸಂಗ್ರಹರೂಪವಾಗಿದೆ. ಇದರಲ್ಲಿ ವೇದವ್ಯಾಸರು ವಾರಾಹಕಲ್ಪದ ವೃತ್ತಾಂತವನ್ನೂ ಹೇಳಿದ್ದಾರೆ. ಯಾವ ಮನುಷ್ಯರು ಭಕ್ತಿ ಶ್ರದ್ಧೆಗಳಿಂದ ವಿಷ್ಣು ಪುರಾಣದ ಪಾರಾಯಣ ಮತ್ತು

ಶ್ರವಣ ಮಾಡುತ್ತಾರೋ ಅವರು ಬಯಸಿದ ಭೋಗಗಳನ್ನು ಇಹದಲ್ಲಿ ಅನುಭವಿಸಿ ಕೊನೆಗೆ ವಿಷ್ಣುಲೋಕವನ್ನೇ ಹೊಂದುತ್ತಾರೆ. ಈ ಪುರಾಣವನ್ನು ಬರೆದು ಆಷಾಢ ಶುದ್ಧ ಪೂರ್ಣಿಮೆಯಂದು ಘೃತಧೇನು ಸಹಿತವಾಗಿ ಪುರಾಣಾರ್ಥವನ್ನು ಬಲ್ಲ ವಿಪ್ರನಿಗೆ ಯಾವನು ದಾನಕೊಡುತ್ತಾನೋ, ಅವನು ಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಹೋಗುತ್ತಾನೆ. ಯಾವನು ವಿಷ್ಣು ಪುರಾಣದ ಈ ವಿಷಯಾನುಕ್ರಮಣಿಕೆಯ ಪಾರಾಯಣ ಅಥವಾ ಶ್ರವಣ ಮಾಡುತ್ತಾನೋ ಅವನು ಸಮಗ್ರ ಪುರಾಣದ ಶ್ರವಣ ಮತ್ತು ಪಠನದ ಫಲವನ್ನು ಪಡೆಯುತ್ತಾನೆ.

## ವಾಯು ಪುರಾಣದ ಪರಿಚಯ, ದಾನ ಮತ್ತು ಶ್ರವಣಾದಿಫಲ

**ಬ್ರಹ್ಮದೇವರು:-** ಪ್ರಿಯಪುತ್ರ ಮರೀಚಿಯೇ ಕೇಳು. ವಾಯು ಪುರಾಣವು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿಂದ ಕೂಡಿದೆ. ''ಇಲ್ಲಿ ವಾಯು ದೇವನು ಶ್ವೇತ ಕಲ್ಪ ಪ್ರಸಂಗದಿಂದ ಧರ್ಮಗಳನ್ನು ಹೇಳಿದ್ದಾನೆ. ಈ ಪುರಾಣದಲ್ಲಿ ಪೂರ್ವಭಾಗ ಮತ್ತು ಉತ್ತರಭಾಗವೆಂದು ಎರಡು ಭಾಗಗಳಿವೆ.'' ಸ್ವರ್ಗ ಮುಂತಾದ ಪುರಾಣ ಲಕ್ಷಣಗಳನ್ನು ವಿಸ್ತಾರವಾಗಿ ಇಲ್ಲಿ ನಿರೂಪಿಸಲಾಗಿವೆ. ಬೇರೆ ಬೇರೆ ಮನ್ವಂತರಗಳ ರಾಜರವಂಶ ವರ್ಣನ ಮತ್ತು ಗಯಾಸುರವಧದ ಕಥೆ ವಿಸ್ತಾರವಾಗಿ ಬಂದಿದೆ. ಹನ್ನೆರಡು ಮಾಸಗಳ ಮಾಹಾತ್ಮ್ಯವನ್ನೂ ಹೇಳಿ ಮಾಘಮಾಸದ ಮಾಹಾತ್ಮ್ಯವನ್ನು ಬಹಳ ವಿಸ್ತಾರವಾಗಿ ಹೇಳಲಾಗಿದೆ. ಭೂಮಿ, ಪಾತಾಳ, ದಿಕ್ಕುಗಳು ಮತ್ತು ಆಕಾಶದಲ್ಲಿ ಓಡಾಡುವ ಜೀವಗಳ ಸ್ವರೂಪ ನಿರ್ಣಯ ಮತ್ತು ವ್ರತ ಮುಂತಾದವುಗಳ ಸ್ವರೂಪ ನಿರ್ಣಯವು ಇಲ್ಲಿ ಸರಿಯಾಗಿ ಕಂಡು ಬರುತ್ತದೆ. ಇದು ವಾಯು ಪುರಾಣದ ಪೂರ್ವಭಾಗದ ವಿಷಯ ಸಂಗ್ರಹ.

ವಾಯು ಪುರಾಣದ ಉತ್ತರ ಭಾಗದಲ್ಲಿ ನರ್ಮದಾ ನದಿಯ ತೀರ್ಥಗಳ ವರ್ಣನೆಯಿದೆ. ಅಲ್ಲಿ ವಿಸ್ತಾರವಾಗಿ ಶಿವಸಂಹಿತೆಯ ವರ್ಣನೆಯೂ ಬಂದಿದೆ. ದೇವತೆಗಳಿಗೆ ದುರ್ಜ್ಞೇಯ, ಸನಾತನ ಶಿವನು ನರ್ಮದೆಯ ತಟದಲ್ಲಿ ವಾಸಮಾಡುತ್ತಾನೆ. ನರ್ಮದಾ ಜಲದಲ್ಲಿ ಬ್ರಹ್ಮ, ವಿಷ್ಣು ಮಹೇಶ್ವರರ ಸನ್ನಿಧಾನವಿದೆ. ನರ್ಮದಾ ನದೀ ಜಲದಲ್ಲಿ ಪರಮ ಪವಿತ್ರ ಪರಬ್ರಹ್ಮನ ಸನ್ನಿಧಾನವಿದೆ. ಈ ಜಲವು ಮೋಕ್ಷಪ್ರದವಾಗಿದೆ. ಭಗವಾನ್ ಶಿವನು ಸಮಸ್ತ ಲೋಕಗಳ ಹಿತಕೋಸ್ಕರ ತನ್ನ ಶರೀರದಿಂದಲೇ ಒಂದು ದಿವ್ಯ ಶಕ್ತಿಯನ್ನು ಸೃಜಿಸಿ, ಅದರ ಮೂಲಕ ನರ್ಮದಾ ನದಿಯನ್ನು ಭೂಮಿಯಲ್ಲಿ ಆವಿರ್ಭವಿಸುವಂತೆ ಮಾಡಿದ್ದಾನೆ. ನರ್ಮದಾ ನದಿಯ ಉತ್ತರ ತೀರದಲ್ಲಿ ವಾಸಮಾಡುವವರು ರುದ್ರನ ಅನುಚರರಾಗುತ್ತಾರೆ. ದಕ್ಷಿಣತೀರದಲ್ಲಿ ವಾಸಮಾಡುವವರು ವಿಷ್ಣುಲೋಕವನ್ನು ಪಡೆಯುತ್ತಾರೆ. ಓಂಕಾರೇಶ್ವರದಿಂದ ಸಮುದ್ರದವರೆಗೆ ನರ್ಮದಾನದಿಯಲ್ಲಿ ಪಾಪನಾಶಕವಾದ ಮುವತ್ತೈದು ಸಂಗಮಗಳಿವೆ. ಅವುಗಳಲ್ಲಿ ಹನ್ನೊಂದು ಉತ್ತರತೀರದಲ್ಲಿದೆ. ಇಪ್ಪತ್ತಮೂರು ದಕ್ಷಿಣದಡದಲ್ಲಿವೆ. ಮೂವತ್ತಐದನೆಯದು ನರ್ಮದಾ - ಸಮುದ್ರ ಸಂಗಮವು. ನರ್ಮದಾನದಿಯ ದಡದಲ್ಲಿ ಈ ಸಂಗಮಗಳ ಜೊತೆಗೆ ಪ್ರಸಿದ್ಧವಾದ ನಾಲ್ಕುನೂರು ಅರವತ್ತು ತೀರ್ಥಗಳಿವೆ. ಮುನೀಶ್ವರನೇ. ಇವುಗಳ ಹೊರತು ನರ್ಮದಾನದಿಯ ಎರಡೂ ದಡಗಳಲ್ಲಿ ಅರವತ್ತು ಕೋಟಿ, ಅರವತ್ತು ಸಾವಿರ ತೀರ್ಥಗಳಿವೆ. ವಾಯುದೇವನು ನರ್ಮದಾ ಮಹಾತ್ಮ್ಯವನ್ನು ವರ್ಣಿಸಿರುವ ಈ ಶಿವ ಸಂಹಿತೆಯು ಪರಮ

ಪುಣ್ಯಕರವಾದುದು. ಈ ಪುರಾಣವನ್ನು ಬರೆದು ಗುಡಧೇನು ಸಹಿತವಾಗಿ ಶ್ರಾವಣ ಪೂರ್ಣಿಮೆಯ ದಿನ ಕುಟುಂಬಿಯಾದ ಬ್ರಾಹ್ಮಣನಿಗೆ ದಾನಕೊಟ್ಟರೆ, ಹದಿನಾಲ್ಕು ಇಂದ್ರರು ರಾಜ್ಯಭಾರ ಮಾಡುವವರೆಗೆ ಅವನಿಗೆ ರುದ್ರಲೋಕದಲ್ಲಿ ನಿವಾಸವು ಸಿದ್ಧಿಸುತ್ತದೆ. ನಿಯಮಪೂರ್ವಕವಾಗಿ ಹವಿಷ್ಯಾನ್ನಭೋಜನ ಮಾಡುತ್ತಾ ವಾಯು ಪುರಾಣದ ಶ್ರವಣ ಅಥವಾ ಪಾರಾಯಣ ಮಾಡುತ್ತಾನೋ ಅವನು ಸಾಕ್ಷಾತ್ ರುದ್ರಸಮಾನನು. ಈ ಅನುಕ್ರಮಣಿಕಾಧ್ಯಾಯವನ್ನು ಶ್ರವಣ ಮಾಡುವವನೂ ಮಾಡಿಸುವವನೂ ಸಮಸ್ತ ಪುರಾಣ ಶ್ರವಣದ ಫಲವನ್ನು ಪಡೆಯುತ್ತಾರೆ.

## ಶ್ರೀ ಮದ್ಭಾಗವತದ ಪರಿಚಯ ಮಾಹಾತ್ಮ್ಯ ಮತ್ತು ದಾನದ ಫಲ

**ಬ್ರಹ್ಮದೇವರು:-** ಮರೀಚಿಯೇ, ವೇದವ್ಯಾಸರು ವೇದ ತುಲ್ಯವಾದ ಭಾಗವತದ ಸಂಪಾದನವನ್ನು ಮಾಡಿದ್ದಾರೆ. ಈ ಪುರಾಣದಲ್ಲಿ ಹದಿನೆಂಟು ಸಾವಿರ ಶ್ಲೋಕಗಳಿವೆ. ಸಮಸ್ತಪಾಪನಾಶಕವಾದ ಈ ಪುರಾಣವು ಹನ್ನೆರಡು ಸ್ಕಂಧ ರೂಪವಾದ ಶಾಖೆಗಳಿಂದ ಕೂಡಿದ ವೇದಕಲ್ಪವೃಕ್ಷರೂಪವಾಗಿದೆ. ವಿಪ್ರಶ್ರೇಷ್ಠನೇ, ಇದರಲ್ಲಿ ವಿಶ್ವರೂಪಿಯಾದ ಭಗವಂತನ ಪ್ರತಿಪಾದನವನ್ನೇ ಮಾಡಲಾಗಿದೆ. ಇದರ ಮೊದಲನೆಯ ಸ್ಕಂಧದಲ್ಲಿ ಸೂತ ಮತ್ತು ಶೌನಕಾದಿ ಮಹರ್ಷಿಗಳ ಸಮಾಗಮದ ಪ್ರಸಂಗವನ್ನು ಎತ್ತಿಕೊಂಡು ವ್ಯಾಸರ ಮತ್ತು ಪಾಂಡವರ ಪವಿತ್ರವಾದ ಚರಿತ್ರೆಯನ್ನು ವರ್ಣಿಸಿದ್ದಾರೆ. ಆದರೆ ನಂತರ ಪರೀಕ್ಷಿತ ರಾಜನ ಜನ್ಮದಿಂದ ಆರಂಭಿಸಿ ಪ್ರಾಯೋಪವೇಶದವರೆಗಿನ ಚರಿತ್ರೆಯನ್ನು ವರ್ಣಿಸಲಾಗಿದೆ. ಇದು ಪ್ರಥಮ ಸ್ಕಂಧದ ಕಥಾ ಸಂಕ್ಷೇಪವು.

ಪರೀಕ್ಷಿತ ಶುಕಸಂವಾದದಲ್ಲಿ ಸ್ಥೂಲ ಮತ್ತು ಸೂಕ್ಷ್ಮ ಧಾರಣಾ ಕ್ರಮವನ್ನು ಹೇಳಿದ್ದಾರೆ. ಅನಂತರ ಬ್ರಹ್ಮನಾರದ ಸಂವಾದ ಸಂಧರ್ಭದಲ್ಲಿ ಪರಮಾತ್ಮನ ಅಮೃತ ಸಮಾನವಾದ ಅವತಾರ ಚರಿತ್ರೆಯನ್ನು ಹೇಳಿ ಪುರಾಣ ಲಕ್ಷಣ ನಿರೂಪಣ ಮಾಡಲಾಗಿದೆ. ಇದು ದ್ವಿತೀಯ ಸ್ಕಂಧದ ವಿಷಯ ಸಂಕ್ಷೇಪವು. ಇದು ಸೃಷ್ಟಿಯ ಕಾರಣ ತತ್ತ್ವಗಳ ಉತ್ಪತ್ತ್ಯಾದಿಗಳನ್ನು ಹೇಳತಕ್ಕಸ್ಕಂಧವೆಂದು ತಿಳಿಯತಕ್ಕದ್ದು. ವಿದುರಚರಿತ, ಮೈತ್ರೇಯ ವಿದುರ ಸಮಾಗಮ, ಬ್ರಹ್ಮದೇವರು ಸೃಷ್ಟಿ ಕ್ರಮವನ್ನು ನಿರೂಪಿಸುವುದು. ಕಪಿಲ ಮಹರ್ಷಿಗಳ ಸಾಂಖ್ಯತತ್ತ್ವ ಪ್ರವಚನ ಇವು ತೃತೀಯ ಸ್ಕಂಧದ ಸಂಕ್ಷಿಪ್ತ ವಿಷಯಗಳು. ಸತೀ ಚರಿತ್ರ, ಧ್ರುವಚರಿತ್ರ, ಅನಂತರ ಪೃಥುರಾಜನ ಪವಿತ್ರವಾದ ಉಪಾಖ್ಯಾನ, ಪ್ರಾಚೀನ ಬರ್ಹಿಷನ ಕಥೆ ಇವೆಲ್ಲವೂ ವಿಸರ್ಗ ಸಂಬಂಧಿಯಾದ ನಾಲ್ಕನೆಯ ಸ್ಕಂಧದ ವಿಷಯಗಳು.

ರಾಜಾ ಪ್ರಿಯವ್ರತ ಮತ್ತು ಅವನ ಮಕ್ಕಳ ಪುಣ್ಯದಾಯಕವಾದ ಚರಿತ್ರ. ಬ್ರಹ್ಮಾಂಡಾಂತರ್ಗತವಾದ ಬೇರೆ ಬೇರೆ ಲೋಕಗಳ ವರ್ಣನ, ನರಕಗಳ ಸ್ಥಿತಿ ಪ್ರಕಾರ ಇವುಗಳನ್ನು ಐದನೆಯ ಸ್ಕಂಧದಲ್ಲಿ ಹೇಳಲಾಗಿದೆ. ಅಜಾಮಿಳ ಚರಿತ್ರ, ದಕ್ಷ ಪ್ರಜಾಪತಿಯು ಮಾಡಿದ ಸೃಷ್ಟಿಯ ನಿರೂಪಣ, ವೃತ್ರಾಸುರ ಕಥಾ, ಮರದ್ಗಣಗಳ ಉತ್ಪತ್ತಿಯ ಕಥೆ, ಇದನ್ನು ಆರನೆಯ ಸ್ಕಂಧದಲ್ಲಿ ಮಹರ್ಷಿ ವೇದವ್ಯಾಸರು ಹೇಳಿದ್ದಾರೆ. ಪ್ರಹ್ಲಾದನ ಪುಣ್ಯ ಚರಿತ್ರ ಮತ್ತು ವರ್ಣಾಶ್ರಮ ಧರ್ಮನಿರೂಪಣ, ಇವನ್ನು ಏಳನೆಯ ಸ್ಕಂಧದಲ್ಲಿ ಹೇಳಿದ್ದಾರೆ. ಇದು "ಊತಿ" ಅಂದರೆ ಕರ್ಮವಾಸನಾದಿ ವಿಷಯಕವಾದ ಸೂಕ್ಷ್ಮ ಧರ್ಮವನ್ನು ಹೇಳತಕ್ಕ ಸ್ಕಂಧವು.

ಮನ್ವಂತರ ನಿರೂಪಣ, ಆ ಪ್ರಸಂಗದಲ್ಲಿ ಗಜೇಂದ್ರ ಮೋಕ್ಷದ ಕಥೆ, ಸಮುದ್ರ ಮಥನ, ಬಲಿಚಕ್ರವರ್ತಿಯ ಐಶ್ವರ್ಯವೃದ್ಧಿ, ಯಜ್ಞ ಸಮೃದ್ಧಿ, ವಾಮನಾವತಾರ, ಬಲಿಬಂಧನ, ಮತ್ಸ್ಯಾವತಾರ ಚರಿತ್ರ ಇವು ಎಂಟನೆಯ ಸ್ಕಂಧದ ವಿಷಯಗಳು. ಸೂರ್ಯಚಂದ್ರವಂಶವರ್ಣನ ವಂಶಾನುಚರಿತವೆಂಬ ಪುರಾಣಲಕ್ಷಣ ನಿರೂಪಣ ಇದು ನವಮನಸ್ಕಂಧದ ವಿಷಯವಾಗಿದೆ. ಶ್ರೀ ಕೃಷ್ಣನ ಬಾಲಚರಿತ, ಬಾಲ್ಯಲೀಲೆಗಳು, ಗೋಕುಲ ವೃಂದಾವನನಿವಾಸ, ದುಷ್ಪರಾದ ಅಸುರರ ಸಂಹಾರ, ಮಥುರಾನಿವಾಸ, ತಾರುಣ್ಯ ಪ್ರಾಪ್ತಿ ದ್ವಾರಕಾನಿವಾಸ, ಭೂಭಾರಹರಣ, ಇವು ನಿರೋಧವೆಂಬ ಪುರಾಣಲಕ್ಷಣವನ್ನೊಳಗೊಂಡ ಹತ್ತನೆಯ ಸ್ಕಂಧದ ಅತಿಸಂಕ್ಷಿಪ್ತ ವಿಷಯ ನಿರೂಪಣವು. ನಾರದ ವಸುದೇವ ಸಂವಾದ, ಯದುದತ್ತಾತ್ರೇಯ ಸಂವಾದ, ಶ್ರೀ ಕೃಷ್ಣ ಉದ್ಧವರ ಸಂವಾದ ಕೃಷ್ಣನ ಸಂಕಲ್ಪದಂತೆ ಪರಸ್ಪರ ಕಲಹದಿಂದ ಯಾದವರ ಸಂಹಾರ, ಇವು ಮುಕ್ತಿ ವಿಷಯವಾದ ಹನ್ನೊಂದನೆಯ ಸ್ಕಂಧದ ಸಂಕ್ಷಿಪ್ತ ವಿಷಯಗಳು. ಭವಿಷ್ಯದ್ರಾಜರ ವರ್ಣನೆ, ಕಲಿಧರ್ಮನಿರ್ದೇಶ, ಪರೀಕ್ಷಿದ್ರಾಜನ ದೇಹಮೋಕ್ಷ, ವೇದಶಾಖೆಗಳ ವಿಭಾಗ, ಮಾರ್ಕಂಡೇಯರ ತಪಸ್ಸು, ಸೂರ್ಯ ವಿಭೂತಿಯವರ್ಣನ, ಭಗವದ್ವಿಭೂತಿಯ ವರ್ಣನ, ಕೊನೆಗೆ ಪುರಾಣಗಳ ಶ್ಲೋಕಸಂಖ್ಯಾ ಪ್ರತಿಪಾದನ, ಇವು "ಆಶ್ರಯ" ಎಂಬ ವಿಷಯವನ್ನು ಪ್ರತಿಪಾದಿಸುವ ಹನ್ನೆರಡನೆಯ ಸ್ಕಂಧದ ವಿಷಯಗಳು. ಪುತ್ರನೇ, ಈ ರೀತಿಯಾಗಿ ನಿನಗೆ ಶ್ರೀ ಮದ್ಭಾಗವತದ ಪರಿಚಯವನ್ನು ಮಾಡಿಸಿದ್ದೇನೆ. ಇದನ್ನು ಹೇಳುವವನು ಕೇಳುವವನು, ಕೇಳಬೇಕೆಂದು ಉಪದೇಶಿಸುವವನು, ಅನುಮೋದಕನು, ಸಹಾಯಕನು ಎಲ್ಲರಿಗೂ ಇಹದಭೋಗ, ಭಕ್ತಿ ಮತ್ತು ಮುಕ್ತಿಗಳು ಒದಗುತ್ತವೆ. ಪರಮಾತ್ಮನಲ್ಲಿ ಭಕ್ತಿಯನ್ನು ಅಪೇಕ್ಷಿಸುವವನು ಭಾದ್ರಪದ ಶುಕ್ಲಹುಣ್ಣಿಮೆಯ ದಿನ ಶ್ರೀಮದ್ಭಾಗವತವನ್ನು ಸುವರ್ಣ ಸಿಂಹಾಸನದಲ್ಲಿಟ್ಟು ಭಗವದ್ಭಕ್ತನಾದ ಬ್ರಾಹ್ಮಣನಿಗೆ ಭಕ್ತಿಪುರಸ್ಸರವಾಗಿ ದಾನಮಾಡಬೇಕು. ದಾನಕ್ಕಿಂತ ಮೊದಲು ವಸ್ತ್ರ ಸುವರ್ಣಗಳಿಂದ ಬ್ರಾಹ್ಮಣನನ್ನು ಪೂಜಿಸಬೇಕು. ಭಾಗವತದ ಈ ವಿಷಯಾನುಕ್ರಮಣಿಕೆಯನ್ನು ಇನ್ನೊಬ್ಬರಿಗೆ ಹೇಳುವವನೂ, ಕೇಳುವವನೂ, ಸಮಸ್ತ ಪುರಾಣಶ್ರವಣದಿಂದ ಪ್ರಾಪ್ತವಾಗುವ ಉತ್ತಮ ಫಲವನ್ನು ಪಡೆಯುತ್ತಾನೆ.

## ನಾರದ ಪುರಾಣದ ವಿಷಯಸೂಚೀ ಪಾರಾಯಣಶ್ರವಣ ಮತ್ತು ಧಾನದ ಫಲ

**ಬ್ರಹ್ಮದೇವರು:-** ಬ್ರಾಹ್ಮಣ ಶ್ರೇಷ್ಠನಾದ ಮರೀಚಿಯೇ ಕೇಳು, ಈಗ ನಾನು ನಾರದೀಯಪುರಾಣದ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ. ಇದರಲ್ಲಿ ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿವೆ. ಇದರಲ್ಲಿ ಬೃಹತ್ಕಲ್ಪದ ಕಥೆಯನ್ನು ಆಶ್ರಯಿಸಿ ವಿಷಯವನ್ನು ಹೇಳಲಾಗಿದೆ. ಇದರ ಪೂರ್ವಭಾಗದಲ್ಲಿ ಪ್ರಥಮಪಾದದ ಸೂತಶೌನಕ ಸಂವಾದ, ಸಂಕ್ಷೇಪದಿಂದ ಸೃಷ್ಟಿವರ್ಣನೆಗಳಿವೆ. ಅನಂತರ ಮಹಾತ್ಮರಾದ ಸನಕರು ಅನೇಕ ಧರ್ಮಗಳ ಪವಿತ್ರವಾದ ಕಥೆಗಳನ್ನು ಹೇಳಿದ್ದಾರೆ. ಇದು ಪ್ರವೃತ್ತಿಧರ್ಮವೆಂಬ ಹೆಸರುಳ್ಳ ಮೊದಲನೆಯ ಪಾದದ ವಿಷಯ ನಿರೂಪಣೆಯು.

ಎರಡನೆಯ ಪಾದದಲ್ಲಿ ಮೋಕ್ಷೋಪಾಯದ ವರ್ಣನ, ವೇದಾಂಗವರ್ಣನ ಶುಕೋತ್ಪತ್ತಿಕಥಾ ಇವು ವಿಸ್ತಾರವಾಗಿ ಬಂದಿವೆ. ಸನಂದರು ನಾರದರಿಗೆ ಈ ದ್ವಿತೀಯ ಪಾದದ ವಿಷಯವನ್ನು ಉಪದೇಶಿಸಿದ್ದಾರೆ. ಮೂರನೆಯ ಪಾದದಲ್ಲಿ ಸನತ್ಕುಮಾರ

ಮುನಿಗಳು ನಾರದರಿಗೆ ಮಹಾಮಂತ್ರದಲ್ಲಿ ''ವರ್ಣಿತವಾದ, ಪಶುಪಾಶವಿಮೋಕ್ಷ''ವನ್ನು ಉಪದೇಶಿಸಿದ್ದಾರೆ. ಅನಂತರ ಗಣೇಶ, ಸೂರ್ಯ, ವಿಷ್ಣು, ಶಿವ, ಶಕ್ತಿ ಮೊದಲಾದ ದೇವತಾ ಮಂತ್ರಗಳ ಶೋಧನ, ದೀಕ್ಷಾ ಮಂತ್ರೋದ್ಧಾರ, ಪೂಜಾ, ಪ್ರಯೋಗ, ಕವಚ, ಸಹಸ್ರನಾಮ ಮತ್ತು ಸ್ತೋತ್ರಗಳ ವರ್ಣನೆಯು ಕ್ರಮವಾಗಿ ಬಂದಿದೆ. ಅನಂತರ ನಾಲ್ಕನೆಯ ಪಾದದಲ್ಲಿ ಸನಾತನ ಮುನಿಯು ನಾರದರಿಗೆ ಪುರಾಣ ಲಕ್ಷಣವನ್ನೂ, ಅವುಗಳ ಶ್ಲೋಕ ಸಂಖ್ಯೆ, ದಾನಗಳ ಬೇರೆ ಬೇರೆ ಫಲವನ್ನೂ ಹೇಳಿದ್ದಾರೆ. ಆಯಾ ದಾನಗಳಿಗೆ ಬೇರೆ ಬೇರೆ ಸಮಯವನ್ನೂ ಹೇಳಿದ್ದಾರೆ. ಇದರನಂತರ ಚೈತ್ರಾದಿ ಎಲ್ಲ ತಿಂಗಳಗಳ ಪಾಡ್ಯ ಮೊದಲಾದ ತಿಥಿಗಳ ಸಮಸ್ತ ಪಾಪನಾಶಕವಾದ ವ್ರತಗಳನ್ನು ಪ್ರತ್ಯೇಕವಾಗಿ ಹೇಳಿದ್ದಾರೆ. ಇಲ್ಲಿಗೆ ಬೃಹದಾಖ್ಯಾನವೆಂಬ ಪೂರ್ವಭಾಗವು ಮುಗಿದಿದೆ.

ಇದರ ಉತ್ತರ ಭಾಗದಲ್ಲಿ ಮಾಂಧಾತರಾಜನು ವಸಿಷ್ಠರನ್ನು ಏಕಾದಶೀ ವ್ರತ ವಿಷಯದಲ್ಲಿ ಪ್ರಶ್ನಿಸಿದಾಗ ಅವರು ಉತ್ತರ ಹೇಳಿದ್ದಾರೆ. ಅನಂತರ ರುಕ್ಮಾಂಗದ ರಾಜನ ಪುಣ್ಯಕರವಾದ ಕಥೆ, ಮೋಹಿನಿಯ ಉತ್ಪತ್ತಿ, ಅವಳು ಮಾಡಿದ ಕೆಲಸ, ವಸು ಎಂಬ ಪುರೋಹಿತರು ಮೋಹಿನಿಗೆ ಶಾಪಕೊಟ್ಟದ್ದು, ಮರಳಿ ಶಾಪದಿಂದ ಅವಳನ್ನು ಉದ್ಧಾರಮಾಡಿದ್ದು, ಗಂಗೆಯ ಪವಿತ್ರವಾದ ಕಥೆ, ಗಯಾ ಯಾತ್ರಾವರ್ಣನ, ಕಾಶಿಯ ಅನುಪಮ ಮಾಹಾತ್ಮ್ಯ, ಪುರುಷೋತ್ತಮ ಕ್ಷೇತ್ರವರ್ಣನ, ಪುರುಷೋತ್ತಮ ಕ್ಷೇತ್ರಯಾತ್ರಾವಿಧಿ, ಅದಕ್ಕೆ ಸಂಬಂಧಪಟ್ಟ ಅನೇಕ ಉಪಾಖ್ಯಾನಗಳು, ಪ್ರಯಾಗ, ಕುರುಕ್ಷೇತ್ರ, ಹರಿದ್ವಾರ ಮಾಹಾತ್ಮ್ಯ, ಕಾಮೋದಾ ತೀರ್ಥ ಮಾಹಾತ್ಮ್ಯ, ಬದರೀ ಮಾಹಾತ್ಮ್ಯ, ಕಾಮಾಖ್ಯಾ ಮತ್ತು ಪ್ರಭಾಸಕ್ಷೇತ್ರಗಳ ಮಹಿಮೆ, ಪುಷ್ಕರಮಹಿಮಾ, ಗೌತಮ ಮುನಿಕಥಾ, ವೇದಪಾದಸ್ತೋತ್ರ, ಗೋಕರ್ಣಕ್ಷೇತ್ರ ಮಹಿಮಾ, ಲಕ್ಷಣಕಥಾ, ಸೇತುಮಾಹಾತ್ಮ್ಯ, ನರ್ಮದಾತೀರ್ಥ ವರ್ಣನೆ, ಅವಂತೀ (ಉಜ್ಜಯಿನೀ) ಮಹಿಮಾ, ಮಥುರಾಮಾಹಾತ್ಮ್ಯ, ವೃಂದಾವನ ಮಹಿಮಾ, ವಸುವು ಬ್ರಹ್ಮದೇವರ ಬಳಿಗೆ ಹೋಗುವದು, ಮೋಹಿನಿಯ ತೀರ್ಥಕ್ಷೇತ್ರ ಸಂಚಾರ, ಮುಂತಾದ ವಿಷಯಗಳು ಇಲ್ಲಿವೆ.

ಈ ರೀತಿ ಸಂಪೂರ್ಣ ನಾರದ ಪುರಾಣದ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿದ್ದೇನೆ. ಏಕಾಗ್ರಚಿತ್ತನಾಗಿ ಭಕ್ತಿಪೂರ್ವಕವಾಗಿ ಈ ಪುರಾಣವನ್ನು ಯಾವನು ಹೇಳುತ್ತಾನೋ, ಕೇಳುತ್ತಾನೋ, ಅವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಆಶ್ವಯುಜ ಮಾಸದ ಹುಣ್ಣಿಮೆಯ ದಿನ ಏಳು ಗೋವುಗಳ ಜೊತೆಗೆ ಈ ಪುರಾಣವನ್ನು ವಿದ್ವಾಂಸರಿಗೆ ದಾನ ಮಾಡುವವನು ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುತ್ತಾನೆ. ಏಕಾಗ್ರಚಿತ್ತರಾಗಿ ಈ ನಾರದೀಯ ಪುರಾಣ ವಿಷಯಾನುಕ್ರಮಣಿಕೆಯ ಶ್ರವಣ ಮತ್ತು ಉಪದೇಶ ಮಾಡುವವರೂ ಸ್ವರ್ಗವನ್ನು ಹೊಂದುತ್ತಾರೆ.

## ಮಾರ್ಕಂಡೇಯ ಪುರಾಣದ ಪರಿಚಯ

**ಬ್ರಹ್ಮದೇವರು:-** ಮುನಿಯೇ, ಪಕ್ಷಿಗಳು ಪ್ರವಚನಾಧಿಕಾರಿಗಳಾಗಿರುವ ಪುಣ್ಯ ದಾಯಕವಾದ ಮಾರ್ಕಂಡೇಯ ಮಹಾಪುರಾಣದಲ್ಲಿ ಒಂಭತ್ತು ಸಾವಿರ ಶ್ಲೋಕಗಳಿವೆ. ಮಾರ್ಕಂಡೇಯ ಮುನಿಗಳ ಬಳಿಗೆ ಜೈಮಿನಿಗಳು ಬಂದು ಪ್ರಶ್ನೆ ಮಾಡುವಲ್ಲಿಂದ ಈ ಪುರಾಣ ಪ್ರಾರಂಭವಾಗುತ್ತದೆ. ಅನಂತರ ಧರ್ಮ, ಎಂಬ ಹೆಸರುಳ್ಳ ಪಕ್ಷಿಗಳ ಜನ್ಮಕಥೆಯನ್ನು ಇಲ್ಲಿ

ಹೇಳಿದ್ದಾರೆ. ಆ ಪಕ್ಷಿ ಜನ್ಮದ ಕಥೆ, ಪಕ್ಷಿಗಳಿಗೆ ಇಂದ್ರನ ಶಾಪದಿಂದ ವಿಕಾರಪ್ರಾಪ್ತಿ, ಈ ಕಥೆಗಳ ನಂತರ ಬಲರಾಮನ ತೀರ್ಥಯಾತ್ರೆ, ದ್ರೌಪದಿಯ ಐದು ಮಂದಿ ಮಕ್ಕಳ ಕಥೆ, ಹರಿಶ್ಚಂದ್ರನ ಉಪಾಖ್ಯಾನ, ಆಡೀ ಮತ್ತು ಬಕಪಕ್ಷಿಗಳ ಯುದ್ಧ, ತಂದೆ ಮಗನ ಕಥೆ, ದತ್ತಾತ್ರೇಯ ಕಥೆ, ದೊಡ್ಡ ಆಖ್ಯಾನ ಸಹಿತ ಹೈಹಯಚರಿತ್ರ, ಅಲರ್ಕಚರಿತ್ರೆಯ ಜೊತೆಗೆ ಮದಾಲಸಾ ಚರಿತ್ರ, ಒಂಭತ್ತು ವಿಧದ ಸೃಷ್ಟಿಯ ವರ್ಣನ, ಪ್ರಳಯಕಾಲದ ಸೂಚನೆ, ದಕ್ಷಸೃಷ್ಟಿನಿರೂಪಣ, ರುದ್ರ ಮುಂತಾದ ದೇವತೆಗಳ ಸೃಷ್ಟಿ, ಬೇರೆ ಬೇರೆ ದ್ವೀಪಗಳ ಚರ್ಯೆಯ ವರ್ಣನೆ, ಪಾಪನಾಶಕವಾದ ಮನುಗಳ ಕಥೆಗಳು, ಎಂಟನೆಯ ಮನ್ವಂತರದಲ್ಲಿ ನಡೆದ ದುರ್ಗೆಯ ಪುಣ್ಯಪ್ರದವಾದ ಕಥೆ ಇವುಗಳು ಇಲ್ಲಿವೆ. ಅನಂತರ ಮೂರು ವೇದಗಳ ತೇಜಸ್ಸಿನಿಂದ ಪ್ರಣವದ ಉತ್ಪತ್ತಿ, ಸೂರ್ಯನ ಜನ್ಮಕಥೆ, ಸೂರ್ಯಮಾಹಾತ್ಮ್ಯ, ವೈವಸ್ವತಮನುವಿನ ವಂಶವರ್ಣನೆ, ವತ್ಸಪ್ರೀ ಎಂಬುವವನ ಚರಿತ್ರೆ, ಅನಂತರ ಮಹಾತ್ಮನಾದ ಖನಿತ್ರನ ಪುಣ್ಯಕರವಾದ ಕಥೆ, ಅವಿಕ್ಷಿತ್ ಎಂಬ ರಾಜನ ಕಥೆ, ಕಿಮಿಚ್ಛಕ ವ್ರತ ವರ್ಣನೆ, ನರಿಷ್ಯಂತ ಚರಿತ್ರ, ನಲಚರಿತ, ಶ್ರೀ ರಾಮಕಥಾ, ಕುಶವಂಶವರ್ಣನ, ಸೋಮವಂಶವರ್ಣನ, ಪುರೂರವನಕಥೆ, ಅದ್ಭುತವಾದ ನಹುಷನ ವೃತ್ತಾಂತ. ಯಯಾತಿಯ ಪವಿತ್ರ ಚರಿತ್ರೆ ಯದುವಂಶವರ್ಣನ ಶ್ರೀ ಕೃಷ್ಣನ ಬಾಲಲೀಲೆ, ಮಥುರಾ ಮತ್ತು ದ್ವಾರಕೆಗಳಲ್ಲಿ ಶ್ರೀ ಕೃಷ್ಣನು ಮಾಡಿದ ಲೀಲೆಗಳು ಎಲ್ಲ ಅವತಾರಗಳ ಕಥೆಗಳು, ಸಾಂಖ್ಯಮತವರ್ಣನ, ಪ್ರಪಂಚದ ಅಸಾರತೆ, ಮಿಥ್ಯಾತ್ವಗಳ ನಿರೂಪಣ, ಮಾರ್ಕಂಡೇಯ ಚರಿತ್ರೆ, ಪುರಾಣ ಶ್ರವಣ ಫಲ ಈ ವಿಷಯಗಳು ಮಾರ್ಕಂಡೇಯ ಪುರಾಣದಲ್ಲಿವೆ. ವತ್ಸ! ಭಕ್ತಿಯಿಂದ ಈ ಮಾರ್ಕಂಡೇಯ ಪುರಾಣವನ್ನು ಶ್ರವಣ ಮಾಡುವವನು ಪರಮಗತಿಯನ್ನು ಪಡೆಯುತ್ತಾನೆ. ಇದರ ಪ್ರವಚನ ಮಾಡುವವನು ಶಿವಲೋಕವನ್ನೈದುತ್ತಾನೆ. ಈ ಪುರಾಣವನ್ನು ಬರೆದು, ಸುವರ್ಣ ಮಯವಾದ ಆನೆಯ ಪ್ರತಿಮೆಯೊಂದಿಗೆ ಕಾರ್ತಿಕ ಶುದ್ಧ ಹುಣ್ಣಿಮೆಯ ದಿನ ಶ್ರೇಷ್ಠ ಬ್ರಾಹ್ಮಣನಿಗೆ ಯಾರು ದಾನ ಕೊಡುತ್ತಾನೆಯೋ ಅವನು ಬ್ರಹ್ಮಪದವಿಯನ್ನೇ ಹೊಂದುತ್ತಾನೆ. ಮಾರ್ಕಂಡೇಯ ಪುರಾಣದ ಈ ವಿಷಯ ಸೂಚಿಯನ್ನು ಕೇಳುವವನೂ ಮತ್ತು ಹೇಳುವವನೂ ತಮ್ಮ ಕಾಮಿತಗಳನ್ನೆಲ್ಲಾ ಪಡೆಯುತ್ತಾರೆ.

## ಅಗ್ನಿ ಪುರಾಣದ ಅನುಕ್ರಮಣಿಕಾ ಅದರ ಪಾರಾಯಣ ಶ್ರವಣ ಮತ್ತು ದಾನಫಲಗಳು

**ಬ್ರಹ್ಮದೇವರು :-** ಅಗ್ನಿದೇವನು ವಸಿಷ್ಠಮಹರ್ಷಿಗಳಿಗೆ ಈಶಾನ ಕಲ್ಪದ ವೃತ್ತಾಂತವನ್ನು ಈ ಪುರಾಣದಲ್ಲಿ ಹೇಳುತ್ತಾನೆ. ಅನೇಕ ಚರಿತ್ರೆಗಳಿಂದ ಕೂಡಿದ ಈ ಅಗ್ನಿ ಪುರಾಣದಲ್ಲಿ ಹದಿನೈದು ಸಾವಿರ ಶ್ಲೋಕಗಳಿವೆ. ಅದ್ಭುತವಾದ ಈ ಪುರಾಣದ ಪಾರಾಯಣ ಮತ್ತು ಶ್ರವಣ ಮಾಡುವವರ ಸಮಸ್ತಪಾಪಗಳೂ ನಾಶವಾಗುತ್ತವೆ. ಮೊದಲು ಇಲ್ಲಿ ಪುರಾಣದ ವಿಷಯದಲ್ಲಿ ಪ್ರಶ್ನೆ. ಅನಂತರ, ಎಲ್ಲಾ ಅವತಾರಗಳ ಕಥೆಗಳು ಬರುತ್ತವೆ. ಅನಂತರ ಸೃಷ್ಟಿ ಪ್ರಕರಣ ವಿಷ್ಣು ಮುಂತಾದವರ ಪೂಜೆಯ ವರ್ಣನೆಗಳಿವೆ. ಅನಂತರ ಅಗ್ನಿಕಾರ್ಯ, ಮಂತ್ರ, ಮುದ್ರಾ ಮುಂತಾದವುಗಳು ಲಕ್ಷಣ ಸರ್ವದೀಕ್ಷಾ ವಿಧಾನ ಮತ್ತು ಅಭಿಷೇಕ ನಿರೂಪಣೆಗಳಿವೆ. ಇದರನಂತರ ಮಂಡಲ ಮುಂತಾದವುಗಳ ಲಕ್ಷಣ, ಕುಶಗಳಿಂದ ಅಪಾಮಾರ್ಜನ, ಪವಿತ್ರಾರೋಪಣಾ ವಿಧಿ, ದೇವಾಲಯ ನಿರ್ಮಾಣವಿಧಿ,

ಶಾಲಿಗ್ರಾಮ ಮುಂತಾದವುಗಳ ಪೂಜೆ, ಶಾಲಿಗ್ರಾಮ ಮೂರ್ತಿಗಳ ಲಕ್ಷಣ, ಇತರ ಮೂರ್ತಿಗಳ ಲಕ್ಷಣ ಇವುಗಳನ್ನೆಲ್ಲಾ ಹೇಳಲಾಗಿದೆ. ಅನಂತರ ನ್ಯಾಸ ಮುಂತಾದವುಗಳ ವಿಧಾನ, ಪ್ರತಿಷ್ಠೆ, ಪೂರ್ತಕರ್ಮ (ಕೆರೆಭಾವಿ ತೋಡುವುದು) ವಿನಾಯಕ ಮುಂತಾದ ದೇವತೆಗಳ ಪೂಜೆ, ಅನೇಕ ರೀತಿ ದೀಕ್ಷಾ ವಿಧಾನಗಳು, ಎಲ್ಲಾ ದೇವತೆಗಳ ಪ್ರತಿಷ್ಠಾವಿಧಿಗಳು. ಬ್ರಹ್ಮಾಂಡ ವರ್ಣನೆ, ಗಂಗಾತೀರ್ಥಗಳ ಮಾಹಾತ್ಮ್ಯ ದ್ವೀಪ, ಮೇಲೆ ಕೆಳಗಿರುವ ಲೋಕಗಳ ರಚನಾಕ್ರಮ, ಜ್ಯೋತಿಶ್ಚಕ್ರನಿರೂಪಣ, ಜ್ಯೋತಿಶ್ಯಾಸ್ತ್ರ, ಯುದ್ಧದಲ್ಲಿ ಜಯ ಸಂಪಾದನೆಯನ್ನು ತಿಳಿಸುವ ಯುದ್ಧಜಯಾರ್ಣವತಂತ್ರ, ಉಚ್ಚಾಟನಾದಿ ಷಟ್ಕರ್ಮಗಳು, ಮಂತ್ರ, ಯಂತ್ರ, ಅನೇಕ ಔಷಧ ಸಮೂಹಗಳು, ಕುಬ್ಜಿಕಾ ಮುಂತಾದ ದೇವತೆಗಳ ಪೂಜೆ, ಆರು ಪ್ರಕಾರದ ನ್ಯಾಸವಿಧಿ, ಕೋಟಿ ಹೋಮವಿಧಿ, ಮನ್ವಂತರ ನಿರೂಪಣ, ಬ್ರಹ್ಮಚರ್ಯಾದಿ ಆಶ್ರಮಗಳ ಧರ್ಮಗಳನ್ನು ಹೇಳಲಾಗಿದೆ.

ಶ್ರಾದ್ಧಕಲ್ಪವಿಧಿ, ಗ್ರಹಯಜ್ಞ, ಶ್ರೌತಸ್ಮಾರ್ತಕರ್ಮಗಳು, ಪ್ರಾಯಶ್ಚಿತ್ತ ವಿಧಾನ, ತಿಥಿವರ್ಣನ, ಪ್ರತಿಮಾಸದಲ್ಲಿ ಬರುವ ವ್ರತಗಳ ವಿಧಿವಿಧಾನ, ಉತ್ತಮ ಕಲ್ಪದ ದೀಪದಾನವಿಧಿ, ನವವ್ಯೂಹಪೂಜನ, ನರಕವರ್ಣನ, ವ್ರತ ಮತ್ತು ದಾನಗಳ ವಿಧಿವಿಧಾನಗಳ ನಿರೂಪಣ, ಸಂಕ್ಷೇಪವಾಗಿ ನಾಡೀಚಕ್ರಗಳ ವರ್ಣನ, ಉತ್ತಮ ವಿಧಾನದಿಂದ ಸಂಧ್ಯಾವಂದನೆಯನ್ನು ಮಾಡತಕ್ಕ ಕ್ರಮ, ಗಾಯತ್ರಿಯ ಅರ್ಥದ ವಿವರಣೆ, ಲಿಂಗಸ್ತೋತ್ರ, ರಾಜ್ಯಾಭಿಷೇಕ ಮಂತ್ರದ ಪ್ರತಿಪಾದನ, ರಾಜರು ಮಾಡಬೇಕಾದ ಧಾರ್ಮಿಕ ಕೃತ್ಯಗಳು, ಸ್ವಪ್ನಕ್ಕೆ ಸಂಬಂಧಪಟ್ಟ ವಿಚಾರದ ಅಧ್ಯಾಯ, ಶಕುನ ಮುಂತಾದವುಗಳ ನಿರೂಪಣ, ಮಂಡಲ ಮುಂತಾದವುಗಳ ನಿರ್ದೇಶ, ರತ್ನದೀಕ್ಷಾವಿಧಿ ಶ್ರೀ ರಾಮನು ಹೇಳಿದ ನೀತಿಯ ನಿರೂಪಣ, ರತ್ನಲಕ್ಷಣ ಧನುರ್ವಿದ್ಯೆ, ಲೋಕ ವ್ಯವಹಾರ ನಿರೂಪಣ, ದೇವಾಸುರ ಸಂಗ್ರಾಮದ ಕಥೆ, ಆಯುರ್ವೇದ ನಿರೂಪಣ, ಗಜತುರಗಾದಿ ಚಿಕಿತ್ಸಾ, ಅವುಗಳ ರೋಗ ಪರಿಹಾರ ಕ್ರಮ, ಗೋಚಿಕಿತ್ಸೆ, ಮನುಷ್ಯ ಮುಂತಾದವರ ಚಿಕಿತ್ಸೆ, ಅನೇಕ ರೀತಿಯ ಪಾಪ ಶಾಂತಿ ಕ್ರಮಗಳು, ಛಂದಶಾಸ್ತ್ರ, ಸಾಹಿತ್ಯ, ಏಕಾಕ್ಷರಾದಿಕೋಶ, ಸಿದ್ಧಶಬ್ದಾನು ಶಾಸನವೆಂಬ ವ್ಯಾಕರಣ, ಸ್ವರ್ಗಾದಿ ವರ್ಗಗಳಿಂದ ಕೂಡಿದ ಕೋಷ, ಪ್ರಲಯ ಲಕ್ಷಣ, ವೇದಾಂತ ನಿರೂಪಣ, ನರಕವರ್ಣನ, ಯೋಗಶಾಸ್ತ್ರ, ಬ್ರಹ್ಮಜ್ಞಾನ, ಪುರಾಣಶ್ರವಣಫಲ ಈ ವಿಷಯಗಳು ಅಗ್ನಿಪುರಾಣದಲ್ಲಿ ಬಂದಿವೆ.

ಮರೀಚಿ ಋಷಿಯೇ, ಇಂತಹ ಅಗ್ನಿ ಪುರಾಣವನ್ನು ಬರೆದು ಸುವರ್ಣ ಕಮಲ ಮತ್ತು ತಿಲಧೇನುವಿನ ಜೊತೆಗೆ ಮಾರ್ಗಶಿರ ಪೂರ್ಣಿಮೆಯ ದಿನ ಪೌರಾಣಿಕ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ದಾನಮಾಡಿದರೆ, ಅಂತಹವನಿಗೆ ಸ್ವರ್ಗಲೋಕ ವಾಸವು ಖಚಿತ. ಈ ರೀತಿ ನಿನಗೆ ಅಗ್ನಿಪುರಾಣದ ಅನುಕ್ರಮಣಿಕವನ್ನು ಹೇಳಿದ್ದಾಯಿತು. ಈ ಅನುಕ್ರಮಣಿಕೆಯನ್ನು ಓದುವವನಿಗೆ ಮತ್ತು ಕೇಳುವವನಿಗೆ ಇಹಲೋಕದಲ್ಲಿ ಸೌಖ್ಯ ಪರಲೋಕದಲ್ಲಿ ಮೋಕ್ಷಗಳು ದೊರಕುತ್ತವೆ.

## ಭವಿಷ್ಯ ಪುರಾಣ

**ಬ್ರಹ್ಮದೇವರು:-** ನಾನು ಈಗ ನಿನಗೆ ಸರ್ವಸಿದ್ಧಿಪ್ರದವಾದ ಭವಿಷ್ಯ ಪುರಾಣದ ವರ್ಣನೆಯನ್ನು ಮಾಡುತ್ತೇನೆ. ಇದರಲ್ಲಿ ನನ್ನನ್ನೇ (ಚತುರ್ಮುಖ ಬ್ರಹ್ಮನನ್ನೇ) ಸಮಸ್ತ

ದೇವತೆಗಳ ಸೃಷ್ಟಿಕರ್ತನೆಂಬುದಾಗಿ ಹೇಳಿದೆ. ಪೂರ್ವಕಾಲದಲ್ಲಿ ಸೃಷ್ಟಿಗೋಸ್ಕರವಾಗಿ ಸ್ವಾಯಂಭುವ ಮನುವು ಉತ್ಪನ್ನನಾದನು. ಅವನು ನನ್ನನ್ನು ನಮಸ್ಕರಿಸಿ ಸರ್ವಾರ್ಥ ಸಾಧಕವಾದ ಧರ್ಮವು ಯಾವುದೆಂದು ಪ್ರಶ್ನಿಸಿದನು. ಆಗ ನಾನು ಪ್ರಸನ್ನನಾಗಿ ಅವನಿಗೆ ಧರ್ಮಸಂಹಿತೆಯ ಉಪದೇಶವನ್ನು ಮಾಡಿದೆನು. ಪರಮಜ್ಞಾನಿಯಾದ ವೇದವ್ಯಾಸರು ಪುರಾಣಗಳನ್ನು ವಿಸ್ತರಿಸುವಾಗ ಈ ಧರ್ಮ ಸಂಹಿತೆಯನ್ನು ಐದು ಭಾಗವನ್ನಾಗಿ ಮಾಡಿದರು. ಅವುಗಳಲ್ಲಿ ಆಶ್ಚರ್ಯಕರವಾದ ಕಥೆಗಳಿಂದ ಕೂಡಿದ ಅಘೋರ ಕಲ್ಪದ ವೃತ್ತಾಂತವಿದೆ. ಈ ಪುರಾಣದ ಉಪಕ್ರಮ ಭಾಗದ ಮೊದಲನೆಯ ಪರ್ವಕ್ಕೆ ಬ್ರಹ್ಮಪರ್ವವೆಂದು ಹೆಸರು, ಇಲ್ಲಿಯೂ ಸೂತ ಶೌನಕ ಸಂವಾದದಿಂದ ಪ್ರಾರಂಭವಾಗಿ ಪುರಾಣದ ವಿಷಯದಲ್ಲಿಯೇ ಪ್ರಶ್ನೆಯಿದೆ.

ಇದರಲ್ಲಿ ಹೆಚ್ಚಾಗಿ ಸೂರ್ಯನ ಕಥೆ ಮತ್ತಿತರ ಉಪಾಖ್ಯಾನಗಳೂ ಸೃಷ್ಟಿ ಮುಂತಾದವುಗಳ ಲಕ್ಷಣಗಳೂ ನಿರೂಪಿತವಾಗಿವೆ. ಇದು ಶಾಸ್ತ್ರಗಳ ಸಾರಸ್ವರೂಪ ವಾಗಿದೆ. ಇದರಲ್ಲಿ ಪುಸ್ತಕ, ಲೇಖಕ, ಲೇಖ್ಯಗಳ ಲಕ್ಷಣ, ಎಲ್ಲಾ ಸಂಸ್ಕಾರಗಳ ಲಕ್ಷಣಗಳೂ ನಿರೂಪಿತವಾಗಿವೆ. ಪಕ್ಷದ ಮೊದಲನೆಯ ಏಳು ತಿಥಿಗಳನ್ನು ಏಳು ಕಲ್ಪಗಳೆಂದೂ ಹೇಳಿದ್ದಾರೆ. ಅಷ್ಟಮಿಯಿಂದ ಆರಂಭಿಸಿ ಉಳಿದ ಎಂಟು ಕಲ್ಪಗಳನ್ನು ವೈಷ್ಣವಪರ್ವದಲ್ಲಿ ಹೇಳಿದ್ದಾರೆ. ಶೈವಪರ್ವದಲ್ಲಿ ಬ್ರಹ್ಮಪರ್ವಕ್ಕಿಂತ ಭಿನ್ನವಾದ ಕಥೆಗಳಿವೆ. 'ಸೌರಪರ್ವ'ದಲ್ಲಿ ಕೊನೆಯ ಕಥೆಗಳ ಸಂಬಂಧವಿದೆ. ಪ್ರತಿ ಸರ್ಗಪರ್ವದಲ್ಲಿ ಪುರಾಣಧ ಉಪಸಂಹಾರದ ವರ್ಣನೆಯಿದೆ. ಇದೇ ನಾನಾ ಉಪಾಖ್ಯಾನಗಳಿಂದ ಕೂಡಿದ ಐದನೆಯ ಪರ್ವವು.

ಈ ಐದು ಪರ್ವಗಳಲ್ಲಿ ಮೊದಲನೆಯ ಬ್ರಹ್ಮಪರ್ವದಲ್ಲಿ ನನ್ನ ಮಹಿಮೆಯೇ ಅಧಿಕವಾಗಿದೆ. ಎರಡು ಮೂರನೇ ಪರ್ವಗಳಲ್ಲಿ ಧರ್ಮ, ಕಾಮ, ಮೋಕ್ಷ ವಿಷಯಗಳೂ, ವಿಷ್ಣುಶಿವರ ಮಹಿಮೆಗಳೂ ಬಂದಿವೆ. ನಾಲ್ಕನೆಯ ಪರ್ವದಲ್ಲಿ ಸೂರ್ಯ ಮಹಿಮೆಯಿದೆ. ಐದನೆಯ ಸರ್ಗದಲ್ಲಿ ಮುಂದೆ ಆಗಲಿರುವ ಕಥೆಗಳೂ, ಮತ್ತಿತರ ನಾನಾ ಉಪಾಖ್ಯಾನಗಳೂ ಇವೆ. ಬ್ರಹ್ಮಾ, ವಿಷ್ಣು ಮುಂತಾದ ಎಲ್ಲ ದೇವತೆಗಳ ಸಮತೆಯನ್ನು ಹೇಳುವ ಈ ಪುರಾಣದ ಶ್ಲೋಕಸಂಖ್ಯಾ ಹದಿನಾಲ್ಕು ಸಾವಿರ (೧೪,೦೦೦). ಗುಣತಾರತಮ್ಯದಿಂದ ದೇವತೆಗಳಲ್ಲಿ ವೈಷಮ್ಯವು ಕಂಡುಬರುತ್ತದೆ. ಬ್ರಹ್ಮವು ಸರ್ವತ್ರಸಮವೆಂದು ಇಲ್ಲಿ ಪ್ರತಿಪಾದಿಸಿದ್ದಾರೆ. ಶ್ರುತಿಯಲ್ಲಿಯೂ ಹೀಗೆಯೇ ಹೇಳಿದೆ. ಯಾವ ಜ್ಞಾನಿಯು ಈರ್ಷ್ಯೆ, ದ್ವೇಷಗಳನ್ನು ಬಿಟ್ಟು, ಸುವರ್ಣ, ವಸ್ತ್ರ, ಪುಷ್ಪಮಾಲಾ, ಅಲಂಕಾರ, ಗಂಧ, ಪುಷ್ಪ, ಧೂಪ ದೀಪ ಇವುಗಳಿಂದಲೂ, ಭಕ್ಷ್ಯ ಭೋಜ್ಯಗಳಿಂದಲೂ, ವಿಧಿಪೂರ್ವಕವಾಗಿ ಗ್ರಂಥ ಮತ್ತು ಗ್ರಂಥ ವಾಚಕನ ಪೂಜೆಯನ್ನು ಮಾಡುತ್ತಾನೋ, ಹಾಗೂ ಭವಿಷ್ಯ ಪುರಾಣದ ಪುಸ್ತಕವನ್ನು ಬರೆದು ಗುಡಧೇನು ಸಹಿತವಾಗಿ ಪುಷ್ಯಮಾಸದ ಹುಣ್ಣಿಮೆಯ ದಿನ ದಾನ ಮಾಡುತ್ತಾನೋ ಯಾವನು ಜಿತೇಂದ್ರಿಯನಾಗಿ, ನಿರಾಹಾರನಾಗಿ ಅಥವಾ ಏಕಭೋಜನ ಮಾಡುತ್ತಾ ಈ ಪುರಾಣದ ಪಾರಾಯಣ ಮತ್ತು ಶ್ರವಣ ಮಾಡುತ್ತಾನೋ ಅವನು ಭಯಂಕರ ಪಾಪಗಳಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಸೇರುತ್ತಾನೆ. ಯಾವನು ಭವಿಷ್ಯ ಪುರಾಣದ ಈ ಅನುಕ್ರಮಣಿಕೆಯ ಪಾರಾಯಣ ಮತ್ತು ಶ್ರವಣ ಮಾಡುತ್ತಾನೋ ಅವನು ಭೋಗ, ಮೋಕ್ಷಗಳನ್ನು ಪಡೆಯುತ್ತಾನೆ.

# ಬ್ರಹ್ಮವೈವರ್ತ ಪುರಾಣ

**ಬ್ರಹ್ಮದೇವರು:-** ವತ್ಸ ಕೇಳು, ವೇದ ಮಾರ್ಗದ ಸಾಕ್ಷಾತ್ಕಾರವನ್ನು ಮಾಡಿಸುವ, ಹತ್ತನೆಯದಾದ ಬ್ರಹ್ಮವೈವರ್ತ ಪುರಾಣದ ಪರಿಚಯವನ್ನು ನಿನಗೆ ನಾನು ಈಗ ಮಾಡಿಕೊಡುತ್ತಿದ್ದೇನೆ. ಇಲ್ಲಿ ಮಹರ್ಷಿ ನಾರದರು ಪ್ರಾರ್ಥಿಸಿದಾಗ ಸಾವರ್ಣಿಯು ಪುರುಷೋಕ್ತವಾದ ಎಲ್ಲ ವಿಷಯವನ್ನೂ ವರ್ಣಿಸಿದ್ದಾನೆ. ಅಲೌಕಿಕವಾದ ಹಾಗೂ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾರರೂಪವಾದ ಈ ಪುರಾಣದ ಪಠನ ಮತ್ತು ಶ್ರವಣಗಳಿಂದ ವಿಷ್ಣು ಮತ್ತು ಶಿವರಲ್ಲಿ ಭಕ್ತಿಯುಂಟಾಗುತ್ತದೆ. ವಿಷ್ಣು ಶಿವರಲ್ಲಿ ಇರುವ ಐಕ್ಯವನ್ನು ಹೇಳುವದಕ್ಕಾಗಿ ಈ ಪುರಾಣದ ಉಪದೇಶವನ್ನು ಮಾಡಿದ್ದಾರೆಂದು ತಿಳಿಯಬೇಕು. ನಾನು ಹೇಳಿದ ರಥಂತರ ಕಲ್ಪದ ವೃತ್ತಾಂತವನ್ನು ವೇದಜ್ಞರಾದ ವ್ಯಾಸರು ಸಂಕ್ಷೇಪಿಸಿ ಶತಕೋಟಿ ಪುರಾಣದಲ್ಲಿ ಹೇಳಿದ್ದಾರೆ ಈ ಪುರಾಣದಲ್ಲಿ ೧) ಬ್ರಹ್ಮಖಂಡ ೨) ಪ್ರಕೃತಿ ಖಂಡ ೩) ಗಣೇಶ ಖಂಡ ೪) ಶ್ರೀ ಕೃಷ್ಣ ಖಂಡವೆಂದು ನಾಲ್ಕು ಖಂಡಗಳಿವೆ. ೧೮,೦೦೦ ಸಾವಿರ ಶ್ಲೋಕ ಸಂಖ್ಯೆಯುಳ್ಳ ಈ ಪುರಾಣವೂ ಸೂತಪುರಾಣಿಕರು ಮತ್ತು ಶೌನಕಾದಿ ಮಹರ್ಷಿಗಳ ಸಂವಾದದಿಂದಲೇ ಪ್ರಾರಂಭವಾಗುತ್ತದೆ. ಇದರಲ್ಲಿ ಮೊದಲು ಸೃಷ್ಟಿ ಪ್ರಕರಣವಿದೆ. ಅದರ ನಂತರ ನಾರದ ಮತ್ತು ನನ್ನವಿವಾದ, ಅದರಲ್ಲಿ ಇಬ್ಬರಿಗೂ ಪರಾಜಯದ ಕಥೆಯು. ಮರೀಚಿಯೇ! ಅನಂತರ ನಾರದರು ಶಿವ ಲೋಕಕ್ಕೆ ಹೋಗಿ ಶಿವನಿಂದ ಜ್ಞಾನವನ್ನು ಪಡೆಯುತ್ತಾರೆ. ಆ ಬಳಿಕ ನಾರದರು ಶಿವನ ಉಪದೇಶದಂತೆ ಪುನಃ ಜ್ಞಾನಪ್ರಾಪ್ತಿಗಾಗಿ ಸಿದ್ಧರಿಂದ ಸೇವಿತವಾದ, ಪರಮಪುಣ್ಯಕರ, ಪರಮಾಶ್ಚರ್ಯಕರವಾದ ಸಾವರ್ಣಿಯ ಆಶ್ರಮಕ್ಕೆ ಬರುತ್ತಾರೆ. ಇದು ಬ್ರಹ್ಮಖಂಡವು. ಅನಂತರ ನಾರದ ಮತ್ತು ಸಾವರ್ಣಿಗಳ ಸಂವಾದ. ಶ್ರೀ ಕೃಷ್ಣ ಮಾಹಾತ್ಮ್ಯ, ನಾನಾ ಆಖ್ಯಾನ, ಉಪಾಖ್ಯಾನಗಳಿವೆ. ಪ್ರಕೃತಿಯ ಅಂಶವಾದ ಕಲೆಗಳ ಮಾಹಾತ್ಮ್ಯ, ಪೂಜಾಕ್ರಮ ಮುಂತಾದವುಗಳ ವಿಸ್ತಾರವಾದ ವರ್ಣನೆಯಿದೆ. ಇದೇ ಶ್ರವಣದಿಂದ ಐಶ್ವರ್ಯಪ್ರದವಾದ ಪ್ರಕೃತಿ ಖಂಡ. ಅನಂತರ ಗಣೇಶನ ಅವತಾರಕ್ಕೆ ಸಂಬಂಧಪಟ್ಟ ಪ್ರಶ್ನೆ. ಪಾರ್ವತೀದೇವಿಯು ಪುಣ್ಯಕವೆಂಬ ಮಹಾವ್ರತವನ್ನು ಅನುಷ್ಠಾನ ಮಾಡಿದ ಕಥೆ. ಅನಂತರ ಸುಬ್ರಹ್ಮಣ್ಯ ಮತ್ತು ಗಣೇಶರ ಜನ್ಮಕಥೆಗಳು ಬರುತ್ತವೆ. ಅನಂತರ ಕಾರ್ತವೀರ್ಯಾರ್ಜುನ ಮತ್ತು ಪರಶುರಾಮರ ಅದ್ಭುತ ಚರಿತ್ರ, ಗಣೇಶ ಮತ್ತು ಪರಶುರಾಮರ ಕಲಹ ವಿವಾದಗಳು ಇವನ್ನೆಲ್ಲ ಪ್ರತಿಪಾದಿಸುವ ಭಾಗವೇ ಗಣೇಶ ಖಂಡವು. ಇದು ಸಮಸ್ತ ವಿಘ್ನಗಳ ನಾಶಕವು.

ಅನಂತರ ಶ್ರೀ ಕೃಷ್ಣಾವತಾರ ವಿಷಯದಲ್ಲಿ ಪ್ರಶ್ನೆಯು. ತತಃ ಶ್ರೀ ಕೃಷ್ಣ ಜನ್ಮದ ಅದ್ಭುತ ಕಥೆಯು ಬಂದಿದೆ. ಶ್ರೀ ಕೃಷ್ಣನು ಗೋಕುಲಕ್ಕೆ ಹೋದುದು. ಅಲ್ಲಿ ಪೂತನಾ ಮುಂತಾದ ರಾಕ್ಷಸೀ ಶಕ್ತಿಗಳ ನಾಶದ ಅದ್ಭುತ ಕಥೆಯು ಇಲ್ಲಿ ಪ್ರತಿಪಾದಿತವಾಗಿದೆ. ಶ್ರೀ ಕೃಷ್ಣನ ಬಾಲ್ಯಕೌಮಾರಾವಸ್ಥೆಗಳ ವಿವಿಧ ಲೀಲೆಗಳು. ಶರತ್ಕಾಲದ ಹುಣ್ಣಿಮೆಯ ರಾತ್ರಿಯ ಬೆಳದಿಂಗಳಿನಲ್ಲಿ ಶ್ರೀ ಕೃಷ್ಣನು ಗೋಪಿಕಾ ಸ್ತ್ರೀಯರೊಂದಿಗೆ ರಾಸಕ್ರೀಡೆಯನ್ನಾಡಿದ ವಿಚಿತ್ರವಾದ ಸನ್ನಿವೇಶದ ವರ್ಣನೆಯು ಇಲ್ಲಿ ಪ್ರತಿಪಾದಿತವಾಗಿದೆ. ರಾಧೆಯ ಜೊತೆಗೆ ಶ್ರೀ ಕೃಷ್ಣನು ರಹಸ್ಯದಲ್ಲಿ ಮಾಡಿದ ಅನೇಕಾನೇಕ ದಿವ್ಯ ಕ್ರೀಡೆಗಳ ವರ್ಣನೆಯು ಇಲ್ಲಿ ವಿಸ್ತಾರವಾಗಿ ಬಂದಿದೆ. ಅಕ್ರೂರನ ಜೊತೆಗೆ ಶ್ರೀ ಕೃಷ್ಣನ ಉಪನಯನ

ಸಂಸ್ಕಾರದ ಕಥೆಯೂ ಇಲ್ಲಿ ಬಂದಿದೆ. ಉಪನಯನದ ಅನಂತರ ಶ್ರೀ ಕೃಷ್ಣನು ಅಣ್ಣನೊಂದಿಗೆ ಕಾಶ್ಯಪಗೋತ್ರೋತ್ಪನ್ನವಾದ ಸಾಂದೀಪನಿಯ ಆಶ್ರಮಕ್ಕೆ ಹೋಗಿ ಅರವತ್ತು ದಿವಸಗಳಲ್ಲಿ ಸಮಸ್ತ ವಿದ್ಯಾಧ್ಯಯನ ಮಾಡುತ್ತಾನೆ.

ಹಿಂತಿರುಗಿ ಬಂದನಂತರ ಕೆಲವೇ ದಿವಸಗಳಲ್ಲಿ ಕಾಲಯವನನನ್ನು ವಧಿಸಿ, ದ್ವಾರಕಾ ನಿರ್ಮಾಣ ಮಾಡಿ, ಅಲ್ಲಿಂದ ಪ್ರಾಗ್ ಜ್ಯೋತಿಷಪುರಕ್ಕೆ ಹೋಗಿ ನರಕಾಸುರನನ್ನು ಸಂಹರಿಸುತ್ತಾನೆ. ಇಂತಹ ಶ್ರೀ ಕೃಷ್ಣನ ಅದ್ಭುತ ಲೀಲಾ ಪ್ರತಿಪಾದಕವಾದ ಶ್ರೀ ಕೃಷ್ಣ ಖಂಡದ ಪಠನ, ಶ್ರವಣ, ಧ್ಯಾನ, ಪೂಜೆ, ನಮಸ್ಕಾರಗಳನ್ನು ತಿಳಿದರೂ ಮನುಷ್ಯರನ್ನು ಸಂಸಾರದಿಂದ ಪಾರುಮಾಡುತ್ತದೆ, ವ್ಯಾಸಪ್ರೋಕ್ತವಾದ ಈ ಪ್ರಾಚೀನವಾದ, ಅಲೌಕಿಕವಾದ ಬ್ರಹ್ಮವೈವರ್ತ ಪುರಾಣ ಪಾರಾಯಣ, ಅರ್ಥ ಶ್ರವಣ ಮಾಡುವ ಮನುಷ್ಯನು ಜ್ಞಾನ ವಿಜ್ಞಾನ ಸಂಪನ್ನನಾಗಿ ಸಂಸಾರ ಸಾಗರದಿಂದ ಮುಕ್ತನಾಗುತ್ತಾನೆ. ಈ ಪುರಾಣವನ್ನು ಬರೆದು ಮಾಘಮಾಸದ ಹುಣ್ಣಿಮೆಯ ದಿನ ಯಾವನು ಪ್ರತ್ಯಕ್ಷಧೇನುಸಹಿತವಾಗಿ ದಾನಮಾಡುತ್ತಾನೋ ಅವನು ಅಜ್ಞಾನ ಬಂಧನದಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಪಡೆಯುತ್ತಾನೆ. ಯಾವನು ಈ ವಿಷಯ ಸೂಚಿಯನ್ನು ಓದುತ್ತಾನೋ ಅಥವಾ ಕೇಳುತ್ತಾನೋ ಅವನೂ ಕೂಡ ಶ್ರೀಕೃಷ್ಣನ ಕೃಪೆಯಿಂದ ಮನಸ್ಸಿನಿಂದ ಬಯಸಿದ ಫಲವನ್ನು ಪಡೆಯುತ್ತಾನೆ.

## ಲಿಂಗ ಪುರಾಣ

**ಬ್ರಹ್ಮದೇವರು:-** ಪುತ್ರ ಕೇಳು, ಹೇಳುವ ಮತ್ತು ಕೇಳುವ ಇಬ್ಬರಿಗೂ ಭೋಗ ಮೋಕ್ಷಪ್ರದವಾದ ಲಿಂಗಪುರಾಣದ ಪರಿಚಯವನ್ನು ನಿನಗೆ ಈಗ ತಿಳಿಸುತ್ತೇನೆ. ಶಂಕರನು ಅಗ್ನಿಲಿಂಗದಲ್ಲಿದ್ದು ಅಗ್ನಿ ಕಲ್ಪವನ್ನು ಅನುಸರಿಸಿ ಧರ್ಮಾದಿ ಪುರುಷಾರ್ಥ ಸಿದ್ಧಿಗೋಸ್ಕರ ಹೇಳಿದ ಆಖ್ಯಾನ - ಉಪಾಖ್ಯಾನಗಳೇ ಲಿಂಗ ಪುರಾಣವು. ಈ ಪುರಾಣದ ಉಪದೇಶವನ್ನು ಶಂಕರನಿಂದ ನಾನು ಪಡೆದಿದ್ದೇನೆ. ಈ ಪುರಾಣವನ್ನು ವ್ಯಾಸರು ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ. ಶಿವಮಹಿಮೆಯನ್ನು ತಿಳಿಸುವ ಈ ಪುರಾಣದಲ್ಲಿ ಹನ್ನೊಂದು ಸಾವಿರ ಶ್ಲೋಕಗಳಿವೆ. ಮೂರು ಲೋಕದಲ್ಲಿಯೂ ಸಾರಭೂತವಾದ ಈ ಶ್ರೇಷ್ಠ ಪುರಾಣದಲ್ಲಿ ಮೊದಲು ಪುರಾಣ ವಿಷಯಕ ಪ್ರಶ್ನೆಯಿದೆ. ಅನಂತರ ಸಂಕ್ಷೇಪದಿಂದ ಯೋಗಾಖ್ಯಾನ ಮತ್ತು ಕಲ್ಪಾಖ್ಯಾನಗಳ ವರ್ಣನೆಯಿದೆ. ಲಿಂಗಪ್ರಾದುರ್ಭಾವ, ಲಿಂಗ ಪೂಜಾವಿಧಿ, ಸನತ್ಕುಮಾರ ಮತ್ತು ಶೈಲರ ಪವಿತ್ರಸಂವಾದ, ದಧೀಚಿ ಚರಿತ್ರ, ಯುಗಧರ್ಮ ನಿರೂಪಣ, ಭುವನಕೋಶವರ್ಣನ, ಸೂರ್ಯವಂಶ ಮತ್ತು ಚಂದ್ರ ವಂಶಗಳ ಪರಿಚಯವು ಇಲ್ಲಿ ಬಂದಿದೆ. ಅನಂತರ ವಿಸ್ತಾರವಾಗಿ ಸೃಷ್ಟಿ ವರ್ಣನ, ತ್ರಿಪುರರ ಕಥೆ, ಲಿಂಗಪ್ರತಿಷ್ಠಾ ಮತ್ತು ಪಶುಪಾಶ ವಿಮೋಕ್ಷ ಪ್ರಸಂಗಗಳಿವೆ. ಇಲ್ಲಿ ಶಿವ ಪ್ರೀತಿಕರವಾದ ವ್ರತಗಳು, ಸದಾಚಾರ ನಿರೂಪಣ, ಪ್ರಾಯಶ್ಚಿತ್ತ, ಅರಿಷ್ಟಗಳ ನಿರೂಪಣೆ, ಕಾಶಿ ಮತ್ತು ಶ್ರೀ ಶೈಲಗಳ ವರ್ಣನವಿದೆ. ಅಂಧಕಾಸುರನ ಕಥೆ, ವರಾಹಚರಿತ್ರೆ, ನರಸಿಂಹಚರಿತ್ರೆ, ಜಲಂಧರವಧ ಕಥೆಗಳ ನಂತರ, ಶಿವಸಹಸ್ರನಾಮ, ದಕ್ಷಪ್ರಜಾಪತಿಯ ಯಜ್ಞದನಾಶ, ಮನ್ಮಥ ದಹನ, ಪಾರ್ವತೀ ಕಲ್ಯಾಣದ ಕಥೆಗಳು ಇಲ್ಲಿ ಬಹಳ ಸುಂದರವಾಗಿ ನಿರೂಪಿತವಾಗಿವೆ. ಇದರ ಅನಂತರ ಗಣೇಶನ ಕಥೆ, ಪರಮೇಶ್ವರನ ಅದ್ಭುತವಾದ ತಾಂಡವನೃತ್ಯದ ಪ್ರಸಂಗ ಹಾಗೂ ಉಪಮನ್ಯುವಿನ ಕಥೆ ಇವಿಷ್ಟೂ ಲಿಂಗಪುರಾಣದ ಪೂರ್ವಭಾಗದಲ್ಲಿವೆ.

ಮುನಿಯೇ, ಇದರ ನಂತರ ವಿಷ್ಣು ಮಾಹಾತ್ಮ್ಯ ನಿರೂಪಣ, ಅಂಬರೀಷನ ಕಥೆ, ಸನತ್ಕುಮಾರ ಮತ್ತು ನಂದೀಶ್ವರರ ಸಂವಾದಗಳು ಇಲ್ಲಿ ಬಂದಿವೆ. ಶಿವ ಮಾಹಾತ್ಮ್ಯವನ್ನೂ ಹೇಳುತ್ತ ಸ್ನಾನ, ಯಾಗ ಮುಂತಾದವುಗಳನ್ನು ವರ್ಣಿಸಿ, ಸೂರ್ಯಪೂಜೆಯ ವಿಧಿಯನ್ನೂ, ಮುಕ್ತಿದಾಯಕವಾದ ಶಿವಪೂಜೆಯನ್ನೂ ಇಲ್ಲಿ ನಿರೂಪಿಸಿದ್ದಾರೆ. ಅನಂತರ ಅನೇಕ ರೀತಿಯ ದಾನಗಳನ್ನು ಇಲ್ಲಿ ಹೇಳಿದ್ದಾರೆ. ಶ್ರಾದ್ಧ ಪ್ರಕರಣ, ಪ್ರತಿಷ್ಠಾತಂತ್ರ, ಅಘೋರ ಮಹಾದೇವ ಕೀರ್ತನ, ವ್ರಜೇಶ್ವರೀ ಮಹಾವಿದ್ಯಾ, ಗಾಯತ್ರೀ ಮಹಿಮಾ. ತ್ರ್ಯಂಬಕಮಾಹಾತ್ಮ್ಯ ಮತ್ತು ಪುರಾಣ ಶ್ರವಣ ಫಲವರ್ಣನೆಗಳು ಉತ್ತರಭಾಗದಲ್ಲಿದೆ. ಈ ಪುರಾಣವು ವಿಶೇಷವಾಗಿ ರುದ್ರಮಹಾತ್ಮ್ಯ ಪ್ರತಿಪಾದಕವೆಂದು ಹೇಳಿದ್ದಾಗಿದೆ. ಈ ಪುರಾಣವನ್ನು ಬರೆದು ಫಾಲ್ಗುನ ಮಾಸದ ಹುಣ್ಣಿಮೆಯ ದಿನ ತಿಲಧೇನುವಿನ ಜೊತೆಗೆ ವಿದ್ವಾಂಸನಿಗೆ ಭಕ್ತಿ ಪೂರ್ವಕವಾಗಿ ದಾನ ಮಾಡುವವನು, ಮುಪ್ಪು ಸಾವುಗಳಿಲ್ಲದ ಶಿವಸಾಯುಜ್ಯವನ್ನು ಹೊಂದುತ್ತಾನೆ. ಪಾಪನಾಶಕವಾದ ಲಿಂಗಪುರಾಣದ ಪಾರಾಯಣ ಮತ್ತು ಶ್ರವಣ ಮಾಡುವವರಿಬ್ಬರೂ ಗಿರಿಜಾವಲ್ಲಭನ ಪ್ರಸಾದದಿಂದ ಇಹಲೋಕದಲ್ಲಿ ಉತ್ತಮ ಭೋಗವನ್ನು ಭೋಗಿಸಿ ಕೊನೆಗೆ ಶಿವಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

## ವಾರಾಹ ಪುರಾಣ

**ಬ್ರಹ್ಮದೇವರು:-** ಮಗನೇ ಕೇಳು, ಶಾಶ್ವತವಾದ ಶ್ರೀ ಮನ್ಮಹಾವಿಷ್ಣುವಿನ ಮಹಾತ್ಮ್ಯ ಪ್ರತಿಪಾದಕವಾದ ವಾರಾಹ ಪುರಾಣವು ಎರಡು ಭಾಗಗಳಿಂದ ಕೂಡಿದೆ. ಹಿಂದೆ ನಾನು ನಿರ್ಮಿಸಿದ ಮಾನವ ಕಲ್ಪದ ಕಥಾಸಂದರ್ಭವನ್ನೇ, ಸರ್ವಜ್ಞರಾದ, ನಾರಾಯಣ ಅವತಾರರಾದ ವೇದವ್ಯಾಸ ಮಹರ್ಷಿಗಳು ವಾರಾಹ ಪುರಾಣವೆಂಬ ಹೆಸರಿನಿಂದ ಬರೆದಿದ್ದಾರೆ. ಈ ಪುರಾಣದ ಶ್ಲೋಕಸಂಖ್ಯೆ ಇಪ್ಪತ್ತನಾಲ್ಕು ಸಾವಿರ. ಇದರಲ್ಲಿ ಮೊದಲು ಪೃಥ್ವೀ ಮತ್ತು ವರಾಹರ ಸಂವಾದ, ಅನಂತರ ಕೃತಯುಗದ ವೃತ್ತಾಂತವನ್ನು ಹೇಳುತ್ತಾ ರೈಭ್ಯಚರಿತ್ರ ನಿರೂಪಣಗಳನ್ನು ಮಾಡಲಾಗಿದೆ. ದುರ್ಜಯಚರಿತ್ರ, ಶ್ರಾದ್ಧಕಲ್ಪವರ್ಣನ, ಮಹಾತಪನ ಕಥೆ, ಗೌರಿಯ ಜನ್ಮಕಥೆ, ವಿನಾಯಕ, ನಾಗಗಳ ಸಮೂಹಗಳು, ಸುಬ್ರಹ್ಮಣ್ಯ, ಆದಿತ್ಯಗಣಗಳು, ದೇವಿ, ಕುಬೇರ ಮತ್ತು ವೃಷ ಇವರ ಕಥೆಗಳು ಇವೆ. ಅನಂತರ ಸತ್ಯಪನತ್ಯವ್ರತದ ಕಥೆಯು ಬರುತ್ತದೆ. ಅನಂತರ ಅಗಸ್ತ್ಯಗೀತಾ ಮತ್ತು ರುದ್ರಗೀತೆಗಳು ಹೇಳಲ್ಪಟ್ಟಿವೆ. ಮಹಿಷಾಸುರ ಸಂಹಾರ ಸಂದರ್ಭದಲ್ಲಿ ಬ್ರಹ್ಮ, ವಿಷ್ಣು, ರುದ್ರರ ಶಕ್ತಿಗಳ ಮಾಹಾತ್ಮ್ಯಗಳು ಪ್ರಕಟವಾಗಿವೆ. ಅನಂತರ ಪರ್ವಾಧ್ಯಾಯ, ಶ್ವೇತೋಪಾಖ್ಯಾನ ಗೋಪ್ರದಾನಿಕ ಮುಂತಾದ ಕೃತಯುಗದ ವೃತ್ತಾಂತಗಳೂ ನನ್ನಿಂದ ಮೊದಲನೆಯ ಭಾಗದಲ್ಲಿ ನಿರೂಪಿಸಲ್ಪಟ್ಟಿವೆ. ಅನಂತರ ಬರುವ ಭಗವದ್ಧರ್ಮದಲ್ಲಿ ವ್ರತ ಮತ್ತು ತೀರ್ಥಗಳ ಕಥೆಗಳಿವೆ. ಮೂವತ್ತೆರಡು ಅಪರಾಧಗಳಿಗೆ ಶಾರೀರಕ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ. ಮಥುರೆಯ, ಪ್ರಾಯಃ ಎಲ್ಲಾ ತೀರ್ಥಗಳ ಮಾಹಾತ್ಮ್ಯ ಮಹಿಮೆಗಳು ವಿಶೇಷ ರೂಪದಿಂದ ಹೇಳಲ್ಪಟ್ಟಿವೆ. ಅನಂತರ ಶ್ರಾದ್ಧಾದಿಗಳ ವಿಧಿಗಳಿವೆ. ಅನಂತರ ಋಷಿಪುತ್ರನ ಕಥಾಸಂದರ್ಭದಲ್ಲಿ ಯಮಲೋಕವರ್ಣನ, ಕರ್ಮವಿಪಾಕ ಮತ್ತು ವಿಷ್ಣು ವ್ರತದ ನಿರೂಪಣಗಳಿವೆ. ಪಾಪನಾಶಕವಾದ ಗೋಕರ್ಣದ ಮಾಹಾತ್ಮ್ಯವೂ ಇಲ್ಲಿದೆ. ಇಲ್ಲಿಗೆ ವರಾಹ ಪುರಾಣದ ಪೂರ್ವಭಾಗವು ಮುಗಿದಿದೆ.

ಉತ್ತರಭಾಗದಲ್ಲಿ ಪುಲಸ್ತ್ಯ ಮತ್ತು ಪುರುರಾಜನ ಸಂವಾದ ಪ್ರಸಂಗದಲ್ಲಿ ವಿಸ್ತಾರವಾಗಿ ಎಲ್ಲ ತೀರ್ಥಗಳ ಮಾಹಾತ್ಮ್ಯವೂ ಪ್ರತ್ಯೇಕವಾಗಿ ವರ್ಣಿತವಾಗಿದೆ. ಅನಂತರ ಸಂಪೂರ್ಣ ಧರ್ಮಗಳ ವ್ಯಾಖ್ಯಾನಮಾಡಿ ಪುಷ್ಕರವೆಂಬ ಪುಣ್ಯಕರವಾದ ಪರ್ವವನ್ನು ವರ್ಣಿಸಿದ್ದಾರೆ. ಈ ರೀತಿ ಸಂಕ್ಷೇಪವಾಗಿ ಪಾಪನಾಶಕವಾದ ವರಾಹ ಪುರಾಣದ ಪರಿಚಯವನ್ನು ಮಾಡಿಸಿದ್ದಾಯಿತು. ಈ ಪುರಾಣವು ಓದುವವರ ಮತ್ತು ಕೇಳುವವರ ಮನಸ್ಸಿನಲ್ಲಿ ಭಕ್ತಿಯನ್ನು ಹೆಚ್ಚಿಸುತ್ತದೆ. ಈ ಪುರಾಣವನ್ನು ಬರೆದು ಸುವರ್ಣಮಯವಾದ ಗರುಡ ಪ್ರತಿಮೆ ಮತ್ತು ತಿಲಧೇನು ಸಹಿತವಾಗಿ ಚೈತ್ರ ಶುದ್ಧ ಪೂರ್ಣಿಮೆಯ ದಿನ ಭಕ್ತಿಪೂರ್ವಕವಾಗಿ ಬ್ರಾಹ್ಮಣನಿಗೆ ದಾನಮಾಡಿದರೆ, ಸಮಸ್ತ ದೇವತೆಗಳು ಮತ್ತು ಋಷಿಗಳಿಂದ ವಂದಿತನಾಗಿ ಅಂತಹ ಮಾನವನು ವಿಷ್ಣುಲೋಕವನ್ನು ಪಡೆಯುತ್ತಾನೆ. ವಾರಾಹ ಪುರಾಣದ ಅನುಕ್ರಮಣಿಕೆಯನ್ನು ಹೇಳುವ ಮತ್ತು ಕೇಳುವ ಇಬ್ಬರೂ ಸಂಸಾರನಾಶಕವಾದ ವಿಷ್ಣುಭಕ್ತಿಯನ್ನು ಪಡೆಯುತ್ತಾರೆ.

## ಸ್ಕಂದ ಪುರಾಣದ ವಿಷಯಾನುಕ್ರಮಣಿಕೆ

**ಬ್ರಹ್ಮದೇವರು:-** ವತ್ಸ ಕೇಳು, ಯಾವ ಪುರಾಣದ ಪ್ರತಿಪದದಲ್ಲಿಯೂ, ಪರಮೇಶ್ವರನ ಪರಮಸನ್ನಿಧಾನವಿದೆಯೋ, ಅಂತಹ ಸ್ಕಂದ ಪುರಾಣದ ವರ್ಣನೆಯನ್ನು ನಾನು ಈಗ ಪ್ರಾರಂಭಿಸುತ್ತೇನೆ. ಶತಕೋಟಿ ಪುರಾಣದಲ್ಲಿ ನಾನು ವರ್ಣಿಸಿದ ಶಿವಮಹಿಮೆಯ ಸಾರವಾದ ಭಾಗವನ್ನು ಶ್ರೀ ವ್ಯಾಸ ಮಹರ್ಷಿಗಳು ಸ್ಕಂದ ಪುರಾಣದಲ್ಲಿ ವರ್ಣಿಸಿದ್ದಾರೆ. ಇದರಲ್ಲಿ ಏಳು ಖಂಡಗಳಿವೆ. ಸಮಸ್ತ ಪಾಪನಾಶಕವಾದ ಈ ಪುರಾಣದಲ್ಲಿ ಎಂಬತ್ತು ಒಂದು ಸಾವಿರ ಶ್ಲೋಕಗಳಿವೆ. ಈ ಪುರಾಣದ ಶ್ರವಣ ಮತ್ತು ಪಾರಾಯಣ ಮಾಡುವವನು ಸಾಕ್ಷಾತ್‌ಶಿವನ ಸನ್ನಿಧಾನ ಪಾತ್ರನೇ ಸರಿ. ತತ್ಪುರುಷ ಕಲ್ಪದಲ್ಲಿ ನಡೆದ ಧರ್ಮಗಳ ಪ್ರತಿಪಾದನೆಯನ್ನು ಸ್ಕಂದ ಮೂಲಕವಾಗಿ ಈ ಪುರಾಣದಲ್ಲಿ ನಿರೂಪಿಸಿದ್ದಾರೆ. ಇದರ ಮೊದಲನೆಯ ಭಾಗವಾದ ಮಹೇಶ್ವರ ಖಂಡದಲ್ಲಿ ಹನ್ನೆರಡು ಸಾವಿರಕ್ಕಿಂತ ಸ್ವಲ್ಪ ಕಡಿಮೆ ಶ್ಲೋಕಗಳಿವೆ. ಪರಮ ಪವಿತ್ರವಾದ ವಿಸ್ತಾರವಾದ ಕಥೆಗಳಿಂದ ಕೂಡಿದ ಈ ಭಾಗದಲ್ಲಿ ಸುಬ್ರಹ್ಮಣ್ಯ ಸ್ವಾಮಿಯ ಮಹಿಮೆಯು ಸೂಚಿತವಾಗಿದೆ. ಮಾಹೇಶ್ವರ ಖಂಡದಲ್ಲಿ ಕೇದಾರ ಮಾಹಾತ್ಮ್ಯದಿಂದ ಪುರಾಣಾರಂಭವಾಗಿ, ದಕ್ಷಯಜ್ಞದ ಕಥೆ, ಶಿವಲಿಂಗಪೂಜೆಯ ಫಲ, ಸಮುದ್ರಮಥನದ ಕಥೆ, ಇಂದ್ರ ಚರಿತ್ರೆ, ಪಾರ್ವತೀಜನ್ಮ ವೃತ್ತಾಂತ, ಪಾರ್ವತೀಕಲ್ಯಾಣ, ಸುಬ್ರಹ್ಮಣ್ಯನ ಜನನ, ತಾರಕಾಸುರ ಮತ್ತು ಷಣ್ಮುಖರ ಯುದ್ಧ, ಪಾಶುಪತೋಪಾಖ್ಯಾನ, ಚಂಡನ ಕಥೆ, ದೂತಪ್ರೇಷಣ, ನಾರದ ಸಮಾಗಮ, ಕುಮಾರಮಾಹಾತ್ಮ್ಯ, ಅದೇ ಸಂದರ್ಭದಲ್ಲಿ ಪಂಚತೀರ್ಥಕಥೆಗಳು ಬಂದಿವೆ. ಅನಂತರ ಧರ್ಮವರ್ಮ ರಾಜನ ಕಥೆ. ನದೀ-ಸಮುದ್ರಗಳ ವರ್ಣನೆ. ಇಂದ್ರದ್ಯುಮ್ನ ಮತ್ತು ನಾಡೀಜಂಘರ ಕಥೆಗಳು, ಮಹೀನದಿಯ ಪ್ರಾದುರ್ಭಾವ, ದಮನಕನ ಕಥೆ, ಮಹೀಸಾಗರ ಸಂಗಮ, ಕುಮಾರೇಶ ವೃತ್ತಾಂತ, ಇದರನಂತರ ನಾನಾವಿಧವಾದ ಉಪಾಖ್ಯಾನ ಸಹಿತವಾದ ತಾರಕಾಸುರಯುದ್ಧ ಮತ್ತು ತಾರಕಾಸುರನ ಸಂಹಾರದ ವೃತ್ತಾಂತಗಳಿವೆ.

ಅನಂತರ ಪಂಚಲಿಂಗ ಸ್ಥಾಪನೆಯ ಕಥೆ, ಪವಿತ್ರವಾದ ದ್ವೀಪಗಳ ವರ್ಣನೆ, ಊರ್ಧ್ವ ಲೋಕಗಳ ಸ್ಥಿತಿ, ಬ್ರಹ್ಮಾಂಡಸ್ಥಿತಿ, ಅದರ ಪರಿಮಾಣ, ಬಕ್ರರೇಶನ ಕಥೆ, ಮಹಾಕಾಲೇಶ್ವರ

ಪ್ರಾದುರ್ಭಾವದ ಅದ್ಭುತಕಥೆ, ವಾಸುದೇವಮಾಹಾತ್ಮ್ಯ, ಕೋಟಿ ತೀರ್ಥವರ್ಣನ, ಅನಂತರ ಗುಪ್ತಕ್ಷೇತ್ರದಲ್ಲಿ ನಾನಾತೀರ್ಥಗಳ ಉಪಾಖ್ಯಾನಗಳು, ಪುಣ್ಯಕರವಾದ ಪಾಂಡವರ ಕಥೆ, ಬರ್ಬರೀಕನ ಸಹಾಯದಿಂದ ಮಹಾವಿದ್ಯಾಸಾಧನ ಇಷ್ಟು ವಿಷಯಗಳ ನಿರೂಪಣೆಯೊಂದಿಗೆ ತೀರ್ಥಯಾತ್ರಾ ಸಮಾಪ್ತಿಯಾಗುತ್ತದೆ. ಅನಂತರ ಅರುಣಾಚಲಮಾಹಾತ್ಮ್ಯ, ಸನಕಬ್ರಹ್ಮಸಂವಾದ, ಗೌರಿಯ ತಪ, ತಪಸ್ಸಿನ ಸ್ಥಳದಲ್ಲಿರುವ ತೀರ್ಥಗಳು, ಇವುಗಳ ವರ್ಣನೆಯು ನಿರೂಪಿತವಾಗಿದೆ. ಮಹಿಷಾಸುರನ ವಧ, ದ್ರೋಣಾಚಲದಲ್ಲಿ ಪರಮೇಶ್ವರನ ನಿತ್ಯಸನ್ನಿಧಾನದ ವರ್ಣನೆಯೊಂದಿಗೆ ಸ್ಕಂದಪುರಾಣದ ಮಾಹೇಶ್ವರ ಖಂಡವು ಸಮಾಪ್ತಿಯಾಗುತ್ತದೆ.

ಎರಡನೆಯ ವೈಷ್ಣವಖಂಡದಲ್ಲಿ ಭೂಮಿ ವರಾಹ ಸಂವಾದವರ್ಣನ ಪ್ರಸಂಗದಲ್ಲಿ ಪಾಪನಾಶಕವಾದ ವೆಂಕಟಾಚಲಮಾಹಾತ್ಮ್ಯ ವರ್ಣನ, ಲಕ್ಷ್ಮಿಯ ಪವಿತ್ರವಾದ ಕಥೆ, ಶ್ರೀನಿವಾಸನ ಸ್ಥಿತಿ, ಕುಂಬಾರನ, ಸುವರ್ಣಮುಖರಿಯ ಮಾಹಾತ್ಮ್ಯ. ಅನೇಕ ಉಪಾಖ್ಯಾನ ಸಹಿತವಾದ ಭರದ್ವಾಜರ ಅದ್ಭುತ ಕಥೆ, ಮತಂಗ, ಮತ್ತು ಅಂಜನರ ಪಾಪನಾಶಕವಾದ ಸಂವಾದಗಳನಂತರ ಉತ್ಕಲ ಪ್ರದೇಶದ ಪುರುಷೋತ್ತಮ ಮಾಹಾತ್ಮ್ಯವು ಪ್ರತಿಪಾದಿತವಾಗಿದೆ. ಅನಂತರ ಮಾರ್ಕಂಡೇಯರ ಕಥಾ, ಅಂಬರೀಷ ರಾಜನ ವೃತ್ತಾಂತ, ಇಂದ್ರದ್ಯುಮ್ನ ಮತ್ತು ವಿದ್ಯಾಪತಿಗಳ ಕಥೆ, ಜೈಮಿನಿ ಮತ್ತು ನಾರದರ ಉಪಾಖ್ಯಾನ, ನೀಲಕಂಠ ಮತ್ತು ನೃಸಿಂಹರ ವರ್ಣನೆಗಳು ಇದೇ ಪ್ರಸಂಗದಲ್ಲಿ ಬಂದಿವೆ. ಅನಂತರ ಅಶ್ವಮೇಧಯಜ್ಞದ ಕಥೆ, ರಾಜನ ಬ್ರಹ್ಮಲೋಕಗಮನ. ರಥೋತ್ಸವವಿಧಿ. ಜಪ-ಸ್ನಾನವಿಧಿ, ದಕ್ಷಿಣಾಮೂರ್ತಿ ಉಪಾಖ್ಯಾನ, ಗುಂಡಿಚನ ಕಥೆ, ರಥರಕ್ಷಾವಿಧಾನ, ಭಗವಂತನ ಶಯನೋತ್ಸವದ ವರ್ಣನ, ಶ್ವೇತರಾಜನ ಉಪಾಖ್ಯಾನ, ಪೃಥು ಉತ್ಸವ ನಿರೂಪಣ, ದೋಲೋತ್ಸವ ಸಾಂವತ್ಸರಿಕ ವ್ರತಗಳ ವರ್ಣನೆಗಳು ಬಂದಿವೆ.

ಅನಂತರ ಉದ್ದಾಲಕರ ಉಪದೇಶದಂತೆ ಶ್ರೀಮನ್ನಾರಾಯಣನ ನಿಷ್ಕಾಮ ಪೂಜೆಯ ಪ್ರತಿಪಾದನ ಮೋಕ್ಷಸಾಧನ ನಿರೂಪಣ, ನಾನಾಯೋಗವರ್ಣನ, ದಶಾವತಾರಕಥಾ, ಸ್ನಾನವರ್ಣನ, ಬದರಿಕಾಶ್ರಮ ತೀರ್ಥದಮಹಿಮೆ, ಅಗ್ನಿ ತೀರ್ಥ ಮತ್ತು ಗರುಡಶಿಲಾ ಮಹಿಮೆ, ಅಲ್ಲಿ ಭಗವಂತನು ಸನ್ನಿಧಾನವಿಡಲು ಕಾರಣ, ಕಪಾಲಮೋಚನ ತೀರ್ಥ ಪಂಚ ದಾರಾತೀರ್ಥ ಮೇರುಸಂಸ್ಥಾನದ ಕಥೆಗಳಿವೆ. ಅನಂತರ ಕಾರ್ತಿಕಮಾಸದ ಕಥೆ ಪ್ರಾರಂಭ ವಾಗುತ್ತದೆ. ಅದರಲ್ಲಿ ಮದನಾಲಸ ಮಾಹಾತ್ಮ್ಯ, ಧೂಮ್ರಕೇಶ ಉಪಾಖ್ಯಾನ, ಕಾರ್ತಿಕ ಮಾಸದ ಪ್ರತ್ಯೇಕ ದಿನಗಳಲ್ಲಿ ಮಾಡಬೇಕಾದ ಕರ್ತವ್ಯಗಳು, ಮೋಕ್ಷಪ್ರದವಾದ ಭೀಷ್ಮ ಪಂಚಕವ್ರತವು ಪ್ರತಿಪಾದಿತವಾಗಿವೆ. ಅನಂತರ ಮಾರ್ಗಶಿರಮಾಸ ಮಾಹಾತ್ಮ್ಯದಲ್ಲಿ ಸ್ನಾನ ವಿಧಿ, ಪುಂಡ್ರಮಾಲಾಧಾರಣವಿಧಿ, ಅದರ ಪುಣ್ಯ, ಪಂಚಾಮೃತ ಸ್ನಾನದ ಪುಣ್ಯ, ಘಂಟೆ ಬಾರಿಸವುದರ ಪುಣ್ಯವು ಹೇಳಲ್ಪಟ್ಟಿದೆ. ನಾನಾರೀತಿಯ ಹೂವು ಮತ್ತು ತುಳಸಿಯ ಮಾಹಾತ್ಮ್ಯ, ನೈವೇದ್ಯ ಸಮರ್ಪಣದ ಮಹಿಮೆ, ಏಕಾದಶೀದಿನ ಸಂಕೀರ್ತನದ ಫಲ, ಅಖಂಡ ಏಕಾದಶೀ ವ್ರತದ ಪುಣ್ಯ, ಏಕಾದಶೀ ರಾತ್ರಿ ಜಾಗರಣೆ ಮಾಡಿದರೆ ಬರುವ ಫಲ ಇವೆಲ್ಲವನ್ನು ಹೇಳಿದ್ದಾರೆ.

ಅನಂತರ ಮಂತ್ರೋತ್ಸವ ವಿಧಾನ. ನಾಮಮಾಹಾತ್ಮ್ಯ, ಭಗವಂತನ ಧ್ಯಾನಾದಿಗಳ ಪುಣ್ಯ, ಮಥುರಾ ಮಾಹಾತ್ಮ್ಯ ಹೇಳಿದ್ದಾರೆ. ಮಥುರಾತೀರ್ಥದ ಉತ್ತಮವಾದ ಮತ್ತೊಂದು ಮಾಹಾತ್ಮ್ಯವನ್ನು ಪ್ರತ್ಯೇಕವಾಗಿ ಹೇಳಿದ್ದಾರೆ. ಅಲ್ಲಿರುವ ಹನ್ನೆರಡು

ಮಹಿಮೆಯನ್ನು ಹೇಳಿದ್ದಾರೆ. ಅನಂತರ ಈ ಪುರಾಣದಲ್ಲಿ ಶ್ರೀಮದ್‌ಭಾಗವತದ ಉತ್ತಮವಾದ ಮಹಿಮೆಯನ್ನು ಹೇಳಿದ್ದಾರೆ. ಗೋಕುಲದ ರಹಸ್ಯವಾದ ಲೀಲೆಗಳನ್ನು ಪ್ರತಿಪಾದಿಸುವ ವಜ್ರನಾಭ ಮತ್ತು ಶಾಂಡಿಲ್ಯರ ಸಂವಾದದ ಉಲ್ಲೇಖವು ಅನಂತರ ಬರುತ್ತದೆ. ಅನಂತರ ಮಾಘಸ್ನಾನ, ದಾನ ಜಪಗಳ ಮಹಿಮೆಯು ನಾನಾ ಉಪಾಖ್ಯಾನ ಸಹಿತವಾಗಿ ಪ್ರತಿಪಾದಿತವಾಗಿದೆ. ವೈಶಾಖ ಮಾಸದ ಮಾಹಾತ್ಮ್ಯದಲ್ಲಿ ಶಯ್ಯಾದಾನಾದಿಗಳ ಫಲ, ಜಲದಾನವಿಧಿ, ಕಾಮೋಪಾಖ್ಯಾನ, ಶುಕದೇವಚರಿತ. ವ್ಯಾಧನ ಅದ್ಭುತಕಥೆ, ಅಕ್ಷಯ ತೃತೀಯಾದಿಗಳ ಪುಣ್ಯದ ಪ್ರತಿಪಾದನೆಯೂ ಇಲ್ಲಿದೆ.

ಅಯೋಧ್ಯಾ ಮಾಹಾತ್ಮ್ಯದಲ್ಲಿ ಚಕ್ರತೀರ್ಥ, ಬ್ರಹ್ಮತೀರ್ಥ, ಋಣಮೋಚನ ತೀರ್ಥ, ಪಾಪಮೋಚನ ತೀರ್ಥ, ಸಹಸ್ರಧಾರಾ ತೀರ್ಥ ಸ್ವರ್ಗದ್ವಾರ ತೀರ್ಥ, ಚಂದ್ರಹರಿತೀರ್ಥ, ಧರ್ಮಹರಿತೀರ್ಥ, ಸ್ವರ್ಣವೃಷ್ಟಿ ತೀರ್ಥಗಳ ಕಥೆ, ತಿಲೋದಾ- ಸರಯೂ ಸಂಗಮಗಳ ವರ್ಣನೆಯಿದೆ. ಅನಂತರ ಸೀತಾಕುಂಡ ಗುಪ್ತಹರಿತೀರ್ಥ, ಸರಯೂ ಘೂಘರಾಸಂಗಮ, ಗೋಪ್ರಚಾರತೀರ್ಥ, ಬೃಹಸ್ಪತಿ ಕುಂಡ ಮುಂತಾದ - ಪಂಚತೀರ್ಥಗಳ ಮಹಿಮೆಯು ಅನಂತರ ಬಂದಿದೆ. ಅನಂತರ ಘೋಷಾರ್ಕ ಮೊದಲಾದ ಹದಿಮೂರು ತೀರ್ಥಗಳ ವರ್ಣನೆ, ಅನಂತರ ಗತ್ಯಾಕೂಪದ ಸರ್ವಪಾಪನಾಶಕವಾದ ಮಾಹಾತ್ಮ್ಯ, ಮಾಂಡವ್ಯಾಶ್ರಮಾದಿವರ್ಣನ, ಅಜಿತಾದಿ, ಮಾನಸಾದಿ ತೀರ್ಥಗಳ ವರ್ಣನಗಳು ಬರುತ್ತವೆ. ವಿಷ್ಣು ವೈಷ್ಣವ ಖಂಡದಲ್ಲಿ ಬರುವ ವಿಷಯಗಳು.

## ಬ್ರಹ್ಮಖಂಡ

ಮರೀಚಿಯೇ, ಇದರ ನಂತರ ಪರಮಪುಣ್ಯದಾಯಕವಾದ ಬ್ರಹ್ಮಖಂಡವು ಬರುತ್ತದೆ. ಇಲ್ಲಿ ಸೇತು ಮಾಹಾತ್ಮ್ಯವನ್ನು ಪ್ರಾರಂಭಿಸಿ, ಅಲ್ಲಿಯ ಸ್ನಾನ-ದರ್ಶನಗಳ ಫಲವನ್ನು ಹೇಳಿದ್ದಾರೆ, ಅನಂತರ ಗಾಲವರ ತಪಸ್ಸು ಮತ್ತು ರಾಕ್ಷಸನ ಕಥೆಯಿದೆ. ಅನಂತರ ದೇವೀ ಪತ್ತನದಲ್ಲಿ ಚಕ್ರತೀರ್ಥಾದಿಗಳ ಮಹಿಮಾ, ವೇತಾಲತಲಗಳ ಮಹಾತ್ಮ್ಯ ಮಂಗಲಾದಿ ತೀರ್ಥಗಳ ಮಾಹಾತ್ಮ್ಯ, ಬ್ರಹ್ಮಕುಂಡಾದಿಗಳ ವರ್ಣನೆ, ಹನುಮಂತ್ಕುಂಡ ಮಹಿಮೆ, ಅಗಸ್ತ್ಯ ತೀರ್ಥದ ಫಲ ಇವುಗಳೂ ಇಲ್ಲಿ ವರ್ಣಿತವಾಗಿವೆ. ರಾಮತೀರ್ಥಾದಿಗಳ ವರ್ಣನ, ಲಕ್ಷ್ಮೀ ತೀರ್ಥ ನಿರೂಪಣ, ಶಂಖಾದಿ ತೀರ್ಥ ಮಹಿಮೆ, ಸಾಧ್ಯಾಮೃತಾದಿ ತೀರ್ಥಗಳ ಪ್ರಭಾವ, ಧನುಷ್ಕೋಟಿ ಮಾಹಾತ್ಮ್ಯ, ಕ್ಷೀರ ಕುಂಡಾದಿ ಮಹಿಮೆ, ಗಾಯತ್ರೀ ಆದಿತೀರ್ಥ ಮಹಿಮಾ, ರಾಮೇಶ್ವರ ಮಹಿಮಾ, ತತ್ತ್ವಜ್ಞಾನೋಪದೇಶ, ಸೇತುಯಾತ್ರಾ ವಿಧಿ ಎಂಬ ವಿಷಯಗಳೂ ಇಲ್ಲಿವೆ. ಶಿವನು ಸ್ಕಂದನಿಗೆ ಉಪದೇಶ ಮಾಡಿದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ ಧರ್ಮಾರಣ್ಯದ ಪ್ರಾದುರ್ಭಾವ, ಅದರ ಪುಣ್ಯ ವರ್ಣನ, ಕರ್ಮಸಿದ್ಧಿಯ ಉಪಾಖ್ಯಾನ, ಋಷಿವಂಶ ನಿರೂಪಣ, ಅನಂತರ ಅಪ್ಸರೆಯರಿಗೆ ಸಂಬಂಧಪಟ್ಟ ಮುಖ್ಯ ತೀರ್ಥಗಳ ಮಾಹಾತ್ಮ್ಯ, ವರ್ಣಾಶ್ರಮಧರ್ಮದ ತತ್ತ್ವ, ದೇವಸ್ಥಾನ ವಿಭಾಗ, ಬಕುಲಾದಿತ್ಯ ಕಥಾ ಇವುಗಳೂ ಇಲ್ಲಿ ಬರುತ್ತವೆ. ಅಲ್ಲಿ ಛತ್ರಾನಂದಾ, ಶಾಂತಾ, ಶ್ರೀಮಾತಾ, ಮತಂಗಿನೀ ಮತ್ತು ಪುಣ್ಯದಾ ಎಂಬ ಐದು ದೇವತೆಗಳು ಯಾವಾಗಲೂ ಇದ್ದಾರೆಂದು ತಿಳಿಸಿದ್ದಾರೆ. ಅನಂತರ ಇಂದ್ರೇಶ್ವರಾದಿ ಮಹಿಮಾ, ದ್ವಾರಕಾ ಮುಂತಾದವುಗಳ ನಿರೂಪಣವಿದೆ. ಲೋಹಾಸುರನ ಕಥೆ, ಗಂಗೂಕೂಪದ ವರ್ಣನ, ಶ್ರೀರಾಮನ ಕಥೆ, ಸತ್ಯಮಂದಿರದ ವರ್ಣನೆ ಇವುಗಳೂ ಇವೆ.

ದೇವಾಲಯ ಜೀರ್ಣೋದ್ಧಾರ ಮಹಿಮೆ, ಆಸನದಾನ, ಜಾತಿಭೇದವರ್ಣನ ಸ್ಮೃತಿ ಧರ್ಮನಿರೂಪಣ ಇವುಗಳ ನಂತರ ಅನೇಕ ಉಪಾಖ್ಯಾನಗಳಿಂದ ಕೂಡಿದ ವೈಷ್ಣವ ಧರ್ಮದ ನಿರೂಪಣವಿದೆ. ಬಳಿಕ ದಾನ ಪ್ರಶಂಸಾ, ವ್ರತಮಹಿಮಾ, ತಪಸ್ಸು ಪೂಜೆಗಳ ಮಹಿಮೆ, ಸಜ್ಜನನಾದ ಶೂದ್ರನ ಮಹಿಮೆಗಳಿವೆ. ಅನಂತರ ಪ್ರಕೃತಿ ಭೇದವರ್ಣನ, ಶಾಲಿಗ್ರಾಮತತ್ತ್ವನಿರೂಪಣ, ತಾರಕಾಸುರನ ವಧೋಪಾಯ, ಗರುಡಪೂಜನೆಯ ಮಹಿಮಾ, ವಿಷ್ಣುವಿಗೆ ಶಾಪ, ವೃಕ್ಷತ್ವಪ್ರಾಪ್ತಿ, ಪಾರ್ವತಿಯು ಸಮಾಧಾನ ಮಾಡಿದುದು. ಈಶ್ವರನ ತಾಂಡವನೃತ್ಯ, ರಾಮನಾಮ ಮಹಿಮಾ, ಶಿವಲಿಂಗ ಪತನದ ಕಥೆ, ಪೈಜವನ ಶೂದ್ರನ ಕಥೆ, ಪಾರ್ವತಿಯ ಜನ್ಮಚರಿತ್ರ, ಅದ್ಭುತವಾದ ತಾರಕಾಸುರನ ವಧ ವೃತ್ತಾಂತ, ಪ್ರಣವ (ಓಂಕಾರ) ದ ಮಾಹಾತ್ಮ್ಯ, ತಾರಕಾಸುರ ಚರಿತ್ರದ ಪುನರ್ವರ್ಣನ, ದಕ್ಷಯಜ್ಞ ಸಮಾಪ್ತಿ, ದ್ವಾದಶ ಚಾತುರ್ಮಾಸ್ಯ ಮಾಹಾತ್ಮ್ಯ ಶ್ರವಣದ ಪುಣ್ಯ; ಬ್ರಹ್ಮೋತ್ತರ ಭಾಗದಲ್ಲಿ ಶಿವನ ಅದ್ಭುತ ಮಹಿಮಾ, ಪಂಚಾಕ್ಷರ ಮಂತ್ರಮಹಿಮಾ, ಗೋಕರ್ಣ ಮಹಿಮಾ, ಶಿವರಾತ್ರಿ ಮಹಿಮಾ, ಪ್ರದೋಷ ವ್ರತ ವರ್ಣನ, ಹಾಗೂ ಸೋಮವಾರ ವ್ರತದ ವರ್ಣನೆ ಹಾಗೂ ಸೀಮಂತಿನಿಯ ಕಥೆಗಳು ಇಲ್ಲಿವೆ.

ಹಾಗೆಯೇ ಭದ್ರಾಯುವಿನ ಉತ್ಪತ್ತಿವರ್ಣನೆ, ಸದಾಚಾರ ನಿರೂಪಣೆ, ಶಿವಕವಚದ ಉಪದೇಶ, ಭದ್ರಾಯುವಿನ ವಿವಾಹದ ವರ್ಣನೆ, ಭದ್ರಾಯು ಮಹಿಮೆ, ಭಸ್ಮಮಾಹಾತ್ಮ್ಯ, ವರ್ಣನೆ, ಶಬರನ ಉಪಾಖ್ಯಾನ, ಉಮಾ ಮಹೇಶ್ವರ ವ್ರತದ ಮಹಿಮೆ, ರುದ್ರಾಕ್ಷ ಮಾಹಾತ್ಮ್ಯ, ರುದ್ರ ಪಾರಾಯಣದ ಪುಣ್ಯ, ಬ್ರಹ್ಮಖಂಡದ ಶ್ರವಣ, ಪಾರಾಯಣದ ಮಹಿಮೆಯ ವರ್ಣನೆಯೊಡನೆ ಬ್ರಹ್ಮಖಂಡವು ಸಮಾಪ್ತವಾಗುತ್ತದೆ.

## ಕಾಶೀಖಂಡ

ಇದರ ನಂತರ ಅತ್ಯುತ್ತಮವಾದ ಕಾಶೀಖಂಡದಲ್ಲಿ ವಿಂಧ್ಯ ಪರ್ವತ ಮತ್ತು ನಾರದರ ಸಂವಾದದ ವರ್ಣನೆ, ಸತ್ಯಲೋಕದ ಪ್ರಭಾವ ಅಗಸ್ತ್ಯರ ಆಶ್ರಮಕ್ಕೆ ದೇವತೆಗಳ ಆಗಮನ, ಪತಿವ್ರತಾ ಚರಿತ್ರೆ ಮತ್ತು ತೀರ್ಥಯಾತ್ರಾ ಪ್ರಶಂಸೆಗಳಿವೆ. ಅನಂತರ ಅಯೋಧ್ಯಾದಿ ಸಪ್ತಪುರೀವರ್ಣನ, ಸಂಯಮಿನೀ ನಿರೂಪಣ, ಶಿವಶರ್ಮನಿಗೆ ಸೂರ್ಯ, ಇಂದ್ರ ಮತ್ತು ಅಗ್ನಿ ಲೋಕದ ಪ್ರಾಪ್ತಿಯ ಉಲ್ಲೇಖವಿದೆ. ಅಗ್ನಿಯ ಪ್ರಾದುರ್ಭಾವ, ನಿಋತಿ ಮತ್ತು ವರುಣರ ಉತ್ಪತ್ತಿ, ಗಂಧವತೀ, ಅಲಕಾವತೀ, ಈಶಾನಪುರಿಗಳ ಉತ್ಪತ್ತಿ ವರ್ಣನೆ, ಚಂದ್ರ, ಸೂರ್ಯ, ಬುಧ, ಮಂಗಳ, ಗುರು, ಲೋಕಗಳ ವರ್ಣನೆ, ಬ್ರಹ್ಮಲೋಕ, ವಿಷ್ಣುಲೋಕ, ಧ್ರುವಲೋಕ ಮತ್ತು ತಪೋಲೋಕಗಳ ದರ್ಶನ, ಸ್ಕಂದ ಅಗಸ್ತ್ಯರ ಸಂವಾದ, ಮಣಿಕರ್ಣಿಕೆಯ ಉತ್ಪತ್ತಿ, ಗಂಗೆಯ ಪ್ರಾದುರ್ಭಾವ, ಗಂಗಾಸಹಸ್ರನಾಮ, ಕಾಶೀಪುರಿಯ ಪ್ರಶಂಸೆಗಳು ಬರೆಯಲ್ಪಟ್ಟಿವೆ.

ಭೈರವನ ಆವಿರ್ಭಾವ, ದಂಡ ಪಾಣಿ ಮತ್ತು ಜ್ಞಾನವಾಪಿಯ ಉತ್ಪತ್ತಿ, ಕಲಾವತಿಯ ಕಥೆ, ಸದಾಚಾರ ನಿರೂಪಣ, ಬ್ರಹ್ಮಚಾರಿಯ ಅಖ್ಯಾನ, ಸ್ತ್ರೀ ಲಕ್ಷಣ, ಕರ್ತವ್ಯಾಕರ್ತವ್ಯಗಳ ಉಪದೇಶ ಅವಿಮುಕ್ತೇಶ್ವರ ವರ್ಣನ, ಗೃಹಸ್ಥಯೋಗಿಯ ಧರ್ಮ, ಕಾಲಜ್ಞಾನ, ದಿವೋದಾಸನ ಪುಣ್ಯಕರವಾದ ಕಥೆ, ಕಾಶೀವರ್ಣನ, ಭೂಮಿಯಲ್ಲಿ ಮಾಯಗಣಪತಿಯ ಪ್ರಾದುರ್ಭಾವ, ವಿಷ್ಣು ಮಾಯೆಯ ವಿಸ್ತಾರ, ದಿವೋದಾಸನ ಮೋಕ್ಷ, ಪಂಚನದ ತೀರ್ಥದ

ಉತ್ಪತ್ತಿ, ಬಿಂದು ಮಾಧವನ ಪ್ರಾದುರ್ಭಾವ, ಅನಂತರ ಕಾಶಿಯು ವೈಷ್ಣವ ಕ್ಷೇತ್ರವೆಂದು ಹೇಳಿಸಿಕೊಂಡದ್ದು, ಶೂಲಾಧಾರಿಯಾದ ಶಂಕರನು ಕಾಶಿಗೆ ಆಗಮಿಸಿದುದು, ಜೈಗೀಷವ್ಯನ ಜೊತೆಗೆ ಸಂವಾದ ಮಹೇಶ್ವರನಿಗೆ ಜ್ಯೇಷ್ಠೇಶ್ವರನೆಂಬ ಹೆಸರು ಬಂದುದು, ಕಂದುಕೇಶ್ವರ ಮತ್ತು ವ್ಯಾಘ್ರೇಶ್ವರರ ಪ್ರಾದುರ್ಭಾವ, ಶೈಲೇಶ್ವರ, ರತ್ನೇಶ್ವರ ಮತ್ತು ಕೃತ್ತಿವಾಸೇಶ್ವರರು ಪ್ರಕಟವಾದುದು, ದೇವತೆಗಳ ಅಧಿಷ್ಠಾನ ಸ್ಥಳ, ದುರ್ಗಾಸುರನ ಪರಾಕ್ರಮ, ದುರ್ಗೆಯ ವಿಜಯ, ಓಂಕಾರೇಶ್ವರ ವರ್ಣನ, ಓಂಕಾರ ಮಾಹಾತ್ಮ್ಯ, ತ್ರಿಲೋಚನನ ಪ್ರಾದುರ್ಭಾವ, ಕೇದಾರೇಶ್ವರನ ಆಖ್ಯಾನ, ಧರ್ಮೇಶ್ವರ ಕಥಾ, ವಿಷ್ಣುವಿನ ಭುಜವು ಪ್ರಕಟವಾದುದು. ವೀರೇಶ್ವರನ ಕಥೆ, ಗಂಗಾ ಮಾಹಾತ್ಮ್ಯ, ವಿಶ್ವಕರ್ಮೇಶ್ವರ ಮಹಿಮೆ, ದಕ್ಷಯಜ್ಞ, ಸತೀಶ ಮತ್ತು ಅಮೃತೇಶ ಮುಂತಾದವರ ಮಹಿಮೆ. ವ್ಯಾಸರ ಭುಜಸ್ತಂಭನ ಕ್ಷೇತ್ರದ ತೀರ್ಥಗಳ ಸಮುದಾಯ, ಮುಕ್ತಿ ಮಂಟಪದ ಕಥೆ, ವಿಶ್ವನಾಥನ ವೈಭವ, ಅನಂತರ ಕಾಶೀಯಾತ್ರೆ ಮತ್ತು ಪ್ರದಕ್ಷಿಣೆಯ ವರ್ಣನೆ, ಇವು ಕಾಶೀ ಖಂಡದ ವಿಷಯಗಳು.

## ಅವಂತೀ ಖಂಡ

ಅನಂತರ ಐದನೆಯದಾದ ಆವಂತೀ ಖಂಡದಲ್ಲಿ ಮಹಾಕಾಲವನದ ಆಖ್ಯಾನ. ಬ್ರಹ್ಮನ ತಲೆಯನ್ನು ಛೇದಿಸಿದುದು, ಪ್ರಾಯಶ್ಚಿತ್ತ ವಿಧಿ, ಅಗ್ನಿಯ ಉತ್ಪತ್ತಿ, ದೇವತೆಗಳ ಆಗಮನ, ದೇವದೀಕ್ಷೆ, ನಾನಾ ಪಾಪನಾಶಕವಾದ ಶಿವಸ್ತೋತ್ರ, ಕಪಾಲಮೋಚನದ ಕಥೆ, ಮಹಾಕಾಲವನದ ಸ್ಥಿತಿ, ಕಲಕಲೇಶ್ವರನ ಸರ್ವಪಾಪನಾಶಕ ತೀರ್ಥ, ಅಪ್ಸರಾ ಕುಂಡ, ರುದ್ರಸರೋವರ, ಕುಟುಂಬೇಶ, ವಿದ್ಯಾಧರೇಶ್ವರ ಮತ್ತು ಮರ್ಕಟೇಶ್ವರ ತೀರ್ಥಗಳ ವರ್ಣನೆ ಇವೆ. ಅನಂತರ ಸ್ವರ್ಗದ್ವಾರ, ಚತುಃಸಿಂಧು ತೀರ್ಥ, ಶಂಕರವಾಪಿಕಾ, ಶಂಕರಾದಿತ್ಯ, ಪಾಪನಾಶಕವಾದ ಗಂಧವತೀ ತೀರ್ಥ, ದಶಾಶ್ವಮೇಧಿಕ ತೀರ್ಥ, ಅನಂಶ ತೀರ್ಥ, ಹರಿಸಿದ್ಧಿಪ್ರದ ತೀರ್ಥ, ಪಿಶಾಚಾದಿಯಾತ್ರೆ, ಹನುಮದೀಶ್ವರ, ಕವಚೇಶ್ವರ, ಮಹಾಕಾಲೇಶ್ವರಯಾತ್ರೆ, ವಲ್ಮೀಕೇಶ್ವರ ತೀರ್ಥ, ಶುಕ್ರೇಶ್ವರ ಮತ್ತು ನಕ್ಷತ್ರೇಶ್ವರ ತೀರ್ಥಗಳ ಕಥೆ, ಕುಶಸ್ಥಲಿಯ ಪ್ರದಕ್ಷಿಣೆ, ಅಕ್ರೂರತೀರ್ಥ, ಏಕಪಾದ ತೀರ್ಥ, ಚಂದ್ರಾರ್ಕ ವೈಭವತೀರ್ಥ, ಕರಭೇಶತೀರ್ಥ, ಲಡುಕೇಶತೀರ್ಥ, ಮಾರ್ಕಂಡೇಶ್ವರ ತೀರ್ಥ, ಯಜ್ಞವಾಪೀತೀರ್ಥ, ಸೋಮೇಶ್ವರ ತೀರ್ಥ ಹಾಗೂ ನರಾದಿತ್ಯ ತೀರ್ಥಗಳು, ಕೇಶವಾದಿತ್ಯ ಶಕ್ತಿಭೇದತೀರ್ಥ, ಸ್ವರ್ಣಸಾರಮುಖ ತೀರ್ಥ, ಓಂಕಾರೇಶ್ವರ, ಮೊದಲಾದ ತೀರ್ಥಗಳ ವರ್ಣನೆ ಇದೆ. ಅನಂತರ ಕುಶಸ್ಥಲೀ, ಆವಂತೀ, ಮತ್ತು ಉಜ್ಜಯಿನೀ ಪಟ್ಟಣಗಳ, ಪದ್ಮಾವತೀ, ಕುಮುದ್ವತೀ, ಅಮರಾವತೀ, ವಿಶಾಲಾ ಮತ್ತು ಪ್ರತಿಕಲ್ಪಾ ಎಂಬ ಹೆಸರುಗಳ ಉಲ್ಲೇಖವಿದೆ. ಈ ನಾಮಗಳ ಉಚ್ಚಾರಣೆಯು ಜ್ವರಶಾಂತಿಪ್ರದವಾಗಿದೆ.

ಅನಂತರ ಶಿಪ್ರಾ ನದೀ ಸ್ನಾನ ಮುಂತಾದುದರ ಫಲ, ನಾಗಗಳು ಮಾಡಿದ ಶಿವಸ್ತುತಿ, ಹಿರಣ್ಯಾಕ್ಷವಧದ ಕಥೆ, ಸುಂದರ ಕುಂಡಕ ತೀರ್ಥ, ನೀಲಗಂಗಾ, ಪುಷ್ಕರ ತೀರ್ಥ, ವಿಂಧ್ಯವಾಸನ ತೀರ್ಥ, ಪುರುಷೋತ್ತಮ ತೀರ್ಥ, ಅಘನಾಶನ ತೀರ್ಥ, ಗೋಮತೀ ತೀರ್ಥ, ವಾಮನಕುಂಡ, ವಿಷ್ಣುಸಹಸ್ರನಾಮ, ವೀರೇಶ್ವರ ಸರೋವರ, ಕಾಲಭೈರವ ತೀರ್ಥ, ನಾಗಪಂಚಮಿಯ ಮಹಿಮೆ, ನೃಸಿಂಹ ಜಯಂತಿ, ಕುಟುಂಬೇಶ್ವರ ಯಾತ್ರೆ, ದೇವಸಾಧಕ ಕೀರ್ತನ, ಕರ್ಕರಾಜವೆಂಬ ತೀರ್ಥ, ವಿಘ್ನೇಶಾದಿ ತೀರ್ಥ, ಸುರೋಹನತೀರ್ಥ ಇವುಗಳ

ವರ್ಣನೆಯಿದೆ. ರುದ್ರಕುಂಡ ಮುಂತಾದವುಗಳಲ್ಲಿ ಅನೇಕ ತೀರ್ಥಗಳ ವರ್ಣನೆಯು ಬಂದಿದೆ. ಅನಂತರ ಎಂಟು ತೀರ್ಥಗಳ ಪುಣ್ಯಕರವಾದ ಯಾತ್ರೆಯ ವರ್ಣನೆ ಬಂದಿದೆ. ಇದರ ಅನಂತರ ಬಂದಿರುವ ನರ್ಮದಾನದಿಯ ಮಾಹಾತ್ಮ್ಯ ವರ್ಣನ ಸಂದರ್ಭದಲ್ಲಿ ಧರ್ಮರಾಜನ ವೈರಾಗ್ಯ ಹಾಗೂ ಅವನಿಗೆ ಮಾರ್ಕಂಡೇಯ ಸಮಾಗಮ ಇವು ವರ್ಣಿತವಾಗಿವೆ.

ಅನಂತರ ಹಿಂದಿನ ಪ್ರಲಯಕಾಲದ ಅನುಭವದ ವರ್ಣನೆ, ಅಮೃತಕೀರ್ತನ ಪ್ರತಿಕಲ್ಪದಲ್ಲಿಯೂ ನರ್ಮದೆಯ ಬೇರೆ ಬೇರೆ ಹೆಸರುಗಳ ವರ್ಣನೆ, ನರ್ಮದೆಯ ಆರ್ಷಸ್ತೋತ್ರ, ಕಾಲರಾತ್ರಿಕಥಾ, ಮಹಾದೇವಸ್ತುತಿ, ಬೇರೆ ಕಲ್ಪದ ಅದ್ಭುತಕತೆ ವಿಶಲ್ಯೆಯ ಕಥೆ, ಜಾಲೇಶ್ವರಕಥೆ, ಗೌರೀವ್ರತ ವರ್ಣನೆ, ತ್ರಿಪುರದಾಹಕಥೆ, ದೇಹಪಾತವಿಧಿ, ಕಾವೇರೀಸಂಗಮ, ದಾರುತೀರ್ಥ, ಬ್ರಹ್ಮಾವರ್ತ, ಈಶ್ವರಕಥಾ, ಅಗ್ನಿತೀರ್ಥ, ಸೂರ್ಯತೀರ್ಥ, ಮೇಘನಾದಾದಿತೀರ್ಥ, ದಾರುಕತೀರ್ಥ, ದೇವತೀರ್ಥ, ನರ್ಮದೇಶ ತೀರ್ಥ, ಕಪಿಲಾತೀರ್ಥ, ಕರಂಜಕತೀರ್ಥ, ಕುಂಡಲೇಶತೀರ್ಥ ಪಿಪ್ಪಲಾದತೀರ್ಥ, ವಿಮಲೇಶ್ವರ ತೀರ್ಥ, ಶೂಲಭೇದನತೀರ್ಥ, ಶಚೀಹರಣದ ಕಥೆ, ಅಭ್ರಕನ ವಧ, ಶೂಲಭೇದೋದ್ಭವತೀರ್ಥ, ಬೇರೆ ಬೇರೆ ದಾನಧರ್ಮಗಳು, ದೀರ್ಘತಪನಕಥೆ, ಋಷ್ಯಶೃಂಗನ ಉಪಾಖ್ಯಾನಗಳಿವೆ. ಪುಣ್ಯಕರವಾದ ಚಿತ್ರಸೇನನ ಕಥೆ, ಕಾಶಿರಾಜನ ಮೋಕ್ಷ, ದೇವಶಿಲೆಯ ಕಥೆ, ಶಬರೀತೀರ್ಥ, ಪವಿತ್ರವಾದ ವ್ಯಾಧನ ಉಪಾಖ್ಯಾನ, ಪುಷ್ಕರಣೀ ತೀರ್ಥ, ಅರ್ಕತೀರ್ಥ, ಆದಿತ್ಯೇಶ್ವರತೀರ್ಥ, ಶಕ್ರತೀರ್ಥ, ಕರೋಟಿಕಾ ತೀರ್ಥ, ಕುಮಾರೇಶ್ವರ ತೀರ್ಥ, ಅಗಸ್ತ್ಯೇಶ್ವರ ತೀರ್ಥ, ಆನಂದೇಶ್ವರತೀರ್ಥ, ಮಾತೃತೀರ್ಥ, ಲೋಕೇಶ್ವರ - ದನದೇಶ್ವರ - ಮಂಗಲೇಶ್ವರ - ಮತ್ತು ಕಾಮಜ ತೀರ್ಥಗಳು ನಾಗೇಶ್ವರತೀರ್ಥ, ಗೋಪಾರತೀರ್ಥ, ನಂದಿಕೇಶ್ವರ ತೀರ್ಥ, ಧರಣೇಶ್ವರ ತೀರ್ಥ, ದಧಿಸ್ಕಂದಾದಿತೀರ್ಥ, ಹನಮದೇಶ್ವರತೀರ್ಥ, ರಾಮೇಶ್ವರಾದಿತೀರ್ಥ ಸೋಮೇಶ್ವರ ಗೌತಮತೀರ್ಥ ಜಲೇಶಯ - ಚಂಡಾರ್ಕಯಮತೀರ್ಥಗಳು ಕಾಲ್ಹೋಡೀಶ್ವರ- ನಂದಿಕೇಶ್ವರ-ನಾರಾಯಣೇಶ್ವರ, ಕೋಟೀಶ್ವರ, ಶಂಖಚೂಡತೀರ್ಥ, ದುಂಧುವಧೋ ಪಾಯ, ಪುಣ್ಯಮಯವಾದ ಏರಂಡೀ ಸಂಗಮತೀರ್ಥ-ಸುವರ್ಣ ಶಿಲಾತೀರ್ಥ- ಕರಂಜತೀರ್ಥ - ಕಾಮರತೀರ್ಥ- ಭಾಂಡೀರ ತೀರ್ಥ, ರೋಹಿಣಿಭವತೀರ್ಥ, ಚಕ್ರತೀರ್ಥ, ಧೌತಪಾಪತೀರ್ಥ, ಅಂಗಿರಸತೀರ್ಥ, ಕೋಟಿತೀರ್ಥ, ನಾರದೇಶ್ವರತೀರ್ಥ, ಅಂಗಾರತೀರ್ಥ, ತ್ರಿಲೋಚನತೀರ್ಥ, ಇಂದ್ರೇಶತೀರ್ಥ, ಕಂಬುಕೇಶತೀರ್ಥ, ಸೋಮೇಶತೀರ್ಥ, ಕೋಹಲೇಶತೀರ್ಥ, ನರ್ಮದಾತೀರ್ಥ, ಅರ್ಕತೀರ್ಥ, ಆಗ್ನೇಯತೀರ್ಥ, ಉತ್ತಮ ಭಾರ್ಗವೇಶ್ವರ ತೀರ್ಥ, ಬ್ರಾಹ್ಮತೀರ್ಥ, ದೈವತೀರ್ಥ, ಮಾರ್ಗೇಶತೀರ್ಥ, ಆದಿವರಾಹೇಶ್ವರ, ರಾಮೇಶ್ವರತೀರ್ಥ, ಸಿದ್ದೇಶ್ವರತೀರ್ಥ, ಅಹಲ್ಯಾತೀರ್ಥ, ಕಂಟಕೇಶ್ವರತೀರ್ಥ, ಶಕ್ರತೀರ್ಥ, ಸೋಮತೀರ್ಥ, ನಾವೇಶತೀರ್ಥ, ಕೋರ್ಯೇಶತೀರ್ಥ, ರುಕ್ಮಿಣೀಸಂಭವತೀರ್ಥ, ಯೋಜನೇಶತೀರ್ಥ, ವರಾಹೇಶತೀರ್ಥ, ದ್ವಾದಶೀತೀರ್ಥ, ಕುಂಡತೀರ್ಥ, ಶ್ವೇತವಾಹೇಶತೀರ್ಥ, ಭಾರ್ಗವೇಶ ತೀರ್ಥ, ರವೀಶ್ವರತೀರ್ಥ, ಶುಕ್ಲಾದಿತೀರ್ಥ, ಹುಂಕಾರಸ್ವಾಮಿ ತೀರ್ಥಗಳ ನಿರ್ದೇಶನವಿದೆ.

ಮುಂದೆ ಸಂಗಮೇಶ್ವರ ತೀರ್ಥ, ನಹುಷೇಶ್ವರ ತೀರ್ಥ, ಮೋಕ್ಷಣತೀರ್ಥ, ಪಂಚಗೋಪದತೀರ್ಥ, ನಾಗಶಾಮಕತೀರ್ಥ, ಸಿದ್ದೇಶತೀರ್ಥ, ಮಾರ್ಕಂಡೇಯ ತೀರ್ಥ,

ಅಕ್ರೂರತೀರ್ಥ, ಕಾಮೋದತೀರ್ಥ, ಶೂಲಾರೋಪತೀರ್ಥ, ಮಾಂಡವ್ಯ ತೀರ್ಥ, ಗೋಪಕೇಶ್ವರತೀರ್ಥ, ಕಪಿಲೇಶ್ವರತೀರ್ಥ, ಪಿಂಗಲೇಶ್ವರತೀರ್ಥ, ಭೂತೇಶ್ವರತೀರ್ಥ, ಗಂಗಾತೀರ್ಥ, ಗೌತಮತೀರ್ಥ, ಅಶ್ವಮೇಧತೀರ್ಥ, ಭೃಗುಕಚ್ಛತೀರ್ಥ, ಪಾಪನಾಶಕಕೇದಾರೇಶತೀರ್ಥ, ಕಲಕಲೇಶ (ಕಲಖಲೇಶ) ತೀರ್ಥ, ಜಾಲೇಶ ತೀರ್ಥ, ಶಾಲಗ್ರಾಮತೀರ್ಥ, ವರಾಹರೇಶತೀರ್ಥ, ಚಂದ್ರಪ್ರಭಾಸತೀರ್ಥ, ಆದಿತ್ಯತೀರ್ಥ, ಶ್ರೀಪದತೀರ್ಥ, ಹಂಸತೀರ್ಥ, ಮೂಲಸ್ಥಾದತೀರ್ಥ, ಶೂಲೇಶ್ವರತೀರ್ಥ, ಉಗ್ರತೀರ್ಥ, ಚಿತ್ರದೈವಕತೀರ್ಥ, ಶಿಖೀಶ್ವರತೀರ್ಥ, ಕೋಟಿತೀರ್ಥ, ದಶಕನ್ಯಾತೀರ್ಥ, ಸುವರ್ಣತೀರ್ಥ, ಋಣಮೋಚನತೀರ್ಥ, ಭಾರಭೂತಿ ತೀರ್ಥ, ಪುಂಖದುಂಡಿತತೀರ್ಥ, ಅಮಲೇಶತೀರ್ಥ-ಕಪಾಲೇಶತೀರ್ಥ, ಶೃಂಗೈರಂಡೀತೀರ್ಥ, ಕೋಟಿತೀರ್ಥ ಮತ್ತು ಲೋಟಲೇಶತೀರ್ಥ, ಮೊದಲಾದವುಗಳ ವರ್ಣನೆಯೂ ಇಲ್ಲಿದೆ.

ಅನಂತರ ಫಲಸ್ತುತಿಯನ್ನು ಹೇಳಲಾಗಿದೆ. ಅನಂತರ ಕೃಮಿಜಂಗಲ ಮಾಹಾತ್ಮ್ಯದ ಪ್ರಸಂಗದಲ್ಲಿ ರೋಹಿತಾಶ್ವನ ಕಥೆ ಧುಂಧುಮಾರೋಪಾಖ್ಯಾನ, ಧುಂಧುವಧ, ಚಿತ್ರವಹನ ಉತ್ಪತ್ತಿ, ಅವನ ಮಹಿಮೆ, ಚಂಡೀಶ ಪ್ರಭಾವ, ರತೀಶ್ವರ, ಕೇದಾರೇಶ್ವರ - ಲಕ್ಷ-ತೀರ್ಥಗಳು ವಿಷ್ಣುಪದೀತೀರ್ಥ, ಮುಖಾರತೀರ್ಥಗಳು, ಚ್ಯವನಾಂಧತೀರ್ಥ, ಬ್ರಹ್ಮಸರೋವರ-ಚಕ್ರತೀರ್ಥ-ಲಲಿತೋಪಾಖ್ಯಾನ-ಬಹುಗೋಮುಖತೀರ್ಥ, ರುದ್ರಾವರ್ತತೀರ್ಥ, ಮಾರ್ಕಂಡೇಯ ತೀರ್ಥ, ಪಾಪನಾಶಕತೀರ್ಥ, ಶ್ರವಣೇಶತೀರ್ಥ-ಶುದ್ಧ ಪಟತೀರ್-ದೇವಾಂಧುಪ್ರೇಶ ತೀರ್ಥ, ಜಿಹ್ವೋದತೀರ್ಥದ ಆವಿರ್ಭಾವ-ಶಿವೋದ್ಭೇದ ತೀರ್ಥ ಮತ್ತು ಫಲಶ್ರುತಿಗಳು ಇಲ್ಲವೆ. ಹೀಗೆ ಶ್ರೋತೃಗಳ ಪಾಪನಾಶಕವಾದ ಇಷ್ಟು ವಿಷಯಗಳು ಅವಂತೀ ಖಂಡದಲ್ಲಿದೆ.

## ನಾಗರ ಖಂಡ

ಇದರ ನಂತರ ನಾಗರಖಂಡದಲ್ಲಿ ಬರುವ ವಿಷಯಗಳನ್ನು ಹೇಳಲಾಗಿದೆ. ಈ ಖಂಡದಲ್ಲಿ ಲಿಂಗೋತ್ಪತ್ತಿ ವರ್ಣನ, ಹರಿಶ್ಚಂದ್ರನ ಪವಿತ್ರವಾದ ಕಥೆ, ವಿಶ್ವಾಮಿತ್ರನ ಮಾಹಾತ್ಮ್ಯ, ತ್ರಿಶಂಕುವಿನ ಸ್ವರ್ಗಲೋಕಗಮನ, ಹಾಟಕೇಶ್ವರ ಮಾಹಾತ್ಮ್ಯ ಪ್ರಸಂಗದಲ್ಲಿ ವೃತ್ರಾಸುರ ವಧ, ನಾಗಬಲಿ - ಶಂಖ-ತೀರ್ಥಗಳು, ಅಚಲೇಶ್ವರ ವರ್ಣನ, ಚಮತ್ಕಾರಪುರದ ಚಮತ್ಕಾರಯುಕ್ತವಾದ ಕಥೆ, ಗಯಾಶೀರ್ಷತೀರ್ಥ, ಬಾಲೇಶತೀರ್ಥ, ಬಾಲಮಂಡಲತೀರ್ಥ, ಮೃಗತೀರ್ಥ, ವಿಷ್ಣುಪಾದ ಗೋಕರ್ಣ ಯುಗರೂಪ ಸಮಾಶ್ರಯ ಹಾಗೂ ಸಿದ್ದೇಶ್ವರ ತೀರ್ಥಗಳು ನಾಗರಸರೋವರ-ಸಪ್ತರ್ಷಿ ತೀರ್ಥಗಳು, ಅಗಸ್ತ್ಯತೀರ್ಥ ಮತ್ತು ಭ್ರೂಣಗರ್ತ ನಲೇಶತೀರ್ಥಗಳು, ಭೀಷ್ಮ ತೀರ್ಥ, ವೈಡೂರಮರಕತ ತೀರ್ಥ, ಶರ್ಮಿಷ್ಠಾ ತೀರ್ಥ, ಸೋಮನಾಥತೀರ್ಥ, ದುರ್ಗಾತೀರ್ಥ, ಆನರ್ತಕೇಶ್ವರತೀರ್ಥ, ಜಮದಗ್ನಿವಧಕಥೆ, ಪರಶುರಾಮನು ಕ್ಷತ್ರಿಯರನ್ನು ಸಂಹಾರ ಮಾಡಿದ ಕಥೆ, ರಾಮಹ್ರದ, ನಾಗಪುರತೀರ್ಥ, ಷಡ್‌ಲಿಂಗ ತೀರ್ಥ, ಯಜ್ಞಭೂತೀರ್ಥ, ಮಂಡೀರಾದಿತೀರ್ಥ, ತ್ರಿಕಾರ್ಕತೀರ್ಥ, ಸತೀಪರಿಣಯ ತೀರ್ಥ, ರುದ್ರಶೀರ್ಷತೀರ್ಥ, ಯೋಗೇಶತೀರ್ಥ, ವಾಲಖಿಲ್ಯ ತೀರ್ಥ, ಗರುಡ ತೀರ್ಥ, ಲಕ್ಷ್ಮಿಯ ಶಾಪ, ಸಪ್ತವಿಂಶತೀರ್ಥ ಸೋಮಪ್ರಾಸಾದ ತೀರ್ಥ. ಅಂಬಾವೃದ್ಧತೀರ್ಥ, ಅಗ್ನಿ ತೀರ್ಥ, ಬ್ರಹ್ಮಕುಂಡ, ಗೋಮುಖತೀರ್ಥ,

ಲೋಹಯುಷ್ಟಿತೀರ್ಥ, ಅಜಾಪಾಲೇಶ್ವರೀದೇವಿ ತೀರ್ಥ, ಶನೈಶ್ಚರತೀರ್ಥ, ರಾಜವಾಪೀ, ರಾಮೇಶ್ವರ, ಲಕ್ಷ್ಮಣೇಶ್ವರ, ಕುಶೇಶ್ವರ- ಲವೇಶ್ವರ ಲಿಂಗಗಳು, ಸರ್ವೋತ್ತಮೋತ್ತಮವಾದ ಅರವತ್ತೆಂಟು ತೀರ್ಥಗಳ ಹೆಸರುಗಳು ಬಂದಿವೆ.

ದಮಯಂತಿಯ ಮಗನಾದ ತ್ರಿಜಾತನ ಕಥೆ, ರೇವತೀ ಅಂಬೆಯ ಸ್ಥಾಪನೆ, ಭಕ್ತಿಕಾತೀರ್ಥದ ಆವಿರ್ಭಾವ, ಕ್ಷೇಮಂಕರೀದೇವಿ, ಕೇದಾರ ಕ್ಷೇತ್ರದ ಪ್ರಾದುರ್ಭಾವ ಶುಕ್ಲತೀರ್ಥದ ಮುಖಾರಕ ತೀರ್ಥ, ಸತ್ಯಸಂಧೇಶ್ವರನ ಆಖ್ಯಾನ, ಕರ್ಣೋತ್ಪಲೆಯ ಕಥೆ, ಅಟೇಶ್ವರ ತೀರ್ಥ, ಯಾಜ್ಞವಲ್ಕ್ಯತೀರ್ಥ, ಗೌರೀಗಣೇಶತೀರ್ಥ, ವಾಸ್ತುಪದ ತೀರ್ಥದ ಆಖ್ಯಾನ, ಅಜಾಗೃಹಾ ದೇವಿಯ ಕಥೆ, ಸೌಭಾಗ್ಯಂಧತೀರ್ಥ, ಶೂಲೇಶ್ವರಲಿಂಗ, ಧರ್ಮರಾಜನ ಕಥೆ, ಮಿಷ್ಟಾನ್ನ ದೇವೇಶ್ವರನ ಆಖ್ಯಾನ, ಮೂರು ಗಣಪತಿಗಳ ಆವಿರ್ಭಾವ, ಜಾಬಾಲಿಚರಿತ, ಮಕರೇಶನ ಕಥೆ, ಕಾಲೇಶ್ವರೀ ಮತ್ತು ಅಂಧಕನ ಆಖ್ಯಾನ, ಅಪ್ಸರಸ್ ಕುಂಡ, ಪುಷ್ಪಾದಿತ್ಯತೀರ್ಥ, ರೋಹಿತಾಶ್ವತೀರ್ಥ, ನಾಗರ ಬ್ರಾಹ್ಮಣ ಉತ್ಪತ್ತಿ, ಭಾರ್ಗವ ಚರಿತ್ರೆ, ವಿಶ್ವಾಮಿತ್ರ ಚರಿತ್ರೆ, ಸಾರಸ್ವತ ತೀರ್ಥ, ಪಿಪ್ಪಲಾದ ತೀರ್ಥ, ಕಂಸಾರೀಶ್ವರ ತೀರ್ಥ ಪಿಂಡಾರಕತೀರ್ಥ, ಬ್ರಹ್ಮನ ಯಜ್ಞಾನುಷ್ಠಾನ, ಸಾವಿತ್ರಿಯ ಕಥೆ, ರೈವತನ ಆಖ್ಯಾನ, ಭರ್ತೃಯಜ್ಞನ ವೃತ್ತಾಂತ, ಮುಖ್ಯ ತೀರ್ಥಗಳ ನಿರೀಕ್ಷಣ, ಕುರುಕ್ಷೇತ್ರ ಮತ್ತು ಪ್ರಭಾಸ ಕ್ಷೇತ್ರಗಳ ವರ್ಣನೆ ಮುಂತಾದ ವಿಷಯಗಳು ನಿರೂಪಿಸಲ್ಪಟ್ಟಿವೆ.

ಪುಷ್ಕರಾರಣ್ಯ, ನೈಮಿಷಾರಣ್ಯ ಮತ್ತುಧರ್ಮಾರಣ್ಯಗಳ ವರ್ಣನೆ, ವಾರಾಣಸೀ, ದ್ವಾರಕಾ, ಅವಂತೀ ಎಂಬ ಮೂರು ಪುರಿಗಳ ವರ್ಣನೆ, ವೃಂದಾವನ, ಖಾಂಡವವನ, ದ್ವೈತವನಗಳ ವರ್ಣನೆ, ಕಲ್ಪಗ್ರಾಮ, ಶಾಲಿಗ್ರಾಮ, ನಂದಿಗ್ರಾಮಗಳ ಪ್ರತಿಪಾದನ, ಅಸಿತೀರ್ಥ, ಶುಕ್ಲತೀರ್ಥ, ಪಿತೃತೀರ್ಥಗಳ ನಿರೂಪಣ, ಶ್ರೀ ಶೈಲ, ಅರ್ಬುದಗಿರಿ, ರೈವತಗಿರಿಗಳ ವರ್ಣನ, ಗಂಗಾಯಮುನಾ ಸರಸ್ವತೀ ನದಿಗಳ ನಾಮೋಚ್ಚಾರಣ. ಇವುಗಳಲ್ಲಿ ಒಂದೊಂದರ ನಾಮೋಚ್ಚಾರವೂ ಮೂರುವರೆ ಕೋಟಿ ತೀರ್ಥಗಳ ಫಲವನ್ನು ಕೊಡುತ್ತದೆ ಇತ್ಯಾದಿ ವಿಷಯಗಳ ಪ್ರತಿಪಾದನ. ಕೂಪಿಕಾ ತೀರ್ಥ. ಶಂಖತೀರ್ಥ, ಚಾಮರತೀರ್ಥ, ಬಾಲಮಂಡನತೀರ್ಥ ಈ ನಾಲ್ಕರ ಉಚ್ಚಾರಣವು ಹಾಟಕೇಶ್ವರ ಕ್ಷೇತ್ರದ ಫಲವನ್ನು ಕೊಡುತ್ತದೆ ಎಂಬ ವಿಷಯ. ಇದರ ನಂತರ ಸಾಂಬಾದಿತ್ಯ ಮಹಿಮೆ. ಶ್ರಾದ್ಧಕಲ್ಪ ನಿರೂಪಣ. ಯುದಿಷ್ಠಿರ ಭೀಷ್ಮ ಸಂವಾದ. ಕತ್ತಲೆಯಿಂದ ತುಂಬಿದ ಅಂಧಕ ನರಕ. ಜಲಶಾಯಿಮಾಹಾತ್ಮ್ಯ, ಚಾತುರ್ಮಾಸ್ಯವ್ರತ, ಅಶೂನ್ಯಶಯನ ವ್ರತ, ಮಂಕಣೇಶನ ಮಹಿಮೆ. ಶಿವರಾತ್ರಿ ಮಾಹಾತ್ಮ್ಯ, ತುಲಾಪುರುಷದಾನ, ಪೃಥ್ವೀದಾನ, ಬಾಲಕೇಶ್ವರ, ಕಪಾಲಮೋಚನೇಶ್ವರ, ಪಾಪಪಿಂಡ. ಸಪ್ತಲಿಂಗ, ಯುಗಪ್ರಮಾಣ ವರ್ಣನ, ನಿಂಬೇಶ್ವರ ಮತ್ತು ಶಾಕಂಭರಿಯರ ಕಥೆಗಳು. ಏಕಾದಶ ರುದ್ರ ಆವಿರ್ಭಾವ. ದಾನ ಮಾಹಾತ್ಮ್ಯ ದ್ವಾದಶಾದಿತ್ಯರ ಕೀರ್ತನ. ಈ ಎಲ್ಲಾ ವಿಷಯಗಳನ್ನು ಪ್ರತಿಪಾದಿಸುವುದೇ ನಾಗರಖಂಡವು.

## ಪ್ರಭಾಸ ಖಂಡ

ಇನ್ನು ಪ್ರಭಾಸ ಖಂಡದ ವಿಷಯವನ್ನು ಹೇಳುತ್ತೇನೆ. ಸೋಮನಾಥ ವಿಶ್ವನಾಥ, ಅತ್ಯಂತ ಪುಣ್ಯಪ್ರದವಾದ ಅರ್ಕಸ್ಥಲ, ಸಿದ್ದೇಶ್ವರ ಮೊದಲಾದವುಗಳ ಕಥೆಯು ಪ್ರತ್ಯೇಕವಾಗಿ ಇಲ್ಲಿ ಬಂದಿದೆ. ಅನಂತರ ಅಗ್ನಿತೀರ್ಥ. ಕಪರ್ದೀಶ್ವರ, ಉತ್ತಮ ಗತಿಯನ್ನು ಕೊಡುವ

ಕೇದಾರೇಶ್ವರ. ಭೀಮೇಶ್ವರ. ಭೈರೇಶ್ವರ. ಚಂಡೀಶ್ವರ. ಭಾಸ್ಕರೇಶ್ವರ, ಚಂದ್ರೇಶ್ವರ ಮಂಗಲೇಶ್ವರ. ಬುಧೇಶ್ವರ.

ಬೃಹಸ್ಪತೇಶ್ವರ, ಶುಕ್ರೇಶ್ವರ. ಶನೈಶ್ವರೇಶ್ವರ. ರಾಜೇಶ್ವರ. ಕೇಶೇಶ್ವರ ಮೊದಲಾದ ಶಿವವಿಗ್ರಹಗಳ ವರ್ಣನೆಯಿದೆ. ಅನಂತರ ಸಿದ್ದೇಶ್ವರ ಮೊದಲಾದ ಮತ್ತೆ ಐದು ಈಶ್ವರರ ಸ್ಥಿತಿಯ ವರ್ಣನೆಯಿದೆ. ವರಾರೋಹಾ, ಅಜಾಪಾಲಾ ಮಂಗಲಾ, ಲಲಿತೇಶ್ವರೀ, ಲಕ್ಷ್ಮೀಶ್ವರ ಬಾಡಬೇಶ್ವರ, ಉರ್ವೀಶ್ವರ, ಕಾಮೇಶ್ವರ, ವರುಣೇಶ್ವರ, ದುರ್ವಾಸೇಶ್ವರ, ಗಣೇಶ್ವರ ಕುಮಾರೇಶ್ವರ ಚಂಡಕಲ್ಪ, ಶಕುಲೀಶ್ವರ, ಕೋಟೀಶ್ವರ, ಬಾಲರೂಪಾಧಾರಿ ಯಾದ ಬ್ರಹ್ಮ ಮೊದಲಾದವರ ಉತ್ತಮ ಕಥೆಗಳು ಇರುತ್ತವೆ. ಅನಂತರ ನರಕೇಶ್ವರ, ಸಂವರ್ತೇಶ್ವರ, ನಿಧೀಶ್ವರ, ಬಾಲ ಭದ್ರೇಶ್ವರ, ಗಂಗಾ, ಗಣಪತಿ, ಜಾಂಬವತೀ ನದೀ. ಪಾಂಡುಕೂಪ, ಶತಮೇಧ, ಲಕ್ಷಮೇಧ ಮತ್ತು ಕೋಟಿ ಮೇಧಗಳ ಶ್ರೇಷ್ಠ ಕಥೆಯಿದೆ. ದುರ್ವಾಸಾದಿತ್ಯ, ಘಟ ಸ್ಥಾನ, ಹಿರಣ್ಯಾಸಂಗಮ, ನಾಗರಾದಿತ್ಯ, ಶ್ರೀ ಕೃಷ್ಣ, ಸಂಕರ್ಷಣ, ಸಮುದ್ರ ಕುಮಾರೀ, ಕ್ಷೇತ್ರಪಾಲ, ಬ್ರಹ್ಮೇಶ್ವರ, ಪಿಂಗಲಾಸಂಗಮೇಶ್ವರ, ಶಂಕರಾದಿತ್ಯ, ಘಟೇಶ್ವರ, ಋಷಿತೀರ್ಥ, ನಂದಾದಿತ್ಯ, ತ್ರಿಟಕೂಪ ಸೋಮಪಾನ, ಪರ್ಣಾದಿತ್ಯ ಮತ್ತು ನ್ಯಂಕುಮತಗಳ ಅದ್ಭುತವಾದ ಕಥೆಗಳ ಉಲ್ಲೇಖವಿದೆ.

ಅನಂತರ ವಾರಾಹಸ್ವಾಮಿಯ ವೃತ್ತಾಂತ, ಛಾಯಾಲಿಂಗ, ಗುಲ್ಫ, ಕನಕ, ನಂದಾ, ಕುಂತೀ ಮತ್ತು ಗಂಗೇಶ್ವರರ ಕಥೆಗಳಿವೆ. ಅನಂತರ ಚಮಸೋದ್ಭೇದೇಶ್ವರ, ವಿದುರೇಶ್ವರ, ತ್ರಿಲೋಕೇಶ್ವರ, ಮಂಕಣೇಶ್ವರ, ತ್ರೈಪುರೇಶ್ವರ ಮತ್ತು ಷಂಡತೀರ್ಥಗಳ ಕಥೆಯಿದೆ, ಅನಂತರ ಸೂರ್ಯಪ್ರಾಚೀ. ತೀಕ್ಷ್ಣ ಮತ್ತು ಉಮಾನಾಥರ ಕಥೆಯಿದೆ. ಪೃಥಿವ್ಯುದ್ಧಾರ ಶುಚಿಸ್ಥಳ. ಚ್ಯವನಾದಿತ್ಯ ಮತ್ತು ಚ್ಯವನೇಶ್ವರರ ಮಾಹಾತ್ಮ್ಯವಿದೆ. ಅದರ ನಂತರ ಅಜಾಪಾಲೇಶ್ವರ, ಬಾಲಾದಿತ್ಯ, ಕುಬೇರಸ್ಥಲ ಮತ್ತು ಋಷಿತೋಯದ ಪುಣ್ಯಕರವಾದ ಕಥೆ ಮತ್ತು ಶೃಂಗಾರೇಶ್ವರ ಮಾಹಾತ್ಮ್ಯ ಕೀರ್ತನವಿದೆ. ಅನಂತರ ನಾರದಾದಿತ್ಯ ಕಥೆ. ನಾರಾಯಣನ ಸ್ವರೂಪ ನಿರೂಪಣ, ಸಪ್ತಮಂಡ ಮಹಿಮಾ, ಮೂಲಚಂಡೀಶ್ವರ ವರ್ಣನೆಗಳಿವೆ.

ಚತುರ್ಮುಖ ಗಣೇಶ ಮತ್ತು ಕಲಂಬೇಶ್ವರರ ಕಥೆ, ಗೋಪಾ ಸ್ವಾಮೀ ಬಕುಲಸ್ವಾಮಿ ಮತ್ತು ಮರುದ್ಗಣರ ಕಥೆಯಿದೆ. ಅನಂತರ ಕ್ಷೇಮಾದಿತ್ಯ, ಉನ್ನತ ವಿಘ್ನೇಶ, ತಲಸ್ವಾಮೀ ಕಾಲಮೇಧ, ರುಕ್ಮಿಣೀ. ದುರ್ವಾಸೇಶ್ವರ. ಭದ್ರೇಶ್ವರ, ಶಂಖಾವರ್ತ, ಮೋಕ್ಷತೀರ್ಥ, ಗೋಷ್ಪದ ತೀರ್ಥ, ಅಚ್ಯುತಗೃಹ ಜಾಲೇಶ್ವರ, ಓಂಕಾರೇಶ್ವರ, ಚಂಡೀಶ್ವರ, ಆಶಾಪುರ ನಿವಾಸೀ ವಿಘ್ನೇಶ ಮತ್ತು ಕಲಾಕುಂಡದ ಅದ್ಭುತ ಕಥೆಯಿದೆ. ಕಪಿಲೇಶ್ವರ ಮತ್ತು ಜಗದ್ಗವ ಶಿವ, ಅದ್ಭುತ ಕಥೆಯ ಉಲ್ಲೇಖವೂ ಇದೆ. ನಲೇಶ್ವರ, ಕರ್ಕೋಟಕೇಶ್ವರ. ಹಾಟಕ್ಲೇಶ್ವರ, ನಾರದೇಶ್ವರ, ಯಂತ್ರಭೂಷಾ, ದುರ್ಗಕೂಟ ಮತ್ತು ಗಣೇಶಕಥೆಯ ಉಲ್ಲೇಖವೂ ಇದೆ. ಸುಪರ್ಣಭೈರವೀ, ಏಲಾಭೈರವೀ ಮತ್ತು ಭಲ್ಲತೀರ್ಥಗಳ ಮಹಿಮೆಯಿದೆ. ಅನಂತರ ಕರ್ದಮಾಲತೀರ್ಥ, ಗುಪ್ತಸೋಮನಾಥಗಳ ವರ್ಣನೆಯಿದೆ. ಇದರ ನಂತರ ಬಹುಸ್ವರ್ಣೇಶ್ವರ, ಶೃಂಗೇಶ್ವರ, ಕೋಟೀಶ್ವರ, ಮಾರ್ಕಂಡೇಶ್ವರ, ಕೋಟೀಶ ಮತ್ತು ದಾಮೋದರಗೃಹ ಇವುಗಳ ಮಾಹಾತ್ಮ್ಯ ಕಥೆಯಿದೆ. ಅನಂತರ ಸ್ವರ್ಣರೇಖಾ. ಬ್ರಹ್ಮಕುಂಡ, ಕುಂತೇಶ್ವರ, ಭೀಮೇಶ್ವರ, ಮೃಗೀಕುಂಡ ಮತ್ತು ಸರ್ವಸ್ವ ಇವುಗಳು ವಸ್ತ್ರಾಪಥಕ್ಷೇತ್ರದಲ್ಲಿ ವರ್ಣಿತವಾಗಿವೆ.

ಅನಂತರ ದುರ್ಗಾಭಲ್ಲೇಶ, ಗಂಗೇಶ, ರೈವತೇಶ, ಅರ್ಬುದೇಶ್ವರ, ಅಚಲೇಶ್ವರ ನಾಗತೀರ್ಥ, ವಸಿಷ್ಠಾಶ್ರಮ, ಭದ್ರಕರ್ಣ, ತ್ರಿನೇತ್ರ, ಕೇದಾರ, ತೀರ್ಥಾಗಮನ, ಕೋಟೀಶ್ವರ, ರೂಪತೀರ್ಥ ಮತ್ತು ಹೃಷಿಕೇಶ ಇವುಗಳ ಅದ್ಭುತಮಾಹಾತ್ಮ್ಯ ಕಥೆಯಿದೆ. ಅನಂತರ ಸಿದ್ಧೇಶ್ವರ, ಶುಕ್ರೇಶ್ವರ, ಮಣಿಕರ್ಣೇಶ್ವರ. ಪಂಗುತೀರ್ಥ, ಯಮತೀರ್ಥ ಮತ್ತು ವಾರಾಹೀ ತೀರ್ಥಗಳ ಮಾಹಾತ್ಮ್ಯೆಯಿದೆ. ಅನಂತರ ಚಂದ್ರಪ್ರಭಾಸ. ಪಿಂಡೋದಕ, ಶ್ರೀಮಾತಾ, ಶುಕ್ಲತೀರ್ಥ, ಮಾನುಷತೀರ್ಥ, ಕಪಿಲಾಗ್ನಿ ತೀರ್ಥ ಮತ್ತು ರಕ್ತಾನುಬಂಧ ಮೊದಲಾದವುಗಳ ಮಾಹಾತ್ಮ್ಯ ಕಥೆಯ ಉಲ್ಲೇಖವಿದೆ. ಅನಂತರ ಗಣೇಶತೀರ್ಥ, ಪಾರ್ಥೇಶ್ವರ ತೀರ್ಥ ಮತ್ತು ಉಜ್ವಲ ತೀರ್ಥಗಳ ಯಾತ್ರೆಯಲ್ಲಿ ಚಂಡೀಸ್ಥಾನ, ನಾಗೋದ್ಭವ, ಶಿವಕುಂಡ, ಮಹೇಶ್ವರ ತೀರ್ಥ ಮತ್ತು ಕಾಮೇಶ್ವರಗಳ ಮಾಹಾತ್ಮ್ಯ ವರ್ಣನ ಮತ್ತು ಮಾರ್ಕಂಡೇಯ ಋಷಿಯ ಉತ್ಪತ್ತಿ ಕಥೆಯಿದೆ.

ಅನಂತರ ಉದ್ದಾಲಕೇಶ ಮತ್ತು ಸಿದ್ದೇಶ್ವರಗಳ ಹತ್ತಿರದಲ್ಲಿರುವ ತೀರ್ಥಗಳ ಬೇರೆ ಬೇರೆ ಕಥೆಗಳಿವೆ. ಇದರ ಅನಂತರ ಶ್ರೀ ದೇವ ಮಾತೆಯ ಉತ್ಪತ್ತಿ. ವ್ಯಾಸ ಮತ್ತು ಗೌತಮ ತೀರ್ಥಗಳ ಕಥೆ, ಕುಲಸಂತಾರ ತೀರ್ಥದ ಮಹಾತ್ಮ್ಯ. ರಾಮ ತೀರ್ಥ ಮತ್ತು ಕೋಟಿ ತೀರ್ಥಗಳ ಮಹಿಮೆಯಿದೆ. ಚಂದ್ರೋದ್ಭೇದ ತೀರ್ಥ, ಈಶಾನ ತೀರ್ಥ ಮತ್ತು ಸ್ಥಾನಗಳ ಉತ್ಪತ್ತಿಯ ಅದ್ಭುತ ಮಹಾತ್ಮ್ಯ. ತ್ರಿಪುಷ್ಕರ, ರುದ್ರಹ್ರದ ಮತ್ತು ಗುಹ್ಯೇಶ್ವರಗಳ ಪವಿತ್ರ ಕಥೆಯಿದೆ, ಅನಂತರ ಅವಿಮುಕ್ತ ಮಹಿಮಾ, ಉಮಾಮಹೇಶ್ವರ ಮಾಹಾತ್ಮ್ಯ, ಮಹೌಜೇಯ ಪ್ರಭಾವ ಮತ್ತು ಜಂಬೂ ತೀರ್ಥದ ಮಹತ್ವಗಳನ್ನು ಹೇಳಲಾಗಿದೆ. ಗಂಗಾಧರ ಮತ್ತು ಮಿಶ್ರಕರ ಕಥೆ ಮತ್ತು ಫಲಸ್ತುತಿಗಳೂ ಇವೆ. ಅನಂತರ ದ್ವಾರಕಾ ಮಾಹಾತ್ಮ್ಯದ ಸಂದರ್ಭದಲ್ಲಿ ಚಂದ್ರಶರ್ಮನ ಕಥೆಯಿದೆ.

ಜಾಗರಣೆ ಮತ್ತು ಪೂಜೆ ಮುಂತಾದವುಗಳ ಕಥೆ, ಏಕಾದಶೀ ವ್ರತಮಹಿಮೆ, ಮಹಾದ್ವಾದಶಿಯ ಅಖ್ಯಾನ, ಪ್ರಹ್ಲಾದ ಮತ್ತು ಋಷಿಗಳ ಸಮಾಗಮ, ದುರ್ವಾಸರ ಉಪಾಖ್ಯಾನ, ಯಾತ್ರೆಯ ಆರಂಭದಲ್ಲಿ ಮಾಡಬೇಕಾದ ವಿಧಿ, ಗೋಮತಿಯ ಉತ್ಪತ್ತಿಯ ಕಥೆ, ಅದರ ಸ್ನಾನಾದಿಗಳ ಫಲ, ಚಕ್ರತೀರ್ಥ ಮಾಹಾತ್ಮ್ಯ, ಗೋಮತೀ ಸಾಗರ ಸಂಗಮ, ಸನಕಾದಿ ಕುಂಡದ ಆಖ್ಯಾನ, ನಗ್ನ ತೀರ್ಥದ ಕಥೆ, ಗೋಪ್ರಚಾರದ ಪುಣ್ಯಕರವಾದ ಕಥೆ, ದ್ವಾರಕೆಗೆ ಗೋಪಿಯರ ಆಗಮನ, ಗೋಪೀ ಸರೋವರದ ಕಥೆ, ಬ್ರಹ್ಮತೀರ್ಥ ಮೊದಲಾದವುಗಳ ವರ್ಣನೆ. ಐದು ನದಿಗಳ ಕಥೆ, ಅನೇಕ ರೀತಿಯ ಉಪಾಖ್ಯಾನಗಳು, ಶಿವಲಿಂಗ, ಗದಾ ತೀರ್ಥ ಮತ್ತು ಶ್ರೀ ಕೃಷ್ಣ ಪೂಜೆಯ ವರ್ಣನ, ತ್ರಿವಿಕ್ರಮ ಮೂರ್ತಿಯ ವರ್ಣನೆ, ದುರ್ವಾಸ ಮತ್ತು ಶ್ರೀ ಕೃಷ್ಣರ ಸಂವಾದ, ಕುಶದೈತ್ಯನ ವಧದ ಕಥೆ, ವಿಶೇಷ ಪೂಜೆಯ ಫಲ. ಗೋಮತೀ ಮತ್ತು ದ್ವಾರಕೆಗೆ ತೀರ್ಥಗಳ ಆಗಮನ. ಶ್ರೀ ಕೃಷ್ಣ ಮಂದಿರದ ದರ್ಶನ, ದ್ವಾರಾವತಿಯಲ್ಲಿ ಅಭಿಷೇಕ, ಅಲ್ಲಿ ತೀರ್ಥಗಳ ನಿವಾಸದ ಕಥೆ ಮತ್ತು ದ್ವಾರಕೆಯ ಪುಣ್ಯವರ್ಣನ ಈ ವಿಷಯಗಳು ಅಲ್ಲಿವೆ. ಈ ರೀತಿ ಉತ್ತಮೋತ್ತಮ ಕಥೆಗಳಿಂದ ಯುಕ್ತವಾದ ಶಿವ ಮಾಹಾತ್ಮ್ಯ ಪ್ರತಿಪಾದಕವಾದ ಸ್ಕಂದ ಪುರಾಣದಲ್ಲಿ ಇದು ಏಳನೆಯದಾದ ಪ್ರಭಾಸಖಂಡದ ವಿಷಯ ನಿರೂಪಣೆಯು. ಯಾವನು ಈ ಪುರಾಣವನ್ನು ಬರೆದು ತ್ರಿಶೂಲ ಸಹಿತವಾಗಿ ಮಾಘ ಶುದ್ಧ ಹುಣ್ಣಿಮೆಯ ದಿನ ಸತ್ಕಾರ ಪೂರ್ವಕವಾಗಿ ಬ್ರಾಹ್ಮಣನಿಗೆ ದಾನ ಕೊಡುತ್ತಾನೋ, ಅವನು ಯಾವಾಗಲೂ ಶಿವಲೋಕದಲ್ಲಿ ಆನಂದದಿಂದ ಇರುತ್ತಾನೆ.

# ವಾಮನ ಪುರಾಣದ ವಿಷಯ ಸೂಚೀ ಮತ್ತು ಪುರಾಣದ ಶ್ರವಣ ಪಠನ ಮತ್ತು ದಾನದ ಹಿರಿಮೆ

**ಬ್ರಹ್ಮದೇವರು:-** ವತ್ಸ, ಕೇಳು ಈಗ ನಾನು ನಿನಗೆ ತ್ರಿವಿಕ್ರಮ ಚರಿತ್ರೆಯಿಂದ ಕೂಡಿದ ವಾಮನ ಪುರಾಣವನ್ನು ವರ್ಣಿಸುತ್ತೇನೆ. ಈ ಪುರಾಣದ ಶ್ಲೋಕಸಂಖ್ಯೆ ಹತ್ತು ಸಾವಿರ. ಇದರಲ್ಲಿ ಕೂರ್ಮಕಲ್ಪದ ವೃತ್ತಾಂತ ಮತ್ತು ತ್ರಿವರ್ಣ ಕಥೆಯಿದೆ. ಎರಡು ಭಾಗಗಳಿಂದ ಕೂಡಿದ ಈ ಪುರಾಣವು ಹೇಳುವ ಮತ್ತು ಕೇಳುವವರಿಗೆ ಶುಭಕರವಾಗಿದೆ, ಮೊದಲು ಪುರಾಣ ಪ್ರಶ್ನೆ ಅನಂತರ ಬ್ರಹ್ಮಶಿರಶ್ಛೇದದ ಕಥೆ, ಕಪಾಲ ಮೋಚನದ ಕಥೆ, ದಕ್ಷಯಜ್ಞ ವಿಧ್ವಂಸದ ಕಥೆಗಳಿವೆ. ಅನಂತರ ಭಗವಂತನಾದ ಹರನಿಗೆ ಕಾಲರೂಪ ಸಂಜ್ಞೆ, ಮದನ ದಹನ, ಪ್ರಹ್ಲಾದ ನಾರಾಯಣ ಯುದ್ಧ, ದೇವಾಸುರ ಯುದ್ಧ, ಸುಕೇಶೀ ಮತ್ತು ಸೂರ್ಯರ ಕಥೆ, ಕಾಮ್ಯ ವ್ರತವರ್ಣನ, ದುರ್ಗಾ ಚರಿತ್ರ. ತಪತೀ ಚರಿತ್ರ, ಕುರುಕ್ಷೇತ್ರ ವರ್ಣನ, ಅನುಪಮವಾದ ಸತ್ಯಾಮಾಹಾತ್ಮ್ಯ, ಪಾರ್ವತೀ ಜನ್ಮ ಕಥೆ, ತಪತೀ ವಿವಾಹ, ಗೌರೀ ಉಪಾಖ್ಯಾನ, ಕೌಶಿಕಿಯ ಉಪಾಖ್ಯಾನ, ಕುಮಾರ ಚರಿತ್ರ, ಅಂಧಕವಧ ಕಥೆ, ಸಾಧ್ಯೋಪಾಖ್ಯಾನ, ಜಾಬಾಲಿಚರಿತ, ಅರಜೆಯ ಅದ್ಭುತ ಕಥೆ, ಅಂಧಕಾಸುರ ಮತ್ತು ಶಂಕರರ ಯುದ್ಧ, ಅಂಧಕನಿಗೆ ಗಣತ್ವಪ್ರಾಪ್ತಿ. ಮರುದ್ಗಣಗಳ ಜನ್ಮಕಥೆ, ಬಲಿಚರಿತ್ರ, ಲಕ್ಷ್ಮೀ ಚರಿತ್ರ, ತ್ರಿವಿಕ್ರಮ ಚರಿತ್ರ, ಪ್ರಹ್ಲಾದನ ತೀರ್ಥಯಾತ್ರೆ, ಆ ಸಂದರ್ಭದ ಅನೇಕ ಮಂಗಳಕರ ಕಥೆಗಳು. ಧುಂಧು ಚರಿತ್ರ. ಪ್ರೇತೋಪಾಖ್ಯಾನ. ನಕ್ಷತ್ರ ಪುರಷನ ಕಥೆ. ಶ್ರೀ ರಾಮ ಚರಿತ್ರ, ತ್ರಿವಿಕ್ರಮ ಚರಿತ್ರದ ಕೊನೆಯ ಭಾಗದಲ್ಲಿ ಬ್ರಹ್ಮದೇವರು ಮಾಡಿದ ಸ್ತೋತ್ರ. ಪ್ರಹ್ಲಾದ ಬಲಿ ಸಂವಾದದಲ್ಲಿ ಸುತಲ ಲೋಕದಲ್ಲಿ ಶ್ರೀ ಹರಿಯ ಪ್ರಶಂಸೆಯ ಉಲ್ಲೇಖವಿದೆ. ಇಲ್ಲಿಗೆ ಈ ಪುರಾಣದ ಪೂರ್ವ ಭಾಗ ಮುಗಿಯುತ್ತದೆ.

## ಉತ್ತರ ಭಾಗ

ಉತ್ತರ ಭಾಗದಲ್ಲಿ ನಾಲ್ಕು ಸಂಹಿತೆಗಳಿವೆ. ಅವುಗಳಲ್ಲಿ ಒಂದೊಂದರಲ್ಲಿಯೂ ಒಂದು ಸಾವಿರ ಶ್ಲೋಕಗಳಿವೆ. ಮಾಹೇಶ್ವರೀ, ಭಾಗವತೀ, ಸೌರೀ, ಗಾಣೇಶ್ವರೀ ಎಂದು ಆ ನಾಲ್ಕು ಸಂಹಿತೆಗಳ ಹೆಸರುಗಳು. ಮಾಹೇಶ್ವರೀ ಸಂಹಿತೆಯಲ್ಲಿ ಶ್ರೀ ಕೃಷ್ಣ ಮತ್ತು ಅವನ ಭಕ್ತರ ವರ್ಣನೆಗಳಿವೆ. ಭಾಗವತೀ ಸಂಹಿತೆಯಲ್ಲಿ ಜಗದಂಬೆಯ ಅವತಾರದ ಅದ್ಭುತ ಕಥೆಯಿದೆ. ಸೌರೀ ಸಂಹಿತೆಯ ಪಾಪನಾಶಕವಾದ ಸೂರ್ಯ ಮಹಿಮೆಯ ವರ್ಣನವಿದೆ. ಗಾಣೇಶ್ವರೀ ಸಂಹಿತೆಯಲ್ಲಿ ಶಿವ ಮತ್ತು ಗಣೇಶ್ವರರ ಚರಿತ್ರದ ವರ್ಣನೆಯಿದೆ. ಅತ್ಯಂತ ಅದ್ಭುತವಾದ ಈ ವಾಮನ ಪುರಾಣವನ್ನು ಪುಲಸ್ತ್ಯರು ನಾರದರಿಗೆ ಹೇಳಿದ್ದಾರೆ. ನಾರದರಿಂದ ವ್ಯಾಸರಿಗೆ, ವ್ಯಾಸರಿಂದ ರೋಮಹರ್ಷಣರಿಗೆ ಈ ಪುರಾಣವು ಪ್ರಾಪ್ತವಾಯಿತು. ಈ ರೀತ ಪರಂಪರಾ ಪ್ರಾಪ್ತವಾದ ವಾಮನ ಪುರಾಣವನ್ನು ಯಾರು ಪಾರಾಯಣ ಮಾಡುತ್ತಾರೋ, ಶ್ರವಣ ಮಾಡುತ್ತಾರೋ, ಅವರು ಪರಮಗತಿಯನ್ನು ಪಡೆಯುತ್ತಾರೆ. ಯಾರು ಈ ಪುರಾಣವನ್ನು ಬರೆದು ಶರತ್ಕಾಲದ ವಿಷುವತ್ ಪುಣ್ಯಕಾಲದಲ್ಲಿ (ತುಲಾ ಸಂಕ್ರಮಣದಲ್ಲಿ) ಘೃತಧೇನು ಸಹಿತವಾಗಿ ವೇದಜ್ಞನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನು ತನ್ನ ಪಿತೃಗಳನ್ನು ನರಕದಿಂದ ಉದ್ಧರಿಸಿ ಸ್ವರ್ಗಕ್ಕೆ ಸೇರಿಸುವುದು

ಮಾತ್ರವಲ್ಲದೆ ತಾನೂ ಇಹದಲ್ಲಿ ನಾನಾ ವಿಧ ಭೋಗಗಳನ್ನು ಅನುಭವಿಸಿ ದೇಹ ತ್ಯಾಗದ ಅನಂತರ ಪರಮ ಪುರುಷನಾದ ವಿಷ್ಣುವಿನ ವೈಕುಂಠ ಸ್ಥಾನವನ್ನು ಹೊಂದುತ್ತಾನೆ.

## ಕೂರ್ಮ ಪುರಾಣ

**ಬ್ರಹ್ಮದೇವರು:-** ಮಗೂ ಮರೀಚಿಯೇ! ಕೂರ್ಮಪುರಾಣದಲ್ಲಿ ಲಕ್ಷ್ಮೀಕಲ್ಪದ ವೃತ್ತಾಂತವಿದೆ. ಈ ಪುರಾಣವನ್ನು ಕೂರ್ಮರೂಪಧಾರಿಯಾದ ಶ್ರೀ ಹರಿಯು ಇಂದ್ರದ್ಯುಮ್ನನ ಕಥೆಯ ಸಂದರ್ಭದಲ್ಲಿ ಮಹರ್ಷಿಗಳಿಗೆ ಹೇಳಿದ್ದಾನೆ. ಈ ಪುರಾಣದಲ್ಲಿ ನಾಲ್ಕು ಸಂಹಿತೆಗಳು. ಹದಿನೇಳು ಸಾವಿರ ಶ್ಲೋಕಗಳು. ಈ ಪುರಾಣದಲ್ಲಿ ಅನೇಕ ಕಥೆಗಳ ಸಂದರ್ಭದಲ್ಲಿ, ಮನುಷ್ಯರಿಗೆ ಸದ್ಗತಿಯನ್ನು ಕೊಡುವ ನಾನಾ ಪ್ರಕಾರವಾದ ಉತ್ತಮ ಧರ್ಮಗಳನ್ನು ಹೇಳಿದ್ದಾರೆ. ಇದರ ಪೂರ್ವ ಭಾಗದಲ್ಲಿ ಪುರಾಣದ ಉಪಕ್ರಮವಿದೆ. ಅನಂತರ ಲಕ್ಷ್ಮೀ ಮತ್ತು ಇಂದ್ರದ್ಯುಮ್ನರ ಸಂವಾದ. ಕೂರ್ಮ ಮತ್ತು ಮಹರ್ಷಿಗಳ ವೃತ್ತಾಂತ. ವರ್ಣಾಶ್ರಮ ಸಂಬಂಧಿಯಾದ ಆಚಾರ ವಿಚಾರಗಳು, ಜಗತ್ತಿನ ಉತ್ಪತ್ತಿ ವರ್ಣನ. ಸಂಕ್ಷೇಪ್ತವಾಗಿ ಕಾಲ ಸಂಖ್ಯಾ ನಿರೂಪಣ, ಪ್ರಲಯದ ಕೊನೆಯಲ್ಲಿ ಪರಮಾತ್ಮನ ಸ್ತೋತ್ರ, ಸಂಕ್ಷೇಪ್ತದಿಂದ ಸೃಷ್ಟಿವರ್ಣನ, ಶಂಕರ ಚರಿತ್ರೆ, ಪಾರ್ವತೀ ಸಹಸ್ರನಾಮಯೋಗ ನಿರೂಪಣ, ಭೃಗುವಂಶವರ್ಣನ, ಸ್ವಾಯಂಭುವ ಮನು ಮತ್ತು ದೇವತೆಗಳೇ ಮುಂತಾದವರ ಉತ್ಪತ್ತಿ, ದಕ್ಷಯಜ್ಞ ಧ್ವಂಸ. ದಕ್ಷಸೃಷ್ಟಿ, ಕಶ್ಯಪ ವಂಶವರ್ಣನ. ಅತ್ರಿವಂಶದ ಪರಿಚಯ. ಶ್ರೀ ಕೃಷ್ಣನ ಮಂಗಲಕರವಾದ ಚರಿತ್ರೆ. ಮಾರ್ಕಂಡೇಯ ಶ್ರೀ ಕೃಷ್ಣ ಸಂವಾದ. ವ್ಯಾಸ ಪಾಂಡವರ ಸಂವಾದ. ಯುಗಧರ್ಮ ವರ್ಣನ. ವ್ಯಾಸಜೈಮಿನಿಕಥೆ. ಕಾಶೀ ಮತ್ತು ಪ್ರಯಾಗ ಮಾಹಾತ್ಮ್ಯ, ಮೂರು ಲೋಕಗಳ ವರ್ಣನ ಮತ್ತು ವೇದ ಶಾಖೆಗಳ ನಿರೂಪಣವಿದೆ. ಈ ಪುರಾಣದ ಉತ್ತರಭಾಗದಲ್ಲಿ ಮೊದಲು ಈಶ್ವರ ಗೀತಾ ಅನಂತರ ನಾನಾ ಧರ್ಮೋಪದೇಶ ಗರ್ಭಿತವಾದ ವ್ಯಾಸಗೀತೆಯಿದೆ. ಇದಲ್ಲದೆ ಬೇರೆ ಬೇರೆ ತೀರ್ಥಗಳ ಮಾಹಾತ್ಮ್ಯೆಯನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಅನಂತರ ಪ್ರತಿ ಸರ್ಗ ವರ್ಣನೆಯಿದೆ. ಇದು ಬ್ರಾಹ್ಮೀ ಸಂಹಿತಾ ಎನ್ನಿಸಿಕೊಂಡಿದೆ.

## ಭಾಗವತೀ ಸಂಹಿತೆ

ಇದರ ಅನಂತರ ಭಾಗವತೀ ಸಂಹಿತೆಯ ವಿಷಯ ನಿರೂಪಣೆಯಿದೆ. ಇದರಲ್ಲಿ ವರ್ಣಗಳಿಗೆ ಬೇರೆ ಬೇರೆ ವೃತ್ತಿಗಳನ್ನು ಹೇಳಿದ್ದಾರೆ. ಇದರ ಮೊದಲನೆಯ ಪಾದದಲ್ಲಿ ಭೋಗವನ್ನು ಹೆಚ್ಚಿಸುವ ಬ್ರಾಹ್ಮಣರ ಸದಾಚಾರವನ್ನು, ಎರಡನೇ ಪಾದದಲ್ಲಿ ಕ್ಷತ್ರಿಯ ವೃತ್ತಿಯನ್ನು ಹೇಳಿದ್ದಾರೆ. ಅದನ್ನು ಆಶ್ರಯಿಸಿದರೆ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಪಡೆಯುತ್ತಾನೆ. ಮೂರನೆಯ ಪಾದದಲ್ಲಿ ವೈಶ್ಯರ ನಾಲ್ಕು ರೀತಿಯ ವೃತ್ತಿಯನ್ನು ಹೇಳಿದ್ದಾರೆ. ಸರಿಯಾಗಿ ಅದರ ಆಚರಣೆಯಿಂದ ಉತ್ತಮಗತಿಯ ಪ್ರಾಪ್ತಿಯಾಗುತ್ತದೆ. ನಾಲ್ಕನೆಯ ಪಾದದಲ್ಲಿ ಹೇಳಿದ ಶೂದ್ರ ವೃತ್ತಿಯ ಅನುಷ್ಠಾನದಿಂದ ಕಲ್ಯಾಣಾಭಿವೃದ್ಧಿಯುಂಟಾಗಿ ಲಕ್ಷ್ಮೀಪತಿಯ ಅನುಗ್ರಹವೂ ಉಂಟಾಗುತ್ತದೆ. ಅನಂತರ ಭಾಗವತೀ ಸಂಹಿತೆಯ ಐದನೆಯ ಪಾದದಲ್ಲಿ ಸಂಕರ ಜಾತಿಗಳ ವೃತ್ತಿಯನ್ನು ಹೇಳಿದ್ದಾರೆ. ಅದರ ಅನುಷ್ಠಾನದಿಂದ ಅವನು ಭವಿಷ್ಯದಲ್ಲಿ ಉತ್ತಮ ಜನ್ಮವನ್ನು ಹೊಂದಿ ಉತ್ತಮ ಗತಿಯನ್ನು ಹೊಂದುತ್ತಾನೆ. ಈ ರೀತಿ ಐದು ಪಾದಗಳಿಂದ ಕೂಡಿದ ಎರಡನೆಯ

ಸಂಹಿತೆಯನ್ನು ಹೇಳಿದ್ದಾಯಿತು. ಈ ಪುರಾಣದ ಉತ್ತರ ಭಾಗದಲ್ಲಿ ಸೌರೀ ಸಂಹಿತೆಯಿದೆ. ಅದು ಮನುಷ್ಯರಿಗೆ ಸಮಸ್ತ ಕಾರ್ಯಸಾಧಕವಾಗಿದೆ. ಅದು ಸಕಾಮನಾದ ಮನುಷ್ಯನಿಗೆ ಷಟ್‌ಕರ್ಮ ಸಿದ್ಧಿಯನ್ನು ಮಾಡಿಕೊಡುತ್ತದೆ.

## ವೈಷ್ಣವೀ ಸಂಹಿತೆ

ಮೋಕ್ಷಪ್ರದವಾದ ನಾಲ್ಕನೆಯ ವೈಷ್ಣವೀ ಸಂಹಿತೆಯಲ್ಲಿ ನಾಲ್ಕು ಪಾದಗಳಿವೆ. ಇದು ದ್ವಿಜಾತಿಗಳಿಗೆ ವೇದ ಸ್ವರೂಪವಾಗಿದೆ. ಈ ನಾಲ್ಕು ಪಾದಗಳಲ್ಲಿ ಕ್ರಮವಾಗಿ ೬, ೪, ೨, ಮತ್ತು ಐದು ಸಾವಿರ ಶ್ಲೋಕಗಳಿವೆ. ಈ ಕೂರ್ಮ ಪುರಾಣವು ಧರ್ಮ ಅರ್ಥ, ಕಾಮ, ಮತ್ತು ಮೋಕ್ಷಗಳನ್ನು ಕೊಡುತ್ತದೆ. ಹೇಳುವ ಮತ್ತು ಕೇಳುವ ಮನುಷ್ಯರಿಗೆ ಉತ್ತಮೋತ್ತಮ ಗತಿಯನ್ನು ಒದಗಿಸುತ್ತದೆ. ಈ ಪುರಾಣವನ್ನು ಬರೆದು ಆಯನಾರಂಭದ ದಿನದಲ್ಲಿ ಚಿನ್ನದ ಆಮೆಯ ಮೂರ್ತಿಯ ಜೊತೆಗೆ ಬ್ರಾಹ್ಮಣನಿಗೆ ಭಕ್ತಿಪೂರ್ವಕವಾಗಿ ದಾನ ಮಾಡಿದರೆ ಉತ್ತಮ ಗತಿ ಪ್ರಾಪ್ತಿಯಾಗುತ್ತದೆ.

## ಮತ್ಸ್ಯ ಪುರಾಣ

ಪಾರಾಯಣ, ಶ್ರವಣ ಮತ್ತು ದಾನಗಳ ಹಿರಿಮೆಯನ್ನು ನಿರೂಪಿಸುವ ಇದರಲ್ಲಿ ವೇದಜ್ಞರಾದ ವ್ಯಾಸರು ಏಳು ಕಲ್ಪಗಳ ವೃತ್ತಾಂತವನ್ನು ಸಂಕ್ಷೇಪವಾಗಿ ಹೇಳಿದ್ದಾರೆ. ನೃಸಿಂಹ ವರ್ಣನವನ್ನು ಆರಂಭಿಸಿ ಒಟ್ಟು ಮತ್ಸ್ಯ ಪುರಾಣದಲ್ಲಿ ಹದಿನಾಲ್ಕು ಸಾವಿರ ಶ್ಲೋಕಗಳಿವೆ. ಮನು ಮತ್ತು ಮತ್ಸ್ಯ ಸಂವಾದ, ಬ್ರಹ್ಮಾಂಡವರ್ಣನ, ಬ್ರಹ್ಮ, ದೇವತೆಗಳು ಮತ್ತು ಅಸುರರ ಉತ್ಪತ್ತಿ, ಮರುದ್ಗಣಗಳ ಪ್ರಾದುರ್ಭಾವ, ಮದನದ್ವಾದಶೀ, ಲೋಕಪಾಲಪೂಜಾ, ಮನ್ವಂತರ ವರ್ಣನ, ಪೃಥುರಾಜನ ರಾಜ್ಯದ ವರ್ಣನ, ಸೂರ್ಯ ಮತ್ತು ವೈವಸ್ವತ ಮನುವಿನ ಉತ್ಪತ್ತಿ, ಬುಧಸಂಗಮ, ಪಿತೃವಂಶ ವರ್ಣನ, ಶ್ರಾದ್ಧಕಾಲ, ಪಿತೃತೀರ್ಥ ಪ್ರಚಾರ, ಚಂದ್ರನ ಉತ್ಪತ್ತಿ, ಚಂದ್ರವಂಶ ವರ್ಣನ, ಯಯಾತಿ ಚರಿತ್ರ, ಕಾರ್ತವೀರ್ಯಾರ್ಜುನ ಚರಿತ್ರ, ಸೃಷ್ಟಿ ವಂಶವರ್ಣನ, ಭೃಗುಶಾಪ, ನಾರಾಯಣನು ಭೂಮಿಯಲ್ಲಿ ಹತ್ತು ಅವತಾರಗಳನ್ನು ಸ್ವೀಕರಿಸುವುದು, ಪೂರು ವಂಶ ವರ್ಣನ, ಅಗ್ನಿ ವಂಶವರ್ಣನ, ಕ್ರಿಯಾಯೋಗ, ಪುರಾಣಕೀರ್ತನ, ನಕ್ಷತ್ರವ್ರತ, ಪುರುಷವ್ರತ, ಮಾರ್ತಂಡ ಶಯನವ್ರತ, ಶ್ರೀಕೃಷ್ಣಾಷ್ಟಮೀ ವ್ರತ, ರೋಹಿಣೀ ಚಂದ್ರವ್ರತ, ತಡಾಗನಿರ್ಮಾಣ ಮಹಿಮಾ, ವೃಕ್ಷದಾನ, ಸೌಭಾಗ್ಯ ಶಯನ ವ್ರತ, ಅಗಸ್ತ್ಯ ವ್ರತ, ಅನಂತ ತೃತೀಯಾವ್ರತ, ರಸಕಲ್ಯಾಣಿನೀವ್ರತ, ಆನಂದಕರೀವ್ರತ, ಸಾರಸ್ವತವ್ರತ, ಗ್ರಹಣಸ್ನಾನ ವಿಧಿ, ಸಪ್ತಮೀ ಶಯನವ್ರತ, ಭೀಮದ್ವಾದಶೀ, ಅನಂತಶಯನವ್ರತ, ಅಶೂನ್ಯ ಶಯನ ವ್ರತ, ಅಂಗಾರಕ ವ್ರತ, ಸಪ್ತಮೀಸಪ್ತಕ ವ್ರತ, ವಿಶೋಕ ದ್ವಾದಶೀವ್ರತ, ಹತ್ತು ರೀತಿಯ ಮೇರುಪ್ರದಾನ, ಗ್ರಹಶಾಂತಿ, ಗ್ರಹಸ್ವರೂಪ ಕಥೆ, ಶಿವಚತುರ್ದಶೀ, ಸರ್ವಫಲತ್ಯಾಗ, ರವಿವಾರವ್ರತ, ಸಂಕ್ರಾಂತಿಸ್ನಾನ, ವಿಭೂತಿದ್ವಾದಶೀವ್ರತ, ಷಷ್ಠೀವ್ರತ ಮಾಹಾತ್ಮ್ಯ, ಸ್ನಾನವಿಧಿ ವರ್ಣನ, ಪ್ರಯಾಗ ಮಾಹಾತ್ಮ್ಯ, ದ್ವೀಪ ಮತ್ತು ಲೋಕಗಳ ವರ್ಣನ, ಅಂತರಿಕ್ಷ ಗಮನ, ಧ್ರುವ ಮಹಿಮಾ, ದೇವೇಶ್ವರರ ಭವನಗಳು, ತ್ರಿಪುರಪ್ರಕಾಶನ, ಶ್ರೇಷ್ಠರಾದ ಪಿತೃಗಳ ಮಹಿಮೆ, ಮನ್ವಂತರ ನಿರ್ಣಯ, ನಾಲ್ಕು ಯುಗಗಳ ಉತ್ಪತ್ತಿ, ಯುಗಧರ್ಮ ನಿರೂಪಣಗಳಿವೆ.

ವಜ್ರಾಂಗನ ಉತ್ಪತ್ತಿ, ತಾರಕಾಸುರನ ಉತ್ಪತ್ತಿ, ತಾರಕಾಸುರನ ಮಾಹಾತ್ಮ್ಯ ಬ್ರಹ್ಮದೇವನ ಅನುಕೀರ್ತನ, ಪಾರ್ವತೀ ಪ್ರಾದುರ್ಭಾವ, ಶಿವತಪೋವನ, ಮನ್ಮಥದಹನ. ರತಿವಿಲಾಪ ಗೌರೀತಪೋನುಷ್ಠಾನ, ಶಿವನು ಗೌರಿಯಲ್ಲಿ ಪ್ರಸನ್ನ ನಾಗುವುದು, ಪಾರ್ವತಿ ಮತ್ತು ಋಷಿಗಳ ಸಂವಾದ, ಪಾರ್ವತೀ ಕಲ್ಯಾಣ ಮಹೋತ್ಸವ, ಕಾರ್ತಿಕೇಯ ಜನ್ಮ, ಸುಬ್ರಹ್ಮಣ್ಯ ವಿಜಯ, ತಾರಕಾಸುರನ ಭಯಂಕರ ವಧ, ನರಸಿಂಹ ಕಥೆ, ಬ್ರಹ್ಮನ ಸೃಷ್ಟಿ, ಅಂಧಕಾಸುರ ಸಂಹಾರ, ವಾರಾಣಸೀ ಮಾಹಾತ್ಮ್ಯ, ನರ್ಮದಾ ಮಾಹಾತ್ಮ್ಯ, ಪ್ರವರ ಗಣನೆ, ಪಿತೃಗಾಥಾ ಕೀರ್ತನ, ಉಭಯ ಮುಖೀ ಗೋವಿನ ದಾನ, ಕಪ್ಪಾದ ಮೃಗಚರ್ಮದ ದಾನ, ಸಾವಿತ್ರೀ ಕಥೆ, ರಾಜಧರ್ಮ ವರ್ಣನ. ಅನೇಕ ಪ್ರಕಾರವಾದ ಉತ್ಪಾತಗಳ ವರ್ಣನ, ಗ್ರಹಣಾಂತ - ಯಾತ್ರೆಯ ನಿಮಿತ್ತ (ಶಕುನ) ಸ್ವಪ್ನಮಂಗಲ, ಬ್ರಾಹ್ಮಣ ಮತ್ತು ವಾರಾಹ ಮಾಹಾತ್ಮ್ಯ, ಸಮುದ್ರ ಮಂಥನ, ಕಾಲಕೂಟ ಶಾಂತಿ, ದೇವಾಸುರ ಯುದ್ಧ ವಾಸ್ತುವಿದ್ಯೆ, ಪ್ರತಿಮಾಲಕ್ಷಣ, ದೇವಮಂದಿರ ನಿರ್ಮಾಣ, ಪ್ರಾಸಾದ ಲಕ್ಷಣ, ಮಂಟಪಲಕ್ಷಣ, ಭವಿಷ್ಯದ ರಾಜರ ವರ್ಣನೆ, ಮಹಾದಾನ ವರ್ಣನೆ, ಕಲ್ಪಕೀರ್ತನ, ಈ ವಿಷಯಗಳು ಈ ಪುರಾಣದಲ್ಲಿ ಬಂದಿವೆ. ಪವಿತ್ರ ಕಲ್ಯಾಣಕರ, ಆಯುಸ್ಸು ಕೀರ್ತಿಗಳನ್ನು ವರ್ಧಿಸುವಂತಹ, ಈ ಪುರಾಣದ ಪಾರಾಯಣ, ಶ್ರವಣ ಮಾಡುವ ಮನುಷ್ಯನು ವಿಷ್ಣುಲೋಕಕ್ಕೆ ಹೋಗುತ್ತಾನೆ. ಈ ಪುರಾಣವನ್ನು ಬರೆದು ಸುವರ್ಣಮಯ ವಾದ ಮೀನು ಮತ್ತು ಗೋವಿನ ಪ್ರತಿಮೆಯೊಂದಿಗೆ ವಿಷುವ ಯೋಗದಲ್ಲಿ ಸತ್ಕಾರ ಪೂರ್ವಕವಾಗಿ ಜ್ಞಾನಿಗೆ ದಾನಮಾಡಿದರೆ ಪರಮಪದದ ಪ್ರಾಪ್ತಿಯಾಗುತ್ತದೆ.

## ಗರುಡ ಪುರಾಣ

### ಪಾರಾಯಣ - ಶ್ರವಣ - ದಾನ - ಮಹಿಮೆಗಳು

**ಬ್ರಹ್ಮದೇವರು:-** ಮರೀಚಿಯೇ ಕೇಳು - ಗರುಡನಿಗೆ ಗರುಡಾಸನನಾದ ವಿಷ್ಣುವು, ಗರುಡಕಲ್ಪದ ವೃತ್ತಾಂತವನ್ನು ಹತ್ತೊಂಬತ್ತು ಸಾವಿರ ಶ್ಲೋಕಗಳಲ್ಲಿ ಹೇಳಿದ್ದಾನೆ. ಮೊದಲು ಪುರಾಣಾರಂಭ ಪ್ರಶ್ನೆ, ಅನಂತರ ಸಂಕ್ಷೇಪದಿಂದ ಸೃಷ್ಟಿ ವರ್ಣನೆ, ಸೂರ್ಯಾದಿಗಳ ಪೂಜಾವಿಧಿ, ದೀಕ್ಷಾವಿಧಿ. ಶ್ರಾದ್ಧಪೂಜಾ, ನವವ್ಯೂಹಪೂಜಾವಿಧಿ, ವೈಷಣವ ಪಂಜರ. ಯೋಗಾಧ್ಯಾಯ, ವಿಷ್ಣು ಸಹಸ್ರನಾಮ ಕೀರ್ತನ, ವಿಷ್ಣು ಧ್ಯಾನ. ಸೂರ್ಯಪೂಜಾ, ಮೃತ್ಯುಂಜಯ ಪೂಜಾ. ಮೂಲಮಂತ್ರ. ಶಿವಪೂಜಾ, ಗೋಪಾಲ ಪೂಜಾ, ತ್ರೈಲೋಕ್ಯ ಮೋಹನ ಶ್ರೀಧರ ಪೂಜಾ, ವಿಷ್ಣು ಪೂಜಾ, ಪಂಚತತ್ವಪೂಜಾ, ಚಕ್ರಪೂಜಾ, ದೇವಪೂಜಾ, ನ್ಯಾಸಾದಿಗಳು, ಸಂಧ್ಯೋಪಾಸನ, ದೇವಾರ್ಚನ ಮಹೇಶ್ವರ ಪೂಜಾ, ಪವಿತ್ರಾರೋಪಣ ಪೂಜಾ, ಮೂರ್ತಿಧ್ಯಾನ, ವಾಸ್ತುಮಾನ, ಪ್ರಾಸಾದ ಲಕ್ಷಣ, ಸರ್ವದೇವ ಪ್ರತಿಷ್ಠಾ, ಪ್ರತ್ಯೇಕವಾಗಿ ಪೂಜಾ ವಿಧಿ, ಅಷ್ಟಾಂಗ ಯೋಗ, ದಾನಧರ್ಮ, ಪ್ರಾಯಶ್ಚಿತ್ತ, ವಿಧಿ, ದ್ವೀಪೇಶ್ವರ ಮತ್ತು ನರಕಗಳ ವರ್ಣನೆ, ಸೂರ್ಯವ್ಯೂಹ, ಜ್ಯೋತಿಷ, ಸಾಮುದ್ರಿಕ ಶಾಸ್ತ್ರ, ಸ್ವರಜ್ಞಾನ, ನೂತನ ರತ್ನಪರೀಕ್ಷಾ, ತೀರ್ಥ ಮಾಹಾತ್ಮ್ಯ, ಗಯಾಮಾಹಾತ್ಮ್ಯ, ವಿಭಾಗ ಪೂರ್ವಕವಾಗಿ ಮನ್ವಂತರ ವರ್ಣನ, ಪಿತೃಗಳ ಉಪಾಖ್ಯಾನ, ವರ್ಣ ಧರ್ಮ, ದ್ರವ್ಯಶುದ್ಧಿ, ಸಮರ್ಪಣ, ಶ್ರಾದ್ಧಕರ್ಮ, ವಿನಾಯಕ ಪೂಜಾ, ಗೃಹಯಜ್ಞ, ಆಶ್ರಮ ಜನನಾಶೌಚ, ಪ್ರೇತಶುದಧಿ, ನೀತಿಶಾಸ್ತ್ರ, ವ್ರತಕಥೆ, ಸೂರ್ಯವಂಶ, ಚಂದ್ರವಂಶ, ಶ್ರೀ ಹರಿಯ ಅವತಾರ ಕಥೆ,

ರಾಮಾಯಣ, ಹರಿವಂಶ, ಭಾರತಗಳ ಆಖ್ಯಾನ, ಆಯುರ್ವೇದ ವಿದಾನ, ಚಿಕಿತ್ಸಾ, ದ್ರವ್ಯಗುಣನಿರೂಪಣ, ರೋಗ ನಾಶಕ ವಿಷ್ಣು ಕವಚ, ತ್ರೈಪುರ ಮಂತ್ರ, ಪ್ರಶ್ನ ಚೂಡಾಮಣಿ, ಆಯುರ್ವೇದ ಔಷಧಿಗಳ ಹೆಸರುಗಳು, ವ್ಯಾಕರಣದ ಊಹಾಪೋಹ, ಛಂದಶ್ಶಾಸ್ತ್ರ, ಸದಾಚಾರ, ಸ್ನಾನವಿಧಿ, ತರ್ಪಣ, ಬಲಿ, ವೈಶ್ವದೇವ, ಸಂಧ್ಯೆ, ಪಾರ್ವಣಕರ್ಮ, ನಿತ್ಯಶ್ರಾದ್ಧ, ಸಪಿಂಡನ, ಧರ್ಮಸಾರ, ಪಾಪಪ್ರಾಯಶ್ಚಿತ್ತ, ಪ್ರತಿ ಸಂಕ್ರಮ, ಯುಗಧರ್ಮ, ಕರ್ಮಫಲ, ಯೋಗಶಾಸ್ತ್ರ, ವಿಷ್ಣು ಭಕ್ತಿ, ಶ್ರೀ ಹರಿ ನಮಸ್ಕಾರ ಫಲ, ವಿಷ್ಣು ಮಹಿಮಾ, ನರಸಿಂಹ ಸ್ತೋತ್ರ, ಜ್ಞಾನಾಮೃತ. ಗುಹಾಷ್ಟಕ ಸ್ತೋತ್ರ, ವಿಷ್ಣ್ವರ್ಚನ ಸ್ತೋತ್ರ, ವೇದಾಂತ ಮತ್ತು ಸಾಂಖ್ಯ ಸಿದ್ಧಾಂತ, ಬ್ರಹ್ಮಜ್ಞಾನ, ಆತ್ಮಾನಂದ, ಗೀತಾಸಾರ ಮತ್ತು ಫಲ ವರ್ಣನ ಈ ವಿಷಯಗಳು ಗರುಡ ಪುರಾಣದ ಪೂರ್ವ ಖಂಡದಲ್ಲಿ ಬಂದಿವೆ.

## ಉತ್ತರ ಖಂಡ

ಇದರ ಉತ್ತರ ಖಂಡದಲ್ಲಿ ಮೊಟ್ಟ ಮೊದಲು ಪ್ರೇತ ಕಲ್ಪದ ವರ್ಣನೆಯಿದೆ. ಗರುಡನು ಪ್ರಶ್ನಿಸಿದಾಗ ವಿಷ್ಣುವು ಧರ್ಮದ ಮಹತ್ವವನ್ನೂ ಯೋಗಿಗಳಿಗೂ ಧರ್ಮದಿಂದಲೇ ಪರಮಗತಿಯುಂಟಾಗುತ್ತದೆಯೆಂದು ನಿರೂಪಿಸಿದನು, ಅನಂತರ ದಾನ ಮುಂತಾದವುಗಳ ಫಲ, ಮತ್ತು ಔರ್ಧ್ವದೇಹಿಕ ಕರ್ಮಗಳನ್ನು ಹೇಳಿದ್ದಾರೆ. ಅನಂತರ ಯಮಲೋಕದ ಮಾರ್ಗದ ವರ್ಣನೆಯಿದೆ. ಇದೇ ಪ್ರಸಂಗದಲ್ಲಿ ಷೋಡಶ (೧೬) ಮಾಸಿಕಗಳ ಫಲವನ್ನು ಸೂಚಿಸುವ ವೃತ್ತಾಂತದ ವರ್ಣನೆಯಿದೆ. ಯಮ ಲೋಕಮಾರ್ಗದ ಕಷ್ಟಗಳನ್ನು ತಪ್ಪಿಸಿಕೊಳ್ಳುವ ಉಪಾಯ ಮತ್ತು ಧರ್ಮರಾಜನ ವೈಭವ ವರ್ಣನೆ, ಪ್ರೇತಗಳಿಗೆ ಉಂಟಾಗುವ ಪೀಡೆಗಳ ವರ್ಣನೆ, ಪ್ರೇತಚಿಹ್ನ ನಿರೂಪಣ, ಪ್ರೇತಚರಿತ ವರ್ಣನೆ, ಪ್ರೇತಪ್ರಾಪ್ತಿಗೆ ಕಾರಣ ಇವುಗಳ ಉಲ್ಲೇಖವಿದೆ. ಅನಂತರ ಪ್ರೇತಕೃತ್ಯದ ವಿಚಾರ, ಸಪಿಂಡೀಕರಣ, ಪ್ರೇತತ್ವದಿಂದ ಮುಕ್ತಿಯಾಗುವದು, ಮೋಕ್ಷಸಾಧಕ ದಾನ, ಆವಶ್ಯಕ ಉತ್ತಮದಾನ, ಪ್ರೇತಕ್ಕೆ ಸುಖವನ್ನು ಕೊಡುವ ಕಾರ್ಯಗಳ ಊಹಾಪೋಹ, ಶಾರೀರಿಕ ನಿರ್ದೇಶ, ಯಮಲೋಕ ವರ್ಣನೆ, ಪ್ರೇತತ್ವದಿಂದ ಉದ್ಧಾರದ ವರ್ಣನೆ, ಕರ್ಮವನ್ನು ಮಾಡುವುದಕ್ಕೆ ಅಧಿಕಾರಿಯ ಕಥನ, ಮರಣಕ್ಕಿಂತ ಮೊದಲು ಮಾಡಬೇಕಾದ ಕರ್ತವ್ಯ. ಮರಣದ ಅನಂತರ ಮಾಡಬೇಕಾದ ಕಾರ್ಯಗಳು, ಮಧ್ಯದ ಷೋಡಶ ಶ್ರಾದ್ಧ ಸ್ವರ್ಗ ಪ್ರಾಪ್ತಿಯನ್ನು ಮಾಡಿಸುವ ಕಾರ್ಯಗಳು. ಸೂತಕ ದಿನಗಳ ಸಂಖ್ಯೆ ನಾರಾಯಣಬಲಿಕರ್ಮ, ವೃಷೋತ್ಸರ್ಗ ಮಾಹಾತ್ಮ್ಯ, ನಿಷಿದ್ಧ ಕರ್ಮತ್ಯಾಗ, ದುರ್ಮರಣದ ಸಂದರ್ಭದಲ್ಲಿ ಮಾಡಬೇಕಾದ ಕರ್ಮಗಳು, ಮನುಷ್ಯರಿಗೆ ದೊರಕುವ ಕರ್ಮದ ಫಲಗಳು, ವಿಷ್ಣುಧ್ಯಾನ ಮತ್ತು ಮೋಕ್ಷಕೋಸ್ಕರ ಕರ್ತವ್ಯ ಅಕರ್ತವ್ಯಗಳು, ಸ್ವರ್ಗ ಪ್ರಾಪ್ತಿಗೆ ವಿಹಿತವಾದ ಕರ್ಮಗಳು, ಸ್ವರ್ಗಸುಖವರ್ಣನ ಭೂಲೋಕ ವರ್ಣನೆ, ಕೆಳಗಿನ ಏಳು ಲೋಕಗಳ ವರ್ಣನೆ, ಮೇಲಿನ ಐದು ಲೋಕಗಳ ವರ್ಣನೆ, ಬ್ರಹ್ಮಾಂಡದ ಸ್ಥಿತಿ, ಬ್ರಹ್ಮಾಂಡದ ಅನೇಕ ಚರಿತ್ರೆ, ಬ್ರಹ್ಮ ಮತ್ತು ಜೀವರ ನಿರೂಪಣ, ಆತ್ಯಂತಿಕ ಪ್ರಲಯದ ವರ್ಣನೆ ಮತ್ತು ಫಲಸ್ತುತಿ. ಇವಿಷ್ಟು ವಿಷಯಗಳು ಸಮಸ್ತಪಾಪನಾಶಕವಾದ ಭೋಗ ಮೋಕ್ಷಪ್ರದವಾದ ಗರುಡಪುರಾಣದಲ್ಲಿ ಬಂದಿವೆ. ಈ ಪುರಾಣವನ್ನು ಬರೆದು ಸುವರ್ಣಮಯವಾದ ಹಂಸ ಪ್ರತಿಮೆಯ ಜೊತೆಗೆ ವಿಷುವಯೋಗದಲ್ಲಿ ಜ್ಞಾನಿಗೆ ದಾನ ಮಾಡಿದವನು ಸ್ವರ್ಗವನ್ನು ಪಡೆಯುತ್ತಾನೆ.

## ಬ್ರಹ್ಮಾಂಡ ಪುರಾಣ ಪರಿಚಯ, ಸಂಕ್ಷಿಪ್ತ ವಿಷಯ ಸೂಚಿ, ಪುರಾಣ ಪರಂಪರಾ, ಪಾರಾಯಣ ಶ್ರವಣ ದಾನಗಳ ಫಲ.

ನಾನು ಈಗ ಬ್ರಹ್ಮಾಂಡಪುರಾಣದ ವರ್ಣನೆಯನ್ನು ಮಾಡಲು ಪ್ರಾರಂಭಿಸುತ್ತೇನೆ. ಇದು ಭವಿಷ್ಯ ಕಲ್ಪದ ಕಥೆಯಿಂದ ಕೂಡಿದೆ. ಇದರಲ್ಲಿ ಹನ್ನೆರಡು ಸಾವಿರ ಶ್ಲೋಕಗಳಿವೆ. ನಾಲ್ಕುಪಾದಗಳಿವೆ. ಮೊದಲನೆಯದು ಪ್ರಕ್ರಿಯಾಪಾದ, ಎರಡನೆಯದು ಅನುಷಂಗಪಾದ, ಮೂರನೆಯದು ಉಪೋದ್ಘಾತ, ನಾಲ್ಕನೆಯದು ಉಪಸಂಹಾರಪಾದ. ಮೊದಲಿನ ಎರಡು ಪಾದಗಳನ್ನು ಪೂರ್ವಭಾಗವೆಂದೂ ಮೂರನೆಯ ಪಾದವನ್ನು ಮಧ್ಯಭಾಗವೆಂದೂ ನಾಲ್ಕನೆಯ ಪಾದವನ್ನು ಉತ್ತರ ಭಾಗವೆಂದೂ ಹೇಳುತ್ತಾರೆ. ಪೂರ್ವಭಾಗದ ಪ್ರಕ್ರಿಯಾ ಪಾದದಲ್ಲಿ ಕರ್ತವ್ಯೋಪದೇಶ, ನೈಮಿಷದ ಆಖ್ಯಾನ ಹಿರಣ್ಯಗರ್ಭದ ಉತ್ಪತ್ತಿ, ಲೋಕರಚನೆ ಇತ್ಯಾದಿ ವಿಷಯ ವರ್ಣನೆಯಿದೆ.

ಎರಡನೆಯ ಅನುಷಂಗಪಾದದಲ್ಲಿ ಕಲ್ಪ ಮತ್ತು ಮನ್ವಂತರಗಳ ವರ್ಣನೆ, ಅನಂತರ ಲೋಕಜ್ಞಾನ, ಮನುಷ್ಯ ಸೃಷ್ಟಿಕಥನ, ರುದ್ರ ಸೃಷ್ಟಿವರ್ಣನ, ಮಹಾದೇವ ವಿಭೂತಿ, ಋಷಿಸರ್ಗ, ಅಗ್ನಿವಿಜಯ, ಕಾಲಸದ್ಭಾವವರ್ಣನ, ಪ್ರಿಯವ್ರತವಂಶ ಪರಿಚಯ, ಭೂಮಿಯ ಉದ್ದ ಅಗಲ, ಭಾರತ ವರ್ಷವರ್ಣನ, ಇತರ ವರ್ಷಗಳ ವರ್ಣನೆ, ಜಂಬೂ ಮೊದಲಾದ ಏಳು ದ್ವೀಪಗಳ ಪರಿಚಯ, ಕೆಳಗಿನ ಲೋಕಗಳ ಅಂದರೆ ಅತಲಾದಿ ಪಾತಾಲಾಂತ ಲೋಕಗಳ ವರ್ಣನ, ಭೂಃಭುವಃ ಮೊದಲಾದ ಮೇಲಿನ ಲೋಕಗಳ ವರ್ಣನೆ, ಗ್ರಹಗತಿ ವಿಶ್ಲೇಷಣ, ಸೌರವ್ಯೂಹ ಕಥನ, ದೇವಗ್ರಹಗಳ ಅನುಕೀರ್ತನ, ಶಿವನಿಗೆ ನೀಲಕಂಠನೆಂಬ ಹೆಸರು ಬರಲು ಕಾರಣ, ಮಹಾದೇವನ ವೈಭವ, ಅಮಾವಾಸ್ಯೆಯ ವರ್ಣನೆ, ಯುಗತತ್ತ್ವ ನಿರೂಪಣ, ಯಜ್ಞ ಪ್ರವರ್ತನೆ, ಕೊನೆಯ ಎರಡು ಯುಗಗಳ ಕಾರ್ಯ, ಯುಗಕ್ಕೆ ಅನುಸಾರವಾಗಿ ಪ್ರಜೆಗಳ ಲಕ್ಷಣ, ಋಷಿಪ್ರವರವರ್ಣನ, ವೇದಗಳ ವಿಭಾಗ ವರ್ಣನೆ, ಸ್ವಾಯಂಭುವ ಮನ್ವಂತರ ನಿರೂಪಣ, ಇತರ ಮನ್ವಂತರಗಳ ನಿರೂಪಣ, ಭೂಮಿಯನ್ನು ಕರೆಯುವುದು (ದೋಹನ) ಚಾಕ್ಷುಷ ಮತ್ತು ಈಗ ಇರುವ ಮನ್ವಂತರಗಳ ಸೃಷ್ಟಿಯ ವರ್ಣನೆ. ಇಲ್ಲಿಗೆ ಪೂರ್ವ ಭಾಗದ ದ್ವಿತೀಯ ಭಾಗವು ಮುಗಿದಿದೆ.

ಸಪ್ತರ್ಷಿವರ್ಣನ, ಪ್ರಜಾಪತಿ ವಂಶ ನಿರೂಪಣ, ಅದರಿಂದ ದೇವತೆಗಳೇ ಮೊದಲಾದವರ ಉತ್ಪತ್ತಿ ಅನಂತರ ವಿಜಯಾಭಿಲಾಷೆ ಮತ್ತು ಮರುದ್ಗಣಗಳ ಉತ್ಪತ್ತಿ ಕಥನವಿದೆ. ಕಶ್ಯಪರ ಸಂತಾನದ ವರ್ಣನ, ಋಷಿವಂಶ ನಿರೂಪಣ, ಪಿತೃಕಲ್ಪ ಶ್ರಾದ ಕಲ್ಪ, ವೈವಸ್ವತ ಮನುವಿನ ಉತ್ಪತ್ತಿ ಅವನು ಮಾಡಿದ ಸೃಷ್ಟಿ, ಮನುಪುತ್ರ ವಂಶ, ಗಾಂಧರ್ವ ನಿರೂಪಣ, ಇಕ್ಷ್ವಾಕು ವಂಶ ಮತ್ತು ಅತ್ರಿ ವಂಶ ಕಥನ, ಅಮಾವಸುವಿನ ವಂಶ, ಅದ್ಭುತವಾದ ರಜಿಯ ಚರಿತ್ರೆ, ಯಯಾತಿ ಚರಿತ್ರೆ, ಯದುವಂಶ ನಿರೂಪಣ, ಕಾರ್ತವೀರ್ಯಚರಿತ ಪರಶುರಾಮ ಚರಿತ, ವೃಷ್ಣಿವಂಶ ವರ್ಣನೆ, ಸಗರನ ಉತ್ಪತ್ತಿ, ಭಾರ್ಗವ (ಪರಶುರಾಮ) ಚರಿತ್ರ, ಕಾರ್ತವೀರ್ಯಾಜುನ ವಧೆಯ ಕತೆ, ಸಗರ ಚರಿತ್ರೆ, ಭೃಗುವಂಶದ ಔರ್ವನ ಕಥೆ, ದೇವಾಸುರ ಸಂಗ್ರಾಮದ ಕಥೆ, ಕೃಷ್ಣಾವತಾರದ ವರ್ಣನೆ, ಶುಕ್ರಾಚಾರ್ಯರು ಮಾಡಿದ ಇಂದ್ರನ ಪವಿತ್ರವಾದ ಸ್ತೋತ್ರ, ವಿಷ್ಣುಮಾಹಾತ್ಮ್ಯದ ಕಥನ, ಬಲಿವಂಶ ನಿರೂಪಣ, ಕಲಿಯುಗದಲ್ಲಿ ಹುಟ್ಟುವ ರಾಜರ ಚರಿತ್ರೆ, ಇವು ಬ್ರಹ್ಮಾಂಡ ಪುರಾಣದ ಮಧ್ಯಭಾಗದ ಉಪೋದ್ಘಾತಪಾದದ ವಿಷಯಗಳು.

# ಉಪಸಂಹಾರ ಪಾದ

ಈಗ ಉತ್ತರ ಭಾಗದ ನಾಲ್ಕನೆಯದಾದ ಉಪಸಂಹಾರ ಪಾದದ ವಿಷಯಗಳನ್ನು ವರ್ಣಿಸುತ್ತೇನೆ ಕೇಳು - ಇದರಲ್ಲಿ ವೈವಸ್ವತಮನ್ವಂತರದ ಕಥೆಯು ವಿಸ್ತಾರವಾಗಿ ಯಥಾವತ್ತಾಗಿ ಬಂದಿದೆ, ಹಿಂದೆ ವಿಸ್ತಾರವಾಗಿ ಬಂದಿರುವ ಕಥೆಗಳು ಇಲ್ಲಿ ಸಂಕ್ಷೇಪವಾಗಿ ನಿರೂಪಿತವಾಗಿವೆ. ಭವಿಷ್ಯದಲ್ಲಿ ಬರುವ ಮನುಗಳ ಚರಿತ್ರೆ ಇಲ್ಲಿ ಬಂದಿದೆ. ಅನಂತರ ಕಲ್ಪ ಪ್ರಲಯದ ನಿರ್ದೇಶ, ಕಾಲಮಾನ ಲಕ್ಷಣಾನುಸಾರವಾಗಿ ಹದಿನಾಲ್ಕು ಲೋಕಗಳ ವರ್ಣನ, ವಿರುದ್ಧಕರ್ಮಾಚರಣದಿಂದ ಬರುವ ನರಕಗಳ ವರ್ಣನ, ಮನೋಮಯಪುರದ ಆಖ್ಯಾನ, ಪ್ರಾಕೃತ ಪ್ರಲಯ ಪ್ರತಿಪಾದ, ಶಿವಲೋಕ ಶಿವಮಂದಿರಗಳ ವರ್ಣನೆ, ಸತ್ವ ರಜಸ್ ತಮೋಗುಣಗಳ ಸಂಬಂಧದಿಂದ ಜೀವರಿಗೆ ಬರುವ ಮೂರು ವಿಧವಾದ ಗತಿ, ಅನಂತರ ಅನ್ವಯ ವ್ಯತಿರೇಕಗಳಿಂದ ಅನಿರ್ದೇಶ್ಯ ಅತರ್ಕ್ಯ ಪರಬ್ರಹ್ಮ ಪರಮಾತ್ಮನ ಸ್ವರೂಪದ ಪ್ರತಿಪಾದನ ಎಂಬ ವಿಷಯಗಳೊಂದಿಗೆ ಉಪಸಂಹಾರಪಾದವು ಮುಗಿಯುತ್ತದೆ. ಈ ರೀತಿ ನಿನಗೆ ನಾಲ್ಕು ಪಾದಗಳುಳ್ಳ ಬ್ರಹ್ಮಾಂಡ ಪುರಾಣದ ಪರಿಚಯವನ್ನು ಮಾಡಿಸಿದ್ದೇನೆ. ಈ ಹದಿನೆಂಟನೆಯ ಪುರಾಣವು ಸಾರಕ್ಕಿಂತಲೂ ಸಾರತರ. ಇದಕ್ಕೆ ಎಲ್ಲಿಯೂ ಉಪಮೆಯೇ ಇಲ್ಲ. ಒಟ್ಟು ಪುರಾಣ ವಾಙ್ಮಯ ಎಲ್ಲವೂ ನಾಲ್ಕು ಲಕ್ಷ ಶ್ಲೋಕಗಳಲ್ಲಿ ಸಂಗ್ರಹಿತ ಆಗಿದ್ದು ಅದನ್ನೇ ದಿವ್ಯ ಜ್ಞಾನಿಯಾದ ಪರಾಶರನಂದನರಾದ ವೇದವ್ಯಾಸಮಹರ್ಷಿಗಳು ಹದಿನೆಂಟು ಪುರಾಣಗಳ ರೂಪದಲ್ಲಿ ವಿಭಾಗಿಸಿದ್ದಾರೆ. ಬೇರೆ ಬೇರೆಯಾಗಿ ಹೇಳಿದ್ದಾರೆ. ದೀನಾನುಕಂಪಿಗಳಾದ. ಧರ್ಮಶೀಲರಾದ ಮುನಿಗಳು ನನ್ನಿಂದಲೂ ವಿಷಯಗಳನ್ನು ಕೇಳಿ ತಿಳಿದು ಅವುಗಳನ್ನು ಎಲ್ಲ ಲೋಕದ ಜನರ ಉಪಕಾರಕ್ಕಾಗಿ ಪ್ರಕಾಶಿಸಿದ್ದಾರೆ.

ಹಿಂದೆ ನಾನು ವಸಿಷ್ಠರಿಗೆ ಈ ಪುರಾಣದ ಉಪದೇಶವನ್ನು ಮಾಡಿದ್ದೆನು. ವಸಿಷ್ಠರು ಶಕ್ತಿಪುತ್ರರಾದ ಪರಾಶರರಿಗೆ, ಪರಾಶರರು ಜಾತೂಕರ್ಣ್ಯನಿಗೆ ಈ ಪುರಾಣವನ್ನು ಉಪದೇಶಿಸಿದರು. ಜಾತೂಕರ್ಣ್ಯರಿಂದ ವಾಯುದೇವರ ಮುಖಾಂತರ ಪ್ರಕಟವಾದ ಈ ಪುರಾಣವನ್ನು ಪ್ರಮಾಣವೆಂಬುದಾಗಿ ತಿಳಿದು ವ್ಯಾಸಮಹರ್ಷಿಗಳು ಈ ಲೋಕದಲ್ಲಿ ಪ್ರಚುರಪಡಿಸಿದ್ದಾರೆ. ವತ್ಸ, ಏಕಾಗ್ರಚಿತ್ತನಾಗಿ ಈ ಪುರಾಣದ ಪಾರಾಯಣ ಮತ್ತು ಶ್ರವಣ ಮಾಡತಕ್ಕವನು, ಈ ಲೋಕದಲ್ಲಿ ಸಮಸ್ತ ಪಾಪರಹಿತನಾಗಿ, ರೋಗ ಶೋಕ ರಹಿತವಾದ ಉತ್ತಮ ಲೋಕವನ್ನು ಪಡೆಯುತ್ತಾನೆ. ಈ ಪುರಾಣವನ್ನು ಬರೆದು, ಸುವರ್ಣಮಯ ವಾದ ಸಿಂಹಾಸನದ ಮೇಲಿಟ್ಟು, ವಸ್ತ್ರದಿಂದ ಆಚ್ಛಾದಿಸಿ ಜ್ಞಾನಿಗೆ ದಾನ ಮಾಡಿದವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಇದರಲ್ಲಿ ಅನ್ಯಥಾ ವಿಚಾರ ಮಾಡಬೇಕಾಗಿಲ್ಲ.

ಮರೀಚಿಯೇ, ನಿನಗೆ ನಾನು ಹದಿನೆಂಟು ಪುರಾಣಗಳನ್ನು ಸಂಕ್ಷೇಪವಾಗಿ ವರ್ಣಿಸಿದ್ದೇನೆ. ಮಾನವನು ಈ ಪುರಾಣಗಳ ವಿಷಯವನ್ನು ವಿಸ್ತಾರವಾಗಿ ಕೇಳಬೇಕು. ಯಾವ ಉತ್ತಮವಾದ ಸಾತ್ವಿಕ ಮಾನವನು ಹದಿನೆಂಟು ಪುರಾಣಗಳನ್ನು ಪಠಿಸುತ್ತಾನೋ, ಅಥವಾ ಕೇಳುತ್ತಾನೋ, ಅವನು ಈ ಸಂಸಾರದಲ್ಲಿ ಪುನಃ ಜನ್ಮವನ್ನು ಹೊಂದುವುದಿಲ್ಲ. ಈಗ ನಾನು ನಿನಗೆ ಹೇಳಿದ ವಿಷಯವೆಲ್ಲವೂ ಪುರಾಣಗಳ ಸೂಚನಾ ರೂಪವಾದ ಸೂತ್ರ ಮಾತ್ರ. ಪುರಾಣ ಫಲಗಳನ್ನು ಅಪೇಕ್ಷಿಸುವ ಮನುಷ್ಯನು ನಿತ್ಯದಲ್ಲಿಯೂ ಇದನ್ನು ಆವರ್ತಿಸಬೇಕು. ಡಾಂಭಿಕನೂ ಪಾಪಕರವಾದ ಆಚಾರವುಳ್ಳವನೂ ದೇವತಾಗುರುನಿಂದೆ

ಮಾಡುವವನೂ, ಸಜ್ಜನರ ಮತ್ತು ಮಹಾತ್ಮರ ದ್ವೇಷ ಮಾಡುವವನೂ, ಮೋಸಗಾರನಾದವನೂ ಈ ಪುರಾಣವನ್ನು ಕೇಳಬಾರದು, ಅಂತಹವನಿಗೆ ಉಪದೇಶ ಮಾಡಬಾರದು. ಶಾಂತ ಸ್ವಭಾವದ ಮನೋನಿಗ್ರಹದಿಂದ ಕೂಡಿದ, ಲೋಕ ಸೇವಾ ಪರಾಯಣನಾದ, ದ್ವೇಷರಹಿತನಾದ ಪವಿತ್ರನಾದ, ವಿಷ್ಣು ಭಕ್ತನಾದ ಸಾತ್ವಿಕ ಪುರುಷನಿಗೆ ಪುರಾಣಗಳ ಉಪದೇಶವನ್ನು ಮಾಡಬೇಕು.

## ವರ್ಷದ ಹನ್ನೆರಡು ತಿಂಗಳೂ ಪ್ರತಿಪದಾದಿಪಾಡ್ಯಾತಿಥಿಗಳ ವ್ರತಗಳು ಮತ್ತು ಅವುಗಳಲ್ಲಿ ಮಾಡಬೇಕಾದ ಕರ್ತವ್ಯಗಳು

**ನಾರದ:-** ಮಹಾನುಭಾವ, ಚತುರ್ಮುಖ ಬ್ರಹ್ಮನು ಮರೀಚಿಗೆ ಹೇಳಿದ ಪುರಾಣಗಳ ಸೂತ್ರಾತ್ಮಕವಾದ ಪರಿಚಯವನ್ನು ಕೇಳಿದ್ದಾಯಿತು. ವ್ರತಗಳ ಸರಿಯಾದ ನಿಶ್ಚಯಕ್ಕಾಗಿ, ತಿಥಿಗಳ ವಿಷಯದಲ್ಲಿ ನನಗೆ ಸರಿಯಾದ ತಿಳುವಳಿಕೆಯನ್ನು ಕೊಡಿರಿ. ಯಾವ ಮಾಸದಲ್ಲಿ, ಯಾವ ತಿಥಿಯಲ್ಲಿ ಯಾರು-ಯಾವ ರೀತಿಯ ಉಪಾಸನೆ ಮಾಡಿದ್ದಾರೆ? ಮಾಡಬೇಕು? ಪೂಜೆ ಇತ್ಯಾದಿಗಳ ವಿಧಾನವೇನು? ಇದೆಲ್ಲವನ್ನು ಈಗ ಹೇಳಿರಿ.

## ಸೌರಿ ವ್ರತ ಅಥವಾ ಆರೋಗ್ಯ ವ್ರತ

**ಸನಾತರು:-** ನಾರದ! ಕೇಳು, ಈಗ ನಾನು ತಿಥಿಗಳ ಬೇರೆ ಬೇರೆಯಾದ ವ್ರತಗಳನ್ನು ವರ್ಣಿಸುತ್ತೇನೆ. ಆಯಾತಿಥಿಗಳ ದೇವತೆಗಳ ಕ್ರಮದಿಂದ, ಬೇರೆ ಬೇರೆ ವ್ರತಗಳ ವಿಧಾನವಿದೆ. ಚೈತ್ರಮಾಸದ ಶುಕ್ಲಪಕ್ಷದ ಪಾಡ್ಯಾದ ದಿನದಂದು ಸೂರ್ಯೋದಯ ಕಾಲದಲ್ಲಿ ಬ್ರಹ್ಮನು ಸಮಸ್ತ ಜಗತ್ತನ್ನು ಸೃಷ್ಟಿಸಿದನು. ಆದ್ದರಿಂದ ವರ್ಷದ ಆದಿಯಲ್ಲಿ ವಸಂತ ಋತುವಿನ ಆದಿಯಲ್ಲಿ ಬಲಿರಾಜ್ಯದ ದಿನ (ಬಲಿ ಪಾಡ್ಯ)ದಲ್ಲಿ ಅಮಾವಾಸ್ಯಾದಿನದಲ್ಲಿ ಪ್ರತಿಪದಾ ತಿಥಿಯು ಬಂದಾಗ ವಿದ್ವಾಂಸರು ಈ ವ್ರತವನ್ನು ಮಾಡಬೇಕೆಂದು ಹೇಳುತ್ತಾರೆ. ಪ್ರತಿಪದಾ ತಿಥಿಯು ಪೂರ್ವವಿದ್ಧವಾದಾಗಲೇ ಈ ವ್ರತವನ್ನು ಮಾಡಬೇಕು. ಆ ದಿವಸ ಮಹಾಶಾಂತಿಯನ್ನು ಮಾಡಬೇಕು, ಮಹಾ ಶಾಂತಿಯು ಪಾಪನಾಶಕ, ಉತ್ಪಾತ ಶಾಂತಿಕಾರಕ, ಮತ್ತು ಕಲಿಯುಗದ ಎಲ್ಲ ದುಷ್ಕರ್ಮಗಳ ಪರಿಹಾರಕವಾಗಿದೆ. ಅಷ್ಟೇ ಅಲ್ಲದೆ ಅದು ಆಯುಷ್ಯಪ್ರದ ಪುಷ್ಟಿಕಾರಕ, ಮತ್ತು ಧನ ಸೌಭಾಗ್ಯವರ್ಧಕವಾಗಿದೆ. ಅದು ಪರಮ ಮಂಗಲಮಯ, ಶಾಂತಿಕರ ಪರಮ ಪವಿತ್ರ, ಇಹಲೋಕ ಪರಲೋಕಗಳಲ್ಲಿ ಸುಖಪ್ರದವಾಗಿದೆ. ಪಾಡ್ಯಾ ತಿಥಿ ದಿವಸ, ಮೊದಲು ಅಗ್ನಿರೂಪಧಾರಿಯಾದ ಬ್ರಹ್ಮನ ಪೂಜೆಯನ್ನು ಮಾಡಬೇಕು. ಅನಂತರ ಕ್ರಮವಾಗಿ ಎಲ್ಲ ದೇವತೆಗಳನ್ನು ಪ್ರತ್ಯೇಕವಾಗಿ ಪೂಜಿಸಬೇಕು. ಅನಂತರ 'ಓಂ ಬ್ರಹ್ಮಣೇನಮಃ' ಅಥವಾ 'ಓಂ ನಮೋ ಬ್ರಹ್ಮಣೇ' ಇತ್ಯಾದಿಯಾಗಿ 'ಓಂನಮಃ' ಶಬ್ದ ಪೂರ್ವಕವಾಗಿ ನಮಸ್ಕಾರ ಮಾಡಬೇಕು. ಅನಂತರ ಜಲ, ತಿಲ, ಕುಶ ಮತ್ತು ಅಕ್ಷತ ಸಹಿತವಾಗಿ ವಸ್ತ್ರ ದಕ್ಷಿಣೆಗಳನ್ನು ವೇದಜ್ಞನಾದ ಬ್ರಾಹ್ಮಣನಿಗೆ ಕೊಟ್ಟರೆ ಈ ವ್ರತವು ಪೂರ್ತಿಯಾಗುತ್ತದೆ. ಈ ವ್ರತವನ್ನು ಸೌರಿ ವ್ರತ ಎಂದು ಹೇಳುತ್ತಾರೆ. (ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಈ ತಿಥಿಯಂದು ಆರೋಗ್ಯ ವ್ರತವನ್ನು ಮಾಡಬೇಕೆಂದು ಹೇಳಿದ್ದಾರೆ) ಈ ದಿವಸ ವಿದ್ಯಾವ್ರತವನ್ನು ಹೇಳಿದ್ದಾರೆ. ಇದೇ ದಿನ ಶ್ರೀಕೃಷ್ಣನು ಧರ್ಮರಾಜನಿಗೆ ತಿಲವ್ರತವನ್ನು ಮಾಡಲು ಹೇಳಿದ್ದಾನೆ (ಭವಿಷ್ಯೋತ್ತರ ಪುರಾಣದಲ್ಲಿ ಇದರ ವಿಶೇಷ ವಿಚಾರವನ್ನು ಹೇಳಿದ್ದಾರೆ).

## ಕರವೀರವ್ರತ

ಅನಂತರ ಜ್ಯೇಷ್ಠಮಾಸದ ಕರವೀರವ್ರತ. ಪ್ರತಿಪದೆಯ ಸೂರ್ಯೋದಯಕಾಲದಲ್ಲಿ ದೇವಮಂದಿರದ ಪುಷ್ಪವಾಟಿಕೆಯಲ್ಲಿ ಬೆಳೆದ ಕಣಗಿಲೆ ಗಿಡದ ಪೂಜೆ ಮಾಡಬೇಕು. ಆ ವೃಕ್ಷಕ್ಕೆ ಕೆಂಪು ದಾರವನ್ನು ಸುತ್ತಿ ಗಂಧ, ಚಂದನ, ಧೂಪಾದಿಗಳಿಂದ ಪೂಜಿಸಿ ಸಪ್ತಧಾನ್ಯಗಳ ಅಂಕುರ, ಕಿತ್ತಳೆ ಹಣ್ಣು, ಬೀಜೌರ ಮತ್ತು ನಿಂಬೆಹಣ್ಣುಗಳ ನಿವೇದನ ಮಾಡಿ ಅದನ್ನು ಪೂಜಿಸಬೇಕು. ಅನಂತರ ಅಕ್ಷತ ಜಲಗಳಿಂದ ಮರದ ಬುಡಕ್ಕೆ ನೀರನ್ನು ಚಿಮುಕಿಸಿ ಈ ಮಂತ್ರದಿಂದ ಕ್ಷಮಾ ಪ್ರಾರ್ಥನಾ ಮಾಡಬೇಕು.

**ಕರವೀರವೃಷಾವಾಸ ನಮಸ್ತೇ ಭಾನುವಲ್ಲಭ ।**
**ಮೌಲಿಮಂಡನ ದುರ್ಗಾದಿ ದೇವಾನಾಂ ಸತತಂ ಪ್ರಿಯ ॥**
**(ನಾ. ಪು. ೯೯೦ - ೧೭)**

ಕರವೀರ ನೀನು ಧರ್ಮದ ನಿವಾಸ ಸ್ಥಾನನಾಗಿದ್ದಿ. ಮತ್ತು ಸೂರ್ಯನಿಗೆ ಪ್ರೀತಿ ಪಾತ್ರ (ಪುತ್ರ) ನಾಗಿರುವೆ. ದುರ್ಗಾದಿ ದೇವತೆಗಳ ಶಿರಸ್ಸಿಗೆ ಅಲಂಕಾರವಾಗಿರುವ ನೀನು ಅವರಿಗೆ ಅತ್ಯಂತ ಪ್ರಿಯನಾಗಿರುವೆ ನಿನಗೆ ನಮಸ್ಕಾರ. ಅದರ ನಂತರ ಆಕೃಷ್ಣೇನ ಎಂಬ ಮಂತ್ರವನ್ನು ಹೇಳಿ ಕ್ಷಮಾ ಪ್ರಾರ್ಥನೆ ಮಾಡಬೇಕು.

**ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ**
**ಹಿರಣ್ಮಯೇನ ಸವಿತಾ ರಥೇನ ದೇವೋ ಯಾತಿ ಭುವನಾನಿ ಪಶ್ಯನ್ ॥**

ಈ ರೀತಿ ಭಕ್ತಿಪೂರ್ವಕವಾಗಿ ಪೂಜೆ ಮಾಡಿ ದ್ವಿಜರಿಗೆ ದಕ್ಷಿಣೆ ಕೊಡಬೇಕು. ವೃಕ್ಷದ ಪ್ರದಕ್ಷಿಣೆ ಮಾಡಿ ಮನೆಗೆ ಹೋಗಬೇಕು. ಭವಿಷ್ಯೋತ್ತರ ಪುರಾಣದಲ್ಲಿ ಇದರ ವಿಶೇಷ ವಿಧಿಯನ್ನು ಹೇಳಿದ್ದಾರೆ. ಈ ವ್ರತವನ್ನು ಕರವೀರ ವ್ರತ ಎಂದೂ ಕರೆದಿದ್ದಾರೆ.

## ರೋಚಕ ವ್ರತ

ಶ್ರಾವಣ ಶುಕ್ಲ ಪ್ರತಿಪದೆಯಿಂದ ಅತ್ಯುತ್ತಮವಾದ ರೋಚಕ ವ್ರತವು ಬರುತ್ತದೆ. ಇದು ಲಕ್ಷ್ಮೀಪ್ರದ ಮತ್ತು ಬುದ್ಧಿಪ್ರದ ಹಾಗೂ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯಗಳನ್ನು ಸಾಧಿಸುತ್ತದೆ. ಸೋಮವಾರದಿಂದ ಕೂಡಿದ ಶ್ರಾವಣ ಶುಕ್ಲಪ್ರತಿಪದೆಯಿಂದ ಆರಂಭಿಸಿ ಅಥವಾ ಶ್ರಾವಣದ ಮೊದಲನೆಯ ಸೋಮವಾರದಿಂದ ಆರಂಭಿಸಿ ಮೂರೂವರೆ ತಿಂಗಳೂ ಈ ವ್ರತವನ್ನು ಮಾಡಬೇಕು. ಈ ವ್ರತದಲ್ಲಿ ಪ್ರತಿದಿನವೂ ಸೋಮೇಶ್ವರನೆಂಬ ಹೆಸರುಳ್ಳ ಈಶ್ವರನನ್ನು ಬಿಲ್ವಪತ್ರೆಯಿಂದ ಪೂಜಿಸಬೇಕು. ಕಾರ್ತಿಕ ಶುಕ್ಲ ಚತುರ್ದಶಿಯ ವರೆಗೆ ಈ ನಿಯಮದಿಂದ ಪೂಜೆಯನ್ನು ಮಾಡಿ, ಆ ದಿನ ಉಪವಾಸವಿದ್ದು, ವ್ರತಪಾರಾಯಣಗೈದ ಪುರುಷನು ಹುಣ್ಣಿಮೆಯ ದಿನ ಪುನಃ ಶಂಕರನ ಪೂಜೆಯನ್ನು ಮಾಡಬೇಕು. ಅನಂತರ ಬಿದಿರಿನ ಮೊರದಲ್ಲಿ ಸುವರ್ಣ ಸಹಿತ ಪವಿತ್ರ ಮತ್ತು ಅಧಿಕವಾದ ವಾಯನ ಸಂಕಲ್ಪ ಮಾಡಿ ಜ್ಞಾನಿಗಳಿಗೆ ದಾನ ಕೊಡಬೇಕು. ಇದು ದೇವತೆಯ ಪ್ರಸನ್ನತೆಗೆ ಉತ್ತಮವಾದ ಉಪಾಯವು. ಮುನೀಶ್ವರನೇ ಈ ದಾನವು ಧನವೃದ್ಧಿಕರವಾಗಿದೆ.

## ಮೌನವ್ರತ

ಭಾದ್ರಪದ ಶುಕ್ಲಪಕ್ಷದ ಪಾಡ್ಯದ ದಿನ ಕೆಲವರ ಅಭಿಪ್ರಾಯದಂತೆ ಮಹತ್ತಮವ್ರತ ಮತ್ತೆ ಕೆಲವರ ಅಭಿಪ್ರಾಯದಂತೆ ''ಮೌನವ್ರತ''ವನ್ನು ಆಚರಿಸಬೇಕು. ಸ್ಕಂದ

ಪುರಾಣದಲ್ಲಿ ಇವೆರಡು ವ್ರತಗಳ ವಿಶೇಷವಾದ ಉಲ್ಲೇಖವಿದೆ. ಈ ವ್ರತದಲ್ಲಿ ಈಶ್ವರನ ಪೂಜೆ ಮಾಡಬೇಕು. ಆ ದಿನ ಮೌನವಾಗಿದ್ದು ನೈವೇದ್ಯ ಪದಾರ್ಥವನ್ನು ತಯಾರಿಸಬೇಕು. ನಲವತ್ತು ಎಂಟು ಹಣ್ಣುಗಳು ಮತ್ತು ಅಪೂಪಗಳನ್ನು ತಯಾರಿಸಿ ಅವುಗಳಲ್ಲಿ ಹದಿನಾರನ್ನು ಜ್ಞಾನಿಗಳಿಗೆ ದಾನ ಮಾಡಿ ಹದಿನಾರನ್ನು ದೇವರಿಗೆ ನೈವೇದ್ಯವಾಗಿಟ್ಟು ಉಳಿದ ಹದಿನಾರನ್ನು ತಾನು ಉಪಯೋಗಿಸಬೇಕು. ಸುವರ್ಣಮಯವಾದ ಶಿವನಪ್ರತಿಮೆಯನ್ನು ತಯಾರಿಸಿ ಅದನ್ನು ಕಲಶದ ಮೇಲಿಟ್ಟು ವಿಧ್ಯುಕ್ತವಾಗಿ ಪೂಜಿಸಬೇಕು. ಅನಂತರ ಅವೆಲ್ಲವನ್ನು ಒಂದು ಗೋವಿನ ಸಹಿತವಾಗಿ ಆಚಾರ್ಯನಿಗೆ ದಾನವಾಗಿ ಕೊಡಬೇಕು, ದೇವ ದೇವ ಮಹಾದೇವನ ಈ ವ್ರತವನ್ನು ಹದಿನಾಲ್ಕು ವರ್ಷ ಕಾಲ ಆಚರಿಸಿದರೆ ಇಹಲೋಕದಲ್ಲಿ ನಾನಾ ರೀತಿಯ ಭೋಗಗಳನ್ನು ಅನುಭವಿಸಿ ಅನಂತರ ದೇಹಾವಸಾನದಲ್ಲಿ ಶಿವ ಲೋಕವನ್ನು ಸೇರುತ್ತಾನೆ.

## ಅಶೋಕ ವ್ರತ

ಆಶ್ವಯುಜ ಶುಕ್ಲ ಪಾಡ್ಯದ ದಿನ ಅಶೋಕ ವ್ರತವನ್ನು ಆಚರಿಸಿದರೆ ಮನುಷ್ಯನು ಶೋಕ ರಹಿತನಾಗಿ ಧನಧಾನ್ಯ ಸಂಪನ್ನನಾಗುತ್ತಾನೆ. ಈ ವ್ರತದಲ್ಲಿ ನಿಯಮ ಪೂರ್ವಕವಾಗಿದ್ದು ಅಶೋಕ ವೃಕ್ಷದ ಪೂಜೆಯನ್ನು ಮಾಡಬೇಕು. ಹನ್ನೆರಡನೆಯ ವರ್ಷದ ವ್ರತದಲ್ಲಿ ಅಶೋಕ ವೃಕ್ಷದ ಪ್ರತಿಮೆಯನ್ನು ಮಾಡಿಸಿ ಅದನ್ನು ಪೂಜಿಸಿ ಗುರುವಿಗೆ ದಾನ ಕೊಟ್ಟರೆ, ಶಿವಲೋಕ ಪ್ರಾಪ್ತಿಯಾಗುತ್ತದೆ. ಇದೇ ಪ್ರತಿಪದೆಯ ದಿನ "ನವರಾತ್ರ ವ್ರತ" ವನ್ನು ಪ್ರಾರಂಭಿಸಬೇಕು. ಪೂರ್ವಾಹ್ನದಲ್ಲಿ ಕಲಶ ಸ್ಥಾಪನ ಪೂರ್ವಕವಾಗಿ ದೇವಿಯನ್ನು ಪೂಜಿಸಬೇಕು. ಗೋಧಿ ಮತ್ತು ಯವದ ಅಂಕುರವನ್ನು ಬೆಳೆಸಿ ಪ್ರತಿದಿನ ತನ್ನ ಶಕ್ತಿಗೆ ಅನುಸಾರವಾಗಿ, ಉಪವಾಸ, ಅಯಾಚಿತ ಅಥವಾ ಏಕಭುಕ್ತದಿಂದ ಇರಬೇಕು. ಪೂಜಾಪಾರಾಯಣ ಅಥವಾ ಜಪವನ್ನು ಮಾಡುತ್ತಾ ಇರಬೇಕು. ಭೋಗ ಮೋಕ್ಷಗಳ ಅಭಿಲಾಷೆಯುಳ್ಳ ಮನುಷ್ಯನು ಮಾರ್ಕಂಡೇಯ ಪುರಾಣದಲ್ಲಿ ಹೇಳಿರುವ ದೇವಿಯ ಮೂರು ಚರಿತ್ರಗಳನ್ನು ಒಂಭತ್ತು ದಿನಗಳಲ್ಲಿಯೂ ಪಾರಾಯಣ ಮಾಡಬೇಕು. ನವರಾತ್ರಿಯಲ್ಲಿ ಭೋಜನ ವಸ್ತ್ರ ಮುಂತಾದವುಗಳಿಂದ ಕುಮಾರೀ ಪೂಜನವು ಅತ್ಯಂತ ಶ್ರೇಷ್ಠವು, ಈ ರೀತಿ ವ್ರತಾಚರಣೆ ಮಾಡಿದ ಮನುಷ್ಯನು ದುರ್ಗೆಯ ಕೃಪೆಯಿಂದ ಇಹಲೋಕದಲ್ಲಿ ಸರ್ವ ಸಿದ್ಧಿಯನ್ನು ಪಡೆಯುತ್ತಾನೆ. ಕಾರ್ತಿಕಶುಕ್ಲ ಪ್ರತಿಪದೆಯ ದಿನ ನವರಾತ್ರಿಯಲ್ಲಿ ಹೇಳಿದಂತೆಯೇ ನಿಯಮಗಳನ್ನು ಪಾಲಿಸಬೇಕು. ವಿಶೇಷವಾಗಿ ಅನ್ನಕೂಟವೆಂಬ ಕಾರ್ಯವೂ ಮಹಾವಿಷ್ಣುವಿನ ಪ್ರೀತಿಯನ್ನು ಹೆಚ್ಚಿಸುತ್ತದೆ. ಆ ದಿನ ಗೊವರ್ಧನ ಪೂಜೆಗೋಸ್ಕರ ಎಲ್ಲಾ ರೀತಿಯ ಪಾಕ ಮತ್ತು ಹಾಲು ಮೊಸರು ಮುಂತಾದ ಗೋರಸವನ್ನು ಸಂಗ್ರಹಿಸಿ, ಎಲ್ಲವನ್ನು ಸೇರಿಸಿ (ಅನ್ನಕೂಟ) ಅನ್ನದರಾಶಿಯನ್ನು ತಯಾರಿಸಬೇಕು. ಅದನ್ನು ಪೂಜಿಸಿದರೆ ಎಲ್ಲಾ ಮನೋರಥಗಳ ಸಿದ್ಧಿಯುಂಟಾಗುತ್ತದೆ. ಸಾಯಂಕಾಲ ಗೋವುಗಳ ಸಮೇತವಾಗಿ ಗೋವರ್ಧನ ಪರ್ವತದ ಪೂಜೆಯನ್ನು ಮಾಡಿ ಪರ್ವತದ ಪ್ರದಕ್ಷಿಣೆ ಮಾಡಿದರೆ ಭೋಗ ಮೋಕ್ಷಗಳ ಪ್ರಾಪ್ತಿಯಾಗುತ್ತದೆ.

## ಧನವ್ರತ

ಮಾರ್ಗಶಿರ ಶುಕ್ಲ ಪಾಡ್ಯ ದಿನ "ಧನವ್ರತ"ವನ್ನು ಮಾಡಬೇಕು. ರಾತ್ರಿಯಲ್ಲಿ ವಿಷ್ಣುವನ್ನು ಪೂಜಿಸಿ, ಹೋಮವನ್ನು ಮಾಡಿ, ಅಗ್ನಿಯ ಸುವರ್ಣಮಯವಾದ

ಪ್ರತಿಮೆಯನ್ನು ಎರಡು ಕೆಂಪು ಬಟ್ಟೆಗಳಿಂದ ಸುತ್ತಿ ಜ್ಞಾನಿಗೆ ದಾನ ಕೊಡಬೇಕು. ಇದರಿಂದ ಈ ಭೂಮಿಯಲ್ಲಿ ಧನ ಧಾನ್ಯ ಸಂಪತ್ತು ಉಂಟಾಗುತ್ತದೆ. ಅಗ್ನಿಯು ಭಕ್ತನ ಸಮಸ್ತ ಪಾಪಗಳನ್ನೂ ಪರಿಹರಿಸುತ್ತಾನೆ. ಮತ್ತು ಭಕ್ತನಿಗೆ ವಿಷ್ಣುಲೋಕ ಪ್ರಾಪ್ತಿಯೂ ಆಗುತ್ತದೆ.

## ಏಕಭುಕ್ತ ವ್ರತ

ಪುಷ್ಯ ಶುದ್ಧ ಪಾಡ್ಯ ದಿನ ಭಕ್ತಿಯಿಂದ ಸೂರ್ಯನ ಪೂಜೆ ಮಾಡಿ ಏಕಭುಕ್ತವ್ರತವನ್ನು ಆಚರಿಸಿದವನು ಸೂರ್ಯ ಲೋಕಕ್ಕೆ ಹೋಗುತ್ತಾನೆ. ಮಾಘ ಶುಕ್ಲ ಪಾಡ್ಯದ ದಿನ ಪ್ರತಿಮೆಯುಳ್ಳ ಮಹೇಶ್ವರನ ಪೂಜೆಯನ್ನು ವಿಧಿವತ್ತಾಗಿ ಮಾಡಿದವನು ಈ ಭೂಮಿಯಲ್ಲಿ ಸಮೃದ್ಧಿಶಾಲಿಯಾಗಿ ಬಾಳುತ್ತಾನೆ. ಫಾಲ್ಗುನ ಶುಕ್ಲ ಪ್ರತಿಪದೆಯ ದಿನ ಧೂಳಿಧೂಸರಿತನಾದ ದಿಗಂಬರನಾದ ಶಿವನಿಗೆ ನೀರಿನಿಂದ ಸ್ನಾನ ಮಾಡಿಸಬೇಕು. ಭಗವಂತನಾದ ಶಿವನು ಕೇವಲ ಲೌಕಿಕವಾದ ಅಭಿಷೇಕದಿಂದಲೂ ಸಂತುಷ್ಟನಾಗಿ ತನ್ನ ಭಕ್ತನನ್ನು ಜೊತೆಯಲ್ಲಿಟ್ಟುಕೊಳ್ಳುತ್ತಾನೆ. ಭಕ್ತಿ ಪೂರ್ವಕವಾಗಿ ಪೂಜಿಸಿದರೆ ಯಾವುದು ತಾನೇ ದುರ್ಲಭವು? ವೈಶಾಖ ಶುಕ್ಲ ಪ್ರತಿಪದೆಯ ದಿನ ವಿಧಿಪೂರ್ವಕವಾಗಿ ವಿಷ್ಣುವನ್ನು ಪೂಜಿಸಿ ವಿದ್ವಾಂಸರಿಗೆ ಭೋಜನ, ಮಾಡಿಸಬೇಕು. ಇದೇ ರೀತಿ ಆಷಾಢ ಶುಕ್ಲ ಪಾಡ್ಯ ದಿನ ಜಗದ್ಗುರುವಾದ ಬ್ರಹ್ಮ ಮತ್ತು ವಿಷ್ಣುಗಳ ಪೂಜೆಯನ್ನು ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇಂತಹವನಿಗೆ ಬ್ರಹ್ಮದೇವರು ಶ್ರೀ ಮನ್ನಾರಾಯಣನ ಸಾಯುಜ್ಯ ಮೋಕ್ಷವನ್ನು ದಯ ಪಾಲಿಸುತ್ತಾರೆ. ಈ ಪೂಜೆಯನ್ನು ಮಾಡುವವನು ಸಮಸ್ತ ಸಿದ್ಧಿಯನ್ನು ಹೊಂದುತ್ತಾನೆ. ನಾರದನೇ, ಈ ರೀತಿ ಹನ್ನೆರಡು ತಿಂಗಳುಗಳ ಪಾಡ್ಯದ ದಿನ ಮಾಡಬೇಕಾದ ಯಾವ ವ್ರತಗಳನ್ನು ನಾನು ಹೇಳಿದ್ದೇನೋ, ಅವೆಲ್ಲವೂ ಭೋಗ ಮತ್ತು ಮೋಕ್ಷ ಎರಡನ್ನೂ ಕೊಡುತ್ತವೆ.ಈ ಎಲ್ಲ ವ್ರತಗಳಲ್ಲಿಯೂ ಬ್ರಹ್ಮಚರ್ಯ ಪಾಲನ ಮತ್ತು ಹವಿಷ್ಯಾನ್ನ ಭೋಜನವು ಉತ್ತಮವೆಂದು ತಿಳಿಯತಕ್ಕದ್ದು.

## ಹನ್ನೆರಡು ತಿಂಗಳುಗಳ ಬಿದಿಗೆಯ ವ್ರತಗಳು ಮತ್ತು ಅವುಗಳಲ್ಲಿ ಮಾಡಬೇಕಾದ ಕಾರ್ಯಗಳು

**ಸನಾತರು:-** ನಾರದನೇ ಕೇಳು, ಈಗ ನಾನು ನಿನಗೆ ಬಿದಿಗೆಯ ದಿನ ಮಾಡಬೇಕಾದ ವ್ರತಗಳನ್ನು ಹೇಳುತ್ತೇನೆ ಕೇಳು, ಈ ವ್ರತಗಳನ್ನು ಭಕ್ತಿ ಪೂರ್ವಕವಾಗಿ ಮಾಡಿದರೆ ಬ್ರಹ್ಮ ಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ. ಚೈತ್ರ ಶುಕ್ಲ ದ್ವಿತೀಯಾತಿಥಿಯಲ್ಲಿ ಬ್ರಾಹ್ಮೀಶಕ್ತಿ ಸಹಿತನಾದ ಚತುರ್ಮುಖ ಬ್ರಹ್ಮದೇವನನ್ನು ಹವಿಷ್ಯಾನ್ನ ಮತ್ತು ಗಂಧ ಮುಂತಾದವುಗಳಿಂದ ಪೂಜಿಸಿದರೆ ವ್ರತ ಮಾಡುವ ಮನುಷ್ಯನು ಎಲ್ಲ ಯಜ್ಞಗಳ ಫಲವನ್ನು ಪಡೆಯುತ್ತಾನೆ. ಎಲ್ಲ ಮನೋರಥ ಸಿದ್ಧಿಯನ್ನು ಪಡೆದು ಕೊನೆಗೆ ಬ್ರಹ್ಮಲೋಕವನ್ನೇ ಪಡೆಯುತ್ತಾನೆ. ವಿಪ್ರಶ್ರೇಷ್ಠನೇ, ಇದೇ ದಿನ ಸಾಯಂಕಾಲ ಉದಯಿಸುತ್ತಿರುವ ಚಂದ್ರನ ಪೂಜೆ ಮಾಡಿದರೆ ಭೋಗ ಮತ್ತು ಮೋಕ್ಷಗಳ ಪ್ರಾಪ್ತಿಯಾಗುತ್ತದೆ. (ವಿಷ್ಣು ಧರ್ಮೋತ್ತರ ಪುರಾಣಕ್ಕೆ ಅನುಸಾರವಾಗಿ ಇದನ್ನು ಬಾಲೇಂದು ವ್ರತವೆಂದು ಹೇಳುತ್ತಾರೆ) ಅಥವಾ ಅದೇ ದಿನ ಪ್ರಯತ್ನ ಪೂರ್ವಕವಾಗಿ ಭಕ್ತಿಯಿಂದ ಅಶ್ವಿನೀದೇವತೆಗಳ ಪೂಜೆಯನ್ನು ಮಾಡಿ ಚಿನ್ನ ಮತ್ತು ಬೆಳ್ಳಿಯಿಂದ ಮಾಡಿದ ಎರಡು ಕಣ್ಣುಗಳನ್ನು ದಾನ ಮಾಡಬೇಕು. ಇದು ನೇತ್ರ ವ್ರತ (ವಿಷ್ಣು ಧರ್ಮ ಪುರಾಣದಲ್ಲಿಯೂ ಈ ನೇತ್ರವ್ರತವನ್ನು ಹೇಳಿದ್ದಾರೆ) ಈ ವ್ರತದಲ್ಲಿ ಮೊಸರು ಅಥವಾ

ತುಪ್ಪವನ್ನು ಮಾತ್ರ ಸ್ವೀಕರಿಸಿ ಒಂದು ದಿನವನ್ನು ಕಳೆಯಬೇಕು. ಬ್ರಾಹ್ಮಣ ಶ್ರೇಷ್ಠನೇ, ಹನ್ನೆರಡು ವರ್ಷಗಳ ವರೆಗೆ ಈ ವ್ರತವನ್ನು ಅನುಷ್ಠಾನ ಮಾಡಿದರೆ. ಆ ಮನುಷ್ಯನು ಭೂಮಿಯ ಅಧಿಪತಿಯಾಗುತ್ತಾನೆ. ವೈಶಾಖ ಶುಕ್ಲ ದ್ವಿತೀಯಾತಿಥಿಯಲ್ಲಿ ಸಪ್ತಧಾನ್ಯಯುಕ್ತವಾದ ಕಲಶದ ಮೇಲೆ ಬ್ರಹ್ಮ ವಿಷ್ಣುಗಳನ್ನು ವಿಧಿಪೂರ್ವಕವಾಗಿ ಪೂಜಿಸಿದರೆ, ಮನುಷ್ಯನು ಬಯಸಿದ ಭೋಗಗಳನ್ನೆಲ್ಲ ಪಡೆದು ಕೊನೆಗೆ ವಿಷ್ಣು ಲೋಕವನ್ನೇ ಹೊಂದುತ್ತಾನೆ.

ಜ್ಯೇಷ್ಠ ಶುಕ್ಲ ಬಿದಿಗೆಯ ದಿನ ಸಮಸ್ತ ಲೋಕಾಧಿಪತಿಯಾದ ಭಾಸ್ಕರನನ್ನು ವಿಧಿಪೂರ್ವಕವಾಗಿ ಭಕ್ತಿಯಿಂದ ಪೂಜಿಸಿ, ಭಕ್ತಿಯಿಂದ ಜ್ಞಾನಿಗಳಿಗೆ ಭೋಜನವನ್ನು ಮಾಡಿಸಿದರೆ, ಸೂರ್ಯಲೋಕ ಪ್ರಾಪ್ತಿಯಾಗುತ್ತದೆ. ಆಷಾಢ ಶುಕ್ಲ ಪಕ್ಷದಲ್ಲಿ ಪುಷ್ಯ ನಕ್ಷತ್ರಯುಕ್ತವಾದ ಬಿದಿಗೆ ಬಂದಾಗ ಸುಭದ್ರಾ ಸಹಿತರಾದ ಬಲರಾಮ ಮತ್ತು ಕೃಷ್ಣರನ್ನು ರಥದಲ್ಲಿ ಕುಳ್ಳಿರಿಸಿ, ಗೃಹಸ್ಥರು ಅಲಂಕೃತರಾದ ಸ್ತ್ರೀಯರು ಬಾಲಕರು ಮುಂತಾದವರ ಜೊತೆಗೆ ವಾದ್ಯಘೋಷ ಸಹಿತವಾಗಿ, ನಗರ ಅಥವಾ ಗ್ರಾಮಗಳಲ್ಲಿ ಪ್ರದಕ್ಷಿಣೆ ಮಾಡಿಸಬೇಕು. ಯಾವುದಾದರೊಂದು ಜಲಾಶಯದ ಬಳಿಗೆ ಹೋಗಿ (ಕೆರೆ, ಬಾವಿ ನದಿಗಳ ಬಳಿಹೋಗಿ) ದೊಡ್ಡ ಉತ್ಸವವನ್ನು ಮಾಡಬೇಕು. ಅನಂತರ ಉತ್ಸವ ಸಹಿತವಾಗಿ ಹಿಂದಿರುಗಿ ಬಂದು ಆ ದೇವ ವಿಗ್ರಹಗಳನ್ನು ದೇವಾಲಯದಲ್ಲಿ ಮೊದಲಿನಂತೆಯೇ ಅಲಂಕರಿಸಿ ಇಟ್ಟು ವ್ರತದ ಸಂಪೂರ್ಣಗೋಸ್ಕರವಾಗಿ ದ್ವಿಜರಿಗೆ ಭೋಜನ ಮಾಡಿಸಬೇಕು.

ಶ್ರಾವಣ ಕೃಷ್ಣ ದ್ವಿತೀಯಾ ತಿಥಿಯ ದಿನ ಪ್ರಜಾಪತಿ ವಿಶ್ವಕರ್ಮ ಪರಮಾತ್ಮನು ಶಯನ ಮಾಡುತ್ತಾನೆ. ಆದ್ದರಿಂದ ಆ ಪುಣ್ಯಕರವಾದ ತಿಥಿಯನ್ನು ಅಶೂನ್ಯ ಶಯನ ವ್ರತವೆಂದು ಹೇಳುತ್ತಾರೆ. ಆ ದಿನ ತನ್ನ ಶಕ್ತಿಯನ್ನು ಅನುಸರಿಸಿ ಹಾಸಿಗೆಯ ಮೇಲೆ ಮಲಗಿದ ಚತುರ್ಭುಜಧಾರಿಯಾದ ನಾರಾಯಣನನ್ನು ಪರಾಬ್ರಹ್ಮನನ್ನು ಪೂಜಿಸಿ, ಆ ಜಗದೀಶ್ವರನಿಗೆ ಭಕ್ತಿಯಿಂದ ನಮಸ್ಕಾರ ಮಾಡಬೇಕು, ಅನಂತರ ಸಾಯಂಕಾಲ ಚಂದ್ರನಿಗೆ ಅರ್ಘ್ಯ ಪ್ರದಾನ ವನ್ನು ಅವಶ್ಯಕವಾಗಿ ಮಾಡಬೇಕು. ಇದು ಸಂಪೂರ್ಣ ಸಿದ್ಧಿಯನ್ನುಂಟು ಮಾಡುತ್ತದೆ.

ಭಾದ್ರಪದ ಶುಕ್ಲ ದ್ವಿತೀಯಾ ದಿವಸದಲ್ಲಿ ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನ ಪೂಜೆಯನ್ನು ವಿಧಿವತ್ತಾಗಿ ಮಾಡಿದರೆ ಮನುಷ್ಯನು ಎಲ್ಲ ಯಜ್ಞಗಳ ಫಲವನ್ನು ಪಡೆಯುತ್ತಾನೆ. ಆಶ್ವಯುಜ ಮಾಸದ ಶುಕ್ಲ ಪಕ್ಷದಲ್ಲಿ ಬರುವ ದ್ವಿತೀಯಾ ದಿನವು ಬಹಳ ಪುಣ್ಯಕರವಾದುದು. ಆ ದಿನ ಮಾಡಿದ ದಾನವು ಅನಂತರ ಫಲಪ್ರದವಾಗುತ್ತದೆ. ಕಾರ್ತಿಕ ಶುಕ್ಲ ದ್ವಿತೀಯಾ ದಿವಸದಲ್ಲಿ ಹಿಂದೆ ಯಮಧರ್ಮರಾಜನು ತನ್ನ ಸಹೋದರಿಯಾದ ಯಮುನೆಯ ಮನೆಯಲ್ಲಿ ಊಟ ಮಾಡಿದ್ದನು. ಆದ್ದರಿಂದ ಅದನ್ನು ಯಮದ್ವಿತೀಯಾ ಎಂದು ಹೇಳುತ್ತಾರೆ. ಈ ದಿವಸ ಸಹೋದರಿಯ ಮನೆಯಲ್ಲಿ ಊಟ ಮಾಡುವುದು ಆಯುಷ್ಯವರ್ಧಕವೆಂದು ಹೇಳಿದ್ದಾರೆ. ಆದ್ದರಿಂದ ಸಹೋದರಿಗೆ ಆ ದಿನ ವಸ್ತ್ರ ಮತ್ತು ಅಲಂಕಾರಗಳನ್ನು ಕೊಟ್ಟು ಅವಳ ಮನೆಯಲ್ಲಿ ಭೋಜನ ಮಾಡಬೇಕು. ಯಾರು ಯಮದ್ವಿತೀಯಾ ದಿವಸ ಸಹೋದರಿಯ ಮನೆಯಲ್ಲಿ ಊಟ ಮಾಡುತ್ತಾರೋ, ಅವರು ಅತ್ಯಂತ ಶ್ರೇಷ್ಠವಾದ ರತ್ನ ಧನ, ಮತ್ತು ಧಾನ್ಯಗಳನ್ನು ಹೊಂದುತ್ತಾರೆ. ಮಾರ್ಗಶಿರ ಶುದ್ಧ ಬಿದಿಗೆಯ ದಿನ ಪಿತೃಶ್ರಾದ್ಧವನ್ನು ಮಾಡುವವನು ಪುತ್ರ, ಪೌತ್ರಾದಿಗಳ ಸಹಿತವಾಗಿ ಆರೋಗ್ಯ ಲಾಭವನ್ನು ಪಡೆಯುತ್ತಾನೆ. ಪುಷ್ಯ ಶುಕ್ಲ ಬಿದಿಗೆ ದಿನ ಗೋವಿನ ಕೊಂಬಿನಲ್ಲಿ

ನೀರನ್ನು ತುಂಬಿಸಿ ಅಭಿಮಂತ್ರಿಸಿ ಪ್ರೋಕ್ಷಿಸಬೇಕು. ಮತ್ತು ಸಂಧ್ಯಾಕಾಲದಲ್ಲಿ ಬಾಲಚಂದ್ರನ ದರ್ಶನ ಮಾಡಬೇಕು. ಇದರಿಂದ ಎಲ್ಲಾ ಅಭಿಲಾಷೆಗಳೂ ಸಿದ್ಧಿಸುತ್ತವೆ. ಆ ದಿನ ಹವಿಷ್ಯಾನ್ನ ಭೋಜನ ಮಾಡಬೇಕು. ತುಪ್ಪ ಮತ್ತು ಹೂವುಗಳಿಂದ ಬಾಲಚಂದ್ರನ ಪೂಜೆಯನ್ನು ಮಾಡಬೇಕು. ಇದರಿಂದ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳು ಸಿದ್ಧಿಸುತ್ತವೆ.

ಮಾಘ ಶುಕ್ಲ ದ್ವಿತೀಯಾದಿನ ಸೂರ್ಯ ಭಗವಂತನನ್ನು ವಿಧಿ ಪೂರ್ವಕವಾಗಿ ಪೂಜಿಸಬೇಕು. ಕೆಂಪು ಹೂವುಗಳು, ಕೆಂಪು ಚಂದನ ಇವುಗಳಿಂದ ಪೂಜೆ ಮಾಡಿದರೆ ಸೂರ್ಯನು ಸುಪ್ರೀತನಾಗುತ್ತಾನೆ. ತನ್ನ ಶಕ್ತಿಗನುಸಾರವಾಗಿ ಸುವರ್ಣದಿಂದ ಸೂರ್ಯ ಪ್ರತಿಮೆಯನ್ನು ಮಾಡಿ ಪೂಜೆಗೆ ಇಡಬೇಕು. ತಾಮ್ರ ಪಾತ್ರದಲ್ಲಿ ಗೋದಿ ಅಕ್ಕಿಯನ್ನು ತುಂಬಿಸಿ ಅದನ್ನು ಸೂರ್ಯ ದೇವನ ಮುಂದಿಟ್ಟು ಭಕ್ತಿಪೂರ್ವಕವಾಗಿ ಸಮರ್ಪಿಸಿ ಪೂಜಿಸಬೇಕು. ಅನಂತರ ಪ್ರತಿ ಮಾಸಹಿತವಾಗಿ ಆ ಮೂರ್ತಿಯನ್ನು ದ್ವಿಜನಿಗೆ ದಾನ ಮಾಡಬೇಕು. ಈ ರೀತಿ ವ್ರತಾನುಷ್ಠಾನ ಮಾಡುವ ಮನುಷ್ಯನು ಉದಯಿಸುವ ಸೂರ್ಯನಂತೆ ಈ ಭೂಮಿಯಲ್ಲಿ ದುರ್ಜಯನಾಗಿಯೂ ದುರ್ಧರ್ಷನಾಗಿಯೂ ಬೆಳಗುತ್ತಾನೆ. ಈ ಲೋಕದಲ್ಲಿ ತನ್ನ ಅಭಿಲಾಷೆಯಂತೆ ಸುಖಗಳನ್ನು ಅನುಭವಿಸಿ ಕೊನೆಗೆ ಪರಬ್ರಹ್ಮನ ಸ್ಥಾನವನ್ನೇ ಹೊಂದುತ್ತಾನೆ. ಫಾಲ್ಗುನ ಶುದ್ಧ ಬಿದಿಗೆಯ ದಿನ ಪವಿತ್ರನಾದ ದ್ವಿಜನು ಬಿಳಿಯ ಮತ್ತು ಸುವಾಸನೆಯ ಪುಷ್ಪಗಳಿಂದ ಈಶ್ವರನ ಪೂಜೆ ಮಾಡಬೇಕು. ಹೂವುಗಳಿಂದ ಮೇಲು ಚಪ್ಪರ ಮಂಟಪವನ್ನು ರಚಿಸಿ ಪುಷ್ಪಗಳ ಆಭರಣಗಳಿಂದಲೇ - ಅದನ್ನು ಅಲಂಕರಿಸಬೇಕು, ಈಶ್ವರನನ್ನು ಅದರ ಕೆಳಗೆ, ಪ್ರತಿಮಾ, ಚಿತ್ರ ಮುಂತಾದ ರೂಪದಿಂದ ಪ್ರತಿಷ್ಠಿಸಿ, ಧೂಪ, ದೀಪ, ಅನೇಕ ರೀತಿಯ ನೈವೇದ್ಯಗಳಿಂದ ಪೂಜಿಸಿ, ಸ್ತೋತ್ರಗಳಿಂದ ಭಗವಂತನನ್ನು ಪ್ರಸನ್ನೀಕರಿಸಿಕೊಂಡು ನೆಲದ ಮೇಲೆ ಸಾಷ್ಟಾಂಗ ಪ್ರಣಾಮ ಮಾಡಬೇಕು.

ಈ ರೀತಿ ದೇವೇಶ್ವರನಾದ ಶಿವನ ಆರಾಧನೆಯನ್ನು ಮಾಡುವ ಮನುಷ್ಯನು ರೋಗರಹಿತನಾಗಿ, ಧನಧಾನ್ಯ ಸಂಪನ್ನನಾಗಿ ಖಂಡಿತವಾಗಿಯೂ, ನೂರು ವರ್ಷಗಳವರೆಗೆ ಬಾಳುತ್ತಾನೆ. ಶುಕ್ಲಪಕ್ಷದ ದ್ವಿತೀಯಾತಿಥಿಗಳಲ್ಲಿ ಹೇಳಿದ ವಿಧಾನಗಳನ್ನು ಮನುಷ್ಯನು ಕೃಷ್ಣ ಪಕ್ಷದ ದ್ವಿತೀಯಾ ತಿಥಿಗಳಲ್ಲಿಯೂ ಮಾಡಬೇಕು. ಬೇರೆ ಬೇರೆ ತಿಂಗಳುಗಳಲ್ಲಿ ದ್ವಿತೀಯಾ ದಿನ ಹೇಳಿದ ವ್ರತಗಳಲ್ಲಿ ನಾನಾರೂಪಧಾರಿಯಾದ ಅಗ್ನಿ ಎಂಬ ಹೆಸರಿನ ಪರಮಾತ್ಮನೇ ಪೂಜಿತನಾಗುತ್ತಾನೆ. ಎಲ್ಲಾ ವ್ರತಗಳಲ್ಲಿಯೂ ಬ್ರಹ್ಮಚರ್ಯ ಮುಂತಾದ ನಿಯಮಗಳ ಪಾಲನವು ಅತ್ಯಾವಶ್ಯಕವೆಂದು ತಿಳಿಯಬೇಕು.

## ಹನ್ನೆರಡು ತಿಂಗಳುಗಳಲ್ಲಿ ಬರುವ ತೃತೀಯಾ (ತದಿಗೆ) ತಿಥಿಯ ವ್ರತಗಳು

**ಸನಾತನರು:-** ನಾರದ ಕೇಳು, ಈಗ ನಾನು ನಿನಗೆ ತದಿಗೆಗೆ ಸಂಬಂಧಪಟ್ಟಿರುವ ವ್ರತಗಳನ್ನು ಹೇಳುತ್ತೇನೆ ಕೇಳು, ವಿಧಿಪೂರ್ವಕವಾಗಿ ಈ ವ್ರತಗಳ ಅನುಷ್ಠಾನದಿಂದ ಬೇಗನೆ ಸೌಭಾಗ್ಯ ಲಾಭವಾಗುತ್ತದೆ. ಶೀಘ್ರವಾಗಿ ವರನನ್ನು ಹೊಂದಿ ವಿವಾಹಿತಳಾಗಬೇಕೆಂಬ ಆಶೆಯುಳ್ಳ ಕನ್ಯೆಯೂ, ಸೌಭಾಗ್ಯ ಮತ್ತು ಪುತ್ರಪತಿಗಳ ಮಂಗಲವನ್ನು ಅಪೇಕ್ಷಿಸುವ ವಿವಾಹಿತಳಾದ ಸ್ತ್ರೀಯೂ ಚೈತ್ರ ಶುಕ್ಲ ತದಿಗೆಯ ದಿನ ಗೌರೀಶಂಕರರ ಪ್ರತಿಮೆಗಳನ್ನು

ಮಾಡಿಸಬೇಕು. ಪ್ರತಿಮೆಗಳು ಚಿನ್ನ, ಬೆಳ್ಳಿ, ತಾಮ್ರ, ಅಥವಾ ಮಣ್ಣಿನಿಂದ ಮಾಡಿದವುಗಳಾಗಿರಬಹುದು. ಆ ಪ್ರತಿಮೆಗಳಿಗೆ ಗಂಧ, ಪುಷ್ಪ, ಗರಿಕೆ ಮುಂತಾದವುಗಳಿಂದ ಹಾಗೂ ಸುಂದರವಾದ ವಸ್ತ್ರ, ಆಭರಣಗಳಿಂದ ಪೂಜೆಯನ್ನು ಮಾಡಬೇಕು. ಸೌಭಾಗ್ಯವತಿಯರಾದ ಸ್ತ್ರೀಯರನ್ನು ಅಥವಾ ಲಕ್ಷಣವಂತೆಯರಾದ ಕುಮಾರಿಯರನ್ನು ಕರೆದು, ಕುಂಕುಮ, ಕಾಡಿಗೆ ಮತ್ತು ವಸ್ತ್ರ, ಅಲಂಕಾರಗಳಿಂದ ಅವರನ್ನು ಪೂಜಿಸಿ ಸಂತುಷ್ಟರನ್ನಾಗಿ ಮಾಡಬೇಕು, ಅನಂತರ ಪ್ರತಿಮೆಗಳನ್ನು ಜಲಾಶಯದಲ್ಲಿ ವಿಸರ್ಜಿಸಬೇಕು, ಸ್ತ್ರೀಯರಿಗೆ ಸೌಭಾಗ್ಯವನ್ನು ಕೊಡುವ ದೇವತೆಗಳಲ್ಲಿ ಗೌರೀದೇವಿಗೆ ಸಮಾನರು ಯಾರೂ ಇಲ್ಲ.

## ಅಕ್ಷಯಾ - ತೃತೀಯಾ

ವೈಶಾಖ ಶುಕ್ಲಪಕ್ಷದ ತೃತೀಯಾ ದಿನ ಅಕ್ಷಯ ತೃತೀಯಾ, ಅದು ತ್ರೇತಾಯುಗದ ಮೊದಲನೆಯದಿನ. ಆ ದಿನ ಮಾಡಿದ ಯಾವ ಸತ್ಕರ್ಮವೇ ಆಗಲಿ, ಅದು ಅಕ್ಷಯವಾಗುತ್ತದೆ. ಆ ವೈಶಾಖ ಶುಕ್ಲ ತದಿಗೆಯ ದಿನ ಲಕ್ಷ್ಮೀಸಹಿತನಾದ ಶ್ರೀಮನ್ನಾರಾಯಣನನ್ನು ಪುಷ್ಪ, ಧೂಪ ಮತ್ತು ಚಂದನ ಮೊದಲಾದವುಗಳಿಂದ ಪೂಜಿಸಬೇಕು. ಆ ದಿನ ಗಂಗೆಯಲ್ಲಿ ಸ್ನಾನ ಮಾಡುವುದೂ ಒಳ್ಳೆಯದು, ಈ ವ್ರತವನ್ನು ಮಾಡುವ ಮನುಷ್ಯನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಎಲ್ಲ ದೇವತೆಗಳಿಂದಲೂ ವಂದಿತನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

## ರಂಭಾ ತೃತೀಯಾ

ಜ್ಯೇಷ್ಠಮಾಸದ ಶುಕ್ಲಪಕ್ಷದ ತದಿಗೆಯು "ರಂಭಾತೃತೀಯಾ" ಎಂದು ಪ್ರಸಿದ್ಧವಾಗಿದೆ. ಆ ದಿನ ಪತ್ನೀಸಹಿತನಾದ ದ್ವಿಜನನ್ನು ಗಂಧ, ಪುಷ್ಪ, ವಸ್ತ್ರ, ಮುಂತಾದವುಗಳಿಂದ ಪೂಜಿಸಿ, ಸಂತೋಷಪಡಿಸಬೇಕು, ಈ ವ್ರತವು ಧನ ಮತ್ತು ಪುತ್ರ ಸಮೃದ್ಧಿಯನ್ನು ಕೊಡುತ್ತದೆ. ಇದರ ಅನುಷ್ಠಾನದಿಂದ ಧರ್ಮಾನುಷ್ಠಾನದಲ್ಲಿ ಮಂಗಳಕರವಾದ ಬುದ್ಧಿಯುಂಟಾಗುತ್ತದೆ. ಆಷಾಢ ಶುದ್ಧ ತದಿಗೆಯ ದಿನ ಪತ್ನೀಸಹಿತನಾದ ವಿದ್ವಾಂಸನನ್ನು ಕರೆದು ಅವರಲ್ಲಿ ಲಕ್ಷ್ಮೀ ನಾರಾಯಣರನ್ನು ಆವಾಹಿಸಿ, ವಸ್ತ್ರ, ಅಲಂಕಾರ, ಭೋಜನ, ಗೋವು ಮುಂತಾದವುಗಳಿಂದ ಅವರನ್ನು ಸತ್ಕರಿಸಬೇಕು. ಸಂತೋಷಕರವಾದ ಮಾತನ್ನಾಡಿ ಅವರನ್ನು ಪೂಜಿಸಬೇಕು. ಸೌಭಾಗ್ಯದ ಅಪೇಕ್ಷೆಯಿಂದ ಸಂತೋಷಪೂರ್ವಕವಾಗಿ ಈ ವ್ರತದ ಅನುಷ್ಠಾನಮಾಡಿದ ಸ್ತ್ರೀಯು ದೇವದೇವೋತ್ತಮನಾದ ಶ್ರೀಹರಿಯ ಪ್ರಸಾದದಿಂದ ವಿಷ್ಣುಲೋಕವನ್ನು ಪಡೆಯುತ್ತಾಳೆ.

## ·ಸ್ವರ್ಣಗೌರೀ ವ್ರತ

ಶ್ರಾವಣ ಶುಕ್ಲ ತದಿಗೆಯ ದಿನ ಸ್ವರ್ಣಗೌರೀವ್ರತವನ್ನು ಆಚರಿಸಬೇಕು. ಆ ದಿವಸ ಹೆಂಗಸರು ಷೋಡಶೋಪಚಾರಗಳಿಂದ ಭವಾನೀ ದೇವಿಯನ್ನು ಪೂಜಿಸಬೇಕು.

## ಹರಿತಾಲಿಕಾ ವ್ರತ

ಭಾದ್ರಪದ ಶುಕ್ಲ ತೃತೀಯಾ ದಿನ "ಹರಿತಾಲಿಕಾ ವ್ರತ". ಆ ದಿನ ಸೌಭಾಗ್ಯವತಿಯಾದ ಸ್ತ್ರೀಯು ಗೌರೀದೇವಿಯನ್ನು ಪಾದ್ಯ, ಅರ್ಘ್ಯ, ಆಚಮನ, ಮೊದಲಾದ ಉಪಚಾರಗಳಿಂದ ಬಹಳ ಭಕ್ತಿ ಭಾವದಿಂದ ಪೂಜಿಸಬೇಕು. ಚಿನ್ನ ಬೆಳ್ಳಿ ತಾಮ್ರ, ಬಿದಿರು ಅಥವಾ ಮಣ್ಣಿನ ಪಾತ್ರೆಯಲ್ಲಿ ದಕ್ಷಿಣಾಸಹಿತವಾಗಿ ಪಕ್ವಾನ್ನ (ಭಕ್ಷ)ವನ್ನು ಇಟ್ಟು ಫಲ ಮತ್ತು ವಸ್ತ್ರ

ಸಹಿತವಾಗಿ ಬ್ರಾಹ್ಮಣರಿಗೆ ದಾನಮಾಡಬೇಕು. ಈ ವ್ರತವನ್ನು ನಡೆಸತಕ್ಕ ಸ್ತ್ರೀಯು ಮನಃಪೂರ್ತಿಯಾಗಿ ಇಹದಲ್ಲಿ ಬೇಕು ಬೇಕಾದ ಭೋಗಗಳನ್ನು ಅನುಭವಿಸಿ, ಈ ವ್ರತದ ಪ್ರಭಾವದಿಂದ ಗೌರಿದೇವಿಯ ಸಹಚರಿಯಾಗುತ್ತಾಳೆ. ಅಶ್ವಯುಜ ಶುಕ್ಲತೃತೀಯಾ ದಿವಸ ಬೃಹದ್ ಗೌರೀವ್ರತವನ್ನು ಆಚರಿಸಿದರೆ ಎಲ್ಲ ಮನೋಭಿಲಾಷೆಗಳು ಸಿದ್ಧಿಸುತ್ತವೆ.

## ವಿಷ್ಣು - ಗೌರೀ ವ್ರತ

ಕಾರ್ತಿಕ ಶುಕ್ಲ ತೃತೀಯಾದಿವಸ 'ವಿಷ್ಣುಗೌರಿ' ವ್ರತದ ಆಚರಣೆಯನ್ನು ಮಾಡಬೇಕು. ಈ ವ್ರತದಲ್ಲಿ ಲಕ್ಷ್ಮೀದೇವಿಯನ್ನು ಅನೇಕ ವಿಧದ ಉಪಚಾರಗಳಿಂದ ಪೂಜಿಸಿ, ಸುವಾಸಿನಿ ಸ್ತ್ರೀಯನ್ನು ಮಂಗಲದ್ರವ್ಯಗಳಿಂದ ಸತ್ಕರಿಸಬೇಕು. ಅವಳಿಗೆ ಭೋಜನ ಮಾಡಿಸಿ ಪ್ರೀತಿಕರವಾದ ಮಾತುಗಳನ್ನಾಡಿ, ಕಳುಹಿಸಬೇಕು.

## ಹರಗೌರೀ ವ್ರತ

ಮಾರ್ಗಶಿರ ಶುದ್ಧ ತೃತೀಯಾ 'ಹರಗೌರೀವ್ರತ.' ಆ ದಿನ ಹಿಂದೆ ಹೇಳಿದ ವಿಧಾನದಿಂದ ಜಗದಂಬೆಯ ಪೂಜೆಯನ್ನು ಮಾಡಬೇಕು. ಈ ಮಂಗಲಮಯ ವ್ರತದ ಪ್ರಭಾವದಿಂದ ಸ್ತ್ರೀಯು ಇಹಲೋಕದಲ್ಲಿ ಮನೋರಮ ಭೋಗಗಳನ್ನು ಅನುಭವಿಸಿ, ದೇವೀಲೋಕಕ್ಕೆ ಹೋಗುತ್ತಾಳೆ. ಮತ್ತು ದೇವಿಯ ಜೊತೆಗೆ ಆನಂದವನ್ನು ಅನುಭವಿಸುತ್ತಾಳೆ. ಮಾಘ ಶುಕ್ಲ ತೃತೀಯಾದಿನ ನಿಯಮವನ್ನು ಅನುಷ್ಠಾನ ಮಾಡುತ್ತ ಹಿಂದೆ ಹೇಳಿದ ವಿಧಾನದಿಂದ ಸೌಭಾಗ್ಯ ಸುಂದರಿಯ ಪೂಜೆಯನ್ನು ಮಾಡಬೇಕು. ಆ ದಿನ ತೆಂಗಿನಕಾಯಿಯ ಜೊತೆಗೆ ಅರ್ಘ್ಯವನ್ನು ಕೊಡಬೇಕು. ಇದರಿಂದ ಸಂತುಷ್ಟಳಾದ ಸೌಭಾಗ್ಯ ಸುಂದರಿಯು ಸೌಭಾಗ್ಯವನ್ನೂ ತನ್ನ ಲೋಕವನ್ನೂ ಕೊಡುತ್ತಾಳೆ. ಫಾಲ್ಗುಣ ಶುಕ್ಲಪಕ್ಷದ ತೃತೀಯಾ ದಿನ ಸೌಖ್ಯದಾ - ವ್ರತ. ಈ ವ್ರತದಲ್ಲಿ ಗಂಧ ಪುಷ್ಪಾದಿಗಳಿಂದ ಪೂಜಿತಳಾದ ದೇವಿಯು ಎಲ್ಲರಿಗೂ ಮಂಗಲವನ್ನು ಉಂಟುಮಾಡುತ್ತಾಳೆ. ಮುನಿಯೇ, ಸಂಪೂರ್ಣ ತೃತೀಯಾ ವ್ರತಗಳಲ್ಲಿ ದೇವೀ ಪೂಜಾ, ಬ್ರಾಹ್ಮಣ ಪೂಜಾ, ಸುವಾಸಿನೀಪೂಜಾ, ದಾನ, ಹೋಮ, ವಿಸರ್ಜನ, ಇವು ಸಾಧಾರಣ ವಿಧಿಗಳು. ಈ ರೀತಿಯಾಗಿ ನಿನಗೆ ತದಿಗೆಯ ವ್ರತಗಳನ್ನು ಹೇಳಿದ್ದಾಯಿತು. ಭಕ್ತಿಯಿಂದ ಈ ವ್ರತಗಳನ್ನು ಅನುಷ್ಠಾನಮಾಡಿದರೆ ಮನುಷ್ಯನ ಎಲ್ಲ ಅಭೀಷ್ಟಗಳೂ ಸಿದ್ಧಿಸುತ್ತವೆ.

## ಹನ್ನೆರಡು ತಿಂಗಳಲ್ಲಿ ಬರುವ ಚತುರ್ಥೀವ್ರತಗಳ ವಿಧಿ ಮತ್ತು ಮಾಹಾತ್ಮ್ಯ

**ಸನಾತರು:-** ಬ್ರಾಹ್ಮಣಶ್ರೇಷ್ಠನೇ, ಈಗ ನಾನು ನಿನಗೆ ಚತುರ್ಥೀ ವ್ರತಗಳನ್ನು ಹೇಳುತ್ತೇನೆ. ಅವುಗಳನ್ನು ಅನುಷ್ಠಾನಮಾಡಿದರೆ ಸ್ತ್ರೀ ಪುರುಷರಿಬ್ಬರಿಗೂ ಬಯಸಿದ ವಿಷಯಗಳು ಕೈಗೂಡುತ್ತವೆ. ಚೈತ್ರಮಾಸದ ಚತುರ್ಥೀದಿನ ವಾಸುದೇವ ವಿಶ್ವಂಭರ ರೂಪಿಯಾದ ಗಣೇಶನ ಪೂಜೆಯನ್ನು ಮಾಡಬೇಕು. ಬ್ರಾಹ್ಮಣನಿಗೆ ಸುವರ್ಣ ದಕ್ಷಿಣೆಯನ್ನು ಕೊಡಬೇಕು. ಇದರಿಂದ ಮಾನವನು ಸಮಸ್ತದೇವತೆಗಳಿಗೂ ಮಾನ್ಯನಾಗುತ್ತಾನೆ. ಭಗವಂತನಾದ ವಿಷ್ಣುವಿನ ಲೋಕಕ್ಕೆ ಹೋಗುತ್ತಾನೆ. ವೈಶಾಖ ಶುದ್ಧ ಚತುರ್ಥೀ ದಿವಸ ಸಂಕರ್ಷಣ ಗಣೇಶನ ಪೂಜೆಯನ್ನು ಮಾಡಿ ವಿಧಿ ವಿಧಾನವನ್ನು ಬಲ್ಲ ಗೃಹಸ್ಥನು ಶಂಖದಾನವನ್ನು ಮಾಡಬೇಕು. ಬ್ರಾಹ್ಮಣರಿಗೆಈದಾನಮಾಡಿದಫಲವಾಗಿಮತ್ತು ಸಂಕರ್ಷಣ

ಗಣಪತಿಯ ಅನುಗ್ರಹದಿಂದಾಗಿ ಸಂಕರ್ಷಣಲೋಕದಲ್ಲಿ ಅನೇಕ ಕಲ್ಪಗಳ ಪರ್ಯಂತವಾಗಿ ವ್ರತಕರ್ತನು ವಾಸಮಾಡುತ್ತ ಆನಂದಾನುಭವವನ್ನು ಪಡೆಯುತ್ತಾನೆ.

## ಪ್ರದ್ಯುಮ್ನ ಗಣಪತಿ ವ್ರತ

ಜ್ಯೇಷ್ಠಮಾಸದ ಶುಕ್ಲ ಚತುರ್ಥೀದಿನ ಪ್ರದ್ಯುಮ್ನಗಣಪತಿವ್ರತ. ಆ ದಿವಸ ಗಣೇಶಪೂಜೆಯನ್ನು ಮಾಡಿ ಬ್ರಾಹ್ಮಣ ಸಮೂಹಕ್ಕೆ ಫಲ ಮತ್ತು ಗಡ್ಡೆಗಳನ್ನು ದಾನಮಾಡಿದರೆ ಮಾನವನು ಸ್ವರ್ಗಲೋಕವನ್ನು ಪಡೆಯುತ್ತಾನೆ. ಆಷಾಢಶುದ್ಧ ಚತುರ್ಥೀದಿನ ಅನಿರುದ್ಧ ಗಣಪತಿಯ ಪೂಜೆಯನ್ನು ಮಾಡಬೇಕು. ಆ ದಿವಸ ಗಣೇಶನ ಪೂಜೆಮಾಡಿ ಸನ್ಯಾಸಿಗಳಿಗೆ ತುಂಬೀ ಫಲದ ಪಾತ್ರೆಗಳನ್ನು (ಸೋರೆ ಬುರುಡೆಯ ಕಮಂಡಲಗಳು) ದಾನಮಾಡಿದರೆ ಮನೋಭೀಷ್ಟ ಫಲ ಪ್ರಾಪ್ತಿಯಾಗುತ್ತದೆ.

ಜ್ಯೇಷ್ಠ ಶುದ್ಧ ಚತುರ್ಥೀದಿನ ಮತ್ತೊಂದು ಪರಮ ಪವಿತ್ರವಾದ ವ್ರತವಿದೆ. ಅದನ್ನು ಸತೀವ್ರತವೆಂದು ಹೇಳುತ್ತಾರೆ. ಈ ವ್ರತಾನುಷ್ಠಾನದಿಂದ ಸ್ತ್ರೀಯು ಗಣೇಶನ ತಾಯಿಯಾದ ಪಾರ್ವತಿಯ ಲೋಕದಲ್ಲಿದ್ದು ಉತ್ತಮವಾದ ಆನಂದವನ್ನು ಪಡೆಯುತ್ತಾಳೆ. ಇದೇ ರೀತಿ ಆಷಾಢ ಶುದ್ಧ ಚತುರ್ಥಿಯ ದಿನ ಮತ್ತೊಂದು ಮಂಗಳಕರವಾದ ವ್ರತವಿದೆ. ಅದು ರಥಂತರ ಕಲ್ಪದ ಮೊದಲನೆಯ ದಿನ, ಆ ದಿನ, ಮಾನವನು ಶ್ರದ್ಧಾಭರಿತವಾದ ಹೃದಯದಿಂದ ವಿಧಿ ಪೂರ್ವಕವಾಗಿ ಗಣೇಶನ ಪೂಜೆಯನ್ನು ಮಾಡಿದರೆ ದೇವತೆಗಳಿಗೂ ದುರ್ಲಭವಾದ ಫಲವನ್ನು ಪಡೆಯುತ್ತಾನೆ.

ಶ್ರಾವಣ ಶುಕ್ಲ ಚತುರ್ಥಿಯಿಂದ ಚಂದ್ರೋದಯವಾದಾಗ ವಿಧಿಪೂರ್ವಕವಾಗಿ ಶ್ರೇಷ್ಠ ವಿದ್ವಾಂಸನು ಚಂದ್ರನಿಗೆ ಅರ್ಘ್ಯಪ್ರದಾನ ಮಾಡಬೇಕು, ಮೊದಲು ಗಣೇಶನ ಸ್ವರೂಪವನ್ನು ಧ್ಯಾನಿಸಿ ಅನಂತರ ಆವಾಹನಾದಿ ಸಂಪೂರ್ಣ ಉಪಚಾರಗಳಿಂದ ಗಣೇಶನ ಪೂಜೆಯನ್ನು ಮಾಡಿ ಲಡ್ಡು ಭಕ್ಷ್ಯವನ್ನು ಸಮರ್ಪಿಸಬೇಕು. ಲಡ್ಡುಭಕ್ಷ್ಯವು ಗಣೇಶನಿಗೆ ಅತ್ಯಂತ ಪ್ರೀತಿದಾಯಕವಾದುದು. ಈ ರೀತಿ ಈ ವ್ರತವನ್ನು ಪೂರೈಸಿ ಪ್ರಸಾದ ಸ್ವರೂಪವಾದ ಲಡ್ಡುವನ್ನು ತಾನೂ ಸ್ವೀಕರಿಸಿ ರಾತ್ರಿಯಲ್ಲಿಯೂ ಗಣೇಶನ ಪೂಜೆಯನ್ನು ಮಾಡಿ, ಭೂಮಿಯಲ್ಲಿಯೇ ಸುಖವಾಗಿ ಮಲಗಬೇಕು, ಈ ವ್ರತದ ಪ್ರಭಾವದಿಂದ ಇಹಲೋಕದಲ್ಲಿ ಮನೋಭೀಷ್ಟಗಳನ್ನೆಲ್ಲ ಪಡೆದು ಸುಖವಾಗಿರುವುದೇ ಅಲ್ಲದೆ ಪರಲೋಕದಲ್ಲಿ ಗಣೇಶನ ಸಮೀಪದಲ್ಲಿ ವಾಸವೂ ಪ್ರಾಪ್ತವಾಗುತ್ತದೆ. ಮೂರು ಲೋಕಗಳಲ್ಲಿಯೂ ಈ ವ್ರತಕ್ಕೆ ಸಮಾನವಾದ ಮತ್ತೊಂದು ವ್ರತವಿಲ್ಲ. ಅನಂತರ ಭಾದ್ರಪದ ಬಹುಳ ಚತುರ್ಥಿಯ ದಿನ ಬಹುಳಾ ಗಣೇಶನ ವ್ರತವು ಅನುಷ್ಠಿಸ ಬೇಕಾದುದು, ಅಂದು ಗಂಧ, ಪುಷ್ಪ, ಹೂಮಾಲೆ, ಗರಿಕೆ ಮುಂತಾದವುಗಳ ಮೂಲಕ ಪ್ರಯತ್ನ ಪೂರ್ವಕವಾಗಿ ಗಣೇಶನ ಪೂಜೆಯನ್ನು ಮಾಡಬೇಕು, ಪ್ರದಕ್ಷಿಣೆ ನಮಸ್ಕಾರ ಮಾಡಿ ಶಕ್ತಿಯನ್ನು ಅನುಸರಿಸಿ ದಾನಮಾಡಬೇಕು. ಗೋದಾನ ಮಾಡಬೇಕು, ಶಕ್ತಿಯಿಲ್ಲದಿದ್ದರೆ ಕಪಿಲಾಗೋವಿಗೆ ನಮಸ್ಕರಿಸಿ ವಿಸರ್ಜಿಸಬೇಕು. ಈ ರೀತಿ ಐದು, ಹತ್ತು ಅಥವಾ ಹದಿನಾರು ವರ್ಷಗಳವರೆಗೆ ಈ ವ್ರತವನ್ನು ನಡೆಸಿ ಅನಂತರ ಉದ್ಯಾಪನ ಮಾಡಬೇಕು. ಆ ಸಮಯದಲ್ಲಿ ಹಾಲು ಕೊಡುವ ಒಳ್ಳೆಯ ಗೋವನ್ನು ದಾನ ಕೊಡಬೇಕು. ಈ ವ್ರತದ ಪ್ರಭಾವದಿಂದ ಮನುಷ್ಯನು ಮನೋರಮವಾದ ಭೋಗಗಳನ್ನು ಉಪಭೋಗಿಸಿ, ಅನಂತರ ದೇವತೆಗಳಿಂದಲೂ ಗೌರವಿಸಲ್ಪಟ್ಟ ಗೋಲೋಕಕ್ಕೆ ಹೋಗುತ್ತಾನೆ.

## ಸಿದ್ಧಿ ವಿನಾಯಕ ಚತುರ್ಥಿ ಪೂಜಾ ವ್ರತ

ಭಾದ್ರಪದ ಶುಕ್ಲ ಚತುರ್ಥಿಯ ದಿವಸ, ಸಿದ್ಧಿ ವಿನಾಯಕ ಚತುರ್ಥೀ ಎಂದು ಪ್ರಸಿದ್ಧವಾಗಿದೆ. ಆ ದಿನ ಆವಾಹನಾದಿ ಸಮಸ್ತ ಉಪಚಾರಗಳಿಂದ ಗಣೇಶನನ್ನು ಚೆನ್ನಾಗಿ ಪೂಜಿಸಬೇಕು. ಮೊದಲು ಏಕಾಗ್ರಚಿತ್ತದಿಂದ ಗಣೇಶನನ್ನು ಧ್ಯಾನಿಸಬೇಕು.

''ಗಣೇಶನು ಏಕದಂತ-ಒಂದು ಹಲ್ಲುಳ್ಳವನು, ಶೂರ್ಪಕರ್ಣ-ಕಿವಿಗಳು ಮೊರದಂತೆ ಅಗಲವಾಗಿವೆ, ಗಜಮುಖ-ಅವನ ಮುಖವು ಆನೆಯ ಮುಖದಂತಿದೆ. ಅವನು ಚತುರ್ಭುಜ-ಅವನಿಗೆ ನಾಲ್ಕು ಕೈಗಳು, ಅವನು ಪಾಶಾಂಕುಶಧಾರಿ-ಕೈಗಳಲ್ಲಿ ಪಾಶ ಮತ್ತು ಅಂಕುಶಗಳನ್ನು ಹಿಡಿದಿದ್ದಾನೆ. ಕಾಯಿಸಿದ ಬಂಗಾರದಂತೆ ಅವನ ಅಂಗಕಾಂತಿಯು ದೇದೀಪ್ಯಮಾನವಾಗಿದೆ. ಅವನಿಗೆ ಇಪ್ಪತ್ತೊಂದು ಹೆಸರುಗಳಿವೆ, ಅವನ ಇಪ್ಪತ್ತು ಒಂದು ಹೆಸರುಗಳನ್ನು ಹೇಳುತ್ತ ಭಕ್ತಿಯಿಂದ ಇಪ್ಪತ್ತೊಂದು ಪತ್ರಗಳನ್ನಾಗಲೀ (ಎಲೆ) ಗರಿಕೆಯನ್ನಾಗಲೀ ಸಮರ್ಪಿಸಬೇಕು. ಆ ಇಪ್ಪತ್ತೊಂದು ಹೆಸರುಗಳನ್ನೂ ಹೇಳುತ್ತೇನೆ ಕೇಳು.

೧) ಓಂ ಸುಮುಖಾಯ ನಮಃ ಎಂದು ಹೇಳಿ ಶಮೀ ಪತ್ರವನ್ನುಸಮರ್ಪಿಸಬೇಕು. ಹೀಗೆಯೇ

೨) ಗಣಾಧೀಶಾಯ ನಮಃ ಭೃಂಗಾರ ಪತ್ರ

೩) ಉಮಾಪುತ್ರಾಯ ನಮಃ ಬಿಲ್ವ ಪತ್ರ,

೪) ಗಜಮುಖಾಯ ನಮಃ ದೂರ್ವಾ ಪತ್ರ (ಗರಿಕೆ),

೫) ಲಂಬೋದರಾಯ ನಮಃ ಬದರೀ ಪತ್ರ

೬) ಹರಸೂನವೇ ನಮಃ ಧತ್ತೂರ ಪತ್ರ,

೭) ಶೂರ್ಪಕರ್ಣಾಯ ನಮಃ ತುಲಸೀದಲ,

೮) ವಕ್ರತುಂಡಾಯ ನಮಃ ಸೇವಂತಿಕೆಯ ಪತ್ರ

೯) ಗುಹಾನುಜಾಯ ನಮಃಅಪಾಮಾರ್ಗಪತ್ರ

೧೦) ಏಕದಂತಾಯ ನಮಃ ವನಭಂಟಾ ಪತ್ರ

೧೧) ಹೇರಂಬಾಯ ನಮಃ ಸಿಂದೂರ ಪತ್ರ

೧೨) ಚತುರ್ಹೋತ್ರೇ ನಮಃ ತೇಜ ಪತ್ರ,

೧೩) ಸರ್ವೇಶ್ವರಾಯ ನಮಃ ಅತಸೀ ಪತ್ರ,

ಇಲ್ಲಿ ಇಪ್ಪತ್ತು ಒಂದು ಒಂದು ಹೆಸರುಗಳಿಂದ ಇಪ್ಪತ್ತು ಒಂದು ಪತ್ರಗಳನ್ನು ಸಮರ್ಪಿಸಬೇಕೆಂದು ಹೇಳಿ ಹದಿಮೂರು ಹೆಸರುಗಳು ಮತ್ತು ಹದಿಮೂರು ಪತ್ರಗಳನ್ನು ಹೇಳಿದ್ದಾರೆ. ಆದರೆ ಸಂಗ್ರಹ ಗ್ರಂಥಗಳಲ್ಲಿ ಈ ಹದಿಮೂರು ಹೆಸರುಗಳಲ್ಲದೆ ಮತ್ತು ಎಂಟು ಹೆಸರುಗಳು ಎಂಟು ಪತ್ರಗಳ ಹೆಸರುಗಳನ್ನು ಹೇಳಿದ್ದಾರೆ.

೧೪) ವಿಕಟಾಯ ನಮಃ

೧೫) ಇಭತುಂಡಾಯ ನಮಃ ಅಶ್ಮಾತೆ ಪತ್ರ

೧೬) ವಿನಾಯಕಾಯ ನಮಃ ಅರ್ಕ ಪತ್ರ

೧೭) ಕಪಿಲಾಯ ನಮಃ ಅರ್ಜುನ ಪತ್ರ,

೧೮) ವಿಕಟಾಯ ನಮಃ ದೇವದಾರು ಪತ್ರ
೧೯) ಭಾಲಚಂದ್ರಾಯ ನಮಃ ಮರುಗ ಪತ್ರ
೨೦) ಸುರಾಗ್ರಜಾಯ ನಮಃ ಗಾಂಧಾರೀ ಪತ್ರ,
೨೧) ಸಿದ್ಧಿ ವಿನಾಯಕಾಯ ನಮಃ ಕೇತಕೀ ಪತ್ರ.

ಈ ಮಂತ್ರಗಳಿಂದ ಇಪ್ಪತ್ತೊಂದು ಪತ್ರಗಳನ್ನು ಅರ್ಪಿಸಬೇಕು. ಗಣೇಶನು ಈ ಪತ್ರ ಪೂಜೆಯಿಂದ ಹೆಚ್ಚು ಪ್ರಸನ್ನನಾಗುತ್ತಾನೆ. ಅನಂತರ ಎರಡು ದೂರ್ವಾದಲಗಳಿಂದ ಸಹಿತವಾಗಿ ಗಂಧ, ಪುಷ್ಪ, ಅಕ್ಷತೆಗಳನ್ನು ಗಣೇಶನಿಗೆ ಅರ್ಪಿಸಬೇಕು. ಈ ರೀತಿ ಪೂಜೆ ಮಾಡಿ ಭಕ್ತಿ ಭಾವದಿಂದ ನೈವೇದ್ಯ ರೂಪವಾಗಿ ಐದು ಲಡ್ಡುಗಳನ್ನು ಅರ್ಪಿಸಬೇಕು. ಅನಂತರ ಪುನಃ ಆಚಮನ ಇತ್ಯಾದಿಗಳನ್ನು ಸಮರ್ಪಿಸಿ ಪ್ರಾರ್ಥನಾ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ವಿಸರ್ಜಿಸಬೇಕು, ಆ ದಿನ ಗಣೇಶನ ಸುವರ್ಣ ಪ್ರತಿಮೆಯನ್ನು ಪೂಜಿಸಬೇಕು, ಎಲ್ಲಾ ಸಾಮಗ್ರಿಗಳ ಸಹಿತವಾಗಿ ಆಚಾರ್ಯನಿಗೆ ದಕ್ಷಿಣಾ ಸಹಿತವಾಗಿ ಆ ಪ್ರತಿಮೆಯನ್ನು ದಾನ ಕೊಡಬೇಕು, ಇತರ ಬ್ರಾಹ್ಮಣರಿಗೂ ದಕ್ಷಿಣೆ ಕೊಡಬೇಕು, ಈ ರೀತಿ ಐದು ವರ್ಷಗಳ ವರೆಗೆ ಭಕ್ತಿ ಪೂರ್ವಕವಾಗಿ ಗಣೇಶನ ಪೂಜೆಯನ್ನೂ ಉಪಾಸನೆ ಯನ್ನೂ ವ್ರತವನ್ನೂ ಮಾಡಿದ ಮಾನವನು ಇಹದಲ್ಲಿಯೂ ಪರಲೋಕದಲ್ಲಿಯೂ ಶುಭಕರವಾದ ಭೋಗಗಳನ್ನು ಪಡೆಯುತ್ತಾನೆ. ಈ ಚತುರ್ಥಿಯ ದಿವಸ ರಾತ್ರಿ ಚಂದ್ರನ ಕಡೆಗೆ ಸರ್ವಥಾ ನೋಡಕೂಡದು. ಹಾಗೆ ನೋಡುವವನಿಗೆ ಮಿಥ್ಯಾಪವಾದ (ಸುಳ್ಳಾದ ಆರೋಪ) ಉಂಟಾಗುತ್ತದೆ. ಇದರಲ್ಲಿ ಸಂಶಯವೇ ಇಲ್ಲ. ಒಂದು ವೇಳೆ ಅಕಸ್ಮಾತ್ತಾಗಿ ಚಂದ್ರನು ಕಣ್ಣಿಗೆ ಬಿದ್ದರೆ ಆ ದೋಷ ಶಾಂತಿಗಾಗಿ ಪೌರಾಣಿಕವಾದ ಈ ಮಂತ್ರವನ್ನು ಪಠಿಸಬೇಕು.

**ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾ ರೋದೀಃ ತವಹ್ಯೇಷಸ್ಯಮಂತಕಃ ॥**

ಸಿಂಹವು ಪ್ರಸೇನನನ್ನು ಕೊಂದಿತು. ಸಿಂಹವನ್ನು ಜಾಂಬವಂತನು ಕೊಂದನು. ಜಾಂಬವಂತನು ಸ್ಯಮಂತಕ ಮಣಿಯನ್ನು ತಂದು ನಿನಗೆ ಕೊಟ್ಟಿದ್ದಾನೆ, ಬಾಲಕನೇ! ಅಳಬೇಡ, ಈ ಸ್ಯಮಂತಕ ಮಣಿಯು ನಿನ್ನದು. (ಇದರ ಕಥೆಯೂ ವಿಸ್ತಾರವಾಗಿ ಗಣೇಶ ವ್ರತ ಕಥೆಯಲ್ಲಿ ಬರುತ್ತದೆ) ಆಶ್ವಯುಜ ಶುಕ್ಲ ಚತುರ್ಥಿಯ ದಿವಸ ಪುರುಷ ಸೂಕ್ತವನ್ನು ಹೇಳಿ ಕಪರ್ದೀಶ ವಿನಾಯಕನ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

## ಕರ್ಕಚತುರ್ಥೀ ವ್ರತ

ಕಾರ್ತಿಕ ಕೃಷ್ಣ ಚತುರ್ಥಿಯ ದಿವಸ ಕರ್ಕಚತುರ್ಥಿ ವ್ರತವಿದೆ. ಈ ವ್ರತದಲ್ಲಿ ಕೇವಲ ಸ್ತ್ರೀಯರಿಗೆ ಮಾತ್ರ ಅಧಿಕಾರ, ಅದರ ವಿಧಿಯು ಹೀಗಿದೆ, ಸ್ತ್ರೀಯು ಸ್ನಾನ ಮಾಡಿ ವಸ್ತ್ರ ಭೂಷಣಗಳಿಂದ ಅಲಂಕೃತಳಾಗಿ ಗಣೇಶನ ಪೂಜೆಯನ್ನು ಮಾಡಬೇಕು, ಗಣೇಶನ ಎದುರು ಪಕ್ವಾನ್ನ ಭರಿತವಾದ ಹತ್ತು ಕರವೆಗಳನ್ನು ಇಟ್ಟು ಭಕ್ತಿಯಿಂದ ಪವಿತ್ರ ಚಿತ್ತಳಾಗಿ ಗಣೇಶನಿಗೆ ಸಮರ್ಪಿಸಬೇಕು. ನೈವೇದ್ಯವನ್ನು ಸಮರ್ಪಿಸುವಾಗ ಈ ಮಾತನ್ನು ಹೇಳಬೇಕು. 'ಭಗವಂತನಾದ ಕಪರ್ದಿ ಗಣೇಶನು ನನ್ನಲ್ಲಿ ಪ್ರಸನ್ನನಾಗಲಿ! ಅನಂತರ ಸುವಾಸಿನೀ ಸ್ತ್ರೀಯರಿಗೂ ಬ್ರಾಹ್ಮಣರಿಗೂ ಇಚ್ಛಾನುಸಾರವಾಗಿ ಆ ಕರವೆಗಳನ್ನು ಹಂಚಬೇಕು.

ರಾತ್ರಿಯಲ್ಲಿ ಚಂದ್ರೋದಯ ಸಮಯದಲ್ಲಿ ಚಂದ್ರನಿಗೆ ವಿಧಿ ಪೂರ್ವಕವಾಗಿ ಅರ್ಘ್ಯವನ್ನು ಕೊಡಬೇಕು, ವ್ರತದ ಪೂರ್ತಿಗಾಗಿ ತಾನೂ ಮೃಷ್ಟಾನ್ನ ಭೋಜನ ಮಾಡಬೇಕು. ನಾರಿಯರು ಹದಿನಾರು ವರ್ಷ ಅಥವಾ ಹತ್ತು ವರ್ಷ ಈ ವ್ರತವನ್ನು ಮಾಡಿ ಉದ್ಯಾಪನ ಮಾಡಬೇಕು, ಅನಂತರ ಈ ವ್ರತವನ್ನು ಮಾಡದಿದ್ದರೂ ಅಡ್ಡಿಯಿಲ್ಲ, ಅಥವಾ ಸೌಭಾಗ್ಯಾಪೇಕ್ಷೆಯಿಂದ ತನ್ನ ಜೀವನದಲ್ಲಿ ಪೂರ್ತಿಯಾಗಿ ಈ ವ್ರತವನ್ನು ಅನುಷ್ಠಾನ ಮಾಡುತ್ತ ಇರಬಹುದು, ಏಕೆಂದರೆ ಸ್ತ್ರೀಯರಿಗೆ ಈ ವ್ರತಕ್ಕೆ ಸಮಾನವಾದ ಸೌಭಾಗ್ಯ ವ್ರತವು ಮೂರು ಲೋಕದಲ್ಲಿಯೂ ಬೇರೊಂದಿಲ್ಲ.

ಮುನೀಶ್ವರನೇ! ಮಾರ್ಗಸಿರ ಶುದ್ಧ ಚತುರ್ಥಿಯಿಂದ ಆರಂಭಿಸಿ ಒಂದು ವರ್ಷದ ವರೆಗೆ ಪ್ರತಿ ಚತುರ್ಥಿಯ ದಿವಸವೂ ಏಕಭುಕ್ತ (ಒಂದು ಹೊತ್ತು ಊಟ)ವನ್ನು ಮಾಡಬೇಕು. ಮರು ವರ್ಷ ಆ ತಿಥಿಯಂದು ರಾತ್ರಿಯಲ್ಲಿ ಮಾತ್ರ ಒಂದು ಹೊತ್ತು ಊಟ ಮಾಡಿ ಕಾಲ ಕಳೆಯಬೇಕು. ಮೂರನೆಯ ವರ್ಷ ಅಯಾಚಿತ (ಬೇಡಿದೆ ಸಿಕ್ಕದ ವಸ್ತು) ದಿಂದ ಒಂದು ಹೊತ್ತು ಮಾತ್ರ ಊಟ ಮಾಡಬೇಕು. ನಾಲ್ಕನೆಯ ವರ್ಷ ಆ ತಿಥಿಯ ದಿನ ಉಪವಾಸವಾಗಿದ್ದು, ಒಂದು ವರ್ಷ ಕಳೆಯಬೇಕು. ಈ ರೀತಿ ವ್ರತಪಾಲನ ಮಾಡಿ ನಾಲ್ಕು ವರ್ಷಗಳನ್ನು ಮುಗಿಸಿ ಕೊನೆಯಲ್ಲಿ ವ್ರತ ಸ್ನಾನ ಮಾಡಬೇಕು, ವ್ರತ ಸಮಾಪ್ತಿಯ ಸಮಯದಲ್ಲಿ ಈ ಮಹಾ ವ್ರತವನ್ನು ಮಾಡಿದವನು ಬಂಗಾರದ ಗಣೇಶನನ್ನು ಮಾಡಿಸಬೇಕು. ಅದನ್ನು ಮಾಡಿಸಲು ಅಶಕ್ತನಾದರೆ ಅರಿಸಿನ ಪುಡಿಯಿಂದ ಗಣೇಶ ಪ್ರತಿಮೆಯನ್ನು ರಚಿಸಬಹುದು. ಅನಂತರ ನಾನಾವರ್ಣಗಳಿಂದ ನೆಲದ ಮೇಲೆ ಅಷ್ಟದಲ ಸಹಿತವಾದ ಕಮಲವನ್ನು ಚಿತ್ರಿಸಿ ಅದರ ಮೇಲೆ ಕಲಶವನ್ನು ಸ್ಥಾಪಿಸಬೇಕು. ಕಲಶದ ಮೇಲೆ ತಾಮ್ರದ ಪಾತ್ರೆಯನ್ನಿಡಬೇಕು. ಆ ಪಾತ್ರೆಯನ್ನು ಬೆಳ್ಳಗಿರುವ ಅಕ್ಕಿಯಿಂದ ತುಂಬಿಸಿ ಅದರಮೇಲೆ ಎರಡು ವಸ್ತ್ರಗಳಿಂದ ಆಚ್ಛಾದಿತವಾದ ಗಣೇಶನ ಪ್ರತಿಮೆಯನ್ನು ಅಲಂಕರಿಸಿ ಇಡಬೇಕು. ಅನಂತರ ಗಂಧ ಪುಷ್ಪಾದಿಗಳಿಂದ ಗಣೇಶನನ್ನು ಪೂಜಿಸಿ ಗಣೇಶನ ಪ್ರಸನ್ನತೆಗಾಗಿ ಲಡ್ಡುವಿನ ನೈವೇದ್ಯವನ್ನು ಅರ್ಪಿಸಬೇಕು. ರಾತ್ರಿಯಲ್ಲಿ ಸಂಗೀತ ವಾದ್ಯ, ಪುರಾಣ, ಹರಿಕಥೆ ಮುಂತಾದವುಗಳಿಂದ ಜಾಗರಣ ಮಾಡಬೇಕು.

ಅನಂತರ ನಿರ್ಮಲ ಪ್ರಾತಃ ಕಾಲದಲ್ಲಿ ಸ್ನಾನ ಮಾಡಿ ನಿತ್ಯಾಹ್ನಿಕಗಳನ್ನು ಪೂರೈಸಿ ಎಳ್ಳು, ಅಕ್ಕಿ, ಜವೆಗೋಧಿ, ಹಳದಿಸಾಸಿವೆ, ತುಪ್ಪ, ಕಲ್ಲು ಸಕ್ಕರೆ, ಸಹಿತವಾಗಿ ವಿಧಿಪೂರ್ವಕವಾಗಿ ಹೋಮ ಮಾಡಬೇಕು. ಗಣ, ಗಣಾಧಿಪ, ಕೂಷ್ಮಾಂಡ, ತ್ರಿಪುರಾಂತಕ, ಲಂಬೋದರ, ಏಕದಂತ, ರುಕ್ಮದಂಷ್ಟ್ರ, ವಿಘ್ನಪ, ಬ್ರಹ್ಮಯಮ, ವರುಣ, ಸೋಮ, ಸೂರ್ಯ, ಹುತಾಶನ, ಗಂಧಮಾದೀ, ಪರಮೇಷ್ಠೀ, ಎಂಬ ಹದಿನಾರು ಹೆಸರುಗಳಿಗೆ ಆದಿಯಲ್ಲಿ ಪ್ರಣವ (ಓಂಕಾರ) ಕೊನೆಯಲ್ಲಿ ನಮಃ ಶಬ್ದ ಜೋಡಿಸಿ ಶಬ್ದಗಳ ಚತುರ್ಥಿ ವಿಭಕ್ತಿಯನ್ನು ಹೇಳಿ ಸ್ವಾಹಾಕಾರ ಪೂರ್ವಕವಾಗಿ ಹೋಮ ಮಾಡಬೇಕು. ಒಟ್ಟು ಹದಿನಾರು ಆಹುತಿಗಳನ್ನು ಕೊಡಬೇಕು. ಅದರ ಅನಂತರ 'ವಕ್ರತುಂಡಾಯ ಹುಂ' ಎಂಬ ಮಂತ್ರವನ್ನು ಹೇಳುತ್ತ ನೂರು ಎಂಟು (೧೦೮) ಆಹುತಿಗಳನ್ನು ಕೊಡಬೇಕು. ಅನಂತರ ವ್ಯಾಹೃತಿಗಳ (ಭೂ, ಭುವಃ, ಸ್ವಃ) ಮೂಲಕ ಯಥಾಶಕ್ತಿ ಹೋಮ ಮಾಡಿ ಪೂರ್ಣಾಹುತಿಯನ್ನು ಕೊಡಬೇಕು. ದಿಕ್ಪಾಲಕರ ಪೂಜೆಯನ್ನು ಮಾಡಿ ಇಪ್ಪತ್ತುನಾಲ್ಕು ಬ್ರಾಹ್ಮಣರಿಗೆ ಲಡ್ಡು

ಮತ್ತು ಪಾಯಸದಿಂದ ಭೋಜನ ಮಾಡಿಸಬೇಕು. ಇದರ ಅನಂತರ ಆಚಾರ್ಯನಿಗೆ ಕರುವಿನಿಂದ ಕೂಡಿದ ಗೋವನ್ನು ದಾನ ಮಾಡಬೇಕು. ಇತರ ಬ್ರಾಹ್ಮಣರಿಗೂ ಯಥಾಶಕ್ತಿಯಾಗಿ ಭೂರಿದಕ್ಷಿಣೆಯನ್ನು ಕೊಡಬೇಕು. ಅನಂತರ ಪ್ರದಕ್ಷಿಣೆ ನಮಸ್ಕಾರವನ್ನು ಮಾಡಿ ಬ್ರಾಹ್ಮಣರನ್ನು ಬೀಳ್ಕೊಟ್ಟು, ಪ್ರಸನ್ನ ಚಿತ್ತನಾಗಿ ತಾನು ಕುಟುಂಬ ಪರಿವಾರ ಸಮೇತನಾಗಿ ಬಂಧುಗಳೊಡನೆ ಗಣೇಶನ ಪ್ರಸಾದವನ್ನು ಸ್ವೀಕರಿಸಿ ಭೋಜನ ಮಾಡಬೇಕು. ಈ ವ್ರತವನ್ನು ಪಾಲಿಸುವ ಮನುಷ್ಯನು ಗಣೇಶನ ಅನುಗ್ರಹದಿಂದ ಇಹಲೋಕದಲ್ಲಿ ಉತ್ತಮ ಭೋಗವನ್ನು ಭೋಗಿಸಿ ಅನಂತರ ಪರಲೋಕದಲ್ಲಿ ವಿಷ್ಣುವಿನ ಸಾಯುಜ್ಯವನ್ನೇ ಪಡೆಯುತ್ತಾನೆ, ನಾರದನೇ, ಕೆಲವರು ಈ ವ್ರತವನ್ನು ವರವ್ರತ ಎಂದು ಹೇಳುತ್ತಾರೆ. ಇದರ ವಿಧಾನ ಮತ್ತು ಫಲದಲ್ಲಿ ವ್ಯತ್ಯಾಸವಿಲ್ಲ.

ಪುಷ್ಯ ಮಾಸ ಚತುರ್ಥಿಯ ದಿನ ಭಕ್ತಿ ಪೂರ್ವಕವಾಗಿ ವಿಘ್ನೇಶ್ವರನಾದ ಗಣೇಶನ ಪ್ರಾರ್ಥನೆ ಮಾಡಿ ಒಬ್ಬ ಬ್ರಾಹ್ಮಣನಿಗೆ ಲಡ್ಡುವಿನಿಂದ ಭೋಜನ ಮಾಡಿಸಿ ದಕ್ಷಿಣೆ ಕೊಡಬೇಕು. ಈ ವ್ರತವನ್ನು ಮಾಡಿದ ಮಾನವನು ಧನ ಸಂಪತ್ತಿಯನ್ನು ಹೊಂದುತ್ತಾನೆ.

ಸಂಕಷ್ಟಿ ವ್ರತ, ಮಾಘ, ಬಹುಳ ಚತುರ್ಥೀ ದಿನ - 'ಸಂಕಷ್ಟಿ ವ್ರತ'ವನ್ನು ಅನುಷ್ಠಾನ ಮಾಡಬೇಕೆಂದು ಹೇಳುತ್ತಾರೆ. ಆ ದಿವಸ ಪ್ರಾತಃಕಾಲ ಉಪವಾಸದ ಸಂಕಲ್ಪವನ್ನು ಮಾಡಿ ಬೆಳಗ್ಗಿನಿಂದ ಚಂದ್ರೋದಯದವರೆಗೆ ವ್ರತಾನುಷ್ಠಾನ ಮಾಡುವವನು ನಿಯಮದಿಂದ ಇರಬೇಕು. ಮನಸ್ಸನ್ನು ವಶದಲ್ಲಿಟ್ಟುಕೊಳ್ಳಬೇಕು. ಮಣ್ಣಿನ ಗಣೇಶ ಮೂರ್ತಿಯನ್ನು ಮಾಡಿಸಿ ಅದನ್ನು ಒಳ್ಳೆಯ ಆಸನದಲ್ಲಿ ಅಲಂಕರಿಸಿ ಇಡಬೇಕು. ಚಂದ್ರೋದಯ ಸಮಯದಲ್ಲಿ ಗಣೇಶನನ್ನು ವಿಧಿಪೂರ್ವಕವಾಗಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಅನಂತರ ಮೋದಕ ಮತ್ತು ಎಳ್ಳಿನ ಲಡ್ಡುವಿನ ನೈವೇದ್ಯವನ್ನು ಗಣೇಶನಿಗೆ ಅರ್ಪಿಸಬೇಕು. ತಾಮ್ರದ ಪಾತ್ರೆಯಲ್ಲಿ ಕೆಂಪು ಚಂದನ, ದರ್ಭೆ, ಗರಿಕೆ, ಹೂವು, ಅಕ್ಷತೆ, ಶಮೀಪತ್ರ, ಮೊಸರು ಮತ್ತು ನೀರು ಇವುಗಳನ್ನೆಲ್ಲ ಸೇರಿಸಿ ಚಂದ್ರನಿಗೆ ಅರ್ಘ್ಯ ಕೊಡಬೇಕು. ಆ ಸಮಯದಲ್ಲಿ ಈ ಮಂತ್ರವನ್ನು ಭಕ್ತಿಯಿಂದ ಉಚ್ಚರಿಸಬೇಕು - ಹಾಗೆಯೇ ಅರ್ಘ್ಯವನ್ನು ಕೊಡಬೇಕು.

ಗಗನಾರ್ಣವ ಮಾಣಿಕ್ಯ ಚಂದ್ರ ದಾಕ್ಷಾಯಣೀಪತೇ ।
ಗೃಹಾಣಾರ್ಘ್ಯಂ ಮಯಾ ದತ್ತಂ ಗಣೇಶ ಪ್ರತಿರೂಪಕ ॥

ನಾ. ಪು. ೧೧೩-೭೭

"ಆಕಾಶವೆಂಬ ಸಮುದ್ರದ ಮಾಣಿಕ್ಯದಂತಿರುವ ಚಂದ್ರನೇ, ದಕ್ಷ ಪ್ರಜಾಪತಿಯ ಮಗಳಾದ ರೋಹಿಣಿಗೆ ಪ್ರಿಯತಮನೇ, ಗಣೇಶನ ಪ್ರತಿ ಬಿಂಬದಂತಿರುವವನೇ, ನೀನು ಈಗ ನಾನು ಕೊಟ್ಟಿರುವ ಅರ್ಘ್ಯವನ್ನು ಸ್ವೀಕರಿಸು." ಈ ರೀತಿ ಈ ದಿವ್ಯವಾದ ಮತ್ತು ಪಾಪನಾಶಕವಾದ ಅರ್ಘ್ಯವನ್ನು ಕೊಟ್ಟು ಯಥಾಶಕ್ತಿಯಾಗಿ ಉತ್ತಮ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅನಂತರ ತಾನೂ ಅವರ ಆಜ್ಞೆಯನ್ನು ಪಡೆದು ಪ್ರಸಾದ ರೂಪವಾದ ಭೋಜನವನ್ನು ಮಾಡಬೇಕು. ಬ್ರಾಹ್ಮಣ ಶ್ರೇಷ್ಠನೇ, ಈ ರೀತಿ ಕಲ್ಯಾಣಕರವಾದ ಸಂಕಷ್ಟಿ ವ್ರತವನ್ನು ಅನುಷ್ಠಾನ ಮಾಡುವ ಮಾನವನು ಗಣೇಶನ ಅನುಗ್ರಹದಿಂದ ಧನ ಧಾನ್ಯ ಸಂಪನ್ನನಾಗುತ್ತಾನೆ. ಎಂದೂ ಸಂಕಟಕ್ಕೆ ಗುರಿಯಾಗುವುದಿಲ್ಲ.

## ಗೌರೀ ವ್ರತ

ಮಾಘ ಶುಕ್ಲ ಚತುರ್ಥಿಯ ದಿನ 'ಗೌರೀವ್ರತ'ವನ್ನು ಅನುಷ್ಠಾನ ಮಾಡುತ್ತಾರೆ. ಗಂಡಸರೂ ವಿಶೇಷತಃ ಸ್ತ್ರೀಯರು ಈ ವ್ರತವನ್ನು ಆಚರಿಸಬೇಕು. ಕುಂದ (ಮಾಗಿ) ಮಲ್ಲಿಗೆಯ ಹೂವು ಮತ್ತು ಇತರ ಪುಷ್ಪಗಳೂ, ಕುಂಕುಮ, ಕೆಂಪಾದ ದಾರ, ಕೆಂಪು ಹೂವು, ಕೆಂಪು ಅರಗು, ಧೂಪ, ದೀಪ, ಬಲಿ, ಬೆಲ್ಲ, ಶುಂಠಿ, ಹಾಲು, ಹಾಲಿನ ಪಾಯಸ, ಉಪ್ಪು ಪಾಲಕ (ತರಕಾರಿ) ಮೊದಲಾದವುಗಳಿಂದ ಗೌರೀ ದೇವಿಯ ಪೂಜೆಯನ್ನು ಮಾಡಬೇಕು. ನಾರಿಯು ತನ್ನ ಸೌಭಾಗ್ಯವೃದ್ಧಿಗೋಸ್ಕರ ಸುಮಂಗಲಿ ಸ್ತ್ರೀಯರನ್ನೂ ಬ್ರಾಹ್ಮಣರನ್ನೂ ಪೂಜಿಸಬೇಕು. ಅವರಿಗೆ ಭೋಜನಾದಿಗಳನ್ನು ಮಾಡಿಸಿ ಬೀಳ್ಕೊಟ್ಟು, ತಾನೂ ಬಂಧು, ಮಿತ್ರರೊಡನೆ ಭೋಜನ ಮಾಡಬೇಕು. ಬ್ರಾಹ್ಮಣ ಶ್ರೇಷ್ಠನೇ! ಇದೇ ಸೌಭಾಗ್ಯ ಮತ್ತು ಆರೋಗ್ಯಗಳನ್ನು ಕೊಡತಕ್ಕ ಮತ್ತು ಅವುಗಳನ್ನು ಹೆಚ್ಚಿಸತಕ್ಕ 'ಗೌರೀ ವ್ರತವು'. ಹೆಂಗಸರು ಮತ್ತು ಗಂಡಸರು ಪ್ರತಿ ವರ್ಷ ಈ ವ್ರತದ ಅನುಷ್ಠಾನ ಮಾಡಬೇಕು. ಕೆಲವರು ಈ ವ್ರತವನ್ನು 'ಢುಂಢಿವ್ರತ' ಎಂದು ಹೇಳುತ್ತಾರೆ. ಕೆಲವರ ಅಭಿಪ್ರಾಯದಂತೆ ಇದಕ್ಕೆ 'ಕುಂಡ ವ್ರತ' ಎಂದು ಹೆಸರು. ಮತ್ತೆ ಕೆಲವರು ಇದನ್ನು ಲಲಿತಾ ವ್ರತ ಅಥವಾ ಶಾಂತಿ ವ್ರತ ಎಂದು ಹೇಳುತ್ತಾರೆ. ನಾರದ ಮುನಿಯೇ, ಈ ವ್ರತದ ತಿಥಿಯ ದಿನ ಮಾಡಿದ ಸ್ನಾನ, ದಾನ, ಜಪ ಮತ್ತು ಹೋಮ ಎಲ್ಲವೂ ಗಣೇಶನ ದಯೆಯಿಂದ ಸಾವಿರ ಪಾಲು ಹೆಚ್ಚು ಫಲದಾಯಕವಾಗುತ್ತದೆ.

## ಢುಂಡಿರಾಜ ವ್ರತ

ಫಾಲ್ಗುನ ಮಾಸದ ಚತುರ್ಥಿಯ ದಿವಸ ಮಂಗಲಕರವಾದ 'ಢುಂಡಿರಾಜ ವ್ರತ'ವು ಬರುತ್ತದೆ. ಆ ದಿನ ಗಣೇಶನ ಪೂಜೆಯನ್ನು ಮಾಡಿ ಎಳ್ಳಿನ ಉಂಡೆಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕು. ಗಣೇಶನ ಆರಾಧನೆಯಲ್ಲಿಯೇ ಆ ದಿನ ಆಸಕ್ತ ಚಿತ್ತನಾಗಿ ಎಳ್ಳಿನಿಂದಲೇ, ದಾನ, ಹೋಮ ಮತ್ತು ಪೂಜೆಗಳನ್ನು ನೈವೇದ್ಯಾದಿಗಳನ್ನು ಮಾಡುವ ಮನುಷ್ಯನು, ಗಣೇಶನ ಅನುಗ್ರಹದಿಂದ ಸಿದ್ಧಿಯನ್ನು ಪಡೆಯುತ್ತಾನೆ. ಮಾನವನು ಪ್ರಯತ್ನ ಪೂರ್ವಕವಾಗಿ ಚಿನ್ನದ ಗಣೇಶನ ಮೂರ್ತಿಯನ್ನು ಭಕ್ತಿಯಿಂದ ಷೋಡಶೋಪಚಾರ ಪೂಜೆಮಾಡಿ ಅದನ್ನು ದಾನ ಕೊಡಬೇಕು. ಈ ದಾನ ವಿಧಿಯಿಂದ ಎಲ್ಲ ಸಂಪತ್ತುಗಳ ಅಭಿವೃದ್ಧಿಯುಂಟಾಗುತ್ತದೆ. ಬ್ರಾಹ್ಮಣಶ್ರೇಷ್ಠನೇ! ಯಾವ ಮಾಸದಲ್ಲಿಯೇ ಆಗಲಿ, ಚತುರ್ಥೀ ತಿಥಿಯು ಮಂಗಳವಾರ ಅಥವಾ ಭಾನುವಾರ ಬಂದರೆ ಅದು ವಿಶೇಷ ಫಲಪ್ರದವಾಗುತ್ತದೆ. ಕೃಷ್ಣಪಕ್ಷವಾಗಲೀ, ಶುಕ್ಲಪಕ್ಷವೇ ಆಗಲಿ, ಚತುರ್ಥಿಯ ದಿನ ಭಕ್ತಿಯಿಂದ ಗಣೇಶನ ಪೂಜೆ ಮಾಡಿದವನು ಗಣೇಶನ ವಿಶೇಷಾನುಗ್ರಹವನ್ನು ಪಡೆಯುತ್ತಾನೆ.

## ಎಲ್ಲ ತಿಂಗಳುಗಳಲ್ಲಿ ಮಾಡಬೇಕಾದ ಪಂಚಮಿತಿಥಿಯ ವ್ರತಗಳು, ಪೂಜೆ ಇತ್ಯಾದಿಗಳ ವರ್ಣನೆ

**ಸನಾತರು:-** ಬ್ರಾಹ್ಮಣಶ್ರೇಷ್ಠನೇ, ಕೇಳು. ಈಗ ನಾನು ನಿನಗೆ ಪಂಚಮೀ ವ್ರತಗಳನ್ನು ಹೇಳುತ್ತೇನೆ. ಅವುಗಳನ್ನು ಭಕ್ತಿಯಿಂದ ಅನುಷ್ಠಾನ ಮಾಡಿದರೆ ಸಮಸ್ತಕಾಮಿತಗಳನ್ನು ಪಡೆಯುತ್ತಾನೆ.

## ಮತ್ಸ್ಯಜಯಂತಿ

ಚೈತ್ರ ಶುಕ್ಲ ಪಂಚಮೀ ತಿಥಿಯ ದಿನ ಮತ್ಸ್ಯಜಯಂತಿಯು ಬರುತ್ತದೆ. ನಾರಾಯಣಭಕ್ತರು ಆ ದಿನ ನಾರಾಯಣನ ಮತ್ಸ್ಯ ಮೂರ್ತಿಯ ಪೂಜೆಯನ್ನು ಮಾಡಿ, ಮಹೋತ್ಸವವನ್ನು ಆಚರಿಸಬೇಕು. ಈ ದಿನವನ್ನು ಶ್ರೀ ಪಂಚಮೀ ಎಂದು ಹೇಳುತ್ತಾರೆ. ಆದ್ದರಿಂದ ಆ ದಿನ ಗಂಧ, ಪುಷ್ಪ ಮುಂತಾದ ಉಪಚಾರಗಳಿಂದ ಮತ್ತು ಕ್ಷೀರಪಾಯಸ ಮೊದಲಾದ ನೈವೇದ್ಯಗಳಿಂದ ಲಕ್ಷ್ಮೀ ದೇವಿಯ ಪೂಜೆಯನ್ನು ಮಾಡಬೇಕು. ಯಾರು ಆ ದಿನ ಲಕ್ಷ್ಮಿಯನ್ನು ಪೂಜಿಸುತ್ತಾನೋ ಅವನನ್ನು ಲಕ್ಷ್ಮಿಯು ಎಂದೂ ಕೈ ಬಿಡುವುದಿಲ್ಲ. ಅದೇ ದಿನ ಪೃಥ್ವೀ ವ್ರತ, ಚಾಂದ್ರವ್ರತ, ಮತ್ತು ಹಯಗ್ರೀವ ವ್ರತಗಳೂ ಬರುತ್ತವೆ. ಯಾವ ಮನುಷ್ಯನು ಈ ವ್ರತಗಳ ಪ್ರತ್ಯೇಕವಾದ ಫಲಸಿದ್ಧಿಯನ್ನು ಬಯಸುತ್ತಾನೋ ಅವನು ಆಯಾ ವ್ರತಗಳನ್ನೂ ಮಾಡಬೇಕು.

## ವೈಶಾಖಪಂಚಮೀ

ವೈಶಾಖ ಪಂಚಮಿಯ ದಿನ ಎಲ್ಲ ನಾಗಗಣಗಳಿಂದ ಕೂಡಿ ಶೇಷನೆಂಬ ನಾಗರಾಜನ ಪೂಜೆಯನ್ನು ಯಾವನು ಮಾಡುತ್ತಾನೋ ಅವನು ಸಮಸ್ತವಾದ ಮನೋಭಿಲಾಷೆ ಗಳನ್ನು ಪಡೆದು ಸುಖ ಪಡೆಯುತ್ತಾನೆ. ಇದೇ ರೀತಿ ಜ್ಞಾನಿಯಾದ ಮನುಷ್ಯನು ಜ್ಯೇಷ್ಠ ಮಾಸದ ಪಂಚಮಿತಿಥಿಯ ದಿನ ಪಿತೃಗಳ ಪೂಜೆಯನ್ನು ಮಾಡಬೇಕು. ಆ ದಿನ ಬ್ರಾಹ್ಮಣ ಭೋಜನ ಮಾಡಿಸಿದರೆ ಎಲ್ಲ ಮನೋಭಿಲಾಷೆಗಳೂ ಸಿದ್ಧಿಸುತ್ತವೆ.

## ಶುಭಾಶುಭ ನಿದರ್ಶನ ವ್ರತ

ಮಹಾಮುನಿಯಾದ ನಾರದನೇ ಆಷಾಢ ಶುಕ್ಲಪಂಚಮಿಯ ದಿನ ವಾಯುವಿನ ಪರೀಕ್ಷೆ ಮಾಡುವ ದಿನ, ಆ ದಿನ ಊರಿನ ಹೊರಗೆ ಬಂದು ಸಮತಲವಾದ ಭೂಮಿಯ ಮೇಲೆ ನಿಂತು ಬಿದಿರಿನ ಉದ್ದವಾದ ಒಂದು ಕೋಲನ್ನು ಭೂಮಿಯಲ್ಲಿ ಬಲವಾಗಿ ನಿಲ್ಲಿಸಬೇಕು. ಅದರ ತುದಿಗೆ ಐದು ಭಾಗವುಳ್ಳ ಐದು ಬಣ್ಣವುಳ್ಳ ಪತಾಕೆಯನ್ನು ಕಟ್ಟಬೇಕು. ಅನಂತರ ಬಿದಿರುಕೋಲಿನ ಬುಡದಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ದಿಕ್ಪಾಲಕರನ್ನು ಸ್ಥಾಪಿಸಿ ಪೂಜೆಯನ್ನು ಮಾಡಬೇಕು, ಅನಂತರ ಸಾವಧಾನ ಚಿತ್ತನಾಗಿ ವಾಯುವನ್ನು ಪರೀಕ್ಷಿಸಬೇಕು. ಮೊದಲನೆಯ ಯಾಮದಲ್ಲಿ ಯಾವ ದಿಕ್ಕಿನಿಂದ ಗಾಳಿಯು ಬೀಸುತ್ತದೆಯೋ ಆ ದಿಕ್ಕಿಗೆ ದಿಕ್ಪಾಲಕನ ಪೂಜೆಯನ್ನು ಚೆನ್ನಾಗಿ ಮಾಡಬೇಕು. ಈ ರೀತಿ ನಾಲ್ಕು ಯಾಮಗಳವರೆಗೆ ಅಲ್ಲಿ ನಿರಾಹಾರನಾಗಿದ್ದು ದಿಕ್ಪಾಲಕರ ಪೂಜೆ ಮಾಡಬೇಕು ಸಾಯಂಕಾಲ ಮನೆಗೆ ಬಂದು ಅಲ್ಪಾಹಾರವನ್ನು ಸ್ವೀಕರಿಸಿ ಏಕಾಗ್ರಚಿತ್ತನಾಗಿ ಲೋಕಪಾಲಕರಿಗೆ ನಮಸ್ಕಾರ ಮಾಡಿ ಪವಿತ್ರವಾದ ಭೂಮಿಯ ಮೇಲೆ ಪರಮಾತ್ಮನ ಧ್ಯಾನಮಾಡುತ್ತ ಮಲಗಬೇಕು. ಆ ದಿನ ರಾತ್ರಿ ನಾಲ್ಕನೆಯ ಜಾವದಲ್ಲಿ ಯಾವ ರೀತಿ ಸ್ವಪ್ನವಾಗುತ್ತದೆಯೋ ಅದು ಸತ್ಯವಾಗುತ್ತದೆ. ಇದರಲ್ಲಿ ಸಂಶಯವೇ ಇಲ್ಲ ಇದು ಪರಮೇಶ್ವರನ ವಾಣಿಯಾಗಿದೆ. ಆ ದಿವಸ ಅಶುಭ ಸ್ವಪ್ನವಾದರೆ ಭಗವಂತನಾದ ಪರಮೇಶ್ವರನ ಧ್ಯಾನ ಮತ್ತು ಪೂಜೆ ಮಾಡುತ್ತ ಮರುದಿನದ ಎಂಟು ಜಾವಗಳನ್ನು ಉಪವಾಸದಿಂದ ಕಳೆಯಬೇಕು. ಅನಂತರ ಎಂಟು ಮಂದಿ ಜ್ಞಾನಿಗಳಿಗೆ ಭೋಜನ ಮಾಡಿಸಬೇಕು. ಆಗ ಅಶುಭ ಸ್ವಪ್ನದ ಅಶುಭ ಫಲವಾಗುವುದಿಲ್ಲ. ಶುಭ

ಫಲಗಳೇ ಉಂಟಾಗುತ್ತವೆ. ಈ ವ್ರತವನ್ನು ಶುಭಾಶುಭ ನಿದರ್ಶನವ್ರತ ಎಂದು ಹೇಳುತ್ತಾರೆ - ಇದು ಮನುಷ್ಯನಿಗೆ ಇಹಪರಗಳಲ್ಲಿ ಸೌಭಾಗ್ಯವನ್ನು ಕೊಡತಕ್ಕ ವ್ರತವು.

## ಅನ್ನವ್ರತ

ಶ್ರಾವಣಮಾಸದ ಕೃಷ್ಣ ಪಕ್ಷದ ಚತುರ್ಥಿಯ ದಿನ ಹಗಲು ಸ್ವಲ್ಪವೇ ಉಳಿದಿರುವಾಗ, ಹಸಿಯ ಪದಾರ್ಥಗಳನ್ನು (ಅರ್ದ್ರದ್ರವ್ಯ) ದಾನಕೊಡುವುದಕ್ಕೆ ಬೇಕಾದಷ್ಟು ಮಾತ್ರ ಬೇರೆ ಬೇರೆ ಪಾತ್ರೆಗಳಲ್ಲಿಟ್ಟು, ಆ ಪಾತ್ರೆಗಳಲ್ಲಿ ನೀರನ್ನು ತುಂಬಬೇಕು. ಅನಂತರ ಆ ನೀರನ್ನು ಚೆಲ್ಲಬೇಕು. ಮರುದಿವಸ ಪ್ರಾತಃಕಾಲ ಸೂರ್ಯೋದಯ ಸಮಯದಲ್ಲಿ ಸ್ನಾನ ಮಾಡಿ ದೇವತೆಗಳು, ಋಷಿಗಳು ಮತ್ತು ಪಿತೃಗಳಿಗೆ ಚೆನ್ನಾಗಿ ಪೂಜೆ ಮಾಡಬೇಕು. ಅವರಿಗೆ ನೈವೇದ್ಯವನ್ನು ಸಮರ್ಪಿಸಬೇಕು. ಹಿಂದಿನ ದಿನ ತೊಳೆದಿರುವ ಹಸಿ ಧಾನ್ಯಗಳನ್ನು ಸಂತೋಷದಿಂದ ಯಾಚಕರಿಗೆ ಕೊಡಬೇಕು. ಅನಂತರ ಪ್ರದೋಷ ಕಾಲದಲ್ಲಿ ಶಿವಮಂದಿರಕ್ಕೆ ಹೋಗಿ ಲಿಂಗಸ್ವರೂಪಿಯಾದ ಶಿವನಿಗೆ ಗಂಧ ಪುಷ್ಪ ಮುಂತಾದ ಸಾಮಗ್ರಿಗಳಿಂದ ಚೆನ್ನಾಗಿ ಪೂಜೆಯನ್ನು ಮಾಡಬೇಕು. ಅನಂತರ ಒಂದು ಸಾವಿರ ಬಾರಿ ಅಥವಾ ನೂರು ಬಾರಿಯಾದರೂ ಪಂಚಾಕ್ಷರೀ ವಿದ್ಯೆಯ (ಓಂ ನಮಃ ಶಿವಾಯ) ಜಪಮಾಡಬೇಕು. ಅನಂತರ ಶಿವನ ಸ್ತೋತ್ರ ಮಾಡಬೇಕು. ಯಾವಾಗಲೂ ಅನ್ನ ಪ್ರಾಪ್ತಿಗಾಗಿ ಶಿವನನ್ನು ಪ್ರಾರ್ಥಿಸಬೇಕು. ತದನಂತರ ತನ್ನ ಮನೆಗೆ ಬಂದು ಬ್ರಾಹ್ಮಣರೇ ಮುಂತಾದವರಿಗೆ ಪಕ್ವ ಭಕ್ಷ್ಯಗಳನ್ನು ಕೊಟ್ಟು ತಾನೂ ಮೌನವಾಗಿದ್ದುಕೊಂಡೇ ಭೋಜನ ಮಾಡಬೇಕು. ಇದನ್ನು ಅನ್ನವ್ರತವೆಂದು ಹೇಳುತ್ತಾರೆ. ಬ್ರಾಹ್ಮಣಶ್ರೇಷ್ಠನೇ, ಯಾವ ಮಾನವನು ವಿಧಿಪೂರ್ವಕವಾಗಿ ಈ ವ್ರತವನ್ನು ಅನುಷ್ಠಾನ ಮಾಡುತ್ತಾನೋ ಅವನಿಗೆ ಅನ್ನ ಸಮೃದ್ಧಿಯಾಗುತ್ತದೆ. ಪರಲೋಕದಲ್ಲಿ ಸದ್ಗತಿಯೂ ಉಂಟಾಗುತ್ತದೆ.

## ನಾಗರ ಪಂಚಮೀ

ಶ್ರಾವಣ ಮಾಸದ ಶುಕ್ಲ ಪಂಚಮೀ ದಿನ ಆಸ್ತಿಕರೆಲ್ಲರೂ ಆಚರಿಸುವ ನಾಗ ಪಂಚಮೀವ್ರತ. ಆ ದಿನ ಮನೆಯ ಹೆಬ್ಬಾಗಿಲಿನ ಎರಡೂ ಪಾರ್ಶ್ವಗಳಲ್ಲಿ ಸಗಣಿಯಿಂದ ಸರ್ಪಗಳ ಆಕೃತಿಯನ್ನು ಬರೆದು ನಿರ್ಮಿಸಿ ಗಂಧ ಪುಷ್ಪಾದಿಗಳಿಂದ ನಾಗ ಪೂಜೆಯನ್ನು ಮಾಡಬೇಕು. ಅನಂತರ ಇಂದ್ರಾಣೀ ದೇವಿಯ ಪೂಜೆಯನ್ನು ಚಿನ್ನ, ಬೆಳ್ಳಿ, ಮೊಸರು, ಅಕ್ಷತೆ, ದರ್ಭೆ, ಧೂಪ, ದೀಪ, ಮತ್ತು ನೈವೇದ್ಯ ಮುಂತಾದವುಗಳಿಂದ ಮಾಡಬೇಕು. ಉಳಿದೆಲ್ಲ ದೇವತೆಗಳ ಪೂಜೆಯನ್ನೂ ಮಾಡಿ, ಆ ದ್ರವ್ಯಗಳಿಗೆ ನಮಸ್ಕಾರ ಮಾಡಿ ಭಕ್ತಿಯಿಂದ ಪ್ರಾರ್ಥನೆ ಮಾಡುತ್ತ ಶ್ರೇಷ್ಠಬ್ರಾಹ್ಮಣರಿಗೆ ಆ ಚಿನ್ನ ಬೆಳ್ಳಿ ಮುಂತಾದ ದ್ರವ್ಯಗಳನ್ನು ಸಮರ್ಪಿಸಿ ನಮಸ್ಕರಿಸಬೇಕು. ನಾರದನೇ, ಈ ರೀತಿ ಭಕ್ತಿ ಭಾವದಿಂದ ದ್ರವ್ಯದಾನ ಮಾಡುವ ಮನುಷ್ಯನು ಧನಾಧ್ಯಕ್ಷನಾದ ಕುಬೇರನ ಅನುಗ್ರಹದಿಂದ ಸುವರ್ಣ ಮುಂತಾದ ದ್ರವ್ಯಗಳ ಸಮೃದ್ಧಿಯನ್ನು ಹೊಂದುತ್ತಾನೆ. ಆ ದಿನ ಬ್ರಾಹ್ಮಣರಿಗೆ ದಾನ ಮಾಡಿದ ಮೇಲೆ ಅವರಿಗೆ ಭೋಜನ ಮಾಡಿಸಬೇಕು. ತಾನೂ ಬ್ರಾಹ್ಮಣ ಭೋಜನದ ನಂತರ ಹೆಂಗಸರು ಮಕ್ಕಳು ಅಣ್ಣ ತಮ್ಮಂದಿರು ಬಂಧು ಬಾಂಧವರೊಡನೆ ಭೋಜನ ಮಾಡಬೇಕು. ಭಾದ್ರಪದ ಮಾಸದ ಕೃಷ್ಣ ಪಕ್ಷದ ಪಂಚಮಿಯ ದಿನ ಹಾಲಿನಿಂದ ನಾಗಗಳಿಗೆ ಅಭಿಷೇಕ ಮಾಡಿ, ಹಾಲನ್ನು ನಿವೇದಿಸಿ ತೃಪ್ತಿಪಡಿಸಬೇಕು. ಈ ನಾಗಪೂಜೆಯನ್ನು ಮಾಡುವವನು ಮುಂದಿನ ಏಳು ಪೀಳಿಗೆಯಲ್ಲಿ ನಾಗಗಳ ಭಯವಿಲ್ಲದೆ ಸುಖವಾಗಿರುತ್ತಾರೆ.

## ಋಷಿಪಂಚಮೀವ್ರತ

ಭಾದ್ರಪದ ಶುಕ್ಲ ಪಂಚಮೀ ದಿನವು 'ಋಷಿಪಂಚಮಿ' ಎಂದು ಪ್ರಸಿದ್ಧವಾಗಿದೆ. ಆ ದಿವಸ ಶ್ರೇಷ್ಠರಾದ ಸಪ್ತ ಋಷಿಗಳ ಪೂಜೆಯನ್ನು ಮಾಡಬೇಕು. ಪ್ರಾತಃಕಾಲ ನದೀ ಕೆರೆ ಅಥವಾ ಉತ್ತಮವಾದ ಇಳಿಯುವ ಭಾವಿಗಳ ಬಳಿಹೋಗಿ ನಮಸ್ಕಾರಮಾಡಿ ಆಲಸ್ಯವನ್ನು ಬಿಟ್ಟು ಶೀತಜಲದಿಂದ ಅವಗಾಹನ ಸ್ನಾನ ಮಾಡಬೇಕು. ಅನಂತರ ಮನೆಗೆ ಬಂದು ಮಣ್ಣಿನ ವೇದಿಕೆ (ಜಗಲಿಯನ್ನು) ಮಾಡಬೇಕು. ಅದನ್ನು ಸಗಣಿಯಿಂದ ಸಾರಿಸಿ ಪುಷ್ಪಗಳಿಂದ ಅಲಂಕರಿಸಬೇಕು. ಅದರನಂತರ ಆ ವೇದಿಕೆಯ ಮೇಲೆ ದರ್ಭೆಗಳನ್ನು ಹರಡಬೇಕು. ಸಪ್ತರ್ಷಿಗಳಿಗೆ ಪ್ರತ್ಯೇಕವಾದ ದರ್ಭಪುಂಜವನ್ನಿಟ್ಟು ಅದರಲ್ಲಿ ನಾನಾಪ್ರಕಾರವಾದ ಪುಷ್ಪಗಳನ್ನಿಟ್ಟು, ಧೂಪ, ಸುಂದರವಾದ ದೀಪ ಮುಂತಾದವುಗಳಿಂದ ಸಪ್ತರ್ಷಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪೂಜಿಸಬೇಕು. ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ವಸಿಷ್ಠ ಇವರೇ ಸಪ್ತ ಋಷಿಗಳು. ವಿಧಿವತ್ತಾಗಿ ಪ್ರತ್ಯೇಕವಾಗಿ ಅರ್ಘ್ಯವನ್ನು ಅರ್ಘ್ಯಪಾತ್ರಗಳಲ್ಲಿ ತಯಾರಿಸಿ ಅವರಿಗೆ ಅರ್ಘ್ಯವನ್ನು ಕೊಡಬೇಕು. ವ್ರತವಿಧಾನವನ್ನು ಬಲ್ಲ ಮನುಷ್ಯನು ನೇಗಿಲಿನಿಂದ ಉತ್ತು ಕೃಷಿಮಾಡಿದ ಧಾನ್ಯವನ್ನು ಸಮರ್ಪಿಸಬೇಕು. ಸಾಧ್ಯವಾದಷ್ಟು ಪ್ರಯತ್ನದಿಂದ ಸಾಸಿವೆ ಧಾನ್ಯದ (ಶ್ಯಾಮಾಕ) ಅಕ್ಕಿಯಿಂದ ಋಷಿಗಳಿಗೆ ನೈವೇದ್ಯವನ್ನು ತಯಾರಿಸಬೇಕು. ಆ ನೈವೇದ್ಯಗಳನ್ನು ಋಷಿಗಳಿಗೆ ಅರ್ಪಿಸಬೇಕು. ಅವರನ್ನು ದೀಪಾದಿಗಳಿಂದ ಪೂಜೆಯನ್ನು ಮಾಡಿ, ಋಷಿಗಳನ್ನು ವಿಸರ್ಜಿಸಬೇಕು. ಋಷಿಗಳ ಪ್ರಸಾದರೂಪವಾದ ಅನ್ನವನ್ನು ತಾನೂ ಸ್ವೀಕರಿಸಬೇಕು. ಈ ವ್ರತದ ಪಾಲನೆಯಿಂದ ಮನುಷ್ಯನು ಮನಸ್ಸಿನಲ್ಲಿಯ ಫಲವನ್ನು ಪಡೆಯುತ್ತಾನೆ, ಸಪ್ತರ್ಷಿಗಳ ಅನುಗ್ರಹದಿಂದ ದಿವ್ಯ ವಿಮಾನದಲ್ಲಿ ಕುಳಿತು ದಿವ್ಯ ಲೋಕಕ್ಕೆ ಹೋಗುತ್ತಾನೆ.

## ಉಪಾಂಗ ಲಲಿತಾವ್ರತ

ಆಶ್ವಿನ ಶುಕ್ಲಪಂಚಮಿಯ ದಿನ ಉಪಾಂಗಲಲಿತಾವ್ರತ ಎಂಬ ಉತ್ತಮ ವ್ರತವು ಬರುತ್ತದೆ, ಶಕ್ತಿಯನ್ನು ಅನುಸರಿಸಿ ಶ್ರೀ ಲಲಿತಾದೇವಿಯ ಸುವರ್ಣಮಯ ಮೂರ್ತಿಯನ್ನು ಮಾಡಿಸಿ ಷೋಡಶೋಪಚಾರಗಳಿಂದ ಆ ದೇವಿಯನ್ನು ವಿಧಿವತ್ತಾಗಿ ಪೂಜಿಸಬೇಕು, ಸಹಸ್ರನಾಮಗಳಿಂದ ಅರ್ಚಿಸಬೇಕು. ವ್ರತದ ಪೂರ್ತಿಗೋಸ್ಕರ ಮಧುರವಾದ ಕಜ್ಜಾಯ, ಹಣ್ಣು, ತುಪ್ಪಗಳನ್ನು ಬ್ರಾಹ್ಮಣರಿಗೆ ದಾನಮಾಡಿ ದಕ್ಷಿಣೆ ಕೊಡಬೇಕು, ಅನಂತರ ಕೆಳಗೆ ಹೇಳಿದಂತೆ ಪ್ರಾರ್ಥನೆ ಮಾಡಿ ಲಲಿತಾದೇವಿಯನ್ನು ವಿಸರ್ಜಿಸಬೇಕು.

ಸವಾಹನಾ ಶಕ್ತಿಯುತಾ ವರದಾ ಪೂಜಿತಾ ಮಯಾ ।
ಮಾತರ್ಮಾಮನುಗೃಹ್ಯಾಥ ಗಮ್ಯತಾಂ ನಿಜಮಂದಿರಂ

ನಾ.ಪು. ೧೧೪-೫೨

ವಾಹನ, ಶಕ್ತಿಗಳಿಂದ ಕೂಡಿದ ವರಪ್ರದಳಾದ ಲಲಿತಾದೇವಿಯನ್ನು ನಾನು ಪೂಜೆಮಾಡಿದೆ. ಅಮ್ಮಾ, ನೀನು ನನ್ನನ್ನು ಅನುಗ್ರಹಿಸಿ ನಿನ್ನ ನಿಜಮಂದಿರಕ್ಕೆ ತೆರಳುವವಳಾಗು.

## ಜಯಾವ್ರತ

ಕಾರ್ತಿಕ ಶುಕ್ಲಪಂಚಮಿಯದಿನ 'ಜಯಾವ್ರತ'ವು ಬರುತ್ತದೆ. ಸಮಸ್ತ ಪಾಪಗಳ

ನಾಶಕ್ಕೋಸ್ಕರ ಶ್ರದ್ಧಾಪೂರ್ವಕವಾಗಿ ಈ ವ್ರತವನ್ನು ಮಾಡಬೇಕು. ಬ್ರಾಹ್ಮಣಶ್ರೇಷ್ಠನೇ! ಏಕಾಗ್ರಚಿತ್ತನಾಗಿ ವಿಧಿಪೂರ್ವಕವಾಗಿ ಷೋಡಶೋಪಚಾರಗಳಿಂದ ಜಯಾದೇವಿಯ ಪೂಜೆಯನ್ನು ಮಾಡಲಿಕ್ಕಾಗಿ ತಾನು (ಮೊದಲೇ) ಪವಿತ್ರ ಮತ್ತು ವಸ್ತ್ರಾಲಂಕಾರಗಳಿಂದ ಭೂಷಿತನಾಗಬೇಕು. ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿ ದಕ್ಷಿಣೆಯನ್ನು ಕೊಟ್ಟು ಅವನನ್ನು ಬೀಳ್ಕೊಡಬೇಕು, ಅನಂತರ ತಾನು ಮೌನಿಯಾಗಿದ್ದು ಭೋಜನ ಮಾಡಬೇಕು, ಜಯಾವ್ರತದ ದಿನ ಪ್ರಾತಃಕಾಲದಲ್ಲಿ ಭಕ್ತಿಪೂರ್ವಕವಾಗಿ ಸ್ನಾನಮಾಡಬೇಕು. ಆದ್ದರಿಂದ ಎಲ್ಲಾ ಪಾಪಗಳೂ ನಾಶವಾಗುತ್ತವೆ. ಅಶ್ವಮೇಧ ಯಜ್ಞದ ಕೊನೆಯಲ್ಲಿ ಅವಭೃಥಸ್ನಾನ ಮಾಡಿದರೆ ಯಾವ ಫಲ ಬರುತ್ತದೆಯೋ, ಜಯಾ ಪಂಚಮೀ ದಿನ ಸ್ನಾನ ಮಾಡಿದರೆ ಅಂತಹ ಫಲ ಬರುತ್ತದೆ.

ಮಾರ್ಗಶಿರ ಶುದ್ಧ ಪಂಚಮಿಯ ದಿನ ವಿಧಿಪೂರ್ವಕವಾಗಿ ನಾಗಗಳ ಪೂಜೆಯನ್ನು ಮಾಡಿದರೆ, ಆ ಪೂಜಕನಿಗೆ ಸರ್ಪಗಳ ಭಯ ಉಂಟಾಗುವುದಿಲ್ಲ. ಬಂಧು ಬಾಂಧವರೊಡನೆ ಆ ವ್ರತನಿಷ್ಠನು ಸುಖವಾಗಿ ಪ್ರಸನ್ನತೆಯಿಂದ ಬಾಳುತ್ತಾನೆ. ಪುಷ್ಯ ಶುಕ್ಲ ಪಕ್ಷದ ಪಂಚಮಿಯ ದಿನ ಭಗವಂತನಾದ ಮಧುಸೂಧನನ ಪೂಜೆಯನ್ನು ಮಾಡುವ ಮನುಷ್ಯನು ತನ್ನ ಮನೋಭಿಲಾಷೆಯ ಫಲವೆಲ್ಲವನ್ನೂ ಪಡೆಯುತ್ತಾನೆ. ಇದೇ ರೀತಿ ಮಾಘ ಮತ್ತು ಫಾಲ್ಗುನಗಳ ಪಂಚಮಿಯಲ್ಲಿಯೂ ಮಧುಸೂಧನ ಪೂಜೆಯಿಂದ ಫಲವು ದೊರಕುತ್ತದೆ. ನಾರದನೇ, ಪ್ರತಿಯೊಂದು ಮಾಸದ ಶುಕ್ಲ ಪಂಚಮಿಯಂದು ನಾಗಪೂಜಾ, ಕೃಷ್ಣ ಪಂಚಮಿಯ ದಿನ ಪಿತೃ ದೇವತೆಗಳ ಪೂಜೆ ಮಾಡುವುದು ಉತ್ತಮವೆಂದು ಬಲ್ಲವರು ಹೇಳುತ್ತಾರೆ.

## ಒಂದು ವರ್ಷದ ಎಲ್ಲ ಷಷ್ಠಿಯ ದಿನ ಮಾಡಬೇಕಾದ ವ್ರತಗಳು, ದೇವ ಪೂಜೆ, ವಿಧಿ ಮತ್ತು ಮಹಿಮೆಗಳು

**ಸನಾತನರು ಹೇಳುತ್ತಾರೆ:-** ನಾನು ಈಗ ಷಷ್ಠೀ ವ್ರತಗಳ ವರ್ಣನೆಯನ್ನು ಮಾಡುತ್ತೇನೆ ಕೇಳು. ಸರಿಯಾದ ರೀತಿಯಲ್ಲಿ ಷಷ್ಠೀ ವ್ರತಗಳನ್ನು ನಡೆಸಿದವನು ತನ್ನ ಮನೋಭೀಷ್ಟಗಳೆಲ್ಲವನ್ನೂ ಪಡೆಯುತ್ತಾನೆ, ಸುಬ್ರಹ್ಮಣ್ಯ ವ್ರತ. ಚೈತ್ರ ಶುದ್ಧ ಷಷ್ಠಿಯ ದಿನ ಪರಮ ಶ್ರೇಷ್ಠವಾದ ಕುಮಾರ (ಸುಬ್ರಹ್ಮಣ್ಯ) ವ್ರತವು ಬರುತ್ತದೆ. ಆ ದಿನ ನಾನಾ ಪ್ರಕಾರವಾದ ಪೂಜಾ ವಿಧಿಗಳಿಂದ ಷಣ್ಮುಖ ಸುಬ್ರಹ್ಮಣ್ಯನನ್ನು ವಿಧಿವತ್ತಾಗಿ ಪೂಜಿಸಿದವನು ಸರ್ವಗುಣ ಸಂಪನ್ನನಾದ ಹಾಗೂ ಚಿರಂಜೀವಿಯಾದ ಪುತ್ರನನ್ನು ಪಡೆಯುತ್ತಾನೆ. ವೈಶಾಖ ಶುಕ್ಲ ಷಷ್ಠಿಯ ದಿವಸ ಕಾರ್ತಿಕೇಯ ಸುಬ್ರಹ್ಮಣ್ಯನ ಪೂಜೆ ಮಾಡಿದವನಿಗೆ ಮಾತೃ ಸುಖ ಲಾಭ (ತಾಯಿಯ ಲಾಲನೆ ಪಾಲನೆಗಳ ಪ್ರಾಪ್ತಿ)ಯಾಗುತ್ತದೆ.

## ಸ್ಕಂದ ವ್ರತ

ಜ್ಯೇಷ್ಠ ಮಾಸದ ಶುಕ್ಲ ಪಕ್ಷದ ದಿನ ಷಷ್ಠೀ ತಿಥಿಯಲ್ಲಿ ವಿಧಿಪೂರ್ವಕವಾಗಿ ಸೂರ್ಯದೇವನ ಪೂಜೆಯನ್ನು ಮಾಡಬೇಕು. ಸೂರ್ಯನ ಕೃಪೆಯಿಂದ ಪೂಜಕನಿಗೆ ಮನಸ್ಸಿನಲ್ಲಿ ಬಯಸಿದ ಭೋಗವು ಸಿಗುತ್ತದೆ. ಆಷಾಢ ಶುಕ್ಲ ಷಷ್ಠಿಯ ದಿನ ಪರಮ ಶ್ರೇಷ್ಠವಾದ ಸ್ಕಂದ ವ್ರತವನ್ನು ಮಾಡಬೇಕು. ಆ ದಿನ ಉಪವಾಸವಾಗಿದ್ದು ಶಿವ

ಪಾರ್ವತಿಯರ ಪ್ರಿಯ ಪುತ್ರನಾದ ಸ್ಕಂದನ ಪೂಜೆಯನ್ನು ವಿಧಿವತ್ತಾಗಿ ಮಾಡುವದರಿಂದ ಮನುಷ್ಯನು ಪುತ್ರ ಪೌತ್ರಾದಿ ಸಂತಾನವನ್ನೂ ಬಯಸಿದ ಭೋಗಗಳನ್ನೂ ಪಡೆಯುತ್ತಾನೆ. ಶ್ರಾವಣ ಶುಕ್ಲ ಷಷ್ಠಿಯ ದಿನ ಉತ್ತಮ ಭಕ್ತಿಭಾವದಿಂದ ಕೂಡಿದವನಾಗಿ ಷೋಡಶೋಪಚಾರಗಳ ಮೂಲಕ ಶರಜನ್ಮನಾದ (ಮೆದೆ ಹುಲ್ಲುಗಳ ರಾಶಿಯಲ್ಲಿ ಹುಟ್ಟಿದ) ಭಗವಂತನಾದ ಸ್ಕಂದನ ಆರಾಧನೆಯನ್ನು ಮಾಡಬೇಕು. ಹೀಗೆ ಮಾಡುವ ಮನುಷ್ಯನು ಷಣ್ಮುಖನ ಅನುಗ್ರಹದಿಂದ ಬಯಸಿದ ಇಷ್ಟಾರ್ಥಗಳನ್ನು ಪಡೆಯುತ್ತಾನೆ.

## ಲಲಿತಾವ್ರತ

ಭಾದ್ರಪದ ಮಾಸದ ಕೃಷ್ಣ ಪಕ್ಷದ ಷಷ್ಠಿಯನ್ನು ಲಲಿತಾ ವ್ರತವೆಂದು ಹೇಳುತ್ತಾರೆ. ಆ ದಿನ ಸ್ತ್ರೀಯರು ವಿಧಿಪೂರ್ವಕವಾಗಿ ಪ್ರಾತಃ ಕಾಲ ಸ್ನಾನ ಮಾಡಿ ಶುಭ್ರವಾದ ಶ್ವೇತ (ಬಿಳಿ) ವಸ್ತ್ರವನ್ನುಟ್ಟು, ಬಿಳಿಯ ಹೂವುಗಳನ್ನು ಮುಡಿದು ನದೀ ಸಂಗಮ ಮರಳನ್ನು ತಂದು ಅದನ್ನು ಉಂಡೆಯಾಗಿ ಮಾಡಿ ಬಿದಿರಿನ ಪಾತ್ರೆಯಲ್ಲಿಡಬೇಕು. ಇದೇ ರೀತಿ ಮರಳಿನ ಐದು ಉಂಡೆಗಳನ್ನು ಮಾಡಿ ಅವುಗಳಲ್ಲಿ ವನವಿಲಾಸಿನೀ ಲಲಿತಾ ದೇವಿಯನ್ನು ಆವಾಹಿಸಿ ಧ್ಯಾನಿಸಬೇಕು. ಕಮಲ, ಕಣಗಿಲೆ, ಕಾಡುಮಲ್ಲಿಗೆ, ತಾಳೆಹೂವು (ಕೇದಗಿ) ಜಾಜಿ, ನೀಲಕಮಲ, ತಗರ, ಎಂಬ ಹೂವು, ಇವುಗಳನ್ನು ಸಂಗ್ರಹಿಸಿ ಇವುಗಳಲ್ಲಿ ಒಂದೊಂದು ಜಾತಿಯ ೧೦೮ ಅಥವಾ ೨೭ ಹೂವುಗಳನ್ನು ಪ್ರತ್ಯೇಕಿಸಿ ಇಟ್ಟುಕೊಳ್ಳಬೇಕು. ಯಾವ ದೋಷವೂ ಇಲ್ಲದಿರುವ ಆ ಹೂವುಗಳ ಹದವಾಗಿ ಅರಳಿರುವ ಮೊಗ್ಗುಗಳಿಂದ ದೇವಿಯನ್ನು ಪೂಜಿಸಬೇಕು. ಪೂಜೆಯ ನಂತರ ಎದ್ದು ನಿಂತುಕೊಂಡು ದೇವಿಯ ಎದುರು ಶಿವಪ್ರಿಯಳಾದ ಲಲಿತಾ ದೇವಿಯನ್ನು ಈ ರೀತಿ ಪ್ರಾರ್ಥಿಸಬೇಕು.

**ಗಂಗಾದ್ವಾರೇ ಕುಶಾವರ್ತೇ, ಬಿಲ್ವಕೇ ನೀಲಪರ್ವತೇ ।**
**ಸ್ನಾತ್ವಾ ಕನಖಲೇ ದೇವಿ ಹರಂ ಲಬ್ಧವತೀ ಪತಿಂ ॥**
**ಲಲಿತೇ ಸುಭಗೇ ದೇವಿ ಸುಖ ಸೌಭಾಗ್ಯದಾಯಿನಿ ।**
**ಅನಂತಂ ದೇಹಿ ಸೌಭಾಗ್ಯಂ ಮಹ್ಯಂ ತುಭ್ಯಂ ನಮೋ ನಮಃ ॥**
**(ನಾರ.ಪೂರ್ವ, ೧೧೫-೧೩-೧೫)**

ದೇವಿ! ನೀನು ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ ಮತ್ತು ಕನಖಲ ತೀರ್ಥಗಳಲ್ಲಿ ಸ್ನಾನ ಮಾಡಿ ತಪಿಸಿ ಭಗವಂತನಾದ ಶಿವನನ್ನು ಪತಿಯನ್ನಾಗಿ ಪಡೆದಿರುವೆ, ಸುಖ ಸೌಭಾಗ್ಯದಾಯಿನಿಯಾದ ಲಲಿತಾದೇವಿ! ನಿನಗೆ ಪುನಃ ಪುನಃ ನಮಸ್ಕಾರ, ನೀನು ನನಗೆ ಅಕ್ಷಯವಾದ ಸೌಭಾಗ್ಯವನ್ನು ಕೊಡುವವಳಾಗು.

ಈ ಮಂತ್ರಗಳಿಂದ ಸಂಪಿಗೆಯ ಸುಂದರವಾದ ಪುಷ್ಪಗಳಿಂದ ಲಲಿತಾದೇವಿಗೆ ಪುಷ್ಪಾರ್ಚನೆ ಮಾಡಿ ಆ ದೇವಿಯ ಎದುರು ನೈವೇದ್ಯವನ್ನಿಡಬೇಕು. ಸೌತೆಕಾಯಿ, ಮುಳ್ಳು ಸೌತೇಕಾಯಿ, ಕುಂಬಳಕಾಯಿ, ತೆಂಗಿನಕಾಯಿ, ದಾಳಿಂಬೆಹಣ್ಣು, ಬಹುಬೀಜ ಫಲ (ಚೇಪೆಕಾಯಿ) ನಿಂಬೆ ಹಣ್ಣು, ತುಂಡೀರ, ಹಾಗಲಕಾಯಿ, ಚಿರ್ಭಟ ಮೊದಲಾದ ಆ ಸಮಯದಲ್ಲಿ ದೊರಕುವ ಹಣ್ಣುಗಳನ್ನು ದೇವಿಯ ಎದುರು ಅಲಂಕಾರವಾಗಿ ಇಡಬೇಕು. ಬೆಳೆದ ಧಾನ್ಯದ ಮೊಳಕೆ, ದೀಪಗಳ ಸಾಲು, ಅಗುರು, ಧೂಪ, ಸೌಹಾಲಕ,

ಕರಂಜಕ, ಮಲ್ಲಿಗೆಯ ಹೂವು, ಕಿವಿಯ ಆಭರಣ, ಮೋದಕ, ಉಪಮೋದಕ ಮತ್ತು ತನ್ನ ವೈಭವಕ್ಕೆ ಅನುಸಾರವಾಗಿ ಇತರ ಅನೇಕ ಪ್ರಕಾರವಾದ ಭಕ್ಷ್ಯಗಳನ್ನು ತಯಾರಿಸಿ ವಿಧಿವತ್ತಾಗಿ ಲಲಿತಾದೇವಿಗೆ ನೈವೇದ್ಯವನ್ನು ಮಾಡಬೇಕು. ರಾತ್ರಿ ಜಾಗರಣೆಯ ಉತ್ಸವವನ್ನು ಮಾಡಬೇಕು. ಜಾಗರಣೆಯನ್ನು ಮುಗಿಸಿ ಸಪ್ತಮೀ ದಿನ ಪ್ರಾತಃ ಕಾಲ ಲಲಿತಾ ದೇವಿಯನ್ನು ನದೀ ತಟಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಗಂಧ ಪುಷ್ಪ ವಾದ್ಯಘೋಷ, ನೈವೇದ್ಯಗಳಿಂದ ಪೂಜಿಸಬೇಕು. ಕೆಲವು ಶ್ರೇಷ್ಠ ಸಾಮಗ್ರಿಗಳನ್ನು ವಿದ್ವಾಂಸರಿಗೆ ದಾನ ಕೊಡಬೇಕು. ಅನಂತರ ಸ್ನಾನ ಮಾಡಿ ಮನೆಗೆ ಬಂದು ಅಗ್ನಿಯಲ್ಲಿ ಹೋಮ ಮಾಡಬೇಕು. ದೇವತೆಗಳು, ಪಿತೃಗಳು, ಮನುಷ್ಯರು ಇವರೆಲ್ಲರನ್ನೂ ಪೂಜಿಸಿ ಸುವಾಸಿನೀ ಸ್ತ್ರೀಯರು, ಕನ್ಯೆಯರು ಮತ್ತು ಹದಿನೈದು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಭೋಜನ ಮಾಡಿಸಿದ ಮೇಲೆ ಬಹಳವಾದ ದಾನವನ್ನು ಕೊಟ್ಟು ಅವರೆಲ್ಲರನ್ನು ಕಳುಹಿಸ ಕೊಡಬೇಕು. ಅನೇಕ ವ್ರತಗಳು, ತಪಸ್ಸು, ದಾನ ಮತ್ತು ನಿಯಮದಿಂದ ಯಾವ ಫಲವು ಪ್ರಾಪ್ತಿಯಾಗುತ್ತದೆಯೋ, ಅದು ಈ ವ್ರತ ಒಂದರಿಂದಲೇ ಸಿಗುತ್ತದೆ. ಈ ವ್ರತವನ್ನು ಮಾಡಿದ ಸ್ತ್ರೀಯು ಮರಣಾನಂತರದಲ್ಲಿ ಶಾಶ್ವತವಾದ ಶಿವಲೋಕವನ್ನು ಸೇರಿ ಅಲ್ಲಿ ಲಲಿತಾದೇವಿಯ ಸಖಿಯಾಗಿ ಬಹುಕಾಲ ಪರ್ಯಂತ ಆನಂದವನ್ನು ಅನುಭವಿಸುತ್ತ ಇರುತ್ತಾಳೆ. ಪುರುಷನು , ಭಗವಂತನಾದ ಶಿವನ ಹತ್ತಿರದಲ್ಲಿದ್ದು ಸುಖವನ್ನು ಅನುಭವಿಸುತ್ತ ಇರುತ್ತಾನೆ.

## ಚಂದನಷಷ್ಠೀ ಮತ್ತು ಕಪಿಲಾಷಷ್ಠೀ

ಭಾದ್ರಪದ ಮಾಸದ ಶುಕ್ಲಪಕ್ಷದ ಷಷ್ಠಿಯನ್ನು 'ಚಂದನಷಷ್ಠೀ' ಎಂದು ಹೇಳುತ್ತಾರೆ. ಆ ದಿನ ದೇವಿಯ ಪೂಜೆಯನ್ನು ಮಾಡಿದ ಮನುಷ್ಯನು ದೇವಿಯ ಲೋಕವನ್ನು ಪಡೆಯುತ್ತಾನೆ. ಆ ದಿನ ಷಷ್ಠಿಯು ರೋಹಿಣೀ ನಕ್ಷತ್ರ, ವ್ಯತೀಪಾತಯೋಗ, ಮಂಗಳವಾರ ಸೇರಿದ್ದರೆ ಅದನ್ನು ಕಪಿಲಾಷಷ್ಠೀ ಎಂದು ಕರೆಯುತ್ತಾರೆ. ಕಪಿಲಾ ಷಷ್ಠಿಯ ದಿನ ಮಾನವನು ವ್ರತನಿಯಮ ತತ್ಪರನಾಗಿ ಸೂರ್ಯ ಭಗವಂತನ ಪೂಜೆಯನ್ನು ಮಾಡಬೇಕು. ಈ ವ್ರತನಾನುಷ್ಠಾನ ಮಾಡಿದವನು ಸೂರ್ಯನ ಅನುಗ್ರಹದಿಂದ ಇಷ್ಟಪಟ್ಟಿರುವ ಭೋಗಗಳನ್ನೆಲ್ಲ ಪಡೆಯುತ್ತಾನೆ. ದೇವರ್ಷಿ ಶ್ರೇಷ್ಠ ನಾರದನೇ, ಆ ದಿನ ಮಾಡಿದ ಅನ್ನದಾನ, ಹೋಮ, ಜಪ ಹಾಗೂ ದೇವತಾ ಋಷಿ ಪಿತೃಗಳ ತರ್ಪಣ ಎಲ್ಲವೂ ಅಕ್ಷಯವಾಗುತ್ತದೆ. ಕಪಿಲಾಷಷ್ಠಿಯ ದಿನ ಸೂರ್ಯ ಭಗವಂತನ ತೃಪ್ತಿಗಾಗಿ ವಸ್ತ್ರ, ಹೂಮಾಲೆ, ಗಂಧ ಮುಂತಾದವುಗಳಿಂದ ಹಾಲು ಕೊಡುವ ಕಪಿಲೆ ಗೋವನ್ನು ಪೂಜಿಸಿ ಅದನ್ನು ವೇದಜ್ಞನಿಗೆ ದಾನ ಕೊಡಬೇಕು. ನಾರದನೆ ಆಶ್ವಯುಜ ಶುದ್ಧ ಷಷ್ಠಿಯ ದಿನ ಗಂಧ ಮುಂತಾದ ಮಂಗಲ ದ್ರವ್ಯಗಳಿಂದ ಕಾತ್ಯಾಯನೀ ದೇವಿಯ ಪೂಜೆಯನ್ನು ಮಾಡಬೇಕು. ಪೂಜೆಯ ಅನಂತರ ದೇವೇಶ್ವರಿಯಾದ ಕಾತ್ಯಾಯನೀ ದೇವಿಯಲ್ಲಿ ಕ್ಷಮಾ ಪ್ರಾರ್ಥನೆಯನ್ನು ಮಾಡಬೇಕು. ಮತ್ತು ನಮಸ್ಕಾರ ಮಾಡಿ ದೇವಿಯನ್ನು ವಿಸರ್ಜಿಸಬೇಕು. ಮೊದಲು ಮರಳಿನಿಂದ ಕಾತ್ಯಾಯನಿಯ ಮೂರ್ತಿಯನ್ನು ನಿರ್ಮಿಸಿ, ಪ್ರತಿಷ್ಠಿಸಿ, ಪೂಜಿಸಬೇಕು. ಹೀಗೆ ಮಾಡಿದರೆ ಕಾತ್ಯಾಯನೀ ದೇವಿಯ ಅನುಗ್ರಹದಿಂದ ಕನ್ಯೆಯು ತನ್ನ ಮನಸ್ಸಿಗೆ ಅನುರೂಪನಾದ ಪತಿಯನ್ನು ಪಡೆಯುತ್ತಾಳೆ. ವಿವಾಹಿತಳಾದ ಸ್ತ್ರೀಯು ತನ್ನ ಮನಸ್ಸಿನಲ್ಲಿ ಬಯಸಿದ ಗುಣಗಳುಳ್ಳ ಒಳ್ಳೆಯ ಪುತ್ರನನ್ನು ಪಡೆಯುತ್ತಾಳೆ. ಕಾರ್ತಿಕ ಶುಕ್ಲ ಷಷ್ಠಿಯ ದಿನ

ಮಹಾತ್ಮನಾದ ಷಣ್ಮುಖನು ಎಲ್ಲಾ ದೇವತೆಗಳೂ ಸೇರಿ ಕೊಟ್ಟಿರುವ ದೇವಸೇನೆಯನ್ನು ಸ್ವೀಕರಿಸಿದನು. ಆದ್ದರಿಂದ ಆ ತಿಥಿಯ ದಿನ ಸಂಪೂರ್ಣ ದೇವಸೇನೆ ಮತ್ತು ಷಣ್ಮುಖನ ಪೂಜೆಯನ್ನು ಚೆನ್ನಾಗಿ ಮಾಡಿದರೆ ಮನೋನುಕೂಲವಾದ ಅನುಪಮ ಸಿದ್ಧಿಯನ್ನು ಪಡೆಯುತ್ತಾನೆ. ಅದೇ ದಿನ ಅಗ್ನಿ ಪೂಜೆಯನ್ನು ಮಾಡಬೇಕೆಂದೂ ಹೇಳಿದ್ದಾರೆ. ಮೊದಲು ಅಗ್ನಿಯನ್ನು ಪೂಜಿಸಿ ಅನೇಕ ಪ್ರಕಾರದ ದ್ರವ್ಯಗಳಿಂದ ಅಗ್ನಿಯಲ್ಲಿ ಹೋಮಿಸಬೇಕು.

## ಚಂಪಾಷಷ್ಠೀ

ಮಾರ್ಗಶೀರ್ಷ ಶುಕ್ಲ ಷಷ್ಠಿಯ ದಿವಸ ಗಂಧ, ಪುಷ್ಪ, ಅಕ್ಷತೆ, ಫಲ, ವಸ್ತ್ರ, ಆಭರಣ ಮತ್ತು ಅನೇಕ ವಿಧದ ನೈವೇದ್ಯಗಳಿಂದ ಸುಬ್ರಹ್ಮಣ್ಯಸ್ವಾಮಿಯ ಪೂಜೆಯನ್ನು ಮಾಡಬೇಕು. ಆ ಷಷ್ಠಿಯು ರವಿವಾರ ಶತಭಿಷಾ ನಕ್ಷತ್ರದಿಂದ ಕೂಡಿದ್ದರೆ ಅದನ್ನು ಚಂಪಾಷಷ್ಠೀ ಎಂದು ಹೇಳುತ್ತಾರೆ. ಸುಖವನ್ನು ಅಪೇಕ್ಷಿಸುವ ಮನುಷ್ಯನು ಆ ದಿನ ಪಾಪನಾಶಕ ವಿಶ್ವೇಶ್ವರನ ದರ್ಶನವನ್ನು ಮಾಡಬೇಕು. ಪೂಜೆ, ವಿಶ್ವೇಶ್ವರನ ಮಹತ್ತ್ವಜ್ಞಾನ, ಸ್ಮರಣಗಳು ಆ ದಿನ ಅತ್ಯವಶ್ಯಕ. ಆ ದಿನ ಮಾಡಿದ ಸ್ನಾನದಾನಾದಿ ಎಲ್ಲ ಶುಭಕರ್ಮಗಳಿಗೂ ಅಕ್ಷಯ ಫಲವಿದೆ. ಪುಷ್ಯ ಮಾಸದ ಶುಕ್ಲ ಪಕ್ಷದ ಷಷ್ಠಿಯ ದಿನ ಸುಖಶಾಂತಿಗಳನ್ನು ಅಪೇಕ್ಷಿಸುವ ಮನುಷ್ಯನು ಈ ದಿನ ಗಂಧ ಮುಂತಾದ ದ್ರವ್ಯಗಳೂ ನೈವೇದ್ಯಗಳೂ, ವಸ್ತ್ರಭೂಷಣಗಳು ಇವುಗಳಿಂದ ಆದಿತ್ಯರೂಪಿಯಾದ ಪರಮಾತ್ಮನ ಪೂಜೆಯನ್ನು ಮಾಡಬೇಕು.

## ವರುಣಷಷ್ಠೀ

ಮಾಘ ಮಾಸದ ಶುಕ್ಲ ಪಕ್ಷದ ಷಷ್ಠಿಯನ್ನು ವರುಣಷಷ್ಠಿ ಎಂದು ಹೇಳುತ್ತಾರೆ. ಆ ದಿನ ಕೆಂಪು ಚಂದನ, ಕೆಂಪು ವಸ್ತ್ರ, ಹೂವು, ಧೂಪ, ದೀಪ - ನೈವೇದ್ಯಗಳಿಂದ ವಿಷ್ಣು - ವರುಣರ ಪೂಜೆಯನ್ನು ಮಾಡಬೇಕು. ಈ ಪೂಜೆಯನ್ನು ಮಾಡಿದವನು ಏನನ್ನು ಮನಸ್ಸಿನಲ್ಲಿ ಕಾಮಿಸುತ್ತಾನೋ ಆ ಫಲವೇ ಸಿದ್ಧಿಸುತ್ತದೆ. ಫಾಲ್ಗುಣ ಮಾಸದ ಶುಕ್ಲ ಪಕ್ಷದ ಷಷ್ಠೀದಿನ ವಿಧಿಪೂರ್ವಕವಾಗಿ ಪಶುಪತಿ ಮಹಾದೇವನ ಮಣ್ಣಿನ ಪ್ರತಿಮೆಯನ್ನು ಮಾಡಿ, ಅಲ್ಲಿ ಈಶ್ವರನನ್ನು ಧ್ಯಾನಿಸಿ ಅವಾಹಿಸಿ ವಿವಿಧ ಉಪಚಾರಗಳಿಂದ ಪೂಜಿಸಬೇಕು. ಆರತಿ ಮಾಡಬೇಕು. ಅನಂತರ ನಮಸ್ಕರಿಸಿ ಕ್ಷಮಾಪ್ರಾರ್ಥನೆ ಮಾಡಿ ಕೈಲಾಸಪರ್ವತಕ್ಕೆ ಹಿಂತಿರುಗಿ ಹೋಗುವಂತೆ ಕೇಳಿಕೊಂಡು ವಿಸರ್ಜಿಸಬೇಕು. ಇದಕ್ಕಿಂತಲೂ ಮೊದಲು ಶತರುದ್ರೀಯ ಮಂತ್ರಗಳಿಂದ ಪ್ರತ್ಯೇಕವಾಗಿ ಪಂಚಾಮೃತ ಸ್ನಾನ ಮಾಡಿಸಿ, ಜಲಸ್ನಾನ ಮಾಡಿಸಿ ಬಿಳಿಯ ಚಂದನವನ್ನು ಹಚ್ಚಿ, ಅಕ್ಷತೆ ಬಿಳಿಯ ಹೂವು, ನಾನಾವಿಧ ಫಲಗಳು, ಬೇರೆ ಬೇರೆ ನೈವೇದ್ಯಗಳಿಂದ ಸರಿಯಾಗಿ ಪೂಜಿಸಬೇಕು. ಅನಂತರವೇ ನೀರಾಜನ ಮಾಡಬೇಕು. ಯಾವ ಸ್ತ್ರೀ ಅಥವಾ ಪುರುಷನು ಈ ಪ್ರಕಾರ ಶಿವನನ್ನು ಪೂಜಿಸುತ್ತಾರೋ ಅವರು ಇಹದಲ್ಲಿ ಶ್ರೇಷ್ಠ ಭೋಗಗಳನ್ನು ಭೋಗಿಸಿ ಕೊನೆಗೆ ಶಿವನ ಸ್ವರೂಪವನ್ನು ಪಡೆಯುತ್ತಾರೆ.

## ಹನ್ನೆರಡು ಸಪ್ತಮಿಗೆ ಸಂಬಂಧಪಟ್ಟ ವ್ರತಗಳು ಮತ್ತು ಅವುಗಳ ಮಾಹಾತ್ಮ್ಯ

ಚೈತ್ರ ಶುಕ್ಲ ಸಪ್ತಮಿಯ ದಿನ ಊರಿನಿಂದ ಹೊರಗೆ ಹೋಗಿ ಯಾವುದಾದರೊಂದು ನದಿ ಅಥವಾ ತಟಾಕದಲ್ಲಿ ಸ್ನಾನ ಮಾಡಿ ಮನೆಗೆ ಬಂದು ಒಂದು ಚೌಕವಾದ ವೇದಿಕೆಯನ್ನು ಮಾಡಿ ಅದನ್ನು ಸಗಣಿಯಿಂದ ಸಾರಿಸಿ ಅದರ ಮೇಲೆ ಬಿಳಿಯ ಮರಳನ್ನು ಹರಡಬೇಕು.

ಅದರ ಮೇಲೆ ಅಷ್ಟದಲ ಪದ್ಮವನ್ನು ಬರೆದು ಅದರ ಕರ್ಣಿಕೆಯಲ್ಲಿ ಸೂರ್ಯನನ್ನು ಸ್ಥಾಪಿಸಬೇಕು. ಪೂರ್ವದಲ್ಲಿಯಜ್ಞಸಾಧಕರಾದ ಇಬ್ಬರು ದೇವತೆಗಳನ್ನು ಆಗ್ನೇಯ ಕೋಣದಲ್ಲಿ ಯಜ್ಞಸಾಧಕರಾದ ಇಬ್ಬರು ಗಂಧರ್ವರನ್ನು, ದಕ್ಷಿಣ ದಲದಲ್ಲಿ ಇಬ್ಬರು ಅಪ್ಸರಸ್ ಸ್ತ್ರೀಯರನ್ನು, ನೈಋತ್ಯದಲ್ಲಿ ಇಬ್ಬರು ರಾಕ್ಷಸರನ್ನು, ಪಶ್ಚಿಮ ದಲದಲ್ಲಿ ಯಜ್ಞಕ್ಕೆ ಸಹಾಯ ಮಾಡುವ ಕಾದ್ರವೇಯರೆಂಬ ಇಬ್ಬರು ನಾಗರನ್ನು, ವಾಯವ್ಯದಲದಲ್ಲಿ ಇಬ್ಬರು ರಾಕ್ಷಸರನ್ನು, ಉತ್ತರದಲದಲ್ಲಿ ಇಬ್ಬರು ಋಷಿಗಳನ್ನು, ಈಶಾನ್ಯದಲದಲ್ಲಿ ಒಂದು ಗ್ರಹವನ್ನು ನ್ಯಾಸಮಾಡಬೇಕು. (ಪ್ರತಿಷ್ಠಿಸಬೇಕು) ಇವರೆಲ್ಲರನ್ನು ಗಂಧಾಢ್ಯ ಪುಷ್ಪ ಮಾಲೆ, ಗಂಧ, ಧೂಪ, ದೀಪ ನೈವೇದ್ಯ, ತಾಂಬೂಲ ಮುಂತಾದವುಗಳಿಂದ ಪೂಜಿಸಿ, ಸೂರ್ಯನಿಗೆ ತುಪ್ಪದಿಂದ ೧೦೮ ಆಹುತಿಗಳನ್ನು ಕೊಡಬೇಕು. ಇತರ ದೇವತೆಗಳಿಗೆ ನಾಮ ಮಂತ್ರದಿಂದ ವೇದಿಕೆಯ ಮೇಲೆಯೇ ಎಂಟು ಎಂಟು ಆಹುತಿಗಳನ್ನು ನೀಡಬೇಕು. ಅನಂತರ ಪೂರ್ಣಾಹುತಿಯನ್ನು ಕೊಟ್ಟು ತನ್ನ ಶಕ್ತ್ಯಾನುಸಾರವಾಗಿ ಜ್ಞಾನಿಗಳಿಗೆ ದಕ್ಷಿಣೆಯನ್ನು ಕೊಡಬೇಕು. ಈ ವ್ರತ ವಿಧಾನವನ್ನು ಮಾಡಿದ ಮಾನವನು ಸಮಸ್ತ ಸೌಖ್ಯವನ್ನು ಪಡೆಯುತ್ತಾನೆ. ಇದರಿಂದ ದೇಹತ್ಯಾಗದ ಅನಂತರ ಸೂರ್ಯಮಂಡಲವನ್ನು ಭೇದಿಸಿ ಪರಮ ಪದಕ್ಕೆ ಹೋಗುತ್ತಾನೆ.

## ಗಂಗಾವ್ರತ ಮತ್ತು ಕಮಲವ್ರತ

ವೈಶಾಖ ಶುದ್ಧ ಸಪ್ತಮಿಯ ದಿನ ರಾಜರ್ಷಿಯಾದ ಜಹ್ನುವು ಸಿಟ್ಟಿನಿಂದ ಗಂಗೆಯನ್ನು ಕುಡಿದ ದಿನ, ಅವನು ಅನಂತರ ಶಾಂತನಾಗಿ ಬಲಕಿವಿಯಿಂದ ಗಂಗೆಯನ್ನು ಬಿಟ್ಟಿದ್ದನು. ಆ ದಿವಸ ಪ್ರಾತಃ ಸ್ನಾನ ಮಾಡಿ ಗಂಗಾಜಲದಲ್ಲಿ, ಗಂಧ, ಪುಷ್ಪ, ಅಕ್ಷತ ಮೊದಲಾದ ಸಮಸ್ತ ಉಪಚಾರಗಳ ಮೂಲಕ ಗಂಗಾ ಪೂಜೆಯನ್ನು ಮಾಡಬೇಕು. ಒಂದು ಸಾವಿರ ಜಲಕುಂಭ ದಾನ ಮಾಡಬೇಕು. ಇದೇ ಗಂಗಾವ್ರತ. ಭಕ್ತಿ ಪೂರ್ವಕವಾಗಿ ಈ ವ್ರತವನ್ನು ಮಾಡಿದರೆ ತನ್ನ ಹಿಂದಿನ ಏಳು ತಲೆ ಮಾರಿನ ಪಿತೃಗಳನ್ನು ಮಾನವನು ಸ್ವರ್ಗ ನಿವಾಸಿಗಳನ್ನಾಗಿ ಮಾಡುತ್ತಾನೆ. ಇದೇ ತಿಥಿಯಲ್ಲಿ ಕಮಲ ವ್ರತವೂ ಬರುತ್ತದೆ. ಪಾತ್ರೆಯಲ್ಲಿ ಎಳ್ಳನ್ನು ತುಂಬಿ ಅದರಲ್ಲಿ ಸುವರ್ಣ ಕಮಲವನ್ನಿಟ್ಟು ಅದರ ಮೇಲೆ ಎರಡು ವಸ್ತ್ರಗಳನ್ನು ಮುಚ್ಚಿ ಗಂಧ ಏರಿಸಿ ಅದರ ನಂತರ.

ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ
ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತುತೇ ॥

ನಾ. ಪೂರ್ವ. ೧೧೬-೧೫-೧೬

ಕೈಯಲ್ಲಿ ಕಮಲವನ್ನು ಧರಿಸಿರುವ ಭಗವಂತನಾದ ಸೂರ್ಯನೇ, ನಿನಗೆ ನಮಸ್ಕಾರ. ಸಂಪೂರ್ಣ ಪ್ರಪಂಚವನ್ನು ಧರಿಸುವ ಸವಿತೃವಿಗೆ ನಮಸ್ಕಾರ, ದಿವಾಕರನೇ. ನಿನಗೆ ನಮಸ್ಕಾರ. ಪ್ರಭಾಕರನೇ, ನಿನಗೆ ನಮಸ್ಕಾರ. ಈ ರೀತಿ ದೇವೇಶ್ವರನಾದ ಸೂರ್ಯನಿಗೆ ನಮಸ್ಕಾರ ಮಾಡಿ ಸೂರ್ಯಾಸ್ತ ಸಮಯದಲ್ಲಿ ತಿಲಪೂರ್ಣವಾದ ಆ ಕುಂಭವನ್ನು ಕಮಲ ಸಹಿತವಾಗಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಕಪಿಲೆಯಾದ ಗೋವನ್ನು ದಾನ ಕೊಡಬೇಕು. ಆ ದಿನ ಅಖಂಡ ಉಪವಾಸವಿದ್ದು ಮರು ದಿವಸ ವ್ರತಕರ್ತನು ಭೋಜನ ಮಾಡಬೇಕು, ಬ್ರಾಹ್ಮಣರಿಗೆ ಭಕ್ತಿಭಾವದಿಂದ ಭೋಜನ ಮಾಡಿಸುವುದರಿಂದ ಈ ವ್ರತವು

ಸಫಲವಾಗುತ್ತದೆ. ಅದೇ ದಿನ ನಿಂಬ ಸಪ್ತಮೀ ವ್ರತವು ಬರುತ್ತದೆ. ಆ ದಿನ 'ಓಂ ಖಖೋಲ್ಕಾಯ ನಮಃ' ಎಂಬ ಮಂತ್ರದಿಂದ ಬೇವಿನ ಎಲೆಯಿಂದ ಸೂರ್ಯನ ಪೂಜೆಯನ್ನು ಮಾಡಬೇಕು. ಪೂಜೆಯನ್ನು ಮುಗಿಸಿ ಬೇವಿನ ಎಲೆಯನ್ನು ತಿಂದು ಮೌನಿಯಾಗಿ ಭೂಮಿಯ ಮೇಲೆ ಮಲಗಬೇಕು, ಮರು ದಿವಸ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನೂ ಕೂಡ ಸಹೋದರ ಬಂಧುಗಳ ಜೊತೆಗೆ ಭೋಜನ ಮಾಡಬೇಕು. ಇದು ನಿಂಬ ಪತ್ರವ್ರತ, ಇದನ್ನು ಆಚರಿಸುವವರು ಎಲ್ಲ ವಿಧವಾದ ಸುಖವನ್ನು ಪಡೆಯುತ್ತಾರೆ.

## ಶರ್ಕರಾ ಸಪ್ತಮೀ ವ್ರತ

ಈ ದಿನ ಶರ್ಕರಾ ಸಪ್ತಮೀವ್ರತವೂ ಬರುತ್ತದೆ, ಈ ವ್ರತವು ಅಶ್ವಮೇಧ ಯಜ್ಞದ ಫಲವನ್ನು ಕೊಡುತ್ತದೆ. ಸಮಸ್ತ ದುಃಖಗಳನ್ನೂ ದೂರ ಮಾಡಿ ಸಂತಾನ ಪರಂಪರೆಯನ್ನು ಹೆಚ್ಚಿಸುವುದು. ಈ ವ್ರತದಲ್ಲಿ ಸಕ್ಕರೆಯ ದಾನ, ಸಕ್ಕರೆಯನ್ನು ಭುಜಿಸುವುದು. ಸಕ್ಕರೆಯ ಭೋಜನ ಮಾಡಿಸುವುದು, ಕರ್ತವ್ಯವಾಗಿದೆ, ಈ ವ್ರತವು ಸೂರ್ಯನಿಗೆ ಅತ್ಯಂತ ಪ್ರಿಯವಾಗಿದೆ. ಪರಮ ಭಕ್ತಿಯಿಂದ ಈ ವ್ರತವನ್ನು ಆಚರಿಸುವವನು ಸದ್ಗತಿಯನ್ನು ಪಡೆಯುತ್ತಾನೆ. ಜ್ಯೇಷ್ಠ ಶುಕ್ಲ ಸಪ್ತಮಿಯ ದಿನ ಇಂದ್ರ ಸೂರ್ಯರ ಉತ್ಪತ್ತಿಯ ದಿನ. ಆ ದಿನ ಉಪವಾಸವಿದ್ದು ಯಾರು ಇಂದ್ರನ ಪೂಜೆ ಮಾಡುತ್ತಾರೋ ಅವರು ದೇವ ರಾಜನ ಅನುಗ್ರಹದಿಂದ ಇಂದ್ರ ಲೋಕದಲ್ಲಿ ಸ್ಥಾನವನ್ನು ಪಡೆಯುತ್ತಾರೆ. ಆಷಾಢ ಶುಕ್ಲ ಸಪ್ತಮಿಯ ದಿನ ವಿವಸ್ವಾನ್ ಸೂರ್ಯನು ಪ್ರಕಟನಾಗಿದ್ದಾನೆ. ಆ ದಿನ ಗಂಧ, ಪುಷ್ಪ ಮುಂತಾದ ಬೇರೆ ಬೇರೆ ಸಾಮಗ್ರಿಗಳ ಮೂಲಕ ಚೆನ್ನಾಗಿ ಸೂರ್ಯನ ಪೂಜೆಯನ್ನು ಮಾಡಿದರೆ ಸೂರ್ಯ ಸಾಯುಜ್ಯ ಪ್ರಾಪ್ತಿಯಾಗುತ್ತದೆ.

## ಅವ್ಯಂಗ ವ್ರತ

ಶ್ರಾವಣ ಶುಕ್ಲ ಸಪ್ತಮಿ ದಿನ ಅವ್ಯಂಗವೆಂಬ ಮಂಗಳಕರವಾದ ವ್ರತವನ್ನು ಮಾಡಬೇಕು. ಈ ವ್ರತದಲ್ಲಿ ಪೂಜಾವಸಾನದಲ್ಲಿ ಸೂರ್ಯನ ಪ್ರಸನ್ನತೆಗಾಗಿ ಹತ್ತಿಯದಾರ ದಿಂದ ಮಾಡಿದ ನಾಲ್ಕು ಮೊಳ ಉದ್ದದ ವಸ್ತ್ರವನ್ನು ದಾನ ಮಾಡಬೇಕು. ಈ ವ್ರತವು ವಿಶೇಷವಾಗಿ ಮಂಗಳಕರವಾಗಿದೆ. ಈ ಸಪ್ತಮಿಯ ಹಸ್ತ ನಕ್ಷತ್ರದಿಂದ ಕೂಡಿದ್ದರೆ ಪಾಪನಾಶಿನೀ ಎಂದು ಹೆಸರನ್ನು ಪಡೆಯುತ್ತದೆ. ಈ ದಿನ ಮಾಡಿದ ದಾನ, ಹೋಮ, ಜಪ ಎಲ್ಲವೂ ಅಕ್ಷಯವಾಗುತ್ತದೆ.

## ಅಮುಕ್ತಾಭರಣ ವ್ರತ

ಭಾದ್ರಪದ ಶುಕ್ಲ ಸಪ್ತಮಿಯ ದಿನ ಅಮುಕ್ತಾಭರಣ ವ್ರತವು ಬರುತ್ತದೆ. ಈ ವ್ರತದಲ್ಲಿ ಉಮಾಸಹಿತನಾದ ಶಂಕರನ ಪೂಜೆಯ ವಿಧಾನವಿದೆ. ಗಂಗಾಜಲ ಮೊದಲಾದವುಗಳಿಂದ ಷೋಡಶೋಪಚಾರ ಪೂಜೆಯ ಮಾಡಿ ಪ್ರಾರ್ಥನೆ ಮತ್ತು ನಮಸ್ಕಾರಗಳನ್ನು ಮಾಡಿ, ಸಂಪೂರ್ಣ ಮನೋರಥಸಿದ್ಧಿಗಾಗಿ ಪೂಜೆಗೈದು ವಿಸರ್ಜನೆಯನ್ನು ಮಾಡಬೇಕು, ಇದನ್ನೇ ಫಲಾಸಪ್ತಮಿ ಎಂದು ಹೇಳುತ್ತಾರೆ. ತೆಂಗಿನಕಾಯಿ, ಗುಳ್ಳದಕಾಯಿ, ಕಿತ್ತಳೆ, ಸೀಬೆಹಣ್ಣು, ನಿಂಬೆಹಣ್ಣು, ಕುಂಬಳಕಾಯಿ (ಕಾಡು ಬದನೆಕಾಯಿ) ಅಡಿಕೆ ಈ ಏಳು, ಹಣ್ಣು ಮಹಾದೇವನ ಮುಂದಿಟ್ಟು ಏಳು ಎಳೆಗಳಿಂದ ಕೂಡಿದ, ಏಳು ಗಂಟುಗಳುಳ್ಳ ಒಂದು ದಾರವನ್ನು ಅರ್ಪಿಸಬೇಕು. ಪುನಃ ಪರಮ ಭಕ್ತಿಯಿಂದ ಅದೆಲ್ಲವನ್ನು ಪೂಜಿಸಿ ಆ ದಾರವನ್ನು ಹೆಂಗಸರು

ಎಡಕೈಯಲ್ಲಿಯೂ ಗಂಡಸರು ಬಲಗೈಯಲ್ಲಿಯೂ ಕಟ್ಟಿಕೊಳ್ಳಬೇಕು. ವರ್ಷ ಪೂರ್ತಿಯಾಗುವವರೆಗೂ ಅದನ್ನು ಕೈಯಲ್ಲಿ ಧರಿಸಿರಬೇಕು. ಏಳು ಬ್ರಾಹ್ಮಣರಿಗೆ ಕ್ಷೀರಪಾಯಸ ಭೋಜನ ಮಾಡಿಸಿ ಕಳುಹಿಸಿಕೊಡಬೇಕು. ಅನಂತರ ವ್ರತ ಪರಿಪೂರ್ತಿಗಾಗಿ ತಾನೂ ಊಟ ಮಾಡಬೇಕು. ಮೇಲೆ ಹೇಳಿದ ಏಳು ಫಲಗಳನ್ನು ಏಳು ಮಂದಿ ಬ್ರಾಹ್ಮಣರಿಗೆ ಕೊಡಬೇಕು. ಈ ರೀತಿ ಏಳು ವರ್ಷಗಳ ಪರ್ಯಂತವಾಗಿ ಈ ವ್ರತವನ್ನು ನಡೆಸಿದರೆ, ವಿಧಿಪೂರ್ವಕವಾಗಿ ಈಶ್ವರನ ಉಪಾಸನೆ ಮಾಡಿದರೆ ವ್ರತಧಾರಿಯಾದ ಮನುಷ್ಯನು ಮಹಾದೇವನ ಸಾಯುಜ್ಯವನ್ನು ಪಡೆಯುತ್ತಾನೆ.

## ಶುಭ ಸಪ್ತಮೀ

ಆಶ್ವಯುಜ ಶುಕ್ಲ ಪಕ್ಷದ ಸಪ್ತಮಿಯನ್ನು ಶುಭಸಪ್ತಮಿ ಎಂದು ಹೇಳುತ್ತಾರೆ. ಆ ದಿವಸ ಸ್ನಾನ ಮತ್ತು ಪೂಜೆಯನ್ನು ಮಾಡಿ ಶ್ರೇಷ್ಠ ಬ್ರಾಹ್ಮಣರ ಆಶೀರ್ವಾದವನ್ನು ಪಡೆದು ವ್ರತವನ್ನು ಆರಂಭಿಸಬೇಕು. ಕಪಿಲೆಗೋವನ್ನು ಪೂಜಿಸಿ ಹೀಗೆ ಪ್ರಾರ್ಥಿಸಬೇಕು.

**ತ್ವಾಮಹಂ ದದ್ಮಿ ಕಲ್ಯಾಣಿ ಪ್ರೀಯತಾಮರ್ಯಮಾ ಸ್ವಯಂ ।**
**ಪಾಲಯ ತ್ವಂ ಜಗತ್ ಕೃತ್ಸ್ನಂ ಯತೋಽಸಿ ಧರ್ಮಸಂಭವಾ ॥**

**ನಾರ.ಪೂ. ೧೧೬-೪೧-೪೨**

ಕಲ್ಯಾಣಿ, ನಾನು ನಿನ್ನನ್ನು ದಾನಮಾಡುತ್ತಿದ್ದೇನೆ, ಈ ದಾನದಿಂದ ಸಾಕ್ಷಾತ್ ಸೂರ್ಯನು ಪ್ರಸನ್ನನಾಗಲಿ, ಧರ್ಮದಿಂದ ಉತ್ಪನ್ನಳಾದ ನೀನು ಸಂಪೂರ್ಣ ಜಗತ್ತಿನ ಪಾಲನೆಯನ್ನು ಮಾಡು,'' ಹೀಗೆ ಹೇಳಿ ವೇದಜ್ಞನಾದ ವಿದ್ವಾಂಸರಿಗೆ ನಮಸ್ಕಾರ ಮಾಡಿ, ಅವನಿಗೆ ಗೋದಾನಮಾಡಿ, ದಕ್ಷಿಣೆಯನ್ನು ಕೊಡಬೇಕು. ತಾನು ಆ ದಿನ ಪಂಚಗವ್ಯವನ್ನು ಮಾತ್ರ ಸೇವಿಸಬೇಕು. ಮರುದಿವಸ ಶ್ರೇಷ್ಠ ವಿಪ್ರನಿಗೆ ಭೋಜನಮಾಡಿಸಿ, ಅನಂತರ ಉಳಿದ ಅನ್ನಾದಿ ಪ್ರಸಾದವನ್ನು ತಾನು ಸ್ವೀಕರಿಸಬೇಕು. ಶ್ರದ್ಧಾ ಪೂರ್ವಕವಾಗಿ ಈ ಶುಭಸಪ್ತಮೀ ವ್ರತವನ್ನು ಅನುಷ್ಠಾನಮಾಡುವವನು ದೇವ ದೇವ ಮಹಾದೇವನ ಅನುಗ್ರಹದಿಂದ ಭೋಗ ಮೋಕ್ಷಗಳೆರಡನ್ನೂ ಪಡೆಯುವನು. ಕಾರ್ತಿಕ ಶುಕ್ಲಪಕ್ಷದ ಸಪ್ತಮಿ-ಶಾಕಸಪ್ತಮಿ, ಆ ದಿನ ಸುವರ್ಣಕಮಲ ಸಹಿತವಾಗಿ ಏಳು ಬಗೆಯ ತರಕಾರಿ ಯನ್ನು ವಿದ್ವಾಂಸರಿಗೆ ದಾನಕೊಟ್ಟು ತಾನು ಶಾಕಭೋಜನ ಮಾತ್ರ ಮಾಡಿ ಆ ದಿನವನ್ನು ಕಳೆಯಬೇಕು, ಮರುದಿನ ಸದಾಚಾರಿಗಳಿಗೆ ಭೋಜನ ಮಾಡಿಸಿ, ದಕ್ಷಿಣೆಕೊಟ್ಟು, ಮೌನವಾಗಿ ತಾನು ಸಹೋದರ ಬಂಧುಗಳೊಡನೆ ಭೋಜನ ಮಾಡಬೇಕು.

## ಮಿತ್ರವ್ರತ

ಮಾರ್ಗಶಿರ ಶುಕ್ಲ ಸಪ್ತಮಿಯ ದಿನ 'ಮಿತ್ರವ್ರತ' ವಿರುತ್ತದೆ. ಶ್ರೀಮನ್ನಾರಾಯಣನ ಬಲಗಣ್ಣು ಆಕಾರವನ್ನು ಧರಿಸಿ ಕಶ್ಯಪರ ತೇಜಸ್ಸಿನಿಂದ ಕೂಡಿ ಅದಿತಿ ದೇವಿಯ ಗರ್ಭದಿಂದ ಮಿತ್ರನೆಂಬ ಸೂರ್ಯನಾಗಿ ಪ್ರಕಟವಾಗಿದ್ದಾನೆ, ಆದ್ದರಿಂದ ಆ ದಿನ ಶಾಸ್ತ್ರೋಕ್ತ ವಿಧಿಯಿಂದ ಮಿತ್ರನ ಪೂಜೆಯಾಗಬೇಕು. ಪೂಜೆ ಮಾಡಿದ ಮೇಲೆ ಮಧುರ (ಸಿಹಿ) ಹುಳಿ ಮುಂತಾದ ರಸಸಾಮಾಗ್ರಿಗಳಿಂದ ಏಳು ಬ್ರಾಹ್ಮಣರಿಗೆ ಭೋಜನಮಾಡಿಸಿ, ಅವರಿಗೆ ಸುವರ್ಣ ದಕ್ಷಿಣೆಯನ್ನು ಕೊಟ್ಟು ಕಳುಹಿಸಿ ತಾನೂ ಭೋಜನ ಮಾಡಬೇಕು. ವಿಧಿಪೂರ್ವಕವಾಗಿ ಈ ವ್ರತವನ್ನು ಅನುಷ್ಠಾನ ಮಾಡಿದವನು ನಿಜವಾಗಿಯೂ ಸೂರ್ಯಲೋಕಕ್ಕೆ ತೆರಳುತ್ತಾನೆ.

## ಅಭಯವ್ರತ

ಪುಷ್ಯ ಶುಕ್ಲ ಸಪ್ತಮಿಯದಿನ ಅಭಯವ್ರತವಿದೆ. ಈ ದಿನ ಉಪವಾಸವಿದ್ದು ಭೂಮಿಯ ಮೇಲೆ ನಿಂತುಕೊಂಡೆ ಪ್ರಾತಃ ಮಧ್ಯಾಹ್ನ ಸಂಜೆಗಳಲ್ಲಿ ಸೂರ್ಯನ ಪೂಜೆ ಮಾಡಬೇಕು. ಹಾಲು ಅನ್ನ ಸಹಿತವಾದ ಒಂದು ಸೇರು ಮಿಠಾಯಿಯನ್ನು ಬ್ರಾಹ್ಮಣನಿಗೆ ದಾನ ನೀಡಬೇಕು. ಏಳು ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ಸುವರ್ಣ ದಕ್ಷಿಣೆಯನ್ನು ಕೊಟ್ಟು ಕಳುಹಿಸಿ ತಾನೂ ಭೋಜನ ಮಾಡಬೇಕು. ಇದು ಎಲ್ಲರಿಗೂ ಅಭಯಕೊಡುವ ವ್ರತ ಎಂದು ಪ್ರಸಿದ್ಧವಾಗಿದೆ. ಬೇರೆ ಕೆಲವರು ಅದೇ ವ್ರತವನ್ನು ಮಾರ್ತಾಂಡವ್ರತ ಎಂದು ಹೇಳುತ್ತಾರೆ. ಎರಡಕ್ಕೂ ಒಬ್ಬನೇ ದೇವತೆಯಾದ್ದರಿಂದ ಅವೆರಡೂ ಒಂದೇ ವ್ರತವೆಂದು ಜ್ಞಾನಿಗಳ ಅಭಿಪ್ರಾಯ.

## ಸರ್ವಾಪ್ತಿ ವ್ರತ

ಮಾಘ ಮಾಸದ ಕೃಷ್ಣ ಪಕ್ಷದ ಸಪ್ತಮಿಯ ದಿನ 'ಸರ್ವಾಪ್ತಿ' ಎಂಬ ವ್ರತವು ಇದೆ. ಆ ದಿನ ಉಪವಾಸವಾಗಿದ್ದು ಸುವರ್ಣನಿರ್ಮಿತವಾದ ಸೂರ್ಯ ಪ್ರತಿಮೆಯನ್ನು ಗಂಧ-ಪುಷ್ಪಾದಿಗಳಿಂದ ಪೂಜಿಸಿ ರಾತ್ರಿ ಜಾಗರಣೆ ಮಾಡಿ ಮರುದಿನ ಏಳು ಮಂದಿ ಜ್ಞಾನಿಗಳಿಗೆ ಹಾಲು ಪಾಯಸದ ಭೋಜನ ಮಾಡಿಸಬೇಕು. ಆ ವಿದ್ವಾಂಸರಿಗೆ ದಕ್ಷಿಣೆ. ತೆಂಗಿನಕಾಯಿ, ಅಗುರುಚಂದನಗಳನ್ನು ಕೊಟ್ಟು, ದಕ್ಷಿಣಾಸಹಿತವಾಗಿ ಸೂರ್ಯಪ್ರತಿಮೆ ಯನ್ನು ಆಚಾರ್ಯರಿಗೆ ಸಮರ್ಪಿಸಬೇಕು. ವಿಶೇಷ ಪ್ರಾರ್ಥನೆ ಮಾಡಿ ಜ್ಞಾನಿಗಳನ್ನು ಕಳುಹಿಸಿ, ತಾನು ಭೋಜನ ಮಾಡಬೇಕು. ಎಲ್ಲ ಅಭಿಲಾಷೆಗಳನ್ನು ಪೂರೈಸುವ ಈ ವ್ರತವು ಶುದ್ಧವೇದಾಂತ ವಿದ್ಯಾಜ್ಞಾನ ಪ್ರದಾಯಕವಾಗಿದೆ.

## ಸರ್ವಾಪ್ತಿ, ತ್ರಿಲೋಚನ ಜಯಂತೀ ಮತ್ತು ಅಚಲಾ ಸಪ್ತಮಿ

ಮಾಘ ಮಾಸದ ಕೃಷ್ಣ ಪಕ್ಷದ ಸಪ್ತಮಿಯ ದಿನ 'ಸರ್ವಾಪ್ತಿ' ಎಂಬ ವ್ರತವು ಇದೆ ತ್ರಿಲೋಚನ ಜಯಂತೀ ಎಂದೂ ಇದಕ್ಕೆ ಹೆಸರಿದೆ. ಇದು ಸರ್ವಪಾಪಪರಿಹಾರಕ, ಅಚಲಾವ್ರತಕ್ಕೆ ರಥಸಪ್ತಮೀ ಎಂದೂ ಹೇಳುತ್ತಾರೆ. ಇದು ಚಕ್ರವರ್ತಿ ಪದವಿಯನ್ನು ಕೊಡತಕ್ಕ ವ್ರತ. ಆ ದಿನ ಚಿನ್ನದ ಸೂರ್ಯ ಪ್ರತಿಮೆಯನ್ನು ಮಾಡಿಸಿ, ಚಿನ್ನದ ಕುದುರೆಗಳನ್ನು ಹೂಡಿದ ಚಿನ್ನದ ರಥದ ಮೇಲೆ ಸೂರ್ಯನನ್ನು ಕುಳ್ಳಿರಿಸಿ ಸುವರ್ಣದಕ್ಷಿಣಾ ಸಹಿತವಾಗಿ ಭಕ್ತಿಯಿಂದ ದಾನಮಾಡಿದವನು ಸೂರ್ಯಲೋಕವನ್ನು ಪಡೆಯುತ್ತಾನೆ. ಆನಂದದಿಂದ ಇರುತ್ತಾನೆ. ಇದೇ ಕೋಟಿಗಟ್ಟಲೆ ಸೂರ್ಯಗ್ರಹಗಳಿಗೆ ಸಮಾನವಾದ ಭಾಸ್ಕರ ಸಪ್ತಮೀ, ಈ ದಿನ ಅರುಣೋದಯ ಸಮಯದಲ್ಲಿ ಎಕ್ಕೆ ಮತ್ತು ಎಲಚಿಯ ಏಳು ಏಳು ಎಲೆಗಳನ್ನು ತಲೆಯ ಮೇಲಿಟ್ಟುಕೊಂಡು ಸ್ನಾನ ಮಾಡಬೇಕು. ಇದರಿಂದ ಏಳು ಜನ್ಮಗಳ ಪಾಪವು ನಾಶವಾಗುತ್ತದೆ. ಇದನ್ನೇ ಪುತ್ರದಾಯಕ ವ್ರತವೆಂದೂ ಹೇಳುತ್ತಾರೆ. ಸ್ವತಃ ಸೂರ್ಯನೇ - ಹೇಳಿದ ಮಾತಿದು - ಯಾವನು ಮಾಘಶುಕ್ಲ ಸಪ್ತಮಿಯಂದು ವಿಧಿಪೂರ್ವಕವಾಗಿ ನನ್ನ ಪೂಜೆಮಾಡುತ್ತಾನೋ, ಅವನಲ್ಲಿ ನಾನು ಸಂತೋಷಪಟ್ಟು ನನ್ನ ಒಂದು ಅಂಶದಿಂದಲೇ ಅವನ ಮಗನಾಗಿ ಹುಟ್ಟುತ್ತೇನೆ. ಆದ್ದರಿಂದ ಆ ದಿನ ಇಂದ್ರಿಯ ನಿಗ್ರಹ ಮಾಡಿ, ಉಪವಾಸವಿದ್ದು ಮರುದಿನ ಜ್ಞಾನಿಗೆ, ಮೊಸರು, ಅನ್ನ, ಹಾಲು ಮತ್ತು ಖೀರುಗಳಿಂದ ಊಟಮಾಡಿಸಬೇಕು.

## ಅರ್ಕಪುಟ ವ್ರತ

ಫಾಲ್ಗುನ ಶುಕ್ಲ ಸಪ್ತಮಿಯದಿನ ಅರ್ಕಪುಟವೆಂಬ ವ್ರತವನ್ನು ಆಚರಿಸಬೇಕು. ಅರ್ಕ (ಎಕ್ಕ)ದ ಎಲೆಗಳಿಂದ ಅರ್ಕ (ಸೂರ್ಯನ) ಪೂಜೆಯನ್ನು ಮಾಡಿ ಅರ್ಕದ ಎಲೆಗಳನ್ನೇ ತಿಂದು 'ಅರ್ಕ ಅರ್ಕ ಅರ್ಕ' ಎಂದೇ ಆ ದಿನ ಜಪಿಸುತ್ತಿರಬೇಕು. ಈ ಅರ್ಕಪುಟ ವ್ರತವು ಧನ, ಪುತ್ರಪ್ರದದ ವ್ರತವಾಗಿದೆ. ಮತ್ತು ಪಾಪನಾಶಕವೂ ಆಗಿದೆ. ವಿಧಿಪೂರ್ವಕ ಹೋಮ ಮಾಡಿ ಇದನ್ನೇ ಯಜ್ಞವ್ರತವೆಂದೂ ಹೇಳುತ್ತಾರೆ. ಹನ್ನೆರಡು ತಿಂಗಳುಗಳಲ್ಲಿಯೂ ಬರುವ ಎಲ್ಲಾ ಸಪ್ತಮೀ ತಿಥಿಗಳಲ್ಲಿಯೂ ಸೂರ್ಯನ ಆರಾಧನೆಯು ಸಮಸ್ತ ಮನೋರಥಗಳನ್ನೂ ಸಾಧಿಸಿಕೊಡುತ್ತದೆ. ಎಂದು ತಿಳಿ, ಹನ್ನೆರಡು ತಿಂಗಳುಗಳ ಅಷ್ಟಮಿಗಳ ಸಂಬಂಧಪಟ್ಟ ವ್ರತಗಳ ವಿಧಿ ಮತ್ತು ಮಹಿಮೆಯನ್ನು ಹೇಳುತ್ತೇನೆ.

**ಸನಾತನರು ನಾರದರಿಗೆ ಹೇಳುತ್ತಾರೆ:-** ನಾರದರೇ, ಚೈತ್ರಮಾಸದ ಶುಕ್ಲ ಪಕ್ಷದ ಅಷ್ಟಮಿಯ ದಿನ ಭವಾನೀವ್ರತವು ಬರುತ್ತವೆ. ಆ ದಿನ ನೂರು ಪ್ರದಕ್ಷಿಣೆಮಾಡಿ ಭವಾನಿಯ ಉತ್ಸವವನ್ನು ಮಾಡಬೇಕು. ಆ ದಿನ ಜಗದಂಬೆಯ ದರ್ಶನವನ್ನು ಮಾಡಿದವರು ಆನಂದವನ್ನು ಹೊಂದುತ್ತಾರೆ. ಆ ದಿನ ಅಶೋಕ ಪುಷ್ಪದ ಮೊಗ್ಗನ್ನು ತಿನ್ನಬೇಕೆಂದೂ ವಿಧಿಯಿದೆ. ಪುನರ್ವಸು ನಕ್ಷತ್ರದಿಂದ ಕೂಡಿದ ಚೈತ್ರ ಮಾಸದ ಶುಕ್ಲಪಕ್ಷದ ಅಷ್ಟಮಿಯ ದಿನ ಅಶೋಕದ ಎಂಟು ಮೊಗ್ಗಗಳನ್ನು ತಿಂದವರು ಶೋಕವನ್ನು ಹೊಂದುವುದಿಲ್ಲ. ಆ ದಿನ ರಾತ್ರಿ ದೇವಿಯ ಪೂಜಾವಿಧಾನವಿರುವುದರಿಂದ ಅದನ್ನು ಮಹಾಷ್ಟಮೀ ಎಂದು ಹೇಳುತ್ತಾರೆ. ವೈಶಾಖ ಶುಕ್ಲ ಪಕ್ಷದ ಅಷ್ಟಮೀ ತಿಥಿಯ ದಿನ ಸ್ನಾನ ಮಾಡಿ ಉಪವಾಸ ಮಾಡಬೇಕು. ಆ ದಿನ ಅಪರಾಜಿತಾದೇವಿಯನ್ನು ಜಟಾಮಾಂಸಿ ಮತ್ತು ಲಾವಂಚಗಳ ನೀರಿನಿಂದ ಸ್ನಾನ ಮಾಡಿಸಿ ಗಂಧ ಮೊದಲಾದ ಉಪಚಾರಗಳಿಂದ ಪೂಜಿಸಬೇಕು. ದೇವಿಗೆ ಸಕ್ಕರೆಯಿಂದ ತಯಾರಿಸಿದ ನೈವೇದ್ಯವನ್ನು ಸಮರ್ಪಿಸಬೇಕು. ಮರುದಿನ ನವಮಿ ಪಾರಣೆಗಿಂತ ಮೊದಲು ಕುಮಾರಿಯರಿಗೆ ದೇವಿಯ ಸಕ್ಕರೆಯ ನೈವೇದ್ಯವನ್ನು ಹಂಚಬೇಕು. ನಾರದನೇ, ಈ ವ್ರತವನ್ನು ಮಾಡುವ ಮನುಷ್ಯನು ದೇವಿಯ ಪ್ರಸಾದದಿಂದ ಜ್ಯೋತಿರ್ಮಯವಾದ ವಿಮಾನದಲ್ಲಿ ಕುಳಿತು ಸೂರ್ಯನಂತೆ ದಿವ್ಯಲೋಕಗಳಲ್ಲಿ ಸಂಚರಿಸುತ್ತಾನೆ. ಜ್ಯೇಷ್ಠಮಾಸದ ಕೃಷ್ಣ ಪಕ್ಷದ ಅಷ್ಟಮಿಯ ದಿನ ತ್ರಿಲೋಚನ ಪರಮೇಶ್ವರನ ಪೂಜೆಯನ್ನು ಮಾಡುವವನು ಎಲ್ಲ ದೇವತೆಗಳಿಂದಲೂ ವಂದಿತನಾಗಿ ಒಂದು ಕಲ್ಪದವರೆಗೆ ಶಿವಲೋಕದಲ್ಲಿ ವಾಸಿಸುತ್ತಾನೆ. ಜ್ಯೇಷ್ಠ ಶುಕ್ಲ ಅಷ್ಟಮಿಯ ದಿನ ದೇವಿಯ ಪೂಜೆ ಮಾಡುವವನು ಗಂಧರ್ವ ಅಪ್ಸರೆಯರ ಜೊತೆಗೆ ವಿಮಾನದಲ್ಲಿ ಸಂಚರಿಸುತ್ತಾನೆ.

ಆಷಾಢ ಮಾಸದ ಶುಕ್ಲ ಪಕ್ಷದ ಅಷ್ಟಮಿಯ ದಿನ ಅರಶಿನದಿಂದ ಮಿಶ್ರವಾದ ನೀರಿನಿಂದ ಸ್ನಾನ ಮಾಡಿ, ಅಂತಹ ನೀರಿನಿಂದಲೇ ದೇವಿಗೆ ಅಭಿಷೇಕ ಮಾಡಬೇಕು. ಅನಂತರ ಶುದ್ಧ ಜಲದಿಂದ ಸ್ನಾನ ಮಾಡಿಸಿ ಕರ್ಪೂರ ಮತ್ತು ಗಂಧದ ಲೇಪವನ್ನು ದೇವಿಗೆ ಅರ್ಪಿಸಿ ವಿಧಿಪೂರ್ವಕವಾಗಿ ಪೂಜಿಸಬೇಕು. ಶರ್ಕರಾಯುಕ್ತವಾದ ನೈವೇದ್ಯವನ್ನು ಅರ್ಪಿಸಿ ಆಚಮನ ಮುಂತಾದ ಉಪಚಾರವನ್ನು ಅರ್ಪಿಸಬೇಕು. ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ಸುವರ್ಣ ದಕ್ಷಿಣೆಯನ್ನು ಕೊಟ್ಟು ಬೀಳ್ಕೊಂಡು, ತಾನೂ ಮೌನವಾಗಿ ಭೋಜನ ಮಾಡಬೇಕು. ಈ ವ್ರತದ ಅನುಷ್ಠಾನದಿಂದ ಮನುಷ್ಯನು ದೇವಿಯ ಲೋಕವನ್ನೇ

ಹೊಂದುತ್ತಾನೆ. ಶ್ರಾವಣ ಶುಕ್ಲ ಅಷ್ಟಮಿಯ ದಿನ ದೇವಿಗೆ ಕ್ಷೀರದಿಂದ ಸ್ನಾನ ಮಾಡಿಸಬೇಕು. ಅನಂತರ ವಿಧಿಪೂರ್ವಕವಾಗಿ ದೇವಿಯನ್ನು ಪೂಜಿಸಿ ಮೃಷ್ಟಾನ್ನವನ್ನು ನಿವೇದಿಸಿ ಮರು ದಿವಸ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕು. ಆಗ ವ್ರತ ಸಮಾಪ್ತಿಯಾಗುತ್ತದೆ. ಇದು ಸಂತಾನಾಭಿವೃದ್ಧಿಯನ್ನು ಮಾಡುವ ವ್ರತವಾಗಿದೆ.

## ಕೃಷ್ಣಾಷ್ಟಮೀ ವ್ರತ

ಶ್ರಾವಣ ಮಾಸದ ಕೃಷ್ಣ ಪಕ್ಷದ ಅಷ್ಟಮಿಯಂದು ದಶಾ ಫಲ ವ್ರತವು ಬರುತ್ತದೆ. (ಅಮಾವಾಸ್ಯೆಗೆ ಮಾಸ ಸಮಾಪ್ತಿಯನ್ನು ಹೇಳುವವರ ದೃಷ್ಟಿಯಿಂದ ಇದು ಶ್ರಾವಣ ಬಹುಳ ಅಷ್ಟಮೀ. ಹುಣ್ಣಿಮೆಯವರೆಗೆ ಮಾಸ ಗಣನೆ ಮಾಡುವವರಿಗೆ ಇದು ಭಾದ್ರಪದ ಕೃಷ್ಣ ಪಕ್ಷದ ಅಷ್ಟಮಿಯಾಗುತ್ತದೆ). ಆ ದಿನ ಉಪವಾಸ ವ್ರತವನ್ನು ಸಂಕಲ್ಪಿಸಿ ಸ್ನಾನ ಮಾಡಿ ನಿತ್ಯಾಹ್ನಿಕವನ್ನು ಮಾಡಿ ಹತ್ತು ತುಳಸಿ ದಳಗಳನ್ನು ತೆಗೆದುಕೊಂಡು (೧) ಕೃಷ್ಣಾಯ ನಮಃ (೨) ವಿಷ್ಣವೇ ನಮಃ (೩) ಅನಂತಾಯ ನಮಃ (೪) ಗೋವಿಂದಾಯ ನಮಃ (೫) ಗರುಡಧ್ವಜಾಯ ನಮಃ (೬) ದಾಮೋದರಾಯ ನಮಃ (೭) ಹೃಷೀಕೇಶಾಯ ನಮಃ (೮) ಪದ್ಮನಾಭಾಯ ನಮಃ (೯) ಹರಯೇ ನಮಃ (೧೦) ಪ್ರಭವೇ ನಮಃ ಎಂಬ ಹತ್ತು ನಾಮಗಳಿಂದ ಶ್ರೀ ಕೃಷ್ಣನನ್ನು ಪೂಜಿಸಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಬೇಕು. ಈ ರೀತಿ ಈ ವ್ರತವನ್ನು ಹತ್ತು ದಿನಗಳವರೆಗೆ ಮಾಡುತ್ತಿರಬೇಕು. ಆದಿ ಮತ್ತು ಮಧ್ಯ ಹಾಗೂ ಕೊನೆಯಲ್ಲಿ ಶ್ರೀ ಕೃಷ್ಣ ಮಂತ್ರದಿಂದ ನೂರ ಎಂಟು ಬಾರಿ ಚರುಹೋಮವನ್ನು ಮಾಡಬೇಕು. ಹೋಮದ ಕೊನೆಯಲ್ಲಿ ವಿಧಿಪೂರ್ವಕವಾಗಿ ಆಚಾರ್ಯ ಪೂಜೆಯನ್ನು ಮಾಡಬೇಕು. ಚಿನ್ನ, ತಾಮ್ರ, ಅಥವಾ ಬಿದಿರಿನ ಪಾತ್ರದಲ್ಲಿ ಚಿನ್ನದ ತುಲಸೀದಲ ಸಹಿತ ಶ್ರೀಕೃಷ್ಣನ ಚಿನ್ನದ ಪ್ರತಿಮೆಯನ್ನು ಸ್ಥಾಪಿಸಿ ಚೆನ್ನಾಗಿ ಪೂಜಿಸಬೇಕು. ಕರು ಮತ್ತು ಹಸುವನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ದಾನ ಮಾಡಬೇಕು. ಹತ್ತು ದಿನಗಳಲ್ಲಿಯೂ ಶ್ರೀ ಕೃಷ್ಣನಿಗೆ ಹತ್ತು ಪೂರಿಗಳನ್ನು ನಿವೇದಿಸಬೇಕು. ಆ ಪೂರಿಗಳನ್ನು ವಿದ್ವಾಂಸರಿಗೆ ದಾನ ಕೊಡಬೇಕು. ಅಥವಾ ತಾನೇ ಸ್ವೀಕರಿಸಬೇಕು. ಹತ್ತನೆಯ ದಿನ ಯಥಾಶಕ್ತಿಯಾಗಿ ಶಯ್ಯಾ ದಾನ ಮಾಡಬೇಕು. ಅನಂತರ ದಕ್ಷಿಣಾ ಸಹಿತವಾಗಿ ಸುವರ್ಣಮಯ ಶ್ರೀ ಕೃಷ್ಣಮೂರ್ತಿಯನ್ನು ಆಚಾರ್ಯರಿಗೆ ಅರ್ಪಿಸಬೇಕು. ವ್ರತದ ಕೊನೆಯಲ್ಲಿ ಹತ್ತು ಮಂದಿ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಹತ್ತು ಪೂರಿಗಳನ್ನು ದಾನಮಾಡಬೇಕು. ಈ ರೀತಿ ಹತ್ತು ವರ್ಷಗಳ ವರೆಗೆ ಅಷ್ಟಮೀ ಉಪವಾಸವನ್ನು ಮಾಡಿ ಈ ವ್ರತವನ್ನು ಅನುಷ್ಠಾನ ಮಾಡಿದರೆ ಮನುಷ್ಯನು ಎಲ್ಲ ಅಭಿಲಾಷೆಗಳನ್ನು ಪಡೆಯುತ್ತಾನೆ. ಕೊನೆಗೆ ಶ್ರೀ ಕೃಷ್ಣನ ಸಾಯುಜ್ಯವನ್ನೂ ಪಡೆಯುತ್ತಾನೆ.

ಇದೇ ಶ್ರೀ ಕೃಷ್ಣನ ಜನ್ಮಾಷ್ಟಮಿಯು. ಇದು ಎಲ್ಲ ಪಾಪಗಳಿಗೆ ನಾಶಕ. ಶ್ರೀ ಕೃಷ್ಣ ಜನ್ಮಾಷ್ಟಮಿಯ ದಿನ ಕೇವಲ ಉಪವಾಸ ಮಾಡಿದರೂ ಮನುಷ್ಯನು ಏಳು ಜನ್ಮಗಳ ಪಾಪದಿಂದ ಬಿಡುಗಡೆ ಹೊಂದುತ್ತಾನೆ. ಆ ದಿನ ಭಕ್ತನು ನದೀ ತಟಾಕಾದಿಗಳಿಗೆ ಹೋಗಿ ತಿಲ ಮಿಶ್ರಿತವಾದ ಜಲದಿಂದ ಸ್ನಾನಮಾಡಿ ಮನೆಗೆ ಬಂದು ಪವಿತ್ರವಾದ ಸ್ಥಳದಲ್ಲಿ ಮಂಟಪವನ್ನು ರಚಿಸಿ ಅದರ ಒಳಗಡೆ ಮಂಡಲವನ್ನು ಮಾಡಿ ಮಂಡಲ ಮಧ್ಯಭಾಗದಲ್ಲಿ ತಾಮ್ರ ಅಥವಾ ಮಣ್ಣಿನ ಕಲಶವನ್ನು ಸ್ಥಾಪಿಸಬೇಕು. ಕಲಶದ ಮೇಲೆ ತಾಮ್ರ ಪಾತ್ರೆಯನ್ನಿಟ್ಟು ಅದರ ಒಳಗೆ ಎರಡು ವಸ್ತ್ರಗಳಿಂದ ಮುಚ್ಚಿದ ಶ್ರೀ ಕೃಷ್ಣನ ಸುವರ್ಣಮಯವಾದ ಪ್ರತಿಮೆಯನ್ನಿಟ್ಟು

ವಾದ್ಯಘೋಷ ಸ್ತೋತ್ರ ಮುಂತಾದವುಗಳ ಮೂಲಕ ಹೃದಯ ಪೂರ್ವಕವಾಗಿ ಶ್ರೀ ಕೃಷ್ಣನನ್ನು ಪೂಜಿಸಬೇಕು. ಕಲಶದ ಸುತ್ತಲೂ ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ದೇವಕಿ, ವಾಸುದೇವ, ಯಶೋದಾ, ನಂದಿ ವ್ರಜ, ಗೋಪ ಸಮೂಹ, ಗೋಪಿಕಾ ಸಮೂಹ ಮತ್ತು ಗೋಪ ಸಮುದಾಯಗಳ ಪೂಜೆಯನ್ನು ಮಾಡಬೇಕು.

ಅನಂತರ ಆರತಿಯನ್ನು ಮಾಡಿ ಅಪರಾಧ ಕ್ಷಮಾಪಣೆಯನ್ನು ಕೇಳಿಕೊಂಡು ಭಕ್ತಿಪೂರ್ವಕವಾಗಿ ನಮಸ್ಕರಿಸಬೇಕು. ಅನಂತರ ಮಧ್ಯರಾತ್ರಿಯವರೆಗೆ ಅಲ್ಲಿಯೇ ಕುಳಿತಿದ್ದು ಮಧ್ಯರಾತ್ರಿಯಲ್ಲಿ ಪುನಃ ಶ್ರೀಹರಿಗೆ ಪಂಚಾಮೃತ ಸ್ನಾನ, ಶುದ್ಧ ಜಲ ಸ್ನಾನಗಳನ್ನು ಮಾಡಿಸಿ ಗಂಧ ಪುಷ್ಪಾದಿಗಳಿಂದ ಪುನಃ ಪೂಜಿಸಬೇಕು. ನಾರದನೇ, ಶ್ರೀ ಹರಿಭಕ್ತನು, ಜೀರಿಗೆ (ಓಮ) ಶುಂಠಿ, ಕಲ್ಲು, ಸಕ್ಕರೆ, ತುಪ್ಪಗಳನ್ನು ಸೇರಿಸಿ ನೈವೇದ್ಯವನ್ನು ತಯಾರಿಸಿ ಅದನ್ನು ಬೆಳ್ಳಿಯ ಪಾತ್ರೆಯಲ್ಲಿಟ್ಟು ಶ್ರೀ ಕೃಷ್ಣನಿಗೆ ಸಮರ್ಪಿಸಬೇಕು. ಶ್ರೀ ಹರಿಯ ದಶಾವತಾರ ಚರಿತ್ರೆಯನ್ನು ಸ್ಮರಿಸುತ್ತ ಹಾಡುತ್ತ, ಸ್ತೋತ್ರ ಮಾಡುತ್ತ ಆರತಿ ಮಾಡಿ, ಚಂದ್ರೋದಯ ಸಮಯದಲ್ಲಿ ಚಂದ್ರನಿಗೆ ಅರ್ಘ್ಯ ಕೊಡಬೇಕು . ಅನಂತರ ದೇವ ದೇವೇಶ್ವರನಾದ ಶ್ರೀ ಕೃಷ್ಣನ ಬಳಿ ಪುನಃ ಕ್ಷಮಾ ಪ್ರಾರ್ಥನೆ ಮಾಡಿ, ವ್ರತನಿಷ್ಠನಾದ ಮನುಷ್ಯನು ಪೌರಾಣಿಕ ಸ್ತೋತ್ರ ಪಾಠ, ಗೀತವಾದ್ಯ ಮುಂತಾದ ಕಾರ್ಯ ಕ್ರಮಗಳಿಂದ ರಾತ್ರಿಯ ಉಳಿದ ಭಾಗವನ್ನು ಜಾಗರಣೆಯಿಂದಲೇ ಕಳೆಯಬೇಕು. ಅನಂತರ ಪ್ರಾತಃ ಕಾಲ ಸ್ನಾನಾದಿಗಳನ್ನು ಮಾಡಿ ಉತ್ತಮ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಅವರಿಗೆ ಸಂತೋಷದಿಂದ ದಕ್ಷಿಣೆ ಕೊಟ್ಟು ಕಳುಹಿಸಿ, ಅನಂತರ ಭಗವಂತನ ಸುವರ್ಣಮಯ ಪ್ರತಿಮೆಯನ್ನು ಸುವರ್ಣ, ಹಸು, ಭೂಮಿ ಸಹಿತವಾಗಿ ಆಚಾರ್ಯನಿಗೆ ದಾನವಾಗಿ ಕೊಡಬೇಕು. ದಕ್ಷಿಣೆಯನ್ನು ಕೊಟ್ಟು ಆಚಾರ್ಯನನ್ನೂ ಕಳಿಹಿಸಿ, ತಾನೂ, ಹೆಂಡತಿ ಮಕ್ಕಳು ಸ್ನೇಹಿತರು ಮತ್ತು ಸೇವಕರ ಜತೆಗೆ ಭೋಜನವನ್ನು ಮಾಡಬೇಕು. ಈ ವ್ರತವನ್ನು ಮಾಡುವ ಮಾನವನು ಉತ್ತಮ ವಿಮಾನದಲ್ಲಿ ಕುಳಿತು ಗೋಲೋಕಕ್ಕೆ ಹೋಗುತ್ತಾನೆ. ಈ ಜನ್ಮಾಷ್ಟಮಿಗೆ ಸಮಾನವಾದ ವ್ರತವು ಮೂರು ಲೋಕಗಳಲ್ಲಿ ಮತ್ತೊಂದಿಲ್ಲ. ಇದು ಕೋಟಿಗಟ್ಟಲೆ ಏಕಾದಶೀ ವ್ರತಗಳ ಫಲವನ್ನು ಕೊಡುತ್ತದೆ.

## ರಾಧಾ ವ್ರತ

ಭಾದ್ರಪದ ಶುಕ್ಲ ಅಷ್ಟಮಿಯ ದಿನ ರಾಧಾ ವ್ರತವನ್ನು ಮಾಡಬೇಕು. ಈ ವ್ರತದಲ್ಲಿಯೂ ಕೂಡ ಹಿಂದಿನಂತೆಯೇ ಕಲಶದ ಮೇಲೆ ಚಿನ್ನದ ರಾಧಾ ಪ್ರತಿಮೆಯನ್ನಿಟ್ಟು ಪೂಜಿಸಬೇಕು. ಮಧ್ಯಾಹ್ನ ರಾಧಾ ಪೂಜೆಯನ್ನು ಮಾಡಿ ಏಕಭುಕ್ತದಿಂದ ಕಾಲವನ್ನು ಕಳೆಯಬೇಕು. ಶಕ್ತಿಯಿದ್ದರೆ ಪೂರ್ತಿ ಉಪವಾಸವನ್ನು ಮಾಡಬಹುದು. ಮರುದಿನ ಭಕ್ತಿಯಿಂದ ಸುವಾಸಿನಿಯರಿಗೆ ಭೋಜನ ಮಾಡಿಸಿ ಆಚಾರ್ಯನಿಗೆ ಪ್ರತಿಮೆಯನ್ನು ದಾನವಾಗಿ ಕೊಡಬೇಕು. ಅನಂತರ ತಾನೂ ಭೋಜನ ಮಾಡಿ ಈ ವ್ರತವನ್ನು ಸಮಾಪ್ತಿಗೊಳಿಸಬೇಕು. ಬ್ರಹ್ಮರ್ಷಿಯೇ ವಿಧಿಪೂರ್ವಕವಾಗಿ ಈ ರಾಧಾಷ್ಟಮಿಯ ವ್ರತವನ್ನು ಮಾಡುವುದರಿಂದ ಭಕ್ತನು ರಾಧಾಕೃಷ್ಣರ ಲೀಲೆಯ ರಹಸ್ಯವನ್ನು, ಗೋಕುಲ ವ್ರಜಗಳ ರಹಸ್ಯವನ್ನೂ ತಿಳಿಯುತ್ತಾನೆ, ರಾಧೆಯ ಅನುಚರರಲ್ಲಿ ಸೇರುತ್ತಾನೆ.

ಇದೇ ದಿನ ದೂರ್ವಾಷ್ಟಮೀ ವ್ರತವೂ ಬರುತ್ತದೆ. ಪವಿತ್ರವಾದ ಸ್ಥಳದಲ್ಲಿ ಮೊಳೆತ ಗರಿಕೆಯ ಮೇಲೆ ಶಿವಲಿಂಗವನ್ನು ಸ್ಥಾಪಿಸಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮೊಸರು,

ಅಕ್ಷತೆ, ಫಲ ಮುಂತಾದವುಗಳಿಂದ ಭಕ್ತಿಪೂರ್ವಕವಾಗಿ ಈಶ್ವರನ ಪೂಜೆಯನ್ನು ಮಾಡಬೇಕು. ಪೂಜೆಯ ಕೊನೆಯಲ್ಲಿ ಏಕಾಗ್ರಚಿತ್ತನಾಗಿ ಅರ್ಘ್ಯ ಕೊಡಬೇಕು. ಅನಂತರ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅಲ್ಲಿಯೇ ಬ್ರಾಹ್ಮಣ ಭೋಜನ ಮಾಡಿಸಿ, ಅವರಿಗೆ ದಕ್ಷಿಣೆ ಫಲ, ಸುವಾಸನೆಯಾದ ಭಕ್ಷ್ಯಗಳನ್ನು ಕೊಟ್ಟು ಕಳುಹಿಸಬೇಕು. ತಾನೂ ಭೋಜನವನ್ನು ಮಾಡಿ ಮನೆಗೆ ಹೋಗಬೇಕು, ಬ್ರಾಹ್ಮಣ ಶ್ರೇಷ್ಠನೇ, ಈ ದೂರ್ವಾಷ್ಟಮಿಯು ಮನುಷ್ಯರಿಗೆ ಪುಣ್ಯದಾಯಕ ಮತ್ತು ಪಾಪನಾಶಕ ವಾಗಿದೆ. ಇದನ್ನು ನಾಲ್ಕು ವರ್ಣದವರೂ ಮಾಡಬಹುದು. ಇದು ವಿಶೇಷವಾಗಿ ಸ್ತ್ರೀಯರು ಅವಶ್ಯ ಮಾಡಬೇಕಾದ ವ್ರತ. ನಾರದನೇ, ಈ ಅಷ್ಟಮಿಯು ಜ್ಯೇಷ್ಠಾನಕ್ಷತ್ರ ದಿಂದ ಕೂಡಿದ್ದರೆ ಅದನ್ನು 'ಜ್ಯೇಷ್ಠಾ ಅಷ್ಟಮೀ' ಎಂದು ಹೇಳುತ್ತಾರೆ. ಸರ್ವಪಾಪನಾಶಕ ವಾದ ಆ ದಿನದಅಷ್ಟಮಿಯಿಂದ ಆರಂಭಿಸಿ ಹದಿನಾರು ದಿನಗಳವರೆಗೆ ಮಹಾಲಕ್ಷ್ಮೀ ವ್ರತವನ್ನು ಮಾಡಬೇಕು, ಆ ವ್ರತಕ್ಕಿಂತ ಮೊದಲು ಹೀಗೆ ಸಂಕಲ್ಪವನ್ನು ಮಾಡಬೇಕು.

**ಕರಿಷ್ಯೇऽಹಂ ಮಹಾಲಕ್ಷ್ಮೀ ವ್ರತಂ ತೇ ತ್ವತ್ಪರಾಯಣಃ ।**
**ತದವಿಘ್ನೇನ ಮೇ ಯಾತು ಸಮಾಪ್ತಿಂ ತ್ವತ್ಪ್ರಸಾದತಃ ॥**

**ನಾ.ಪೂ. ೧೧೭-೫೫**

''ದೇವಿ, ನಾನು ನಿನ್ನ ಸೇವಾತತ್ಪರನಾಗಿ ಈ ಮಹಾಲಕ್ಷ್ಮೀ ವ್ರತದ ಅನುಷ್ಠಾನ ಮಾಡುತ್ತೇನೆ, ನಿನ್ನ ಕೃಪೆಯಿಂದ ಈ ವ್ರತವು ವಿಘ್ನವಿಲ್ಲದೆ ಪರಿಪೂರ್ಣವಾಗಲಿ'' ಹೀಗೆ ಪ್ರಾರ್ಥಿಸಿ ಬಲಗೈಯಲ್ಲಿ ಹದಿನಾರು ಎಳೆ ಮತ್ತು ಗಂಟುಗಳಿಂದ ಕೂಡಿದ ದಾರವನ್ನು ಕಟ್ಟಿಕೊಳ್ಳಬೇಕು. ಅಂದಿನಿಂದ ಆರಂಭಿಸಿ ಪ್ರತಿದಿನವೂ ವ್ರತ ಮಾಡುವವನು ಗಂಧಾದಿ ಉಪಚಾರಗಳಿಂದ ಮಹಾಲಕ್ಷ್ಮಿಯ ಪೂಜೆಯನ್ನು ಮಾಡಬೇಕು. ಆಶ್ವಿನ ಕೃಷ್ಣ ಅಷ್ಟಮಿಯವರೆಗೆ ಈ ವ್ರತವನ್ನು ನಡೆಸಿ ಅನಂತರ ಉದ್ಯಾಪನೆ ಮಾಡಬೇಕು. ಬಟ್ಟೆಯ ಮೇಲು ಹೊದಿಕೆಯಿಂದ ಕೂಡಿದ ಒಂದು ಮಂಟಪವನ್ನು ರಚಿಸಿ, ಆ ಮಂಟಪದಲ್ಲಿ ಮಾಡಿದ ಸರ್ವತೋ ಭದ್ರ ಮಂಡಲದಲ್ಲಿ ಕಲಶ ಪ್ರತಿಷ್ಠೆ ಮಾಡಿ, ದೀಪವನ್ನು ಉರಿಸಬೇಕು, ಅನಂತರ ತೋಳಿಗೆ ಕಟ್ಟಿದ ದಾರವನ್ನು ಬಿಚ್ಚಿ ಕಲಶದ ಬುಡದಲ್ಲಿಟ್ಟು ಪೂಜಿಸಬೇಕು. ಮಹಾಲಕ್ಷ್ಮಿಯ ನಾಲ್ಕು ಚಿನ್ನದ ಪ್ರತಿಮೆಗಳನ್ನು ಮಾಡಿಸಿ ಪಂಚಾಮೃತ ಮತ್ತು ಶುದ್ಧಜಲದಿಂದ ಸ್ನಾನ ಮಾಡಿಸಿ ಷೋಡಶೋಪಚಾರದಿಂದ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಿ ಅಲ್ಲಿಯೇ ಜಾಗರಣ ಮಾಡಬೇಕು. ಮಧ್ಯರಾತ್ರಿ ಚಂದ್ರೋದಯ ಸಮಯದಲ್ಲಿ ಶ್ರೀಖಂಡಾದಿ ದ್ರವ್ಯಗಳಿಂದ ವಿಧಿಪೂರ್ವಕವಾಗಿ ಅರ್ಘ್ಯವನ್ನು ಕೊಡಬೇಕು. ಚಂದ್ರಮಂಡಲಾಂತರ್ಗತಳಾದ ಮಹಾಲಕ್ಷ್ಮಿಯನ್ನು ಉದ್ದೇಶಿಸಿ ಈ ಅರ್ಘ್ಯವನ್ನು ಕೊಟ್ಟು ಅನಂತರ ದೇವಿಯ ಪ್ರಾರ್ಥನೆಯನ್ನು ಮಾಡಬೇಕು ವ್ರತವನ್ನು ಮಾಡುವ ಸ್ತ್ರೀಯು ಶ್ರೋತ್ರಿಯ ಬ್ರಾಹ್ಮಣರ ಪತ್ನಿಯರಿಗೆ ಶ್ರೀ ಚೂರ್ಣ, ಅರಗು, ಕಾಡಿಗೆ, ಮೊದಲಾದ ಸೌಭಾಗ್ಯದ್ರವ್ಯಗಳನ್ನು ಕೊಟ್ಟು ಪೂಜಿಸಿ ಭೋಜನ ಮಾಡಿಸಬೇಕು. ಅನಂತರ ಬಿಲ್ವ, ಕಮಲ ಮತ್ತು ಕ್ಷೀರಪಾಯಸದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು. ಆ ದ್ರವ್ಯಗಳು ಸಿಗದಿದ್ದರೆ ಕೇವಲ ತುಪ್ಪದಿಂದ ಹೋಮ ಮಾಡಬೇಕು. ನವಗ್ರಹಗಳನ್ನು ಉದ್ದೇಶಿಸಿ ಸಮಿಧ ಮತ್ತು ಎಳ್ಳಿನಿಂದ ಹೋಮ ಮಾಡಬೇಕು. ಸಮಸ್ತ ರೋಗ ಪರಿಹಾರದ ಉದ್ದೇಶದಿಂದ

ಮೃತ್ಯುಂಜಯ ಮಹಾರುದ್ರನನ್ನು ಉದ್ದೇಶಿಸಿಯೂ ಹೋಮ ಮಾಡಬೇಕು. ಚಂದನ, ತಾಲಪತ್ರ, ಪುಷ್ಪಮಾಲೆ, ಅಕ್ಷತ, ಗರಿಕೆ, ಕೆಂಪುದಾರ, ಅಡಿಕೆ, ತೆಂಗಿನಕಾಯಿ, ಮತ್ತೂ ನಾನಾವಿಧವಾದ ಭಕ್ಷ್ಯಗಳು ಇವೆಲ್ಲವನ್ನೂ ಹೊಸ ಮೊರದಲ್ಲಿ ಇಟ್ಟು ಅದನ್ನು ಮತ್ತೊಂದು ಮೊರದಿಂದ ಮುಚ್ಚಬೇಕು. ಈ ಪ್ರತಿಯೊಂದು ಪದಾರ್ಥವೂ ಹದಿನಾರು ಸಂಖ್ಯೆಯಲ್ಲಿರಬೇಕು, ಅನಂತರ ವ್ರತಕರ್ತನು ಈ ಕೆಳಗಿನ ಮಂತ್ರವನ್ನು ಹೇಳುತ್ತ ಮೇಲಿನ ವಸ್ತುಗಳೆಲ್ಲವನ್ನೂ ಮಹಾಲಕ್ಷ್ಮಿಗೆ ಸಮರ್ಪಿಸಬೇಕು.

**ಕ್ಷೀರೋದಾರ್ಣವ ಸಂಭೂತಾ ಲಕ್ಷ್ಮೀಶ್ಚಂದ್ರ ಸಹೋದರಾ ।**
**ವ್ರತೇನಾನೇನ ಸಂತುಷ್ಟಾ ಭವತಾದ್ವಿಷ್ಣು ವಲ್ಲಭಾ ॥**

ನಾ.ಪು.೧೧೭-೭೦-೭೧

ಕ್ಷೀರಸಾಗರದಿಂದ ಆವಿರ್ಭವಿಸಿದ ಚಂದ್ರನ ಸಹೋದರಿಯಾದ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯು ಈ ವ್ರತದಿಂದ ಸಂತುಷ್ಟಳಾಗಲಿ'' ಹಿಂದೆ ಹೇಳಿದ ನಾಲ್ಕು ಪ್ರತಿಮೆಗಳನ್ನು ಶ್ರೋತ್ರಿಯರಿಗೆ ದಾನ ಮಾಡಿ ನಾಲ್ಕು ಬ್ರಾಹ್ಮಣರು ಮತ್ತು ಹದಿನಾರು ಸುವಾಸಿನಿಯರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ದಕ್ಷಿಣೆಯನ್ನು ಕೊಟ್ಟು ಬೀಳ್ಕೊಡಬೇಕು. ಈ ರೀತಿ ವ್ರತದ ನಿಯಮವನ್ನು ಪರಿಸಮಾಪ್ತಿಗೊಳಿಸಿ ಇಷ್ಟ ಮಿತ್ರರು, ಸಹೋದರರು ಬಂಧುಗಳ ಜೊತೆಗೆ ಭೋಜನ ಮಾಡಬೇಕು. ಬ್ರಾಹ್ಮಣ ಶ್ರೇಷ್ಠನೇ, ಈ ಮಹಾಲಕ್ಷ್ಮೀ ವ್ರತವನ್ನು ವಿಧಿಪೂರ್ವಕವಾಗಿ ನಡೆಸುವ ಮನುಷ್ಯನು ಇಹಲೋಕದಲ್ಲಿ ಇಷ್ಟ ಭೋಗಗಳನ್ನು ಅನುಭವಿಸಿ, ಅನಂತರ ಬಹುಕಾಲದವರೆಗೆ ಲಕ್ಷ್ಮೀ ಲೋಕದಲ್ಲಿ ವಾಸ ಮಾಡುತ್ತಾನೆ.

## ಮಹಾಷ್ಟಮೀ

ಆಶ್ವಯುಜ ಶುಕ್ಲ ಪಕ್ಷದ ಅಷ್ಟಮಿಯು 'ಮಹಾಷ್ಟಮಿ'. ಆ ದಿನ ಎಲ್ಲ ಉಪಚಾರ ಗಳಿಂದ ದುರ್ಗೆಯನ್ನು ಪೂಜಿಸಬೇಕು. ಮಹಾಷ್ಟಮಿಯ ದಿನ ಉಪವಾಸ ಅಥವಾ ಏಕಭುಕ್ತವನ್ನು ಮಾಡುವವನು ಎಲ್ಲಾ ರೀತಿಯಿಂದಲೂ ವೈಭವವನ್ನು ಪಡೆದು ಬಹುಕಾಲ ಆನಂದ ಮಗ್ನನಾಗಿರುತ್ತಾನೆ. ಕಾರ್ತಿಕ ಕೃಷ್ಣಪಕ್ಷದ ಅಷ್ಟಮಿಯನ್ನು ಕರ್ಕಅಷ್ಟಮಿಯೆಂದು ಹೇಳುತ್ತಾರೆ. ಆ ದಿನ ಪ್ರಯತ್ನ ಪೂರ್ವಕವಾಗಿ ಉಮಾಸಹಿತನಾದ ಶಂಕರನನ್ನು ಪೂಜಿಸಬೇಕು. ಸರ್ವಗುಣ ಸಂಪನ್ನನಾದ ಪುತ್ರನನ್ನೂ, ನಾನಾ ಪ್ರಕಾರ ಸುಖವನ್ನೂ ಬಯಸುವವನು ಆ ದಿನ ಚಂದ್ರೋದಯ ಸಮಯದಲ್ಲಿ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು.

## ಗೋಪಾಷ್ಟಮೀ

ಕಾರ್ತಿಕ ಶುಕ್ಲ ಪಕ್ಷದಲ್ಲಿ ಬರುವ ಗೋಪಾಷ್ಟಮಿಯ ದಿನ ಗೋಪೂಜೆ ಮಾಡಿ ಗೋಗ್ರಾಸವನ್ನು ಕೊಟ್ಟು, ಗೋವುಗಳ ಪ್ರದಕ್ಷಿಣೆ ಮಾಡಿ, ಗೋವುಗಳನ್ನು ಅನುಸರಿಸಿ ನಡೆದು ಗೋದಾನ ಮಾಡಬೇಕು. ಈ ವ್ರತವು ಸಮಸ್ತ ಸಂಪತ್ತನ್ನು ಕೊಡುತ್ತದೆ. ಮಾರ್ಗಶಿರ ಕೃಷ್ಣ ಪಕ್ಷದ ಅಷ್ಟಮಿಯು ಅನಘಾಷ್ಟಮಿ ಎಂದು ಪ್ರಸಿದ್ಧವಾಗಿದೆ. ಆ ದಿನ ಅನೇಕ ಪುತ್ರರಿಂದ ಕೂಡಿದ ಅನಘ ಮತ್ತು ಅನಘಾ ಎಂಬ ಪತಿಪತ್ನಿಯರಾದ ದೇವತೆಗಳ ದರ್ಭಮಯವಾದ ಪ್ರತಿಮೆಯನ್ನು ಮಾಡಬೇಕು, ಸಗಣಿಯಿಂದ ಸಾರಿಸಿದ ಪವಿತ್ರವಾದ ಸ್ಥಳದಲ್ಲಿ ಆ ಜೋಡಿ ಪ್ರತಿಮೆಯನ್ನಿಟ್ಟು ಗಂಧ ಪುಷ್ಪಾದಿ ಉಪಚಾರಗಳಿಂದ ಪೂಜಿಸಿ

ಬ್ರಾಹ್ಮಣ ದಂಪತಿಗಳಿಗೆ ಭೋಜನಮಾಡಿಸಿ ದಕ್ಷಿಣೆ ಕೊಟ್ಟು ಸತ್ಕರಿಸಿ ಕಳುಹಿಸಬೇಕು. ಸ್ತ್ರೀ ಅಥವಾ ಪುರುಷರು ಯಾರೇ ಆಗಲಿ ಈ ವ್ರತವನ್ನು ಅನುಷ್ಠಾನ ಮಾಡಿದರೆ ಉತ್ತಮ ಲಕ್ಷಣ ಸಂಪನ್ನರಾದ ಮಕ್ಕಳನ್ನು ಪಡೆಯುತ್ತಾರೆ.

ಮಾರ್ಗಶಿರ ಶುಕ್ಲ ಪಕ್ಷದ ಅಷ್ಟಮಿಯದಿನ ಕಾಲಭೈರವನ ಸಮೀಪದಲ್ಲಿ ಉಪವಾಸ ಪೂರ್ವಕವಾಗಿ ಜಾಗರಣಮಾಡಿದರೆ ಮಹಾಪಾಪಗಳು ಪರಿಹಾರವಾಗುತ್ತವೆ. ಪುಷ್ಯ ಶುಕ್ಲ ಅಷ್ಟಮಿಯ ದಿನ ಪಿತೃಗಳನ್ನು ಉದ್ದೇಶಿಸಿ 'ಅಷ್ಟಕಾ' ಎಂಬ ಶ್ರಾದ್ಧವನ್ನು ಮಾಡಿದರೆ ಒಂದು ವರ್ಷದವರೆಗೆ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ. ಇದರಿಂದ ಸಂತತಿಯ ಅಭಿವೃದ್ಧಿ ಯುಂಟಾಗುತ್ತದೆ. ಆ ದಿನ ಭಕ್ತಿಪೂರ್ವಕವಾಗಿ ಶಿವಪೂಜೆಯನ್ನು ಮಾಡಿದರೆ ಭೋಗ ಮೋಕ್ಷಗಳೆರಡೂ ಸಿಗುತ್ತವೆ, ಮಾಘಮಾಸದ ಕೃಷ್ಣ ಪಕ್ಷದ ಅಷ್ಟಮಿಯದಿನ ಅಭೀಷ್ಟ ದಾಯಕಳಾದ ಭದ್ರಕಾಳಿಯ ಪೂಜೆಯನ್ನು ಮಾಡಿದರೆ ಸಂತತಿಯ ವಿಚ್ಛೇದವಾಗುವುದಿಲ್ಲ ಮತ್ತು ವಿಜಯಪ್ರಾಪ್ತಿಯೂ ಆಗುತ್ತದೆ.

## ಭೀಷ್ಮಾಷ್ಟಮಿ

ಮಾಘಮಾಸದ ಶುಕ್ಲಪಕ್ಷದ ಅಷ್ಟಮಿ ಭೀಷ್ಮಾಷ್ಟಮಿ, ಆ ದಿನ ಭೀಷ್ಮ ತರ್ಪಣವನ್ನು ಕೊಡಬೇಕು. ಫಾಲ್ಗುನ ಮಾಸದ ಕೃಷ್ಣ ಪಕ್ಷದ ಅಷ್ಟಮಿಯ ದಿನ ವ್ರತಪರಾಯಣನಾದ ಮಾನವನು ಸಮಸ್ತ ಅಭೀಷ್ಟ ಸಿದ್ಧಿಗೋಸ್ಕರ ಭೀಮಾದೇವಿಯ ಪೂಜೆಯನ್ನು ಮಾಡಬೇಕು, ಫಾಲ್ಗುನ ಶುಕ್ಲಪಕ್ಷದ ಅಷ್ಟಮಿದಿನ ಗಂಧ ಪುಷ್ಪಾದಿ ಉಪಚಾರಗಳಿಂದ ಪಾರ್ವತೀ ಪರಮೇಶ್ವರರ ಪೂಜೆಯನ್ನು ಚೆನ್ನಾಗಿ ಮಾಡಿದ ಮನುಷ್ಯನು ಸಮಸ್ತ ಸಿದ್ಧಿಗಳನ್ನು ಪಡೆಯುತ್ತಾನೆ. ಎಲ್ಲ ಮಾಸಗಳ ಎರಡು ಪಕ್ಷಗಳಲ್ಲಿಯೂ ಅಷ್ಟಮೀ ದಿನ ವಿಧಿಪೂರ್ವಕವಾಗಿ ಶಿವಪಾರ್ವತಿಯರ ಪೂಜೆಮಾಡಿದರೆ ಮಾನವನು ಎಲ್ಲ ಮನೋಽಭಿಲಾಷೆಯನ್ನುಪಡೆಯುತ್ತಾನೆ.

## ನವಮೀತಿಥಿಗೆ ಸಂಬಂಧಪಟ್ಟ ವ್ರತ ತಿಥಿ ಮತ್ತು ಮಹಿಮೆ

**ಸನಾತನರು ಹೇಳುತ್ತಾರೆ:-** ಈಗ ನಾನು ನವಮಿಗೆ ಸಂಬಂಧಪಟ್ಟ ವ್ರತಗಳನ್ನು ಹೇಳುತ್ತೇನೆ. ಚೈತ್ರಶುಕ್ಲಪಕ್ಷದ ನವಮಿ ರಾಮನವಮಿ, ಆ ದಿನ ಶಕ್ತಿಯಿದ್ದರೆ ಉಪವಾಸ ಮಾಡಬೇಕು, ಅಶಕ್ತನಾದರೆ ಮಧ್ಯಾಹ್ನ ರಾಮ ಜನ್ಮೋತ್ಸವವನ್ನು ಮಾಡಿದ ಮೇಲೆ ಒಂದು ಬಾರಿ ಮಾತ್ರ ಊಟ ಮಾಡಬೇಕು, ವಿದ್ವಾಂಸರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಪ್ರಸನ್ನರನ್ನಾಗಿ ಮಾಡಬೇಕು. ಗೋವು, ಭೂಮಿ, ತಿಲ, ಸುವರ್ಣ ವಸ್ತ್ರ, ಆಭರಣ ಮುಂತಾದವುಗಳನ್ನು ದಾನಮಾಡಿ ಶ್ರೀರಾಮನನ್ನು ಸಂತೋಷಪಡಿಸಬೇಕು. ಭಕ್ತಿಪೂರ್ವಕವಾಗಿ ಶ್ರೀ ರಾಮಾನವಮಿವ್ರತವನ್ನು ಪಾಲಿಸುವ ಮನುಷ್ಯನು ಸಮಸ್ತ ಪಾಪಗಳನ್ನು ಕಳೆದುಕೊಂಡು ಶ್ರೀಮನ್ನಾರಾಯಣನ ಲೋಕವನ್ನು ಸೇರುತ್ತಾನೆ. ವೈಶಾಖ ಶುಕ್ಲಕೃಷ್ಣ ಪಕ್ಷಗಳೆರಡರಲ್ಲಿಯೂ ನವಮಿಯ ದಿನ ವಿಧಿಪೂರ್ವಕವಾಗಿ ಚಂಡಿಪೂಜೆ ಮಾಡಿದವನು ವಿಮಾನದಲ್ಲಿ ಸಂಚರಿಸುತ್ತ ದೇವತೆಗಳ ಜೊತೆಗೆ ಆನಂದವನ್ನು ಅನುಭವಿಸುತ್ತಾನೆ.

ಜ್ಯೇಷ್ಠ ಶುಕ್ಲನವಮಿಯದಿನ ಶ್ರದ್ಧಾವಂತನು ಉಪವಾಸವಾಗಿದ್ದು ವಿಧಿಪೂರ್ವಕವಾಗಿ ಉಮಾದೇವಿಯನ್ನು ಪೂಜಿಸಿ ಕನ್ಯೆಯರಿಗೂ ಬ್ರಾಹ್ಮಣರಿಗೂ ಭೋಜನಮಾಡಿಸಬೇಕು,

ಅವರಿಗೆ ಶಕ್ತಿಗನುಸಾರವಾಗಿ ದಕ್ಷಿಣೆಯನ್ನು ಕೊಟ್ಟು ಮಾರ್ಗಶಿರದಲ್ಲಿ ಬೆಳೆದ ಭತ್ತದ ಅಕ್ಕಿಯ ಅನ್ನ ಮತ್ತು ಹಾಲನ್ನು ತಾನು ಸ್ವೀಕರಿಸಬೇಕು. ಈ ಉಮಾವ್ರತವನ್ನು ಪಾಲಿಸುವವನು ಇಹದಲ್ಲಿ ಸಮಸ್ತ ಭೋಗಗಳನ್ನು ಅನುಭವಿಸಿ ಕೊನೆಗೆ ಸ್ವರ್ಗದಲ್ಲಿ ಸ್ಥಾನವನ್ನು ಪಡೆಯುತ್ತಾನೆ. ನಾರದನೇ, ಆಷಾಢಮಾಸದ ಎರಡೂ ಪಕ್ಷಗಳಲ್ಲಿ ಬರುವ ನವಮಿಯ ದಿನ ರಾತ್ರಿಯಲ್ಲಿ ಐರಾವತದ ಮೇಲೆ ಆರೂಢಳಾದ ಶುಕ್ಲವರ್ಣದ ಶಚೀದೇವಿಯನ್ನು ಚೆನ್ನಾಗಿ ಪೂಜಿಸುವವನು ದೇವಲೋಕದಲ್ಲಿ ದಿವ್ಯ ವಿಮಾನದಲ್ಲಿ ಸಂಚರಿಸುತ್ತ ದಿವ್ಯಭೋಗಗಳನ್ನು ಅನುಭವಿಸುತ್ತಾನೆ.

ಶ್ರಾವಣ ಮಾಸದ ಎರಡೂ ಪಕ್ಷಗಳ ನವಮಿಾಯ ದಿನ ಕುಮಾರೀವ್ರತವನ್ನು ಆಚರಿಸಬೇಕು. ಆ ದಿನ ಉಪವಾಸ ಅಥವಾ ರಾತ್ರಿ ಭೋಜನವನ್ನು ಮಾಡಬೇಕು. ಗಂಧ, ಪುಷ್ಪ, ಧೂಪ, ದೀಪ, ನಾನಾವಿಧ ನೈವೇದ್ಯಗಳಿಂದ ಚಂಡಿಕೆಯ ಆರಾಧನೆಯನ್ನು ಮಾಡಿ, ಕನ್ನೆಯರಿಗೆ ಭೋಜನ ಮಾಡಿಸಬೇಕು. ಭಕ್ತಿಪೂರ್ವಕವಾಗಿ ದೇವಿಯನ್ನು ಸೇವಿಸಬೇಕು, ಈ ವ್ರತವನ್ನು ಅನುಷ್ಠಾನಮಾಡುವವನು ವಿಮಾನದ ಮೂಲಕ ದೇವಿಯ ಲೋಕಕ್ಕೆ ಹೋಗುತ್ತಾನೆ. ಭಾದ್ರಪದ ಶುಕ್ಲಪಕ್ಷದ ನವಮಿಯ ದಿನ ನಂದಾನವಮಿ, ಆ ದಿನ ನಾನಾ ರೀತಿಯ ಉಪಚಾರಗಳಿಂದ ದುರ್ಗಾದೇವಿಯ ಪೂಜೆಮಾಡಿದ ಮನುಷ್ಯನು ಅಶ್ವಮೇಧ ಯಜ್ಞದ ಫಲವನ್ನು ಪಡೆದು, ವಿಷ್ಣುಲೋಕವನ್ನು ಹೊಂದುತ್ತಾನೆ, ಕಾರ್ತಿಕಮಾಸದ ಶುಕ್ಲಪಕ್ಷದ ನವಮಿಯು 'ಅಕ್ಷಯನವಮಿ' ಆ ದಿನ ಅಶ್ವತ್ಥವೃಕ್ಷದ ಬುಡದಲ್ಲಿ ದೇವ, ಋಷಿ, ಪಿತೃಗಳಿಗೆ ತರ್ಪಣಕೊಟ್ಟು ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು, ಅನಂತರ ವಿದ್ವಾಂಸರಿಗೆ ಮೃಷ್ಟಾನ್ನ ಭೋಜನ ಮಾಡಿಸಿ, ದಕ್ಷಿಣಾಪ್ರದಾನ ಮಾಡಿ ತಾನೂ ಭೋಜನ ಮಾಡಬೇಕು. ಈ ಅಕ್ಷಯ ನವಮಿಯದಿನ ಭಕ್ತಿಪೂರ್ವಕವಾಗಿ ಮಾಡಿದ ಜಪ, ದಾನ, ಬ್ರಾಹ್ಮಣಪೂಜಾ ಹೋಮ, ಎಲ್ಲವೂ ಅಕ್ಷಯವಾಗುತ್ತದೆಂದು ಬ್ರಹ್ಮದೇವರೇ ಹೇಳುತ್ತಾರೆ. ಮಾರ್ಗಶಿರ ಶುಕ್ಲಪಕ್ಷದ ನವಮಿಯು ನಂದಿನೀನವಮಿ. ಆ ದಿನ ಉಪವಾಸವಿದ್ದು ಗಂಧಾದಿಗಳಿಂದ ಜಗದಂಬೆಯ ಪೂಜೆಮಾಡುವವನು ಅಶ್ವಮೇಧ ಯಜ್ಞದ ಫಲವನ್ನು ಪಡೆಯುತ್ತಾನೆ. ಪುಷ್ಯಮಾಸದ ಶುಕ್ಲಪಕ್ಷದ ನವಮಿಾದಿನ ಒಂದು ಹೊತ್ತು ಭೋಜನ. ಮಹಾ ಮಾಯಾ ದುರ್ಗೆಯ ಪೂಜೆ, ಇವೆರಡು ವಾಜಪೇಯ ಯಜ್ಞದ ಫಲವನ್ನು ಕೊಡುತ್ತವೆ.

ಮಾಘ ಶುಕ್ಲನವಮಿಾ ದಿನ ಆನಂದದಾಯಕವಾದ 'ಮಹಾನಂದಾ ನವಮಿಾ' ಆ ದಿನ ಮಾಡಿದ ಸ್ನಾನ ದಾನ, ಜಪ, ಹೋಮ, ಉಪವಾಸ ಎಲ್ಲವೂ ಅಕ್ಷಯವಾಗುತ್ತವೆ, ಬ್ರಾಹ್ಮಣಶ್ರೇಷ್ಠನೇ, ಫಾಲ್ಗುಣ ಮಾಸದ ಶುಕ್ಲಪಕ್ಷದ ನವಮಿಯು ಆನಂದಾನವಮಿಯು. ಆ ದಿನ ಉಪವಾಸ ಮಾಡಿ 'ಆನಂದಾ' ದೇವಿಯ ಪೂಜೆ ಮಾಡಿದವನು ಎಲ್ಲ ಪಾಪವನ್ನು ಕಳೆದುಕೊಂಡು ಬಯಸಿದ ಎಲ್ಲ ವಸ್ತುಗಳನ್ನು ಪಡೆಯುತ್ತಾನೆ.

## ಹನ್ನೆರಡು ತಿಂಗಳುಗಳ ದಶಮಿಾ ವ್ರತಗಳ ವಿಧಿ ಮತ್ತು ಮಹಿಮೆ

**ಸನಾತನರು ಹೇಳುತ್ತಾರೆ:-** ಧರ್ಮರಾಜನ ಪ್ರೀತಿಯನ್ನು ಸಂಪಾದಿಸಿಕೊಡುವ ದಶಮಿಾ ವ್ರತಗಳನ್ನು ಈಗ ಕೇಳು, ಚೈತ್ರ, ಶುಕ್ಲ ದಶಮಿಯ ದಿನ ಸರಿಯಾದ ಸಮಯದಲ್ಲಿ ಫಲ, ಪುಷ್ಪ ಮತ್ತು ಗಂಧಾದಿಗಳಿಂದ ಧರ್ಮರಾಜನ ಪೂಜೆಯನ್ನು ಮಾಡಬೇಕು. ಆ ದಿನ ಪೂರ್ತಿ ಉಪವಾಸ ಅಥವಾ ಏಕಭುಕ್ತವನ್ನು ಮಾಡಿ, ವ್ರತದ ಕೊನೆಯಲ್ಲಿ ಹದಿನಾಲ್ಕು ಮಂದಿ

ವಿದ್ವಾಂಸರಿಗೆ ಭೋಜನ ಮಾಡಿಸಿ, ಶಕ್ತಿಯನ್ನು ಅನುಸರಿಸಿ ದಕ್ಷಿಣೆ ಕೊಡಬೇಕು. ಈ ವ್ರತದ ಅನುಷ್ಠಾನದಿಂದ ಧರ್ಮರಾಜನ ಪ್ರೀತಿಯುಂಟಾಗಿ ದೇವತೆಗಳ ಸಾಮ್ಯವು ಪ್ರಾಪ್ತವಾಗುತ್ತದೆ. ವೈಶಾಖ ಶುಕ್ಲ ದಶಮಿಯ ದಿನ ಗಂಧಾದಿ ಉಪಚಾರಗಳು ಮತ್ತು ಬಿಳಿಯ ಸುವಾಸನೆಯ ಹೂವುಗಳಿಂದ ವಿಷ್ಣು ಪೂಜೆ ಮಾಡಿ ಪ್ರದಕ್ಷಿಣೆ ಮಾಡಿ, ಜ್ಞಾನಿಗಳ ಭೋಜನ ಮಾಡಿಸಬೇಕು. ಇಂತಹ ವಿಷ್ಣು ಭಕ್ತನು ವಿಷ್ಣು ಲೋಕದಲ್ಲಿ ಸ್ಥಾನವನ್ನು ಪಡೆಯುತ್ತಾನೆ.

## ದಶಹರಾವ್ರತ

ನದಿಗಳಲ್ಲಿ ಶ್ರೇಷ್ಠಳಾದ ಜಹ್ನು ಪುತ್ರಿಯಾದ ಗಂಗೆಯು ಜ್ಯೇಷ್ಠ ಶುಕ್ಲ ದಶಮಿಾ ದಿನ ಸ್ವರ್ಗದಿಂದ ಭೂಮಿಗೆ ಇಳಿದಿದ್ದಾಳೆ. ಆದುದರಿಂದ ಆ ದಿನವು ಪರಮಪುಣ್ಯದಾಯಕ ವಾಗಿದೆ. ಜ್ಯೇಷ್ಠಮಾಸ, ಶುಕ್ಲಪಕ್ಷ, ಹಸ್ತಾನಕ್ಷತ್ರ ಬುಧವಾರ, ದಶಮಿಾ ಶುಭಕರಣ, ಆನಂದಯೋಗ (ವ್ಯತೀಪಾತ) ಕನ್ಯಾರಾಶಿಯ ಚಂದ್ರಮತ್ತು ವೃಷಭರಾಶಿಯ ಸೂರ್ಯ ಈ ಹತ್ತರ ಯೋಗವಿದ್ದಾಗ ದಶಹರಾ ವ್ರತ, ಇದು ಸಮಸ್ತ ಪಾಪನಾಶಕ, ಈ ದಿನ ವಿಧಿಪೂರ್ವಕವಾಗಿ ಗಂಗಾಸ್ನಾನ ಮಾಡಿದವನು ವಿಷ್ಣುಲೋಕವನ್ನು ಸೇರುತ್ತಾನೆ. ಮನು ಮುಂತಾದ ಸ್ಮೃತಿಕಾರರು ಆಷಾಢ ಶುಕ್ಲ ದಶಮಿಯನ್ನು ಪವಿತ್ರ ದಿನವೆಂದು ಹೇಳಿದ್ದಾರೆ. ಆ ದಿನ ಮಾಡಿದ ಸ್ನಾನ, ಜಪ, ದಾನ ಮತ್ತುಹೋಮಗಳು ಸ್ವರ್ಗಲೋಕ ಪ್ರಾಪ್ತಿಗೆ ಕಾರಣವಾಗುತ್ತವೆ. ಶ್ರಾವಣ ಶುಕ್ಲ ದಶಮಿಯು ಸಮಸ್ತ ಆಸೆಗಳನ್ನು ಪೂರೈಸುವ ದಿನ. ಆ ದಿನ ಗಂಧಾದಿ ಉಪಚಾರಗಳಿಂದ ಶಂಕರನ ಪೂಜೆಯನ್ನು ಮಾಡಬೇಕು. ಆ ದಿನ ಮಾಡಿದ ಉಪವಾಸ ಅಥವಾ ರಾತ್ರಿ ಭೋಜನ ವ್ರತ, ಬ್ರಾಹ್ಮಣ ಭೋಜನ, ಜಪ, ಸುವರ್ಣದಾನ, ಗೋವು ಮುಂತಾದ್ದರ ದಾನ ಎಲ್ಲವೂ ಪಾಪನಾಶಕ.

ದ್ವಿಜಶ್ರೇಷ್ಠ, ಭಾದ್ರಪದ ಶುಕ್ಲದಶಮಿಾ 'ದಶಹರಾವ್ರತ'ದ ದಿನದಲ್ಲಿ ಜಲಾಶಯದಲ್ಲಿಸ್ನಾನ ಮಾಡಿ, ದೇವತಾ, ಋಷಿ, ಪಿತೃಗಳಿಗೆ ತರ್ಪಣಕೊಟ್ಟು, ಅನಂತರ ಏಕಾಗ್ರಚಿತ್ತನಾಗಿ ದಶಾವತಾರ ಮೂರ್ತಿಗಳನ್ನು ಪೂಜಿಸಬೇಕು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ತ್ರಿವಿಕ್ರಮ, ವಾಮನ, ಪರಶುರಾಮ, ಕೃಷ್ಣ, ಬುದ್ಧ, ಕಲ್ಕಿ ಈ ಹತ್ತು ರೂಪಗಳನ್ನು ಚಿನ್ನದಿಂದ ಮಾಡಿಸಿ ವಿಧಿಪೂರ್ವಕವಾಗಿ ಪೂಜಿಸಿ ಹತ್ತು ಮಂದಿ ಬ್ರಾಹ್ಮಣರಿಗೆ ದಾನ ಕೊಡಬೇಕು. ಬ್ರಾಹ್ಮಣ ಭೋಜನ ಮಾಡಿಸಿ ಅವರನ್ನು ಕಳುಹಿಸಿ ತಾನು ಇಷ್ಟಮಿತ್ರರ ಜೊತೆಗೆ ಒಂದು ಬಾರಿ ಭೋಜನ ಮಾಡಬೇಕು. ಭಕ್ತಿಪೂರ್ವಕವಾಗಿ ಈ ವ್ರತವನ್ನು ಅನುಷ್ಠಾನ ಮಾಡಿದವನು ಇಹಲೋಕದಲ್ಲಿ ಸಮಸ್ತ ಭೋಗಗಳನ್ನು ಅನುಭವಿಸಿ ಮುಂದೆ ವಿಮಾನದ ಮೂಲಕವಾಗಿ ಶಾಶ್ವತವಾದ ವಿಷ್ಣು ಲೋಕವನ್ನು ಸೇರುತ್ತಾನೆ.

## ವಿಜಯದಶಮಿ

ಆಶ್ವಯುಜ ಶುಕ್ಲದಶಮಿಯನ್ನು 'ವಿಜಯದಶಮಿಾ' ಎಂದು ಹೇಳುತ್ತಾರೆ. ಆ ದಿನ ಪ್ರಾತಃಕಾಲ ಮನೆಯ ಅಂಗಳದಲ್ಲಿ ಸಗಣಿಯ ನಾಲ್ಕು ಉಂಡೆಗಳನ್ನು ಮಂಡಲಾಕಾರವಾಗಿ ಇಡಬೇಕು. ಅವುಗಳಲ್ಲಿ ಶ್ರೀರಾಮ, ಲಕ್ಷ್ಮಣ, ಭರತ ಶತ್ರುಘ್ನರನ್ನು ಪೂಜಿಸಬೇಕು. ಸಗಣಿಯಿಂದಲೇ ಮಾಡಿರುವ ಮುಚ್ಚಳವಿರುವ ನಾಲ್ಕು ಪಾತ್ರೆಗಳಲ್ಲಿ ತೋಯಿಸಿದ ಭತ್ತ ಮತ್ತು ಬೆಳ್ಳಿಯನ್ನಿಟ್ಟು ಅದನ್ನು ಒಗೆದಿರುವ ಬಟ್ಟೆಯಿಂದ ಮುಚ್ಚಬೇಕು. ಅನಂತರ ತಂದೆ,

ತಾಯಿ, ಸಹೋದರರು, ಮಕ್ಕಳು, ಹೆಂಡತಿ ಮತ್ತು ಸೇವಕ ಪರಿವಾರ ಸಹಿತವಾಗಿ, ಗಂಧ, ಪುಷ್ಪ ಮತ್ತು ನೈವೇದ್ಯ ಮೊದಲಾದ ಉಪಚಾರದಿಂದ ಆ ಧಾನ್ಯದ ಪೂಜೆಯನ್ನು ವಿಧಿವತ್ತಾಗಿ ಮಾಡಿ ನಮಸ್ಕಾರ ಮಾಡಬೇಕು. ಅನಂತರ ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕು. ಈ ರೀತಿ ವ್ರತಾಚರಣೆ ಮಾಡಿದ ಮಾನವನು ನಿಶ್ಚಯವಾಗಿಯೂ ಒಂದು ವರ್ಷದವರೆಗೆ ಸುಖವಾಗಿರುತ್ತಾನೆ. ನಾರದನೇ, ಕಾರ್ತಿಕ ಶುಕ್ಲ ದಶಮಿ-ಸಾರ್ವಭೌಮವ್ರತ'. ಆ ದಿನ ದಿನ ಉಪವಾಸ ಅಥವಾ ಒಂದು ಹೊತ್ತು ಭೋಜನ ಮಾಡಬೇಕು. ಅರ್ಧರಾತ್ರಿಯ ಸಮಯದಲ್ಲಿ ಮನೆ ಅಥವಾ ಊರಿನ ಹೊರಗೆ ಯಾಜ್ಞಿಕರ ಮೂಲಕ ಹತ್ತು ದಿಕ್ಕುಗಳಿಗೂ ಬಲಿ ಕೊಡಬೇಕು, ಸಗಣಿ ಸಾರಿಸಿದ ನೆಲದ ಮೇಲೆ ಮಂಡಲವನ್ನು ಮಾಡಿ ಅದರ ಮೇಲೆ ಅಷ್ಟದಲ ಕಮಲವನ್ನು ಬರೆದು ಅದರಲ್ಲಿ ಗಣೇಶಾದಿ ದೇವತೆಗಳನ್ನು ಪೂಜಿಸಬೇಕು. ಮಾರ್ಗಶಿರ ಶುಕ್ಲ ದಶಮಿ ದಿನ ಆರೋಗ್ಯ ವ್ರತ, ಆ ದಿನ ಹತ್ತು ಮಂದಿ ಬ್ರಾಹ್ಮಣರನ್ನು ಗಂಧಾದಿಗಳಿಂದ ಪೂಜಿಸಿ ಅವರಿಗೆ ದಕ್ಷಿಣೆಯನ್ನಿತ್ತು ಸತ್ಕರಿಸಿ ಕಳುಹಿಸಬೇಕು. ತಾನು ಆ ದಿನ ಒಂದೇ ಹೊತ್ತು ಊಟ ಮಾಡಬೇಕು. ಈ ವ್ರತಾನುಷ್ಠಾನದಿಂದ ಮಾನವನು ಇಹದಲ್ಲಿ ಆರೋಗ್ಯವನ್ನು ಪಡೆಯುತ್ತಾನೆ. ಮತ್ತು ಧರ್ಮರಾಜನ ಅನುಗ್ರಹದಿಂದ ದೇವಲೋಕದಲ್ಲಿ ದೇವತೆಗಳಂತೆ ಆನಂದವನ್ನು ಅನುಭವಿಸುತ್ತಾನೆ.

ಪುಷ್ಯ ಶುಕ್ಲ ದಶಮಿಯ ದಿನ ವಿಶ್ವೇದೇವತೆಗಳನ್ನು ಪೂಜಿಸಬೇಕು. ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಮುನಿ ಗುರು ವಿಪ್ರ ರಾಮ ಇವರೇ ಹತ್ತು ಮಂದಿ ವಿಶ್ವೇದೇವತೆಗಳು. ಇವರಲ್ಲಿ ಶ್ರೀಮನ್ನಾರಾಯಣನು ಅಂತರ್ಯಾಮಿಯಾಗಿದ್ದಾನೆ. ಈ ವಿಶ್ವೇದೇವತೆಗಳ ದರ್ಭ ಪ್ರತಿಮೆಗಳನ್ನು ಮಾಡಿ, ಅವುಗಳನ್ನು ಕುಶಾಸನಗಳಲ್ಲಿ ಸ್ಥಾಪಿಸಿ, ಪ್ರತಿಯೊಬ್ಬರಿಗೂ ಗಂಧ, ಪುಷ್ಪ, ಧೂಪ, ದೀಪ ಮತ್ತು ನೈವೇದ್ಯ ಮೊದಲಾದ ಉಪಚಾರಗಳಿಂದ ಪೂಜೆ ಮಾಡಬೇಕು.ಪ್ರತಿಯೊಬ್ಬರಿಗೂ ದಕ್ಷಿಣೆ ಕೊಟ್ಟು ನಮಸ್ಕಾರ ಮಾಡಿ ಅನಂತರ ವಿಸರ್ಜಿಸಬೇಕು, ಅವರಿಗೆ ಅರ್ಪಿಸುವ ದಕ್ಷಿಣೆಯನ್ನು ಉತ್ತಮ ಬ್ರಾಹ್ಮಣರಿಗಾಗಲಿ, ಗುರುವಿಗಾಗಲೀ ಕೊಡಬೇಕು, ಏಕಸಮಯ ಭೋಜನ ಮಾಡಿ ಈ ವ್ರತ ನಿಯಮವನ್ನು ಪಾಲಿಸುವ ಮನುಷ್ಯನು ಇಹಪರಗಳಲ್ಲಿ ಸುಖಭೋಗಕ್ಕೆ ಭಾಗಿಯಾಗುತ್ತಾನೆ.

ನಾರದನೇ, ಮಾಘ ಶುಕ್ಲ ದಶಮೀ ದಿನ ಇಂದ್ರಿಯಗಳನ್ನು ನಿಗ್ರಹಿಸಿ ಉಪವಾಸ ಮಾಡಿ ಅಂಗೀರಸ ಎಂಬ ಹೆಸರುಳ್ಳ ಹತ್ತುದೇವತೆಗಳ ಚಿನ್ನದ ಪ್ರತಿಮೆಯನ್ನು ಮಾಡಿಸಿ ಗಂಧಾದಿ ಗಳಿಂದ ಅವರನ್ನು ಚೆನ್ನಾಗಿ ಪೂಜಿಸಬೇಕು. ಆತ್ಮಾ, ಆಯು, ಮನ, ದಕ್ಷ, ಮದ, ಪ್ರಾಣ, ಬರ್ಹಿಷ್ಮಾನ್, ಗವಿಷ್ಠ, ದತ್ತ, ಸತ್ಯ ಇವರೇ ಹತ್ತು ಮಂದಿ ಅಂಗೀರಸರು, ಪೂಜಾನಂತರದಲ್ಲಿ ಹತ್ತು ಬ್ರಾಹ್ಮಣರಿಗೆ ಅರ್ಪಿಸಬೇಕು. ಈ ವ್ರತದಿಂದ ಸ್ವರ್ಗಲೋಕ ಪ್ರಾಪ್ತಿಯಾಗುತ್ತವೆ. ಫಾಲ್ಗುಣ ಶುಕ್ಲ ದಶಮಿಯ ದಿನ ಹದಿನಾಲ್ಕು ಮಂದಿ ಯಮರ ಪೂಜೆ ಮಾಡಬೇಕು. ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ಸರ್ವಭೂತಕ್ಷಯ, ಔದುಂಬರ, ದಧ್ನ, ನೀಲ, ಪರಮೇಷ್ಠಿ, ವೃಕೋದರ, ಚಿತ್ರ, ಚಿತ್ರಗುಪ್ತ ಇವರೇ ಹದಿನಾಲ್ಕು ಮಂದಿ ಯಮರು, ಗಂಧಾದಿ ಉಪಚಾರಗಳಿಂದ ಇವರನ್ನು ಚೆನ್ನಾಗಿ ಪೂಜಿಸಿ ಕುಶ, ತಿಲಸಹಿತವಾದ ಜಲದಿಂದ ಪ್ರತಿಯೊಬ್ಬರಿಗೂ ಮೂರು ಮೂರು ತರ್ಪಣಗಳನ್ನು ಕೊಡಬೇಕು. ಅನಂತರ ತಾಮ್ರದ

ಪಾತ್ರೆಯಲ್ಲಿ ರಕ್ತಚಂದನ, ಎಳ್ಳು, ಅಕ್ಷತೆ, ಜವೆಗೋದಿ ಯನ್ನು ಹಾಕಿ ನೀರನ್ನು ತುಂಬಿಸಿ ಈ ಕೆಳಗಿನ ಮಂತ್ರದಿಂದ ಸೂರ್ಯನಿಗೆ ಅರ್ಘ್ಯ ಕೊಡಬೇಕು.

**ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।**
**ಗೃಹಾಣಾರ್ಘ್ಯಂ ಮಯಾದತ್ತಂ ಭಕ್ತ್ಯಾ ಮಾಮನುಕಂಪಯ ॥**

ನಾ.ಪೂ. ೧೧೯-೬೩

"ಸಾವಿರಾರು ಕಿರಣಗಳಿಂದ ಸುಶೋಭಿತನಾದ ತೇಜೋರಾಶಿಯಾದ ಜಗದೀಶ್ವರನಾದ ಸೂರ್ಯದೇವ! ದಯವಿಟ್ಟು ಬಾ, ಭಕ್ತಿಪೂರ್ವಕವಾಗಿ ನಾನು ಕೊಟ್ಟಿರುವ ಅರ್ಘ್ಯವನ್ನು ಸ್ವೀಕರಿಸು. ನನ್ನನ್ನು ಕೃಪೆಯಿಂದ ನಿನ್ನವನನ್ನಾಗಿ ಮಾಡಿಕೋ." ಈ ಮಂತ್ರದಿಂದ ಅರ್ಘ್ಯವನ್ನು ಕೊಟ್ಟು ಹದಿನಾಲ್ಕು ಬ್ರಾಹ್ಮಣರಿಗೆ ಭೋಜನ ಮಾಡಿಸಿ ಬೆಳ್ಳಿಯ ನಾಣ್ಯವನ್ನು ದಕ್ಷಿಣೆಯಾಗಿ ಕೊಟ್ಟು ಅವರನ್ನು ಕಳುಹಿಸಿ ತಾನೂ ಭೋಜನ ಮಾಡಬೇಕು. ಈ ರೀತಿ ನಿಯಮವನ್ನು ಪಾಲಿಸಿದವನಿಗೆ ಧರ್ಮರಾಜನ ಕೃಪೆಯಿಂದ ಇಹಲೋಕದಲ್ಲಿ ಧನ, ಪುತ್ರ, ಮೊದಲಾದ ದೇವದುರ್ಲಭ ಭೋಗಗಳೂ ಸಿಗುತ್ತವೆ. ದೇಹಾವಸಾನದ ನಂತರ ಆ ಭಕ್ತನು ಉತ್ತಮ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುತ್ತಾನೆ.

## ಏಕಾದಶಿ ವ್ರತವಿಧಿ ಮಹಿಮೆ, ದಶಮ್ಯಾದಿ ಮೂರು ದಿನಗಳ ವಿಶೇಷ ನಿಯಮಗಳು

**ಸನಾತನರು ಹೇಳುತ್ತಾರೆ:-** ನಾರದ ಮುನಿಯೇ, ಎರಡೂ ಪಕ್ಷಗಳ ಏಕಾದಶಿಯ ದಿನ ಮಾನವನು ನಿರಾಹಾರನಾಗಿರಬೇಕು. ಆ ದಿನ ಏಕಾಗ್ರಚಿತ್ತದಿಂದ ಭಗವಂತನ ಸ್ಮರಣೆ ಮಾಡುತ್ತ ಪುಷ್ಪಗಳಿಂದ ಮಂಗಳಕರವಾದ ಮತ್ತು ವಿಚಿತ್ರವಾದ ಮಂಟಪವನ್ನು ಮಾಡಬೇಕು. ಅನಂತರ ಶಾಸ್ತ್ರೋಕ್ತ ರೀತಿಯಿಂದ ಸ್ನಾನ ಮಾಡಿ ಉಪವಾಸ ಮತ್ತು ಇಂದ್ರಿಯ ಸಂಯಮಪೂರ್ವಕವಾಗಿ, ಶ್ರದ್ಧೆ ಮತ್ತು ಏಕಾಗ್ರಚಿತ್ತದಿಂದ ನಾನಾ ರೀತಿಯ ಉಪಚಾರ, ಜಪ, ಹೋಮ, ಪ್ರದಕ್ಷಿಣೆ, ಸ್ತೋತ್ರಪಾಠ, ದಂಡವತ್ ಪ್ರಣಾಮ, ಮಧುರ ಸ್ವರದಿಂದ ಪರಮಾತ್ಮನ ಜಯ ಜಯಕಾರ ಮೊದಲಾದವುಗಳಿಂದ ಶ್ರೀ ಹರಿಯ ಪೂಜೆಯನ್ನು ಮಾಡಬೇಕು. ಹೀಗೆ ವ್ರತಾನುಷ್ಠಾನ ಮಾಡಿದವನು ವಿಷ್ಣುಪದವನ್ನು ಪಡೆಯುತ್ತಾನೆ. ಚೈತ್ರ ಶುಕ್ಲ ಏಕಾದಶಿಯನ್ನು 'ಕಾಮದಾ' ಎಂದು ಹೇಳುತ್ತಾರೆ. ದಶಮೀ ಏಕಾದಶಿ ದ್ವಾದಶಿ ಈ ಮೂರು ದಿನಗಳಲ್ಲಿಯೂ ನಿಯಮದಿಂದ ಇರಬೇಕು. ಇದು ಎಲ್ಲಾ ಏಕಾದಶಿಗಳಿಗೂ ಅನ್ವಯಿಸುತ್ತದೆ. ಏಕಾದಶಿ ಉಪವಾಸದ ಅನಂತರ ದ್ವಾದಶಿಯ ದಿನ ಭಕ್ತಿಪೂರ್ವಕವಾಗಿ ಸನಾತನನಾದ ವಿಷ್ಣು ನಾಮಕ ವಾಸುದೇವನಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿ ಭೂಸುರರ ಭೋಜನವನ್ನು ಮಾಡಿಸಿ ದಕ್ಷಿಣೆಯನ್ನು ಕೊಟ್ಟು ಕಳುಹಿಸಿ ತಾನೂ ಭೋಜನ ಮಾಡಬೇಕು. ಸಮಸ್ತ ಪಾಪನಾಶಕವಾದ ಈ ಏಕಾದಶಿಯ ಉಪವಾಸವನ್ನು ಮಾಡಿ ಭಕ್ತಿಪೂರ್ವಕವಾಗಿ ಪಾರಣೆ ಮಾಡಿದರೆ ಭೋಗ ಮೋಕ್ಷಗಳೆರಡೂ ಲಭ್ಯವಾಗುತ್ತವೆ. ವೈಶಾಖ ಬಹುಳ ಏಕಾದಶಿಯನ್ನು 'ವರೂಥಿನೀ' ಎಂದು ಹೇಳುತ್ತಾರೆ. ಈ ದಿನ ಉಪವಾಸ ಮಾಡಿ ಮರುದಿನ ವೈಶಾಖ ಮಧುಸೂದನನ ಪೂಜೆಯನ್ನು ಮಾಡಿ, ಸುವರ್ಣ, ಧಾನ್ಯ, ಅನ್ನ, ಧೇನುಗಳನ್ನು ದಾನ ಮಾಡಬೇಕು.

ವರೂಥಿನೀ ಏಕಾದಶಿಯ ಉಪವಾಸ ಮಾಡಿದ ಮಾನವನು ಸಮಸ್ತ ಪಾಪಗಳನ್ನು ದೂರಕ್ಕೆ ತಳ್ಳಿ ವಿಷ್ಣು ಪದವನ್ನು ಹೊಂದುತ್ತಾನೆ. ವೈಶಾಖ ಶುಕ್ಲ ಏಕಾದಶಿಯನ್ನು 'ಮೋಹಿನೀ' ಎಂದು ಹೇಳುತ್ತಾರೆ. ಈ ದಿನ ಉಪವಾಸ ಮಾಡಿ ಮರುದಿನ ಸ್ನಾನಾನಂತರದಲ್ಲಿ ಗಂಧಾದಿಗಳಿಂದ ಪುರುಷಪೋತ್ತಮನ ಪೂಜೆಯನ್ನು ಮಾಡಿ ಬ್ರಾಹ್ಮಣ ಭೋಜನ ಮಾಡಿಸಿದರೆ ಸಮಸ್ತ ಪಾಪ ಪರಿಹಾರವಾಗುತ್ತದೆ.

ಜ್ಯೇಷ್ಠ ಕೃಷ್ಣ ಏಕಾದಶಿಯನ್ನು 'ಅಪರಾ' ಎಂದು ಹೇಳುತ್ತಾರೆ. ಆ ದಿನ ನಿಯಮಪೂರ್ವಕವಾಗಿ ಉಪವಾಸ ಮಾಡಿ ದ್ವಾದಶೀ ಪ್ರಾತಃಕಾಲ ನಿತ್ಯಾಹ್ನಿಕವನ್ನು ಮಾಡಿ ವಿಧಿವತ್ತಾಗಿ ತ್ರಿವಿಕ್ರಮನ ಪೂಜೆಯನ್ನು ಮಾಡಬೇಕು. ಅನಂತರ ಉತ್ತಮರಿಗೆ ಭೋಜನ ಮಾಡಿಸಿ ಅವರಿಗೆ ದಕ್ಷಿಣೆ ಕೊಡಬೇಕು. ಈ ಉಪವಾಸವನ್ನು ಮಾಡುವ ಮಾನವನು ಸಮಸ್ತ ಪಾಪ ವಿಮುಕ್ತನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ. ಜ್ಯೇಷ್ಠ ಶುಕ್ಲ ಏಕಾದಶಿಯನ್ನು 'ನಿರ್ಜಲಾ' ಎಂದು ಹೇಳುತ್ತಾರೆ. ಬ್ರಾಹ್ಮಣ ಶ್ರೇಷ್ಠನೇ! ಆ ದಿನ ಸೂರ್ಯೋದಯದಿಂದ ಆರಂಭಿಸಿ ಮರುದಿನ ಸೂರ್ಯೋದಯದವರೆಗೆ ನಿರ್ಜಲ ನಿರಾಹಾರ ಉಪವಾಸವನ್ನು ಮಾಡಿ ಮರುದಿನ ದ್ವಾದಶಿ ಪ್ರಾತಃಕಾಲ ಸ್ನಾನ ನಿತ್ಯಾಹ್ನಿಕ ಮಾಡಿ ವಿವಿಧ ಉಪಚಾರಗಳಿಂದ ಹೃಷೀಕೇಶನ ಪೂಜೆಯನ್ನು ಮಾಡಬೇಕು. ಅನಂತರ ಯೋಗ್ಯ ಜನರಿಗೆ ಭೋಜನ ಮಾಡಿಸಬೇಕು. ಈ ಏಕಾದಶಿಯ ಉಪವಾಸವು ೨೪ ಏಕಾದಶಿ ಉಪವಾಸಗಳ ಪುಣ್ಯಫಲವನ್ನು ಕೊಡುತ್ತದೆ.

ಆಷಾಢ ಬಹುಳ ಏಕಾದಶಿಯನ್ನು 'ಯೋಗಿನೀ' ಎಂದು ಹೇಳುತ್ತಾರೆ. ಆ ದಿನ ಉಪವಾಸ ಮಾಡಿ ಮರುದಿನ ದ್ವಾದಶಿ ನಿತ್ಯಾಹ್ನಿಕಾನಂತರದಲ್ಲಿ ನಾರಾಯಣನ ಪೂಜೆ ಮಾಡಿ ಬ್ರಾಹ್ಮಣ ಭೋಜನ ಮಾಡಿಸಿ ದಕ್ಷಿಣೆಯನ್ನು ಕೊಡಬೇಕು. ಇದರಿಂದ ಎಲ್ಲ ದಾನಗಳ ಫಲವೂ ಬರುತ್ತದೆ, ಭಕ್ತನಿಗೆ ವಿಷ್ಣುಲೋಕದಲ್ಲಿ ಉತ್ತಮ ಆನಂದ ಪ್ರಾಪ್ತಿಯು ಆಗುತ್ತದೆ. ಮುನಿಯೇ, ಆಷಾಢ ಶುಕ್ಲ ಏಕಾದಶಿಯು ಪ್ರಥಮೈಕಾದಶೀ, ಶಯನೀ ಏಕಾದಶೀ ಎಂದು ಪ್ರಸಿದ್ಧವಾಗಿದೆ. ಆ ದಿನ ಉಪವಾಸ ಮಾಡಬೇಕು. ಸುಂದರವಾದ ಮಂಟಪವನ್ನು ರಚಿಸಿ ಅದರಲ್ಲಿ ವಿಧಿಪೂರ್ವಕವಾಗಿ ವಿಷ್ಣುವಿನ ಪ್ರತಿಮೆಯನ್ನು ಸ್ಥಾಪಿಸಬೇಕು. ಪ್ರತಿಮೆಯು ಚಿನ್ನ ಅಥವಾ ಬೆಳ್ಳಿಯಿಂದ ರಚಿತವಾಗಿ ಪರಮಸುಂದರವಾಗಿರಬೇಕು. ನಾಲ್ಕು ಭುಜಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳಿರಬೇಕು. ಪೀತಾಂಬರ ವನ್ನುಟ್ಟಿರುವ ಈ ಪ್ರತಿಮೆಯನ್ನು ಮಂಚದ ಮೇಲಿಟ್ಟು ಮಂತ್ರವನ್ನು ಹೇಳುತ್ತಾ ಪಂಚಾಮೃತ ಸ್ನಾನ. ಪುರುಷ ಸೂಕ್ತದಿಂದ ಶುದ್ಧ ಜಲಸ್ನಾನವನ್ನು ಮಾಡಿಸಿ ಪುರುಷ ಸೂಕ್ತದ ಹದಿನಾರು ಮಂತ್ರಗಳಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು, ಪಾದ್ಯದಿಂದ ಆರಂಭಿಸಿ ನೀರಾಜನ (ಮಂಗಳಾರತಿ)ದವರೆಗೆ ಹದಿನಾರು ಉಪಚಾರ ಗಳಾಗುತ್ತವೆ. ಅನಂತರ ಶ್ರೀ ಹರಿಯನ್ನು ಹೀಗೆ ಪ್ರಾರ್ಥಿಸಬೇಕು.

ಸುಪ್ತೇ ತ್ವಯಿ ಜಗನ್ನಾಥ ಜಗತ್ ಸುಪ್ತಂ ಭವೇದಿದಂ ।
ವಿಬುದ್ಧೇ ತ್ವಯಿ ಬುದ್ಧಂ ಚ ಜಗತ್ ಸರ್ವಂ ಚರಾಚರಂ ॥
ನಾ. ಪೂರ್ವ ೧೨೦ -೨೩

''ಜಗನ್ನಾಥ ನಾರಾಯಣ, ನೀನು ಶಯನ ಮಾಡಿದಾಗ ಜಗತ್ತೆಲ್ಲವೂ ಶಯನ ಮಾಡುತ್ತದೆ. ನೀನು ಎಚ್ಚತ್ತಾಗ ಎಲ್ಲ ಜಗತ್ತು ಎಚ್ಚರಗೊಳ್ಳುತ್ತದೆ.'' ಈ ಪ್ರಾರ್ಥನಾನಂತರ ಚಾತುರ್ಮಾಸ್ಯದ ನಿಯಮಗಳನ್ನು ಯಥಾಶಕ್ತಿಯಾಗಿ ಸ್ವೀಕರಿಸಬೇಕು. ಅನಂತರ

ದ್ವಾದಶಿ ಪ್ರಾತಃಕಾಲ ಭಗವಂತನಾದ ಶೇಷಶಾಯಿಯ ಪೂಜೆಯನ್ನು ಮಾಡಬೇಕು. ಅನಂತರ ಜ್ಞಾನಿಗಳ ಭೋಜನ ಮಾಡಿಸಿ ದಕ್ಷಿಣೆ ಕೊಟ್ಟು ಅವರನ್ನು ಸಂತೋಷಪಡಿಸಿ ತಾನೂ ಮೌನವಾಗಿ ಭೋಜನಮಾಡಬೇಕು. ಈ ಶಯನೀ ಏಕಾದಶಿಯ ಅನುಷ್ಠಾನ ಮಾಡುವ ಮನುಷ್ಯನು ಭೋಗ ಮೋಕ್ಷಗಳೆರಡನ್ನು ಪಡೆಯುತ್ತಾನೆ. ದ್ವಿಜಶ್ರೇಷ್ಠನೇ, ಶ್ರಾವಣ ಕೃಷ್ಣ ಪಕ್ಷದ ಏಕಾದಶಿಯನ್ನು 'ಕಾಮಿಕಾ' ಎಂದು ಹೇಳುತ್ತಾರೆ. ಆ ದಿನ ನಿಯಮಪೂರ್ವಕ ಉಪವಾಸ ಮಾಡಿ ಮರುದಿನ ನಿತ್ಯಕರ್ಮಾನುಷ್ಠಾನ ಮಾಡಿ ಷೋಡಶೋಪಚರಾಗಳಿಂದ ಶ್ರೀಧರನ ಪೂಜೆಯನ್ನು ಮಾಡಿ ಜ್ಞಾನಿಗಳ ಭೋಜನ ದಕ್ಷಿಣಾಪ್ರಧಾನಗಳ ಅನಂತರ ತಾನೂ ಸಹೋದರ ಬಂಧುಗಳೊಡನೆ ಭಗವಂತನ ಪ್ರಸಾದವನ್ನು ಸ್ವೀಕರಿಸಬೇಕು. ಈ ವ್ರತದಿಂದ ಇಹಲೋಕದ ಸಮಸ್ತ ಕಾಮನೆಗಳೂ ಕೈಗೂಡುವುದಲ್ಲದೆ ವಿಷ್ಣುಲೋಕ ಪ್ರಾಪ್ತಿಯೂ ಆಗುತ್ತದೆ. ಶ್ರಾವಣ ಶುಕ್ಲ ಏಕಾದಶಿಯನ್ನು ಪುತ್ರದಾ ಎಂದು ಹೇಳುತ್ತಾರೆ. ಆ ದಿನ ಉಪವಾಸಮಾಡಿ ಮರುದಿನ ದ್ವಾದಶೀ ನಿಯಮದಿಂದ ಷೋಡಶೋಪಚಾರದಿಂದ ಜನಾರ್ದನನ ಪೂಜೆಯನ್ನು ಮಾಡಬೇಕು. ಅನಂತರ ಸದಾಚಾರಿಗಳ ಭೋಜನ ಮಾಡಿಸಿ ಅವರಿಗೆ ದಕ್ಷಿಣೆಕೊಟ್ಟು ತಾನೂ ಪ್ರಸಾದ ಸ್ವೀಕರಿಸಬೇಕು. ಇದರಿಂದ ಇಹದಲ್ಲಿ ಸದ್ಗುಣ ಸಂಪನ್ನರಾದ ಪುತ್ರರು ಜನಿಸುವರು. ಮುಂದೆ ದೇವತೆಗಳಿಂದಲೂ ಮಾನ್ಯವಾದ ವಿಷ್ಣುಲೋಕದ ಪ್ರಾಪ್ತಿಯಾಗುತ್ತದೆ.

ಭಾದ್ರಪದ ಕೃಷ್ಣ ಏಕಾದಶಿಯು 'ಅಜಾ'. ಆ ದಿನ ಉಪವಾಸಮಾಡಿ ಮರು ದಿನ ಬೇರೆ ಬೇರೆ ಉಪಚಾರಗಳಿಂದ ಉಪೇಂದ್ರನ ಪೂಜೆಯನ್ನು ಮಾಡಬೇಕು. ಅನಂತರ ಜ್ಞಾನಿಗಳಿಗೆ ಮೃಷ್ಟಾನ್ನ ಭೋಜನ ಮಾಡಿಸಿ ದಕ್ಷಿಣೆಯನ್ನು ಕೊಟ್ಟು ಕಳುಹಿಸಬೇಕು. ಈ ರೀತಿ ಭಕ್ತಿ ಭಾವದಿಂದ ಏಕಾಗ್ರಚಿತ್ತದಿಂದ ಅಜಾ ಏಕಾದಶಿಯ ಅನುಷ್ಠಾನ ಮಾಡಿದವನು ಇಹಲೋಕದಲ್ಲಿ ಸಂಪೂರ್ಣ ಉತ್ತಮ ಭೋಗಗಳನ್ನು ಅನುಭವಿಸಿ ಅನಂತರ ವಿಷ್ಣುಲೋಕವನ್ನು ಪಡೆಯುತ್ತಾನೆ. ಭಾದ್ರಪದ ಶುಕ್ಲ ಏಕಾದಶೀ, 'ಪದ್ಮಾ ಏಕಾದಶಿ'. ಉಪವಾಸಮಾಡಿ ನಿತ್ಯಪೂಜೆಯನ್ನು ಮಾಡಿದ ಮೇಲೆ ಜ್ಞಾನಿಗಳಿಗೆ ಜಲಪೂರ್ಣವಾದ ಘಟವನ್ನು ದಾನಮಾಡಬೇಕು. ಮೊದಲೇ ಸ್ಥಾಪಿಸಿರುವ ಪ್ರತಿಮೆಯ ಉತ್ಸವವನ್ನು ಮಾಡಿಸಿ ಅದನ್ನು ಜಲಾಶಯದ ಹತ್ತಿರ ತೆಗೆದುಕೊಂಡು ಹೋಗಿ, ನೀರಿನಿಂದ ಪ್ರೋಕ್ಷಿಸಿ ವಿಧಿಪೂರ್ವಕವಾಗಿ ಪೂಜಿಸಬೇಕು. ಅನಂತರ ಅದನ್ನು ಮನೆಗೆ ತಂದು ಎಡಮಗ್ಗುಲಾಗಿ ಮಲಗಿಸಬೇಕು. ಅನಂತರ ದ್ವಾದಶೀ ಪ್ರಾತಃಕಾಲ ಗಂಧಾದಿ ಉಪಚಾರಗಳಿಂದ ವಾಮನ ಪೂಜೆಯನ್ನು ಮಾಡಬೇಕು. ಅನಂತರ ಜ್ಞಾನಿಗಳ ಭೋಜನ ಮಾಡಿಸಿ ದಕ್ಷಿಣೆಕೊಟ್ಟು ಕಳುಹಿಸಿಕೊಡಬೇಕು. ಈ ರೀತಿ ಪದ್ಮಾ ಏಕಾದಶೀ ವ್ರತವನ್ನು ಅನುಷ್ಠಾನ ಮಾಡಿದವನು ಇಹಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಈ ಸಂಸಾರದಿಂದ ಮುಕ್ತನಾಗುತ್ತಾನೆ. ಅಶ್ವಯುಜ ಬಹುಳ ಏಕಾದಶಿಯನ್ನು 'ಇಂದಿರಾ' ಎಂದು ಹೇಳುತ್ತಾರೆ. ಆ ದಿನ ಉಪವಾಸಮಾಡಿ ಮಧ್ಯಾಹ್ನ ಶಾಲಿಗ್ರಾಮ ಸನ್ನಿಧಿಯಲ್ಲಿ ಶ್ರಾದ್ಧ (ಶ್ರಾದ್ಧ ಸಂಕಲ್ಪ)ವನ್ನು ಮಾಡಬೇಕು. ಮರುದಿನ ದ್ವಾದಶೀ ಪ್ರಾತಃಕಾಲ ಪದ್ಮನಾಭನ ಪೂಜೆಯನ್ನು ಮಾಡಿ ಜ್ಞಾನಿಗಳ ಭೋಜನಮಾಡಿಸಿ ದಕ್ಷಿಣಾಪ್ರದಾನ ಮಾಡಿ, ಅವರನ್ನು ಕಳುಹಿಸಿಕೊಡಬೇಕು, ಅನಂತರ ತಾನೂ ಭೋಜನಮಾಡಬೇಕು. ಈ ರೀತಿ ಇಂದಿರಾವ್ರತವನ್ನು ಅನುಷ್ಠಾನ ಮಾಡಿದವನು ಇಹಲೋಕದಲ್ಲಿ ಅಭೀಷ್ಟ ಭೋಗಗಳನ್ನು ಅನುಭವಿಸಿ ಕೋಟಿಗಟ್ಟಲೆ ಪಿತೃಗಳನ್ನು ಉದ್ಧರಿಸಿ ಕೊನೆಗೆ ತಾನೂ ವಿಷ್ಣುಲೋಕವನ್ನು ಪಡೆಯುತ್ತಾನೆ.

ಆಶ್ವಯುಜ ಶುಕ್ಲ ಏಕಾದಶಿಯು 'ಪಾಶಾಂಕುಶಾ' ಎಂದು ಹೆಸರನ್ನು ಪಡೆದಿದೆ. ಆ ದಿನ ಉಪವಾಸವನ್ನು ಮಾಡಿ ಮರುದಿನ ವಿಷ್ಣುವಿನ ಪೂಜೆಯನ್ನು ಮಾಡಬೇಕು. ಅನಂತರ ಶ್ರೇಷ್ಠರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಕಳುಹಿಸಿ ತಾನೂ ಭೋಜನ ಮಾಡಬೇಕು, ಭಕ್ತಿಪೂರ್ವಕವಾಗಿ ಪಾಶಾಂಕುಶಾ ಏಕಾದಶೀಯನ್ನು ಅನುಷ್ಠಾನಮಾಡಿದವನು ಇಹದಲ್ಲಿ ಉತ್ತಮ ಭೋಗವನ್ನು ಅನುಭವಿಸಿ ಅನಂತರ ವಿಷ್ಣುಲೋಕವನ್ನೇ ಹೊಂದುತ್ತಾನೆ.

ನಾರದನೇ, 'ರಮಾ' ಎಂಬ ಹೆಸರುಳ್ಳ ಕಾರ್ತಿಕ ಬಹುಳ ಏಕಾದಶಿಯ ದಿನ ಪ್ರಾತಃಕಾಲ ವಿಧಿವತ್ತಾಗಿ ಸ್ನಾನ ಮಾಡಿ, ಕಾಲಕೇಶಿದಾನವನ ವಧೆಮಾಡಿದ ದೇವ ದೇವನಾದ ಕೇಶವನ ಪೂಜೆಯನ್ನು ಮಾಡಬೇಕು, ಅನಂತರ ಜ್ಞಾನಿಗಳಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಕಳುಹಿಸಬೇಕು. ಇಹಲೋಕದಲ್ಲಿ ಸಮಸ್ತ ಸುಖ ಪ್ರಾಪ್ತಿ. ವಿಮಾನದ ಮೂಲಕ ವೈಕುಂಠಕ್ಕೆ ತೆರಳಿ ಲಕ್ಷ್ಮೀ ಪತಿಯ ಸಾಮೀಪ್ಯ ಪ್ರಾಪ್ತಿ. ಇವೇ ಈ ಏಕಾದಶಿಯ ಫಲಗಳು. ಕಾರ್ತಿಕ ಶುಕ್ಲ ಏಕಾದಶಿಯು 'ಪ್ರಬೋಧಿನೀ' ಎಂಬ ಹೆಸರನ್ನು ಹೊಂದಿದೆ. ಆ ದಿನ ಉಪವಾಸವನ್ನು ಮಾಡಿ ರಾತ್ರಿ ಮಲಗಿರುವ ಪರಮಾತ್ಮನನ್ನು ಸಂಗೀತ ವಾದ್ಯ, ಉತ್ಸವಗಳಿಂದ ಎಬ್ಬಿಸಬೇಕು. ಋಗ್ವೇದ, ಯಜುರ್ವೇದ, ಸಾಮವೇದಗಳ ಮಂತ್ರಗಳನ್ನು ಪಠಿಸಬೇಕು. ದ್ರಾಕ್ಷಿ, ಕಬ್ಬು, ದಾಳಿಂಬೆ, ಬಾಳೆಹಣ್ಣು, ಮುಂತಾದವುಗಳನ್ನು ಪರಮಾತ್ಮನಿಗೆ ಅರ್ಪಿಸಬೇಕು. ಮರುದಿನ ಪ್ರಾತಃಕಾಲ ಸ್ನಾನ ನಿತ್ಯಾಹಿಕಗಳನ್ನು ಮಾಡಿ ಪುರುಷಸೂಕ್ತದ ಮಂತ್ರಗಳ ಮೂಲಕ ಪೂಜೆಯನ್ನು ಮಾಡಬೇಕು. ಅನಂತರ ಜ್ಞಾನಿಗಳ ಭೋಜನ ಮಾಡಿಸಿ ದಕ್ಷಿಣೆಯ ಮೂಲಕ ಅವರನ್ನು ಸಂತೋಷಪಡಿಸಿ ಕಳುಹಿಸಬೇಕು. ಅನಂತರ ಆಚಾರ್ಯರಿಗೆ ಭಗವಂತನ ಸುವರ್ಣಮಯವಾದ ಪ್ರತಿಮೆ ಮತ್ತು ಗೋವುಗಳನ್ನು ದಾನ ಮಾಡಬೇಕು. ಶ್ರೇಷ್ಠ ಭೋಗಾನುಭವ ವಿಷ್ಣುಲೋಕ ಪ್ರಾಪ್ತಿ ಇವುಗಳೇ ಈ ಏಕಾದಶಿಯ ಅನುಷ್ಠಾನ ಫಲಗಳು. ಮಾರ್ಗಶಿರ ಕೃಷ್ಣ ಪಕ್ಷದ ಉತ್ಪನ್ನಾ, ಏಕಾದಶಿಯ ದಿನ ಉಪವಾಸಮಾಡಿ ದ್ವಾದಶೀದಿನ ಗಂಧಾದಿ ಉಪಚಾರಗಳಿಂದ ಶ್ರೀಕೃಷ್ಣನ ಪೂಜಾ ಮಾಡಬೇಕು. ಬ್ರಾಹ್ಮಣಭೋಜನ, ದಕ್ಷಿಣಾಪ್ರದಾನ, ಅವರನ್ನು ಕಳುಹಿಸುವದು, ತಾನು ಏಕಾಗ್ರಚಿತ್ತನಾಗಿ ಭೋಜನಮಾಡುವುದು, ಎಂಬ ಈ ನಿಯಮಗಳನ್ನು ನಡೆಸಿದವನು ವಿಮಾನಾರೂಢನಾಗಿ ವಿಷ್ಣುಲೋಕವನ್ನೇ ಸೇರುತ್ತಾನೆ. ಮಾರ್ಗಶಿರ ಶುಕ್ಲ ಏಕಾದಶಿಯನ್ನು ಮೋಕ್ಷದಾ ಏಕಾದಶಿ ಎಂದು ಹೇಳುತ್ತಾರೆ. ಆ ದಿನ ಉಪವಾಸ ಮಾಡಿ ಮರುದಿನ ದ್ವಾದಶೀ ಪ್ರಾತಃಕಾಲ ವಿಶ್ವರೂಪಧಾರಿಯಾದ ಅನಂತನ ಪೂಜೆಮಾಡಿ ಹಿಂದಿನಂತೆಯೇ ಭೋಜನಾದಿಗಳನ್ನು ನಡೆಸಿದವನು ತನ್ನ ಹಿಂದಿನ ಮತ್ತು ಮುಂದಿನ ಹತ್ತು ಪೀಳಿಗೆಯನ್ನು ಉದ್ಧಾರಮಾಡಿ ವಿಷ್ಣುಸಾನ್ನಿಧ್ಯವನ್ನು ಪಡೆಯುತ್ತಾನೆ.

ಪುಷ್ಯಕೃಷ್ಣ ಪಕ್ಷದ ಏಕಾದಶಿಯು ಸಫಲಾ ಎನ್ನಿಸಿಕೊಳ್ಳುತ್ತದೆ. ಆ ದಿನ ಉಪವಾಸ ಮಾಡಿ ಮರುದಿನ ದ್ವಾದಶೀ ಪ್ರಾತಃಕಾಲ ಎಲ್ಲ ಉಪಚಾರಗಳಿಂದ ಭಗವಾನ್ ಅನಂತನ ಪೂಜೆ ಮಾಡಬೇಕು. ಯೋಗ್ಯರಿಗೆ ಮೃಷ್ಟಾನ್ನ ಭೋಜನ, ದಕ್ಷಿಣಾಪ್ರದಾನಗಳನ್ನು ಮಾಡಬೇಕು. ಇಹಲೋಕದಲ್ಲಿ ಸಮಸ್ತ ಭೋಗಾನುಭವ, ಅಂತ್ಯದಲ್ಲಿ ವಿಷ್ಣುಪದ ಪ್ರಾಪ್ತಿಯೇ ಇದರ ಫಲ, ಪುಷ್ಯ ಶುಕ್ಲ ಏಕಾದಶಿಯು ಪುತ್ರದಾ ಆಗಿದೆ. ಆ ದಿನ ಉಪವಾಸ, ಮರುದಿನ ದ್ವಾದಶಿಯಂದು ಅರ್ಘ್ಯಾದಿ ಉಪಚಾರಗಳಿಂದ ಭಗವಾನ್ ಚಕ್ರಧಾರಿ ವಿಷ್ಣುವಿನ ಪೂಜೆ, ವಿಪ್ರಭೋಜನ, ದಕ್ಷಿಣಾ ಪ್ರದಾನ, ಇಷ್ಟ ಬಂಧುಗಳೊಡನೆ ಸ್ವಯಂ ಶೇಷಾನ್ನ

ಭೋಜನ. ಈ ನಿಯಮಗಳಿಂದ ಇಹದಲ್ಲಿ ಹರಿ ಪ್ರೀತಿಯಿಂದ ಸಕಲ ಭೋಗ ಪ್ರಾಪ್ತಿ. ಪರದಲ್ಲಿ ಹರಿಸಾನ್ನಿಧ್ಯ ಪ್ರಾಪ್ತಿಗಳೂ ಆಗುತ್ತವೆ. ದ್ವಿಜಶ್ರೇಷ್ಠನೇ, ಮಾಘ ಕೃಷ್ಣ ಪಕ್ಷದ ಷಟ್ ತಿಲಾ ಏಕಾದಶಿಯಂದು ಉಪವಾಸ ಮಾಡಬೇಕು. ದ್ವಾದಶೀ ದಿನ ತಿಲಸ್ನಾನ, ತಿಲದಾನ, ತಿಲತರ್ಪಣ, ತಿಲಹೋಮ, ತಿಲಭೋಜನ, ತಿಲಪೂಜನ ಎಂಬ ಆರು ತಿಲವಿಧಾನಗಳನ್ನು ಆಚರಿಸಬೇಕು. ಪ್ರಾತಃ ಸರ್ವೋಪಚಾರಗಳಿಂದ ವೈಕುಂಠನ ಪೂಜೆ, ಬ್ರಾಹ್ಮಣ ಭೋಜನ, ದಕ್ಷಿಣಾದಾನ, ಜ್ಞಾನಿಗಳ ಪ್ರಸ್ಥಾನ, ಸ್ವಯಂ ಪ್ರಸಾದ ಭೋಜನ, ಇವೆಲ್ಲವನ್ನೂ ಏಕಾಗ್ರಚಿತ್ತದಿಂದ ಅನುಷ್ಠಾನ ಮಾಡಿದ ಮನುಷ್ಯನು ಇಹದಲ್ಲಿ ಸಮಸ್ತ ಸುಖಗಳನ್ನು ಭೋಗಿಸಿ, ಕೊನೆಗೆ ವಿಷ್ಣುಲೋಕವನ್ನು ಪಡೆಯುತ್ತಾನೆ.

ಮಾಘ ಶುಕ್ಲ ಏಕಾದಶಿಯ ಹೆಸರು 'ಜಯಾ' ಆ ದಿನ ಉಪವಾಸ ಮಾಡಿ ಮರುದಿನ ದ್ವಾದಶಿ - ಪರಮ ಪುರುಷ ಶ್ರೀಪತಿಯ ಪೂಜೆಯನ್ನು ಮಾಡಿ, ದ್ವಿಜ ಭೋಜನ, ದಕ್ಷಿಣಾಪ್ರದಾನ, ದ್ವಿಜ ಪ್ರಸ್ಥಾನಗಳನ್ನು ಮಾಡಿಸಿ ಉಳಿದ ಅನ್ನ ಪ್ರಸಾದವನ್ನು ತನ್ನ ಸಹೋದರ ಬಂಧುಗಳೊಡನೆ ತಾನು ಏಕಾಗ್ರಚಿತ್ತನಾಗಿ ಭೋಜನ ಮಾಡಬೇಕು. ಕೇಶವನಿಗೆ ಸಂತೋಷಕರವಾದ ಈ ವ್ರತವನ್ನು ಮಾಡುವವನಿಗೂ ಇಹದಲ್ಲಿ ಉತ್ತಮ ಸುಖ ಭೋಗಗಳು, ಪರದಲ್ಲಿ ವಿಷ್ಣು ಲೋಕಪ್ರಾಪ್ತಿಯೇ ಫಲವು. ಫಾಲ್ಗುನ ಬಹುಳ ಏಕಾದಶಿ 'ವಿಜಯಾ'. ಆ ದಿನ ಉಪವಾಸ ಮಾಡಿ ಮರುದಿನ ದ್ವಾದಶಿ ಪ್ರಾತಃಕಾಲ ಗಂಧಾದಿ ಉಪಚಾರಗಳಿಂದ ಯೋಗೀಶ್ವರನ ಪೂಜೆ ಮಾಡಿ ದ್ವಿಜರಿಗೆ ಭೋಜನ ಮಾಡಿಸಿ, ದಕ್ಷಿಣಾಪ್ರದಾನ ಮಾಡಿ, ಅವರನ್ನು ಬೀಳ್ಕೊಟ್ಟು ತಾನು ಸಹೋದರ ಬಂಧುಗಳೊಡನೆ ಮೌನವಾಗಿ ಶೇಷಾನ್ನ ಪ್ರಸಾದವನ್ನು ಸ್ವೀಕರಿಸಬೇಕು. ಈ ವ್ರತವನ್ನು ಮಾಡುವ ಮಾನವನು ಇಹಲೋಕದಲ್ಲಿ ಅಭೀಷ್ಟ ಭೋಗಗಳನ್ನು ಭೋಗಿಸಿ ದೇಹಾಂತದಲ್ಲಿ ದೇವತೆಗಳಿಂದಲೂ ಮಾನ್ಯವಾದ ವಿಷ್ಣು ಲೋಕವನ್ನು ಪಡೆಯುತ್ತಾನೆ. ಫಾಲ್ಗುನ ಶುಕ್ಲ ಪಕ್ಷದಲ್ಲಿ ಬರುವ ಆಮಲಕೀ ಏಕಾದಶೀಯ ದಿನ ಉಪವಾಸ ಮಾಡಿ. ದ್ವಾದಶಿಯ ದಿನ ಪ್ರಾತಃಕಾಲ ಎಲ್ಲ ಉಪಚಾರಗಳಿಂದ ಪುಂಡರೀಕಾಕ್ಷನಾದ ಭಗವಂತನ ಪೂಜೆಯನ್ನು ಮಾಡಿ ದ್ವಿಜರಿಗೆ ಉತ್ತಮ ಅನ್ನವನ್ನು ಕೊಡಬೇಕು. ಅವರಿಗೆ ಭಕ್ತಿಯಿಂದ ದಕ್ಷಿಣೆಯನ್ನು ಕೊಡಬೇಕು. ಈ ರೀತಿ ಫಾಲ್ಗುನ ಶುಕ್ಲ ಪಕ್ಷದಲ್ಲಿ ಅಮಲಕೀ ಏಕಾದಶಿಯನ್ನು ವಿಧಿವತ್ತಾಗಿ ಆಚರಿಸಿ, ಪುಂಡರೀಕಾಕ್ಷನ ಪೂಜೆಯನ್ನು ಮಾಡಿದರೆ ಮಾನವನು ಶ್ರೀ ಹರಿಯ ಲೋಕವನ್ನು ಪಡೆಯುತ್ತಾನೆ. ಚೈತ್ರ ಕೃಷ್ಣ ಪಕ್ಷದಲ್ಲಿ 'ಪಾಪಮೋಚನೀ' ಏಕಾದಶಿಯು ಬರುತ್ತದೆ. ಆ ದಿನ ಉಪವಾಸ, ಮರುದಿನ ಪ್ರಾತಃಕಾಲ ಷೋಡಶೋಪಚಾರಗಳಿಂದ ಶ್ರೀ ಗೋವಿಂದನ ಪೂಜೆ, ದ್ವಿಜರಿಗೆ ಭೋಜನ, ದಕ್ಷಿಣಾಪ್ರದಾನ ಇವುಗಳನ್ನು ಮಾಡಿ ಬ್ರಾಹ್ಮಣರನ್ನು ಕಳುಹಿಸಿ ತಾನೂ ಸಹೋದರ ಬಂಧುಗಳೊಡನೆ ಭೋಜನ ಮಾಡಬೇಕು. ಯಾವನು ಈ ರೀತಿ 'ಪಾಪಮೋಚನೀ' ಏಕಾದಶಿಯ ವ್ರತವನ್ನು ಅನುಷ್ಠಾನ ಮಾಡುತ್ತಾನೋ ಅವನು ಪ್ರಕಾಶ ಮಾನವಾದ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುತ್ತಾನೆ.

ಈ ರೀತಿ ಶುಕ್ಲ ಪಕ್ಷ ಮತ್ತು ಕೃಷ್ಣ ಪಕ್ಷದ ಎರಡು ಏಕಾದಶಿ ದಿನಗಳಲ್ಲಿಯೂ ಉಪವಾಸ ಮಾಡಬೇಕು. ಈ ಏಕಾದಶಿಯ ವ್ರತವು ಶ್ರೀಹರಿಯ ಅನುಗ್ರಹವನ್ನು ಉಂಟು ಮಾಡಿ ಮೋಕ್ಷಕ್ಕೆ ಸಾಧನವಾಗುತ್ತದೆ. ವ್ರತಗಳಲ್ಲಿ ಇದು ಉತ್ತಮವ್ರತ, ಸಮಸ್ತ, ಪಾಪನಾಶಕ, ಆದುದರಿಂದ ಇದರ ಫಲವನ್ನು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ದಶಮಿ,

ಏಕಾದಶಿ, ದ್ವಾದಶಿ ಈ ಮೂರು ದಿನಗಳನ್ನು ದಿನ ತ್ರಯವೆಂದು ಹೇಳುತ್ತಾರೆ. ಈ ದಿವಸಗಳಲ್ಲಿ ದಶಮಿ ದ್ವಾದಶಿಗಳಲ್ಲಿ ಎರಡು ಬಾರಿ ಊಟವನ್ನು ಮಾಡಲೇ ಬಾರದು. ದಶಮೀ ದ್ವಾದಶಿಗಳಲ್ಲಿ ಒಂದು ಬಾರಿ ಮಾತ್ರ ಭೋಜನ ಮಾಡಬೇಕು. ಏಕಾದಶಿಯ ದಿವಸ ಎರಡು ಬಾರಿಯೂ ಭೋಜನವು ವರ್ಜ್ಯವಾಗಿದೆ. ಶುದ್ಧ ಉಪವಾಸವನ್ನೇ ಮಾಡಬೇಕು.

ಅಥ ತೇ ನಿಯಮಾನ್ ವಚ್ಮಿ ವ್ರತೇ ಹ್ಯಸ್ಮಿನ್ ದಿನತ್ರಯೇ ।
ಕಾಂಸ್ಯಂ ಮಾಂಸಂ ಮಸೂರಾನ್ನಂ ಚಣಕಾನ್ ಕೋದ್ರವಾಂಸ್ತಥಾ ॥
ಶಾಕಂ ಮಧು ಪರಾನ್ನಂ ಚ ಪುನರ್ಭೋಜನ ಮೈಥುನೇ ।
ದಶಮ್ಯಾಂ ದಶವಸ್ತೂನಿ ವರ್ಜಯೇದ್ವೈಷ್ಣವಃ ಸದಾ ॥
ದ್ಯೂತಂ ಕ್ರೀಡಾಂ ಚ ನಿದ್ರಾಂ ಚ ತಾಂಬೂಲಂ ದಂತಧಾವನಂ ।
ಪರಾಪವಾದಂ ಪೈಶುನ್ಯಂ ಸ್ತೇಯಂ ಹಿಂಸಾಂ ತಥಾ ರತಿಂ ॥
ಕೋಪಂ ಹ್ಯನೃತವಾಕ್ಯಂ ಚ ಏಕಾದಶ್ಯಾಂ ವಿವರ್ಜಯೇತ್ ।
ಕಾಂಸ್ಯಂ ಮಾಂಸಂ ಸುರಾಂ ಕ್ಷೌದ್ರಂ ತೈಲಂ ವಿತಥ ಭಾಷಣಂ ॥
ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನ ಮೈಥುನೇ ।
ಅಸ್ಪೃಶ್ಯ ಸ್ಪರ್ಶಮಾಸೂರೇ ದ್ವಾದಶ್ಯಾಂ ದ್ವಾದಶ ತ್ಯಜೇತ್ ॥
ನಾ.ಪೂರ್ವ ೧೨೦-೮೬-೯೦

ಈ ಮೂರು ದಿನಗಳಲ್ಲಿ ಪಾಲನೆ ಮಾಡಬೇಕಾದ ನಿಯಮಗಳನ್ನು ನಿನಗೆ ಹೇಳುತ್ತೇನೆ, ಕೇಳು, ಕಂಚಿನ ಪಾತ್ರೆ, ಮಾಂಸ, ಚನ್ನಂಗಿಬೇಳೆ, ಕಡಲೆ, ಹಾರಕ ಸೊಪ್ಪು, ಜೇನು, ಪರಾನ್ನ, ಪುನರ್ಭೋಜನ (ಎರಡು ಬಾರಿ ಊಟ ಮಾಡುವುದು) ಮತ್ತು ಸ್ತ್ರೀಸಂಗ ದಶಮಿಯ ದಿನ ಈ ಹತ್ತು ವಸ್ತುಗಳನ್ನು ವಿಷ್ಣು ಭಕ್ತರಾದ ಏಕಾದಶೀ ಪರಾಯಣರಾದ ಭಕ್ತರು ಬಿಡಬೇಕು. ಜೂಜು, ನಿದ್ದೆ, ತಾಂಬೂಲ, ದಂತಕಾಷ್ಠ, ಪರನಿಂದೆ, ಚಾಡಿಹೇಳುವುದು, ಕಳ್ಳತನ, ಹಿಂಸೆ, ಸ್ತ್ರೀಸಂಗ, ಸಿಟ್ಟು, ಸುಳ್ಳು ಹೇಳುವದು. ಈ ಹನ್ನೊಂದನ್ನು ಏಕಾದಶಿ ದಿವಸ ಬಿಡಬೇಕು. ಕಂಚಿನ ಪಾತ್ರೆ, ಮಾಂಸ, ಮದ್ಯ, ಜೇನು, ಎಣ್ಣೆ, ಸುಳ್ಳು ವ್ಯಾಯಾಮ, ಪ್ರವಾಸ, ಪುನರ್ಭೋಜನ, ಸ್ತ್ರೀಸಂಗ, ಅಸ್ಪೃಶ್ಯಸ್ಪರ್ಶ, ಚನ್ನಂಗಿಬೇಳೆ, ಈ ಹನ್ನೆರಡನ್ನು ದ್ವಾದಶೀ ದಿನ ಬಿಡಬೇಕು. ಬ್ರಾಹ್ಮಣ ಶ್ರೇಷ್ಠನಾದ ನಾರದನೇ, ಈ ನಿಯಮಗಳನ್ನು ಅನುಸರಿಸಿ ಶಕ್ತನಾದವನು ಏಕಾದಶಿ ದಿನ ನಿರ್ಜಲ ಶುದ್ಧ ಉಪವಾಸ ಮಾಡಬೇಕು. ಅತ್ಯಂತ ಅಶಕ್ತಿ ಇದ್ದರೆ ಒಂದು ಬಾರಿ ಫಲಗಳನ್ನು ಸ್ವೀಕರಿಸ ಬಹುದು. ಆದರೆ ರಾತ್ರಿ ಏನನ್ನೂ ಸ್ವೀಕರಿಸಬಾರದು.ಈ ದಿನತ್ರಯಗಳಲ್ಲಿಯೂ ಅಯಾಚಿತ (ಬೇಡದೆ ಸಿಕ್ಕಿದ ವಸ್ತುಗಳು) ವಸ್ತುವನ್ನು ಉಪಯೋಗಿಸುವುದು ಒಳ್ಳೆಯದು. ಸರ್ವಥಾ ಅತ್ಯಂತ ಮಹತ್ವಪೂರ್ಣವಾದ ಏಕಾದಶಿಯನ್ನು ಬಿಡಬಾರದು. (ಇದು ನಿತ್ಯ ವ್ರತವು).

## ಹನ್ನೆರಡು ತಿಂಗಳುಗಳ ದ್ವಾದಶೀ ವ್ರತವು ಅವುಗಳ ಮಹಿಮೆ ಎಂಟು ಮಹಾ ದ್ವಾದಶೀಗಳು

**ಸನಾತನರು ಹೇಳುತ್ತಾರೆ:-** ಪಾಪ ರಹಿತನಾದ ನಾರದನೇ, ನಾನೀಗ ನಿನಗೆ ದ್ವಾದಶಿಗೆ ಸಂಬಂಧಪಟ್ಟ ವ್ರತಗಳನ್ನು ಹೇಳುತ್ತೇನೆ ಕೇಳು. ಈ ವ್ರತಗಳನ್ನು ಪಾಲನ ಮಾಡಿದ ಮನುಷ್ಯನು ನಾರಾಯಣನಿಗೆ ಅತ್ಯಂತ ಪ್ರೀತಿ ಪಾತ್ರನಾಗುತ್ತಾನೆ.

ಚೈತ್ರ ಶುಕ್ಲ ದ್ವಾದಶಿ ದಿನ ಮದನ ವ್ರತವಿದೆ. ಹೊಸದಾದ ತೂತಿಲ್ಲದ ಕಲಶದಲ್ಲಿ ಬಿಳಿಯ ಅಕ್ಕಿಯನ್ನು ತುಂಬಿಸಿ ಅದನ್ನು ಸ್ಥಾಪಿಸಬೇಕು. ಅದರ ಸುತ್ತಲೂ ಅನೇಕ ಫಲಗಳು, ಕಬ್ಬಿನ ಕೋಲುಗಳೆರಡು, ಎರಡು ಬಿಳಿಯ ವಸ್ತ್ರಗಳು, ಇರಬೇಕು. ಬಿಳಿಯ ಗಂಧವನ್ನು ಕಲಶಕ್ಕೆ ಲೇಪಿಸಬೇಕು. ನಾನಾ ರೀತಿಯ ಭಕ್ಷ್ಯ ಪದಾರ್ಥಗಳನ್ನೂ ತನ್ನ ಶಕ್ತಿಗನುಸಾರವಾಗಿ ಚಿನ್ನವನ್ನು ಅದರಲ್ಲಿಟ್ಟು ಅಲಂಕರಿಸಬೇಕು. ಆ ಕಲಶದ ಮೇಲೆ ಬೆಲ್ಲ ತುಂಬಿದ ತಾಮ್ರದ ಪಾತ್ರೆಯನ್ನಿಟ್ಟು ಆ ಪಾತ್ರೆಯಲ್ಲಿ ಕಾಮಾಂತರ್ಗತ ಅಚ್ಯುತನನ್ನು ಗಂಧಾದಿ ಉಪಚಾರಗಳಿಂದ ಅರ್ಚಿಸಿ ದ್ವಾದಶೀ ಉಪವಾಸ ಮಾಡಿ ಮರುದಿನ ಪರಮಾತ್ಮನ ಪೂಜೆ ಮಾಡಬೇಕು. ಅಲ್ಲಿ ಪೂಜೆಗೆ ಉಪಯೋಗಿಸಿದ ವಸ್ತುಗಳನ್ನು ದ್ವಿಜನಿಗೆ ದಾನ ಕೊಡಬೇಕು. ವಿದ್ವಾಂಸರ ಭೋಜನ ಮಾಡಿಸಿ, ದಕ್ಷಿಣೆ ಕೊಡಬೇಕು, ಈ ರೀತಿ ಒಂದು ವರ್ಷದವರೆಗೂ ಪ್ರತಿ ದ್ವಾದಶೀದಿನ ಈ ವ್ರತವನ್ನು ಆಚರಿಸಿ ಆಚಾರ್ಯನಿಗೆ ಘೃತಧೇನು ಸಹಿತವಾದ ಎಲ್ಲಾ ಸಾಮಗ್ರಿಗಳಿಂದ ಕೂಡಿದ ಶಯ್ಯಾದಾನವನ್ನು ಕೊಡಬೇಕು. ಅನಂತರ ವಸ್ತ್ರ ಮುಂತಾದವುಗಳಿಂದ ಬ್ರಾಹ್ಮಣ ದಂಪತಿಗಳ ಪೂಜೆ ಮಾಡಿ ಅವರಿಗೆ ಸುವರ್ಣದ ಕಾಮಾಂತರ್ಗತ ಅಚ್ಯುತ ಪ್ರತಿಮೆ, ಹಾಲು ಕೊಡುವ ಬಿಳಿ ಗೋವು ಇವುಗಳನ್ನು ದಾನ ಕೊಡಬೇಕು. ದಾನ ಮಾಡುವಾಗ 'ಕಾಮರೂಪಿಯಾದ ಶ್ರೀ ಹರಿಯು ನನ್ನ ಮೇಲೆ ಪ್ರಸನ್ನನಾಗಲಿ, ಎಂದು ಹೇಳಬೇಕು. ಈ ರೀತಿ ಮದನ ದ್ವಾದಶೀ ವ್ರತವನ್ನು ಪಾಲಿಸುವ ಮನುಷ್ಯನು ಎಲ್ಲಾ ಪಾಪಗಳಿಂದಲೂ ಮುಕ್ತನಾಗಿ ವಿಷ್ಣು ಸಾರೂಪ್ಯವನ್ನು ಪಡೆಯುತ್ತಾನೆ.

ಇದೇ ತಿಥಿಯನ್ನು 'ಭರ್ತೃ ದ್ವಾದಶೀ' ಎಂದೂ ಹೇಳುತ್ತಾರೆ. ಈ ವ್ರತದಲ್ಲಿ ಸುಂದರವಾದ ಹಾಸಿಗೆ ಹಾಸಿ ಅದರ ಮೇಲೆ ಲಕ್ಷ್ಮೀ ಸಹಿತನಾದ ನಾರಾಯಣನನ್ನು ಸ್ಥಾಪಿಸಿ ಅದರ ಮೇಲೆ ಹೂವುಗಳಿಂದ ಮಂಟಪವನ್ನು ರಚಿಸಬೇಕು. ಅನಂತರ ವ್ರತ ಮಾಡುವವನು ಗಂಧಾದಿ ಉಪಚಾರಗಳಿಂದ ಭಗವಂತನ ಪೂಜೆಯನ್ನು ಮಾಡಬೇಕು. ಮಂಗಲಗೀತ, ವಾದ್ಯಾದಿಗಳ ಮೂಲಕ ಭಗವಂತನನ್ನು ಸಂತೋಷಪಡಿಸುತ್ತಾ ರಾತ್ರಿ ಜಾಗರಣ ಮಾಡಿ ಮರುದಿನ ಪ್ರಾತಃಕಾಲ ಶಯ್ಯಾ ಸಹಿತನಾದ ಶ್ರೀ ಹರಿಯ ಪ್ರತಿಮೆಯನ್ನು ಉತ್ತಮ ಬ್ರಾಹ್ಮಣನಿಗೆ ದಾನ ಕೊಡಬೇಕು. ಜ್ಞಾನಿಗಳ ಭೋಜನ ಮಾಡಿಸಿ ದಕ್ಷಿಣೆಯಿಂದ ಬ್ರಾಹ್ಮಣರನ್ನು ಸಂತೋಷಪಡಿಸಿ ಕಳುಹಿಸಬೇಕು, ಈ ರೀತಿ ವ್ರತವನ್ನು ಮಾಡುವ ಮನುಷ್ಯನ ದಾಂಪತ್ಯ ಸುಖವು ಚಿರಸ್ಥಾಯಿಯಾಗುತ್ತದೆ. ಅವನು ಏಳು ಜನ್ಮಗಳ ವರೆಗೆ ಇಹಪರದಲ್ಲಿ ಇಷ್ಟಭೋಗಗಳನ್ನು ಅನುಭವಿಸುತ್ತಾ ಇರುತ್ತಾನೆ.

ವೈಶಾಖ ಶುಕ್ಲ ದ್ವಾದಶಿಯ ದಿನ ಉಪವಾಸ ಮಾಡಿ ಇಂದ್ರಿಯನಿಗ್ರಹ ಪೂರ್ವಕವಾಗಿ ಗಂಧಾದಿ ಉಪಚಾರಗಳಿಂದ ಬಹಳ ಭಕ್ತಿಯಿಂದ ವೈಶಾಖ ಮಾಧವನ ಪೂಜೆಯನ್ನು ಮಾಡಬೇಕು. ಅನಂತರ ತೃಪ್ತಿಯನ್ನು ಉಂಟು ಮಾಡುವ ಸಿಹಿ ಸಿಹಿಯಾದ ಕಜ್ಜಾಯ ಮತ್ತು ಒಂದು ನೀರುತುಂಬಿದ ಕೊಡ ಇವುಗಳನ್ನು ವಿಧಿಪೂರ್ವಕವಾಗಿ ದ್ವಿಜನಿಗೆ ದಾನ ಕೊಡಬೇಕು. ಭಗವಂತನಾದ ಮಾಧವನು ನನ್ನಲ್ಲಿ ಪ್ರಸನ್ನನಾಗಲಿ ಎಂದು ಮನಸ್ಸಿನಲ್ಲಿ ಭಾವಿಸುತ್ತ ಬಾಯಿಯಿಂದ ಹೇಳುತ್ತ ಈ ಕಾರ್ಯಗಳನ್ನು ಮಾಡಬೇಕು. ಜ್ಯೇಷ್ಠ ಶುಕ್ಲ ದ್ವಾದಶಿಯ ದಿನ ಗಂಧಾದಿ ಉಪಚಾರಗಳಿಂದ ತ್ರಿವಿಕ್ರಮನನ್ನು ಪೂಜಿಸಿ ದ್ವಿಜನಿಗೆ ಕಜ್ಜಾಯ ತುಂಬಿದ ಗಿಂಡಿಯನ್ನು ದಾನವಾಗಿ ಕೊಡಬೇಕು. ಆ ದಿನ ಒಂದು ಹೊತ್ತು ಭೋಜನ ಮಾಡಬೇಕು. ಈ ವ್ರತದಿಂದ ಸಂತುಷ್ಟನಾದ ಭಗವಾನ್ ತ್ರಿವಿಕ್ರಮನು ಜೀವನದಲ್ಲಿ ವಿಪುಲ

ಭೋಗ ಮತ್ತು ಕೊನೆಗೆ ಮೋಕ್ಷವನ್ನು ಕೊಡುತ್ತಾನೆ. ಆಷಾಢ ಶುಕ್ಲ ಏಕಾದಶಿಯ ದಿನ ಗಂಧಾದಿ ಉಪಚಾರಗಳಿಂದ ಹನ್ನೆರಡು ಮಂದಿ ಜ್ಞಾನಿಗಳನ್ನು ಪ್ರತ್ಯೇಕವಾಗಿ ಪೂಜಿಸಿ ಅವರಿಗೆ ಮೃಷ್ಟಾನ್ನ ಭೋಜನ ಮಾಡಿಸಬೇಕು. ಅನಂತರ ಅವರಿಗೆ ವಸ್ತ್ರ, ಬೆತ್ತ, ಯಜ್ಞೋಪವೀತ, ಉಂಗುರ, ಜಲಪಾತ್ರ ಈ ವಸ್ತುಗಳನ್ನು ಭಕ್ತಿಪೂರ್ವಕವಾಗಿ ದಾನಕೊಡಬೇಕು. 'ಭಗವಾನ್ ವಿಷ್ಣುವು ನನ್ನಲ್ಲಿ ಪ್ರಸನ್ನವಾಗಲಿ' ಎಂಬ ಉದ್ದೇಶದಿಂದ ಈ ದಾನ ಕಾರ್ಯಗಳನ್ನು ಮಾಡಬೇಕು. ಶ್ರಾವಣ ಶುಕ್ಲದ್ವಾದಶೀ ದಿನ ಭಗವತ್ಪರಾಯಣನಾದ ವ್ರತನಿಷ್ಠನು ಗಂಧಾದಿ ಉಪಚಾರಗಳಿಂದ ಶ್ರೀಧರನ ಪೂಜೆ ಮಾಡಿ ಉತ್ತಮ ದ್ವಿಜರಿಗೆ ಮೊಸರು ಅನ್ನ ಊಟ ಮಾಡಿಸಿ, ಬೆಳ್ಳಿ ರೂಪಾಯಿ ದಕ್ಷಿಣೆಕೊಟ್ಟು ಅವರನ್ನು ನಮಸ್ಕರಿಸಿ ಕಳುಹಿಸಿಕೊಡಬೇಕು. ಮನಸ್ಸಿನಲ್ಲಿ ನಿರಂತರ ಹೀಗೆ ಚಿಂತಿಸಬೇಕು - 'ನನ್ನ ಈ ವ್ರತದಿಂದ ದೇವೇಶ್ವರನಾದ ಭಗವಂತ ಶ್ರೀಧರ ಪ್ರಸನ್ನನಾಗಲಿ' ಭಾದ್ರಪದ ಶುಕ್ಲ ದ್ವಾದಶಿಯ ದಿನ ವ್ರತನಿಷ್ಠನಾದ ಮನುಷ್ಯನು ವಾಮನ ಭಗವಂತನ ಪೂಜೆಯನ್ನು ಮಾಡಿ, ಆ ಪರಮಾತ್ಮನ ಎದುರು ಹನ್ನೆರಡು ಮಂದಿ ವಿದ್ವಾಂಸರಿಗೆ ಕ್ಷೀರಪಾಯಸ (ಹಾಲುಪಾಯಸ) ಭೋಜನ ಮಾಡಿಸಬೇಕು. ಆನಂತರ ಅವರಿಗೆ ಸುವರ್ಣ ದಕ್ಷಿಣೆಯನ್ನು ಕೊಡಬೇಕು. ಇದರಿಂದ ಶ್ರೀ ಹರಿಯು ಪ್ರಸನ್ನನಾಗುತ್ತಾನೆ.

ಆಶ್ವಯುಜ ಶುಕ್ಲದ್ವಾದಶೀ ದಿನ ಗಂಧಾದಿ ಉಪಚಾರಗಳಿಂದ ಶ್ರೀ ಪದ್ಮನಾಭನ ಪೂಜೆಯನ್ನು ಮಾಡಿ, ಪರಮಾತ್ಮನ ಎದುರು ವಿದ್ವಾಂಸರಿಗೆ ಮೃಷ್ಟಾನ್ನ ಭೋಜನ ಮಾಡಿಸಬೇಕು. ವಸ್ತ್ರ ಮತ್ತು ಸುವರ್ಣ ದಕ್ಷಿಣೆಯನ್ನು ಕೊಡಬೇಕು. ಜ್ಞಾನಿಶ್ರೇಷ್ಠನೇ. ಈ ವ್ರತದಿಂದ ಸಂತುಷ್ಟನಾದ ಪದ್ಮನಾಭನು ತನ್ನ ಭಕ್ತನಿಗೆ ಶ್ವೇತದ್ವೀಪದಲ್ಲಿ ಸ್ಥಾನವನ್ನು ಕೊಡುತ್ತಾನೆ. ಇಹಲೋಕದಲ್ಲಿ ಅಪೇಕ್ಷಿಸಿದ ಎಲ್ಲಾ ಭೋಗಗಳನ್ನು ಕೊಡುತ್ತಾನೆ.

ಕಾರ್ತಿಕಮಾಸದ ಕೃಷ್ಣ ಪಕ್ಷದಲ್ಲಿ 'ಗೋವತ್ಸ ದ್ವಾದಶೀ' ವ್ರತವು ಬರುತ್ತದೆ. ಆ ದಿನ ಕರುವಿನಿಂದ ಸಹಿತವಾಗಿ ಹಸುವಿನ ಚಿತ್ರವನ್ನು ಬರೆದು ಸುಗಂಧಯುಕ್ತವಾದ ಚಂದನಾದಿಗಳಿಂದಲೂ, ಪುಷ್ಪಮಾಲೆಯಿಂದಲೂ ಅದನ್ನು ಪೂಜಿಸಬೇಕು. ಅನಂತರ ತಾಮ್ರಪಾತ್ರೆಯಲ್ಲಿ ಹೂವು, ಅಕ್ಷತೆ, ಎಳ್ಳುಗಳನ್ನಿಟ್ಟುಕೊಂಡು ಅವುಗಳನ್ನೇ ಕೈಯಲ್ಲಿ ಹಾಕಿಕೊಂಡು ವಿಧಿಪ್ರಕಾರವಾಗಿ ಅರ್ಘ್ಯ ಪ್ರದಾನ ಮಾಡಬೇಕು. ನಾರದನೇ, ಕೆಳಗೆ ಹೇಳಿದ ಮಂತ್ರಗಳಿಂದ ಆ ಹಸುವಿನ ಕಾಲುಗಳಿಗೆ ಅರ್ಘ್ಯ ಕೊಡಬೇಕು.

**ಕ್ಷೀರೋದಾರ್ಣವಸಂಭೂತೇ। ಸುರಾಸುರನಮಸ್ಕೃತೇ।**
**ಸರ್ವದೇವಮಯೇ ದೇವಿ ಸರ್ವ ದೇವೈರಲಂಕೃತೇ॥**
**ಮಾತರ್ಮಾತರ್ಗವಾಂ ಮಾತರ್ಗೃಹಾಣಾರ್ಘ್ಯಂ ನಮೋಽಸ್ತು ತೇ॥**
**ನಾರ.ಪೂ. ೧೨೧-೩೦-೩೧**

''ಕ್ಷೀರಸಾಗರದಿಂದ ಪ್ರಕಟಳಾದ, ದೇವ-ಅಸುರ ನಮಸ್ಕೃತಳಾದ, ಸರ್ವದೇವ ಸನ್ನಿಧಾನಯುಕ್ತಳಾದ ದೇವಿ, ನಿನಗೆ ನಮಸ್ಕಾರ. ಅಮ್ಮಾ ಗೋಮಾತೆ, ಅರ್ಘ್ಯವನ್ನು ಸ್ವೀಕರಿಸು. ಎಂದು ಪ್ರಾರ್ಥಿಸಿ ಉದ್ದು ಮುಂತಾದವುಗಳಿಂದ ಮಾಡಿದ ವಡೆಯನ್ನು, ತನ್ನ ವೈಭಕ್ಕನುಸಾರವಾಗಿ ಹತ್ತು, ಐದು ಅಥವಾ ಒಂದನ್ನು ಅರ್ಪಿಸಬೇಕು. ಆಗ ಈ ರೀತಿ ಪ್ರಾರ್ಥಿಸಬೇಕು.

ಸುರಭೇ ತ್ವಂ ಜಗನ್ಮಾತಃ ನಿತ್ಯಂ ವಿಷ್ಣುಪದೇ ಸ್ಥಿತಾ ।
ಸರ್ವದೇವ ಮಯೀ ಗ್ರಾಸಂ ಮಯಾ ದತ್ತಮಿಮಂ ಗ್ರಸ ॥

ಸರ್ವದೇವಮಯೀ ದೇವಿ ಸರ್ವದೇವೈರಲಂಕೃತೇ ।
ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನಿ ॥

ನಾ.ಪೂರ್ವ. ೧೨೧-೩೨-೩೪

ಸುರಭಿ! ನೀನು ಸಮಸ್ತ ಜಗತ್ತಿನ ತಾಯಿ, ಯಾವಾಗಲೂ ಭಗವಂತನ ಲೋಕದಲ್ಲಿ ವಾಸಿಸುತ್ತೀಯೇ, ಸರ್ವದೇವಮಯಿಯಾದ ದೇವಿ! ನಾನು ಕೊಟ್ಟಿರುವ ಈ ಗ್ರಾಸವನ್ನು ಸ್ವೀಕರಿಸು. ದೇವೀ! ನೀನು ಸರ್ವದೇವಸ್ವರೂಪಳಾಗಿದ್ದೀ. ಎಲ್ಲಾ ದೇವತೆಗಳು ನಿನ್ನನ್ನು ಅಲಂಕರಿಸಿದ್ದಾರೆ. ಮಾತೆ ನಂದಿನಿ! ನನ್ನ ಅಭಿಲಾಷೆಯನ್ನು ಸಫಲಗೊಳಿಸು.'' ಎಂದು ಪ್ರಾರ್ಥಿಸಬೇಕು. ಆ ದಿನ ಎಣ್ಣೆಯಲ್ಲಿ ಕರಿದ ಬೇರೆ ವಸ್ತುಗಳನ್ನು ತಿನ್ನಬಾರದು. ಹಸುವಿನ ಹಾಲು, ಮೊಸರು, ತುಪ್ಪ ಮತ್ತು ಮಜ್ಜಿಗೆಯನ್ನು ತ್ಯಜಿಸಬೇಕು.

ಕಾರ್ತಿಕ ಶುಕ್ಲ ದ್ವಾದಶಿಯ ದಿನ ಗಂಧ ಮುಂತಾದ ಉಪಚಾರಗಳಿಂದ ಏಕಾಗ್ರ ಚಿತ್ತನಾಗಿ ದಾಮೋದರನ ಪೂಜೆ ಮಾಡಿ, ಭಗವಂತನ ಎದುರು ಹನ್ನೆರಡು ಮಂದಿ ಜ್ಞಾನಿಗಳಿಗೆ ಪಕ್ವಾನ್ನ ಭೋಜನ ಮಾಡಿಸಬೇಕು. ನೀರು ತುಂಬಿದ ಕೊಡಗಳನ್ನು ಬಟ್ಟೆಯಿಂದ ಮುಚ್ಚಿ ಪೂಜಿಸಿ ಅಡಿಕೆ, ಲಡ್ಡು ಮತ್ತು ಚಿನ್ನದ ಜತೆಗೆ ಅದೆಲ್ಲವನ್ನೂ ಅರ್ಪಿಸಬೇಕು. ಈ ವ್ರತವನ್ನು ಮಾಡುವ ಮನುಷ್ಯನು ವಿಷ್ಣುವಿನ ಪ್ರಿಯಭಕ್ತನಾಗಿ ಎಲ್ಲ ಭೋಗಗಳನ್ನು ಅನುಭವಿಸಿ ದೇಹಾವಸಾನದಲ್ಲಿ ವಿಷ್ಣು ಸಾಯುಜ್ಯವನ್ನು ಪಡೆಯುತ್ತಾನೆ. ಮಾರ್ಗಶಿರ ಶುಕ್ಲ ದ್ವಾದಶಿಯ ದಿನ ಅತ್ಯುತ್ತಮವಾದ ಸಾಧ್ಯವ್ರತವನ್ನು ಅನುಷ್ಠಾನ ಮಾಡಬೇಕು.

ಮನೋಭವಸ್ತಥಾ ಪ್ರಾಣೋ ನರೋಽಪಾನಶ್ಚ ವೀರ್ಯವಾನ್ ।
ಚಿತಿರ್ಹಯೋ ನಯಶ್ಚೈವ ಹಂಸೋ ನಾರಾಯಣಸ್ತಥಾ ॥
ವಿಭುಶ್ಚಾಪಿ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ॥

ನಾ.ಪೂರ್ವ ೧೨೧-೫೧-೫೨

ಮನೋಭವ, ಪ್ರಾಣ, ನರ, ಅಪಾನ, ವೀರ್ಯವಾನ್, ಚಿತಿ, ಹಯ, ನಯ, ಹಂಸ ನಾರಾಯಣ, ವಿಭು, ಪ್ರಭು, ಇವರೇ ಹನ್ನೆರಡು ಮಂದಿ ಸಾಧ್ಯಗಣಗಳು. ಅಕ್ಕಿಯಲ್ಲಿ ಇವರ ಆವಾಹನಮಾಡಿ ಗಂಧ ಪುಷ್ಪಾದಿಗಳ ಮೂಲಕ ಪೂಜೆ ಮಾಡಬೇಕು. ಅನಂತರ ಭಗವಂತನಾದ ನಾರಾಯಣನು ಸಂತುಷ್ಟನಾಗಲಿ ಎಂಬ ಭಾವನೆಯಿಂದ ಹನ್ನೆರಡು ಮಂದಿ ದ್ವಿಜರಿಗೆ ಭೋಜನ ಮಾಡಿಸಿ ಅವರಿಗೆ ಉತ್ತಮ ದಕ್ಷಿಣೆ ಕೊಟ್ಟು ಕಳುಹಿಸಬೇಕು, ಈ ದಿನ ದ್ವಾದಶಾದಿತ್ಯ ವ್ರತ ಎಂಬ ವ್ರತವೂ ಪ್ರಖ್ಯಾತವಾಗಿದೆ. ಆ ದಿನ ಜ್ಞಾನಿಯು ದ್ವಾದಶಾದಿತ್ಯರ ಪೂಜೆ ಮಾಡಬೇಕು.

ಧಾತಾಮಿತ್ರೋಽರ್ಯಮಾ ಪೂಷಾ ಶಕ್ರೋಽಂಶೋ ವರುಣೋ ಭಗಃ ।
ತ್ವಷ್ಟಾ ವಿವಸ್ವಾನ್ ಸವಿತಾ ವಿಷ್ಣುರ್ದ್ವಾದಶ ಈರಿತಾಃ ॥

ನಾ.ಪು.ಪೂರ್ವ. ೧೨೧-೫೫-೫೬

ಧಾತಾ, ಮಿತ್ರ, ಅರ್ಯಮಾ, ಪೂಷಾ, ಶಕ್ರ, ಅಂಶ, ವರುಣ, ಭಗ, ತ್ವಷ್ಟಾ, ವಿವಸ್ವಾನ್, ಸವಿತಾ, ವಿಷ್ಣು, ಇವರೇ ಹನ್ನೆರಡು ಮಂದಿ ಆದಿತ್ಯರು. ಪ್ರತಿಮಾಸದ ಶುಕ್ಲ ಪಕ್ಷದ ದ್ವಾದಶಿಯ ದಿನ ಪ್ರಯತ್ನ ಪೂರ್ವಕವಾಗಿ ಆದಿತ್ಯರ ಪೂಜೆ ಮಾಡುತ್ತಾ ಒಂದು ವರ್ಷ ಕಳೆಯಬೇಕು. ವ್ರತದ ಕೊನೆಯಲ್ಲಿ ಚಿನ್ನದ ಹನ್ನೆರಡು ಪ್ರತಿಮೆಗಳನ್ನು ತಯಾರಿಸಿ ವಿಧಿವತ್ತಾಗಿ ಅವುಗಳನ್ನು ಪೂಜಿಸಿ, ಹನ್ನೆರಡು ಮಂದಿ ಶ್ರೇಷ್ಠ ದ್ವಿಜರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಆ ಬ್ರಾಹ್ಮಣರಲ್ಲಿ ಒಬ್ಬೊಬ್ಬನಿಗೆ ಒಂದೊಂದು ಪ್ರತಿಮೆಯನ್ನು ದಾನವಾಗಿ ಕೊಡಬೇಕು. ಈ ದ್ವಾದಶಾದಿತ್ಯ ವ್ರತವನ್ನು ಮಾಡಿದವನು ಸೂರ್ಯಲೋಕವನ್ನು ಸೇರಿ ಬಹುಕಾಲ ಅಲ್ಲಿಯ ಭೋಗವನ್ನು ಅನುಭವಿಸಿ ಅನಂತರ ಭೂಮಿಯಲ್ಲಿ ಪುಣ್ಯಾತ್ಮನಾದ ಮನುಷ್ಯನಾಗಿ ಹುಟ್ಟುತ್ತಾನೆ. ಮನುಷ್ಯ ಜನ್ಮದಲ್ಲಿ ಅವನಿಗೆ ರೋಗವು ಬರುವುದಿಲ್ಲ, ಹಿಂದೆ ಮಾಡಿದ ವ್ರತದ ಪುಣ್ಯದಿಂದ ಪುನಃ ಅದೇ ವ್ರತವನ್ನು ಮಾಡುತ್ತಾನೆ. ಪುನಃ ಅದರ ಪುಣ್ಯದಿಂದ ಸೂರ್ಯಮಂಡಲವನ್ನು ಭೇದಿಸಿ, ನಿರಂಜನನಾದ, ನಿರ್ದ್ವಂದ್ವನಾದ ಪರಮಾತ್ಮನನ್ನು ಹೊಂದುತ್ತಾನೆ. ಅದೇ ದಿನ ಅಖಂಡವೆಂಬ ವ್ರತವೂ ಬರುತ್ತದೆ. ಆ ವ್ರತದ ದಿನ ಜನಾರ್ದನನ ಚಿನ್ನದ ಪ್ರತಿಮೆಯನ್ನು ಮಾಡಿಸಿ ಪುಷ್ಪಾದಿಗಳಿಂದ ಅದನ್ನು ಪೂಜಿಸಿ, ಪರಮಾತ್ಮನ ಎದುರಿನಲ್ಲಿಯೇ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು, ಪ್ರತಿಯೊಂದು ತಿಂಗಳಿನ ದ್ವಾದಶಿ ದಿನ ಹೀಗೆಯೇ ಮಾಡಿ ತಾನು ರಾತ್ರಿ ಊಟಮಾಡಬೇಕು. ಮತ್ತು ಜಿತೇಂದ್ರಿಯನಾಗಿರಬೇಕು, ಒಂದು ವರ್ಷ ಪೂರ್ತಿಯಾದ ಮೇಲೆ ಆ ಸುವರ್ಣಮೂರ್ತಿಯನ್ನು ವಿಧಿವತ್ತಾಗಿ ಪೂಜಿಸಿ, ಹಾಲು ಕೊಡುವ ಹಸುವಿನ ಸಹಿತವಾಗಿ ಆ ಮೂರ್ತಿಯನ್ನು ದ್ವಿಜನಿಗೆ ದಾನವಾಗಿ ಕೊಡಬೇಕು. ಹನ್ನೆರಡು ಮಂದಿ ಜ್ಞಾನಿಗಳಿಗೆ ಕಲ್ಲುಸಕ್ಕರೆ ಮತ್ತು ಕ್ಷೀರಪಾಯಸದ ಊಟಮಾಡಿಸಿ ಹನ್ನೆರಡು ಸುವರ್ಣಖಂಡಗಳನ್ನು ದಕ್ಷಿಣೆಯಾಗಿ ಕೊಟ್ಟು ನಮಸ್ಕಾರ ಮಾಡಬೇಕು. ಹೀಗೆ ವ್ರತವನ್ನು ಪೂರೈಸಿ ಯಾವನು ಜನಾರ್ದನನನ್ನು ಪ್ರಸನ್ನೀಕರಿಸಿಕೊಳ್ಳುತ್ತಾನೋ ಅವನು ಸುವರ್ಣಮಯ ವಿಮಾನದಿಂದ ಶ್ರೀ ವಿಷ್ಣುವಿನ ಲೋಕಕ್ಕೆ ತೆರಳುತ್ತಾನೆ. ಪುಷ್ಯಮಾಸದ ಕೃಷ್ಣ ಪಕ್ಷದ ದ್ವಾದಶೀ ದಿನ 'ರೂಪವ್ರತವು' ಬರುತ್ತದೆ. ವ್ರತಮಾಡುವವನು ಅದೇ ಹಿಂದಿನ ದಶಮಿಯದಿನ ಪ್ರಾತಃಕಾಲ ವಿಧಿವತ್ತಾಗಿ ಸ್ನಾನ ಮಾಡಿ ಬಿಳಿಯ ಅಥವಾ ಬೇರೆ ಯಾವುದಾದರೊಂದು ಬಣ್ಣದ ಹಸುವಿನ ಸಗಣಿಯನ್ನು ಭೂಮಿಗೆ ಬೀಳುವುದಕ್ಕೆ ಮೊದಲೆ ಆಕಾಶದಲ್ಲಿಯೇ ಹಿಡಿದುಕೊಳ್ಳಬೇಕು. ಆ ಸಗಣಿಯಿಂದ ನೂರು ಎಂಟು ಉಂಡೆಗಳನ್ನು ಮಾಡಿ ಅವುಗಳನ್ನು ತಾಮ್ರ ಅಥವಾ ಮಣ್ಣಿನ ಪಾತ್ರೆಯಲ್ಲಿಟ್ಟು ಬಿಸಿಲಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ಮರುದಿನ ಏಕಾದಶಿ ಉಪವಾಸ ಮಾಡಿ ವಿಷ್ಣುವಿನ ಸುವರ್ಣಮಯ ಪ್ರತಿಮೆಯನ್ನು ವಿಧಿವತ್ತಾಗಿ ಪೂಜಿಸಿ ರಾತ್ರಿ ಜಾಗರಣ ಮಾಡಬೇಕು, ಮನೋಹರ ಮಂಗಲಗೀತ, ವಾದ್ಯ ಸ್ತೋತ್ರಪಾಠ ಮತ್ತು ಜಪ ಮುಂತಾದವುಗಳ ಮೂಲಕ ಜಾಗರಣವನ್ನು ಸಫಲವಾಗಿ ಮಾಡಬೇಕು. ಪ್ರಾತಃಕಾಲ ನೀರು ತುಂಬಿದ ಕಲಶದ ಮೇಲೆ ಎಳ್ಳು ತುಂಬಿದ ಪಾತ್ರವನ್ನು ಇಟ್ಟು ಅದರಲ್ಲಿ ಸುವರ್ಣ ಪ್ರತಿಮೆಯನ್ನು ಬೇರೆ ಬೇರೆ ಉಪಚಾರಗಳಿಂದ ಪೂಜಿಸಬೇಕು. ಅನಂತರ ಎರಡು ಬನ್ನಿ ಮರದ ಕಟ್ಟಿಗೆಗಳನ್ನು ಉಜ್ಜಿ ಬೆಂಕಿಯನ್ನು ಉತ್ಪಾದಿಸಿ, ಅದನ್ನು ಪೂಜಿಸಿ, ಪ್ರಜ್ವಲಿತವಾದ ಅಗ್ನಿಯಲ್ಲಿ ತಿಲಘೃತ ಸಹಿತವಾಗಿ ಒಂದೊಂದು ಸಗಣಿಯ ಉಂಡೆಯನ್ನು 'ಓಂ ನಮೋ ಭಗವತೇ

ವಾಸುದೇವಾಯ ಸ್ವಾಹಾ'' ಎಂದು ವಿಷ್ಣು ಮಂತ್ರವನ್ನು ಉಚ್ಚರಿಸುತ್ತಾ ಹೋಮಿಸಬೇಕು. ಪೂರ್ಣಾಹುತಿಯನ್ನು ಮುಗಿಸಿ ಪರಮಭಕ್ತಿಯಿಂದ ಪ್ರಸನ್ನನಾಗಿ ನೂರ ಎಂಟು ಮಂದಿ ಜ್ಞಾನಿಗಳಿಗೆ ಕ್ಷೀರಪಾಯಸದ ಭೋಜನ ಮಾಡಿಸಿ, ಕಲಶ ಸಹಿತವಾಗಿ ಆ ಪ್ರತಿಮೆಯನ್ನು ಆಚಾರ್ಯರಿಗೆ ಅರ್ಪಿಸಬೇಕು. ಅನಂತರ ಇತರ ಬ್ರಾಹ್ಮಣರಿಗೆ ಯಥಾ ಶಕ್ತಿ ದಕ್ಷಿಣೆ ಕೊಡಬೇಕು. ಅದರಿಂದ ಈ ವ್ರತಾನುಷ್ಠಾನ ಮಾಡಿದ ಸ್ತ್ರೀಯಾಗಲಿ, ಪುರುಷನಾಗಲೀ, ರೂಪ ಮತ್ತು ಸೌಭಾಗ್ಯಗಳನ್ನು ಪಡೆಯುತ್ತಾರೆ. ಮಾಘಶುಕ್ಲ ದ್ವಾದಶಿಯದಿನ ಶಾಲಿಗ್ರಾಮ ಶಿಲೆಯನ್ನು ವಿಧಿಪೂರ್ವಕವಾಗಿ ಭಕ್ತಿಭಾವದಿಂದ ಪೂಜಿಸಿ ಅದರ ವದನದಲ್ಲಿ ಚಿನ್ನವನ್ನಿಡಬೇಕು. ಆ ಶಾಲಿಗ್ರಾಮವನ್ನು ಬೆಳ್ಳಿಯ ಪಾತ್ರೆಯಲ್ಲಿಟ್ಟು ಎರಡು ಬಿಳಿಯ ವಸ್ತ್ರಗಳಿಂದ ಮುಚ್ಚಿ ವೇದಜ್ಞನಿಗೆ ಅದನ್ನು ದಾನಕೊಡಬೇಕು. ಅನಂತರ ಅವನಿಗೆ ಸಕ್ಕರೆ ಮತ್ತು ಕ್ಷೀರಪಾಯಸದ ಭೋಜನ ಮಾಡಿಸಿ, ತಾನು ಏಕಭುಕ್ತವನ್ನು ಮಾಡಿ ವಿಷ್ಣು ಸ್ಮರಣೆ ಮಾಡುತ್ತಾ ಇರಬೇಕು. ಈ ವ್ರತವನ್ನು ಮಾಡುವ ಮನುಷ್ಯನು ಮನೋಽಭೀಷ್ಟ ಭೋಗಗಳನ್ನು ಅನುಭವಿಸಿ ಅನಂತರ ವಿಷ್ಣುಲೋಕವನ್ನು ಸೇರುತ್ತಾನೆ.

ಫಾಲ್ಗುಣ ಮಾಸದ ಶುಕ್ಲಪಕ್ಷದ ದ್ವಾದಶೀ ದಿನ ಶ್ರೀ ಹರಿಯ ಸುವರ್ಣಮಯ ಪ್ರತಿಮೆಯನ್ನು ಗಂಧಾದಿ ಉಪಚಾರಗಳಿಂದ ಪೂಜಿಸಿ ಅದನ್ನು ವೇದಜ್ಞನಿಗೆ ದಾನವಾಗಿ ಕೊಡಬೇಕು. ಹನ್ನೆರಡು ಮಂದಿ ದ್ವಿಜರಿಗೆ ಭೋಜನಮಾಡಿಸಿ ದಕ್ಷಿಣೆಕೊಟ್ಟು ಕಳುಹಿಸಬೇಕು. ಅನಂತರ ತಾನು ಸಹೋದರರ ಬಂಧುಗಳೊಡನೆ ಭೋಜನ ಮಾಡಬೇಕು. ತ್ರಿಸ್ಪೃಶಾ, ಉನ್ಮೀಲಿನೀ, ಪಕ್ಷವರ್ಧಿನೀ, ಮಂಜುಲೀ, ಜಯಾ, ವಿಜಯಾ, ಜಯಂತೀ, ಅಪರಾಜಿತಾ, ಇವು ಎಂಟು ದ್ವಾದಶಿಗಳು ಸಮಸ್ತಪಾಪ ಪರಿಹಾರಕವಾದವುಗಳು, ಇವುಗಳಲ್ಲಿ ಯಾವಾಗಲೂ ಉಪವಾಸಪೂರ್ವಕವಾಗಿ ವ್ರತವನ್ನು ನಡೆಸಬೇಕು. ನಾರದರು ಕೇಳಿದರು, ''ಮಹರ್ಷಿವರ್ಯರೇ, ಈ ದ್ವಾದಶಿಗಳ ಲಕ್ಷಣವೇನು ? ಅವುಗಳ ಫಲವೇನು ? ಇದೆಲ್ಲವನ್ನು ಇದಲ್ಲದೆ ಇತರ ಪುಣ್ಯಪ್ರದತಿಥಿಗಳ ಪರಿಚಯವನ್ನೂ ದಯವಿಟ್ಟು ನನಗೆ ಮಾಡಿಕೊಡಿರಿ.'' ಸೂತರು ಹೇಳುತ್ತಾರೆ. ''ಮಹರ್ಷಿಗಳೇ, ದೇವರ್ಷಿ ನಾರದರು ಸನಾತನರನ್ನು ಈ ರೀತಿ ಕೇಳಿದ ಕೂಡಲೆ ಅವರು ತನ್ನ ಸಹೋದರರನಾದ ಮಹಾಭಾಗವತನಾದ ನಾರದರನ್ನು ಪ್ರಶಂಸೆಮಾಡಿ ಹೇಳಲಾರಂಭಿಸಿದರು.

**ಸನಾತನರು ಹೇಳುತ್ತಾರೆ:-** ಸಹೋದರನೇ, ನೀನು ಲೋಕದಲ್ಲಿರುವ ಸಜ್ಜನರ ಸಂಶಯ ಪರಿಹಾರಕ್ಕಾಗಿ ಒಳ್ಳೆಯ ಪ್ರಶ್ನೆಯನ್ನು ಮಾಡಿದೆ. ನಾನೀಗ ನಿನಗೆ ಮಹಾದ್ವಾದಶಿಗಳ ಬೇರೆ ಬೇರೆ ಲಕ್ಷಣ ಮತ್ತು ಫಲಗಳನ್ನು ಹೇಳುತ್ತೇನೆ. ಯಾವ ದಿನ ಏಕಾದಶಿ ಸೂರ್ಯೋದಯಕ್ಕಿಂತ ಮೊದಲು ಅರುಣೋದಯಕಾಲದಲ್ಲಿಯೇ ಮುಗಿಯುತ್ತದೆಯೋ ಅಂದರೆ ದಿನ ಪೂರ್ತಿ ದ್ವಾದಶೀ ರಾತ್ರಿಯ ಕೊನೆಯಭಾಗದಲ್ಲಿ ತ್ರಯೋದಶಿ ಬಂದರೆ ಆ ದಿನ 'ತ್ರಿಸ್ಪೃಶಾ' ಎಂಬ ದ್ವಾದಶಿಯಾಗುತ್ತದೆ. ಆ ದ್ವಾದಶಿ ಉಪವಾಸ ಮಾಡಿ ಪರಮಾತ್ಮನ ಪೂಜೆ ಮಾಡುವವನಿಗೆ ಒಂದು ಸಾವಿರ ಅಶ್ವಮೇಧ ಯಾಗಗಳ ಫಲವು ಪ್ರಾಪ್ತಿಯಗುತ್ತದೆ, ಯಾವಾಗ ಅರುಣೋದಯ ಕಾಲದಲ್ಲಿ ಏಕಾದಶೀ ತಿಥಿಯು ದಶಮಿಯಿಂದ ವಿದ್ಧವಾಗುತ್ತದೆಯೋ (ಮತ್ತು ಏಕಾದಶೀ ದಿನ ಪೂರ್ತಿ ಇದ್ದು ಮರುದಿನ ಸ್ವಲ್ಪಕಾಲ ಏಕಾದಶೀ ಇರುತ್ತದೆಯೋ) ಆ ಮೊದಲಿನ ಏಕಾದಶಿಯನ್ನು ಬಿಟ್ಟು ಮರುದಿನ ಬರುವ 'ಉನ್ಮೀಲನೀ' ಎಂಬ ಮಹಾದ್ವಾದಶಿಯ ದಿನ ಉಪವಾಸಮಾಡಬೇಕು,

ಆ ದಿನ ಉತ್ತಮರೀತಿಯಿಂದ ವಾಸುದೇವ ಪರಮಾತ್ಮನ ಪೂಜೆ ಮಾಡಿದರೆ ಒಂದು ಸಾವಿರ ರಾಜಸೂಯಯಾಗಗಳ ಫಲವು ಬರುತ್ತದೆ. ಯಾವಾಗ ಸೂರ್ಯೋದಯ ಕಾಲದಲ್ಲಿ ದಶಮಿಯು ಏಕಾದಶಿಯನ್ನು ಸ್ಪರ್ಶಿಸುತ್ತದೆಯೋ ಮತ್ತು ದ್ವಾದಶಿಯು ವೃದ್ಧಿಯುಕ್ತವಾಗಿದೆಯೋ, ಆಗ ಆ ಏಕಾದಶಿಯನ್ನು ಬಿಟ್ಟು ಮಂಜುಲೀ ಎಂಬ ಮಹಾದ್ವಾದಶೀ ದಿನ ಉಪವಾಸಮಾಡಬೇಕು, ಸರ್ವರಿಗೂ ಅಭಯಪ್ರದನಾದ ಸಂಕರ್ಷಣ ದೇವನನ್ನು ಆ ದಿನ ಗಂಧಾದ್ಯುಪಚಾರಗಳಿಂದ ಭಕ್ತಿಯಿಂದ ಪೂಜಿಸಬೇಕು. ಇದು ಸಮಸ್ತ ಯಜ್ಞಗಳ ಫಲದಾಯಕ, ಸಮಸ್ತ ಪಾಪ ಪರಿಹಾರಕ. ಎಲ್ಲ ಸಂಪತ್ತುಗಳನ್ನು ಕೊಡತಕ್ಕದ್ದು. ಯಾವಾಗ ಹುಣ್ಣಿಮೆ ಅಥವಾ ಅಮಾವಾಸ್ಯೆ ವೃದ್ಧಿ ತಿಥಿಯಾಗಿವೆಯೋ ಆ ಪಕ್ಷದ ದ್ವಾದಶಿಯು 'ಪಕ್ಷವರ್ಧಿನೀ' ಎಂಬ ಹೆಸರುಳ್ಳದ್ದು. ಮಹಾಫಲದಾಯಕ. ಆ ದ್ವಾದಶಿಯು ಸಂಪೂರ್ಣ ಐಶ್ವರ್ಯಪ್ರದ. ಹರಿಪೂಜೆ ಪುತ್ರಪೌತ್ರಪ್ರದ. ಜಗದೀಶ್ವರ ಪ್ರದ್ಯುಮ್ನನ ಪೂಜೆಯನ್ನು ಮಾಡಬೇಕು. ಶುಕ್ಲಪಕ್ಷದ ದ್ವಾದಶಿಯು ಮಘಾನಕ್ಷತ್ರದಿಂದ ಕೂಡಿದ್ದರೆ ಅದಕ್ಕೆ 'ಜಯಾ' ಎಂದು ಹೆಸರು ಅದು ಶತ್ರುವಿನಾಶಕ, ಆ ದಿನ ಲಕ್ಷ್ಮೀಪತಿಯಾದ ಅನಿರುದ್ಧನ ಪೂಜೆಯನ್ನು ಮಾಡಬೇಕು ಶುಕ್ಲಪಕ್ಷ ದ್ವಾದಶೀ ಶ್ರವಣ ನಕ್ಷತ್ರದಿಂದ ಕೂಡಿದ್ದರೆ 'ವಿಜಯಾದ್ವಾದಶೀ'. ಆ ದಿನ ಹರಿಯ ಪೂಜೆ ಸಮಸ್ತಭೋಗ ಪ್ರದ. ಸಂಪೂರ್ಣ ಸೌಖ್ಯಪ್ರದ, ಅಂದು ಗದಾಧರನ ಪೂಜೆಯನ್ನು ಮಾಡಿದರೆ ಸಮಸ್ತ ತೀರ್ಥಯಾತ್ರೆಗಳ ಫಲವು ಸಿಗುತ್ತದೆ. ಶುಕ್ಲಪಕ್ಷದ ದ್ವಾದಶಿಯು ರೋಹಿಣೀ ನಕ್ಷತ್ರದಿಂದ ಕೂಡಿದರೆ ಅದು ಮಹಾಪುಣ್ಯಕರವಾದ ಜಯಂತೀ, ಆ ದಿವಸ ವಾಮನಪೂಜೆ, ಉಪವಾಸಗಳಿಂದ ಎಲ್ಲ ದಾನಗಳ ಫಲ ಬರುತ್ತದೆ. ಭೋಗ ಮತ್ತು ಮೋಕ್ಷಗಳೂ ಪ್ರಾಪ್ತವಾಗುತ್ತವೆ. ಶುಕ್ಲಪಕ್ಷದ ದ್ವಾದಶೀ ಪುಷ್ಯನಕ್ಷತ್ರದಿಂದ ಕೂಡಿದ್ದರೆ ಅಪರಾಜಿತಾ ಎನಿಸುತ್ತದೆ. ಅಂದಿನ ಉಪವಾಸವು ಜ್ಞಾನ ಪ್ರದಾಯಕವಾಗಿದೆ. ಆ ದಿನ ಸಂಸಾರ ಬಂಧನಾಶಕನೂ, ಜ್ಞಾನಸಮುದ್ರನೂ, ರೋಗ ಶೋಕರಹಿತನೂ ಆದ ಭಗವಾನ್ ನಾರಾಯಣನ ಆರಾಧನೆ ಮಾಡಬೇಕು, ಆ ದಿವಸದ ಉಪವಾಸ ಮರುದಿವಸದ ಜ್ಞಾನಿಗಳ ಭೋಜನಗಳ ಪುಣ್ಯದಿಂದ ಸಂಸಾರ ಬಂಧನವೇ ಕಳೆದುಹೋಗುತ್ತದೆ. ಆಷಾಢ ಶುಕ್ಲ ದ್ವಾದಶೀ ಅನುರಾಧಾ ನಕ್ಷತ್ರ ಬಂದರೆ ಎರಡು ವ್ರತಗಳನ್ನು ಮಾಡಬೇಕು, ದೇವತೆಯು ಒಬ್ಬನೇ ಆದುದರಿಂದ ಎರಡು ವ್ರತಗಳನ್ನು ಮಾಡಿದರೂ ದೋಷವಿಲ್ಲ. ಭಾದ್ರಪದ ಶುದ್ಧ ಏಕಾದಶೀ ಶ್ರವಣ ನಕ್ಷತ್ರ, ಕಾರ್ತಿಕ ಶುದ್ಧ ದ್ವಾದಶೀ ರೇವತೀ ನಕ್ಷತ್ರ, ಬಂದರೆ ಏಕಾದಶೀ ದ್ವಾದಶೀ ಎರಡೂ ದಿನ ವ್ರತಮಾಡಬೇಕು. ಇದರ ಹೊರತು ಇತರ ದ್ವಾದಶಿಗಳಲ್ಲಿ ಏಕಭುಕ್ತದಿಂದ ಇರಬೇಕು. ದ್ವಾದಶೀ ವ್ರತವು ಸ್ವಭಾವತಃ ಸಮಸ್ತ ಪಾಪನಾಶಕವಾಗಿದೆ, ದ್ವಾದಶೀ ಏಕಾದಶೀ ವ್ರತಗಳು ನಿತ್ಯ ವ್ರತಗಳು, ಆದ್ದರಿಂದ ಅವುಗಳಿಗೆ ಉದ್ಯಾಪನ ಹೇಳಿಲ್ಲ, ಜೀವನ ಪೂರ್ತಿಯಾಗಿ ಏಕಾದಶೀ ದ್ವಾದಶೀ ವ್ರತಗಳನ್ನು ನಡೆಸುತ್ತಾ ಇರಬೇಕು.

## ತ್ರಯೋದಶಿ ವ್ರತಗಳ ವಿಧಿ ಮತ್ತು ಮಹಿಮೆ

**ಸನಾತನರು ಹೇಳುತ್ತಾರೆ:-** ನಾರದನೇ, ಈಗ ನಾನು ನಿನಗೆ ತ್ರಯೋದಶಿಗೆ ಸಂಬಂಧಪಟ್ಟ ವ್ರತವನ್ನು ಹೇಳುತ್ತೇನೆ. ಚೈತ್ರ ಕೃಷ್ಣ ಪಕ್ಷದ ತ್ರಯೋದಶಿಯು ಶನಿವಾರದಿಂದ ಕೂಡಿದ್ದರೆ ಮಹಾವಾರುಣೀ ಎಂದು ಹೆಸರು. ಆ ದಿನ ಮಾಡಿದ ಗಂಗಾ

ಸ್ನಾನವು ಕೋಟಿ ಸೂರ್ಯ ಗ್ರಹಣಗಳಿಗಿಂತಲೂ ಹೆಚ್ಚು ಫಲ ಪ್ರದವು. ಚೈತ್ರ ಕೃಷ್ಣ ಪಕ್ಷದ ತ್ರಯೋದಶೀ ಶುಭಯೋಗ, ಶತಭಿಷಾನಕ್ಷತ್ರ, ಮತ್ತು ಶನಿವಾರ ಸೇರಿದರೆ ಮಹಾ ಮಹಾವಾರುಣೀ ಎಂದು ಅದಕ್ಕೆ ಹೆಸರು.

ಜ್ಯೇಷ್ಠ ಶುಕ್ಲ ತ್ರಯೋದಶೀ ದಿನ 'ದೌರ್ಭಾಗ್ಯಶಮನ ವ್ರತವು' ಬರುತ್ತದೆ. ಆ ದಿನ ನದೀ ಜಲದಲ್ಲಿ ಸ್ನಾನ ಮಾಡಿ ಪವಿತ್ರ ಸ್ಥಾನದಲ್ಲಿ ಹುಟ್ಟಿರುವ ಮಂದಾರ 'ಅರ್ಕ' (ಎಕ್ಕ) ಮತ್ತು ಕೆಂಪು ಕಣಗಿಲೆ ಗಿಡಗಳನ್ನು ಪೂಜಿಸಬೇಕು. ಆಗ ಆಕಾಶದಲ್ಲಿರುವ ಸೂರ್ಯನ ಕಡೆಗೆ ನೋಡಿ ಈ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತಾ ಪ್ರಾರ್ಥಿಸಬೇಕು.

ಮಂದಾರಾ ಕರವೀರಾರ್ಕಾ ಭವಂತೋ ಭಾಸ್ಕರಾಂಶಕಾಃ ।
ಪೂಜಿತಾ ಮಮ ದೌರ್ಭಾಗ್ಯಂ ನಾಶಯಂತು ನಮೋಽಸ್ತು ವಃ ॥
ನಾ. ಪೂರ್ವ. ೧೨೨-೨೦-೨೧

''ಮಂದಾರವೇ, ಕಣಗಿಲೆಯೇ, ಅರ್ಕವೇ, ನೀವೆಲ್ಲರೂ ಸೂರ್ಯನ ಅಂಶದಿಂದ ಉತ್ಪನ್ನರಾಗಿದ್ದೀರಿ. ನನ್ನಿಂದ ಪೂಜಿತರಾದ ನೀವು ನನ್ನ ದೌರ್ಭಾಗ್ಯವನ್ನು ನಾಶಮಾಡಿರಿ, ನಿಮಗೆ ನಮಸ್ಕಾರ.'' ಈ ರೀತಿ ಭಕ್ತಿಯಿಂದ ಒಂದೊಂದು ವರ್ಷದವರೆಗೆ ಈ ವೃಕ್ಷಗಳ ಪೂಜೆ ಮಾಡಿದವನ ದೌರ್ಭಾಗ್ಯವು ನಾಶವಾಗುತ್ತದೆ. ಆಷಾಢ ಶುಕ್ಲ ತ್ರಯೋದಶಿ ದಿನ ಒಂದು ಹೊತ್ತು ಊಟ ಮಾಡಿ ಪಾರ್ವತೀ ಪರಮೇಶ್ವರರ ಚಿನ್ನ, ಬೆಳ್ಳಿ ಅಥವಾ ಮಣ್ಣಿನ ಪ್ರತಿಮೆಗಳನ್ನು ಮಾಡಿಸಿ ಅವುಗಳನ್ನು ಪೂಜಿಸಬೇಕು. ಉಮಾ ದೇವಿಯು ಸಿಂಹಾರೂಢಳಾಗಿಯೂ, ಈಶ್ವರನು ವೃಷಭಾರೂಢನಾಗಿಯೂ ಇರಬೇಕು. ನಾರದನ! ಈ ಎರಡು ಪ್ರತಿಮೆಗಳನ್ನು ದೇವ ಮಂದಿರ, ಗೋಶಾಲೆ ಅಥವಾ ಬ್ರಾಹ್ಮಣರ ಮನೆಯಲ್ಲಿ ವೇದ ಮಂತ್ರಗಳ ಮೂಲಕ ಪ್ರತಿಷ್ಠಿಸಿ ಐದು ದಿವಸ ನಿರಂತರ ಪೂಜಿಸಬೇಕು. ಆಗ ಒಂದು ಹೊತ್ತು ಊಟ ಮಾಡಬೇಕು. ಕೊನೆಯ ದಿನ ಪ್ರಾತಃಕಾಲ ಸ್ನಾನ ಮಾಡಿ ಆ ಪ್ರತಿಮೆಗಳನ್ನು ಪೂಜಿಸಬೇಕು. ಈ ರೀತಿ ಐದು ವರ್ಷ ಪೂಜಿಸಿ ಐದನೆಯ ವರ್ಷ ಪೂಜೆ ಮಾಡಿದ ಮೇಲೆ ಹಾಲು ಕೊಡುವ ಎರಡು ಹಸುಗಳ ಸಮೇತವಾಗಿ ಆಎರಡು ಪ್ರತಿಮೆಗಳನ್ನು ವೇದ ವೇದಾಂಗಜ್ಞಾನಿಯಾದ ದ್ವಿಜನಿಗೆ ಸಮರ್ಪಿಸಬೇಕು. ಪುರುಷ ಅಥವಾ ಸ್ತ್ರೀ ಯಾರೇ ಆಗಲಿ ಈ ವ್ರತಾನುಷ್ಠಾನ ಮಾಡಿದರೆ ಏಳು ಜನ್ಮಗಳವರೆಗೆ ದಾಂಪತ್ಯ ಸುಖದಿಂದ ವಂಚಿತರಾಗುವುದಿಲ್ಲ. ಭಾದ್ರಪದ ಶುಕ್ಲ ತ್ರಯೋದಶಿ ದಿನ 'ಗೋ ತ್ರಿರಾತ್ರ ವ್ರತ' ಇದೆ. ಆ ದಿನ ಲಕ್ಷ್ಮೀ ನಾರಾಯಣರ ಚಿನ್ನ ಅಥವಾ ಬೆಳ್ಳಿಯ ಪ್ರತಿಮೆಯನ್ನು ಮಾಡಿಸಿ ಅದಕ್ಕೆ ಪಂಚಾಮೃತ ಸ್ನಾನ ಮಾಡಿಸಬೇಕು. ಅನಂತರ ಮಂಗಳಕರವಾದ ಅಷ್ಟದಲ ಪದ್ಮ ಮಂಡಲದ ಮೇಲೆ ಇಟ್ಟಿರುವ ಪೀಠದಲ್ಲಿ ಆ ಪ್ರತಿಮೆಗಳನ್ನು ಇಟ್ಟು ಸುಂದರವಾದ ವಸ್ತ್ರಗಳಿಂದ ಅಲಂಕರಿಸಿ ಗಂಧಾದಿಗಳಿಂದ ಪೂಜಿಸಬೇಕು. ಆರತಿ ಮಾಡಿದ ಮೇಲೆ ಅನ್ನ ಮತ್ತು ಜಲ ಸಹಿತವಾದ ಘಟ ದಾನವನ್ನು ಮಾಡಬೇಕು. ಈ ರೀತಿ ಮೂರು ದಿನ ಮಾಡಿ ಕೊನೆಯ ದಿನ ಗೋಪೂಜೆ ಮಾಡಿ ಜ್ಞಾನಿಗೆ ಸರಿಯಾಗಿ ದಕ್ಷಿಣೆ ಕೊಟ್ಟು ನಮಸ್ಕಾರ ಮಾಡಿ ಈ ಮಂತ್ರವನ್ನು ಹೇಳುತ್ತಾ ಗೋವನ್ನು ದಾನ ಕೊಡಬೇಕು.

ಪಂಚಗಾವಃ ಸಮುತ್ಪನ್ನಾ ಮಥ್ಯಮಾನೇ ಮಹೋದಧೌ ।
ತಾಸಾಂ ಮಧ್ಯೇ ತು ಯಾ ನಂದಾ ತಸ್ಯೈ ಧೇನ್ವೈ ನಮೋ ನಮಃ॥
ನಾ.ಪೂರ್ವ ೧೨೨-೩೭-೩

ಕ್ಷೀರ ಸಮುದ್ರದ ಮಂಥನ ನಡೆದಾಗ ಐದು ಗೋವುಗಳ ಉತ್ಪನ್ನವಾದುವು. ಅವುಗಳಲ್ಲಿ ಒಂದಾದ ನಂದಾ ಎಂಬ ಧೇನುವಿಗೆ ಬಾರಿ ಬಾರಿಗೂ ನಮಸ್ಕಾರ, ಈ ಕೆಳಗಿನ ಮಂತ್ರದಿಂದ ಗೋಪ್ರದಕ್ಷಿಣೆ ಮಾಡಿ ಗೋವನ್ನು ದಾನ ಕೊಡಬೇಕು.

**ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।**
**ಗಾವೋ ಮೇ ಪಾರ್ಶ್ವತಃ ಸಂತು ಗವಾಂ ಮಧ್ಯೇ ವಸಾಮ್ಯಹಂ ॥**

**ನಾ.ಪೂರ್ವ ೧೨೨-೩೮**

ಗೋವುಗಳು ನನ್ನ ಮುಂದಿರಲಿ, ನನ್ನ ಹಿಂದಿರಲಿ, ನನ್ನ ಪಕ್ಕದಲ್ಲಿಯೂ ಇರಲಿ, ನಾನು ಗೋವುಗಳ ಮಧ್ಯದಲ್ಲಿಯೇ ವಾಸಮಾಡುವಂತಾಗಲಿ.'' ಅನಂತರ ಬ್ರಾಹ್ಮಣ ದಂಪತಿಗಳನ್ನು ಸತ್ಕರಿಸಿ ಅವರಿಗೆ ಭೋಜನ ಮಾಡಿಸಿ ಲಕ್ಷ್ಮೀ ನಾರಾಯಣ ಪ್ರತಿಮೆಯನ್ನು ಅವರಿಗೆ ದಾನ ಕೊಡಬೇಕು. ಸಾವಿರ ಅಶ್ವಮೇಧ, ಸಾವಿರಾರು ರಾಜಸೂಯಯಾಗಗಳ ಫಲವು ಈ ವ್ರತಾನುಷ್ಠಾನದಿಂದ ಉಂಟಾಗುತ್ತದೆ. ಆಶ್ವಯುಜ ಶುಕ್ಲ ತ್ರಯೋದಶಿಯಿಂದ ಮೂರು ರಾತ್ರಿ ಅಶೋಕ ವ್ರತವನ್ನು ಮಾಡಬೇಕು. ಅಶೋಕ ವೃಕ್ಷದ ಸುವರ್ಣ ಪ್ರತಿಮೆಯನ್ನು ಮಾಡಿಸಿ, ಸ್ತ್ರೀಯು ಆ ದಿನ ಉಪವಾಸವಾಗಿದ್ದು ಶಾಸ್ತ್ರೀಯ ವಿಧಿಯಿಂದ ಆ ಅಶೋಕದ ಪೂಜೆಯನ್ನು ಮಾಡಬೇಕು. ಈ ಮಂತ್ರವನ್ನು ಹೇಳುತ್ತಾ ಆ ವೃಕ್ಷಕ್ಕೆ ೧೦೮ ಪ್ರದಕ್ಷಿಣೆಗಳನ್ನು ಮಾಡಬೇಕು.

**ಹರೇಣ ನಿರ್ಮಿತಃ ಪೂರ್ವಂ ತ್ವಮಶೋಕಃ ಕೃಪಾಲುನಾ ।**
**ಲೋಕೋಪಕಾರಕರಣಸ್ತತ್ ಪ್ರಸೀದ ಶಿವಪ್ರಿಯ ॥**

**ನಾ. ಪೂರ್ವ. ೧೨೨-೪೩**

ಅಶೋಕ, ನಿನ್ನನ್ನು ಪರಮದಯಾಲುವಾದ ಶಂಕರನು ಸೃಷ್ಟಿಸಿದ್ದಾನೆ. ಲೋಕೋಪಕಾರಿಯಾದ ಶಿವಪ್ರಿಯನಾದ ಅಶೋಕವೇ! ನೀನು ನನ್ನಲ್ಲಿ ಪ್ರಸನ್ನನಾಗು.'' ಮಾರನೆಯ ದಿನ ಆ ಅಶೋಕ ವೃಕ್ಷದಲ್ಲಿ ವಿಧಿವತ್ತಾಗಿ ಶಂಕರನನ್ನು ಪೂಜಿಸಿ, ಬ್ರಾಹ್ಮಣನಿಗೆ ಭೋಜನ ಮಾಡಿಸಿ, ಆ ವೃಕ್ಷವನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಈ ವ್ರತವನ್ನು ಮಾಡಿದ ನಾರಿಯು ಎಂದೂ ವೈಧವ್ಯ ಕಷ್ಟವನ್ನು ಹೊಂದುವುದಿಲ್ಲ. ಪುತ್ರ ಪೌತ್ರಾದಿಗಳ ಜೊತೆಗಿದ್ದು ತನ್ನ ಪತಿಗೆ ಅತ್ಯಂತ ಪ್ರಿಯತಮಳಾಗುತ್ತಾಳೆ.

ಕಾರ್ತಿಕ ಬಹುಳ ತ್ರಯೋದಶೀ ದಿನ ಏಕಭುಕ್ತ ಮಾಡಿ ಪ್ರದೋಷ ಕಾಲದಲ್ಲಿ ಎಳ್ಳೆಣ್ಣೆಯ ಎರಡು ದೀಪಗಳನ್ನು ಹಚ್ಚಿ ಪೂಜಿಸಿ 'ಯಮರಾಜನು ಸುಪ್ರೀತನಾಗಲಿ' ಎಂದು ಹೇಳುತ್ತ ಮನೆಯ ಹೊರ ಬಾಗಿಲಿನ ಎರಡೂ ಪಕ್ಕದಲ್ಲಿಡಬೇಕು. ಇದರಿಂದ ಮನುಷ್ಯನಿಗೆ ಯಮ ಭಾದೆಯುಂಟಾಗುವುದಿಲ್ಲ. ಕಾರ್ತಿಕ ಶುಕ್ಲ ತ್ರಯೋದಶಿ ದಿನ ಮಾನವನು ಏಕಭುಕ್ತ ವ್ರತವನ್ನು ಮಾಡಬೇಕು. ಪ್ರದೋಷ ಕಾಲದಲ್ಲಿ ಪುನಃ ಸ್ನಾನ ಮಾಡಿ ಮೌನಿಯಾಗಿದ್ದು ಏಕಾಗ್ರಚಿತ್ತ ದಿಂದ (೩೨) ಮೂವತ್ತು ಎರಡು ದೀಪಗಳ ಸಾಲಿನಿಂದ ಈಶ್ವರನಿಗೆ ಆರತಿ ಮಾಡಬೇಕು. ಆ ದೀಪಗಳನ್ನು ತುಪ್ಪದಿಂದ ಉರಿಸಬೇಕು. ಶಿವನಿಗೆ ಗಂಧಾದಿಗಳಿಂದ ಮೊದಲು ಪೂಜೆಯನ್ನು ಮಾಡಬೇಕು. ಅನೇಕ ವಿಧವಾದ ಫಲ ಮತ್ತು ನೈವೇದ್ಯಗಳಿಂದ ಈಶ್ವರನನ್ನು ಪ್ರಸನ್ನಗೊಳಿಸಬೇಕು. ಅನಂತರ ಕೆಳಗಿನ ಮಂತ್ರಗಳಿಂದ ಈಶ್ವರನ ಸ್ತುತಿ ಮಾಡಬೇಕು. ರುದ್ರ, ಭೀಮ, ನೀಲಕಂಠ ಮತ್ತು ವೇಧಸ್ಸಿಗೆ (ಸೃಷ್ಟಿ ಕರ್ತನಿಗೆ) ನಮಸ್ಕಾರ.

ಕಪರ್ದಿ (ಜಟಾಧಾರಿ) ಸುರೇಶ, ವ್ಯೋಮಕೇಶನಿಗೆ ನಮಸ್ಕಾರ. ವೃಷಧ್ವಜ ಸೋಮಸೋಮನಾಥರಿಗೆ ನಮಸ್ಕಾರ, ದಿಗಂಬರ, ಭೃಂಗ, ಉಮಾಕಾಂತ. ವರ್ಧೀ (ವೃದ್ಧಿ ಮಾಡುವವನಿಗೆ) ಶಿವನಿಗೆ ನಮಸ್ಕಾರ ತಪೋಮಯ ವ್ಯಾಪ್ತ, ಶಿಪಿವಿಷ್ಟ, (ತೇಜಸ್ವಿ) ಶಂಕರ ಭಗವಂತನಿಗೆ ನಮಸ್ಕಾರ, ವ್ಯಾಲಪ್ರಿಯ (ಸರ್ಪ ಭೂಷಣ ಪ್ರಿಯ) ವ್ಯಾಲ (ಸರ್ಪ ಸ್ವರೂಪ) ಮತ್ತು ವ್ಯಾಲಪತಿ ಶಿವನಿಗೆ ನಮಸ್ಕಾರ. ಮಹೀಧರ (ಪರ್ವತರೂಪ) ವ್ಯೋಮ (ಆಕಾಶರೂಪ) ಮತ್ತು ಪಶುಪತಿಗೆ ನಮಸ್ಕಾರ. ತ್ರಿಪುರಹಂತಾ, ಸಿಂಹ, ಶಾರ್ದೂಲ, ವೃಷಭರಿಗೆ ನಮಸ್ಕಾರ ಮಿತ, ಮಿತನಾಥ, ಸಿದ್ಧ, ಪರಮೇಷ್ಠೀ, 'ವೇದಗೀತ, ಗುಪ್ತ ಮತ್ತು ವೇದ ಗುಹ್ಯ ಶಿವನಿಗೆ ನಮಸ್ಕಾರ. ದೀರ್ಘ, ದೀರ್ಘರೂಪ, ದೀರ್ಘಾರ್ಥ, ಮಹೀಯಾನ್ ಜಗದಾಧಾರ, ವ್ಯೋಮಸ್ವರೂಪ ಶಿವನಿಗೆ ನಮಸ್ಕಾರ, ಕಲ್ಯಾಣ ಸ್ವರೂಪ, ವಿಶಿಷ್ಟ ಪುರುಷ, ಶಿಷ್ಟ (ಮಹಾತ್ಮ) ಪರಮಾತ್ಮ, ಗಜಕೃತ್ತಿಧರ, ಅಂಧಕಾಸುರ ಸಂಹಾರಕ ಶಿವನಿಗೆ ನಮಸ್ಕಾರ, ನೀಲ ಲೋಹಿತ, ಶುಕ್ಲ, ಚಂಡ ಮುಂಡಪ್ರಿಯ, ದೇವ ಸ್ವರೂಪ, ದಕ್ಷಯಜ್ಞ ನಾಶಕ, ಅವಿನಾಶಿ ಶಿವನಿಗೆ ನಮಸ್ಕಾರ. ಮಹೇಶ, ನಿನಗೆ ನಮಸ್ಕಾರ, ಮಹಾದೇವ, ಸರ್ವ, ಸಂಹಾರಕರ್ತ, ನಿನಗೆ ನಮಸ್ಕಾರ, ನಿನಗೆ ಮೂರು ಕಣ್ಣುಗಳಿವೆ. ನೀನು ಮೂರು ವೇದಗಳಿಗೆ ಆಶ್ರಯನಾಗಿದ್ದೀ. ವೇದಾಂಗ ಸ್ವರೂಪನಾದ ನಿನಗೆ ಬಾರಿ ಬಾರಿಗೂ ನಮಸ್ಕಾರ. ನೀನೇ ಅರ್ಥ, ಅರ್ಥ ಸ್ವರೂಪ ಪರಮಾರ್ಥ, ನಿನಗೆ ನಮಸ್ಕಾರ. ವಿಶ್ವರೂಪ, ವಿಶ್ವಮಯ, ವಿಶ್ವನಾಥ, ಭಗವಂತನಾದ ಶಿವನೇ ನಿನಗೆ ನಮಸ್ಕಾರ. ಸಮಸ್ತ ಕಲ್ಯಾಣಕಾರಿ, ಕಾಲ ಸ್ವರೂಪ, ಕಲಾಕಾಷ್ಠಾದಿ ಕಾಲಾವಯವರೂಪ, ಅರೂಪ, ಅನೇಕ ರೂಪ, ಸೂಕ್ಷ್ಮಾತಿ ಸೂಕ್ಷ್ಮ, ಭಗವನ್ ಶಿವನೇ, ನಿನಗೆ ನಮಸ್ಕಾರ, ಪ್ರಭುವೇ, ಶ್ಮಶಾನ ನಿವಾಸಿಯೇ, ಚರ್ಮ ವಸ್ತ್ರಧಾರಿಯೇ ನಿನಗೆ ನಮಸ್ಕಾರ. ಮಸ್ತಕದಲ್ಲಿ ಚಂದ್ರಮುಕುಟ ಶೋಭಿತನೇ, ಭಯಂಕರ ಶ್ಮಶಾನ ಭೂಮಿ ನಿವಾಸನೇ, ನಿನಗೆ ನಮಸ್ಕಾರ. ದುರ್ಗ, (ಬಹಳ ಕಷ್ಟದಿಂದ ಹೊಂದಲು ಯೋಗ್ಯ) ದುರ್ಗ ಪಾರ, (ಕಷ್ಟಗಳನ್ನು ಪಾರಿಗಾಣಿಸುವವನು) ದುರ್ಗಾಮಯ ಸಾಕ್ಷೀ (ದುರ್ಗಾದೇವಿಯ ಅಂಗಪ್ರತ್ಯಂಗ ಗಳನ್ನು ಬಲ್ಲವನು) ಲಿಂಗರೂಪ, ಲಿಂಗಮಯ, ಲಿಂಗಾಧಿಪತಿ, ಆಗಿರುವ ನಿನಗೆ ನಮಸ್ಕಾರ. ಪ್ರಭಾವರೂಪನಾದ, ಪ್ರಭಾವಪೂರ್ಣವಾದ ಪ್ರಯೋಜನಕ್ಕೆ ಸಾಧಕನಾದ, ನಿನಗೆ ಬಾರಿ ಬಾರಿಗೂ ನಮಸ್ಕಾರ. ಕಾರಣ ಕಾರಣನಾದ, ಮೃತ್ಯುಂಜಯ ಸ್ವಯಂಭೂ ಸ್ವರೂಪನಾದ ನಿನಗೆ ಬಾರಿ ಬಾರಿಗೂ ನಮಸ್ಕಾರ. ಮುಕ್ಕಣ್ಣ, ಶಿತಿಕಂಠ, ತೇಜೋನಿಧಿ, ಗೌರಿಯನ್ನು ಎಡೆಬಿಡದೆ ಸೇರಿಕೊಂಡಿರುವ, ಮಂಗಲ ಕಾರಣ ನಿನಗೆ ನಮಸ್ಕಾರ.

ಬ್ರಾಹ್ಮಣ ಶ್ರೇಷ್ಠನೇ, ಪಿನಾಕಧಾರಿಯಾದ ಮಹಾದೇವನ ಈ ಗುಣ ನಾಮಗಳನ್ನು ಹೇಳಿ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿದರೆ ಮಾನವನು ಭಗವಂತನ ಲೋಕವನ್ನೇ ಸೇರುತ್ತಾನೆ. ನಾರದನೇ, ಈ ರೀತಿ ವ್ರತವನ್ನು ಮಾಡಿದ ಮಾನವನು ಇಹದಲ್ಲಿ ಸಮಸ್ತ ಭೋಗಗಳನ್ನು ಭೋಗಿಸಿ, ಕೊನೆಗೆ ಮಹಾದೇವನ ಪ್ರಸಾದದಿಂದ ಶಿವಲೋಕವನ್ನೇ ಹೊಂದುತ್ತಾನೆ. ನಾರದನೇ, ಪುಷ್ಯ ಶುಕ್ಲ ತ್ರಯೋದಶಿಯ ದಿನ ಅಚ್ಯುತನಾದ ಶ್ರೀ ಹರಿಯ ಪೂಜೆ ಮಾಡಿ ಸಕಲ ಮನೋರಥ ಸಿದ್ಧಿಗಾಗಿ ಶ್ರೇಷ್ಠ ಬ್ರಾಹ್ಮಣನಿಗೆ ತುಪ್ಪದಿಂದ ಪೂರ್ಣವಾದ ಪಾತ್ರೆಯನ್ನು ದಾನ ಮಾಡಬೇಕು. ನಾರದನೇ, ಮಾಘ ಶುದ್ಧ ತ್ರಯೋದಶಿಯಿಂದ ಆರಂಭಿಸಿ ಮೂರು ದಿನ ಮಾಘ ಸ್ನಾನ ವ್ರತವಿದೆ, ಇದು ನಾನಾ ವಿಧವಾದ ಮನೋರಥ ಫಲಗಳನ್ನು ಕೊಡತಕ್ಕಂತಹುದು, ಮಾಘ ಮಾಸದಲ್ಲಿ ಮೂರು

ದಿನ ಪ್ರಯಾಗದಲ್ಲಿ ಸ್ನಾನ ಮಾಡಿದ ಮನುಷ್ಯನಿಗೆ, ಒಂದು ಸಾವಿರ ಅಶ್ವಮೇಧಯಾಗಗಳ ಫಲಕ್ಕಿಂತಲೂ ಹೆಚ್ಚಿನ ಫಲವು ಉಂಟಾಗುತ್ತದೆ. ಅಲ್ಲಿ ಮಾಡಿದ ಸ್ನಾನ, ಜಪ, ಹೋಮ, ದಾನ, ಎಲ್ಲವೂ ಅಕ್ಷಯ ಅನಂತವಾಗುತ್ತದೆ.

ಫಾಲ್ಗುಣ ಮಾಸದ ಶುಕ್ಲ ಪಕ್ಷದ ತ್ರಯೋದಶಿ ದಿನ ಉಪವಾಸ ಮಾಡಿ ಭಗವಂತನಾದ ಜಗನ್ನಾಥನ ಪೂಜೆಮಾಡಿ ಅನಂತರ ಧನದ ವ್ರತವನ್ನು ಪ್ರಾರಂಭಿಸಬೇಕು. ಒಂದು ಬಟ್ಟೆ, ಅಥವಾ ಕಾಗದ (ಯಾವುದಾದರೊಂದು ಪಟದಲ್ಲಿ) ಯಕ್ಷಪತಿಯಾದ ಕುಬೇರನ ಚಿತ್ರವನ್ನು ಬರೆದು ಭಕ್ತಿಯಿಂದ ಗಂಧಾದಿ ಉಪಚಾರಗಳಿಂದ ಅದನ್ನು ಪೂಜಿಸಬೇಕು. ಇದೇ ಧನದ ವ್ರತವು. ನಾರದನೇ, ಪ್ರತಿ ಮಾಸದ ಶುಕ್ಲ ಪಕ್ಷದ ತ್ರಯೋದಶೀ ದಿನ ಮನುಷ್ಯನು ಕುಬೇರನ ಪೂಜೆಯನ್ನು ಮಾಡಬೇಕು. ಆ ದಿನ ಉಪವಾಸ ಅಥವಾ ಏಕಭುಕ್ತವನ್ನು ಮಾಡಬೇಕು. ಅನಂತರ ವರ್ಷದ ಕೊನೆಯಲ್ಲಿ ವ್ರತ ಸಮಾಪ್ತಿಯಾಗುವಾಗ ಸುವರ್ಣಮಯವಾದ ನವನಿಧಿಗಳ ಜೊತೆಗೆ ಕುಬೇರನ ಸುವರ್ಣ ಪ್ರತಿಮೆಯನ್ನು ಮಾಡಿಸಿ ಪಂಚಾಮೃತ ಸ್ನಾನ ಮಾಡಿಸಬೇಕು. ನಾನಾ ವಿಧವಾದ ಷೋಡಶೋಪಚಾರಗಳಿಂದ ಅರ್ಚಿಸಿ, ನೈವೇದ್ಯ ಮಾಡಿ, ಭಕ್ತಿಯಿಂದ ಏಕಾಗ್ರಚಿತ್ತದಿಂದ ಪೂಜಿಸಬೇಕು. ಅನಂತರ ವಸ್ತ್ರ, ಹೂಮಾಲೆ, ಗಂಧ ಅಲಂಕಾರಗಳಿಂದ ಕರು ಮತ್ತು ಒಳ್ಳೆಯ ಹಸುವನ್ನು ಪೂಜಿಸಿ ವೇದಜ್ಞನಾದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ದಾನ ಮಾಡಬೇಕು. ಅನಂತರ ಹನ್ನೆರಡು ಅಥವಾ ಹದಿಮೂರು ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ, ಆಚಾರ್ಯರನ್ನು ವಸ್ತ್ರಾದಿಗಳಿಂದ ಪೂಜಿಸಿ ಹಿಂದೆ ಹೇಳಿದ ಪ್ರತಿಮೆಯನ್ನು ಆಚಾರ್ಯನಿಗೆ ಅರ್ಪಿಸಬೇಕು. ಬ್ರಾಹ್ಮಣರಿಗೆ ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು ನಮಸ್ಕಾರ ಮಾಡಿ ಬೀಳ್ಕೊಡಬೇಕು. ಜ್ಞಾನಿಯಾದ ವ್ರತನಿಷ್ಠನು ಇದರ ನಂತರ ಏಕಾಗ್ರಚಿತ್ತನಾಗಿ ಇಷ್ಟ ಬಂಧುಗಳ ಜೊತೆಗೆ ತಾನೂ ಭೋಜನ ಮಾಡಬೇಕು. ನಾರದನೇ, ಈ ರೀತಿ ವ್ರತವು ಪೂರ್ಣವಾದಾಗ ನಿರ್ಧನನಾದವನೂ ಧನವನ್ನು ಪಡೆದು ಈ ಭೂಮಂಡಲದಲ್ಲಿ ಕುಬೇರನಂತೆ ಪ್ರಖ್ಯಾತನಾಗಿ ಆನಂದವನ್ನು ಅನುಭವಿಸುತ್ತಾನೆ.

## ಚತುರ್ದಶಿ ವ್ರತಗಳು ಮತ್ತು ಅವುಗಳ ಮಹಿಮೆ

**ಸನಾತನರು ಹೇಳುತ್ತಾರೆ:-** ನಾರದನೇ ಕೇಳು. ಈಗ ಚತುರ್ದಶಿಯ ವ್ರತಗಳನ್ನು ಹೇಳುತ್ತೇನೆ. ಚೈತ್ರ ಶುಕ್ಲ ಚತುರ್ದಶಿ ದಿನ ಕುಂಕುಮ, ಅಗುರ ಗಂಧ ಮೊದಲಾದ ಉಪಚಾರಗಳು, ವಸ್ತ್ರ ಮತ್ತು ರತ್ನಗಳ ಮೂಲಕ ಈಶ್ವರನ ವೈಭವ ಪೂರ್ಣವಾದ ಪೂಜೆಯನ್ನು ಮಾಡಬೇಕು. ಮೇಲ್ಕಟ್ಟು, ಧ್ವಜ, ಛತ್ರ ಮುಂತಾದವುಗಳಿಂದ ಅಲಂಕರಿಸಿ ಸಪ್ತ ಮಾತೃಕೆಯರ ಪೂಜೆಯನ್ನು ಮಾಡಬೇಕು. ಉಪವಾಸ ಅಥವಾ ಏಕಭುಕ್ತದಿಂದ ಈ ಪೂಜೆಯನ್ನು ಮಾಡಿದ ಮನುಷ್ಯನು ಈ ಭೂಮಿಯಲ್ಲಿ ಅಶ್ವಮೇಧ ಯಜ್ಞದಿಂದ ಪಡೆಯುವ ಫಲಕ್ಕಿಂತಲೂ ಅಧಿಕ ಫಲವನ್ನು ಪಡೆಯುತ್ತಾನೆ. ಇದೇ ತಿಥಿಯ ದಿನ ಗಂಧ ಪುಷ್ಪಾದಿಗಳ ಮೂಲಕ ದಮನಕ ಪೂಜೆಯನ್ನು ಮಾಡಿ ಪೂರ್ಣಿಮೆಯ ದಿನ ಶಿವನಿಗೆ ಆ ಪೂಜೆಯನ್ನು ಸಮರ್ಪಿಸಬೇಕು. ವೈಶಾಖ ಬಹುಳ ಚತುರ್ದಶಿಯ ದಿನ 'ಉಪವಾಸ'ವಿದ್ದು ಪ್ರದೋಷ ಕಾಲದಲ್ಲಿ ಸ್ನಾನ ಶ್ವೇತ ವಸ್ತ್ರಧಾರಣ ಪೂರ್ವಕ ಶಿವಲಿಂಗ ಪೂಜಾ ಇವುಗಳನ್ನು ಮಾಡಬೇಕು. ಗಂಧಾದಿ ಉಪಚಾರಗಳಿಂದಲೂ ಬಿಲ್ವ ಪತ್ರದಿಂದಲೂ ಈಶ್ವರನ ಪೂಜೆ ಮಾಡಿ. ಶ್ರೇಷ್ಠ ಬ್ರಾಹ್ಮಣನನ್ನು ಕರೆದು ಭೋಜನ ಮಾಡಿಸಿ ಮರು ದಿನ ತಾನು ಸ್ವತಃ

ಭೋಜನ ಮಾಡಬೇಕು. ದ್ವಿಜ ಶ್ರೇಷ್ಠನೇ, ಈ ರೀತಿ ಎಲ್ಲಾ ಬಹುಳ ಚತುರ್ದಶಿಗಳಲ್ಲಿಯೂ ಧನ ಮತ್ತು ಸಂತಾನಾಪೇಕ್ಷಿಯಾದ ಮಾನವನು ಶಿವನ ಪೂಜೆಯನ್ನು ಮಾಡಬೇಕು. ವೈಶಾಖ ಚತುರ್ದಶಿಯ ದಿನ ನರಸಿಂಹ ಜಯಂತಿ ವ್ರತಾನುಷ್ಠಾನ ಮಾಡಬೇಕು. ಆ ದಿನ ಶಕ್ತಿಯಿದ್ದವರು ಉಪವಾಸವಾಗಿ ವ್ರತಾನುಷ್ಠಾನ ಮಾಡಬೇಕು. ಶಕ್ತಿ ಇಲ್ಲದವರು ಏಕಭುಕ್ತ (ಫಲಾಹಾರ)ವನ್ನು ಮಾಡಿ ವ್ರತಮಾಡಬಹುದು. ಸಾಯಂಕಾಲ ದೈತ್ಯ ಸಂಹಾರಕ ಭಗವಾನ್ ನರಸಿಂಹನಿಗೆ ಪಂಚಾಮೃತ ಸ್ನಾನ ಶುದ್ಧ ಜಲ ಸ್ನಾನ ಇತ್ಯಾದಿಗಳನ್ನು ಮಾಡಿಸಿ ಅನಂತರ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಅನಂತರ ಈ ಮಂತ್ರವನ್ನು ಹೇಳುತ್ತಾ ಭಗವಂತನ ಬಳಿ ಕ್ಷಮಾ ಪ್ರಾರ್ಥನೆಯನ್ನು ಮಾಡಬೇಕು.

ತಪ್ತ ಹಾಟಕಕೇಶಾಂತ ಜ್ವಲತ್ ಪಾವಕಲೋಚನ ।
ವಜ್ರಾಧಿಕನಖಸ್ಪರ್ಶ ದಿವ್ಯಸಿಂಹ ನಮೋಽಸ್ತುತೇ ॥

ನಾ.ಪೂರ್ವ. ೧೨೩-೧೧

"ಅಲೌಕಿಕ ಅದ್ಭುತ ನರಸಿಂಹನೇ, ನಿನ್ನ ಕೇಸರಗಳು ಪುಟಕ್ಕೆ ಹಾಕಿದ ಚಿನ್ನದಂತೆ ಪ್ರಕಾಶಿಸುತ್ತಿವೆ. ಕಣ್ಣುಗಳು ಉರಿಯುತ್ತಿರುವ ಅಗ್ನಿಯಂತೆ ಜ್ವಲಿಸುತ್ತಿವೆ. ನಿನ್ನ ನಖ (ಉಗುರು)ಗಳ ಸ್ಪರ್ಶವು ವಜ್ರಾಯುಧದ ಸ್ಪರ್ಶಕ್ಕಿಂತಲೂ ಕಠೋರವಾಗಿದೆ. ಇಂತಹ ನಿನಗೆ ನಮಸ್ಕಾರ." ದೇವೇಶ್ವರ ಭಗವಾನ್ ನೃಸಿಂಹನನ್ನು ಈ ರೀತಿ ಪ್ರಾರ್ಥಿಸಿ ವ್ರತ ಪರಾಯಣನಾದ ಮನುಷ್ಯನು ಮಣ್ಣಿನ ವೇದಿಕೆಯ (ಜಗಲಿಯ) ಮೇಲೆ ಮಲಗಬೇಕು. ಇಂದ್ರಿಯಗಳನ್ನೂ, ಕ್ರೋಧವನ್ನೂ ವಶದಲ್ಲಿಟ್ಟುಕೊಂಡು ಎಲ್ಲಾ ಭೋಗಗಳನ್ನೂ ವರ್ಜಿಸಬೇಕು. ಈ ರೀತಿ ಪ್ರತಿ ವರ್ಷದಲ್ಲಿಯೂ ವಿಧಿಪೂರ್ವಕವಾಗಿ ಈ ವ್ರತದ ಅನುಷ್ಠಾನ ಮಾಡಿದವನು ಶ್ರೀ ಲಕ್ಷ್ಮೀ ನರಸಿಂಹನ ಅನುಗ್ರಹದಿಂದ ಇಹಲೋಕದಲ್ಲಿ ಸಮಸ್ತ ಸುಖಭೋಗಗಳನ್ನೂ ಅನುಭವಿಸಿ, ಕೊನೆಗೆ ಶ್ರೀ ಹರಿಯ ಸನ್ನಿಧಿಯನ್ನು ಸೇರುತ್ತಾನೆ.

ಮುನೀಶ್ವರನೇ, ಇದೇ ತಿಥಿಯ ದಿನ ಓಂಕಾರೇಶ್ವರ ಯಾತ್ರೆಯನ್ನು ಮಾಡಬೇಕು. ಅಲ್ಲಿ ಓಂಕಾರೇಶ್ವರ ಪೂಜೆಗೆ ಅವಕಾಶವು ದುರ್ಲಭವು. ಆದರೆ ಆ ಪರಮೇಶ್ವರನ ದರ್ಶನವು ಸಮಸ್ತ ಪಾಪನಾಶಕವು. ಓಂಕಾರೇಶ್ವರನ ಧ್ಯಾನ, ಪೂಜೆ, ಜಪ, ದರ್ಶನ ಯಾವುದೇ ಆಗಲಿ, ಮನುಷ್ಯನಿಗೆ ಜ್ಞಾನ ಮತ್ತು ಮೋಕ್ಷಗಳನ್ನು ಕೊಡುತ್ತದೆ. ಇದೇ ತಿಥಿಯಲ್ಲಿ ಪಾಪನಾಶಕ 'ಲಿಂಗ ವ್ರತ'ವನ್ನು ಮಾಡಬೇಕು. ಹಿಟ್ಟಿನಿಂದ ಗಟ್ಟಿಯಾದ ಶಿವಲಿಂಗವನ್ನು ಮಾಡಿ, ಅದಕ್ಕೆ ಪಂಚಾಮೃತ ಸ್ನಾನ ಮಾಡಿಸಿ ಲಿಂಗಕ್ಕೆ ಕುಂಕುಮವನ್ನು ಲೇಪಿಸಬೇಕು. ಅನಂತರ ವಸ್ತ್ರ, ಅಲಂಕಾರ, ಧೂಪ, ದೀಪ, ನೈವೇದ್ಯಗಳ ಮೂಲಕ ಶಿವನನ್ನು ಪೂಜಿಸಬೇಕು. ಯಾವನು ಈ ರೀತಿ ಸಕಲ ಮನೋರಥ ಪ್ರದಾಯಕವಾದ ಪಿಷ್ಟಮಯ ಶಿವಲಿಂಗವನ್ನು ಪೂಜಿಸುತ್ತಾನೋ, ಅವನು ಮಹಾದೇವನ ಕೃಪೆಯಿಂದ ಭೋಗ ಮೋಕ್ಷಗಳೆರಡನ್ನೂ ಪಡೆಯುತ್ತಾನೆ.

ಜ್ಯೇಷ್ಠ ಶುಕ್ಲ ಚತುರ್ದಶಿಯ ದಿನ ಪಂಚಾಗ್ನಿ ಸೇವನ ಮಾಡಬೇಕು. ನಾಲ್ಕು ಸುತ್ತ ನಾಲ್ಕು ಅಗ್ನಿಗಳನ್ನು ಉರಿಸಿ, ಮಧ್ಯದಲ್ಲಿ ನಿಂತು ಸೂರ್ಯನನ್ನು ನೋಡುತ್ತಾ ತಪಸ್ಸು ಮಾಡುವುದು, ಸಾಯಂಕಾಲ ಸುವರ್ಣಮಯ ಧೇನುವನ್ನು ದಾನ ಮಾಡಬೇಕು. ಇದೇ ರುದ್ರ ವ್ರತವು. ಆಷಾಢ ಶುಕ್ಲ ಚತುರ್ದಶಿಯ ದಿನ ಯಾವನು ಆಯಾ ದೇಶ, ಆಯಾ

ಕಾಲದಲ್ಲಿ ಸಿಗುವ ಪುಷ್ಪಗಳಿಂದ ಪರಮೇಶ್ವರನ ಪೂಜೆಯನ್ನು ಮಾಡುತ್ತಾನೋ ಅವನು ಸಮಸ್ತ ಸಂಪತ್ತುಗಳನ್ನು ಹೊಂದುತ್ತಾನೆ.

ಬ್ರಾಹ್ಮಣಶ್ರೇಷ್ಠ, ಶ್ರಾವಣ ಶುಕ್ಲ ಚತುರ್ದಶಿಯ ದಿನ ತನ್ನ ಶಾಖೋಕ್ತವಾದ ರೀತಿಯಿಂದ ಹಯಗ್ರೀವ ಮೂರ್ತಿಗೆ ಅಥವಾ ಪರಮೇಶ್ವರನಿಗೆ ಪವಿತ್ರರೋಹಣ ಮಾಡಬೇಕು. ಮೊದಲು ಪವಿತ್ರವನ್ನು ನೂರು ಬಾರಿ ಮೂಲಮಂತ್ರದಿಂದ ಅಭಿಮಂತ್ರಿಸಬೇಕು. ಅನಂತರ ದೇವದೇವನಿಗೆ (ಅಥವಾ ದೇವಿಗೆ) ಅದನ್ನು ಸಮರ್ಪಿಸಬೇಕು. ಸ್ತ್ರೀಯಾಗಲೀ ಪುರುಷನಾಗಲೀ ಈ ಪವಿತ್ರಾರೋಪಣವನ್ನು ಮಾಡಿದರೆ ದೇವ ದೇವ ಮಹಾದೇವನ ಪ್ರಸಾದದಿಂದ ಭೋಗ ಮೋಕ್ಷಗಳೆರಡನ್ನೂ ಪಡೆಯುತ್ತಾರೆ.

ಭಾದ್ರಪದ ಶುಕ್ಲ ಚತುರ್ದಶಿಯ ದಿನ ಉತ್ತಮವಾದ 'ಅನಂತವ್ರತ'ವನ್ನು ಮಾಡಬೇಕು. ಈ ವ್ರತದಲ್ಲಿಯೂ ಒಂದೇ ಬಾರಿ ಭೋಜನ ಮಾಡಬೇಕು. ಒಂದು ಸೇರು ಗೋದಿಯ ಹಿಟ್ಟಿಗೆ ಸಕ್ಕರೆ ಮತ್ತು ತುಪ್ಪವನ್ನು ಸೇರಿಸಿ ಪಾಕ ಮಾಡಿ ಹೋಳಿಗೆ (ಒಬ್ಬಟ್ಟು) ಮಾಡಿ ಅದನ್ನು ಭಗವಾನ್ ಅನಂತನಿಗೆ ಅರ್ಪಿಸಬೇಕು. ಇದಕ್ಕಿಂತಲೂ ಮೊದಲು ಹತ್ತಿ ಅಥವಾ ರೇಶ್ಮೆಯ ಸುಂದರವಾದ ದಾರದಿಂದ ಅನಂತನ ದಾರವನ್ನು ತಯಾರಿಸಿ ಅದಕ್ಕೆ ಹದಿನಾಲ್ಕು ಗಂಟುಗಳನ್ನು ಹಾಕಬೇಕು, ಅನಂತನ ದಾರಕ್ಕೆ ಗಂಧಾದಿ ಉಪಚಾರಗಳಿಂದ ಪೂಜೆಯನ್ನು ಮಾಡಿ ಹಳೆಯ ದಾರವನ್ನು ಕೈಯಿಂದ ಬಿಚ್ಚಿ ಎಲ್ಲಾದರೂ ಕೆರೆ ಅಥವಾ ಬಾವಿಗಳಲ್ಲಿ ಹಾಕಬೇಕು. ಪೂಜಿಸಿದ ಹೊಸ ಅನಂತನ ದಾರವನ್ನು ಹೆಂಗಸರು ಎಡ ತೋಳಿನಲ್ಲಿಯೂ ಗಂಡಸರು ಬಲ ತೋಳಿನಲ್ಲಿಯೂ ಕಟ್ಟಿಕೊಳ್ಳಬೇಕು. ಹಿಂದೆ ತಯಾರಿಸಿ ಪರಮಾತ್ಮನಿಗೆ ನಿವೇದಿತವಾದ ಹೋಳಿಗೆಯನ್ನು ದಕ್ಷಿಣಾ ಸಹಿತವಾಗಿ ಬ್ರಾಹ್ಮಣನಿಗೆ ದಾನ ಕೊಡಬೇಕು. ತಾನೂ ಸ್ವಲ್ಪ ಪ್ರಸಾದವನ್ನು ಸ್ವೀಕರಿಸಬೇಕು. ಈ ಉತ್ತಮವಾದ ವ್ರತವನ್ನು ಹದಿನಾಲ್ಕು ವರ್ಷ ಮಾಡಿ ಅನಂತರ ಉದ್ಯಾಪನ ಮಾಡಬೇಕು. ಬಣ್ಣ ಬಣ್ಣದ ಅಕ್ಕಿಯಿಂದ ಸುಂದರವಾದ ಸರ್ವತೋಭದ್ರಮಂಡಲವನ್ನು ಮಾಡಿ ಅಲ್ಲಿ ತಾಮ್ರದ ಕಲಶವನ್ನು ಸ್ಥಾಪಿಸಿ, ಕಲಶದ ಮೇಲೆ ರೇಶ್ಮೆಯ ಪೀತಾಂಬರದಿಂದ ಆಚ್ಛಾದಿತವಾದ ಅನಂತ ಪದ್ಮನಾಭನ ಸುಂದರವಾದ ಪ್ರತಿಮೆಯನ್ನಿಡಬೇಕು. ಅನಂತರ ಆ ಪರಮಾತ್ಮನನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ಗಣೇಶ, ಮಾತೃಕಾ, ನವಗ್ರಹ ಮತ್ತು ಲೋಕ ಪಾಲಕರನ್ನು ಅವರವರ ಸ್ಥಾನದಲ್ಲಿ ಪೂಜಿಸಬೇಕು. ಹವಿಷ್ಯಾನ್ನದಿಂದ ಹೋಮವನ್ನು ಮಾಡಿ ಪೂರ್ಣಾಹುತಿಯನ್ನು ಮುಗಿಸಬೇಕು. ಅನಂತರ ಅವಶ್ಯಕ ಉಪಕರಣಗಳೊಡನೆ ಹಾಸಿಗೆ, ಹಾಲು ಕೊಡುವ ಹಸು ಮತ್ತು ಅನಂತನ ಪ್ರತಿಮೆಯನ್ನು ಆಚಾರ್ಯನಿಗೆ ದಾನವಾಗಿ, ಕೊಡಬೇಕು. ಆಚಾರ್ಯನ ಇತರ ಹದಿನಾಲ್ಕು ಮಂದಿ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಿ ಮಧುರ ಪಕ್ವಾನ್ನದಿಂದ ಅವರಿಗೆ ಭೋಜನ ಮಾಡಿಸಿ ದಕ್ಷಿಣಾ ಪ್ರದಾನ ಮಾಡಿ ಸಂತೋಷಪಡಿಸಬೇಕು. ಅನಂತಪದ್ಮನಾಭನ ಪರಮಾನುಗ್ರಹವು ಇದರಿಂದ ಸಿದ್ಧಿಸುತ್ತದೆ. ಈ ರೀತಿ ಪೂಜೆ ಮಾಡಿದವನಿಗೂ ಕೂಡ ಭೋಗ - ಮೋಕ್ಷಗಳೂ ಲಭ್ಯವಾಗುತ್ತವೆ.

ಅಶ್ವಯುಜ ಕೃಷ್ಣ ಚತುರ್ದಶಿಯ ದಿನ, ಭಾದ್ರಪದ ಬಹುಳ ಚತುರ್ದಶಿ ದಿನಗಳಂದು ವಿಷ, ಶಸ್ತ್ರ, ಜಲ, ಅಗ್ನಿ, ಸರ್ಪ ಇತರ ಕ್ರೂರ ಪ್ರಾಣಿಗಳೂ, ಸಿಡಿಲು ಮುಂತಾದವುಗಳಿಂದ ಸತ್ತವರಿಗೂ, ಬ್ರಹ್ಮಹತ್ಯಾ ಮಾಡಿದವರಿಗೂ ಸದ್ಗತಿಯುಂಟಾಗುವುದಕ್ಕಾಗಿ

ಏಕೋದ್ದಿಷ್ಟವಿಧಿ ಯಿಂದ ಶ್ರಾದ್ಧವನ್ನು ಮಾಡಬೇಕು. ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಬೇಕು. ಆ ದಿನ ತರ್ಪಣ, ಗೋಗ್ರಾಸ, ಕುಕ್ಕುಟ ಬಲಿ, ವಾಯಸ ಬಲಿ ಮೊದಲಾದವುಗಳನ್ನುಕೊಟ್ಟು ಆಚಮನ ಮಾಡಿ ಮನೆಗೆ ಬಂದು ಸಹೋದರ ಬಂಧುಗಳ ಜತೆಗೆ ಭೋಜನ ಮಾಡಬೇಕು. ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಸಂತೋಷ ಪಡಿಸಬೇಕು. ಈ ರೀತಿ ಶ್ರಾದ್ಧ ಮಾಡುವವನು ಪಿತೃಗಳ ಉದ್ಧಾರ ಮಾಡಿ ತಾನೂ. ಸನಾತನ ದೇವಲೋಕವನ್ನು ಹೊಂದುತ್ತಾನೆ.

ದ್ವಿಜಶ್ರೇಷ್ಠನೇ, ಅಶ್ವಯುಜ ಶುಕ್ಲ ಚತುರ್ದಶಿಯ ದಿನ ಧರ್ಮರಾಜನ ಸುವರ್ಣಮಯ ಪ್ರತಿಮೆಯನ್ನು ಮಾಡಿಸಿ ಗಂಧಾದಿಗಳಿಂದ ಅದನ್ನು ವಿಧಿವತ್ತಾಗಿ ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಆ ಪ್ರತಿಮೆಯನ್ನು ದಾನ ಮಾಡಬೇಕು. ನಾರದನೇ! ಈ ವ್ರತವನ್ನು ಮಾಡುವವನನ್ನು ಧರ್ಮರಾಜನು ಸರ್ವದಾ ಕಾಪಾಡುತ್ತಾನೆ. ಆ ವ್ರತಕರ್ತನು ಇಹದಲ್ಲಿ ಸಮಸ್ತ ಭೋಗಗಳನ್ನು ಅನುಭವಿಸಿ ಧರ್ಮರಾಜನ ಆಜ್ಞೆಯಿಂದ ಸ್ವರ್ಗಲೋಕಕ್ಕೆ ಹೋಗುತ್ತಾನೆ. ಕಾರ್ತಿಕ ಬಹುಳ ಚತುರ್ದಶಿಯ ದಿನ ಪ್ರಾತಃಕಾಲ ಚಂದ್ರೋದಯ ಸಮಯದಲ್ಲಿ ಮೈಗೆ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಸ್ನಾನಾನಂತರ ಧರ್ಮರಾಜನ ಪೂಜೆ ಮಾಡಬೇಕು. ಇದರಿಂದ ಮಾನವನಿಗೆ ನರಕಭಯ ದೂರವಾಗುತ್ತದೆ. ಪ್ರದೋಷ ಕಾಲದಲ್ಲಿ ಎಣ್ಣೆಯ ದೀಪವನ್ನು ಹಚ್ಚಿ ಯಮರಾಜನ ಪ್ರಸನ್ನತೆಗಾಗಿ ನಾಲ್ಕು ರಸ್ತೆಗಳು ಸೇರುವ ಚೌಕದಲ್ಲಿ ಅಥವಾ ಮನೆಯ ಹೊರಭಾಗದಲ್ಲಿ ಏಕಾಗ್ರಚಿತ್ತನಾಗಿ ದೀಪದಾನ ಮಾಡಬೇಕು. ಹೇಮಲಂಬಿ ಸಂವತ್ಸರದ ಸಂಪತ್ ಸಮೃದ್ಧವಾದ ಕಾರ್ತಿಕ ಮಾಸ ಬಂದಾಗ ಶುಕ್ಲ ಪಕ್ಷದ ಚತುರ್ದಶಿಯ ದಿನ ಅರುಣೋದಯ ಕಾಲದಲ್ಲಿ ವಿಶ್ವನಾಥನು ಇತರ ದೇವತೆಗಳೊಡನೆ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನ ಮಾಡಿ ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿ ತನ್ನ ಪೂಜೆಯನ್ನು ತಾನೇ ಮಾಡಿಕೊಂಡನು. ಹೀಗೆ ಈ ಪರಮೇಶ್ವರನು ಪಾಶುಪತವ್ರತವನ್ನು ಪಾಲನೆ ಮಾಡಿದ ಆ ದಿವಸದಲ್ಲಿ ಗಂಧಾದಿ ಉಪಚಾರಗಳಿಂದ ಶಿವಲಿಂಗದ ಮಹಾಪೂಜೆಯನ್ನು ಮಾಡಬೇಕು. ದ್ರೋಣಪುಷ್ಪ, ಬಿಲ್ವಪತ್ರ, ಅರ್ಕಪುಷ್ಪ, ಕೇತಕೀ ನಾನಾವಿಧ ಫಲಗಳೂ. ಮಧುರವಾದ ಕಜ್ಜಾಯಗಳು ಇನ್ನೂ ಅನೇಕ ವಿಧ ನೈವೇದ್ಯಗಳಿಂದ ಈಶ್ವರನ ಪೂಜೆಯನ್ನು ಮಾಡಬೇಕು. ಈ ವ್ರತ ಮಾಡಿದವನು ಇಹಪರಗಳಲ್ಲಿ ಬಯಸಿದ ಇಷ್ಟವಸ್ತುಗಳನ್ನೆಲ್ಲಾ ಪಡೆಯುತ್ತಾನೆ.

ಸಮೃದ್ಧಿಯನ್ನು ಅಪೇಕ್ಷಿಸುವ ಮನುಜನು ಆ ದಿನ ಬ್ರಹ್ಮಕೂರ್ಚವ್ರತವನ್ನು ಮಾಡಬೇಕು. ಹಗಲು ಉಪವಾಸ ಮಾಡಬೇಕು, ರಾತ್ರಿ ಪಂಚಗವ್ಯವನ್ನು ಕುಡಿದು ಜಿತೇಂದ್ರಿಯನಾಗಿರಬೇಕು. ಕಪಿಲೆ ಗೋವಿನ ಮೂತ್ರ, ಕಪ್ಪುಗೋವಿನ ಸಗಣಿ, ಬಿಳಿಗೋವಿನ ಹಾಲು, ಕೆಂಪು ಗೋವಿನ ಮೊಸರು, ಬಣ್ಣ ಬಣ್ಣದ ಗೋವಿನ ತುಪ್ಪವನ್ನು ಸೇರಿಸಿ ಕೊನೆಗೆ ಕುಶೋದಕವನ್ನು ಸೇರಿಸಬೇಕು. (ಇದೇ ಪಂಚಗವ್ಯ ಮತ್ತು ಬ್ರಹ್ಮಕೂರ್ಚ, ಹಗಲು ಉಪವಾಸ ಮಾಡಿ ರಾತ್ರಿ ಇದನ್ನು ಕುಡಿಯಬೇಕು) ಅನಂತರ ಪ್ರಾತಃಕಾಲ ದರ್ಭೆಯಿಂದ ಕೂಡಿದ ನೀರಿನಿಂದ ಸ್ನಾನ ಮಾಡಿ ದೇವತಾತರ್ಪಣ ಮಾಡಿ, ಬ್ರಾಹ್ಮಣರನ್ನು ಭೋಜನಾದಿಗಳಿಂದ ಸಂತೋಷಪಡಿಸಿ ತಾನು ಮೌನವಾಗಿ ಭೋಜನ ಮಾಡಬೇಕು. ಈ ಬ್ರಹ್ಮಕೂರ್ಚ ವ್ರತವು ಸಕಲ ಪಾಪಗಳನ್ನು ದೂರ ಮಾಡುತ್ತದೆ. ಬಾಲ್ಯ, ತಾರುಣ್ಯ, ವಾರ್ಧಕ್ಯದಲ್ಲಿ ಮಾಡಿದ ಪಾಪಗಳೆಲ್ಲವೂ ಈ ವ್ರತದಿಂದ ಕೂಡಲೇ ನಾಶವಾಗುತ್ತದೆ.

ನಾರದನೇ! ಅದೇ ದಿನ ಪಾಷಾಣ ವ್ರತವನ್ನು ಹೇಳಿದ್ದಾರೆ. ಹಗಲು ಉಪವಾಸ, ರಾತ್ರಿ ಭೋಜನವು ಈ ವ್ರತದ ಲಕ್ಷಣ. ರಾತ್ರಿ ಗಂಧಾದಿ ಉಪಚಾರಗಳಿಂದ ಗೌರಿಯ ಪೂಜೆ ಮಾಡಿ ಆ ದೇವಿಗೆ ತುಪ್ಪದಲ್ಲಿ ಕರಿದ, ಕಲ್ಲಿನ ಆಕಾರದ ಪತ್ರವನ್ನು ಅರ್ಪಿಸಬೇಕು. ಆ ಪ್ರಸಾದವನ್ನು ತಾನೂ ಸ್ವೀಕರಿಸಬೇಕು. ಶಾಸ್ತ್ರೋಕ್ತ ವಿಧಿಯಿಂದ ಈ ದಿವ್ಯವನ್ನು ಆಚರಿಸಿದ ಮನುಷ್ಯನಿಗೆ ಐಶ್ವರ್ಯ ಸುಖ, ಸೌಭಾಗ್ಯ ಮತ್ತು ದಿವ್ಯ ರೂಪಗಳೂ ಪ್ರಾಪ್ತವಾಗುತ್ತದೆ. ಮಾರ್ಗಶಿರ ಶುಕ್ಲ ಚತುರ್ದಶಿ ಶಿವವ್ರತವನ್ನು ಮಾಡಬೇಕು. ಹಿಂದಿನ ಏಕಭುಕ್ತವನ್ನು ಮಾಡಿ ವ್ರತದ ದಿನ ನಿರಾಹಾರನಾಗಿದ್ದು ಸುವರ್ಣದ ಎತ್ತನ್ನು (ನಂದೀಶ್ವರನನ್ನು) ಪೂಜಿಸಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಮರುದಿನ ಪ್ರಾತಃಕಾಲ ಸ್ನಾನಾದಿಗಳನ್ನು ಮಾಡಿ ಗಂಧ, ಕಮಲ, ಪುಷ್ಪ, ಮಾಲೆ, ಅನುಲೇಪನ ಮೊದಲಾದವುಗಳಿಂದ ಉಮಾಸಹಿತನಾದ ಮಹೇಶ್ವರನ ಪೂಜೆಯನ್ನು ಮಾಡಬೇಕು. ಅದರ ನಂತರ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ದಕ್ಷಿಣಾದಿಗಳಿಂದ ಅವರನ್ನು ಸಂತೋಷಪಡಿಸಬೇಕು. ಈ ಶಿವ ವ್ರತವನ್ನು ಮಾಡುವವರು, ಉಪದೇಶ ಮಾಡುವವರು, ಸಹಾಯಕರು, ಅನುಮೋದನ ಮಾಡುವವರು ಎಲ್ಲರಿಗೂ ಭೋಗ ಮತ್ತು ಮೋಕ್ಷಗಳೂ ಲಭ್ಯವಾಗುತ್ತವೆ. ಪುಷ್ಯ ಶುಕ್ಲ ಚತುರ್ದಶಿ ದಿನ 'ವಿರೂಪಾಕ್ಷ ವ್ರತ' ವನ್ನು ಹೇಳಿದ್ದಾರೆ. ಆ ದಿನ ಪ್ರಾತಃಕಾಲ ನಾನು ಕಪರ್ದೀಶ್ವರ ಸಾಮೀಪ್ಯವನ್ನು ಸೇರುವೆನು' ಎಂದು ಭಾವಿಸುತ್ತ ಸಂಕಲ್ಪಿಸಿ ಆಳವಾದ ನೀರಿನಲ್ಲಿ ಮುಳುಗಿ ಸ್ನಾನ ಮಾಡಬೇಕು. ಗಂಧ, ಮಾಲೆ, ನಮಸ್ಕಾರ, ಧೂಪ, ದೀಪ, ಅನ್ನಸಂಪತ್ತಿಯ ಮೂಲಕ ವಿರೂಪಾಕ್ಷ ಶಿವನ ಪೂಜೆಯನ್ನು ಮಾಡಬೇಕು. ಶಿವನಿಗೆ ಅರ್ಪಿಸಿದ ವಸ್ತುವೆಲ್ಲವನ್ನೂ ಬ್ರಾಹ್ಮಣನಿಗೆ ದಾನ ಮಾಡಿದರೆ ದೇವಲೋಕದಲ್ಲಿ ದೇವತೆಗಳಂತೆ ಭಕ್ತನು ಆನಂದವಾಗಿರುತ್ತಾನೆ. ಮಾಘ ಬಹುಳ ಚತುರ್ದಶಿಯ ದಿನ ಯಮತರ್ಪಣ ಹೇಳಿದ್ದಾರೆ. ಆ ದಿನ ಸೂರ್ಯೋದಯಕ್ಕಿಂತ ಮೊದಲೇ ಸ್ನಾನ ಮಾಡಿ ಸಮಸ್ತ ಪಾಪ ಪರಿಹಾರಕ್ಕಾಗಿ, ಶಾಸ್ತ್ರೋಕ್ತವಾದ ಹದಿನಾಲ್ಕು ನಾಮಗಳಿಂದ ಯಮತರ್ಪಣ ಮಾಡಬೇಕು. ಎಳ್ಳು ದರ್ಭೆ ಮತ್ತು ನೀರಿನಿಂದ ತರ್ಪಣ ಮಾಡಿ ಬ್ರಾಹ್ಮಣರಿಗೆ ಹುಗ್ಗಿಯ ಭೋಜನ ಮಾಡಿಸಿ ತಾನೂ ಮೌನಿಯಾಗಿ ಭೋಜನ ಮಾಡಬೇಕು.

ನಾರದನೇ, ಫಾಲ್ಗುಣ ಬಹುಳ ಚತುರ್ದಶಿ (ಮಾಘ ಬಹುಳ) ದಿನವು 'ಶಿವರಾತ್ರಿವ್ರತ'ವೆಂದು ಖ್ಯಾತಿ ಹೊಂದಿದೆ. ಶಿವಭಕ್ತರು ಆ ದಿನ ಹಗಲು ರಾತ್ರಿ ನಿರ್ಜಲ ಉಪವಾಸವಾಗಿದ್ದು ಗಂಧಾದಿ ಉಪಚಾರಗಳು, ಜಲ, ಬಿಲ್ವಪತ್ರ, ಧೂಪ, ನೈವೇದ್ಯ ಸ್ತೋತ್ರಪಾಠ, ರುದ್ರಜಪ ಮುಂತಾದವುಗಳಿಂದ ಯಾವುದಾದರೊಂದು ಸ್ವಯಂ ಭೂಲಿಂಗ ಅಥವಾ ಪಾರ್ಥಿವ ಲಿಂಗದ ಪೂಜೆಯನ್ನು ಮಾಡಬೇಕು. ಮರುದಿನ ಹಿಂದಿನಂತೆಯೇ ನಾನೋಪಚಾರಗಳಿಂದ ಪೂಜಿಸಿ ಬ್ರಾಹ್ಮಣ ಭೋಜನ ಮಾಡಿಸಿ ದಕ್ಷಿಣಾ ಪ್ರದಾನ ಮಾಡಿ ಕಳುಹಿಸಬೇಕು. ಈ ರೀತಿ ವ್ರತಾನುಷ್ಠಾನ ಮಾಡಿದ ಮಹಾತ್ಮನು ಮಹಾದೇವನ ಕೃಪೆಯಿಂದ ದೇವತೆಗಳಿಂದ ಸನ್ಮಾನಿತನಾಗಿ ದಿವ್ಯಭೋಗಗಳನ್ನು ಪಡೆಯುತ್ತಾನೆ. ಫಾಲ್ಗುಣ ಶುಕ್ಲ ಚತುರ್ದಶಿ ಭಕ್ತಿಪೂರ್ವಕವಾಗಿ ಗಂಧಾದಿ ಉಪಚಾರಗಳಿಂದ ದುರ್ಗೆಯ ಪೂಜೆಯನ್ನು ಮಾಡಿ, ಬ್ರಾಹ್ಮಣ ಭೋಜನ ಮಾಡಿಸಿ ತಾನೂ ಒಂದು ಹೊತ್ತು ಊಟ ಮಾಡಬೇಕು. ಈ ರೀತಿ ದುರ್ಗಾವ್ರತವನ್ನು ಆಚರಿಸುವ ಮಾನವನು ಇಹಲೋಕ-ಪರಲೋಕಗಳಲ್ಲಿ ಅಪೇಕ್ಷಿತ ಭೋಗಗಳನ್ನು ಪಡೆಯುತ್ತಾನೆ. ಚೈತ್ರ ಬಹುಳ ಚತುರ್ದಶಿ ದಿನ

ಉಪವಾಸವಾಗಿದ್ದು ಕೇದಾರ ತೀರ್ಥವನ್ನು ಪ್ರಾಶನ ಮಾಡಿದರೆ ಅಶ್ವಮೇಧ ಯಜ್ಞದ ಫಲವು ಸಿಗುತ್ತದೆ. ಈಗ ಎಲ್ಲಾ ಚತುರ್ದಶಿ ವ್ರತಗಳ ಉದ್ಯಾಪನದ ಸಾಮಾನ್ಯ ವಿಧಿಯನ್ನು ಹೇಳುತ್ತೇನೆ. ಹದಿನಾಲ್ಕು ಕಲಶಗಳು, ಅವೆಲ್ಲಕ್ಕೂ ಅಡಿಕೆ, ವೀಳ್ಯದೆಲೆ, ಅಕ್ಷತೆ, ಮೋದಕ, ವಸ್ತ್ರ, ದಕ್ಷಿಣೆ ಎಲ್ಲವನ್ನೂ ಇಡಬೇಕು.ಕಲಶಗಳು ಹೊಸ ತಾಮ್ರಪಾತ್ರೆ ಅಥವಾ ಮಣ್ಣಿನ ಪಾತ್ರೆಗಳಾಗಿರಬೇಕು. ಹಳೆಯದು ತೂತುಬಿದ್ದಿರುವುದು ಆಗದು. ಬಿದಿರಿನ ಹದಿನಾಲ್ಕು ದಂಡಗಳು, ಅಷ್ಟೇ ಪವಿತ್ರಗಳು. ಆಸನ ಪಾತ್ರ ಮತ್ತು ಯಜ್ಞೋಪವೀತಗಳ ವ್ಯವಸ್ಥೆಯನ್ನು ಮಾಡಬೇಕು. ಉಳಿದ ವಿಷಯಗಳನ್ನು ಆಯಾ ವ್ರತಗಳಿಗೆ ಹೇಗೆ ಹೇಳಿದ್ದಾರೋ ಅದರಂತೆ ಮಾಡಬೇಕು.

## ಹನ್ನೆರಡು ತಿಂಗಳುಗಳ ಹುಣ್ಣಿಮೆ ಮತ್ತು ಅಮಾವಾಸ್ಯೆಗಳ ವ್ರತಗಳು ಮತ್ತು ಅವುಗಳ ಮಹಿಮೆ

**ಸನಾತನರು ಹೇಳುತ್ತಾರೆ:-** ನಾರದನೇ ಕೇಳು, ಈಗ ನಾನು ನಿನಗೆ ಹುಣ್ಣಿಮೆಯ ವ್ರತಗಳ ವರ್ಣನೆಯನ್ನು ಮಾಡುತ್ತೇನೆ. ಸ್ತ್ರೀ-ಪುರುಷರಿಬ್ಬರೂ ಸುಖ ಸಂತತಿಯ ಪ್ರಾಪ್ತಿಗಾಗಿ ಈ ವ್ರತಗಳನ್ನು ಮಾಡಬೇಕು. ವಿಪ್ರವರನೇ ಚೈತ್ರ ಮಾಸದ ಪೂರ್ಣಿಮೆಯು 'ಮನ್ವಾದಿ' ಎಂದು ಪ್ರಸಿದ್ಧವಾಗಿದೆ. ಆ ದಿನ ಚಂದ್ರನ ಪ್ರೀತ್ಯರ್ಥವಾಗಿ ಹಸಿ ಧ್ಯಾನಗಳನ್ನು ಜಲಪೂರ್ಣವಾದ ಕುಂಭವನ್ನು ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು.

ವೈಶಾಖ ಶುಕ್ಲ ಪೂರ್ಣಿಮೆಯ ದಿನ ಬ್ರಾಹ್ಮಣನಿಗೆ ದಾನ ಮಾಡಿದ ವಸ್ತುಗಳೆಲ್ಲವೂ, ದಾನ ಮಾಡಿದವನಿಗೆ ಪುನಃ ನಿಜವಾಗಿಯೂ ಪ್ರಾಪ್ತವಾಗುತ್ತವೆ. ಆ ದಿನ 'ಧರ್ಮರಾಜ' ವ್ರತವಿದೆ. ವೈಶಾಖ ಹುಣ್ಣಿಮೆಯ ದಿನ ಉತ್ತಮ ಬ್ರಾಹ್ಮಣನಿಗೆ ಜಲ ಪೂರ್ಣವಾದ ಕುಂಭವನ್ನು ಮಧುರವಾದ ಕಜ್ಜಾಯವನ್ನು ದಾನ ಮಾಡಬೇಕು. ಅದು ಗೋದಾನದ ಫಲವನ್ನು ಕೊಡುತ್ತದೆ. ಮತ್ತು ಅದರಿಂದ ಧರ್ಮರಾಜನು ಸಂತುಷ್ಟನಾಗುತ್ತಾನೆ. ಯಾವನು ಸ್ವಚ್ಛ ಜಲಪೂರ್ಣವಾದ ಕಲಶಗಳನ್ನು ಸುವರ್ಣ ಸಹಿತವಾಗಿ ಬ್ರಾಹ್ಮಣನಿಗೆ ದಾನ ಕೊಡುತ್ತಾನೋ ಅವನು ಎಂದಿಗೂ ಶೋಕಕ್ಕೆ ಒಳಗಾಗುವುದಿಲ್ಲ. ಜ್ಯೇಷ್ಠಮಾಸದ ಹುಣ್ಣಿಮೆಯ ದಿನ 'ವಟಸಾವಿತ್ರೀ' ವ್ರತವು ಬರುತ್ತದೆ. ಆ ದಿನ ನಾರಿಯು ಉಪವಾಸ ಮಾಡಿ ಅಮೃತದಂತೆ ಮಧುರವಾದ ಜಲದಿಂದ ಆ ಮರಕ್ಕೆ ಸೇಚನ ಮಾಡಿ ದಾರವನ್ನು ಸುತ್ತುತ್ತಾ ಆ ಮರಕ್ಕೆ ಒಂದುನೂರಎಂಟು ಬಾರಿ ಪ್ರದಕ್ಷಿಣೆ ಹಾಕಬೇಕು. ಅನಂತರ ಪರಮ ಪತಿವ್ರತೆಯಾದ ಸಾವಿತ್ರೀ ದೇವಿಯನ್ನು ಕುರಿತು ಪ್ರಾರ್ಥಿಸಬೇಕು.

**ಜಗತ್‌ಪೂಜ್ಯೇ ಜಗನ್ಮಾತಃ ಸಾವಿತ್ರಿ ಪತಿದೈವತೇ ।**
**ಪತ್ಯಾ ಸಹಾಽವಿಯೋಗಂ ಮೇ ವಟಸ್ಥೇ ಕುರು ತೇ ನಮಃ ॥**

ನಾ.ಪೂರ್ವ ೧೨೪-೧೧

''ಜಗನ್ಮಾತೆಯಾದ ಸಾವಿತ್ರಿಯೇ, ನೀನು ಸಮಸ್ತ ಜಗತ್ತಿಗೂ ಪೂಜ್ಯಳಾಗಿದ್ದೀ, ಪತಿಯನ್ನೇ ಇಷ್ಟದೇವತೆಯೆಂದು ತಿಳಿಯುವ ಪತಿವ್ರತೆಯಾಗಿದ್ದೀ. ವಟವೃಕ್ಷ ನಿವಾಸಿಯಾದ ದೇವಿ, ನೀನು ನನ್ನ ಮೇಲೆ ಕೃಪೆ ತೋರು. ನನಗೆ ನನ್ನ ಪತಿಯ ಜೊತೆಗೆ ನಿತ್ಯ ಸಂಯೋಗವಿರಲಿ. ಎಂದೂ ವಿಯೋಗ ಉಂಟಾಗದಿರಲಿ. ನಿನಗೆ ಆದರಪೂರ್ವಕವಾದ

ನಮಸ್ಕಾರಗಳು,'' ಯಾವ ನಾರಿಯು ಈ ರೀತಿ ಪ್ರಾರ್ಥನೆ ಮಾಡಿ ಮರುದಿನ ಸುವಾಸಿನಿ ಸ್ತ್ರೀಯರಿಗೆ ಭೋಜನ ಮಾಡಿಸಿ ಅನಂತರ ತಾನು ಸ್ವತಃ ಭೋಜನ ಮಾಡುತ್ತಾಳೆಯೋ ಅವಳು ಸೌಭಾಗ್ಯವತಿಯಾಗಿರುತ್ತಾಳೆ. ಆಷಾಢದ ಹುಣ್ಣಿಮೆಯ ದಿನ 'ಗೋಪದ್ಮವ್ರತ' ವನ್ನು ವಿಧಿಸಿದ್ದಾರೆ. ಆ ದಿನ ಸ್ನಾನದ ಅನಂತರ ಶ್ರೀಹರಿಯ ರೂಪವನ್ನು ಈ ರೀತಿ ಧ್ಯಾನಿಸಬೇಕು. 'ಪರಮಾತ್ಮನು ಚತುರ್ಭುಜಧಾರಿಯಾಗಿದ್ದಾನೆ. ಅವನ ಶರೀರವು ವಿಶಾಲ, ಉನ್ನತವಾಗಿದೆ. ಅವನ ದೇಹಕಾಂತಿಯು ಜಾಂಬೂನದ ಚಿನ್ನದಂತೆ ಶ್ಯಾಮ ಸುವರ್ಣ ವರ್ಣದಿಂದ ಕೂಡಿದೆ. ಶಂಖ, ಚಕ್ರ, ಗದಾ ಪದ್ಮಗಳು, ಲಕ್ಷ್ಮೀ ಮತ್ತು ಗರುಡರು ಪರಮಾತ್ಮನ ಸುತ್ತಲೂ ವಿರಾಜಿಸುತ್ತಿದ್ದಾರೆ. ದೇವತೆಗಳು, ಮುನಿಗಳು, ಗಂಧರ್ವರು, ಯಕ್ಷರು ಮತ್ತು ಕಿನ್ನರರು ಪರಮಾತ್ಮನ ಸೇವೆಯಲ್ಲಿ ತತ್ಪರರಾಗಿದ್ದಾರೆ,'' ಈ ರೀತಿ ಶ್ರೀಹರಿಯ ಚಿಂತನೆ ಮಾಡಿ ಗಂಧಾದಿ ಉಪಚಾರಗಳಿಂದ ಪುರುಷಸೂಕ್ತ ಮಂತ್ರದಿಂದ ಪರಮಾತ್ಮನ ಪೂಜೆ ಮಾಡಬೇಕು. ಅನಂತರ ವಸ್ತ್ರ ಅಲಂಕಾರ ಮುಂತಾದವುಗಳಿಂದ ಆಚಾರ್ಯನನ್ನು ಸಂತೋಷಗೊಳಿಸಿ, ಪರಮ ಭಕ್ತಿಯಿಂದ ಆಚಾರ್ಯ ಮತ್ತು ಇತರ ಬ್ರಾಹ್ಮಣರಿಗೆ ಯಥಾಶಕ್ತಿಯಾಗಿ ಮಧುರ ಪಕ್ವಾನ್ನಗಳ ಭೋಜನ ಮಾಡಿಸಬೇಕು. ನಾರದನೇ, ಈ ರೀತಿ ವ್ರತವನ್ನು ಮಾಡಿದ ಮಾನವನು ಕಮಲಾಪತಿ ಶ್ರೀ ಹರಿಯ ಪ್ರಸಾದದಿಂದ ಇಹಪರ ಭೋಗಗಳನ್ನು ಪಡೆಯುತ್ತಾನೆ.

ಶ್ರಾವಣ ಮಾಸದ ಹುಣ್ಣಿಮೆಯ ದಿನ 'ವೇದೋಪಾಕರ್ಮ' ವ್ರತವು. ಆ ದಿನ ಯಜುರ್ವೇದಿ ಬ್ರಾಹ್ಮಣರು ದೇವತಾ ಋಷಿ ಪಿತೃಗಳ ತರ್ಪಣವನ್ನು ಮಾಡಬೇಕು. ತನ್ನ ಶಾಖೋಕ್ತವಾದ ವಿಧಿಯಿಂದ ಋಷಿ ಪೂಜೆಯನ್ನು ಮಾಡಬೇಕು. ಋಗ್ವೇದಿಗಳು ಚತುರ್ದಶಿಯ ದಿನ ಮತ್ತು ಸಾಮವೇದಿಗಳು ಭಾದ್ರಪದ ಮಾಸದ ಹಸ್ತ ನಕ್ಷತ್ರದ ದಿನ 'ವೇದೋಪಾಕರ್ಮ' ಮಾಡಿಕೊಳ್ಳಬೇಕು. ಆ ದಿನ ರಕ್ಷಾಬಂಧನವನ್ನು ಮಾಡಿಕೊಳ್ಳಬೇಕು. ಕೆಂಪಾದ ಬಟ್ಟೆಯ ಒಂದು ಭಾಗದಲ್ಲಿ ಸಾಸಿವೆ ಮತ್ತು ಅಕ್ಷತೆಯನಿಟ್ಟು ಅದನ್ನು ಕೆಂಪಾದ ದಾರದಿಂದ ಕಟ್ಟಬೇಕು. ಇದೇ ರಕ್ಷೆಯು, ಅದನ್ನು ನೀರಿನಿಂದ ಒದ್ದೆ ಮಾಡಿ ಕಂಚಿನ ಪಾತ್ರೆಯಲ್ಲಿಡಬೇಕು. ಅದರಲ್ಲಿ ಗಂಧ ಪುಷ್ಪಾದಿ ಉಪಚಾರಗಳಿಂದ ಶ್ರೀ ವಿಷ್ಣು ಮೊದಲಾದ ದೇವತೆಗಳ ಪೂಜೆಯನ್ನು ಮಾಡಿ ಅವರನ್ನು ಪ್ರಾರ್ಥಿಸಬೇಕು. ಅನಂತರ ಬ್ರಾಹ್ಮಣನಿಗೆ ನಮಸ್ಕಾರ ಮಾಡಿ ಅವನ ಕೈಯಿಂದ ತನ್ನ ಮಣಿಗಂಟಿನಲ್ಲಿ ಸಂತೋಷಪೂರ್ವಕವಾಗಿ ಆ ರಕ್ಷಾಗ್ರಂಥಿಯನ್ನು ಕಟ್ಟಿಸಿಕೊಳ್ಳಬೇಕು. ಅನಂತರ ಬ್ರಾಹ್ಮಣರಿಗೆ ದಕ್ಷಿಣಾ ಪ್ರದಾನ ಮಾಡಿ, ವೇದಾಧ್ಯಯನ ಮಾಡಿ ಸಪ್ತರ್ಷಿಗಳ ಪೂಜೆಯನ್ನು ಮಾಡಬೇಕು. ಕುಂಕುಮ, ಅರಿಶಿನ ಮುಂತಾದವುಗಳಿಂದ ಅಲಂಕೃತವಾದ ಪರಮಾತ್ಮನಿಗೆ ಮತ್ತು ಋಷಿಗಳಿಗೆ ಸಮರ್ಪಿಸಿ ಧರಿಸಿ, ಋಷಿಗಳನ್ನು ವಿಸರ್ಜಿಸಬೇಕು. ನಾರದನೇ, ಉತ್ತಮ ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನ ಮಾಡಿಸಿ ತಾನೂ ಒಂದು ಹೊತ್ತು ಊಟ ಮಾಡಬೇಕು. ಬ್ರಾಹ್ಮಣವರ್ಯನೇ, ಈ ವ್ರತವನ್ನು ಮಾಡಿದವನು ವರ್ಷದಲ್ಲಿ ಪೂರ್ತಿಯಾಗಿ ಮಾಡುವ ಕೆಲವು ವೈದಿಕ ಕರ್ತವ್ಯಗಳನ್ನು ಮರೆತರೂ, ಅಥವಾ ಅವುಗಳಲ್ಲಿ ನ್ಯೂನತೆ, ಹೀನತೆ ಬಂದರೂ ಅದೆಲ್ಲವೂ ಸಂಪೂರ್ಣತೆಯನ್ನು ಹೊಂದುತ್ತವೆ.

ಭಾದ್ರಪದ ಮಾಸದ ಹುಣ್ಣಿಮೆಯ ದಿನ 'ಉಮಾ ಮಹೇಶ್ವರ' ವ್ರತವು ಬರುತ್ತದೆ. ಅದರ ಹಿಂದಿನ ದಿನ ಏಕಭುಕ್ತವನ್ನು ಮಾಡಿ ಶಿವಪಾರ್ವತಿಯರನ್ನು ಪೂಜಿಸಿ ಕೈ ಮುಗಿದು ಹೀಗೆ

ಪ್ರಾರ್ಥಿಸಬೇಕು. 'ಪ್ರಭುವೇ, ನಾನು ನಾಳೆ ನಿನ್ನ ಪ್ರೀತ್ಯರ್ಥವಾಗಿ ವ್ರತವನ್ನು ಮಾಡುವೆನು' ಈ ರೀತಿ ಪರಮಾತ್ಮನಲ್ಲಿ ನಿವೇದಿಸಿ ರಾತ್ರಿ ದೇವತಾ ಸನ್ನಿಧಾನದಲ್ಲಿಯೇ ಮಲಗಿ ರಾತ್ರಿಯ ಕೊನೆಯ ಯಾಮದಲ್ಲಿ ಎದ್ದು ಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮ ಗಳನ್ನು ಪೂರೈಸಿ, ವಿಶೇಷತಃ ಭಸ್ಮರುದ್ರಾಕ್ಷಮಾಲಾದಿಗಳನ್ನು ಧರಿಸಬೇಕು. ಅನಂತರ ಉತ್ತಮ ಗಂಧ, ಬಿಲ್ವಪತ್ರಿ, ಧೂಪ, ದೀಪ ಮತ್ತು ನೈವೇದ್ಯ ಮೊದಲಾದ ಬೇರೆ ಬೇರೆ ಉಪಚಾರಗಳಿಂದ ಉಮಾಸಹಿತನಾದ ಶಂಕರನ ಪೂಜೆಯನ್ನು ಮಾಡಬೇಕು, ಆ ದಿನ ಪ್ರಾತಃಕಾಲದಿಂದ ಸಾಯಂಕಾಲದವರೆಗೂ ಉಪವಾಸ ಮಾಡಬೇಕು. ಚಂದ್ರೋದಯ ಸಮಯ ದಲ್ಲಿ ಪುನಃ ಪೂಜೆಯನ್ನು ಮಾಡಿ ಅಲ್ಲಿಯೇ ದೇವರ ಸಮೀಪದಲ್ಲಿ ರಾತ್ರಿ ಜಾಗರಣ ಮಾಡಬೇಕು.

ಈ ರೀತಿ ಪ್ರತಿವರ್ಷವೂ ಸೋಮಾರಿತನವಿಲ್ಲದೆ ಪೂಜೆ ಮಾಡುತ್ತಾ ಹದಿನೈದು ವರ್ಷಗಳವರೆಗೆ ಈ ವ್ರತವನ್ನು ನಡೆಸಬೇಕು. ಅನಂತರ ವಿಧಿಪೂರ್ವಕವಾಗಿ ವ್ರತದ ಉದ್ಯಾಪನ ಮಾಡಬೇಕು. ಆ ಸಮಯದಲ್ಲಿ ಉಮಾ ಮತ್ತು ಶಂಕರರ ಚಿನ್ನದ ಎರಡು ಪ್ರತಿಮೆಗಳನ್ನು ಮಾಡಿಸಬೇಕು. ಶಕ್ತಿಗನುಸಾರವಾಗಿ ಚಿನ್ನ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಹದಿನೈದು ಉತ್ತಮ ಕಲಶಗಳನ್ನು ಸ್ಥಾಪಿಸಬೇಕು. ಒಂದು ಕಲಶದ ಮೇಲೆ ವಸ್ತ್ರ ಸಹಿತವಾಗಿ ಉಮಾಮಹೇಶ್ವರರ ಪ್ರತಿಮೆಯನ್ನು ಸ್ಥಾಪಿಸಬೇಕು. ಆ ಪ್ರತಿಮೆಗಳಿಗೆ ಪಂಚಾಮೃತದಿಂದ ಸ್ನಾನ ಮಾಡಿಸಿ ಪುನಃ ಶುದ್ಧಜಲಾಭಿಷೇಕ ಮಾಡಬೇಕು. ಅನಂತರ ಷೋಡಶೋಪಚಾರಗಳಿಂದ ಉಮಾ ಮಹೇಶ್ವರನನ್ನು ಪೂಜಿಸಿ ನೈವೇದ್ಯವನ್ನು ನೀಡಬೇಕು. ಹದಿನೈದು ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಅವರಿಗೆ ದಕ್ಷಿಣೆ ಸಹಿತ ಒಂದೊಂದು ಕಲಶವನ್ನು ದಾನವಾಗಿ ಕೊಡಬೇಕು. ಉಮಾ ಶಂಕರರ ಮೂರ್ತಿಯಿಂದ ಕೂಡಿದ ಕಲಶವನ್ನು ಆಚಾರ್ಯನಿಗೆ ಅರ್ಪಿಸಬೇಕು. ಈ ರೀತಿಯ ಉಮಾ ಮಹೇಶ್ವರ ವ್ರತವನ್ನು ಅನುಷ್ಠಾನ ಮಾಡಿದ ಮನುಷ್ಯನು ಈ ಭೂಮಂಡಲದಲ್ಲಿ ಪ್ರಖ್ಯಾತನಾಗುತ್ತಾನೆ, ಅವನು ಸಮಸ್ತ ಸಂಪತ್ತುಗಳಿಗೂ ಕುಬೇರನ ನಿಧಿಯಂತೆ ಆಶ್ರಯನಾಗುತ್ತಾನೆ. ಅದೇ ದಿನ 'ಶಕ್ರವ್ರತ'ವನ್ನು ವಿಧಾನಮಾಡಿದ್ದಾರೆ. ಪ್ರಾತಃಕಾಲ ಸ್ನಾನ ಮಾಡಿ ವಿಧಿಪೂರ್ವಕವಾಗಿ ಗಂಧಾದಿ ಉಪಚಾರಗಳಿಂದ ಮತ್ತು ನೈವೇದ್ಯರಾಶಿಗಳಿಂದ ಇಂದ್ರನ ಪೂಜೆಯನ್ನು ಮಾಡಬೇಕು. ಆಮಂತ್ರಿತ ಬ್ರಾಹ್ಮಣರಿಗೆ ವಿಧಿವತ್ತಾಗಿ ಭೋಜನ ಮಾಡಿಸಿ ಅಲ್ಲಿ ಬಂದಿರುವ ಬೇರೆ ಜನರಿಗೂ, ದೀನ ಮತ್ತು ಅನಾಥರಿಗೂ, ಅದೇ ರೀತಿ ಭೋಜನ ಮಾಡಿಸಬೇಕು. ವಿಪ್ರವರನೇ, ಧನಧಾನ್ಯ ಸಿದ್ಧಿಯನ್ನು ಬಯಸುವ ರಾಜ ಅಥವಾ ಧನಿಕನು ಈ 'ಶಕ್ರವ್ರತ'ವನ್ನು ಪ್ರತಿವರ್ಷವೂ ಮಾಡಬೇಕು. ಆಶ್ವಯುಜಮಾಸದ ಹುಣ್ಣಿಮೆಯ ದಿನ 'ಕೋಜಾಗರ' ವ್ರತವು ಬರುತ್ತದೆ. ಆ ದಿನ ವಿಧಿಪೂರ್ವಕವಾಗಿ ಸ್ನಾನ ಮಾಡಿ ಉಪವಾಸವಾಗಿರಬೇಕು. ತಾಮ್ರ ಅಥವಾ ಮಣ್ಣಿನ ಕಲಶದ ಮೇಲೆ ವಸ್ತ್ರಾಚ್ಛಾದಿತವಾದ ಲಕ್ಷ್ಮಿಯ ಪ್ರತಿಮೆಯನ್ನಿಟ್ಟು ಬೇರೆ ಬೇರೆ ಉಪಚಾರಗಳಿಂದ ಲಕ್ಷ್ಮಿಯನ್ನು ಪೂಜಿಸಬೇಕು. ಅನಂತರ ಸಾಯಂಕಾಲ ಚಂದ್ರೋದಯವಾದಾಗ ಚಿನ್ನ, ಬೆಳ್ಳಿ ಅಥವಾ ಮಣ್ಣಿನ ಹಣತೆಗಳಲ್ಲಿ ತುಪ್ಪದಿಂದ ಒಂದು ನೂರು ದೀಪಗಳನ್ನು ಉರಿಸಬೇಕು. ಅನಂತರ ತುಪ್ಪ ಮತ್ತು ಸಕ್ಕರೆ ಸೇರಿಸಿ ದಿವ್ಯ ಖೀರನ್ನು ತಯಾರಿಸಿ ಅನೇಕ ಪಾತ್ರೆಗಳಲ್ಲಿ ಅದನ್ನು ತುಂಬಿ ಬೆಳದಿಂಗಳಲ್ಲಿಡಬೇಕು. ಒಂದು ಯಾಮವು ಕಳೆದ ಮೇಲೆ ಅದೆಲ್ಲವನ್ನೂ ಲಕ್ಷ್ಮೀದೇವಿಗೆ ಸಮರ್ಪಿಸಬೇಕು. ಅನಂತರ ಭಕ್ತಿಪೂರ್ವಕವಾಗಿ ವಿದ್ವಾಂಸರಿಗೆ

ಆ ಕ್ಷೀರಪಾಯಸದ ಊಟಮಾಡಿಸಿ, ಆ ಬ್ರಾಹ್ಮಣರ ಜೊತೆಗೆ ಮಂಗಲಗೀತ, ಇತರ ಮಂಗಲಕರವಾದ ಸ್ತೋತ್ರಪಾಠ ಇತ್ಯಾದಿ ಕಾರ್ಯಕ್ರಮಗಳಿಂದ ಲಕ್ಷ್ಮೀಪೂಜೆ ಯನ್ನು ಮಾಡಿ ರಾತ್ರಿ ಜಾಗರಣಮಾಡಬೇಕು. ಅರುಣೋದಯಕಾಲದಲ್ಲಿ ಸ್ನಾನ ಮಾಡಿ ಆ ಸುವರ್ಣಲಕ್ಷ್ಮೀ ಪ್ರತಿಮೆಯನ್ನು ಆಚಾರ್ಯನಿಗೆ ಅರ್ಪಿಸಬೇಕು. ಆ ದಿನ ರಾತ್ರಿ ಮಹಾಲಕ್ಷ್ಮಿಯು ತನ್ನ ಎರಡು ಕರಕಮಲಗಳಲ್ಲಿ ವರ ಮುದ್ರಾ ಮತ್ತು ಅಭಯ ಮುದ್ರಾ ಸಹಿತಳಾಗಿ ಮಧ್ಯರಾತ್ರಿಯಲ್ಲಿ ಭೂಮಂಡಲದಲ್ಲಿ ಸಂಚರಿಸುತ್ತಾ ಇರುತ್ತಾಳೆ. ಮತ್ತು ಮನಸ್ಸಿನಲ್ಲಿ ಸಂಕಲ್ಪ ಮಾಡುತ್ತಾ, ಮತ್ತು ಹೀಗೆ ಹೇಳುತ್ತಲೂ ಇರುತ್ತಾಳೆ. ''ಈಗ ಭೂಮಿಯಲ್ಲಿ ಯಾವನು ಎಚ್ಚರವಾಗಿದ್ದಾನೆ (ಕೋಜಾಗರ್ತಿ?) ಎಚ್ಚರವಾಗಿದ್ದು ನನ್ನ ಪೂಜೆಯನ್ನು ಮಾಡುವ ಆ ಮಾನವನಿಗೆ ನಾನು ಧನವನ್ನು ಕೊಡುವೆನು'' ಇಂತಹ ಮಹಾಲಕ್ಷ್ಮೀ ಪ್ರೀತಿಕರವಾದ ಕೋಜಾಗರ ವ್ರತವನ್ನು ಪ್ರತಿವರ್ಷವೂ ಮಾಡಬೇಕು, ಇದರಿಂದ ಆ ಮಂಗಲದೇವತೆಯು ಸಂತುಷ್ಟಳಾಗಿ ಇಹಲೋಕದಲ್ಲಿ ಸಮೃದ್ಧಿ ಮತ್ತು ದೇಹಾವಸಾನದಲ್ಲಿ ಉತ್ತಮ ಗತಿ ಇವುಗಳನ್ನು ಕೊಡುತ್ತಾಳೆ.

ಕಾರ್ತಿಕ ಪೂರ್ಣಿಮೆಯ ದಿನ ಬ್ರಾಹ್ಮಣತ್ವ ಪ್ರಾಪ್ತಿ ಮತ್ತು ಸಮಸ್ತಶತ್ರುಗಳ ವಿಜಯದ ಸಿದ್ಧಿಗಾಗಿ ಕಾರ್ತಿಕೇಯ ಸುಬ್ರಹ್ಮಣ್ಯನ ದರ್ಶನ ಮಾಡಬೇಕು. ಅದೇ ದಿನ ಪ್ರದೋಷಕಾಲದಲ್ಲಿ ಅನೇಕ ದೀಪಗಳನ್ನು ಹಚ್ಚಿಟ್ಟರೆ ಎಲ್ಲ ಜೀವರಿಗೂ ಸುಖವುಂಟಾಗುತ್ತದೆ. ಈ ದೀಪೋತ್ಸವವನ್ನು ತ್ರಿಪುರೋತ್ಸವ ಎಂದು ಹೇಳುತ್ತಾರೆ. ಆ ದಿನ ದೀಪದರ್ಶನಮಾಡಿದ ಹುಳುಗಳು, ಚಿಟ್ಟೆಗಳು, ಸೊಳ್ಳೆಗಳು ಗಿಡಮರಗಳು ಮತ್ತು ಜಲಸ್ಥಲವಾಸಿಗಳಾದ ಇತರ ಜೀವರಾಶಿಗಳೂ ಪುನರ್ಜನ್ಮವನ್ನು ಹೊಂದುವುದಿಲ್ಲ. ಅವುಗಳಿಗೆ ಮೋಕ್ಷವೇ ಉಂಟಾಗುತ್ತದೆ. ನಾರದನೇ, ಆ ದಿನ ಚಂದ್ರೋದಯ ಸಮಯದಲ್ಲಿ ಆರುಮಂದಿ ಕೃತ್ತಿಕಾ ದೇವತೆಗಳನ್ನು, ಖಡ್ಗಧಾರಿಯಾದ ಕೃತ್ತಿಕಾಪುತ್ರ ಕಾರ್ತಿಕೇಯ ಸುಬ್ರಹ್ಮಣ್ಯನನ್ನು ವರುಣ ಮತ್ತು ಅಗ್ನಿಯನ್ನು ಗಂಧ, ಪುಷ್ಪ, ಧೂಪ, ದೀಪ ಹಾಗೂ ಮಹತ್ತಾದ ನೈವೇದ್ಯರಾಶಿ ಅನ್ನ, ಫಲ, ವಿವಿಧಶಾಕಗಳು ಮುಂತಾದವುಗಳಿಂದ ಪೂಜಿಸಿ, ಹೋಮವನ್ನು ಮಾಡಿ, ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಈ ದೇವತಾಪೂಜೆಯ ಅನಂತರ ಮನೆಯ ಹೊರಗಡೆ ದೀಪಗಳನ್ನಿಡಬೇಕು. ದೀಪಗಳ ಹತ್ತಿರವೇ ಸುಂದರವಾದ ಚಚ್ಚೌಕವಾಗಿರುವ ಹಳ್ಳ (ಗುಂಡಿಯನ್ನು) ತೋಡಬೇಕು. ಅದರ ಉದ್ದ ಅಗಲ ಮತ್ತು ಆಳಗಳು ಹದಿನಾಲ್ಕು ಅಂಗುಲಗಳಿರಬೇಕು. ಅನಂತರ ಅದನ್ನು ಸುವಾಸನೆಯುಳ್ಳ ಚಂದನ ಜಲದಿಂದ ಚಿಮಕಿಸಬೇಕು. ಆ ಹಳ್ಳದಲ್ಲಿ ಪೂರ್ತಿಯಾಗಿ ಹಸುವಿನ ಹಾಲನ್ನು ಭರ್ತಿಮಾಡಬೇಕು. ಅದರಲ್ಲಿ ಸರ್ವಾಂಗ ಸುಂದರವಾದ ಸುವರ್ಣಮಯ ಮತ್ಸ್ಯವನ್ನು ಹಾಕಬೇಕು. ಆ ಮೀನಿನ ಕಣ್ಣುಗಳನ್ನು ಮುತ್ತಿನಿಂದ ಮಾಡಿರಬೇಕು. ಅನಂತರ 'ಮಹಾಮತ್ಸ್ಯಾಯನಮಃ' ಎಂದು ಹೇಳುತ್ತ ಗಂಧಾದಿ ಷೋಡಶೋಪಚಾರ ಪೂಜೆಗಳಿಂದ ಆ ಮತ್ಸ್ಯವನ್ನು ಚೆನ್ನಾಗಿ ಪೂಜಿಸಿ, ಉತ್ತಮ ಬ್ರಾಹ್ಮಣನನ್ನು ಆಹ್ವಾನಿಸಿ ಆ ಮತ್ಸ್ಯವನ್ನು ದಾನವಾಗಿ ಕೊಡಬೇಕು. ದ್ವಿಜಶ್ರೇಷ್ಠನೇ, ಇದೇ ಕ್ಷೀರಸಾಗರದಾನ, ಇದರ ವಿಧಿಯನ್ನು ಯಥಾವತ್ತಾಗಿ ನಿನಗೆ ಹೇಳಿದ್ದೇನೆ. ಈ ವ್ರತದಾನಗಳ ಪ್ರಭಾವದಿಂದ ಮನುಷ್ಯನು ವಿಷ್ಣುವಿನ ಸಮೀಪದಲ್ಲಿ ಆನಂದವನ್ನು ಅನುಭವಿಸುತ್ತ ಇರುತ್ತಾನೆ.

ನಾರದನೇ, ಇದೇ ಹುಣ್ಣಿಮೆಯ ದಿನ 'ವೃಷೋತ್ಸರ್ಗ'ವ್ರತ ಮತ್ತು 'ನಕ್ಷತ್ರವ್ರತ' ಮಾಡಿದ ಮಾನವನು ರುದ್ರಲೋಕವನ್ನು ಪಡೆಯುತ್ತಾನೆ. ಮಾರ್ಗಶಿರ ಮಾಸದ ಹುಣ್ಣಿಮೆಯ ದಿನ ಶಾಂತಸ್ವಭಾವವುಳ್ಳ ಬ್ರಾಹ್ಮಣನಿಗೆ ಸುವರ್ಣಸಹಿತವಾಗಿ ಒಂದು ಆಢಕ ಉಪ್ಪನ್ನು ದಾನವಾಗಿ ಕೊಡಬೇಕು. (ಆಢಕಂ ಸುಮಾರು ನಾಲ್ಕು ಸೇರು ತೂಕ) ಇದರಿಂದ ಎಲ್ಲ ಮನೋರಥಗಳ ಸಿದ್ಧಿಯುಂಟಾಗುತ್ತದೆ. ಪುಷ್ಯಮಾಸದ ಹುಣ್ಣಿಮೆಯ ದಿನ ಪುಷ್ಯ ನಕ್ಷತ್ರಯೋಗವಿದ್ದಾಗ ಸಮಸ್ತ ಸೌಭಾಗ್ಯವೃದ್ಧಿಗೋಸ್ಕರ ಹಳದಿ ಸಾಸಿವೆಯ ಲೇಪದಿಂದ ತನ್ನ ಶರೀರವನ್ನು ಲೇಪಿಸಕೊಂಡು ಎಲ್ಲ ಗಿಡಮೂಲಿಕೆಗಳ ಸಾರದಿಂದ ಕೂಡಿದ ಜಲದಿಂದ ಸ್ನಾನಮಾಡಬೇಕು. ಸ್ನಾನಾನಂತರ ಎರಡು ನೂತನ ವಸ್ತ್ರಗಳನ್ನುಟ್ಟು ಮಂಗಳದ್ರವ್ಯಗಳ ದರ್ಶನ ಮತ್ತು ಸ್ಪರ್ಶಮಾಡಿ ವಿಷ್ಣು, ಇಂದ್ರ, ಚಂದ್ರ, ಪುಷ್ಯ ಮತ್ತು ಬೃಹಸ್ಪತಿಗಳಿಗೆ ನಮಸ್ಕಾರ ಮಾಡಿ ಗಂಧಾದಿ ಹದಿನಾರು ಉಪಚಾರಗಳಿಂದ ಆ ದೇವತೆಗಳನ್ನು ಪೂಜಿಸಿ, ಅನಂತರ ಹೋಮವನ್ನು ಮಾಡಬೇಕು. ಬ್ರಾಹ್ಮಣರಿಗೆ ಕ್ಷೀರಭೋಜನ ಮಾಡಿಸಿ, ತೃಪ್ತಿಯನ್ನುಂಟುಮಾಡಬೇಕು. ವಿಪ್ರವರನೇ, ಲಕ್ಷ್ಮೀಪ್ರೀತಿಕರವಾದ, ದಾರಿದ್ರ್ಯ ನಾಶಕವಾದ ಈ ವ್ರತವನ್ನು ಅನುಷ್ಠಾನಮಾಡಿದ ಮಾನವನು ಇಹಲೋಕ ಮತ್ತು ಪರಲೋಕಗಳಲ್ಲಿ ಆನಂದವನ್ನು ಪಡೆಯುತ್ತಾನೆ.

ಮಾಘಮಾಸದ ಹುಣ್ಣಿಮೆಯ ದಿನ ಎಳ್ಳು, ಹತ್ತಿಯ ಬಟ್ಟೆ, ಕಂಬಳಿ, ರತ್ನ ಕಂಚುಕ, ಅಂಗಿ, ಪೇಟಾ (ಟೋಪಿ) ಚಪ್ಪಲಿ ಮೊದಲಾದವುಗಳನ್ನು ತನ್ನ ಸಂಪತ್ತಿಗನುಸಾರ ದಾನ ಮಾಡಿದ ಮನುಷ್ಯನು ಸ್ವರ್ಗಲೋಕದಲ್ಲಿ ಸುಖವಾಗಿರುತ್ತಾನೆ. ಆ ದಿನ ಶಂಕರ ಮಹಾದೇವನ ಪೂಜೆಯನ್ನು ವಿಧಿವತ್ತಾಗಿ ಮಾಡಿದವನು ಅಶ್ವಮೇಧ ಯಜ್ಞದ ಫಲವನ್ನು ಪಡೆದು ವಿಷ್ಣುಲೋಕದಲ್ಲಿ ಪ್ರತಿಷ್ಠೆಯನ್ನು ಪಡೆಯುತ್ತಾನೆ. ಫಾಲ್ಗುಣ ಮಾಸದ ಹುಣ್ಣಿಮೆಯ ದಿನ ಎಲ್ಲ ರೀತಿಯ ಕಟ್ಟಿಗೆ, ಸೋಗೆ, ಬೆರಣಿಗಳನ್ನು ಸಂಗ್ರಹಿಸಬೇಕು, ಅಗ್ನಿ ಪ್ರತಿಷ್ಠೆಯನ್ನು ಮಾಡಿ ರಕ್ಷೋಘ್ನಮಂತ್ರಗಳ ಮೂಲಕ ಅಗ್ನಿಯಲ್ಲಿ ಹೋಮಮಾಡಿ ಹೋಲಿಕಾರಾಕ್ಷಸಿಯ ಮೇಲೆ (ಹೋಳಿಗೆ ಅಥವಾ ಚಿತ್ರರೂಪದಲ್ಲಿದ್ದ ರಾಕ್ಷಸಿಯನ್ನು ಅಗ್ನಿಯಲ್ಲಿ ಹಾಕಿ) ಅವಳ ಮೇಲೆ ಕಟ್ಟಿಗೆ ಬೆರಣಿಗಳನ್ನು ಹಾಕಬೇಕು. ಹೋಳಿಸುಡುತ್ತಾ ಇರುವಾಗ ಅದಕ್ಕೆ ಪ್ರದಕ್ಷಿಣೆ ಬರಬೇಕು. ಅನಂತರ ಗೀತನೃತ್ಯಾದಿಗಳಿಂದ ಉತ್ಸವ ಮಾಡಬೇಕು. ಈ ಹೋಲಿಕಾ ರಾಕ್ಷಿಸಿಯು ಪ್ರಹ್ಲಾದನಿಗೆ ಭಯವನ್ನುಂಟುಮಾಡಿರುವ ರಾಕ್ಷಸಿಯು. ಆದ್ದರಿಂದ ಗೀತಾದಿ ಮಂಗಳ ವೈಭವದಿಂದ ಅವಳನ್ನು ಸುಡುತ್ತಾರೆ. ಕೆಲವು ಜನರ ಅಭಿಪ್ರಾಯದಂತೆ ಆ ದಿವಸ ಕಾಮದಹನೋತ್ಸವವನ್ನು ನಡೆಸಬೇಕು.

ಈಶ್ವರನು ತನ್ನ ಸಮಾಧಿಭಂಗಕ್ಕಾಗಿ ಬಂದ ಮನ್ಮಥನನ್ನು ದಹಿಸಿದ ಸ್ಮರಣಾರ್ಥವಾಗಿ ಆ ದಿನ ಕಾಮದಹನೋತ್ಸವವನ್ನು ಆಚರಿಸುತ್ತಾರೆ. ಪಕ್ಷದ ಕೊನೆಯ ತಿಥಿಗಳು ಎರಡು ವಿಧವಾಗಿರುತ್ತವೆ. ಹುಣ್ಣಿಮೆ ಮತ್ತು ಅಮಾವಾಸ್ಯೆ. ಎರಡು ತಿಥಿಗಳಿಗೂ ದೇವತೆಗಳು ಬೇರೆ ಬೇರೆಯಾಗಿರುತ್ತಾರೆ. ಆದುದರಿಂದ ಅಮಾವಾಸ್ಯೆಯ ವ್ರತಗಳನ್ನು ಪ್ರತ್ಯೇಕವಾಗಿ ಹೇಳುತ್ತೇವೆ. ನಾರದನೇ, ಕೇಳು ಅಮಾವಾಸ್ಯೆಯು ಪಿತೃಗಳಿಗೆ ಅತ್ಯಂತ ಪ್ರೀತಿಕರವಾದುದು. ಚೈತ್ರ ಮತ್ತು ವೈಶಾಖಗಳ ಅಮಾವಾಸ್ಯೆಯ ದಿನ ಪಿತೃಪೂಜೆ ಮತ್ತು ಧನ ವೈಭವಕ್ಕೆ ಅನುಸಾರವಾಗಿ ಶ್ರಾದ್ಧ, ಬ್ರಾಹ್ಮಣಭೋಜನ ವಿಶೇಷವಾಗಿ ಗೋವು ಮುಂತಾದ್ದರ ದಾನ ಈ ಎಲ್ಲ ಕಾರ್ಯಗಳೂ ಅವಶ್ಯವಾಗಿ ನಡೆಸಬೇಕಾದವುಗಳು, ಎಲ್ಲ ಅಮಾವಾಸ್ಯೆಗಳಲ್ಲಿಯೂ

ಇವು ಅತ್ಯಂತ ಪುಣ್ಯದಾಯಕವಾದ ಕಾರ್ಯಗಳು, ಪಿತೃಪ್ರೀತಿಯನ್ನುಂಟು ಮಾಡುತ್ತವೆ. ನಾರದನೇ, ಜ್ಯೇಷ್ಠಮಾಸದ ಅಮಾವಾಸ್ಯೆಯ ದಿನ 'ಬ್ರಹ್ಮಸಾವಿತ್ರೀವ್ರತವಿದೆ. ಜ್ಯೇಷ್ಠಮಾಸದ ಹುಣ್ಣಿಮೆಯ ದಿನದ ವ್ರತದಂತೆಯೇ ಇದನ್ನು ನಡೆಸಬೇಕು. ಆಷಾಢ, ಶ್ರಾವಣ ಮತ್ತು ಭಾದ್ರಪದ ಮಾಸಗಳಲ್ಲಿ ಅಮಾವಾಸ್ಯೆಯ ದಿನ ಪಿತೃಶ್ರಾದ್ಧ, ದಾನ, ಹೋಮ ಮತ್ತು ದೇವಪೂಜಾ ಕಾರ್ಯಗಳು ಪಿತೃಗಳಿಗೆ ಅಕ್ಷಯ ತೃಪ್ತಿಯನ್ನುಂಟು ಮಾಡುತ್ತವೆ. ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಮಧ್ಯಾಹ್ನ ಎಳ್ಳಿನ ಹೊಲದಲ್ಲಿ ಬೆಳೆದಿರುವ ದರ್ಭೆಗಳನ್ನು ಬ್ರಹ್ಮದೇವರ ಮಂತ್ರದಿಂದ ಆಮಂತ್ರಿಸಬೇಕು.

ವಿರಿಂಚಿನಾ ಸಹೋತ್ಪನ್ನ ಪರಮೇಷ್ಠಿನ್ ನಿಸರ್ಗಜ ।
ನುದ ಸರ್ವಾಣಿ ಪಾಪಾನಿ ದರ್ಭ ಸ್ವಸ್ತಿ ಕರೋ ಭವ ॥

ದರ್ಭವೇ, ನೀನು ಬ್ರಹ್ಮದೇವರ ಜತೆಗೆ ಉತ್ಪನ್ನನಾಗಿದ್ದೀ. ಸಾಕ್ಷಾತ್ ಪರಮೇಷ್ಠೀ ಬ್ರಹ್ಮನ ಸನ್ನಿದಾನ ಪಾತ್ರನಾಗಿದ್ದೀ. ನೀನು ಸ್ವಭಾವತಃ ಆವಿರ್ಭೂತನಾಗಿದ್ದೀ. ನಮ್ಮ ಎಲ್ಲ ಪಾಪಗಳನ್ನು ಪರಿಹರಿಸು. ನಮಗೆ ಮಂಗಳವನ್ನು ಮಾಡು. ಈ ರೀತಿ ಪ್ರಾರ್ಥನೆ ಮಾಡಿ 'ಹುಂಫಟ್' ಎಂದು ಉಚ್ಚರಿಸುತ್ತ ದರ್ಭೆಯನ್ನು ಕಿತ್ತಿ ರಕ್ಷಿಸಿ ಇಟ್ಟುಕೊಳ್ಳ ಬೇಕು. ಇದನ್ನು ಎಲ್ಲಾ ಕಾರ್ಯಗಳಿಗೂ ಉಪಯೋಗಿಸಬೇಕು. ಬೇರೆ ದರ್ಭೆಗಳನ್ನು ಕಿತ್ತಮೇಲೆ ಒಂದೇ ಸಮಯದಲ್ಲಿ ಒಂದು ಕಾರ್ಯಕ್ಕೆ ಮಾತ್ರ ಉಪಯೋಗಿಸಬೇಕು.

ಆಶ್ವಯುಜ ಬಹುಳ ಅಮಾವಾಸ್ಯೆಯ ದಿನ ವಿಶೇಷವಾಗಿ ಗಂಗಾತೀರದಲ್ಲಿ ಅಥವಾ ಗಯೆಯಲ್ಲಿ ಪಿತೃಗಳ ಶ್ರಾದ್ಧವನ್ನು ಮಾಡಬೇಕು. ತರ್ಪಣ ಮಾಡಬೇಕು, ಇದು ಪಿತೃಗಳಿಗೆ ವಿಶೇಷವಾಗಿ ತೃಪ್ತಿಕರವಾಗಿದೆ. (ದಕ್ಷಿಣದೇಶದಲ್ಲಿ ಇದೇ ಭಾದ್ರಪದ ಬಹುಳ ಅಮಾವಾಸ್ಯೆ. ಸರ್ವಪಿತೃ ಅಮಾವಾಸ್ಯೆ ಅಥವಾ ಮಹಾಲಯ ಅಮಾವಾಸ್ಯೆ) ಈ ಅಮಾವಾಸ್ಯೆಯಂದು ಮಾಡಿದ ಶ್ರಾದ್ಧ ತರ್ಪಣಾದಿಗಳು ಪಿತೃಗಳಿಗೆ ಮೋಕ್ಷ ಪ್ರದವಾಗಿದೆ. ಕಾರ್ತಿಕ ಅಮಾವಾಸ್ಯೆ ದಿನ ದೇವಾಲಯ, ಉದ್ಯಾನವನ, ಪುಷ್ಕರಣಿ. ಚೈತ್ರ ವೃಕ್ಷ ಗೋಶಾಲೆ. ಮತ್ತು ಅಂಗಡಿ ಬೀದಿಗಳು ಅಂಗಡಿಗಳಲ್ಲಿ ದೀಪಗಳನ್ನು (ಇದೇ ದೀಪಾವಳಿ ಅಮಾವಾಸ್ಯೆ) ಹಚ್ಚಿಟ್ಟು ಆ ದಿನ ಲಕ್ಷ್ಮೀ ಪೂಜೆಯನ್ನು ಮಾಡಬೇಕು. ಗೋವುಗಳ ಕೊಂಬು, ಮೈಗಳಿಗೆ ನಾನಾಬಣ್ಣಗಳನ್ನು ಹಚ್ಚಿ ಅಲಂಕರಿಸಿ ಅವುಗಳಿಗೆ ಹುಲ್ಲು, ಅನ್ನ ಕೊಟ್ಟು ಪೂಜಿಸಿ, ಪ್ರದಕ್ಷಿಣೆ ಮಾಡಿ ನಮಸ್ಕರಿಸಬೇಕು. ಅವುಗಳಿಗೆ ನಾನಾರೀತಿಯಿಂದ ಸಂತೋಷವಾಗುವಂತೆ ಪೂಜಿಸಬೇಕು.

ಮಾರ್ಗಶಿರ ಅಮಾವಾಸ್ಯೆಯ ದಿನವೂ ಶ್ರಾದ್ಧ ಮತ್ತು ಬ್ರಾಹ್ಮಣ ಭೋಜನಗಳ ಮೂಲಕ ಪಿತೃತೃಪ್ತಿಯನ್ನುಂಟು ಮಾಡಬೇಕು. ಬ್ರಹ್ಮಚರ್ಯ ಮುಂತಾದ ನಿಯಮಗಳು. ಜಪ, ಹೋಮ, ಪೂಜೆಗಳು ಇವುಗಳನ್ನು ನಡೆಸಬೇಕು. ವಿಪ್ರವರನೇ! ಪುಷ್ಯ ಮತ್ತು ಮಾಘಗಳ ಅಮಾವಾಸ್ಯೆಯ ದಿನಗಳಲ್ಲಿಯೂ ಪಿತೃಶ್ರಾದ್ಧವು ಹೆಚ್ಚು ಫಲದಾಯಕವಾಗಿದೆ. ಫಾಲ್ಗುಣ ಅಮಾವಾಸ್ಯೆಯ ದಿನ ಶ್ರವಣ, ವ್ಯತೀಪಾತ ಮತ್ತು ಸೂರ್ಯಯೋಗವಿದ್ದಾಗ ಕೇವಲ ಶ್ರಾದ್ಧ ಮಾಡಿದರೂ, ಕೇವಲ ಬ್ರಾಹ್ಮಣ ಭೋಜನ ಮಾಡಿಸಿದರೂ ಗಯಾಶ್ರಾದ್ಧಕ್ಕಿಂತ ಹೆಚ್ಚು ಫಲವುಂಟಾಗುತ್ತದೆ. ಸೋಮವತೀ ಅಮಾವಾಸ್ಯೆಯ ದಿನ ಮಾಡಿದ ದಾನ ಮುಂತಾದ ಕಾರ್ಯವು ಸಂಪೂರ್ಣ ಫಲದಾಯಕವಾಗಿದೆ. ಆ ದಿನ ಮಾಡಿದ ಶ್ರಾದ್ಧಕ್ಕೆ ಹೆಚ್ಚಿನ ಫಲವಿದೆ. ಮುನಿಯೇ! ಈ ರೀತಿಯಾಗಿ ನಾನು ನಿನಗೆ ಸಂಕ್ಷೇಪವಾಗಿ

ಆಯಾ ತಿಥಿಗಳಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ವರ್ಣಿಸಿದ್ದೇನೆ. ಎಲ್ಲ ತಿಥಿಗಳಲ್ಲಿ ಮಾಡಬೇಕಾಗಿರುವ ವಿಶೇಷ ವಿಧಿವಿಧಾನಗಳನ್ನು ಬೇರೆ ಪುರಾಣಗಳಲ್ಲಿ ವರ್ಣಿಸಿದ್ದಾರೆ.

**ಶ್ರೀ ಸೂತರು ಹೇಳುತ್ತಾರೆ:-** ದೇವರ್ಷಿಗಳಾದ ನಾರದರು ಆ ರೀತಿ ಪ್ರಶ್ನೆ ಮಾಡಿದಾಗ ಸನಕಾದಿ ನಾಲ್ಕು ಮಂದಿ ಕುಮಾರರು ಅವರಿಗೆ ಈ ರೀತಿ ಉಪದೇಶ ಮಾಡಿದರು. ಈ ನಾಲ್ಕು ಮಂದಿ ಕುಮಾರರು ಶಾಸ್ತ್ರಜ್ಞರಲ್ಲಿ ಶ್ರೇಷ್ಠರು. ಸರ್ವಜ್ಞರು, ನಾರದರು ಅವರೆಲ್ಲರನ್ನೂ ಪೂಜಿಸಿದರು. ಆ ಕುಮಾರರು ಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನು ಮಾಡಿ ನಾರದರಿಂದ ಮತ್ತೆ ಪೂಜಿತರಾಗಿ, ಶಂಕರನ ಸನ್ನಿಧಾನಕ್ಕೆ, ಕೈಲಾಸ ಲೋಕಕ್ಕೆ ತೆರಳಿದರು. ಅಲ್ಲಿ ದೇವಾಧೀಶ್ವರರಿಂದಲೂ, ದಾನವಾಧೀಶ್ವರರಿಂದಲೂ ವಂದಿತ ಚರಣಾರವಿಂದನಾದ ಮಹೇಶ್ವರನಿಗೆ ನಮಸ್ಕಾರ ಮಾಡಿ ಅವನ ಅಪ್ಪಣೆಯಿಂದ ನೆಲದ ಮೇಲೆ ಕುಳಿತರು. ಅಜ್ಞಾನಿ ಜೀವನ ಅಜ್ಞಾನಮಯ ಬಂಧನವನ್ನು ನಾಶಗೊಳಿಸುವ ಸಮಸ್ತ ಶಾಸ್ತ್ರ ಸಾರವನ್ನು ಮಹೇಶ್ವರನಿಂದ ತಾವು ಸ್ವತಃ ಕೇಳಿದರು. ಜ್ಞಾನಾನಂದ ಘನಸ್ವರೂಪರಾದ ಆ ಕುಮಾರರು ಭಗವಂತನಾದ ಶಿವನಿಗೆ ನಮಸ್ಕಾರ ಮಾಡಿ ತಮ್ಮ ತಂದೆಯಾದ ಚತುರ್ಮುಖನ ಬಳಿ ಸಾರಿದರು. ಅಲ್ಲಿ ತಮ್ಮ ತಂದೆಯ ಚರಣಕಮಲಗಳಿಗೆ ನಮಸ್ಕಾರ ಮಾಡಿ ಅವನ ಆಶೀರ್ವಾದವನ್ನು ತೆಗೆದುಕೊಂಡು ಹೊರಟು ಹೋದರು. ಅವರು ಇಂದೂ ಕೂಡ ಎಲ್ಲ ಲೋಕಗಳಲ್ಲಿ ಎಲ್ಲ ತೀರ್ಥಗಳಲ್ಲಿ ಸಂಚಾರ ಮಾಡುತ್ತ ಇರುತ್ತಾರೆ. ವಾಸ್ತವವಾಗಿ ಅವರು ಸ್ವಯಂ ತೀರ್ಥ ಸ್ವರೂಪರು. ಅವರು ಬ್ರಹ್ಮಲೋಕದಿಂದ ಬದರಿಕಾಶ್ರಮಕ್ಕೆ ಬಂದರು. ಅಲ್ಲಿ ದೇವದೇವೇಶ್ವರರ ಸಮುದಾಯದಿಂದ ಸೇವಿತನಾದ, ಸರ್ವದಾ ಅವಿನಾಶಿಯಾದ ನಾರಾಯಣ ಮುನಿರೂಪಿಯಾದ ಪರಮಾತ್ಮನ ಚರಣಾರವಿಂದಗಳನ್ನು ನೋಡುತ್ತ, ಅಂತಃಕರಣದಲ್ಲಿ ಧ್ಯಾನಿಸುತ್ತ ಬಹಳ ಕಾಲ ಕಳೆದರು, ಋಷಿಗಳೇ! ರಾಗರಹಿತರಾದ ಯೋಗಿಗಳಿಗೂ ನಿರಂತರ ಧ್ಯೇಯವಾದ ಹೇಯವರ್ಜಿತನಾದ ನಾರಾಯಣನ ರೂಪವು ಸನಕಾದಿಗಳಿಗೂ ಧ್ಯಾನ ಯೋಗ್ಯವಾಗಿತ್ತು. ಬ್ರಾಹ್ಮಣರೇ, ಇತ್ತ ನಾರದರು ಸನಕಾದಿಕುಮಾರರಿಂದ ಬಯಸಿದ ಜ್ಞಾನ ವಿಜ್ಞಾನವನ್ನು ಪಡೆದು ಗಂಗಾತಟದಿಂದ ಮೇಲೆದ್ದರು. ತಂದೆಯಾದ ಬ್ರಹ್ಮದೇವರ ಬಳಿಗೆ ಹೋಗಿ ನಮಸ್ಕಾರ ಮಾಡಿ ನಿಂತುಕೊಂಡರು. ಬ್ರಹ್ಮದೇವರ ಅಪ್ಪಣೆಯಾದ ನಂತರ ಅವರು ಕುಳಿತುಕೊಂಡರು. ನಾರದರು ಅನಂತರ ಕುಮಾರರಿಂದ ತಾನು ಕೇಳಿದ ಜ್ಞಾನ ವಿಜ್ಞಾನವನ್ನೆಲ್ಲಾ ಬ್ರಹ್ಮದೇವರ ಎದುರು ಯಥಾವತ್ತಾಗಿ ಬಣ್ಣಿಸಿದರು. ಇದನ್ನು ಕೇಳಿ ಬ್ರಹ್ಮದೇವರು ಬಹಳ ಸಂತೋಷಪಟ್ಟರು. ಅನಂತರ ನಾರದರು ಅಲ್ಲಿಂದ ಎದ್ದು ಬ್ರಹ್ಮದೇವರ ಪಾದಗಳಿಗೆ ತನ್ನ ತಲೆಯನ್ನು ಸೋಕಿಸಿ ನಮಸ್ಕಾರ ಮಾಡಿ ಆಶೀರ್ವಾದವನ್ನು ಪಡೆದು ಮುನಿಗಳಿಂದಲೂ ಸಿದ್ಧರಿಂದಲೂ ಸೇವಿತವಾದ ಕೈಲಾಸ ಪರ್ವತಕ್ಕೆ ಬಂದರು.

ಆ ಪರ್ವತವು ನಾನಾ ರೀತಿಯ ಆಶ್ಚರ್ಯಜನಕ ದೃಶ್ಯಗಳಿಂದ ತುಂಬಿತ್ತು. ಸಿದ್ಧಕಿನ್ನರರಿಂದ ಆ ಪರ್ವತವು ವ್ಯಾಪ್ತವಾಗಿತ್ತು. ಸ್ವಚ್ಛವಾದ ನೀರಿನಿಂದ ತುಂಬಿದ ಅಲ್ಲಿಯ ಸರೋವರಗಳಲ್ಲಿ ಸುಂದರವಾದ ಚಿನ್ನದ ಕಮಲಗಳು ಅರಳಿದ್ದವು. ಅವುಗಳಿಂದ ಆ ಸರೋವರಗಳಿಗೆ ಅದ್ಭುತವಾದ ಶೋಭೆಯುಂಟಾಗಿತ್ತು. ಅಂತಹ ಸರೋವರಗಳಿಂದ ಶೈಲ ಶಿಖರವು ಶೋಭಿಸುತ್ತಿತ್ತು. ಗಂಗೆಯ ಪ್ರಪಾತದ ಕಲಕಲ ಧ್ವನಿಯು ಆ ಪ್ರದೇಶದಲ್ಲೆಲ್ಲಾ ಪ್ರತಿಧ್ವನಿತವಾಗುತ್ತಿತ್ತು. ಕೈಲಾಸದ ಒಂದೊಂದು ಶಿಖರವೂ

ಬಿಳಿಯಾದ ಮೋಡದ ರಾಶಿಯಂತೆ ಕಾಣಿಸುತ್ತಿತ್ತು. ಆ ಶಿಖರದ ಮೇಲೆ ಕಪ್ಪಾದ ಮೋಡಗಳಿಗೆ ಸಮಾನವಾದ ಶಾಮವರ್ಣದ ಒಂದು ಯೋಜನ ವಿಸ್ತಾರವಾದ ವಟವೃಕ್ಷವಿದೆ. ಅದರ ಕೆಳಗೆ ಯೋಗಿ ಮಂಡಲದ ಮಧ್ಯಭಾಗಗದಲ್ಲಿ ಜಟಾಜೂಟಧಾರಿ ಯಾದ ಭಗವಾನ್ ತ್ರಿಲೋಚನನು ವ್ಯಾಘ್ರ ಚರ್ಮಾಂಬರಧಾರಿಯಾಗಿ ಕುಳಿತಿದ್ದಾನೆ. ಅವನ ಸಮಸ್ತ ದೇಹವು ಭಸ್ಮಾಂಗರಾಗ ದಿಂದ ಅಲಂಕೃತವಾಗಿದೆ. ಅಲಂಕಾರವಾಗಿರುವ ಸರ್ಪಗಳು ಆ ಪರಮೇಶ್ವರನ ಶೋಭೆಯನ್ನು ಹೆಚ್ಚಿಸುತ್ತಿವೆ. ರುದ್ರಾಕ್ಷಮಾಲೆಯಿಂದ ಸದಾ ಶೋಭಾಯಮಾನನಾದ ಭಗವಾನ್ ಚಂದ್ರಶೇಖರನನ್ನು ನೋಡಿ ನಾರದರು ಭಕ್ತಿಭಾವದಿಂದ ತಲೆ ತಗ್ಗಿಸಿ ಆ ಜಗದೀಶ್ವರನ ಚರಣ ಕಮಲಗಳಲ್ಲಿ ತಲೆಯಿಟ್ಟು ನಮಸ್ಕರಿಸಿದರು. ಎದ್ದು ನಿಂತು ಪ್ರಸನ್ನವಾದ ಮನಸ್ಸಿನಿಂದ ವೃಷಭಧ್ವಜನಾದ ವೃಷಭವಾಹನನಾದ ಪರಮೇಶ್ವರನನ್ನು ಸ್ತುತಿಸಿದರು. ಅನಂತರ ಶಿವ ಭಗವಂತನ ಅಪ್ಪಣೆಯಿಂದ ಆಸನದ ಮೇಲೆ ಕುಳಿತರು. ಯೋಗಿಗಳು ಪರಮೇಶ್ವರನ ಅಪ್ಪಣೆಯಂತೆ ನಾರದರನ್ನು ಬಹಳವಾಗಿ ಸತ್ಕರಿಸಿದರು. ಜಗದ್ಗುರುವಾದ ಸದಾಶಿವನು ನಾರದರಿಗೆ ಕುಶಲ ಪ್ರಶ್ನೆಗಳನ್ನು ಕೇಳಿದನು. ನಾರದರು ನುಡಿದರು. ''ಭಗವಂತನೇ, ನಿನ್ನ ಅನುಗ್ರಹದಿಂದ ಎಲ್ಲವೂ ಕ್ಷೇಮವಾಗಿದೆ.'' ಅನಂತರ ಯೋಗಿಗಳು ಕೇಳುತ್ತಿರುವಾಗ ನಾರದರು ಎಲ್ಲ ಪಶು ಎಂಬ ಹೆಸರುಳ್ಳ ಜೀವರಿಗೆ ಅಜ್ಞಾನಮಯವಾದ ಪಾಶವನ್ನು ಬಿಡಿಸುವ ಪಶುಪತಿಯಾದ ಶಂಭುವಿನ ಶಾಂಭವ ಜ್ಞಾನ ವಿಷಯದಲ್ಲಿ ಪ್ರಶ್ನೆ ಮಾಡಿದರು, ಆಗ ಶರಣಾಗತ ವತ್ಸಲನಾದ ಶಿವನು ಅವರ ಭಕ್ತಿಯಿಂದ ಸಂತುಷ್ಟನಾಗಿ ಅವರಿಗೆ ಪರಮಾದರದಿಂದ ಅಷ್ಟಾಂಗ ಯೋಗಯುಕ್ತವಾದ ಶಿವ ಜ್ಞಾನವನ್ನು ಉಪದೇಶಿಸಿ- ದನು, ಲೋಕ ಕಲ್ಯಾಣಕರನಾದ ಭಗವಾನ್ ಶಂಕರನಿಂದ ಶಾಂಭವ ಜ್ಞಾನವನ್ನು ಹೊಂದಿ ಪ್ರಸನ್ನಚಿತ್ತರಾದ ನಾರದರು ಬದರಿಕಾಶ್ರಮದಲ್ಲಿರುವ ಭಗವಂತನಾದ ನಾರಾಯಣ ಮುನಿಯ ಬಳಿಗೆ ಹೋದರು. ನಾರದರು ನಾರಾಯಣ ಮುನಿಯ ಬಳಿಗೆ ಮೇಲಿಂದ ಮೇಲೆ ಹೋಗುತ್ತಿದ್ದರು. ಈಗ ಅಲ್ಲಿಗೆ ಬಂದು ಸಿದ್ಧರು ಮುನಿಗಳಿಂದ ಸೇವಿತನಾದ ನಾರಾಯಣ ಮುನಿಯನ್ನು ಪುನಃ ಪುನಃ ಸ್ತೋತ್ರ ಮಾಡಿ ಸಂತೋಷಪಡಿಸಿದರು.

ಬ್ರಾಹ್ಮಣರೇ, ಇದು ನಾರದೀಯ ಮಹಾಪುರಾಣವು. ನನ್ನಿಂದ ಈ ಪುರಾಣದ ವಿಸ್ತಾರವನ್ನು ನೀವು ಕೇಳಿದಿರಿ. ಈ ನಾರದೀಯ ಪುರಾಣವು ಎಲ್ಲ ಶಾಸ್ತ್ರಗಳ ದಿಗ್ದರ್ಶನ ಮಾಡಿಸುವಂತಹುದು. ಈ ನಾರದೀಯಪುರಾಣದ ಉಪಾಖ್ಯಾನವು ವೇದಗಳಿಗೆ ಸಮಾನವಾದುದು. ಇದರಿಂದ ಶ್ರೋತೃಗಳ ಜ್ಞಾನಾಭಿವೃದ್ಧಿಯುಂಟಾಗುತ್ತದೆ. ಈ ನಾರದೀಯ ಪುರಾಣವನ್ನು ಶಿವಾಲಯದಲ್ಲಿ ಶ್ರೇಷ್ಠರಾದ ಬ್ರಾಹ್ಮಣರ ಸಮುದಾಯದಲ್ಲಿ, ಶ್ರೀಹರಿಯ ದೇವಾಲಯದಲ್ಲಿ, ಮಥುರಾ, ಪ್ರಯಾಗಗಳಲ್ಲಿ, ಪುರುಷೋತ್ತಮ ಕ್ಷೇತ್ರದ ಜಗನ್ನಾಥನ ಸನ್ನಿಧಿಯಲ್ಲಿ, 'ಸೇತುಬಂಧ', ರಾಮೇಶ್ವರದಲ್ಲಿ, 'ಕಾಂಚೀ', 'ದ್ವಾರಕಾ', 'ಹರಿದ್ವಾರ', 'ಕುಶಸ್ಥಲ' (ದ್ವಾರಕಾ) 'ತ್ರಿಪುಷ್ಕರ ತೀರ್ಥ', ಯಾವುದಾದರೊಂದು ನದಿಯ ತೀರದಲ್ಲಿ ಅಥವಾ ಯಾವುದಾದರೊಂದು ಪವಿತ್ರಕ್ಷೇತ್ರದಲ್ಲಿ ಪವಿತ್ರ ಸ್ಥಳದಲ್ಲಿ ಭಕ್ತಿಭಾವಭರಿತನಾಗಿ ಯಾವನು ಪಾರಾಯಣ ಮಾಡುತ್ತಾನೋ, ಕೀರ್ತನ ರೂಪವಾಗಿ ಹೇಳುತ್ತಾನೋ, ಅವನು ಸಂಪೂರ್ಣಯಜ್ಞ ಮತ್ತು ತೀರ್ಥಗಳ ಮಹಾಫಲವನ್ನು ಪಡೆಯುತ್ತಾನೆ, ಅವನು ಎಲ್ಲ ದಾನಗಳ ಮತ್ತು ಎಲ್ಲ

ತಪಸ್ಸುಗಳ ಪೂರ್ಣಫಲವನ್ನು ಪಡೆಯುತ್ತಾನೆ. ಯಾವನು ಉಪವಾಸ ಮಾಡುತ್ತ ಅಥವಾ ಹವಿಷ್ಯಾನ್ನ ಭೋಜನ ಮಾಡುತ್ತಾ ಇಂದ್ರಿಯಗಳನ್ನು ನಿಗ್ರಹಿಸಿ, ಭಗವಂತನಾದ ನಾರಾಯಣ ಮತ್ತು ಪರಮೇಶ್ವರನಲ್ಲಿ ಪರಮಭಕ್ತಿಯನ್ನು ಮಾಡುತ್ತ ಈ ಪುರಾಣದ ಶ್ರವಣ ಅಥವಾ ಪ್ರವಚನ ಮಾಡುತ್ತಾನೋ ಅವನು ಸಿದ್ಧಿಯನ್ನು ಪಡೆಯುತ್ತಾನೆ, ಈ ಪುರಾಣದಲ್ಲಿ ಎಲ್ಲ ರೀತಿಯ ಪುಣ್ಯಗಳು ಮತ್ತು ಸಿದ್ಧಿಗಳು ಉದ್ಭವಿಸುವ ರೀತಿ ನೀತಿಗಳ ವರ್ಣನೆಯಿದೆ. ಇದನ್ನು ಯಾವಾಗಲೂ ಪಠಿಸುವ ಮತ್ತು ಕೇಳುವ ಮನುಷ್ಯನ ಎಲ್ಲ ಪಾಪಗಳೂ ನಾಶವಾಗುತ್ತವೆ. ಇದರ ಪ್ರವಚನವು ಮಾನವರ ಕಲಿದೋಷವನ್ನು ಪರಿಹರಿಸುವುದಲ್ಲದೆ ಸಮಸ್ತ ಸಂಪತ್ತುಗಳ ಅಭಿವೃದ್ಧಿಯನ್ನೂ ಮಾಡುತ್ತದೆ. ಈ ಪುರಾಣವು ಎಲ್ಲರಿಗೂ ಪ್ರಿಯವಾದುದು. ತಪಸ್ಸು ವ್ರತ ಮತ್ತು ಅವುಗಳ ಫಲಗಳನ್ನು ಪ್ರಕಾಶಗೊಳಿಸುತ್ತದೆ, ಮಂತ್ರ, ಯಂತ್ರ, ಬೇರೆ ಬೇರೆ ವೇದಾಂಗಗಳು, ಆಗಮ, ಸಾಂಖ್ಯ ಮತ್ತು ವೇದ ಇವೆಲ್ಲವನ್ನೂ ಇಲ್ಲಿ ಸಂಕ್ಷೇಪವಾಗಿ ಸಂಗ್ರಹಿಸಿ ವರ್ಣಿಸಲಾಗಿದೆ. ವೇದ ಸಮ್ಮತವಾದ ಈ ನಾರದೀಯ ಪುರಾಣವನ್ನು ಶ್ರವಣ ಮಾಡಿ ಧನ, ರತ್ನ, ವಸ್ತ್ರ ಮುಂತಾದವುಗಳ ಮೂಲಕ ಭಕ್ತಿಭಾವದಿಂದ ಪುರಾಣ ವಾಚಕನಾದ ಆಚಾರ್ಯನ ಪೂಜೆಯನ್ನು ಮಾಡಬೇಕು. ಭೂಮಿದಾನ, ಗೋದಾನ, ರತ್ನದಾನ ಮತ್ತು ಆನೆ ಕುದುರೆ, ರಥಗಳ ದಾನದಿಂದ ಆಚಾರ್ಯನನ್ನು ಯಾವಾಗಲೂ ಸಂತೋಷಪಡಿಸಬೇಕು.

ಈ ಪುರಾಣವು ಸಮಸ್ತ ಧರ್ಮ ಸಂಗ್ರಹ ರೂಪವಾದುದು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನೂ ಕೊಡುವಂತಹುದು. ಇದರ ವ್ಯಾಖ್ಯಾನವನ್ನು ಮಾಡುವ ಮನುಷ್ಯನಿಗೆ ಸಮಾನನಾದ ಗುರುವು ಮತ್ತಾರೂ ಇಲ್ಲ. ಶರೀರ ಮನಸ್ಸು, ಮಾತು ಮತ್ತು ಧನ ಮುಂತಾದವುಗಳ ಮೂಲಕ ಯಾವಾಗಲೂ ಧರ್ಮೋಪದೇಶಕನಾದ ಗುರುವಿಗೆ ಪ್ರಿಯವನ್ನು ಆಚರಿಸಬೇಕು. ಈ ಪುರಾಣವನ್ನು ವಿಧಿವತ್ತಾಗಿ ಕೇಳಿ ದೇವ ಪೂಜೆ ಮತ್ತು ಹೋಮಗಳನ್ನು ಮಾಡಿ ನೂರು ಮಂದಿ ಬ್ರಾಹ್ಮಣರಿಗೆ ಭಕ್ಷ್ಯ ಮತ್ತು ಕ್ಷೀರಪಾಯಸದಿಂದ ಭೋಜನ ಮಾಡಿಸಿ ಭಕ್ತಿಭಾವದಿಂದ ಅವರಿಗೆ ದಕ್ಷಿಣೆ ಕೊಡಬೇಕು. ಏಕೆಂದರೆ ಮಾಧವನು ಭಕ್ತಿಯಿಂದಲೇ ಸಂತುಷ್ಟನಾಗುತ್ತಾನೆ, ನದಿಗಳಲ್ಲಿ 'ಗಂಗೆ', ಸರೋವರಗಳಲ್ಲಿ 'ಪುಷ್ಕರ', ಪುರಿಗಳಲ್ಲಿ (ಪಟ್ಟಣಗಳಲ್ಲಿ) 'ಕಾಶೀಪುರಿ', ಪರ್ವತಗಳಲ್ಲಿ 'ಮೇರು', ತ್ರಿಮೂರ್ತಿಗಳಲ್ಲಿ ಎಲ್ಲರ ಪಾಪವನ್ನು ಪರಿಹರಿಸುವ 'ನಾರಾಯಣನು', ಯುಗಗಳಲ್ಲಿ 'ಕಲಿಯುಗವು', ವೇದಗಳಲ್ಲಿ 'ಸಾಮ ವೇದವೂ', ಪಶುಗಳಲ್ಲಿ 'ಕಾಮಧೇನವೂ', ವರ್ಣಗಳಲ್ಲಿ 'ಬ್ರಾಹ್ಮಣನು'. ಕೊಡಲು ಯೋಗ್ಯ ವಾದ ಮತ್ತು ಪೋಷಕವಾದ ವಸ್ತುಗಳಲ್ಲಿ 'ಅನ್ನ, ಜಲಗಳು', ಮಾಸಗಳಲ್ಲಿ 'ಮಾರ್ಗ ಶೀರ್ಷವೂ', ಮೃಗಗಳಲ್ಲಿ 'ಸಿಂಹವೂ', ದೇಹಧಾರಿಗಳಲ್ಲಿ 'ಮನುಷ್ಯನೂ', ವೃಕ್ಷಗಳಲ್ಲಿ 'ಅಶ್ವತ್ಥ', ದೈತ್ಯರಲ್ಲಿ 'ಪ್ರಹ್ಲಾದನೂ', ಅಂಗಗಳಲ್ಲಿ 'ಮುಖವೂ' ಕುದುರೆಗಳಲ್ಲಿ 'ಉಚ್ಚೈಃಶ್ರವಸ್ಸು' ಋತುಗಳಲ್ಲಿ 'ವಸಂತನೂ', ಯಜ್ಞಗಳಲ್ಲಿ 'ಜಪಯಜ್ಞವೂ' ನಾಗಗಳಲ್ಲಿ 'ಅನಂತನೂ', ಪಿತೃಗಳಲ್ಲಿ 'ಅರ್ಯಮನೂ', ಅಸ್ತ್ರಗಳಲ್ಲಿ 'ಧನುಸ್ಸು', ವಸುಗಳಲ್ಲಿ 'ಪಾವಕನೂ', ಆದಿತ್ಯರಲ್ಲಿ 'ವಿಷ್ಣುವೂ', ದೇವತೆಗಳಲ್ಲಿ 'ಇಂದ್ರನೂ', ಸಿದ್ಧರಲ್ಲಿ 'ಕಪಿಲನೂ', ಪುರೋಹಿತರಲ್ಲಿ 'ಬೃಹಸ್ಪತಿ'. ಕವಿಗಳಲ್ಲಿ 'ಶುಕ್ರಾಚಾರ್ಯನು', ಪಾಂಡವರಲ್ಲಿ 'ಅರ್ಜುನನು', ದಾಸ್ಯ ಭಕ್ತಿಯಲ್ಲಿ 'ಹನುಮಂತನು', ತೃಣಗಳಲ್ಲಿ 'ದರ್ಭವು',

ಇಂದ್ರಿಯಗಳಲ್ಲಿ 'ಮನಸ್ಸು', ಗಂಧರ್ವರಲ್ಲಿ 'ಚಿತ್ರರಥನು', ಪುಷ್ಪಗಳಲ್ಲಿ 'ಕಮಲವೂ', ಅಪ್ಸರ ಸ್ತ್ರೀಯರಲ್ಲಿ 'ಊರ್ವಶಿಯೂ', ಎಲ್ಲಾ ಲೋಹಗಳಲ್ಲಿ 'ಸುವರ್ಣವೂ' ಶ್ರೇಷ್ಠ ವಾಗಿವೆ. ಈ ಎಲ್ಲ ವಸ್ತುಗಳು ತಮ್ಮ ಸಜಾತೀಯ ವಸ್ತುಗಳಲ್ಲಿ ಹೇಗೆ ಶ್ರೇಷ್ಠವಾಗಿವೆಯೋ ಅದರಂತೆ 'ನಾರದೀಯ ಮಹಾಪುರಾಣವು' ಎಲ್ಲ ಪುರಾಣಗಳಿಗಿಂತ ಶ್ರೇಷ್ಠವಾದುದು.

ಬ್ರಾಹ್ಮಣ ಶ್ರೇಷ್ಠರೇ! ನಿಮಗೆಲ್ಲರಿಗೂ ಶಾಂತಿಯು ಪ್ರಾಪ್ತವಾಗಲಿ, ಕಲ್ಯಾಣವು ಉಂಟಾಗಲಿ. ಈಗ ನಾನು ಅಪಾರ ತೇಜಸ್ವಿಯಾದ ವ್ಯಾಸರ ಬಳಿಗೆ ಹೋಗುವೆನು.'' ಹೀಗೆ ಹೇಳಿ ಸೂತ ಪುರಾಣಿಕರು ಶೌನಕಾದಿ ಋಷಿಗಳಿಂದ ಪೂಜಿತರಾಗಿ ಅವರ ಅಪ್ಪಣೆಯನ್ನು ಪಡೆದು ಹೊರಟುಹೋದರು. ಶೌನಕಾದಿ ಬ್ರಾಹ್ಮಣರು ಯಜ್ಞಾನುಷ್ಠಾನ ಮಾಡುತ್ತ ಏಕಾಗ್ರಚಿತ್ತರಾಗಿ ತಾವು ಕೇಳಿದ ಧರ್ಮವನ್ನು ಯಥಾಶಕ್ತಿಯಾಗಿ ಅನುಷ್ಠಾನ ಮಾಡುತ್ತ ಭಗವನ್ನಿಷ್ಠರಾಗಿ ಅಲ್ಲಿಯೇ ವಾಸ ಮಾಡುತ್ತಿದ್ದರು. ಕಲಿಯುಗದ ಪಾಪವು ಯಾವ ಔಷಧದಿಂದಲೂ ನಿವಾರಣೆಯಾಗಲು ಅಸಾಧ್ಯವಾದ ರೋಗವು. ಅದಕ್ಕೆ ಶ್ರೀಹರಿಯ ನಾಮಜಪ ಮತ್ತು ಪೂಜೆಯೇ ದಿವ್ಯವಾದ ಔಷಧವು. ಈ ಔಷಧವನ್ನು ಸೇವಿಸುವವರು ಕಲಿಬಾಧೆಗೆ ಒಳಗಾಗದೆ ಕಲಿಯುಗದ ಪ್ರಭಾವದಿಂದ ಉಂಟಾದ ಪಾಪವೆಂಬ ರೋಗಗಳನ್ನು ನಾಶಪಡಿಸಿಕೊಂಡು ನಿರ್ಮಲ ಚಿತ್ತದಿಂದ ಪರಮಾತ್ಮನ ಧ್ಯಾನದಲ್ಲಿರುತ್ತ ತಮ್ಮ ಲೋಕ ವ್ಯವಹಾರವನ್ನು ನಡೆಸಿಕೊಂಡು, ಇಹದಲ್ಲಿ ಎಲ್ಲ ಅಭೀಷ್ಟವನ್ನೂ ಪಡೆಯುತ್ತಾರೆ.

ನಾರದ ಮಹಾಪುರಾಣದಲ್ಲಿ ಪೂರ್ವಭಾಗ ಮುಗಿದುದು

ಶ್ರೀ ಪರಮಾತ್ಮನೇ ನಮಃ

ಶ್ರೀ ಗಣೇಶಾಯ ನಮಃ

—o—

ಓಂ ನಮೋ ಭಗವತೇ ವಾಸುದೇವಾಯ

# ನಾರದ ಮಹಾಪುರಾಣದ ಉತ್ತರ ಭಾಗ

## ಮಹರ್ಷಿ ವಸಿಷ್ಠರು ಮಾಂಧಾತನಿಗೆ ಏಕಾದಶೀ ಮಹಿಮೆಯನ್ನು ಹೇಳುತ್ತಾರೆ

**ಪಾಂತು ವೋ ಜಲದ ಶ್ಯಾಮಾಃ ಶಾರ್ಙ್ಗಜ್ಯಾಘಾತಕರ್ಕಶಾಃ ।**
**ತ್ರೈಲೋಕ್ಯ ಮಂಡಪ ಸ್ತಂಭಾಶ್ಚತ್ವಾರೋ ಹರಿಬಾಹವಃ ॥೧॥**

ಮೇಘದಂತೆ ಶ್ಯಾಮಲ ವರ್ಣವಾದ, ಶಾರ್ಙ್ಗಧನುಸ್ಸಿನ ಜ್ಯಾ, (ಬಿಲ್ಲಿನ ಹಗ್ಗದ) ಆಘಾತ (ತಿಕ್ಕಾಟ)ದಿಂದ ಕರ್ಕಶವಾದ, ತ್ರಿಭುವನವೆಂಬ ಮಂಟಪದ ನಾಲ್ಕು ಕಂಭಗಳಂತಿರುವ ನಾಲ್ಕು ಸಂಖ್ಯೆಯ ಹರಿಯ ಬಾಹುಗಳು ನಿಮ್ಮನ್ನು ಕಾಪಾಡಲಿ.

**ಸುರಾಸುರ ಶಿರೋರತ್ನ ನಿರ್ಘೃಷ್ಟ ಮಣಿ ರಂಜಿತಂ ।**
**ಹರಿ ಪಾದಾಂಬುಜ ದ್ವಂದ್ವಮಭೀಷ್ಟ ಪ್ರದಮಸ್ತು ನಃ ॥೨॥**

ದೇವತೆಗಳು ಮತ್ತು ಅಸುರರು ಶ್ರೀ ಹರಿಯ ಪಾದಗಳಿಗೆ ಬಾಗಿ ನಮಸ್ಕಾರ ಮಾಡುವಾಗ ಅವರ ತಲೆಯ ಕಿರೀಟ ರತ್ನಗಳ ಘರ್ಷಣೆಯಿಂದ ಪರಮಾತ್ಮನ ಪಾದಗಳು ಮತ್ತಷ್ಟು ಪ್ರಕಾಶಮಾನವಾಗುತ್ತವೆ. ಆ ರತ್ನಗಳಿಂದ ಆರತಿಯನ್ನು ಮಾಡಿಸಿಕೊಂಡಂತೆ ಕಾಣುವ ಶ್ರೀಹರಿಯ ಎರಡು ಪಾದಗಳು ನಮಗೆ ಅಭೀಷ್ಟವನ್ನು ಪ್ರದಾನ ಮಾಡಲಿ.'' ಮಾಂಧಾತ ರಾಜನು ವಸಿಷ್ಠರನ್ನು ಕೇಳಿದನು. ''ದ್ವಿಜೋತ್ತಮರೇ, ಪಾಪವು ಬಹು ಭಯಂಕರ. ಒಣಗಿದ ಅಥವಾ ಹಸಿಯಾದ ಪಾಪವೆಂಬ ಕಟ್ಟಿಗೆಯನ್ನು ಸುಡುವ ಬೆಂಕಿಯು ಯಾವುದು! ಇದನ್ನು ತಾವು ದಯವಿಟ್ಟು ಹೇಳಬೇಕು. ಬ್ರಹ್ಮಪುತ್ರರೇ, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ಮೂರು ವಿಧ ಪಾಪಗಳನ್ನು ನಾಶ ಮಾಡುವ ಸರಿಯಾದ ಉಪಾಯವು ತಮಗೆ ತಿಳಿಯದೇ ಇರಲಾರದು. ತಾವು ಮೂರು ಲೋಕಕ್ಕೆ ಸಂಬಂಧ ಪಟ್ಟಿರುವ ಯಾವ ವಿಷಯವನ್ನೂ ತಿಳಿಯದವರಲ್ಲ. ಅಜ್ಞಾನಾವಸ್ಥೆಯಲ್ಲಿ ಮಾಡಿದ ಪಾಪವನ್ನು ಶುಷ್ಕವೆಂದೂ, ತಿಳಿದು ಮಾಡಿದ ಪಾಪವನ್ನು ಆರ್ದ್ರವೆಂದೂ ಹೇಳುತ್ತಾರೆ. ಭೂತ, ಭವಿಷ್ಯ ಮತ್ತು ವರ್ತಮಾನ ಎಂಬ ಮೂರು ಪಾಪಗಳಲ್ಲಿ ಯಾವುದೇ ಆಗಲಿ ಅದು ಯಾವ ಅಗ್ನಿಯಿಂದ ಸುಟ್ಟು ಹೋಗಬಹುದು. ಈ ವಿಷಯವನ್ನು ನನಗೆ ತಿಳಿಯುವ ಆಸೆಯಿದೆ.

**ವಸಿಷ್ಠರು ಹೇಳಿದರು:-** ನೃಪಶ್ರೇಷ್ಠನೇ, ಕೇಳು, ಯಾವ ಅಗ್ನಿಯಿಂದ ಶುಷ್ಕ, ಅಥವಾ ಆರ್ದ್ರವಾದ ಪಾಪವೆಂಬ ಕಟ್ಟಿಗೆಯು ಸುಟ್ಟು ಹೋಗುತ್ತದೆಯೋ ಆ ಉಪಾಯವನ್ನು ನಿನಗೆ ಹೇಳುತ್ತೇನೆ. ಯಾವ ಮಾನವನು ಶ್ರೀಹರಿಯ ದಿನದಲ್ಲಿ (ಏಕಾದಶಿಯಲ್ಲಿ) ಜಿತೇಂದ್ರಿಯನಾಗಿದ್ದು ಉಪವಾಸ ಮಾಡುತ್ತ, ಶ್ರೀಹರಿಯ ಪೂಜೆ ಮಾಡುತ್ತಾನೋ, ನೆಲ್ಲಿಕಾಯಿಯನ್ನು ನೆತ್ತಿಗೆ, ಮೈಗೆ ತಿಕ್ಕಿಕೊಂಡು ಸ್ನಾನ ಮಾಡುತ್ತಾನೋ ರಾತ್ರಿ ಜಾಗರಣೆ ಮಾಡುತ್ತಾನೋ, ಅವನ ಎಲ್ಲ ಪಾಪಗಳೂ ತೊಳೆದು ಹೋಗುತ್ತವೆ. ರಾಜನೇ, ಏಕಾದಶಿಯೆಂಬ ಅಗ್ನಿಯಿಂದ ಪಾಪವೆಂಬ ಕಟ್ಟಿಗೆಯು, ನೂರು ವರ್ಷ ಸೇರಿಸಿ

ಇಟ್ಟಿದ್ದೇ ಆಗಿರಲಿ ಬೇಗನೇ ಭಸ್ಮವಾಗಿ ಬಿಡುತ್ತದೆ. ನರದೇವ! ಮನುಷ್ಯನು ಎಂದಿನವರೆಗೆ ಪದ್ಮನಾಭನ ಶುಭ ದಿನದಲ್ಲಿ ಏಕಾದಶೀ ತಿಥಿಯ ದಿನ ಉಪವಾಸ ವ್ರತವನ್ನು ಮಾಡುವುದಿಲ್ಲವೋ ಅಲ್ಲಿಯವರೆಗೆ ಮಾತ್ರ, ಮನುಷ್ಯನ ದೇಹದಲ್ಲಿ ಪಾಪಗಳೂ ನಿಂತಿರುತ್ತವೆ. ಬಲವಾಗಿ ಕೂತಿರುತ್ತವೆ. ಸಾವಿರಾರು ಅಶ್ವಮೇಧಗಳು, ನೂರಾರು ರಾಜಸೂಯಗಳು ಏಕಾದಶೀ ವ್ರತದ ಹದಿನಾರನೆಯ ಒಂದು ಕಲೆಗೂ ಸಮಾನವಾಗುವುದಿಲ್ಲ. ಪ್ರಭುವೇ! ಮಾನವನು ಏಕಾದಶ (ಹನ್ನೊಂದು) ಇಂದ್ರಿಯಗಳಿಂದ ಮಾಡಿದ ಪಾಪವು ಏಕಾದಶಿ ಉಪವಾಸದಿಂದ ನಾಶವಾಗುತ್ತದೆ. ರಾಜನೇ, ಯಾವುದಾದರೂ ಬೇರೊಂದು ನೆಪದಿಂದ ಏಕಾದಶಿ ದಿನ ಉಪವಾಸ ಮಾಡಿದರೂ ಭಾಸ್ಕರ ಪುತ್ರನಾದ ಯಮನ ದರ್ಶನವಾಗುವುದಿಲ್ಲ. ಏಕಾದಶಿಯು ಸ್ವರ್ಗ ಮತ್ತು ಮೋಕ್ಷಗಳನ್ನು ಕೊಡುತ್ತದೆ. ರಾಜ್ಯ ಮತ್ತು ಪುತ್ರರೆಂಬ ಸಂಪತ್ತನ್ನು ಕೊಡುತ್ತದೆ. ಉತ್ತಮಳಾದ ಭಾರ್ಯೆಯನ್ನು ದೊರಕಿಸಿಕೊಡುತ್ತದೆ. ಶರೀರವನ್ನು ಆರೋಗ್ಯದಿಂದ ಇಡುತ್ತದೆ, ರಾಜನೇ, ಏಕಾದಶಿಗಿಂತ ಹೆಚ್ಚು ಪವಿತ್ರಳು ಗಂಗೆಯೂ ಅಲ್ಲ, ಗಯೆಯೂ ಅಲ್ಲ, ಕಾಶಿಯೂ ಅಲ್ಲ, ಪುಷ್ಕರವೂ ಅಲ್ಲ. ಕುರುಕ್ಷೇತ್ರ, ನರ್ಮದಾ, ದೇವಿಕಾ, ಯಮುನಾ ಮತ್ತು ಚಂದ್ರಭಾಗಾ ನದಿಗಳೂ ಏಕಾದಶಿಗಿಂತ ಅಧಿಕ ಪುಣ್ಯವನ್ನು ಕೊಡುವುದಿಲ್ಲ. ರಾಜನೇ, ಏಕಾದಶಿ ವ್ರತವನ್ನು ಮಾಡುವುದರಿಂದ ಭಗವಂತನಾದ ಶ್ರೀಮನ್ನಾರಾಯಣನ ವೈಕುಂಠ ಲೋಕವು ಸುಲಭವಾಗಿ ಪ್ರಾಪ್ತವಾಗುತ್ತದೆ. ಏಕಾದಶಿಯ ದಿನ ಉಪವಾಸವಾಗಿದ್ದು ರಾತ್ರಿಯಲ್ಲಿ ಜಾಗರಣ ಮಾಡಬೇಕು. ಇದರಿಂದ ಎಲ್ಲಾ ಪಾಪಗಳೂ ನಾಶವಾಗುತ್ತವೆ. ಜೀವನು ವಿಷ್ಣು ಲೋಕವನ್ನು ಸೇರುತ್ತಾನೆ. ರಾಜೇಂದ್ರನೇ, ಏಕಾದಶಿಯನ್ನು ಮಾಡುವ ಮನುಷ್ಯನು ತಂದೆಯ ಕಡೆಗೆ ಹತ್ತು ತಲೆಮಾರಿನ ಪಿತೃಗಳನ್ನು, ತನ್ನ ಪತ್ನಿಯನ್ನು, ಪುತ್ರರನ್ನು ಉದ್ಧಾರ ಮಾಡುತ್ತಾನೆ. ಮಹಾರಾಜನೇ, ಉಪವಾಸ ಕರ್ತನು ತಾನೂ ವೈಕುಂಠಕ್ಕೆ ಹೋಗುತ್ತಾನೆ. ಏಕಾದಶಿಯು ಚಿಂತಾಮಣಿಗೆ ಸಮಾನ, ಅಥವಾ ಕುಬೇರನ ನವನಿಧಿಗಳಿಗೆ ಸಮಾನವೆಂದು ತಿಳಿಯಬೇಕು. ಏಕಾದಶಿಯು ಸಂಕಲ್ಪಿಸಿದ ಎಲ್ಲವನ್ನು ಕೊಡುವ ಕಲ್ಪವೃಕ್ಷ ಮತ್ತು ಅಪೌರುಷೇಯವಾದ ವೇದ ವಾಕ್ಯಕ್ಕೆ ಸಮಾನವಾದುದು. ಯಾವ ಮನುಷ್ಯನು ದ್ವಾದಶೀಯುಕ್ತ ಏಕಾದಶಿಯನ್ನು ಮರೆಹೋಗುತ್ತಾನೋ (ಉಪವಾಸ ಮಾಡುತ್ತಾನೋ) ಅವನು ಚತುರ್ಬಾಹುವಾಗಿ, ಗರುಡಾರೂಢನಾಗಿ ವನಮಾಲಾ ಮತ್ತು ಪೀತಾಂಬರಗಳಿಂದ ಸುಶೋಭಿತನಾಗಿ, ಶ್ರೀ ನಾರಾಯಣನ ಸಾರೂಪ್ಯವನ್ನೇ ಪಡೆದು ಭಗವಂತನಾದ ಮಹಾವಿಷ್ಣುವಿನ ಲೋಕಕ್ಕೆ ತೆರಳುತ್ತಾನೆ.

ರಾಜನೇ, ಏಕಾದಶೀಯುಕ್ತ ದ್ವಾದಶಿಯ ಪ್ರಭಾವವನ್ನು ನಾನೀಗ ನಿನಗೆ ತಿಳಿಸಿದ್ದೇನೆ. ಇದೇ ಘೋರವಾದ ಪಾಪವೆಂಬ ಇಂಧನಕ್ಕೆ (ಕಟ್ಟಿಗೆಗೆ) ಅಗ್ನಿಯು. ಪುತ್ರ, ಪೌತ್ರ, (ಮಕ್ಕಳು, ಮೊಮ್ಮಕ್ಕಳು) ಮೊದಲಾದ ಯೋಗಕ್ಕಾಗಿ (ಅಪ್ರಾಪ್ತ ಪ್ರಾಪ್ತಿಯೇ ಯೋಗ, ಸಿಗದಿರುವ ವಸ್ತುವು ಸಿಗುವುದು) ಅಥವಾ ಐಹಿಕ ಭೋಗಗಳ ಇಚ್ಛೆಯಿಂದಲಾದರೂ ಮಾನವನು ಏಕಾದಶಿಯ ಉಪವಾಸವನ್ನು ಮಾಡಬೇಕು. ನರಶ್ರೇಷ್ಠನೇ, ಯಾವ ಮನುಷ್ಯನು ಆದರದಿಂದ ಏಕಾದಶಿಯ ಉಪವಾಸವನ್ನು ಮಾಡುತ್ತಾನೋ, ಅವನು ತಾಯಿಯ ಗರ್ಭವನ್ನು ಪುನಃ ಪ್ರವೇಶಿಸುವುದಿಲ್ಲ, ಮುಕ್ತನಾಗುತ್ತಾನೆ. ಮಹಾಪಾಪಗಳಿಂದ, ಅನೇಕಾನೇಕ ಪಾಪಗಳಿಂದ ಕೂಡಿದ ಮನುಷ್ಯನಾದರೂ ನಿಷ್ಕಾಮಭಾವದಿಂದಾಗಲೀ

(ಫಲಾಪೇಕ್ಷೆ ಇಲ್ಲದೆ) ಸಕಾಮಭಾವದಿಂದಲಾಗಲೀ (ಫಲಾಪೇಕ್ಷೆಯಿಂದಲಾಗಲೀ) ಏಕಾದಶೀ ವ್ರತವನ್ನು ಮಾಡಿದರೆ ಸಾಕು. ಅವನು ಲೋಕನಾಥನಾದ ಶ್ರೀಮನ್ನಾರಾಯಣನ ನಿತ್ಯವಾದ ವೈಕುಂಠ ಲೋಕವನ್ನು ಸೇರುತ್ತಾನೆ.

## ಏಕಾದಶಿ ತಿಥಿಯ ವಿಷಯದಲ್ಲಿ ತಿಳಿಯಬೇಕಾದ ವಿಷಯಗಳು ಮತ್ತು ವಿದ್ಧಾತಿಥಿಯ ನಿಷೇಧ

**ವಸಿಷ್ಠರು ಹೇಳುತ್ತಾರೆ:-** ರಾಜನೇ, ಏಕಾದಶಿ ಮತ್ತು ಶ್ರೀಮನ್ನಾರಾಯಣನಿಗೆ ಸಂಬಂಧಪಟ್ಟಿರುವ, ಅವನ ಮಹಿಮೆಯ ಸಂಬಂಧವಿರುವ ಸೂತ ಪುರಾಣಿಕರ ಮಾತನ್ನು ಶೌನಕಾದಿ ಋಷಿಗಳು ಕೇಳಿದರು. ಸಮಸ್ತ ಪಾಪ ನಾಶಕವಾದ ಸೂತರ ಮಾತನ್ನು ಕೇಳಿ ಆ ಪುಣ್ಯ ಪುರುಷರು ಪುನಃ ನಿರ್ಮಲ ಹೃದಯ ಸೂತ ಪುರಾಣಿಕರನ್ನು ಕೇಳಿದರು.

''ಪರಮಪೂಜ್ಯರೇ, ನೀವು ಶ್ರೀ ವೇದವ್ಯಾಸರ ಕೃಪೆಯಿಂದ ಹದಿನೆಂಟು ಪುರಾಣಗಳನ್ನು, ಮಹಾಭಾರತವನ್ನು ತಿಳಿದಿದ್ದೀರಿ. ಪುರಾಣಗಳಲ್ಲಿ ಮತ್ತು ಸ್ಮೃತಿಗಳಲ್ಲಿ ತಮಗೆ ಗೊತ್ತಿಲ್ಲದ ಯಾವ ವಿಷಯವೂ ಇಲ್ಲ. ಈಗ ನಮ್ಮೆಲ್ಲರ ಹೃದಯದಲ್ಲಿ ಒಂದು ಸಂಶಯವು ಉತ್ಪನ್ನವಾಗಿದೆ. ತಾವೇ ವಿಸ್ತಾರವಾಗಿ ನಿಜವಾದ ರೀತಿಯಿಂದ ಆ ಸಂಶಯವನ್ನು ನಿವಾರಣೆ ಮಾಡಬಲ್ಲಿರಿ. ತಿಥಿಯ ಮೂಲಭಾಗ, ಅಂದರೆ ಪ್ರಾರಂಭದಲ್ಲಿ ಉಪವಾಸ ಮಾಡಬೇಕೇ! ಅಥವಾ ಕೊನೆಯಲ್ಲಿ ಉಪವಾಸ ಮಾಡಬೇಕೇ? ದೇವ ಕಾರ್ಯ ಅಥವಾ ಪಿತೃ ಕಾರ್ಯಗಳಲ್ಲಿ ತಿಥಿಯ ಯಾವ ಭಾಗದಲ್ಲಿ ಉಪವಾಸ ಮಾಡುವುದು ಉಚಿತವಾಗಿದೆ. ಈ ವಿಷಯವನ್ನು ಹೇಳುವ ಕೃಪೆ ಮಾಡಬೇಕು.

**ಸೂತ ಪುತ್ರರು ಹೇಳುತ್ತಾರೆ:-** ಮಹರ್ಷಿಗಳೇ, ದೇವತೆಗಳ ಪ್ರಸನ್ನತೆಗಾಗಿ ತಿಥಿಯ ಕೊನೆಯ ಭಾಗದಲ್ಲಿಯೇ ಉಪವಾಸ ಮಾಡುವುದು ಯೋಗ್ಯವಾಗಿದೆ. ಅವರಿಗೆ ಇದರಿಂದಲೇ ಸಂತೋಷವು ಹೆಚ್ಚುತ್ತದೆ. ಪಿತೃಗಳಿಗೆ ತಿಥಿಯ ಮೂಲ ಭಾಗವೇ ಪ್ರೀತಿ ಪಾತ್ರವಾಗಿದೆ. ಕಾಲಜ್ಞರಾದ ಮಹಾನುಭಾವರು ಹೀಗೆ ಹೇಳುತ್ತಾರೆ. ಆದುದರಿಂದ ಹತ್ತುಪಟ್ಟು ಹೆಚ್ಚು ಫಲವನ್ನು ಅಪೇಕ್ಷಿಸುವವರು ತಿಥಿಯ ಅಂತ್ಯಭಾಗದಲ್ಲಿಯೇ ಉಪವಾಸ ಮಾಡಬೇಕು. ಧರ್ಮದಲ್ಲಿ ಶ್ರದ್ಧೆಯುಳ್ಳ ಮನುಷ್ಯನು ಪಿತೃಗಳ ತೃಪ್ತಿಗಾಗಿ ತಿಥಿಯ ಮೂಲ ಭಾಗವನ್ನೇ ಉತ್ತಮವೆಂದು ತಿಳಿಯಬೇಕು. ಧರ್ಮ, ಅರ್ಥ ಮತ್ತು ಕಾಮದ ಇಚ್ಛೆಯುಳ್ಳ ಮನುಷ್ಯನು ಬಿದಿಗೆ, ಷಷ್ಠೀ, ಅಷ್ಟಮೀ ಮತ್ತು ಏಕಾದಶಿಗಳನ್ನು ಪೂರ್ವವಿದ್ಧವಾಗಿದ್ದರೆ ತ್ಯಜಿಸಬೇಕು. ಅಂದರೆ ಹಿಂದಿನ ತಿಥಿಯಿಂದ ಕೂಡಿದ ಆ ತಿಥಿಯನ್ನು ವ್ರತ ಉಪವಾಸಗಳಿಗಾಗಿ ಸ್ವೀಕರಿಸಬಾರದು. ಸಪ್ತಮೀ, ಅಮಾವಾಸ್ಯಾ ಪೂರ್ಣಿಮಾ ಮತ್ತು ತಂದೆಯ ಶ್ರಾದ್ಧ ದಿನ ಇವುಗಳಲ್ಲಿ ಪೂರ್ವ ವಿದ್ಧಾತಿಥಿಯನ್ನೇ ಪರಿಗ್ರಹಿಸಬೇಕು.

ಸೂರ್ಯೋದಯದ ಅನಂತರ ಸ್ವಲ್ಪ ಸಮಯ ಹಿಂದಿನ ತಿಥಿಯಿದ್ದು ಅನಂತರ ಅಪೇಕ್ಷಿತವಾದ ತಿಥಿಯು ಬಂದರೆ ಅದು ಪೂರ್ವ ವಿದ್ಧಾ ಎಂದು ಕರೆಯಲ್ಪಡುತ್ತದೆ. ಉದಯಕ್ಕಿಂತ ಪೂರ್ವದಲ್ಲಿಯೇ ನಮಗೆ ಬೇಕಾದ ತಿಥಿಯು ಬಂದಿದ್ದರೆ ಅದನ್ನು 'ಪ್ರಭೂತಾ' ಎನ್ನುತ್ತಾರೆ. ಪಾರಣ ಮತ್ತು ಮರಣಗಳಲ್ಲಿ ತತ್ಕಾಲದಲ್ಲಿರುವ ತಿಥಿಯನ್ನು ತೆಗೆದುಕೊಳ್ಳಬೇಕು. ಪಿತೃ ಕಾರ್ಯದಲ್ಲಿ ಸೂರ್ಯಾಸ್ತ ಕಾಲದವರೆಗೆ ಇರುವ ತಿಥಿಯನ್ನೇ

ತೆಗೆದುಕೊಳ್ಳಬೇಕು. ತಿಥಿಯ ಪ್ರಮಾಣವು ಸೂರ್ಯ ಮತ್ತು ಚಂದ್ರರ ಗತಿಯನ್ನು ಅವಲಂಬಿಸಿಕೊಂಡಿದೆ. ಚಂದ್ರ ಮತ್ತು ಸೂರ್ಯರ ಗತಿಯನ್ನು ಸರಿಯಾಗಿ ತಿಳಿದ ಕಾಲಜ್ಞರ ವಚನಗಳಿಂದ ತಿಥಿಯ ಪ್ರಮಾಣಗಳನ್ನು ಸರಿಯಾಗಿ ತಿಳಿದು ತಿಥಿ ನಿರ್ಣಯವನ್ನು ಮಾಡಬೇಕು. ಇದರ ಅನಂತರ ನಾನು ಸ್ನಾನ ಪೂಜೆ ಮೊದಲಾದವುಗಳ ವಿಧಿಯನ್ನು ತಿಳಿಸುತ್ತೇನೆ. ಹಗಲು ಶುದ್ಧವಾಗಿಲ್ಲದಿದ್ದರೆ ರಾತ್ರಿ ಪೂಜೆಯನ್ನು ಮಾಡುತ್ತಾರೆ. ಹಗಲಿನ ಕಾರ್ಯಗಳನ್ನೆಲ್ಲ ಪ್ರದೋಷಾರಂಭಕಾಲದ ಒಳಗೆ ಪೂರೈಸಬೇಕು. ಇದು ಇತರ ವ್ರತಗಳನ್ನು ಮಾಡುವವರಿಗೆ ಹೇಳಿದ ವಿಧಾನ. ವಿಪ್ರಶ್ರೇಷ್ಠರೇ, ಅರುಣೋದಯ ಕಾಲದಲ್ಲಿ ಸ್ವಲ್ಪವಾದರೂ ದ್ವಾದಶೀ ಇದ್ದರೆ, ಆಗಲೇ ಸ್ನಾನ, ಪೂಜೆ, ಹೋಮ ಮತ್ತು ದಾನ ಮೊದಲಾದ ಎಲ್ಲ ಕಾರ್ಯಗಳನ್ನು ಮಾಡಬೇಕು. ಘಳಿಗೆಯ ವ್ಯತ್ಯಾಸದಿಂದಾಗಿ ಹಿಂದೆ ಹೇಳಿದಂತೆ ದ್ವಾದಶಿಯಲ್ಲಿ ಉಪವಾಸಮಾಡಿ ತ್ರಯೋದಶಿದಿನ ಪಾರಣೆಮಾಡಿದರೆ ಭೂಮಿದಾನದ ಫಲ ಬರುತ್ತದೆ. ಅಥವಾ ಆ ಮನುಷ್ಯನು ನೂರು ಯಜ್ಞಗಳನ್ನು ಅನುಷ್ಠಾನಮಾಡಿದರೆ ಬರುವ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವನ್ನು ಪಡೆಯುತ್ತಾನೆ. ಬ್ರಾಹ್ಮಣರೇ, ದ್ವಾದಶೀಯುಕ್ತ ತ್ರಯೋದಶಿಯು ಮುಂದೆ ಇಲ್ಲದಿದ್ದರೆ ದ್ವಾದಶಿಯದಿನ ಪ್ರಾತಃಕಾಲವೇ ಪಾರಣಮಾಡಬೇಕು, ಈ ದ್ವಾದಶಿಯನ್ನು ಮನುಷ್ಯನು ಉಲ್ಲಂಘನ ಮಾಡಿದರೆ ವೇದಾಧ್ಯಯನ ಮಾಡಿ ಸಮಾವರ್ತನ ಮಾಡಿಸಿಕೊಳ್ಳದಿದ್ದವನ ಪುಣ್ಯವನ್ನು ಸರಸ್ವತಿಯು ಅಪಹರಿಸುವಂತೆ, ಆ ಮನುಷ್ಯನ ಪುಣ್ಯವನ್ನು ದೇವತೆಗಳು ಅಪಹರಿಸುತ್ತಾರೆ. ಕ್ಷಯದಲ್ಲಿಯಾಗಲಿ, ವೃದ್ಧಿಯಲ್ಲಾಗಲಿ, ಅಥವಾ ಸೂರ್ಯೋದಯ ಕಾಲದಲ್ಲಿ ಪವಿತ್ರವಾದ ದ್ವಾದಶಿಯು ಪ್ರಾಪ್ತವಾದರೆ ಆ ದಿನವೇ ಉಪವಾಸಮಾಡಬೇಕು. ಆದರೆ ಪೂರ್ವತಿಥಿಯಿಂದ ವಿದ್ಧವಾದರೆ ಅದನ್ನು ತ್ಯಜಿಸಬೇಕು.'' ಬ್ರಾಹ್ಮಣರು ಕೇಳಿದರು ''ಸೂತರೇ ಯಾವಾಗ ಹಿಂದಿನ ದಿನದ ಏಕಾದಶಿಯಲ್ಲಿ ದ್ವಾದಶಿಯ ಸಂಬಂಧವಿಲ್ಲವೋ. ಆಗ ವ್ರತಮಾಡುವವನು ಹೇಗೆ ಉಪವಾಸ ಮಾಡಬೇಕು? ಉಪವಾಸದ (ಏಕಾದಶಿಯ) ದಿನವು ಪೂರ್ವತಿಥಿಯಿಂದ ವಿದ್ಧವಾದರೆ ಮರುದಿನ ಸ್ವಲ್ಪವೂ ಏಕಾದಶೀ ಇಲ್ಲದಿದ್ದರೆ ಆಗ ಯಾವ ರೀತಿ ಉಪವಾಸಮಾಡುವ ವಿಧಾನವಿದೆ? ಇದನ್ನು ಸ್ಪಷ್ಟಪಡಿಸಿರಿ,'' ಸೂತಪುತ್ರರು ಹೇಳಿದರು. ''ಪೂಜ್ಯರೇ, ಮೊದಲನೆಯ ದಿನದ ಏಕಾದಶಿಯಲ್ಲಿ ಅರ್ಧಸೂರ್ಯೋದಯದ ವರೆಗೂ ದ್ವಾದಶಿಯ ಸಂಪರ್ಕವಿಲ್ಲದಿದ್ದಾಗ ಮರುದಿನವೇ ಉಪವಾಸಮಾಡಬೇಕು.

**ಬಹ್ವಾಗಮವಿರೋಧೇ ತು ಬ್ರಾಹ್ಮಣೇಷು ವಿವಾದಿಷು ।**
**ಉಪೋಷ್ಯಾ ದ್ವಾದಶೀ ಶುದ್ಧಾ ತ್ರಯೋದಶ್ಯಾಂ ತು ಪಾರಣಂ ॥**

''ಅನೇಕ ಪುರಾಣ ಶಾಸ್ತ್ರ ವಚನಗಳು ಪರಸ್ಪರ ವಿರುದ್ಧವಾಗಿದ್ದಾಗ, ಶಾಸ್ತ್ರಜ್ಞರಾದ ಬ್ರಾಹ್ಮಣರೂ ವಿವಾದದಲ್ಲಿ ಬಿದ್ದಾಗ, ಶುದ್ಧವಾದ ದ್ವಾದಶೀ ದಿನ ಉಪವಾಸ ಮಾಡಿ, ತ್ರಯೋದಶಿಯಲ್ಲಿ ಪಾರಣೆಮಾಡಬೇಕು.''ಏಕಾದಶಿಯು ದಶಮೀವಿದ್ಧವಾಗಿದ್ದು ದ್ವಾದಶಿಯಲ್ಲಿ ಶ್ರವಣಯೋಗವಿದ್ದರೆ ಎರಡು ಪಕ್ಷಗಳಲ್ಲಿಯೂ ಪವಿತ್ರವಾದ ದ್ವಾದಶೀ ತಿಥಿಯದಿನವೇ ಉಪವಾಸ ಮಾಡಬೇಕು.

**ಋಷಿಗಳು ಹೇಳಿದರು:-** ಸೂತಪುತ್ರರೇ, ತಾವು ಈಗ ಯುಗಾದಿ ತಿಥಿಗಳು ಹಾಗೂ ಸೂರ್ಯಸಂಕ್ರಮಣ ಮೊದಲಾದ ದಿನಗಳಲ್ಲಿ ಮಾಡಬೇಕಾದ ಪುಣ್ಯಕಾರ್ಯಗಳ

ವಿಧಾನವನ್ನು ಯಥಾವತ್ತಾಗಿ ವರ್ಣಿಸಿರಿ. ಏಕೆಂದರೆ ತಾವು ನಮ್ಮಿಂದ ಯಾವ ವಿಷಯವನ್ನೂ ಮರೆಮಾಚದೆ ಸ್ಪಷ್ಟವಾಗಿ ಹೇಳುವಿರಿ ಎಂಬ ನಂಬಿಕೆಯು ನಮಗಿದೆ.'' ಸೂತಪುತ್ರರು ಹೇಳಿದರು. ''ಯಾವ ದಿನ ಅಯನ ಆರಂಭವಾಗುತ್ತದೆಯೋ ಆ ದಿನ ಪೂರ್ತಿಯಾಗಿ ಅಯನದ ಪುಣ್ಯಕಾಲವೆಂದು ತಿಳಿಯಬೇಕು. ಸಂಕ್ರಾಂತಿಯ ಪುಣ್ಯಕಾಲವು ಹದಿನಾರು ಘಳಿಗೆಯವರೆಗೆ ಇದೆ. ವಿಷುವ ಕಾಲವು (ಮೇಷ-ತುಲಾ- ಸಂಕ್ರಮಣಗಳು) ಅನಂತ ಪುಣ್ಯ ಜನಕವೆಂದು ಹೇಳಿದ್ದಾರೆ. ಎರಡೂ ಪಕ್ಷಗಳ ದಶಮೀವಿದ್ಧವಾದ ಏಕಾದಶಿಯನ್ನು ಅವಶ್ಯವಾಗಿ ಬಿಡಬೇಕು. ವೃಷಲೀಸ್ತ್ರೀಯ ಸಂಪರ್ಕ ಮಾಡುವ ಬ್ರಾಹ್ಮಣನು ಶ್ರಾದ್ಧದಲ್ಲಿ ಭೋಜನಮಾಡಿದರೆ ಹೇಗೆ ಶ್ರಾದ್ಧವನ್ನೂ ಶ್ರಾದ್ಧಕರ್ತನ ಪುಣ್ಯವನ್ನು ನಾಶಗೊಳಿಸುತ್ತಾನೋ ಅದರಂತೆ ಪೂರ್ವವಿದ್ಧವಾದ ಏಕಾದಶಿಯದಿನ ಮಾಡಿದ ದಾನ, ಜಪ, ಹೋಮ, ಸ್ನಾನ, ಭಗವತ್ಪೂಜಾ, ಉಪವಾಸ, ಎಲ್ಲವೂ ವ್ಯರ್ಥ. ಸೂರ್ಯೋದಯ ಸಮಯದಲ್ಲಿ ಅಂಧಕಾರವು ನಾಶವಾಗುವಂತೆ ಅವನ ಪುಣ್ಯವೆಲ್ಲವೂ ನಾಶವಾಗುತ್ತದೆ.

## ರುಕ್ಮಾಂಗದ ರಾಜನ ರಾಜ್ಯದಲ್ಲಿ ಏಕಾದಶೀ ವ್ರತದ ಪ್ರಭಾವ

**ಋಷಿಗಳು ಹೇಳಿದರು:-** ಸೂತರೇ! ಈಗ ಭಗವಂತನಾದ ವಿಷ್ಣುವಿನ ಪ್ರಸಾದನ ವಿಧಿಯನ್ನು ನಮಗೆ ವಿಸ್ತಾರಪೂರ್ವಕವಾಗಿ ವರ್ಣಿಸಿರಿ. ಭಗವಂತನು ಸಂತುಷ್ಟನಾಗಿ ಸಮಸ್ತ ಅಭೀಷ್ಟಗಳನ್ನು ಕೊಡುವಂತೆ ಆಗಬೇಕಾದರೆ ನಾವು ಹೇಗೆ ನಡೆದುಕೊಳ್ಳಬೇಕು. ಲಕ್ಷ್ಮೀಪತಿಯಾದ ಭಗವಾನ್ ಶ್ರೀಮನ್ನಾರಾಯಣನು ಸಮಸ್ತ ಜಗತ್ತಿಗೂ ಸ್ವಾಮಿಯಾಗಿದ್ದಾನೆ. ಚರಾಚರ ಜಗತ್ತು ಅವನ ಪ್ರತಿಮೆಯಾಗಿದೆ. ಸಮಸ್ತ ಪಾಪರಾಶಿ ನಾಶಕವಾದ ಇಂತಹ ಶ್ರೀ ಹರಿಯ ಯಾವ ಕಾರ್ಯದಿಂದ ಪ್ರಸನ್ನನಾಗುತ್ತಾನೆ?

**ಸೂತಪುತ್ರರು ಹೇಳಿದರು:-** ಧರಣೀಧರನಾದ ಭಗವಂತನಾದ ಹೃಷೀಕೇಶನು ಭಕ್ತಿಯಿಂದಲೇ ವಶವಾಗುತ್ತಾನೆ. ಧನದಿಂದಲ್ಲ. ಭಕ್ತಿಭಾವದಿಂದ ಪೂಜಿಸಿದರೆ ಶ್ರೀ ವಿಷ್ಣುವು ಎಲ್ಲ ಮನೋರಥಗಳನ್ನು ಪೂರ್ಣಮಾಡುತ್ತಾನೆ. ಆದುದರಿಂದ ಎಲೈ ಬ್ರಾಹ್ಮಣರೇ, ಸುದರ್ಶನ ಚಕ್ರಧಾರಿಯಾದ ಭಗವಾನ್ ಶ್ರೀಹರಿಯ ಭಕ್ತಿಯನ್ನು ಯಾವಾಗಲೂ ಮಾಡಬೇಕು. ನೀರಿನಿಂದ ಭಗವಂತನಾದ ಜಗನ್ನಾಥನನ್ನು ಪೂಜಿಸಿದರೂ ಅವನು ಸಮಸ್ತ ಕ್ಲೇಶಗಳನ್ನು ನಾಶಮಾಡುತ್ತಾನೆ. ಬಾಯಾರಿದ ಮನುಷ್ಯನು ನೀರಿನಿಂದ ತೃಪ್ತನಾಗುತ್ತಾನೆ ಪರಮಾತ್ಮನು ಭಕ್ತಿಭಾವದಿಂದ ಅರ್ಪಿಸಿದ ಜಲದಿಂದಲೇ ಬಹಳ ಬೇಗನೇ ಸಂತುಷ್ಟನಾಗುತ್ತಾನೆ. ಈ ವಿಷಯದಲ್ಲಿ ಪಾಪನಾಶಕವಾದ ಒಂದು ಉಪಾಖ್ಯಾನವನ್ನು ಕೇಳಿದ್ದೇವೆ. ಮಹರ್ಷಿಗೌತಮರು ಮತ್ತು ರುಕ್ಮಾಂಗದರ ಸಂವಾದ ಪ್ರಸಂಗದಲ್ಲಿ ಈ ಕಥೆಯು ಬಂದಿದೆ. ಪ್ರಾಚೀನಕಾಲದಲ್ಲಿ ರುಕ್ಮಾಂಗದನೆಂದು ಪ್ರಸಿದ್ಧನಾದ ಒಬ್ಬ ಸಾರ್ವಭೌಮನಿದ್ದನು. ಅವನು ಎಲ್ಲ ಪ್ರಾಣಿಗಳಲ್ಲಿಯೂ ಕ್ಷಮಾವಂತನೂ ಪ್ರಜಾವತ್ಸಲನೂ ಆಗಿದ್ದನು. ಕ್ಷೀರಸಾಗರ ಶಯನನಾದ ಭಗವಾನ್ ವಿಷ್ಣುವು ಅವನ ಆರಾಧ್ಯದೇವತೆಯಾಗಿದ್ದನು, ಪರಮಾತ್ಮನಲ್ಲಿ ಅವನಿಗೆ ಅನನ್ಯಭಾವದ ನಿರಂತರ ಭಕ್ತಿಯಿತ್ತು, ಕೇವಲ ಭಗವಂತನಲ್ಲಿ ಭಕ್ತಿಯಷ್ಟೇ ಅಲ್ಲ ಯಾವಾಗಲೂ ಏಕಾದಶೀ ವ್ರತಾನುಷ್ಠಾನದಲ್ಲಿ ಅವನಿಗೆ ವಿಶೇಷವಾದ ಆಸಕ್ತಿಯಿತ್ತು. ಅವನು ಪ್ರಪಂಚದಲ್ಲಿ ದೇವದೇವೇಶ್ವರನಾದ ಭಗವಂತನಾದ ಶ್ರೀ ಪದ್ಮನಾಭಮೂರ್ತಿಯನ್ನು ಎಲ್ಲ ಕಡೆಯೂ

ಕಾಣುತ್ತಿದ್ದನು. ಅವನ ಆಜ್ಞೆಯಿಂದಲೇ ಎಲ್ಲ ಕಾರ್ಯಗಳನ್ನು ನಡೆಸುತ್ತಿದ್ದನು. ಅವನಿಗೆ ಎಲ್ಲೆಡೆಯಲ್ಲಿಯೂ ಪರಮಾತ್ಮನ ದರ್ಶನ ಮತ್ತು ಪ್ರೇರಣೆಗಳಾಗುತ್ತಿದ್ದುವು, ಅವನು ಅದರಂತೆಯೇ ತನ್ನ ಕಾರ್ಯಗಳನ್ನು ನಡೆಸುತ್ತಿದ್ದನು. ಅವನು ಏಕಾದಶಿಯ ದಿನ ಆನೆಯ ಅಂಬಾರಿಯ ಮೇಲೆ ನಗಾರಿಯನ್ನು ಏರಿಸಿ, ಅದನ್ನು ಹೊಡೆಸುತ್ತಾ, ತನ್ನ ನಗರದಲ್ಲೆಲ್ಲಾ ಈ ರೀತಿ ಘೋಷಣೆ ಮಾಡಿಸುತ್ತಿದ್ದನು. 'ಈ ದಿನ ಏಕಾದಶಿ ತಿಥಿಯು, ಈ ದಿನ ಎಂಟು ವರ್ಷ ವಯಸ್ಸಿಗಿಂತ ದೊಡ್ಡವರು. ಎಂಬತ್ತ ಐದು ವರ್ಷ ಪೂರೈಸದವರು (ಎಂಬತ್ತ ಐದು ವರ್ಷಕ್ಕಿಂತ ಕಡಿಮೆಯಿರುವವರು) ಎಲ್ಲರೂ ಉಪವಾಸ ಮಾಡಬೇಕು. ಯಾವನಾದರೊಬ್ಬ ಮಂದಬುದ್ಧಿಯ ಮೂರ್ಖನು, ಅಜ್ಞಾನಿಯು ಉಪವಾಸಮಾಡದೆ ಭೋಜನ ಮಾಡಿದರೆ ಅವನು ನನ್ನ ಶಿಕ್ಷೆಗೆ ಒಳಗಾಗುವನು. ಅವನನ್ನು ನಗರದಿಂದ, ರಾಜ್ಯದಿಂದ, ಹೊರಗೆ ಕಳುಹಿಸಲಾಗುವುದು. ಇತರರ ಮಾತೇನು? ನನ್ನ ತಂದೆ, ತಾಯಿ, ಸಹೋದರರು, ಮಗ, ಹೆಂಡತಿ ಮತ್ತು ಪರಮಮಿತ್ರರೇ ಆಗಿರಲಿ, ಅವರು ಏಕಾದಶಿಯ ದಿನ ಭೋಜನ ಮಾಡಿದರೆ, ಅವರಿಗೂ ಮೇಲೆ ಹೇಳಿದ ಕಠಿಣ ಶಿಕ್ಷೆಯಾಗುತ್ತದೆ. ಆ ದಿನ ಗಂಗೆಯ ಪವಿತ್ರ ಜಲದಲ್ಲಿ ಎಲ್ಲರೂ ಸ್ನಾನ ಮಾಡಿರಿ, ಭಗವಂತನನ್ನು ಪೂಜಿಸಿರಿ, ಭಜಿಸಿರಿ,'' ರಾಜನ ಈ ಅಪ್ಪಣೆಯನ್ನು ಎಲ್ಲರೂ ಭಯ ಭಕ್ತಿಯಿಂದ ಪಾಲಿಸುತ್ತಿದ್ದರು. ಏಕಾದಶಿಯ ದಿನ ಉಪವಾಸ ವ್ರತವನ್ನು ಆಚರಿಸುತ್ತಿದ್ದರು. ಆ ರಾಜನ ರಾಜ್ಯದ ಪ್ರಜೆಗಳೆಲ್ಲರೂ ಏಕಾದಶೀ ಉಪವಾಸದ ಪ್ರಭಾವದಿಂದ ವಿಷ್ಣುಲೋಕಕ್ಕೇ ಹೋಗಲಾರಂಭಿಸಿದರು. ವೈಕುಂಠ ಲೋಕವು ರುಕ್ಮಾಂಗದ ರಾಜನ ರಾಜ್ಯದ ಪ್ರಜೆಗಳಿಂದ ತುಂಬಿಹೋಯಿತು, ಆ ರಾಜನ ರಾಜ್ಯದಲ್ಲಿ ಸತ್ತವರೆಲ್ಲರೂ ಶ್ರೀ ಹರಿಯ ದಿವ್ಯವಾದ ವೈಕುಂಠಲೋಕಕ್ಕೇ ಸೇರುತ್ತಿದ್ದರು. ಸೂರ್ಯ ಪುತ್ರನಾದ, ಮೃತ್ಯುದೇವತೆಯಾದ ಯಮಧರ್ಮರಾಜನ ಸ್ಥಿತಿಯು ಆಗ ಶೋಚನೀಯವಾಯಿತು. ಅವನಿಗೆ ಯಾವ ಕೆಲಸವೂ ಉಳಿಯಲಿಲ್ಲ. ನರಕದಲ್ಲಿ ನೀರವತೆಯು ಹರಡಿತು. ಎಲ್ಲಿಯೂ ಯಾರ ಸುಳಿವೂ ಇರಲಿಲ್ಲ. ಎಲ್ಲ ಯಮದೂತರು ಯಾವ ಕೆಲಸವೂ ಇಲ್ಲದೆ ಸುಮ್ಮನೆ ಕುಳಿತಿದ್ದರು. ಇಂತಹ ಸಮಯದಲ್ಲಿ ಒಂದು ದಿನ ನಾರದರು ಯಮಧರ್ಮರಾಜನ ಬಳಿಗೆ ಬಂದರು.

**ನಾರದರು ಕೇಳಿದರು:-** ನಿನ್ನ ನರಕ ಪ್ರದೇಶಗಳಲ್ಲಿ ಎಲ್ಲಿಯೂ ಯಾವ ವಿಧವಾದ ಚೀರಾಟ, ಒದ್ದಾಟ, ಕೇಳಿಸುತ್ತಿಲ್ಲ. ಕಾಣಿಸುತ್ತಿಲ್ಲ. ಎಲ್ಲ ಶಾಂತವಾಗಿದೆ. ಚಿತ್ರಗುಪ್ತನು ಬರೆಯುವ ಕೆಲಸ ಬಿಟ್ಟು ಸುಮ್ಮನೆ ಕುಳಿತಿದ್ದಾನೆ. ಧ್ಯಾನ ಮಾಡುತ್ತಿರುವ ಮುನಿಯಂತೆ ಚಿತ್ರಗುಪ್ತನು ಸುಮ್ಮನೆ ಕುಳಿತಿರಲು ಕಾರಣವೇನು? ಇತ್ತೀಚೆಗೆ ನಿನ್ನಲ್ಲಿಗೆ ದಂಭ, ಕಪಟ, ದುರಾಚಾರಗಳಿಂದ ಪಾಪ ಮಾಡಿದ ಮಾನವರು ಏಕೆ ಬರುತ್ತಿಲ್ಲ!'' ಮಹಾತ್ಮರಾದ ನಾರದರು ಈ ರೀತಿ ಕೇಳಿದಾಗ ಸೂರ್ಯಪುತ್ರನಾದ ಯಮ ಧರ್ಮರಾಜನು ದೀನಸ್ವರದಿಂದ ಹೇಳಲಾರಂಭಿಸಿದನು. ''ನಾರದರೇ, ಈಗ ಭೂಮಂಡಲದಲ್ಲಿ ರಾಜ್ಯ ಭಾರ ಮಾಡುತ್ತಿರುವ ರಾಜನು ಪುರಾಣ ಪುರುಷೋತ್ತಮನಾದ ಹೃಷೀಕೇಶನ ಪರಮಭಕ್ತನು. ಅವನು ಪ್ರತಿಯೊಂದು ಏಕಾದಶಿಯ ಸಮಯದಲ್ಲಿಯೂ ನಗಾರಿಯನ್ನು ಹೊಡೆಸಿ, ಘೋಷಣೆಯನ್ನು ಮಾಡಿಸಿ ಪ್ರಜೆಗಳನ್ನು ಎಚ್ಚರಿಸುತ್ತಾನೆ.

''ಏಕಾದಶಿಯ ದಿನ ಭೋಜನ ಮಾಡಬೇಡಿ, ಯಾರು ಆ ದಿನ ಭೋಜನ ಮಾಡುವರೋ ಅವರು ಶಿಕ್ಷೆಗೆ ಒಳಗಾಗುವರು.'' ಈ ಘೋಷಣೆಯನ್ನು ಕೇಳಿದ ಎಲ್ಲ

ಜನರೂ ಏಕಾದಶಿ ಯುಕ್ತವಾದ ದ್ವಾದಶಿಯ ದಿನ ಉಪವಾಸ ಮಾಡುತ್ತಾರೆ. ಅವರೆಲ್ಲರಿಗೂ ಪ್ರಲಯಾಗ್ನಿಯ ಭಯ, ಪ್ರಲಯಜಲದ ಭಯವಿಲ್ಲ. ನಿತ್ಯವಾದ ವೈಕುಂಠ ಲೋಕಕ್ಕೆ ಹೋಗುತ್ತಾರೆ. ನಾರದರೇ, ಆ ರಾಜನ ಕಾರ್ಯದಿಂದಾಗಿ ನನ್ನ ಲೋಕಕ್ಕೆ ಬರುವ ದಾರಿಗಳೆಲ್ಲ ಲೋಪ ಹೊಂದಿವೆ. ಈಗ ನಾನು ಕಟ್ಟಿಗೆಯಿಂದ ಮಾಡಿದ ಮೃಗದ ಗೊಂಬೆಯಂತೆ ಯಾವ ಕೆಲಸವೂ ಇಲ್ಲದೆ ಸುಮ್ಮನೆ ಕುಳಿತಿರಬೇಕಾಗಿದೆ. ಈ ರೀತಿ ಕೆಲಸವಿಲ್ಲದೆ ಲೋಕಪಾಲಕ ಪದವಿಯಲ್ಲಿ ಇರಲು ನಾನು ಇಷ್ಟಪಡುವುದಿಲ್ಲ. ಇದನ್ನು ಬಿಡಬೇಕೆಂದು ಆಲೋಚಿಸುತ್ತಿದ್ದೇನೆ. ನನ್ನ ಈ ತೊಂದರೆಯನ್ನು ದುಃಖವನ್ನು ತಿಳಿಸಲು ನಾನು ಬ್ರಹ್ಮಲೋಕಕ್ಕೆ ಹೋಗಲು ನಿರ್ಧರಿಸಿದ್ದೇನೆ,'' ಹೀಗೆ ಹೇಳಿ ಯಮನು ದೇವರ್ಷಿ ನಾರದರು ಮತ್ತು ಚಿತ್ರಗುಪ್ತನೊಡನೆ ಬ್ರಹ್ಮದೇವರ ಲೋಕಕ್ಕೆ ಹೋದನು. ಅಲ್ಲಿ ಸಾಕಾರ ರಾದ ಮತ್ತು ಅವ್ಯಕ್ತಾಕಾರರಾದ ಜೀವರಿಂದ ಸುತ್ತುವರಿದ ಬ್ರಹ್ಮದೇವರನ್ನು ನೋಡಿದನು.

ಆಗ ಸಮಸ್ತ ಭೂತಗಳ ಶಾಸಕ, ಸೂರ್ಯಪುತ್ರ ಯಮನು ಪಿತಾಮಹನ ಚರಣಗಳ ಮೇಲೆ ಬಿದ್ದನು ಮತ್ತು ಹೇಳಿದನು. ''ದೇವೇಶ್ವರ! ನನಗೆ ಹೆಚ್ಚಿನ ಅವಮಾನವಾಗಿದೆ. ತಿರಸ್ಕಾರ ಉಂಟಾಗಿದೆ. ನನ್ನ ಕಾಗದ ಪತ್ರಗಳಲ್ಲಿ ಜೀವರ ಏನೇನು ಪಾಪಗಳು ಬರೆಯಲ್ಪಟ್ಟಿದ್ದುವೋ, ಅವುಗಳನ್ನೆಲ್ಲ ಅಳಿಸಿದ್ದಾಯಿತು. ಕಮಲಾಸನ ದೇವ, ನಿನ್ನಂತಹ ಸ್ವಾಮಿಯು ಇದ್ದೂ ಕೂಡ ನನಗೆ ಇಂತಹ ಸ್ಥಿತಿಯುಂಟಾಯಿತು. ನಾನು ಅನಾಥನಾದೆನು.'' ಹೀಗೆ ಹೇಳಿ ಯಮಧರ್ಮರಾಜನು ನಿಶ್ಚೇಷ್ಟನಾಗಿ ನಿಂತುಬಿಟ್ಟನು. ಅನಂತರ ಉದಾರಚಿತ್ತನಾದ ಲೋಕಮೂರ್ತಿಯಾದ ವಾಯುದೇವನು ತನ್ನ ಸುಂದರವಾದ ಮತ್ತು ಪುಷ್ಟವಾದ ಭುಜಗಳಿಂದ ಯಮನನ್ನು ಮೇಲಕ್ಕೆತ್ತಿ ಅವನನ್ನೂ ಚಿತ್ರಗುಪ್ತನನ್ನೂ ಆಸನದಲ್ಲಿ ಕುಳ್ಳಿರಿಸಿದನು. ಆಗ ಯಮಧರ್ಮನಿಗೆ ತನ್ನನ್ನು ನೋಡುವವರು, ಸಮಾಧಾನ ಮಾಡುವವರು ಇದ್ದಾರೆಂದು ತೋರಿತು, ಸಂಶಯವು ಸ್ವಲ್ಪಮಟ್ಟಿಗೆ ದೂರವಾಯಿತು.

## ರುಕ್ಮಾಂಗದನ ಪ್ರಭಾವ

ಆಗ ಯಮಧರ್ಮರಾಜನು ಬ್ರಹ್ಮದೇವರ ಸೂಚನೆಯಂತೆ ಮಾತನಾಡಲಾರಂಭಿಸಿದನು. ''ಪಿತಾಮಹ, ಪಿತಾಮಹ, ಸ್ವಾಮಿ, ನನ್ನ ಮಾತನ್ನು ಕೇಳಿರಿ. ದೇವ! ಗೌರವಾನ್ವಿತನಾಗಿದ್ದು ಅವಮಾನ ಹೊಂದುವದು ಮೃತ್ಯುವಿಗಿಂತಲೂ ಅಮಂಗಳಕರವಾದುದು. ದೇವ, ನಾನು ತಮ್ಮ ಅಪ್ಪಣೆಯಿಂದ ಧರ್ಮದಿಂದ ನನ್ನ ಶಾಸನವನ್ನು ನಡೆಸುತ್ತಾ ಇದ್ದೆನು. ಪ್ರಭುವೇ! ನಾನು ಮುನಿಗಳ ಉಪದೇಶದಿಂದಲೂ ಧರ್ಮಶಾಸ್ತ್ರ ಮುಂತಾದವುಗಳ ವಿಮರ್ಶೆಯಿಂದಲೂ ನಿರ್ಣಯ ಮಾಡಿಕೊಂಡು ಪುಣ್ಯ ಮಾಡಿದವರಿಗೆ ಪುಣ್ಯದ ಫಲವನ್ನು ಕೊಟ್ಟು ಪಾಪ ಮಾಡಿದವರಿಗೆ ಪಾಪದ ಫಲವಾದ ಶಿಕ್ಷೆಯನ್ನೇ ಕೊಡುತ್ತಿದ್ದೆನು. ಕಲ್ಪದ ಆದಿಯಿಂದ ಆರಂಭಿಸಿ ನಿಮ್ಮ ಒಂದು ದಿನವು ಪೂರ್ತಿಯಾಗುವವರೆಗೂ ನಾನು ನಿಮ್ಮ ಅಪ್ಪಣೆ ಪ್ರಕಾರ ಎಲ್ಲಾ ಕೆಲಸವನ್ನೂ ಮಾಡುತ್ತ ಬಂದಿದ್ದೇನೆ. ಮುಂದೆಯೂ ಮಾಡಬಲ್ಲೆ; ಆದರೆ ಇಂದು ರುಕ್ಮಾಂಗದ ಮಹಾರಾಜನು ನನಗೆ ಮಹತ್ತಾದ ಅವಮಾನ ಮಾಡಿದ್ದಾನೆ. ಜಗತ್ ಸ್ವಾಮಿಯೇ, ಆ ರಾಜನ ಶಾಸನ ಭಯದಿಂದಾಗಿ ಸಮುದ್ರಾವೃತವಾದ ಸಮಗ್ರ ಭೂಮಂಡಲದ ಜನರೆಲ್ಲರೂ ಸರ್ವ ಪಾಪನಾಶಕವಾದ ಏಕಾದಶೀ ವ್ರತವನ್ನು ಆಚರಿಸುತ್ತಾರೆ. ಆ ದಿನ ಭೋಜನ

ಮಾಡುವುದಿಲ್ಲ. ಅದರ ಪ್ರಭಾವದಿಂದಾಗಿ ಎಲ್ಲರೂ ವಿಷ್ಣು ಲೋಕಕ್ಕೆ ಹೋಗುತ್ತಾರೆ. ಅಲ್ಲಿಗೂ ಒಬ್ಬರೇ ಹೋಗುವುದಿಲ್ಲ. ತಮ್ಮ ಪಿತೃ ಪಿತಾಮಹರನ್ನು ಕರೆದುಕೊಂಡು ಹೋಗುತ್ತಾರೆ. ಭೂಲೋಕದಲ್ಲಿ ವ್ರತ ಮಾಡುವವರ ಪಿತೃಗಳು ವೈಕುಂಠಕ್ಕೆ ಹೋಗುವುದಂತೂ ಸರಿಯೇ, ಅವರ ತಂದೆಗಳೂ, ತಂದೆಗಳ ತಂದೆಗಳೂ. ಮತ್ತು ತಾಯಿಯ ತಂದೆ, ಅಜ್ಜ ಮುಂತಾದವರೂ ವಿಷ್ಣು ಲೋಕಕ್ಕೆ ಹೋಗುತ್ತಾರೆ. ಅವರ ತಂದೆ ತಾಯಿ ಮುಂತಾದವರೂ ಅವರ ಪೂರ್ವಜರೂ ವೈಕುಂಠಕ್ಕೆ ಹೋಗುತ್ತಾರೆ. ಇದೇನೋ ಸರಿ. ಇಷ್ಟೇ ಅಲ್ಲ ವ್ರತ ಮಾಡುವವರ ಪತ್ನಿಯರ ತಂದೆಗಳೂ ಪಿತೃಗಳೂ ನನ್ನ ಬರವಣಿಗೆಯನ್ನು ಅಳಿಸಿ ವೈಕುಂಠ ಲೋಕಕ್ಕೆ ತೆರಳುತ್ತಾರೆ.

ರುಕ್ಮಾಂಗದ ರಾಜನು ಒಂದು ಸಾವಿರ ವರ್ಷಗಳಿಂದ ಭೂಮಂಡಲದಲ್ಲಿ ರಾಜ್ಯಭಾರ ಮಾಡುತ್ತಿದ್ದಾನೆ. ಅವನ ಇಷ್ಟು ವರ್ಷಗಳ ಆಡಳಿತದಲ್ಲಿ ಅಸಂಖ್ಯ ಮಾನವರು ಚತುರ್ಭುಜಧಾರಿಗಳಾಗಿ, ಪೀತಾಂಬರವನ್ನುಟ್ಟು ವನಮಾಲಾ ಮತ್ತು ದಿವ್ಯಗಂಧಗಳಿಂದ ಸುಶೋಭಿತರಾಗಿ, ಗರುಡನನ್ನೇರಿ ವೈಕುಂಠ ಲೋಕಕ್ಕೆ ಹೋಗುವಂತೆ ಮಾಡಿದ್ದಾನೆ. ದೇವೇಶ! ಲಕ್ಷ್ಮೀಪತಿಯ ಪ್ರಿಯಭಕ್ತನಾದ ರುಕ್ಮಾಂಗದ ರಾಜನು ಹೀಗೆಯೇ ಭೂಮಂಡದಲ್ಲಿ ರಾಜ್ಯವಾಳುತ್ತಾ ಇದ್ದರೆ ಸಂಪೂರ್ಣ ಭೂಲೋಕವಾಸಿಗಳನ್ನೇ ವಿಷ್ಣುಲೋಕಕ್ಕೆ ತಲುಪಿಸಿ ಬಿಡುತ್ತಾನೆ. ತಾವು ಕೊಟ್ಟಿರುವ ಈ ಶಾಸನ ದಂಡ, ಮತ್ತು ಯಮಪಟ (ಪುಣ್ಯಪಾಪಗಳನ್ನು ಬರೆಯುವ ಪತ್ರ) ಇವೆರಡನ್ನೂ ತೆಗೆದುಕೊಳ್ಳಿರಿ. ಇವೆರಡನ್ನೂ ನಾನು ತಮ್ಮ ಪಾದಗಳಿಗೆ ಒಪ್ಪಿಸಿದ್ದೇನೆ. ದೇವೇಶ್ವರ, ರಾಜಾ ರುಕ್ಮಾಂಗದನು ನನ್ನ ಸರಿಸಾಟಿಯಿಲ್ಲದ ಯಮ ಪದವಿಯನ್ನು ಧೂಳೀಪಟ ಮಾಡಿದ್ದಾನೆ. ಏಕಾದಶಿಯ ದಿನ ಭಯಂಕರವಾದ ನಗಾರಿಯ ಘೋಷಣೆ ಮಾಡಿ ಜನರನ್ನು ಸನ್ಮಾರ್ಗಕ್ಕೆ ತಿರುಗಿಸಿ, ಅವರಿಗೆಲ್ಲಾ ನರಕದುಃಖವನ್ನು ತಪ್ಪಿಸಿ, ನಾರಾಯಣ ಲೋಕವನ್ನು ತಲುಪಿಸುವ ರುಕ್ಮಾಂಗದ ರಾಜನು ಭೂಲೋಕದಲ್ಲಿರುವವರೆಗೆ ನಾನು ಅಧಿಕಾರ ಚಲಾಯಿಸಲು ಸಾಧ್ಯವಿಲ್ಲ, ಜೀವದಲ್ಲಿರಲು ಸಾಧ್ಯವಿಲ್ಲ.

## ಭಗವಂತನ ಭಕ್ತರ ಮಹಿಮೆ ಸಾಧಾರಣವಲ್ಲ

**ಬ್ರಹ್ಮದೇವರು ಹೇಳಿದರು:-** ಧರ್ಮರಾಜನೇ, ನೀನೇನು ಅದ್ಭುತವಾದ ಹೊಸ ವಿಚಾರವನ್ನು ಕೇಳುವಂತೆ ಹೇಳುತ್ತಿದ್ದೀಯಲ್ಲಾ? ನೀನೇಕೆ ಇಷ್ಟು ಖಿನ್ನನಾಗಿದ್ದೀಯೆ? ಇನ್ನೊಬ್ಬರ ಉತ್ತಮಗುಣವನ್ನು ನೋಡಿ ಸಂತೋಷಪಡದೆ ಸಂತಾಪ ಹೊಂದುವುದು. ಮೃತ್ಯುವಿಗೆ ಸಮಾನವಾದ ದುಃಖವನ್ನು ಕೊಡುತ್ತದೆಯಲ್ಲವೇ! ಸೂರ್ಯನಂದನ! ಯಾರ ಹೆಸರಿನ ಉಚ್ಚಾರಣ ಮಾತ್ರದಿಂದ ಪರಮಪದ ಪ್ರಾಪ್ತಿಯಾಗುತ್ತದೆಯೋ, ಅವನ ಪ್ರೀತಿಗಾಗಿ ಉಪವಾಸ ಮಾಡಿ ಮನುಷ್ಯರು ವೈಕುಂಠಕ್ಕೆ ಹೋಗುವುದು ಸ್ವಾಭಾವಿಕವಾದ ವಿಷಯವಷ್ಟೆ!

**ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮಃ ದಶಾಶ್ವಮೇಧಾವಭೃಥೇನ ತುಲ್ಯಃ ।**
**ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥**

ನಾ. ಉತ್ತರ ೬೧೩

ಶ್ರೀ ಕೃಷ್ಣನಿಗೆ ಮಾಡಿದಂತಹ ಒಂದು ಪ್ರಣಾಮವು ಹತ್ತು ಅಶ್ವಮೇಧಯಾಗಗಳ ಅವಭೃಥ ಸ್ನಾನಕ್ಕೆ ಸಮಾನವಾಗಿದೆ. ಅದರಲ್ಲಿಯೂ ವ್ಯತ್ಯಾಸವಿದೆ. ಹತ್ತು

ಅಶ್ವಮೇಧಯಾಗಗಳನ್ನು ಮಾಡಿದವನು ಪುಣ್ಯ ಭೋಗಾನಂತರದಲ್ಲಿ ಪುನಃ ಸಂಸಾರಕ್ಕೆ ಬರುತ್ತಾನೆ. ಶ್ರೀ ಕೃಷ್ಣನಿಗೆ ನಮಸ್ಕಾರ ಮಾಡಿದವನು ಪುನಃ ಸಂಸಾರ ಬಂಧನಕ್ಕೆ ಸಿಲುಕುವುದಿಲ್ಲ. ವಿಷ್ಣು ಭಕ್ತರ ಜೊತೆಗೆ ವಿವಾದ ಉಂಟಾದಾಗ, ನಾನು ಅವರಿಗೆ ವಿರುದ್ಧವಾಗಿ ಯಾರಿಗೂ ಸಹಾಯ ಮಾಡಲಾರೆನು. ಭಗವಂತನಾದ ಶ್ರೀ ಹರಿ ಎಲ್ಲರಿಗೂ ಆದಿ, ಮಧ್ಯ, ಅಂತ್ಯ ಸ್ವರೂಪನು. ಅವನ ಭಕ್ತರಿಗೆ ಶಿಕ್ಷೆ ಕೊಡಲು ಸಾಧ್ಯವಿಲ್ಲ. ಯಾವ ನೆಪದಿಂದಲಾಗಲೀ ಯಾವನು ಏಕಾದಶೀ ಸಂಯುಕ್ತವಾದ ದ್ವಾದಶಿಯ ಉಪವಾಸ ಮಾಡುತ್ತಾನೋ, ಅವನಿಂದ ನಿನಗೆ ಅಪಮಾನವಾಗಿದ್ದರೆ ನಾನು ನಿನಗೆ ಯಾವ ಸಹಾಯವನ್ನೂ ಮಾಡಲಾರೆನು.

## ಮೋಹಿನಿಯ ಪ್ರಾದುರ್ಭಾವ, ಮಂದರಾ ಚಲದಲ್ಲಿ ಸುಂದರಕಾಲ

**ಯಮರಾಜನು ಹೇಳಿದನು:-** ತಾತ! ವೇದ್ಯೈಕವೇದ್ಯನಾದ ಆ ಶ್ರೀಹರಿಗೆ ನಮೋ ನಮೋ ಎಂದು ಹೇಳುವುದರಲ್ಲಿಯೇ ಎಲ್ಲರಿಗೂ ಹಿತವಿದೆಯೆಂದು ನಾನೂ ತಿಳಿದಿದ್ದೇನೆ. ಆದರೂ, ಎಂದಿನವರೆಗೆ ರುಕ್ಮಾಂಗದ ರಾಜನು ರಾಜ್ಯಭಾರ ಮಾಡುತ್ತಾ ಇರುತ್ತಾನೋ ಅಲ್ಲಿಯವರೆಗೆ ನನಗೆ ಮನಸ್ಸಮಾಧಾನವಿಲ್ಲ. ದೇವ ದೇವ! ಒಬ್ಬ ರುಕ್ಮಾಂಗದ ರಾಜನನ್ನು ಏಕಾದಶಿಯ ವ್ರತದಿಂದ ಭ್ರಷ್ಟನಾಗುವಂತೆ ಮಾಡಿದರೆ ಸಾಕು. ನಾನು ನಿಮ್ಮ ಸೇವಕನಾಗಿ ಯಾವಾಗಲೂ ಇರುತ್ತೇನೆ. ಆ ರುಕ್ಮಾಂಗದನು ನನ್ನ ಪಟದ ಲೇಖನವನ್ನೇ ಅಳಿಸಿಹಾಕಿದ್ದಾನೆ. ಈ ಅಪಮಾನಕ್ಕೆ ಪ್ರತಿಕಾರ ಮಾಡಲೇ ಬೇಕು. ಇಂದಿನಿಂದ ನಾನು ನಿಷ್ಕ್ರಿಯ. ವಿಷ್ಣುವಿನ ಸ್ಮರಣ, ಸ್ತೋತ್ರ, ಉಪವಾಸ ಮಾಡುವವರಿಗೆ ಏನೂ ಮಾಡಲಾರೆ.

**ಹರಿರಿತಿ ಸಹಸಾ ಯೇ ಸಂಗೃಣಂತಿ ಛಲೇನ**
**ಜನನೀ ಜಠರ ಮಾರ್ಗಾತ್ ತೇ ವಿಮುಕ್ತಾ ಹಿ ಮರ್ತ್ಯಾಃ ।**
**ಮಮ ಪಟಲಿಪಿಂ ತೇ ನೋ ವಿಶಂತಿ ಪ್ರವೀಣಾ**
**ದಿವಿಚರ ವರಸಂಘೈಸ್ತೇ ನಮಸ್ಯಾ ಭವಂತಿ ॥**

ನಾ.ತ್ವರ ೭-೬

ಯಾವ ನೆಪದಿಂದಲಾದರೂ ಹರಿನಾಮೋಚ್ಚಾರಣಮಾಡುವವರು ತಾಯಿಯ ಗರ್ಭವಾಸದಿಂದ ಬಿಡುಗಡೆ ಹೊಂದುವರು. ಆ ಬುದ್ಧಿವಂತ ಮಾನವರು ನನ್ನ ಪಟದ ಲೇಖನದಲ್ಲಿ ಬರುವುದಿಲ್ಲ. ದೇವತೆಗಳ ಸಮುದಾಯವೂ ಅವರಿಗೆ ನಮಸ್ಕರಿಸುತ್ತದೆ.

**ಸೂತಪುತ್ರರು ಹೇಳುತ್ತಾರೆ :-** ಯಮನ ಮನಸ್ಸಮಾಧಾನಕ್ಕಾಗಿಯೂ ರುಕ್ಮಾಂಗದ ಮಹಾರಾಜನ ಕೀರ್ತಿ, ಗೌರವಗಳನ್ನು ಹೆಚ್ಚಿಸುವುದಕ್ಕಾಗಿಯೂ ಬ್ರಹ್ಮದೇವರು ಸ್ವಲ್ಪಹೊತ್ತು ಆಲೋಚಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಒಬ್ಬ ಪರಮಸುಂದರಿಯಾದ ನಾರಿಯನ್ನು ಬ್ರಹ್ಮದೇವರು ತನ್ನ ಮನಸ್ಸಿನಿಂದಲೇ ನಿರ್ಮಿಸಿದರು. ಅತಿ ಪ್ರಕಾಶದಿಂದ ಕೂಡಿದ ಆ ಸುಂದರಿಯು ಆಭರಣಗಳಿಂದ ಅಲಂಕೃತಳಾಗಿದ್ದು ಬ್ರಹ್ಮದೇವರ ಎದುರಿನಲ್ಲಿ ಬಂದಳು. ರೂಪವೈಭವಸಂಪನ್ನಳಾದ ಆ ಸುಂದರಿಯನ್ನು ನೋಡಿ ಬ್ರಹ್ಮದೇವರೂ ತನ್ನ ಕಣ್ಣುಗಳನ್ನು ಮುಚ್ಚಿಕೊಂಡರು. ನನ್ನ ಭಕ್ತರಾದ ಸಜ್ಜನರೂ ಈ ಸ್ತ್ರೀಯಿಂದ ಮೋಹಿತರಾಗಬಹುದೆಂದು ತಿಳಿದು ಬ್ರಹ್ಮದೇವರು ಹೇಳಲಾರಂಭಿಸಿದರು. "ತಾಯಿ, ಮಗಳು, ಸೊಸೆ, ಅತ್ತಿಗೆ, ಗುರುಪತ್ನಿಯರನ್ನು ಕಾಮಪೂರ್ಣಕಣ್ಣುಗಳಿಂದ ನೋಡಿದವನು

ಘೋರನರಕದಲ್ಲಿ ಬೀಳುತ್ತಾನೆ. ಅವನು ಅದುವರೆಗೆ ಮಾಡಿದ ಪುಣ್ಯವೆಲ್ಲವೂ ನಿಷ್ಫಲವಾಗುತ್ತದೆ. ಮೇಲೆ ಹೇಳಿದ ರಮಣಿಯರ ಸಂಗಮಾಡಿದರೆ ಹತ್ತು ಸಾವಿರ ಜನ್ಮ ಪುಣ್ಯ ನಾಶವಾಗುತ್ತದೆ. ಆ ಮಾನವನು ಬೆಟ್ಟದ ಇಲಿಯಾಗಿ ಹುಟ್ಟುತ್ತಾನೆ. ಆದುದರಿಂದ ಜ್ಞಾನಿಯು ಯುವತಿಯರ ಕಡೆಗೆ ರಾಗಭರಿತ ದೃಷ್ಟಿಯಿಂದ ನೋಡಕೂಡದು.

ಧರ್ಮರಾಜ ಕೇಳು, ಸೊಸೆಯು ಮಾವನ ಎದುರು ತನ್ನ ಅಂಗಪ್ರದರ್ಶನ ಮಾಡಿ ಹಾವಭಾವ ತೋರಿಸಿದರೆ ಅವಳ ಕೈಕಾಲುಗಳು ಕರಗಿಹೋಗುತ್ತವೆ, ಅವಳು 'ಕೃಮಿಭಕ್ಷ' ಎಂಬ ನರಕಕ್ಕೆ ಬೀಳುತ್ತಾಳೆ. ಸೊಸೆಯಿಂದ ಕಾಲು ತೊಳೆಸಿಕೊಳ್ಳುವುದು, ಸ್ನಾನ ಮಾಡಿಸಿಕೊಳ್ಳುವುದು ಮುಂತಾದ ಕೆಲಸಗಳನ್ನು ಮಾಡಿಸಿಕೊಳ್ಳುವ ಪಾಪಿಯೂ ಹಿಂದೆ ಹೇಳಿದ ಶಿಕ್ಷೆಯನ್ನೇ ಅನುಭವಿಸುತ್ತಾನೆ. ಅವನು ಒಂದು ಕಲ್ಪದವರೆಗೆ ನರಕದಲ್ಲಿ ಕಪ್ಪಾದ ಮುಖವುಳ್ಳ ಸೂಚೀಮುಖ ಎಂಬ ಕೀಟಗಳಿಗೆ ಆಹಾರವಾಗುತ್ತಾ ಇರುತ್ತಾನೆ. ಆದುದರಿಂದ ಮಗಳು ಅಥವಾ ಸೊಸೆಯನ್ನು ಕಾಮಯುಕ್ತ ದೃಷ್ಟಿಯಿಂದ ನೋಡಿದ ಪಾಪಿಯು ಪತಿತನಾಗುತ್ತಾನೆ.'' ಆಗ ಆ ನಾರಿಯು ಚತುರ್ಮುಖ ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ಇಂತೆಂದಳು ''ಸ್ವಾಮಿಯೇ, ನನ್ನ ಸ್ವರೂಪವನ್ನು ನೋಡಿ ಯೋಗಿಗಳೂ ಮೋಹಿತರಾಗುತ್ತಿದ್ದಾರೆ. ನಾನು ಆತ್ಮಪ್ರಶಂಸೆ ಮಾಡಿಕೊಳ್ಳಬಾರದು. ಆದರೂ ಕಾರ್ಯನಿರ್ವಾಹದ ಉದ್ದೇಶದಿಂದ ನನ್ನ ಬಗ್ಗೆ ಸ್ವಲ್ಪ ಹೇಳಿಕೊಳ್ಳುತ್ತೇನೆ. ನನ್ನ ಸುಂದರರೂಪ ಉನ್ಮಾದಕ. ಮೋಹಕ. ನೀವು ಯಾವನನ್ನು ಕ್ಷೋಭೆಗೊಳಿಸಲು ಸೃಷ್ಟಿಮಾಡಿದ್ದೀರೋ ಅವನು ಯಾರೆಂದು ಹೇಳಿರಿ. ಈ ಕ್ಷಣದಲ್ಲಿ ಅವನನ್ನು ಮರುಳುಗೊಳಿಸುವೆನು. ಬೆಟ್ಟಗಳೂ ನನ್ನನ್ನು ನೋಡಿ ಮೋಹಿತವಾಗುತ್ತವೆ. ಎಂದ ಮೇಲೆ ಶ್ವಾಸೋಚ್ಛ್ವಾಸವನ್ನು ಮಾಡುವ ಇತರರ ಮಾತೇನು ?'' ಆದುದರಿಂದಲೇ ಪುರಾಣಗಳಲ್ಲಿ ಹೆಂಗಸರ ಕಡೆ ನೋಡುವುದು, ಅವರ ಸೌಂದರ್ಯದ ಚರ್ಚೆಮಾಡುವದು ಉನ್ಮಾದಕಾರಿಯೆಂದು ಹೇಳಿದ್ದಾರೆ, ಮನುಷ್ಯನು ಮೋಹಕವಾದ ಕಪ್ಪುರೆಪ್ಪೆಯ, ಸುಂದರಕಣ್ಣಿನ ಕಟಾಕ್ಷಬಾಣದ ಆಘಾತವಾಗದಿರುವಾಗ ಮಾತ್ರ ಸನ್ಮಾರ್ಗಗಾಮಿ, ಇಂದ್ರಿಯ ನಿಗ್ರಹವುಳ್ಳವನು, ಲಜ್ಜೆವಿನಯಗಳಿಂದ ಕೂಡಿದವನೂ ಆಗಿರುತ್ತಾನೆ. ಕಟಾಕ್ಷ ಬಾಣ ಬಿದ್ದ ಮೇಲೆ ಮಾನವನು ಪೂರ್ತಿಯಾಗಿ ಬದಲಾಯಿಸುತ್ತಾನೆ.

**ಪೀತಂ ಹಿ ಮದ್ಯಂ ಮನುಜೇನ ನಾಥ ಕರೋತಿ ಮೋಹಂ ಸುವಿಚಕ್ಷಣಸ್ಯ।**
**ಸ್ಮೃತಾ ಚ ದೃಷ್ಟ್ವಾ ಯುವತೀ ನರೇಣ ವಿಮೋಹಯೇದೇವ ಸುರಾಧಿಕಾ ಹಿ॥**

**ನಾರ. ಉತ್ತರ ೭-೪೦**

ದೇವ, ಹೆಂಡವು ಕುಡಿದ ಮೇಲೆಯೇ ಮನುಷ್ಯನಿಗೆ ಮತ್ತು ಬರಿಸುತ್ತದೆ, ಆದರೆ ಯುವತಿಯಾದ ನಾರಿಯು ದೂರದಿಂದ ನೋಡಿದರೂ, ನೆನಸಿದರೂ ಮೋಹವನ್ನುಂಟು ಮಾಡುತ್ತಾಳೆ. ಅವಳು ಮದ್ಯಕ್ಕಿಂತಲೂ ಹೆಚ್ಚು ಹುಚ್ಚು ಹಿಡಿಸುವವಳು.

**ಬ್ರಹ್ಮದೇವರು ಹೇಳಿದರು:-** ದೇವಿ, ನೀನು ಸರಿಯಾಗಿ ಹೇಳಿದೆ. ಮೂರು ಲೋಕಗಳಲ್ಲಿಯೂ ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ, ಮಹಾಮೋಹಿನಿ ಶಕ್ತಿಯುತಳಾದ ನೀನು ಸಮಸ್ತ ಲೋಕಗಳ ಮನಸ್ಸನ್ನು ಅಪಹರಿಸಬಲ್ಲೆ. ನಾನು ನಿನ್ನನ್ನು ಸೃಷ್ಟಿಪಡಿಸಿದ ಉದ್ದೇಶವನ್ನು ಕೇಳು. ಮಂಗಳ ಸ್ವರೂಪಿಣಿಯೇ, ವಿದಿಶಾ ನಗರದಲ್ಲಿ

ರುಕ್ಮಾಂಗದನೆಂಬ ರಾಜನಿದ್ದಾನೆ, ರೂಪದಲ್ಲಿ ನಿನಗೆ ಸಮಾನಳಾದ ಸಂಧ್ಯಾವಳಿ ಎಂಬುವವಳು ಅವನ ರಾಣಿಯಾಗಿದ್ದಾಳೆ. ತಂದೆಗಿಂತಲೂ ಅಧಿಕ ಪರಾಕ್ರಮಶಾಲಿಯಾದ ಧರ್ಮಾಂಗದನೆಂಬುವವನು ಅವನ ಪುತ್ರನು, ಒಂದು ಲಕ್ಷ ಆನೆಗಳ ಬಲವುಳ್ಳ ಅವನು ಸೂರ್ಯನಂತೆ ಪರಾಕ್ರಮಶಾಲಿಯಾಗಿದ್ದಾನೆ. ಮಗನು ಸಪ್ತದ್ವೀಪಾಧಿಪತಿಯಾಗಿದ್ದಾನೆ. ತಂದೆತಾಯಿಯರ ದಾಕ್ಷಿಣ್ಯದಿಂದ ಅವನು ಇದುವರೆಗೂ ಮದುವೆಯಾಗಿಲ್ಲ, ಸಾವಿರಾರು ರಾಜಕುಮಾರಿಯರು ಅವನ ಪತ್ನಿಯಾಗಲು ಬಯಸಿದರೂ ಅವನು ಯಾರನ್ನೂ ವರಿಸಲಿಲ್ಲ. ಅವನು ತಂದೆತಾಯಿಗಳ ಅಪ್ಪಣೆಯನ್ನು ಸ್ವಲ್ಪವೂ ಮೀರುವವನಲ್ಲ. ಸುವರ್ಣ ಪ್ರಾಸಾದಗಳಲ್ಲಿ ವಾಸಮಾಡುವ ಮುನ್ನೂರು ಮಂದಿ ಮಾತೆಯರಿಗೂ ಧರ್ಮಾಂಗದನು ವಿಧೇಯನಾಗಿದ್ದಾನೆ. ರಾಜಾರುಕ್ಮಾಂಗದನಿಗೂ ಜೀವನದಲ್ಲಿ ಧರ್ಮವೇ ಪ್ರಧಾನವಾಗಿದೆ. ಇಂತಹ ರಾಜನನ್ನು ಮೋಹಕ್ಕೊಳಗಾಗುವಂತೆ ಮಾಡು. ಮಂದರಾಚಲಕ್ಕೆ ಹೋಗಿ ಸಂಗೀತದಿಂದ ಮರುಳಗೊಳಿಸು. ನಿನ್ನ ಗುಣಕ್ಕೆ ಅನುರೂಪವಾಗಿ ನಿನಗೆ ಮೋಹಿನಿಯೆಂದೇ ಹೆಸರಿಟ್ಟಿದ್ದೇನೆ. ನಡೆ.'' ಮೋಹಿನಿಯು ಬ್ರಹ್ಮದೇವರಿಗೆ ನಮಿಸಿ ಮೊದಲನೆಯ ಮೂಹೂರ್ತದಲ್ಲಿ ಮಂದರಾಚಲದ ಬಳಿಗೆ ಬಂದು ಅಲ್ಲಿಯ ಒಂದು ಶಿಖರವನ್ನು ತಲುಪಿದಳು, ದೇವ ದಾನವರು ಕ್ಷೀರಸಮುದ್ರಮಥನಕ್ಕೆ ಉಪಯೋಗಿಸಿದ, ನಾರಾಯಣನು ಕೂರ್ಮರೂಪದಿಂದ ಬೆನ್ನಲ್ಲಿ ಧರಿಸಿದ ಪರ್ವತವದು. ಕೂರ್ಮನ ಬೆನ್ನು ಉಜ್ಜಿದರೂ ಬೀಳದ ಗಟ್ಟಿಯಾದ ಪರ್ವತವದು. ಕ್ಷೀರಸಾಗರದ ಆಳವನ್ನು ತಿಳಿದ ಆ ಪರ್ವತವು ನಾನಾವಿಧ ರತ್ನ ಮತ್ತು ಧಾತುಗಳಿಗೆ ಆಶ್ರಯವಾಗಿದೆ. ದೇವತೆಗಳ ವಿಹಾರಕ್ಕೆ, ಋಷಿಗಳ ತಪಸ್ಸಿಗೆ ಹಿತವಾದ ಸ್ಥಳವದು. ಅದರ ಬುಡ ಹನ್ನೊಂದು ಸಾವಿರ ಯೋಜನ ಕೆಳಗಿಳಿದಿದೆ. ಅದರ ವಿಸ್ತಾರ ಮತ್ತು ಎತ್ತರಗಳೂ ಅಷ್ಟೇ ಇವೆ. ಸುವರ್ಣರತ್ನ ಶಿಖರಗಳಿಂದ ಆಕಾಶವನ್ನು ಪ್ರಕಾಶಗೊಳಿಸುತ್ತಿರುವ ಮಂದರಪರ್ವತದ ಶಿಖರದ ಬಳಿ ಮೋಹಿನಿ ಬಂದಳು. ಅಲ್ಲಿಯ ಏಳು ಯೋಜನ ವಿಸ್ತಾರವಾದ ಶಿಲಾಫಲಕದಲ್ಲಿ ಬಂದು ಕುಳಿತಳು. ಕಪ್ಪಾದ ಆ ಕಲ್ಲು ಹಲಿಗೆಯ ಮೇಲೆ ವಜ್ರಮಯವಾದ ಏಳುಮೊಳದ ಒಂದು ಶಿವಲಿಂಗವಿತ್ತು. ಅದರ ಬಳಿಯಲ್ಲಿ ಕುಳಿತು, ತನ್ನ ಮೈಕಾಂತಿಯಿಂದ ಪರ್ವತವನ್ನು ಮತ್ತಷ್ಟು ಬೆಳಗುತ್ತಾ ಮಹಡಿಯ ಸುವರ್ಣಕಲಶದಂತೆ ಕಂಗೊಳಿಸುವ ಶಿವಲಿಂಗದ ಬಳಿ ಕುಳಿತು ಸಂಗೀತವನ್ನು ಪ್ರಾರಂಭಿಸಿದಳು, ವೀಣೆಯ ಝುಂಕಾರ, ಶ್ರುತಿಸ್ವರಗಳಿಗನು ಗುಣವಾದ ತಾಳ, ಮಧುರಗಾನ, ಗಾಂಧಾರ ಸ್ವರದಲ್ಲಿ ಗೀತಾಲಾಪ. ಗೀತದಲ್ಲಿ ವಿರಹವೇದನೆಯ ದಿವ್ಯಧ್ವನಿ. ದೇವಾಸುರ ಸಭೆಗಳಲ್ಲಿಯೂ ಇಂತಹ ದಿವ್ಯ ಸಂಗೀತವು ಎಂದೂ ಕೇಳಿಬಂದಿರಲಿಲ್ಲ. ಸ್ಥಾವರ ಜಂಗಮ ಪ್ರಪಂಚವೆಲ್ಲವೂ ಸಂಗೀತತರಂಗಗಳಲ್ಲಿ ತೇಲಿ ಹೋಗುತ್ತಿತ್ತು. ಎಲ್ಲರೂ ಅದ್ಭುತಮೋಹಕ್ಕೆ ಒಳಗಾಗುತ್ತಿದ್ದರು.

## ರುಕ್ಮಾಂಗದನು ಧರ್ಮರಾಜನಿಗೆ ರಾಜ್ಯವನ್ನು ಒಪ್ಪಿಸಿದನು

**ಸೂತ ಪುತ್ರರು ಹೇಳುತ್ತಾರೆ:-** ರುಕ್ಮಾಂಗದ ಮಹಾರಾಜನು ಮನುಷ್ಯಲೋಕದಲ್ಲಿ ರಾಜೋಚಿತ ಭೋಗಗಳನ್ನು ಅನುಭವಿಸುತ್ತಿದ್ದರೂ ಸರ್ವದಾ ಅನೇಕ ರೀತಿಗಳಿಂದ ಪೀತಾಂಬರಧಾರಿಯಾದ ಶ್ರೀ ಹರಿಯನ್ನೇ ಆರಾಧಿಸುತ್ತಿದ್ದನು, ಅವನು ಶತ್ರುಗಳನ್ನು ಯುದ್ಧದಲ್ಲಿ ಜಯಸಿದ್ದು ಮಾತ್ರವೇ ಅಲ್ಲ. ವೈವಸ್ವತಯಮನನ್ನೂ ಜಯಿಸಿ

ಯಮಲೋಕವನ್ನು ಖಾಲಿಮಾಡಿ ವೈಕುಂಠಲೋಕವನ್ನು ವಿಷ್ಣುಭಕ್ತರಿಂದ ತುಂಬಿಸಿದನು. ಒಂದು ದಿನ ಅವನು ತನ್ನ ಮಗನಾದ ಧರ್ಮಾಂಗದನನ್ನು ಕರೆದು ಹೇಳಿದನು - ''ಇನ್ನು ಮುಂದೆ ನೀನೇ ಧರ್ಮಮಾರ್ಗದಿಂದ ನಮ್ಮ ರಾಜ್ಯವನ್ನು ಕಾಪಾಡು. ನಾನು ಭಗವಂತನಾದ ನಾರಾಯಣನ ಆರಾಧನೆಯನ್ನು ಎಲ್ಲರಿಗೂ ಶ್ರೇಯಸ್ಕರ ಎಂದು ಬೋಧಿಸಿ ಅವನ ಪ್ರೀತಿಗಾಗಿ ಏಕಾದಶಿಯ ದಿನ ಉಪವಾಸ ಮಾಡಬೇಕೆಂದು ಕಟ್ಟಪ್ಪಣೆ ಮಾಡಿದ್ದೇನೆ.

'ಬಾಲಕರು, ಬಾಲಿಕೆಯರು, ಗರ್ಭಿಣಿ ಸ್ತ್ರೀಯರು, ರೋಗಪೀಡಿತರು. ಕಷ್ಟಪೀಡಿತರು ಇವರೆಲ್ಲರೂ ಉಪವಾಸ ಮಾಡಲು ಸಾಧ್ಯವಿಲ್ಲ. ಅನೇಕ ಯುವಕರಿಗೂ ವೃದ್ಧರಿಗೂ ಉಪವಾಸ ಮಾಡಲು ಸಾಧ್ಯವಿಲ್ಲ.' ಎಂದು ಅನೇಕರು ಪ್ರತಿವಾದವನ್ನೊಡ್ಡಿದರು. ನಾನು ಅವರಿಗೆ ಸಮಾಧಾನ ಹೇಳಿ ಪುರಾಣದ ಹಿತಕರವಾದ ಮಾತುಗಳ ತಾತ್ಪರ್ಯವನ್ನು ತಿಳಿಸಿ ಅವರನ್ನು ಒಪ್ಪಿಸಿದೆನು. ವಿದ್ವಾಂಸರಿಗೆ ಶಾಸ್ತ್ರವಚನಗಳ ಮೂಲಕ ಸಮಾಧಾನ ಹೇಳಿದೆನು. ಮೂರ್ಖರಿಗೆ ದಂಡಭೀತಿಯನ್ನುಂಟು ಮಾಡಿ ಧರ್ಮಮಾರ್ಗದಲ್ಲಿ ಪ್ರವೃತ್ತಿಯನ್ನುಂಟು ಮಾಡಿದೆನು. ಅಂತೂ ಏಕಾದಶಿಯ ದಿನ ಎಲ್ಲರನ್ನು ನಿರಾಹಾರರನ್ನಾಗಿ ಇರುವಂತೆ ನಾನು ಮಾಡಿದ್ದೇನೆ. ಇದನ್ನು ನೀನು ಮುಂದುವರಿಸಬೇಕು.

**ಧರ್ಮಾಂಗದನೆಂದನು:-** ಅಪ್ಪಾ, ನಿಮ್ಮ ಅಪ್ಪಣೆಯಂತೆ ನಾನು ಇಂದಿನಿಂದ ರಾಜ್ಯಭಾರವನ್ನು ವಹಿಸಿಕೊಳ್ಳುತ್ತೇನೆ. ನಿಮ್ಮ ಆಜ್ಞಾಪಾಲನೆಗಿಂತ ಶ್ರೇಷ್ಠವಾದ ಧರ್ಮವು ನನಗೆ ಮತ್ತಾವುದೂ ಇಲ್ಲ.'' ಹೀಗೆ ಹೇಳಿದ ಧರ್ಮಾಂಗದನಿಗೆ ರಾಜ್ಯವನ್ನೊಪ್ಪಿಸಿ ರುಕ್ಮಾಂಗದನು ಕಾಡಿಗೆ ಹೊರಡಲು ಸಿದ್ಧನಾದನು. ಇತ್ತ ಧರ್ಮಾಂಗದನು ಪ್ರಜೆಗಳನ್ನು ಕರೆಸಿ ಹೇಳಿದನು - ''ಪ್ರಜೆಗಳಿರಾ, ತಂದೆಯ ಅಪ್ಪಣೆಯಿಂದ ಇಂದಿನಿಂದ ನಾನು ರಾಜ್ಯಭಾರದ ಹೊಣೆಯನ್ನು ಹೊತ್ತಿದ್ದೇನೆ. ನನ್ನ ಶಾಸನ ಸಮಯದಲ್ಲಿ ನನ್ನ ತಂದೆಯ ಕಾಲದಲ್ಲಿದ್ದಂತೆಯೇ ಈ ರಾಜ್ಯದಲ್ಲಿ ಅಧರ್ಮಕ್ಕೆ ಅವಕಾಶವಿಲ್ಲ. ನೀವೆಲ್ಲರೂ ಗರುಡಧ್ವಜನಾದ ಶ್ರೀಹರಿಯ ಸ್ಮರಣೆ ಮಾಡುತ್ತ ಭಗವದರ್ಪಣ ಬುದ್ಧಿಯಿಂದಲೇ ಎಲ್ಲ ಕರ್ತವ್ಯ - ಕರ್ಮಗಳ ಅನುಷ್ಠಾನ ಮಾಡುತ್ತ ಇರಬೇಕು. ಸಾಂಸಾರಿಕ ಭೋಗಗಳಲ್ಲಿ ಆಸಕ್ತಿಯನ್ನು ತೊರೆದು ನಿಮ್ಮ ನಿಮ್ಮ ಜಾತಿಗೆ ವಿಹಿತವಾದ ಕರ್ಮಗಳ ಮೂಲಕ ಭಗವಂತನ ಪೂಜೆಯನ್ನು ಮಾಡುತ್ತ ಇರಬೇಕು. 'ಏಕಾದಶಿಯ ದಿನ ಭೋಜನ ಮಾಡಬಾರದು' ಎಂಬ ನಮ್ಮ ತಂದೆಯವರ ಅಪ್ಪಣೆಯ ಜೊತೆಗೆ ನಾನು ಇನ್ನೂ ಒಂದು ಹೊಸ ವಿಷಯವನ್ನು ಸೇರಿಸುತ್ತಿದ್ದೇನೆ. ನೀವೆಲ್ಲರೂ ಬ್ರಹ್ಮಜ್ಞಾನ ಸಂಪಾದನ ಮಾಡಿ ಬ್ರಹ್ಮನಿಷ್ಠರಾಗಬೇಕು. ಇದರಿಂದ ನಿಮಗೆ ಪುನರ್ಜನ್ಮರಹಿತವಾದ ಮೋಕ್ಷಮಾರ್ಗದ ಪ್ರಾಪ್ತಿಯಾಗುತ್ತದೆ.''

ಈ ರೀತಿ ಪ್ರಜೆಗಳಿಗೆ ಹಿತಬೋಧನ ಮಾಡಿ. ಆಶ್ವಾಸನೆಯನ್ನು ಕೊಟ್ಟು ಧರ್ಮಾಂಗದನು ಪ್ರಜಾಪಾಲನನಿರತನಾದನು. ಅವನು ಹಗಲೂ ರಾತ್ರಿ ನಿದ್ದೆ ಮಾಡದೆ ಭೂಮಂಡಲ ಭ್ರಮಣ ಮಾಡುತ್ತ ತನ್ನ ಶೌರ್ಯಬಲದಿಂದ ರಾಜ್ಯವನ್ನೆಲ್ಲ ನಿಷ್ಕಂಟಕವನ್ನಾಗಿ ಮಾಡಿದನು. ಅವನು ಪ್ರತಿದಿನವೂ ಆನೆಯ ಮೇಲೆ ನಗಾರಿಯನ್ನೇರಿಸಿ ಹೀಗೆ ಘೋಷಣೆ ಮಾಡಿಸುತ್ತಿದ್ದನು - ''ಜನರೇ, ದಶಮೀವೇಧವಿಲ್ಲದೆ ಏಕಾದಶೀ ಸಂಯುಕ್ತ ದ್ವಾದಶಿಯ ದಿನ ಉಪವಾಸ ಮಾಡಿರಿ. ಮಮತೆಯನ್ನು ಬಿಡಿರಿ. ಎಲ್ಲ ಕಾರ್ಯಗಳನ್ನು ಶ್ರೀಹರಿಯ ಪ್ರಸನ್ನತೆಗಾಗಿಯೇ ಮಾಡುತ್ತೇವೆಂದು ಸಂಕಲ್ಪಿಸಿ, ಕೊನೆಗೆ ಅವನಿಗೇ ಅರ್ಪಿಸಿರಿ'' ನಗಾರಿ ಹೊಡೆದ ಮೇಲೆ ಒಬ್ಬ ಬ್ರಾಹ್ಮಣನು ಈ ಮಾತುಗಳನ್ನು ಗಟ್ಟಿಯಾಗಿ

ಹೇಳುತ್ತಿದ್ದನು. ಧರ್ಮಾಂಗದನ ಈ ರಾಜ್ಯಭಾರ ಕ್ರಮವನ್ನು ನೋಡಿ ರುಕ್ಮಾಂಗದನಿಗೆ ತನ್ನ ಮಗನು ತನಗಿಂತಲೂ ಒಳ್ಳೆಯ ರೀತಿಯಲ್ಲಿ ರಾಜ್ಯವಾಳುತ್ತಿದ್ದಾನೆಂದು ತಿಳಿದು ಸಂತೋಷವಾಯಿತು. ಅವನು ರಾಣಿ ಸಂಧ್ಯಾವಳಿಯ ಬಳಿಗೆ ಹೋಗಿ 'ದೇವಿ, ನಾವಿಬ್ಬರೂ ಈಗ ಕೃತಕೃತ್ಯರು. ನಾನಂತೂ ಇನ್ನು ಅರಣ್ಯಕ್ಕೆ ಹೋಗಿ ಮೃಗಗಳ ಬೇಟೆಯಾಡುತ್ತ ಕ್ರೂರ ಮೃಗಗಳಿಂದ ಪ್ರಜೆಗಳಿಗೆ ರಕ್ಷಣೆಯನ್ನು ಒದಗಿಸುತ್ತ ತಿರುಗಾಡುತ್ತ ಇರುತ್ತೇನೆ''

## ಸಂಧ್ಯಾವಲಿಯು ಬೇಟೆಯಾಡದಂತೆ ರಾಜನನ್ನು ತಡೆದಳು

**ವಸಿಷ್ಠರು ಹೇಳುತ್ತಾರೆ:-** ಗಂಡನ ಮಾತನ್ನು ಕೇಳಿ ಸಂಧ್ಯಾವಲಿಯು ಕೇಳಿದಳು - ರಾಜನ್, ಸಪ್ತದ್ವೀಪಾ ವಸುಂಧರೆಯ ಪಾಲನೆಯ ಭಾರವನ್ನು ಮಗನಮೇಲೆ ಹೊರಿಸಿ, ಈಗ ಮೃಗಹಿಂಸೆಯನ್ನು ಮಾಡಲು ಹೊರಟಿರಾ? ಅಹಿಂಸಾಮಯ ಯಜ್ಞದಿಂದ ಜನಾರ್ದನನ ಪೂಜೆ ಮಾಡಿರಿ. ಸಮಸ್ತ ಭೋಗಾಭಿಲಾಷೆಯನ್ನು ಬಿಟ್ಟು ದೇವಗಂಗೆಯನ್ನು ಸೇವಿಸಿರಿ. ಮೃಗಗಳ ಹಿಂಸೆಯು ನ್ಯಾಯಸಮ್ಮತವಲ್ಲ. 'ಅಹಿಂಸಾ ಪರಮೋ ಧರ್ಮಃ' ಎಂಬ ಪುರಾಣಗಳ ಆದೇಶವನ್ನು ಕೇಳಿಲ್ಲವೇ? ಹಿಂಸಕನ ಎಲ್ಲಾ ಧರ್ಮವೂ ವ್ಯರ್ಥ. ಜೀವ ಹಿಂಸೆಯು ಆರು ವಿಧವೆಂದು ವಿದ್ವಾಂಸರು ಹೇಳಿದ್ದಾರೆ - ೧) ಹಿಂಸೆಯ ಅನುಮೋದನ ಮಾಡುವವನು ೨) ಹಿಂಸಕ ೩) ಹಿಂಸೆಗಾಗಿ ಪ್ರಾಣಿಗಳನ್ನು ನಂಬಿಸಿ ಮೋಸ ಮಾಡುವವನು ೪) ಕೊಂದ ಪ್ರಾಣಿಯ ಮಾಂಸ ತಿನ್ನುವವನು ೫) ಪ್ರಾಣಿಯ ಮಾಂಸ ಪಾಕ ಮಾಡುವವನು ೬) ಮಾಂಸವನ್ನು ಹಂಚುವವನು. ಈ ಆರು ಮಂದಿಯೂ ಹಿಂಸಕರು. ಹಿಂಸೆಯು ರಾಜರಿಗೂ ಅಧರ್ಮ. ಆದ್ದರಿಂದಲೇ ನಾನು ನಿಮ್ಮನ್ನು ಹಿಂಸೆ ಮಾಡದಂತೆ ತಡೆಯುತ್ತಿದ್ದೇನೆ.

**ರಾಣಿಯ ಮಾತನ್ನು ಕೇಳಿ ರಾಜನೆಂದನು:-** 'ದೇವಿ, ನಾನು ನಿರಪರಾಧಿಗಳಾದ ಮೃಗಗಳನ್ನು ಕೊಲ್ಲುವುದಿಲ್ಲ. ಪ್ರಜೆಗಳಿಗೆ ತೊಂದರೆ ಕೊಡುವ ಪ್ರಾಣಿಗಳನ್ನು ಮಾತ್ರವೇ ಕೊಲ್ಲುತ್ತೇನೆ, ನನ್ನ ಮಗನು ನಾಡಿನಲ್ಲಿ ಪ್ರಜೆಗಳನ್ನು ರಕ್ಷಿಸುವಂತೆ ನಾನು ಕಾಡಿನಲ್ಲಿ ಪ್ರಜೆಗಳ ರಕ್ಷಣೆಯ ಕೆಲಸವನ್ನು ಕೈಗೊಳ್ಳುತ್ತೇನೆ.''

## ರುಕ್ಮಾಂಗದನು ವಾಮದೇವ ಋಷಿಗಳ ಆಶ್ರಮಕ್ಕೆ ಹೋದನು

ಸಂಧ್ಯಾವಲಿಯೊಡನೆ ಹೀಗೆ ಹೇಳಿ ರುಕ್ಮಾಂಗದನು ಉತ್ತಮವಾದ ಕುದುರೆಯನ್ನೇರಿ ವೇಗವಾಗಿ ಹೊರಟನು. ಅವನನ್ನು ಹಿಂಬಾಲಿಸುತ್ತಿದ್ದ ಪದಾತಿ, ಆನೆ, ರಥ, ಕುದುರೆಗಳು ಹಿಂದೆಯೇ ಉಳಿದುವು. ರಾಜನು ವೇಗದಲ್ಲಿ ಉಚ್ಚೈಶ್ರವಸ್ಸನ್ನು ಮೀರಿಸುವ ಚಂದ್ರಧವಲವಾದ ಕುದುರೆಯ ಮೇಲೆ ಕೂತುಕೊಂಡು ೧೦೮ ಯೋಜನದೂರವನ್ನೂ ಕ್ರಮಿಸಿ ಋಷಿಗಳ ಉತ್ತಮವಾದ ಒಂದು ಆಶ್ರಮವನ್ನು ನೋಡಿದನು. ಅಲ್ಲಿ ಕುದುರೆಯಿಂದ ಇಳಿದು ಬಾಳೆಯ ತೋಟಗಳನ್ನೂ, ಅಶೋಕ, ಬಕುಲ, ಪುನ್ನಾಗಾದಿ ವೃಕ್ಷಗಳನ್ನೂ ನೋಡುತ್ತ ಪರಮಪುಣ್ಯಕರವಾದ ಆಶ್ರಮವನ್ನು ಪ್ರವೇಶಿಸಿ, ಅಲ್ಲಿ ಅಗ್ನಿಯಂತೆ ಪರಮ ತೇಜಸ್ವಿಯಾದ ವಾಮದೇವ ಋಷಿಗಳನ್ನು ನೋಡಿದನು. ಸುತ್ತಲೂ ಶಿಷ್ಯರಿಂದ ಆವೃತರಾದ ಅವರನ್ನು ನೋಡಿ ರಾಜನು ಆದರದಿಂದ ಅವರಿಗೆ ನಮಸ್ಕಾರ ಮಾಡಿದನು, ವಾಮದೇವರು ರಾಜನಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಉಚಿತವಾದ ಆಸನವನ್ನು ಕೊಟ್ಟರು. ಕುಶಾಸನದಲ್ಲಿ ಕುಳಿತ.

**ರಾಜನು ಕೈಜೋಡಿಸಿ ಹೇಳಿದನು:-** ಮಹರ್ಷಿವರ್ಯರೇ! ತಮ್ಮ ಪಾದಾನುಗ್ರಹದಿಂದ ನನಗೆ ಬಯಸಿದ ಎಲ್ಲ ವಸ್ತುವೂ ಲಭ್ಯವಾಗಿದೆ. ಆದರೆ ಬಹಳ ದಿನಗಳಿಂದ ನನ್ನ ಮನಸ್ಸಿನಲ್ಲಿಯೇ ನೆಲೆ ಮಾಡಿರುವ ಒಂದು ಸಂಶಯವನ್ನು ಪರಿಹರಿಸಬೇಕೆಂದು ತಮ್ಮನ್ನು ಪ್ರಾರ್ಥಿಸುತ್ತಿದ್ದೇವೆ. 'ನನ್ನನ್ನು ಕಾಮನಿಗಿಂತಲೂ ಅತಿ ಸುಂದರನೆಂದು ತಿಳಿದು ಪ್ರೀತಿಸುವ ಅತಿ ಸುಂದರಿಯಾದ ಪತ್ನಿಯು ಯಾವ ಪುಣ್ಯಫಲದಿಂದ ದೊರಕಿದ್ದಾಳೆ? ನನ್ನ ಪ್ರಿಯ ಪತ್ನಿ ಸಂಧ್ಯಾವಲಿಯು ಕಾಲಿಟ್ಟಲ್ಲೆಲ್ಲ ಅಡಗಿದ್ದ ನಿಧಿಯು ಮೇಲಕ್ಕೆ ಬರುತ್ತದೆ, ಅವಳ ಮೈಯಲ್ಲಿ ಮುಪ್ಪಿಗೆ ಅವಕಾಶವಿಲ್ಲ. ಮುಖಕಾಂತಿಯೂ ಯಾವಾಗಲೂ ಶರತ್ಕಾಲದ ಚಂದ್ರನಂತಿರುತ್ತದೆ. ಅವಳು ಅನಲ ಇಲ್ಲದೆ ನಲನಂತೆ ಸ್ವಲ್ಪವೇ ಷಡ್ರಸಭರಿತವಾದ ಪಾಕವನ್ನು ಮಾಡಿದರೂ ಅದು ಕೋಟಿಗಟ್ಟಲೆ ಮನುಷ್ಯರಿಗೆ ತೃಪ್ತಿಯನ್ನುಂಟು ಮಾಡಲು ಬೇಕಾದಷ್ಟು ಅಕ್ಷಯವಾಗುತ್ತದೆ. ಪರಪವಿತ್ರೆ, ದಾನಶೀಲೆ, ಸಮಸ್ತ ಪ್ರಾಣಿಗಳಲ್ಲಿ ವತ್ಸಲೆಯೂ ಆದ ಅವಳು ನಿದ್ದೆಯಲ್ಲಿಯೂ ನನಗೆ ಪ್ರತಿಕೂಲೆಯಾಗಿರುವುದಿಲ್ಲ, ಅವಳ ಗರ್ಭದಿಂದ ಹುಟ್ಟಿರುವ ನನ್ನ ಏಕಮಾತ್ರ ಪುತ್ರನು ಸರ್ವದಾ ನನ್ನ ಅಜ್ಞಾಧಾರಕನಾಗಿದ್ದು, ಈ ಭೂಮಂಡಲದಲ್ಲಿ ನಾನೊಬ್ಬನೇ ಪುತ್ರವಂತನೋ, ಎಂದು ಭಾವಿಸುವಷ್ಟು ಗುಣ ಸಂಪನ್ನನಾಗಿದ್ದಾನೆ. ನಾನು ಒಂದು ದ್ವೀಪದ ಅಧಿಪತಿ, ಗುಣಸಂಗ್ರಹದಲ್ಲಿ ನನಗಿಂತ ಅವನು ಬಹಳ ಮುಂದೆಯಿದ್ದಾನೆ. ತಾನು ಯುದ್ಧದಲ್ಲಿ ಜಯಿಸಿದ ವಿದ್ಯುಲ್ಲೇಖಾ ಎಂಬ ರಾಜಕುಮಾರಿಯನ್ನು ನನಗೆ ಅರ್ಪಿಸಿದ್ದಾನೆ. ಅತ್ಯಂತಸುಂದರ, ಹಾಗೆಯೇ ಅತಿಶೂರ, ನನ್ನ ಕುಮಾರ. ಆರು ತಿಂಗಳುಗಳ ಕಾಲ ಸೇನಾಪತಿಯಾಗಿ ಸೈನ್ಯವನ್ನು ನಡೆಸಿ ಅನೇಕ ರಾಜರನ್ನು ಸೋಲಿಸಿ, ನಿಶ್ಶಸ್ತ್ರರನ್ನಾಗಿ ಮಾಡಿದ್ದಾನೆ. ಸ್ತ್ರೀ ರಾಜ್ಯಕ್ಕೆ (ಕೇರಳ) ಹೋಗಿ ಸ್ತ್ರೀಯರನ್ನೆಲ್ಲ ಯುದ್ಧದಲ್ಲಿ ಜಯಿಸಿ, ಎಂಟು ಮಂದಿ ಅತಿಸುಂದರಿಯರನ್ನು ತಂದು ನನಗೆ ಒಪ್ಪಿಸಿದ್ದಾನೆ. ಈ ಎಲ್ಲ ನಾರಿಯರಲ್ಲಿಯೂ ಅವನು ಯಾವಾಗಲೂ ಮಾತೃಭಾವವನ್ನಿಟ್ಟಿದ್ದಾನೆ. ಅವನು ಭೂಮಂಡಲದಲ್ಲಿ ಜಯಿಸಿದ ಎಲ್ಲ ದಿವ್ಯ ವಸ್ತ್ರ, ರತ್ನಗಳನ್ನೆಲ್ಲ ನನಗೇ ತಂದೊಪ್ಪಿಸಿದ್ದಾನೆ. ಪ್ರತಿ ದಿನ ಅನೇಕ ಯೋಜನ ದೂರದವರೆಗೆ ದಿಗ್ವಿಜಯ ಸಂಚಾರ ಮಾಡಿ ರಾತ್ರಿ ನನ್ನ ಕಾಲಿಗೆ ಎಣ್ಣೆ ಹಚ್ಚಿ ಸೇವೆ ಮಾಡಲು ಮನೆಗೆ ಹಿಂತಿರುಗುವನು, ಅವನು ನನ್ನ ಸೇವೆ ಮಾಡಿ ಮಧ್ಯರಾತ್ರಿಯಲ್ಲಿ ಕವಚಧಾರಿಯಾಗಿ, ಖಡ್ಗಪಾಣಿಯಾಗಿ ರಾತ್ರಿಕಾಲದ ರಕ್ಷಕರಿಗೆ ಎಚ್ಚರಿಕೆ ಹೇಳುತ್ತ ಓಡಾಡುತ್ತಾನೆ. ಇಂತಹ ಸುಪುತ್ರನನ್ನು ಪಡೆದ ನಾನೂ ನೀರೋಗನಾಗಿ ಸುಖವಾಗಿ ಇರುತ್ತೇನೆ. ಎಲ್ಲ ಪ್ರಜೆಗಳೂ ನನ್ನ ಆಜ್ಞೆಯನ್ನು ಪಾಲಿಸುತ್ತಾರೆ. ಹೀಗೆ ಪ್ರಿಯಪತ್ನಿ, ಸುಪುತ್ರ. ಭಕ್ತರಾದ ಪ್ರಜೆಗಳು, ನೀರೋಗ ಧೃಢಶರೀರ. ಎಲ್ಲಾ ಸುಖಗಳ ಪ್ರಾಪ್ತಿ. ಇವೆಲ್ಲವೂ ಯಾವ ಪುಣ್ಯ ಪ್ರಭಾವದಿಂದ ಲಭ್ಯವಾಯಿತೆಂದು ತಾವು ತಿಳಿಸಬೇಕು, ಅನಂತ ನನಗೆ ಐಶ್ವರ್ಯವಿದೆ. ಪರಮಾತ್ಮನ ಪಾದಗಳಲ್ಲಿ ಅತುಲಭಕ್ತಿಯಿದೆ. ಬ್ರಾಹ್ಮಣರಿಗೆ ದಾನ ಧರ್ಮಮಾಡಿ ಅವರ ಅನುಗ್ರಹವನ್ನು ಪಡೆದಿದ್ದೇನೆ, ಇನ್ನೂ ಅದನ್ನು ಪಡೆಯುತ್ತಿದ್ದೇನೆ. ಇದೆಲ್ಲವೂ ಯಾವುದೋ ಒಂದು ವಿಶೇಷವಾದ ಪುಣ್ಯಕರ್ಮದ ಪ್ರಭಾವವಿರಬೇಕು. ಅದು ಯಾವುದು? ಹೇಳಿರಿ.

## ಅಶೂನ್ಯಶಯನ ವ್ರತದ ಪುಣ್ಯ ರಸಾಯನ

**ವಾಮದೇವ ಮಹರ್ಷಿಗಳು ಹೇಳುತ್ತಾರೆ:-** ರಾಜನೇ, ಹಿಂದಿನ ಜನ್ಮದಲ್ಲಿ ನೀನು

ಶೂದ್ರನಾಗಿದ್ದೆ. ಬಡತನ ಮತ್ತು ದುಷ್ಟ ಹೆಂಡತಿಯಿಂದ ನೊಂದ ನೀನು ಒಂದು ದಿನ ಒಬ್ಬ ಜ್ಞಾನಿಯಾದ ಬ್ರಾಹ್ಮಣನೊಡನೆ ತೀರ್ಥಯಾತ್ರೆಗೆ ಹೊರಟೆ. ದಾರಿಯಲ್ಲಿ ಅವನ ಸೇವೆ ಮಾಡುತ್ತ, ಮಥುರಾನಗರವನ್ನು ತಲುಪಿದೆ. ಅಲ್ಲಿ ವಿಶ್ರಾಮಘಟ್ಟವೆಂಬಲ್ಲಿ ವರಾಹ ಮಂದಿರದಲ್ಲಿ 'ಅಶೂನ್ಯಶಯನ ವ್ರತ'ದ ವಿಷಯದಲ್ಲಿ ಪುರಾಣ ಪ್ರವಚನವು ನಡೆಯುತ್ತಿತ್ತು. "ನಾಲ್ಕು ಬಾರಿ ಆ ವ್ರತವನ್ನು ಅನುಷ್ಠಾನ ಮಾಡಿ ಪಾರಣೆಮಾಡಿದರೆ ಸಿದ್ಧಿ ಯುಂಟಾಗುತ್ತದೆ. ಮೇಘಶ್ಯಾಮ, ಪೀತಾಂಬರಧಾರಿ ಲಕ್ಷ್ಮೀನಿವಾಸ, ಶ್ರೀಹರಿಯು ಪ್ರಸನ್ನ ನಾಗುತ್ತಾನೆ." ಎಂದು ಈ ವ್ರತದ ವಿಚಾರ ಕೇಳಿ ಮನೆಗೆ ಹಿಂದಿರುಗಿ ಆ ವ್ರತಾನುಷ್ಠಾನವನ್ನು ನೀನು ಮಾಡಿದೆ. ಜನ್ಮಮೃತ್ಯು ಜರಾವಸ್ಥಾನಾಶಕವಾದ ಈ ವ್ರತವನ್ನು ಶ್ರಾವಣಮಾಸದ ದ್ವಿತೀಯಾದಿನ ಆಚರಿಸಬೇಕು. ಈ ವ್ರತದಲ್ಲಿ ಫಲಪುಷ್ಪ, ಧೂಪ, ರಕ್ತಚಂದನಗಳಿಂದ ದೇವದೇವನನ್ನು ಪೂಜಿಸಿ ವಸ್ತ್ರದಾನ ಶಯ್ಯಾದಾನಗಳನ್ನು ನೀಡಬೇಕು. ದ್ವಿಜರ ಭೋಜನ ಮಾಡಿಸಬೇಕು. ಈ ದುಷ್ಕರ ನಿಯಮಗಳನ್ನು ನೀನು ಪೂರೈಸಿದೆ. ಅದರ ಪುಣ್ಯದಿಂದ ಈ ಜನ್ಮದಲ್ಲಿ ಈ ರೀತಿ ಸುಖವನ್ನು ಅನುಭವಿಸುತ್ತಿರುವೆ. ಯಾರಲ್ಲಿ ಜಗನ್ನಾಥನಾದ ವೈಕುಂಠನ ಅಕುಂಠಿತಾನುಗ್ರಹವಾಗಿರುವುದಿಲ್ಲವೋ ಅವರಿಗೆ ಇಂತಹ ಸುಖವು ಸ್ವಪ್ನದಲ್ಲಿಯೂ ದುರ್ಲಭವು. ರಾಜೇಂದ್ರ, ಈ ಜನ್ಮದಲ್ಲಿಯೂ ನೀನು ಏಕಾದಶೀ ದ್ವಾದಶಿಗಳ ನಿಯಮ ವನ್ನು ಪರಿಪಾಲಿಸುತ್ತ ಪಡೆಗಳಿಂದಲೂ ಮಾಡಿಸುತ್ತ ಶ್ರೀಹರಿಪೂಜೆಯನ್ನು ನೀನು ಸ್ವಂತ ಮಾಡುತ್ತಲೇ ಇರುವೆ. ಇದರಿಂದಾಗಿ ನಿನಗೆ ಭಗವಂತನ ಸಾಯುಜ್ಯವೇ ಪ್ರಾಪ್ತವಾಗುವುದು.

## ಮಂದರಧರನ ಭಕ್ತನು ಮಂದಾರಚಲದ ಕಡೆಗೆ

**ರಾಜನಂದನು:-** ಮುನಿಶ್ರೇಷ್ಠರೇ, ತಮ್ಮ ಮಾತಿನಿಂದ ನನ್ನ ಸಂದೇಹ ಪರಿಹಾರವಾಯಿತು. ತಮಗೆ ಅನಂತ ಪ್ರಣಾಮಗಳು. ನಾನೀಗ ಮಂದರಾಚಲದ ಕಡೆಗೆ ಹೋಗುವ ಆಸೆಯಿಂದ ಕೂಡಿದ್ದೇನೆ. ಮಗನಿಗೆ ರಾಜ್ಯಭಾರವನ್ನೊಪ್ಪಿಸಿ ಸ್ವಸ್ಥ್ಯಗಿರುವೆ. ಈಗ ವನಪರ್ವತಗಳ ಅಟನವನ್ನು ಕೈಗೊಂಡಿದ್ದೇನೆ.

**ವಾಮದೇವಋಷಿಗಳು ಹೇಳಿದರು :-**

ಏತದ್ಧಿ ಪರಮಂ ಕೃತ್ಯಂ ಪುತ್ರಸ್ಯ ನೃಪಪುಂಗವ ।
ಯತ್ ಕ್ಲೇಶಾತ್ ಪಿತರಂ ಪ್ರೇಮ್ಣಾ ವಿಮೋಚಯತಿ ಸರ್ವದಾ ॥

ಪಿತುರ್ವಚನಕಾರೀ ಚ ಮನೋ ವಾಕ್ಕಾಯ ಶಕ್ತಿತಃ ।
ತಸ್ಯ ಭಾಗೀರಥೀಸ್ನಾನಂ ಅಹನ್ಯಹನಿ ಜಾಯತೇ ॥

ನಿರಸ್ಯ ಪಿತೃವಾಕ್ಯಂ ತು ವ್ರಜೇತ್ ಸ್ನಾತುಂ ಸುರಾಪಗಾಂ ।
ನೋ ಶುದ್ಧಿಸ್ತಸ್ಯ ಪುತ್ರಸ್ಯ ಇತೀತ್ಥಂ ವೈದಿಕೀ ಶ್ರುತಿಃ ॥

ನಾ.ಉತ್ತರ ॥೨೧-೨೩॥

ತಂದೆಯನ್ನು ಸಮಸ್ತ ಕ್ಲೇಶಗಳಿಂದ ದೂರವಾಗಿ ಇಡುವುದೇ ಪುತ್ರನ ಪರಮ ಶ್ರೇಷ್ಠ ಕರ್ತವ್ಯ. ಮನೋವಾಕ್ಕಾಯಕರ್ಮಗಳಿಂದ ತಂದೆಯ ಅಪ್ಪಣೆಯನ್ನು ಪಾಲಿಸುವ ಮಗನಿಗೆ ಪ್ರತಿದಿನವೂ ಗಂಗಾಸ್ನಾನ ಫಲವು ಸಿಗುತ್ತದೆ. ತಂದೆಯ ಮಾತನ್ನು ಮೀರುವ ಮಗನಿಗೆ ಗಂಗಾಸ್ನಾನದಿಂದಲೂ ಶುದ್ಧಿಯಿಲ್ಲ. ಇದು ವೇದವಚನ, ರಾಜನೇ, ಸರಿ ನೀನಿನ್ನು

ಇಚ್ಛಾನುಸಾರವಾಗಿ ಸಂಚರಿಸು. ನಿನ್ನ ಕರ್ತವ್ಯವನ್ನು ಪೂರ್ತಿಮಾಡಿರುವುದರಿಂದ ನೀನು ಇನ್ನು ಬೇಕಾದಲ್ಲಿಗೆ ಹೋಗಬಹುದು. ಋಷಿಯ ಮಾತನ್ನು ಕೇಳಿ ರಾಜಾರುಕ್ಮಾಂಗದನು ಕುದುರೆಯನ್ನೇರಿ ವೇಗವಾಗಿ ಹೊರಟನು. ದಾರಿಯಲ್ಲಿ ಅನೇಕಾನೇಕ ಪರ್ವತ ವನಗಳನ್ನು ಸರೋವರಗಳನ್ನು ಮತ್ತಿತರ ಆಶ್ಚರ್ಯಕರವಾದ ದೃಶ್ಯಗಳನ್ನು ನೋಡುತ್ತ ಸ್ವಲ್ಪಹೊತ್ತಿನಲ್ಲಿಯೇ ಶ್ವೇತಗಿರಿ, ಗಂಧಮಾದನ, ಮಹಾಮೇರುಗಳನ್ನು ದಾಟಿ ಉತ್ತರ ಕುರುವರ್ಷವನ್ನು ನೋಡುತ್ತ ಮಂದರ ಪರ್ವತವನ್ನು ತಲುಪಿದನು. ಮಂದರವು ಸರ್ವತಃ ಸುವರ್ಣಾಚ್ಛಾದಿತವಾಗಿತ್ತು. ಅಲ್ಲಿ ಝರಿಗಳು ಮೇಲಿಂದ ಕೆಳಗೆ ಜುಳು, ಜುಳು ಎಂದು ಹರಿಯುತ್ತಿದ್ದವು, ಅನೇಕ ಗುಹೆಗಳು ಆ ಪರ್ವತದ ಶೋಭೆಯನ್ನು ಹೆಚ್ಚಿಸಿದ್ದವು. ಸಾವಿರಾರು ನದಿಗಳಿಂದ ಶೋಭಿತವಾಗಿ ಆ ಪರ್ವತವು ಗಂಗೆಯ ಪವಿತ್ರಜಲದಿಂದ ಪ್ರಕ್ಷಾಲಿತವಾಗುತ್ತಿತ್ತು. ಈ ದೃಶ್ಯವನ್ನೆಲ್ಲ ನೋಡುತ್ತಾ ನೋಡುತ್ತಾ ರುಕ್ಮಾಂಗದರಾಜನು ಮಂದರಪರ್ವತದ ಬಳಿಗೆ ಬಂದು ತಲುಪಿದನು.

## ಮೋಹಿನಿಯ ಮೋಹಕ ಗೀತದಿಂದ ರಾಜನ ಮೂರ್ಛೆ

ಅಲ್ಲಿ ತಲುಪಿದ ಸ್ವಲ್ಪ ಹೊತ್ತಿನಲ್ಲಿಯೇ ರುಕ್ಮಾಂಗದ ಮಹಾರಾಜನಿಗೆ ಅದ್ಭುತವಾದ - ಸಂಗೀತವು ಕೇಳಿಸಿತು. ಎಲ್ಲ ಮೃಗಪಕ್ಷಿಗಳು ಸಂಗೀತಧ್ವನಿ ಬಂದ ಕಡೆಗೇ ಓಡುತ್ತಿದ್ದವು. ಅದು ಮೋಹಿನಿಯ ದಿವ್ಯ ಅದ್ಭುತ ಸಂಗೀತಧ್ವನಿಯಾಗಿತ್ತು. ರುಕ್ಮಾಂಗದರಾಜನು ಸಂಗೀತಧ್ವನಿ ಬರುತ್ತಿದ್ದ ಕಡೆಗೆ ತಾನೂ ವೇಗವಾಗಿ ಕುದುರೆಯನ್ನು ದೌಡಾಯಿಸಿದನು. ಸ್ವಲ್ಪ ಮುಂದಕ್ಕೆ ಹೋದಂತೆ ಸಂಗೀತವು ಮತ್ತಷ್ಟು ಸ್ಪಷ್ಟವಾಗಿ ಕೇಳಿಸಿತು. ಆಗ ರುಕ್ಮಾಂಗದ ಮಹಾರಾಜನು ಕುದುರೆಯನ್ನು ಇಳಿದು ಪರ್ವತ ಕಡಿದಾದ ದಾರಿಯನ್ನು ಹತ್ತಿ ಸ್ವಲ್ಪ ಹೊತ್ತಿನಲ್ಲಿಯೇ ಮೋಹಿನಿಯ ಬಳಿಗೆ ಹೋಗಿ ಸೇರಿದನು. ಪುಟಕ್ಕೆ ಹಾಕಿದ ಚಿನ್ನದ ಮೈಬಣ್ಣದ ದಿವ್ಯನಾರಿಯು ಸಂಗೀತವನ್ನು ಹಾಡುತ್ತಾಳೆ. ಸ್ವಯಂ ಗಿರಿನಂದಿನಿಯಾದ ಪಾರ್ವತಿಯ ರೂಪವೇ ಅವಳಲ್ಲಿ ಪ್ರಕಟವಾದಂತೆ ಕಾಣುತ್ತಿತ್ತು. ರಾಜನು ಮೋಹಿನಿಯಿಂದ ಸ್ವಲ್ಪದೂರದಲ್ಲಿ ನಿಂತು ಅವಳ ಸೌಂದರ್ಯವನ್ನು ನೆಟ್ಟದೃಷ್ಟಿಯಿಂದ ನೋಡುತ್ತಾ ನಿಂತನು. ಆದರೆ ನೋಡುತ್ತಾ ಮೂರ್ಛೆಹೊಂದಿ ಅಲ್ಲಿಯೇ ಬಿದ್ದು ಬಿಟ್ಟನು. ಕೂಡಲೇ ಮೋಹಿನಿಯು ಆ ಸದ್ದನ್ನು ಕೇಳಿ ವೀಣೆಯನ್ನು ಕೆಳಗಿಟ್ಟಳು. ಸಂಗೀತವನ್ನು ನಿಲ್ಲಿಸಿದಳು. ರಾಜನ ಹತ್ತಿರ ತ್ವರೆಯಿಂದ ಬಂದು ಮಧುರ ಧ್ವನಿಯಿಂದ ಮಾತಾಡುತ್ತ ಅವನನ್ನು ಮೂರ್ಛೆಬಿಟ್ಟೇಳುವಂತೆ ಸಂತೈಸಿದಳು. ''ಮಹಾರಾಜರೇ, ಏಳಿರಿ, ನಾನು ನಿಮ್ಮ ಅಧೀನಳು. ಮೂರ್ಛೆ ಹೊಂದಿ ಏಕೆ ಸಂತಾಪಪಡುವಿರಿ? ಈ ಭೂಮಂಡಲ ಭಾರವನ್ನು ಹುಲ್ಲು ಕಡ್ಡಿಗೆ ಸಮಾನವಾಗಿ ಧರಿಸಿದ ನೀವು ಈ ರೀತಿ ಮೋಹಿತರಾಗಬಹುದೇ? ಧೈರ್ಯವನ್ನು ಅವಲಂಬಿಸಿರಿ, ನನ್ನ ಜೊತೆಗೆ ವಿಹರಿಸಬೇಕೆಂಬ ಅಪೇಕ್ಷೆಯಿದ್ದರೆ ಧರ್ಮಕ್ಕೆ ಅನುಗುಣವಾದ ಕಟ್ಟುಪಾಡುಗಳಿಂದ ನನ್ನನ್ನು ನಿಮ್ಮ ದಾಸಿಯಾಗಿ ಮಾಡಿಕೊಳ್ಳಿರಿ' ಎಂದಳು.

## ಮೋಹಿನೀ ವಿಲಾಸ - ವಿವಾಹ

ರಾಜನು ಮೋಹಿನಿಯ ಮೋಹಕ ಮಾತುಗಳನ್ನು ಕೇಳಿ ಕಣ್ಣುಗಳನ್ನು ತೆರೆದು ಅವಳನ್ನೇ ನೋಡುತ್ತ ಗದ್ಗದಕಂಠದಿಂದ ಹೇಳಲಾರಂಭಿಸಿದನು - ''ವರಾಂಗನೇ! ನಾನು

ಪೂರ್ಣಚಂದ್ರಮುಖಿಯರನ್ನು ಅನೇಕರನ್ನು ನೋಡಿದ್ದೇನೆ, ಆದರೆ ಇಂತಹ ವಿಶ್ವಮೋಹನ ರೂಪವನ್ನು ಎಲ್ಲೂ ನೋಡಿಲ್ಲ, ನಿನ್ನಲ್ಲಿ ಒಂದು ಮಾತನ್ನು ಆಡಲೂ ಅವಕಾಶವಾಗದಷ್ಟು ಮೋಹವು ನನ್ನನ್ನು ಕವಿಯಿತು. ನಾನು ಮೂರ್ಛಿತನಾಗಿ ಪರ್ವತ ಶಿಖರದಲ್ಲಿ ಬಿದ್ದೆನು. ದೇವಿ! ನನ್ನಲ್ಲಿ ಕೃಪೆ ತೋರು, ನಿನ್ನ ಮನಸ್ಸಿನಲ್ಲಿ ಯಾವ ಅಭಿಲಾಷೆಯಿದ್ದರೂ ಹೇಳು. ಅದನ್ನು ಪೂರೈಸುವೆನು. ಈ ಸಂಪೂರ್ಣ ಭೂಮಂಡಲವು ನಿನ್ನ ಅಧೀನವೆಂದು ತಿಳಿ, ಜೊತೆಗೆ ಖಜಾನೆ, ಆನೆ, ಕುದುರೆ, ರಥ, ಮಂತ್ರಿ, ಸೇನಾಪತಿ, ನಗರ ಎಲ್ಲವೂ ನಿನ್ನವು. ನನ್ನನ್ನೇ ನಿನಗೆ ಅರ್ಪಿಸಿದ್ದೇನೆ. ಹೀಗಿರುವಾಗ ಹಣ, ರತ್ನಗಳ ಮಾತೇನು! ಮೋಹಿನಿ! ನನ್ನಲ್ಲಿ ಪ್ರಸನ್ನಳಾಗು.'' ರಾಜನ ಪ್ರಣಯ ಭಿಕ್ಷೆಯ ಮಾತನ್ನು ಕೇಳಿ ಮೋಹಿನಿಯು ಮಂದಹಾಸ ಮಾಡುತ್ತ ರಾಜನನ್ನು ಮೇಲಕ್ಕೆಬ್ಬಿಸುತ್ತ ಹೇಳಿದಳು. 'ಭೂಮೀರಮಣ! ನನಗೆ ಈ ಭೂಮಂಡಲ ಅಥವಾ ಮತ್ತಾವುದೂ ಬೇಕಿಲ್ಲ. ಆಯಾ ಸಮಯದಲ್ಲಿ ನಾನೇನು ಹೇಳುವೆನೋ ಅದನ್ನು ನಿಸ್ಸಂದೇಹವಾಗಿ ನಡೆಸಿಕೊಟ್ಟರೆ ಸಾಕು. ಈ ನಿಯಮವು ನಿಮಗೆ ಒಪ್ಪಿಗೆಯಾದರೆ ನಾನು ನಿಮ್ಮ ಸೇವೆ ಮಾಡಲು ಸಿದ್ಧಳಾಗಿದ್ದೇನೆ.

**ರಾಜನು ಹೇಳಿದನು:-** ನಿನಗೆ ಯಾವ ನಿಯಮ, ಶಪಥ ಇಷ್ಟವೋ ಅದರಂತೆ ಆಗಲಿ, ನನಗೂ ಅದು ಸಮ್ಮತ.

**ಮೋಹಿನಿಯು ಹೇಳಿದಳು:-** ತಮ್ಮ ಧರ್ಮಕಲಾಪೂರ್ಣವಾದ ಬಲಗೈಯನ್ನು ನನ್ನ ಬಲಗೈಯ ಮೇಲೆ ಇಟ್ಟು ಶಪಥ ಮಾಡಿರಿ, ನನ್ನ ಕೈಮೇಲೆ ನೀವು ಕೈಯಿಟ್ಟು ಆಣೆ ಮಾಡಿದರೆ ನನಗೆ ಸಂಪೂರ್ಣ ನಂಬಿಕೆಯುಂಟಾಗುತ್ತದೆ. ತಾವು ಪರಮ ಧಾರ್ಮಿಕರು, ನಿಮ್ಮ ಬಾಯಿಯಿಂದ ಎಂದೂ ಅಸತ್ಯವಾಕ್ಯವು ಬರಲಾರದು.' ಮೋಹಿನಿಯ ಮಾತನ್ನು ಕೇಳಿ ರಾಜನು ಪ್ರಸನ್ನನಾದನು. ''ಸುಂದರಿ! ಹುಟ್ಟಿದಂದಿನಿಂದ ಇದುವರೆಗೆ ನಾನೆಂದೂ ವಿನೋದಕ್ಕಾಗಿಯೂ ಸುಳ್ಳಾಡಿಲ್ಲ. ನನ್ನ ಪವಿತ್ರ ಮಂಗಳ ಚಿಹ್ನಾಲಂಕೃತವಾದ ಈ ಬಲಗೈಯನ್ನು ನಿನ್ನ ಬಲಗೈಯಿಂದ ಹಿಡಿದುಕೋ. ನಾನು ನಿನ್ನ ಮಾತನ್ನು ಮೀರಿದರೆ ಜನ್ಮವನ್ನು ಆರಂಭಿಸಿ ಇದು ವರೆಗೆ ನಾನು ಮಾಡಿದ ಪುಣ್ಯವೆಲ್ಲವೂ ನಿನ್ನದಾಗಲಿ, ಇಗೋ ಧರ್ಮವನ್ನೇ ಸಾಕ್ಷಿಯಾಗಿ ಮಾಡಿದ್ದೇನೆ, ನೀನು ನನ್ನ ಪತ್ನಿಯಾಗು. ನಾನು ಇಕ್ಷ್ವಾಕುವಂಶೋದ್ಭವನಾದ ಮಹಾರಾಜ ಋತಧ್ವಜನ ಮಗ ರುಕ್ಮಾಂಗದನು, ಧರ್ಮಾಂಗದನು ನನ್ನ ಪುತ್ರನು. ನೀನು ದಯವಿಟ್ಟು ನನ್ನ ಪ್ರಾರ್ಥನೆಗೆ ಉತ್ತರ ಕೊಡು.'' ರಾಜನ ಮಾತನ್ನು ಕೇಳಿ ಮೋಹಿನಿಯು ಉತ್ತರ ಕೊಟ್ಟಳು. ''ನಾನು ಬ್ರಹ್ಮ ದೇವರ ಮಗಳಾದ ಮೋಹಿನಿಯು. ನಿಮ್ಮ ಕೀರ್ತಿಯನ್ನು ಕೇಳಿ ನಿಮಗಾಗಿಯೇ ಈ ಸುವರ್ಣಮಯವಾದ ಮಂದರ ಪರ್ವತಕ್ಕೆ ಬಂದಿದ್ದೇನೆ. ನಿಮ್ಮಲ್ಲಿಯೇ ಮನಸ್ಸಿಟ್ಟು ನಿಮ್ಮ ಪ್ರಾಪ್ತಿಗಾಗಿಯೇ ಈ ಮಂದರಪರ್ವತದಲ್ಲಿ ತಪಸ್ಸು ಮಾಡುತ್ತ ಸಂಗೀತದ ಮೂಲಕ ಪರಮೇಶ್ವರನ ಆರಾಧನೆಮಾಡುತ್ತಿದ್ದೇನೆ. ಸಂಗೀತದ ಆರಾಧನೆಯು ದೇವತೆಗಳಿಗೆ ಅತಿಶಯ ಪ್ರಿಯವಾದುದರಿಂದ, ಆ ಪರಮೇಶ್ವರನು ಬೇಗನೆ ಪ್ರಸನ್ನನಾಗಿ, ಯಾರಿಗಾಗಿ ನಾನು ತಪಸ್ಸು ಮಾಡುತ್ತಿದ್ದೆನೋ ಆ ಪ್ರಿಯತಮನನ್ನು ನನ್ನ ಬಳಿಗೆ ಬೇಗನೆ ಕಳುಹಿಸಿಕೊಟ್ಟನು, ನಿಮಗೆ ನನ್ನಲ್ಲಿ ಪ್ರೀತಿಯಿದೆ, ನಾನು ನಿಮ್ಮನ್ನು ಪ್ರೀತಿಸುತ್ತೇನೆ'' ರಾಜನೊಡನೆ ಇಷ್ಟನ್ನು ಹೇಳಿ ಮೋಹಿನಿಯು ತನ್ನ ಬಲಗೈಯಿಂದ ರಾಜನ ಬಲಗೈಯನ್ನು ಹಿಡಿದುಕೊಂಡಳು. ರಾಜನ ಪಕ್ಕದಲ್ಲಿ ಬಂದು ನಿಂತಳು.

ಅದುವರೆಗೂ ನೆಲದ ಮೇಲೆ ಕುಳಿತಿದ್ದ ರಾಜನನ್ನು ಮೇಲಕ್ಕೆಬ್ಬಿಸುತ್ತಾ ಹೇಳಿದಳು - 'ಮಹಾರಾಜ ನನ್ನ ವಿಷಯದಲ್ಲಿ ನೀವು ಸ್ವಲ್ಪವೂ ಸಂಶಯಪಡಬೇಕಾಗಿಲ್ಲ. ನಾನು ಪಾಪರಹಿತಳಾದ ಅವಿವಾಹಿತ ಕನ್ಯೆಯು. ಗೃಹ್ಯಸೂತ್ರದಲ್ಲಿ ಹೇಳಿದ ರೀತಿಯಿಂದ ನನ್ನನ್ನು ವಿವಾಹವಾಗಬಹುದು. ನನ್ನನ್ನು ನೀವು ಗಾಂಧರ್ವ ರೀತಿಯಿಂದ ವಿವಾಹವಾಗಿರಿ'

ರುಕ್ಮಾಂಗದನು ಚಂಚಲನಯನೆಯಾದ ಮೋಹಿನಿಯನ್ನು ವಿವಾಹವಾಗಿ ಸ್ವಲ್ಪ ಸಮಯ ಅಲ್ಲಿಯೇ ಇದ್ದನು. ಅನಂತರ ಹೇಳಿದನು:- ''ಚಂದ್ರಮುಖಿ! ಮಂದರಾಚಲದ ಈ ವಾಸವು ಸ್ವರ್ಗದ ನಂದವನ ವಿಹಾರಕ್ಕಿಂತಲೂ ನನಗೆ ಆನಂದದಾಯಕವಾಗಿದೆ. ಬಾಲೇ! ನೀನೀಗ ನನ್ನೊಡನೆ ಇಲ್ಲಿಯೇ ಇರಲು ಬಯಸುತ್ತೀಯೋ ಅಥವಾ ರಾಜಭವನಕ್ಕೆ ನನ್ನೊಡನೆ ಬರುವೆಯಾ?'' ರಾಜನ ಮಾತನ್ನು ಕೇಳಿ ಮೋಹಿನಿಯು ಅನುರಾಗ ತುಂಬಿತುಳುಕುತ್ತಿರುವ ಮಧುರವಾಣಿಯಿಂದ ನುಡಿದಳು - 'ಮಹಾರಾಜ! ತಮಗೆಲ್ಲಿ ಆನಂದವೋ ಅಲ್ಲಿಯೇ ನಾನು ಇರುತ್ತೇನೆ. ಸ್ವಾಮಿಯ ನಿವಾಸಸ್ಥಾನವು ಧನವೈಭವರಹಿತವಾಗಿದ್ದರೂ ಪತ್ನಿಯು ಅಲ್ಲಿಯೇ ವಾಸ ಮಾಡಬೇಕು, ನಾರಿಗೆ ಪತಿಸಾಮೀಪ್ಯವೇ ಸುವರ್ಣಮಯ ಮೇರು ಪರ್ವತದ ನಿವಾಸಕ್ಕೆ ಸಮಾನವಾಗಿದೆ.

**ಭರ್ತೃಸ್ಥಾನಂ ಪರಿತ್ಯಜ್ಯ ಸ್ವಪಿತುರ್ವಾಪಿ ವರ್ಜಿತಂ ।**
**ಪಿತೃಸ್ಥಾನಾಶ್ರಯರತಾ ನಾರೀ ತಮಸಿ ಮಜ್ಜತಿ ॥**
**ಸರ್ವಧರ್ಮ ವಿಹೀನಾಪಿ ನಾರೀ ಭವತಿ ಸೂಕರೀ ॥**

ಗಂಡನ ಆಶ್ರಯವನ್ನು ಬಿಟ್ಟು ತಂದೆಯ ಮನೆಯಲ್ಲಿ ತಂಗುವ ತರುಣಿಯು ನರಕಕ್ಕೆ ಹೋಗುತ್ತಾಳೆ. ಸರ್ವಧರ್ಮರಹಿತಳಾಗಿ ಹಂದಿಯ ಜನ್ಮವನ್ನು ಪಡೆಯುತ್ತಾಳೆ. ಸುಖ ದುಃಖಗಳೆರಡರಲ್ಲಿಯೂ ತಾವೇ ನಮಗೆ ರಕ್ಷಕರು. ನಾನು ತಮ್ಮನ್ನು ಬಿಟ್ಟು ಬೇರೆ ಕಡೆ ಇರುವುದು ಧರ್ಮವಲ್ಲ, ಹಿತವಲ್ಲ, ಆದ್ದರಿಂದ ತಾವು ರಾಜಧಾನಿಗೆ ಹೋಗುವುದಾದರೆ ನಾನೂ ಬರುತ್ತೇನೆ'' ಮೋಹಿನಿಯ ಮಾತು ಕೇಳಿ ರಾಜನ ಆನಂದಕ್ಕೆ ಮೇರೆಯೇ ಇಲ್ಲ. ಮೋಹಿನಿಯನ್ನು ರಾಜನು ಒಂದು ಬಾರಿ ಅಪ್ಪಿಕೊಂಡನು. ''ಪ್ರಿಯಳೆ, ನನ್ನ ಪತ್ನಿಯರಲ್ಲಿ ಅಗ್ರಸ್ಥಾನ ನಿನಗೆ. ನನ್ನ ಮನ ಮನೆಯಲ್ಲಿ ನನ್ನ ಪ್ರಾಣಪ್ರಿಯಳಾಗಿ ನೀನು ವಾಸಿಸುವೆ. ಬಾ, ರಾಜಧಾನಿಯ ಕಡೆಗೆ ಹೋಗೋಣ'' ಎಂದು ಹೇಳಿ ರಾಜನು ಮೋಹಿನಿಯ ಜೊತೆಯಲ್ಲಿ ಮಂದರದಿಂದ ಇಳಿದನು. ಮೋಹಿನಿಯು ಆ ಪರ್ವತದ ಸಮಸ್ತಸೌಂದರ್ಯ ಶೋಭೆಗಳನ್ನು ತನ್ನ ಜತೆಯಲ್ಲಿಯೇ ಆಕರ್ಷಿಸಿ ಅಲ್ಲಿಂದ ಹೊರಟಳು.

## ಹಲ್ಲಿಯ ಉದ್ಧಾರ

**ವಸಿಷ್ಠರು ಹೇಳುತ್ತಾರೆ:-** 'ಪರ್ವತದ ಮನೋಹರ ದೃಶ್ಯಗಳನ್ನು ನೋಡುತ್ತ ಅವರಿಬ್ಬರೂ ಇಳಿಯುತ್ತಿದ್ದರು. ಸಮತಲ ಭೂಮಿಗೆ ಬಂದ ಕೂಡಲೇ ಕುದುರೆಯು ತನ್ನ ಗೊರಸುಗಳಿಂದ ನೆಲವನ್ನು ಬಡಿಯುತ್ತ ಕೆನೆಯುತ್ತ ಮುಂದುವರಿಯಿತು. ಆಗ ಅಲ್ಲಿಯೇ ಭೂಮಿಯ ಒಳಗಡೆ ಅಡಗಿದ್ದ ಒಂದು ಹಲ್ಲಿಯು ಒಳಗಿನಿಂದ ಹೊರಟು ವೇಗವಾಗಿ ಓಡಲಾರಂಭಿಸಿತು. ಆದರೆ ಮರುಕ್ಷಣದಲ್ಲಿಯೇ ಕುದುರೆಯ ವಜ್ರಸಮಾನವಾದ ಖುರದ (ಗೊರಸಿನ) ಆಘಾತದಿಂದ ದೇಹವು ಜರ್ಜರಿತವಾಗಿ ಅಲ್ಲಿಯೇ ಮೂರ್ಛಿತವಾಗಿ ಬಿತ್ತು.

ರಾಜನು ಕೂಡಲೇ ಕುದುರೆಯಿಂದ ಇಳಿದು ಚಿಗುರೆಲೆಗಳಿಂದ ಆ ಪ್ರಾಣಿಯನ್ನು ಎತ್ತಿ ಹಸಿರಾದ ಹುಲ್ಲು ಬೆಳೆದಿರುವ ಸ್ಥಳದಲ್ಲಿ ಅದನ್ನು ತೆಗೆದುಕೊಂಡು ಹೋಗಿ ಇಟ್ಟನು. ರಾಜನ ಮಾತಿನಂತೆ ಮೋಹಿನಿಯು ಕೂಡಲೇ ನೀರನ್ನು ತಂದಳು, ನೀರು ಚಿಮುಕಿಸಿದ ಕೂಡಲೇ ಹಲ್ಲಿಗೆ ಎಚ್ಚರವಾಯಿತು. ಯಾವ ಗಾಯವೇ ಆಗಲಿ, ತಣ್ಣೀರು ಚಿಮುಕಿಸಿ ಗಾಯಕ್ಕೆ ತಣ್ಣೀರು ಪಟ್ಟಿಯನ್ನು ಕಟ್ಟುವುದು, ಮೊದಲನೆಯ ಚಿಕಿತ್ಸೆ. ಅದು ಅತ್ಯಂತ ಹಿತಕರ. ಹಲ್ಲಿಯು ಎಚ್ಚತ್ತು ರಾಜನನ್ನು ಕುರಿತು ಮನುಷ್ಯರ ಮಾತಿನಿಂದ ಹೀಗೆಂದಿತು. "ರಾಜನೇ, ಹಿಂದಿನ ಜನ್ಮದಲ್ಲಿ ನಾನು ಶಾಕಲನಗರದಲ್ಲಿ ಒಬ್ಬ ಬ್ರಾಹ್ಮಣನ ಪತ್ನಿಯಾಗಿದ್ದೆನು. ನನ್ನಲ್ಲಿ ತಾರುಣ್ಯ, ಸೌಂದರ್ಯ ಎಲ್ಲವೂ ಇದ್ದರೂ ಪತಿಯ ಪ್ರೇಮವು ನನಗೆ ಸಿಗಲಿಲ್ಲ. ನನ್ನನ್ನು ದ್ವೇಷಿಸುತ್ತ ಕಠೋರ ಮಾತುಗಳನ್ನಾಡುವ ಪತಿಯನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆಂದು ನಾನು ದುಷ್ಟ ಸ್ತ್ರೀಯರ ಸಲಹೆಯನ್ನು ಕೇಳಿದೆನು. ಅವರು ತಮಗೆ ಸಹಾಯ ಮಾಡಿದ್ದ ಒಬ್ಬಳು ಸನ್ಯಾಸಿನಿಯ ಬಳಿಗೆ ಹೋಗುವಂತೆ ನನಗೆ ಸಲಹೆ ಕೊಟ್ಟರು. ಅದರಂತೆ ನಾನು ಸನ್ಯಾಸಿನಿಯ ಬಳಿಗೆ ಹೋಗಿ ಅವಳು ಕೊಟ್ಟ ಒಂದು ಚೂರ್ಣ ಮತ್ತು ರಕ್ಷಾ ಸೂತ್ರಗಳನ್ನು ಗುಟ್ಟಾಗಿ ಮನೆಗೆ ತಂದೆನು. ಅನಂತರ ರಾತ್ರಿ ಆ ಚೂರ್ಣವನ್ನು ಹಾಲಿನಲ್ಲಿ ಬೆರೆಸಿ ನನ್ನ ಪತಿಗೆ ಕುಡಿಸಿ, ರಾತ್ರಿ ನಿದ್ದೆ ಬಂದಾಗ ಆ ರಕ್ಷಾ ಸೂತ್ರವನ್ನು ಗಂಡನ ಕೊರಳಿಗೆ ಕಟ್ಟಿದೆನು. ಆ ದಿನದಿಂದ ನನ್ನ ಗಂಡನು ಕ್ಷಯ ರೋಗಗ್ರಸ್ತನಾಗಿ ಪ್ರತಿದಿನವೂ ಕ್ಷೀಣಿಸುತ್ತಾ ಬಂದನು. ಅವನ ಮೈಯಲ್ಲಿ ಗಾಯಗಳಾಗಿ ಆ ನೋವನ್ನು ತಾಳಲಾರದೆ ಕೂಗುತ್ತಿದ್ದನು. 'ಸುಂದರೀ! ನಾನು ನಿನ್ನ ದಾಸನು, ನನ್ನನ್ನು ಕಾಪಾಡು' ಎಂಬ ಅವನ ಆರ್ತನಾದವನ್ನು ಕೇಳಿ ನಾನು ತಿರುಗಿ ಆ ಸನ್ಯಾಸಿಯ ಬಳಿಗೆ ಹೋಗಿ ಎಲ್ಲಾ ವಿಷಯವನ್ನು ಹೇಳಿದಾಗ ಅವಳು ಬೇರೊಂದು ಔಷಧವನ್ನು ಕೊಟ್ಟಳು. ಆ ಔಷಧ ಕುಡಿಸಿದ ಮೇಲೆ ನನ್ನ ಪತಿಯು ತತ್ಕಾಲದಲ್ಲಿ ಆರೋಗ್ಯವನ್ನು ಪಡೆದನು. ಅನಂತರ ನಾನು ಹೇಳಿದಂತೆ ಕೇಳಿಕೊಂಡಿದ್ದನು. ಸ್ವಲ್ಪ ಸಮಯದ ಅನಂತರ ನಾನು ಸತ್ತು ಯಮಲೋಕಕ್ಕೆ ಹೋಗಿ ಅಲ್ಲಿ ತಾಮ್ರದ ಬಾಣಲೆಯಲ್ಲಿ ಹುರಿಯುವ ಯಮದೂತರ ಕೈಗೆ ಸಿಕ್ಕಿ ಆ ಶಿಕ್ಷೆಯನ್ನು ಅನುಭವಿಸುತ್ತ ಹನ್ನೆರಡು ಯುಗಗಳವರೆಗಿದ್ದು ಸ್ವಲ್ಪ ಪಾಪ ಉಳಿದಿದ್ದಾಗ ಈ ಭೂಮಿಗೆ ಹಲ್ಲಿಯ ರೂಪದಲ್ಲಿ ಬಂದು ಇಲ್ಲಿ ಹತ್ತು ಸಾವಿರ ವರ್ಷಗಳನ್ನು ಕಳೆದಿದ್ದೇನೆ. ರಾಜನೇ, ಪತಿ ವಶೀಕರಣ ಮಾಡಿಕೊಳ್ಳಲು ಪ್ರಯತ್ನ ಪಟ್ಟ ಸ್ತ್ರೀಯ ಗತಿಯು ಹೀಗೆಯೇ ಆಗುತ್ತದೆಯೆಂಬ ವಿಷಯಕ್ಕೆ ನಾನೇ ಸಾಕ್ಷಿ. ಮಹಾರಾಜ, ನಾನೀಗ ನಿನ್ನ ಮರೆ ಹೊಕ್ಕಿದ್ದೇನೆ. ನೀನು ಗಂಗಾ ಸರಯೂ ಸಂಗಮದಲ್ಲಿ ವಿಜಯಾ ಎಂಬ ಶ್ರವಣ ದ್ವಾದಶೀ ದಿನ ಉಪವಾಸ ಮಾಡಿ ತ್ರಯೋದಶೀ ಪಾರಣ ಮಾಡಿ ಯಾವ ಪುಣ್ಯವನ್ನು ಗಳಿಸಿದ್ದಿಯೋ ಅದನ್ನು ನನಗೆ ದಾನ ಮಾಡಿದರೆ ಈ ಜನ್ಮವು ಕಳೆದು ವೈಕುಂಠಲೋಕ ಪ್ರಾಪ್ತಿಯಾಗುತ್ತದೆ. ದಯವಿಟ್ಟು ಈ ದುಃಖಿತಳ ಉದ್ಧಾರ ಮಾಡು."

**ಹಲ್ಲಿಯ ಮಾತನ್ನು ಕೇಳಿ ಮೋಹಿನಿಯು:-** "ಪ್ರಭುವೇ, ಅವರವರು ಮಾಡಿದ ಕರ್ಮದ ಫಲವನ್ನು ಅವರವರೇ ಅನುಭವಿಸಬೇಕು. ಪತಿವಶೀಕರಣ ಮಾಡಿಕೊಂಡಿದ್ದ ಈ ಪಾಪಿ ಹೆಂಗಸಿನ ವಿಚಾರ ಬಿಡಿರಿ. ಇನ್ನೊಬ್ಬರ ವಿಷಯದಲ್ಲಿ ನಾವು ಕೈ ಹಾಕುವದು ಬೇಡ, ರಾಜಧಾನಿಗೆ ನಡೆಯಿರಿ" ಎಂದಳು.

**ರಾಜನೆಂದನು:-** ಬ್ರಹ್ಮಪುತ್ರಿ! ನಿನ್ನ ಮಾತು ಸರಿಯಲ್ಲ. ಇದು ಸಜ್ಜನರ ದಾರಿಯಲ್ಲ, ಸೂರ್ಯ, ಚಂದ್ರ, ಮೇಘ, ಭೂಮಿ, ಅಗ್ನಿ, ಜಲ, ಗಂಧದ ಮರ, ಇತರ ಫಲವೃಕ್ಷಗಳು ಮತ್ತು ಸಜ್ಜನರೂ ಪರೋಪಕಾರಕ್ಕಾಗಿಯೇ ಬದುಕಿರುತ್ತಾರೆ. ರಾಜಾಹರಿಶ್ಚಂದ್ರನು ಸತ್ಯರಕ್ಷಣೆಗಾಗಿ ಎಷ್ಟೊಂದು ಕಷ್ಟಪಟ್ಟನು ಎಂಬ ವಿಚಾರ ನಿನಗೆ ತಿಳಿದೇ ಇದೆ, ಒಂದರ ಆನಂತರ ಮತ್ತೊಂದು ದುಃಖ ಬಂದರೂ ಅದನ್ನೆಲ್ಲ ಸಹಿಸಿದ ಅವನಿಗೆ ಬ್ರಹ್ಮಾದಿ ದೇವತೆಗಳು ಪ್ರತ್ಯಕ್ಷರಾದಾಗ ಅವನು ಕೇಳಿದ ವರವನ್ನು ಬಲ್ಲೆಯಾ? ''ನನ್ನ ರಾಜಧಾನಿಯಾದ ಅಯೋಧ್ಯೆಯಲ್ಲಿರುವ ಬಾಲ, ವೃದ್ಧ, ತರುಣ, ಸ್ತ್ರೀ, ಪಶು, ವೃಕ್ಷ, ಕೀಟಗಳೆಲ್ಲ ಸ್ವರ್ಗಕ್ಕೆ ಹೋಗಲಿ. ಅವರೆಲ್ಲರ ಪಾಪ ಫಲವನ್ನು ನಾನೊಬ್ಬನೇ ಅನುಭವಿಸುತ್ತೇನೆ. ಇದೇ ನನಗೆ ಬೇಕಾದ ವರ ಎಂದನು. ಅವನ ದಯಾಸ್ವಭಾವ ಮತ್ತು ಮನೋದಾರ್ಢ್ಯವನ್ನು ತಿಳಿದು ದೇವತೆಗಳು ಅವನ ನಗರದವರೆಲ್ಲರನ್ನೂ, ಹರಿಶ್ಚಂದ್ರನ ಜೊತೆಗೆ ಸ್ವರ್ಗಕ್ಕೆ ಕರೆದೊಯ್ದರು. ಮಹರ್ಷಿ ದಧೀಚಿಯು ದೇವತೆಗಳ ಉಪಕಾರಕೋಸ್ಕರ ತನ್ನ ಎಲುಬುಗಳನ್ನೇ ಕೊಟ್ಟನು. ಶಿಬಿಚಕ್ರವರ್ತಿಯು ಪಾರಿವಾಳದ ಪ್ರಾಣರಕ್ಷಣೆಗಾಗಿ ಗಿಡುಗಕ್ಕೆ ತನ್ನ ದೇಹದ ಮಾಂಸವನ್ನೇ ಕೊಟ್ಟನು, ಜೀಮೂತ ವಾಹನನೆಂಬ ರಾಜನು ಒಂದು ಸರ್ಪವನ್ನು ಕಾಪಾಡುವುದಕ್ಕಾಗಿ ಗರುಡನಿಗೆ ತನ್ನ ದೇಹವನ್ನೇ ಅರ್ಪಿಸಿದನು. ರಾಜನು ದಯಾಳುವಾಗಿರಬೇಕು. ಯಯಾತಿಯನ್ನು ಅವನು ಮೊಮ್ಮಕ್ಕಳು ಉದ್ಧರಿಸಿದಂತೆ ನಾನು ಈ ಹಲ್ಲಿಗೆ ನನ್ನ ಪುಣ್ಯ ಕೊಟ್ಟು ಉದ್ಧರಿಸುತ್ತೇನೆ'' ರಾಜನು ಈ ರೀತಿ ಮೋಹಿನಿಯ ಮಾತನ್ನು ತಿರಸ್ಕರಿಸಿ ವಿಜಯಾ ಏಕಾದಶಿಯ ಪುಣ್ಯವನ್ನು ಹಲ್ಲಿಗೆ ಕೊಟ್ಟ ಕೂಡಲೇ ಅದು ತನ್ನ ರೂಪವನ್ನು ಬಿಟ್ಟು ಸುಂದರ ಸ್ತ್ರೀ ರೂಪವನ್ನು ಸ್ವೀಕರಿಸಿ ರಾಜನ ಅಪ್ಪಣೆಯನ್ನು ಪಡೆದು ವಿಷ್ಣುಲೋಕಕ್ಕೆ ತೆರಳಿತು.

## ವೈದಿಶನಗರ ಪ್ರವೇಶ - ಧರ್ಮಾಂಗದ ಸಂವಾದ

**ವಸಿಷ್ಠರು ಹೇಳುತ್ತಾರೆ:-** ಹಲ್ಲಿಯನ್ನು ಪಾಪಮುಕ್ತವನ್ನಾಗಿ ಮಾಡಿ ರುಕ್ಮಾಂಗದ ರಾಜನು ಮೋಹಿನಿಯನ್ನು ತನ್ನ ಕುದುರೆಯ ಮೇಲೆ ಕುಳ್ಳಿರಿಸಿಗೊಂಡು ವಾಯುವೇಗದಿಂದ ಹೋಗಲಾರಂಭಿಸಿದನು. ಅನೇಕ ಪರ್ವತ, ನದಿ, ವನಗಳನ್ನು ದಾಟಿ, ತನ್ನ ಅಧೀನದಲ್ಲಿಯೇ ಇದ್ದ ವೈದಿಶವೆಂಬ ನಗರಕ್ಕೆ ತಲುಪಿದನು. ಗುಪ್ತಚಾರರ ಮೂಲಕ ತನ್ನ ತಂದೆಯು ವೈದಿಶನಗರದ ಕಡೆಗೆ ಬರುತ್ತಿದ್ದಾನೆಂದು ಮೊದಲೇ ತಿಳಿದಿದ್ದ ಧರ್ಮಾಂಗದನು ವೈದಿಶ ನಗರಕ್ಕೆ ಆಗಲೇ ಬಂದಿದ್ದನು, ಅವನು ಅಲ್ಲಿಯ ಸುತ್ತು ಮುತ್ತಲಿನ ರಾಜರನ್ನೆಲ್ಲ ಸೇರಿಸಿ ತಂದೆಯನ್ನು ಎದುರುಗೊಳ್ಳಲು ಸಂತೋಷದಿಂದ ನಗರದಿಂದ ಒಂದು ಹರದಾರಿಯವರೆಗೆ ಕಾಲ್ನಡಿಗೆಯಿಂದಲೇ ನಡೆದು ಹೋದನು. ಮತ್ತು ಸ್ವಲ್ಪ ದೂರ ನಡೆದು ಹೋದ ಮೇಲೆ ರುಕ್ಮಾಂಗದ ರಾಜನು ಬರುತ್ತಿರುವುದನ್ನು ಅವರೆಲ್ಲರೂ ಕಂಡರು. ಧರ್ಮಾಂಗದನು ತನ್ನ ಜತೆಯಲ್ಲಿ ಬಂದಿದ್ದ ರಾಜರ ಜೊತೆಗೆ ನೆಲಕ್ಕೆ ತಲೆಯನ್ನು ಸೋಕಿಸಿ ಭಕ್ತಿಭಾವದಿಂದ ತಂದೆಯನ್ನು ನಮಸ್ಕರಿಸಿದನು. ಪ್ರಿಯ ಪುತ್ರನು ತನ್ನ ಸ್ವಾಗತಕ್ಕಾಗಿ ಬಂದು ನಮಸ್ಕರಿಸುತ್ತಿರುವುದನ್ನು ನೋಡಿ ರುಕ್ಮಾಂಗದನಿಗೆ ತುಂಬಾ ಆನಂದವಾಯಿತು. ಅವನು ಕುದುರೆಯಿಂದ ಇಳಿದು ತನ್ನ ದೀರ್ಘ ಬಾಹುಗಳಿಂದ ಮಗನನ್ನು ಎತ್ತಿ ವಿಶಾಲವಾದ ಎದೆಯಿಂದ ಅಪ್ಪಿಕೊಂಡು, ಅವನ ಶಿರಸ್ಸನ್ನು ಆಘ್ರಾಣಿಸುತ್ತಾ ಹೀಗೆಂದನು -

ಮಗನೇ ನೀನು ನನ್ನ ಉಪದೇಶದಂತೆ ಸರಿಯಾಗಿ ರಾಜ್ಯಭಾರ ಮಾಡುತ್ತಿದ್ದೀಯಷ್ಟೇ? ಶತ್ರುಗಳನ್ನು ಸರಿಯಾಗಿ ಶಿಕ್ಷಿಸಿ, ಬೊಕ್ಕಸವನ್ನು ನ್ಯಾಯಾರ್ಜಿತ ಧನದಿಂದ ತುಂಬಿಸಿ ಜ್ಞಾನಿಗಳಿಗೆ ಸ್ಥಿರ ವೃತ್ತಿಯನ್ನು ಮಾಡಿಕೊಡುತ್ತಿರುವಿಯಷ್ಟೇ? ಹೆಚ್ಚು ಕಂದಾಯವನ್ನು ಹೇರಿ ಪ್ರಜೆಗಳಿಗೆ ಕಷ್ಟಕೊಡುತ್ತಿಲ್ಲವಷ್ಟೇ? ನಿನ್ನ ರಾಜ್ಯದಲ್ಲಿ ಎಲ್ಲಿಯೂ ಮದ್ಯಪಾನ ಮತ್ತು ಜೂಜು ನಡೆಯುತ್ತಿಲ್ಲವಷ್ಟೇ? ನಿನ್ನ ತಾಯಂದಿರನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದೀಯಷ್ಟೇ? ಜನರೆಲ್ಲರು ಏಕಾದಶಿಯ ದಿನ ಉಪವಾಸ ಮಾಡುತ್ತಿದ್ದಾರಷ್ಟೇ?'' ತಂದೆಯ ಮಾತನ್ನು ಕೇಳಿ ರಾಜಕುಮಾರ ಧರ್ಮಾಂಗದನು ಪುನಃ ತಂದೆಗೆ ನಮಸ್ಕಾರ ಮಾಡಿ ಹೇಳಿದನು - ''ಅಪ್ಪಾ! ನೀವು ಹೇಳಿದಂತೆಯೇ ನಡೆಯುತ್ತಿದ್ದೇನೆ. ಮುಂದೆಯೂ ಹಾಗೆಯೇ ನಡೆದುಕೊಳ್ಳುತ್ತೇನೆ. ''ಅಪ್ಪಾ! ಸಮಸ್ತ ರಾಜ್ಯಭಾರವನ್ನು ನನಗೊಪ್ಪಿಸಿ ನೀವು ಎಲ್ಲಿಗೆ ಹೊರಟು ಹೋದಿರಿ? ಈ ಕಾಂತಿಮಯಳಾದ ದೇವತೆಯು ಎಲ್ಲಿ ಸಿಕ್ಕಿದಳು? ಮಹಾರಾಜ! ಇವಳು ಈ ಸುವರ್ಣ ಗೌರಿಯಂತಹ ದೇವತೆಯು ನಮ್ಮ ಶೋಭೆಯನ್ನು ಹೆಚ್ಚಿಸುದಾದರೆ ನಾನು ಕೃತಾರ್ಥನು. ಇಂತಹ ಸುಂದರ ರೂಪಿನ ತಾಯಿಯೊಬ್ಬಳು ನನಗೆ ದೊರಕಿದಂತಾಗಿ ನಾನು ಪುಣ್ಯಾತ್ಮನಾಗುವೆನು, ಧನ್ಯನಾಗುವೆನು''

## ಧರ್ಮಾಂಗದನು ಮೋಹಿನಿಯನ್ನು ಗೌರವಿಸಿದನು

**ವಸಿಷ್ಠರು ಹೇಳುತ್ತಾರೆ:-** ಧರ್ಮಾಂಗದನ ಮಾತನ್ನು ಕೇಳಿ ರುಕ್ಮಾಂಗದ ಮಹಾರಾಜನು ಪ್ರಸನ್ನನಾಗಿ ಹೀಗೆಂದನು-''ಮಗೂ, ಬ್ರಹ್ಮಪುತ್ರಿಯಾದ ಈ ಮೋಹಿನಿಯು ನಿಜವಾಗಿಯೂ ನಿನ್ನ ತಾಯಿಯೇ ಆಗಿದ್ದಾಳೆ. ಬಾಲ್ಯದಿಂದ ಇವಳು ನನ್ನನ್ನೇ ಮದುವೆಯಾಗಬೇಕೆಂದು ಮಂದರಾಚಲದಲ್ಲಿ ಕಠೋರ ತಪಸ್ಸು ಮಾಡುತ್ತಾ ಇದ್ದಳು. ಇಂದಿನಿಂದ ಹದಿನೈದು ದಿನಗಳ ಹಿಂದೆ ನಾನು ಕುದುರೆಯ ಮೇಲೇರಿ ಸುಂದರ ಧಾತು ರಂಜಿತವಾದ ಮಂದರಪರ್ವತಕ್ಕೆ ಹೋಗಿದ್ದಾಗ ಮಹೇಶ್ವರನನ್ನು ಸಂತೋಷ ಗೊಳಿಸುವುದಕ್ಕಾಗಿ ಇವಳು ಸಂಗೀತದಿಂದ ಆರಾಧಿಸುತ್ತಿದ್ದಳು. ಅಲ್ಲಿ ನಾನೂ ಇವಳನ್ನು ನೋಡಿದೆನು. ಇವಳು ನನ್ನನ್ನೇ ಪತಿಯನ್ನಾಗಿ ಸ್ವೀಕರಿಸಿದ್ದಾಳೆ. ನಾನೂ ಕೂಡ ಇವಳು ಕೇಳಿದ ವಸ್ತುವನ್ನು ಕೊಡುವುದಾಗಿ ಬಲಗೈಯನ್ನು ಅವಳ ಕೈಮೇಲಿಟ್ಟು ಶಪಥ ಮಾಡಿ ಮದುವೆಯಾಗಿದ್ದೇನೆ. ಮದುವೆಯ ಅನಂತರ ಭೂಮಿಗೆ ಇಳಿದು ಕುದುರೆಯನ್ನೇರಿ ಮೂರು ದಿನಗಳಲ್ಲಿ ವೇಗವಾಗಿ ಪ್ರಯಾಣ ಮಾಡಿ ನೀನಿದ್ದಲ್ಲಿಗೆ ಬಂದು ತಲುಪಿದ್ದೇನೆ.''

ತಂದೆಯ ಈ ಮಾತನ್ನು ಕೇಳಿ, ಶತ್ರುದಮನ, ಮಹಾಪ್ರತಾಪಿ ಧರ್ಮಾಂಗದನು ಕುದುರೆಯ ಮೇಲೆ ಕುಳಿತಿದ್ದ ಮೋಹಿನಿಯನ್ನು ಉದ್ದೇಶಿಸಿ ನೆಲಕ್ಕೆ ಶಿರಸ್ಸನ್ನು ಸೋಕಿಸಿ ನಮಸ್ಕಾರ ಮಾಡುತ್ತಾ ಹೇಳಿದನು - ''ದೇವತಾ ಸ್ವರೂಪಿಣಿಯೇ, ನೀನು ನನ್ನ ತಾಯಿ. ನಾನು ನಿನ್ನ ಮಗ ಮತ್ತು ದಾಸ. ಈ ಅನೇಕ ರಾಜಾಧಿ ರಾಜನೊಡನೆ ನಾನು, ನಿನಗೆ ನಮಿಸುತ್ತಿದ್ದೇನೆ.'' ಹೀಗೆ ಭೂಮಿಗೆ ತಲೆಯನ್ನಿಟ್ಟು ನಮಸ್ಕಾರ ಮಾಡುತ್ತಿರುವ ಧರ್ಮಾಂಗದನನ್ನು ನೋಡಿ ಮೋಹಿನಿಯು ಕೂಡಲೇ ಕುದುರೆಯಿಂದಿಳಿದು ಧರ್ಮಾಂಗದನನ್ನು ಎರಡೂ ಕೈಗಳಿಂದ ಮೇಲಕ್ಕೆತ್ತಿ ಅಪ್ಪಿಕೊಂಡಳು. ಅಭಿನಂದಿಸಿದಳು. ಅನಂತರ ಧರ್ಮಾಂಗದನು ತಾನು ಕುದುರೆಯಂತೆ ನೆಲದಲ್ಲಿ ಬಗ್ಗುತ್ತೇನೆ. ತನ್ನ ಬೆನ್ನಿನ

ಮೇಲೆ ಕಾಲಿಟ್ಟು ಮೋಹಿನಿಯು ಕುದುರೆಯನ್ನು ಹತ್ತಬೇಕೆಂದು ಪ್ರಾರ್ಥಿಸಿದನು. ಮೋಹಿನಿಯು ಅಂತೆಯೇ ಧರ್ಮಾಂಗದನ ಬೆನ್ನ ಮೇಲೆ ಕಾಲಿಟ್ಟು ಕುದುರೆಯನ್ನು ಏರಿದಳು. ಅವಳು ಕುದುರೆಯನ್ನು ಹತ್ತಿದ ಮೇಲೆ ಅದೇ ರೀತಿ ಧರ್ಮಾಂಗದನುನು ತಂದೆಯನ್ನು ಕುದುರೆಯ ಮೇಲೇರಿಸಿದನು. ಅನಂತರ ಇತರ ರಾಜರು ಹಿಂದೆಯೇ ಬರುತ್ತಿರುವಂತೆ ಧರ್ಮಾಂಗದನು ಕಾಲ್ನಡಿಗೆಯಿಂದಲೇ ನಡೆದನು. ಹೋಗುತ್ತ ತನ್ನ ತಾಯಿ ಮೋಹಿನಿಯನ್ನು ನೆನಿಸಿಕೊಂಡು ಸಂತೋಷಾತಿಶಯದಿಂದ ರೋಮಾಂಚಿತನಾಗಿ ತನ್ನ ಭಾಗ್ಯವನ್ನು ಹೊಗಳಿಸಿಕೊಳ್ಳುತ್ತಾ ಮೇಘ ಗಂಭೀರವಾಣಿಯಿಂದ ಹೀಗೆಂದನು. 'ಒಬ್ಬಳು ತಾಯಿಗೆ ನಮಸ್ಕಾರ ಮಾಡಿದ ಮಗನಿಗೆ ಸಮಸ್ತ ಭೂಮಂಡಲ ಪ್ರದಕ್ಷಿಣೆ ಮಾಡಿದ ಪುಣ್ಯ ಬರುವುದಂತೆ. ಹೀಗೆ ಅನೇಕ ತಾಯಂದಿರಿಗೆ ನಮಸ್ಕಾರ ಮಾಡಿದ ನನ್ನ ಪುಣ್ಯಕ್ಕೆ ಎಣೆಯುಂಟೇ ? ಹೀಗೆ ನುಡಿದು ಧರ್ಮಾಂಗದನು ವೈದಿಶನಗರಕ್ಕೆ ತಲುಪುವಷ್ಟರಲ್ಲಿ ರುಕ್ಮಾಂಗದ ಮಹಾರಾಜನು ಅಲ್ಲಲ್ಲಿಯ ಪ್ರಕೃತಿ ಶೋಭೆಯನ್ನು ನೋಡುತ್ತಾ ಮೆಲ್ಲನೆ ಮೋಹಿನಿಯ ಜತೆಗೆ ನಗರವನ್ನು ತಲುಪಿದನು. ಅರಮನೆ ಬಳಿ ತಲುಪುತ್ತಲೇ ಪರಿಚಾರಕರು ಓಡಿ ಬಂದು ರಾಜನನ್ನು ಗೌರವಿಸಿದರು. ರಾಜನು ಮೋಹಿನಿಯೊಡನೆ ಕುದುರೆಯಿಂದಿಳಿದು - 'ಸುಂದರೀ! ನೋಡಿಲ್ಲಿ, ಅದು ನನ್ನ ಪುತ್ರ ಧರ್ಮಾಂಗದನ ಅರಮನೆ. ನಿನ್ನನ್ನು ಅವನು ಬಹಳ ಗೌರವದಿಂದ ನೋಡಿಕೊಳ್ಳುವನು. ನೀನೀಗ ಅಲ್ಲಿಗೆ ನಡೆ' ಎಂದನು.

ಪತಿಯ ಮಾತನ್ನು ಕೇಳಿದ ಕೂಡಲೇ ಮೋಹಿನಿಯು ಧರ್ಮಾಂಗದನ ಅರಮನೆಯ ಕಡೆಗೆ ನಡೆದಳು. ಮೋಹಿನಿಯು ತನ್ನ ಅರಮನೆಯ ಕಡೆ ಹೋಗುತ್ತಿರುವುದನ್ನು ನೋಡಿದ ಕೂಡಲೇ ಧರ್ಮಾಂಗದನು ತನ್ನ ಸಂಗಡ ಇದ್ದ ರಾಜರಿಗೆ ನೀವು ನಿಮ್ಮ ಸ್ಥಳಕ್ಕೆ ತೆರಳಿರಿ - 'ನಾನು ತಾಯಿಯ ಸೇವೆ ಮಾಡಿಕೊಂಡು ಬರುತ್ತೇನೆ' ಎಂದು ಹೇಳಿ ಮೋಹಿನಿಯನ್ನು ಅರಮನೆಯೊಳಗೆ ಕರೆದುಕೊಂಡು ಹೋದನು. ಹದಿನೈದು ಹೆಜ್ಜೆ ಹೋದ ಕೂಡಲೇ ಅಲ್ಲಿದ್ದ ಒಂದು ಮಂಚದಲ್ಲಿ ಮೋಹಿನಿಯನ್ನು ಕುಳ್ಳಿರಿಸಿದನು. ಅದು ಚಿನ್ನದ ಮಂಚ. ಅದರಲ್ಲಿ ರೇಶ್ಮೆಯ ಮಿದುವಾದ ಹಾಸಿಗೆಯನ್ನು ಹಾಸಿದ್ದರು. ಅಲ್ಲಲ್ಲಿ ರತ್ನಮಂಡಿತವಾದ ಇಂತಹ ಕೋಮಲಶಯನದಲ್ಲಿ ತಾಯಿಯನ್ನು ಕುಳ್ಳಿರಿಸಿ, ಧರ್ಮಾಂಗದನು ನೀರುತರಿಸಿ ಅವಳ ಕಾಲುಗಳನ್ನು ತೊಳೆದನು. ತನ್ನ ತಾಯಿ ಸಂಧ್ಯಾವಳಿಯಲ್ಲಿ ಇರುವಷ್ಟೇ ಗೌರವವನ್ನು ಮೋಹಿನಿಗೂ ತೋರಿಸಿದನು. ಅವನಿನ್ನೂ ಸುಕುಮಾರ ತರುಣ, ಅವಿವಾಹಿತ, ಮೋಹಿನಿ ತರುಣಿ, ಸುಕುಮಾರಿ ಆದರೂ ಧರ್ಮಾಂಗದನಿಗೆ ಮನಸ್ಸಿನಲ್ಲಿ ಸ್ವಲ್ಪವೂ ವಿಕಾರ ಉಂಟಾಗಲಿಲ್ಲ. ಅವಳ ಕಾಲು ತೊಳೆದು ನೀರನ್ನು ಶಿರಸಾ ಧರಿಸಿ ಧರ್ಮಾಂಗದನು - ''ಅಮ್ಮಾ ಇಂದು ನಾನು ಧನ್ಯ''. ಎಂದು ಹೇಳಿ ಮೋಹಿನಿಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದನು. ಅನಂತರ ಧರ್ಮಾಂಗದನು ಎರಡು ಅಮೃತ ಸುರಿಸುವ ಕುಂಡಲಗಳನ್ನು ಮೋಹಿನಿಗೆ ಅರ್ಪಿಸಿದನು. ಅವು ಕ್ಷೀರಸಾಗರ ಮಥನದಿಂದ ಹುಟ್ಟಿದವುಗಳು. ದಾನವರ ವಶದಲ್ಲಿದ್ದ ಅವುಗಳನ್ನು ಧರ್ಮಾಂಗದನು ಪಾತಾಳ ಲೋಕಕ್ಕೆ ಹೋದಾಗ ದಾನವರನ್ನು ಜಯಿಸಿ ತೆಗೆದು ಕೊಂಡು ಬಂದಿದ್ದನು. ಅಂತಹ ಕುಂಡಲಗಳನ್ನು ಮೋಹಿನಿಯ ಕಿವಿಗಳಿಗೆ ತೊಡಿಸಿದನು.

ಅನಂತರ ನೆಲ್ಲಿಕಾಯಿ ಗಾತ್ರದ ೧೦೦೮ (ಒಂದು ಸಾವಿರದ ಎಂಟು) ಮುತ್ತುಗಳ ಸರವನ್ನು ಕೊಟ್ಟು ಅದನ್ನು ವಕ್ಷಸ್ಥಲದಲ್ಲಿ ಧಾರಣ ಮಾಡಿಸಿದನು. ನೂರು ಭಾರ ಸುವರ್ಣದ ಒಂದು ಪದಕವನ್ನೂ ಸಾವಿರ ವಜ್ರಗಳಿಂದ ವಿಭೂಷಿತವಾದ ಒಂದು ಭಾರೀ

ಹಾರವನ್ನು ಮೋಹಿನಿಗೆ ಅರ್ಪಿಸಿದನು. ಒಂದು ಕೋಟಿ ಚಿನ್ನದ ನಾಣ್ಯದ ಬೆಲೆಯುಳ್ಳ ೩೨ (ಮೂವತ್ತೆರಡು) ಬಳೆಗಳನ್ನು ಒಂದು ಕೈಗೆ ಹದಿನಾರರಂತೆ ತೊಡಿಸಿದನು. ಸೂರ್ಯನಂತೆ ಪ್ರಕಾಶಮಾನವಾದ ವಂಕಿ ಮತ್ತು ಕಾಲ್ಗೆಜ್ಜೆಗಳನ್ನು ಕೊಟ್ಟನು. ಇದನ್ನೆಲ್ಲ ಕೊಡುತ್ತಿದ್ದ ಧರ್ಮಾಂಗದನ ಮೈಯಲ್ಲಿ ರೋಮಾಂಚ ಉಂಟಾಗುತ್ತಿತ್ತು. ಹಿಂದೆ ಹಿರಣ್ಯಕಶಿಪುವಿನ ಪತ್ನಿಯಾದ ಕಯಾಧುವು ಪತಿಯೊಡನೆ ಅಗ್ನಿ ಪ್ರವೇಶ ಮಾಡುವಾಗ ತನ್ನ ಎರಡು ಶಿರೋರತ್ನಗಳನ್ನು ದುಃಖದಿಂದ ಸಮುದ್ರಕ್ಕೆ ಎಸೆದಿದ್ದಳು. ಧರ್ಮಾಂಗದನ ಪರಾಕ್ರಮದಿಂದ ಸಂತುಷ್ಟನಾದ ಸಮುದ್ರರಾಜನು ಅವೆರಡನ್ನೂ ಅವನಿಗೆ ಒಪ್ಪಿಸಿದ್ದನು.

ಈಗ ಧರ್ಮಾಂಗದನು ಆ ಎರಡು ಸೀಮಂತರತ್ನಗಳನ್ನು ಮೋಹಿನಿಗೆ ಕೊಟ್ಟನು. ಅತ್ಯಂತ ಮನೋಹರವಾದ ಎರಡು ಸೀರೆಗಳು, ಎರಡು ಕುಪ್ಪಸಗಳು, ಇವುಗಳನ್ನು ಮೋಹಿನಿಗೆ ಕೊಟ್ಟು ಇವುಗಳಲ್ಲಿ ಒಂದೊಂದರ ಬೆಲೆ ಒಂದು ಕೋಟಿ ಚಿನ್ನದ ನಾಣ್ಯವಾಗಿತ್ತು. ತಾನು ದಿಗ್ವಿಜಯಕ್ಕೆ ಹೋಗಿದ್ದಾಗ ತಂದಿದ್ದ ದಿವ್ಯ ಅನುಲೇಪನವನ್ನೂ ಕೊಟ್ಟನು. ಅದನ್ನು ದೇವತಾ ಗುರುಗಳಾದ ಬೃಹಸ್ಪತ್ಯಾಚಾರ್ಯರು ತನ್ನ ಕೈಯಿಂದಲೇ ಸ್ವತಃ ಸಿದ್ಧಪಡಿಸಿದ್ದರು. ಈ ರೀತಿ ಮೋಹಿನಿಯನ್ನು ಅಲಂಕರಿಸಿ ಷಡ್ರಸಭರಿತವಾದ ಭೋಜನವನ್ನು ತರಿಸಿ, ತನ್ನ ತಾಯಿಯ ಕೈಯಿಂದಲೇ ಮೋಹಿನಿಗೆ ಊಟ ಮಾಡಿಸಿದನು.

## ಧರ್ಮಾಂಗದನು ತನ್ನ ತಾಯಿಗೆ ಹೇಳಿದ ಪತಿವ್ರತೆಯ ಕಥೆ

ಅದಕ್ಕೆ ಮೊದಲು ಧರ್ಮಾಂಗದನು ತನ್ನ ತಾಯಿ ಸಂಧ್ಯಾವಳಿಗೆ ಬಹಳವಾಗಿ ಸಮಾಧಾನ ಮಾಡಿದನು. ನಮ್ಮ ರಾಜನಿಗೆ ಯಾರು ಹೆಚ್ಚು ಪ್ರೀತಿ ಪಾತ್ರರೋ ಅವರಲ್ಲಿ ನಾವು ಮತ್ಸರಿಸಬಾರದು. ಸವತಿಮಾತ್ಸರ್ಯ ತೋರಿಸುವ ನಾರಿಯು ಯಮಲೋಕದಲ್ಲಿ ತಾಮ್ರದ ಪಾತ್ರೆಯಲ್ಲಿ ಹುರಿಯಲ್ಪಡುತ್ತಾಳೆ. ತನ್ನ ಸ್ವಾಮಿಗೆ ಯಾವುದರಿಂದ ಸಂತೋಷ ವಾಗುತ್ತದೆಯೋ ಅದನ್ನು ನಡೆಸಿ ಕೊಡುವುದು ಪತಿವ್ರತೆಯಾದ ಸ್ತ್ರೀಯ ಕರ್ತವ್ಯವಾಗಿದೆ. ಪತಿಯ ಪ್ರೀತಿಗೆ ಪಾತ್ರಳಾದ ಸವತಿಯ ಸೇವೆ ಮಾಡುವ ನಾರಿಗೆ ಅಕ್ಷಯ ಲೋಕ ಪ್ರಾಪ್ತಿಯಾಗುತ್ತದೆ. ಪ್ರಾಚೀನಕಾಲದ ಕಥೆಯೊಂದಿದೆ. ಅಮ್ಮ ! ಒಬ್ಬ ದುಷ್ಟಶೂದ್ರನು ಸದಾಚಾರವನ್ನೆಲ್ಲ ಪರಿತ್ಯಜಿಸಿ. ಮನೆಯಲ್ಲಿ ಮದುವೆಯಾದ ಸುಂದರ ಪತ್ನಿಯಿದ್ದರೂ, ವೇಶ್ಯೆಯನ್ನು ಮನೆಯಲ್ಲಿಟ್ಟು ಕೊಂಡು ಪತ್ನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅವನ ಹೆಂಡತಿಯಾದರೋ ವೇಶ್ಯೆಯನ್ನೂ ಪತಿಯನ್ನೂ, ಸೇವಿಸುತ್ತ ಅವರ ಹಿತವನ್ನೇ ಬಯಸುತ್ತಿದ್ದಳು. ಅವರಿಗಿಂತ ಬೇರೆಯಾಗಿ ಮಲಗಿಕೊಂಡು ವೇಶ್ಯೆಯು ಬೇಡವೆಂದರೂ ಬಿಡದೆ ಅವಳ ಸೇವೆ ಮಾಡುತ್ತ ಅನೇಕ ವರ್ಷ ಕಳೆದಳು. ಒಂದು ದಿನ ನೀಚ ಬುದ್ಧಿಯ ಅವಳ ಪತಿಯು ಮೂಲಂಗಿಯ ಜೊತೆಗೆ ಎಮ್ಮೆ ಹಾಲಿನ ಮೊಸರನ್ನ, ಎಣ್ಣೆಯಲ್ಲಿ ಹುರಿದ ಅವರೆ ಕಾಳನ್ನು ತಿಂದನು. ಈ ಅಪಥ್ಯ ಭಕ್ಷಣದ ಪರಿಣಾಮವಾಗಿ ಅವನಿಗೆ ಭಗಂದರರೋಗ ವುಂಟಾಯಿತು. ವೇಶ್ಯೆಯು ಮನೆಯಲ್ಲಿದ್ದ ಹಣವನ್ನೆಲ್ಲಾ ದೋಚಿ ಕೊಂಡು ಓಡಿ ಹೋದಳು. ಆಗ ಅಪಮಾನ ನಾಚಿಕೆಗಳಿಂದ ನೀರಾದ ಆ ಶೂದ್ರನು ತನ್ನ ಪತ್ನಿಯನ್ನೇ ಮರೆಹೊಕ್ಕು ನನ್ನನ್ನು ಕಾಪಾಡು ಎಂದು ಅಂಗಲಾಚಿದನು. ವಿನೀತಳಾದ ಪತ್ನಿಯನ್ನು ತಿರಸ್ಕರಿಸಿದವನಿಗೆ ಹದಿನೈದು ಜನ್ಮಗಳಲ್ಲಿ ಆ ಪಾಪದ ಫಲವನ್ನು ಅನುಭವಿಸ ಬೇಕಾಗುತ್ತದೆ' ಎಂದು ಹೇಳಿದ ಗಂಡನನ್ನು ಆ ಪತಿವ್ರತೆಯು ಸಮಾಧಾನಗೊಳಿಸಿ ತನ್ನ

ತಂದೆ ಸಹೋದರರಿಂದ ಹಣವನ್ನು ತಂದು ಅವನಿಗೆ ಔಷಧೋಪಚಾರ ಮಾಡುತ್ತಾ ಹಗಲೂ ರಾತ್ರಿ ಅವನು ಶುಶ್ರೂಷೆಯಲ್ಲಿ ಆಸಕ್ತಳಾಗಿರುತ್ತಿದ್ದಳು. ಕೆಲವು ದಿನಗಳ ನಂತರ ಅವಳ ಗಂಡನಿಗೆ ತ್ರಿದೋಷಜ್ವರ ಉಂಟಾದಾಗ ಆ ಪತಿವ್ರತೆಯು ಶುಂಠಿ, ಮೆಣಸು, ಹಿಪ್ಪಲಿಕಷಾಯ ಮಾಡಿ ಕುಡಿಸುತ್ತಿದ್ದಳು. ಆದರೆ ಛಳಿ ಮತ್ತು ರೋಗದಿಂದ ಕಂಪಿಸುತ್ತಿದ್ದ ಅವಳ ಪತಿಯು ತನ್ನ ಹೆಂಡತಿಯ ಬೆರಳನ್ನು ಕಚ್ಚಿ ಸತ್ತು ಹೋದನು. ತುಂಡಾದ ಬೆರಳು ಅವನ ಬಾಯಿಯೊಳಗೇ ಉಳಿಯಿತು. ಆಗಲೂ ಪತಿವ್ರತೆಯು ಪತಿಭಕ್ತಿಯನ್ನು ಬಿಡದೆ, ತನ್ನ ಬಳೆಯನ್ನೇ ಮಾರಿ ಕಟ್ಟಿಗೆ ತರಿಸಿ ಚಿತೆಯನ್ನು ತಯಾರಿಸಿದಳು. ಗಂಡನ ಹೆಣವನ್ನು ಅಲ್ಲಿಟ್ಟು, ಚಿತೆಗೆ ತುಪ್ಪ ಸುರಿದು ಅಗ್ನಿಯನ್ನುಪ್ರಜ್ವಲಿಸಿ ತಾನೂ ಚಿತಾರೋಹಣ ಮಾಡಿ ಭಸ್ಮವಾದಳು. ಕೂಡಲೇ ದಿವ್ಯ ರೂಪವನ್ನು ಸ್ವೀಕರಿಸಿದ ಗಂಡನನ್ನು ಕರೆದುಕೊಂಡು ದೇವಲೋಕಕ್ಕೆ ಹೋದಳು. ಹೀಗೆ ಅತ್ಯಂತ ಕಠಿಣವಾದ ಪತಿವ್ರತಾ ಧರ್ಮವನ್ನು ಪರಿಪಾಲಿಸಿ ಆ ಸ್ತ್ರೀಯು ತನ್ನ ಗಂಡನ ಪಾಪವನ್ನು ಪರಿಹರಿಸಿ ಆದರ್ಶ ಪತಿವ್ರತೆಯೆಂದು ಪ್ರಖ್ಯಾತಿ ಹೊಂದಿದಳು.

## ಸಂಧ್ಯಾವಲಿಯು ಮೋಹಿನಿಗೆ ಊಟ ಮಾಡಿಸಿದಳು

**ಧರ್ಮಾಂಗದನು ಹೇಳುತ್ತಾನೆ:-** ಅಮ್ಮಾ ನಾನು ಹೇಳಿದ ಮಾತನ್ನು ವಿಚಾರ ಮಾಡಿ ಅನಂತರ ಮೋಹಿನಿಗೆ ಊಟ ಮಾಡಿಸು. ನನ್ನ ತಂದೆಯನ್ನು ಸಂತೋಷ ಪಡಿಸುವುದು ನಮ್ಮಿಬ್ಬರ ಕರ್ತವ್ಯ. ಇದರಿಂದ ನಮ್ಮ ಪಾಪನಾಶವಾಗಿ ಪರಲೋಕದಲ್ಲಿ ಅಕ್ಷಯ ಸುಖ ಪ್ರಾಪ್ತಿಯಾಗುತ್ತದೆ. ಇಂತಹ ಧರ್ಮವು ಪರಮ ದುರ್ಲಭ."

ಮಗನ ಮಾತನ್ನು ಕೇಳಿ ಸಂಧ್ಯಾವಲಿಯು ಸ್ವಲ್ಪ ಹೊತ್ತು ವಿಚಾರ ವಿಮರ್ಶೆ ಮಾಡಿ ಒಂದು ನಿರ್ಧಾರಕ್ಕೆ ಬಂದಳು. ಅವಳು ಧರ್ಮಾಂಗದನನ್ನು ಬರಸೆಳೆದು ಅಪ್ಪಿಕೊಂಡು ಶಿರಸ್ಸನ್ನು ಅಘ್ರಾಣಿಸಿ "ಮಗೂ, ನೀನು ಹೇಳಿದ ಮಾತು ಧರ್ಮ ಸಂಮತ. ನಾನು ಅಸೂಯೆಯನ್ನು ಬಿಟ್ಟು ನನ್ನ ಕೈಯಿಂದಲೇ ಬಡಿಸಿ ಊಟ ಮಾಡಿಸುತ್ತೇನೆ. ಏಕಾದಶಿ ವ್ರತಾನುಷ್ಠಾನದಿಂದ ಪ್ರಾಪ್ತನಾದ ನಿನ್ನಂತಹ ಒಬ್ಬ ಮಗನಿದ್ದರೂ ಸಾಕು.

**ಕಿಂಜಾತೈಃ ಬಹುಭಿಃ ಪುತ್ರೈಃ ಶೋಕಸಂತಾಪಕಾರಕೈಃ ।**
**ವರಮೇಕಃ ಕುಲಾಲಂಬೀ ಯತ್ರ ವಿಶ್ರೂಯತೇ ಕುಲಂ ॥**

ನಾ. ಉತ್ತರ ೧೭-೧೦

ಶೋಕ ಸಂತಾಪವನ್ನು ಹೆಚ್ಚಿಸುವ ಅನೇಕ ಮಂದಿ ಮಕ್ಕಳಿಂದ ಏನು ಉಪಯೋಗ? ವಂಶಕ್ಕೆ ಆಧಾರನಾದ, ಕೀರ್ತಿಯನ್ನು ಹೆಚ್ಚಿಸುವ ಒಬ್ಬನೇ ಮಗನಿದ್ದರೂ ಸಾಕು. ಧರ್ಮಾಂಗದ, ನಿನ್ನನ್ನು ಹೆತ್ತ ನಾನು ಧನ್ಯಳು." ಸಂಧ್ಯಾವಲಿಯು ಹೀಗೆ ಹೇಳಿ ಷಡ್ರಸ ಪೂರ್ಣವಾದ ಭೋಜನವನ್ನು ಸಿದ್ಧಪಡಿಸಲು ಆಯಾ ಪಾತ್ರೆಗಳ ಕಡೆಗೆ ನೋಡಿದಳು. ಪರಮ ಪತಿವ್ರತೆಯಾದ ಸಂಧ್ಯಾವಲಿಯ ದೃಷ್ಟಿಯಲ್ಲಿ ಅತ್ಯದ್ಭುತ ಶಕ್ತಿ ಇದ್ದಿತು. ಅವಳ ನೋಟವು ಬಿದ್ದ ಕೂಡಲೇ ಆ ಪಾತ್ರೆಗಳಲ್ಲಿ ಆಹಾರ ಪದಾರ್ಥಗಳು ಸಿದ್ಧವಾದವು. ಅಮೃತಕ್ಕೆ ಸಮಾನವಾದ ಜಲವೂ ಸಿದ್ಧವಾಯಿತು. ರತ್ನಖಚಿತವಾದ ಚಿನ್ನದ ಚಮಚವನ್ನು ತೆಗೆದುಕೊಂಡು ನಗುನಗುತ್ತಾ ಸಂಧ್ಯಾವಲಿಯು ಮೋಹಿನಿಗೆ ಬಡಿಸಿದಳು, ಬಂಗಾರದ

ಮಣೆಯ ಮೇಲೆ ಕುಳಿತು, ಚಿನ್ನದ ತಟ್ಟೆಯಲ್ಲಿ ಬೇರೆ ಬೇರೆಯಾಗಿ ಬಡಿಸಿರುವ ಸಿದ್ಧವಾದ ಮೃಧುಮಧುರ ಪದಾರ್ಥಗಳನ್ನು ಮೋಹಿನಿಯು ತನ್ನ ರುಚಿಗನುಸಾರವಾಗಿ ಸ್ವೀಕರಿಸಿದಳು. ಧರ್ಮಾಂಗದನು ಆಗ ಬೀಸಣಿಗೆಯಿಂದ ಬೀಸುತ್ತಿದ್ದನು.

## ಧರ್ಮಾಂಗದನ ಮಾತೃ ಭಕ್ತಿ ಪೂರ್ಣ ವಚನಗಳು

ಮೋಹಿನಿಯ ಭೋಜನವಾದ ಮೇಲೆ ರಾಜಕುಮಾರನು ಅವಳನ್ನು ನಮಿಸಿ ಹೇಳಿದನು. "ಅಮ್ಮ ಈ ಸಂಧ್ಯಾವಲೀ ದೇವಿಯು ಮೂರು ವರ್ಷ ನನ್ನನ್ನು ಗರ್ಭದಲ್ಲಿ ಧರಿಸಿದ್ದಾಳೆ. ನಿಮ್ಮ ಪತಿ (ನನ್ನ ತಂದೆಯಾದ ರುಕ್ಮಾಂಗದನಿಂದ) ಯಿಂದ ಪೋಷಿತನಾದ ನಾನು ಇಷ್ಟು ಬೆಳೆದಿದ್ದೇನೆ. ಅಮ್ಮ, ಮೂರು ಲೋಕದಲ್ಲಿಯೂ ಕೂಡ ಏನೂ ಕೊಟ್ಟರೂ ತಾಯಿಯ ಉಪಕಾರವನ್ನು ತೀರಿಸಲು ಸಾಧ್ಯವಿಲ್ಲ." ಧರ್ಮಾಂಗದನ ಆ ಮಾತನ್ನು ಕೇಳಿ ಮೋಹಿನಿಯು ಆಲೋಚಿಸಲಾರಂಭಿಸಿದಳು. "ತಂದೆ ತಾಯಿಗಳಲ್ಲಿ ಭಕ್ತಿಭಾವಪೂರ್ಣನಾದ ಪುತ್ರನಿಗಿಂತ ಈ ಪ್ರಪಂಚದಲ್ಲಿ ಯಾರೂ ದೊಡ್ಡವರಿಲ್ಲ. ಸಮಸ್ತ ಗುಣಭರಿತನಾದ, ಧರ್ಮಾತ್ಮನಾದ ಧರ್ಮಾಂಗದನ ವಿಷಯದಲ್ಲಿ, ಅವನು ಅಮ್ಮ ಎಂದು ಕರೆಯುವ ನಾನು ಹೇಗೆ ಕೆಟ್ಟ ರೀತಿಯಿಂದ ನಡೆದುಕೊಳ್ಳಲಿ?

## ಮೋಹಿನಿಯ ಮೋಡಿ

ಮೋಹಿನಿಯು ಹೀಗೆ ನಾನಾ ರೀತಿಯಾಗಿ ಆಲೋಚಿಸಿ ಧರ್ಮಾಂಗದನ ಹತ್ತಿರ ಹೀಗೆಂದಳು - "ಧರ್ಮಾಂಗದ, ನೀನೀಗಲೇ ನನ್ನ ಪತಿಯನ್ನು ಕರೆದುಕೊಂಡು, ಬಾ. ನಾನು ಅವನನ್ನು ಬಿಟ್ಟು ಎರಡು ಮುಹೂರ್ತವೂ ಇರಲಾರೆ." ಕೂಡಲೇ ಧರ್ಮಾಂಗದನು ತಂದೆಯ ಬಳಿಗೆ ಹೋಗಿ ಅವನನ್ನು ಕರೆದುಕೊಂಡು ಬಂದನು. ಮೋಹಿನಿಯು ತಾನಾಗಿ ಕರೆದುದನ್ನು ಕೇಳಿ ರುಕ್ಮಾಂಗದನ ಮುಖದಲ್ಲಿ ಪ್ರಸನ್ನತೆಯುಂಟಾಯಿತು. ಮಂದಹಾಸವು ಮಿಂಚಿತು. ಕೂಡಲೇ ಅವನು ಧರ್ಮಾಂಗದನ ಅರಮನೆಗೆ ಬಂದು ಮಂಚದ ಮೇಲೆ ಮಲಗಿದ ಮೋಹಿನಿಯನ್ನು ನೋಡಿದನು. ಚಿನ್ನದ ಕಾಂತಿಯು ಸುತ್ತಲೂ ಅವಳ ಮೈಯಿಂದ ಹರಡುತ್ತಿತ್ತು. ಸಂಧ್ಯಾವಲಿಯು ಬೀಸಣಿಕೆಯಿಂದ ಬೀಸುತ್ತಿದ್ದಳು. ರಾಜನು ಬಂದುದನ್ನು ನೋಡಿ ಮೋಹಿನಿಯು ಮಲಗಿದ್ದಲಿಂದಲೇ ಮುಖದಲ್ಲಿ ಸ್ವಲ್ಪ ನಗುವನ್ನು ತೋರಿಸುತ್ತಾ ಹೇಳಿದಳು "ಪ್ರಾಣನಾಥ! ಕೋಮಲವಾದ ಹಾಸಿಗೆಯನ್ನು ಹಾಸಿರುವ ಈ ಮಂಚದಲ್ಲಿ ನನ್ನ ಹತ್ತಿರ ಕುಳಿತುಕೊಳ್ಳಿ. ನಾನು ಹೇಳುವುದನ್ನು ಕೇಳಿರಿ. ಯಾವಾಗಲೂ ಬೇರೆ ಕಾರ್ಯದಲ್ಲಿಯೇ ಆಸಕ್ತನಾದ ಮನುಷ್ಯನ ಹೆಂಡತಿಯು ಹೇಗೆ ಸುಖವಾಗಿರಲು ಸಾಧ್ಯ? ದಾನ ಮಾಡದ ಹಣ ನಾಶವಾಗುತ್ತದೆ. ರಕ್ಷಿಸದ ರಾಜ್ಯ ಬಹುಕಾಲ ಉಳಿಯುವುದಿಲ್ಲ. ಅಭ್ಯಾಸ ಮಾಡದ ಶಾಸ್ತ್ರದ ಜ್ಞಾನ ಸ್ಥಿರವಾಗುವುದಿಲ್ಲ. ಸೋಮಾರಿಗಳಿಗೆ ವಿದ್ಯೆ ಲಭ್ಯವಾಗುವುದಿಲ್ಲ. ಯಾವಾಗಲೂ ವ್ರತ ಮಾಡುತ್ತಿರುವವರಿಗೆ ಹೆಂಡತಿಯ ಪ್ರೀತಿ ಸಿಗುವುದಿಲ್ಲ. ಪ್ರಯತ್ನವಿಲ್ಲದೆ ಲಕ್ಷ್ಮಿಯು ಒಲಿಯುವುದಿಲ್ಲ. ದೇವರಲ್ಲಿ ಭಕ್ತಿಯಿಲ್ಲದೆ ಕೀರ್ತಿ ಪ್ರಾಪ್ತಿಯಾಗುವುದಿಲ್ಲ. ಪ್ರಯತ್ನವಿಲ್ಲದೆ ಸುಖವಿಲ್ಲ. ಪತ್ನಿಯಿಲ್ಲದೆ ಸಂತಾನ ಪ್ರಾಪ್ತಿಯಿಲ್ಲ. ಅಪವಿತ್ರನಿಗೆ ಧರ್ಮಲಾಭವಿಲ್ಲ. ಅಪ್ರಿಯ ಮಾತಾಡುವ ಬ್ರಾಹ್ಮಣನಿಗೆ ಧನಪ್ರಾಪ್ತಿಯಿಲ್ಲ. ಗುರುಗಳಲ್ಲಿ ಬರೀ ಪ್ರಶ್ನೆ ಮಾಡುವವನಿಗೆ ತತ್ತ್ವಜ್ಞಾನವಿಲ್ಲ.

ನಡೆಯದವನು ಇದ್ದಲ್ಲಿಯೇ ಇರುತ್ತಾನೆ. ಎಲ್ಲಿಗೂ ಮುಟ್ಟುವುದಿಲ್ಲ. ಎಚ್ಚತ್ತಿರುವವನಿಗೆ ಭಯವಿಲ್ಲ. ಗಂಡನು ದೂರವೇ ಇರುತ್ತಿದ್ದರೆ ಹೆಂಡತಿಗೆ ಸುಖವಿಲ್ಲ. ಮಹಾರಾಜ! ಸಮರ್ಥ ಪುತ್ರನಿರುವಾಗ ನೀವು ಧರ್ಮಾಂಗದನ ಸುಂದರ ಮಂದಿರದಲ್ಲಿ ನನ್ನನ್ನು ಒಬ್ಬಳನ್ನೇ ಬಿಟ್ಟು ರಾಜ ಕಾರ್ಯದಲ್ಲಿ ಆಸಕ್ತರಾಗಬಹುದೇ?'' ರುಕ್ಮಾಂಗದ ರಾಜನು ಮೋಹಿನಿಯನ್ನು ಸಮಾಧಾನಗೊಳಿಸುತ್ತ ಹೇಳಲಾರಂಭಿಸಿದನು.

## ಧರ್ಮಾಂಗದನು ಎಲ್ಲ ತಾಯಂದಿರನ್ನು ಸಮಾಧಾನಗೊಳಿಸಿದನು

**ರಾಜನು ಹೇಳಿದನು:-** ಭಯಶೀಲೆಯೇ ನಾನೆಂದಿಗೂ ಪುನಃ ರಾಜ್ಯಭಾರಕ್ಕೆ ಕೈ ಹಾಕುವುದಿಲ್ಲ. ನಾನೇ ಧರ್ಮಾಂಗದನಿಗೆ ನಿನ್ನನ್ನು ಅವನ ಅರಮನೆಯಲ್ಲಿ ಸ್ವಲ್ಪ ಸಮಯ ವಾಸಮಾಡಿಸಿ ಸೇವೆ ಮಾಡುವಂತೆ ಹೇಳಿದೆನು. ಏಕೆಂದರೆ ಅವನ ಅರಮನೆಯು ಒಳ್ಳೆಯ ವಾತಾವರಣದಲ್ಲಿದ್ದು ಚಳಿಗಾಲ ಮುಂತಾದವುಗಳ ತೊಂದರೆಯೂ ಇರುವುದಿಲ್ಲ. ಅದು ಸರ್ವ ಋತುಗಳಲ್ಲಿಯೂ ಸುಖಕರವಾಗಿರುತ್ತದೆ. ನಾನು ಶ್ರಮ ಪರಿಹಾರಕ್ಕಾಗಿ ಹಾಸಿಗೆಯಲ್ಲಿ ಕೂತಕೂಡಲೇ ನನ್ನನ್ನು ನಿದ್ರೆಯು ಆವರಿಸಿತು. ನಿದ್ದೆಯಿಂದ ಎದ್ದಕೂಡಲೇ ನಿನ್ನ ಬಳಿಗೆ ಬಂದಿದ್ದೇನೆ. ನೀನು ಹೇಳಿದ ಮಾತನ್ನು ಸಂದೇಹವಿಲ್ಲದೆ ನಡೆಸಿಕೊಡುತ್ತೇನೆ.'' ಮೋಹಿನಿ ಹೇಳಿದಳು - ''ರಾಜೇಂದ್ರ! ನನ್ನನ್ನು ತಾವು ವಿವಾಹ ವಾದುದರಿಂದ ಈ ನಿಮ್ಮ ರಾಣಿಯರಿಗೆಲ್ಲ ಅತ್ಯಂತ ದುಃಖವಾಗಿದೆ. ಇವರು ಪರಮ ಪತಿವ್ರತೆಯರು. ಇವರ ಕಣ್ಣೀರು ಎಂತೆಂತಹವರನ್ನೂ ಭಸ್ಮ ಮಾಡೀತು. ಮಹಾರಾಣಿ ಸಂಧ್ಯಾವಲಿಗೆ ಸಮಾನಳಾದ ಸ್ತ್ರೀಯು ಮೂರು ಲೋಕಗಳಲ್ಲಿಯೂ ಸಿಗಲಾರಳು. ಇವಳ ಒಂದೊಂದು ಅಂಗವೂ ನಿಮ್ಮ ಸ್ನೇಹ ಪಾಶದಿಂದ ಬದ್ಧವಾಗಿದೆ. ಆದ್ದರಿಂದಲೇ ಇವಳು ನನಗೆ ಷಡ್ರಸಯುಕ್ತವಾದ ಭೋಜನವನ್ನು ಮಾಡಿಸಿದ್ದಾಳೆ. ಒಳ್ಳೆಯ ಮಾತನ್ನಾಡುತ್ತಿದ್ದಾಳೆ. ಇದೇ ಸ್ವಭಾವದ ನೂರಾರು ರಾಣಿಯರು ನಿಮ್ಮ ಭವನದ ಸೌಂದರ್ಯ ಮೂರ್ತಿಗಳಾಗಿದ್ದಾರೆ. ನಾನು ಇವರ ಪಾದಧೂಳಿಗೂ ಸಮಾನಳಲ್ಲ.'' ಮಗನ ಜತೆಗೆ ನಿಂತಿದ್ದ ಹಿರಿಯ ರಾಣಿಯ ಎದುರು ಮೋಹಿನಿಯು ಆಡಿದ ಮಾತನ್ನು ಕೇಳಿ ರುಕ್ಮಾಂಗದನು ನಾಚಿಕೆಪಟ್ಟನು. ಅವನಿಗೆ ಏನು ಹೇಳಲೂ ತೋಚಲಿಲ್ಲ. ಆದರೆ ಸ್ವತಃ ಧರ್ಮಾಂಗದನೇ ಹೇಳಿದನು. ''ತಾಯಂದಿರೇ, ನನ್ನ ತಂದೆಗೆ ನಿಮ್ಮೆಲ್ಲರಿಗೂ ಮೋಹಿನೀ ದೇವಿಯು ಅತ್ಯಂತ ಪ್ರೀತಿ ಪಾತ್ರಳು. ಅವರು ಮಂದರ ಪರ್ವತದಿಂದ ತಮ್ಮ ಆನಂದಕ್ಕಾಗಿ ಅವಳನ್ನು ಕರೆದು ತಂದಿದ್ದಾರೆ. ಆದ್ದರಿಂದ ನೀವೆಲ್ಲರೂ ಮಾತ್ಸರ್ಯವನ್ನು ಬಿಟ್ಟು ನಮ್ಮ ತಂದೆಯ ಆನಂದಕ್ಕೆ ಅನುಕೂಲರಾಗಿ ನಡೆದುಕೊಳ್ಳಬೇಕು.'' ಮಗನ ಮಾತನ್ನು ಎಲ್ಲ ತಾಯಂದಿರೂ ಕೇಳಿ ಹೇಳಿದರು-''ಮಗೂ! ನಿನ್ನ ನ್ಯಾಯಬದ್ಧವಾದ ಮಾತನ್ನು ನಾವೆಲ್ಲರೂ ನಡೆಸಿಕೊಡುತ್ತೇವೆ.''

ಧರ್ಮಾಂಗದನಿಗೆ ಅಮಿತಾನಂದವಾಯಿತು. ಅವನು ಪ್ರತಿಯೊಬ್ಬ ತಾಯಿಗೂ ಒಂದು ಕೋಟಿ ಚಿನ್ನದ ನಾಣ್ಯ, ಸಾವಿರ ನಗರ, ಸಾವಿರ ಗ್ರಾಮ, ಎಂಟೆಂಟು ಸುವರ್ಣ ಕಂಠಿ ಹತ್ತು ಸಾವಿರ ಚಿನ್ನದ ನಾಣ್ಯದ ಬೆಲೆಬಾಳುವ ಪೀತಾಂಬರಗಳು ಇವುಗಳನ್ನು ಕೊಟ್ಟನು. ಮೇರು ಪರ್ವತದ ಖನಿಯಿಂದ ತೆಗೆದಿರುವ ಚಿನ್ನದಿಂದ ಎರಕಹೊಯ್ದು ಒಂದು ಲಕ್ಷಚಿನ್ನದ

ನಾಣ್ಯಗಳು, ಒಬ್ಬೊಬ್ಬರಿಗೂ ನೂರಕ್ಕಿಂತ ಹೆಚ್ಚು ದಾಸದಾಸಿಯರು. ಕೊಡದಂತಹ ಕೆಚ್ಚಲಿನ ಹತ್ತುಸಾವಿರ ಕರೆಯುವ ಹಸುಗಳು. ಒಂದುಸಾವಿರ ಎತ್ತುಗಳು ಇವುಗಳನ್ನು ಕೊಟ್ಟನು. ಅನಂತರ ಒಬ್ಬೊಬ್ಬ ತಾಯಿಗೂ ಭಕ್ತಿಯಿಂದ ವಜ್ರಖಚಿತವಾದ ಒಂದು ಸಾವಿರ ಚಿನ್ನದ ಆಭರಣಗಳು. ನೆಲ್ಲಿಕಾಯಿಯ ಪರಿಮಾಣದ ಮುತ್ತಿನ ಸರಗಳ ರಾಶಿಗಳು, ಎಡಗೈಗೆ ೫, ಬಲಗೈಗೆ ೭ ರಂತೆ ಒಬ್ಬೊರಿಗೂ ೧೨ ಚಿನ್ನದ ಬಳೆಗಳನ್ನು ಕೊಟ್ಟನು. ಚಂದ್ರಾವಳಿಯ ಬಳ್ಳಿಯಲ್ಲಿ ಚಂದ್ರಪ್ರಕಾಶದ ಎರಡೂವರೆಸಾವಿರ ಮುತ್ತಿನ ಸರಗಳಿದ್ದವು. ಅವುಗಳಲ್ಲಿ ಒಬ್ಬೊಬ್ಬ ತಾಯಿಗೆ ಎರಡೆರಡು ಸರಗಳಂತೆ ಕೊಟ್ಟನು. ಒಬ್ಬೊಬ್ಬರಿಗೂ ಇಪ್ಪತ್ತನಾಲ್ಕು ಚಿನ್ನದ ತಪ್ಪೇಲೆ, ಅಷ್ಟೇ ಚಿನ್ನದ ಕೊಡಗಳು. ಸುಂದರವಾದ ನೂರು ಪಲ್ಲಕ್ಕಿಗಳು. ಅದನ್ನು ಹೊರುವ ಆಳುಗಳು ಇವನ್ನೆಲ್ಲಾ ತಾಯಂದಿರಿಗೆ ಕೊಟ್ಟನು. ಕುಬೇರನನ್ನು ಮೀರಿಸಿ ಈ ರೀತಿ ಸಂಪತ್ತನ್ನು ಹಂಚಿ ತಾಯಂದಿರಿಗೆ ಪ್ರದಕ್ಷಿಣೆ ಬಂದು ಕೈಮುಗಿದು ಹೇಳಿದನು - "ತಾಯಂದಿರೇ, ತಮ್ಮ ಪಾದಗಳಿಗೆ ತಲೆಯಿಟ್ಟು ಕೇಳಿಕೊಳ್ಳುತ್ತೇನೆ. ನನ್ನ ಮೇಲಿನ ದಾಕ್ಷಿಣ್ಯದಿಂದ, ಪ್ರೀತಿಯಿಂದ, ಪುತ್ರ ವಾತ್ಸಲ್ಯದಿಂದ ನೀವೆಲ್ಲರೂ ನಿಮ್ಮ ಪತಿಯ ಆನಂದಕ್ಕಾಗಿ, ನನ್ನ ತಂದೆಯ ಬಳಿಹೋಗಿ ಹೇಳಬೇಕು.

"ಮಹಾರಾಜರೇ, ಈ ಬ್ರಹ್ಮಕುಮಾರಿ ಮೋಹಿನಿಯು ಸುಶೀಲಳೂ, ಸುಗುಣೆಯೂ ಆಗಿದ್ದಾಳೆ. ನೀವು ಇವಳ ಜತೆಗೆ ನೂರಾರುವರ್ಷ ಏಕಾಂತದಲ್ಲಿ ಸುಖವಾಗಿ ವಾಸಮಾಡಿರಿ." ಮಗನ ಮಾತನ್ನು ಕೇಳಿ ಎಲ್ಲಾ ರಾಣಿಯರಿಗೂ ಮೈಯಲ್ಲಿ ರೋಮಾಂಚನ ವುಂಟಾಯಿತು. ಅವರೆಲ್ಲರೂ ಮಹಾರಾಜನ ಬಳಿಗೆ ಹೋಗಿ "ಆರ್ಯಪುತ್ರ! ತಾವು ಬ್ರಹ್ಮಕುಮಾರಿ ಮೋಹಿನಿಯೊಂದಿಗೆ ದೀರ್ಘಕಾಲದವರೆಗೆ ಸುಖವಾಗಿ ವಾಸಮಾಡಿರಿ. ನಿಮ್ಮ ಮಗನ ಶುದ್ಧಹೃದಯ, ತೇಜಸ್ಸು, ಪಿತೃಭಕ್ತಿ, ಮಾತೃಭಕ್ತಿಗಳಿಂದ ನಮ್ಮ ಹೃದಯವು ಪರಿಶುದ್ಧವಾಯಿತು. ಆದ್ದರಿಂದ ನಾವು ಈ ಮಾತನ್ನಾಡಿದ್ದೇವೆ. ನಮ್ಮ ಮಾತಿನಲ್ಲಿ ತಾವು ವಿಶ್ವಾಸವಿಡಬೇಕು." ಎಂದು ಕೇಳಿಕೊಂಡರು.

## ಧರ್ಮಾಂಗದನ ರಾಜ್ಯಭಾರ

**ವಸಿಷ್ಠರು ಹೇಳುತ್ತಾರೆ:-** ರಾಜನೇ, ತನ್ನ ಪತಿಯರು ಈ ರೀತಿ ಅನುಮತಿ ಕೊಟ್ಟಾಗ ರುಕ್ಮಾಂಗದನ ಸಂತೋಷಕ್ಕೆ ಎಣೆಯೇ ಇಲ್ಲ. ಅವನು ತನ್ನ ಪುತ್ರ ಧರ್ಮಾಂಗದನೊಡನೆ ಹೀಗೆಂದನು. "ಮಗೂ, ನೀನು ಸಪ್ತದ್ವೀಪಯುಕ್ತವಾದ ಈ ಭೂಮಂಡಲವನ್ನು ಯಾವಾಗಲೂ ಉದ್ಯಮಶೀಲನಾಗಿ ಸಾವಧಾನವಾಗಿ ಪಾಲಿಸು. ಸದಾಚಾರವನ್ನು ಪಾಲಿಸು. ಪ್ರಜೆಗಳ ವ್ಯಾಪಾರ ವ್ಯವಸಾಯವನ್ನು ಬೆಳೆಸುತ್ತಿರು. ಯಾವಾಗಲೂ ರಾಜ್ಯದಲ್ಲಿ ತಿರುಗಾಡುತ್ತಾ ಇರು. ಕೌಟಿಲ್ಯವಿಲ್ಲದೆ ದಾನ ಮಾಡುತ್ತಾ ಇರು, ರಾಜರು ಅಪರಿಚಿತರ ಮೇಲೆ ನಂಬಿಕೆಯನ್ನಿಡದೆ ಇರುವುದೇ ಒಳ್ಳೆಯದು, ಕೋಶಾಗಾರದ ಕಡೆಗೆ ಸರಿಯಾಗಿ ಗಮನವಿಡು." ಧರ್ಮಾಂಗದನು ತಂದೆಯ ಮಾತನ್ನು ಕೇಳಿ ತಾಯಂದಿರೊಡನೆ ತಂದೆಗೆ ನಮಸ್ಕಾರ ಮಾಡಿದನು. ರುಕ್ಮಾಂಗದನಿಗೆ ಅಸಂಖ್ಯವಾದ ಧನ - ಸಂಪತ್ತನ್ನು ಕೊಟ್ಟನು. ಅವನ ಸೇವೆಗಾಗಿ ಸುವರ್ಣಹಾರಧಾರಿಗಳಾದ ಅನೇಕಾನೇಕ ದಾಸ ದಾಸಿಯರನ್ನು ನೇಮಿಸಿದನು. ಈ ರೀತಿ ತಂದೆಯ ಸುಖಕ್ಕಾಗಿ ಎಲ್ಲ ವ್ಯವಸ್ಥೆಯನ್ನು ಮಾಡಿ ಸಮಸ್ತ ಭೂಮಂಡಲದ ರಕ್ಷಣೆಯ ಭಾರವನ್ನು ತಾನೇ ನಿರ್ವಹಿಸುತ್ತಿದ್ದನು, ಅವನು ಅನೇಕ

ರಾಜರಿಂದ ಕೂಡಿಕೊಂಡು ಎಲ್ಲ ದ್ವೀಪಗಳಲ್ಲಿಯೂ ಸಂಚರಿಸುತ್ತಿದ್ದನು. ಅದರ ಪರಿಣಾಮವಾಗಿ ಜನರಲ್ಲಿ ಪಾಪಬುದ್ಧಿಯು ಸ್ವಲ್ಪವೂ ಉಳಿಯಲಿಲ್ಲ. ಅತ್ತ ರುಕ್ಮಾಂಗದನು ನೀರೋಗನಾಗಿ ದಾನಧರ್ಮಮಾಡುತ್ತ ಮೋಹಿನಿಯ ವಿಲಾಸಗಳಿಂದ ಸಂತುಷ್ಟನಾಗಿ ಸುಖಿಯಾಗಿ ಕಾಲ ಕಳೆಯುತ್ತಿದ್ದನು.

## ಧರ್ಮಾಂಗದನ ದಿಗ್ವಿಜಯ ಮತ್ತು ವಿವಾಹ

**ವಸಿಷ್ಠರು ಹೇಳುತ್ತಾರೆ:-** ರಾಜನ್, ಹೀಗೆ ಮೋಹಿನಿಯ ವಿಲಾಸಗಳಿಂದ ರುಕ್ಮಾಂಗದನು ಎಂಟು ವರ್ಷಗಳನ್ನು ಕಳೆದನು. ಒಂಭತ್ತನೆಯ ವರ್ಷದಲ್ಲಿ ಧರ್ಮಾಂಗದನು ಮಲಯಪರ್ವತದಲ್ಲಿ ಐದು ಮಂದಿ ವಿಧ್ಯಾಧರರನ್ನು ಸೋಲಿಸಿ, ಅವರ ಐದು ರತ್ನಗಳನ್ನು ಕಿತ್ತುಕೊಂಡನು. ಅವುಗಳಲ್ಲಿ ಒಂದು ಮಣಿಯು ಪ್ರತಿದಿನವೂ ಕೋಟಿ ಪಾಲು ಚಿನ್ನವನ್ನು ಸುರಿಸುತ್ತಿತ್ತು. ಎರಡನೆಯದು ಲಕ್ಷಗಟ್ಟಲೆ ವಸ್ತ್ರ, ಅಲಂಕಾರಗಳನ್ನು ಕೊಡುತ್ತಿತ್ತು. ಮೂರನೆಯದು ಅಮೃತವನ್ನು ಸುರಿಸಿ ಮುಪ್ಪಿನಲ್ಲಿಯೂ ನವಯೌವ್ವನವನ್ನುಂಟುಮಾಡುತ್ತಿತ್ತು. ನಾಲ್ಕನೆಯದು ಕೇಳಿದ ಕೂಡಲೇ ಸಭಾಭವನವನ್ನು ತಯಾರಿಸಿ ಷಡ್ರಸೋಪೇತವಾದ ಅನ್ನವನ್ನೂ ಕೊಡುತ್ತಿತ್ತು. ಐದನೆಯದು ಆಕಾಶ ಗಮನ ಶಕ್ತಿಯನ್ನು ಕೊಟ್ಟು ಮೂರು ಲೋಕಗಳ ಸಂಚಾರವನ್ನು ಮಾಡಿಸುತ್ತಿತ್ತು. ಈ ಐದೂ ಮಣಿಗಳನ್ನೂ, ಧರ್ಮಾಂಗದನು ತಂದೆಯಾದ ರುಕ್ಮಾಂಗದ ಮತ್ತು ತನ್ನ ಮಲತಾಯಿಯಾದ ಮೋಹಿನಿಯರ ಚರಣಗಳಲ್ಲಿಟ್ಟು ನಮಸ್ಕರಿಸಿದನು. ಮತ್ತು ಹೇಳಿದನು "ಅಪ್ಪಾ, ನಾನು ಮಲಯ ಪರ್ವತದಲ್ಲಿದ್ದ ಐದು ಮಂದಿ ವಿಧ್ಯಾಧರರನ್ನು ವೈಷ್ಣವಾಸ್ತ್ರದಿಂದ ಸೋಲಿಸಿ, ತಮ್ಮ ಪತ್ನೀ ಸಮೇತರಾದ ಅವರನ್ನು ನಿಮ್ಮ ಪಾದಸೇವಕರನ್ನಾಗಿ ಮಾಡಿದ್ದೇನೆ, ಈ ಐದು ರತ್ನಗಳನ್ನು ನನ್ನ ಚಿಕ್ಕಮ್ಮ ಮೋಹಿನೀದೇವಿಗೆ ಕೊಡಿರಿ." ಎಂದು ಹೇಳಿ ಆ ರತ್ನಗಳ ಗುಣಗಳನ್ನು ವಿವರಿಸಿದನು. ಅವನು ನಾಗರಾಜಧಾನಿ ಭೋಗಪುರಿ, ದಾನವಪುರಿ ಮತ್ತು ವರುಣಲೋಕ ಇವುಗಳ ವಿಜಯವೃತ್ತಾಂತವನ್ನು ಹೇಳಿ ಅಲ್ಲಿಂದ ಜಯಿಸಿ ತಂದಿದ್ದ ಕೋಟಿಗಟ್ಟಲೆ ರತ್ನಗಳು ಸಾವಿರಾರು ಕಿವಿಕಪ್ಪಾದ ಮೈಯೆಲ್ಲಾ ಬಿಳುಪಾದ ಕುದುರೆಗಳು, ಸಾವಿರಾರು ಕುಮಾರಿಯರನ್ನು ತೋರಿಸಿ "ಅಪ್ಪಾ ಇವೆಲ್ಲವೂ! ಈ ಸಂಪತ್ತೆಲ್ಲಾ ನಿಮ್ಮ ಅನುಗ್ರಹ" ಎಂದು ಹೇಳಿದನು.

ರುಕ್ಮಾಂಗದನು ಮೋಹಿನಿಯೊಂದಿಗೆ ಆ ಎಲ್ಲಾ ಸಂಪತ್ತನ್ನು ನೋಡಿ ತುಂಬಾ ಆನಂದಪಟ್ಟನು. ಅಲ್ಲಿ ವರುಣಕನ್ಯೆಯರು. ನಾಗಕನ್ಯೆಯರೂ ಇದ್ದರು. ಅವರನ್ನೆಲ್ಲಾ ಒಂದು ಕಣ್ಣಿಂದ ನೋಡಿ ರುಕ್ಮಾಂಗದನು, ಇವರನ್ನೆಲ್ಲಾ ನಿನ್ನ ಅಧಿಕಾರದಲ್ಲಿಯೇ ಇಟ್ಟುಕೋ ಎಂದು ಮಗನಿಗೆ ಹೇಳಿದನು, ಅನೇಕ ರತ್ನಗಳು ಮತ್ತು ದಾನವನಾರಿಯರನ್ನು ಮೋಹಿನಿಗೆ ಕೊಟ್ಟನು. ಅನಂತರ ಒಂದು ಬಾರಿ ಪುರೋಹಿತರನ್ನು ಪ್ರತ್ಯೇಕವಾಗಿ ಕರೆಸಿ ಹೇಳಿದನು. "ಬ್ರಾಹ್ಮಣೋತ್ತಮರೆ! ನನ್ನ ಮಗನು ನನ್ನ ಅಜ್ಞಾಪಾಲಕನಾಗಿ ಅಸಾಧಾರಣ ಪರಾಕ್ರಮ ತೋರಿಸಿ ವಿಜಯಿಯಾಗಿದ್ದಾನೆ, ಇನ್ನೂ ಕುಮಾರನಾಗಿರುವ ಇವನಿಗೆ ಅವನು ಜಯಿಸಿ ತಂದಿರುವ ಕನ್ಯೆಯರ ಜತೆಗೆ ವಿವಾಹ ಮಾಡಿಸಬೇಕು, ತರುಣನಾದ ಪುತ್ರನಿಗೆ ಮದುವೆ ಮಾಡಿಸಿ ಅವನನ್ನು ಸಂತೋಷಪಡಿಸುವದು ತಂದೆಯ ಕರ್ತವ್ಯ. ಆದ್ದರಿಂದ ನೀವು ವಿವಾಹದ ವ್ಯವಸ್ಥೆಯನ್ನು ಮಾಡಿರಿ." ಯುವಕನಾಗಿದ್ದರೂ ಅದುವರೆಗೂ ಸ್ತ್ರೀ ಸುಖ

ಪರಾಙ್ಮುಖನಾಗಿದ್ದ ಧರ್ಮಾಂಗದನು ತಂದೆಯ ಅಪ್ಪಣೆಯಿಂದ ಅನುಪಮ ಲಾವಣ್ಯವತಿಯರಾದ ವರುಣಕನ್ಯೆಯರ ಜೊತೆಗೆ ವಿವಾಹವಾದನು. ಶಾಸ್ತ್ರೀಯ ವಿಧಿಯಿಂದ ವಿವಾಹವು ನಡೆದು ವಿದ್ವಾಂಸರಿಗೆ ದಕ್ಷಿಣಾ ದಾನ, ವಸ್ತ್ರದಾನ, ಗೋದಾನಗಳು ನಡೆದವು. ವಿವಾಹದ ನಂತರ ಧರ್ಮಾಂಗದನು ಪ್ರತ್ಯೇಕವಾಗಿ ತಂದೆ ಮತ್ತು ತಾಯಿ ಸಂಧ್ಯಾವಲಿ ಇಬ್ಬರಿಗೂ ನಮಿಸಿ ತಾಯಿಯನ್ನು ಕುರಿತು ಹೇಳಿದನು - "ಅಮ್ಮಾ, ತಂದೆಯ ಅಪ್ಪಣೆಯಿಂದ ನಾನೀಗ ಗೃಹಸ್ಥನಾಗಿದ್ದೇನೆ. ನಿಮ್ಮಿಬ್ಬರ ಸೇವೆ ಶಿಶ್ರೂಷೆಯಲ್ಲಿಯೇ ಪ್ರೀತಿಯುಳ್ಳ ನನಗೆ ಈ ವಿವಾಹ ಬಂಧನವು ಯಾವ ತೊಂದರೆಯನ್ನು ಉಂಟುಮಾಡದಿರಲೆಂದು ಆಶೀರ್ವದಿಸಿರಿ.

**ಸಂಧ್ಯಾವಲಿಯು ಹೇಳಿದಳು:-** "ಮಗೂ, ದೀರ್ಘಾಯುಷ್ಮಂತನಾಗು, ಯೋಗ್ಯ ಭೋಗಗಳನ್ನು ಅನುಭವಿಸು. ನಿನ್ನಂತಹ ಮಗನಿಂದಾಗಿ ನಾನು ಧನ್ಯಳು ಎಲ್ಲರ ಗೌರವಕ್ಕೆ ಪಾತ್ರಳೂ ಆಗಿದ್ದೇನೆ" ಸಂಧ್ಯಾವಲಿಯು ಮಗನನ್ನು ಅಪ್ಪಿಶಿರಸ್ಸನ್ನು ಆಘ್ರಾಣಿಸಿ ಆಶೀರ್ವದಿಸಿದಳು. ಅಲ್ಲಿಂದ ಧರ್ಮಾಂಗದನು ಇತರ ತಾಯಿಂದಿರಿಗೂ ನಮಸ್ಕಾರ ಮಾಡಿ ತಂದೆಯ ಅಪ್ಪಣೆಯಿಂದ ರಾಜಕಾರ್ಯವನ್ನು ನೋಡಿಕೊಳ್ಳುತ್ತಿದ್ದನು.

## ಕಾರ್ತಿಕಮಾಸದ ಮಹಿಮೆ

**ವಸಿಷ್ಠರು ಹೇಳುತ್ತಾರೆ:-** ಈ ರೀತಿ ತಂದೆಯ ಆಜ್ಞೆಯಿಂದ ಏಕಾದಶೀವ್ರತ ಪರಿಪಾಲನ ಮಾಡುತ್ತಾ ಧರ್ಮಾಂಗದನು ರಾಜ್ಯಭಾರ ಮಾಡುತ್ತಿದ್ದನು. ಅವನ ರಾಜ್ಯದಲ್ಲಿ ಧರ್ಮಪರಿಪಾಲನ ಮಾಡದ ವ್ಯಕ್ತಿಯೇ ಇರಲಿಲ್ಲ. ದುಃಖಿತ, ಸಂತಾನ ಹೀನ, ಕುಷ್ಠಿಯೂ ಇರಲಿಲ್ಲ. ಪೃಥಿವಿಯು ನಿಧಿಯನ್ನೇ ಕೊಡುತ್ತಿತ್ತು. ಹಸುಗಳು ಕರುಗಳಿಗೆ ಯಥೇಚ್ಛವಾಗಿ ಹಾಲು ಕುಡಿಸಿ ಒಂದು ಕೊಡ ಹಾಲು ಕೊಡುತ್ತಿದ್ದುವು. ಮರದ ಎಲೆಗಳಲ್ಲಿಯೇ ಜೇನುಗೂಡು ಇರುತ್ತಿತ್ತು. ಎಲ್ಲ ಧಾನ್ಯಗಳೂ ಬೇಕಾದಷ್ಟು ಉತ್ಪತ್ತಿಯಾಗುತ್ತಿದ್ದವು. ಕೃತಯುಗವನ್ನು ಮೀರಿಸುವ ತ್ರೇತಾಯುಗದ ಕೊನೆಯ ಸಮಯವು ಆಗ ನಡೆಯುತ್ತಿತ್ತು. ಮಳೆಗಾಲವು ಕಳೆದು ಶರದ್ ಋತುವಿನ ಸಮಯದಲ್ಲಿ ಆಕಾಶ, ಭೂಮಿ ಎಲ್ಲವೂ ಸ್ವಚ್ಛವಾಯಿತು. ರುಕ್ಮಾಂಗದ ಮಹಾರಾಜನು ಮೋಹಿನಿಯ ಪ್ರೇಮಸಾಗರದಲ್ಲಿ ಮುಳುಗಿದ್ದರೂ ಏಕಾದಶೀ ವ್ರತವನ್ನು ಬಿಟ್ಟಿರಲಿಲ್ಲ. ದಶಮೀ, ಏಕಾದಶೀ ಮತ್ತು ದ್ವಾದಶೀ ಈ ಮೂರು ದಿನಗಳಲ್ಲಿ ಅವನು ಮೋಹಿನೀ ವಿಲಾಸವನ್ನೆಲ್ಲ ಬಿಟ್ಟು ನಿಯಮದಿಂದ ವ್ರತಪರಿಪಾಲನ ಮಾಡುತ್ತಿದ್ದನು. ಹೀಗಿರುವಾಗ ಅದೇ ಸಮಯದಲ್ಲಿ ಶ್ರೀಮನ್ನಹಾವಿಷ್ಣುವಿನ ಪ್ರಬೋಧಕಾಲವಾದ ಕಾರ್ತಿಕಮಾಸವು ಬಂದಿತು.

ಧರ್ಮಕ್ಕೆ ಸಮಾನವಾದ ಮಿತ್ರನಿಲ್ಲ. ಸತ್ಯಕ್ಕೆ ಸಮಾನವಾದ ಕೀರ್ತಿಯಿಲ್ಲ. ಆರೋಗ್ಯಕ್ಕೆ ಸಮಾನವಾದ ಭಾಗ್ಯವಿಲ್ಲ. ವಿಷ್ಣು ಸಮಾನವಾದ ದೇವತೆಯಿಲ್ಲ. ಅಂತೆಯೇ ಕಾರ್ತಿಕ ವ್ರತಕ್ಕೆ ಸಮಾನವಾದ ವ್ರತವಿಲ್ಲ. ಇಂತಹ ಕಾರ್ತಿಕಮಾಸವು ಸಮೀಪಿಸಿದುದನ್ನು ನೋಡಿ ಧರ್ಮದಲ್ಲಿ ಅತಿಪ್ರೀತಿಯುಳ್ಳ ರಾಜನು ಮೋಹಿನಿಯನ್ನು ಕುರಿತು ಹೇಳಿದನು - "ದೇವಿ, ನಾನು ನಿನ್ನೊಡನೆ ಬಹುವರ್ಷಗಳವರೆಗೆ ವಿಹರಿಸಿದೆನು. ಸುಂದರಿ! ನಾನೀಗ ನಿನ್ನೊಡನೆ ಒಂದು ವಿಷಯವನ್ನು ಹೇಳಲಿದ್ದೇನೆ. ನಿನ್ನಲ್ಲಿಯೇ ಆಸಕ್ತನಾದ ನನಗೆ ಅನೇಕ ಕಾರ್ತಿಕ ಮಾಸಗಳ ಸ್ಮರಣೆಯೇ ಬರಲಿಲ್ಲ. ಹಿಂದಿನ ಕಾರ್ತಿಕಗಳಲ್ಲಿ ನಾನು ಏಕಾದಶಿಯನ್ನು

ಬಿಟ್ಟು ಮತ್ತಾವ ವ್ರತವನ್ನು ಮಾಡಲಿಲ್ಲ. ಆದ್ದರಿಂದ ಈ ಬಾರಿ ನಾನು ಕಾರ್ತಿಕ ವ್ರತಾನುಷ್ಠಾನ ಮಾಡುತ್ತಾ ಭಗವಂತನ ಉಪಾಸನೆ ಮಾಡುತ್ತೇನೆ. ನೀನು ನನ್ನ ಮೇಲಿನ ಮೋಹವನ್ನು ಬಿಟ್ಟು. ಕಾರ್ತಿಕವ್ರತವನ್ನು ಮಾಡಲು ನನಗೆ ಅಪ್ಪಣೆ ಕೊಡು.''

**ಮೋಹಿನಿಯು:-** ''ನೃಪೇಂದ್ರ, ನೀವು ಕಾರ್ತಿಕಮಾಸದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳಿರಿ. ಅದನ್ನು ಕೇಳಿದ ಮೇಲೆ ನಾನು ನನ್ನ ಇಷ್ಟಬಂದಂತೆ ಮಾಡುವೆನು.'' ರುಕ್ಮಾಂಗದನು ಹೇಳಿದನು. ''ಸುಂದರಿ ! ಕಾರ್ತಿಕಮಾಸದಲ್ಲಿ ಕೃಚ್ಛ್ರ ಪ್ರಾಜಾಪತ್ಯವ್ರತಗಳು ದಿನಾಂತರಿತಭೋಜನ (ಒಂದು ದಿನ ಬಿಟ್ಟು ಇನ್ನೊಂದು ದಿನ ಭೋಜನ) ಮೂರು ರಾತ್ರಿ ಉಪವಾಸ. ಹತ್ತು ದಿನಗಳು. ಹದಿನೈದು ದಿನಗಳು, ಅಥವಾ ಒಂದು ತಿಂಗಳೂ ಉಪವಾಸ ಮಾಡಿದವನು ವಿಷ್ಣುವಿನ ಸ್ಥಾನವನ್ನು ಸೇರುತ್ತಾನೆ. ಏಕಭುಕ್ತ (ಹಗಲು ಮಾತ್ರ ಊಟ) ನಕ್ತವ್ರತ (ರಾತ್ರಿಮಾತ್ರ ಊಟ) ಅಯಾಚಿತ ವ್ರತ (ಯಾರನ್ನು ಬೇಡದೆ ತಾನಾಗಿ ಪ್ರಾಪ್ತವಾದ ವಸ್ತುವಿನಿಂದ ಜೀವನ) ಈ ನಿಯಮಗಳನ್ನು ಮಾಡಿದವನು ಸಪ್ತದ್ವೀಪಯುಕ್ತವಾದ ವಸುಂಧರೆಯ ವಲ್ಲಭನಾಗುತ್ತಾನೆ. ಪುಷ್ಕರ, ದ್ವಾರಕಾ, ಸೂಕರಕ್ಷೇತ್ರಗಳಲ್ಲಿ ಕಾರ್ತಿಕಮಾಸದ ವ್ರತಾನುಷ್ಠಾನವು, ದಾನ ಪೂಜೆಗಳು ವಿಶೇಷವಾಗಿ ಭಕ್ತಿಪ್ರದವಾಗಿವೆ. ಕಾರ್ತಿಕದ ಏಕಾದಶಿ ಮತ್ತು ಭೀಷ್ಮಪಂಚಕವು ಹೆಚ್ಚು ಪುಣ್ಯಪ್ರದವಾಗಿವೆ. ಕಾರ್ತಿಕದ ಪ್ರಬೋಧಿನೀ ಏಕಾದಶಿಯ ದಿನ ಜಾಗರಣಮಾಡಿದವನು ಎಷ್ಟೇ ಪಾಪಿಯಾಗಿರಲಿ, ತಿರುಗಿ ಮಾತೃಗರ್ಭವಾಸವನ್ನು ಮಾಡುವುದಿಲ್ಲ, ಆ ದಿನ ವಾರಾಹ ಮಂಡಲ ದರ್ಶನ ಮಾಡಿದವನು ಸಾಂಖ್ಯಯೋಗಗಳಿಲ್ಲದೆ ಪರಮಪದವನ್ನು ಹೊಂದುತ್ತಾನೆ. ಕಾರ್ತಿಕದಲ್ಲಿ ಸೂಕರಮಂಡಲ ಅಥವಾ ಕೋಲವಾರಾಹ ದರ್ಶನ ಮಾಡಿದವನು ಪುನಃ ಯಾರಿಗೂ ಮಗನಾಗುವುದಿಲ್ಲ. ಅವನ ತಾಪತ್ರಯಗಳು ನಾಶವಾಗುತ್ತದೆ. ಕಾರ್ತಿಕದಲ್ಲಿ ತೈಲ. ಮಧು-ಇವನ್ನು ಬಿಡಬೇಕು. ವರ್ಷದ ವ್ರತಗಳ. ಪೂರ್ತಿಯು ಕಾರ್ತಿಕಮಾಸದಲ್ಲಿ ಆಗುತ್ತದೆ, ಮೋಹಿನಿ ನಾನೂ ಕಾರ್ತಿಕವ್ರತವನ್ನು ಮಾಡಬೇಕೆಂದಿದ್ದೇನೆ.''

**ಮೋಹಿನಿ:-** ರಾಜೇಂದ್ರ! ಚಾತುರ್ಮಾಸ್ಯವ್ರತದ ಪೂರ್ಣತೆಯನ್ನು ಮಾಡುವ ಉದ್ಯಾಪನ ವಿಧಿಯನ್ನು ಹೇಳಿರಿ. ಉದ್ಯಾಪನದಿಂದ ನ್ಯೂನತೆಯ ಪರಿಹಾರವಾಗಿ ಸಂಪೂರ್ಣ ಫಲವು ಬರುತ್ತದೆಯೆಂದು ನಾನು ಕೇಳಿದ್ದೇನೆ.

**ರಾಜನು:-** ಪ್ರಿಯಳೇ, ಚಾತುರ್ಮಾಸ್ಯದಲ್ಲಿ ನಕ್ತವ್ರತವನ್ನು ಮಾಡಿದವನು ಜ್ಞಾನಿಗಳಿಗೆ ಷಡ್ರಸೋಪೇತ ಭೋಜನ ಮಾಡಿಸಬೇಕು. ಅಯಾಚಿತ ವ್ರತ ಮಾಡಿದವನು ಸುವರ್ಣ ಸಹಿತ ವೃಷಭದಾನ ಮಾಡಬೇಕು. ನೆಲ್ಲಿಯ ಚೂರ್ಣದಿಂದ ಸ್ನಾನ ಮಾಡುವ ನಿಯಮವನ್ನು ಸ್ವೀಕರಿಸಿದವನು ಮೊಸರು ಮತ್ತು ಖೀರನ್ನು ದಾನಮಾಡಬೇಕು. ಫಲ (ಹಣ್ಣು) ತ್ಯಾಗಮಾಡಿದವನು ಫಲದಾನ ಮಾಡಬೇಕು. ಎಣ್ಣೆ ಬಿಟ್ಟವನು ತುಪ್ಪವನ್ನು ಹಾಲನ್ನೂ ದಾನಮಾಡಬೇಕು. ಯಾವುದಾದರೂ ಧಾನ್ಯವನ್ನು ಬಿಟ್ಟಿದ್ದರೆ ಹೊಸಧಾನ್ಯ ಅದನ, ಭೂಮಿಶಯನ ವ್ರತವನ್ನು ಸ್ವೀಕರಿಸಿದ್ದರೆ, ದಿಂಬಿನಿಂದ ಸಹಿತವಾದ ಶಯ್ಯಾದಾನ, ಪತ್ರಭೋಜನ ನಿಯಮವನ್ನು ಸ್ವೀಕರಿಸಿದವನು ಘೃತಪಾತ್ರದಾನ ಇವುಗಳನ್ನು ಮಾಡಬೇಕು. ಮೌನವ್ರತವನ್ನು ಸ್ವೀಕರಿಸದವನು ಘಂಟೆ, ಎಳ್ಳು ಮತ್ತು ಸುವರ್ಣಗಳ ದಾನಮಾಡಬೇಕು. ವ್ರತ ಪೂರ್ತಿಗೋಸ್ಕರ ಬ್ರಾಹ್ಮಣದಂಪತಿಗಳ ಭೋಜನ, ಉಪಭೋಗ

ಸಾಮಗ್ರೀಸಹಿತವಾದ ಶಯ್ಯಾದಾನವನ್ನು ದಕ್ಷಿಣಾಸಹಿತವಾಗಿ ಮಾಡಬೇಕು. ಪ್ರಾತಃಸ್ನಾನದ ನಿಯಮವನ್ನು ಇಟ್ಟುಕೊಂಡಿರುವವರು ಅಶ್ವದಾನವನ್ನು, ತಿಲವರ್ಜನ ವ್ರತವನ್ನು ಕೈಕೊಂಡವರು ತುಪ್ಪ ಮತ್ತು ಹಿಟ್ಟಿನ ದಾನವನ್ನು ಮಾಡಬೇಕು. ಚಾತುರ್ಮಾಸ್ಯದಲ್ಲಿ ನಖಕೇಶಗಳನ್ನು ಕತ್ತರಿಸುವುದಿಲ್ಲವೆಂಬ ನಿಯಮವನ್ನು ಕೈಗೊಂಡವರು ಕನ್ನಡಿದಾನವನ್ನೂ, ಪಾದತ್ರಾಣ(ಚಪ್ಪಲಿ) ಹಾಕಿಕೊಳ್ಳುವುದಿಲ್ಲವೆಂಬ ನಿಯಮವನ್ನು ಸ್ವೀಕರಿಸಿದವರು ಪಾದುಕೆಯ ದಾನವನ್ನೂ ಕೊಡಬೇಕು. ಉಪ್ಪನ್ನು ಬಿಟ್ಟವನು ಗೋದಾನ ಮಾಡಬೇಕು. ಚಾತುರ್ಮಾಸ್ಯದಲ್ಲಿ ಪ್ರತಿದಿನ ದೇವಾಲಯದಲ್ಲಿ ದೀಪವಿಡುವ ವ್ರತ ಕೈಗೊಂಡವನು, ಸುವರ್ಣ ಅಥವಾ ತಾಮ್ರದಿಂದ ಮಾಡಿದ ಪಾತ್ರೆಯಲ್ಲಿ ತುಪ್ಪದ ದೀಪವನ್ನು ದಾನಮಾಡಿ ವ್ರತಪೂರ್ತಿಗಾಗಿ ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ವಸ್ತ್ರ ಮತ್ತು ಛತ್ರಿಗಳನ್ನು ಕೊಡಬೇಕು. ದಿನಬಿಟ್ಟು ದಿನ ಉಪವಾಸಮಾಡುವವನು ರೇಶ್ಮೆಯ ವಸ್ತ್ರವನ್ನು, ತ್ರಿರಾತ್ರವ್ರತನಾಡುವವನು ಸುವರ್ಣ ಮತ್ತು ವಸ್ತ್ರಾಭರಣಾಲಂಕೃತವಾದ ಹಾಸಿಗೆಯನ್ನು ಕೊಡಬೇಕು. ಆರುರಾತ್ರಿ ಉಪವಾಸ ಮಾಡುವವನು ಛತ್ರಿ ಸಹಿತವಾದ ಪಾಲಕಿಯನ್ನೂ, ಜತೆಗೆ ಗಾಡಿ ನಡೆಸುವ ಸೇವಕನಿಂದ ಕೂಡಿದ ಗಾಡಿ ಮತ್ತು ಒಳ್ಳೆಯ ಎತ್ತು ದಾನಮಾಡಬೇಕು. ಏಕಭುಕ್ತಿನಿಯಮವುಳ್ಳವನು ಆಡು ಮತ್ತು ಕುರಿಯನ್ನೂ, ಫಲಹಾರ ನಿಯಮದವನು ಸುವರ್ಣವನ್ನೂ, ದಾನ ಮಾಡಬೇಕು, ಶಾಕಾಹಾರ ನಿಯಮದವನು ಹಣ್ಣು, ತುಪ್ಪ ಮತ್ತು ಸುವರ್ಣವನ್ನು ದಾನಮಾಡಬೇಕು. ಎಲ್ಲ ವ್ರತಗಳನ್ನೂ ಇದುವರೆಗೆ ಹೇಳದಿರುವ ಇತರ ವಸ್ತುಗಳನ್ನು ತ್ಯಜಿಸಿದವನು ತನ್ನ ಶಕ್ತಿಗನುಸಾರವಾಗಿ ಚಿನ್ನ ಬೆಳ್ಳಿಗಳ ಪಾತ್ರೆಗಳನ್ನು ಕೊಡಬೇಕು, ದಾನಮಾಡಲು ಅಶಕ್ತನಾದವನು ಹರಿಸ್ಮರಣಮಾಡಿ ಜ್ಞಾನಿಗಳ ಸೇವೆಯನ್ನು ಮಾಡಲಿ.

## ಸಂಧ್ಯಾವಲಿಯ ಕೃಚ್ಛ್ರವ್ರತ

**ಮೋಹಿನಿ:-** ರಾಜೇಂದ್ರ! ನೀವು ಕಾರ್ತಿಕಮಾಸದ ಉಪವಾಸದ ವಿಷಯದಲ್ಲಿ ಹೇಳಿದ ಮಾತು ಚೆನ್ನಾಗಿದೆ. ಆದರೆ ರಾಜರಿಗೆ, ದಾನಕೊಡುವುದು, ಪರಿಪಾಲನೆ, ಯುದ್ಧ ಇವು ಮೂರೇ ಕರ್ತವ್ಯಗಳು. ನೀವು ಕಾರ್ತಿಕಮಾಸ ವ್ರತವನ್ನು ಮಾಡಕೂಡದು. ನಿಮ್ಮನ್ನು ಬಿಟ್ಟು ನಾನು ಎರಡು ಘಳಿಗೆಯೂ ಇರಲಾರೆ. ಮೂವತ್ತು ದಿವಸಗಳಲ್ಲಿ ನಿಮ್ಮನ್ನು ಬಿಟ್ಟಿರುವುದಂತೂ ಸರ್ವಥಾ ಸಾಧ್ಯವಿಲ್ಲದ ಮಾತು. ನೀವು ಉಪವಾಸಮಾಡುವ ಬದಲು ಬ್ರಾಹ್ಮಣರಿಗೆ ಭೋಜನಮಾಡಿಸಿರಿ. ಉಪವಾಸವೇ ಆವಶ್ಯಕವಾದರೆ ನಿಮ್ಮ ಹಿರಿಯ ಹೆಂಡತಿ ಈ ಎಲ್ಲ ಉಪವಾಸ ವ್ರತ ಮಾಡಲಿ.'' ಈ ಮಾತನ್ನು ಕೇಳಿ ರುಕ್ಮಾಂಗದನು ಸಂಧ್ಯಾವಳಿಯನ್ನು ಕರೆಸಿದನು. ಕೂಡಲೇ ಸಂಧ್ಯಾವಳಿಯು ಅಲ್ಲಿಗೆ ಬಂದು ಕೈಮುಗಿದು ಹೇಳಿದಳು - ''ಪ್ರಾಣನಾಥ! ಈ ದಾಸಿಯನ್ನು ಕರೆಸಿದ ಉದ್ದೇಶವೇನು! ತಮ್ಮ ಅಪ್ಪಣೆಯನ್ನು ನಡೆಸಲು ನಾನು ಸಿದ್ಧಳಾಗಿದ್ದೇನೆ.''

**ರುಕ್ಮಾಂಗದ:-** ಭಾಮಿನಿ! ನಿನ್ನ ಶೀಲಸ್ವಭಾವ ಕುಲಗಳನ್ನು ನಾನು ಚೆನ್ನಾಗಿ ತಿಳಿದಿದ್ದೇನೆ. ನಿನ್ನ ಅಪ್ಪಣೆಯಿಂದಲೇ ಇಷ್ಟೊಂದು ದೀರ್ಘಕಾಲ ಮೋಹಿನಿಯ ಜೊತೆಗೆ ವಾಸಮಾಡಿದ್ದೆನು. ಆದರೆ ಈ ಮಧ್ಯದಲ್ಲಿ ಏಕಾದಶಿ ಒಂದನ್ನು ಬಿಟ್ಟು ನನ್ನ ಅನೇಕ ಕಾರ್ತಿಕ ಮಾಸಗಳು ವ್ಯರ್ಥವಾದವು. ಈ ಕಾರ್ತಿಕ ಮಾಸದಲ್ಲಿ ನಾನು ವ್ರತೋಪವಾಸ ಮಾಡುವುದು ಈ ಬ್ರಹ್ಮಕುಮಾರಿಗೆ ಇಷ್ಟವಿಲ್ಲ. ಆದುದರಿಂದ ನನ್ನ ಬದಲಾಗಿ ನೀನೇ ಕೃಚ್ಛ್ರವ್ರತವನ್ನು

ಮಾಡು.'' ಸಂಧ್ಯಾವಲಿಯು ಪತಿದೇವನ ಈ ಪ್ರಸ್ತಾಪವನ್ನು ಕೇಳಿ ಹೇಳಿದಳು - ''ಪ್ರಭೋ ನಾನು ತಮ್ಮ ಸಂತೋಷಕ್ಕೋಸ್ಕರ ಅವಶ್ಯವಾಗಿ ಈ ವ್ರತನ ಪಾಲನ ಮಾಡುತ್ತೇನೆ. ತಮಗೋಸ್ಕರ ನಾನು ಈ ಶರೀರವನ್ನು ಅಗ್ನಿಯಲ್ಲಿ ಅರ್ಪಿಸಲೂ ಸಿದ್ಧಳಾಗಿದ್ದೇನೆ. ರಾಜೇಂದ್ರ! ತಮ್ಮ ಆಜ್ಞೆಯು ನನಗೆ ಶಿರೋಧಾರ್ಯವಾಗಿದೆ.'' ಸಂಧ್ಯಾವಲಿಯು ಇಷ್ಟನ್ನು ಹೇಳಿ ರಾಜನಿಗೆ ನಮಸ್ಕಾರ ಮಾಡಿ ಕೃಚ್ಛ್ರ ವ್ರತದ ಆರಂಭವನ್ನು ಮಾಡಿದಳು. ರಾಜನಿಗೆ ಬಹಳ ಸಂತೋಷವಾಯಿತು. ಅವನು ಮೋಹಿನಿಯೊಡನೆ ಹೇಳಿದನು - ''ಮೋಹಿನಿ, ನೋಡು, ವಿವಾಹ ಸಮಯದಲ್ಲಿ ನಾನು ನಿನಗೆ ಮಾತು ಕೊಟ್ಟಂತೆ ನಿನ್ನ ಆಜ್ಞೆಯನ್ನು ನಡೆಸಿಕೊಟ್ಟೆನು. ನಿನ್ನ ಮನಸ್ಸಿನಲ್ಲಿ ಯಾವ ಯಾವ ಅಭಿಲಾಷೆಗಳಿವೆಯೋ ಅವೆಲ್ಲವನ್ನೂ ಸಫಲಮಾಡಿಕೋ. ನಾನು ನಿನ್ನ ಸಂತೋಷಕ್ಕಾಗಿಯೇ ರಾಜ್ಯಭಾರ ಕಾರ್ಯವನ್ನು ಬಿಟ್ಟಿದ್ದೇನೆ. ನಿನ್ನ ಹೊರತು ಬೇರಾವ ನಾರಿಯೂ ನನಗೆ ಸುಖಸಂತೋಷವನ್ನುಂಟು ಮಾಡುವುದಿಲ್ಲ.''

ತನ್ನ ಪ್ರಾಣವಲ್ಲಭನ ಬಾಯಿಯಿಂದ ಈ ಮಾತು ಬಂದ ಕೂಡಲೇ ಮೋಹಿನಿಯ ಸಂತೋಷಕ್ಕೆ ಪಾರವಿಲ್ಲ. ಅವಳು ರಾಜನನ್ನು ಕುರಿತು ಹೀಗೆಂದಳು - ''ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ನಾಗರು ಹಾಗೆಯೇ ರಾಕ್ಷಸರು ಎಲ್ಲರನ್ನು ನಾನು ನೋಡಿದೆನು. ಪರೀಕ್ಷಿಸಿದೆನು. ಆದರೆ ಎಲ್ಲರನ್ನು ಬಿಟ್ಟು ನೀವೇ ನನ್ನ ಮನೋರಥವಲ್ಲಭರೆಂದು ನಿಶ್ಚಯಿಸಿ ನಿಮ್ಮನ್ನು ಪಡೆಯಲು ಮಂದರಾಚಲಕ್ಕೆ ಬಂದು ಅಖಂಡ ಸಂಗೀತಾರಾಧನೆಯ ತಪಸ್ಸನ್ನು ಮಾಡಿ ನಿಮ್ಮನ್ನು ಪಡೆದೆನು. ಪ್ರಿಯೆಯೂ ಪ್ರಿಯತಮನೂ ಏಕಮನಸ್ಕರಾಗಿ ಒಬ್ಬರಮನೋರಥವನ್ನು ಮತ್ತೊಬ್ಬರು ಅನುಸರಿಸಿ ನಡೆಯುವುದರಲ್ಲಿಯೇ ಕಾಮವೆಂಬ ಪುರುಷಾರ್ಥದ ಸಫಲತೆಯಿದೆ.

## ಏಕಾದಶಿಯ ಡಿಂಡಿಮ ಘೋಷಣೆ

ಅಷ್ಟರಲ್ಲಿ ಮಹಾರಾಜ ರುಕ್ಮಾಂಗದನ ಕಿವಿಗೆ ನಗಾರಿಯ ಧ್ವನಿ ಕೇಳಿಸಿತು. ಮತ್ತು ಗಜದ ಮಸ್ತಕದ ಮೇಲೆ ನಗಾರಿಯನ್ನಿಟ್ಟು ದೂತನೊಬ್ಬನು ಧರ್ಮಾಂಗದನ ಅಪ್ಪಣೆಯಂತೆ ಅದನ್ನು ಹೊಡೆಯುತ್ತಾ ಸ್ವಲ್ಪ ಹೊತ್ತು ನಿಲ್ಲಿಸಿ ಈ ಘೋಷಣನೆಯನ್ನು ಮಾಡುತ್ತಿದ್ದನು. ''ಪ್ರಜಾ ಜನರೇ, ನಾಳೆ ಪ್ರಾತಃಕಾಲದಿಂದ ನಾಡಿದ್ದು ಪ್ರಾತಃಕಾಲದ ವರೆಗೆ ಹರಿದಿನ ಅಂದರೆ ಏಕಾದಶಿಯಾಗಿದೆ. ಆದುದರಿಂದ ಈ ದಿನ ಕ್ಷಾರಲವಣವನ್ನು ವರ್ಜಿಸಿ ಎಲ್ಲರೂ ಹವಿಷ್ಯಾನ್ನವನ್ನುಂಡು ಏಕಭುಕ್ತವನ್ನು ಮಾಡಬೇಕು. ಭೂಮಿ ಶಯನವನ್ನು ಮಾಡಬೇಕು. ಸ್ತ್ರೀರತಿಯನ್ನುಬಿಟ್ಟು ಪುರಾಣ ಪುರುಷೋತ್ತಮ ಶ್ರೀ ಹರಿಯ ಅಖಂಡ ಸ್ಮರಣೆಯನ್ನು ಮಾಡಬೇಕು. ನಾಳೆಯ ದಿನ ಅಖಂಡ ಉಪವಾಸವನ್ನು ಮಾಡಬೇಕು. ಏಕಾದಶಿ ದಿನ ಶ್ರಾದ್ಧಲೋಪವಾದರೂ ನಿಮ್ಮ ಪಿತೃಗಳಿಗೆ ಎಂದೂ ದುರ್ಗತಿಯುಂಟಾಗುವುದಿಲ್ಲ. ಏಕಾದಶಿಯ ವ್ರತಾನುಷ್ಠಾನ ಮಾಡುವವರಿಗೆ ಶ್ರೀಹರಿಯ ದಿವ್ಯ ಸನ್ನಿಧಾನ ಪ್ರಾಪ್ತವಾಗುತ್ತದೆ. ಈ ವ್ರತಾನುಷ್ಠಾನದಿಂದ ಸಮಸ್ತ ಪಾಪಗಳೂ ನಾಶವಾಗುತ್ತವೆ. ಮಾನವರಿಗೆ ಪ್ರಬೋಧವನ್ನು ಕೊಡುವುದರಿಂದಲೂ, ಶ್ರೀಮನ್ನಾರಾಯಣನು ಭಕ್ತ ರಕ್ಷಣೆಗಾಗಿ ಭಕ್ತರ ಪ್ರಬೋಧೆ (ಎಚ್ಚರ)ವನ್ನು ಪ್ರಕಟಿಸುವುದರಿಂದಲೂ ಇದು 'ಪ್ರಬೋಧಿನೀ' ಏಕಾದಶಿ ಎನಿಸಿಕೊಂಡಿದೆ. ನಿಮ್ಮ ವೈಭವಕ್ಕನುಸಾರವಾಗಿ ಏಕಾದಶಿಯ ದಿನ ಚಕ್ರ, ಗದಾಧಾರಿಯಾದ ಭಗವಂತನನ್ನು,

ವಸ್ತ್ರಗಂಧ, ಚಂದನ, ಶ್ರೀಚೂರ್ಣ, ಫಲ, ಪುಷ್ಪ, ಧೂಪದೀಪಗಳಿಂದ ಯಥಾಶಕ್ತಿಯಾಗಿ ಪೂಜಿಸಿರಿ. ಏಕಾದಶಿ ವ್ರತವನ್ನು ಮಾಡದೆ ನನ್ನ ಮಾತನ್ನು ಉಲ್ಲಂಘಿಸುವವರಿಗೆ ಕಠೋರವಾದ ಶಿಕ್ಷೆಯನ್ನು ಕೊಡಲಾಗುವುದು.

## ಏಕಾದಶಿ ದಿನ ಊಟ ಮಾಡಲಾರೆ

ಮೇಘ ಗಂಭೀರವಾದ ನಗಾರಿಯ ಧ್ವನಿಯನ್ನು ಕೇಳಿ ರಾಜಾ ರುಕ್ಮಾಂಗದನು ಮೋಹಿನಿಯ ಹಾಸಿಗೆಯನ್ನು ಬಿಟ್ಟು ಎದ್ದನು. ಮೋಹಿನಿಯೊಂದಿಗೆ ಮಧುರವಾದ ಸಾಂತ್ವನ ಪೂರ್ಣವಾದ ಮಾತನ್ನಾಡುತ್ತಾ ಹೇಳಿದನು - "ದೇವಿ, ನಾಳೆ ಬೆಳಿಗ್ಗೆ ಪಾಪನಾಶಕವಾದ ಏಕಾದಶಿ ತಿಥಿಯು ಬರುತ್ತದೆ. ಆದ್ದರಿಂದ ಇಂದಿನಿಂದ ಮೂರು ದಿನ ನಾನು ನಿಯಮವನ್ನು ಕೈಗೊಳ್ಳುತ್ತೇನೆ. ಕೃಚ್ಛ್ರವ್ರತವನ್ನು ಸಂಧ್ಯಾವಲಿಯು ಮಾಡುತ್ತಿದ್ದಾಳೆ. ಆದರೆ ಏಕಾದಶೀ ವ್ರತವನ್ನು ನಾನೇ ಮಾಡಬೇಕಾಗಿದೆ. ನಾಳೆಯ ದಿನ ನನ್ನೊಡನೆ ನೀನೂ ಉಪವಾಸ ಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರಳಾಗು.

**ಮೋಹಿನಿ:-** ರಾಜೇಂದ್ರ, ವಿಷ್ಣು ಪೂಜೆಯು ಅವಶ್ಯ ಕರ್ತವ್ಯ ನಿಜ. ಆದರೆ, ಮಂದರಾಚಲದಲ್ಲಿ ನನ್ನ ಬಲಗೈಯಲ್ಲಿ ನಿಮ್ಮ ಬಲಗೈಯನ್ನಿಟ್ಟು ಮಾಡಿದ ಪ್ರತಿಜ್ಞೆಯನ್ನು ನಡೆಸುವ ಕಾಲ ಬಂದಿದೆ. ಅದನ್ನು ನಡೆಸಿಕೊಡದಿದ್ದರೆ ನೀವು ಇದುವರೆಗೆ ಮಾಡಿದ ಪುಣ್ಯವೆಲ್ಲವೂ ನಾಶವಾಗುತ್ತದೆ.

**ರುಕ್ಮಾಂಗದ:-** ಪ್ರಿಯಳೇ, ಬಾ, ನಿನ್ನ ಮನದಾಸೆಯನ್ನು ನಾನು ಪೂರೈಸುವೆನು. ನನ್ನನ್ನೇ ನಿನಗೆ ಅರ್ಪಿಸಿಕೊಂಡಿರುವೆನು. ಅಂದಮೇಲೆ ಗ್ರಾಮ, ಧನ, ಈ ಪೃಥ್ವೀ ರಾಜ್ಯ ನಿನ್ನದೆಂದು ಹೇಳಬೇಕಾಗಿದೆಯೇ!

**ಮೋಹಿನಿಯು:-** ರಾಜವರ್ಯ ನಾನು ನಿಮ್ಮ ಪ್ರಿಯಳಾಗಿದ್ದರೆ ನೀವು ಏಕಾದಶಿಯ ದಿನ ಉಪವಾಸ ಮಾಡದೆ ಭೋಜನ ಮಾಡಿರಿ. ನಿಮ್ಮಲ್ಲಿ ನಾನು ಕೇಳಬೇಕೆಂದಿರುವ ವರವು ಇದೇ ಆಗಿದೆ. ನೀವು ವರಕೊಡದಿದ್ದರೆ ಅಸತ್ಯ ಹೇಳಿದ ಪಾಪಕ್ಕೆ ಗುರಿಯಾಗಿ ಒಂದು ಕಲ್ಪದವರೆಗೆ ನರಕದಲ್ಲಿ ಬೀಳುತ್ತೀರಿ.

**ರಾಜ:-** ಕಲ್ಯಾಣಿ! ಹೀಗೆನ್ನಬೇಡ. ಬ್ರಹ್ಮಕುಮಾರಿಯಾದ ನೀನು ಉತ್ತಮ ಕಾರ್ಯಕ್ಕೆ ವಿಘ್ನಮಾಡಬಾರದು. ಹುಟ್ಟಿದಂದಿನಿಂದ ಇದುವರೆಗೆ ನಾನು ಏಕಾದಶಿ ದಿನ ಭೋಜನ ಮಾಡಿಲ್ಲ. ಈ ಮುಪ್ಪಿನಲ್ಲಿ ತಲೆಕೂದಲು ಬೆಳ್ಳಗಾದಾಗ ಈ ಪಾಪವನ್ನು ಮಾಡಲೇ? ವಾರ್ಧಕದಲ್ಲಿ ಹರಿಪೂಜೆ, ಗಂಗಾಸೇವನೆ ಎಲ್ಲರಿಗೂ ಅವಶ್ಯಕ. ನನ್ನಲ್ಲಿ ಪ್ರಸನ್ನಳಾಗು. ನನ್ನ ವ್ರತಕ್ಕೆ ಭಂಗ ತರಬೇಡ. ನಿನಗೆ ಬೇಕಾದ ಯಾವ ವಸ್ತುವಿದೆಯೋ ಹೇಳು, ಅದನ್ನು ಕೊಡುತ್ತೇನೆ. ಏಕಾದಶೀ ಭೋಜನವು ಅಮಾವಾಸ್ಯಾಸ್ತ್ರೀಸಂಗ, ಚತುರ್ದಶೀ ಪಾರಣೆ, ಷಷ್ಠೀ ಅಭ್ಯಂಜನಗಳನ್ನು ಮಾಡುವದರಿಂದ ಮಹಾಪಾಪಬರುತ್ತದೆ. ಮಾಡುತ್ತವೆ. ಗೋಚಾರ ಹಾಳುಗೆಡವಿದವನು. ಸುಳ್ಳು ಸಾಕ್ಷಿ ಹೇಳಿದವನು, ಒತ್ತೆಯಿಟ್ಟ ವಸ್ತುವನ್ನು ಅಪಹರಿಸಿದವನು. ವಿವಾಹದಲ್ಲಿ ವಿಘ್ನ ಮಾಡಿದವನು, ನಂಬಿಕೆಯ ದ್ರೋಹಿ, ಬ್ರಾಹ್ಮಣನಿಗೆ ವಾಗ್ದಾನ ಮಾಡಿ ಕೊಡದೆ ಇದ್ದವನು, ರತ್ನ ವ್ಯಾಪಾರದಲ್ಲಿ ಮೋಸ ಮಾಡಿದವನು, ಸುಳ್ಳು ತೂಕ ಅಳತೆ ಮಾಡುವವನು, ಒಬ್ಬಳು ಕನ್ಯೆಯನ್ನು ತೋರಿಸಿ ಮತ್ತೊಬ್ಬಳು ಕನ್ಯೆಯನ್ನು

ಮದುವೆ ಮಾಡಿಕೊಡುವವನು, ಒಂದು ಹಸುವನ್ನು ತೋರಿಸಿ ಮತ್ತೊಂದನ್ನು ನೀಡುವವನು ಇವರಿಗೆ ಬರುವ ಪಾಪವೆಲ್ಲವೂ ಏಕಾದಶಿಯ ದಿನ ಅನ್ನದಲ್ಲಿ ಇರುತ್ತವೆ. ಆದ್ದರಿಂದ ನಾನು ಏಕಾದಶಿಯ ದಿನ ಭೋಜನ ಮಾಡಲಾರೆ.

**ಮೋಹಿನಿ:-** ರಾಜೇಂದ್ರ, ನಾನು ಮಂದರ ಪರ್ವತದಲ್ಲಿದ್ದಾಗ ಗೌತಮರು ನನಗೊಂದು ವಿಷಯವನ್ನು ಹೇಳಿದ್ದರು. 'ಗರ್ಭಿಣಿ ಸ್ತ್ರೀ, ಗೃಹಸ್ಥಪುರುಷ, ರೋಗಿ ಮಕ್ಕಳು, ಬಹು ಮುದುಕ, ಯಜ್ಞ ದೀಕ್ಷಿತ, ಯೋಧ, ಪತಿವ್ರತೆ ಇವರು ನಿರಾಹಾರರಾಗಿ ಇರಕೂಡದು. ಆದ್ದರಿಂದ ಗೃಹಸ್ಥರಾದ ನೀವೂ ಭೋಜನ ಮಾಡಿದರೆ ಮಾತ್ರ ನನಗೆ ಸಂತೋಷ. ಇದನ್ನು ಬಿಟ್ಟು ನೀವು ನಿಮ್ಮ ತಲೆಯನ್ನು ಕತ್ತರಿಸಿ ಕೊಟ್ಟರೂ ನನಗದು ಬೇಕಿಲ್ಲ. ಕೊಟ್ಟ ಮಾತಿನಂತೆ ನಡೆಯದಿದ್ದರೆ ನಾನು ನಿಮ್ಮನ್ನು ಸ್ಪರ್ಶಿಸಲಾರೆ. ಸತ್ಯದ ಬೆಲೆ ತಮಗೆ ತಿಳಿದಿಲ್ಲವೆ! ಸಾವಿರ ಅಶ್ವಮೇಧಯಾಗಗಳಿಗಿಂತಲೂ ಸತ್ಯವು ಶ್ರೇಷ್ಠವಾಗಿದೆ. ನೀವು ಸತ್ಯವನ್ನು ಕೈಬಿಟ್ಟರೆ ಮದ್ಯಪಾನ ಮಾಡಿದ ಪಾಪವು ನಿಮಗೆ ಸೇರುತ್ತದೆ.

## ಮೋಹಿನಿಯ ಆಕ್ಷೇಪಗಳಿಗೆ ಉತ್ತರ

**ರಾಜ:-** ಸುಂದರಿ! ಮಂದರಾಚಲದಲ್ಲಿ ಋಷಿಗಳು ಅಂದ ಮಾತು ಪುರಾಣಕ್ಕೆ ಸಮ್ಮತವಲ್ಲ. ಏಕಾದಶಿಯ ವಿಷಯದಲ್ಲಿ ಪುರಾಣಗಳ ನಿರ್ಣಯವು ಹೀಗಿದೆ 'ಯಾವನೂ ಏಕಾದಶಿಯ ದಿನ ಭೋಜನ ಮಾಡಕೂಡದು.' ಎಂಬುದೇ ಆ ನಿರ್ಣಯ, ಆದ್ದರಿಂದ ನಾನು ಹೇಗೆ ಭೋಜನ ಮಾಡಲಿ! ಅಶಕ್ತರು ಆ ದಿನ ಫಲ, ಗಡ್ಡೆ, ಹಾಲು, ನೀರುಗಳನ್ನು ಸೇವಿಸಬಹುದು. ಜ್ವರಾದಿಪೀಡಿತರಿಗಂತೂ ಉಪವಾಸವೂ ಅತ್ಯುತ್ತಮ ಔಷಧವೇ ಆಗಿದೆ. ಏಕಾದಶಿಯ ದಿನ ಅನ್ನ ಭೋಜನವು ಸುತರಾಂ ನಿಷಿದ್ಧವಾಗಿದೆ. ಆದ್ದರಿಂದ ನಾನು ಹೇಗೆ ಭೋಜನ ಮಾಡಲಿ! ಆದ್ದರಿಂದ ಏಕಾದಶಿಯ ದಿನ ಅನ್ನ ಭೋಜನವು ಸುತರಾಂ ನಿಷಿದ್ಧವಾಗಿದೆ. ಆದ್ದರಿಂದ ಏಕಾದಶಿಯ ದಿನ ಅನ್ನ ಭೋಜನ ಮಾಡುವಂತೆ ನನ್ನನ್ನು ಒತ್ತಾಯಿಸಬೇಡ. ಅದೊಂದನ್ನು ಬಿಟ್ಟು ಮತ್ತೇನನ್ನು ಬೇಕಾದರೂ ಮಾಡುತ್ತೇನೆ.

**ಮೋಹಿನಿ:-** ರಾಜನ್, ನೀವು ಏಕಾದಶಿಯ ದಿನ ಭೋಜನ ಮಾಡಲೇಬೇಕು. ಇದೊಂದು ಬಿಟ್ಟು ನನಗೆ ಮತ್ತೇನೂ ಬೇಕಾಗಿಲ್ಲ. ಏಕಾದಶಿ ಉಪವಾಸ ವಿಧಾನವು ವೇದದಲ್ಲಿ ಉಕ್ತವಾಗಿಲ್ಲ.'' ಮೋಹಿನಿಯ ಮಾತನ್ನು ಕೇಳಿ ರಾಜನು ಒಳಗಿಂದೊಳಗೇ ಕುಪಿತನಾದರೂ ಹೊರಗೆ ನಗುತ್ತಾ ಹೇಳಿದನು - ''ಮೋಹಿನಿ! ವೇದವು ಅನೇಕ ರೂಪದಲ್ಲಿದೆ. ಯಜ್ಞಾಬೋಧಕ ಭಾಗಗಳು ಕರ್ಮಕಾಂಡವು. ಸ್ಮೃತಿಯೂ ವೇದವೇ! ಇವೆಲ್ಲವೂ ಪುರಾಣದಲ್ಲಿ ಸರಿಯಾಗಿ ವಿವರಿಸಲ್ಪಟ್ಟಿವೆ. ವೇದಾರ್ಥ ವಿಸ್ತಾರವೇ ಪುರಾಣವಾದ್ದರಿಂದ ನಾನು ವೇದಾರ್ಥಕ್ಕಿಂತಲೂ ಪುರಾಣಗಳಿಗೆ ಹೆಚ್ಚು ಮಾನ್ಯತೆ ಕೊಡುತ್ತೇನೆ. ಅಲ್ಪಜ್ಞನಾದ ಮನುಷ್ಯನು ವೇದಾರ್ಥವನ್ನು ತಿಳಿಯಲಾರನೆಂದೇ ಪುರಾಣಗಳ ರಚನೆಯಾಗಿದೆ. ವೇದಗಳಲ್ಲಿ ಕಾಣಸಿಗದಿರುವ ವಿಷಯವು ಸ್ಮೃತಿಗಳಲ್ಲಿದೆ. ಅಲ್ಲಿಲ್ಲದ ವಿಷಯವು ಪುರಾಣಗಳಲ್ಲಿದೆ. ಪಾಪಪ್ರಾಯಶ್ಚಿತ್ತಗಳು, ರೋಗ ಪರಿಹಾರಕ ಔಷಧಗಳೂ ಪುರಾಣಗಳಲ್ಲಿವೆ. ಪ್ರಾಯಶ್ಚಿತ್ತವಿಲ್ಲದೆ ಪಾಪ ಪರಿಹಾರವಿಲ್ಲವಷ್ಟೆ! ವೇದ, ವೇದಾಂಗ, ಉಪಾಂಗ, ಪುರಾಣ, ಸ್ಮೃತಿಗಳಲ್ಲಿ ಹೇಳಿರುವ ವಿಷಯವೆಲ್ಲವೂ ಸ್ಮೃತಿಗಳಲ್ಲಿಯೇ ಉಕ್ತವಾಗಿದೆ. ಪುರಾಣಗಳು ಬಾರಿ ಬಾರಿಗೂ ಏಕಾದಶಿ ಭೋಜನ

ಮಾಡಬಾರದು' ಎಂದು ಘೋಷಿಸುತ್ತಿವೆ. ತಂದೆಯನ್ನು ಯಾರು ನಮಸ್ಕರಿಸುವುದಿಲ್ಲ? ತಾಯಿಯನ್ನು ಯಾರು ಪೂಜಿಸುವುದಿಲ್ಲ? ಗಂಗೆಯಲ್ಲಿ ಯಾರು ಸ್ನಾನ ಮಾಡುವುದಿಲ್ಲ? ಏಕಾದಶಿಯ ದಿನ ಯಾವನು ಭೋಜನ ಮಾಡುತ್ತಾನೆ? ವಿಚಾರ ಮಾಡು.

ಮೋಹಿನಿಯೂ ಘೂರ್ಣಿಕಾ ಎಂಬ ದಾಸಿಯನ್ನುಕರೆದು ಕೂಡಲೇ ವೇದ ಶಾಸ್ತ್ರಜ್ಞರಾದ ಕೆಲವು ಮಂದಿ ಬ್ರಾಹ್ಮಣರನ್ನು ಕರೆತರುವಂತೆ ಹೇಳಿದಳು. ಕೂಡಲೇ ಗೌತಮಾದಿ ಕೆಲವು ಮಂದಿ ಬ್ರಾಹ್ಮಣರು ಅಲ್ಲಿಗೆ ಬಂದರು. ರಾಜನು ಮೋಹಿನೀ ಸಹಿತನಾಗಿ ಅವರನ್ನು ನಮಸ್ಕರಿಸಿ ಸುವರ್ಣಾಸನಗಳಲ್ಲಿ ಕುಳ್ಳಿರಿಸಿದನು. ಬ್ರಾಹ್ಮಣರು ತಮ್ಮನ್ನು ಕರೆಸಿದ ಕಾರಣವೇನೆಂದು ಕೇಳಿದಾಗ ಮೋಹಿನಿಯು ಹೇಳಿದಳು.

**ಮೋಹಿನಿ:-** ಬ್ರಾಹ್ಮಣೋತ್ತಮರೇ! ನನ್ನದೊಂದು ಅತ್ಯಲ್ಪ ಸಂದೇಹವಿದೆ. ಅದನ್ನು ನೀವು 'ಪರಿಹರಿಸಬೇಕು. ಪ್ರಪಂಚದ ಜೀವರಾಶಿಗಳಿಗೆ ಅನ್ನವೇ ಆಧಾರ. ಮೃತರಾದ ಪಿತೃಗಳಿಗೂ ಅನ್ನದ ಪಿಂಡ ಪ್ರದಾನ ಮೂಲಕ ಶ್ರಾದ್ಧವು ತೃಪ್ತಿಕರವಾಗುತ್ತದೆ. ದೇವತೆಗಳಿಗೂ ದೋರೆ ಹಣ್ಣಿನ ಗಾತ್ರದ ಪುರೋಡಾಶವು ತೃಪ್ತಿ ಜನಕ. ಅನ್ನವೇ ಅಮೃತ. ಬಡ ಇರುವೆಯೂ ಹಸಿದಾಗ ಕಷ್ಟಪಟ್ಟು ಒಂದೊಂದು ಕಣವನ್ನು ತನ್ನ' ಗೂಡಿಗೆ ಎಳೆದುಕೊಂಡು ಹೋಗುತ್ತದೆ. ನಮ್ಮ ಮಹಾರಾಜರಾದರೋ ಏಕಾದಶೀ ದಿನ ಸರ್ವವಿಧವಾದ ಆಹಾರ ಪಾನೀಯಗಳನ್ನು ಬಿಟ್ಟು ಶುದ್ಧ ಉಪವಾಸ ವ್ರತವನ್ನು ಮಾಡುತ್ತಾರೆ. ಆ ರೀತಿಯ ವ್ರತವು ವಿಧವಾ ಮತ್ತು ಯತಿಗಳಿಗೆ ಮಾತ್ರ ಉಕ್ತವಾಗಿದೆ. ಪ್ರಜಾರಕ್ಷಣೆ ಮಾಡುವ ರಾಜನು ಇಂತಹ ನಿಯಮಗಳನ್ನು ಕಟ್ಟಿಕೊಂಡರೆ ಅವನು ಹೇಗೆ ಶಕ್ತನಾಗಿರಲು ಸಾಧ್ಯ? ಆಹಾರವಿಲ್ಲದಿದ್ದರೆ ದೇಹದ ಚೇಷ್ಟೆಗಳೇ ನಡೆಯಲಾರವು. ಇದನ್ನೆಲ್ಲಾ ತಿಳಿದು ನೀವು ಭೋಜನ ಮಾಡುವಂತೆ ಒಪ್ಪಿಸಬೇಕು.

## 'ಏಕಾದಶೀ ಭೋಜನವ್ರತದ ನಿಷಿದ್ಧ' - ರುಕ್ಮಾಂಗದನ ವಾದ

**ವಸಿಷ್ಠರು ಹೇಳುತ್ತಾರೆ:-** ಮೋಹಿನಿಯ ಮಾತನ್ನು ಕೇಳಿ ಆ ಬ್ರಾಹ್ಮಣರು ಮೋಹಿನಿದೇವಿ ನಿನ್ನ ಮಾತು ಸರಿಯಾಗಿದೆ. '' ಎಂದು ಹೇಳಿ ರಾಜನನ್ನು ಕುರಿತು ಹೇಳಲಾರಂಭಿಸಿದರು. 'ರಾಜನ್ ಎರಡೂ ಪಕ್ಷಗಳ ಏಕಾದಶಿಯದಿನ ಉಪವಾಸ ಮಾಡುತ್ತೇನೆಂಬ ನಿನ್ನ ನಿಯಮವು ಶಾಸ್ತ್ರ ಸಮ್ಮತವಲ್ಲ. ನಿನ್ನ ಅಂತಃ ಕರಣಸಮ್ಮತ, ಅಗ್ನಿಹೋತ್ರಿಯು ಕ್ಷತ್ರಿಯರಾಜನು ಎರಡು ಬಾರಿ ಊಟ ಮಾಡಬೇಕೆಂದು ಶಾಸ್ತ್ರಗಳೇ ಸಾರುತ್ತಿವೆ. ಬ್ರಾಹ್ಮಣಾದಿ ತ್ರೈವರ್ಣಿಕರೂ ಪ್ರತಿದಿನವೂ ಹೋಮಾವಶಿಷ್ಟ ಅನ್ನವನ್ನು ಭೋಜನ ಮಾಡಲೇಬೇಕೆಂದು ಶಾಸ್ತ್ರಗಳು ಸಾರುತ್ತಿವೆ. ಅಸ್ತ್ರ ಶಸ್ತ್ರಗಳನ್ನು ಹಿಡಿದು ದುಷ್ಟ ಶಿಕ್ಷೆಯಲ್ಲಿ ಆಸಕ್ತನಾದ ನೀನು ಈ ರೀತಿ ನಿಯಮವನ್ನು ಎಂದಿಗೂ ಕೈಗೊಳ್ಳಬಾರದು. ಶಾಸ್ತ್ರೀಯವಾಗಲಿ, ಅಶಾಸ್ತ್ರೀಯವಾಗಲಿ ನೀನು ವ್ರತದ ಪ್ರತಿಜ್ಞೆಯನ್ನು ಸ್ವೀಕರಿಸಿದ್ದಿ, ಆದರೆ ಬ್ರಾಹ್ಮಣರು ನಾವು ಹೇಳಿದ ಮೇಲೆ ನಮ್ಮ ಜತೆಗೆ ಭೋಜನಮಾಡಬಹುದು. ಇದರಿಂದ ನಿನ್ನ ವ್ರತಭಂಗವಾಗುವುದಿಲ್ಲ.

ಈ ಮಾತನ್ನು ಕೇಳಿ ರುಕ್ಮಾಂಗದನಿಗೆ ಮನಸ್ಸಿನಲ್ಲಿ ಬಹಳ ಸಿಟ್ಟು ಬಂದಿತು. ಆದರೂ ಅವನು ಕ್ಷಮೆಯನ್ನು ತಾಳಿದನು, ಮಧುರವಾಣಿಯಿಂದ ಹೇಳಿದನು. ''ವಿಪ್ರಶ್ರೇಷ್ಠರೇ, ಸಮಸ್ತಮಾನವರಿಗೂ ಮಾರ್ಗದರ್ಶಕರಾದ ತಾವು ಹೀಗೆ ಹೇಳಬಾರದು. ಏಕಾದಶೀವ್ರತವು

ವಿಧವಾ ಮತ್ತು ಯತಿಗಳಿಗೆ ಮಾತ್ರವಲ್ಲ, ವೈಷ್ಣವರೆಲ್ಲರೂ ಏಕಾದಶೀ ಮಾಡಲೇಬೇಕು. ''ಮದ್ಯಪಾನ ಮಾಡಬಾರದು. ಬ್ರಾಹ್ಮಣನನ್ನು ಕೊಲ್ಲಬಾರದು, ಜೂಜಾಡಬಾರದು. ಏಕಾದಶಿ ದಿನ ಭೋಜನ ಮಾಡಬಾರದು.'' ಎಂಬುದು ಸಾಮಾನ್ಯನಿಯಮ. ಇದಕ್ಕೆ ಅಪವಾದವಿಲ್ಲ. ಮಾಡಬಾರದೆಂದು ಹೇಳಿದ ಕಾರ್ಯವನ್ನು ಮಾಡಿ ಯಾವನು ನೂರು ವರ್ಷಗಳವರೆಗೆ ಬದುಕುವ ಧೈರ್ಯವುಳ್ಳವನಾಗುತ್ತಾನೆ? ವಿಷ್ಣುಧರ್ಮಪರಾಯಣರಾದ ಬ್ರಾಹ್ಮಣರು ಏಕಾದಶೀದಿನ ಪಶುಗಳಿಗೆ ತೃಣಗ್ರಾಸ (ಹುಲ್ಲಿನ ಆಹಾರವನ್ನು) ಕೊಡುವುದಿಲ್ಲ. ವಿಪ್ರರೇ ನಾನು ಅಶಕ್ತನಲ್ಲ, ರೋಗಿಯಲ್ಲ, ನನ್ನ ಸುಪುತ್ರನ ಮೂಲಕ ರಾಜ್ಯಭಾರ ಮಾಡಿಸುತ್ತಾ ಕ್ಷತ್ರಿಯೋಚಿತ ಕಾರ್ಯವನ್ನು ಮಾಡುತ್ತಿದ್ದೇನೆ. ನನಗೆ ಶತ್ರುವಿಲ್ಲ. ಯಾವ ದೇವತೆ, ದಾನವ, ಗಂಧರ್ವ, ರಾಕ್ಷಸ, ಸಿದ್ಧ ಬ್ರಾಹ್ಮಣ, ನನ್ನ ತಂದೆ, ಭಗವಾನ್ ನಾರಾಯಣ, ಭಗವಾನ್ ಶಿವ ಅಥವಾ ಮೋಹಿನಿಯ ತಂದೆ ಬ್ರಹ್ಮದೇವರು. ಅಥವಾ ಸೂರ್ಯ ಅಥವಾ ಮತ್ತಾವಲೋಕಪಾಲಕರೇ ಬಂದು ಹೇಳಿದರೂ ನಾನು ಏಕಾದಶೀಯದಿನ ಭೋಜನಮಾಡುವುದಿಲ್ಲ. ರುಕ್ಮಾಂಗದನು ತನ್ನ ಪ್ರತಿಜ್ಞೆಯನ್ನು ಎಂದೂ ಬಿಡುವುದಿಲ್ಲ. ಬ್ರಾಹ್ಮಣರೇ! ಇಂದ್ರನ ತೇಜಸ್ಸು ಕ್ಷೀಣವಾಗಬಹುದು. ಹಿಮಾಲಯವು ತಲೆ ಕೆಳಗಾಗಬಹುದು. ಸಮುದ್ರವು ಒಣಗಬಹುದು. ಅಗ್ನಿಯು ತನ್ನ ಉಷ್ಣಗುಣವನ್ನು ಬಿಡಬಹುದು. ರುಕ್ಮಾಂಗದನು ಏಕಾದಶಿಯ ದಿನ ಉಪವಾಸವನ್ನು ಬಿಡುವುದಿಲ್ಲ. ರುಕ್ಮಾಂಗದನ ರಾಜ್ಯದಲ್ಲಿ ನಗಾರಿ ಬಾರಿಸಿ ಘೋಷಣೆಮಾಡಲಾಗಿದೆ. ಏಕಾದಶಿಯ ದಿನ ಭೋಜನ ಮಾಡುವವರಿಗೆ ಶಿಕ್ಷೆಯಾಗುತ್ತದೆ. ಈ ರಾಜ್ಯದಿಂದ ಹೊರಕ್ಕೆ ದೂಡಲಾಗುತ್ತದೆ. ನಾನೇ ಈ ವ್ರತಭಂಗವನ್ನು ಮಾಡಿದರೆ ನನ್ನ ತಾಯಿಯೇ ನನ್ನನ್ನು ತಿರಸ್ಕರಿಸಿಯಾಳು. ಬ್ರಾಹ್ಮಣರು ದೇವತೆಗಳು ಋಷಿಗಳು ನಿರಾಶರಾದಾರು. ವೇದಪುರಾಣ ಶಾಸ್ತ್ರಗಳನ್ನು ನಿಂದಿಸುವವನು ಯಮಯಾತನೆ ಯನ್ನು ಅನುಭವಿಸುತ್ತಾನೆ. ತಾನು ಮಾಡಿದ ಪ್ರತಿಜ್ಞೆಯನ್ನು ಬಿಡುವವನು ವಾಂತಿ ಮಾಡಿದ ಅನ್ನವನ್ನು ಪುನಃ ತಿನ್ನುವವನಿಗೆ ಸಮಾನನು. ವೇದಶಾಸ್ತ್ರ ಪುರಾಣ ಧರ್ಮಶಾಸ್ತ್ರ ಎಲ್ಲಿಯೂ ಏಕಾದಶಿಯ ದಿನ ಭೋಜನ ಮಾಡಬಹುದೆಂದೂ, ಭೋಜನ ಮಾಡದಿರಬಾರದೆಂದೂ ಹೇಳಿಲ್ಲ. ಶಾಸ್ತ್ರಗಳು ಏಕಾದಶೀ ಭೋಜನ ಮಾಡಬಾರದೆಂದೇ ಸಾರಿ ಸಾರಿ ಹೇಳುತ್ತವೆ. ಆ ದಿನ ಪಿತೃಶ್ರಾದ್ಧವಿದ್ದರೂ ಅನ್ನ ಭೋಜನ ಮಾಡಬಾರದು. ಭೋಜನಮಾಡಿಸಬಾರದು.'' ರಾಜರ ಮಾತನ್ನು ಕೇಳಿ ಮೋಹಿನಿಯ ಅಂತಃಕರಣ ಪ್ರಜ್ವಲಿಸಿತು. ಅವಳು ಸಿಟ್ಟಾದಳು. ಕಣ್ಣು ಕೆಂಪಾಯಿತು. ರಾಜನ ಹತ್ತಿರ ಹೇಳಿದಳು - ರಾಜನ್, ನನ್ನ ಮಾತನ್ನು ಕೇಳದಿದ್ದರೆ ನೀನು ಧರ್ಮಭ್ರಷ್ಟನಾದೆ. ಅಸತ್ಯವಾದಿಯಾದೆ. ಇಂದಿನಿಂದ ಪ್ರತಿಜ್ಞೋಲ್ಲಂಘನಮಾಡಿದ ನಿನಗೆ ನಾನು ಪತ್ನಿಯಲ್ಲ. ನನಗೆ ನೀನು ಪತಿಯಲ್ಲ. ನಿನಗೆ ಧಿಕ್ಕಾರವಿರಲಿ ಇಗೋ, ನಾನು ನಿನ್ನನ್ನು ಬಿಟ್ಟು ಹೊರಟೆನು ಎಂದು ಹೇಳಿ ಮೋಹಿನಿಯು ಬಹಳ ಅವಸರವಾಗಿ ಸತೀದೇವಿಯು ಮಹಾದೇವನನ್ನು ಬಿಟ್ಟುಹೋಗುವಂತೆ ಬ್ರಾಹ್ಮಣರನ್ನು ಕರೆದುಕೊಂಡು ಹೊರಟಳು. ಅವಳು ''ಅಪ್ಪಾ ಜಗನ್ನಾಥ, ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಕನಾದ ಪರಮೇಶ್ವರ! ನನ್ನನ್ನು ರಕ್ಷಿಸು,'' ಎಂದು ಗಟ್ಟಿಯಾಗಿ ಹೇಳುತ್ತಾ ಗೋಳಾಡುತ್ತಿದ್ದಳು. ಧರ್ಮಾಂಗದನು ಮೋಹಿನಿಯನ್ನು ಹಿಂತಿರುಗಿ ಕರೆತಂದನು. ಇದೇ ಸಮಯದಲ್ಲಿ ರಾಜ್ಯ ಪ್ರದಕ್ಷಿಣೆ ಮುಗಿಸಿಕೊಂಡು ಕುದುರೆಯ ಮೇಲೆ ಕುಳಿತುಕೊಂಡು ಹಿಂದಿರುಗುತ್ತಿದ್ದ ಧರ್ಮಾಂಗದನ ಕಿವಿಗೆ

ಮೋಹಿನಿಯ ಆರ್ತನಾದವು ಕೇಳಿಸಿತು. ಅವನ ಕೂಡಲೇ ಕುದುರೆಯಿಂದ ಇಳಿದು, ತಂದೆಯ ಬಳಿಗೆ ಹೋಗಿ, ನಮಸ್ಕಾರ ಮಾಡಿ ಬ್ರಾಹ್ಮಣರಿಗೆ ಕೈ ಮುಗಿದು, ಸಿಟ್ಟಿನಿಂದ ಹೊರಗೆ ಹೋಗುತ್ತಿರುವ ಮೋಹಿನಿಯ ಎದುರಿಗೆ ಹೋಗಿ. ಕೈ ಮುಗಿದು ಹೇಳಿದನು, 'ಅಮ್ಮಾ ನಿನಗೆ ಯಾರು ಅವಮಾನ ಮಾಡಿದ್ದಾರೆ? ನನ್ನ ತಂದೆಗೆ ಅತ್ಯಂತ ಪ್ರೀತಿಪಾತ್ರಳಾದ ನಿನಗೇಕೆ ಸಿಟ್ಟು ಬಂದಿದೆ. ಈ ಬ್ರಾಹ್ಮಣರ ಜತೆಗೆ ನೀನೀಗ ಎಲ್ಲಿಗೆ ಹೋಗುತ್ತಿದ್ದಿ? ಧರ್ಮಾಂಗದನ ಮಾತನ್ನು ಕೇಳಿ ಮೋಹಿನಿಯು ಹೇಳಿದಳು ''ಮಗೂ ನಿನ್ನ ತಂದೆ ಸುಳ್ಳಾಡಿದ್ದಾನೆ. ನನ್ನ ಕೈಮೇಲೆ ಕೈಯಿಟ್ಟು ಶಪಥಮಾಡಿ, ಈಗ ನನ್ನ ಮಾತನ್ನು ನೆರವೇರಿಸುತ್ತಿಲ್ಲ. ನನಗೆ ಇಲ್ಲಿರಲು ಸ್ವಲ್ಪವೂ ಉತ್ಸಾಹವಿಲ್ಲ.

**ಧರ್ಮಾಂಗದ:-** ದೇವಿ! ನೀನು ಏನನ್ನು ಹೇಳುತ್ತೀಯೋ ಅದನ್ನು ಕೂಡಲೇ ನಡೆಸಿಕೊಡುತ್ತೇನೆ. ಅಮ್ಮಾ ನೀನು ಸಿಟ್ಟು ಮಾಡಬೇಡ. ನೀನು ನನ್ನ ತಂದೆಗೆ ಪ್ರಾಣವಲ್ಲಭಳು. ಅವರ ಬಳಿಗೆ ಹಿಂದಿರುಗು.

**ಮೋಹಿನಿ:-** ವತ್ಸ! ನಾನು ಕೇಳಿದ ವರವನ್ನು ಕೊಡುವೆನೆಂದು ಆಣೆಯಿಟ್ಟು ನಿನ್ನ ತಂದೆಯು ಮಂದರಾಚಲದಲ್ಲಿ ನನ್ನನ್ನು ಮದುವೆಯಾಗಿದ್ದಾನೆ. ಇದಕ್ಕೆ ಮಂದರಾಚಲ ನಿವಾಸಿಯಾದ ಶಿವನೇ ಸಾಕ್ಷಿ. ಈಗ ನಿನ್ನ ತಂದೆ ಪ್ರತಿಜ್ಞಾಭ್ರಷ್ಟನಾಗಿದ್ದಾನೆ. ರಾಜಕುಮಾರನೇ, ನಾನೀಗ ನಿನ್ನ ತಂದೆಯಿಂದ ಚಿನ್ನ ಧ್ಯಾನರಾಶಿ, ಆನೆ, ಕುದುರೆ, ಗ್ರಾಮಭೂಮಿ, ವಸ್ತ್ರ, ಆಭರಣ ಯಾವುದರನ್ನೂ ಕೇಳುತ್ತಿಲ್ಲ. ನಿನ್ನ ತಂದೆಯ ದೇಹಕ್ಕೆ ಹಾನಿಕರವಾದ ಕೆಲಸವನ್ನು ಮಾಡಬೇಡಿರಿ ಎಂದು ಕೇಳುತ್ತಿದ್ದೇನೆ. ಕೇಳಿದ ವರವನ್ನು ಕೊಡುತ್ತೇನೆಂದು ಹೇಳಿದ ಅವರು ಅವರಿಗೆ ಹಿತಕರವಾದ ವಿಷಯವನ್ನೇ ಕೇಳುತ್ತಿರುವ ನನಗೆ ಆ ವರವನ್ನು ಕೊಡುತ್ತಿಲ್ಲ. ಅಸತ್ಯವು ಮದ್ಯಪಾನಕ್ಕೆ ಸಮಾನವಾದುದು. ಆದ್ದರಿಂದ ನಾನು ಅವರ ಜತೆಗೆ ಇರಲು ಇಷ್ಟಪಡುವುದಿಲ್ಲ.

**ಧರ್ಮಾಂಗದ:-** ಅಮ್ಮಾ, ನಾನು ಬದುಕಿರುವವರೆಗೆ ನನ್ನ ತಂದೆಯನ್ನು ಅಸತ್ಯವಾದಿಯಾಗಲು ಬಿಡುವುದಿಲ್ಲ. ಅಮ್ಮಾ ನೀನು ಹಿಂತಿರುಗಿ ಬಾ, ನಾನು ನಿನ್ನ ಮನೋಭಿಲಾಷೆಯನ್ನು ಪೂರ್ಣಗೊಳಿಸುವೆನು. ಹಿಂದೆ ಎಂದೂ ಸುಳ್ಳಾಡದಿದ್ದ ನನ್ನ ತಂದೆ ನನ್ನಂತಹ ಮಗನಿರುವಾಗ ಏಕೆ ಸುಳ್ಳಾಡಬೇಕು! ಯಾರ ಸತ್ಯದಿಂದ ದೇವಾಸುರ ಮಾನವ ಸಹಿತ ಸಂಪೂರ್ಣ ಲೋಕವು ನಿಂತಿದೆಯೋ, ಯಾರು ಯಮನ ನರಕ ಲೋಕದಲ್ಲಿ ಪಾಪಿಗಳಿಲ್ಲದಂತೆ ಮಾಡಿದ್ದಾರೋ, ಯಾರ ಕೀರ್ತಿ ಅಖಂಡ ಬ್ರಹ್ಮಾಂಡ ಮಂಡಲ ವ್ಯಾಪ್ತವಾಗಿದೆಯೋ ಆ ಭೂಪಾಲ ಶಿರೋಮಣಿಯು ಹೇಗೆ ಅಸತ್ಯವಾದಿಯಾಗುತ್ತಾನೆ? ಮಹಾರಾಜರು ಏನು ಹೇಳಿದರೆಂದು ನಾನು ಕೇಳಿಲ್ಲ. ಆದ್ದರಿಂದ ಅವರ ಪರೋಕ್ಷದಲ್ಲಿ ನಿನ್ನ ಮಾತನ್ನು ನಾನು ಹೇಗೆ ನಂಬಲಿ? ನನ್ನ ಮೇಲೆ ದಯೆಯಿಟ್ಟು ನೀನೀಗ ಹಿಂದಿರುಗು. ಧರ್ಮಾಂಗದನ ಮಾತನ್ನು ಕೇಳಿ ಮೋಹಿನಿಯು ಹಿಂದಿರುಗಿದಳು.

## ಅಪ್ಪಾ! ಮೋಹಿನಿಯು ಕೇಳಿದ್ದನ್ನು ಕೊಡಿರಿ

ಸೂರ್ಯನಂತೆ ತೇಜಸ್ವಿಯಾದ ರುಕ್ಮಾಂಗದನು ಹಾಸಿಗೆಯ ಮೇಲೆ ಮೃತಶರೀರದಂತೆ ಬಿದ್ದುಕೊಂಡಿದ್ದಾನೆ. ಧರ್ಮಾಂಗದನು ಅದೇ ಸುವರ್ಣ ವಿಭೂಷಿತವಾದ ಮಂಚದ ಮೇಲೆ ಮೋಹಿನಿಯನ್ನು ಕುಳ್ಳಿರಿಸಿದನು. ಅನಂತರ ಕೈ ಮುಗಿದು ಮಧುರ ವಾಣಿಯಿಂದ

ತಂದೆಯನ್ನು ಕುರಿತು - "ಅಪ್ಪಾ, ನಿನ್ನ ತಾಯಿ ಮೋಹಿನಿಯು ತಮ್ಮನ್ನು ಈ ದಿನ ಅಸತ್ಯವಾದಿಗಳೆಂದು ಹೇಳುತ್ತಿದ್ದಾಳೆ. ಸಪ್ತದ್ವೀಪವತಿಯಾದ ವಸುಂಧರೆಯ ಪಾಲಕರಾದ ನೀವು ಹೇಗೆ ಅಸತ್ಯವಾದಿಗಳಾಗಲು ಸಾಧ್ಯ? ನಿಮ್ಮಲ್ಲಿ ರತ್ನರಾಶಿ ಪೂರ್ಣವಾದ ಖಜಾನೆಯಿದೆ. ಅದನ್ನೆಲ್ಲ ಬೇಕಾದರೆ ಮೋಹಿನಿಗೆ ಕೊಡಿ. ಬೇರೆ ಏನನ್ನಾದರೂ ಕೊಡುತ್ತೇನೆಂದು ಪ್ರತಿಜ್ಞೆ ಮಾಡಿದ್ದರೆ ಅದನೆಲ್ಲ ಕೊಡಿರಿ. ಧನುರ್ಬಾಣಧಾರಿಯಾದ ನಾನಿರುವಾಗ ತಮ್ಮ ಇಚ್ಛೆಗೆ ಅಡ್ಡಿಬರುವವನು ಯಾರು? ಇಂದ್ರಪದವಿಯನ್ನು ಬೇಕಾದರೂ ನಾನು ಬ್ರಹ್ಮದೇವರನ್ನೇ ಪ್ರಾರ್ಥಿಸಿ ಇವರಿಗೆ ಕೊಡಿಸುತ್ತೇನೆ. ಬೇಕಾದರೆ ನನ್ನ ಅಥವಾ ನನ್ನ ತಾಯಿಯ ಪ್ರಾಣಗಳನ್ನೇ ಬೇಕಾದರೆ ಒಪ್ಪಿಸುತ್ತೇನೆ. ಕೊಟ್ಟ ಮಾತನ್ನು ಪೂರೈಸಿದರೆ ತಮ್ಮ ಕೀರ್ತಿಯು ಶಾಶ್ವತವಾಗಿ ಉಳಿಯುತ್ತದೆ." ಎಂದು ಹೇಳಿದನು.

## ನಾನೆಂದೂ ಏಕಾದಶಿಯ ದಿನ ಭೋಜನ ಮಾಡಲಾರೆ

**ರುಕ್ಮಾಂಗದನು ಹೇಳಿದನು:-** ಪುತ್ರ, ನನ್ನ ಕೀರ್ತಿಯು ಹಾಳಾಗಲಿ, ನಾನು ಅಸತ್ಯವಾದಿಯೇ ಬೇಕಾದರೆ ಆಗುತ್ತೇನೆ. ಪ್ರತಿಜ್ಞಾಭ್ರಂಶದ ಪಾಪದಿಂದ ಘೋರ ನರಕಕ್ಕೆ ಉರುಳಿಬೀಳುತ್ತೇನೆ. ಆದರೆ ಏಕಾದಶಿಯ ದಿನ ಭೋಜನ ಮಾಡುವುದಿಲ್ಲ. ಮಗನೇ, ಇವಳು ಬ್ರಹ್ಮಲೋಕಕ್ಕೆ ಹೊರಟು ಹೋಗಲಿ. ಇವಳಿಗೆ ಏಕಾದಶಿಯ ದಿನ ಭೋಜನ ಮಾಡುವುದು ಬೇಕಾಗಿದೆಯೇ ಹೊರತು ರಾಜ್ಯ, ಭೂಮಂಡಲ, ಧನ ಯಾವುದೂ ಬೇಕಾಗಿಲ್ಲ. ನಗಾರಿಯ ಬಾರಿಸಿ ಮಾಡಿದ ಘೋಷಣೆಯನ್ನು ನಾನೇ ಮೀರಲೇ? ಅಭಕ್ಷ್ಯಭಕ್ಷಣಮಾಡಿ, ಅಪೇಯಪಾನ ಮಾಡಿ, ಅಗಮ್ಯಗಮನ ಮಾಡಿ ನೂರು ವರ್ಷ ಬದುಕಬೇಕೆಂಬ ಆಸೆ ನನಗಿಲ್ಲ. ಇವಳ ವಿಯೋಗದಿಂದ ನನಗೆ ಮರಣವಾದರೂ ಚಿಂತೆಯಿಲ್ಲ. ನಾನು ಏಕಾದಶಿಯ ದಿನ ಊಟ ಮಾಡಿ ರಿಕ್ತವಾದ ನರಕವನ್ನು ಪುನಃ ಭರ್ತಿಮಾಡಲಾರೆ. ನನ್ನ ಕೀರ್ತಿಯು ಹಾಳಾಗಬಾರದು. ನನ್ನ ಪುತ್ರ ಕಳತ್ರಾದಿಗಳೆಲ್ಲರೂ ನಾಶವಾದರೂ ನಾನು ಏಕಾದಶಿಯ ದಿನ ಅನ್ನ ಭೋಜನ ಮಾಡಲಾರೆ.

## ಸಂಧ್ಯಾವಲೀ - ಮೋಹಿನೀ ಸಂವಾದ

**ವಸಿಷ್ಠರು ಹೇಳುತ್ತಾರೆ:-** ತಂದೆಯ ಮಾತನ್ನು ಕೇಳಿದ ಧರ್ಮಾಂಗದನು ಒಂದು ಕ್ಷಣ ದಿಙ್ಮೂಢನಾದರೂ ಮರುಕ್ಷಣದಲ್ಲಿ ತನ್ನ ತಾಯಿಯಾದ ಸಂಧ್ಯಾವಳಿಯನ್ನು ಕರೆಸಿ ಅವಳಿಗೆ ಎಲ್ಲಾ ವಿಷಯವನ್ನು ಹೇಳಿ - "ಅಮ್ಮಾ, ನನ್ನತಂದೆಯು ಸತ್ಯಭ್ರಷ್ಟನೂ ಆಗಬಾರದು, ಹರಿದಿನದಲ್ಲಿ ಭೋಜನವನ್ನೂ ಮಾಡಬಾರದು. ಅಂತಹ ಒಂದು ಉಪಾಯವನ್ನು ಹುಡುಕು, ಈ ಮೋಹಿನಿಯನ್ನು ಸಮಾಧಾನಗೊಳಿಸು" ಎಂದನು. ಸಂಧ್ಯಾವಲಿಯು ಮಧುರವಾದ ವಾಣಿಯಿಂದ ಹೀಗೆಂದಳು - "ಮೋಹಿನಿ! ಹಠವನ್ನು ಬಿಡು. ಏಕಾದಶಿಯ ದಿವಸ ಎಲ್ಲಾ ಪಾಪಗಳೂ ಅನ್ನದಲ್ಲಿರುತ್ತವೆ. ಬಾಲ್ಯದಿಂದಲೂ ಏಕಾದಶಿಯ ವ್ರತವನ್ನು ಪಾಲನೆ ಮಾಡಿರುವ ಮಹಾರಾಜರು ಈ ವೃದ್ಧಾವಸ್ಥೆಯಲ್ಲಿ ಏಕಾದಶಿ ದಿನ ಭೋಜನ ಮಾಡುತ್ತಾರೆಯೇ? ಇವರು ನಮ್ಮ ಪತಿಯಲ್ಲವೇ? ಪತ್ನಿಗೆ ಪತಿಯೇ ಸನಾತನ ಗುರುವು. ಪತಿಯ ಆಜ್ಞಾಪಾಲನೆ ಮಾಡುವ ಸತಿಯು ಸಾವಿತ್ರಿಯಂತೆ ಅಕ್ಷಯ ಕೀರ್ತಿಯನ್ನು ಹೊಂದುತ್ತಾಳೆ. ಮಂದರಾಚಲದಲ್ಲಿ ಇವರು ನಿನ್ನ ಹತ್ತಿರ ಕೇಳಿದ್ದನ್ನೆಲ್ಲಾ ಕೊಡುತ್ತೇನೆ ಎಂದಿರಬಹುದು. ಆದರೆ ಆಗ ಇವರು ಕಾಮಪೀಡಿತರಾಗಿದ್ದರು. ಆ ಶಪಥವನ್ನೇ

ಮಾಡಿದ್ದರೂ ನೀನು ಕೂಡ ಕೇಳಲು ಯೋಗ್ಯವಾದುದನ್ನೇ ಕೇಳಬೇಕು. ನೀನು ಬೇರೆ ಏನನ್ನಾದರೂ ಕೇಳು. ಅವರಿಂದ ಭೋಜನ ಮಾಡಿಸುವ ಹಠವನ್ನು ಬಿಡು. ನಾನು ಧರ್ಮಾಂಗದನ ತಾಯಿ. ನೀನು ನನ್ನ ಮಾತಿನಲ್ಲಿ ವಿಶ್ವಾಸವಿಡುತ್ತೀಯೆಂದು ಭಾವಿಸುತ್ತೇನೆ. 'ನೀನು ಸಂಪೂರ್ಣ ರಾಜ್ಯವನ್ನೇ ಕೇಳು. ನನ್ನ ಪ್ರಾಣವನ್ನೇ ಕೇಳು, ಕೊಡುತ್ತೇನೆ. ನಾನು ಹಿರಿಯವಳು. ಆದರೂ ನನ್ನ ಪತಿಗೋಸ್ಕರ ನಿನ್ನ ಕಾಲಿಗೆ ಬಿದ್ದು ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ಪತಿಯನ್ನು ತೊಂದರೆಗ ಸಿಲುಕಿಸಿದ ನಾರಿಯು ನರಕದಲ್ಲಿ ದುಃಖವನ್ನು ಅನುಭವಿಸಿ, ಅನಂತರ ಹನ್ನೆರಡು ಜನ್ಮಗಳಲ್ಲಿ ಹಂದಿಯಾಗಿ, ಚಂಡಾಲಿಯಾಗಿ ಹುಟ್ಟುತ್ತಾಳೆ. ನಿನ್ನಲ್ಲಿ ಸಖಿಯಂತೆ, ಗೆಳತಿಯಂತೆ ಕೇಳಿಕೊಳ್ಳುತ್ತಿದ್ದೇನೆ. ಈ ಪಾಪದ ಪರಿಣಾಮವನ್ನು ಆಲೋಚಿಸು. ಧರ್ಮಬೀರುಗಳು ಶತ್ರುವಿಗೂ ಮಂಗಳವಾಗಲೆಂದು ಬಯಸುತ್ತಾರೆ. ಹೀಗಿರುವಾಗ ನನ್ನ ಸಖಿಯಾಗಿರುವ ನಿನಗೆ ಒಳ್ಳೆಯ ಸಲಹೆ ಸೂಚನೆಗಳನ್ನು ಕೊಡುವುದು ನನ್ನ ಕರ್ತವ್ಯವೆಂದು ಹೀಗೆ ಹೇಳುತ್ತಿದ್ದೇನೆ''

ಮೋಹಮಯಿ, ಮೋಹಕಾರಿಣಿ, ಮೋಹಿನಿಯು ಸಂಧ್ಯಾವಲಿಯ ಮಾತನ್ನು ಕೇಳಿ ತನ್ನ ಪತಿಯ ಹಿರಿಯ ಸತಿಯ ಬಳಿ ಹೀಗೆಂದಳು - ''ಸುಭ್ರು! ನಿನ್ನಲ್ಲಿ ನನಗೆ ತುಂಬಾ ಗೌರವವಿದೆ. ರಾಜನು ಏಕಾದಶಿಯ ದಿನ ಊಟ ಮಾಡುವುದಿಲ್ಲವಾದರೆ ಬೇರೊಂದು ಕಾರ್ಯವನ್ನು ಮಾಡಲಿ. ಆ ಕೃತ್ಯವು ನಿನಗೆ ಮರಣಕ್ಕಿಂತಲೂ ಕಷ್ಟದಾಯಕವಾಗಬಹುದು. ಅದು ನನಗೂ ದುಃಖಕರವೇ ಆಗಿದೆ. ಆದರೂ ದುರ್ದೈವವಶಾತ್ ನಾನು ಈ ಮಾತನ್ನು ಹೇಳುತ್ತಿದ್ದೇನೆ. ನಿನ್ನ ಪ್ರಾಣ, ನಮ್ಮ ಪತಿದೇವನ ಪ್ರಾಣ, ಪ್ರಜಾವರ್ಗದ ಪ್ರಾಣ, ನಿನ್ನ ಸೊಸೆಯರ ಪ್ರಾಣ ಎಲ್ಲವನ್ನು ನನ್ನ ಕೋರಿಕೆಯು ಅಪಹರಿಸುತ್ತದೆ. ಆದ್ದರಿಂದ ನನ್ನ ಧರ್ಮವು ನಾಶವಾಗುತ್ತದೆ. ನನಗೆ ಕಲಂಕವೂ ಬರುತ್ತದೆ. ನನ್ನ ಮನಸ್ಸಿನ ಕೋರಿಕೆಯನ್ನು ಕಾರ್ಯರೂಪಕ್ಕೆ ತರುವ ವಿಷಯವಿರಲಿ, ಅದನ್ನು ಮನಸ್ಸಿನಲ್ಲಿ ಭಾವಿಸುವುದು ಭಯಂಕರಾತಿ ಭಯಂಕರವಾಗಿದೆ. ನನ್ನ ಆ ಮಾತನ್ನು ನೀನು ನಡೆಸಿಕೊಟ್ಟರೆ ಈ ಪ್ರಪಂಚದಲ್ಲೆಲ್ಲಾ ನಿನ್ನ ಕೀರ್ತಿ ಹರಡುತ್ತದೆ. ನಿನ್ನ ಪತಿಗೂ ಕೀರ್ತಿ ಬರುತ್ತದೆ, ನಿನ್ನ ಪುತ್ರನ ಪ್ರಶಂಸೆಯು ತ್ರಿಲೋಕದಲ್ಲಿ ವ್ಯಾಪ್ತವಾಗುತ್ತದೆ. ನನಗೆ ಮಾತ್ರವೇ ಎಲ್ಲಾ ಕಡೆಯಿಂದಲೂ 'ಧಿಕ್ಕಾರ' 'ವಷಟ್‌ಕಾರ' ಘಟಕಾರಗಳು ಸಿಗುತ್ತವೆ.

## ಮೋಹಿನಿಯ ಮಾತು ಕೇಳಿಸಿಕೊಂಡ ಸಂಧ್ಯಾವಲಿಯ ಎದೆ ಝಲ್ಲೆಂದಿತು

ಅವಳ ಧೈರ್ಯವು ಒಂದು ಬಾರಿ ಸಂಪೂರ್ಣವಾಗಿ ನಾಶವಾಯಿತು. ಆದರೆ ಶ್ರೀಹರಿಯ ಸ್ಮರಣೆ ಮಾಡುತ್ತ ಅವಳು ಪುನಃ ಧೈರ್ಯ ತಂದುಕೊಂಡು ಮೋಹಿನಿಯೊಡನೆ ಹೇಳಿದಳು. ''ಹೇಳು, ಹೇಳು ಅದೇನು ವಿಷಯ! ನನ್ನ ಪತಿದೇವನ ಸತ್ಯದ ರಕ್ಷಣೆ ಆಗುವುದಾದರೆ ನನಗೆ ಎಷ್ಟೊಂದು ದುಃಖವಾದರೂ ಚಿಂತೆಯಿಲ್ಲ. ನಮ್ಮ ಸ್ವಾಮಿಯ ಹಿತಕ್ಕೋಸ್ಕರ ಈ ಶರೀರವೇ ಬಲಿಯಾಗಲಿ, ನನ್ನ ಮಗನಿಗೆ ಮೃತ್ಯುವುಂಟಾಗಲಿ, ಸಂಪೂರ್ಣ ರಾಜ್ಯವೇ ನಾಶಹೊಂದಲಿ, ನನಗೆ ದುಃಖವಿಲ್ಲ. ನೀನು ವರ ಕೇಳು, ಪತಿಹಿತಕ್ಕೋಸ್ಕರ, ನಾನು ಆ ಮಾತನ್ನು ನಡೆಸಿಕೊಡುತ್ತೇನೆ. ನನ್ನ, ಧನ ಶರೀರ, ಮಗ ಅಥವಾ ಬೇರೆ ಯಾವ ವಸ್ತುವನ್ನಾದರೂ ಕೇಳು ಕೊಡುತ್ತೇನೆ. ಸತಿಗೆ ಪತಿಯ ಹೊರತು ಬೇರೆ ಯಾವ ದೇವತೆಯೂ ಇಲ್ಲ.

## ತನ್ನ ಮಗನ ಶಿರಸ್ಸನ್ನು ರಾಜನು ಕತ್ತರಿಸಿಕೊಡಲಿ

**ವಸಿಷ್ಠರು ಹೇಳುತ್ತಾರೆ:-** ಸಂಧ್ಯಾವಲಿಯ ಮಾತನ್ನು ಕೇಳಿ ಬ್ರಹ್ಮ ಪುತ್ರಿಯಾದ ಮೋಹಿನಿಯು ತನ್ನ ಕಾರ್ಯ ಸಾಧನ ತತ್ಪರಳಾದಳು. ಅವಳೆಂದಳು - "ಮಂಗಲ ಸ್ವರೂಪಣಿಯೇ! ಧರ್ಮ ಅಧರ್ಮದ ರಹಸ್ಯವನ್ನೆಲ್ಲ ತಿಳಿದು ಸ್ವಾಮಿಗೋಸ್ಕರ ಧನ, ಜೀವನ, ಸರ್ವಸ್ವವನ್ನು ದಾನ ಮಾಡಲು ನೀನು ಸಿದ್ಧವಾಗಿರುವುದಾದರೆ ನಾನೀಗ ನಿನ್ನಲ್ಲಿ ಸಮಸ್ತ ಜೀವನಕ್ಕಿಂತಲೂ ಅಧಿಕವಾದ ಒಂದು ಧನವನ್ನು ಕೇಳುತ್ತಿದ್ದೇನೆ. ನಿನ್ನ ಪತಿ ರುಕ್ಮಾಂಗದ ಮಹಾರಾಜನು ಏಕಾದಶಿಯ ದಿನ ಭೋಜನ ಮಾಡುವುದಿಲ್ಲವಾದರೆ ತನ್ನ ಕೈಯಲ್ಲಿ ಖಡ್ಗವನ್ನು ಹಿಡಿದು, ಚಂದ್ರ ಮಂಡಲ ಸಮಾನವಾದ, ಮನೋಹರ ಕುಂಡಲ ವಿಭೂಷಿತವಾದ, ಇನ್ನೂ ಪೂರ್ತಿಯಾಗಿ ಶ್ಮಶ್ರುಗಳು (ಮೀಸೆ) ಮೊಳೆಯದಿರುವ ತನ್ನ ಮಗ ಧರ್ಮಾಂಗದನ ತಲೆಯನ್ನು ಕತ್ತರಿಸಿ ನನ್ನ ಉಡಿಯಲ್ಲಿ ಹಾಕಲಿ.

## ಸಂಧ್ಯಾವಲಿ ಒಪ್ಪಿದಳು

ಮೋಹಿನಿಯ ಅತಿಕಟು ವರ್ಣ ವಿರಸಭರಿತವಾದ ಹರಿತವಾದ ಮಾತನ್ನು ಕೇಳಿ ಸಂಧ್ಯಾವಲಿಯು ಶೀತವಾತ ಪೀಡಿತವಾದ ಕದಳಿಯಂತೆ (ಬಾಳೆಯ ಗಿಡದಂತೆ) ಸ್ವಲ್ಪ ಹೊತ್ತು ಥರಥರನೆ ನಡುಗಿದಳು. ಅನಂತರ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ಹೇಳಿದಳು. "ಮೋಹಿನಿ! ಪುರಾಣಗಳಲ್ಲಿ ಏಕಾದಶಿ ದ್ವಾದಶಿ ಸಂಬಂಧದಲ್ಲಿ ಅನೇಕ ಗಾದೆಗಳು ಕೇಳಿಬರುತ್ತಿವೆ. ಧನವನ್ನು ಬಿಡಿ, ಹೆಂಡತಿ, ಜೀವನ, ಮನೆಯನ್ನು ಬಿಡಿ, ದೇಶ, ರಾಜ್ಯ, ಮಿತ್ರ ಎಲ್ಲರನ್ನು ಬಿಡಿ, ಅತ್ಯಂತ ಪ್ರಿಯ ವ್ಯಕ್ತಿಯನ್ನು ತ್ಯಜಿಸಿರಿ. ಆದರೆ ಎರಡೂ ಪಕ್ಷಗಳ ಏಕಾದಶಿ ದ್ವಾದಶಿಗಳನ್ನು ಬಿಡಬೇಡಿ. ಏಕೆಂದರೆ ಮಕ್ಕಳು ಸಹೋದರರು, ಸ್ನೇಹಿತರು, ಪ್ರಿಯಜನರು ಈ ಲೋಕದಲ್ಲಿ ಮಾತ್ರವೇ ಉಪಕಾರ ಮಾಡುವರು. ಜೊತೆಗಿರುವರು. ಆದರೆ ಈ ಏಕಾದಶಿಯು ಇಹಪರಗಳೆರಡರಲ್ಲಿಯೂ ಮಾನವನನ್ನು ಉದ್ಧರಿಸುತ್ತದೆ. ಆದ್ದರಿಂದ ಏಕಾದಶಿಯ ಪ್ರಭಾವದಿಂದ ಎಲ್ಲವೂ ಮಂಗಲಮಯ ವಾಗುತ್ತದೆ, ನನ್ನ ಮಾತಿನಲ್ಲಿ ನಂಬಿಕೆಯಿಡು. ನಿನ್ನ ಸಂತೋಷಕ್ಕೋಸ್ಕರ ಧರ್ಮಾಂಗದನ ತಲೆಯನ್ನು ಕತ್ತರಿಸಿ ಕೊಡಿಸುತ್ತೇನೆ. ಈ ವಿಷಯದಲ್ಲಿ ನಾನು ಕೇಳಿದ ಒಂದು ಪ್ರಾಚೀನ ಕಥೆಯನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳು.

## ವಿರೋಚನನ ಕಥೆ

ಪೂರ್ವಕಾಲದಲ್ಲಿ ಪ್ರಹ್ಲಾದನ ಮಗನಾದ ವಿರೋಚನನೆಂಬ ದೈತ್ಯನಿದ್ದನು. ಅವನ ಪತ್ನಿಯಾದ ವಿಶಾಲಾಕ್ಷಿಯು ಪ್ರತಿ ದಿನ ಬೆಳಿಗ್ಗೆ ಒಬ್ಬ ಋಷಿಯನ್ನು ಕರೆದು ವಿದ್ಯುಕ್ತವಾಗಿ ಅವನ ಪೂಜೆಯನ್ನು ಮಾಡಿ ಪಾದಗಳನ್ನು ತೊಳೆದು ಆ ಚರಣೋದಕವನ್ನು ಶಿರಸ್ಸಿನಲ್ಲಿ ಧರಿಸುತ್ತಿದ್ದಳು. ಹಿರಣ್ಯಕಶಿಪುನಿಂದ ತೊಂದರೆಗೊಳಗಾಗಿದ್ದ ದೇವತೆಗಳು ಅವನ ಮೊಮ್ಮಗನಾದ ವಿರೋಚನನಿಂದಲೂ ತಮಗೆ ತೊಂದರೆಗಳು ಬರಬಹುದೆಂದು ಶಂಕಿಸಿ ತಮ್ಮ ಗುರುಗಳಾದ ಬ್ರಹ್ಮಸ್ಪತ್ಯಾಚಾರ್ಯರ ಬಳಿಗೆ ಹೋಗಿ ತಮ್ಮ ತೊಂದರೆಗಳನ್ನು ವಿಜ್ಞಾಪಿಸಿದರು. ಬೃಹಸ್ಪತ್ಯಾಚಾರ್ಯರು ಹೇಳಿದರು - "ದೇವತೆಗಳಿರಾ! ನಿಮ್ಮ ಕಷ್ಟವನ್ನು ಶ್ರೀಮನ್ನಾರಾಯಣನಲ್ಲಿ ಹೇಳಿಕೊಳ್ಳುವುದೇ ಉಚಿತ. ಅವನೇ ಕಷ್ಟ ಪರಿಹಾರಕನು"

ದೇವತೆಗಳು ಹೇಗಾದರೂ ವಿರೋಚನನ ಜೀವನಕ್ಕೆ ಮಂಗಲ ಹಾಡಬೇಕೆಂದು ನಿಶ್ಚಯಿಸಿ ಶ್ರೀ ಹರಿಯ ಬಳಿಗೆ ಹೋಗಿ ನಾನಾ ರೀತಿಯ ಸ್ತುತಿಗಳಿಂದ ಸ್ತೋತ್ರ ಮಾಡಿದರು.

**ದೇವತೆಗಳು:-** ದೇವಾಧಿದೇವ! ಶ್ರೀ ಹರೇ ನಿನಗೆ ನಮಸ್ಕಾರ. ನರಸಿಂಹ ವಾಮನ, ವರಾಹ, ಮತ್ಸ್ಯ, ಕೂರ್ಮ, ಪರಶುರಾಮ, ಶ್ರೀರಾಮ, ಶ್ರೀಹರಿ, ದತ್ತಾತ್ರೇಯ, ಕಪಿಲ ಇತ್ಯಾದಿ ನಾನಾ ರೂಪಧಾರಿಯಾದ ನಾರಾಯಣನೇ ನಿನಗೆ ನಮಸ್ಕಾರ. ಜಗದಾದಾರ ನಿನಗೆ ನಮಸ್ಕಾರ, ದೈತ್ಯ ಪೀಡಿತರಾದ ನಾವು ನಿನ್ನನ್ನು ಮೊರೆಹೊಕ್ಕಿದ್ದೇವೆ. ನಾವೆಲ್ಲರೂ ಕಲತ್ರ ಪುತ್ರಮಿತ್ರಾದಿ ಸಹಿತರಾಗಿ ಸುಖವಾಗಿರುವಂತೆ ಅನುಗ್ರಹಿಸು. ದೈತ್ಯ ಪೀಡಿತರಾದ ದೇವತೆಗಳ ಈ ಸ್ತೋತ್ರವನ್ನು ಕೇಳಿ ಪ್ರಸನ್ನನಾದ ಶ್ರೀಹರಿಯು ದೇವತೆಗಳಿಗೆ ದರ್ಶನವನ್ನು ನೀಡಿದನು. ದೇವತೆಗಳು ಭಗವಂತನನ್ನು ನಮಿಸಿ ವಿರೋಚನನ್ನು ಬೇಗನೆ ಸಂಹರಿಸಬೇಕೆಂದು ಪ್ರಾರ್ಥಿಸಿದರು. ಪರಮಾತ್ಮನು ದೇವತೆಗಳಿಗೆ ಆಶ್ವಾಸನೆಯನ್ನು ಕೊಟ್ಟು ಅವರನ್ನು ಕಳುಹಿಸಿದನು. ದೇವತೆಗಳು ಹೋದ ಮೇಲೆ ಭಗವಂತನು ಒಬ್ಬ ವೃದ್ಧ ಬ್ರಾಹ್ಮಣನ ರೂಪವನ್ನು ತಾಳಿ, ವಿರೋಚನನ ಪತ್ನಿ ವಿಶಾಲಾಕ್ಷಿಯು ಬ್ರಾಹ್ಮಣ ಪೂಜೆ ಮಾಡುವ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋದನು.

ಅದುವರೆಗೆ ಬಾರದೇ ಇರುವ ಬ್ರಾಹ್ಮಣನನ್ನು ನೋಡಿ ವಿಶಾಲಾಕ್ಷಿಯು ಬಹಳ ಸಂತೋಷಪಟ್ಟು, ಆ ಬ್ರಾಹ್ಮಣನನ್ನು ಸ್ವಾಗತಿಸಿ ಅವನಿಗೆ ಕುಳಿತುಕೊಳ್ಳಲು ಆಸನಕೊಟ್ಟಳು. ಆದರೆ ಆ ಬ್ರಾಹ್ಮಣನು ಆಸನವನ್ನು ಸ್ವೀಕರಿಸದೆ "ದೇವಿ! ನನ್ನ ಮನಸ್ಸಿನ ಅಭಿಲಾಷೆಯನ್ನು ಪೂರ್ತಿ ಮಾಡುವುದಾದರೆ ಮಾತ್ರ ನಾನು ಆಸನದಲ್ಲಿ ಕುಳಿತುಕೊಳ್ಳುತ್ತೇನೆ." ಎಂದನು, ವಿಶಾಲಾಕ್ಷಿಯು ಬಹಳ ಸಂತೋಷಪಟ್ಟಳು. ಅವಳು ಅವನ ಮನಸ್ಸಿನ ಅಭಿಲಾಷೆ ಏನೆಂದು ಕೇಳದೆ ಅದನ್ನು ಖಂಡಿತವಾಗಿಯೂ ಪೂರೈಸುತ್ತೇನೆ. ಎಂದು ವಾಗ್ದಾನ ಮಾಡಿದಳು. ಅವಳ ಹೃದಯವು ವಿಷ್ಣು ಮಾಯೆಯಿಂದ ಮೋಹಿತವಾಗಿತ್ತು. ವಿಶಾಲಾಕ್ಷಿ ಎಂದಳು - "ಭಗವಾನ್ ನಿಮ್ಮ ಮನೋರಥವನ್ನು ಖಂಡಿತವಾಗಿಯೂ ಪೂರೈಸುತ್ತೇನೆ. ನಾನು ಕೊಟ್ಟ ಆಸನದಲ್ಲಿ ಕುಳಿತು ತಮ್ಮ ಪಾದ ಪ್ರಕ್ಷಾಲನೋದಕದಿಂದ ನನ್ನನ್ನು ಪವಿತ್ರಳನ್ನಾಗಿ ಮಾಡಿರಿ.

**ಬ್ರಾಹ್ಮಣ:-** ನಾನು ಹೆಂಗಸಿನ ಮಾತಿನಲ್ಲಿ ಹೇಗೆ ವಿಶ್ವಾಸವಿಡಲಿ? ನಿನ್ನ ಪತಿಯ ಬಾಯಿಯಿಂದ ಈ ಮಾತು ಬಂದರೆ ನನಗೆ ವಿಶ್ವಾಸವುಂಟಾಗುತ್ತದೆ." ಕೂಡಲೇ ವಿಶಾಲಾಕ್ಷಿಯು ತನ್ನ ಗಂಡನನ್ನು ಕರೆಸಿ ಎಲ್ಲಾ ವಿಷಯವನ್ನು ಹೇಳಿದಳು. ಪತ್ನಿಯ ಬ್ರಾಹ್ಮಣಭಕ್ತಿಯಿಂದ ಮುಗ್ಧನಾದ ವಿರೋಚನನು ಬ್ರಾಹ್ಮಣನ ನಿಯಮವನ್ನು ಒಪ್ಪಿಕೊಂಡನು. ಕೂಡಲೇ ಬ್ರಾಹ್ಮಣನು ಪ್ರಸನ್ನನಾಗಿ ಹೇಳಿದನು - "ನೀವಿಬ್ಬರೂ ನಿಮ್ಮಿಬ್ಬರ ಆಯುಸ್ಸನ್ನೂ ನನಗೆ ದಾನ ಕೊಡಿರಿ" ಆಗ ಪತಿ ಪತ್ನಿಯರೀರ್ವರೂ ತಾವೇ ತಂದು ಕೊಂಡ ಈ ದುಃಖ ಪ್ರಸಂಗದಿಂದ ಸ್ವಲ್ಪ ಹೊತ್ತು ಮೌನವಾಗಿದ್ದು, ಅನಂತರ ಕೈ ಮುಗಿದು ಹೇಳಿದರು. "ಬ್ರಾಹ್ಮಣ ಶ್ರೇಷ್ಠನೇ, ನಮ್ಮ ಆಯುಸ್ಸನ್ನು ತೆಗೆದುಕೋ. ನಿನ್ನ ಪಾದಜಲವನ್ನು ಅನುಗ್ರಹಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡು" ಬ್ರಾಹ್ಮಣನು ಮಣೆ ಮೇಲೆ ಕುಳಿತನು. ದಂಪತಿಗಳು ಅವನ ಪಾದವನ್ನು ತೊಳೆದು ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿದರು. ಕೂಡಲೇ ಇಬ್ಬರೂ ಭೂಮಿಗೆ ಬಿದ್ದು ಪ್ರಾಣಬಿಟ್ಟರು. ಬ್ರಾಹ್ಮಣನು ಮಾಯವಾದನು. ದೇವಿ ಮೋಹಿನಿ! ನಾನೂ ಇದೇ ರೀತಿ ನನ್ನ ಪತಿಯನ್ನು

ಸತ್ಯ ಭ್ರಷ್ಟನಾಗ ಬಿಡುವುದಿಲ್ಲ." ಸಂಧ್ಯಾವಲಿಯು ತನ್ನ ಪತಿಯ ಹತ್ತಿರ ಹೋಗಿ ಅವನ ಎರಡೂ ಕಾಲುಗಳನ್ನು ಹಿಡಿದು ನಮಿಸಿ ಹೇಳಿದಳು - "ಮಹಾರಾಜರೇ! ನಾನು ಮೋಹಿನಿಯನ್ನು ಬಹಳ ರೀತಿಯಿಂದ ಸಮಾಧಾನಪಡಿಸಿದೆನು. ಆದರೆ ಅವಳ ಹಟ ಒಂದೇ ರೀತಿಯಾಗಿದೆ - ಮಹಾರಾಜರು ಏಕಾದಶಿಯ ದಿನ ಭೋಜನ ಮಾಡಬೇಕು. ಅಥವಾ ಮಗನ ಶಿರಸ್ಸನ್ನು ಕತ್ತರಿಸಕೊಡಬೇಕು. ಮಹಾರಾಜೇಂದ್ರ! ಧರ್ಮವನ್ನು ಬಿಡುವುದಕ್ಕಿಂತ ಪುತ್ರವಧವೇ ಶ್ರೇಷ್ಠವೆಂದು ನನ್ನ ಅಭಿಪ್ರಾಯ. ಗರ್ಭದಲ್ಲಿ ಧರಿಸಿ, ಪ್ರಸವಿಸಿ, ಅನೇಕ ಕಷ್ಟಗಳನ್ನು ಸಹಿಸಿ ಬೆಳೆಸಿದ ತಾಯಿಗೆ ತಂದೆಗಿಂತಲೂ ಮಗನ ಮೇಲೆ ಹೆಚ್ಚು ಪ್ರೀತಿ ಇರುತ್ತದೆ. ಆದುದರಿಂದಲೇ 'ಮಾತೃದೇವೋ ಭವ' ಎಂದು ತಾಯಿಗೆ ಮೊದಲನೇ ಗೌರವವನ್ನು ಕೊಟ್ಟಿರುತ್ತಾರೆ. ಅಂತಹ ತಾಯಿಯಾದ ನಾನೇ ಹೇಳುತ್ತಿದ್ದೇನೆ. ಮಗನ ಶಿರಸ್ಸನ್ನು ಕತ್ತರಿಸಿ ಮೋಹಿನಿಗೆ ಕೊಡಿರಿ. ನಾನೇ ಪುತ್ರ ಸ್ನೇಹಕ್ಕೆ ತಿಲಾಂಜಲ ಕೊಟ್ಟಿದ್ದೇನೆ. ಸತ್ಯಕ್ಕಿಂತ ಯಾವುದೂ ದೊಡ್ಡದಲ್ಲ. ಸತ್ಯಪಾಲನ. ಏಕಾದಶೀ ವ್ರತಪಾಲನಗಳಿಂದ ಶ್ರೀಮನ್ಮಹಾವಿಷ್ಣುವಿನ ಸನ್ನಿಧಾನ ಪ್ರಾಪ್ತವಾಗುತ್ತದೆ. ನಿಮ್ಮ ಸತ್ಯನಿಷ್ಠೆ ಮತ್ತು ವ್ರತನಿಷ್ಠೆಗಳೆಂಬ ಬಂಗಾರವನ್ನು ಒರೆಹಚ್ಚಿ ನೋಡುವುದಕ್ಕಾಗಿ ದೇವತೆಗಳು ಮೋಹಿನಿಯನ್ನು ಇಲ್ಲಿಗೆ ಕಳುಹಿಸಿರಬೇಕು. ಸತ್ಯ ವ್ರತಗಳ ಪಾಲನೆ ಮಾಡಿ ತಾವು ಅಜರಾಮರಕೀರ್ತಿಯನ್ನು ಗಳಿಸಿರಿ. " ಪತ್ನಿಯ ಮಾತನ್ನು ಕೇಳಿ ಮಹಾರಾಜ ರುಕ್ಮಾಂಗದನು ಮೋಹಿನಿಯೂ ಕೇಳುವಂತೆ ಈ ರೀತಿ ಹೇಳಿದನು - "ಸಂಧ್ಯಾವಲಿ, ಅಯ್ಯೋ ಪುತ್ರಹತ್ಯೆಯು, ಬ್ರಹ್ಮಹತ್ಯೆಗಿಂತಲೂ ಭಯಂಕರ ಪಾಪವಲ್ಲವೇ? ನಾನೇಕೆ ಮಂದರಾಚಲಕ್ಕೆ ಹೋದೆನೋ? ಅಲ್ಲಿ ನನಗೆ ಹೇಗೆ ಇವಳು ದೊರಕಿದಳೋ ಒಂದು ತಿಳಿಯದು. ಇವಳು ನಾರಿಯಲ್ಲ. ನನ್ನ ಮಗನನ್ನು ನುಂಗಲು ಬಂದ ಮಾರಿ. ಧರ್ಮಾಂಗದನು ಧರ್ಮಜ್ಞನು, ವಿನಯ ಶೀಲ, ಪ್ರಜಾಪರಿಪಾಲಕ, ಅವನಿಗಿನ್ನೂ ಸಂತಾನವಿಲ್ಲ. ಇಂತಹ ಮಗನನ್ನು ನಾನು ಹೇಗೆ ಕೊಲ್ಲಲಿ? ದುಷ್ಟಮಗನನ್ನು ಯಾರೂ ಕೊಲ್ಲಲು ಇಷ್ಟಪಡುವುದಿಲ್ಲ. ಧರ್ಮಶೀಲ, ಮಾತೃಪಿತೃ ಗುರುಪೂಜಕ ಈ ಧರ್ಮಾಂಗದ, ಅವನ ಮರಣದ ಆಲೋಚನೆಯೇ ನನಗೆಷ್ಟು ದುಃಖದಾಯಕವೆಂದು ಬಲ್ಲೆಯಾ? ಅವನ ಪ್ರತಾಪ ದಿಂದಲೇ ನಾನು ಸಪ್ತದ್ವೀಪಾಧಿಪತಿ ಎನ್ನಿಸಿಕೊಂಡಿದ್ದೇನೆ. ಅವನು ಭೂಮಂಡಲದ ರಾಜರಲ್ಲಿ ಶ್ರೇಷ್ಠನು, ನಮ್ಮ ಕುಲಕ್ಕೆ ಅಲಂಕಾರನು. ಮೋಹಿನಿಯು ಮೋಹ ಸಮುದ್ರದಲ್ಲಿ ಮುಳುಗಿ ನನಗೆ ದುಃಖ ಕೊಡುತ್ತಿದ್ದಾಳೆ ಅವಳಿಗೆ ಸಮಾಧಾನ ಹೇಳು."

ಈ ರೀತಿ ಸಂಧ್ಯಾವಲಿಗೆ ಹೇಳಿ ಅನಂತರ ರಾಜನು ಮೋಹಿನಿಯನ್ನು ಉದ್ದೇಶಿಸಿಯೇ ಹೀಗೆ ಹೇಳಿದನು - "ಮೋಹಿನಿ, ನಾನು ಏಕಾದಶಿ ಭೋಜನ ಮಾಡಲಾರೆ. ಮಗನ ಹತ್ಯೆಯನ್ನೂ ಮಾಡಲಾರೆ, ನನ್ನನ್ನಾಗಲೀ; ಸಂಧ್ಯಾವಲಿಯನ್ನಾಗಲೀ ಗರಗಸದಿಂದ ಸೀಳಬಲ್ಲೆ. ಅಥವಾ ನೀನು ಹೇಳಿದ ಇನ್ನಾವ ಭಯಂಕರ ಕಾರ್ಯವನ್ನಾದರೂ ಮಾಡಬಲ್ಲೆ. ಧರ್ಮಾಂಗದನನ್ನು ಕೊಲ್ಲಲಾರೆ. ಧರ್ಮಾಂಗದನು ಸತ್ತರೆ ನಿನಗೇನು ಪ್ರಯೋಜನ! ಏಕಾದಶಿ ದಿನ ನನ್ನಿಂದ ಭೋಜನ ಮಾಡಿಸಿದರೆ ನಿನಗೇನು ಪ್ರಯೋಜನ ! ನಾನು ನಿನ್ನ ದಾಸ, ಸೇವಕ, ಅಧೀನ ಎಂದು ತಿಳಿ, ನಿನ್ನ ಸೌಭಾಗ್ಯಕ್ಕಾಗಿ ನನ್ನನ್ನು ಉಳಿಸು. ನಾನು ನಿನ್ನನ್ನೇ ಮರೆಹೊಕ್ಕಿದ್ದೇನೆ. ಬೇರೆ ಏನಾದರೂ ವರಕೇಳು. ನನ್ನ ಮೇಲೆ ದಯೆ ತೋರಿಸು. ಪುತ್ರ ಭಿಕ್ಷೆಯನ್ನು ಕೊಡು. ಗುಣವಂತನಾದ ಪುತ್ರನೂ ದುರ್ಲಭ, ಏಕಾದಶೀ ವ್ರತವು

ದುರ್ಲಭ, ಗಂಗಾಜಲ, ವಿಷ್ಣು ಪೂಜಾ, ಸ್ಮೃತಿ ಶಾಸ್ತ್ರ ಸಂಗ್ರಹ, ವಿಷ್ಣು ಸ್ಮರಣ. ಸಜ್ಜನರ ಸಹವಾಸ. ಇವೆಲ್ಲವೂ ದುರ್ಲಭಗಳು. ವಿಷ್ಣು ಭಕ್ತಿಯಂತೂ ಪರಮ ದುರ್ಲಭ. ನನ್ನ ಧರ್ಮವನ್ನು ಉಳಿಸು. ನಾನು ನಿಷ್ಕಂಟಕ ರಾಜ್ಯ ಪರಿಪಾಲನ ಮಾಡಿ ಎಲ್ಲಾ ಭೋಗಗಳನ್ನು ಅನುಭವಿಸಿದೆನು. ಆದರೆ ನನ್ನ ಮಗನು ಸಂಸಾರದ ಸುಖಗಳನ್ನು ನೋಡಿಲ್ಲ. ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಅಯ್ಯೋ! ತಂದೆಯ ಕೈಯಿಂದಲೇ ಮಗನ ಹತ್ಯೆ! ಎಂತಹ ಭಯಂಕರ ಕಾರ್ಯ! ಎಷ್ಟು ಪಾಪಕರ ಕಾರ್ಯ!

**ಮೋಹಿನಿ:-** ರಾಜೇಂದ್ರ! ಏಕಾದಶಿ ಭೋಜನ ಮಾಡು. ನಿನ್ನ ಇಚ್ಛೆಯಂತೆ ಅಂತಕಾಲಪರ್ಯಂತ ಪೃಥ್ವಿಯನ್ನು ಪಾಲಿಸು. ನಾನು ಈ ವಿಷಯವನ್ನು ಮೊದಲೇ ಹೇಳಿದ್ದೇನೆ. ನೀನು ಏಕಾದಶಿ ಊಟ ಮಾಡಿದರೆ ಸಾಕು, ನಿನ್ನ ಮಗನು ಸಾಯಬೇಕೆಂಬ ಹಠವೇನು ನನಗಿಲ್ಲ. ರಾಜಾ ನಿನಗೆ ಮಗನು ಬೇಕಿದ್ದರೆ ಏಕಾದಶೀ ವ್ರತವನ್ನು ಬಿಡು. ಬೇರೆ ಮಾತನ್ನಾಡಿ ಉಪಯೋಗವಿಲ್ಲ. ಸತ್ಯ ರಕ್ಷಣೆ ಮಾಡಿಕೋ.

## ಅಪ್ಪಾ! ನನ್ನನ್ನು ಕೊಲ್ಲಿರಿ

ಮೋಹಿನಿಯು ಹೀಗೆ ಮಾತನಾಡುತ್ತಿರುವಾಗಲೇ ಧರ್ಮಾಂಗದನು ಅಲ್ಲಿಗೆ ಬಂದು ಮೋಹಿನಿಗೆ ನಮಸ್ಕಾರ ಮಾಡಿ ಎದ್ದು ನಿಂತು - "ಅಮ್ಮ ನೀನು ಕೇಳಿದ ವರದಂತೆ ನನ್ನ ತಲೆಯನ್ನೇ ತೆಗೆದುಕೋ. ಈ ವಿಷಯದಲ್ಲಿ ಸಂಕೋಚ ಪಡಬೇಡ." ಎಂದು ಹೇಳಿ ತಂದೆಯ ಕಡೆ ತಿರುಗಿನಿಂತು ತನ್ನ ಒರೆಯಿಂದ ಫಳಫಳನೆ ಹೊಳೆಯುತ್ತಿರುವ ಒಂದು ಖಡ್ಗವನ್ನು ಹೊರಕ್ಕೆ ತೆಗೆದು ತನ್ನ ತಂದೆಯ ಎದುರು ಇಟ್ಟು ಹೇಳಿದನು. "ಅಪ್ಪಾ! ನೀವು ನನ್ನನ್ನು ಕೊಲ್ಲುವ ವಿಷಯದಲ್ಲಿ ತಡಮಾಡಬೇಡಿ. ನನ್ನ ತಾಯಿಯಾದ ಈ ಮೋಹಿನೀ ದೇವಿಯ ಎದುರು ನೀವು ಏನು ಪ್ರತಿಜ್ಞೆ ಮಾಡಿದ್ದೀರೋ ಅದನ್ನು ಸತ್ಯವನ್ನಾಗಿ ಮಾಡಿ ತೋರಿಸಿರಿ. ನಿಮಗೋಸ್ಕರ ಸತ್ತ ನನಗೆ ಅಕ್ಷಯವಾದ ಲೋಕಗಳು ಸಿಗುತ್ತವೆ. ಪ್ರತಿಜ್ಞಾ ಪಾಲನೆ ಮಾಡಿದ ನಿಮಗಾವ ಪಾಪವೂ ಬರುವುದಿಲ್ಲ. ಪುತ್ರ ಮರಣದ ದುಃಖವನ್ನು ಬಿಡಿರಿ. ನನ್ನ ಶೋಕ ರೋಗಮಯವಾದ ದೇಹವು ಹೋಗಿ ನನಗೆ ಅಮರ ದೇಹವು ಪ್ರಾಪ್ತವಾಗುತ್ತದೆ. ತಾಯಿ ತಂದೆಗಳಿಗಾಗಿ ದೇಹವನ್ನು ಬಿಡುವ ಪುತ್ರರು, ಗೋವು, ಬ್ರಾಹ್ಮಣ, ಹೆಂಗಸು, ಭೂಮಿ, ರಾಜ, ದೇವತೆ, ಬಾಲಕ, ಹಾಗೂ ಆರ್ತರು ಇವರಿಗಾಗಿ ಪ್ರಾಣ ಬಿಡುವವರಿಗೆ ತೇಜೋಮಯವಾದ ಅಕ್ಷಯ ಲೋಕಪ್ರಾಪ್ತಿಯಾಗುತ್ತದೆ. ಆದ್ದರಿಂದ ನೀವು ಶೋಕ ಸಂತಾಪಗಳನ್ನು ಬಿಟ್ಟು ಈ ಖಡ್ಗದಿಂದ ನನ್ನನ್ನು ಕೊಲ್ಲಿರಿ, ಏಕಾದಶಿ ದಿನ ಭೋಜನ ಮಾಡಬೇಡಿರಿ. ಮೋಹಿನಿ ದೇವಿಗೆ ಬಲಗೈಯಿಂದ ಶಪಥ ಮಾಡಿ ನೀವು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡಿರಿ. ಪ್ರತಿಜ್ಞಾಭಂಗ ಮಾಡಿ, ಅಸತ್ಯವನ್ನಾಡಿ, ಅಪಕೀರ್ತಿ ಮತ್ತು ಪಾಪಗಳನ್ನು ಕಟ್ಟಿಕೊಳ್ಳಬೇಡಿರಿ."

## ರುಕ್ಮಾಂಗದನು ಪುತ್ರವಧಕ್ಕೆ ಸಿದ್ಧನಾದನು. ಭಗವಂತನು ಪ್ರತ್ಯಕ್ಷನಾದನು

**ವಸಿಷ್ಠರು:-** ಮಗನ ಮಾತನ್ನು ಕೇಳಿ ರುಕ್ಮಾಂಗದನು ಹರಿಸ್ಮರಣೆಯಿಂದ ಕಮಲದಂತೆ ಅರಳಿದ ಸಂಧ್ಯಾವಲಿಯ ಮುಖವನ್ನು ನೋಡಿದನು. ಮೋಹಿನಿಯ ಮಾತನ್ನು ಮನಸ್ಸಿನಲ್ಲಿಯೇ ಪರ್ಯಾಲೋಚಿಸಿದನು. 'ಏಕಾದಶಿಯ ದಿನ ಭೋಜನ ಮಾಡು.

ಮಗನನ್ನು ಕೊಲ್ಲಬೇಡ. ಭೋಜನ ಮಾಡುವುದಿಲ್ಲವಾದರೆ ಮಗನನ್ನು ಕೊಲ್ಲು, ಪುನಃ ಪುನಃ ಆ ದುರಾಗ್ರಹವನ್ನೇ ಅವಳು ಮುಂದಿಡುತ್ತಿದ್ದಾಳೆ. ರಾಜನು ಒಂದು ನಿರ್ಧಾರಕ್ಕೆ ಬಂದು ಕಾರ್ಯತತ್ಪರನಾಗುತ್ತಾನೆ. ಅದೇ ಸಮಯದಲ್ಲಿ ಆಕಾಶದಲ್ಲಿ ಮೇಘಶ್ಯಾಮಲ ಗರುಡಾರೂಢ, ನಿರ್ಮಲ, ನಿರ್ದೋಷ, ನಿರಂಜನ, ನಿತ್ಯ, ಸಚ್ಚಿದಾನಂದ ಸ್ವರೂಪಿಯಾದ ನಾರಾಯಣನು ಅದೃಶ್ಯರೂಪದಿಂದ ಆಕಾಶದಲ್ಲಿ ಬಂದು ನಿಂತನು. ರಾಜನು ಗರುಡಧ್ವಜಗೋವಿಂದನಿಗೆ ಮನಸಾ, ಶಿರಸಾ, ದೇಹದಿಂದಲೂ ಪ್ರಣಾಮಮಾಡಿ ಹೊಳೆಯುತ್ತಿರುವ ಖಡ್ಗವನ್ನು ಮೇಲಕ್ಕೆತ್ತಿದನು. ಧರ್ಮಾಂಗದನು, ಮೋಹಿನಿ, ತಾಯಿ, ತಂದೆ ಭಗವಂತನಿಗೆ ನಮಿಸಿ, ನೆಲದಲ್ಲಿ ಕತ್ತು ಬಗ್ಗಿಸಿ ಕುಳಿತು. ಒಂದು ಬಾರಿ ತನ್ನ ತಾಯಿ ಸಂಧ್ಯಾವಲಿಯನ್ನು ನೋಡಿ, ಕೈಮುಗಿದು ಭಗವಂತನ ಧ್ಯಾನದಲ್ಲಿ ಮಗ್ನನಾದನು. ಅವನ ಕತ್ತಿನ ಮೇಲ್ಭಾಗದಲ್ಲಿ ಕತ್ತಿಯು ಸರಿಯಾಗಿ ನಿಂತು ಇನ್ನೇನು ಒಂದು ಕ್ಷಣದಲ್ಲಿ ಅವನ ಶಿರಸ್ಸನ್ನು ದೇಹದಿಂದ ಬೇರ್ಪಡಿಸಲು ಸಿದ್ಧವಾಗಿತ್ತು. ಧರ್ಮಾಂಗದನ ಮುಖವು ಆಗಲೂ ಪ್ರಸನ್ನವಾಗಿತ್ತು. ಅಷ್ಟರಲ್ಲಿ ವೃಕ್ಷಪರ್ವತ ಸಹಿತವಾದ ಸಮಸ್ತಭೂಮಂಡಲವೂ ಗಡಗಡನೆ ನಡುಗಲಾರಂಭಿಸಿತು. ಸಮುದ್ರದಲ್ಲಿ ಅಲೆಗಳ ಕೋಲಾಹಲವುಂಟಾಯಿತು. ಆಕಾಶದಲ್ಲಿ ಮಿಂಚು ಮತ್ತು ಗುಡುಗಿನ ಸದ್ದು ಕೇಳಿಸಿತು. ಉಲ್ಕಾಪಾತವಾಯಿತು. ಮೋಹಿನಿಯ ಮುಖವು ಕೆಳಗುಂದಿತು. ಅಯ್ಯೋ ಬ್ರಹ್ಮನು ನನಗೀರೂಪವನ್ನು ಕೊಟ್ಟು ವ್ಯರ್ಥವಾಗಿ ಸೃಷ್ಟಿಸಿದನು. ನನ್ನ ಇಂತಹ ಮೋಹಕ ವಿಲಾಸಮಯ ರೂಪವನ್ನು ನೋಡಿಯೂ ರಾಜನು ಏಕಾದಶಿಯನ್ನು ಬಿಡಲಿಲ್ಲ. ಅವನೇನೂ ತಿನ್ನಲಿಲ್ಲ. ನಾನಿನ್ನು ಸ್ವರ್ಗದಲ್ಲಿ ಇರಲಿ ಎಲ್ಲೇ ಇರಲಿ. ಹುಲ್ಲು ಕಡ್ಡಿಗಿಂತಲೂ ಕೀಳಾದೆ. ರಾಜನು ಮೋಕ್ಷಕ್ಕೆ ಹೋಗುವನು. ನಾನು ನರಕಕ್ಕೆ ಬಿದ್ದೆನು.'' ಎಂದು ಆಲೋಚಿಸುತ್ತಿರುವ ಮೋಹಿನಿಯು - ರಾಜನು ಖಡ್ಗಪ್ರಹಾರ ಮಾಡುತ್ತಿರುವುದನ್ನು ನೋಡುತ್ತಿದ್ದಂತೆ 'ಹಾ' ಎಂದು ಚೀರಿ ಮೂರ್ಛಿತಳಾಗಿ ಕೆಳಗೆ ಬಿದ್ದಳು. ಅಷ್ಟರಲ್ಲಿ ಶ್ರೀಮನ್ನಾರಾಯಣನು ಅಲ್ಲಿ ಪ್ರತ್ಯಕ್ಷವಾಗಿ ರಾಜನ ಕೈಹಿಡಿದು ನಿಲ್ಲಿಸಿ - ''ರಾಜನೇ, ನಾನು ಪ್ರಸನ್ನನಾಗಿದ್ದೇನೆ. ನಿಲ್ಲಿಸು - ಮಗನನ್ನು ಕೊಲ್ಲಬೇಡ. ನೀನು ಪುತ್ರಕಳತ್ರಸಹಿತನಾಗಿ, ನನ್ನನ್ನು ಸೇರಿ, ವೈಕುಂಠಕ್ಕೆ ನಡೆ. ನಿನ್ನ ಕೀರ್ತಿ ಭೂಲೋಕದಲ್ಲಿ ಶಾಶ್ವತವಾಗಿರಲಿ. ಯಮನ ಶಾಸನವನ್ನು ಭಂಗಗೊಳಿಸಿದ ಧೀರ, ನಿನ್ನ ಕೀರ್ತಿಯು ದಿಗ್ ದಿಗಂತಗಳಲ್ಲಿ ವ್ಯಾಪಿಸಲಿ.'' ಎಂದು ಹೇಳುತ್ತಾ ಭಗವಂತನು ರುಕ್ಮಾಂಗದನನ್ನು ಮುಟ್ಟಿದ ಕೂಡಲೇ ಮೋಹಿನಿಯಲ್ಲಿಯ ಆಸಕ್ತಿಗೆ ಕಾರಣವಾದ ಅವನ ರಜೋಗುಣವು ಮಾಯವಾಯಿತು. ಪತ್ನೀಪುತ್ರಸಹಿತನಾದ ಅವನು ಪರಮಾತ್ಮನ ದಿವ್ಯ ತೇಜಸ್ಸಿನೊಳಗೆ ಸೇರಿಹೋದನು. ಪುಷ್ಪವೃಷ್ಟಿ, ದಿವ್ಯ ದುಂದುಭಿಗಳ ನಾದದ ಸಂಭ್ರಮದಲ್ಲಿ ಯಮನು ನೋಡುತ್ತಿರುವಾಗಲೇ ರಾಜನು ವೈಕುಂಠವನ್ನೇರಿದನು. ರಾಜನ ರಾಜ್ಯದ ಪ್ರಜೆಗಳೂ ವೈಕುಂಠವನ್ನೇರುತ್ತಿದ್ದರು. ಇದನ್ನೆಲ್ಲಾ ನೋಡಿ ಕಾಲಿಂದೀ ಸಹೋದರನಾದ ಯಮನ ಮುಖವು ಮತ್ತಷ್ಟು ಕಪ್ಪಾಯಿತು. ಅವನು ಕೂಡಲೇ ಬ್ರಹ್ಮದೇವರ ಬಳಿಗೆ ಓಡಿ-''ಸುರ ಲೋಕನಾಥ, ಜಗತ್ ಸೃಷ್ಟಿಕರ್ತ, ನನ್ನ ಈ ಪದವಿಯಿಂದ ನಾನು ನಿವೃತ್ತನಾಗುತ್ತೇನೆ. ನನ್ನ ಅಪ್ಪಣೆಗೆ ಜಗತ್ತಿನಲ್ಲಿ ಸ್ವಲ್ಪವೂ ಬೆಲೆಯಿಲ್ಲ. ನನಗೆ ಬೇರೆ ಯಾವುದಾದರೂ ಕಾರ್ಯವನ್ನು ಒಪ್ಪಿಸಿರಿ. ಈ ಪಾಪಿಗಳಿಗೆ ಶಿಕ್ಷೆ ಕೊಡುವ ಈ ಅಧಿಕಾರವು ಬೇಡ' ಎಂದು ಹೇಳುತ್ತಾ ಅಂಗಲಾಚಿದನು.

## ಮೋಹಿನಿ ಭಸ್ಮವಾದಳು

**ಯಮರಾಜನು:-** ಸತ್ಯಲೋಕನಾಥ, ತಮ್ಮ ಪುತ್ರಿ ಮೋಹಿನಿಯು ಮೂರ್ಛಿತಳಾಗಿ ನೆಲದ ಮೇಲೆ ಬಿದ್ದಿದ್ದಾಳೆ. ಪುನಃ ನಿಮ್ಮ ಬಳಿಗೆ ಬರಲಾರಳು. ಎಲ್ಲರೂ ಅವಳಿಗೆ ಧಿಕ್ಕಾರ! ಧಿಕ್ಕಾರ! ಎಂದು ಹೇಳುತ್ತಿದ್ದಾರೆ. ಅವಳು ಭೋಜನಾದಿ ಸಮಸ್ತ ವ್ಯವಹಾರವನ್ನು ಬಿಟ್ಟಿದ್ದಾಳೆ. ನನ್ನ ಕೆಲಸವೆಲ್ಲವೂ ನಿಂತು ಹೋಗಿದೆ? ಮುಂದೇನು ಮಾಡಬೇಕೆಂದು ಅಪ್ಪಣೆಯಾಗಬೇಕು.

**ಬ್ರಹ್ಮ:-** ನಾವೆಲ್ಲರೂ ಮೋಹಿನಿಗೆ ಪುನಃ ಪ್ರಜ್ಞೆ ಬರುವಂತೆ ಮಾಡೋಣ. ''ಈ ರೀತಿ ಹೇಳಿ ಸಮಸ್ತ ದೇವತೆಗಳ ಜೊತೆಗೆ ಬ್ರಹ್ಮದೇವರು ಭೂಲೋಕಕ್ಕೆ ಬಂದರು. ಮೋಹಿನಿಯ ಸುತ್ತಲೂ ವಿಮಾನಾರೂಢರಾದ ದೇವತೆಗಳ ಸಮೂಹವು ನಿಂತಿತು. ಮದಮೋಹಗಳಿಂದ ಸಹಿತವಾದ ಆಧ್ಯಾತ್ಮಿಕ ಜ್ಞಾನ, ದಂಭಯುಕ್ತ ಧರ್ಮದಂತೆ ಅವಳು ಶೋಚನೀಯಾವಸ್ಥೆಯಲ್ಲಿ ಬಿದ್ದಿದ್ದಳು. ದೇವತೆಗಳು ಬಂದು ಹೀಗೆ ಹೇಳುತ್ತಾ ಅವಳಿಗೆ ಸಾಂತ್ವನೆಯನ್ನುಂಟು ಮಾಡಲು ಪ್ರಯತ್ನಿಸಿದರು. ''ಸುಂದರಿ, ನೀನು ದುಃಖಿಸಬೇಡ, ನೀನು ಪ್ರಯತ್ನ ಮಾಡಿದೆ. ಆದರೆ ವಿಷ್ಣು ಭಕ್ತರ ಮಾನವೆಂದೂ ಖಂಡಿತವಾಗಲಾರದು. ವೈಶಾಖ ಮಾಸದ ಶುಕ್ಲ ಪಕ್ಷದ ಮೋಹಿನೀ ಏಕಾದಶಿಯ ದಿನ ರುಕ್ಮಾಂಗದನು ಮೊದಲು ಉಪವಾಸ ಪ್ರಾರಂಭ ಮಾಡಿದ್ದನು. ಸಮಸ್ತ ವಿಘ್ನನಾಶಕವಾದ ಆ ಉಪವಾಸದ ಜೊತೆಗೆ ಪಾದಕೃಚ್ಛ್ರವ್ರತವನ್ನು ಮಾಡುತ್ತ ಶ್ರೀಹರಿಯ ಪೂಜೆಯನ್ನು ಮಾಡಿದ್ದನು. ಆದ್ದರಿಂದ ರುಕ್ಮಾಂಗದನ ಮನಸ್ಸು ಏಕಾದಶೀ ವ್ರತದಿಂದ ವಿಚಲಿತವಾಗಲಿಲ್ಲ. ತನ್ನ ವ್ರತಕ್ಕೋಸ್ಕರ, ಸತ್ಯಪರಿಪಾಲನೆಗೋಸ್ಕರ, ಮಗನನ್ನು ಕೊಲ್ಲಲು ಉದ್ಯುಕ್ತನಾದ ರಾಜನಿಗೆ ಮಧುಸೂದನನ ಮಹಾನುಗ್ರಹ ಉಂಟಾದುದು ಸರಿಯಾಗಿಯೇ ಇದೆ. ಮೋಹಿನಿ, ನೀನು ಮಾಡಿದ ಪ್ರಯತ್ನಕ್ಕೆ ಫಲ ಸಿದ್ಧಿಯಾಗದಿದ್ದರೂ ಶೋಕಿಸಬೇಡ. ಇದರಲ್ಲಿ ನಿನ್ನದೇನೂ ತಪ್ಪಿಲ್ಲ. ನಾವೆಲ್ಲರೂ ದೇವತೆಗಳು ನಿನಗೆ ವರವನ್ನು ಕೊಡುವುದಕ್ಕಾಗಿ ಬಂದಿದ್ದೇವೆ. ಕಾರ್ಯ ಸಿದ್ಧಿಯಾಗದಿದ್ದರೂ ಕೆಲಸ ಮಾಡಿದ ಸೇವಕನಿಗೆ ವೇತನವನ್ನು ಕೊಡಬೇಕಲ್ಲವೆ ?'' ದೇವತೆಗಳ ಈ ಮಾತನ್ನು ಕೇಳಿ, ಆನಂದ ಹೀನಳಾದ ಮೋಹಿನಿಯು ದುಃಖದಿಂದ ಬಿಸಿಯುಸಿರು ಬಿಡುತ್ತಾ ಹೇಳಿದಳು - ''ದೇವೇಶ್ವರರೇ! ನಾನು ಯಾವ ಕಾರ್ಯಕ್ಕಾಗಿ ಬಂದಿದ್ದೆನೋ ಅದರಲ್ಲಿ ಸ್ವಲ್ಪವನ್ನೂ ಮಾಡಲಿಲ್ಲ. ರಾಜನು ಸರ್ವವ್ಯಾಪ್ತನಾದ ಭಗವಂತನಲ್ಲಿ ಸೇರಿ ಹೋದನು. ನಾನು ಉಪಯೋಗವಿಲ್ಲದ ಮುದಿಕುದುರೆಯಂತೆ, ಪಶುವಿನಂತೆ ತಿರಸ್ಕಾರಕ್ಕೆ ಪಾತ್ರಳಾಗಿದ್ದೇನೆ. ಪತಿ ಪುತ್ರ ನಾಶಕಳಾದ, ಯಾವ ಕಾರ್ಯಸಿದ್ಧಿಯೂ ಇಲ್ಲದ ನನಗೇಕೆ ವರ ಕೊಡುವಿರಿ?

**ದೇವತೆಗಳು:-** ಮೋಹಿನಿ! ನಿನಗೆ ಏನು ಬೇಕೋ ಅದನ್ನೇ ಕೇಳು. ನಾವು ನಿನ್ನ ಅಭಿಲಾಷೆಯನ್ನು ನೆರವೇರಿಸುವೆವು.'' ಈ ರೀತಿ ಇಲ್ಲಿ ಮಾತುಕತೆಗಳು ನಡೆಯುತ್ತಿರುವಾಗ ರುಕ್ಮಾಂಗದ ಮಹಾರಾಜನ ಪುರೋಹಿತನು ಅಲ್ಲಿಗೆ ಬಂದನು. ಮಹಾಮುನಿಯಾದ ಅವನು ಹನ್ನೆರಡು ವರ್ಷಗಳ ಪರ್ಯಂತ ನೀರಿನಲ್ಲಿ ನಿಂತು ಯೋಗ ಸಾಧನೆಯನ್ನು ಮಾಡುತ್ತಿದ್ದನು. ಹನ್ನೆರಡನೇ ವರ್ಷವು ಮುಗಿದು ಅವನು ನೀರಿನಿಂದ ಹೊರಗೆ ಬಂದಕೂಡಲೇ ಮೋಹಿನಿಯ ಭಯಂಕರ ವ್ಯವಹಾರವನ್ನು ಕೇಳಿ ಅಗ್ನಿಯಂತೆ ಕೋಪದಿಂದ

ಜ್ವಲಿಸುತ್ತ ಅಲ್ಲಿಗೆ ಬಂದು ಮೋಹಿನಿಗೆ ವರಕೊಡಲು ಸನ್ನದ್ಧರಾದ ದೇವತೆಗಳನ್ನು ಕುರಿತು ಹೀಗೆಂದನು - ''ಈ ಮೋಹಿನಿಗೆ ವರಕೊಡಲು ಬಂದ ನಿಮಗೆ ಧಿಕ್ಕಾರ, ಈ ಮೋಹಿನಿಗೂ ಧಿಕ್ಕಾರ; ನಾರಿಯರಿಗೆ ಉಚಿತವಲ್ಲದ ನೈಷ್ಠುರ್ಯ, ದುರಾಗ್ರಹಗಳಿಂದ ಗೃಹೀತಳಾದ, ಹತ್ಯೆಯ ಪಾಪವನ್ನು ಹೊತ್ತ ಈ ಪಾಪಿನಿಗೆ ವರವನ್ನು ಸರ್ವಥಾ ಕೊಡಕೂಡದು. ಇವಳು ಅಗ್ನಿ ಪ್ರವೇಶ ಮಾಡಿ ಸುಟ್ಟು ಹೋದರೂ ಇವಳಿಗೆ ಪ್ರಾಯಶ್ಚಿತ್ತವಿಲ್ಲ. ನರಕದಲ್ಲಿಯೂ ಇವಳಿಗೆ ಸ್ಥಾನವಿಲ್ಲ. ಪತಿಯ ಮಾತನ್ನು ಮೀರದೆ ನಡೆಸಿಕೊಡುವುದೇ ಸತಿಯ ಧರ್ಮ. ಅಂತಹ ಸತೀತ್ವವು ಇವಳಲ್ಲಿ ಲವಲೇಶವೂ ಇಲ್ಲ. ಎಲ್ಲರಲ್ಲಿಯೂ ಇರುವ ಪಾಪವು ಇವಳೊಬ್ಬಳಲ್ಲಿಯೇ ಸೇರಿಕೊಂಡಿದೆ. ದೇವತೆಗಳೇ! ಮೋಹಿನಿಯ ಪಕ್ಷವನ್ನು ವಹಿಸಿ ಬಂದವರು ಯಾರೇ ಆಗಲಿ, ದೇವತೆಗಳು. ದಾನವರು ಎಲ್ಲರನ್ನೂ ನಾನು ಭಸ್ಮಮಾಡುತ್ತೇನೆ. ಮೋಹಿನಿಯನ್ನು ರಕ್ಷಿಸಲು ಬಂದವನಿಗೆ ಅವಳಲ್ಲಿರುವ ಪಾಪವೆಲ್ಲ ತಗಲುತ್ತದೆ.''

ಹೀಗೆ ಹೇಳಿದ ಆ ದ್ವಿಜಶ್ರೇಷ್ಠನು ತನ್ನ ಕಮಂಡಲುವಿನಿಂದ ತಪಃಶಕ್ತಿ ಭರಿತವಾದ ಜಲವನ್ನು ಬಗ್ಗಿಸಿ ಅಂಗೈಯಲ್ಲಿ ಹಾಕಿಕೊಂಡು, ಕ್ರೋಧ ಪೂರ್ಣವಾದ ದೃಷ್ಟಿಯಿಂದ ಮೋಹಿನಿಯನ್ನು ನೋಡುತ್ತ ಅವಳ ತಲೆಯ ಮೇಲೆ ಆ ನೀರನ್ನು ಪ್ರೋಕ್ಷಿಸಿದನು. ಕೂಡಲೇ ಆ ನೀರಿನಿಂದ ಬೆಂಕಿಯ ಜ್ವಾಲೆಗಳು ಏಳಲಾರಂಭಿಸಿದವು. ಮೋಹಿನಿಯ ದೇಹದ ಸುತ್ತಲೂ ಆ ಜ್ವಾಲೆಗಳು ವ್ಯಾಪಿಸಿ, ಒಣಹುಲ್ಲನ್ನು ಸುಡುವಂತೆ ಮೋಹಿನಿಯನ್ನು ಸುಟ್ಟು ಬಿಟ್ಟವು. 'ಪ್ರಭೂ! ಮುನೀಂದ್ರ, ಸಿಟ್ಟನ್ನು ತಡೆಯಿರಿ' ರಕ್ಷಿಸಿ ಎಂದು ದೇವತೆಗಳು ಆಕಾಶದಲ್ಲಿ ಪ್ರಾರ್ಥಿಸುತ್ತಿದ್ದಂತೆ ಬ್ರಾಹ್ಮಣನ ಶಾಪಾಗ್ನಿ, ಶಾಪವಚನ, ಶಾಪ, ಜಲಗಳಿಂದ ಸುಂದರಾತಿಸುಂದರಿಯಾದ ಮೋಹಿನಿಯು ಸುಟ್ಟು ಒಂದು ಹಿಡಿ ಭಸ್ಮವಾದಳು.

## ಮೋಹಿನಿಯ ಯಾಚನೆ

**ವಸಿಷ್ಠರು:-** ರಾಜನ್! ಮೋಹಿನಿಯು ಮೋಹಮಯ ಶರೀರವನ್ನು ಬಿಟ್ಟು ದೇವಲೋಕಕ್ಕೆ ಹೋದಳು. ಅಲ್ಲಿ ದೇವದೂತ ವಾಯು ದೇವನು 'ಪಾಪ ಸ್ವಭಾವದವಳೇ, ನೀಚ ಬುದ್ಧಿಯವಳೇ, ಏಕಾದಶೀ ಕಂಟಕಳೇ, ನಿನಗೆ ಇಲ್ಲಿ ಸ್ಥಳವಿಲ್ಲ', ಎಂದು ಹೇಳುತ್ತ ದಂಡದಿಂದ ಮೋಹಿನಿಯನ್ನು ಹೊಡೆದು ಓಡಿಸಿ ಯಾತನಮಯ ನರಕಕ್ಕೆ ಕಳುಹಿಸಿದನು. ಕೂಡಲೇ ಯಮದೂತರು ಅಸ್ತ್ರ ಶಸ್ತ್ರಗಳಿಂದ ಹೊಡೆದು ಹೊಡೆದು ಮೋಹಿನಿಯನ್ನು ನರಕದಿಂದ ಹೊರಕ್ಕೆ ತಳ್ಳಿದರು. ಆಗ ದಿಙ್ಮೂಢಳಾದ ಮೋಹಿನಿಯು ಬ್ರಹ್ಮ ದೇವರಿಗೆ ಶರಣು ಹೋದಳು. ಆಗ ಲೋಕ ಪಿತಾಮಹರಾದ ಬ್ರಹ್ಮದೇವರು, ಶಿವ, ಇಂದ್ರ, ಧರ್ಮ, ಸೂರ್ಯ ಅಗ್ನಿ ಮುಂತಾದ ದೇವತೆಗಳು, ಋಷಿಗಳು ಎಲ್ಲರನ್ನೂ ಕರೆದುಕೊಂಡು ಮೋಹಿನಿಯನ್ನು ಮುಂದಿಟ್ಟುಕೊಂಡು ರುಕ್ಮಾಂಗದನ ಪುರೋಹಿತರ ಬಳಿಗೆ ಹೋದರು. ಬ್ರಹ್ಮದೇವರು ಆ ಬ್ರಾಹ್ಮಣನಿಗೆ ನಮಸ್ಕರಿಸಿದರು. ಬ್ರಹ್ಮದೇವರು ರುದ್ರಾದಿ ದೇವತೆಗಳಿಗೆ ಪೂಜ್ಯರಾದರೂ. ಮೋಹಿನಿಗೋಸ್ಕರ ತಾವೇ ಬ್ರಾಹ್ಮಣನನ್ನು ಗೌರವಿಸಿ ವಂದಿಸಿದರು. ಮಹತ್ತ್ವದ ಕಾರ್ಯ ಸಾಧನೆಗೋಸ್ಕರ ದೊಡ್ಡವರೂ ಚಿಕ್ಕವರನ್ನು ನಮಸ್ಕಾರ ಮಾಡುತ್ತಾರೆ. ಅದು ತಪ್ಪಲ್ಲ. ಆದರಿಂದ ಪಾಪವೂ ಇಲ್ಲ. ವೇದ ವೇದಾಂಗ ಪಾರದರ್ಶಿಯಾದ ಆ ವಿದ್ವಾಂಸನಾದ ಬ್ರಾಹ್ಮಣನು ಬ್ರಹ್ಮದೇವರೇ ಬಂದಿರುವುದನ್ನು

ನೋಡಿ ಎದ್ದು ನಿಂತು ಎಲ್ಲರಿಗೂ ನಮಸ್ಕರಿಸಿ, ಆಸನದಲ್ಲಿ ಕುಳ್ಳಿರಿಸಿ, ಬ್ರಹ್ಮದೇವರನ್ನು ನಾನಾ ರೀತಿಯಿಂದ ಸ್ತುತಿಸಿದನು. ಪ್ರಸನ್ನರಾದ ಬ್ರಹ್ಮದೇವರು ಆ ಬ್ರಾಹ್ಮಣನ್ನು ಕುರಿತು ಈ ರೀತಿ ಕೇಳಿದರು - ''ಸದ್ ಬ್ರಾಹ್ಮಣನೇ, ನೀನು ಸದಾಚಾರಿ, ಲೋಕ ಪರಲೋಕೋಪಕಾರಿ, ಕೃಪಾಸಿಂಧುವಾಗಿದ್ದೀ. ಈ ಮೋಹಿನಿಯು ನನ್ನ ಮಗಳು. ಇವಳಿಗೆ ಸದ್ಗತಿಯಾಗುವಂತೆ ಅನುಗ್ರಹಿಸು. ಯಮಲೋಕವು ರುಕ್ಮಾಂಗದನು ನಡೆಸುತ್ತಿರುವ ಏಕಾದಶಿ ವ್ರತದಿಂದ ಶೂನ್ಯವಾಗುತ್ತಿರುವುದನ್ನು ನೋಡಿ ರುಕ್ಮಾಂಗದನಿಗೆ ಮೋಹವನ್ನುಂಟು ಮಾಡಲು ನಾನೇ ಇವಳನ್ನು ಸೃಷ್ಟಿಮಾಡಿ ಕಳುಹಿಸಿದ್ದೆನು.''

ಬ್ರಹ್ಮದೇವರು ಎಲ್ಲಾ ದೇವತೆಗಳೊಡನೆ ವಿಚಾರ ವಿಮರ್ಶೆ ಮಾಡಿ ಮೋಹಿನಿಯೊಡನೆ ಹೇಳಿದರು - 'ಮೋಹಿನಿ ನಿನಗೆಲ್ಲಿಯೂ ಸ್ಥಾನವಿಲ್ಲ' ಮೋಹಿನಿಯು ಎಲ್ಲರಿಗೂ ನಮಸ್ಕಾರ ಮಾಡಿ ಹೇಳಿದಳು - ದೇವ ಶ್ರೇಷ್ಠರೇ! ನೀವೆಲ್ಲರೂ ಲೋಕ ಸಾಕ್ಷಿಗಳು. ಈ ಪುರೋಹಿತರಿಂದ ಸಹಿತರಾದ ನಿಮಗೆ ನೂರು ನೂರು ಬಾರಿ ನಮಸ್ಕಾರ ಮಾಡಿ ಬೇಡಿಕೊಳ್ಳುತ್ತೇನೆ. ನೀವೆಲ್ಲರೂ ಪ್ರಸನ್ನರಾಗಿ ನನ್ನ ಪ್ರಾರ್ಥನೆಯನ್ನು ನಡೆಸಿಕೊಡಬೇಕು. ಯಾವುದಾದರೊಂದು ದೋಷದಿಂದ ಕಳಂಕಿತವಾದ ಏಕಾದಶಿಯು ನನ್ನದಾಗಲಿ, ಆ ರೀತಿಯಾಗಿ ನೀವು ಅನುಗ್ರಹ ಮಾಡಿರಿ.

## ಮೋಹಿನಿಗೆ ದಶಮಿಯ ಕೊನೆಯ ಭಾಗದಲ್ಲಿ ವಾಸ ಮತ್ತು ಪುನಃ ಶರೀರಪ್ರಾಪ್ತಿ

**ದೇವತೆಗಳು:-** ಮೋಹಿನಿ ಮಧ್ಯರಾತ್ರಿಯ ಕಾಲದಲ್ಲಿ ಯಾವ ಏಕಾದಶಿಗೆ ದಶಮಿಯ ವೇಧವಿರುತ್ತದೆಯೋ ಅದು ದೇವೋಪಕಾರಕ. ಸೂರ್ಯೋದಯದಲ್ಲಿ ದಶಮೀ ವೇಧವುಳ್ಳ ಏಕಾದಶಿಯು ಅಸುರರಿಗೆ ಲಾಭದಾಯಕ. ಈ ವ್ಯವಸ್ಥೆಯನ್ನು ಸಾಕ್ಷಾತ್ ನಾರಾಯಣನೇ ಮಾಡಿದ್ದಾನೆ. ಇಂತಹ ದಶಮೀ ವಿದ್ಧ ಏಕಾದಶಿಯ ದಿನ ಉಪವಾಸ ಮಾಡದೆ ದ್ವಾದಶಿ ಉಪವಾಸ ಮಾಡಿ ತ್ರಯೋದಶೀ ದಿನ ಪಾರಣೆ ಮಾಡಬೇಕು. ವೈಷ್ಣವ ಶಾಸ್ತ್ರದಲ್ಲಿ ಹೇಳಿರುವ ಎಂಟು ಮಹಾ ದ್ವಾದಶಿಗಳು ಉಪೋಷ್ಯಗಳು. ಅವು ಸಾಮಾನ್ಯ ಏಕಾದಶಿಗಿಂತ ಭಿನ್ನವಾಗಿವೆ. 'ಉನ್ಮೀಲನೀ', 'ವಂಜುಲೀ', 'ತ್ರಿಸ್ಪೃಶಾ' 'ಪಕ್ಷವರ್ಧಿನೀ', 'ಜಯಾ', 'ವಿಜಯಾ', 'ಜಯಂತೀ', 'ಪಾಪನಾಶಿನೀ' ಇವೇ ಎಂಟು ಮಹಾ ದ್ವಾದಶೀಗಳು, ಇವುಗಳಲ್ಲಿ ಮೊದಲಿನ ನಾಲ್ಕು ದ್ವಾದಶಿಗಳು ತಿಥಿಯ ಸಂಬಂಧದಿಂದ ವಿಶೇಷವಾದ ಹೆಸರುಗಳನ್ನು ಹೊಂದಿವೆ. ಕೊನೆಯ ನಾಲ್ಕು ದ್ವಾದಶಿಗಳು ನಕ್ಷತ್ರಗಳ ಸಂಬಂಧದಿಂದ ಉಂಟಾಗಿವೆ. ದಶಮೀ ವೇಧ ರಹಿತವಾದ ಏಕಾದಶಿಯು ಒಂದು ದಿನ ಪೂರ್ತಿಯಾಗಿದ್ದು ಮರು ದಿನವೂ ಸ್ವಲ್ಪ ಹೊತ್ತು ಇದ್ದರೆ, ದ್ವಾದಶಿಯು ವೃದ್ಧಿಹೊಂದಿದ್ದರೆ. 'ಉನ್ಮೀಲನೀ' ದ್ವಾದಶೀ. ಏಕಾದಶಿ ಒಂದೇ ದಿನವಿದ್ದು, ದ್ವಾದಶಿಯು ವೃದ್ಧಿಹೊಂದಿ ಮರುದಿನವೂ ಇದ್ದರೆ ಅದು 'ವಂಜುಲೀ' ದ್ವಾದಶೀ - ಈ ಎರಡು ಸಂದರ್ಭಗಳಲ್ಲಿಯೂ ದ್ವಾದಶಿ ಉಪವಾಸ ಮರುದಿನ ದ್ವಾದಶಿಯಲ್ಲಿ ಪಾರಣೆಯಾಗುತ್ತದೆ. ಅರುಣೋದಯ ಕಾಲದಲ್ಲಿ ಏಕಾದಶೀ ದಿನ ಪೂರ್ತಿ ದ್ವಾದಶೀ ಮರುದಿನ ಬೆಳಿಗ್ಗೆ ತ್ರಯೋದಶೀ ಬಂದರೆ 'ತ್ರಿಸ್ಪೃಶಾ', ಯಾವ ಪಕ್ಷದಲ್ಲಿ ಅಮಾವಾಸ್ಯೆ ಅಥವಾ ಹುಣ್ಣಿಮೆಯು ಅರಘಳಿಗೆ ಇದ್ದು ಮರುದಿನವೂ ಸ್ವಲ್ಪ ಹೊತ್ತು ಇದ್ದರೆ ಆ ಪಕ್ಷದ ದ್ವಾದಶಿಗೆ 'ಪಕ್ಷವರ್ಧಿನೀ' ಎಂದು ಹೆಸರು. ದ್ವಾದಶೀ

ಪುನರ್ವಸುಯೋಗವಿದ್ದಾಗ 'ಜಯಾ', ದ್ವಾದಶೀ. ಶ್ರವಣ ನಕ್ಷತ್ರ ಯೋಗವಿದ್ದಾಗ, 'ಜಯಂತೀ' ಎಂಬ ದ್ವಾದಶಿಗಳಾಗುತ್ತವೆ.

ವೈಷ್ಣವರು ಈ ದ್ವಾದಶಿಗಳಲ್ಲಿ ಉಪವಾಸ ಮಾಡುತ್ತಾರೆ. ವೈಷ್ಣವರ ಏಕಾದಶೀ ವ್ರತವೇ ಬೇರೆ ತರಹದ್ದು. ಅದು ನಿತ್ಯವ್ರತವು, ದಶಮೀ ದಿನ ರಾತ್ರಿ ಊಟವಿಲ್ಲದೆ ಇದ್ದು ಏಕಾದಶಿ ಉಪವಾಸವಾಗಿದ್ದು ದ್ವಾದಶಿಯ ರಾತ್ರಿಯಲ್ಲಿಯೂ ಊಟವಿಲ್ಲದೆ ಇದ್ದರೆ ಈ ಮೂರು ದಿನಗಳ ಏಕಾದಶೀ ವ್ರತವು ಪೂರ್ತಿಯಾಗುತ್ತದೆ. ದಶಮೀವಿದ್ಧವಾದ ಏಕಾದಶಿಯನ್ನು ಬಿಟ್ಟು ಮರುದಿನ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು. ಸರ್ವಥಾ ಉಪವಾಸ ಮಾಡಲು ಅಶಕ್ತರು, ಜಲ, ಶಾಕ, ಫಲ, ಹಾಲು ಅಥವಾ ದೇವರಿಗೆ ಸಮರ್ಪಿಸಿದ (ಅನ್ನದ ಹೊರತು) ಯಾವುದಾದರೊಂದು ನೈವೇದ್ಯ ಪದಾರ್ಥವನ್ನು ಸ್ವೀಕರಿಸಬಹುದು. ಆದರೆ ಅದು ನಿತ್ಯದ ಆಹಾರಕ್ಕಿಂತ ನಾಲ್ಕನೇಯ ಒಂದು ಭಾಗದಷ್ಟು ಮಾತ್ರ ಇರಬೇಕು.

ಹೀಗೆ ಸೂರ್ಯೋದಯ ಕಾಲದಲ್ಲಿ ದಶಮೀವಿದ್ಧವಾದ ಏಕಾದಶಿಯನ್ನು ಬಿಡಬೇಕು. ಇನ್ನು ಪ್ರವೃತ್ತಿ ಕರ್ಮವನ್ನು ಬಿಟ್ಟಿರುವ ನಿಷ್ಕಾಮರಾದ ವಿಷ್ಣುಭಕ್ತರು ಅರ್ಧ ರಾತ್ರಿಯ ಸಮಯದಲ್ಲಿ ದಶಮೀ ವಿದ್ಧವಾದ ಏಕಾದಶಿಯನ್ನೂ ಬಿಡುತ್ತಾರೆ. ಯಮನ ತಿಥಿ ಎಂದು ಪ್ರಸಿದ್ಧವಾದ ದಶಮೀ ತಿಥಿಯ ಕೊನೆ ಭಾಗದಲ್ಲಿ ಈ ಮೋಹಿನಿಯು ವಾಸಮಾಡುತ್ತಲಿರಲಿ, ಮೋಹಿನಿ! ಚಂದ್ರಕಿರಣ ಸೂರ್ಯಕಿರಣಗಳ ಮೂಲಕ ನಿನಗೆ ಸಂಚಾರ ಮಾಡುವ ಶಕ್ತಿಯುಂಟಾಗಲಿ. ಪಾಪನಾಶಕ್ಕಾಗಿ ನೀನು ತೀರ್ಥ ಸಂಚಾರ ಮಾಡುತ್ತಿರು. ರಾತ್ರಿ ಹದಿನೈದು, ಹಗಲು ಹದಿನೈದು ಒಟ್ಟು ಮೂವತ್ತು ಮುಹೂರ್ತಗಳಿವೆ. ಅವುಗಳಲ್ಲಿ ರಾತ್ರಿ ೧೩ನೆಯ ಮುಹೂರ್ತದ ಅನಂತರ ಸೂರ್ಯೋದಯ ಸಮಯದವರೆಗೆ ಬರುವ ಏಕಾದಶಿಯು ದಶಮೀ ವಿದ್ಧವಾದಾಗ ದಶಮಿಯ ಕೊನೆಯಲ್ಲಿರುವ ನೀನು, ಅಂತಹ ಉಪವಾಸ ಮಾಡುವವರ ಪುಣ್ಯವನ್ನು ಅನುಭವಿಸು. ಇದೇ ನಿನಗೆ ಸ್ಥಾನ ಮತ್ತು ಫಲ.'' ಬ್ರಹ್ಮಾದಿ ದೇವತೆಗಳು ಹೀಗೆ ಹೇಳಿದ ಕೂಡಲೇ ಮೋಹಿನಿಗೆ ಆನಂದವಾಯಿತು. ಅವಳು ದೇವತೆಗಳಿಗೂ ಪುರೋಹಿತರಿಗೂ ನಮಸ್ಕಾರ ಮಾಡಿ ದಶಮಿಯ ಕೊನೆಯಲ್ಲಿ ಕುಳಿತಳು. ಆಗ ಸೂರ್ಯ ಪುತ್ರ ಯಮಧರ್ಮರಾಜನ ಆನಂದಕ್ಕೆ ಪಾರವೇ ಇಲ್ಲ. ಅವನು ಹೇಳಿದನು - ''ಚಾರುಲೋಚನೇ ಮೋಹಿನಿ! ನೀನು ಪುನಃ ಲೋಕಗಳಲ್ಲಿ ನನ್ನ ಪ್ರತಿಷ್ಠೆಯನ್ನು ಹೆಚ್ಚಿಸಿದೆ. ರುಕ್ಮಾಂಗದನು ಆನೆಯ ಮೇಲೆ ನಗಾರಿ ಬಾರಿಸಿ ಏಕಾದಶಿಯ ಡಂಗುರ ಹೊಡೆಸಿದ್ದನ್ನು ವ್ಯರ್ಥ ಮಾಡಿದೆ. ದಶಮೀ ತಿಥಿಯ ಸ್ಪರ್ಶ ಮಾಡಿದ ಏಕಾದಶಿಯ ದಿನ ಉಪವಾಸ ಮಾಡುವವರು ನನ್ನ ಅತಿಥಿಗಳಾಗುತ್ತಾರೆ. ನರಕಕ್ಕೆ ಬೀಳುತ್ತಾರೆ. ಈ ದಶಮೀ ವೇಧವೂ ಜನರನ್ನು ಮೋಹಕ್ಕೆ ಒಳಗು ಮಾಡುತ್ತದೆ.'' ಹೀಗೆ ಯಮಧರ್ಮರಾಜನೂ ಇತರ ದೇವತೆಗಳೂ ಮೋಹಿನಿಯನ್ನು ಅಭಿನಂದಿಸಿ ಅಲ್ಲಿಂದ ಹೊರಟು ಹೋದರು.

ಆಗ ಮೋಹಿನಿಯು ತನ್ನ ತಂದೆಯಾದ ಬ್ರಹ್ಮದೇವರ ಬಳಿಯಲ್ಲಿ ಹೀಗೆಂದಳು ''ಅಪ್ಪಾ! ಈ ಪುರೋಹಿತರು ಸಿಟ್ಟಿನಿಂದ ನನ್ನ ಶರೀರವನ್ನು ಸುಟ್ಟಿದ್ದಾರೆ. ನನಗೆ ಪುನಃ ಆ ಶರೀರ ಪ್ರಾಪ್ತವಾಗುವಂತೆ ನೀವು ಪ್ರಯತ್ನಿಸಬೇಕು.'' ಮೋಹಿನಿಯ ಮಾತನ್ನು ಕೇಳಿ ಲೋಕಪಿತಾಮಹರಾದ ಬ್ರಹ್ಮದೇವರು ಮಗಳ ಹಿತಕ್ಕಾಗಿ 'ವಸು' ಎಂಬ ಹೆಸರಿನ

ಆ ಪುರೋಹಿತನನ್ನು ಸಮಾಧಾನ ಪಡಿಸುತ್ತಾ ಹೇಳಿದರು - ''ಅಪ್ಪಾ ವಸುವೇ! ನನ್ನ ಲೋಕ ಹಿತಕರವಾದ ಮಾತನ್ನು ಕೇಳು. ನೀನು ಸಿಟ್ಟಿನಿಂದ ಮೋಹಿನಿಯನ್ನು ಭಸ್ಮಾವಶೇಷಳನ್ನಾಗಿ ಮಾಡಿದ್ದೀ. ಇವಳು ಪುನಃ ತನಗೆ ಶರೀರಬೇಕೆಂದು ಕೇಳುತ್ತಿದ್ದಾಳೆ. ನನ್ನ ಮಗಳಾಗಿದ್ದು ನಿನ್ನ ಗೃಹಸ್ಥ (ಯಜಮಾನನ) ಪತ್ನಿಯಾಗಿದ್ದು ಇವಳು ಇಂಹ ದುರ್ಗತಿಗೆ ಒಳಗಾಗಿದ್ದಾಳೆ. ಇವಳನ್ನು ರಕ್ಷಿಸುವುದು ನಮ್ಮಿಬ್ಬರ ಕರ್ತವ್ಯವಾಗಿದೆ. ನೀನು ಶುದ್ಧಭಾವದಿಂದ ಅಪ್ಪಣೆ ಕೊಟ್ಟರೆ ನಾನು ಇವಳಿಗೆ ಹೊಸ ಶರೀರವನ್ನು ಕೊಡುತ್ತೇನೆ. ಇವಳು ಏಕಾದಶಿಯನ್ನು ದ್ವೇಷಿಸಿ ಪಾಪವನ್ನು ಗಳಿಸಿದ್ದರಿಂದ ದೇಹವನ್ನು ಪಡೆದ ಮೇಲೆಯೂ ಇವಳ ಸದ್ಗತಿಯ ಉಪಾಯವನ್ನು ಯೋಚಿಸಿ, ಅವಳಿಗೆ ಹೇಳಿ ನೀನೇ ಅವಳನ್ನು ಉದ್ಧರಿಸಬೇಕು.'' ಬ್ರಹ್ಮದೇವರ ಮಾತನ್ನು ಕೇಳಿ ರಾಜ ಪುರೋಹಿತನು ಪ್ರಸನ್ನನಾಗಿ ಯಜಮಾನ ಪತ್ನಿಯ ಶರೀರ ಪ್ರಾಪ್ತಿಯನ್ನು ಅನುಮೋದಿಸಿದನು. ಬ್ರಹ್ಮದೇವರು ತನ್ನ ಕಮಂಡಲುವಿನ ಜಲದಿಂದ ಮೋಹಿನಿಯ ಭಸ್ಮರಾಶಿಯನ್ನು ಪ್ರೋಕ್ಷಿಸಿದರು. ಕೂಡಲೇ ಮೋಹಿನಿಗೆ ಹೊಸ ದೇಹವು ದೊರಕಿತು. ಅವಳು ತನ್ನ ತಂದೆಯಾದ ಬ್ರಹ್ಮದೇವರಿಗೆ ನಮಸ್ಕಾರ ಮಾಡಿ, ತಲೆಬಗ್ಗಿಸಿ ಪುರೋಹಿತ ವಸುವಿನ ಎರಡೂ ಪಾದಗಳನ್ನು ಹಿಡಿದುಕೊಂಡಳು. ನಮಸ್ಕಾರ ಮಾಡಿ ನೆಲದಲ್ಲಿಯೇ ಬಿದ್ದಳು. ಆಗ ಪುರೋಹಿತ ವಸುವು ಪ್ರಸನ್ನನಾದನು. ಪತಿಪುತ್ರರ ಅಗಲುವಿಕೆಯಿಂದ ಸಂಕಟವನ್ನು ಅನುಭವಿಸುತ್ತಿದ್ದ ವಿಧವೆಯಾದ ಯಜಮಾನ ಪತ್ನಿಯನ್ನು ಸಮಾಧಾನಗೊಳಿಸುತ್ತಾ ಹೇಳಿದನು - 'ದೇವಿ' ಬ್ರಹ್ಮದೇವರ ಆಜ್ಞೆಯಂತೆ ನಾನು ಕ್ರೋಧವನ್ನು ಪೂರ್ತಿಯಾಗಿ ಬಿಟ್ಟಿದ್ದೇನೆ. ಮುಂದೆ ನಿನಗೆ ತೀರ್ಥ ಸ್ನಾನಾದಿಗಳಿಂದ ಸದ್ಗತಿಯನ್ನುಂಟು ಮಾಡುತ್ತೇನೆ.'' ಮೋಹಿನಿಯೊಡನೆ ಹೀಗೆ ಹೇಳಿ ವಸುವು ಅವಳ ತಂದೆಯಾದ ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ಬೀಳ್ಕೊಟ್ಟನು. ಬ್ರಹ್ಮದೇವರು ಜ್ಯೋತಿರ್ಮಯವಾದ ತಮ್ಮ ಲೋಕಕ್ಕೆ ಹೊರಟು ಹೋದರು. ರುಕ್ಮಾಂಗದನ ಪುರೋಹಿತನಾದ, ಬ್ರಾಹ್ಮಣ ಶ್ರೇಷ್ಠನಾದ ವಸುವು ಮೋಹಿನಿಯು ಕೃಪಾಪಾತ್ರಳೆಂದು ನಿರ್ಧರಿಸಿ ಮನಸ್ಸಿನಲ್ಲಿಯೇ ಸ್ವಲ್ಪ ಹೊತ್ತು ಆಲೋಚಿಸಿ ಅವಳಿಗೆ ಸದ್ಗತಿಯಾಗುವ ಕ್ರಮವನ್ನು ಕಂಡು ಹಿಡಿದನು.

## ಮೋಹಿನೀ ವಸು ಸಂವಾದ - ಗಂಗಾಮಾಹಾತ್ಮ್ಯೆ

**ವಸುವು:-** ಮೋಹಿನಿ ಕೇಳು, ನಿನಗೆ ತೀರ್ಥ ಸ್ನಾನದಿಂದ ಸಮಸ್ತ ಪಾಪ ಪರಿಹಾರವಾಗುತ್ತದೆ. ಆದ್ದರಿಂದ ಪಾಪಿಗಳಿಗೂ ಉತ್ತಮ ಗತಿಪ್ರದವಾದ ತೀರ್ಥ ಮಾಹಾತ್ಮ್ಯೆಯನ್ನು ನಿನಗೆ ಪ್ರತ್ಯೇಕ ಪ್ರತ್ಯೇಕವಾಗಿ ಹೇಳುತ್ತೇನೆ. ''ಈ ಭೂಮಂಡಲದಲ್ಲಿ ಗಂಗೆಗೆ ಸಮಾನವಾದ ಪಾಪನಾಶಕ ತೀರ್ಥವು ಮತ್ತೊಂದಿಲ್ಲ.'' ಪುರೋಹಿತರ ಮಾತನ್ನು ಕೇಳಿ ಮೋಹಿನಿಯ ಮನಸ್ಸಿನಲ್ಲಿ ಗಂಗಾ ಸ್ನಾನದ ಆಸೆಯುಂಟಾಯಿತು. ಅವಳೂ ಪುರೋಹಿತರಿಗೆ ನಮಸ್ಕಾರ ಮಾಡಿ ಹೇಳಿದಳು. ''ಭಗವನ್! ಎಲ್ಲಾ ಪುರಾಣಗಳ ಸಾರಗರ್ಭಿತವಾಗಿ ಗಂಗೆಯ ಮಹಿಮೆಯನ್ನು ತಾವು ಹೇಳಬೇಕು. ಅದನ್ನು ಕೇಳಿದ ಮೇಲೆ ನಾನು ತಮ್ಮ ಜೊತೆಯಲ್ಲಿಯೇ ಗಂಗಾಸ್ನಾನಕ್ಕೆ ತೆರಳುವೆನು'' ವಸುವು ಎಲ್ಲ ಪುರಾಣಗಳನ್ನು ತಿಳಿದಿದ್ದನು. ಅವನು ಮೋಹಿನಿಯ ಮಾತನ್ನು ಕೇಳಿ ಪಾಪನಾಶಕವಾದ ಗಂಗಾ ಮಾಹಾತ್ಮ್ಯವನ್ನು ಹೀಗೆ ವರ್ಣಿಸಿದನು. ವಸು - ''ದೇವಿ

**ತೇ ದೇಶಾಸ್ತೇ ಜನಪದಾಸ್ತೇ ಶೈಲಾಸ್ತೇಽ ಪಿ ಚಾಶ್ರಮಾಃ ।**
**ಯೇಷಾಂ ಭಾಗೀರಥೀ ಪುಣ್ಯಾ ಸಮೀಪೇ ವರ್ತತೇ ಸದಾ ॥**
**ನಾ. ಉತ್ತರ ೩೮-೮**

ಎಲ್ಲಿ ಪರಮ ಪಾವನ ಸಲಿಲೆಯಾದ ಭಗವತೀ ಭಾಗೀರಥಿಯು ಹರಿಯುತ್ತಾಳೋ ಆ ದೇಶಗಳು, ಆ ಜನಪದಗಳು, ಆ ಪರ್ವತಗಳು, ಆ ಆಶ್ರಮಗಳು ಧನ್ಯವಾಗುತ್ತವೆ. ಜೀವರು ಗಂಗೆಯನ್ನು ಸೇವಿಸಿ ಪಡೆಯುವ ಗತಿಯನ್ನು ತಪಸ್ಸು, ಬ್ರಹ್ಮಚರ್ಯ, ಯಜ್ಞ ಅಥವಾ ತ್ಯಾಗ, ಯಾವುದರಿಂದಲೂ ಪಡೆಯಲಾರರು. ಬಾಲ್ಯಯೌವನಗಳಲ್ಲಿ ಪಾಪವನ್ನು ಮಾಡಿದ್ದರೂ ಮುಪ್ಪಿನಲ್ಲಿ ಗಂಗೆಯನ್ನು ಸೇವಿಸುವವರು ಪರಮಗತಿಯನ್ನು ಪಡೆಯುತ್ತಾರೆ. ಈ ಸಂಸಾರದಲ್ಲಿದ್ದು ದುಃಖ ವ್ಯಾಕುಲರಾದ ಜೀವರಿಗೆ ಗಂಗೆಗೆ ಸಮಾನವಾದ ಗತಿಯು ಮತ್ತೊಂದಿಲ್ಲ. ಭಯಂಕರ ಪಾತಕಗಳನ್ನು ಮಾಡಿ ನರಕಕ್ಕೆ ಬೀಳುವ ಪಾಪಿಗಳನ್ನು ಗಂಗೆಯು ಉದ್ಧರಿಸುತ್ತಾಳೆ. ಅಂಧ, ಜಡ, ದರಿದ್ರರನ್ನೂ ಗಂಗೆಯು ಉದ್ಧರಿಸುತ್ತಾಳೆ. ಪವಿತ್ರರನ್ನಾಗಿ ಮಾಡುತ್ತಾಳೆ. ಕೃಷ್ಣ ಪಕ್ಷದ ಷಷ್ಠಿಯಿಂದ ಅಮಾವಾಸ್ಯೆಯವರೆಗೆ ಗಂಗೆಯು ಭೂಲೋಕದಲ್ಲಿ ಸನ್ನಿಧಾನವನ್ನು ಇಟ್ಟಿರುತ್ತಾಳೆ. ಶುಕ್ಲ ಪಕ್ಷದ ಪಾಡ್ಯದಿಂದ ಹತ್ತು ದಿನಗಳ ವರೆಗೆ ಪಾತಾಲದಲ್ಲಿ ವಾಸಮಾಡುತ್ತಿರುತ್ತಾಳೆ. ಶುಕ್ಲಪಕ್ಷದ ಏಕಾದಶಿಯಿಂದ ಕೃಷ್ಣ ಪಕ್ಷದ ಪಂಚಮಿಯವರೆಗೆ ಗಂಗೆಯು ಸ್ವರ್ಗದಲ್ಲಿರುತ್ತಾಳೆ. ಈ ಕಾರಣದಿಂದಲೇ ಗಂಗೆಯನ್ನು 'ತ್ರಿಪಥಗಾ' ಎಂದು ಹೇಳುತ್ತಾರೆ.

**ಕೃತೇ ತು ಸರ್ವತೀರ್ಥಾನಿ ತ್ರೇತಾಯಾಂ ಪುಷ್ಕರಂ ಪರಂ ।**
**ದ್ವಾಪರೇ ತು ಕುರುಕ್ಷೇತ್ರಂ ಕಲೌ ಗಂಗಾ ವಿಶಿಷ್ಯತೇ ॥**
**ಕಲೌ ತು ಸರ್ವತೀರ್ಥಾನಿ ಸ್ವಂ ಸ್ವಂ ವೀರ್ಯಂ ಸ್ವಭಾವತಃ ।**
**ಗಂಗಾಯಾಂ ಪ್ರತಿಮುಂಚಂತಿ ಸಾತು ದೇವೀ ನ ಕುತ್ರಚಿತ್ ॥**
**ಗಂಗಾಂಭಃ ಕಣದಿಗ್ಧಸ್ಯ ವಾಯೋಃ ಸಂಸ್ಪರ್ಶನಾದಪಿ ।**
**ಪಾಪಶೀಲಾ ಅಪಿ ನರಾಃ ಪರಾಂ ಗತಿಮವಾಪ್ನುಯುಃ ॥**
**ಯೋಽಸೌ ಸರ್ವಗತೋ ವಿಷ್ಣುಃ ಚಿತ್ ಸ್ವರೂಪೀ ಜನಾರ್ದನಃ ।**
**ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥**
**ಬ್ರಹ್ಮಹಾ ಗುರುಹಾ ಗೋಘ್ನಃ ಸ್ತೇಯೀ ಚ ಗುರುತಲ್ಪಗಃ ।**
**ಗಂಗಾಂಭಸಾ ಚ ಪೂಯಂತೇ ನಾತ್ರ ಕಾರ್ಯಾ ವಿಚಾರಣಾ ॥**
**ಕ್ಷೇತ್ರಸ್ಥಮುದ್ಧೃತಂ ವಾಪಿ ಶೀತಮುಷ್ಣಮಥಾಪಿ ವಾ ।**
**ಗಾಂಗೇಯಂ ತು ಹರೇತ್ ತೋಯಂ ಪಾಪಮಾಮರಣಾಂತಿಕಂ ॥**
**ವರ್ಜ್ಯಂ ಪರ್ಯುಷಿತಂ ತೋಯಂ ವರ್ಜ್ಯಂ ಪರ್ಯುಷಿತಂ ಫಲಂ ।**
**ನ ವರ್ಜ್ಯಂ ಜಾಹ್ನವೀತೋಯಂ ನ ವರ್ಜ್ಯಂ ತುಲಸೀದಲಂ ॥**
**ಮೇರೋಃ ಸುವರ್ಣಸ್ಯ ಚ ಸರ್ವರತ್ನಾಽಸಂಖ್ಯೋಪಲಾನಾಮುದಕಸ್ಯ ವಾಪಿ।**
**ಗಂಗಾಜಲಾನಾಂ ನ ತು ಶಕ್ತಿರಸ್ತಿ ವಕ್ತುಂ ಗುಣಾಖ್ಯಂ ಪರಿಮಾಣಮತ್ರ ॥**
**ನಾ. ಉತ್ತರ - ೩೮-೨೦-೨೭**

ಕೃತಯುಗದಲ್ಲಿ ಎಲ್ಲಾ ತೀರ್ಥಗಳೂ ಉತ್ತಮ. ತ್ರೇತಾಯುಗದಲ್ಲಿ 'ಪುಷ್ಕರ' ತೀರ್ಥವು ಸರ್ವೋತ್ತಮವು. ದ್ವಾಪರಯುಗದಲ್ಲಿ ಕುರುಕ್ಷೇತ್ರಕ್ಕೆ ವಿಶೇಷ ಮಹಿಮೆಯು. ಕಲಿಯುಗದಲ್ಲಿ ಗಂಗೆಯೇ ಎಲ್ಲಾ ತೀರ್ಥಗಳಲ್ಲಿ ಶ್ರೇಷ್ಠಳು. ಕಲಿಯುಗದಲ್ಲಿ ಎಲ್ಲ ತೀರ್ಥಗಳೂ ಸ್ವಭಾವತಃ ತಮ್ಮ ತಮ್ಮ ಶಕ್ತಿಯನ್ನು ಗಂಗೆಯಲ್ಲಿ ಇರಿಸುತ್ತವೆ. ಆದರೆ ಗಂಗೆಯು ತನ್ನ ಶಕ್ತಿಯನ್ನು ಬೇರೆಯೆಲ್ಲಿಯೂ ಇಡುವುದಿಲ್ಲ. ಬಿಡುವುದಿಲ್ಲ. ಗಂಗೆಯ ಜಲಕಣಗಳಿಂದ ಕೂಡಿದ ವಾಯುವಿನ ಸ್ಪರ್ಶ ಮಾತ್ರದಿಂದಲೇ ಪಾಪಿ ಜಾರನಾದ ಪುರುಷನೂ ಪರಮಗತಿಯನ್ನು ಹೊಂದುತ್ತಾನೆ. ಸರ್ವತ್ರ ವ್ಯಾಪ್ತನಾದ, ಜ್ಞಾನಸ್ವರೂಪನಾದ, ಶ್ರೀಮನ್ನಾರಾಯಣನೇ ದ್ರವರೂಪವನ್ನು ತಾಳಿದ ಗಂಗಾಜಲದಲ್ಲಿ ಸನ್ನಿಧಾನವನ್ನಿಟ್ಟು ತಾನೇ ಗಂಗಾಜಲವೆಂಬಂತೆ ಆಗಿದ್ದಾನೆ. ಈ ವಿಷಯದಲ್ಲಿ ಸಂದೇಹಪಡುವ ಆವಶ್ಯಕತೆಯಿಲ್ಲ. ಗಂಗೆಯ ಜಲವು ಗಂಗೆಯ ಪಾತ್ರ (ಪ್ರವಾಹ)ದಲ್ಲಿರಲಿ, ಮೇಲಕ್ಕೆತ್ತಿ ತಂದಿರುವುದೇ ಆಗಿರಲಿ. ತಂಪಾಗಿರಲಿ, ಅದನ್ನು ಸೇವಿಸಿದರೆ ಅದುವರೆಗೆ ಮಾಡಿದ ಪಾಪವೆಲ್ಲವೂ ನಾಶವಾಗುತ್ತದೆ. ಹಳೆಯ ನೀರು, ಹಳೆಯ ನಿರ್ಮಾಲ್ಯ ಪುಷ್ಪದಳಗಳನ್ನು ತ್ಯಜಿಸಬೇಕು. ಪುನಃ ಉಪಯೋಗಿಸಬಾರದು. ಆದರೆ ಗಂಗಾಜಲ ಮತ್ತು ತುಲಸೀದಲವು ಹಳೆಯದು, ನಿರ್ಮಾಲ್ಯ ಎಂದಾಗುವುದಿಲ್ಲ. ಅದು ಪುನಃ ಉಪಯೋಗಕ್ಕೆ ಯೋಗ್ಯವಾಗಿದೆ.

ಮನೋವಾಕ್ಕಾಯಜೈರ್ಗ್ರಸ್ತಃ ಪಾಪೈರ್ಬಹುವಿಧೈರಪಿ ।
ವೀಕ್ಷ್ಯ ಗಂಗಾಂ ಭವೇತ್ ಪೂತಃ ಪುರುಷೋ ನಾಽತ್ರ ಸಂಶಯಃ ॥
ಗಂಗಾತೋಯಾಭಿಷಿಕ್ತಾಂ ತು ಭಿಕ್ಷಾಮಶ್ನಾತಿ ಯಃ ಸದಾ ।
ಸರ್ಪವತ್ ಕಂಚುಕಂ ಮುಕ್ತ್ವಾ ಪಾಪಹೀನೋ ಭವೇತ್ ಸ ವೈ ॥
ಹಿಮವದ್ವಿಂಧ್ಯಸದೃಶಾಃ ರಾಶಯಃ ಪಾಪಕರ್ಮಣಾಂ ।
ಗಂಗಾಂಭಸಾ ವಿನಶ್ಯಂತಿ ವಿಷ್ಣುಭಕ್ತ್ಯಾ ಯಥಾಽಪದಃ ॥
ಪ್ರವೇಶಮಾತ್ರೇ ಗಂಗಾಯಾಂ ಸ್ನಾನಾರ್ಥೇ ಭಕ್ತಿತೋ ನೃಣಾಂ ।
ಬ್ರಹ್ಮಹತ್ಯಾದಿ ಪಾಪಾನಿ ಹಾಹೇತ್ಯುಕ್ತ್ವಾ ಪ್ರಯಾಂತ್ಯಲಂ ॥
ಗಂಗಾತೀರೇ ವಸೇನ್ನಿತ್ಯಂ ಗಂಗಾತೋಯಂ ಪಿಬೇತ್ ಸದಾ।
ಯಃ ಪುಮಾನ್ ಸ ವಿಮುಚ್ಯೇತ ಪಾತಕೈಃ ಪೂರ್ವಸಂಚಿತೈಃ ॥
ಯೋ ವೈ ಗಂಗಾಂ ಸಮಾಶ್ರಿತ್ಯ ನಿತ್ಯಂ ತಿಷ್ಠತಿ ನಿರ್ಭಯಃ ।
ಸ ಏವ ದೇವೈರ್ಮರ್ತ್ಯೈರ್ಶ್ಚ ಪೂಜನೀಯೋ ಮಹರ್ಷಿಭಿಃ ॥

ನಾ. ಉತ್ತರ ೩೮-೩೨-೩೭

ಮನಸ್ಸು, ಮಾತು, ಮತ್ತು ಶರೀರಗಳಿಂದ ಅನೇಕ ಪಾಪಗಳನ್ನು ಮಾಡಿದವನೂ ಗಂಗೆಯ ದರ್ಶನದಿಂದ ಪವಿತ್ರನಾಗುತ್ತಾನೆ. ಗಂಗಾಜಲ ಸಿಕ್ತವಾದ ಪವಿತ್ರ ಭಿಕ್ಷಾನ್ನವನ್ನು ಭುಂಜಿಸುವವನು ಸರ್ಪವು ಪೊರೆಯನ್ನು ಸುಖವಾಗಿ ಕಳಚಿಕೊಳ್ಳುವಂತೆ ಪಾಪವನ್ನು ದೂರಮಾಡಿಕೊಳ್ಳುತ್ತಾನೆ. ಹಿಮಾಲಯ ಮತ್ತು ವಿಂಧ್ಯಕ್ಕೆ ಸಮಾನವಾದ ಪಾಪರಾಶಿಗಳೂ ವಿಷ್ಣುಭಕ್ತಿಯಿಂದ ಎಲ್ಲಾ ಆಪತ್ತುಗಳೂ ನಾಶವಾಗುವಂತೆ ಗಂಗಾಜಲದಿಂದ

ನಾಶವಾಗುತ್ತವೆ. ಭಕ್ತಿಯಿಂದ ಗಂಗಾಜಲದಲ್ಲಿ ಸ್ನಾನಕ್ಕಾಗಿ ಇಳಿದ ಕೂಡಲೇ ಬ್ರಹ್ಮಹತ್ಯಾದಿ ಪಾಪಗಳು 'ಅಯ್ಯೋ ಅಯ್ಯೋ' ಎಂದು ಕಿರಿಚುತ್ತಾ ಓಡಿಹೋಗುತ್ತವೆ. ಗಂಗೆಯ ತಟದಲ್ಲಿ ನಿತ್ಯವಾಸ ಮತ್ತು ಗಂಗಾಜಲ ಪಾನಗಳಿಂದ ಮಾನವನ ಪೂರ್ವಸಂಚಿತ ಪಾಪಗಳೆಲ್ಲವೂ ನಾಶವಾಗುತ್ತವೆ. ಗಂಗೆಯನ್ನು ಆಶ್ರಯಿಸಿ ನಿತ್ಯ ನಿರ್ಭಯನಾಗಿರುವವನು ದೇವತೆಗಳಿಗೂ ಋಷಿಗಳಿಗೂ ಪೂಜ್ಯನಾಗುತ್ತಾನೆ.''

**ಸಂತೋಷಃ ಪರಮೈಶ್ವರ್ಯಂ ತತ್ತ್ವಜ್ಞಾನಂ ಸುಖಾತ್ಮತಾ ।**
**ವಿನಯಾಚಾರಸಂಪತ್ತಿಃ ಗಂಗಾಭಕ್ತಸ್ಯ ಜಾಯತೇ ॥**

**ನಾ. ಉತ್ತರ ೩೮-೪೯-೫೦**

ಗಂಗಾ ಭಕ್ತನಿಗೆ, ಸಂತೋಷ, ಉತ್ತಮ ಐಶ್ವರ್ಯ, ತತ್ತ್ವಜ್ಞಾನ, ಆನಂದ ಸ್ವರೂಪತೆ, ವಿನಯ ಮತ್ತು ಸದಾಚಾರ ಸಂಪತ್ತು ಇವುಗಳು ದೊರಕುತ್ತವೆ.

**ಭಕ್ತ್ಯಾ ತಜ್ಜಲಸಂಸ್ಪರ್ಶೀ ತಜ್ಜಲಂ ಪಿಬತೇ ಚ ಯಃ ।**
**ಅನಾಯಾಸೇನ ಹಿ ನರೋ ಮೋಕ್ಷೋಪಾಯಂ ಸ ವಿಂದತಿ ॥**

**ನಾ. ಉತ್ತರ ೩೮-೫೧-೫೨**

ಯಾವನು ಭಕ್ತಿಯಿಂದ ಗಂಗೆಯ ಜಲವನ್ನು ಸ್ಪರ್ಶಿಸುತ್ತಾನೋ ಗಂಗೆಯ ಜಲವನ್ನು ಕುಡಿಯುತ್ತಾನೋ, ಅವನಿಗೆ ಅನಾಯಾಸವಾಗಿ ಮೋಕ್ಷ ಮಾರ್ಗವು ಪ್ರಾಪ್ತವಾಗುತ್ತದೆ.

**ಸರ್ವಾಣಿ ಯೇಷಾಂ ಗಂಗಾಯಾಃ ತೋಯೈಃ ಕೃತ್ಯಾನಿ ಸರ್ವದಾ ।**
**ದೇಹಂ ತ್ಯಕ್ತ್ವಾ ನರಾಸ್ತೇ ತು ಮೋದಂತೆ ಶಿವಸನ್ನಿಧೌ ॥**

**ನಾ. ಉತ್ತರ - ೩೮-೫೩**

ಯಾರ ಎಲ್ಲಾ ಕಾರ್ಯಗಳೂ ಗಂಗಾಜಲದಿಂದಲೇ ಆಗುತ್ತವೆಯೋ, ಅವರು ಶರೀರತ್ಯಾಗಾನಂತರ ಶಿವಸಮೀಪದಲ್ಲಿ ಆನಂದವನ್ನು ಅನುಭವಿಸುತ್ತಾರೆ.

## ಗಂಗಾದರ್ಶನ, ಸ್ಮರಣ ಮತ್ತು ಸ್ನಾನದ ಮಹಿಮೆಗಳು

**ಪುರೋಹಿತ ವಸು:-** ಮೋಹಿನಿ, ಕೇಳು. ಈಗ ನಾನು ಗಂಗೆಯ ದರ್ಶನದ ಫಲವನ್ನು ಹೇಳುತ್ತೇನೆ. ಜ್ಞಾನ, ಅನುಪಮ, ಐಶ್ವರ್ಯ, ಪ್ರತಿಷ್ಠೆ ಆಯುಸ್ಸು, ಕೀರ್ತಿ ಇವುಗಳು ಗಂಗಾದರ್ಶನದ ಫಲಗಳು. ಗಂಗಾಸ್ನಾನ, ಗಂಗಾಪಾನಗಳಿಂದ ಏಳು ತಲೆಯವರೆಗಿನ ಪಿತೃಗಳೂ ಉದ್ಧಾರ ಹೊಂದುತ್ತಾರೆ. ಶ್ರದ್ಧೆಯಿಂದ ಗಂಗಾ ಎಂದವನು ಸ್ವರ್ಗಕ್ಕೆ ಹತ್ತಿರವಾಗುತ್ತಾನೆ

## ಕಾಲ ವಿಶೇಷ ಮತ್ತು ಸ್ಥಲ ವಿಶೇಷಗಳಲ್ಲಿ ಗಂಗಾಸ್ನಾನದ ಮಹಿಮೆ

**ಪುರೋಹಿತ ವಸು:-** ಈಗ ನಾನು ಕಾಲ ವಿಶೇಷದಲ್ಲಿ ಮಾಡುವ ಗಂಗಾಸ್ನಾನದ ಫಲವನ್ನು ಹೇಳುತ್ತೇನೆ. ಮಾಘ ಮಾಸದಲ್ಲಿ ನಿರಂತರ ಗಂಗಾಸ್ನಾನ ಮಾಡುವವನು ತನ್ನ ಕುಲದವರ ಜೊತೆಗೆ ಬಹುಕಾಲ ಸ್ವರ್ಗಲೋಕದಲ್ಲಿ ವಾಸ ಮಾಡುತ್ತಾನೆ. ಎಲ್ಲ ಸಂಕ್ರಾಂತಿಗಳಲ್ಲಿ ಗಂಗಾಸ್ನಾನ ಮಾಡುವವನು ಸೂರ್ಯ ತೇಜಸ್ಸಿನಿಂದ ಕೂಡಿದ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ತೆರಳುತ್ತಾನೆ. ಮೇಷ, ತುಲಾ ಸಂಕ್ರಮಣ (ವಿಷುವ)

ದಕ್ಷಿಣಾಯನ ಮತ್ತು ಉತ್ತರಾಯಣ ಸಂಕ್ರಮಣಗಳಲ್ಲಿ ಈ ಫಲವು ಇನ್ನೂ ಹೆಚ್ಚು. ಕಾರ್ತಿಕಮಾಸದಲ್ಲಿಯೂ ಗಂಗಾಸ್ನಾನವು ಮಹಾ ಫಲಪ್ರದವಾಗಿದೆ. ಸೂರ್ಯನು ಮೇಷರಾಶಿ ಪ್ರವೇಶ ಮಾಡುವಾಗ ಮತ್ತು ಕಾರ್ತಿಕ ಪೂರ್ಣಿಮೆಯ ದಿನ ಗಂಗಾಸ್ನಾನವು ಮಾಘಮಾಸದ ಸ್ನಾನಕ್ಕಿಂತಲೂ ಹೆಚ್ಚು ಪುಣ್ಯಪ್ರದ. ಕಾರ್ತಿಕಮಾಸ ಅಥವಾ ವೈಶಾಖ ಮಾಸದ 'ಅಕ್ಷಯತೃತೀಯಾದಿನ' ಗಂಗಾಸ್ನಾನ ಮಾಡುವುದರಿಂದ ಒಂದು ವರ್ಷ ಗಂಗಾಸ್ನಾನ ಮಾಡಿದ ಫಲವು ಬರುತ್ತದೆ. ಮನ್ವಾದಿ ಯುಗಾದಿ ತಿಥಿಗಳಲ್ಲಿ ಗಂಗಾಸ್ನಾನವು ಮೂರು ತಿಂಗಳ ಸ್ನಾನಕ್ಕೆ ಸಮಾನ. ದ್ವಾದಶೀ ಶ್ರವಣ, ಅಷ್ಟಮೀ, ಪುಷ್ಯ, ಚತುರ್ದಶೀ, ಆದ್ರಾಯೋಗವಿರುವಾಗ ಗಂಗಾಸ್ನಾನವು ದುರ್ಲಭ. ಕೃಷ್ಣಾಷ್ಟಮೀ ದಿನ ಗಂಗಾಸ್ನಾನ ದಿಂದ ಸಾಧಾರಣ ಸ್ನಾನಕ್ಕಿಂತ ಸಾವಿರ ಪಾಲು ಹೆಚ್ಚು ಪುಣ್ಯವು ಪ್ರಾಪ್ತವಾಗುತ್ತದೆ.

ಜ್ಯೇಷ್ಠ ಶುಕ್ಲದಶಮೀ ಮಂಗಳವಾರ ಭಾಗೀರಥೀ ಜನ್ಮದಿನ. ಆ ದಿನ ಮೊದಲನೆಯ ಗಂಗಾಸ್ನಾನ ಮಾಡಿದವರಿಗೆ ಹತ್ತು ಪಟ್ಟು ಫಲವು ದೊರಕುತ್ತದೆ. ಮಾಘ ಪೂರ್ಣಿಮಾ, ಮಾಘ ನಕ್ಷತ್ರಯೋಗ, ಗುರುವಾರ ಗಂಗಾಸ್ನಾನವು ನೂರು ಗ್ರಹಣಗಳಲ್ಲಿ ಗಂಗಾಸ್ನಾನಕ್ಕೆ ಸಮಾನ. ದೇಶ ವಿಶೇಷಗಳಲ್ಲಿಯೂ ಗಂಗಾಸ್ನಾನಕ್ಕೆ ವಿಶೇಷ ಪುಣ್ಯವಿದೆ. ಗಂಗೆಯಲ್ಲಿ ಎಲ್ಲಿಯೇ ಸ್ನಾನ ಮಾಡಲಿ, ಕುರುಕ್ಷೇತ್ರಯಾತ್ರೆಗಿಂತ ಹತ್ತು ಪಾಲು ಹೆಚ್ಚು ಪುಣ್ಯವಿದೆ. ಗಂಗೆಯು ವಿಂಧ್ಯ ಸಂಬಂಧವನ್ನು ಹೊಂದಿದಲ್ಲಿ ಸ್ನಾನ ಮಾಡಿದರೆ ನೂರುಪಾಲು ಹೆಚ್ಚು ಪುಣ್ಯವಿದೆ. ಕಾಶಿಯಲ್ಲಿ ಗಂಗಾಸ್ನಾನ ಮಾಡಿದರೆ ಅದಕ್ಕಿಂತಲೂ ನೂರುಪಾಲು ಹೆಚ್ಚು ಪುಣ್ಯವಿದೆ. ಗಂಗಾದ್ವಾರ, ಪ್ರಯಾಗ ಮತ್ತು ಗಂಗಾಸಾಗರ ಸಂಗಮಗಳಲ್ಲಿ ಗಂಗೆಯ ಮಹತ್ವವು ಮತ್ತಷ್ಟು ಹೆಚ್ಚಾಗಿದೆ.

ಹರಿದ್ವಾರಕ್ಷೇತ್ರದ ಕಾಪಿಲ ತೀರ್ಥದಲ್ಲಿ ಸ್ನಾನ ಮಾಡುವವರಿಗೆ ಎಂಭತ್ತು ಸಾವಿರ ಕಪಿಲಾಗೋದಾನ ಮಾಡಿದ ಪುಣ್ಯವು ಬರುತ್ತದೆ. ಗಂಗಾದ್ವಾರ, ಕುಶಾವರ್ತ ಬಿಲ್ವಕ, ನೀಲಪರ್ವತ ಕನಖಲ, ತೀರ್ಥಗಳಲ್ಲಿ ಸ್ನಾನ ಮಾಡುವವನು ಪಾಪರಹಿತನಾಗಿ ಸ್ವರ್ಗವನ್ನು ಸೇರುತ್ತಾನೆ. ಪವಿತ್ರವೆಂಬ ತೀರ್ಥದಲ್ಲಿ ಸ್ನಾನ ಮಾಡುವವನಿಗೆ ಎರಡು ವಿಶ್ವಜಿತ್‌ಯಾಗಗಳ ಪುಣ್ಯವು ದೊರಕುತ್ತದೆ. ವೇಣಿರಾಜ್ಯ ತೀರ್ಥದಲ್ಲಿ ಸ್ನಾನ ಮಾಡುವವನಿಗೆ ಎರಡು ವಿಶ್ವಜಿತ್ ಯಾಗಗಳ ಪುಣ್ಯವು ದೊರಕುತ್ತದೆ. ವೇಣಿರಾಜ್ಯ ತೀರ್ಥದಲ್ಲಿ ಸರಯೂ ಮತ್ತು ಗಂಗೆಯರು ಇಬ್ಬರು ಸಹೋದರಿಯರಂತೆ ಒಬ್ಬರು ಇನ್ನೊಬ್ಬರನ್ನು ಅಪ್ಪಿಕೊಳ್ಳುತ್ತಾರೆ. ನಾರಾಯಣನ ಬಲಪಾದವನ್ನು ತೊಳೆದ ನೀರು ಗಂಗೆಯಾದರೆ, ಎಡಗಾಲಿನಿಂದ ಮಾನಸನಂದಿನಿಯಾದ ಸರಯೂ ದೇವಿಯು ಉದ್ಭವಿಸಿದ್ದಾಳೆ. ಶಿವ ವಿಷ್ಣುಗಳ ಸಾನ್ನಿಧ್ಯವಿರುವ ಅವರಿಬ್ಬರ ಸಂಗಮ ಸ್ಥಳದಲ್ಲಿ ಸ್ನಾನ ಮಾಡುವವನಿಗೆ ಐದು ಅಶ್ವಮೇಧಯಜ್ಞಗಳ ಫಲವು ಸಿಗುತ್ತದೆ. ಗಂಡಕೀನದಿಯ ಸಂಗಮ ಸ್ಥಳದಲ್ಲಿ ಗಾಂಡವ ತೀರ್ಥದಲ್ಲಿ ಸ್ನಾನ ಮಾಡಿದವನಿಗೆ ಒಂದು ಸಾವಿರ ಗೋದಾನ ಮಾಡಿದ ಪುಣ್ಯವು ಸಿಗುತ್ತದೆ.

## ಗಂಗೆಯ ತಟದಲ್ಲಿ ಮಾಡುವ ಸ್ನಾನ, ತರ್ಪಣ, ಪೂಜೆ ಮತ್ತು ದಾನಗಳ ಮಹಿಮೆ

**ಪುರೋಹಿತ ವಸು:-** ಮೋಹಿನಿ! ಗಂಗೆಯಲ್ಲಿ ಸ್ನಾನ ಮಾಡಿ ಗಾಯತ್ರೀ ಜಪ ಮಾಡುವವನಿಗೆ ಬೇರೆ ಸ್ಥಳಕ್ಕಿಂತ ಒಂದು ಲಕ್ಷಪಾಲು ಹೆಚ್ಚು ಫಲವುಂಟಾಗುತ್ತದೆ. ಮಕ್ಕಳು

ಗಂಗೆಯಲ್ಲಿ ಪಿತೃಗಳಿಗೆ ತರ್ಪಣ ಕೊಟ್ಟರೆ ಪಿತೃಗಳಿಗೆ ಅಕ್ಷಯ ತೃಪ್ತಿಯುಂಟಾಗುತ್ತದೆ. ಗಂಗೆಯಲ್ಲಿ ತರ್ಪಣ ಮಾಡುವಾಗ ಎಷ್ಟು ಎಳ್ಳು ಕಾಳನ್ನು ಕೈಯಲ್ಲಿ ತೆಗೆದುಕೊಳ್ಳುತ್ತಾರೋ ಅಷ್ಟು ಸಾವಿರ ವರ್ಷ ಅವನ ಪಿತೃಗಳು ಸ್ವರ್ಗದಲ್ಲಿ ವಾಸಿಸುತ್ತಾರೆ. ಗಂಗೆಯಲ್ಲಿ ತರ್ಪಣ ಮಾಡಿದ್ದರಿಂದ ಪಿತೃಲೋಕದಲ್ಲಿರುವ ಪಿತೃಗಳಿಗೆ ತೃಪ್ತಿ, ತರ್ಪಣ ಕೊಟ್ಟವರಿಗೆ ಸಂತತಿ ಪ್ರಾಪ್ತಿ, ಇವು ಆಗುತ್ತವೆ. ದುರ್ಗತಿಯಲ್ಲಿರುವ ಪಿತೃಗಳು ತರ್ಪಣದಿಂದ, ಸದ್ಗತಿಯನ್ನು ಪಡೆದು ವೈಕುಂಠ ಲೋಕಕ್ಕೆ ಹೋಗುತ್ತಾರೆ. ಗಂಗಾಸ್ನಾನ ಮಾಡಿ ಶಿವಲಿಂಗ ಪೂಜೆ ಮಾಡುವುದು ಮೋಕ್ಷ ಮಾರ್ಗಕ್ಕೆ ದಾರಿ, ತಾಮ್ರ ಪಾತ್ರದಲ್ಲಿಯ ಜಲವನ್ನೇ ಸ್ನಾನ, ಅರ್ಘ್ಯ, ನೈವೇದ್ಯ, ಬಲಿ, ಪೂಜಾದಿಗಳಿಗೆ ಉಪಯೋಗಿಸಬೇಕು.

ಗಂಗಾದೇವಿಗೆ ನಾಲ್ಕು ಭುಜಗಳು, ಮೂರು ಕಣ್ಣುಗಳು. ಒಂದು ಕೈಯಲ್ಲಿ ರತ್ನಕಲಶ. ಮತ್ತೊಂದರಲ್ಲಿ ಬಿಳೀತಾವರೆ. ಮೂರನೆಯದು ವರಪ್ರದ. ನಾಲ್ಕನೆಯದು ಅಭಯ ಮುದ್ರೆಯಿಂದ ಕೂಡಿದೆ. ಶ್ವೇತ ವಸ್ತ್ರಧಾರಿಯಾಗಿ ಮುಕ್ತಾಹಾರ ವಿಭೂಷಿತಳಾದ, ಸುಂದರ ಸುಪ್ರಸನ್ನ ಮುಖದ ಗಂಗೆಯು ಭಕ್ತರ ಮೇಲೆ ಕರುಣಾಸುಧಾ ದೃಷ್ಟಿಯನ್ನು ಹರಿಸುತ್ತಾಳೆ. ವಸುಧೆಯಲ್ಲಿ ವಸು (ಐಶ್ವರ್ಯ) ಧಾರೆಯನ್ನು ಸುಧಾ ಧಾರೆಯನ್ನು ಹರಿಸುವ ಆ ದೇವಿಯ ಪಾದಕಮಲಗಳಲ್ಲಿ ಭಕ್ತರಾದ ದಿವ್ಯ ಜೀವರು ನಮಸ್ಕಾರ ಮಾಡುತ್ತಿದ್ದಾರೆ. ಈ ರೀತಿಯಾಗಿ ಗಂಗೆಯನ್ನು ಧ್ಯಾನಿಸಿ ಹದಿನೈದು ದಿವಸ ಪೂಜೆ ಮಾಡುವವನು ಸಮಸ್ತ ಅಭೀಷ್ಟಗಳನ್ನು ಪಡೆಯುತ್ತಾನೆ. ಹಿಂದೆ ರಾಜರ್ಷಿಯಾದ ಜಹ್ನುವು ಕೋಪದಿಂದ ವೈಶಾಖ ಶುಕ್ಲ ಸಪ್ತಮಿಯ ದಿನ ಗಂಗೆಯನ್ನು ಕುಡಿದಿದ್ದನು. ಆ ಸ್ಥಳದಲ್ಲಿ ಆಕಾಶ ಮೇಖಲೆಯಂತಿರುವ ಗಂಗೆಯನ್ನು ಪೂಜಿಸಬೇಕು. ವೈಶಾಖಶುಕ್ಲತೃತೀಯಾ (ಅಕ್ಷಯ ತೃತೀಯಾ) ಮತ್ತು ಕಾರ್ತಿಕ ಪೂರ್ಣಿಮೆಗಳಲ್ಲಿ ಹಿಂದಿನ ರಾತ್ರಿ ಜಾಗರಣೆ ಮಾಡಿ ಎಳ್ಳಿನಿಂದ ವಿಷ್ಣು, ಗಂಗಾ ಮತ್ತು ಶಿವರ ಪೂಜೆಯನ್ನು ಮಾಡಬೇಕು. ಗಂಧ, ಪುಷ್ಪ, ಕುಂಕುಮ, ಅಗರು, ಚಂದನ, ತುಲಸೀದಲ, ಬಿಲ್ವ ಪತ್ರ, ನಾನಾ ಫಲಗಳಿಂದ ಯಥಾಶಕ್ತಿ ಪೂಜಿಸಿದರೆ ಅಕ್ಷಯ ಫಲವುಂಟಾಗುತ್ತದೆ. ಗಂಗೆಯ ದಡದಲ್ಲಿ ಮಾಡಿದ ಯಜ್ಞದಾನಾದಿಗಳು ಕೋಟಿ ಕೋಟಿಗುಣಿತವಾಗುತ್ತವೆ.

## ಒಂದು ವರ್ಷದ ವರೆಗೆ ಗಂಗಾ ಪೂಜೆಯ ಮಹಿಮೆ

**ಪುರೋಹಿತವಸು ಹೇಳುತ್ತಿದ್ದಾರೆ:-** ಮೋಹಿನಿ! ಮನಸ್ಸುಕೊಟ್ಟು ಕೇಳು! ದಿವ್ಯ ಸ್ವರೂಪಳಾದ ಗಂಗೆಯನ್ನು ಧ್ಯಾನಿಸುತ್ತಾ ಒಂದು ಸೇರು ಮಾರ್ಗಶೀರ್ಷ ಮಾಸದ ಭತ್ತದ ಅಕ್ಕಿಯನ್ನು ಎರಡು ಸೇರು ಹಾಲಿನಲ್ಲಿ ಬೇಯಿಸಿ ಖೀರು ತಯಾರಿಸಬೇಕು. ಅದಕ್ಕೆ ಒಂದೊಂದು ತೊಲೆ ಜೇನು ಮತ್ತು ತುಪ್ಪವನ್ನು ಹಾಕಬೇಕು. ಆ ನಂತರ ಖೀರು ಹೋಳಿಗೆ, ಲಡ್ಡು, ಮಂಡಲ ಭಕ್ಷ (ಪೂರಿ) ಅರ್ಧ ಗುಂಜಿ ಚಿನ್ನ, ಸ್ವಲ್ಪ ಬೆಳ್ಳಿ, ಚಂದನ, ಬಿಳಿ ಚಂದನ, ನೀಲಕಮಲ, ಮತ್ತಿತರ ಸುಗಂಧಿ ಹೂವುಗಳನ್ನೂ ತೆಗೆದುಕೊಂಡು ಗಂಗೆಯ ಬಳಿ ಹೋಗಿ ಈ ಕೆಳಗಿನ ಮಂತ್ರಗಳನ್ನು ಉಚ್ಚರಿಸುತ್ತಾ ಪೂಜಿಸಬೇಕು. ಓಂ ಗಂಗಾಯೈನಮಃ, ಓಂ ನಾರಾಯಣ್ಯೈ ನಮಃ, ಓಂ ಶಿವಾಯೈ ನಮಃ ಈ ಮಂತ್ರಗಳನ್ನು ಹೇಳುತ್ತಾ ಮೇಲೆ ಹೇಳಿದ ವಸ್ತುಗಳನ್ನು ಗಂಗೆಯಲ್ಲಿ ತೇಲಿಬಿಡಬೇಕು. ಪ್ರತಿತಿಂಗಳು ಹುಣ್ಣಿಮೆ ಮತ್ತು ಅಮಾವಾಸ್ಯೆ ಇದೇ ರೀತಿಯಿಂದ ಗಂಗೆಯನ್ನು ಪೂಜಿಸಬೇಕು. ಒಂದು ವರ್ಷ ಹವಿಷ್ಯಾನ್ನಭೋಜನ

ಮಿತಾಹಾರ, ಬ್ರಹ್ಮಚರ್ಯಗಳನ್ನು ನಡೆಸಬೇಕು. ಪ್ರಾತಃಕಾಲ ಅಥವಾ ರಾತ್ರಿ ಗಂಗೆಯನ್ನು ಪೂಜಿಸಬೇಕು. ಅಂತಹವನಿಗೆ ವರ್ಷದ ಕೊನೆಯಲ್ಲಿ ಗಂಗಾದೇವಿಯು ಪ್ರತ್ಯಕ್ಷಳಾಗುತ್ತಾಳೆ. ದಿವ್ಯಮಾಲಾ, ದಿವ್ಯ ವಸ್ತ್ರ, ದಿವ್ಯರತ್ನಗಳಿಂದ ಅಲಂಕೃತಳಾಗಿ ದಿವ್ಯ ಶರೀರಧಾರಿಣಿಯಾಗಿ ಬಂದು ವರವನ್ನು ಕೊಡಲು ಸಿದ್ಧಳಾಗಿರುತ್ತಾಳೆ. ಇಂತಹ ದೇವಿಯನ್ನು ಕಣ್ಣಿನಿಂದ ಕಂಡು ಮಾನವನು ಧನ್ಯನಾಗುತ್ತಾನೆ. ಅವನ ಅಭಿಲಾಷೆಗಳೆಲ್ಲವನ್ನೂ ದೇವಿಯು ಪೂರೈಸುತ್ತಾಳೆ. ನಿಷ್ಕಾಮಭಾವದಿಂದ ಗಂಗೆಯ ಆರಾಧನೆ ಮಾಡುವವನಿಗೆ ಜ್ಞಾನಪ್ರಾಪ್ತಿಯಾಗಿ ಮೋಕ್ಷವೇ ದೊರಕುತ್ತದೆ. ಗಂಗಾಪೂಜನವೆಂಬ ಈ ಸಾಂವತ್ಸರವ್ರತದಿಂದ ಲಕ್ಷ್ಮೀಪತಿಯಾದ ನಾರಾಯಣನು ನಿಶ್ಚಿತವಾಗಿಯೂ ಸುಪ್ರೀತನಾಗುತ್ತಾನೆ.

## ಗಂಗಾದಶಹರಾ ಮಾಹಾತ್ಮ್ಯೆ

ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮೀ ದಿನ ಹಸ್ತ ನಕ್ಷತ್ರಯೋಗವಿದ್ದಾಗ ಸ್ತ್ರೀಯಾಗಲಿ ಪುರುಷನಾಗಲಿ ಭಕ್ತಿಭಾವದಿಂದ ಗಂಗಾತೀರದಲ್ಲಿ ಜಾಗರಣಮಾಡಬೇಕು. ಹತ್ತು ಬಗೆಯ ಹೂವು. ಹತ್ತು ಬಗೆಯ ಗಂಧ, ಹತ್ತುಬಗೆಯ ನೈವೇದ್ಯ, ಹತ್ತು ತಾಂಬೂಲ. ಹತ್ತು ದೀಪ ಮುಂತಾದವುಗಳಿಂದ ಗಂಗೆಯನ್ನು ಪೂಜಿಸಬೇಕು. ಮೊದಲು ಶಾಸ್ತ್ರೋಕ್ತ ವಿಧಿಯಿಂದ ಹತ್ತು ಬಾರಿ ಸ್ನಾನಮಾಡಿ ನೀರಿನಲ್ಲಿ ಹತ್ತು ಬೊಗಸೆ ಎಳ್ಳು ಮತ್ತು ತುಪ್ಪವನ್ನು ತೇಲಿಬಿಡಬೇಕು. ಚಿನ್ನ, ಅಥವಾ ಬೆಳ್ಳಿ ಅಥವಾ ಮಣ್ಣಿನ ಗಂಗಾಪ್ರತಿಮೆಯನ್ನು ಮಾಡಿಸಬೇಕು. ನೆಲದಮೇಲೆ ಕಮಲ ಅಥವಾ ಸ್ವಸ್ತಿಕ ಚಿಹ್ನವನ್ನು ಬರೆದು ಅದರಲ್ಲಿ ಕಲಶವನ್ನೂ ಸ್ಥಾಪಿಸಿ ಪದ್ಮ ಅಥವಾ ಸ್ವಸ್ತಿಕ ಚಿಹ್ನಾಂಕಿತವಾದ ವಸ್ತ್ರ ಪುಷ್ಪಹಾರಗಳಿಂದ ಅಲಂಕರಿಸಿ ಕಲಶವನ್ನು ಗಂಗಾಜಲದಿಂದ ತುಂಬಿ ಅದರಲ್ಲಿ ಪಂಚಪಲ್ಲವ ಸುವರ್ಣ ಪುಷ್ಪಗಳನ್ನು ಹಾಕಿ ಪೂರ್ಣಪಾತ್ರವನ್ನಿಟ್ಟು ಅದರ ಮೇಲೆ ಹಿಂದೆ ಹೇಳಿದ ಪ್ರತಿಮೆಯನ್ನು ಸ್ಥಾಪಿಸಬೇಕು. ಹಿಟ್ಟಿನ ಗಂಗಾ ಪ್ರತಿಮೆಯನ್ನಾದರೂ ಮಾಡಬಹುದು. ಗಂಗೆಯ ಧ್ಯಾನವನ್ನು ಈ ರೀತಿ ಮಾಡಬೇಕು. ಚತುರ್ಭುಜಧಾರಿಣೀ, ದಶಸಹಸ್ರಚಂದ್ರಚಂದ್ರಿಕಾ ಪೂರ್ಣಾನನೆ, ಅವಳ ದಾಸಿಯರು ಚಾಮರ ಬೀಸುತ್ತಿದ್ದಾರೆ, ಮೇಲೆ ಇಟ್ಟಿರುವ ಶ್ವೇತಛತ್ರದಿಂದ ಆ ದೇವಿಯ ಶೋಭೆಯು ಇಮ್ಮಡಿಯಾಗಿದೆ. ಪ್ರಸನ್ನವದನೆ, ಕರುಣಾ ಪೂರ್ಣಹೃದಯೆ, ದೇವತಾಸ್ತುತಿಪಾತ್ರಳು, ದಿವ್ಯಾಭರಣಹಾರಾನುಲೇಪನ ಭೂಷಿತಳು. ಈ ರೀತಿಯಲ್ಲಿ ಗಂಗೆಯನ್ನು ಜಲದಲ್ಲಿ ಧ್ಯಾನಿಸಿ ಪ್ರತಿಮೆಯಲ್ಲಿಯೂ ಧ್ಯಾನಿಸಿ ವಿಶೇಷ ಪೂಜೆಮಾಡಬೇಕು. ಪ್ರತಿಮೆಯ ಒಂದು ಚಿಕ್ಕ ವೇದಿಕೆಯನ್ನು ಮಾಡಿ ಅಲ್ಲಿ ನಾರಾಯಣ, ಶಿವ, ಬ್ರಹ್ಮ, ಸೂರ್ಯ, ಭಗೀರಥ. ಹಿಮಾಲಯರನ್ನು ಸ್ಥಾಪಿಸಿ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಹತ್ತು ಮಂದಿ ಬ್ರಾಹ್ಮಣರಿಗೆ ತಲಾ ಒಂದು. ಸೇರಿನಂತೆ ಹತ್ತು ಸೇರು ಎಳ್ಳು ದಾನಮಾಡಬೇಕು. ಹಾಗೆಯೇ ಹತ್ತು ಸೇರು ಗೋಧಿ. ಹತ್ತು ಪಾತ್ರೆಗಳಲ್ಲಿ ತುಪ್ಪವನ್ನು ಕೊಡಬೇಕು. ಅನಂತರ ಮೊದಲೇ ಚಿನ್ನ, ಬೆಳ್ಳಿ ಅಥವಾ ಹಿಟ್ಟಿನಿಂದ ತಯಾರಿಸಿದ ಮೀನು. ಆಮೆ, ಕಪ್ಪೆ, ಮೊಸಳೆಗಳ ಪ್ರತಿಮೆಗಳನ್ನು ಪೂಜಿಸಿ ನೀರಿನಲ್ಲಿ ಬಿಡಬೇಕು. ವೈಭವವಿದ್ದರೆ ಉತ್ತರ ಮುಖವಾಗಿ ಗಂಗೆಯ ಉತ್ಸವ ಮೂರ್ತಿಯನ್ನು ಸ್ಥಾಪಿಸಿ ರಥೋತ್ಸವವನ್ನು ಮಾಡಿಸಬಹುದು. ರಥಸ್ಥಿತಳಾದ ದೇವಿಯ ದರ್ಶನವು ಸಕಲ ಪಾಪಪರಿಹಾರಕವು. ಈ ವಿಧವಾದ ಪೂಜೆಯಿಂದ ಹತ್ತು ವಿಧ ಪಾಪಗಳು ನಾಶವಾಗುತ್ತವೆ. ೧) ಕೊಡದಿರುವ ವಸ್ತುವನ್ನು ತೆಗೆದುಕೊಳ್ಳುವುದು ೨) ಹಿಂಸೆಮಾಡುವುದು ೩) ಪರಸ್ತ್ರೀ

ಸಂಬಂಧ ಎಂಬ ಮೂರು ವಿಧವಾದ ಶಾರೀರಿಕ ಪಾಪಗಳು ೪) ಕಠೋರವಚನ ೫) ಸುಳ್ಳು ೬) ಚಾಡಿ ೭) ತಲೆಹರಟೆ (ವ್ಯರ್ಥಾಲಾಪ) ಈ ನಾಲ್ಕು ವಾಚಿಕಪಾಪಗಳು ೮) ಇನ್ನೊಬ್ಬರ ಹಣವನ್ನು ನುಂಗಿ ಹಾಕುವ ಆಲೋಚನೆ ೯) ಮನಸ್ಸಿನಿಂದ ಇನ್ನೊಬ್ಬರಿಗೆ ಅನಿಷ್ಟಚಿಂತನೆ ಮತ್ತು ೧೦) ಮಿಥ್ಯಾಗ್ರಹವೆಂಬ ಮೂರು ವಿಧ ಮಾನಸಿಕ ಪಾಪಗಳು. ಒಟ್ಟು ಹತ್ತು ವಿಧ ಪಾಪಗಳು ಇದೆ. ಒಟ್ಟು ಈ ಹತ್ತು ವಿಧ ಪಾಪಗಳು ಕೋಟಿಗಟ್ಟಲೆ ಜನ್ಮಗಳಲ್ಲಿ ಸಂಗ್ರಹೀತವಾಗಿದ್ದರೂ ನಾಶವಾಗುತ್ತವೆ. "ಓಂ ನಮೋ ದಶಹರಾಯೈ ನಾರಾಯಣ್ಯೈ ನಮಃ" ಎಂಬುದೇ ಪೂಜಾಮಂತ್ರ. ಮಾನವನು ಆ ದಿನ ಹಗಲೂ ರಾತ್ರಿ ಸೇರಿ ಈ ಮಂತ್ರದ ಐದುಸಾವಿರ ಮತ್ತೂ ಐದು ಸಾವಿರ, ಒಟ್ಟು ಹತ್ತು ಸಾವಿರ ಬಾರಿ ಜಪಮಾಡಿದರೆ ಮನುವು ಹೇಳಿದ ಹತ್ತು ಧರ್ಮಗಳ ಫಲವನ್ನು ಪಡೆಯುತ್ತಾನೆ.

**ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥**

ಧೈರ್ಯ, ಕ್ಷಮಾ, ಮನೋನಿಗ್ರಹ, ಕಳ್ಳತನ ಮಾಡದಿರುವುದು. ಪವಿತ್ರತೆ, ಬಾಹ್ಯೇಂದ್ರಿಯನಿಗ್ರಹ, ಸಾತ್ವಿಕಬುದ್ಧಿ, ಆಧ್ಯಾತ್ಮಿಕವಿದ್ಯೆ, ಸತ್ಯ, ಅಕ್ರೋಧ ಇವು ಹತ್ತು ಧರ್ಮಲಕ್ಷಣಗಳು. ಮುಂದೆ ಹೇಳುವ ಸ್ತೋತ್ರವನ್ನು ಚೆನ್ನಾಗಿ ಗ್ರಹಿಸಿ ಆ ದಿವಸ ಪಠಿಸಬೇಕು. ಮತ್ತು ಗಂಗಾಪಿತನಾದ ನಾರಾಯಣನನ್ನು ಪೂಜಿಸಬೇಕು.

## ಗಂಗಾಸ್ತೋತ್ರ

**"ನಮಃ ಶಿವಾಯೈ ಗಂಗಾಯೈ ಶಿವದಾಯೈ ನಮೋಽಸ್ತು ತೇ ।**
**ನಮೋಽಸ್ತು ವಿಷ್ಣುರೂಪಿಣ್ಯೈ ಗಂಗಾಯೈ ತೇ ನಮೋ ನಮಃ ॥**

**ಸರ್ವದೇವ ಸ್ವರೂಪಿಣ್ಯೈ ನಮೋ ಭೇಷಜಮೂರ್ತಯೇ ।**
**ಸರ್ವಸ್ಯ ಸರ್ವ ವ್ಯಾಧೀನಾಂ ಭಿಷಕ್ ಶ್ರೇಷ್ಠೇ ನಮೋಽಸ್ತು ತೇ ॥**

**ಸ್ಥಾಣು ಜಂಗಮ ಸಂಭೂತ ವಿಷ ಹಂತ್ರಿ ನಮೋಽಸ್ತು ತೇ ।**
**ಸಂಸಾರ ವಿಷನಾಶಿನ್ಯೈ ಜೀವನಾಯೈ ನಮೋ ನಮಃ ॥**

**ತಾಪತ್ರಿತಯ ಹಂತ್ರ್ಯೈಚ ಪ್ರಾಣೇಶ್ವರ್ಯೈ ನಮೋ ನಮಃ ।**
**ತುಷ್ಟ್ಯೈ ಸಂತಾಪಹಾರಿಣ್ಯೈ ನಮಸ್ತೇ ಸರ್ವಮೂರ್ತಯೇ ॥**

**ಸರ್ವ ಸಂಶುದ್ಧಿ ಕಾರಿಣ್ಯೈ ನಮಃ ಪಾಪವಿಮುಕ್ತಯೇ ।**
**ಭುಕ್ತಿ ಮುಕ್ತಿಪ್ರದಾಯಿನ್ಯೈ ಭೋಗವತ್ಯೈ ನಮೋ ನಮಃ ॥**

**ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯೈ ನಮೋ ನಮಃ ।**
**ನಮಸ್ತೇ ಲೋಕಪೂಜ್ಯಾಯೈ ತ್ರಿದಶಾಯೈ ನಮೋ ನಮಃ ॥**

**ನಮಸ್ತೇ ಶುಕ್ಲಸಂಸ್ಥಾಯೈ ಕ್ಷೇಮವತ್ಯೈ ನಮೋನಮಃ ।**
**ತ್ರಿದಶಾಸನ ಸಂಸ್ಥಾಯೈ ತೇಜೋವತ್ಯೈ ನಮೋಽಸ್ತು ತೇ ॥**

ಮಂದಾಯೈ ಲಿಂಗಧಾರಿಣ್ಯೈ ನಾರಾಯಣ್ಯೈ ನಮೋ ನಮಃ ।
ನಮಸ್ತೇ ವಿಶ್ವಮಿತ್ರಾಯೈ ರೇವತ್ಯೈ ತೇ ನಮೋ ನಮಃ ॥

ಬೃಹತ್ಯೈ ತೇ ನಮೋ ನಿತ್ಯಂ ಲೋಕಧಾತ್ರ್ಯೈ ನಮೋ ನಮಃ ।
ನಮಸ್ತೇ ವಿಶ್ವಮಿತ್ರಾಯೈ ರೇವತ್ಯೈ ತೇ ನಮೋ ನಮಃ ॥

ಬೃಹತ್ಯೈ ತೇ ನಮೋ ನಿತ್ಯಂ ಲೋಕಧಾತ್ರ್ಯೈ ನಮೋ ನಮಃ ।
ನಮಸ್ತೇ ವಿಶ್ವಮುಖ್ಯಾಯೈ ನಂದಿನ್ಯೈ ತೇ ನಮೋ ನಮಃ ॥

ಪೃಥ್ವ್ಯೈ ಶಿವಾಮೃತಾಯೈ ಚ ವಿರಜಾಯೈ ನಮೋ ನಮಃ ।
ಪರಾವರಗತಾದ್ಯಾಯೈ ತಾರಾಯೈ ತೇ ನಮೋ ನಮಃ ॥

ನಮಸ್ತೇ ಸ್ವರ್ಗಸಂಸ್ಥಾಯೈ ಅಭಿನ್ನಾಯೈ ನಮೋ ನಮಃ ।
ಶಾಂತಾಯೈ ತೇ ಪ್ರತಿಷ್ಠಾಯೈ ವರದಾಯೈ ನಮೋ ನಮಃ ॥

ಉಗ್ರಾಯೈ ಮುಖಜಲ್ಪಾಯೈ ಸಂಜೀವಿನ್ಯೈ ನಮೋ ನಮಃ ।
ಬ್ರಹ್ಮಜಾಯೈ ಬ್ರಹ್ಮದಾಯೈ ದುರಿತಘ್ನ್ಯೈ ನಮೋ ನಮಃ ॥

ಪ್ರಣತಾರ್ತಿಪ್ರಭಂಜಿನ್ಯೈ ಜಗನ್ಮಾತ್ರೇ ನಮೋ ನಮಃ ।
ವಿಷ್ಣುಜಾಯೈ ದುರ್ಗಹಂತ್ರ್ಯೈ ದಕ್ಷಾಯೈ ತೇ ನಮೋ ನಮಃ ॥

ಸರ್ವಾಪತ್ ಪ್ರತಿಪಕ್ಷಾಯೈ ಮಂಗಲಾಯೈ ನಮೋ ನಮಃ ।
ಪರಾಪರ ಪರೇ ತುಭ್ಯಂ ನಮೋ ಮೋಕ್ಷಪ್ರದೇ ಸದಾ ॥

ಗಂಗಾ ಮಮಾಗ್ರತೋ ಭೂಯಾತ್ ಗಂಗಾ ಮೇ ಪಾರ್ಶ್ವಯೋಸ್ತಥಾ ।
ಗಂಗಾ ಮೇ ಸರ್ವತೋ ಭೂಯಾತ್ ತ್ವಯಿ ಗಂಗೇಽಸ್ತು ಮೇ ಸ್ಥಿತಿಃ ॥

ಆದೌ ತ್ವಮಂತೇ ಮಧ್ಯೇ ಚ ಸರ್ವಾ ತ್ವಂ ಗಾಂ ಗತೇ ಶಿವೇ ।
ತ್ವಮೇವ ಮೂಲಪ್ರಕೃತಿಸ್ತ್ವಂಹಿ ನಾರಾಯಣಃ ಪ್ರಭುಃ ।
ಗಂಗೇ ತ್ವಂ ಪರಮಾತ್ಮಾ ಚ ಶಿವಸ್ತುಭ್ಯಂ ನಮೋ ನಮಃ ॥

ನಾ. ಉತ್ತರ ೪೩.೬೯-೮೪

ಭಕ್ತಿ ಶ್ರದ್ಧೆಗಳಿಂದ ಈ ಸ್ತೋತ್ರದ ಪಠನ ಶ್ರವಣಮಾಡುವವರ ಮಾನಸ, ವಾಚಿಕ, ಕಾಯಿಕ ಪಾಪಗಳು (ಹತ್ತು ವಿಧ) ನಾಶವಾಗುತ್ತವೆ. ರೋಗ ಪರಿಹಾರ ಆಪತ್ ಪರಿಹಾರಗಳೂ ಶತ್ರುಭೀತಿ - ಕಾರಾಗಾರಬಂಧನ. ಪರಿಹಾರಗಳೂ ಸಿದ್ಧಿಸುತ್ತವೆ. ಈ ಸ್ತೋತ್ರಗ್ರಂಥದ ಪೂಜೆಯಿಂದ ಅಗ್ನಿಭಯ ಮತ್ತು ಚೋರಭಯಗಳ ಪರಿಹಾರ ವಾಗುತ್ತವೆ. ಜ್ಯೇಷ್ಠಶುಕ್ಲದಶಮಿಯದಿನ ಹತ್ತು ಬಾರಿ ಈ ಸ್ತೋತ್ರದ ಜಪ ಅಥವಾ ಪಾರಾಯಣ ಮಾಡುವವನು ದರಿದ್ರನಾಗಲಾರ. ಹಿಂದೆ ಹೇಳಿದ ವಿಧ್ಯುಕ್ತ ಪೂಜಾ ವಿಧಾನದ ಫಲವನ್ನು ಪಡೆಯುತ್ತಾನೆ. ಗೌರಿಯಂತೆಯೇ ಗಂಗೆಯನ್ನು ಪೂಜಿಸಬೇಕು.

# ಗಯಾ ತೀರ್ಥ ಮಹಿಮಾ

ಗಂಗಾಮಾಹಾತ್ಮ್ಯವನ್ನು ಕೇಳಿದ ಮೋಹಿನಿಯು ಗಯಾತೀರ್ಥದ ಮಹಿಮೆಯನ್ನು ಹೇಳಬೇಕೆಂದು ಕೇಳಿದಾಗ ಪುರೋಹಿತ ವಸುವು ಹೇಳಲಾರಂಭಿಸಿದನು. "ಬ್ರಹ್ಮಪುತ್ರಿ! ದೇವದೇವೇಶ್ವರನಾದ ಬ್ರಹ್ಮನ ನಿತ್ಯನಿವಾಸಸ್ಥಾನವಾದ ಗಂಗೆಯ ವಿಷಯದಲ್ಲಿ ಪಿತೃದೇವತೆಗಳು ಹೇಳಿದ ಈ ಗಾಥೆಯು ಪ್ರಸಿದ್ಧವಾಗಿದೆ.

**ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥**

ಬಹಳ ಮಕ್ಕಳು ಬೇಕೆಂದು ಆಶಿಸಬೇಕು, ಏಕೆಂದರೆ ಅವರಲ್ಲಿ ಯಾವನಾದರೊಬ್ಬನು ಗಯೆಗೆ ಹೋಗಿ ಶ್ರಾದ್ಧಮಾಡಬಹುದು. ಅಶ್ವಮೇಧಯಾಗವನ್ನಾದರೂ ಮಾಡಬಹುದು. ನೀಲವೃಷೋತ್ಸರ್ಗವನ್ನಾದರೂ ಮಾಡಬಹುದು." ಹಿಂದೆ ಗಯಾಸುರನೆಂಬ ಪರಾಕ್ರಮಶಾಲಿಯಾದ ರಾಕ್ಷಸನಿದ್ದನು. ಅವನ ಅತ್ಯುಗ್ರತಪಸ್ಸಿನಿಂದ ಸಮಸ್ತ ಚರಾಚರ ಪ್ರಪಂಚಕ್ಕೂ ಸಂತಾಪವುಂಟಾದಾಗ ದೇವತೆಗಳು ಭಗವಂತನಾದ ನಾರಾಯಣನನ್ನು ಮೊರೆಹೊಕ್ಕರು. ನಾರಾಯಣನು ದೇವತೆಗಳಿಗೆ ಅಭಯಕೊಟ್ಟು ಗದಾಧಾರಿಯಾಗಿ ಬಂದು ಗದೆಯಿಂದಲೇ ಹೊಡೆದು ಗಯಾಸುರನನ್ನು ಸಂಹರಿಸಿದನು. ಭಕ್ತರಿಗೆ ಭಕ್ತಿಯಿಂದ ಮುಕ್ತಿದಾತನಾಗಿ ಅಲ್ಲಿಯೇ ನೆಲೆ ನಿಂತನು. ಗಯಾತೀರ್ಥದಲ್ಲಿ ಬ್ರಹ್ಮದೇವರು ಯಜ್ಞವನ್ನು ಮಾಡಿದರು. ಮತ್ತು ಅಲ್ಲಿಯೇ ಸರಸ್ವತೀನದಿಯನ್ನು ಸೃಷ್ಟಿಮಾಡಿದರು. ಬ್ರಾಹ್ಮಣರ ಪ್ರಾರ್ಥನಾನುಸಾರವಾಗಿ ಮತ್ತು ಅನೇಕ ತೀರ್ಥಗಳನ್ನು ಅಲ್ಲಿ ನಿರ್ಮಿಸಿ ಹೇಳಿದರು - "ಬ್ರಾಹ್ಮಣರೇ! ಗಯಾ ಶ್ರಾದ್ಧಮಾಡಿದರೆ ಅವರ ಪಿತೃಗಳು ಬ್ರಹ್ಮಲೋಕಕ್ಕೆ ಹೋಗುತ್ತಾರೆ, ನಿಮ್ಮನ್ನು ಸತ್ಕರಿಸುವವರು ನನ್ನನ್ನು ಪೂಜಿಸಿದಂತಾಗುತ್ತದೆ. ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಶಾಲೆಯಲ್ಲಿ ಮೃತ್ಯು, ಕುರುಕ್ಷೇತ್ರದಲ್ಲಿ ನಿವಾಸ ನಾಲ್ಕೂ ಮುಕ್ತಿಸಾಧನಗಳು, ಬ್ರಹ್ಮಹತ್ಯಾ, ಮದ್ಯಪಾನ, ಚೌರ್ಯ, ಗುರುಪತ್ನೀಗಮನ, ಈ ಪಾಪವುಳ್ಳವರ ಸಂಸರ್ಗ, ಇಂತಹ ಪಂಚಮಹಾಪಾಪಗಳು ಗಯಾಶ್ರಾದ್ಧದಿಂದ ನಾಶವಾಗುತ್ತವೆ. ಮರಣಹೊಂದಿದ ಮೇಲೆ ಯಾರ ದೇಹಕ್ಕೆ ದಾಹಸಂಸ್ಕಾರವಾಗಿರುವುದಿಲ್ಲವೋ, ಯಾರು ಕ್ರೂರಮೃಗಗಳಿಂದ ಕೊಲ್ಲಲ್ಪಟ್ಟಿರುತ್ತಾರೋ, ಯಾರು ಸರ್ಪದಂಶನದಿಂದ ಮೃತರಾಗಿರುತ್ತಾರೋ, ಅವರೆಲ್ಲರಿಗೂ ಗಯಾಶ್ರಾದ್ಧದಿಂದ ಸದ್ಗತಿಯುಂಟಾಗುತ್ತದೆ."

ದೇವಿ, ಈ ವಿಷಯದಲ್ಲಿ ಪ್ರಾಚೀನವಾದ ಒಂದು ಇತಿಹಾಸವಿದೆ. ತ್ರೇತಾಯುಗದಲ್ಲಿ ವಿಶಾಲಾ ಎಂಬ ನಗರಿಯಲ್ಲಿ ವಿಶಾಲನೆಂಬ ರಾಜನಿದ್ದನು. ಮಹಾಧೈರ್ಯಶಾಲಿಯಾದ ಸದ್ಗುಣನಿಧಿಯಾದ ವಿಶಾಲನು ಒಂದು ಬಾರಿ ಗಯಾಶಿರಕ್ಕೆ ಬಂದು ಶ್ರಾದ್ಧವನ್ನು ಪ್ರಾರಂಭಿಸಿದನು. ಪಿತೃಗಳಿಗೆ ಪಿಂಡಪ್ರದಾನವನ್ನು ಆರಂಭಿಸಿದನು ಅಷ್ಟರಲ್ಲಿ ಆಕಾಶದಲ್ಲಿ ಕ್ರಮವಾಗಿ ಬಿಳಿ, ಕೆಂಪು, ಕಪ್ಪಾದ ಆಕಾರವುಳ್ಳ ಮೂರು ಪುರುಷರನ್ನು ನೋಡಿದನು. ರಾಜನು ನೀವು ಯಾರೆಂದು ಕೇಳಿದಾಗ ಶ್ವೇತನು (ಬಿಳಿಯ ಬಣ್ಣದವನು) ಹೇಳಿದನು - "ರಾಜನೇ, ನಾನು ನಿನ್ನ ತಂದೆ. ಈಗ ನನಗೆ ಸಿತ ಎಂದೂ ಹೆಸರು. ಶರೀರದ ವರ್ಣವೂ ಬಿಳಿಯಾಗಿದೆ. ನನ್ನ ಕಾರ್ಯಗಳೂ ಶಿತ (ಉಜ್ವಲ)ವಾಗಿಯೇ ಇದ್ದುವು. ಈ ಕೆಂಪು ಬಣ್ಣದ ಪುರುಷನು ನನ್ನ ತಂದೆ. ಇವನು ನಿಷ್ಠುರವಾದ ನಡತೆಯಿಂದ ಕೂಡಿ, ಬ್ರಹ್ಮಹತ್ಯಾದಿ

ಪಾಪಗಳನ್ನು ಮಾಡಿದ್ದನು. ಈಗ ಕೆಂಪಾಗಿದ್ದಾನೆ. ಈ ಮೂರನೆಯವನು ನಿನ್ನ ಮುತ್ತಾತನು. ಇವನ ಹೆಸರೂ ಕೃಷ್ಣ. ಬಣ್ಣವೂ ಕಪ್ಪು. ಇವನು ಹಿಂದಿನ ಜನ್ಮದಲ್ಲಿ ಅನೇಕ ಋಷಿಗಳನ್ನು ವಧಿಸಿದ್ದನು. ಇವರಿಬ್ಬರೂ ಅವೀಚಿಯೆಂಬ ನರಕದಲ್ಲಿ ಬಿದ್ದಿದ್ದರು. ನಾನು ಇಂಥ ಪಾಪ ಕೃತ್ಯಗಳಲ್ಲಿ ಭಾಗಿಯಾಗಿದ್ದೆನು, ಈಗ ನಾವು ಮೂವರು ನೀನು ಗಯೆಯಲ್ಲಿ ಪಿಂಡಪ್ರದಾನ ಮಾಡಿದ್ದರಿಂದ ಮುಕ್ತರಾಗಿದ್ದೇವೆ.''

ಒಂದು ಬಾರಿ ಒಂದು ಪ್ರೇತರಾಜವು ತಾನಿದ್ದಲ್ಲಿಗೆ ಮಾರ್ಗವಶದಿಂದ ಆಕಸ್ಮಿಕವಾಗಿ ಬಂದ ಒಬ್ಬ ವೈಶ್ಯನ ಹತ್ತಿರ ತಮ್ಮ ಮುಕ್ತಿಗಾಗಿ ಹೀಗೆ ಬೇಡಿಕೊಂಡಿತು. ''ಅಯ್ಯಾ, ನೀನು ಗಯೆಗೆ ಹೋಗಿ ಸ್ನಾನ ಮಾಡಿ. ನನ್ನ ಹೆಸರನ್ನು ಹೇಳಿ ಅಲ್ಲಿ ಪಿಂಡ ಪ್ರದಾನ ಮಾಡು'' ಎಂದು ಹೇಳಿ ತನ್ನ ಇತರ ಅನುಯಾಯಿಗಳ ಹೆಸರನ್ನೂ, ತನ್ನ ಹೆಸರನ್ನು ಗುಟ್ಟಾಗಿ ವಿಸ್ತಾರವಾಗಿ ವಿಧಿಪೂರ್ವಕವಾಗಿ ಹೇಳಿತು. ವೈಶ್ಯನು ಶ್ರಾದ್ಧಕ್ಕೆ ಬೇಕಾದ ಹಣವನ್ನು ಸಂಗ್ರಹಿಸಿ ಗಯಾ ಕ್ಷೇತ್ರಕ್ಕೆ ಹೋಗಿ ಅಲ್ಲಿ ತನ್ನ ಪಿತೃಗಳಿಗೆ ಮೊದಲು ಪಿಂಡಪ್ರದಾನ ಮಾಡಿ ಅನಂತರ ಎಲ್ಲಾ ಪ್ರೇತಗಳಿಗೂ ಕ್ರಮವಾಗಿ ಪಿಂಡ ಪ್ರದಾನ ಮಾಡಿ ಅವುಗಳನ್ನು ಉದ್ದೇಶಿಸಿ ದಕ್ಷಿಣೆಯನ್ನೂ ಕೊಟ್ಟನು. ಇದರಿಂದ ಆ ಎಲ್ಲಾ ಪ್ರೇತಗಳಿಗೂ ಪ್ರೇತಭಾವದಿಂದ ಬಿಡುಗಡೆಯಾಗಿ, ಅವುಗಳು ದ್ವಿಜತ್ವವನ್ನು ಹೊಂದಿ, ಅನಂತರ ಮುಕ್ತಿಯನ್ನು ಹೊಂದಿದುವು. ಗಯೆಯಲ್ಲಿ ಧರ್ಮಪೃಷ್ಠ, ಬ್ರಹ್ಮಸಭಾ, ಗಯಾಶೀಷ, ಅಕ್ಷಯವಟ, ಧರ್ಮಪೃಷ್ಠ ಮತ್ತು ಧೇನುಕಾರಣ್ಯಗಳ ದರ್ಶನ ಮಾಡಿ ಅಲ್ಲಿ ಪಿತೃಪೂಜೆ ಮಾಡಿದರೆ ತನ್ನ ಹಿಂದಿನ ಇಪ್ಪತ್ತು ಪೀಳಿಗೆಗಳ ಉದ್ಧಾರವಾಗುತ್ತದೆ. ಗೋತೀರ್ಥ ಮತ್ತು ಗೃಧ್ರಪಟ ತೀರ್ಥಗಳಲ್ಲಿ ಮಾಡಿದ ಶ್ರಾದ್ಧವು ಮಹಾಫಲಪ್ರದವಾಗಿದೆ. ಅಲ್ಲಿಯೇ ಇರುವ ಮತಂಗಾಶ್ರಮವನ್ನು ದರ್ಶನ ಮಾಡಿ. ಜನರ ಎದುರಿನಲ್ಲಿ ಧರ್ಮ ಸರ್ವಸ್ವ ಘೋಷಣೆಯನ್ನು ಮಾಡುತ್ತಾರೆ.

ಅನಂತರ ನಿರಂತರ ದಿವ್ಯ ಸಂಗೀತಧ್ವನಿಯ ಗುಂಜನದಿಂದ ಮಂಜುಳಕರವಾದ ಉದಯಗಿರಿಯನ್ನು ಸೇರಿ ಅಲ್ಲಿ ಸಾವಿತ್ರೀ ದೇವಿಯ ಪರಮ ಪುಣ್ಯದಾಯಕವಾದ ಚಿಹ್ನೆಯನ್ನು ಸಂದರ್ಶಿಸಬೇಕು. ಅದೂ ವರೆಗೂ ನಿಯಮಿತವಾದ ಸಂಧ್ಯಾವಂದನ ವ್ರತದ ನಿಯಮವನ್ನು ಪಾಲಿಸದ ಬ್ರಾಹ್ಮಣನು ಅಲ್ಲಿ ಸಂಧ್ಯಾವಂದನೆಯನ್ನು ನಿಯಮಿತವಾಗಿ ಮಾಡಬೇಕು, ಇದರಿಂದ ಹನ್ನೆರಡು ವರ್ಷ ಸಂಧ್ಯಾವಂದನೆ ಮಾಡಿದ ಪುಣ್ಯವು ಬರುತ್ತದೆ, ವಿಧಿನಂದಿನಿ, ಅದರ ಸಮೀಪದಲ್ಲಿಯೇ ಯೋನಿದ್ವಾರ ಎಂಬ ತೀರ್ಥವಿದೆ. ಅದರ ಯಾತ್ರೆ ಮಾಡಿದವನು ಪುನಃ ಯೋನಿ ಸಂಕಟದಲ್ಲಿ ಸಿಕ್ಕಿ ಬೀಳುವುದಿಲ್ಲ. ಮಾನವನು ಒಂದು ಶುಕ್ಲಪಕ್ಷ ಮತ್ತು ಒಂದು ಕೃಷ್ಣ ಪಕ್ಷ ಪೂರ್ತಿಯಾಗಿ ಗಯೆಯಲ್ಲಿ ವಾಸಿಸಬೇಕು, ಇದರಿಂದ ಅವನ ಏಳು ಪೀಳಿಗೆಯವರು ಪವಿತ್ರರಾಗುತ್ತಾರೆ, ಸುಭಗೇ! ಅನಂತರ ಮಹಾಫಲ ದಾಯಕವಾದ ಧರ್ಮಪೃಷ್ಠತೀರ್ಥಕ್ಕೆ ಹೋಗಬೇಕು. ಅಲ್ಲಿ ಪಿತೃಲೋಕಪಾಲಕನಾದ ಧರ್ಮರಾಜನು ಸಾಕ್ಷಾತ್ತಾಗಿ ವಾಸ ಮಾಡುತ್ತಾನೆ. ಅಲ್ಲಿಗೆ ಹೋಗುವ ಮಾನವನಿಗೆ ಅಶ್ವಮೇಧ ಯಾಗದ ಫಲವು ಪ್ರಾಪ್ತವಾಗುತ್ತದೆ. ಅನಂತರ ಮಾನವನು ಪರಮ ಶ್ರೇಷ್ಠವಾದ ಬ್ರಹ್ಮ ತೀರ್ಥಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮದೇವರ ದರ್ಶನ ಮಾಡುವ ಮಾನವನಿಗೆ ರಾಜಸೂಯ ಯಜ್ಞದ ಫಲವು ಪ್ರಾಪ್ತವಾಗುತ್ತದೆ. ಅಲ್ಲಿಯೇ ಹತ್ತಿರದಲ್ಲಿ ಫಲ್ಗುತೀರ್ಥವಿದೆ. ಅಲ್ಲಿಗೆ ಅವಶ್ಯವಾಗಿ ಹೋಗಬೇಕು. ಆ ತೀರ್ಥವು ಬಹಳವಾದ ಫಲ ಮತ್ತು ಮೂಲ, (ಗಡ್ಡೆ)ಗಳಿಂದ ಸಮೃದ್ಧವಾಗಿದೆ. ಮತ್ತು ಅತ್ಯಂತ ಪ್ರಖ್ಯಾತವಾಗಿದೆ.

ಅಲ್ಲಿರುವ ಕೌಶಿಕೀ ನದಿಯಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುತ್ತದೆಯೆಂಬುದಾಗಿ ಶಾಸ್ತ್ರಗಳು ಸಾರುತ್ತಿವೆ. ಹಿಂದೆ ಪರಮ ಪುಣ್ಯಾತ್ಮನಾದ, ಧರ್ಮಜ್ಞಾನಿಯಾದ ಗಯನೆಂಬವನಿದ್ದನು, ಅವನು ಸುರಕ್ಷಿತವಾಗಿ ಕಾಪಾಡಿದ್ದ ಪರ್ವತವು ಅಲ್ಲಿಯೇ ಇದೆ. ಅಲ್ಲಿಗೆ ಹೋಗಬೇಕು. ಅದರ ದರ್ಶನವೇ ಪರಮ ಪುಣ್ಯ ಪ್ರದವು. ಅಲ್ಲಿಯೇ ಗಯಾಶಿರ ಎಂಬ ಸರೋವರವೂ ಸಮೀಪದಲ್ಲಿಯೇ ಪವಿತ್ರ ಜಲವುಳ್ಳ ಮಹಾ ನದಿಯೂ ಇದೆ. ಋಷಿಗಳು ಪರಮ ಭಕ್ತಿಯಿಂದ ಸೇವಿಸಿದ್ದ ಪುಣ್ಯಮಯವಾದ ಬ್ರಹ್ಮಸರೋವರವೆಂಬ ತೀರ್ಥವೂ ಅಲ್ಲಿಯೇ ಇದೆ. ಅಲ್ಲಿ ಸನಾತನನಾದ ಯಮಧರ್ಮರಾಜನು ನಿರಂತರ ಸನ್ನಿಧಾನವನ್ನಿಟ್ಟಿದ್ದಾನೆ.

ಅಂತಹ ವೈವಸ್ವತ ಯಮನನ್ನು ಅಗಸ್ತ್ಯರು ಭೇಟಿ ಮಾಡಿ ಸಂಭಾಷಣೆ ನಡೆಸಿದ ಸ್ಥಳವೂ ಅದೇ ಆಗಿದೆ. ಅಲ್ಲಿ ಎಲ್ಲಾ ನದಿಗಳ ಉದ್ಗಮ ಸ್ಥಾನವೂ ಕಂಡು ಬರುತ್ತದೆ. ಮತ್ತು ಪಿನಾಕಪಾಣಿಯಾದ ಮಹಾದೇವನು ಅಲ್ಲಿ ನಿತ್ಯದಲ್ಲಿಯೂ ವಾಸ ಮಾಡುತ್ತಾನೆ. ಲೋಕ ಪ್ರಖ್ಯಾತವಾದ ಅಕ್ಷಯವಟವೂ ಅಲ್ಲಿಯೇ ಇದೆ. ಪೂರ್ವ ಕಾಲದಲ್ಲಿ ರಾಜಗಯನು ಯಜಮಾನನಾಗಿದ್ದು ಅಲ್ಲಿಯೇ ಯಾಗವನ್ನು ಮಾಡಿದ್ದನು. ಅಲ್ಲಿ ನದಿಗಳಲ್ಲಿ ಶ್ರೇಷ್ಠಳಾದ ಗಂಗೆಯು ಪ್ರಕಟಳಾಗಿ, ಯಜ್ಞದಲ್ಲಿ ತನ್ನ ಸನ್ನಿಧಾನ ವನ್ನಿಟ್ಟಿದ್ದಳು. ಮುಂಡ ಪೃಷ್ಠ, ಗಯಾ, ದೈವತಗಿರಿ, ದೇವಗಿರಿ, ತೃತೀಯ, ಕ್ರೌಂಚಾಪದ ಇವೆಲ್ಲವುಗಳ ದರ್ಶನ ಮಾಡಿದ ಮೇಲೆ ಮನುಷ್ಯನಲ್ಲಿ ಯಾವ ಪಾಪವೂ ಉಳಿಯುವುದಿಲ್ಲ. ಶಿವನದೀ ಎಂಬ ಶಿವಕರ(ಹಸ್ತ)ವನ್ನೂ ಗಯೆಯಲ್ಲಿ ಗಧಾಧರನನ್ನೂ ಮತ್ತು ತಾನು ಹೋದಲ್ಲೆಲ್ಲಾ ಸರ್ವವ್ಯಾಪ್ತನಾದ ಚಿತ್ ಸ್ವರೂಪಿಯಾದ ಶ್ರೀ ಮನ್ನಾರಾಯಣನನ್ನೂ ನೋಡಬೇಕು. ಈ ರೀತಿ ದರ್ಶನಗಳಿಂದ ಮನುಷ್ಯನ ಎಲ್ಲಾ ಪಾಪರಾಶಿಗಳೂ ದೂರವಾಗುತ್ತವೆ. ಕಾಶಿಯಲ್ಲಿ ವಿಶಾಲಾಕ್ಷಿಯು ಪ್ರಸಿದ್ಧಳು. ಪ್ರಯಾಗದಲ್ಲಿ ಲಲಿತಾ ದೇವಿಯು ವಿಖ್ಯಾತಳು. ಗಯೆಯಲ್ಲಿ ಮಂಗಲಾದೇವಿಯು ಸರ್ವ ವಿದಿತಳು. ಕೃತ ಶೌಚವೆಂಬ ತೀರ್ಥದಲ್ಲಿ ಪೈಂಕಿಂಕಾ ದೇವಿಯಿದ್ದಾಳೆ. ಇವರೆಲ್ಲರ ದರ್ಶನವೂ ಸಮಸ್ತ ಪಾಪಪರಿಹಾರಕವೆಂದು ತಿಳಿ. ಗಯೆಯಲ್ಲಿ ವಾಸ ಮಾಡುತ್ತಿರುವಾಗ ಮಾನವನು ಕೊಡುವ ದಾನವೆಲ್ಲವೂ ಅಕ್ಷಯವಾಗುತ್ತದೆ. ಅವನು ಮಾಡುವ ಶ್ರಾದ್ಧಾದಿ ಕಾರ್ಯಗಳಿಂದ ಪಿತೃದೇವತೆಗಳು ಪ್ರಸನ್ನರಾಗುತ್ತಾರೆ. ಪುತ್ರನು ಗಯೆಯಲ್ಲಿದ್ದು ಅನ್ನದಾನ ಮಾಡಿದಾಗಲೇ ಪಿತೃಗಳು ನಾವು ನಿಜವಾಗಿಯೂ ಪುತ್ರವಂತರೆಂದು ಭಾವಿಸುತ್ತಾರೆ. ಗಯೆಯಲ್ಲಿ ಒಂದು ಮತ್ತು ಎರಡನೇ ದಿನ ಏನು ಮಾಡಬೇಕು? ಪುರೋಹಿತ ವಸುಗಳು ಹೇಳುತ್ತಾರೆ. ''ಮೋಹಿನಿ ಕೇಳು. ಈಗ ನಾನು ನಿನಗೆ ಪ್ರೇತ ಶಿಲೆಯ ಪವಿತ್ರವಾದ ಮಾಹಾತ್ಮ್ಯವನ್ನು ಹೇಳುತ್ತೇನೆ. ಅಲ್ಲಿ ಪಿಂಡ ಪ್ರದಾನ ಮಾಡಿದಾಗ ಮಾನವನು ತನ್ನ ಪಿತೃಗಳನ್ನೆಲ್ಲ ಉದ್ಧಾರ ಮಾಡಿದಂತಾಗುತ್ತದೆ.

ಪ್ರಭಾಸೇಶಪ್ರಿಯ ಶಿಲೆಯ ಕಾಲಿನ ಭಾಗವನ್ನು ಮುಚ್ಚಿಬಿಟ್ಟಿದೆ. ಮುನಿಗಳ ಸ್ತೋತ್ರದಿಂದ ಸಂತುಷ್ಟನಾದ ಪ್ರಭಾಸೇಶನು ಶಿಲೆಯ ಅಂಗುಷ್ಠ ಭಾಗದಿಂದ ಪ್ರಕಟನಾದನು. ಪ್ರಭಾಸ ತೀರ್ಥದಲ್ಲಿ ಅಂಗುಷ್ಠ ಭಾಗದಿಂದ ಪ್ರಕಟನಾದುದರಿಂದಲೇ ಅವನಿಗೆ ಪ್ರಭಾಸೇಶನೆಂದು ಹೆಸರು. ಶಿಲೆಯ ಅಂಗುಷ್ಠದ ಒಂದು ಪ್ರದೇಶದಲ್ಲಿ ಪ್ರಭಾಸೇಶನ ಸನ್ನಿಧಾನವಿದೆ.ಅಲ್ಲಿಯೇ ಪ್ರೇತ ಶಿಲೆಯ ಸ್ಥಿತಿಯೂ ಇದೆ. ಅಲ್ಲಿ ಪಿಂಡದಾನ ಮಾಡಿದರೆ ಮನುಷ್ಯನಿಗೆ ಪ್ರೇತ ಯೋನಿಯಿಂದ ಬಿಡುಗಡೆಯಾಗುತ್ತದೆ. ಆದುದರಿಂದಲೇ

ಆದಕ್ಕೆ ಪ್ರೇತಶಿಲೆಯೆಂಬ ಹೆಸರು ಬಂದಿದೆ. ಮಹಾನದೀ, ಮತ್ತು ಪ್ರಭಾಸಾಶ್ಮಗಳ ಸಂಗಮ ಸ್ಥಳದಲ್ಲಿ ಸ್ನಾನ ಮಾಡಿದವನು ವಾಸುದೇವನ ಪರಮ ಕೃಪಾಭಾಜನನಾಗುತ್ತಾನೆ. ಆದುದರಿಂದಲೇ ಈ ಸಂಗಮ ಸ್ಥಾನವನ್ನು ರಾಮ ತೀರ್ಥವೆಂದು ಕರೆಯುತ್ತಾರೆ. ದೇವತೆಗಳೆಲ್ಲರೂ ಒಂದು ಬಾರಿ "ಶ್ರೀರಾಮ ನೀನು ಇಲ್ಲಿ ಸ್ನಾನ ಮಾಡಿ ಈ ತೀರ್ಥದ ಮಹತ್ವವನ್ನು ಹೆಚ್ಚಿಸಬೇಕು" ಎಂದು ಭಗವಂತನಾದ ಶ್ರೀ ರಾಮಚಂದ್ರನನ್ನು ಪ್ರಾರ್ಥಿಸಿದಾಗ ಅವನು ಮಹಾನದಿಯಲ್ಲಿ ಸ್ನಾನ ಮಾಡಿದನು. ಅಂದಿನಿಂದ ಅಲ್ಲಿ ಎಲ್ಲ ಮಾನವರನ್ನು ಪವಿತ್ರರನ್ನಾಗಿ ಮಾಡುವ "ರಾಮ ತೀರ್ಥ"ವು ಪ್ರಕಟವಾಯಿತು. ಮಾನವನು ತನ್ನ ಹಿಂದಿನ ಸಾವಿರಾರು ಜನ್ಮಗಳಲ್ಲಿ ಎಷ್ಟೇ ಪಾಪ ಸಂಗ್ರಹವನ್ನು ಮಾಡಿರಲಿ, ಆದೆಲ್ಲವೂ ರಾಮ ತೀರ್ಥದಲ್ಲಿ ಸ್ನಾನ ಮಾಡಿದ ಕೂಡಲೇ ನಷ್ಟವಾಗುತ್ತದೆ.

**ರಾಮ ರಾಮ ಮಹಾಬಾಹೋ ದೇವಾನಾಮಭಯಂಕರ ।**
**ತ್ವಾಂ ನಮಸ್ಯೇ ತು ದೇವೇಶ ಮಮ ನಶ್ಯತು ಪಾತಕಂ ॥**

**ನಾ.ಪು. ಉತ್ತರ ೪೫ - ೮೬**

ಮಹಾಬಾಹುವಾದ ದೇವತೆಗಳಿಗೆ ಅಭಯ ಪ್ರದನಾದ ಶ್ರೀರಾಮ! ನಿನಗೆ ನಮಸ್ಕಾರ. ದೇವೇಶ, ನನ್ನ ಪಾಪವೆಲ್ಲಾ ನಾಶವಾಗಲಿ." ಈ ಮಂತ್ರವನ್ನು ಹೇಳುತ್ತ ಮಂತ್ರಾರ್ಥವನ್ನು ಅನುಸಂಧಾನಮಾಡುತ್ತ, ರಾಮತೀರ್ಥದಲ್ಲಿ ಸ್ನಾನಮಾಡಬೇಕು. ಅನಂತರ ಶ್ರಾದ್ಧ, ಪಿಂಡಪ್ರದಾನಗಳನ್ನು ಮಾಡಬೇಕು. ಅಂತಹವನ ಪಿತೃಗಳೂ, ಅವನೂ ಕೂಡ ವಿಷ್ಣುಲೋಕದಲ್ಲಿ ಸುಪ್ರತಿಷ್ಠಿತರಾಗುತ್ತಾರೆ. ನಿಯಮವನ್ನು ಪೂರೈಸಿ ಅನಂತರ ಪ್ರಭಾಸೇಶ್ವರನಿಗೆ ಉದ್ದಂಡ ಪ್ರಣಾಮಮಾಡಿ ಭಾಸಮಾನ ಶಿವನ ಬಳಿಗೆ ಹೋಗಬೇಕು. ಅಲ್ಲಿ ಆ ಶಿವನಿಗೂ ದಂಡ ಪ್ರಣಾಮಮಾಡಬೇಕು. ನಂತರ ಪ್ರೇತಶಿಲಾ ಮುಂತಾದ ತೀರ್ಥಗಳಲ್ಲಿ ಘೃತಪಕ್ವವಾದ, ಘೃತಯುಕ್ತವಾದ ಚರುವನ್ನು ತಯಾರಿಸಿ, ಆದರಿಂದ ಪಿಂಡವನ್ನು ತಯಾರಿಸಿ ಅನಂತರ ಪಿತೃಗಳನ್ನು ಆವಾಹಿಸಿ ಮಂತ್ರೋಚ್ಚಾರಣ ಪೂರ್ವಕವಾಗಿ ಅವರಿಗೆ ಪಿಂಡಪ್ರದಾನ ಮಾಡಬೇಕು. ಪ್ರೇತಶಿಲೆಯ ಬಳಿ ಪವಿತ್ರ ಮನಸ್ಕನಾಗಿ ಯಜ್ಞೋಪವೀತವನ್ನು ಅಪಸವ್ಯ (ಎಡಕ್ಕೆ) ಮಾಡಿಕೊಂಡು ದಕ್ಷಿಣ ದಿಕ್ಕಿಗೆ ಮುಖ ಮಾಡಿಕೊಂಡು ಪಿತೃಗಳ ಸ್ಮರಣ ಮತ್ತು ಧ್ಯಾನಮಾಡುತ್ತ ಇರಬೇಕು.

ಕವ್ಯವಾಹಕ, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತ, ಬರ್ಹಿಷದ, ಮತ್ತು ಸೋಮಪ ಇವರೆಲ್ಲರೂ ಪಿತೃ ದೇವತೆಗಳು. "ಎಲೈ ಮಹಾಭಾಗರಾದ ಪಿತೃದೇವತೆಗಳೇ. ನೀವೆಲ್ಲರೂ ಇಲ್ಲಿಗೆ ದಯಮಾಡಿಸಿರಿ. ನೀವು ನಮ್ಮ ಪಿತೃಗಳನ್ನು ಸುರಕ್ಷಿತವಾಗಿ ಸುಖವಾಗಿ ಕಾಪಾಡುತ್ತೀರಿ. ನಿಮ್ಮಿಂದ ರಕ್ಷಿತರಾದ ನನ್ನ ಪಿತೃಗಳು ಮತ್ತು ನನ್ನ ವಂಶದಲ್ಲಿ ಉತ್ಪನ್ನರಾದ ಈಗ ಮೃತರಾಗಿರುವ ಯಾವ ಸಹೋದರ, ಜ್ಞಾತಿ, ಬಂಧುಗಳಿದ್ದಾರೋ ಅವರೆಲ್ಲರೂ ಇಲ್ಲಿಗೆ ಬರಲಿ. ನಾನು ಅವರೆಲ್ಲರಿಗೂ ಪಿಂಡಪ್ರದಾನ ಮಾಡುವುದಕ್ಕಾಗಿ ಈ ಗಯಾ ತೀರ್ಥಕ್ಕೆ ಬಂದಿದ್ದೇನೆ. ಈ ದಿನ ನಾನು ಮಾಡುವ ಈ ಶ್ರಾದ್ಧ ಪಿಂಡಪ್ರದಾನದಿಂದ ಅವರೆಲ್ಲರೂ ಸುಪ್ರೀತರಾಗಲಿ." ಎಂದು ಹೇಳಿ ಆಚಮನ ಮಾಡಿ ಪಂಚಾಂಗ ನ್ಯಾಸಪೂರ್ವಕವಾಗಿ ಪ್ರಾಣಾಯಾಮವನ್ನು ಚೆನ್ನಾಗಿ ಮಾಡಬೇಕು. ಅನಂತರ ದೇಶ ಕಾಲಾದಿಗಳನ್ನು ಉಚ್ಚರಿಸಿ "ಅಸ್ಮತ್ ಪಿತೃಣಾಂ ಪುನರಾವೃತ್ತಿ ರಹಿತ

ಬ್ರಹ್ಮಲೋಕಾಪ್ತಿಹೇತವೇ ಗಯಾಶ್ರಾದ್ಧಮಹಂಕರಿಷ್ಯೇ'' - ನನ್ನ ಪಿತೃಗಳಿಗೆ ಪುನರಾವೃತ್ತಿ ಇಲ್ಲದ ಬ್ರಹ್ಮಲೋಕ ಪ್ರಾಪ್ತಿಗೋಸ್ಕರ ನಾನು ಗಯಾಶ್ರಾದ್ಧವನ್ನು ಮಾಡುವೆನು ಎಂದು ಸಂಕಲ್ಪಿಸಿ ಶಾಸ್ತ್ರೋಕ್ತಕ್ರಮದಿಂದ ವಿಧಿಪೂರ್ವಕವಾಗಿ ಶ್ರಾದ್ಧವನ್ನು ಮಾಡಬೇಕು. ಮೊದಲು ಶ್ರಾದ್ಧಸ್ಥಾನವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪಂಚಗವ್ಯವನ್ನು ಪ್ರೋಕ್ಷಿಸಿ ಶುದ್ಧೀಕರಿಸಬೇಕು. ಅನಂತರ ಪಿತೃಗಳ ಆವಾಹನ ಪೂಜೆಗಳನ್ನು ಮಾಡಿ ಅನಂತರ ಮಂತ್ರ ಪುರಸ್ಸರವಾಗಿ ಪಿಂಡಪ್ರದಾನ ಮಾಡಬೇಕು. ಮೊದಲು ಸಪಿಂಡ ಪಿತೃಗಳಿಗೆ ಶ್ರಾದ್ಧದ ಪಿಂಡಪ್ರದಾನ ಮಾಡಿ ಅವರ ದಕ್ಷಿಣ ಭಾಗದಲ್ಲಿ ದರ್ಭೆಗಳನ್ನು ಹರಡಿ ಅವರಿಗೆ ತಿಲಸಹಿತ ಜಲಾಂಜಲಿ ಕೊಡಬೇಕು. ಪಿತೃತೀರ್ಥದಿಂದ ಅವರಿಗೆ ಅಂಜಲಿಜಲ ದಾನಮಾಡಿ, ನಂತರ ಒಂದು ಹಿಡಿ ಹಿಟ್ಟಿನಿಂದ ಅಕ್ಷಯ ಪಿಂಡವನ್ನು ಕೊಡಬೇಕು. ಪಿಂಡ ದ್ರವ್ಯಗಳಲ್ಲಿ ಎಳ್ಳು ತುಪ್ಪ, ಮೊಸರು, ಜೇನು ಮುಂತಾದವುಗಳನ್ನು ಸೇರಿಸಬೇಕು. ಸಂಬಂಧಿಗಳನ್ನು ಎಳ್ಳು ಮುತಾದವುಗಳಿಂದ ದರ್ಭೆಯ ಮೇಲೆ ಆವಾಹಿಸಬೇಕು. ಶ್ರಾದ್ಧದಲ್ಲಿ ತಾಯಿ, ತಂದೆಯ ತಾಯಿ, ತಂದೆಯ ಅಜ್ಜ (ಮಾತೃ, ಪಿತಾ ಮಹಿ) ಇವರನ್ನು ಕುರಿತು ಹೇಳುವ ಮಂತ್ರ ವಾಕ್ಯಗಳಲ್ಲಿ ಸ್ತ್ರೀಲಿಂಗ ಶಬ್ದಗಳನ್ನು ಹೇಳಬೇಕು, ತನ್ನ ಗೋತ್ರದಲ್ಲಿಯೇ ಆಗಲಿ. ಅಥವಾ ಪರಗೋತ್ರದಲ್ಲಿಯಾಗಲಿ, ಪತಿಪತ್ನಿಯರಿಗೆ ಪಿಂಡಪ್ರದಾನ ಮಾಡುವಾಗ ಪ್ರತ್ಯೇಕವಾಗಿ ಶ್ರಾದ್ಧ ಪಿಂಡಪ್ರದಾನ ಮಾಡದಿದ್ದರೆ ಅದು ವ್ಯರ್ಥವಾಗುತ್ತದೆ. ಪಿಂಡ ಪಾತ್ರದಲ್ಲಿ ಹಿಟ್ಟನ್ನು ಹಾಕಿ, ಅದನ್ನು ಶುದ್ಧಜಲದಿಂದ ತುಂಬಿ ಮಂತ್ರವನ್ನು ಹೇಳುತ್ತಾ ಆ ನೀರಿನಿಂದ ಪ್ರದಕ್ಷಿಣ ಕ್ರಮದಿಂದ ಎಲ್ಲಾ ಪಿಂಡಗಳನ್ನು ಮೂರು ಬಾರಿ ಪ್ರೋಕ್ಷಿಸಬೇಕು. ಅನಂತರ ನಮಸ್ಕಾರ ಮತ್ತು ಕ್ಷಮಾಪ್ರಾರ್ಥನೆಗಳು, ಪಿತೃವಿಸರ್ಜನೆ, ಆಚಮನ, ಸಾಕ್ಷಿದೇವತೆಗಳನ್ನು ಕುರಿತು, ತನ್ನ ಕಾರ್ಯನಿವೇದನ ಇವುಗಳನ್ನು ಮಾಡಬೇಕು. ಮೋಹಿನಿ! ಇದೇ ರೀತಿ ಎಲ್ಲಾ ಸ್ಥಳಗಳಲ್ಲಿಯೂ ಪಿಂಡಪ್ರದಾನ ಮಾಡಬೇಕು.

ಗಯೆಯಲ್ಲಿ ಪಿಂಡಪ್ರದಾನ ಮಾಡುವುದಕ್ಕೆ ಸಮಯ ಮುಹೂರ್ತವನ್ನು ನೋಡಬೇಕಾಗಿಲ್ಲ. ಮಲಮಾಸವಾಗಿರಲಿ, ಜನ್ಮದಿನವಾಗಿರಲಿ, ಗುರುಶುಕ್ರ ಅಸ್ತವಾಗಿರಲಿ, ಗುರು ಸಿಂಹರಾಶಿಯಲ್ಲಿರಲಿ, ಗಯಾ ಶ್ರಾದ್ಧವನ್ನು ಬಿಡಬಾರದು. ಸನ್ಯಾಸಿಯು ಗಯೆಗೆ ಹೋದಾಗ ಶ್ರಾದ್ಧಮಾಡಬಾರದು! ತನ್ನ ದಂಡವನ್ನು ಗಯಾಗದಾಧರನ ಎದುರು ಹಿಡಿದು ನಿಂತುಕೊಂಡು, ಪರಮಾತ್ಮನ ಧ್ಯಾನ ಮಾಡುತ್ತಾ, ಒಂದು ನಿಮಿಷ ತನ್ನ ದಂಡವನ್ನು ವಿಷ್ಣುಪಾದದ ಮೇಲಿಡಬೇಕು, ಇಷ್ಟರಿಂದಲೇ ಅವನು ಪಿತೃಸಹಿತವಾಗಿ ಮುಕ್ತನಾಗುತ್ತಾನೆ.

ಗಯೆಯಲ್ಲಿ ಖೀರು, ಹಿಟ್ಟು, ತಂಬಿಟ್ಟು ಅಕ್ಕಿಯ ಅನ್ನ ಯಾವುದರಿಂದಲಾದರೂ ಪಿಂಡದಾನ ಮಾಡಬಹುದು. ಗಯಾಕ್ಷೇತ್ರದರ್ಶನಮಾಡಿದ ಮೇಲೆ ಮಹಾಪಾಪಿಯೂ ಕೂಡ ಶ್ರಾದ್ಧಮಾಡುವುದಕ್ಕೆ ಅಧಿಕಾರಿಯಾಗುತ್ತಾನೆ. ಶ್ರಾದ್ಧ ಮಾಡಿದ ಮೇಲೆ ಬ್ರಹ್ಮಲೋಕ ಭಾಗಿಯೂ ಆಗುತ್ತಾನೆ. ಫಲ್ಗುತೀರ್ಥದಲ್ಲಿ ಶ್ರಾದ್ಧ ಮಾಡಿದಾಗ ಬರುವ ಫಲವು ಒಂದು ಲಕ್ಷ ಅಶ್ವಮೇಧಯಾಗ ಮಾಡಿದರೂ ದೊರಕಲಾರದು. ಮನುಷ್ಯನು ಗಯೆಯಲ್ಲಿ ಪಿಂಡದಾನಮಾಡುವುದು ಪಿತೃಗಳಿಗೆ ಅತ್ಯಂತ ಪ್ರೀತಿಕರ. ಆದ್ದರಿಂದ ಗಯಾಶ್ರಾದ್ಧದಲ್ಲಿ ವಿಳಂಬಮಾಡಬಾರದು. ವಿಘ್ನವನ್ನೂ ಮಾಡಬಾರದು. ಶ್ರಾದ್ಧಕರ್ತನು ಗಯಾಶ್ರಾದ್ಧ ಕಾಲದಲ್ಲಿ ಹೀಗೆ ಪ್ರಾರ್ಥಿಸಬೇಕು. ''ಯಾರ ನನ್ನ ತಂದೆಯ ವಂಶದಲ್ಲಿ ಸತ್ತಿದ್ದಾರೋ. ಯಾರು ಗುರು, ಶ್ವಶುರ (ಹೆಂಡತಿಯ ತಂದೆ) ಬಂಧುಬಾಂಧವರ ವಂಶದಲ್ಲಿ ಸತ್ತಿದ್ದಾರೋ.

ಇವರ ಹೊರತು ಇನ್ನೂ ಸಹೋದರ ಬಂಧುಗಳು ಸತ್ತಿದ್ದಾರೋ, ನನ್ನ ವಂಶದಲ್ಲಿ ಯಾರಿಗೆ ಪಿಂಡಪ್ರದಾನ ಕರ್ಮವು ನಡೆದಿಲ್ಲವೋ, ಯಾರು ಹೆಂಡತಿ ಮಕ್ಕಳಿಲ್ಲದವರೋ, ಯಾರಿಗೆ ಶ್ರಾದ್ಧ ಕರ್ಮಲೋಪವಾಗಿದೆಯೋ, ಯಾರು ಹುಟ್ಟುಕುರುಡರು ಮತ್ತು ಹೇಳುವರೋ, ಯಾರು ವಿಕಾರರೂಪವುಳ್ಳವರೋ, ಯಾರು ಗರ್ಭದಲ್ಲಿಯೇ ಮೃತರಾಗಿದ್ದಾರೋ, ನನ್ನ ಕುಲದಲ್ಲಿ ಸತ್ತಿರುವ ನನಗೆ ಪರಿಚಯವಿರುವ ಅಥವಾ ಇಲ್ಲದಿರುವ ಎಲ್ಲರಿಗೂ ನಾನು ಕೊಟ್ಟಿರುವ ಪಿಂಡವು ಅಕ್ಷಯರೂಪವನ್ನು ಹೊಂದಿ ಪ್ರಾಪ್ತವಾಗಲಿ, ಬ್ರಹ್ಮ ಮತ್ತು ಶಿವ ಮುಂತಾದ ದೇವತೆಗಳು ಈ ವಿಷಯದಲ್ಲಿ ಸಾಕ್ಷಿಯಾಗಿರಲಿ, ನಾನು ಗಯೆಗೆ ಬಂದು ಶ್ರಾದ್ಧಮಾಡಿ ಪಿತೃಗಳನ್ನು ಉದ್ಧಾರಮಾಡಿದ್ದೇನೆ. ದೇವ ಗದಾಧರ! ನಾನು ಪಿತೃಕಾರ್ಯಕೋಸ್ಕರ ಗಯೆಗೆ ಬಂದಿದ್ದೇನೆ. ಭಗವಂತನೇ! ನೀನೇ ಈ ವಿಷಯಕ್ಕೆ ಸಾಕ್ಷಿಯಾಗಿರಬೇಕು. ನಾನು ಮೂರು ಋಣಗಳಿಂದಲೂ ಮುಕ್ತವಾಗಿದ್ದೇನೆ.''

ಸಾಕ್ಷಿಣಃ ಸಂತು ಮೇ ದೇವಾ ಬ್ರಹ್ಮೇಶಾನಾದಯಸ್ತಥಾ ।
ಮಯಾ ಗಯಾಂ ಸಮಾಸಾದ್ಯ ಪಿತೃಣಾಂ ನಿಷ್ಕೃತಿಃ ಕೃತಾ ॥
ಆಗತೋಽಸ್ಮಿ ಗಯಾಂ ದೇವ ಪಿತೃಕಾರ್ಯೇ ಗದಾಧರ ।
ತ್ವಮೇವ ಸಾಕ್ಷೀ ಭಗವನ್ ಅನೃಣೋಽಹಂ ಋಣ ತ್ರಯಾತ್ ॥

ನಾ. ಉತ್ತರ ೪೫-೫೮-೫೯

ಎಂದು ಉಚ್ಚಕಂಠದಿಂದ ಘೋಷಿಸಬೇಕು. ಮರುದಿನ ಪವಿತ್ರನಾಗಿ ಪ್ರೇತಪರ್ವತಕ್ಕೆ ಹೋಗಿ ಅಲ್ಲಿ ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಜ್ಞಾನಿಯಾದ ಮಾನವನು ದೇವ ಋಷಿಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಅನಂತರ ಪವಿತ್ರನಾಗಿಯೇ ಪ್ರೇತಪರ್ವತದಲ್ಲಿ ಪಿತೃಗಳನ್ನು ಆವಾಹನಮಾಡಿ ಹಿಂದಿನಂತೆಯೇ ಸಂಕಲ್ಪಮಾಡಿ ಪಿತೃಗಳಿಗೆ ಪಿಂಡಪ್ರದಾನ ಮಾಡಬೇಕು. ಪರಮಶ್ರೇಷ್ಠರಾದ ಪಿತೃದೇವತೆಗಳನ್ನು ಅವರ ನಾಮಮಂತ್ರಗಳ ಮೂಲಕ ಚೆನ್ನಾಗಿ ಪೂಜಿಸಿ ಪಿಂಡಪ್ರದಾನ ಮಾಡಬೇಕು.

ಆ ಪ್ರೇತ ಪರ್ವತದಲ್ಲಿ ಹಿಂದಿನಂತೆಯೇ ಎಲ್ಲ ಕಾರ್ಯವನ್ನೂ ಮಾಡಿ ಅನಂತರ ತಿಲಮಿಶ್ರಿತವಾದ ತಂಬಿಟ್ಟನ್ನು ಅರ್ಪಿಸಿ, ಈ ರೀತಿ ಪ್ರಾರ್ಥಿಸಬೇಕು.

ಯೇ ಕೇಚಿತ್ ಪ್ರೇತರೂಪೇಣ ವರ್ತಂತೇ ಪಿತರೋ ಮಮ ।
ತೇ ಸರ್ವೇ ತೃಪ್ತಿ ಮಾಯಾಂತು ಸಕ್ತುಭಿಸ್ತಿಲಮಿಶ್ರಿತೈಃ ॥
ಆಬ್ರಹ್ಮಸ್ತಂಬ ಪರ್ಯಂತಂ ಯತ್ಕಿಂಚಿತ್ ಸಚರಾಚರಂ ।
ಮಯಾ ದತ್ತೇನ ಪಿಂಡೇನ ತೃಪ್ತಿಮಾಯಾಂತು ಸರ್ವಶಃ ॥

ನಾ. ಉತ್ತರ ೪೪-೬೪-೬೬

ಯಾವ ನನ್ನ ಪಿತೃಗಳು ಪ್ರೇತರೂಪದಲ್ಲಿದ್ದಾರೆಯೋ, ಅವರೆಲ್ಲರು ತಿಲಮಿಶ್ರಿತವಾದ ಈ ಸಕ್ತುದಾನದಿಂದ ತೃಪ್ತರಾಗಲಿ. ಬ್ರಹ್ಮದೇವರಿಂದ ಆರಂಭಿಸಿ ಕೀಟಪರ್ಯಂತವಾಗಿ ಇರುವ ಚರಾಚರ ಪ್ರಪಂಚವೆಲ್ಲವೂ ನಾನು ನೀಡಿರುವ ಪಿಂಡದಿಂದ ಸಂಪೂರ್ಣ ತೃಪ್ತಿ ಹೊಂದಲಿ.'' ಎಲ್ಲಕ್ಕಿಂತ ಮೊದಲು ಪಂಚತೀರ್ಥಗಳಲ್ಲಿ ಮತ್ತು ಉತ್ತರಮಾನಸದಲ್ಲಿ ಶ್ರಾದ್ಧ ಮಾಡಬೇಕೆಂಬ ವಿಧಿಯಿದೆ. ಕೈಯಲ್ಲಿ ದರ್ಭೆಯನ್ನು ಧರಿಸಿ ಆಚಮನಮಾಡಿ ದರ್ಭಜಲದಿಂದ

ತನ್ನ ಶಿರಸ್ಸನ್ನು ಪ್ರೋಕ್ಷಿಸಿಕೊಂಡು ಉತ್ತರಮಾನಸಕ್ಕೆ ಹೋಗಿ ಮಂತ್ರೋಚ್ಚಾರಣ ಪೂರ್ವಕವಾಗಿ ಸ್ನಾನ ಮಾಡಬೇಕು. ಆಗ ಈ ರೀತಿ ಪ್ರಾರ್ಥಿಸಬೇಕು.

**ಉತ್ತರೇ ಮಾನಸೇ ಸ್ನಾನಂ ಕರೋಮ್ಯಾತ್ಮ ವಿಶುದ್ಧಯೇ ।**
**ಸೂರ್ಯ ಲೋಕಾದಿ ಸಂಪ್ರಾಪ್ತಿಸಿದ್ಧಯೇ ಪಿತೃಮುಕ್ತಯೇ ॥೬೮॥**

ಆತ್ಮಶುದ್ಧಿ, ಸೂರ್ಯಾದಿಲೋಕಪ್ರಾಪ್ತಿ ಮತ್ತು ಪಿತೃಮುಕ್ತಿಗಾಗಿ ನಾನು ಉತ್ತರ ಮಾನಸ ತೀರ್ಥದಲ್ಲಿ ಸ್ನಾನಮಾಡುತ್ತೇನೆ. ಸ್ನಾನಾನಂತರ ವಿಧಿಪೂರ್ವಕವಾಗಿ ದೇವತಾ ತರ್ಪಣಾದಿಗಳನ್ನು ಮಾಡಿಕೊನೆಯಲ್ಲಿ ಹೀಗೆ ಹೇಳಬೇಕು.

**ಆ ಬ್ರಹ್ಮಸ್ತಂಬ ಪರ್ಯಂತಂ ದೇವರ್ಷಿ ಪಿತೃಮಾನವಾಃ ।**
**ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ॥೬೯ - ೭೦ ॥**

ಬ್ರಹ್ಮದೇವರಿಂದ ಆರಂಭಿಸಿ ಕೀಟ ಪರ್ಯಂತವಾದ ಸಮಸ್ತಜಗತ್ತು, ದೇವತೆಗಳು, ಋಷಿಗಳು, ದಿವ್ಯಪಿತೃಗಳು, ಮಾನವರು, ಪಿತಾ, ಪಿತಾಮಹ, ಪ್ರಪಿತಾಮಹ, ಮಾತಾ ಪಿತಾಮಹೀ, ಪ್ರಪಿತಾಮಹೀ, ಮಾತಾಮಹ, ಮಾತುಃ ಪಿತಾಮಹ ಮಾತುಃ ಪ್ರಪಿತಾಮಹ, ಮೊದಲಾದ ಎಲ್ಲಾ ಪಿತೃಗಳೂ ತೃಪ್ತರಾಗಲಿ.

ಮಾನಸಸರೋವರವು ಹಿಂದೆ ಹೇಳಿದ ಪ್ರೇತಪರ್ವತ ಮೊದಲಾದವುಗಳಿಂದ ಉತ್ತರದಲ್ಲಿದೆ, ಆದ್ದರಿಂದ ಅದನ್ನು ಉತ್ತರ ಮಾನಸವೆಂದು ಹೇಳುತ್ತಾರೆ. ಉತ್ತರಮಾನಸದಿಂದ ದಕ್ಷಿಣ ಮಾನಸದ ಕಡೆಗೆ ಮೌನವಾಗಿ ಯಾತ್ರೆಯನ್ನು ಮಾಡಬೇಕು. ಉತ್ತರಮಾನಸದ ಉತ್ತರ ದಿಕ್ಕಿನಲ್ಲಿ ಪಿತೃಮೋಕ್ಷಪ್ರದವಾದ ಉದೀಚೀ ಎಂಬ ತೀರ್ಥವಿದೆ. ಉದೀಚೀತೀರ್ಥ ಮತ್ತು ಮುಂಡಪೃಷ್ಠದ ಮಧ್ಯಭಾಗದಲ್ಲಿ ದೇವಋಷಿ ಮನುಷ್ಯರಿಗೆ ತೃಪ್ತಿಯನ್ನುಂಟುಮಾಡುವ, ಪಿತೃಗಳಿಗೆ ಉತ್ತಮಗತಿ ಪ್ರದವಾದ ಕನಖಲ ತೀರ್ಥವಿದೆ. ಅಲ್ಲಿ ಸ್ನಾನಮಾಡಿದ ಮನುಷ್ಯನು ಕನಕದಂತೆ ಪ್ರಕಾಶಮಾನನಾಗಿ ಪವಿತ್ರನಾಗುತ್ತಾನೆ. ಆದುದರಿಂದಲೇ ಆ ತೀರ್ಥಕ್ಕೆ ಕನಖಲವೆಂಬ ಹೆಸರು ಬಂದಿದೆ. ಕನಖಲದ ದಕ್ಷಿಣಭಾಗದಲ್ಲಿ ದಕ್ಷಿಣ ಮಾನಸತೀರ್ಥವಿದೆ. ಅಲ್ಲಿರುವ ಮೂರು ತೀರ್ಥಗಳಲ್ಲಿಯೂ ವಿಧಿಪೂರ್ವಕವಾಗಿ ಸ್ನಾನಮಾಡಿ ಪ್ರತ್ಯೇಕ ಪ್ರತ್ಯೇಕವಾಗಿ ಶ್ರಾದ್ಧಮಾಡಬೇಕು. ಅಲ್ಲಿಂದ ಉತ್ತಮೋತ್ತಮವಾದ ಫಲ್ಗುತೀರ್ಥಕ್ಕೆ ಹೋಗಬೇಕು. ಅಲ್ಲಿ ಶ್ರಾದ್ಧಮಾಡುವುದರಿಂದ ಪಿತೃಗಳಿಗೂ ಶ್ರಾದ್ಧಕರ್ತನಿಗೂ ಕೂಡ ಮುಕ್ತಿಯಾಗುತ್ತದೆ. ಹಿಂದೆ ಬ್ರಹ್ಮದೇವರ ಪ್ರಾರ್ಥನೆಯಂತೆ ಶ್ರೀ ಮಹಾವಿಷ್ಣುವೇ ಫಲ್ಗುತೀರ್ಥದ ರೂಪದಿಂದ ಪ್ರಕಟನಾಗಿದ್ದನು. ದಕ್ಷಿಣಾಗ್ನಿಯಲ್ಲಿ ಬ್ರಹ್ಮದೇವರು ಹೋಮ ಮಾಡುವಾಗ ಫಲ್ಗುತೀರ್ಥವು ಪ್ರಕಟವಾಗಿದೆ. ಫಲ್ಗುತೀರ್ಥ ಸ್ನಾನ ಗದಾಧರ ದರ್ಶನದಿಂದ ವೈಕುಂಠ ಪ್ರಾಪ್ತಿ. ಅಲ್ಲಿ ಗದಾಧರನನ್ನು ಹೀಗೆ ಪ್ರಾರ್ಥಿಸಬೇಕು.

**ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ।**
**ಪ್ರದ್ಯುಮ್ನಾಯಾನಿರುದ್ಧಾಯ ಶ್ರೀಧರಾಯ ಚ ವಿಷ್ಣವೇ ॥ ೯೨ - ೯೩**

ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ಚತುರ್ವ್ಯೂಹರೂಪಿಯಾದ ಸರ್ವತ್ರ ವ್ಯಾಪ್ತನಾದ ಶ್ರೀಧರನಿಗೆ ನಮಸ್ಕಾರ'' ಗದಾಧರನಿಗೆ ಐದು ತೀರ್ಥ ಜಲಗಳಿಂದ

ಸ್ನಾನ ಮಾಡಿಸಿ. ಪುಷ್ಪ ವಸ್ತ್ರಗಳಿಂದ ಅಲಂಕರಿಸಿ ಪೂಜಿಸಬೇಕು. ಹೀಗೆ ಮಾಡಿದಾಗಲೇ ಅಲ್ಲಿ ಮಾಡಿದ ಶ್ರಾದ್ಧವು ಸಂಪೂರ್ಣಫಲವನ್ನು ಕೊಡುತ್ತದೆ. ಹಿಂದೆ ಹೇಳಿದ ಐದು ತೀರ್ಥಗಳ ಸ್ನಾನ ಶ್ರಾದ್ಧಗಳೂ ಪಿತೃಗಳಿಗೆ ಮುಕ್ತಿ ಪ್ರದವಾಗುತ್ತವೆ. ನಾಗಕೂಟ, ವಿಷ್ಣು, ಉತ್ತರ, ಮಾನಸ, ಈ ನಾಲ್ಕರ ಮಧ್ಯಭಾಗವು ಗಯಾಶಿರ. ಇದನ್ನೇ ಫಲ್ಗುತೀರ್ಥವೆಂದೂ ಹೇಳುತ್ತಾರೆ. ಅನಂತರ ಸಾಕ್ಷಾತ್ ಧರ್ಮನು ಪ್ರಕಾಶಿಸುತ್ತಿರುವ ಧರ್ಮಾರಣ್ಯತೀರ್ಥಕ್ಕೆ ಹೋಗಬೇಕು. ಅಲ್ಲಿ ಮತಂಗವಾಪಿಯಲ್ಲಿ ಸ್ನಾನ ಮಾಡಿ ತರ್ಪಣಮಾಡಬೇಕು. ಶ್ರಾದ್ಧವನ್ನು ಮಾಡಬೇಕು. ಅನಂತರ ಧರ್ಮೇಶ್ವರ ಮತ್ತು ಧರ್ಮರಿಗೆ ನಮಿಸಿ ಮಹಾಬೋಧಿವೃಕ್ಷಕ್ಕೆ ನಮಸ್ಕಾರ ಮಾಡಬೇಕು. ಮೋಹಿನಿ! ನಾನು ಈ ರೀತಿ ನಿನಗೆ ಎರಡನೆಯ ದಿನದ ಕಾರ್ಯಗಳನ್ನು ಹೇಳಿದ್ದೇನೆ. ಸ್ನಾನ, ತರ್ಪಣ,. ಪಿಂಡದಾನ, ಪೂಜೆ ಮತ್ತು ನಮಸ್ಕಾರಗಳ ಸಹಿತವಾಗಿ ಮಾಡಿದ ಶ್ರಾದ್ಧವು ಪಿತೃಗಳಿಗೆ ಅತ್ಯಂತ ತೃಪ್ತಿದಾಯಕವಾಗಿದೆಯೆಂದು ತಿಳಿ.

## ಗಯೆಯಲ್ಲಿ ಮೂರು ನಾಲ್ಕನೆಯ ದಿನದ ಕರ್ತವ್ಯಗಳು
## ಬ್ರಹ್ಮತೀರ್ಥ ಮತ್ತು ವಿಷ್ಣು ಪಾದಾದಿಗಳ ಮಹಿಮೆ

ಬ್ರಹ್ಮಸರೋವರದಲ್ಲಿ ಸ್ನಾನ ಮಾಡಿ ಪಿಂಡಸಹಿತವಾಗಿ ಪಿತೃಗಳಿಗೆ ಶ್ರಾದ್ಧ ಮಾಡಬೇಕು. ಆ ಸಮಯದಲ್ಲಿ ಹೇಳಬೇಕಾದ ಮಂತ್ರವಿದೆ. ನಾಲ್ಕನೆಯ ದಿನ ಫಲ್ಗುತೀರ್ಥದಲ್ಲಿ ಸ್ನಾನಾದಿ ನಿತ್ಯಕರ್ತವ್ಯಗಳನ್ನು ಮುಗಿಸಿ ಗಯಾಶಿರದಲ್ಲಿ 'ಪದ' (ಪರಮಾತ್ಮನ ಪಾದದಲ್ಲಿ) ಪಿಂಡದಾನಸಹಿತವಾಗಿ ಶ್ರಾದ್ಧವನ್ನು ಮಾಡಬೇಕು. ಅಲ್ಲಿ ಫಲ್ಗು ತೀರ್ಥದಲ್ಲಿ ಸಾಕ್ಷಾತ್ ಗಯಾಶಿರದ ಸನ್ನಿಧಾನ (ನಿವಾಸಸ್ಥಾನ)ವಿದೆ. ಕ್ರೌಂಚಪಾದದಿಂದ ಫಲ್ಗುತೀರ್ಥದವರೆಗೆ ಸಾಕ್ಷಾತ್ ಗಯಾಶಿರ. ಗಯಾಶಿರದಲ್ಲಿ ವೃಕ್ಷಪರ್ವತ ಮುಂತಾದವುಗಳೂ ಇವೆ. ಆದರೆ ಅವೆಲ್ಲವೂ ಫಲ್ಗುತೀರ್ಥ ಸ್ವರೂಪವೆಂದೇ ಭಾವಿಸಬೇಕು. ಫಲ್ಗುತೀರ್ಥವು ಗಯಾಸುರನ ಮುಖವಾದುದರಿಂದ ಅಲ್ಲಿ ಸ್ನಾನಮಾಡಿ ಶ್ರಾದ್ಧವನ್ನು ಮಾಡಬೇಕು, ಆದಿದೇವನಾದ ಭಗವಂತನಾದ ಗದಾಧರನು ವ್ಯಕ್ತಾವ್ಯಕ್ತರೂಪಗಳನ್ನು ಸ್ವೀಕರಿಸಿ ಪಿತೃಗಳಿಗೆ ಮುಕ್ತಿಯನ್ನು ಕೊಡುವುದ ಕ್ಕಾಗಿಯೇ ವಿಷ್ಣು ಪದ ಮುಂತಾದ ರೂಪದಿಂದ ಅಲ್ಲಿ ಸನ್ನಿಹಿತನಾಗಿದ್ದಾನೆ. ಅಲ್ಲಿರುವ ದಿವ್ಯವಾದ ವಿಷ್ಣುಪಾದವು ದರ್ಶನ ಮಾತ್ರದಿಂದ ಪಾಪವನ್ನು ನಾಶಮಾಡುತ್ತದೆ. ಸ್ಪರ್ಶ ಮತ್ತು ಪೂಜೆಗಳಿಂದ ಪಿತೃಗಳಿಗೆ ಮೋಕ್ಷವನ್ನು ಕೊಡುತ್ತದೆ. ವಿಷ್ಣು ಪಾದದಲ್ಲಿ ಪಿಂಡದಾನ ಪೂರ್ವಕವಾಗಿ ಶ್ರಾದ್ಧಮಾಡಬೇಕು. ಅದರಿಂದ ಮಾನವನ ಹಿಂದಿನ ಸಾವಿರ ಪೀಳಿಗೆಗಳು ಉದ್ಧಾರವಾಗುತ್ತವೆ, ಪಿತೃಗಳೆಲ್ಲರೂ ವಿಷ್ಣುಲೋಕವನ್ನು ಸೇರುತ್ತಾರೆ.

ಪೂರ್ವಕಾಲದಲ್ಲಿ ಭೀಷ್ಮಾಚಾರ್ಯರು ಗಯೆಯಲ್ಲಿ ವಿಷ್ಣುಪಾದದಲ್ಲಿ ಶ್ರಾದ್ಧವನ್ನು ಆರಂಭಿಸಿದರು. ಅವರು ಪಿತೃಗಳ ಆವಾಹನ ಮಾಡಿ ವಿಧಿಪೂರ್ವಕವಾಗಿ ಶ್ರಾದ್ಧವನ್ನು ಮಾಡುತ್ತಾ, ಪಿಂಡದಾನಮಾಡಲು ಉದ್ಯುಕ್ತರಾದಾಗ ಗಯಾಶಿರದಲ್ಲಿ ಅವರ ತಂದೆಯಾದ ಶಂತನುವಿನ ಎರಡೂ ಕೈಗಳು ಮುಂದೆ ಬಂದು ಕೈಯಲ್ಲಿಯೇ ಪಿಂಡವನ್ನಿಡಬೇಕೆಂಬ ಸಂಕೇತವನ್ನು ಮಾಡಿದವು. ಆದರೆ ಭೀಷ್ಮಾಚಾರ್ಯರು ಶಾಸ್ತ್ರೋಕ್ತವಿಧಿಯಿಂದ

ಭೂಮಿಯಲ್ಲಿ ದರ್ಭೆಗಳ ಮೇಲೆಯೇ ಪಿಂಡಪ್ರದಾನ ಮಾಡಿದರು. ಶಾಸ್ತ್ರದಲ್ಲಿ ಕೈಗಳಲ್ಲಿ ಪಿಂಡಪ್ರದಾನಮಾಡುವ ವಿಧಿಯಿಲ್ಲವಾದುದರಿಂದ ಧರ್ಮಜ್ಞರಾದ ಅವರು ಕೈಗಳಲ್ಲಿ ಪಿಂಡವನ್ನು ಇಡಲಿಲ್ಲ, ಭೀಷ್ಮಾಚಾರ್ಯರ ಈ ನಡವಳಿಕೆಯಿಂದ, ವ್ಯವಹಾರದಿಂದ ಸಂತುಷ್ಟನಾದ ಶಂತನುವು ಹೇಳಿದನು. "ಮಗನೇ, ನೀನು ಶಾಸ್ತ್ರೀಯ ಸಿದ್ಧಾಂತದಲ್ಲಿ ಅಚಲನಾಗಿ ನಿಂತು. ಶಾಸ್ತ್ರೋಕ್ತವಾಗಿ ಪಿಂಡ ಪ್ರದಾನಮಾಡಿದೆ. ಇದರಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಅನೇಕ ವರಗಳನ್ನು ಕೊಡುತ್ತಿದ್ದೇನೆ. ನೀನು ತ್ರಿಕಾಲಜ್ಞಾನಿಯಾಗು, ಮರಣಾನಂತರದಲ್ಲಿ ನಿನಗೆ ವಿಷ್ಣುಲೋಕ ಪ್ರಾಪ್ತಿಯಾಗಲಿ; ನೀನು ಯಾವಾಗ ಇಚ್ಛಿಸುತ್ತೀಯೋ, ಆಗ ಮಾತ್ರ ಮೃತ್ಯುದೇವತೆಯು ನಿನ್ನ ಹತ್ತಿರ ಬರುವಂತಾಗಲಿ, ನೀನು ಇಚ್ಛಾಮರಣಿಯಾಗು." ಈ ರೀತಿ ವರಗಳನ್ನು ಕೊಟ್ಟು ಪುತ್ರನಾದ ಭೀಷ್ಮನು ಗಯೆಯಲ್ಲಿ ಮಾಡಿದ ಶ್ರಾದ್ಧದಿಂದ ಶಂತನುವು ಪಾಪಮುಕ್ತನಾಗಿ ಉತ್ತಮಲೋಕವನ್ನು ಪಡೆದನು.

ಕನಕೇಶ, ಕೇದಾರ, ನಾರಸಿಂಹ ಮತ್ತು ವಾಮನ ಈ ದೇವತೆಗಳ ರಥೋತ್ಸವದ ದಾರಿಯಲ್ಲಿ ಪೂಜೆಮಾಡಿದವನ ಎಲ್ಲ ಪಿತೃಗಳೂ ಉದ್ಧಾರಹೊಂದುತ್ತಾರೆ. ಗಯಾಶಿರದಲ್ಲಿ ಮಾನವನು ಯಾರ ಹೆಸರಿನಿಂದ ಪಿಂಡಪ್ರದಾನ ಮಾಡುತ್ತಾನೋ ಅವನ ಆಯಾ ಪಿತೃಗಳು ನರಕದಲ್ಲಿದ್ದರೆ ಮೋಕ್ಷವನ್ನೇ ಪಡೆಯುತ್ತಾರೆ. ಗಯಾಶಿರದಲ್ಲಿದ್ದಾಗ ಗಡ್ಡೆ, ಗೆಣಸು, ಬೇರು ಹಣ್ಣು ಮುಂತಾದವುಗಳಿಂದ ಬನ್ನಿಯಮರದ ಎಲೆಯ ಪ್ರಮಾಣದಿಂದ (ಶಮೀಪತ್ರ ಪ್ರಮಾಣದಿಂದ) ಪಿಂಡಪ್ರದಾನ ಮಾಡಬೇಕು. ಇದರಿಂದ ಎಲ್ಲ ಪಿತೃಗಳೂ ಸ್ವರ್ಗವನ್ನು ಪಡೆಯುತ್ತಾರೆ. ವಿಷ್ಣು ಮುಂತಾದ ದೇವತೆಗಳ ಪಾದಗಳು ಕಾಣಿಸುವಲ್ಲಿ, ಯಾವ ದೇವತೆಯ ಪಾದದಲ್ಲಿ ಶ್ರಾದ್ಧವನ್ನು ಮಾಡುತ್ತಾನೋ ಆಯಾ ದೇವತೆಯ ಲೋಕಕ್ಕೆ ಅವನ ಪಿತೃಗಳು ಹೋಗುತ್ತಾರೆ; ಈ ಪಾದಗಳ ಮೂಲಕ ಎಲ್ಲ ಕಡೆಯಲ್ಲಿಯೂ ಮುಂಡ ಪೃಷ್ಠ ಪರ್ವತವೇ ಸಾಗಿಸುತ್ತದೆ. ಅಲ್ಲಿ ಶ್ರಾದ್ಧ ಪಿಂಡದಾನಗಳಿಂದ ಪೂಜಿತರಾದ ಪಿತೃಗಳು ಬ್ರಹ್ಮಲೋಕವನ್ನು ತಲುಪುತ್ತಾರೆ. ಒಬ್ಬಾನೊಬ್ಬ ಋಷಿಯು ಕ್ರೌಂಚ (ಬಕ, ಕೊಕ್ಕರೆ) ಪಕ್ಷಿಯ ರೂಪವನ್ನು ತಾಳಿ ತಪಸ್ಸು ಮಾಡುತ್ತಿದ್ದನು. ಆ ಋಷಿಯ ಕೊಕ್ಕರೆಯ ಪಾದದಂತಹ ಪಾದದ ಚಿಹ್ನವು ಎಲ್ಲಿ ಕಾಣಿಸುತ್ತಿದೆಯೋ ಅದೇ ಕ್ರೌಂಚಪದವು. ಭಗವಂತನಾದ ವಿಷ್ಣು ಮುಂತಾದ ದೇವತೆಗಳ ಪಾದವು ಮಾತ್ರ ಇಲ್ಲಿ ಲಿಂಗರೂಪದಲ್ಲಿ ಕಾಣಿಸುತ್ತಿದೆ. ಇಲ್ಲಿ ದೇವತೆಗಳೇ ಮುಂತಾದವರ ತರ್ಪಣವನ್ನು ಮಾಡಿ ರುದ್ರ ಪದದಿಂದ ಆರಂಭಿಸಿ ಶ್ರಾದ್ಧಮಾಡಬೇಕು. ಮೋಹಿನಿ! ಇದು ಗಯೆಯಲ್ಲಿ ಮಾಡಬೇಕಾದ ನಾಲ್ಕನೆಯ ದಿನದ ಕರ್ತವ್ಯವು. ಇದನ್ನೆಲ್ಲ ಮಾಡಿದ ಮನುಷ್ಯನೇ ವಿಷ್ಣು ಪಾದದಲ್ಲಿ ಶ್ರಾದ್ಧಮಾಡಲು ಅಧಿಕಾರಿಯಾಗುತ್ತಾನೆ. ಶ್ರಾದ್ಧಮಾಡಿದ ಮೇಲೆ ಅವನ ಪಿತೃಗಳು ಮಾತ್ರವಲ್ಲ, ಅವನೂ ಕೂಡ ಬ್ರಹ್ಮಲೋಕ ಭಾಗಿಯಾಗುತ್ತಾನೆ. ಶಿಲೆಗಳಲ್ಲಿರುವ ತೀರ್ಥಗಳಲ್ಲಿ ಸ್ನಾನ ಮತ್ತು ತರ್ಪಣಗಳನ್ನು ಮಾಡಿ, ಯಾರ ಉದ್ದೇಶ್ಯದಿಂದ, ಪಿಂಡಪ್ರದಾನ ಪೂರ್ವಕವಾಗಿ ಶ್ರಾದ್ಧಮಾಡುತ್ತಾನೋ, ಅವರೆಲ್ಲರೂ ನಿಶ್ಚಯವಾಗಿ ಬ್ರಹ್ಮಲೋಕವನ್ನು ಪಡೆಯುತ್ತಾರೆ. ಮತ್ತು ಕಲ್ಪ ಪರ್ಯಂತವಾಗಿ ಆನಂದದಿಂದ ಅಲ್ಲಿ ವಾಸಮಾಡುತ್ತಾರೆ.

# ಗಯೆಯಲ್ಲಿ ಐದನೆಯ ದಿನದ ಕರ್ತವ್ಯ, ಅಲ್ಲಿರುವ ಬೇರೆ ಬೇರೆ ತೀರ್ಥಗಳ ಮಹಿಮೆ

**ಪುರೋಹಿತ ವಸು ಮುಂದುವರಿಸುತ್ತಿದ್ದಾರೆ:-** ಮೋಹಿನಿಯೇ! ಐದನೆಯ ದಿನ ಮಾನವನು ಗದಾಲೋಲ ತೀರ್ಥದಲ್ಲಿ ಹಿಂದಿನಂತೆಯೇ ಸ್ನಾನಾದಿಗಳನ್ನು ಮಾಡಿ ಅಕ್ಷಯವಟದ ಸಮೀಪದಲ್ಲಿ ಪಿಂಡದಾನ ಪೂರ್ವಕವಾಗಿ ಶ್ರಾದ್ಧವನ್ನು ಮಾಡಬೇಕು. ಅಲ್ಲಿ ಮಾಡುವ ಶ್ರಾದ್ಧಾದಿಗಳಿಂದ ಪಿತೃಗಳಿಗೆ ಬ್ರಹ್ಮಲೋಕಪ್ರಾಪ್ತಿಯು ಆಗಿಯೇ ತೀರುತ್ತದೆ. ಅಲ್ಲಿ ದ್ವಿಜರಿಗೆ ಭೋಜನಮಾಡಿಸಿ, ಅವರನ್ನು ಸತ್ಕರಿಸಬೇಕು. ಅಕ್ಷಯವಟದ ಬಳಿ ಶ್ರಾದ್ಧಮಾಡಿ ಏಕಾಗ್ರಚಿತ್ತನಾಗಿ ವಟೇಶ್ವರನ ದರ್ಶನಮಾಡಿ ನಮಸ್ಕಾರ ಮತ್ತು ಪೂಜೆಗಳನ್ನು ಮಾಡಬೇಕು, ಇದರಿಂದ ಶ್ರಾದ್ಧಕರ್ತನ ಪಿತೃಗಳು ಅಕ್ಷಯ ಸನಾತನ ಬ್ರಹ್ಮಲೋಕವನ್ನು ಪಡೆಯುತ್ತಾರೆ.

ಗದಾಲೋಲ ತೀರ್ಥದಲ್ಲಿ ಸ್ನಾನಮಾಡುವಾಗ ಈ ರೀತಿ ಪ್ರಾರ್ಥಿಸಬೇಕು.

**ಗದಾಲೋಲೇ! ಮಹಾತೀರ್ಥೇ ಗದಾಪ್ರಕ್ಷಾಲನೇ ವರೇ ।**
**ಸ್ನಾನಂ ಕರೋಮಿ ಶುದ್ಧ್ಯರ್ಥಂ ಅಕ್ಷಯ್ಯಾಯ ಸ್ವರಾಪ್ತಯೇ ॥**

**ಏಕಾಂತರೇ ವಟಸ್ಯಾಗ್ರೇ ಯಃ ಶೇತೆ ಯೋಗನಿದ್ರಯಾ ।**
**ಬಾಲರೂಪಧರಸ್ತಸ್ಮೈ ನಮಸ್ತೇ ಯೋಗಶಾಯಿನೇ ॥**

**ಸಂಸಾರ ವೃಕ್ಷ ಶಸ್ತ್ರಾಯಾಶೇಷ ಪಾಪಕ್ಷಯಾಯ ಚ ।**
**ಅಕ್ಷಯ್ಯ ಬ್ರಹ್ಮದಾತ್ರೇ ಚ ನಮೋಽಕ್ಷಯ್ಯ ವಟಾಯ ವೈ ॥**

**ನಾ.ಉತ್ತರ, ೪೭-೪-೭**

ಯಾವ ತೀರ್ಥದಲ್ಲಿ ಭಗವಂತನ ಗದೆಯು ತೊಳೆಯಲ್ಪಟ್ಟಿದೆಯೋ, ಆ ಗದಾಲೋಲ ವೆಂಬ ಶ್ರೇಷ್ಠವಾದ ಮಹಾತೀರ್ಥದಲ್ಲಿ ನಾನು ಆತ್ಮಶುದ್ಧಿ ಮತ್ತು ಅಕ್ಷಯ ಸ್ವರ್ಗಪ್ರಾಪ್ತಿಗೋಸ್ಕರ ಸ್ನಾನಮಾಡುತ್ತೇನೆ. ಬಾಲರೂಪಧಾರಿಯಾದ ಯಾವ ಶ್ರೀಮನ್ನಾರಾಯಣನು ವಟವೃಕ್ಷದ ಒಂದು ಶಾಖೆಯ ತುದಿಯ ಒಂದು ಪತ್ರದಲ್ಲಿ ಏಕಾಂತದಲ್ಲಿ ಮಲಗಿ ಯೋಗನಿದ್ರಾರೂಢನಾಗಿರುತ್ತಾನೋ, ಅಂತಹ ಯೋಗ ಶಾಯಿಯಾದ ಬಾಲಮುಕುಂದನಿಗೆ ನಮಸ್ಕಾರ. ಸಂಸಾರವೆಂಬ ವೃಕ್ಷವನ್ನು ಭೇದಿಸುವ ಶಸ್ತ್ರ, ಸಮಸ್ತಪಾಪಗಳ ನಾಶಕ, ಅಕ್ಷಯ ಬ್ರಹ್ಮಲೋಕ ಪ್ರದಾಯಕ ಅಕ್ಷಯವಟ, ಅಲ್ಲಿರುವ ಶ್ರೀಹರಿಗೆ ನಮಸ್ಕಾರ.'' ಇದರ ಅನಂತರ ಲಿಂಗಸ್ವರೂಪಿಯಾದ ಪ್ರಪಿತಾಮಹನಿಗೆ ನಮಸ್ಕಾರಮಾಡಬೇಕು. ಆಗ ಈ ಮಂತ್ರವನ್ನು ಹೇಳಬೇಕು.

**ಕಲೌ ಮಾಹೇಶ್ವರಾ ಲೋಕಾ ಯೇನ ತಸ್ಮಾತ್ ಗದಾಧರಃ ।**
**ಲಿಂಗರೂಪೋಽಭವತ್ತಂ ಚ ವಂದೇ ತ್ವಾಂ ಪ್ರಪಿತಾಮಹಂ॥ ೭-೮ ॥**

ಕಲಿಯುಗದಲ್ಲಿ ಜನರು ಪ್ರಾಯಃ ಶಿವಭಕ್ತರಾಗಿರುತ್ತಾರೆ. ಆದುದರಿಂದ ಭಗವಂತನಾದ ಗದಾಧರನು ಅಲ್ಲಿ ಶಿವಲಿಂಗರೂಪದಿಂದ ಪ್ರಕಟನಾಗಿರುತ್ತಾನೆ. ಪ್ರಭುವೇ, ನೀನು ಲೋಕಪಿತಾಮಹನಾದ ಬ್ರಹ್ಮನಿಗೂ ತಂದೆಯಾದುದರಿಂದ ಪ್ರಪಿತಾಮಹ

ನಾಗುತ್ತೀ, ಅಂತಹ ನಿನಗೆ ಅನೇಕಾನೇಕ ನಮಸ್ಕಾರಗಳು,'' ಈ ಮಂತ್ರದಿಂದ ಆ ಪ್ರಪಿತಾಮಹ ದೇವನಿಗೆ ನಮಸ್ಕಾರ ಮಾಡಿದ ಭಕ್ತನ ಪಿತೃಗಳು ರುದ್ರಲೋಕವನ್ನು ಹೊಂದುತ್ತಾರೆ. ಹಿಂದೆ 'ಹೇತಿ' ಎಂದು ಪ್ರಸಿದ್ಧನಾದ ಲೋಕಕಂಟಕನಾದ ರಾಕ್ಷಸನಿದ್ದನು. ಭಗವಂತನಾದ ಶ್ರೀಹರಿಯು ಅವನೊಡನೆ ಯುದ್ಧವನ್ನು ಮಾಡಿ ತನ್ನ ಗದೆಯಿಂದ ಅವನ ತಲೆಯನ್ನು ಹೊಡೆದು ಎರಡು ಭಾಗವಾಗಿ ಒಡೆದು ಸೀಳಿದನು. ಅನಂತರ ಗದೆಗೆ ಹತ್ತಿದ ರಕ್ತವನ್ನು ಎಲ್ಲಿ ತೊಳೆದನೋ ಅದೇ ಗದಾ ಲೋಲತೀರ್ಥ ಎಂದು ಪ್ರಸಿದ್ಧವಾಗಿದೆ.

ಸುಲೋಚನೇ! ಮಾರ್ಕಂಡೇಯೇಶ್ವರ, ಮತ್ತು ಕೋಟೀಶ್ವರರ ನಮಸ್ಕಾರದಿಂದ ಪಿತೃಗಳ ಉದ್ಧಾರವಾಗುತ್ತದೆ. ''ಪುಣ್ಯಕರವಾದ ಪಾಂಡು ಶಿಲೆಯ ದರ್ಶನ ಮಾತ್ರದಿಂದ ಮಾನವನ ನರಕನಿವಾಸಿಗಳಾದ ಪಿತೃಗಳು ಪವಿತ್ರರಾಗಿ ಸ್ವರ್ಗಲೋಕವನ್ನು ಸೇರುತ್ತಾರೆ'' ಪಾಂಡು ಶಿಲೆಯ ವಿಷಯದಲ್ಲಿ ಮೇಲಿನ ಮಾತನ್ನು ಹೇಳಿದವನು ಪಾಂಡು ಮಹಾರಾಜನು. ಅವನೂ ಪಾಂಡುಶಿಲೆಯ ದರ್ಶನದಿಂದ ಅವಿನಾಶಿಯಾದ ಸ್ಥಾನವನ್ನು ಹೊಂದಿದ್ದಾನೆ. ಘೃತಕುಲ್ಯಾ, ಮಧುಕುಲ್ಯಾ, ದೇವಿಕಾ ಮುಂತಾದ ಮಹಾನದಿಗಳು ಈ ಶಿಲೆಯನ್ನು ಸೇರಿ 'ಮಧುಸ್ರವಾ' ಎಂಬ ಹೆಸರನ್ನು ಹೊಂದಿವೆ. ಅಲ್ಲಿ ಸ್ನಾನ ಮಾಡುವ ಮಾನವನಿಗೆ ಹತ್ತು ಸಾವಿರ ಅಶ್ವಮೇಧಗಳ ಫಲವು ಉಂಟಾಗುತ್ತದೆ.

ದಶಾಶ್ವಮೇಧ ತೀರ್ಥ ಮತ್ತು ಹಂಸತೀರ್ಥಗಳಲ್ಲಿ ಶ್ರಾದ್ಧ ಮಾಡುವುದರಿಂದ ಪಿತೃಗಳಿಗೆ ಸ್ವರ್ಗಲೋಕಪ್ರಾಪ್ತಿಯಾಗುತ್ತದೆ. ಮತಂಗಪದದಲ್ಲಿ ಸ್ನಾನಮಾಡುವ ಮಾನವನು ಬ್ರಹ್ಮಲೋಕ ನಿವಾಸಿಯಾಗುತ್ತಾನೆ. ಬ್ರಹ್ಮದೇವರು ವಿಷ್ಣು ಮುಂತಾದವರೊಡನೆ ಬನ್ನೀಮರದ ಕಟ್ಟಿಗೆಯಿಂದ ಅಗ್ನಿ ಮಂಥನ ಮಾಡಿ ಒಂದು ನೂತನ ತೀರ್ಥವನ್ನು ನಿರ್ಮಾಣ ಮಾಡಿದ್ದಾರೆ. ಅದರ ಹೆಸರು 'ಮಂಥಕುಂಡ', ಅಲ್ಲಿ ಸ್ನಾನ ತರ್ಪಣಗಳನ್ನು ಮಾಡಿ ಪಿಂಡದಾನ ಮಾಡಿದವನ ಪಿತೃಗಳಿಗೆ ಸದ್ಗತಿಯಾಗುವುದು. ಅಷ್ಟೇ ಅಲ್ಲ. ಶ್ರಾದ್ಧಕರ್ತನೂ ಸ್ವಯಂ ಮೋಕ್ಷಭಾಗಿಯಾಗುತ್ತಾನೆ. ರಾಮೇಶ್ವರ ಮತ್ತು ಕನಕೇಶ್ವರರಿಗೆ ನಮಸ್ಕಾರ ಮಾಡಿದ ಮಾನವನ ಪಿತೃಗಳು ಸ್ವರ್ಗ ನಿವಾಸಿಗಳಾಗುತ್ತಾರೆ. ಗಯಾ ಕೂಪದಲ್ಲಿ ಪಿಂಡಪ್ರದಾನ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲವು ಪ್ರಾಪ್ತವಾಗುತ್ತದೆ. ಭಸ್ಮಕೂಟದಲ್ಲಿ ಭಸ್ಮಸ್ನಾನ ಮಾಡುವುದರಿಂದ ಪಿತೃಗಳ ಉದ್ಧಾರವಾಗುತ್ತದೆ. ನೀಕ್ಷಿರಾ ಸಂಗಮದಲ್ಲಿ ಸ್ನಾನ ಪಾನ ಮಾಡುವುದರಿಂದ ಎಲ್ಲಾ ಪಾಪಗಳೂ ತೊಳೆದು ಹೋಗುತ್ತವೆ. ರಾಮ ಪುಷ್ಕರಿಣಿಯಲ್ಲಿ ಸ್ನಾನ ಮಾಡುವುವನ ಪಿತೃಗಳು ಬ್ರಹ್ಮಲೋಕ ನಿವಾಸಿಗಳಾಗುತ್ತಾರೆ. ವಸಿಷ್ಠ ತೀರ್ಥದಲ್ಲಿ ವಸಿಷ್ಠೇಶ್ವರನಿಗೆ ಪ್ರಣಾಮ ಮಾಡುವವನು ಅಶ್ವಮೇಧಯಾಗದ ಪುಣ್ಯಫಲವನ್ನು ಪಡೆಯುತ್ತಾನೆ. ಧೇನುಕಾರಣ್ಯದಲ್ಲಿ ಕಾಮಧೇನುವಿನ ಪಾದದಲ್ಲಿ, ಸ್ನಾನ ಮಾಡಿ ಪಿಂಡಪ್ರದಾನ ಮಾಡಿ ಅಲ್ಲಿರುವ ದೇವತೆಗೆ ನಮಸ್ಕಾರ ಮಾಡಿದಾಗ, ಅವನ ಪಿತೃಗಳು ಬ್ರಹ್ಮಲೋಕವನ್ನು ಸೇರುತ್ತಾರೆ. ಕರ್ದಮೂಲ ತೀರ್ಥದಲ್ಲಿ, ಗಯಾನಾಭಿಯಲ್ಲಿ ಮತ್ತು ಮುಂಡ ಪೃಷ್ಠದ ಸಮೀಪ, ಸ್ನಾನ ಮಾಡಿ ಶ್ರಾದ್ಧ ಮಾಡುವವನ ಪಿತೃಗಳು ಸ್ವರ್ಗಲೋಕವನ್ನು ಪಡೆಯುತ್ತಾರೆ. ಚಂಡೀ ದೇವಿಯ ನಮಸ್ಕಾರ. ಫಲ್ಗು ಚಂಡೀಶನೆಂಬ ಸಂಗಮೇಶ್ವರನ ಪೂಜೆಯಿಂದಲೂ ಹಿಂದೆ ಹೇಳಿದ ಫಲವು ಉಂಟಾಗುತ್ತದೆ. ಗಯಾಗಜ, ಗಯಾದಿತ್ಯ, ಗಾಯತ್ರೀ, ಗದಾಧರ, ಗಯಾ, ಮತ್ತು ಗಯಾಶಿರ ಎಂಬ ಆರು ಗಕಾರಯುಕ್ತ ಗಯಾ ತೀರ್ಥಗಳು ಪರಮ ಪವಿತ್ರಗಳು ಮತ್ತು ಮುಕ್ತಿದಾಯಕಗಳು.

ಮುಂಡ ಪೃಷ್ಠ ತೀರ್ಥದ ಸಮೀಪದಲ್ಲಿ ಶ್ರಾದ್ಧಾದಿಗಳನ್ನು ಮಾಡುವುದರಿಂದ ಎಲ್ಲ ಪಿತೃಗಳಿಗೂ ಬ್ರಹ್ಮಲೋಕ ಪ್ರಾಪ್ತಿಯಾಗುತ್ತವೆ. ಹಿಂದೆ 'ಕುಂಡ' ಎಂಬುವವನು ಸೀತಾಗಿರಿಯ ದಕ್ಷಿಣಭಾಗದ ಪರ್ವತದಲ್ಲಿ ಭಾರಿ ತಪಸ್ಸನ್ನು ಮಾಡಿದ್ದನು. ಆದ್ದರಿಂದ ಅವನ ಹೆಸರಿನ ಮೇಲೆ ಆ ತೀರ್ಥಕ್ಕೆ 'ಕುಂಡಪೃಷ್ಠ' ತೀರ್ಥವೆಂದು ಹೆಸರಾಯಿತು. ಪುಣ್ಯಕರವಾದ ಮತಂಗಪಾದದಲ್ಲಿ ಪಿಂಡಪ್ರದಾನ ಮಾಡುವ ಮನುಷ್ಯನ ಪಿತೃಗಳು ಸ್ವರ್ಗವನ್ನು ಸೇರುತ್ತಾರೆ. ಶಿಲೆಯ ಎಡಕೈಯಲ್ಲಿ ಉದ್ಯಂತಕ ಎಂಬ ಗಿರಿಯ ಸ್ಥಾಪನೆಯಾಗಿದೆ. ಅಲ್ಲಿ ಮಹಾತ್ಮರಾದ ಅಗಸ್ತ್ಯರು ಉದಯ ಪರ್ವತವನ್ನು ತಂದು ಪ್ರತಿಷ್ಠಿಸಿದ್ದಾರೆ. ಅಲ್ಲಿ ಪಿಂಡಪ್ರದಾನ ಮಾಡುವವನ ಪಿತೃಗಳು ಬ್ರಹ್ಮಲೋಕವನ್ನು ಪಡೆಯುತ್ತಾರೆ. ಅಗಸ್ತ್ಯರು ತಮ್ಮ ತಪಸ್ಸಿಗೋಸ್ಕರ ಅಲ್ಲಿ ಉದ್ಯಂತವೆಂಬ ಕುಂಡವನ್ನು ನಿರ್ಮಿಸಿದ್ದಾರೆ. ಅಲ್ಲಿಯೇ ಬ್ರಹ್ಮದೇವರು ಸಾವಿತ್ರೀ ಮತ್ತು ಸನಕಾದಿ ಕುಮಾರರ ಜೊತೆಗೆ ವಿರಾಜಿಸುತ್ತಿದ್ದಾರೆ. ಹಾಹಾ, ಹೂಹೂ ಮುಂತಾದ ಗಂಧರ್ವರು ಅಲ್ಲಿಯೇ ಸಂಗೀತ ವಾದ್ಯದ ಆಯೋಜನ (ತಯಾರಿ)ವನ್ನು ಮಾಡಿದ್ದಾರೆ. ಅಗಸ್ತ್ಯ ತೀರ್ಥದಲ್ಲಿ ಸ್ನಾನ ಮಾಡಿ ಮಧ್ಯಾಹ್ನ ಕಾಲದಲ್ಲಿ ಸಾವಿತ್ರಿಯ ಉಪಾಸನೆ ಮಾಡಿದರೆ ಮನುಷ್ಯನು ಕೋಟಿ ಜನ್ಮಗಳ ವರೆಗೆ ಧನಾಢ್ಯನಾಗಿಯೂ ವೇದ ಪಾರಂಗತನಾಗಿಯೂ ಹುಟ್ಟುತ್ತಾನೆ. ಅಗಸ್ತ್ಯಪಾದದಲ್ಲಿ ಸ್ನಾನ ಮಾಡಿ ಪಿಂಡದಾನ ಮಾಡುವವನು ತನ್ನ ಪಿತೃಗಳಿಗೆ ಸ್ವರ್ಗಪ್ರಾಪ್ತಿಯನ್ನು ಮಾಡಿಸುತ್ತಾನೆ. 'ಬ್ರಹ್ಮಯೋನಿ' ಎಂಬ ತೀರ್ಥದಲ್ಲಿ ಪ್ರವೇಶ ಮಾಡಿ ಹೊರಗೆ ಬಂದವನು ಯೋನಿ ಸಂಕಟದಿಂದ ಮುಕ್ತನಾಗಿ ಪರಬ್ರಹ್ಮ ಪರಮಾತ್ಮನನ್ನೇ ಹೊಂದುತ್ತಾನೆ. ಗಯಾಕುಮಾರ ಎಂಬ ತೀರ್ಥಕ್ಕೆ ಪ್ರಣಾಮ ಮಾಡಿ ಮನುಷ್ಯನು ಬ್ರಾಹ್ಮಣತ್ವವನ್ನು ಪಡೆಯುತ್ತಾನೆ. ಸೋಮ ಕುಂಡದಲ್ಲಿ ಸ್ನಾನಾದಿಗಳನ್ನು ಮಾಡುವುದರಿಂದ ಪಿತೃಗಳಿಗೆ ಚಂದ್ರಲೋಕ ಪ್ರಾಪ್ತಿಯಾಗುತ್ತದೆ. ಕಾಕಶಿಲೆಯಲ್ಲಿ ಕಾಗೆಗಳಿಗೆ ಕೊಟ್ಟ ಬಲಿಯು ಒಂದೇ ಕ್ಷಣದಲ್ಲಿ ಮೋಕ್ಷಪ್ರದವಾಗಿದೆ. ಸ್ವರ್ಗ ದ್ವಾರೇಶನಿಗೆ ನಮಸ್ಕರಿಸುವವನು ತನ್ನ ಪಿತೃಗಳನ್ನು ಸ್ವರ್ಗದಿಂದ ಬ್ರಹ್ಮಲೋಕಕ್ಕೆ ಕಳುಹಿಸುತ್ತಾನೆ. ಆಕಾಶ ಗಂಗೆಯಲ್ಲಿ ಪಿಂಡದಾನ ಮಾಡುವವನು ತಾನು ನಿರ್ಮಲನಾಗಿ ಪಿತೃಗಳಿಗಾಗಿ ಸ್ವರ್ಗ ಪ್ರಾಪ್ತಿಯನ್ನು ಮಾಡಿಸುತ್ತಾನೆ. ಶಿಲೆಯ ದಕ್ಷಿಣ ಹಸ್ತದಲ್ಲಿ ಧರ್ಮರಾಜನು ಭಸ್ಮಕೂಟವನ್ನು ಧರಿಸಿದ್ದಾನೆ. ಆದ್ದರಿಂದ ಅಲ್ಲಿರುವ ಈಶ್ವರನೂ ಅದೇ ಹೆಸರನ್ನು ಧರಿಸಿದ್ದಾನೆ. ಭಸ್ಮಕೂಟ ಪರ್ವತದಲ್ಲಿ ಭಸ್ಮನಾಮಧಾರಿಯಾದ ಶಿವನಿದ್ದಾನೆ. ವಟವೃಕ್ಷವಿರುವಲ್ಲಿ ವಟೇಶ್ವರ ಬ್ರಹ್ಮದೇವರು ಇದ್ದಾರೆ. ಅದರ ಮುಂದೆ ರುಕ್ಮಿಣೀಕುಂಡ ಹಿಂಭಾಗದಲ್ಲಿ ಕಪಿಲಾ ನದಿಯಿದೆ. ನದಿಯ ದಡದಲ್ಲಿ ಕಪಿಲೇಶ್ವರ ಮಹಾದೇವರು ಇದ್ದಾರೆ. ಅಲ್ಲಿಯೇ ಉಮಾ ಮತ್ತು ಸೋಮ (ಚಂದ್ರ)ರಿಗೆ ಭೇಟಿಯಾಗಿದೆ. ಮಾನವನು ಕಪಿಲಾನದಿಯಲ್ಲಿ ಸ್ನಾನಮಾಡಿ ಕಪಿಲೇಶ್ವರನಿಗೆ ನಮಸ್ಕಾರ ಮತ್ತು ಪೂಜೆಗಳನ್ನು ಮಾಡಬೇಕು. ಅಲ್ಲಿ ಶ್ರಾದ್ಧ ಮಾಡುವವನು ಸ್ವರ್ಗ ಭಾಗಿಯಾಗುತ್ತಾನೆ. ಮಹಿಷೀಕುಂಡದಲ್ಲಿ ಪೂರ್ಣಸೌಭಾಗ್ಯದಾಯಕಳಾದ ಮಂಗಳಗೌರಿ ಯಿದ್ದಾಳೆ. ಭಸ್ಮಕೂಟದಲ್ಲಿ ಜನಾರ್ದನನ ಸನ್ನಿಧಾನವಿದೆ. ಅವನ ಕೈಯಲ್ಲಿ, ತನಗಾಗಿ ಅಥವಾ ಇತರರಿಗಾಗಿ ಎಳ್ಳು ಇಲ್ಲದೆಯೂ , ಸವ್ಯ (ಯಜ್ಞೋ ಪವೀತ ಇದ್ದ ಹಾಗೆಯೇ)ದಿಂದ ದಧಿಮಿಶ್ರಿತವಾದ ಪಿಂಡವನ್ನು ಕೊಟ್ಟರೆ ಯಾರನ್ನು ಉದ್ದೇಶಿಸಿ ಆ ಪಿಂಡದಾನವಾಗಿದೆಯೋ ಅವರೆಲ್ಲರೂ ವಿಷ್ಣುಲೋಕಗಾಮಿ ಗಳಾಗುತ್ತಾರೆ. ಅಲ್ಲಿ ಪಿಂಡದಾನ ಮಾಡಿದ ಮೇಲೆ ಭಗವಂತನನ್ನು ಈ ರೀತಿ ಪ್ರಾರ್ಥಿಸಬೇಕು.

ಏಷ ಪಿಂಡೋ ಮಯಾ ದತ್ತಸ್ತವ ಹಸ್ತೇ ಜನಾರ್ದನ ।
ಗಯಾಶ್ರಾದ್ಧೇ ತ್ವಯಾ ದೇಯೋ ಮಹ್ಯಂ ಪಿಂಡೋ ಮೃತೇ ಮಯಿ ॥

ತುಭ್ಯಂ ಪಿಂಡೋ ಮಯಾ ದತ್ತೋ ಯಮುದ್ದಿಶ್ಯ ಜನಾರ್ದನ ।
ದೇಹಿ ದೇವ ಗಯಾಶೀರ್ಷೇ, ತಸ್ಮೈ ತಸ್ಮೈ ಮೃತೇ ತತಃ ॥

ಜನಾರ್ದನ ನಮಸ್ತುಭ್ಯಂ ನಮಸ್ತೇ ಪಿತೃರೂಪಿಣೇ ।
ಪಿತೃಪಾತ್ರಂ ನಮಸ್ತುಭ್ಯಂ ನಮಸ್ತೇ ಮುಕ್ತಿ ಹೇತವೇ ॥

ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।
ತಂ ದೃಷ್ಟ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥

ನಮಸ್ತೇ ಪುಂಡರೀಕಾಕ್ಷ ಋಣ ತ್ರಯವಿಮೋಚನ ।
ಲಕ್ಷ್ಮೀಕಾಂತ ನಮಸ್ತೇಽಸ್ತು ನಮಸ್ತೇ ಪಿತೃಮೋಕ್ಷದ ॥ (೬೩-೬೭)

ಜನಾರ್ದನನೇ! ನಾನು ನಿನ್ನ ಕೈಯಲ್ಲಿ ಪಿಂಡವನ್ನು ಕೊಟ್ಟಿದ್ದೇನೆ. ನಾನು ಸತ್ತ ಮೇಲೆ ಗಯಾಶ್ರಾದ್ಧದಲ್ಲಿ ನೀನು ನನಗೆ ಪಿಂಡವನ್ನು ಕೊಡಬೇಕು. ಜನಾರ್ದನನೇ! ಯಾರನ್ನು ಉದ್ದೇಶಿಸಿ ನಾನು ನಿನ್ನ ಕೈಯಲ್ಲಿ ಪಿಂಡವನ್ನು ಕೊಟ್ಟಿದ್ದೇನೋ, ಅವನು ಸತ್ತ ನಂತರ ಗಯಾಶೀರ್ಷದಲ್ಲಿ ಅವನಿಗಾಗಿ ನೀನೇ ಅವಶ್ಯವಾಗಿ ಪಿಂಡವನ್ನು ಕೊಡಬೇಕು. ಜನಾರ್ದನನೇ ನೀನು ಪಿತೃದೇವತೆಯಾಗಿದ್ದೀ, ನಿನಗೆ ನಮಸ್ಕಾರ, ಪುನಃ ಪುನಃ ನಮಸ್ಕಾರ. ಪಿತೃಗಳಿಗೆ ಪಾತ್ರರೂಪನಾದ ನಾರಾಯಣನೇ! ನಿನಗೆ ನಮಸ್ಕಾರ. ನೀನು ಎಲ್ಲರ ಮುಕ್ತಿಗೆ ಹೇತುವಾಗಿದ್ದೀ ನಿನಗೆ ನಮಸ್ಕಾರ. ಗಯೆಯಲ್ಲಿ ಸಾಕ್ಷಾತ್ ಜನಾರ್ದನನೇ ಪಿತೃದೇವತೆಯಾಗಿ ನಿಂತಿದ್ದಾನೆ, ಆ ಕಮಲದಲಾಯತಾಕ್ಷನಾದ ಜನಾರ್ದನನ ದರ್ಶನ ಮಾಡಿದ ಮಾನವನು ಮೂರು ಋಣಗಳಿಂದಲೂ ಮುಕ್ತನಾಗುತ್ತಾನೆ. ಪುಂಡರೀಕಾಕ್ಷನೇ, ನಿನಗೆ ನಮಸ್ಕಾರ. ಮೂರು ಋಣಗಳಿಂದ ಮುಕ್ತಿಯನ್ನು ಕರುಣಿಸುವ ಮುಕುಂದನೇ ನಿನಗೆ ನಮಸ್ಕಾರ. ಪಿತೃ ಮೋಕ್ಷಪ್ರದನಾದ ಪ್ರಭುವೇ! ನಿನಗೆ ನಮಸ್ಕಾರ.

ಈ ರೀತಿ ಕಮಲನಯನ ಕಮಲಾಕಾಂತನಾದ ಭಗವಂತನಾದ ಜನಾರ್ದನನ ಪೂಜೆ ಮಾಡಿದವನು ಸ್ವರ್ಗವನ್ನು ಪಡೆಯುತ್ತಾನೆ. ನೆಲದ ಮೇಲೆ ಎಡದ ಮಂಡೆಯನ್ನೂರಿ ಜನಾರ್ದನಿಗೆ ನಮಸ್ಕಾರ ಮಾಡಬೇಕು. ಹೀಗೆ ನಮಸ್ಕಾರ ಮಾಡಿದ ಮೇಲೆ ಪಿಂಡದಾನ ಪೂರ್ವಕ ಶ್ರಾದ್ಧ ಮಾಡುವ ಮನುಷ್ಯನು ತನ್ನ ಸಹೋದರರ ಸಮೇತನಾಗಿ ವಿಷ್ಣು ಲೋಕವನ್ನು ಹೊಂದುತ್ತಾನೆ. ಶಿಲೆಯ ಎಡಭಾಗದಲ್ಲಿ ಧರ್ಮ ರಾಜನು ಧರಿಸಿರುವ ಪ್ರತೇಕೂಟಗಿರಿಯಿದೆ. ಅಲ್ಲಿರುವ ಪ್ರೇತಕುಂಡದಲ್ಲಿ ಪಾದಗಳ ಸಹಿತವಾಗಿ ದೇವತೆಗಳು ಇದ್ದಾರೆ. ಅಲ್ಲಿ ಸ್ನಾನ ಮಾಡಿ ಶ್ರಾದ್ಧ ತರ್ಪಣಾದಿಗಳನ್ನು ಮಾಡುವ ಮನುಷ್ಯನು ಪಿತೃಗಳನ್ನು ಪ್ರೇತ ಭಾವದಿಂದ ವಿಮುಕ್ತಿಗೊಳಿಸ್ತುತಾನೆ. ಕೀಕಟ ಪ್ರದೇಶದಲ್ಲಿ (ಅದು ನಿಷಿದ್ಧವಾದ ದೇಶವಾಗಿದ್ದರೂ) ಗಯಾ, ರಾಜಗೃಹವನ, ಚ್ಯವನಾಶ್ರಮ, ಪುನಃ ಪುನಾನದೀ ವೈಕುಂಠ, ಲೋಹದಂಡ, ಶೌಣಗಗಿರಿಕೂಟ ಇವಿಷ್ಟು ಪವಿತ್ರ ಪ್ರದೇಶಗಳಾಗಿವೆ. ಅಲ್ಲಿ ಶ್ರಾದ್ಧ ಪಿಂಡದಾನ ಮುಂತಾದ್ದನ್ನು ಮಾಡುವ ಮಾನವನು ತನ್ನ ಪಿತೃಗಳನ್ನು ಬ್ರಹ್ಮಲೋಕಕ್ಕೆ ಹೋಗುವಂತೆ ಮಾಡುತ್ತಾನೆ. ಶಿಲೆಯ ದಕ್ಷಿಣ ಪಾದದಲ್ಲಿ

ಗೃಧ್ರಕೂಟಗಿರಿಯು ಇದೆ. ಧರ್ಮರಾಜನು ಶಿಲೆಯನ್ನು ಸ್ಥಿರವಾಗಿ ಇಡುವುದಕ್ಕೋಸ್ಕರ ಆ ಪರ್ವತವನ್ನು ಅಲ್ಲಿ ಸ್ಥಾಪಿಸಿದ್ದಾನೆ. ಬಹಳ ಬೇಗನೆ ಪವಿತ್ರೀಕರಿಸುವ ಆ ಸ್ಥಳದಲ್ಲಿ ಗೃಧ್ರೇಶ್ವರನೆಂಬ ಹೆಸರಿನಿಂದ ವಿರಾಜಮಾನನಾದ ಈಶ್ವರನ ದರ್ಶನ ಮಾಡಿ ಅಲ್ಲಿ ಸ್ನಾನ ಮಾಡುವ ಮನುಷ್ಯನು ಶಿವಲೋಕವನ್ನು ಹೊಂದುತ್ತಾನೆ. ಅಲ್ಲಿಯೇ ಇರುವ ಋಣಮೋಕ್ಷ ಮತ್ತು ಪಾಪ ಮೋಕ್ಷವೆಂಬ ಹೆಸರುಳ್ಳ ಈಶ್ವರನ ದರ್ಶನ ಮಾಡಿ ಮನುಷ್ಯನು ಶಿವಲೋಕವನ್ನು ಪಡೆಯುತ್ತಾನೆ. ಅಲ್ಲಿ ವಿಘ್ನನಾಶಕನಾದ ಗಣೇಶನು ಗಜರೂಪದಿಂದ ವಾಸ ಮಾಡುತ್ತಾನೆ. ಅವನ ದರ್ಶನ ನಮಸ್ಕಾರ ಮಾಡಿದ ಮಾನವನು ವಿಘ್ನಗಳನ್ನು ಪರಿಹರಿಸಿಕೊಂಡು ತನ್ನ ಪಿತೃಗಳಿಗೆ ಶಿವಲೋಕ ವಾಸವನ್ನು ಒದಗಿಸಿಕೊಡುತ್ತಾನೆ. ಸ್ನಾನ ಮಾಡಿದ ಮೇಲೆ ಗಾಯತ್ರಿ ಮತ್ತು ಗಯಾದಿತ್ಯನ ದರ್ಶನ ಮಾಡುವ ಮನುಷ್ಯನು ಸ್ವರ್ಗ ಲೋಕವನ್ನು ಹೊಂದುತ್ತಾನೆ. ಮೊದಲನೆಯ ಪಾದದಲ್ಲಿ ವಿರಾಜಿಸುತ್ತಿರುವ ಬ್ರಹ್ಮದೇವರ ದರ್ಶನ ಮಾಡಿದ ಮನುಷ್ಯನು ತನ್ನ ಪಿತೃಗಳ ಉದ್ಧಾರವನ್ನು ಮಾಡುತ್ತಾನೆ. ನಾಭಿಯಲ್ಲಿ ಪಿಂಡಪ್ರದಾನ ಮಾಡುವವನು ಪಿತೃಗಳಿಗೆ ಬ್ರಹ್ಮಲೋಕ ವಾಸವನ್ನೇ ಉಂಟುಮಾಡುತ್ತಾನೆ. ಮುಂಡ ಪೃಷ್ಠದ ಶೋಭೆಗೆ ಕಾರಣವಾದ ಕಮಲವನ್ನೂ, ಮುಂಡ ಪೃಷ್ಠವನ್ನೂ ದರ್ಶನ ಮಾಡುವ ಮನುಷ್ಯನು ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ, ಯಾರು ಆನೆ ಅಥವಾ ಸರ್ಪಗಳನ್ನು ಸಿಟ್ಟಿಗೆಬ್ಬಿಸಿ ಅವುಗಳಿಂದ ಹತರಾಗಿದ್ದಾರೋ, ಯಾರು ಪರಸ್ತ್ರೀಯರೊಡನೆ ರಮಿಸುತ್ತಿರುವಾಗ ಅವರ ಪತಿಗಳಿಂದ ಹತರಾಗಿರುತ್ತಾರೋ, ಯಾರು ಗೋವುಗಳನ್ನು ಅಗ್ನಿಯಲ್ಲಿ, ಅಥವಾ ನೀರಿನಲ್ಲಿ ಸಾಯಿಸಿದ್ದಾರೋ, ಅಥವಾ ವಿಷಪ್ರದಾನ ಮಾಡಿ, ಕೊಂದಿರುತ್ತಾರೋ, ಯಾರು ಕ್ರೋಧದಿಂದ ಅವಿವೇಕಿಗಳಾಗಿ ವಿಷಪ್ರಾಶನ ಮಾಡಿ, ಬೆಂಕಿಗೆ ಬಿದ್ದು, ಅಥವಾ ನೀರಿಗೆ ಹಾರಿ, ಕತ್ತಿಕಠಾರಿ ಇತ್ಯಾದಿಗಳಿಂದ ಇರಿದುಕೊಂಡು, ಕುತ್ತಿಗೆಗೆ ಹಗ್ಗ ಬಿಗಿದುಕೊಂಡು, ಸತ್ತಿರುತ್ತಾರೋ, ಅಥವಾ ಮರ ಪರ್ವತ ಇತ್ಯಾದಿಗಳಿಂದ ಕೆಳಗೆ ಧುಮುಕಿ ಸತ್ತಿರುತ್ತಾರೋ ಈ ಐದು ವಿಧದ ಹತ್ಯೆ ಮಾಡಿರುವವರು, ಮತ್ತು ಪಂಚ ಮಹಾಪಾತಕಿಗಳು ಯಾರು ಇರುತ್ತಾರೋ ಇವರನ್ನೆಲ್ಲ ಪತಿತರೆಂದು ಹೇಳುತ್ತಾರೆ. ಅವರಿಗೋಸ್ಕರ ಗಯಾಕೂಪದಲ್ಲಿ ಯಾರಾದರೂ ಸ್ನಾನ ಮಾಡಿದರೆ, ಅಥವಾ ಆ ಪಾತಕಿಗಳು ಬದುಕಿದ್ದರೆ ಅವರನ್ನು ಗಯಾಕೂಪದಲ್ಲಿ ಸ್ನಾನಮಾಡಿಸಿದರೆ, ಅಲ್ಲಿ ಭಸ್ಮದಲ್ಲಿ ಹೊರಳಾಡಿಸಿದರೆ ಅವರು ಪವಿತ್ರರಾಗುತ್ತಾರೆ.

ದೇವಿ! ಈ ರೀತಿಯಾಗಿ ಗಯಾತೀರ್ಥದ ಪರಮ ಶ್ರೇಷ್ಠವಾದ ಮಹಾತ್ಮೆಯನ್ನು ಹೇಳಿದ್ದಾಯಿತು. ಸಮಸ್ತ ಪಾಪ ಪರಿಹಾರಕವಾದ ಪಿತೃಗಳಿಗೆ ಮುಕ್ತಿಪ್ರದವಾದ ಈ ಮಾಹಾತ್ಮೆಯನ್ನು ಪ್ರತಿದಿನ, ಅಥವಾ ಶ್ರಾದ್ಧದ ದಿನ ಭಕ್ತಿ ಪೂರ್ವಕವಾಗಿ ಯಾವನು ಕೇಳುತ್ತಾನೆಯೋ, ಅಥವಾ ಪ್ರವಚನ ಮಾಡುತ್ತಾನೆಯೋ, ಅವರೆಲ್ಲರೂ ಬ್ರಹ್ಮಲೋಕ ಭಾಗಿಗಳಾಗುತ್ತಾರೆ. ಇದು ಪರಮ ಮಂಗಳಕರ, ಪವಿತ್ರ, ಧನ್ಯ ಮತ್ತು ಮಾನವರಿಗೆ ಸ್ವರ್ಗಗತಿ ಪ್ರದವಾದುದು. ಈ ಮಾಹಾತ್ಮೆಯ ಶ್ರವಣವು, ಯಶಸ್ಸು, ಆಯುಸ್ಸು, ಪುತ್ರ ಪೌತ್ರಾದಿಗಳ ಅಭಿವೃದ್ಧಿಯನ್ನು ಮಾಡುತ್ತದೆ.

## ಅವಿಮುಕ್ತ ಕ್ಷೇತ್ರ - ಕಾಶೀ ಮಹಿಮಾ

**ಮೋಹಿನಿಯು:-** ಲೋಕೋದ್ಧಾರಪರಾಯಣರಾದ ವಸುಗಳೇ! ತಮಗೆ ಪುನಃ ಪುನಃ ಧನ್ಯವಾದಗಳು. ತಾವು ಬಹಳ ಕರುಣಾಶಾಲಿಗಳು. ಪರಮ ರಹಸ್ಯವಾದ ಪಿತೃಗಳಿಗೆ ಸದ್ಗತಿ

ಪ್ರದವಾದ ಗಯೆಯ ಮಹಿಮೆಯನ್ನು ತಮ್ಮಿಂದ ಕೇಳಿದ್ದಾಯಿತು. ಈಗ ತಾವು ದಯವಿಟ್ಟು ಕಾಶಿಯ ಮಹಿಮೆಯನ್ನು ತಿಳಿಸಬೇಕು.

**ವಸಿಷ್ಠರು:-** ಮೋಹಿನಿಯ ಈ ಮಾತನ್ನು ಕೇಳಿ ಪುರೋಹಿತವಸು ಏನನ್ನು ಹೇಳಿದರೋ ಆ ವಿಷಯವನ್ನು ಹೇಳುತ್ತೇನೆ ಕೇಳು.

**ಪುರೋಹಿತ ವಸು:-** ಪರಮ ಮಂಗಳಕರವಾದ ಕಾಶೀಪುರಿಯು ಧನ್ಯವಾಗಿದೆ. ಮುಕ್ತಿದಾಯಕವಾದ ವಿಷ್ಣು ಕ್ಷೇತ್ರವಾದ ಕಾಶಿಯನ್ನು ಶ್ರೀಹರಿಯಿಂದ ಬೇಡಿ ತನ್ನ ವಾಸಕ್ಕಾಗಿ ಇಟ್ಟುಕೊಂಡಿರುವ ಭಗವಂತನಾದ ಮಹೇಶ್ವರನೂ ಧನ್ಯ, ಇಲ್ಲಿ ಕಾಶಿಯ ವಿಶ್ವನಾಥನು ಭಗವಂತನಾದ ಹೃಷೀಕೇಶನನ್ನು ಪೂಜಿಸುತ್ತ ತಾನು ಎಲ್ಲ ದೇವತೆಗಳಿಂದ ಪೂಜಿತನಾಗುತ್ತಿದ್ದಾನೆ. ಕಾಶೀಪುರಿಯು ಮೂರು ಲೋಕಗಳ ಸಾರರೂಪವಾಗಿದೆ. ಕಾಶಿಯ ವಿಸ್ತಾರವು ಪೂರ್ವದಿಂದ ಪಶ್ಚಿಮಕ್ಕೆ ಎರಡೂವರೆ ಯೋಜನ ಉದ್ದ, ದಕ್ಷಿಣದಿಂದ ಉತ್ತರಕ್ಕೆ ದುಷ್ಕರವಾದ ಅಸಿನದಿಯಿಂದ ವರಣಾ ನದಿಯವರೆಗೆ ಅರ್ಧ ಯೋಜನ ಅಗಲವಾಗಿದೆ. ಇದು ಈಶ್ವರನೇ ಹೇಳಿದ ಕಾಶಿಯ ವಿಸ್ತಾರ. ಕಾಶಿಯಲ್ಲಿ ತಿಮಿಚಂಡೇಶ್ವರನೆಂಬ ಶಿವಲಿಂಗದಿಂದ ಉತ್ತರಾಯಣವನ್ನೂ, ಓಂಕಾರ ರೂಪದಿಂದ ಇರುವ ಶಂಕುಕರ್ಣಲಿಂಗದಿಂದ ದಕ್ಷಿಣಾಯನವನ್ನೂ ತಿಳಿಯಬೇಕು. ಪಿಂಗಲಾ ಎಂಬ ತೀರ್ಥವು ಅಗ್ನೇಯ ದಿಕ್ಕಿನಲ್ಲಿದೆ. ಒಣಗಿ ಹೋಗಿರುವ ಅಸೀ ಎಂಬ ನದಿಯನ್ನೇ ಪಿಂಗಲಾ ನದಿಯೆಂದು ತಿಳಿಯಬೇಕು. ಅದರ ಹತ್ತಿರದಲ್ಲಿಯೇ ಲೋಲಾರ್ಕತೀರ್ಥವಿದೆ. ಕೇಶವನ ಸ್ಥಾನದಿಂದ ಕೂಡಿರುವ ವರಣಾ ನದಿಯನ್ನೇ ಸೌಮ್ಯವಾದ ಇಡಾ ನದಿಯೆಂದು ತಿಳಿಯಬೇಕು. ಇಡಾಪಿಂಗಳಾ ನಾಡಿಗಳ ಮಧ್ಯದಲ್ಲಿ ಸುಷುಮ್ನಾ ನಾಡಿಯಿರುವಂತೆ ನದಿಗಳೆರಡರ ಮಧ್ಯದಲ್ಲಿ ಮತ್ಸ್ಯೋದರೀ (ಗಂಗೆ) ನದಿಯಿದೆ. ಈ ಮಹಾಕ್ಷೇತ್ರವನ್ನು ಭಗವಂತನಾದ ಶಿವ ಮತ್ತು ಮಹಾವಿಷ್ಣುವು ಎಂದೂ ವಿಮುಕ್ತಗೊಳಿಸುವುದಿಲ್ಲ. (ಬಿಡುವುದಿಲ್ಲ) ಆದುದರಿಂದ ಈ ಕ್ಷೇತ್ರಕ್ಕೆ ಅವಿಮುಕ್ತ ಎಂದು ಹೆಸರು. ಹಿಂದೆ ಎಂದೂ ಈ ಕ್ಷೇತ್ರವನ್ನು ಅವರಿಬ್ಬರೂ ಬಿಟ್ಟಿಲ್ಲ. ಮುಂದೆಯೂ ಬಿಡುವುದಿಲ್ಲ. ಪ್ರಯಾಗಾದಿ ತೀರ್ಥಗಳು ದುರ್ಲಭವಾದರೂ ಅದಕ್ಕಿಂತಲೂ ಕಾಶಿಯ ಮಹಿಮೆಯು ಹೆಚ್ಚು, ಏಕೆಂದರೆ ಅದು ಅನಾಯಾಸವಾಗಿ ಮೋಕ್ಷವನ್ನೇ ಕೊಡುತ್ತದೆ.

ಉತ್ತರವಾಹಿನಿಯಾದ ಗಂಗೆಯೂ ಪೂರ್ವವಾಹಿನಿಯಾದ ಸರಸ್ವತಿಯೂ ಪರಮಪವಿತ್ರವೆಂದು ಭಾವಿಸಲಾಗುತ್ತಿದೆ. ಕಾಶಿಯಲ್ಲಿ ಇದೇ ಪರಿಸ್ಥಿತಿಯಿದೆ. ಅಂತಹ ಸ್ಥಳದಲ್ಲಿಯೇ ಕಪಾಲಮೋಚನ ತೀರ್ಥವಿದೆ. ಆ ತೀರ್ಥಕ್ಕೆ ಹೋಗಿ ಶ್ರಾದ್ಧ ಪಿಂಡಪ್ರದಾನ ಮಾಡಿದರೆ ಅವರವರ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ. ಶ್ರಾದ್ಧ ಮಾಡಿದವರಿಗೂ ಪ್ರಕಾಶ ಮಾನವಾದ ದಿವ್ಯ ಲೋಕಪ್ರಾಪ್ತಿಯಾಗುತ್ತದೆ. ಬ್ರಹ್ಮಹತ್ಯೆ ಮಾಡಿದವನೂ, ಅವಿಮುಕ್ತ ಕ್ಷೇತ್ರವಾದ ಕಾಶೀಯಾತ್ರೆ ಮಾಡಿದರೆ ಆ ಕ್ಷೇತ್ರದ ಮಹಾತ್ಮ್ಯೆಯಿಂದ ಅವನ ಬ್ರಹ್ಮಹತ್ಯಾ ಪಾಪವು ನಾಶವಾಗುತ್ತದೆ. ಪುಣ್ಯಾತ್ಮರಾದ ಮಾನವರು ಕಾಶೀ ಪಟ್ಟಣಕ್ಕೆ ಹೋದರೆ, ಅಕ್ಷಯ, ಅಜರ, ಶರೀರ ರಹಿತ ಸ್ವರೂಪವನ್ನು (ಮುಕ್ತ ಸ್ವರೂಪವನ್ನು) ಹೊಂದುತ್ತಾರೆ. ಕಾಶೀ ವಾಸಿಗಳಾದ ಮಾನವರಿಗೆ ಲಭ್ಯವಾದ ಸದ್ಗತಿಯು ಕುರುಕ್ಷೇತ್ರ, ಹರಿದ್ವಾರ ಮತ್ತು ಪುಷ್ಕರಗಳಲ್ಲಿಯೂ ಸಿಗಲಾರದು.

ದೇಹಾಂತದ ವರೆಗೆ ಕಾಶೀನಿವಾಸ ಮಾಡುವವನು ಮರಣಾನಂತರ ಹಂಸಯುಕ್ತ ವಿಮಾನದಲ್ಲಿ ಆರೂಢನಾಗಿ ದಿವ್ಯಲೋಕಕ್ಕೆ ಹೋಗುತ್ತಾನೆ. ವಿಷಯಾಸಕ್ತ ಚಿತ್ತನೂ ಭಕ್ತಿ ಮತ್ತು ಸದ್ಬುದ್ಧಿ ರಹಿತನೂ ಆದ ಪಾಪಿಯು ಕಾಶೀವಾಸ ಮಾಡಿದರೆ, ಅಲ್ಲಿ ದೇಹವನ್ನು ಬಿಟ್ಟರೆ ಪುನಃ ಸಂಸಾರ ಬಂಧನಕ್ಕೆ ಒಳಗಾಗುವುದಿಲ್ಲ. ಭೂಮಂಡಲದಲ್ಲಿರುವ ತೀರ್ಥಗಳೆಲ್ಲೆಲ್ಲ ಕಾಶಿಯು ಶ್ರೇಷ್ಠ ತೀರ್ಥವು, ಸ್ವರ್ಗ ಮತ್ತು ಮೋಕ್ಷಗಳಿಗೆ ಕಾರಣವು. ಅಲ್ಲಿ ಮೃತರಾದವರಿಗೆ ಮುಕ್ತಿಯಾಗುವುದರಲ್ಲಿ ಯಾವ ಸಂಶಯವು ಇಲ್ಲ. ಸಾವಿರಾರು ಜನ್ಮಗಳಲ್ಲಿ ಯೋಗ ಸಾಧನ ಮಾಡಿ ಯೋಗಿಗಳು ಯಾವ ಗತಿಯನ್ನು ಹೊಂದುತ್ತಾರೋ ಅಂತಹ ಪರಮ ಮೋಕ್ಷ ಪದವಿಯನ್ನು ಕಾಶಿಯಲ್ಲಿ ದೇಹ ಮೋಕ್ಷ ಮಾತ್ರದಿಂದಲೇ ಪಡೆಯುತ್ತಾರೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸಂಕರ ವರ್ಣದವರು, ಮ್ಲೇಚ್ಛರು, ಹುಳಹುಪ್ಪಟೆ ಚಿಟ್ಟೆ ಮುಂತಾದವುಗಳು, ಇರುವೆ, ಎರೆಹುಳು ಮುಂತಾದವುಗಳು ಕಾಶಿಯಲ್ಲಿ ತಮ್ಮ ಆಯುಸ್ಸು ತೀರಿದಾಗ ತಮ್ಮಷ್ಟಕ್ಕೆ ಮೃತ್ಯುವನ್ನು ಪಡೆದರೂ ದೇವೇಶ್ವರನಾದ ಈಶ್ವರನ ದಯೆಯಿಂದ ಮಹಾಭಕ್ತರು ಮತ್ತು ಮೋಕ್ಷ ಭಾಗಿಗಳಾಗುತ್ತಾರೆ. ಯಾವ ಜೀವರು ವ್ರತ ನಿಯಮ ನಿಷ್ಠರಾಗಿ ಭಗವಂತನ ಸ್ಮರಣ ಮಾಡುತ್ತ ಅಲ್ಲಿ ಪ್ರಾಣ ಬಿಡುತ್ತಾರೋ ಅವರಿಗೆ ಅವಿಮುಕ್ತ ಕ್ಷೇತ್ರದಲ್ಲಿ ಮರಣ ಸಮಯದಲ್ಲಿ ಸಾಕ್ಷಾತ್ ಭೂತನಾಥನಾದ ಶಿವನು ಪ್ರಾಣಿಗಳ ಕಿವಿಯಲ್ಲಿ ಮಂತ್ರೋಪದೇಶವನ್ನು ಮಾಡುತ್ತಾನೆ. ಸ್ವತಃ ಭಗವಂತನಾದ ಶ್ರೀರಾಮನು ಅವಿಮುಕ್ತ ನಿವಾಸಿಯಾದ ಈಶ್ವರನ ಹತ್ತಿರ ಪ್ರಸನ್ನ ಚಿತ್ತನಾಗಿ ಈ ರೀತಿ ಹೇಳಿದ್ದಾನೆ -

''ಪರಮೇಶ್ವರನೇ! ನೀನು ಯಾವ ಒಬ್ಬ ಮುಮೂರ್ಷುವಾದ (ಸಾಯುತ್ತಿರುವ) ಜೀವನ ಕಿವಿಯಲ್ಲಿ ನನ್ನ 'ರಾಮತಾರಕ' ಮಂತ್ರವನ್ನು ಉಪದೇಶಿಸುತ್ತೀಯೋ ಅವರು ನನ್ನ ಅನುಗ್ರಹದಿಂದ ಅವಶ್ಯವಾಗಿ ಮುಕ್ತರಾಗುತ್ತಾರೆ. ಆದ್ದರಿಂದ ಭಗವಂತನಾದ ಶಿವನ ಕೃಪಾಶಕ್ತಿಯಿಂದ ಅನುಗ್ರಹೀತರಾದ ಎಲ್ಲ ಜೀವರೂ ಅಲ್ಲಿ ಪರಮ ಗತಿಯನ್ನು ಹೊಂದುತ್ತಾರೆ. ಮೋಹಿನಿ! ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ಬಹಳ ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ. ಸಮುದ್ರದ ರತ್ನಗಳನ್ನು ಹೇಗೆ ಲೆಕ್ಕ ಮಾಡುವುದೂ ಅಸಾಧ್ಯವೋ ಅದರಂತೆ ಅವಿಮುಕ್ತ ಕ್ಷೇತ್ರದ ಗುಣಗಳನ್ನು ಲೆಕ್ಕಮಾಡುವುದೂ ಅಸಾಧ್ಯವಾದ ಕಾರ್ಯವಾಗಿದೆ. ಪರಮ ಗತಿಯನ್ನು ಪಡೆಯುವ ಉದ್ದೇಶದಿಂದ, ಪರಮಾತ್ಮನ ಜ್ಞಾನ ವಿಜ್ಞಾನ ನಿರತರಿಗೆ ಯಾವ ಗತಿಯು ಆಗುತ್ತದೆಯೋ ಅದು ಕಾಶಿಯಲ್ಲಿ ಮೃತರಾದವರಿಗೂ ಲಭ್ಯವಾಗುತ್ತದೆ ಎಂಬ ವಿಷಯವು ನಿಶ್ಚಿತವೆಂದು ತಿಳಿ.

ಮಣಿಕರ್ಣಿಕಾ ಎಂಬ ಸ್ಮಶಾನ ತೀರ್ಥವೇ ಕಾಶಿಯಯೋಗ ಪೀಠವೆಂದು ತಿಳಿ. ಕರ್ಮಭ್ರಷ್ಟರಾದ ಜೀವರಿಗೂ ಕೂಡ ಕಾಶಿಯ ಸ್ಮಶಾನಾದಿ ತೀರ್ಥಗಳಲ್ಲಿ ಮುಕ್ತಿಯು ದೊರೆಯುತ್ತದೆ. ಕಾಶಿಯಲ್ಲಿಯೂ ಕೂಡ ಬೇರೆ ಎಲ್ಲ ತೀರ್ಥಗಳಿಗಿಂತಲೂ ಮಣಿಕರ್ಣಿಕೆಯು ಉತ್ತಮವೆಂದು ಹೇಳುತ್ತಾರೆ. ಅಲ್ಲಿ ಭಗವಂತನಾದ ಶಿವನು ನಿತ್ಯ ನಿವಾಸ ಮಾಡುತ್ತಾನೆ. ಮೋಹಿನಿ! ಹತ್ತು ಅಶ್ವಮೇಧಗಳನ್ನು ಮಾಡಿದ ಫಲವು ಮಣಿಕರ್ಣಿಕೆಯಲ್ಲಿ ಸ್ನಾನ ಮಾಡುವುದರಿಂದ ಲಭ್ಯವಾಗುತ್ತದೆ. ವೇದಜ್ಞನಾದ ಬ್ರಾಹ್ಮಣನಿಗೆ ಇಲ್ಲಿ ಧನ ದಾನಮಾಡುವವನು ಉತ್ತಮ ಗತಿಯನ್ನು ಹೊಂದಿ ತೇಜಸ್ಸಿನಿಂದ ಕೂಡಿಕೊಂಡಿರುತ್ತಾನೆ. ಅಲ್ಲಿ ಉಪವಾಸವಿದ್ದು ಬ್ರಾಹ್ಮಣರಿಗೆ ತೃಪ್ತಿಯನ್ನುಂಟು ಮಾಡುವವನಿಗೆ ಸೌತ್ರಾಮಣೀ ಯಜ್ಞದ ಫಲವು ಬರುತ್ತದೆ.

ಇದರ ಮುಂದೆ ಗಂಗಾ ಮತ್ತು ವರಣಾಸಂಗಮದ ಉತ್ತಮ ತೀರ್ಥವಿದೆ. ಅದು ಮಾನವನಿಗೆ ಸಾಯುಜ್ಯ ಮುಕ್ತಿಯನ್ನೇ ಪ್ರದಾನಮಾಡುತ್ತದೆ. ಬುಧವಾರ ದ್ವಾದಶೀ ಶ್ರವಣ ನಕ್ಷತ್ರಯೋಗವಿದ್ದಾಗ ಅಲ್ಲಿ ಸ್ನಾನಮಾಡಿದವರಿಗೆ ಮೋಕ್ಷ ಫಲವೇ ದೊರೆಯುತ್ತದೆ. ಆ ಸಮಯದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿದರೆ, ಅವರೆಲ್ಲರೂ ಉದ್ಧಾರ ಹೊಂದಿ ವಿಷ್ಣು ಲೋಕವನ್ನು ಪಡೆಯುತ್ತಾರೆ. ಗಂಗಾ, ವರುಣಾ ಮತ್ತು ಅಸಿನದಿಗಳ ಸಂಗಮವು ಲೋಕವಿಖ್ಯಾತವಾಗಿದೆ ಅಲ್ಲಿ ವಿಧಿಪೂರ್ವಕವಾಗಿ ಅಶ್ವದಾನಮಾಡಿದವನು ಪುನಃ ಈ ಲೋಕದಲ್ಲಿ ಜನ್ಮ ತಾಳುವುದಿಲ್ಲ. ಅಲ್ಲಿರುವ ಸಂಗಮೇಶ್ವರನನ್ನು ಭಕ್ತಿಯಿಂದ ಪೂಜೆಮಾಡಿದವನು ನಿಗ್ರಹಾನುಗ್ರಹ ಸಮರ್ಥನಾದ ಈಶ್ವರನಿಗೆ ಸಮಾನನಾಗುತ್ತಾನೆ. ದೇವೇಶ್ವರ ಎಂಬಲ್ಲಿಂದ ಪೂರ್ವಭಾಗದಲ್ಲಿ ಕೇಶವನು. ಇದ್ದಾನೆ, ಕೇಶವನಿಂದ ಪೂರ್ವದಲ್ಲಿ ಜಗತ್ತಿನಲ್ಲಿ ಪ್ರಖ್ಯಾತವಾದ ಸಂಗಮೇಶ್ವರವಿದೆ.

## ಕಾಶಿಯ ತೀರ್ಥಗಳು, ಅಲ್ಲಿರುವ ಶಿವಲಿಂಗಗಳ ದರ್ಶನ ಪೂಜನಾದಿಗಳ ಮಹಿಮೆ

**ಪುರೋಹಿತ ವಸು:-** ಸುಂದರಿ! ಸಂಗಮೇಶ್ವರ ಪೀಠದ ವಾಯವ್ಯಭಾಗದಲ್ಲಿ ಸಗರ ಮಹಾರಾಜನು ಸ್ಥಾಪಿಸಿದ ಚತುರ್ಮುಖ ಶಿವಲಿಂಗವಿದೆ ಅದರ ವಾಯವ್ಯ ಭಾಗದಲ್ಲಿ ಗೋಕ್ಷೀರದಿಂದ ತುಂಬಿದ ಭದ್ರದೇಹವೆಂಬ ಸರೋವರವಿದೆ. ಅದು ಸಮಸ್ತಪಾಪ ನಾಶಕವಾಗಿದೆ. ಮೋಹಿನಿ, ಸಾವಿರಾರು ಕಪಿಲಾ ಗೋವುಗಳನ್ನು ದಾನಮಾಡಿದ್ದರಿಂದ ಬರುವ ಫಲವು ಅಲ್ಲಿ ಕೇವಲ ಸ್ನಾನಮಾಡುವುದರಿಂದ ಉಂಟಾಗುತ್ತದೆ. ಪೂರ್ವಾಭಾದ್ರಾ ನಕ್ಷತ್ರಯೋಗವಿದ್ದ ಹುಣ್ಣಿಮೆಯ ದಿನ ಅಲ್ಲಿ ಸ್ನಾನ ಮಾಡಿದರೆ, ಆ ಅತಿಶಯ ಪುಣ್ಯಕಾಲವು ಅಶ್ವಮೇಧ ಯಜ್ಞದ ಫಲವನ್ನು ಕೊಡುತ್ತದೆ. ಅಲ್ಲಿಯೇ ಶ್ಮಶಾನಭೂಮಿಯಲ್ಲಿ ಪ್ರಖ್ಯಾತಳಾದ ಭೀಷ್ಮಚಂಡಿಕಾ ದೇವಿಯ ದರ್ಶನವಾಗುತ್ತದೆ. ಆ ದೇವಿಯನ್ನು ಪೂಜಿಸಿದರೆ ಎಂದೂ ದುರ್ಗತಿಯುಂಟಾಗು ವುದಿಲ್ಲ. ಅಂತಕೇಶ್ವರದ ಪೂರ್ವದಲ್ಲಿ. ಸರ್ವೇಶ್ವರದ ದಕ್ಷಿಣಭಾಗದಲ್ಲಿ ಹಾಗೂ ಮಾತಲೀಶ್ವರದ ಉತ್ತರದಿಕ್ಕಿನಲ್ಲಿ ಕೃತ್ತಿವಾಸೇಶ್ವರ ಶಿವಲಿಂಗವಿದೆ. ಕೃತ್ತಿವಾಸೇಶ್ವರನ ದರ್ಶನ ಮತ್ತು ಪೂಜೆಗಳನ್ನು ಮಾಡಿದವನು ಒಂದೇ ಜನ್ಮದಲ್ಲಿ ಶಿವನ ಸಮೀಪವನ್ನು ಸೇರಿ ಪರಮಗತಿಯನ್ನು ಪಡೆಯುತ್ತಾನೆ. ಆ ಕೃತ್ತಿವಾಸೇಶ್ವರನು ಮೊಟ್ಟಮೊದಲು ಕೃತಯುಗದಲ್ಲಿ ತ್ರ್ಯಂಬಕೇಶ್ವರನೆಂದು ಪ್ರಸಿದ್ಧನಾಗಿದ್ದನು. ತ್ರೇತಾಯುಗದ ಹೆಸರು ಕೃತ್ತಿವಾಸೇಶ್ವರ, ದ್ವಾಪರಯುಗದಲ್ಲಿ ಮಹೇಶ್ವರನೆಂದೂ ಕಲಿಯುಗದಲ್ಲಿ ಹಸ್ತಿವಾಲೇಶ್ವರ ಎಂದೂ ಆ ಈಶ್ವರನ ಹೆಸರುಗಳು. ಮೋಕ್ಷಪ್ರದವಾದ ಸನಾತನವಾದ ತಾರಕಮಂತ್ರದ ಉಪದೇಶವು ಆಗಬೇಕೆಂದು ಇದ್ದರೆ ಆಗಾಗ್ಗೆ ಕೃತ್ತಿವಾಸೇಶ್ವರನ ದರ್ಶನಮಾಡಬೇಕು. ಆ ದೇವಾಧಿದೇವನ ದರ್ಶನದಿಂದ ಬ್ರಹ್ಮಹತ್ಯಾ ಪಾಪವು ನಾಶವಾಗುತ್ತದೆ. ಆ ಈಶ್ವರನ ಸ್ಪರ್ಶ ಮತ್ತು ಪೂಜೆಗಳಿಂದ ಎಲ್ಲ ಯಜ್ಞಗಳ ಫಲವೂ ಲಭ್ಯವಾಗುತ್ತದೆ. ಆ ಶಾಶ್ವತವಾದ ಮಹಾದೇವನನ್ನು ಪೂಜಿಸಬೇಕು. ವಿಶೇಷತಃ ಫಾಲ್ಗುನ ಬಹುಳ ಚತುರ್ದಶೀ (ಶಿವರಾತ್ರಿ) ದಿನ ಏಕಾಗ್ರಚಿತ್ತನಾಗಿ ಪುಷ್ಪ, ಫಲ, ಬಿಲ್ವಪತ್ರ ಉತ್ತಮ ಮತ್ತು ಸಾಧಾರಣ ಭಕ್ಷ್ಯಗಳು, ಹಾಲು, ಮೊಸರು, ತುಪ್ಪ, ಜೇನು ಮತ್ತು ಜಲಗಳಿಂದ ಈಶ್ವರನನ್ನು ಅರ್ಚಿಸಬೇಕು. ಡಮರು ಡಿಂಡಿಮಗಳ ಘೋಷ,

ನಮಸ್ಕಾರ, ನೃತ್ಯ, ಗೀತ, ಅನೇಕ ರೀತಿಯ ಮುಖ್ಯವಾದ, ಸ್ತೋತ್ರ ಮತ್ತು ಮಂತ್ರಗಳ ಮೂಲಕ ಪರಮಮಂಗಳ ಸ್ವರೂಪನಾದ ಭಗವಂತನಾದ ಶಿವನನ್ನುಯಾರು ಸಂತೋಷಪಡಿಸುತ್ತಾರೋ, ಅವರು ಮಾಡಿದ ಒಂದು ರಾತ್ರಿಯ ಉಪವಾಸ ಮತ್ತು ಭಕ್ತಿಭರಿತವಾದ ಪೂಜೆಯಿಂದ ಮಹಾದೇವನು ಸಂತುಷ್ಟನಾಗಿ ಅವರಿಗೆ ಪರಮಪದವನ್ನು ಕರುಣಿಸುತ್ತಾನೆ.

ಮೋಹಿನಿ! ನಾನು ಈಗ ಕಾಶಿಯ ಮತ್ತೊಂದು ದೇವಾಲಯದ ವರ್ಣನೆ ಮಾಡುತ್ತೇನೆ. ಅಲ್ಲಿ ಈ ದೇವಾಧಿದೇವನಾದ ಮಹಾದೇವನಿಗೆ ಪ್ರಿಯವಾದ ಸುಂದರ ಮಂದಿರವಿದೆ. ಹಿಂದೆ ಒಂದಾನೊಂದು ಕಾಲದಲ್ಲಿ ಕೆಲವು ರಾಕ್ಷಸರು ಚಂದ್ರಮೌಲೀಶ್ವರನ ಲಿಂಗವನ್ನು ಹಿಡಿದುಕೊಂಡು ಆಕಾಶಮಾರ್ಗದಿಂದ ಬಹಳ ಆತುರದಿಂದ ಹೋಗುತ್ತಿದ್ದರು, ಅವರು ಕಾಶೀಕ್ಷೇತ್ರದ ಮೇಲ್ಭಾಗದ ಅಂತರಿಕ್ಷದ ಮಾರ್ಗದಲ್ಲಿ ಬಂದಾಗ ಮಹಾದೇವನು ಆಲೋಚಿಸುತ್ತಿದ್ದನು." ನಾನು ಅವಿಮುಕ್ತ ಕ್ಷೇತ್ರದಿಂದ ದೂರವಾಗದಂತೆ, ಇಲ್ಲಿಯೇ ಇರುವಂತೆ ಏನು ಉಪಾಯಮಾಡಲಿ." ಭಗವಂತನಾದ ಶಿವನು ಈ ರೀತಿ ಆಲೋಚಿಸುತ್ತಿರುವಾಗಲೇ ಬೆಳಗಿನ ಜಾವದ ಕೋಳಿಯೊಂದು ಕೂಗಿತು. ಆ ರಾಕ್ಷಸರಿಗೆ ಮನಸ್ಸಿನಲ್ಲಿ ಭಯವುಂಟಾಗಿ ಕೂಡಲೇ ಪ್ರಾತಃಕಾಲದಲ್ಲಿ ಆ ಶಿವಲಿಂಗವನ್ನು ಅಲ್ಲಿಯೇ ಗಂಗೆಯ ಸಮೀಪದಲ್ಲಿ ಬಿಟ್ಟು ಅವರು ಓಡಿಹೋದರು. ಆ ಸುಂದರ ಮನೋಹರವಾದ ಕ್ಷೇತ್ರದಲ್ಲಿ, ಅವಿಮುಕ್ತವೆಂಬ ಸ್ಥಳದಲ್ಲಿ ಈಶ್ವರನು ಲಿಂಗರೂಪದಲ್ಲಿ ವಿರಾಜಿಸಿದನು. ಈಶ್ವರನು ಈ ಸ್ಥಳವನ್ನು ಬಿಡದೇ ಇದ್ದುದರಿಂದ ಈ ಸ್ಥಳಕ್ಕೆ ಅವಿಮುಕ್ತವೆಂದು ಹೆಸರಾಯಿತು. ದೇವತೆಗಳು ಅಲ್ಲಿರುವ ಈಶ್ವರನನ್ನು ಪರಮ ಪವಿತ್ರವಾದ ಅಕ್ಷರಗಳುಳ್ಳ ಅವಿಮುಕ್ತ" ಪದದಿಂದ ಜೋಡಿಸಿ ಅವಿಮುಕ್ತೇಶ್ವರ ಎಂದು ಕರೆದರು. ಅಲ್ಲಿ ಪ್ರಾಣಬಿಡುವ ಸ್ಥಾವರ ಅಥವಾ ಜಂಗಮವಾದ ಯಾವ ಪ್ರಾಣಿಯೇ ಆಗಲಿ. ಅದಕ್ಕೆ ಅವಿಮುಕ್ತೇಶ್ವರನು ತಾರಕ ಮಂತ್ರೋಪದೇಶವನ್ನು ಕರುಣಿಸಿ ಮೋಕ್ಷ ಮಾರ್ಗವನ್ನು ದಯಪಾಲಿಸುತ್ತಾನೆ. ಅವಿಮುಕ್ತೇಶ್ವರದ ದಕ್ಷಿಣಪಾರ್ಶ್ವದಲ್ಲಿ ಒಂದು ಸುಂದರವಾದ ಇಳಿಯುವ ಬಾವಿಯಿದೆ. ಅದರ ಜಲಪಾನ ಮಾಡುವವರು ಕೃತಾರ್ಥರಾಗುತ್ತಾರೆ, ಅವರಿಗೆ ನಿಶ್ಚಯವಾಗಿಯೂ ತಾರಕ ಮಂತ್ರೋಪದೇಶವು ಲಭ್ಯವಾಗುತ್ತದೆ. ಮಾನವನು ಬಾವಿಯ ನೀರಿನಲ್ಲಿ ಸ್ನಾನಮಾಡಿ ದಂಡಕೇಶ್ವರ ಮತ್ತು ಅವಿಮುಕ್ತೇಶ್ವರರ ದರ್ಶನಮಾಡಿದರೆ ಕ್ಷಣಮಾತ್ರದಲ್ಲಿ ಕೈವಲ್ಯಮೋಕ್ಷವನ್ನೇ ಪಡೆಯುತ್ತಾನೆ. ಕಾಶೀಪುರೀ, ಸ್ಮಶಾನಘಟ್ಟ, ಅವಿಮುಕ್ತಸ್ಥಾನ ಅವಿಮುಕ್ತೇಶ್ವರರ ಲಿಂಗ, ಇವುಗಳ ದರ್ಶನಮಾಡುವವನು ಶಿವಗಣಗಳ ಅಧಿಪತಿ ಯಾಗುತ್ತಾನೆ, ಅವಿಮುಕ್ತೇಶ್ವರನ ದರ್ಶನದಿಂದ ಸಮಸ್ತಪಾಪ ಮತ್ತು ರೋಗಗಳ ಪರಿಹಾರ ವಾಗುವುದಲ್ಲದೆ ಜೀವನ ಅಜ್ಞಾನಮಯ ಬಂಧನವೂ (ಪಶುಪಾಶ) ನಾಶವಾಗುತ್ತದೆ.

ಅವಿಮುಕ್ತದ ಮುಂದೆ ಪಶ್ಚಿಮ ಮುಖವಾದ ಒಂದು ಶಿವಲಿಂಗವಿದೆ. ಲಕ್ಷಣೇಶ್ವರ ಎಂದು ಪ್ರಖ್ಯಾತವಾದ ಆ ಶಿವಲಿಂಗದ ದರ್ಶನದಿಂದ ಮನುಷ್ಯನು ಜ್ಞಾನಿಯಾಗುತ್ತಾನೆ. ಅದರ ಉತ್ತರದಲ್ಲಿ ಚತುರ್ಥೇಶ್ವರನೆಂದು ಪ್ರಸಿದ್ಧನಾದ ಚತುರ್ಮುಖ ಶಿವಲಿಂಗವಿದೆ. ಈ ಶ್ರೇಷ್ಠವಾದ ಶಿವಲಿಂಗವೂ ಪಾಪಭಯನಿವಾರಕವಾಗಿದೆ. ಭೂಮಿಯಲ್ಲಿ ಪ್ರಾಣಿಗಳಿಗೆ ಮುಕ್ತಿದಾಯಕ ಕ್ಷೇತ್ರಗಳಲ್ಲಿ ಉತ್ತಮವಾದ ವಾರಾಣಸಿಯೂ ಅಲ್ಲಿರುವ

ಜೀವಮುಕ್ತಿಪ್ರದನಾದ ಅವಿಮುಕ್ತೇಶ್ವರನೂ ಪರಮಶ್ರೇಷ್ಠರು. ಕಾಶಿಯಲ್ಲಿ ಎಲ್ಲೆ ವಾಸಿಸಿದರೂ ಗಣಪತಿಸ್ಥಾನವು ಪ್ರಾಪ್ತಿಯಾಗುತ್ತದೆಂದು ಹೇಳುತ್ತಾರೆ. ಅಲ್ಲಿ ಪ್ರಾಣತ್ಯಾಗಮಾಡುವವರಿಗೆ ಆತ್ಯಂತಿಕ ಮೋಕ್ಷವೇ ಲಭ್ಯವಾಗುತ್ತದೆ. ಇದೇ ಕಾಶಿಕ್ಷೇತ್ರದ ಎಲ್ಲೆಯಲ್ಲಿ ಪ್ರಥಮಾವರಣವು. ದ್ವಿತೀಯಾವರಣದಲ್ಲಿ ಪೂರ್ವದಿಕ್ಕಿನಲ್ಲಿರುವ ಮಣಿಕರ್ಣಿಕೆಯಲ್ಲಿ ಏಳು ಕೋಟಿ ಲಿಂಗಳಿವೆ. ಸಿದ್ಧಸ್ವರೂಪಗಳಾದ ಆ ಶಿವಲಿಂಗಗಳ ದರ್ಶನದಿಂದ ಯಜ್ಞಗಳ ಫಲವು ಪ್ರಾಪ್ತವಾಗುತ್ತದೆ. ಕಾಶಿಯಲ್ಲಿರುವ ಪವಿತ್ರವಾದ ಬಾವಿ, ಸರೋವರ, ಇಳಿಭಾವಿ, ನದಿ ಮತ್ತು ಕುಂಡಗಳೆಲ್ಲವೂ ಸಿದ್ಧಪೀಠಗಳಾಗಿವೆ. ಏಕಾಗ್ರಚಿತ್ತನಾಗಿ ಇವುಗಳಲ್ಲಿ ಸ್ನಾನಮಾಡಿ ಅಲ್ಲಿಯ ಶಿವಲಿಂಗಗಳ ದರ್ಶನಮಾಡಿದವನು ಈ ಸಂಸಾರದಲ್ಲಿ ಪುನಃ ಜನ್ಮವೆತ್ತಲಾರನು, ಹೀಗೆ ಸಮಸ್ತಪಾಪನಾಶಕವಾದ ತೀರ್ಥ ಕ್ಷೇತ್ರಯಾತ್ರೆಯನ್ನು ವರ್ಣಿಸುತ್ತ ಪೃಥ್ವೀ ಅಂತರಿಕ್ಷದಲ್ಲಿಯೂ ಇರುವ ಮುಖ್ಯ ಮುಖ್ಯ ತೀರ್ಥಗಳನ್ನು ವರ್ಣಿಸಿದ್ದಾಯಿತು.

## ಕಾಶೀಯಾತ್ರೆಯ ಕಾಲ ಯಾವುದು? ಅಲ್ಲಿಯ ಅವಶ್ಯಕರ್ತವ್ಯ ಯಾವುದು?

**ಪುರೋಹಿತ ವಸು:-** ಮೋಹಿನಿ! ನಾನೀಗ ದೇವತೆಗಳು ನಿಯತಮಾಡಿರತಕ್ಕ ಕಾಶೀಯಾತ್ರೆಯ ಕಾಲವನ್ನು ಹೇಳುತ್ತೇನೆ. ನಿಯತಕಾಲದಲ್ಲಿ ಮಾಡಿದ ಯಾತ್ರೆಯು ಯಥಾಯೋಗ್ಯ ಫಲವನ್ನು ಕೊಡುತ್ತದೆ. ಪೂರ್ವಕಾಲದಲ್ಲಿ ದೇವತೆಗಳು ಕಾಶಿಯಲ್ಲಿದ್ದು ಚೈತ್ರಮಾಸದಲ್ಲಿ ತೀರ್ಥಯಾತ್ರೆ ಮಾಡಿದ್ದಾರೆ. ಅವರು ಕಾಮಕುಂಡಲದಲ್ಲಿದ್ದು ಸ್ನಾನ ಮತ್ತು ಪೂಜೆಯಲ್ಲಿ ತತ್ಪರರಾಗುತ್ತಿದ್ದರು. ಜ್ಯೇಷ್ಠಮಾಸದಲ್ಲಿ ರುದ್ರಾವಾಸ ಕುಂಡದಲ್ಲಿ ಸ್ನಾನ ಮತ್ತು ಪೂಜಾತತ್ಪರರಾಗಿದ್ದು ಸಿದ್ಧರು ಅಲ್ಲಿಯ ಯಾತ್ರೆಯನ್ನು ಮಾಡಿದ್ದಾರೆ. ಗಂಧರ್ವರು ಆಷಾಢಮಾಸದಲ್ಲಿ ಮಾರ್ಕಂಡೇಯ ಕುಂಡದಲ್ಲಿ ಸ್ನಾನಪೂಜಾತತ್ಪರ ರಾಗಿದ್ದು ಕಾಶೀಯಾತ್ರೆಯನ್ನು ಮಾಡಿದ್ದರು. ನಾಗರು ಮಾರ್ಗಶೀರ್ಷಮಾಸದಲ್ಲಿ ಕೋಟಿತೀರ್ಥದಲ್ಲಿದ್ದುಕೊಂಡು ಸ್ನಾನಪೂಜಾದಿಗಳನ್ನು ಮಾಡುತ್ತ ಕಾಶಿಯ ಯಾತ್ರೆಯನ್ನು ಮಾಡಿದ್ದರು. ಗುಹ್ಯಕರು ಪುಷ್ಯಮಾಸದಲ್ಲಿ ಕಪಾಲಮೋಚನ ತೀರ್ಥದಲ್ಲಿ ಸ್ನಾನಪೂಜಾದಿ ತತ್ಪರರಾಗಿದ್ದು ಕಾಶೀಯಾತ್ರೆಯನ್ನು ಮಾಡಿದ್ದರು. ಪಿಶಾಚಗಳು ಫಾಲ್ಗುನಮಾಸದಲ್ಲಿ ಶುಕ್ಲ ಚತುರ್ದಶೀದಿನ ಕಾಲೇಶ್ವರಕುಂಡದಲ್ಲಿ ಸ್ನಾನ ಪೂಜಾದಿ ತತ್ಪರರಾಗಿದ್ದು ಕಾಶೀ ಯಾತ್ರೆಯನ್ನು ಮಾಡಿದ್ದರು. ಆದುದರಿಂದಲೇ ಅದನ್ನು ಪಿಶಾಚಚತುರ್ದಶೀ ಎಂದು ಹೇಳುತ್ತಾರೆ. ಭೀಷ್ಮಾಚಾರ್ಯರು ಕಾಶಿಗೆ ಬಂದು ಉತ್ತಮವಾದ ಪಂಚಾಯತನರೂಪದಿಂದ ದೇವೇಶ್ವರನಾದ ಶಿವನಪೂಜೆಯನ್ನು ಮಾಡುತ್ತ ಕೆಲವು ಕಾಲದವರೆಗೆ ಅಲ್ಲಿಯೇ ಇದ್ದರು. ಆ ಸ್ಥಳದಲ್ಲಿ ಗೋಪ್ರೇಕ್ಷೇಶ್ವರನನ್ನು ಎಲ್ಲ ದೇವತೆಗಳೂ ಸ್ತೋತ್ರ ಮಾಡುತ್ತಾರೆ, ಗೋಪ್ರೇಕ್ಷೇಶ್ವರನ ಬಳಿಗೆ ಬಂದು ಆ ಈಶ್ವರನ ದರ್ಶನ ಮತ್ತು ಪೂಜೆಗಳನ್ನು ಮಾಡಿದ ಮನುಷ್ಯನು, ಎಂದೂ ದುರ್ಗತಿಯನ್ನು ಹೊಂದುವುದಿಲ್ಲ. ಮತ್ತು ಸಮಸ್ತಪಾಪಗಳಿಂದ ಮುಕ್ತನಾಗುತ್ತಾನೆ. ಒಂದು ಬಾರಿ ಕಾಡಿನಲ್ಲಿ ಓಡಾಡುತ್ತಿರುವ ಕೆಲವು ಗೋವುಗಳು ಕಾಡ್ಗಿಚ್ಚಿನಿಂದ ಸುಡುವ ಹೆದರಿಕೆಯಿಂದ ಇತ್ತ ಅತ್ತ ಓಡಾಡುತ್ತ, ಈ ಕುಂಡದ ಹತ್ತಿರ ಬಂದು ಇಲ್ಲಿಯ ನೀರನ್ನು ಕುಡಿದು ಶಾಂತವಾದವು. ಅವುಗಳ ಭಯವು ನಾಶವಾಯಿತು. ಅಂದಿನಿಂದ ಈ ಕುಂಡಕ್ಕೆ ಕಪಿಲಾಹ್ರದ ಎಂದು ಹೆಸರಾಯಿತು. ಇಲ್ಲಿ ಭಗವಂತನಾದ ಶಿವನು

'ವೃಷಧ್ವಜ' ಎಂಬ ಹೆಸರಿನಿಂದ ಆವಿರ್ಭವಿಸಿ ಪ್ರಖ್ಯಾತನಾಗಿದ್ದಾನೆ. ಭಗವಂತನಾದ ಶಿವನು ಅಲ್ಲಿ ವಾಸಮಾಡಿದ್ದಷ್ಟೇ ಅಲ್ಲ, ಅಲ್ಲಿ ಎಲ್ಲರಿಗೂ ಪ್ರತ್ಯಕ್ಷದರ್ಶನಕೊಡುತ್ತ ವಿರಾಜಮಾನನಾಗಿದ್ದಾನೆ. ಯಾರು ಏಕಾಗ್ರಚಿತ್ತರಾಗಿ ಈ ಕಪಿಲಾಹ್ರದದಲ್ಲಿ ಸ್ನಾನ ಮಾಡಿ ವೃಷಧ್ವಜ ಶಿವನ ದರ್ಶನಮಾಡುತ್ತಾನೋ ಅವನಿಗೆ ಎಲ್ಲಯಜ್ಞಗಳ ಫಲವೂ ಪ್ರಾಪ್ತವಾಗುತ್ತದೆ, ಅವನಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ. ಭಗವಂತನಾದ ವೃಷಧ್ವಜನ ಪೂಜೆಮಾಡಿ ಅನಂತರ ಅಲ್ಲಿ ಮರಣಹೊಂದಿರುವ ಮಾನವನು ಶಿವರೂಪನಾಗುತ್ತಾನೆ. ಅಥವಾ ಶರೀರ ನಾಶಾನಂತರದಲ್ಲಿ ಅತ್ಯಂತ ದುರ್ಲಭವಾದ ಶಿವಗಣದ ಸ್ವರೂಪವನ್ನು ಪಡೆಯುತ್ತಾನೆ. ಇದೇ ಪ್ರದೇಶದಲ್ಲಿ ಗೋವುಗಳು ಬ್ರಹ್ಮದೇವರ ಒತ್ತಾಯದಿಂದ ಎಲ್ಲ ಲೋಕಗಳ ಶಾಂತಿಗೋಸ್ಕರವಾಗಿಯೂ ಮತ್ತು ಎಲ್ಲರನ್ನೂ ಪವಿತ್ರರನ್ನಾಗಿ ಮಾಡುವ ಉದ್ದೇಶದಿಂದಲೂ ತಮ್ಮ ಹಾಲನ್ನು ಸುರಿಸಿದ್ದುವು. ಕ್ಷೀರದಾನಮಾಡಿದ್ದವು. ಅಲ್ಲಿಯೇ ಅತ್ಯಂತ ಪವಿತ್ರವಾದ ಪಾಪನಾಶಕವಾದ ಮಂಗಳಕರವಾದ ಭದ್ರದೋಹತೀರ್ಥವು ಪ್ರಕಟವಾಯಿತು. ಆ ಸ್ಥಳದಲ್ಲಿ ಸ್ನಾನಮಾಡುವವನು ಸಾಕ್ಷಾತ್ ವಾಗೀಶ್ವರ (ಬೃಹಸ್ಪತಿಗೆ) ಸಮಾನನುನಾಗುತ್ತಾನೆ. ಅಲ್ಲಿ ಪರಮೇಷ್ಠೀ ಎಂಬ ಪ್ರಖ್ಯಾತ ನಾಮವುಳ್ಳ ಬ್ರಹ್ಮದೇವರು ತಾನೇ ತೆಗೆದುಕೊಂಡು ಬಂದು ಶಿವಲಿಂಗವನ್ನು ಪ್ರತಿಷ್ಠಿಸಿದ್ದಾರೆ. ಅನಂತರ ಬ್ರಹ್ಮದೇವರಿಂದ ಒಂದು ಲಿಂಗವನ್ನು ಸ್ವೀಕರಿಸಿ ಭಗವಂತನಾದ ವಿಷ್ಣುವು ಮತ್ತೊಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಿಸಿದ್ದಾರೆ. ಅದು ಹಿರಣ್ಯಗರ್ಭಲಿಂಗ ಎಂಬುದಾಗಿ ಪ್ರಸಿದ್ಧವಾಗಿದೆ. ಅನಂತರ ಪುನಃ ಬ್ರಹ್ಮದೇವರು ಸ್ವರ್ಲೋಕೇಶ್ವರ ಎಂಬ ಹೆಸರಿನ ಮತ್ತೊಂದು ಲಿಂಗವನ್ನು ಅಲ್ಲಿ ಪ್ರತಿಷ್ಠಿಸಿದರು. ಆ ಶಿವನು ಸ್ವರ್ಗಲೋಕದ ಲೀಲೆಗಳ ದರ್ಶನವನ್ನು ಮಾಡಿಸುತ್ತಾನೆ. ದೇವತೆಗಳ ಸ್ವಾಮಿಯಾದ ಆ ಸ್ವರ್ಲೋಕೇಶ್ವರ ದರ್ಶನಮಾಡಿದವನು ಶಿವಲೋಕವಾಸವನ್ನು ಪಡೆಯುತ್ತಾನೆ. ಅಲ್ಲಿ ಪ್ರಾಣತ್ಯಾಗ ಮಾಡುವುದರಿಂದ ಪುನಃ ಈ ಭೂಲೋಕದಲ್ಲಿ ಜನ್ಮ ಉಂಟಾಗುವುದಿಲ್ಲ. ಕೇವಲ ಯೋಗಿಗಳಿಗೆ ಮಾತ್ರ ಸುಲಭವಾದ ಅಕ್ಷಯಗತಿಯು ಅವನಿಗೆ ಉಂಟಾಗುತ್ತದೆ.

ಭೂಮಂಡಲದ ಅದೇ ಪ್ರದೇಶದಲ್ಲಿ ದೇವತೆಗಳಿಗೆ ಕಂಟಕರೂಪನಾದ ದೈತ್ಯನೊಬ್ಬನು ಹುಲಿಯ ರೂಪವನ್ನು ಧರಿಸಿ ವಾಸಿಸುತ್ತಿದ್ದನು. ಬಹಳ ಬಲಶಾಲಿಯೂ ದುರಭಿಮಾನಿಯೂ ಆದ ಆ ದೈತ್ಯವ್ಯಾಘ್ರನನ್ನು ಭಗವಾನ್ ಶಂಕರನು ಸಂಹರಿಸಿದನು. ಮತ್ತು ವ್ಯಾಘ್ರೇಶ್ವರನೆಂಬ ಹೆಸರಿನಿಂದ ಅಲ್ಲಿಯೇ ವಾಸಿಸಿದನು. ಅಂತಹ ವ್ಯಾಘ್ರೇಶ್ವರನ ದರ್ಶನ ಮಾಡಿದ ಮನುಷ್ಯನು ಎಂದೂ ದುರ್ಗತಿಯನ್ನು ಹೊಂದುವುದಿಲ್ಲ. ಹೀಗೆ ಅಲ್ಲಿಯೆ ಹಿಮವಂತನು ಸ್ಥಾಪಿಸಿದ ಶೈಲೇಶ್ವರನೆಂಬ ಹೆಸರಿನ ಶಿವಲಿಂಗವನ್ನು ದರ್ಶನ ಮಾಡಿದವರಿಗೂ ದುರ್ಗತಿಯುಂಟಾಗುವುದಿಲ್ಲ. ಉತ್ಪಲ ಮತ್ತು ವಿಡಲ ಇಬ್ಬರು ದೈತ್ಯರು ಬ್ರಹ್ಮದೇವರ ವರದಿಂದ ಉನ್ಮತ್ತರಾಗಿದ್ದರು. ಆಗ ಸ್ತ್ರೀಲೋಲುಪರಾದ ಅವರು ಪಾರ್ವತಿಯಿಂದ ಮೋಹಿತರಾದರು. ಪಾರ್ವತಿಯ ನಿಮಿತ್ತಳಾದಳು. ಒಬ್ಬನು ಶಾರ್ಙ್ಗಧನುಸ್ಸಿನಿಂದಲೂ ಮತ್ತೊಬ್ಬನು ಭಲ್ಲಾಯುಧದಿಂದಲೂ ಹತನಾದನು. ಈ ಎರಡು ಶಸ್ತ್ರಗಳ ಹೆಸರಿನಿಂದ ಸ್ಥಾಪಿತವಾದ ಶಾರ್ಙ್ಗೇಶ್ವರ ಮತ್ತು ಭಲ್ಲೇಶ್ವರ ಎಂಬ ಎರಡು ಶಿವಲಿಂಗಗಳ ದರ್ಶನಮಾಡಿದವರು ಜನ್ಮಜನ್ಮಾಂತರದಲ್ಲಿಯೂ ಸಿದ್ಧರಾಗುತ್ತಾರೆ. ಎಂದೂ ದುಃಖಕ್ಕೆ ಒಳಗಾಗುವುದಿಲ್ಲ. ಈ ಎರಡು ಶಿವಲಿಂಗಗಳ ಸುತ್ತಲೂ ಅನೇಕ ಶಿವಲಿಂಗಗಳು

ಸ್ಥಾಪಿತವಾಗಿವೆ. ಅವುಗಳ ದರ್ಶನಮಾಡಿದ ಮನುಷ್ಯನು ದೇಹತ್ಯಾಗದ ನಂತರ ಶಿವಗಣಗಳಲ್ಲಿ ಒಬ್ಬನಾಗುತ್ತಾನೆ. ಪರಮಪವಿತ್ರವಾದ ಸಮಸ್ತ ಪಾಪನಾಶಕವಾದ ವಾರಾಣಸೀ ನದಿಯು ಈ ಕ್ಷೇತ್ರಕ್ಕೆ ಶೋಭೆಯನ್ನುಂಟು ಮಾಡುತ್ತ ಹರಿಯುತ್ತಾ ಗಂಗೆಯಲ್ಲಿ ಸೇರುತ್ತದೆ. ಈ ಸಂಗಮ ಸ್ಥಳದಲ್ಲಿ ಬ್ರಹ್ಮದೇವರು ಪ್ರತಿಷ್ಠಿಸಿದ ಸಂಗಮೇಶ್ವರ ವೆಂಬ ಪವಿತ್ರವಾದ ಶಿವಲಿಂಗವಿದೆ. ಈ ಈಶ್ವರನ ಪೂಜೆ ಮಾಡಿದವರಿಗೆ ಪುನರ್ಜನ್ಮದ ಭಯವಿಲ್ಲ. ಇಲ್ಲಿ ಭೃಗುಪುತ್ರ ಶುಕ್ರಾಚಾರ್ಯರು ಪ್ರತಿಷ್ಠಿಸಿದ ಶುಕ್ರೇಶ್ವರನೆಂಬ ಶಿವಲಿಂಗವಿದೆ. ದೇವತೆಗಳು ಮತ್ತು ಸಿದ್ಧರಿಂದ ಪೂಜಿತನಾದ ಆ ಪರಮೇಶ್ವರನ ದರ್ಶನಮಾಡಿದ ಭಕ್ತನ ಪಾಪಗಳೆಲ್ಲವೂ ಕೂಡಲೇ ನಾಶವಾಗುತ್ತವೆ. ಪುನಃ ಅವನು ಈ ಸಂಸಾರದಲ್ಲಿ ಜನ್ಮ ತಳೆಯುವುದಿಲ್ಲ. ಮೋಹಿನಿ, ಇಲ್ಲಿಯೇ ಮಹಾದೇವನು ಜಂಬುಕನೆಂಬ ದೈತ್ಯನನ್ನು ವಧಿಸಿ ಜಂಬುಕೇಶ್ವರನೆಂಬ ಹೆಸರಿನಿಂದ ಉದ್ಭವಿಸಿದ್ದಾನೆ. ಆ ಶಿವಲಿಂಗದ ದರ್ಶನವು ಸರ್ವಾಭೀಷ್ಟದಾಯಕವಾಗಿದೆ. ಇಂದ್ರಾದಿ ದೇವತೆಗಳಿಂದ ಪ್ರತಿಷ್ಠಿತವಾದ ಈ ಶಿವಲಿಂಗಗಳೆಲ್ಲವೂ ಪವಿತ್ರವಾದುವುಗಳು. ಸಮಸ್ತ ಅಭೀಷ್ಟಪ್ರದಗಳು. ಮೋಹಿನಿ! ಈ ರೀತಿ ನಾನು ನಿನಗೆ ಅವಿಮುಕ್ತಕ್ಷೇತ್ರದ ಶಿವಲಿಂಗಗಳನ್ನೆಲ್ಲಾ ವರ್ಣಿಸಿದ್ದೇನೆ.

## ಗಂಗಾ ವರಣಾಸಂಗಮ, ಅಸೀಸಂಗಮ, ಪಂಚಗಂಗಾ ಇವುಗಳ ಮಹಿಮೆ

**ಪುರೋಹಿತ ವಸು:-** ಭದ್ರೇ! ನಾನು ಈಗ ನಿನಗೆ ಕಾಶಿಯಲ್ಲಿ ಹರಿಯುವ ಗಂಗೆಯ ಉತ್ತಮ ಮಹಿಮೆಯನ್ನು ಹೇಳುತ್ತೇನೆ, ಭೋಗ ಮೋಕ್ಷಪ್ರದವಾದ ಅವಿಮುಕ್ತಕ್ಷೇತ್ರದಲ್ಲಿ ಮಾಡಿದ ಪುಣ್ಯಕರ್ಮವೆಲ್ಲವೂ ಅಕ್ಷಯವಾಗುತ್ತವೆ. ಯಾವ ಪಾಪಿಯಾದರೂ ಅವಿಮುಕ್ತಕ್ಷೇತ್ರಕ್ಕೆ ಹೋದರೆ ಪಾಪರಹಿತನಾಗುತ್ತಾನೆ ನರಕಕ್ಕೆ ಎಂದೂ ಬೀಳುವುದಿಲ್ಲ. ಆದರೆ ಅಲ್ಲಿ ಮಾಡಿದ ಪಾಪವು ಮಾತ್ರ ಲೇಪವಾಗುತ್ತದೆ. ಮೂರು ಲೋಕದಲ್ಲಿರುವ ಪುಣ್ಯದಾಯಕವಾದ ತೀರ್ಥ ದೇವತೆಗಳೂ ಕಾಶಿಯಲ್ಲಿ ಉತ್ತರ ವಾಹಿನಿಯಾದ ಗಂಗೆಯನ್ನು ಸೇವಿಸುತ್ತಾರೆ. ದಶಾಶ್ವಮೇಧ ಘಟ್ಟದಲ್ಲಿ ಸ್ನಾನಮಾಡಿ ವಿಶ್ವನಾಥನ ದರ್ಶನಮಾಡಿದವನು ಪಾಪ ಮುಕ್ತನಾಗಿ ಸಂಸಾರ ಬಂಧನದಿಂದ ಬಿಡುಗಡೆಹೊಂದುತ್ತಾನೆ. ಉತ್ತರವಾಹಿನಿಯಾದ ಗಂಗೆಯು ವಿಶೇಷ ಪುಣ್ಯಪ್ರದಳು. ವರಣಾ ಮತ್ತು ಗಂಗೆಗಳ ಸಂಗಮದಲ್ಲಿಯೂ ಆಸೀ ಮತ್ತು ಗಂಗೆಗಳ ಸಂಗಮದಲ್ಲಿಯೂ ಸ್ನಾನವು ವಿಶೇಷವಾಗಿ ಪಾಪನಾಶಕವೆಂದು ತಿಳಿ. ಕಾಶಿಯ ಉತ್ತರ ವಾಹಿನಿಯಾದ ಗಂಗೆಯಲ್ಲಿ ಕಾರ್ತಿಕ ಮತ್ತು ಮಾಘ ಮಾಸಗಳಲ್ಲಿ ಪ್ರಾತಃ ಸ್ನಾನಮಾಡುವ ಮಾನವನು ಮಹಾಪಾಪಗಳಿಂದ ಮುಕ್ತನಾಗುತ್ತಾನೆ. ಅಲ್ಲಿರುವ ಧರ್ಮನದವೆಂಬ ಪ್ರಖ್ಯಾತವಾದ ಕುಂಡದಲ್ಲಿ ಧರ್ಮವು ಸ್ವತಃ ಪ್ರಕಟವಾಗಿ ಎಲ್ಲ ಪಾಪಗಳನ್ನು ನಾಶಮಾಡುತ್ತದೆ. ಅಲ್ಲಿಯೇ ಧೂಲಿ. ಮತ್ತು ಧೂತಪಾಪಾ ಎಂಬ ತೀರ್ಥಗಳೂ ಇವೆ. ಅವುಗಳು ಸರ್ವತೀರ್ಥ ಮಯವಾಗಿವೆ. ಮಂಗಳಕಾರಕವಾಗಿವೆ. ನದೀವೇಗವು ಮರಗಳನ್ನು ಉರುಳಿಸುವಂತೆ ಈ ತೀರ್ಥಗಳು ಸಮಸ್ತ ಪಾಪರಾಶಿಯನ್ನು ನಾಶ ಮಾಡುತ್ತವೆ. ಕಾಶಿಯಲ್ಲಿ ಕಿರಣಾ, ಧೂತ ಪಾಪ ಸರಸ್ವತಿ, ಗಂಗಾ ಮತ್ತು ಯಮುನಾ ಎಂಬ ನದಿಗಳ ಸಂಗಮ ಒಂದೆಡೆ ಇವೆ. ಅಲ್ಲಿ ಪಂಚಗಂಗಾ ಎಂಬ ತೀರ್ಥವು ಪ್ರಕಟವಾಗಿದೆ. ಅದರಲ್ಲಿ ಒಂದು ಬಾರಿ ಮುಳುಗಿದ ಮನುಷ್ಯನು ಪುನಃ ಪಾಂಚಭೌತಿಕ ಶರೀರವನ್ನು ಸ್ವೀಕರಿಸುವುದಿಲ್ಲ.

ಸಮಸ್ತಪಾಪನಾಶಕವಾದ ಈ ಪಂಚನದೀ ಸಂಗಮದ ಸ್ನಾನದಿಂದ ಉಂಟಾದ ಪುಣ್ಯವು ಬ್ರಹ್ಮಾಂಡ ಮಂಡಲವನ್ನು ಭೇದಿಸಿ ಪರಮಪದವನ್ನು ಸಾಧಿಸಿಕೊಡುತ್ತದೆ. ಪ್ರಯಾಗದಲ್ಲಿ ಮಾಘಮಾಸದಲ್ಲಿ ಒಂದು ತಿಂಗಳು ಪೂರ್ತಿ ವಿಧಿವತ್ತಾಗಿ ಸ್ನಾನಮಾಡುವುದರಿಂದ ಸಿಗುವ ಫಲವು ಪಂಚಗಂಗೆಯಲ್ಲಿ ಒಂದು ಬಾರಿ ಸ್ನಾನಮಾಡುವುದರಿಂದ ಲಭ್ಯವಾಗುತ್ತದೆ. ಪಂಚಗಂಗೆಯಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನು ಮಾಡಿ, ಮಾಧವನೆಂಬ ಹೆಸರುಳ್ಳ ವಿಷ್ಣುವಿನ ಪೂಜೆಮಾಡಿದವನು ಈ ಸಂಸಾರದಲ್ಲಿ ಪುನಃ ಜನ್ಮವನ್ನು ಹೊಂದುವುದಿಲ್ಲ.

ಕೃತಯುಗದಲ್ಲಿ ಆ ತೀರ್ಥಕ್ಕೆ 'ಧರ್ಮನದ'ವೆಂದೂ, ತ್ರೇತಾಯುಗದಲ್ಲಿ 'ಧೂತಪಾಪ' ಎಂದೂ ದ್ವಾಪರದಲ್ಲಿ ಬಿಂದುತೀರ್ಥವೆಂದೂ, ಕಲಿಯುಗದಲ್ಲಿ 'ಪಂಚನದಃ' ಎಂದೂ ಹೆಸರು. ಪಂಚನದ ತೀರ್ಥವು ಧರ್ಮಾದಿ ಸಮಸ್ತ ಪುರುಷಾರ್ಥಗಳಿಗೂ ಸಾಧಕವಾಗಿದೆ. ಅದರ ಅನಂತ ಮಹಿಮೆಯನ್ನು ಯಾರೂ ವರ್ಣಿಸಲಾರರು, ಮಹಾಪಾಪಗಳನ್ನು ನಾಶಮಾಡಿ ಸುಖ ಮತ್ತು ಮೋಕ್ಷಗಳನ್ನು ಕೊಡತಕ್ಕ ಕಾಶಿಯ ಮಹಿಮೆಯನ್ನು ನಾನು ನಿನಗೆ ಈ ರೀತಿಯಾಗಿ ಹೇಳಿದ್ದೇನೆ. ಮಹಾಪಾತಕ ಮತ್ತು ಉಪಪಾತಕಗಳನ್ನು ಮಾಡಿದವರು ಕಾಶಿಯ ಮಹಿಮೆಯನ್ನು ಕೇಳಿ ಶುದ್ಧರಾಗುತ್ತಾರೆ. ಕ್ಷತ್ರಿಯರು ಯುದ್ಧದಲ್ಲಿ ವಿಜಯವನ್ನೂ, ವೈಶ್ಯರು ಧನಸಮೃದ್ಧಿಯನ್ನೂ ಹೊಂದುತ್ತಾರೆ. ಶೂದ್ರನಿಗೆ ವಿಷ್ಣುಭಕ್ತರ ಸಂಗವು ದೊರಕುತ್ತದೆ, ಎಲ್ಲ ಯಜ್ಞಗಳ ಫಲ ಎಲ್ಲಾ ತೀರ್ಥಗಳಲ್ಲಿ ಸಿಗುವ ಫಲವು ಈ ಮಹಿಮೆಯ ಶ್ರವಣ ಮತ್ತು ಪಠನಗಳಿಂದ ಲಭಿಸುತ್ತದೆ. ವಿದ್ಯಾರ್ಥಿಗೆ ವಿದ್ಯೆಯೂ, ಧನಾರ್ಥಿಗೆ ಧನವೂ, ಪತ್ನೀ ಇಲ್ಲದವನಿಗೆ ಪತ್ನಿಯೂ ಸಿಗುತ್ತಾರೆ. ಪುತ್ರರಿಲ್ಲದವರಿಗೆ ಪುತ್ರಪ್ರಾಪ್ತಿಯೂ ಈ ಮಾಹಾತ್ಮ್ಯೆಯ ಶ್ರವಣ ಮತ್ತು ಪಠನಗಳಿಂದ ಆಗುತ್ತದೆ.

## ಉತ್ಕಲದ ಪುರುಷೋತ್ತಮ ಕ್ಷೇತ್ರದ ಮಹಿಮೆ ಇಂದ್ರದ್ಯುಮ್ನ ರಾಜನಿಗೆ ಮುಕ್ತಿ

**ಮೋಹಿನಿಯು:-** ಈಗ ತಾವು ಪುರುಷೋತ್ತ ಕ್ಷೇತ್ರದ ಮಹಿಮೆಯನ್ನು ದಯವಿಟ್ಟು ನನಗೆ ಹೇಳಬೇಕು.

**ಪುರೋಹಿತ ವಸು:-** ದೇವಿ! ಕೇಳು, ಬ್ರಹ್ಮದೇವರಿಂದ ನಾನು ಕೇಳಿರುವ ಉತ್ತಮವಾದ ಪುರುಷೋತ್ತಮ ಮಹಿಮೆಯನ್ನು ಹೇಳುತ್ತೇನೆ.

ಸಮುದ್ರದ ಉತ್ತರದಡದಲ್ಲಿರುವ ಸರ್ವೋತ್ತಮವಾದ ಈ ಉತ್ಕಲ ಪ್ರದೇಶದಲ್ಲಿ ಎಲ್ಲ ಪುಣ್ಯ ತೀರ್ಥಗಳೂ ಮತ್ತು ಪವಿತ್ರ ದೇವಾಲಯಗಳೂ ಇವೆ. ಅವುಗಳ ಪರಿಚಯವನ್ನು ಅವಶ್ಯವಾಗಿ ಪಡೆಯಬೇಕು. ಮುಕ್ತಿದಾಯಕವಾದ ಸರ್ವೋತ್ತವಾದ ಪುರುಷೋತ್ತಮ ಕ್ಷೇತ್ರವು ರಹಸ್ಯವಾಗಿಯೇ ಇರಬೇಕಾದ ಕ್ಷೇತ್ರವು. ಈ ಕ್ಷೇತ್ರವು ಹತ್ತು ಯೋಜನಗಳವರೆಗೆ ಹರಡಿದೆ. ನಕ್ಷತ್ರಗಳಲ್ಲಿ ಚಂದ್ರನಂತೆಯೂ ಸರೋವರಗಳಲ್ಲಿ ಸಮುದ್ರದಂತೆಯೂ, ಕ್ಷೇತ್ರಗಳಲ್ಲಿ ಪುರುಷೋತ್ತಮ ಕ್ಷೇತ್ರವು ಶ್ರೇಷ್ಠವಾಗಿದೆ, ಪುರುಷೋತ್ತಮನನ್ನು ಒಂದು ಬಾರಿ ದರ್ಶನ ಮಾಡಿದವನು, ಸಮುದ್ರದಲ್ಲಿ ಒಂದು ಬಾರಿ ಸ್ನಾನಮಾಡಿದವನು. ಬ್ರಹ್ಮವಿದ್ಯೆಯನ್ನು ಒಂದು ಬಾರಿ ಮನನ ಮಾಡಿದವನು ಪುನಃ ತಾಯಿಗರ್ಭದಲ್ಲಿ ಜನ್ಮವನ್ನು ಪಡೆಯುವುದಿಲ್ಲ. ದೇವ ದೇವೇಶ್ವರನಾದ ಪುರುಷೋತ್ತಮನು ಸಮಸ್ತ ಜಗದ ವ್ಯಾಪಕನು ಮತ್ತು ಸರ್ವಾಂತರ್ಯಾಮಿಯು. ಉತ್ತಮ

ಆ ಪರಮಾತ್ಮನು ಜಗತ್ತಿನ ಉತ್ಪತ್ತಿಗೆ ಕಾರಣನೂ ಮತ್ತು ಜಗದೀಶ್ವರನೂ ಆಗಿದ್ದಾನೆ. ಎಲ್ಲವೂ ಅವನಲ್ಲಿಯೇ ಇದೆ. ದೇವತೆಗಳಿಂದ, ಋಷಿಗಳಿಂದ ಮತ್ತು ಪಿತೃಗಳಿಂದ ಸೇವಿತನಾದ ಸರ್ವಭೋಗ ಸಂಪನ್ನನಾದ, ಪರಮಾತ್ಮನಿಂದ ಪುಣ್ಯತಮ ಪ್ರದೇಶದಲ್ಲಿ ವಾಸಿಸುವುದು ಯಾರಿಗೆ ಇಷ್ಟವಾಗುವುದಿಲ್ಲ! ಇದಕ್ಕಿಂತ ಹೆಚ್ಚು ಈ ದೇಶದ ಶ್ರೇಷ್ಠತೆಯ ಬಗ್ಗೆ ಏನು ಹೇಳಲು ಸಾಧ್ಯ! ಉತ್ಕಲ ದೇಶದಲ್ಲಿ ವಾಸಮಾಡುವ ಜನರು ದೇವತಾಸಮಾನರು ಮತ್ತು ಧನ್ಯರು. ತೀರ್ಥ ರಾಜನಾದ ಸಮುದ್ರಜಲದಲ್ಲಿ ಸ್ನಾನಮಾಡಿ ಪುರುಷೋತ್ತಮ ದರ್ಶನಮಾಡುವ ಮನುಷ್ಯರು ಸ್ವರ್ಗದಲ್ಲಿಯೇ ವಾಸಮಾಡುತ್ತಾರೆ. ಉತ್ಕಲದಲ್ಲಿರುವ ಪರಮ ಪವಿತ್ರವಾದ ಪುರುಷೋತ್ತಮ ಕ್ಷೇತ್ರದ ಒಳಗಡೆ ವಾಸಮಾಡುವ ಉತ್ತಮ ಜ್ಞಾನ ಸಂಪನ್ನರಾದ ಜನರ ಜೀವನವೇ ಸಫಲವು. ಮೂರು ಲೋಕಕ್ಕೂ ಆನಂದಕರವಾದ ಶ್ರೀಕೃಷ್ಣನ ಮುಖಾರವಿಂದ ದರ್ಶನವು ಅಲ್ಲಿರುವವರಿಗೆ ಸುಲಭ ವಾಗಿರುತ್ತದೆ. ಕೆಂಪಾದ ತುಟಿಗಳು, ವಿಶಾಲವಾದ ಕಣ್ಣುಗಳು, ಮನೋಹರವಾದ ಹುಬ್ಬುಗಳು ಸುಂದರವಾದ ಕೇಶಗಳೂ, ದಿವ್ಯ ಕಿರೀಟದಿಂದ ಅಲಂಕೃತವಾದ ಪ್ರಸನ್ನತೆಯಿಂದ ಅರಳಿರುವ ಮಂದಹಾಸಭರಿತವಾದ ಶ್ರೀ ಕೃಷ್ಣನ ಮುಖವು ಯಾರ ಮನಸ್ಸನ್ನು ಸೆಳೆಯುವುದಿಲ್ಲ! ದಂತಪಂಕ್ತಿಯು, ಅತಿ ಸುಂದರ. ಕರ್ಣಗಳಲ್ಲಿ ಮನೋಹರ ಕುಂಡಲಗಳು ಝುಗ ಝುಗಿಸುತ್ತವೆ. ಮೂಗು ಮುಂತಾದ ಎಲ್ಲಾ ಅಂಗಗಳೂ ಉತ್ತಮ ಲಕ್ಷಣ ಸಂಪನ್ನವಾಗಿವೆ.

ದೇವಿ! ಕೃತಯುಗದಲ್ಲಿ ಮಹಾ ಪ್ರಕಾಶಶಾಲಿಯಾದ ಇಂದ್ರದ್ಯುಮ್ನನೆಂಬ ಅರಸನಿದ್ದನು. ಅವನು ಸತ್ಯವಾದಿಯೂ, ಕಾರ್ಯ ಚತುರನೂ, ಪವಿತ್ರನೂ ಸಮಸ್ತ ಶಸ್ತ್ರ ಶಾಸ್ತ್ರಾಭಿಜ್ಞನೂ ಸೌಭಾಗ್ಯ ಶಾಲಿಯೂ, ಶೂರನೂ, ದಾತೃವೂ, ಭೋಕ್ತೃವೂ ಆಗಿದ್ದನು. ಬ್ರಾಹ್ಮಣಭಕ್ತನೂ, ಸತ್ಯಪ್ರತಿಜ್ಞನೂ, ಚಂದ್ರನಂತೆ ಶಾಂತನೂ ಆಗಿದ್ದ ಆ ರಾಜನು ವಿಶೇಷವಾಗಿ ವಿಷ್ಣು ಭಕ್ತನಾಗಿದ್ದನು. ಸಮಸ್ತ ಭೂಮಂಡಲವನ್ನೂ ಚೆನ್ನಾಗಿ ಪಾಲಿಸುತ್ತಿದ್ದ. ಆ ರಾಜನ ಮನಸ್ಸಿನಲ್ಲಿ ಈ ರೀತಿಯಾಗಿ ವಿಚಾರ ಉಂಟಾಯಿತು - "ನಾನು ದೇವ ದೇವೇಶ್ವರನಾದ ಶ್ರೀ ಹರಿಯನ್ನು ಹೇಗೆ ಆರಾಧಿಸಲಿ? ಯಾವ, ನದೀ ತೀರದಲ್ಲಿ ಯಾವ ತೀರ್ಥದಲ್ಲಿ ಅಥವಾ ಯಾವ ಆಶ್ರಮದಲ್ಲಿ ನಾನು ಭಗವಂತನನ್ನು ಸೇವಿಸಬೇಕು? ಹೀಗೆ ಆಲೋಚಿಸುತ್ತಾ ಅವನು ಇದ್ದಲ್ಲಿಂದಲೇ ಸಮಸ್ತ ಭೂಮಂಡಲವನ್ನು ನೋಡತೊಡಗಿದನು. ಪಾಪ ಪರಿಹಾರಕವಾದ ಸಮಸ್ತ ತೀರ್ಥಗಳನ್ನೂ ಮನಸ್ಸಿನಲ್ಲಿಯೇ ನೋಡಿ, ಚಿಂತಿಸಿ, ಕೊನೆಗೆ ಅವನು ಪರಮ ಪ್ರಖ್ಯಾತವಾದ, ಮುಕ್ತಿದಾಯಕವಾದ ಪುರುಷೋತ್ತಮ ಕ್ಷೇತ್ರಕ್ಕೆ ಬಂದನು. ಸೈನ್ಯ ಮತ್ತು ವಾಹನಗಳ ಜೊತೆಗೆ ಅಲ್ಲಿಗೆ ಬಂದ ರಾಜನು ವಿಧಿಪೂರ್ವಕವಾಗಿ ಅಶ್ವಮೇಧ ಯಜ್ಞಾನುಷ್ಠಾನವನ್ನು ಮಾಡಿ ಜ್ಞಾನಿಗಳಿಗೆ ವಿಪುಲವಾದ ದಕ್ಷಿಣೆಯನ್ನು ಕೊಟ್ಟನು. ಅನಂತರ ಅವನು ಬಹಳ ಎತ್ತರವಾದ ದೇವಾಲಯವನ್ನು ಕಟ್ಟಿಸಿ ಬಹಳ ವೈಭವದಿಂದ ಶ್ರೀ ಕೃಷ್ಣ, ಬಲರಾಮ ಮತ್ತು ಸುಭದ್ರೆಯರ ಮೂರ್ತಿಗಳನ್ನು ಸ್ಥಾಪಿಸಿದನು. ಅನಂತರ ಪರಾಕ್ರಮಿಯಾದ ಆ ರಾಜನು ಅಲ್ಲಿ ಪಂಚತೀರ್ಥಗಳನ್ನು ಮಾಡಿಸಿ, ಅಲ್ಲಿ ಪ್ರತಿದಿನವೂ ಸ್ನಾನಮಾಡಿ, ದಾನ, ಜಪ, ಹೋಮ, ದೇವತಾದರ್ಶನ, ಭಕ್ತಿಯಿಂದ ವಿಧಿಪೂರ್ವಕವಾಗಿ ಪರಮಾತ್ಮನ ಧ್ಯಾನ ಇವನ್ನೆಲ್ಲಾ ಮಾಡುತ್ತಿದ್ದ. ಜಗನ್ನಾಥನ ಅನುಗ್ರಹದಿಂದ ಕೊನೆಗೆ ಅವನು ಮೋಕ್ಷವನ್ನೇ ಪಡೆದನು.

## ಇಂದ್ರದ್ಯುಮ್ನ ರಾಜನು ಮಾಡಿದ ಸ್ತೋತ್ರ

**ಮೋಹಿನಿ:-** ಮುನಿಶ್ರೇಷ್ಠರೇ! ಇಂದ್ರದ್ಯುಮ್ನ ಮಹಾರಾಜನು ಶ್ರೀ ಕೃಷ್ಣ ಮೊದಲಾದವರ ಮೂರ್ತಿಯನ್ನು ಹೇಗೆ ಮಾಡಿಸಿದನು? ಲಕ್ಷ್ಮೀಪತಿಯು ಅವನ ಮೇಲೆ ಹೇಗೆ ಪ್ರಸನ್ನನಾದನು? ಈ ಎಲ್ಲಾ ವಿಷಯವನ್ನು ನನಗೆ ಹೇಳಿರಿ. ಪುರೋಹಿತ ವಸುಗಳು ಹೇಳಿದರು. ''ಮೋಹಿನಿಯೇ, ವೇದಕ್ಕೆ ಸಮಾನವಾದ ಪುರಾಣದ ವಿಷಯವನ್ನು ಏಕಾಗ್ರಚಿತ್ತದಿಂದ ಕೇಳು. ಶ್ರೀ ಕೃಷ್ಣ ಮುಂತಾದವರ ಪ್ರತಿಮೆಗಳು ಅಲ್ಲಿ ಹೇಗೆ ಆವಿರ್ಭವಿಸಿದವು. ಎಂಬ ವಿಷಯವನ್ನು ಹೇಳುತ್ತೇನೆ. ಇಂದ್ರದ್ಯುಮ್ನ ರಾಜನು ಅಶ್ವಮೇಧಯಾಗವನ್ನು ಮುಗಿಸಿ ದೇವಾಲಯ ನಿರ್ಮಾಣವನ್ನು ಪೂರ್ತಿಗೊಳಿಸಿದ ಮೇಲೆ ರಾತ್ರಿ ಹಗಲು ಅವನಿಗೆ ಮನಸ್ಸಿನಲ್ಲಿ ಪ್ರತಿಮೆಯನ್ನು ಎಲ್ಲಿಂದ ಹೇಗೆ ತರಿಸಲಿ ಎಂದು ಚಿಂತೆ ಉಂಟಾಯಿತು. ''ಜಗತ್ತಿನ ಸೃಷ್ಟ್ಯಾದಿ ಕರ್ತನಾದ ಪುರುಷೋತ್ತಮನ ದರ್ಶನವು ನನಗೆ ಒಂದು ಬಾರಿ ಆದರೂ ಸಾಕು. ನಾನು ಕೃತಾರ್ಥನು'' ಈ ರೀತಿ ಆಲೋಚಿಸುತ್ತ ಇರುವ ರಾಜನಿಗೆ ರಾತ್ರಿ ನಿದ್ದೆ ಬರುತ್ತಿರಲಿಲ್ಲ. ಹಾಗೂ ಸಂತೋಷವಿರಲಿಲ್ಲ. ಅವನು ಸ್ನಾನ, ಆಹಾರ, ಅಲಂಕಾರಗಳನ್ನು ಮೊದಲಿನಂತೆ ಮಾಡಿಕೊಳ್ಳುತ್ತಿರಲಿಲ್ಲ. ಅವನು ಕೊನೆಗೆ ಈ ಭೂಮಿಯಲ್ಲಿ ಇರುವ ಕಲ್ಲು, ಮರ, ಅಥವಾ ಲೋಹಗಳಲ್ಲಿ ಯಾವುದಾದರೊಂದರಿಂದ ಸರ್ವಲಕ್ಷಣ ಸಂಪನ್ನವಾದ ಪ್ರತಿಮೆಯನ್ನು ಮಾಡಿಸಬೇಕೆಂದು ತೀರ್ಮಾನಿಸಿದನು. ಆದರೂ ಈ ಮೂರರಲ್ಲಿ ಭಗವಂತನಿಗೆ ಯಾವ ಪ್ರತಿಮೆಯು ಅತ್ಯಂತ ಪ್ರೀತಿಪಾತ್ರ ಮತ್ತು ಎಲ್ಲಾ ದೇವತೆಗಳೂ ಪೂಜಿಸುವುದಕ್ಕೆ ಯೋಗ್ಯ ಎಂದು ಯೋಚಿಸುತ್ತಾ ಪಾಂಚರಾತ್ರ ಆಗಮೋಕ್ತವಿಧಾನದಿಂದ ಪರಮಾತ್ಮನ ಪೂಜೆ ಮಾಡುತ್ತಾ ಕೊನೆಗೆ ಧ್ಯಾನಮಾಡುತ್ತಾ ಪರಮಾತ್ಮನನ್ನು ಈ ರೀತಿ ಸ್ತುತಿಸಿದನು. ''ವಾಸುದೇವ! ನಿನಗೆ ನಮಸ್ಕಾರ, ಮೋಕ್ಷಪ್ರದ! ನಿನಗೆ ನಮಸ್ಕಾರ. ಸಮಸ್ತಲೋಕಸ್ವಾಮಿಯಾದ ಪರಮೇಶ್ವರನೇ, ನೀನು ಈ ಜನನ ಮರಣ ಪ್ರವಾಹ ರೂಪವಾದ ಸಂಸಾರ ಸಾಗರದಿಂದ ಪಾರು ಮಾಡು. ಪುರುಷೋತ್ತಮ, ನಿರ್ಮಲಾಕಾಶ ಸ್ವರೂಪಿಯೇ, ನಿನಗೆ ನಮಸ್ಕಾರ ಎಲ್ಲರನ್ನೂ ನಿನ್ನ ಕಡೆಗೆ ಎಳೆಯುವ ಸಂಕರ್ಷಣ, ನಿನಗೆ ನಮಸ್ಕಾರ, ಭಗವಂತನೇ ಮೇಘಶ್ಯಾಮಲನೇ, ನನ್ನನ್ನು ಉದ್ಧರಿಸು.

ರಾಜನು ಈ ರೀತಿ ಸ್ತೋತ್ರ ಮಾಡಿ ವಾಸುದೇವನನ್ನು ವಂದಿಸಿ ಚಿಂತಾಕ್ರಾಂತನಾಗಿ ದರ್ಭೆಯನ್ನು ಹರಡಿ ಅದರ ಮೇಲೆ ವಸ್ತ್ರವನ್ನು ಹಾಸಿ ಭಗವಂತನ ಚಿಂತನ ಮಾಡುತ್ತ ಮಲಗಿದನು. ನನ್ನ ದುಃಖವನ್ನು ದೂರಮಾಡುವ ಶ್ರೀ ಹರಿಯು ನನಗೆ ಪ್ರತ್ಯಕ್ಷ ದರ್ಶನವನ್ನು ಕೊಡಲಿ ಎಂದು ಆಲೋಚಿಸುತ್ತಾ ಮಲಗಿದನು. ಸ್ವಪ್ನದಲ್ಲಿ ರಾಜನಿಗೆ ಸುದರ್ಶನಧಾರಿಯಾದ ಪರಮಾತ್ಮನ ದರ್ಶನವಾಯಿತು. ಶಂಖ, ಚಕ್ರ, ಗದಾ, ಪದ್ಮ, ಶಾರ್ಙ್ಗ, ಬಾಣ, ಖಡ್ಗ ಇವುಗಳನ್ನು ಧರಿಸಿ ದಿವ್ಯ ತೇಜೋ ಮಂಡಲ ಮಧ್ಯದಲ್ಲಿ ಪ್ರಳಯಕಾಲದ ಸೂರ್ಯನಂತೆ ವಿರಾಜಿಸುತ್ತಿದ್ದ ಎಂಟು ಭುಜಗಳುಳ್ಳ ಗರುಡಾರೂಢನಾದ ಪರಮಾತ್ಮನು ಸ್ವಪ್ನದಲ್ಲಿಯೇ ರಾಜನನ್ನು ಸಂಬೋಧಿಸಿ ಹೀಗೆ ಹೇಳಿದನು - 'ರಾಜೇಂದ್ರ, ನೀನು ಧನ್ಯ. ನೀನು ಮಾಡಿದ ಯಜ್ಞದಿಂದಲೂ ಮತ್ತು ಶ್ರೇಷ್ಠವಾದ ಭಕ್ತಿಯಿಂದಲೂ ಸಂತುಷ್ಟನಾದೆನು. ನೀನು ವ್ಯರ್ಥವಾಗಿ ಏಕೆ ಚಿಂತಿಸುತ್ತಿರುವೆ? ಪವಿತ್ರವಾದ ನನ್ನ ಪ್ರತಿಮೆಯನ್ನು ಪಡೆಯುವ ಉಪಾಯವನ್ನು ನಾನು ನಿನಗೆ ಹೇಳುತ್ತೇನೆ. ಈ ದಿನದ

ರಾತ್ರಿಯು ಕಳೆದು ನಾಳೆ ಪ್ರಭಾತ ಕಾಲದಲ್ಲಿ ಸೂರ್ಯೋದಯವಾದಾಗ ಸಮುದ್ರದಡಕ್ಕೆ ಹೋಗು. ಅಲ್ಲಿ ಸ್ವಲ್ಪ ಭಾಗ ನೀರಿನಲ್ಲಿ ಮುಳುಗಿರುವ ಒಂದು ದೊಡ್ಡ ವೃಕ್ಷವು ಕಾಣಸುತ್ತದೆ. ಸಮುದ್ರದ ಅಲೆಗಳು ಹೊಡೆದರೂ ಆ ಮರವು ಸ್ವಲ್ಪವೂ ಅಲ್ಲಾಡುವುದಿಲ್ಲ. ನೀನು ಒಬ್ಬಂಟಿಗನಾಗಿ ಕೈಯಲ್ಲಿ ಕೊಡಲಿಯನ್ನು ಹಿಡಿದು ಅಲೆಗಳ ಮಧ್ಯದಲ್ಲಿಯೇ ಧೈರ್ಯವಾಗಿ ಮುನ್ನುಗ್ಗಿ ಆ ಮರವನ್ನು ಕತ್ತರಿಸು. ಆ ಮರದ ತಿರುಳಿನ ಭಾಗದಿಂದ ದಿವ್ಯವಾದ ಪ್ರತಿಮೆಯನ್ನು ಮಾಡಿಸು.''

ಇಷ್ಟನ್ನು ಹೇಳಿ ಶ್ರೀ ಹರಿಯು ಅದೃಶ್ಯನಾದನು. ಸ್ವಪ್ನವನ್ನು ನೋಡಿ ಎಚ್ಚೆತ್ತ ರಾಜನು ರಾತ್ರಿ ಕಳೆಯುವುದನ್ನೇ ಎದುರು ನೋಡುತ್ತಿದ್ದನು. ಅವನು ಎದ್ದು ಕುಳಿತುಕೊಂಡು ವಿಷ್ಣು ಸ್ತೋತ್ರದ ಪಾರಾಯಣ ಮಾಡುತ್ತ ಕಾಲ ಕಳೆದನು. ಬೆಳಗಾದ ಕೂಡಲೇ ಸಮುದ್ರಕ್ಕೆ ಹೋಗಿ ಸ್ನಾನ ಮಾಡ ಆಹ್ನಿಕವನ್ನು ಪೂರೈಸಿದಾಗ ಪರಮಾತ್ಮನು ಹೇಳಿದ ಆ ಮಹಾವೃಕ್ಷವು ಕಣ್ಣಿಗೆ ಕಾಣಿಸಿತು. ಮಂಜಿಷ್ಠದಂತೆ ಕೆಂಪಾದ ಆ ವೃಕ್ಷವು ಯಾವ ಜಾತಿಯದೆಂದು ಗೊತ್ತಾಗುತ್ತಿರಲಿಲ್ಲ. ರಾಜನು ಸಂತೋಷಪಟ್ಟು ಕೊಡಲಿಯಿಂದ ಆ ಮರವನ್ನು ಕಡಿದನು. ಅಷ್ಟರಲ್ಲಿ ತೇಜಸ್ವಿಗಳಾದ ಇಬ್ಬರು ಬ್ರಾಹ್ಮಣರು ಅಲ್ಲಿ ಕಾಣಿಸಿದರು. ಮಹಾರಾಜನು ಅವರನ್ನುಕೇಳಿದನು - 'ಮಹಾನುಭಾವರೇ, ನೀವು ಯಾರು ?' ಅವರು ಹೇಳಿದರು - ''ರಾಜಾ, ನಾವು ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಈಗ ಹೇಳುವುದಿಲ್ಲ. ಆದರೆ ನಿರ್ಜನವಾದ ಈ ಸಮುದ್ರದಲ್ಲಿದ್ದ ವೃಕ್ಷವನ್ನು ನೀನೇಕೆ ಕಡಿದು ಉರುಳಿಸಿದೆ?'' ರಾಜನಿಗೆ ಅವರ ಮಾತನ್ನು ಕೇಳಿ ಸಂತೋಷವೇ ಆಯಿತು. ಅವರಲ್ಲಿ ಒಬ್ಬನು ವಿಶ್ವಕರ್ಮನೆಂಬ ದೇವಶಿಲ್ಪಿಯು ಮತ್ತೊಬ್ಬನು ಸಾಕ್ಷಾತ್ ನಾರಾಯಣನೇ ಆಗಿದ್ದನು. ರಾಜನು ಅವರಿಬ್ಬರನ್ನೂ ನಮಸ್ಕರಿಸಿ ಎದ್ದು ನಿಂತು ತಲೆತಗ್ಗಿಸಿ ಹೇಳಿದನು - ''ಬ್ರಾಹ್ಮಣ ಶ್ರೇಷ್ಠರೇ, ಅನಾದಿ, ಅನಂತ, ಅಮೇಯ ಹಾಗೂ ದೇವಾಧಿದೇವನಾದ ನಾರಾಯಣನ ಪೂಜೆಗೋಸ್ಕರ ನಾನು ಪ್ರತಿಮೆಯನ್ನು ಮಾಡಿಸಬೇಕೆಂದಿದ್ದೇನೆ. ಪರಮಾತ್ಮನು ಸ್ವಪ್ನದಲ್ಲಿ ಈ ಕಾರ್ಯವನ್ನು ಮಾಡುವಂತೆ ಪ್ರೇರಿಸಿದ್ದಾನೆ.'' ರಾಜನ ಮಾತನ್ನು ಕೇಳಿ ಜಗನ್ನಾಥನು ನಗುತ್ತಾ ಹೇಳಿದನು - 'ರಾಜನೇ, ಬಹಳ ಒಳ್ಳೆಯದು. ಈ ಸಂಸಾರವು ಬಾಳೆಯ ಎಲೆಯಂತೆ ಸಾರ ಹೀನವಾದುದು. ಇಲ್ಲಿ ದುಃಖವೇ ಹೆಚ್ಚಾಗಿದೆ. ನೀರಿನ ಗುಳ್ಳೆಯಂತೆಯೇ ಚಂಚಲವಾದ ಈ ಸಂಸಾರದಲ್ಲಿ ವಿಷ್ಣುವಿನ ಭಕ್ತಿಯೇ ಶ್ರೇಷ್ಠವಾದುದು. ಸಮಗ್ರ ಭೂಮಂಡಲವನ್ನು ಪರಿಪಾಲಿಸುವ ನೀನು ಈ ರೀತಿ ವಿಷ್ಣು ಭಕ್ತನಾಗಿರುವುದು ಪರಮ ಸಂತೋಷಕರವಾದ ವಿಚಾರವಾಗಿದೆ. ರಾಜನೇ, ಬಾ. ಇಲ್ಲಿ ಹತ್ತಿರದಲ್ಲಿಯೇ ಇರುವ ಮರದ ನೆರಳಿನಲ್ಲಿ ಕುಳಿತು ನಾವು ತತ್ವ ವಿಚಾರಗಳನ್ನು ಮಾಡೋಣ. ನಾವಿಬ್ಬರೂ ನಿನಗೆ ಪ್ರತಿಮೆಯ ನಿರ್ಮಾಣ ಕಾರ್ಯದಲ್ಲಿ ಸಹಾಯ ಮಾಡಲು ಬಂದಿದ್ದೇವೆ. ನನ್ನ ಜೊತೆಗೆ ಇರುವ ಈ ಬ್ರಾಹ್ಮಣನು ಈಗಲೇ ಪ್ರತಿಮೆಯನ್ನು ತಯಾರಿಸಿಕೊಡುವನು.'' ರಾಜನು ಬ್ರಾಹ್ಮಣನ ಮಾತನ್ನು ಕೇಳಿ ಸಮುದ್ರದ ದಡದಲ್ಲಿರುವ ಮರದ ಬುಡದಲ್ಲಿ ಹೋಗಿ ಕುಳಿತನು.

ಬ್ರಹ್ಮ ಪುತ್ರಿಯಾದ ಮೋಹಿನಿಯೇ! ಅನಂತರ ಬ್ರಾಹ್ಮಣ ರೂಪಧಾರಿಯಾದ ಭಗವಂತನು ವಿಶ್ವಕರ್ಮ ರೂಪಧಾರಿಯಾದ ಬ್ರಾಹ್ಮಣನಿಗೆ ಹೀಗೆ ಆಜ್ಞಾಪಿಸಿದನು. ''ನೀನು ಈ ಮರದಿಂದ ಮೂರು ಪ್ರತಿಮೆಗಳನ್ನು ತಯಾರಿಸು. ಅವುಗಳಲ್ಲಿ ಕೃಷ್ಣನ

ಪ್ರತಿಮೆಯು ಶಾಂತವಾಗಿರಬೇಕು. ಶ್ರೀ ಕೃಷ್ಣನ ಕಣ್ಣುಗಳು ಕಮಲದಂತೆ ವಿಶಾಲ ವಾಗಿರಬೇಕು. ಎದೆಯಲ್ಲಿ ಶ್ರೀ ವತ್ಸವೆಂಬ ಚಿಹ್ನವೂ ಕೌಸ್ತುಭಮಣಿಯೂ ಇರಬೇಕು. ಕೈಗಳಲ್ಲಿ ಶಂಖ, ಚಕ್ರ, ಗದೆಗಳನ್ನು ಧರಿಸಿರಬೇಕು. ಎರಡನೆಯ ಪ್ರತಿಮೆಯೂ ಹಸುವಿನ ಹಾಲಿನಂತೆ ಬೆಳ್ಳಗಿರಬೇಕು. ಅದರ ಎದೆಯಲ್ಲಿ ಸ್ವಸ್ತಿಕ ಚಿಹ್ನೆ ಇರಬೇಕು. ಕೈಗಳಲ್ಲಿ ನೇಗಿಲು ಮತ್ತು ಒನಕೆಗಳಿರಬೇಕು. ಇದೇ ಮಹಾಬಲಶಾಲಿಯಾದ ಶೇಷನ ಸ್ವರೂಪವು. ವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾದ ಅವನ ಸ್ವರೂಪದ ಅಂತವನ್ನು ಕೊನೆಯನ್ನು ದೇವತೆಗಳು, ದಾನವರು, ಯಕ್ಷರು, ಗಂಧರ್ವರು, ವಿದ್ಯಾಧರರು, ನಾಗರು ಯಾರೂ ತಿಳಿದಿಲ್ಲವಾದುದರಿಂದ ಅವನಿಗೆ ಅನಂತನೆಂದು ಹೆಸರು. ಮೂರನೆಯ ಪ್ರತಿಮೆಯು ಕೃಷ್ಣ ಬಲರಾಮರ ತಂಗಿಯಾದ ಸುಭದ್ರೆಯದು. ಅದರ ಬಣ್ಣವು ಬಂಗಾರದಂತಿರಬೇಕು. ಶೋಭಾಸಂಪನ್ನವಾದ ಆ ಪ್ರತಿಮೆಯಲ್ಲಿ ಎಲ್ಲಾ ಶುಭಲಕ್ಷಣಗಳೂ ಇರಬೇಕು.

ಪರಮಾತ್ಮನ ಈ ಮಾತನ್ನು ಕೇಳಿ ಉತ್ತಮ ಶಿಲ್ಪಿಯಾದ ವಿಶ್ವಕರ್ಮನು ಆಗಲೇ ಎಲ್ಲಾ ಉತ್ತಮ ಲಕ್ಷಣ ಸಂಪನ್ನನಾದ ಪ್ರತಿಮೆಗಳನ್ನು ತಯಾರು ಮಾಡಿದನು. ಅವನು ಮೊದಲು ಬಲಭದ್ರನ ಮೂರ್ತಿಯನ್ನು ನಿರ್ಮಿಸಿದನು. ಬಲರಾಮನ ಕಿವಿಗಳು ವಿಚಿತ್ರವಾದ ಕುಂಡಲಗಳಿಂದ ಅಲಂಕೃತವಾಗಿದ್ದುವು. ಕೈಗಳಲ್ಲಿ ಮುಸಲ ಮತ್ತು ಹಲಗಳ (ನೇಗಿಲಿನ) ಗುರುತು ಕಾಣಿಸುತ್ತಿತ್ತು. ಬಣ್ಣವು ಶರತ್ಕಾಲದ ಚಂದ್ರನಂತೆ ಶ್ವೇತವಾಗಿಯೂ, ಕಣ್ಣುಗಳು ಸ್ವಲ್ಪ ಕೆಂಪಾಗಿಯೂ ಇದ್ದುವು. ಶರೀರವು ವಿಶಾಲ, ತಲೆಯ ಮೇಲೆ ಫಣಾಕಾರವಿದ್ದು ಅದ್ಭುತವಾಗಿ ಕಾಣಿಸುತ್ತಿತ್ತು. ನೀಲವಸ್ತ್ರ ಧಾರಿಯಾದ ಬಲರಾಮನು ಅಭಿಮಾನದಿಂದ ಉದ್ದನಾಗಿ ಕಾಣಿಸುತ್ತಿದ್ದನು. ಕೈಗಳಲ್ಲಿ ದೊಡ್ಡ ನೇಗಿಲು ಮತ್ತು ಮುಸಲ (ಒನಕೆಗಳನ್ನು ಧರಿಸಿದ್ದನು. ಹೀಗೆ ದಿವ್ಯವಾದ ಬಲರಾಮನ ಪ್ರತಿಮೆಯು ಇತ್ತು).

ಎರಡನೆಯ ಪ್ರತಿಮೆಯೇ ಸಾಕ್ಷಾತ್ ಭಗವಂತನಾದ ವಾಸುದೇವನದಾಗಿತ್ತು. ಆ ವಾಸುದೇವ ಶ್ರೀ ಕೃಷ್ಣನ ಕಣ್ಣುಗಳು ಅರಳಿದ ಕಮಲದಂತೆ ಶೋಭಾಯಮಾನವಾಗಿದ್ದವು ಶರೀರಕಾಂತಿಯು ನೀಲ ಮೇಘದಂತೆ, ಅಗಸಿಯ ಹೂವಿನಂತೆ ವಿರಾಜಿಸುತ್ತಿತ್ತು. ಪೀತಾಂಬರ ಧಾರಿಯಾದ ಕೃಷ್ಣನ ಎದೆಯಲ್ಲಿ ಶ್ರೀ ವತ್ಸ, ಚಿಹ್ನವೂ, ಕೈಗಳಲ್ಲಿ ಚಕ್ರ ಶಂಖಗಳೂ ಶೋಭಿಸುತ್ತಿದ್ದವು. ಮೂರನೆಯದಾದ ಸುಭದ್ರಾ ದೇವಿಯ ಪ್ರತಿಮೆಯು ಚಿನ್ನದಂತೆ ಥಳ ಥಳ ಹೊಳೆಯುತ್ತಿತ್ತು. ವಿಚಿತ್ರ ವಸ್ತ್ರಾಲಂಕೃತವಾದ ಆ ಪ್ರತಿಮೆಯು ಹಾರಕೇಯೂರಾದಿಗಳಿಂದ ಅಲಂಕೃತವಾಗಿತ್ತು. ಈ ರೀತಿ ವಿಶ್ವಕರ್ಮನು ಅದ್ಭುತವಾದ ಮೂರು ಪ್ರತಿಮೆಗಳನ್ನು ಮಾಡಿದನು. ಇಂದ್ರದ್ಯುಮ್ನರಾಜನು ಈ ಅದ್ಭುತವಾದ ದೃಶ್ಯವನ್ನು ನೋಡಿ ಅವಾಕ್ಕಾದನು. ಒಂದು ಕ್ಷಣದಲ್ಲಿ ಎಂಬ ಹಾಗೆ ಆ ಪ್ರತಿಮೆಗಳು ತಯಾರಾಗಿದ್ದುವು. ಎರಡು ದಿವ್ಯ ವಸ್ತ್ರಗಳಿಂದಲೂ ನಾನಾವಿಧ ಶೃಂಗಾರಾಭರಣಗಳಿಂದಲೂ ಅಲಂಕೃತವಾದ ಆ ಪ್ರತಿಮೆಗಳು ಎಲ್ಲ ಶುಭಲಕ್ಷಣಗಳಿಂದ ಕೂಡಿದ್ದುವು. ರಾಜನು ಆ ಪ್ರತಿಮೆಗಳನ್ನು ನೋಡಿ ಅತ್ಯಂತ ಆಶ್ಚರ್ಯ ಮಗ್ನನಾಗಿ ಹೀಗೆಂದನು - ''ನೀವಿಬ್ಬರೂ ಬ್ರಾಹ್ಮಣ ರೂಪದಲ್ಲಿ ಬಂದಿರುವ ಸಾಕ್ಷಾತ್ ಬ್ರಹ್ಮ ಮತ್ತು ವಿಷ್ಣುಗಳೇ! ನಿಮ್ಮ ಯಥಾರ್ಥ ಸ್ವರೂಪವು ನನಗೆ ತಿಳಿದಿಲ್ಲ. ನಾನು ನಿಮ್ಮನ್ನು ಮೊರೆಹೊಕ್ಕಿದ್ದೇನೆ. ನಿಮ್ಮ ನಿಜ ಸ್ವರೂಪವನ್ನು ನನಗೆ ಸರಿಯಾಗಿ ತಿಳಿಸಿಕೊಡಬೇಕು.

**ಬ್ರಾಹ್ಮಣರು:-** ರಾಜನೇ, ನಾನೇ ಪುರುಷೋತ್ತಮನು. ಸಮಸ್ತ ಲೋಕಗಳ ದುಃಖವನ್ನು ದೂರಮಾಡುವ, ಅನಂತ ಬಲಪೌರುಷ ಸಂಪನ್ನನಾದ ನಾನು ಸಮಸ್ತ ಭಕ್ತರಿಂದ ಆರಾಧ್ಯನಾಗಿದ್ದೇನೆ. ನನಗೆ ಅಂತವಿಲ್ಲದುದರಿಂದ ನಾನೇ ಅನಂತನು. ಶಾಸ್ತ್ರ ಮತ್ತು ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾದ, ಜ್ಞಾನಗಮ್ಯನಾದ ವಾಸುದೇವ ಪರಮಾತ್ಮನು ನಾನೇ, ನಾನೇ ಬ್ರಹ್ಮನಾಗಿ ಬ್ರಹ್ಮನಲ್ಲಿ, ಶಿವನಾಗಿ ಶಿವನಲ್ಲಿ, ವಿಷ್ಣುವಾಗಿ ವಿಷ್ಣುವಿನಲ್ಲಿ ಇದ್ದೇನೆ. ನಾನೇ ಇಂದ್ರನು, ಯಮನೂ ನಾನೇ, ಭೂಮ್ಯಾದಿಪಂಚ ಮಹಾಭೂತಗಳು, ದಕ್ಷಿಣಾಗ್ನಿ ಗಾರ್ಹಪತ್ಯ, ಆಹವನೀಯವೆಂಬ ಮೂರು ಅಗ್ನಿಗಳು, ಜಲಾಧೀಶನಾದ ವರುಣ, ಭೂಮಿಯನ್ನು ಧರಿಸುವ ಪರ್ವತವು ನಾನೇ ಆಗಿದ್ದೇನೆ. ಮಾತಿನಿಂದ ಹೇಳಬಹುದಾದ ಈ ಪ್ರಪಂಚದಲ್ಲಿರುವ ಸಮಸ್ತ ಸ್ಥಾವರ ಜಂಗಮಗಳಲ್ಲಿಯೂ ನಾನಿದ್ದೇನೆ. ಭಿತ್ತಿಯಲ್ಲಿ ಚಿತ್ರವು ಪ್ರಕಟವಾದಂತೆ ನನ್ನಲ್ಲಿ; ನನ್ನ ಆಧಾರದಲ್ಲಿಯೇ ಜಗತ್ತು ಪ್ರಕಟವಾಗಿದೆ. ನಾನಿಲ್ಲದೆ ಯಾವುದೂ ಇಲ್ಲ. ರಾಜನ್! ನಿನ್ನಲ್ಲಿ ನಾನು ಪ್ರಸನ್ನನಾಗಿದ್ದೇನೆ. ನಿನ್ನ ಮನಸ್ಸಿಗೆ ಅಭಿಮತವಾದ ಯಾವುದಾದರೊಂದು ವರವನ್ನು ಕೇಳು. ಕೊಡುತ್ತೇನೆ. ಪಾಪಿಗಳಿಗೆ ಸ್ವಪ್ನದಲ್ಲಿಯೂ ನನ್ನ ದರ್ಶನವಾಗುವುದಿಲ್ಲ. ನಿನ್ನ ದೃಢಭಕ್ತಿಗೆ ಮೆಚ್ಚಿ ನಾನು ಪ್ರತ್ಯಕ್ಷನಾಗಿದ್ದೇನೆ.

ಮೋಹಿನಿ! ಭಗವಂತನ ಈ ಮಾತನ್ನು ಕೇಳಿ ರಾಜನ ಮೈಯಲ್ಲಿ ರೋಮಾಂಚನವುಂಟಾಯಿತು. ಅವನು ಈ ರೀತಿ ಸ್ತೋತ್ರ ಮಾಡಲು ಪ್ರಾರಂಭಿಸಿದನು. ರಾಜನು ಹೇಳಿದನು, ''ಲಕ್ಷ್ಮೀ ಕಾಂತ! ನಿನಗೆ ನಮಸ್ಕಾರ! ದಿವ್ಯ ಪೀತಾಂಬರ ಧಾರಿಯೇ ನಿನಗೆ ನಮಸ್ಕಾರ. ಶ್ರೀದ, ಶ್ರೀಶ, ಶ್ರೀನಿವಾಸ, ಶ್ರೀನಿಕೇತನ ನಿನಗೆ ನಮಸ್ಕಾರ. ನೀನೇ ಆದಿ ಪುರುಷ. ಈಶಾನ, ಸರ್ವೇಶ್ವರ, ವಿಶ್ವತೋಮುಖ, ನಿಷ್ಕಲ, ಸನಾತನ ಪರಮ ದೇವತೆಯಾಗಿದ್ದೀ. ಶಬ್ದಾದಿಗುಣಾತೀತ, ಭಾವಾಭಾವ ವಿಲಕ್ಷಣ, ನಿರ್ಲೇಪ, ನಿರ್ಗುಣ, ಸೂಕ್ಷ್ಮ, ಸರ್ವಜ್ಞ, ಸರ್ವಪಾಲಕನೂ ನೀನೇ, ನೀಲಕಮಲ ದಲಶ್ಯಾಮ, ಕ್ಷೀರಸಾಗರ ಶಯನ, ಶೇಷಶಯನ, ಇಂದ್ರಿಯ ನಿಯಾಮಕ, ಪಾಪಪರಿಹಾರಕ, ದೇವದೇವೇಶ್ವರ, ಸರ್ವವರದಾಯಕ, ಸರ್ವವ್ಯಾಪ್ತಿ, ಸಮಸ್ತ ಲೋಕೇಶ್ವರ, ಮೋಕ್ಷಕಾರಣ, ಅವಿನಾಶಿ, ವಿಷ್ಣೋ! ನಿನಗೆ ನಾನು ಪುನಃ ಪುನಃ ನಮಸ್ಕಾರ ಮಾಡುತ್ತೇನೆ.'' ಈ ರೀತಿ ಸ್ತುತಿಸಿ ರಾಜನು ಕೈ ಜೋಡಿಸಿ ಭಗವಂತನಿಗೆ ನಮಸ್ಕಾರ ಮಾಡಿ ವಿನಯದಿಂದ ಪುನಃ ತಲೆಯನ್ನು ನೆಲಕ್ಕೆ ಸೋಕಿಸಿ ಹೇಳುತ್ತಿದ್ದಾನೆ. ''ಸ್ವಾಮಿಯೇ! ನೀನು ನನ್ನ ಮೇಲೆ ಪ್ರಸನ್ನನಾಗಿ ರುವುದಾದರೆ ಮೋಕ್ಷ ಮಾರ್ಗವನ್ನು ತಿಳಿದು ಪುರುಷರು ಯಾವ ನಿರ್ಗುಣ, ನಿರ್ಮಲ, ಶಾಂತ, ಪರಮ ಪದವನ್ನು ಧ್ಯಾನಿಸುತ್ತಾರೋ, ಸಾಕ್ಷಾತ್ಕರಿಸುತ್ತಾರೋ, ಆ ಪರಮ ದುರ್ಲಭವಾದ ಪದವಿಯನ್ನು ನಾನು ನಿನ್ನ ಅನುಗ್ರಹದಿಂದ ಪಡೆಯಲು ಬಯಸುತ್ತೇನೆ.

**ಭಗವಂತನು:-** ರಾಜನೇ! ನಿನಗೆ ಮಂಗಳವಾಗಲಿ. ನೀನು ಹೇಳಿದ ಮಾತುಗಳೆಲ್ಲವೂ ಸಫಲವಾಗಲಿ. ನನ್ನ ಅನುಗ್ರಹದಿಂದ ನೀನು ಬಯಸಿದ ವಸ್ತುವು ಪ್ರಾಪ್ತವಾಗುತ್ತದೆ. ರಾಜ ಶ್ರೇಷ್ಠನೇ, ನೀನು ಹತ್ತು ಸಾವಿರದ ಒಂಬೈನೂರು (೧೦,೯೦೦) ವರ್ಷಗಳ ಅಖಂಡ ಭೂಮಂಡಲ ಸಾಮ್ರಾಜ್ಯವನ್ನು ಅನುಭವಿಸಿ, ಅನಂತರ ದೇವಾಸುರರಿಗೂ ದುರ್ಲಭವಾದ, ಸರ್ವಮನೋರಥಗಳ ಪರಾಕಾಷ್ಠೆಯಲ್ಲಿರುವ ನೀನು ಕೇಳಿರುವ ಮೋಕ್ಷ ಪದವಿಯನ್ನು ಪಡೆಯುತ್ತಿ. ಶಾಂತ, ರಹಸ್ಯ, ಅವ್ಯಕ್ತ, ಅವ್ಯಯ, ಪರಾತ್ಪರ, ಸೂಕ್ಷ್ಮ, ನಿರ್ಲೇಪ, ನಿರ್ಗುಣ, ಶಾಶ್ವತ, ಚಿಂತಾಶೋಕ ರಹಿತ ಪರಮಪದದ ಸಾಕ್ಷಾತ್ಕಾರವನ್ನು ನಿನಗೆ ಮಾಡಿಸುತ್ತೇನೆ.

ಆ ಪರಮಾನಂದ ಪದವನ್ನು ಪಡೆದರೆ ನೀನು ಮೋಕ್ಷ ಪದವನ್ನು ಪಡೆದಂತೆಯೇ ಆಯಿತು. ಪೃಥಿವೀ, ಆಕಾಶ, ಚಂದ್ರ, ಸೂರ್ಯ, ನಕ್ಷತ್ರಗಳು ಎಲ್ಲಿಯವರೆಗೆ ಇರುತ್ತವೆಯೋ, ಎಲ್ಲಿಯವರೆಗೆ ಸಪ್ತ ಸಮುದ್ರಗಳು ಮೇರ್ವಾದಿ ಪರ್ವತಗಳೂ ಇರುತ್ತವೆಯೋ ಅಲ್ಲಿಯವರೆಗೆ ದೇವತೆಗಳು ಸ್ವರ್ಗದಲ್ಲಿರುತ್ತಾರೆ. ಅಲ್ಲಿಯವರೆಗೆ ಭೂಮಿಯಲ್ಲಿ ನಿನ್ನ ಅಕ್ಷಯವಾದ ಕೀರ್ತಿಯು ಹರಡಿಕೊಂಡಿರುತ್ತದೆ. ನಿನ್ನ ಯಜ್ಞದ ಘೃತಧಾರೆಯಿಂದ (ತುಪ್ಪದ ಪ್ರವಾಹ) ಪ್ರಕಟವಾದ ಸರೋವರವು ಇಂದ್ರದ್ಯುಮ್ನ ಸರೋವರವೆಂದು ಪ್ರಖ್ಯಾತವಾಗುತ್ತದೆ. ಅಲ್ಲಿ ಒಂದು ಬಾರಿ ಸ್ನಾನ ಮಾಡಿದ ಮಾನವನೂ ಇಂದ್ರಲೋಕವನ್ನು ಪಡೆಯುತ್ತಾನೆ. ಸರೋವರದ ದಕ್ಷಿಣಭಾಗದ ನೈಋತ್ಯಕೋಣದಲ್ಲಿ ಬಿಳಿ ತಾಳೆ ಹೂವಿನ ವನದಿಂದ ಸುತ್ತುವರಿಯಲ್ಪಟ್ಟ ಒಂದು ಮಂಟಪವಿದೆ. ಅದರ ಸುತ್ತಲೂ ಇನ್ನೂ ಅನೇಕ ವಿಧವಾದ ವೃಕ್ಷಗಳಿವೆ. ಅಷಾಢ ಶುಕ್ಲ ಪಂಚಮೀ ದಿನ ಮಘಾನಕ್ಷತ್ರದಲ್ಲಿ ಭಕ್ತರು ನಮ್ಮ ಈ ಪ್ರತಿಮೆಗಳ ಯಾತ್ರೋತ್ಸವವನ್ನು ಏರ್ಪಡಿಸಿ, ಹಿಂದೆ ಹೇಳಿದ ಮಂಟಪದಲ್ಲಿ ಏಳು ದಿನಗಳವರೆಗೆ ಇಡುವರು. ಬ್ರಹ್ಮಚಾರಿ, ಸನ್ಯಾಸಿ, ಸ್ನಾತಕ, ಶ್ರೇಷ್ಠ ಬ್ರಾಹ್ಮಣ, ವಾನಪ್ರಸ್ಥ, ಗೃಹಸ್ಥ, ಸಿದ್ಧ, ಮತ್ತಿತರು ಅನೇಕರು ನಾನಾ ರೀತಿಯ ಸ್ತೋತ್ರಗಳಿಂದಲೂ, ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳಿಂದಲೂ ಕೃಷ್ಣ ಬಲರಾಮರ ಸ್ತೋತ್ರ ಮಾಡುವರು.

ಭದ್ರೇ! ಮೋಹಿನಿ! ಈ ರೀತಿ ರಾಜನಿಗೆ ವರಕೊಟ್ಟು, ಅವನು ಭೂಲೋಕದಲ್ಲಿ ರಬೇಕಾದ ಸಮಯವನ್ನು ನಿರ್ಧರಿಸಿ ಭಗವಂತನು ವಿಶ್ವಕರ್ಮನೊಡನೆ ಅಂತರ್ಧಾನ ಹೊಂದಿದನು. ರಾಜನು ಪ್ರಸನ್ನನಾಗಿ, ರೋಮಾಂಚಿತನಾಗಿ ಭಗವಂತನ ದರ್ಶನದಿಂದ ತನ್ನನ್ನು ಧನ್ಯನೆಂದು ತಿಳಿದನು. ಅನಂತರ ಶ್ರೀ ಕೃಷ್ಣ ಬಲರಾಮ ಸುಭದ್ರೆಯರ ಆ ಪ್ರತಿಮೆಯನ್ನು ರತ್ನ ಸುವರ್ಣ ಖಚಿತವಾದ ವಿಮಾನಕಾರ ರಥದಲ್ಲಿ ಕುಳ್ಳಿರಿಸಿ ಮಂತ್ರಿ, ಪುರೋಹಿತಾದಿಗಳ ಜೊತೆಗೆ, ಮಂಗಲ ಸ್ತೋತ್ರಪಾಠ, ಜಯ ಜಯಕಾರ, ಅನೇಕ ರೀತಿಯ ವೈದಿಕ ಮಂತ್ರಗಳ ಪಾರಾಯಣ, ತರತರಹದ ವಾದ್ಯಘೋಷಗಳೊಂದಿಗೆ ತೆಗೆದುಕೊಂಡು ಹೋಗಿ ಉತ್ತಮ ಸ್ಥಾನದಲ್ಲಿ ವಿಜಯ ಮಾಡಿಸಿದನು. ಅನಂತರ ಶುಭತಿಥಿ, ಶುಭ ನಕ್ಷತ್ರ, ಶುಭಸಮಯದಲ್ಲಿ ಬ್ರಾಹ್ಮಣರ ಮೂಲಕ ಆ ಪ್ರತಿಮೆಗಳನ್ನು ಪ್ರತಿಷ್ಠೆಯನ್ನು ಮಾಡಿಸಿದನು. ವೇದೋಕ್ತ ವಿಧಾನದಿಂದ ಪ್ರತಿಷ್ಠಾ ಕಾರ್ಯವನ್ನು ಮುಗಿಸಿ ಆಚಾರ್ಯರು ಮತ್ತು ಋತ್ವಿಕ್‌ಗಳಿಗೆ ದಕ್ಷಿಣೆಯನ್ನು ಕೊಟ್ಟನು. ಇತರರಿಗೂ ಯಥೇಚ್ಛವಾಗಿ ದ್ರವ್ಯದಾನ ಮಾಡಿದನು. ಅನಂತರ ನಾನಾ ವಿಧವಾದ ಸುವಾಸನೆಯ ಪುಷ್ಪಗಳು ಚಿನ್ನ, ರತ್ನಗಳು ಮತ್ತು ನಾನಾ ಪ್ರಕಾರವಾದ ಸುಂದರ ವಸ್ತ್ರಗಳಿಂದ ಭಗವಂತನ ಪ್ರತಿಮೆಗಳಿಗೆ ವಿಧಿಪೂರ್ವಕವಾಗಿ ಪೂಜೆ ಮಾಡಿಸಿ, ಬ್ರಾಹ್ಮಣರಿಗೆ ಗ್ರಾಮ, ನಗರ, ರಾಜ್ಯ ದಾನವನ್ನು ಮಾಡಿದನು. ಹೀಗೆ ರಾಜನು ಕೃತಕೃತ್ಯನಾಗಿ ಸಮಸ್ತ ಪರಿಗ್ರಹವನ್ನು ತ್ಯಾಗ ಮಾಡಿ, ಭಗವಂತನಾದ ವಿಷ್ಣುವಿನ ಪರಮಧಾಮವನ್ನು ವೈಕುಂಠ ಲೋಕವನ್ನು ಪಡೆದನು.

## ಪುರುಷೋತ್ತಮ ಕ್ಷೇತ್ರದ ಯಾತ್ರಾ ಸಮಯ ಮತ್ತು ಅಲ್ಲಿಯ ದೇವತಾ ಮಾಹಾತ್ಮ್ಯ

**ಮೋಹಿನಿಯು:-** ದ್ವಿಜಶ್ರೇಷ್ಠರೇ! ಪುರುಷೋತ್ತಮ ಕ್ಷೇತ್ರದ ಯಾತ್ರೆಯನ್ನು ಯಾವಾಗ ಮಾಡಬೇಕು! ಪಂಚತೀರ್ಥಗಳ ಸೇವನೆಯ ವಿಧಾನ ಯಾವುದು? ಪ್ರತಿಯೊಂದು ತೀರ್ಥದ ಸ್ನಾನದ ಫಲವೇನು? ಅಲ್ಲಿ ಮಾಡಿದ ದಾನದ ಫಲ, ಅಲ್ಲಿರುವ ದೇವತೆಗಳ ದರ್ಶನದ ಫಲವನ್ನು ಪ್ರತ್ಯೇಕವಾಗಿ ಹೇಳಿರಿ.

**ಪುರೋಹಿತ ವಸು:-** ಮೋಹಿನಿ! ಜ್ಯೇಷ್ಠ ಮಾಸದ ಶುಕ್ಲ ಪಕ್ಷದ ದ್ವಾದಶಿಯ ದಿನ ಪಂಚತೀರ್ಥಗಳ ಸೇವನವು ಅತ್ಯಂತ ಉಚಿತವಾಗಿದೆ. ಆ ದಿವಸ ವಿಧಿಪೂರ್ವಕವಾಗಿ ತೀರ್ಥಗಳನ್ನು ಸೇವಿಸಿ ಪುರುಷೋತ್ತಮನ ದರ್ಶನ ಮಾಡಬೇಕು. ಇದರಿಂದ ಶಾಶ್ವತವಾದ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ. ಪುರುಷೋತ್ತಮ ಕ್ಷೇತ್ರದಿಂದ ಅತ್ಯಂತ ದೂರದಲ್ಲಿರುವ ಯಾವನು ನಿರಂಜನ ಪುರುಷೋತ್ತಮ ಕ್ಷೇತ್ರದ ಯಾತ್ರೆ ಮಾಡುತ್ತ ಇರುತ್ತಾನೋ ಅವನೂ ಕೂಡ ಸಮಸ್ತ ಪಾಪದೂರವಾಗಿ ವಿಷ್ಣು ಲೋಕ ವಾಸವನ್ನು ಪಡೆಯುತ್ತಾನೆ. ದೂರದಿಂದಲೇ ಪುರುಷೋತ್ತಮನ ದೇವಾಲಯದ ಪ್ರಾಸಾದಶಿಖರದ ಮೇಲಿರುವ ನೀಲ ಚಕ್ರದ ದರ್ಶನ ಮಾಡುವ ಮಾನವನೂ ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ. ಮೋಹಿನಿ! ನಾನು ಈಗ ಪಂಚತೀರ್ಥಗಳ ಸೇವನ ವಿಧಾನವನ್ನು ಹೇಳುತ್ತೇನೆ. ಮೊದಲು ಮಾರ್ಕಂಡೇಯ ಸರೋವರಕ್ಕೆ ಹೋಗಿ ಉತ್ತರ ದಿಕ್ಕಿಗೆ ಅಭಿಮುಖವಾಗಿ ಮೂರು ಬಾರಿ ಮುಳುಗಿ ಕೆಳಗೆ ಹೇಳಿರುವ ಮಂತ್ರವನ್ನು ಉಚ್ಚರಿಸಬೇಕು.

**ಸಂಸಾರ ಸಾಗರೇ ಮಗ್ನಂ ಪಾಪಗ್ರಸ್ತ ಮಚೇತನಂ ।**
**ಪಾಹಿ ಮಾಂ ಭಗನೇತ್ರಘ್ನ ತ್ರಿಪುರಾರೇ ನಮೋಽಸ್ತುತೇ ॥**

**ನಮಃ ಶಿವಾಯ ಶಾಂತಾಯ ಸರ್ವಪಾಪ ಹರಾಯ ಚ ।**
**ಸ್ನಾನಂ ಕರೋಮಿ ದೇವೇಶ! ಮಮ ನಶ್ಯತು ಪಾತಕಂ ॥**

**ನಾ. ಉತ್ತರ ೫೫-೧೪-೧೫**

ಭಗನೆಂಬ ದೇವತೆಯ ಕಣ್ಣನ್ನು ಕಿತ್ತಿದವನೇ! ತ್ರಿಪುರ ಸಂಹಾರಕನೇ! ಭಗವಂತನಾದ ಶಿವನೇ! ಸಂಸಾರ ಸಾಗರದಲ್ಲಿ ಮುಳುಗಿರುವ ಪಾಪಿಯಾದ ನಾನು ಜ್ಞಾನ ಶೂನ್ಯನಾಗಿದ್ದೇನೆ. ನನ್ನನ್ನು ರಕ್ಷಿಸು, ನಿನಗೆ ನಮಸ್ಕಾರ. ಸಮಸ್ತ ಪಾಪಪರಿಹಾರಕನಾದ ಶಾಂತಸ್ವರೂಪನಾದ ಶಿವನಿಗೆ ನಮಸ್ಕಾರ. ದೇವೇಶ್ವರ! ನಾನು ಇಲ್ಲಿ ಸ್ನಾನ ಮಾಡುತ್ತೇನೆ. ನನ್ನ ಪಾಪವೆಲ್ಲವೂ ನಾಶವಾಗಲಿ.'' ಜ್ಞಾನಿಯಾದ ಭಕ್ತನು ಹೀಗೆ ಹೇಳುತ್ತ ಹೊಕ್ಕುಳವರೆಗೆ ನೀರಿನಲ್ಲಿ ನಿಂತು ಸ್ನಾನಮಾಡಿ ದೇವತಾ ಮತ್ತು ಋಷಿಗಳ ತರ್ಪಣವನ್ನು ವಿಧಿವತ್ತಾಗಿ ಮಾಡಬೇಕು. ಅನಂತರ ತಿಲವನ್ನು ಹಿಡಿದು ಪಿತೃಗಳಿಗೆ ತರ್ಪಣಕೊಡಬೇಕು. ಅನಂತರ ಆಚಮನ ಮಾಡಿ ಶಿವಮಂದಿರಕ್ಕೆ ಹೋಗಿ ಮೂರು ಪ್ರದಕ್ಷಿಣೆ ಮಾಡಿ, ಮಾರ್ಕಂಡೇಶ್ವರಾಯ ನಮಃ' ಎಂಬ ಮೂಲ ಮಂತ್ರದಿಂದ ಈಶ್ವರನ ಪೂಜೆ ಮಾಡಿ ನಮಸ್ಕಾರ ಮಾಡಿ ಈ ಕೆಳಗಿನ ಮಂತ್ರವನ್ನು ಹೇಳಿ ಈಶ್ವರನನ್ನು ಪ್ರಸನ್ನಗೊಳಿಸಬೇಕು.

**ತ್ರಿಲೋಚನ! ನಮಸ್ತೇಽಸ್ತು ನಮಸ್ತೇ ಶಶಿಭೂಷಣ**
**ತ್ರಾಹಿ ಮಾಂ ತ್ವಂ ವಿರುಪಾಕ್ಷ ಮಹಾದೇವ ನಮೋಽಸ್ತು ತೇ ॥**

**ನಾ. ಉತ್ತರ. ೫೫-೧೯**

''ಮೂರು ಕಣ್ಣಿನ ಶಂಕರನೇ! ನಿನಗೆ ನಮಸ್ಕಾರ. ಚಂದ್ರಶೇಖರನೇ, ನಿನಗೆ ನಮಸ್ಕಾರ. ವಿರೂಪಾಕ್ಷನೇ! ನಿನಗೆ ನಮಸ್ಕಾರ. ನನ್ನನ್ನು ಕಾಪಾಡು. ಮಹಾದೇವ ನಿನಗೆ ನಮಸ್ಕಾರ.'' ಈ ರೀತಿ ಮಾರ್ಕಂಡೇಯ ಹ್ರದಸ್ನಾನ, ಮಾರ್ಕಂಡೇಯೇಶ್ವರನ ದರ್ಶನದಿಂದ ಅಶ್ವಮೇಧಯಾಗದ ಫಲವು ಲಭಿಸುತ್ತದೆ. ಸಮಸ್ತ ಪಾಪ ಮುಕ್ತನಾದ ಭಕ್ತನು ಶಿವಲೋಕವನ್ನು ಪಡೆಯುತ್ತಾನೆ. ನಂತರ ಈ ಕ್ಷೇತ್ರ ದೇವತೆಯಾದ ಶ್ರೀ ಕೃಷ್ಣ

ಬಲರಾಮ ಸುಭದ್ರೆಯರ ದರ್ಶನ ಮಾಡಿಕೊಂಡು ಪೂಜೆಯನ್ನು ಶಾಸ್ತ್ರೋಕ್ತ ರೀತಿಯಿಂದ ಮಾಡಬೇಕು. ಶ್ರೀಮನ್ನಾರಾಯಣನ ಪೂಜೆಯ ವಿಧಿ ವಿಧಾನಗಳನ್ನು ತಿಳಿಸುತ್ತೇನೆ ಕೇಳು. ಸುಂದರ ಮಂಟಪದಲ್ಲಿ ಅಷ್ಟದಳ ಪದ್ಮವನ್ನು ನಿರ್ಮಿಸಿ ಒಂದೊಂದು ದಳದಲ್ಲಿಯೂ ಅಷ್ಟಾಕ್ಷರ ಮಂತ್ರದ ಒಂದೊಂದು ಅಕ್ಷರವನ್ನು ನ್ಯಾಸಮಾಡಬೇಕು. ಅನಂತರ ಅಷ್ಟಾಕ್ಷರ ಮಂತ್ರದಿಂದ ಧ್ಯಾನಮಾಡಿ ಭಗವಂತನ ಸಚ್ಚಿದಾನಂದ ಸ್ವರೂಪವನ್ನು ಅಂಗಾಂಗಗಳನ್ನು ಚಿಂತಿಸಿ ಆವಾಹನಾದಿ ಷೋಡಶೋಪಚಾರ ಪೂಜೆಗೈಯಬೇಕು.

## ಆವಾಹನಮಂತ್ರ

**ಮೀನರೂಪೋ ವರಾಹಶ್ಚ ನರಸಿಂಹೋಽಥ ವಾಮನಃ**
**ಆಯಾತು - ದೇವೋ ವರದೋ ಮಮ ನಾರಾಯಣೋಽಗ್ರತಃ ॥**

''ಮತ್ಸ್ಯಾದಿರೂಪಿಯಾದ ನಾರಾಯಣನೆ, ನನ್ನೆದುರು ದಯಮಾಡಿಸು.''

## ಆಸನ ಮಂತ್ರ

**ಕರ್ಣಿಕಾಯಾಂ ಸುಪೀಠೇಽತ್ರ ಪದ್ಮಕಲ್ಪಿತಮಾಸನಂ**
**ಸರ್ವಸತ್ವ ಹಿತಾರ್ಥಾಯ ತಿಷ್ಠ ತ್ವಂ ಮಧುಸೂದನ ॥**

ಇಲ್ಲಿಯ ಕಮಲಾಸನದ ಕರ್ಣಿಕೆಯಲ್ಲಿ ಎಲ್ಲರ ಹಿತಕ್ಕಾಗಿ ದೇವನೆ, ನೀನು ಬಂದು ನಿಲ್ಲು. ದಿವ್ಯ ರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ

## ಅರ್ಘ್ಯ ಮಂತ್ರ

ಓಂ ತ್ರೈಲೋಕ್ಯಪತೀನಾಂ ಪತಯೇ ದೇವ ದೇವಾಯ ಹೃಷೀಕೇಶಾಯ ವಿಷ್ಣವೇ ನಮಃ ಓಂ ನಮೋ ನಾರಾಯಣಾಯ ನಮಃ

ತ್ರಿಭೂವನಾಧೀಶರಿಗೂ ಅಧೀಶನಾದ, ದೇವತೆಗಳಿಗೂ ದೇವತೆಯಾದ ಸಮಸ್ತೇಂದ್ರಿಯ ಸ್ವಾಮಿಯಾದ ಭಗವಂತನಾದ ವಿಷ್ಣುವಿಗೆ ನಮಸ್ಕಾರ. ಸಚ್ಚಿದಾನಂದ ಸ್ವರೂಪಿಯಾದ ವಿಷ್ಣುವಿಗೆ ನಮಸ್ಕಾರ.

## ಪಾದ್ಯ ಮಂತ್ರ

**ಓಂ ಪಾದ್ಯಂತೇ ಪಾದಯೋರ್ದೇವ ಪದ್ಮನಾಭ ಸನಾತನ ।**
**ವಿಷ್ಣೋ ಕಮಲಪತ್ರಾಕ್ಷ, ಗೃಹಾಣ ಮಧುಸೂದನ ॥**
**ಓಂ ನಮೋ ನಾರಾಯಣಾಯ ನಮಃ (ನಾ. ಉತ್ತರ ೫೭-೨೮-೨೯)**

ದೇವ! ಪದ್ಮನಾಭ! ಸನಾತನ! ವಿಷ್ಣುವೇ! ಕಮಲನಯನ! ಮಧುಸೂದನ, ನಿನ್ನ ಚರಣಗಳ ಪ್ರಕ್ಷಾಲನಕ್ಕಾಗಿ ಈ ಜಲವು ಸಮರ್ಪಿತವಾಗಿದೆ. ನೀನು ಇದನ್ನು ಸ್ವೀಕರಿಸಬೇಕು. ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ.

## ಮಧುಪರ್ಕ ಮಂತ್ರ

**ಮಧುಪರ್ಕಂ ಮಹಾದೇವ! ಬ್ರಹ್ಮಾದ್ಯೈಃ ಕಲ್ಪಿತಂ ತವ ।**
**ಮಯಾ ನಿವೇದಿತಂ ಭಕ್ತ್ಯಾ ಗೃಹಾಣ ಪುರುಷೋತ್ತಮ ॥**
**ಓಂ ನಮೋ ನಾರಾಯಣಾಯ ನಮಃ (ನಾ.ಉತ್ತರ ೫೭/೨೯-೩೦)**

ಮಹಾದೇವ! ಪುರುಷೋತ್ತಮ! ಬ್ರಹ್ಮಾದಿ ದೇವತೆಗಳು ನಿನಗೆ ಮಧುಪರ್ಕದಿಂದ ಪೂಜೆ ಮಾಡಿದ್ದಾರೆ. ನಾನೂ ಅದೇ ರೀತಿ ಮಧುಪರ್ಕವನ್ನು ನಿನಗೆ ನಿವೇದಿಸುತ್ತಿದ್ದೇನೆ. ಕೃಪೆದೋರಿ ಸ್ವೀಕರಿಸು, ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ.

## ಆಚಮನೀಯ ಮಂತ್ರ

**ಮಂದಾಕಿನ್ಯಾಃ ಸಿತಂ ವಾರಿ ಸರ್ವಪಾಪಹರಂ ಶಿವಂ ।**
**ಗೃಹಾಣಾಚಮನೀಯಂ ತ್ವಂ ಮಯಾ ಭಕ್ತ್ಯಾ ನಿವೇದಿತಂ ॥**
**ಓಂ ನಮೋ ನಾರಾಯಣಾಯ ನಮಃ (ನಾ. ಉತ್ತರ ೫೭/೩೦-೩೧)**

ಭಗವಂತನೇ! ಸಮಸ್ತ ಪಾಪ ದೂರವಾದ ಕಲ್ಯಾಣಮಯವಾದ ಗಂಗೆಯ ಸ್ವಚ್ಛವಾದ ಜಲವನ್ನು ನಿನ್ನ ಆಚಮನಕ್ಕಾಗಿ ಅರ್ಪಿಸಿದ್ದೇನೆ. ದಯವಿಟ್ಟು ಸ್ವೀಕರಿಸು. ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ.

## ಸ್ನಾನ ಮಂತ್ರ

**ತ್ವಮಾಪಃ ಪೃಥಿವೀ ಚೈವ ಜ್ಯೋತಿಸ್ತ್ವಂ ವಾಯುರೇವ ಚ ।**
**ಲೋಕೇಶ! ವೃತ್ತಿಮಾತ್ರೇಣ ವಾರಿಣಾ ಸ್ನಾಪಯಾಮ್ಯಹಂ ॥**
**ಓಂ ನಮೋ ನಾರಾಯಣಾಯ ನಮಃ**
**ನಾ. ಉತ್ತರ ೫೭/೩೧-೩೨)**

ಲೋಕೇಶ್ವರ! ನೀನೇ ಜಲಸ್ವಾಮಿ, ಜಲವ್ಯಾಪಿ, ಪೃಥಿವೀ ಸ್ವಾಮಿ, ಪೃಥಿವೀವ್ಯಾಪಿ, ಅಗ್ನಿ ವಾಯುಗಳಲ್ಲಿಯೂ ಇರುವವನು, ಇಂತಹ ನಿನಗೆ ಸಮಸ್ತ ಪ್ರಾಣಿಗಳ ಜೀವನ ರೂಪವಾದ ಜಲದಿಂದ ನಾನು ಸ್ನಾನ ಮಾಡಿಸುತ್ತೇನೆ. ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರವು.

## ವಸ್ತ್ರ ಮಂತ್ರ

**ದೇವ! ತಂತುಸಮಾಯುಕ್ತೇ ಯಜ್ಞ ವರ್ಣಸಮನ್ವಿತೇ ।**
**ಸ್ವರ್ಣ ವರ್ಣಪ್ರಭೇ ದೇವ ವಾಸಸೀ ತವ ಕೇಶವ ॥**
**ಓಂ ನಮೋ ನಾರಾಯಣಾಯ ನಮಃ (ನಾ. ಉತ್ತರ ೫೭/೩೨-೩೩)**

ದೇವ ಕೇಶವ! ದಿವ್ಯತಂತುಗಳಿಂದ ನೇಯ್ದಿರುವ, ಯಜ್ಞ ವರ್ಣದಿಂದಲೂ, ಬಂಗಾರದ ಬಣ್ಣದಿಂದಲೂ ಕೂಡಿರುವ, ದಿವ್ಯ ಪ್ರಭಾ ಸಮನ್ವಿತವಾದ ಈ ಎರಡು ವಸ್ತ್ರಗಳನ್ನು ನಿನ್ನ ಸೇವೆಗಾಗಿ ಸಮರ್ಪಿಸುತ್ತಿದ್ದೇನೆ. ಸಚ್ಚಿದಾನಂದ ಸ್ವರೂಪಿಯಾದ ಶ್ರೀ ಮನ್ನಾರಾಯಣನಿಗೆ ನಮಸ್ಕಾರ.

## ವಿಲೇಪನ (ಗಂಧ) ಮಂತ್ರ

**ಶರೀರಂ ತೇ ನ ಜಾನಾಮಿ ಚೇಷ್ಟಾಂ ಚೈವ ನ ಕೇಶವ ।**
**ಮಯಾ ನಿವೇದಿತೋ ಗಂಧಃ ಪ್ರತಿಗೃಹ್ಯ ವಿಲಿಪ್ಯತಾಂ ॥**
**ಓಂ ನಮೋ ನಾರಾಯಣಾಯ ನಮಃ**
**ನಾ. ಉತ್ತರ ೫೭-೩೩-೩೪**

ಕೇಶವನೇ! ನನಗೆ ನಿನ್ನ ಶರೀರದ ಸ್ವರೂಪ ಮತ್ತು ನಾನಾ ವಿಧ ವ್ಯಾಪಾರಗಳ ಪರಿಜ್ಞಾನವಿಲ್ಲ. ಆದರೂ ಈ ಕುಂಕುಮ ಕೇಸರಿ, ಗಂಧ ಮುಂತಾದ್ದನ್ನು ನಾನು ಅರ್ಪಿಸುತ್ತಿದ್ದೇನೆ. ಅದನ್ನು ಸ್ವೀಕರಿಸಿ ಅಂಗಗಳಲ್ಲಿ ಧರಿಸಬೇಕು. ಸಚ್ಚಿದಾನಂದ ಸ್ವರೂಪಿಯಾದ ಶ್ರೀ ಮನ್ನಾರಾಯಣನಿಗೆ ನಮಸ್ಕಾರ.

## ಯಜ್ಞೋಪವೀತ ಮಂತ್ರ

**ಋಗ್ಯಜುಃ ಸಾಮಮಂತ್ರೇಣ ತ್ರಿವೃತಂ ಪದ್ಮಯೋನಿನಾ ।**
**ಸಾವಿತ್ರೀ ಗ್ರಂಥಿಸಂಯುಕ್ತಂ ಉಪವೀತಂ ತವಾರ್ಪಯೇ ॥**
**ಓಂ ನಮೋ ನಾರಾಯಣಾಯ ನಮಃ (ನಾ. ಉತ್ತರ ೫೭-೩೪-೩೫)**

ಭಗವಂತನೇ! ಋಗ್ವೇದ, ಯಜುರ್ವೇದ ಮತ್ತು ಸಾಮವೇದದ ಮಂತ್ರಗಳಿಂದ ಅಭಿಮಂತ್ರಿತನಾದ ಯಜ್ಞೋಪವೀತವನ್ನು ನಾನು ನಿನಗೆ ಅರ್ಪಿಸುತ್ತಿದೇದನೆ. ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ.

## ಅಲಂಕಾರ ಮಂತ್ರ

**ದಿವ್ಯರತ್ನ ಸಮಾಯುಕ್ತಾ: ವಹ್ನಿಭಾನುಸಮಪ್ರಭಾಃ ।**
**ಗಾತ್ರಾಣಿ ಶೋಭಯಿಷ್ಯಂತಿ ಅಲಂಕಾರಾಸ್ತು ಮಾಧವ ॥**
**ಓಂ ನಮೋ ನಾರಾಯಣಾಯ ನಮಃ**

**ನಾ. ಉತ್ತರ ೫೭-೩೫-೩೬**

ಮಾಧವ! ಅಗ್ನಿ ಮತ್ತು ಸೂರ್ಯನಂತೆ ಪ್ರಕಾಶಮಯವಾದ ದಿವ್ಯರತ್ನ ಖಚಿತವಾದ ಈ ದಿವ್ಯ ಸುವರ್ಣಾಭರಣಗಳು ನಿನ್ನ ಅಂಗಾಗಗಳ ಶೋಭೆಯನ್ನು ಹೆಚ್ಚಿಸುವುವು. ಸಚ್ಚಿದಾನಂದ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ನಮಸ್ಕಾರ.

ಹಿಂದೆ ಹೇಳಿದ ಅಷ್ಟದಳ ಪದ್ಮದಲ್ಲಿ ಪೂರ್ವದಳದಲ್ಲಿ ವಾಸುದೇವ, ದಕ್ಷಿಣ ದಳದಲ್ಲಿ ಸಂಕರ್ಷಣ, ಪಶ್ಚಿಮದಳದಲ್ಲಿ ಪ್ರದ್ಯುಮ್ನ ಹಾಗೂ ಉತ್ತರದಲ್ಲಿ ಅನಿರುದ್ಧ, ಈ ವ್ಯೂಹಮೂರ್ತಿಗಳ ನ್ಯಾಸವನ್ನು ಮಾಡಬೇಕು. ಆಗ್ನೇಯದಳದಲ್ಲಿ ವರಾಹ, ನೈಋತ್ಯದಳದಲ್ಲಿ ನರಸಿಂಹ, ವಾಯವ್ಯದಳದಲ್ಲಿ ಮಾಧವ, ಈಶಾನ್ಯ ದಳದಲ್ಲಿ ತ್ರಿವಿಕ್ರಮ. ಈ ಮೂರ್ತಿಗಳ ನ್ಯಾಸವನ್ನು ಮಾಡಬೇಕು. ಅಷ್ಟಾಕ್ಷರ ಮಂತ್ರಪ್ರತಿಪಾದ್ಯನಾದ ಶ್ರೀಮನ್ನಾರಾಯಣನ ಎದುರು ಗರುಡನನ್ನು ಸ್ಥಾಪಿಸಬೇಕು. ಇದೇ ರೀತಿ ಪರಮಾತ್ಮನ ಬಲಭಾಗದಲ್ಲಿ ಕೌಮೋದಕಿ ಗದೆಯನ್ನು, ಎಡಭಾಗದಲ್ಲಿ ಶಾರ್ಂಗಧನುಸ್ಸನ್ನು ಬಲಭಾಗದಲ್ಲಿದಿವ್ಯವಾದ ಬತ್ತಳಿಕೆಯನ್ನು, ಎಡಭಾಗದಲ್ಲಿ ನಂದಕವೆಂಬ ದಿವ್ಯ ಖಡ್ಗವನ್ನೂ ನ್ಯಾಸಮಾಡಬೇಕು. ಬಲಭಾಗದಲ್ಲಿ ಶ್ರೀದೇವಿ, ಎಡಭಾಗದಲ್ಲಿ ಪುಷ್ಟಿದೇವಿ, ಸಮ್ಮುಖದಲ್ಲಿ ವನಮಾಲಾ, ಶ್ರೀವತ್ಸ ಕೌಸ್ತುಭ, ಈ ವಸ್ತುಗಳನ್ನು ಸ್ಥಾಪಿಸಬೇಕು. ಪುನಃ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಹೃದಯಾದಿ ನ್ಯಾಸವನ್ನು ಮಾಡಬೇಕು. ಕೋಣ ದಿಕ್ಕುಗಳಲ್ಲಿ ನಾರಾಯಣನ ಅಸ್ತ್ರಗಳ ನ್ಯಾಸ ಮಾಡಬೇಕು. ಪೂರ್ವಾದಿ ಎಂಟು ದಿಕ್ಕುಗಳಲ್ಲಿ, ಕೆಳಗೆ ಮತ್ತು ಮೇಲೆ ಕ್ರಮವಾಗಿ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ, ಅನಂತ ಮತ್ತು ಚತುರ್ಮುಖ ಬ್ರಹ್ಮದೇವರನ್ನು ಅವರವರ

ನಾಮಮಂತ್ರಗಳಿಂದ ಆವಾಹಿಸಿ ಪೂಜಿಸಬೇಕು. ಈ ರೀತಿ ಪೂಜಿಸಲ್ಪಟ್ಟ ಮಂಡಲ ಮಧ್ಯಸ್ಥನಾದ ಭಗವಂತನ, ಶ್ರೀ ಮನ್ನಾರಾಯಣನ ದರ್ಶನವನ್ನು ಮಾಡುವವರು ಅವಿನಾಶಿಯಾದ ವಿಷ್ಣುವಿನಲ್ಲಿಯೇ ಪ್ರವೇಶ ಮಾಡುತ್ತಾರೆ. ಮೇಲೆ ಹೇಳಿದ ರೀತಿಯಲ್ಲಿ ಒಮ್ಮೆಯಾದರೂ ಭಗವಂತನ ಪೂಜೆ ಮಾಡಿದವರು. ಜನ್ಮಮೃತ್ಯು. ಜರಾವಸ್ಥೆಗಳನ್ನು ದಾಟಿ ಭಗವಂತನಾದ ವಿಷ್ಣುವಿನ ಸ್ಥಾನವನ್ನು ಪಡೆಯುತ್ತಾನೆ. ಆಲಸ್ಯವನ್ನು ಬಿಟ್ಟು ನಿರಂತರವಾಗಿ ಭಕ್ತಿಭಾವದಿಂದ ಭಗವಂತನಾದ ನಾರಾಯಣನ ಸ್ಮರಣೆ ಮಾಡುವವನು, ಶ್ವೇತ ದೀಪದಲ್ಲಿ ನಿತ್ಯನಿವಾಸವನ್ನು ಹೊಂದುತ್ತಾನೆ. ಮೊದಲು 'ಓಂ, ಅನಂತರ ನಮಃ' ಕೊನೆಗೂ 'ನಮಃ', ಮಧ್ಯದಲ್ಲಿ ಚತುರ್ಥ್ಯಂತ ನಾರಾಯಣ ಶಬ್ದ. ಇದೇ ನಾರಾಯಣನ ಮಂತ್ರ (ಓಂ ನಮೋ ನಾರಾಯಣಾಯ ನಮಃ'' ಪೂರ್ಣ ಮಂತ್ರ). ಇದು ಸಮಸ್ತ ತತ್ತ್ವ ಪ್ರಕಾಶಕ. ಈ ಮಂತ್ರವನ್ನು ಹೇಳುತ್ತಲೇ ಗಂಧ ಪುಷ್ಪಾದಿ ಸಮಸ್ತ ಉಪಚಾರಗಳನ್ನು ಅರ್ಪಿಸಬೇಕು. ನೈವೇದ್ಯವನ್ನರ್ಪಿಸಬೇಕು. ನೀರಾಜನ ಮಾಡಬೇಕು. ಸ್ತೋತ್ರ ಪಾಠ, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಪದ್ಮ, ಶಂಖ, ಶ್ರೀವತ್ಸ, ಗದಾ, ಗರುಡ, ಚಕ್ರ, ಖಡ್ಗ, ಶಾರ್ಙ್ಗ ಈ ಎಂಟು ಮುದ್ರೆಗಳನ್ನು ತೋರಿಸಬೇಕು. ''ಓಂ ನಮೋ ನಾರಾಯಣಾಯ'' ಎಂಬ ಮೂಲ ಮಂತ್ರವನ್ನು ನೂರು ಎಂಟು ಬಾರಿ, ಇಪ್ಪತ್ತು ಎಂಟು ಬಾರಿ, ಅಥವಾ ಎಂಟು ಬಾರಿಯಾದರೂ ಜಪಿಸಬೇಕು. ಆಯಾಯಾ ಕಾಮನಾಸಿದ್ಧಿಗೋಸ್ಕರ ಶಾಸ್ತ್ರದಲ್ಲಿ ಹೇಳಿದಂತೆ ಅಷ್ಟಷ್ಟು ಸಂಖ್ಯೆಯಲ್ಲಿ ಮಂತ್ರಜಪವನ್ನು ಮಾಡಬೇಕು. ನಿಷ್ಕಾಮಭಾವದಿಂದ ಕೇವಲ ಭಗವಂತನ ಪ್ರೀತಿಗಾಗಿ, ಸಂಖ್ಯೆಯನ್ನು ಇಟ್ಟುಕೊಳ್ಳದೆ ಎಷ್ಟು ಸಾಧ್ಯವೋ ಅಷ್ಟು ಬಾರಿ ಏಕಾಗ್ರಚಿತ್ತದಿಂದ ನಾರಾಯಣನ ಮೂಲಮಂತ್ರವನ್ನು ಜಪಿಸಬೇಕು. ಮಂಗಳ ಸ್ವರೂಪಿಣಿಯಾದ ಮೋಹಿನಿ! ಯಾರಿಗೆ ಶಾಸ್ತ್ರೋಕ್ತ ಮಂತ್ರಗಳಿಂದ ಪೂಜೆ ಮಾಡುವ ವಿಧಾನವು ತಿಳಿದಿಲ್ಲವೋ ಅವರು, 'ಓಂ ನಮೋ ನಾರಾಯಣಾಯ' ಎಂಬ ಮೂಲಮಂತ್ರದಿಂದಲೇ ಭಗವಂತನಾದ ಅಚ್ಯುತನ ಪೂಜೆ ಮಾಡಬಹುದು.''

## ಸಮುದ್ರಸ್ನಾನ ಮಹಿಮೆ

**ಪುರೋಹಿತ ವಸು:-** ಮೇಲೆ ಹೇಳಿರುವ ಪೂಜೆಯನ್ನು ಸಮುದ್ರತೀರದಲ್ಲಿ ಮಾಡಬೇಕೆಂಬ ವಿಷಯ ನಿನಗೆ ತಿಳಿದಿದೆಯಷ್ಟೆ! ಈ ರೀತಿ ಭಕ್ತಿಭಾವದಿಂದ ಭಗವಂತನಾದ ಪುರುಷೋತ್ತಮನ ಪೂಜೆಯನ್ನು ಮಾಡಿ ಆ ಮಹಾಸ್ವಾಮಿಯ ಚರಣಗಳಲ್ಲಿ ತಲೆಯಿಟ್ಟು ನಮಸ್ಕರಿಸಿ ಆತ್ಮಾರ್ಪಣವನ್ನೇ ಮಾಡಬೇಕು. ಅನಂತರ ಈ ರೀತಿ ಸಮುದ್ರ ರಾಜನನ್ನು ಪ್ರಾರ್ಥಿಸಬೇಕು.

**ಪ್ರಾಣಸ್ತ್ವಂ ಸರ್ವ ಭೂತಾನಾಂ ಯೋನಿಶ್ಚ ಸರಿತಾಂ ಪತೇ ।**
**ತೀರ್ಥರಾಜ ನಮಸ್ತೇಽಸ್ತು ತ್ರಾಹಿ ಮಾಮಚ್ಯುತಪ್ರಿಯ ॥**

(ನಾ. ಉತ್ತರ ೫೮/೨)

ನದೀಪತಿಯಾದ ತೀರ್ಥರಾಜ! ನೀನು ಎಲ್ಲ ಪ್ರಾಣಿಗಳಿಗೂ ಪ್ರಾಣನಾಗಿದ್ದೀ, ಜೀವನಕಾರಣನಾಗಿದ್ದೀ. ನಿನಗೆ ನಮಸ್ಕಾರ. ಅಚ್ಯುತಪ್ರಿಯನೇ, ನನ್ನನ್ನು ರಕ್ಷಿಸು.'' ಈ ರೀತಿ ಉತ್ತಮವಾದ ಸಮುದ್ರದಲ್ಲಿ ಸರಿಯಾಗಿ ಸ್ನಾನಮಾಡಿ ಸಮುದ್ರತೀರದಲ್ಲಿಯೇ ಅವಿನಾಶಿಯಾದ ಭಗವಂತನಾದ ನಾರಾಯಣನ ಪೂಜೆಯನ್ನು ವಿಧಿವತ್ತಾಗಿ ಮಾಡಬೇಕು.

## ಶ್ರೀ ಕೃಷ್ಣಬಲರಾಮಾದಿಗಳ ದರ್ಶನ ಮಹಿಮೆ

ಶ್ರೀ ಕೃಷ್ಣ ಬಲರಾಮರ ದರ್ಶನ ಮಾಡಿದಂತೆಯೇ ನಮಸ್ಕಾರ ಮಾಡಿ ಅನಂತರ ಸುಭದ್ರಾದರ್ಶನ ಮಾಡಿ ಸುಭದ್ರೆಯ ಚರಣಗಳಲ್ಲಿ ತಲೆಯನ್ನಿಟ್ಟು ನಮಸ್ಕರಿಸಬೇಕು. ಇದರಿಂದ ನೂರು ಅಶ್ವಮೇಧ ಯಜ್ಞ ಫಲವು ಬರುತ್ತದೆ. ಸಮಸ್ತ ಪಾಪಗಳಿಂದ ಮುಕ್ತಿಯುಂಟಾಗುತ್ತದೆ. ಎಲ್ಲ ದುಃಖಗಳಿಂದಲೂ ಬಿಡುಗಡೆಯಾಗುತ್ತದೆ. ದೇಹಾಂತ್ಯದಲ್ಲಿ ಸೂರ್ಯನಂತೆ ತೇಜಸ್ವಿಯಾದ ವಿಮಾನದಲ್ಲಿ ಕುಳಿತು ಭಕ್ತನು ವೈಕುಂಠಲೋಕಕ್ಕೆ ತೆರಳುತ್ತಾನೆ, ಗ್ರಹಣ, ಸಂಕ್ರಾಂತಿ, ಆಯನಾರಂಭ, ವಿಷುವ ಯೋಗ, ಯುಗಾದಿ ತಿಥಿ, ಮನ್ವಾದಿತಿಥಿ, ವ್ಯತೀಪಾತ, ಯೋಗ, ತಿಥಿಕ್ಷಯ ಆಷಾಢ, ಕಾರ್ತಿಕ ಮಾಘಮಾಸಗಳ ಪೂರ್ಣಿಮಾ, ಮತ್ತಿತರ ಶುಭತಿಥಿಗಳಲ್ಲಿ ಮಾನವನು ಇಲ್ಲಿ ಬ್ರಾಹ್ಮಣನಿಗೆ ದಾನಕೊಟ್ಟರೆ ಬೇರೆ ತೀರ್ಥಗಳಲ್ಲಿ ಮಾಡುವ ದಾನಕ್ಕಿಂತ ಸಾವಿರ ಪಾಲು ಹೆಚ್ಚು ಫಲವಿರುತ್ತದೆ. ಅಲ್ಲಿ ವಿಧಿಪೂರ್ವಕವಾಗಿ ಪಿತೃಗಳಿಗೆ ಪಿಂಡಪ್ರದಾನ ಮಾಡಿದರೆ ಪಿತೃಗಳಿಗೆ ಅಕ್ಷಯ ತೃಪ್ತಿಯುಂಟಾಗುತ್ತದೆ.

ದೇವಿ! ಈ ರೀತಿ ನಾನು ಸಮುದ್ರಸ್ನಾನ, ದಾನ, ಪಿಂಡ ಪ್ರದಾನ ಇವುಗಳ ಫಲವನ್ನೆಲ್ಲ ಹೇಳಿದ್ದೇನೆ. ಧರ್ಮ ಮತ್ತು ಮೋಕ್ಷಗಳಿಗೂ ಆಯುಸ್ಸು ಕೀರ್ತಿ ಮತ್ತು ಪ್ರಸಿದ್ಧಿಗಳಿಗೂ, ಭೋಗಕ್ಕೂ, ದುಃಸ್ವಪ್ನನಾಶಕ್ಕೂ ಇದು ಸಾಧನವು. ಈ ಭೂಮಂಡಲದಲ್ಲಿ ಎಷ್ಟು ತೀರ್ಥಗಳು ನದೀಸರೋವರಗಳು ಇವೆಯೋ ಅವೆಲ್ಲವೂ ಸಮುದ್ರದಲ್ಲಿ ಪ್ರವೇಶ ಮಾಡುವುದರಿಂದ ಸಮುದ್ರವು ಎಲ್ಲ ತೀರ್ಥಗಳಿಗಿಂತ ಶ್ರೇಷ್ಠವು. ಸೂರ್ಯೋದಯವಾದ ಕೂಡಲೇ ಅಂಧಕಾರವು ನಾಶವಾಗುವಂತೆ ಸಮುದ್ರಸ್ನಾನದಿಂದ ಎಲ್ಲಾ ಪಾಪಗಳೂ ದೂರವಾಗುತ್ತವೆ. ತೊಂಬತ್ತೊಂಭತ್ತು (೯೯) ಕೋಟಿ ತೀರ್ಥಗಳ ಸನ್ನಿಧಾನವಿರುವ ತೀರ್ಥರಾಜನಾದ ಸಮುದ್ರ ವರ್ಣನೆಯನ್ನು ಮಾಡಲು ಯಾರಿಗೆ ಸಾಧ್ಯ? ಆದ್ದರಿಂದ ಅಲ್ಲಿ ಸ್ನಾನ, ದಾನ, ಹೋಮ, ಜಪ, ಹಾಗೆಯೇ ದೇವಪೂಜೆ ಮುಂತಾದ ಯಾವ ಸತ್ಕರ್ಮವನ್ನು ಮಾಡಿದರೂ ಅಕ್ಷಯ ಫಲವಿದೆ.

## ಶ್ರೀಕೃಷ್ಣನ ಜಗತ್ ಸೃಷ್ಟಿಮಹಿಮೆ ರಾಧಾಮಾಧವರ ಸ್ವರೂಪ

**ಮೋಹಿನಿ:-** ಗುರುದೇವ! ಪುರಾಣಗಳಲ್ಲಿ ರಾಧಾಮಾಧವರ ಸ್ವರೂಪವು ಬಹಳ ರಹಸ್ಯವೆಂದು ಹೇಳಿದ್ದಾರೆ. ತಾವು ಎಲ್ಲವನ್ನೂ ಯಥಾರ್ಥವಾಗಿ ತಿಳಿದಿದ್ದೀರಿ. ಆದ್ದರಿಂದ ನನಗೆ ಎಲ್ಲವನ್ನೂ ಸರಿಯಾಗಿ ತಿಳಿಸಿರಿ.

**ವಸಿಷ್ಠರು:-** ರಾಜನೇ (ಮಾಂಧಾತರಾಜನೇ) ಮೋಹಿನಿಯ ಈ ಪ್ರಶ್ನೆಯನ್ನು ಕೇಳಿ ಭಗವಂತನಾದ ಗೋವಿಂದನ ಅಂತರಂಗ ಭಕ್ತನಾದ ಮಹಾತ್ಮನಾದ ವಸುವು ಸ್ವಲ್ಪ ಹೊತ್ತು ರಾಧಾಕೃಷ್ಣ ಚಿಂತನೆಯಲ್ಲಿ ತಲ್ಲೀನನಾದನು. ಅವನ ಎಲ್ಲಾ ಅಂಗಗಳಲ್ಲಿ ರೋಮಾಂಚನ ಉಂಟಾಯಿತು. ಹೃದಯದಲ್ಲಿ ಸಂತೋಷ ಪ್ರವಾಹವು ಉಕ್ಕಿತು. ಅನಂತರ ಪರಮಾತ್ಮನ ಪ್ರೇಮದಲ್ಲಿ ಮುಳುಗಿದ ಮುಗ್ಧಬಾಲಕನಂತಾಗಿದ್ದ ಆ ವಸು ಎಚ್ಚತ್ತು ಪ್ರಸನ್ನನಾಗಿ ಮೋಹಿನಿಯೊಡನೆ ಹೇಳಿದನು.

**ವಸುವು:-** ದೇವಿ! ಭಗವಂತನಾದ ಶ್ರೀ ಕೃಷ್ಣನ ಚರಿತ್ರೆಯು ಅತ್ಯಂತ ರಹಸ್ಯವು ರಹಸ್ಯತಮಗಳಲ್ಲಿ ಅತ್ಯಂತ ರಹಸ್ಯವು. ಪ್ರಕೃತಿ ಪುರುಷರ ನಿಯಾಮಕನಾದ ಬ್ರಹ್ಮನಿಗೂ

ಬ್ರಹ್ಮನಾದ, ಕಾಲಕಾಲನಾದ ಶ್ರೀ ಕೃಷ್ಣನಿಗೆ ನಮಸ್ಕಾರ ಮಾಡಿ ನಾನು ಅವನ ರಹಸ್ಯವನ್ನು ಸ್ವಲ್ಪ ಮಟ್ಟಿಗೆ ಹೇಳುತ್ತೇನೆ. ಕೇಳು, ಶ್ರೀ ಕೃಷ್ಣನೇ ಪರಬ್ರಹ್ಮನು, ಪರಬ್ರಹ್ಮನೇ ಶ್ರೀ ಕೃಷ್ಣನು. ಎಲ್ಲ ಅವತಾರಗಳೂ ಅವನದ್ದೇ ಆಗಿವೆ. ಮೂಲರೂಪಿಯಾದ ಶ್ರೀ ಕೃಷ್ಣನು ನಿರ್ವಿಕಾರ ನಿತ್ಯನು. ಅವನು ಅಪ್ರಾಕೃತ ದಿವ್ಯಗುಣಭರಿತನು. ಹೇಯ ಗುಣರಹಿತನು, ಹೀಗೆ ಸಗುಣನೂ ನಿರ್ಗುಣನೂ ಅವನೇ, ಅವನೇ ಶ್ರೀ ರಾಮ, ಅವನೇ ಶ್ರೀ ಕೃಷ್ಣ. ಎಲ್ಲಾ ಲೋಕಗಳೂ ಪ್ರಾಕೃತಗಳು, ಸತ್ವರಜಸ್ ತಮಸ್ಸು ಎಂಬ ಗುಣಮಯಗಳು. ಶ್ರೀಕೃಷ್ಣನ ಗೋಲೋಕ (ವೈಕುಂಠ) ಮಾತ್ರ ನಿರ್ಗುಣವು. ಭದ್ರೆಯೇ! ಗೋಲೋಕ' ಎಂದರೆ ತೇಜಸ್ಸಿನ ಲೋಕ. ಕಿರಣಗಳ ಲೋಕ ಎಂದರ್ಥ (ಗೋ ಎಂದರೆ ಕಿರಣ, ತೇಜಸ್ಸು ಎಂದು ಅರ್ಥ) ವೇದಜ್ಞರಾದ ಜ್ಞಾನಿಗಳು ಗೋಲೋಕ ಶಬ್ದದ ಅರ್ಥವನ್ನು ಹೀಗೆಯೇ ಹೇಳಿದ್ದಾರೆ. ಅಲ್ಲಿರುವ ತೇಜೋಮಯವಾದ ಕಿರಣಸಾಗರವಾದ ಶ್ರೀ ಕೃಷ್ಣಬ್ರಹ್ಮವು ಸ್ವಯಂ ನಿರ್ಗುಣವಾದರೂ ಪ್ರಾಕೃತ ಗುಣಗಳಿಗೆ ಉತ್ಪಾದಕವಾಗಿದೆ. ಪ್ರಕೃತಿಯು ಅವನ ಜತೆಗೆ ಇರುವ ಪರಾಶಕ್ತಿಯು. ಅದನ್ನೇ ಪ್ರಧಾನ ಎಂದೂಹೇಳುತ್ತಾರೆ. ಆದ್ದರಿಂದಲೇ ಮಹತ್ತತ್ವವು ಹುಟ್ಟಿದೆ. ಪುರುಷನೆಂಬ ಹೆಸರುಳ್ಳ ಶ್ರೀ ಕೃಷ್ಣನ ಸಂಕಲ್ಪದಿಂದ ಮಹತ್ತತ್ವದಿಂದ ಅಹಂಕಾರ ತತ್ತ್ವ ಪ್ರಕಟವಾಯಿತು. ಆ ಅಹಂಕಾರವು ದ್ರವ್ಯ ರೂಪ, ಜ್ಞಾನರೂಪ ಮತ್ತು ಕ್ರಿಯಾ ರೂಪವೂ ಆಗಿದೆ. ವೈಕಾರಿಕ, ತೈಜಸ ಮತ್ತು ತಾಮಸ ಎಂದು ಅಹಂಕಾರ ತತ್ತ್ವದಲ್ಲಿ ಮೂರು ಭೇದಗಳು. ವೈಕಾರಿಕ ಅಹಂಕಾರದಿಂದ ಮನಸ್ಸು ಮತ್ತೆ ಹತ್ತು ಮಂದಿ ವೈಕಾರಿಕ ದೇವತೆಗಳು ಪ್ರಕಟರಾದರು. ದಿಕ್ಕು, ವಾಯು, ಸೂರ್ಯ, ವರುಣ, ಅಶ್ವಿನೀ ದೇವತೆಗಳು, ಬ್ರಹ್ಮ, ಇಂದ್ರ, ಉಪೇಂದ್ರ, ಮಿತ್ರ ಮತ್ತು ಮೃತ್ಯು, ಇವರೇ ಹತ್ತು ಮಂದಿ ವೈಕಾರಿಕ ದೇವತೆಗಳು, ತೈಜಸಾಹಂಕಾರದಿಂದ ಇಂದ್ರಿಯಗಳ ಉತ್ಪತ್ತಿಯಾಗಿದೆ. ಇಂದ್ರಿಯಗಳಲ್ಲಿ ಕಿವಿ, ತ್ವಚ, ಘ್ರಾಣ (ಮೂಗು), ಕಣ್ಣು ಮತ್ತು ನಾಲಿಗೆಗಳು ಜ್ಞಾನೇಂದ್ರಿಯಗಳು. ವಾಕ್ಕು, ಕೈ, ಕಾಲು, ಗುಹ್ಯ, ಗುದ ಇವು ಕರ್ಮೇಂದ್ರಿಯಗಳು. ಸಾಧ್ವಿ! ತಾಮಸಾಹಂಕಾರದಿಂದ ಶಬ್ದದ ಉತ್ಪತ್ತಿಯಾಯಿತು. ಶಬ್ದದಿಂದ ಆಕಾಶವು ಹುಟ್ಟಿತು. ಆಕಾಶದಿಂದ ಸ್ಪರ್ಶ ಉತ್ಪತ್ತಿಯಾಗಿ, ಸ್ಪರ್ಶದಿಂದ ವಾಯು ತತ್ತ್ವದ ಸೃಷ್ಟಿಯಾಯಿತು. ವಾಯುವಿನಿಂದ ರೂಪವು ಪ್ರಕಟವಾಗಿ, ರೂಪದಿಂದ ತೇಜಸ್ಸಿನ ಉತ್ಪತ್ತಿಯಾಯಿತು. ತೇಜಸ್ಸಿನಿಂದ ರಸ, ಆ ರಸದಿಂದ ಜಲತತ್ತ್ವವು ಹುಟ್ಟಿತು. ಜಲದಿಂದ ಗಂಧವು ಉತ್ಪನ್ನವಾಗಿ, ಆ ಗಂಧದಿಂದ ಪೃಥಿವೀ ತತ್ತ್ವವೂ ಪ್ರಾದುರ್ಭಾವ ಹೊಂದಿತು. ಈ ಪೃಥಿವಿಯಲ್ಲಿ ಚರಾ ಚರ ಪ್ರಾಣಿಗಳೆಲ್ಲವೂ ಸ್ಥಿತಿಯನ್ನು ಹೊಂದಿದೆ. ಆಕಾಶದಿಂದ ತತ್ತ್ವಗಳಲ್ಲಿ ಕ್ರಮವಾಗಿ ಒಂದು, ಎರಡು ಮೂರು ಮತ್ತು ನಾಲ್ಕು ಗುಣಗಳಿವೆ. ಈ ಪೃಥಿವೀ ಮುಂತಾದ ಐದನ್ನೂ ಭೂತ ವಿಶೇಷವೆಂದು ಹೇಳುತ್ತಾರೆ. ಪರಮಾತ್ಮನಿಂದ ಪ್ರೇರಿತವಾದ ಕಾಲ ಮತ್ತು ಮಾಯೆಗಳಿಂದ ಈ ಪಂಚಭೂತಗಳಿಂದ ಅಚೇತನವಾದ ಅಂಡದ ಉತ್ಪತ್ತಿಯಾಯಿತು. ಸತಿ ಮೋಹಿನಿ! ಆ ಅಂಡದಲ್ಲಿ ಪುರುಷನ ಪ್ರವೇಶದಿಂದ ಅಂಡವು ಚಲಿಸಲಾರಂಭಿಸಿತು. ಆ ಅಂಡದಿಂದ ವಿರಾಟ್ ಪುರುಷನು ಉತ್ಪನ್ನನ್ನಾಗಿ ಅವನು ಅಂಡದ ಒಳಗಿರುವ ಜಲದಲ್ಲಿ ಶಯನ ಮಾಡಿದನು. ಜಲಶಯನನಾದ ವಿರಾಟ್ ಪುರುಷನಿಗೆ ವಚನ (ಮಾತಾಡುವುದು) ಮೊದಲಾದ ವ್ಯವಹಾರಗಳ ಸಿದ್ಧಿಗೋಸ್ಕರ ಮುಖ ಮೊದಲಾದ ಅಂಗಗಳೂ ಮತ್ತಿತರ ಅವಯವಗಳೂ ಪ್ರಕಟವಾದವು. ಆ ಪುರುಷನ

ನಾಭಿಯಿಂದ ಪ್ರಾದುರ್ಭೂತವಾದ ಸಹಸ್ರಸೂರ್ಯರಂತೆ ತೇಜಸ್ವಿಯಾದ ಕಮಲದಲ್ಲಿ ಸ್ವಯಂಭೂ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನು ಸಂಪೂರ್ಣಜಗತ್ತಿಗೆ ಪ್ರಪಿತಾಮಹನು. ಆ ಚತುರ್ಮುಖ ಬ್ರಹ್ಮನು ಕಠಿಣವಾದ ತಪಸ್ಸನ್ನು ಮಾಡಿ ಪರಮಾತ್ಮನ ಅಪ್ಪಣೆಯನ್ನು ಪಡೆದು ಲೋಕ ಮತ್ತು ಲೋಕಪಾಲಕರನ್ನು ಸೃಷ್ಟಿಸಿದನು. ಆ ಬ್ರಹ್ಮದೇವನು ಸೊಂಟ ಮತ್ತು ಅದರ ಕೆಳಗಿನ ಅಂಗಗಳಿಂದ ಏಳು ಅಧೋಲೋಕಗಳನ್ನೂ (ಸಪ್ತ ಪಾತಾಳಗಳನ್ನು) ಮೇಲಿನ ಅಂಗಗಳಿಂದ ಭೂರಾದಿ ಸಪ್ತ ಊರ್ಧ್ವಲೋಕಗಳನ್ನು ಸೃಷ್ಟಿಸಿದನು. ಈ ಹದಿನಾಲ್ಕು ಭುವನಗಳಿಂದ ಯುಕ್ತವಾದುದೇ ಬ್ರಹ್ಮಾಂಡವು. ಬ್ರಹ್ಮದೇವರು ಈ ಹದಿನಾಲ್ಕು ಲೋಕಗಳಲ್ಲಿ ಚರಾಚರ ಭೂತಗಳನ್ನು ಸೃಷ್ಟಿಮಾಡಿ ತನ್ನ ಮನಸ್ಸಿನಿಂದ ಸನಕಾದಿ ಮಹಾತ್ಮರನ್ನು ಸೃಷ್ಟಿ ಮಾಡಿದರು. ದೇವಿ, ಬ್ರಹ್ಮದೇವರ ಶರೀರದಿಂದ ಹುಟ್ಟಿದ ಭೃಗು ಮುಂತಾದವರು ಬ್ರಹ್ಮ ಸೃಷ್ಟಿಯನ್ನು ಬೆಳೆಸಿದರು. ಮಹಾಭಾಗ್ಯಶಾಲಿನಿಯಾದ ಮೋಹಿನಿಯೇ! ನಿರಂಜನ, ಸಚ್ಚಿದಾನಂದ ಸ್ವರೂಪ ಜ್ಯೋತಿರ್ಮಯ. ಸಂಸಾರ ನಾಶಕ, ಶ್ರೀ ಕೃಷ್ಣನೇ ಸರ್ವಪ್ರಧಾನನು. ಈಗ ನೀನು ಅವನ ಲಕ್ಷಣವನ್ನು ಕೇಳು. ಸರ್ವವ್ಯಾಪಿಯಾದ ಅವನು ಪ್ರಕಾಶಮಯನು. ಗೋಲೋಕದಲ್ಲಿ ನಿತ್ಯವ್ಯಕ್ತನು. ದೃಶ್ಯಾದೃಶ್ಯ ಪ್ರಪಂಚದಲ್ಲಿ ಅವನು ಸರ್ವತ್ರ ವ್ಯಾಪ್ತ. ಮೋಹಿನಿ! ಗೋಲೋಕದಲ್ಲಿ ಗೋಪಾಲಕರು, ಗೋವುಗಳು, ಗೋಪಿಕೆಯರು, ವೃಂದಾವನ, ನೂರಾರು ಶಿಖರಗಳುಳ್ಳ ಗೋವರ್ಧನ ಪರ್ವತ, ವಿರಜಾನದಿ, ನಾನಾ ವೃಕ್ಷಗಳು, ಪಕ್ಷಿಗಳು ಎಲ್ಲವೂ ಇವೆ. ಎಲ್ಲಿಯವರೆಗೆ ಪ್ರಕೃತಿಯು ಎಚ್ಚತ್ತು ಇರುತ್ತದೆಯೋ ಅಲ್ಲಿಯವರೆಗೆ ಸರ್ವವ್ಯಾಪಿಯಾದ ಭಗವಂತನಾದ ಶ್ರೀ ಕೃಷ್ಣನು ಪ್ರತ್ಯಕ್ಷರೂಪದಿಂದ ಅಲ್ಲಿ ವಿರಾಜಿಸುತ್ತಾ ಇರುತ್ತಾನೆ. ಪ್ರಲಯ ಕಾಲದಲ್ಲಿ ಗೋವು ಮೊದಲಾದ ಎಲ್ಲಾ ವಸ್ತುಗಳು ನಿದ್ದೆ ಮಾಡುವುದರಿಂದ ಪರಮಾತ್ಮನನ್ನು ತಿಳಿಯದೆ ಇರುತ್ತವೆ. ಗೋಲೋಕದಲ್ಲಿ ಪರಮಾತ್ಮನು ತೇಜಃ ಪುಂಜದ ಒಳಗೆ ಮನೋಹರವಾದ ಶರೀರವನ್ನು ಧರಿಸಿ ಕಿಶೋರ ರೂಪದಿಂದ ಪ್ರಕಾಶಿಸುತ್ತಾ ಇರುತ್ತಾನೆ. ಮೇಘ ಸಮಾನವಾದ ಕಾಂತಿ, ರೇಶ್ಮೆಯ ಪೀತಾಂಬರ, ಎರಡು ಬಾಹುಗಳು, ಕೊಳಲನ್ನೂದುವ ಭಂಗಿ, ಕಿರೀಟ ಕುಂಡಲಾದಿ ಅಲಂಕಾರಗಳು, ಇವುಗಳಿಂದ ಕೂಡಿರುವ ಶ್ರೀ ಕೃಷ್ಣನ ಪ್ರಾಣಪ್ರಿಯಳಾದ ರಾಧೆಯಿದ್ದಾಳೆ. ರಾಧಾದೇವಿಯೂ ಪೃಥ್ವೀಪ್ರತೀತಳು, ಸಚ್ಚಿದಾನಂದ ಸ್ವರೂಪಿಣಿಯು. ಅವರಿಬ್ಬರೂ ಬೇರೆ ಬೇರೆ ದೇಹದಲ್ಲಿ ಕಂಡರೂ ಒಂದೇ ತೇಜಃಪುಂಜದಲ್ಲಿ ಮಿಳಿತರಾಗಿರುತ್ತಾರೆ. ಅವರಿಬ್ಬರ ಸ್ವರೂಪವೂ ನಿತ್ಯ. ಹಾಲು ಅದರ ಬಿಳುಪು, ಭೂಮಿ ಮತ್ತು ಅದರ ಗಂಧ ಈ ಎರಡೆರಡೂ ಒಟ್ಟಿಗೆ ಇರುವಂತೆ ರಾಧಾ ಮಾಧವರು ಒಟ್ಟಿಗೆ ಇರುತ್ತಾರೆ. ಅವರು ಪ್ರಿಯತಮೆ-ಪ್ರಿಯತಮರು. ಕಾರಣ ಕಾರಣರಾದ ರಾಧಾ ಮಾಧವರ ಸ್ವರೂಪವನ್ನು ಇದಕ್ಕಿಂತ ಹೆಚ್ಚಾಗಿ ಹೇಳಲು ಬರುವುದಿಲ್ಲ. ವೇದವೇ ಪರಮಾತ್ಮನು 'ವಾಚಾಂ ಅಗೋಚರ' ಎಂದು ಹೇಳಿದ ಮೇಲೆ ಆ ಪರಮಾತ್ಮನ ವರ್ಣನೆ ಮಾಡಲು ನಮ್ಮಿಂದ ಸಾಧ್ಯವೇ!

## ಇಂದ್ರದ್ಯುಮ್ನ ಸರೋವರದಲ್ಲಿ ಸ್ನಾನ ವಿಧಿ

**ಪುರೋಹಿತ ವಸು:-** ಬ್ರಹ್ಮಪುತ್ರಿಯಾದ ಮೋಹಿನಿಯೇ! ಅಲ್ಲಿಂದ ಅಶ್ವಮೇಧ ಯಜ್ಞಾಂಗದಿಂದ ಉತ್ಪನ್ನವಾದ ಇಂದ್ರದ್ಯುಮ್ನ ಸರೋವರಕ್ಕೆ ಹೋಗಬೇಕು. ಪವಿತ್ರವಾದ

ಆ ತೀರ್ಥದಲ್ಲಿ ಆಚಮನ ಮಾಡಿ ಮನಸ್ಸಿನಲ್ಲಿ ನಿರಂತರ ಶ್ರೀ ಹರಿಯ ಧ್ಯಾನ ಮಾಡುತ್ತ ನೀರಿನಲ್ಲಿ ಇಳಿಯಬೇಕು. ಆಗ ಈ ಮಂತ್ರವನ್ನು ಹೇಳಬೇಕು.

**ಅಶ್ವಮೇಧಾಂಗ ಸಂಭೂತ! ತೀರ್ಥ! ಸರ್ವಾಘನಾಶನ ।**
**ಸ್ನಾನಂ ತ್ವಯಿ ಕರೋಮ್ಯದ್ಯ ಪಾಪಂ ಹರ ನಮೋಽಸ್ತು ತೇ ॥**
**(ನಾ. ಉತ್ತರ ೬೦-೩೦)**

ಅಶ್ವಮೇಧ ಯಜ್ಞದ ಅಂಗದಿಂದ ಉತ್ಪನ್ನನಾದ ಸಂಪೂರ್ಣ ಪಾಪನಾಶಕವಾದ ತೀರ್ಥನೇ! ಈ ದಿನ ನಿನ್ನ ನೀರಿನಲ್ಲಿ ನಾನು ಸ್ನಾನ ಮಾಡುತ್ತೇನೆ. ನನ್ನ ಪಾಪವನ್ನು ನಾಶಮಾಡು. ನಿನಗೆ ನಮಸ್ಕಾರ.'' ಈ ರೀತಿ ಮಂತ್ರೋಚ್ಚಾರಣ ಮಾಡುತ್ತಾ ವಿಧಿಪೂರ್ವಕವಾಗಿ ಸ್ನಾನಮಾಡಿ, ದೇವ, ಋಷಿಗಳಿಗೂ ಮತ್ತಿತರಿಗೂ ತೀರ್ಥಜಲದಿಂದ ತರ್ಪಣಕೊಟ್ಟು, ಪಿತೃಗಳಿಗೆ ತಿಲತರ್ಪಣವನ್ನು ಕೊಟ್ಟು, ಮೌನವಾಗಿ ಸ್ವಲ್ಪ ಹೊತ್ತು ಇದ್ದು ಆಚಮನ ಮಾಡಬೇಕು. ಅನಂತರ ಪಿತೃಗಳಿಗೆ ಪಿಂಡದಾನ ಮಾಡಿ ಪುರುಷೋತ್ತಮನ ಪೂಜೆಯನ್ನು ಮಾಡಬೇಕು. ಹೀಗೆ ತೀರ್ಥಸ್ನಾನಮಾಡುವ ಮಾನವನು ಹತ್ತು ಅಶ್ವಮೇಧ ಯಜ್ಞಗಳ ಫಲವನ್ನು ಪಡೆಯುತ್ತಾನೆ. ಈ ರೀತಿ ಪಂಚತೀರ್ಥಗಳ ಸೇವನೆ ಮಾಡಿ ಏಕಾದಶಿಯ ದಿನ ಉಪವಾಸ ಮಾಡಬೇಕು.

## ಜ್ಯೇಷ್ಠ ಶುದ್ಧ ಹುಣ್ಣಿಮೆಯ ದಿನ ಶ್ರೀ ಕೃಷ್ಣ, ಬಲರಾಮ ಮತ್ತು ಸುಭದ್ರೆಯರ ಅಭಿಷೇಕೋತ್ಸವ

ಜ್ಯೇಷ್ಠ ಶುಕ್ಲ ಹುಣ್ಣಿಮೆಯ ದಿನ ಶ್ರೀ ಕೃಷ್ಣನ ದರ್ಶನ ಮಾಡುವವನು, ಹಿಂದೆ ಹೇಳಿದ ಫಲವನ್ನೆಲ್ಲ ಪಡೆಯುತ್ತಾನೆ. ದಿವ್ಯಲೋಕದಲ್ಲಿ ಬಹುಕಾಲ ವಿಹಾರ ಮಾಡಿ ಪುನರಾವೃತ್ತಿ ರಹಿತವಾದ ಪರಮ ಪದವನ್ನೇ ಹೊಂದುತ್ತಾನೆ. ಭೂಮಿಯಲ್ಲಿರುವ ಎಲ್ಲ ತೀರ್ಥಗಳು ನದಿ, ಸರೋವರ, ಪುಷ್ಕರಿಣಿ, ಕೆರೆ ಇಳಿಭಾವಿ, ಮಡು ಸಮುದ್ರ ಎಲ್ಲವೂ ಜ್ಯೇಷ್ಠ ಶುಕ್ಲ ದಶಮಿಯಿಂದ ಹುಣ್ಣಿಮೆಯ ವರೆಗೆ ಪುರುಷೋತ್ತಮ ತೀರ್ಥದಲ್ಲಿ ವಾಸಿಸುತ್ತವೆ. ಇದು ಎಲ್ಲ ತೀರ್ಥಗಳ ನಿಯಮವು. ಸತಿ ಮೋಹಿನಿ! ಆದ್ದರಿಂದ ಆಗ ಅಲ್ಲಿ ಮಾಡುವ ಸ್ನಾನ ದಾನ ದೇವದರ್ಶನ, ಮೊದಲಾದ ಎಲ್ಲ ಪುಣ್ಯ ಕಾರ್ಯಗಳೂ ಅಕ್ಷಯ ಫಲವನ್ನು ಕೊಡುತ್ತವೆ. ಮೋಹಿನಿ! ಜ್ಯೇಷ್ಠ ಮಾಸದ ಶುಕ್ಲ ಪಕ್ಷದ ದಶಮಿಯು ದಶ (ಹತ್ತು) ವಿಧಪಾಪವನ್ನು ಪರಿಹರಿಸುವುದರಿಂದ 'ದಶಹರಾ' ಎಂದು ಪ್ರಸಿದ್ಧವಾಗಿದೆ. ಆ ದಿನ ನಿಯಮದಲ್ಲಿದ್ದು ಬಲರಾಮ ಶ್ರೀ ಕೃಷ್ಣ ಸುಭದ್ರಾ ದೇವಿಯರ ದರ್ಶನ ಮಾಡಿದವನು ವಿಷ್ಣು ಲೋಕಕ್ಕೆ ಹೋಗುತ್ತಾನೆ. ಯಾವ ಮಾನವನು ಫಾಲ್ಗುಣದ ಹುಣ್ಣಿಮೆಯ ದಿನ, ಏಕಚಿತ್ತನಾಗಿ ಡೋಲೋತ್ಸವದಲ್ಲಿ ಉಯ್ಯಾಲೆಯಲ್ಲಿ ತೂಗಿಸಿಕೊಳ್ಳುತ್ತಿರುವ ಪುರುಷೋತ್ತಮನನ್ನು ನೋಡುತ್ತಾನೋ ಅವನು ಪುರುಷೋತ್ತಮ ಲೋಕವನ್ನೇ ಪಡೆಯುತ್ತಾನೆ. ವಿಷ್ಣುವಿನ ಯೋಗದಲ್ಲಿ ವಿಧಿ ಪೂರ್ವಕವಾಗಿ ಪಂಚತೀರ್ಥಗಳನ್ನು ಸೇವಿಸಿ ಬಲರಾಮ ಶ್ರೀ ಕೃಷ್ಣ ಸುಭದ್ರೆಯರ ದರ್ಶನ ಮಾಡುವವನು ಸಮಸ್ತ ಯಜ್ಞಗಳ ದುರ್ಲಭವಾದ ಫಲವನ್ನೇ ಪಡೆಯುತ್ತಾನೆ. ಮತ್ತು ಸಮಸ್ತ ಪಾಪ ಮುಕ್ತನಾಗಿ ವಿಷ್ಣು ಲೋಕಕ್ಕೆ ಹೋಗುತ್ತಾನೆ. ವೈಶಾಖ ಶುಕ್ಲ ಪಕ್ಷದ ತೃತೀಯಾ ದಿನ ಗಂಧಾನುಲಿಪ್ತನಾದ

ಶ್ರೀಕೃಷ್ಣನ ದರ್ಶನ ಮಾಡುವವನು ವಿಷ್ಣುಲೋಕವನ್ನು ಪಡೆಯುತ್ತಾನೆ. ಜ್ಯೇಷ್ಠ ಮಾಸದ ಹುಣ್ಣಿಮೆಯ ದಿನ ವೃಷಭ ರಾಶಿಯಲ್ಲಿ ಸೂರ್ಯನೂ, ಜ್ಯೇಷ್ಠಾ ನಕ್ಷತ್ರದ ಯೋಗವೂ ಇದ್ದಾಗ 'ಮಹಾಜ್ಯೇಷ್ಠೀ ಪೂರ್ಣಿಮಾ ಇರುತ್ತದೆ. ಆ ದಿವಸ ಭಕ್ತರು ಅವಶ್ಯವಾಗಿ ಪುರುಷೋತ್ತಮ ಕ್ಷೇತ್ರದ ಯಾತ್ರೆಯನ್ನು ಮಾಡಿ ಶ್ರೀ ಕೃಷ್ಣ ಬಲರಾಮ ಸುಭದ್ರೆಯರ ದರ್ಶನವನ್ನು ಮಾಡಿದರೆ ಹನ್ನೆರಡು ಯಾತ್ರೆಗಳ ಫಲವು ಲಭಿಸುತ್ತದೆ.

ಪ್ರಯಾಗ, ಕುರುಕ್ಷೇತ್ರ, ನೈಮಿಷಾರಣ್ಯ, ಪುಷ್ಕರ, ಗಯಾ, ಹರಿದ್ವಾರ, ಕುಶಾವರ್ತ, ಗಂಗಾಸಾಗರ ಸಂಗಮ, ಕೋಕಾಮುಖ, ಸೂಕರತೀರ್ಥ, ಮಥುರಾ, ಮರುಸ್ಥಲ, ಶಾಲಗ್ರಾಮತೀರ್ಥ, ವಾಯು ತೀರ್ಥ, ಮಂದರಾಚಲ, ಸಿಂಧುಸಾಗರ ಸಂಗಮ, ಪಿಂಡಾರಕ, ಚಿತ್ರಕೂಟ, ಪ್ರಭಾಸ, ಕನಖಲ, ಶಂಖೋದ್ಧಾರ, ದ್ವಾರಕಾ, ಬದರಿಕಾಶ್ರಮ, ಲೋಹಕೂಟ, ಸರ್ವಪಾಪ ಮೋಚನ, ಅಶ್ವತೀರ್ಥ, ಕರ್ದಮಾಲ, ಪೃಥೂದಕ, ಉತ್ಪಲಾವರ್ತಕ, ಪೃಥುತುಂಬ, ಕುಬ್ಜತೀರ್ಥ, ಏಕಾಮ್ರಕ, ಕೇದಾರ, ಕಾಶಿ, ವಿರಜ, ಕಾಲಂಜರ, ಗೋಕರ್ಣ, ಶ್ರೀ ಶೈಲ, ಗಂಧಮಾದನ, ಮಹೇಂದ್ರ, ಮಲಯ, ವಿಂಧ್ಯ, ಪಾರಿಯಾತ್ರ, ಹಿಮಾಲಯ, ಸಹ್ಯ, ಶಕ್ತಿಮಾನ್, ಗೋಮಾನ್, ಅರ್ಬುದ, ಗಂಗಾ, ಯಮುನಾ, ಸರಸ್ವತೀ, ಗೋಮತೀ, ಬ್ರಹ್ಮಪುತ್ರ, ಇತ್ಯಾದಿ ತೀರ್ಥಗಳಲ್ಲಿ ಯಾವ ಪುಣ್ಯ ಉಂಟಾಗುತ್ತದೆಯೋ ಮಹಾ ಭಾಗ್ಯಶಾಲಿಯಾದ ಮೋಹಿನಿಯೇ, ಗೋದಾವರೀ, ಭೀಮರಥೀ, ತುಂಗಭದ್ರಾ, ನರ್ಮದಾ, ತಾಪೀ, ಪಯೋಷ್ಣಿ, ಕಾವೇರೀ, ಕ್ಷಿಪ್ರಾ, ಚರ್ಮಣ್ವತೀ, ವಿತಸ್ತಾ (ಝೀಲಂ) ಚಂದ್ರಭಾಗಾ (ಚೀನಾಬ್) ಶತದ್ರೂ (ಸಟಲಜ) ಬಾಹುದಾ, ಋಷಿಕುಲ್ಯಾ, ಮರುದ್ವಲ್ಲಧಾ (ವ್ಯಾಸ) ವಿಪಾಶಾ, ದೃಷದ್ವತೀ, ಸರಯೂ, ಆಕಾಶಗಂಗಾ, ಗಂಡಕೀ, ಮಹಾನದೀ, ಕೌಶಿಕೀ, (ಕೋಸೀ) ಕರತೋಯಾ, ತ್ರಿಪ್ರೋಪಾ, ಮಧುವಾಹಿನೀ, ಮಹಾನದೀ, ವೈತರಣೀ ಇನ್ನೂ ಇಲ್ಲಿ ಹೆಸರು ಹೇಳದಿರುವ ಬೇರೆ ಬೇರೆ ಯಾವ ನದಿಗಳಿವೆಯೋ ಅವುಗಳಲ್ಲಿ ಮಾಡಿದ ಸ್ನಾನದಾನಾದಿಗಳು ಶ್ರೀ ಕೃಷ್ಣ ದರ್ಶನಕ್ಕೆ ಸಮಾನವಾದ ಪುಣ್ಯವನ್ನು ಕೊಡಲಾರವು. ಸೂರ್ಯಗ್ರಹಣದ ಸಮಯದ ಸ್ನಾನ ಮತ್ತು ದಾನಗಳಿಂದ ಯಾವ ಪುಣ್ಯವು ಬರುತ್ತದೆಯೋ ಅದು ಮಹಾಜ್ಯೇಷ್ಠೀ, ಪೂರ್ಣಿಮೆಯಲ್ಲಿ ಶ್ರೀಕೃಷ್ಣದರ್ಶನದಿಂದ ಪ್ರಾಪ್ತವಾಗುತ್ತದೆ.

ಅಲ್ಲಿ ಪವಿತ್ರವಾದ ಸರ್ವತೀರ್ಥಮಯವಾದ ಒಂದು ಭಾವಿಯಿದೆ. ಜ್ಯೇಷ್ಠ ಮಾಸದ ಪೂರ್ಣಿಮೆಯ ದಿನ ಪಾತಾಲಗಂಗಾ ಮತ್ತು ಭೋಗವತಿಗಳು ಅಲ್ಲಿ ಪ್ರತ್ಯಕ್ಷ ವಾಗುವುದರಿಂದ, ಆ ದಿನ ಶ್ರೀ ಕೃಷ್ಣ, ಬಲರಾಮ, ಸುಭದ್ರೆಯರ ಅಭಿಷೇಕಕ್ಕೋಸ್ಕರ ಆ ಭಾವಿಯಿಂದ ನೀರನ್ನು ಸುವರ್ಣ ಕಲಶಗಳಲ್ಲಿ ತುಂಬಿಸಿ ತೆಗೆದುಕೊಂಡು ಹೋಗುತ್ತಾರೆ. ಅಭಿಷೇಕಕ್ಕೋಸ್ಕರ ದೃಢವಾದ, ಇತ್ತ ಅತ್ತ ತೆಗೆದುಕೊಂಡು ಹೋಗಲು ಸಾಧ್ಯವಿರುವ ಮಂಚವನ್ನು ತಯಾರಿಸುತ್ತಾರೆ. ಅದನ್ನು ಪತಾಕೆಗಳು, ವಸ್ತ್ರ ಪುಷ್ಪಗಳಿಂದ ಅಲಂಕರಿಸುತ್ತಾರೆ. ಅಲ್ಲಿ ಧೂಪವನ್ನಿಟ್ಟು ಸುವಾಸನೆ ಗೊಳಿಸಿರುತ್ತಾರೆ.

ವಿಸ್ತಾರವಾದ ಆ ಮಂಚದಲ್ಲಿ ಭಗವನ್ಮೂರ್ತಿಗಳನ್ನಿಡುವುದಕ್ಕಾಗಿ ಸುಂದರವಾದ ವಸ್ತ್ರವನ್ನು ಹಾಸಿರುತ್ತಾರೆ. ಮೇಲಿನಿಂದ ಮುತ್ತಿನ ಹಾರಗಳನ್ನು ಇಳಿಬಿಟ್ಟಿರುತ್ತಾರೆ. ಒಂದು ಪಕ್ಕದಲ್ಲಿ ಶ್ರೀ ಕೃಷ್ಣ, ಇನ್ನೊಂದು ಪಕ್ಕದಲ್ಲಿ ಬಲರಾಮ, ಅವರ ಮಧ್ಯದಲ್ಲಿ ಸುಭದ್ರೆ ಇವರ ಮೂರ್ತಿಗಳನ್ನಿಟ್ಟು, ಜಯ ಜಯಕಾರ ಮತ್ತು ಮಂಗಲ ಘೋಷಗಳಿಂದ

ಆ ಮೂರ್ತಿಗಳಿಗೆ ಸ್ನಾನ ಮಾಡಿಸುತ್ತಾರೆ. ಮೋಹಿನಿ, ಆ ಸಮಯದಲ್ಲಿ ಬ್ರಾಹ್ಮಣರು, ಕ್ಷತ್ರಿಯ ವೈಶ್ಯ, ಶೂದ್ರ ಮತ್ತಿತರ ಜಾತಿಯ ಸ್ತ್ರೀ ಪುರುಷರೂ ಭಗವಂತನ ಮೂರ್ತಿಯ ಸುತ್ತಲೂ ಜಯಘೋಷ ಮಾಡುತ್ತಾ ಸ್ತೋತ್ರ ಮಾಡುತ್ತ ನಿಂತಿರುತ್ತಾರೆ. ಗೃಹಸ್ಥರು, ಸ್ನಾತಕರು, ಸನ್ಯಾಸಿಗಳು ಮತ್ತು ಬ್ರಹ್ಮಚಾರಿಗಳು, ಪುಷ್ಪಮಿಶ್ರಿತವಾದ ಹಿಂದೆ ಹೇಳಿದ ತೀರ್ಥಜಲಗಳನ್ನು ಬಂಗಾರದ ಕಲಶಗಳ ಮೂಲಕವಾಗಿ ಆ ಭಗವನ್ಮೂರ್ತಿಗಳ ಮೇಲೆ ಸುರಿಯುತ್ತಾರೆ. ಆ ಸಮಯದಲ್ಲಿ ವೇದ ಪಾರಾಯಣ ಸಾಮಗಾನ, ನಾನಾ ವಿಧ ಸ್ತೋತ್ರಗಳು ಇವುಗಳಿಂದ ಆ ಪ್ರದೇಶವೆಲ್ಲವೂ ಶಬ್ದಮಯವಾಗಿರುತ್ತದೆ. ಆಕಾಶದಲ್ಲಿ ಯಕ್ಷ, ವಿದ್ಯಾಧರ, ಸಿದ್ಧರು, ಕಿನ್ನರರು, ಅಪ್ಸರ ಸ್ತ್ರೀಯರು, ದೇವತೆಗಳು, ಗಂಧರ್ವರು, ಚಾರಣರು, ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ವಿಶ್ವೇದೇವತೆಗಳು, ಮರುತ್ತುಗಳು, ಲೋಕಪಾಲಕರು, ಭೂಲೋಕದಲ್ಲಿ ಮತ್ತಿತರ ಮಾನವರು ಭಗವಂತನಾದ ಪುರುಷೋತ್ತಮನನ್ನು ಈ ರೀತಿ ಪೂಜಿಸುತ್ತಾರೆ.

**ನಮಸ್ತೇ ದೇವದೇವೇಶ । ಪುರಾಣ ಪುರುಷೋತ್ತಮ ।**
**ಸರ್ಗಸ್ಥಿತ್ಯಂತಕೃದ್ದೇವ । ಲೋಕನಾಥ । ಜಗತ್ಪತೇ ॥**
**ತ್ರೈಲೋಕ್ಯಶರಣಂ ದೇವಂ ಬ್ರಹ್ಮಣ್ಯಂ ಮೋಕ್ಷಕಾರಣಂ ।**
**ತ್ವಾಂ ನಮಸ್ಯಾಮಹೇ ಭಕ್ತ್ಯಾ ಸರ್ವಕಾಮಫಲಪ್ರದಂ ॥**

**(ನಾ.ಉತ್ತರ ೬೦-೫೩-೫೫)**

ದೇವದೇವೇಶ್ವರ! ಪುರಾಣ ಪುರುಷೋತ್ತಮ! ನಿನಗೆ ನಮಸ್ಕಾರ. ಜಗತ್ ಪಾಲಕ ಭಗವಂತ ಜಗನ್ನಾಥ! ನೀನು ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುತ್ತೀ. ತ್ರೈಲೋಕ್ಯ ರಕ್ಷಕ. ಬ್ರಾಹ್ಮಣಪ್ರಿಯ, ಮೋಕ್ಷಕಾರಣನಾದ ಸರ್ವ ವಿಧವಾದ ಮನೋಬೀಷ್ಟದಾಯಕನಾದ, ಆ ಭಗವಂತನಿಗೆ ನಾವು ನಮಸ್ಕಾರ ಮಾಡುತ್ತೇವೆ.'' ಮೋಹಿನಿ! ಈ ರೀತಿ ಆಕಾಶದಲ್ಲಿ ಬಂದು ನಿಂತಿರುವ ದೇವತೆಗಳು ಶ್ರೀ ಕೃಷ್ಣ, ಮಹಾಬಲಶಾಲಿ ಬಲರಾಮ ಮತ್ತು ಸುಭದ್ರೆಯರನ್ನು ಸ್ತುತಿಸುತ್ತಾ ಇರುತ್ತಾರೆ. ದೇವತಾ ವಾದ್ಯಗಳ ದಿವ್ಯಧ್ವನಿಯೂ ಕೇಳಿಸುತ್ತಿರುತ್ತದೆ. ತಂಪಾದ ಗಾಳಿಯು ಬೀಸುತ್ತಿರುತ್ತದೆ. ಆಕಾಶದಲ್ಲಿ ಎಲ್ಲಾ ಕಡೆಯಿಂದ ಬಂದಿರುವ ಮೇಘಗಳು, ಪುಷ್ಪ ಮಿಶ್ರಿತವಾದ ಜಲವನ್ನು ಸುರಿಸುತ್ತವೆ. ಮುನಿಸಿದ್ಧಚಾರಣರ ಜಯಜಯಕಾರ ದೊಡನೆ ಇಂದ್ರಾದಿ ದೇವತೆಗಳೂ, ಋಷಿ, ಪಿತೃ, ಪ್ರಜಾಪತಿ, ನಾಗ ಮತ್ತಿತರ ದಿವ್ಯಲೋಕ ವಾಸಿಗಳೂ ಮಂಗಳ ಸಾಮಗ್ರಿಗಳ ಸಹಿತವಾಗಿ ಮಂತ್ರಯುಕ್ತವಾಗಿ ಭಗವಂತನಿಗೆ ದಿವ್ಯ ಜಲಾಭಿಷೇಕವನ್ನು ಮಾಡುತ್ತಾರೆ.

## ಅಭಿಷೇಕ ಕಾಲದಲ್ಲಿ ದೇವತೆಗಳು ಮಾಡಿದ ಜಗನ್ನಾಥನ ಸ್ತೋತ್ರ

**ಪುರೋಹಿತರು:-** ''ಬ್ರಹ್ಮ ಪುತ್ರಿಯಾದ ಮೋಹಿನಿಯೇ! ಅಭಿಷೇಕ ಕಾಲದಲ್ಲಿ ದೇವತೆಗಳು ಮಾಡುವ ಮನೋಹರವಾದ ಸ್ತೋತ್ರವನ್ನು ಕೇಳು.''

**ದೇವತೆಗಳು:-** ಸಮಸ್ತ ಲೋಕಪಾಲಕನಾದ ಭಗವಂತ, ನಿನಗೆ, ಜಯವಾಗಲಿ, ಜಯವಾಗಲಿ, ಪದ್ಮನಾಭ, ಧರಣೀಧರ, ಆದಿದೇವ, ನಿನಗೆ ಜಯವಾಗಲಿ, ವಾಸುದೇವ, ಮತ್ಸ್ಯರೂಪಿ, ದೇವಶ್ರೇಷ್ಠ, ಸಮುದ್ರಶಯನ, ಮಾಧವ, ಯೋಗೇಶ್ವರ, ನಿನಗೆ

ಜಯವಾಗಲಿ, ವಿಶ್ವಮೂರ್ತಿ, ಚಕ್ರಧರ, ಶ್ರೀನಿವಾಸ, ಕೂರ್ಮರೂಪಿ, ಶೇಷಶಯನ, ಧರ್ಮಾಧಾರ, ಗುಣಧಾರ, ನಿನಗೆ ಜಯವಾಗಲಿ. ಶಾಂತಿಕರ, ಜ್ಞಾನಮೂರ್ತಿ, ಮನೋವೇದ್ಯ, ಮುಕ್ತಿಕರ, ವಿಮಲದೇಹ, ಸತ್ವಾಧಾರ, ಗುಣ ಸಮೂಹ ರೂಪ! ನಿನಗೆ ಜಯವಾಗಲಿ, ಜಯವಾಗಲಿ. ನಿರ್ಗುಣ ಮೋಕ್ಷಸಾಧಖ ಲಕ್ಷ್ಮೀಪತಿ, ಕಮಲನಯನ ಸೃಷ್ಟಿಕರ! ನಿನಗೆ ಜಯವಾಗಲಿ, ಅಗಸಿಯ ಹೂವಿನಂತಹ ಶ್ಯಾಮಸುಂದರ ವರ್ಣದವನೇ, ಭಕ್ತಿಭಾವಿತನೇ, ಪರಮಶಾಂತನೆ, ನೀಲಾಂಬರಧಾರಿ ಬಲರಾಮ, ಸಾಂಖ್ಯವಂದಿತ! ನಿನಗೆ ಜಯವಾಗಲಿ, ಪಾಪಹಾರಿ, ಜಗನ್ನಾಥ ಬಲರಾಮಾನುಜ! ಅಭೀಷ್ಟಫಲದಾಯಕ, ವನಮಾಲಾಧಾರಿ, ವಿಷ್ಣುವೇ! ನಿನಗೆ ಜಯವಾಗಲಿ.''

ಈ ರೀತಿ ದೇವತೆಗಳು ಸ್ತೋತ್ರ ಮಾಡಿ ಪ್ರಸನ್ನರಾಗುತ್ತಾರೆ. ಅನಂತರ ತಮ್ಮ ಸ್ಥಳಗಳಿಗೆ ಹಿಂತಿರುಗಿ ಹೋಗುತ್ತಾರೆ. ಪುಷ್ಕರ ತೀರ್ಥದಲ್ಲಿ ನೂರು ಬಾರಿ ಕಪಿಲಾ ಗೋದಾನ ಮಾಡಿದರೆ, ಅಥವಾ ನೂರು ಕನ್ಯಾದಾನ ಮಾಡಿದರೆ ಬರುವ ಫಲವು ಮಂಚದಲ್ಲಿ ಅಭಿಷೇಕ ಮಾಡಿಸಿಕೊಳ್ಳುವ ಶ್ರೀ ಕೃಷ್ಣನ ದರ್ಶನ ಮಾಡಿದರೆ ಬರುತ್ತದೆ. ಬಂದವರೆಲ್ಲರಿಗೂ ಅತಿಥಿ ಸತ್ಕಾರ ಮಾಡುವುದರಿಂದ ವಿಧಿಪೂರ್ವಕವಾಗಿ ವೃಷೋತ್ಸರ್ಗ ಮಾಡುವುದರಿಂದ, ಗ್ರೀಷ್ಮ ಋತುವಿನಲ್ಲಿ ಜಲದಾನ ಮಾಡುವುದರಿಂದ ಹಾಗೆಯೇ ಚಾಂದ್ರಾಯಣ, ಮಾಸೋಪವಾಸ, ಸಮಸ್ತ ತೀರ್ಥಗಳಲ್ಲಿ ವ್ರತಾಚರಣ ಮತ್ತು ದಾನ ಮಾಡುವುದರಿಂದ ಬರುವ ಫಲವು ಮಂಚದಲ್ಲಿರುವ ಸುಭದ್ರಾ, ಬಲರಾಮ ಸಹಿತವಾದ ಶ್ರೀ ಕೃಷ್ಣ ದರ್ಶನದಿಂದ ಲಭಿಸುತ್ತದೆ. ಆದ್ದರಿಂದ ಎಲ್ಲರೂ ಪ್ರಯತ್ನ ಪೂರ್ವಕವಾಗಿ ಆ ಸಮಯದಲ್ಲಿ ಭಗವಂತನ ದರ್ಶನವನ್ನು ಮಾಡಬೇಕು. ಮೋಹಿನಿ, ಶ್ರೀ ಕೃಷ್ಣನ ಸ್ನಾನಶೇಷದ ಜಲದಿಂದ, ಪ್ರೋಕ್ಷಣ ಅಭಿಷೇಕಗಳನ್ನು ಮಾಡಿಕೊಂಡರೆ ಬಂಜೆಯು ತುತ್ತವತಿ ಆಗುತ್ತಾಳೆ. ಮಕ್ಕಳು ಹುಟ್ಟಿ ಸಾಯುತ್ತಿರುವ ಸ್ತ್ರೀಯೂ, ದೌರ್ಭಾಗ್ಯ ಪೀಡಿತಳೂ, ಗೃಹಪಿಶಾಚ ಪೀಡಿತಳೂ. ರೋಗಿಣಿ ಸ್ತ್ರೀಯೂ ಶುದ್ಧಳಾಗುತ್ತಾಳೆ. ಆ ಸ್ತ್ರೀಯರ ಮನೋಭಿಲಾಷೆಗಳೂ ಕೈಗೂಡುತ್ತವೆ. ಆದ್ದರಿಂದ ಜಲಶಾಯಿಯಾದ ಭಗವಂತನಾದ ಶ್ರೀ ಕೃಷ್ಣನ ಸ್ನಾನ ಶೇಷ ಜಲದಿಂದ ಮೈಯನ್ನೆಲ್ಲ ಪ್ರೋಕ್ಷಿಸಿಕೊಳ್ಳಬೇಕು. ಸ್ನಾನಾನಂತರ ದಕ್ಷಿಣಾಭಿಮುಖವಾಗಿ ಉತ್ಸವದಿಂದ ಹೊರಟಿರುವ ಶ್ರೀ ಕೃಷ್ಣನ ದರ್ಶನ ಮಾಡಿದವರು ಬ್ರಹ್ಮ ಹತ್ಯಾದಿ ಪಾಪಗಳಿಂದ ಮುಕ್ತರಾಗುತ್ತಾರೆ. ಹಾಗೆಯೇ ಭೂಮಿಯಲ್ಲಿರುವ ಸಮಸ್ತ ತೀರ್ಥ ಕ್ಷೇತ್ರಗಳ ಯಾತ್ರೆಯಿಂದ ಯಾವ ಫಲವು ಬರುತ್ತದೆಯೋ. ಕುಬ್ಜಾಮ್ರ, ಕುರುಕ್ಷೇತ್ರ, ಮತ್ತು ಪುಷ್ಕರ ಮೊದಲಾದ ಬೇರೆ ಬೇರೆ ಕ್ಷೇತ್ರಗಳಲ್ಲಿ, ಸೂರ್ಯಗ್ರಹಣ ಸಮಯದಲ್ಲಿ ಸ್ನಾನ ಮಾಡುವುದರಿಂದ ಪ್ರಾಪ್ತವಾಗುವ ಫಲವೂ, ಹಾಗೆಯೇ ವೇದ, ಶಾಸ್ತ್ರ, ಪುರಾಣ ಮತ್ತು ಮಹಾಭಾರತಗಳಲ್ಲಿ ಉಕ್ತವಾದ ಪುಣ್ಯಕರ್ಮಗಳ ಫಲವೂ ಇದೆಲ್ಲವೂ ದಕ್ಷಿಣಾಭಿಮುಖವಾಗಿ ಹೋಗುತ್ತಿರುವ ಶ್ರೀ ಕೃಷ್ಣ ಬಲರಾಮ ಮತ್ತು ಸುಭದ್ರೆಯರ ದರ್ಶನಮಾತ್ರದಿಂದ ಲಭ್ಯವಾಗುತ್ತದೆ.

## ಗುಂಡಿಚಾ ಯಾತ್ರೆಯ ಮಾಹಾತ್ಮ್ಯೆ

ಗುಂಡಿಚಾ ಎಂಬುದು ಒಂದು ಉದ್ಯಾನ ಮಂದಿರ. ಅದು ಪುರಿ ಜಗನ್ನಾಥದಲ್ಲಿ ಇಂದ್ರದ್ಯುಮ್ನ ಸರೋವರದ ಬಳಿಯಲ್ಲಿದೆ. ಇದನ್ನು ಗುಂಡಿಚಾ ಇತ್ಯಾದಿ

ಹೆಸರುಗಳಿಂದಲೂ ಕರೆಯುತ್ತಾರೆ. ಭಗವಂತನಾದ ಶ್ರೀ ಕೃಷ್ಣ, ಬಲರಾಮ ಮತ್ತು ಸುಭದ್ರೆಯರು ರಥಗಳಲ್ಲಿ ವಿರಾಜಮಾನರಾಗಿ ಯಾವಾಗ ಗುಂಡಿಚಾ ಮಂಟಪದ ಕಡೆಗೆ ಹೋಗುತ್ತಾರೊ ಆಗ ಅವರ ದರ್ಶನ ಮಾಡಿದವರು, ಶ್ರೀ ಹರಿಯ ಲೋಕವನ್ನೇ ಪಡೆಯುತ್ತಾರೆ. ಫಾಲ್ಗುನ ಪೂರ್ಣಿಮೆಯ ದಿನ ಗುಂಡಿಚಾ ಉತ್ಸವ ನಡೆಯುತ್ತದೆ. ಆಗ ಪುರುಷೋತ್ತಮ ಕ್ಷೇತ್ರ ಯಾತ್ರೆ ಮಾಡಿ ಒಂದು ಬಾರಿ ಶ್ರೀ ಹರಿಯ ದರ್ಶನ ಮಾಡಿದವನು ಶ್ರೀ ಹರಿಯ ಲೋಕವನ್ನೇ ಪಡೆಯುತ್ತಾನೆ.

## ದ್ವಾದಶಯಾತ್ರೆಗಳ ಉದ್ಯಾಪನ

ಬ್ರಹ್ಮಪುತ್ರ! ಯಾವಾಗ ಅಲ್ಲಿಯ ಹನ್ನೆರಡು ಯಾತ್ರೆಗಳು ಪೂರೈಸುತ್ತವೆಯೋ ಆಗ ವಿಧಿಪೂರ್ವಕವಾಗಿ ಭಕ್ತನು ಯಾತ್ರೆಗಳ ಉದ್ಯಾಪನ ಮಾಡಿಸಬೇಕು. ಪುರುಷೋತ್ತಮಯಾತ್ರೆಯನ್ನು ಹನ್ನೆರಡು ಬಾರಿ ಮಾಡಿ ಉದ್ಯಾಪನ ಮಾಡಿಸುವುದು ಸಮಸ್ತ ಪಾಪನಾಶಕವು. ಜ್ಯೇಷ್ಠ ಮಾಸದ ಶುಕ್ಲ ಪಕ್ಷದ ಏಕಾದಶಿಯಂದು ಭಗವಂತನ ಸ್ಮರಣೆ ಮಾಡುತ್ತ ಏಕಾಗ್ರ ಚಿತ್ತದಿಂದ ಪವಿತ್ರವಾದ ಯಾವುದಾದರೊಂದು ಜಲಾಶಯಕ್ಕೆ ಹೋಗಿ ಆಚಮನ ಮಾಡಿ ಇಂದ್ರಿಯ ನಿಗ್ರಹ ಪೂರ್ವಕವಾಗಿ ಪವಿತ್ರಭಾವದಿಂದ ಆ ಜಲಾಶಯದಲ್ಲಿ ಎಲ್ಲ ತೀರ್ಥಗಳ ಆವಾಹನ ಮಾಡಬೇಕು. ಶ್ರೀ ಮನ್ನಾರಾಯಣನ ಧ್ಯಾನ ಮಾಡುತ್ತಾ ಶಾಸ್ತ್ರೀಯ ಪದ್ಧತಿಯಿಂದ ಸ್ನಾನ ಮಾಡಬೇಕು. ಸ್ನಾನಾನಂತರ ವಿಧಿಪೂರ್ವಕವಾಗಿ ದೇವತೆಗಳು ಋಷಿಗಳು ಪಿತೃಗಳು ಮತ್ತಿತರ ಸಂಬಂಧಿಗಳು ಇವರ ಹೆಸರನ್ನೆಲ್ಲಾ ಹೇಳುತ್ತಾ ಗೋತ್ರ ನಿರ್ದೇಶ ಮಾಡಿ ತರ್ಪಣ ಕೊಡಬೇಕು. ಅನಂತರ ನೀರಿನಿಂದ ಮೇಲಕ್ಕೆ ಬಂದು ಎರಡು ಸ್ವಚ್ಛವಾದ ವಸ್ತ್ರಗಳನ್ನು ಧರಿಸಿ, ವಿಧಿಪೂರ್ವಕ ಆಚಮನ, ಪ್ರಾಣಾಯಾಮ, ಸಂಧ್ಯಾವಂದನ'' ಸೂರ್ಯೋಪಸ್ಥಾನಗಳನ್ನು ಮಾಡಿ, ಒಂದುನೂರ ಎಂಟುಬಾರಿ ಗಾಯತ್ರೀ ಜಪವನ್ನು ಮಾಡಬೇಕು. ಇದರ ಜೊತೆಗೆ ಸೂರ್ಯನಿಗೆ ಸಂಬಂಧ ಪಟ್ಟಿರುವ ಇತರ ಮಂತ್ರಗಳನ್ನು ಜಪಿಸಿ ಮೂರು ಬಾರಿ ಪ್ರದಕ್ಷಿಣೆ ಮಾಡಿ ಸೂರ್ಯನಮಸ್ಕಾರ ಮಾಡಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರು ವೇದೋಕ್ತ ವಿಧಿಯಿಂದ ವೈದಿಕ ಮಂತ್ರಗಳನ್ನು ಜಪಿಸುತ್ತ ಸ್ನಾನ ಮತ್ತು ಜಪಗಳನ್ನು ಮಾಡಬೇಕು. ಸ್ತ್ರೀಯರು ಮತ್ತು ಶೂದ್ರರು ಸ್ಮೃತಿ ಪುರಾಣೋಕ್ತ ಮಂತ್ರಗಳಿಂದ ಸ್ನಾನ ಮತ್ತು ಜಪಗಳನ್ನು ಮಾಡಬೇಕು.

ಅನಂತರ ಭಕ್ತಿ ಭಾವದಿಂದ ಪುರುಷೋತ್ತಮ ದೇವಾಲಯದೊಳಗೆ ಹೋಗಿ ಕೈ ಕಾಲು ತೊಳೆದುಕೊಂಡು ವಿಧಿವತ್ತಾಗಿ ಆಚಮನ ಮಾಡಿ ಭಗವಂತನಿಗೆ ಮೊದಲು ಘೃತಸ್ನಾನ, ಅನಂತರ ಹಾಲಿನ ಸ್ನಾನವನ್ನು ಮಾಡಿಸಬೇಕು. ಅನಂತರ ಮಧು (ಜೇನು) ಸ್ನಾನ, ಗಂಧೋದಕಸ್ನಾನ, ಚಂದನ ಮಿಶ್ರಿತ ತೀರ್ಥೋದಕ ಸ್ನಾನಗಳನ್ನು ಮಾಡಿಸಿ, ಶ್ರೇಷ್ಠವಾದ ಎರಡು ವಸ್ತ್ರಗಳನ್ನು ಭಕ್ತಿಪೂರ್ವಕವಾಗಿ ಸಮರ್ಪಿಸಬೇಕು. ಚಂದನ, ಅಗುರು, ಕರ್ಪೂರ, ಕುಂಕುಮಕೇಸರಿಗಳ ಲೇಪನವನ್ನು ಮಾಡಬೇಕು. ಅನಂತರ ಕಮಲ ಪುಷ್ಪಗಳಿಂದ ಭಕ್ತಿಪೂರ್ವಕವಾಗಿ ಪುರುಷೋತ್ತಮನ ಪೂಜೆಯನ್ನು ಮಾಡಬೇಕು. ಭೋಗಮೋಕ್ಷ ಪ್ರದವಾದ ಜಗನ್ನಾಥ ಪುರುಷೋತ್ತಮ ಶ್ರೀ ಹರಿಯ ಈ ರೀತಿ ಪೂಜೆಯನ್ನು ಮಾಡಿ ಅನಂತರ, ಭಗವಂತನ ಎದುರು ಅಗುರು, ಗುಗ್ಗುಳ, ಮತ್ತಿತರ ಸುಗಂಧ ವಸ್ತುಗಳಿಂದ

ಕೂಡಿದ, ಘೃತಧೂಪವನ್ನರ್ಪಿಸಬೇಕು. ಮೋಹಿನಿ! ಪರಮಭಕ್ತಿಭಾವದಿಂದ ಹಸುವಿನ ತುಪ್ಪ ಅಥವಾ ಎಳ್ಳೆಣ್ಣೆಯಿಂದ ದೀಪವನ್ನು ಹಚ್ಚಬೇಕು. ಅನಂತರ ಲಡ್ಡು, ಖೀರು, ಹೋಳಿಗೆ, ವಡೆ, ಪೂರಿ, ಖಂಡ ಭಕ್ಷ್ಯ ಮತ್ತು ಫಲಗಳನ್ನು ನಿವೇದಿಸಿ ಪಂಚೋಪಚಾರಗಳಿಂದ ಪುರುಷೋತ್ತಮನನ್ನು ಪೂಜಿಸಿ ''ಓಂ ನಮಃ ಪುರುಷೋತ್ತಮಾಯ'' ಎಂಬ ಮಂತ್ರವನ್ನು ಒಂದು ನೂರ ಎಂಟು (೧೦೮) ಸಲ ಜಪಿಸಬೇಕು. ಅನಂತರ ಭೂಮಿಯಲ್ಲಿ ದಂಡವತ್ ಪ್ರಣಾಮಮಾಡಿ, ಪ್ರಾರ್ಥನೆಗಳಿಂದ ಭಗವಂತನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಬೇಕು. ಅನಂತರ ಪರಮಭಕ್ತಿಯಿಂದ ಪ್ರಾರ್ಥನೆ ಸ್ತೋತ್ರಗಳನ್ನು ಮಾಡುತ್ತಾ ನಾನಾವಿಧ ಪುಷ್ಪಗಳಿಂದ ಸುಂದರವಾದ ಮತ್ತು ವಿಚಿತ್ರವಾದ ಒಂದು ಮಂಟಪವನ್ನು ಭಗವಂತನ ಮೇಲ್ಭಾಗದಲ್ಲಿ ರಚಿಸಬೇಕು. ಆ ಮಂಟಪವು ಮಂಡಲಾಕಾರವಾಗಿರಬೇಕು. ಇಂತಹ ಪುಷ್ಪಮಂಟಪದ ಕೆಳಗೆ ಪರಮ ಪ್ರಸನ್ನನಾಗಿ ಮಂದಹಾಸದಿಂದ ಶೋಭಿಸುತ್ತಿರುವ ಇಂದುವದನನಾದ ನಂದನಂದನ ಗೋವಿಂದ ಪುರುಷೋತ್ತಮನ ಧ್ಯಾನ ಮಾಡುತ್ತ ರಾತ್ರಿಯಲ್ಲಿ ಅಲ್ಲಿಯೇ ಜಾಗರಣಮಾಡಬೇಕು. ಆ ದಿನ ರಾತ್ರಿ ಹರಿಕಥೆ, ಹರಿಕೀರ್ತನ, ಸಂಗೀತ ಭಜನೆಗಳ ವ್ಯವಸ್ಥೆಯನ್ನು ಮಾಡಬೇಕು. ಜ್ಞಾನಿಯಾದ ಭಕ್ತನು ಪುರುಷೋತ್ತಮನ ಧ್ಯಾನ ಪಾರಾಯಣ ಮತ್ತು ಸ್ತೋತ್ರಗಳಿಂದ ರಾತ್ರಿಯನ್ನು ಕಳೆಯಬೇಕು. ಅನಂತರ ನಿರ್ಮಲವಾದ ಪ್ರಭಾತಕಾಲದಲ್ಲಿ ದ್ವಾದಶಿಯ ದಿನ ಹನ್ನೆರಡು ಮಂದಿ ಬ್ರಾಹ್ಮಣರನ್ನು ಭೋಜನಕ್ಕಾಗಿ ಆಹ್ವಾನಿಸಬೇಕು. ಆಸ್ತಿಕರು, ವೇದಪಾರಂಗತರು, ಇತಿಹಾಸ ಪುರಾಣಗಳನ್ನು ತಿಳಿದವರು. ಶ್ರೋತ್ರಿಯರೂ ಜಿತೇಂದ್ರಿಯರೂ ಆದ ಬ್ರಾಹ್ಮಣರನ್ನು ಭಕ್ತಿಯಿಂದ ಆಹ್ವಾನಿಸಿ, ತಾನು ಹಿಂದಿನಂತೆಯೇ ವಿಧಿಪೂರ್ವಕವಾಗಿ ಸ್ನಾನಮಾಡಿ, ಶುಭ್ರ ವಸ್ತ್ರಗಳನ್ನು ಧರಿಸಿ ಹಿಂದಿನಂತೆಯೇ ಪುರುಷೋತ್ತಮನಿಗೆ ಸ್ನಾನ ಮಾಡಿಸಬೇಕು. ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಫಲೋಪಹಾರ ಮುಂತಾದವುಗಳಿಂದ ಪೂಜಿಸಿ, ನಮಸ್ಕಾರ, ಪ್ರದಕ್ಷಿಣೆ ಪ್ರಾರ್ಥನೆ ಸ್ತೋತ್ರ, ಮನೋಹರವಾದ ಗೀತ ವಾದ್ಯಗಳಿಂದ ಭಗವಂತನನ್ನು ಪ್ರಸನ್ನಗೊಳಿಸಬೇಕು. ದೇವರ ಪೂಜೆಯ ಅನಂತರ ಹಿಂದೆ ಆಮಂತ್ರಿಸಿರುವ ಹನ್ನೆರಡು ಮಂದಿ ಬ್ರಾಹ್ಮಣರನ್ನು ಪೂಜಿಸಿ, ಅವರಿಗೆ ಛತ್ರಿ, ಪಾದುಕೆ ಸುವರ್ಣ ಕಂಚಿನಪಾತ್ರೆಗಳನ್ನು ದಾನಮಾಡಿ, ಹನ್ನೆರಡು ಗೋದಾನ ಮಾಡಬೇಕು. ಅನಂತರ ಬ್ರಾಹ್ಮಣರಿಗೆ ಖೀರು ಮತ್ತು ಸಕ್ಕರೆಯ ಭಕ್ಷ್ಯಗಳಿಂದ ಕೂಡಿದ ಉತ್ತಮ ಭೋಜನವನ್ನು ಮಾಡಿಸಬೇಕು. ಅವರೆಲ್ಲರೂ ಭೋಜನ ಮಾಡಿ ತೃಪ್ತರಾಗಿ ಪ್ರಸನ್ನರಾಗಿದ್ದಾಗ ಅವರಿಗೆ ಜಲಪೂರ್ಣವಾದ ಹನ್ನೆರಡು ಕುಂಭಗಳನ್ನೂ, ಲಡ್ಡು ಮತ್ತು ದಕ್ಷಿಣೆಯನ್ನೂ ಕೊಡಬೇಕು. ಬ್ರಹ್ಮಪುತ್ರಿ! ಅನಂತರ ವಿಷ್ಣು ಭಕ್ತನಾದ ಜ್ಞಾನದಾತನಾದ ಗುರುವನ್ನು ಪೂರ್ಣಭಕ್ತಿಯಿಂದ ಪೂಜಿಸಿ, ಅವನಿಗೆ ಸುವರ್ಣ, ವಸ್ತ್ರ, ಗೋವು, ಧಾನ್ಯ, ದ್ರವ್ಯ ಮತ್ತಿತರ ಮನೋಭೀಷ್ಟ ವಸ್ತುಗಳನ್ನು ಕೊಟ್ಟು ಪೂಜೆಯನ್ನು ಸಾಂಗಗೊಳಿಸಬೇಕು. ಅನಂತರ ನಮಸ್ಕಾರ ಮಾಡಿ ಕೆಳಗಿನ ಮಂತ್ರವನ್ನು ಉಚ್ಚರಿಸಬೇಕು.

ಸರ್ವವ್ಯಾಪೀ ಜಗನ್ನಾಥಃ ಶಂಖ ಚಕ್ರ ಗದಾಧರಃ ।
ಅನಾದಿ ನಿಧನೋ ದೇವಃ ಪ್ರೀಯತಾಂ ಪುರುಷೋತ್ತಮಃ

ನಾ. ಉತ್ತರ ೬೧-೭೪

ಶಂಖ ಚಕ್ರಗದಾಧಾರಿಯಾದ,ಸರ್ವವ್ಯಾಪ್ತ, ಅನಾದಿ ಅನಂತ. ಜಗದೀಶ್ವರನಾದ

ಪುರುಷೋತ್ತಮನು ನನ್ನ ಮೇಲೆ ಪ್ರಸನ್ನನಾಗಲಿ''. ಈ ರೀತಿ ಪ್ರಾರ್ಥನೆ ಮಾಡಿ ಬ್ರಾಹ್ಮಣರಿಗೆ ಆದರ ಪೂರ್ವಕವಾಗಿ ಮೂರು ಬಾರಿ ಪ್ರದಕ್ಷಿಣೆ ಮಾಡಿ ಅವರ ಕಾಲುಗಳ ಮೇಲೆ ತಲೆಯಿಟ್ಟು ನಮಸ್ಕರಿಸಬೇಕು. ಅನಂತರ ತಾನು ಬಂಧು ಬಾಂಧವರ ಜತೆಗೆ ಭಗವಂತನ ಪ್ರಸಾದವನ್ನು ಸ್ವೀಕರಿಸಬೇಕು. ಭೋಜನ ಮಾಡಬೇಕು. ಈ ರೀತಿಯ ಯಾತ್ರೋದ್ಯಾಪನದಿಂದ, ಪುರುಷರೇ ಆಗಲಿ ಸ್ತ್ರೀಯರೇ ಆಗಲಿ, ಎಲ್ಲ ಭಕ್ತರಿಗೂ ಒಂದು ಸಾವಿರ ಅಶ್ವಮೇಧ ಮತ್ತು ಒಂದು ನೂರು ರಾಜಸೂಯ ಯಾಗಗಳ ಫಲವು ಲಭ್ಯವಾಗುತ್ತದೆ. ಆ ಭಕ್ತನು ಸೂರ್ಯನಂತೆ ತೇಜಸ್ವಿಯಾದ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುತ್ತಾನೆ. ಮೋಹಿನಿ! ಈ ರೀತಿಯಾಗಿ ನಾನು ನಿನಗೆ ಪುರುಷೋತ್ತಮ ಕ್ಷೇತ್ರದ ಯಾತ್ರಾ ವಿಧಾನ, ಉದ್ಯಾಪನ ಇತ್ಯಾದಿಯಾಗಿ ಎಲ್ಲಾ ವಿಷಯವನ್ನು ಹೇಳಿದ್ದೇನೆ. ಇದು ಆ ಪುರುಷೋತ್ತಮನ ಭಕ್ತರಿಗೆ ನಿಸ್ಸಂಶಯ ಯಾಗಿಯೂ ಭೋಗ ಮತ್ತು ಮೋಕ್ಷಪ್ರದವಾಗಿದೆ.

## ಪ್ರಯಾಗ ಮಹಾತ್ಮೆ ಮತ್ತು ತೀರ್ಥಯಾತ್ರಾ ವಿಧಿ

**ವಸಿಷ್ಠರು:-** ಮಾಂಧಾತ ರಾಜ! ಭೋಗ ಮೋಕ್ಷ ಪ್ರದವಾದ ಪುರುಷೋತ್ತಮ ಮಾಹಾತ್ಮ್ಯವನ್ನು ಕೇಳಿ ಬ್ರಹ್ಮಪುತ್ರಿಯಾದ ಮೋಹಿನಿಯು ತನ್ನ ಪುರೋಹಿತರಾದ ಮಹಾಮುನಿ ವಸುಗಳನ್ನು ಪುನಃ ಹೀಗೆ ಕೇಳಿದಳು.

**ಮೋಹಿನಿ:-** ಬ್ರಾಹ್ಮಣ ಶ್ರೇಷ್ಠರೇ, ನಾನು ನಿಮ್ಮ ಮೂಲಕ ಪುರುಷೋತ್ತಮ ಕ್ಷೇತ್ರದ ಅದ್ಭುತ ಮಾಹಾತ್ಮ್ಯವನ್ನು ಕೇಳಿದ್ದಾಯಿತು. ಈಗ ತಾವು ದಯವಿಟ್ಟು ಪ್ರಯಾಗದ ಮಾಹಾತ್ಮ್ಯವನ್ನು ಹೇಳಬೇಕು.

**ಪುರೋಹಿತ ವಸು:-** ಮೋಹಿನಿ! ಕೇಳು, ಮಾನವನು ತೀರ್ಥಯಾತ್ರೆಯ ಶಾಸ್ತ್ರೋಕ್ತವಾದ ಫಲವನ್ನು ಪಡೆಯಬೇಕಾದರೆ ಅನುಸರಿಸಬೇಕಾದ ವಿಧಿಯನ್ನು ಮೊದಲು ನಾನು ನಿನಗೆ ತಿಳಿಸುತ್ತಿದ್ದೇನೆ. ತೀರ್ಥಯಾತ್ರೆಯು ಯಜ್ಞಕ್ಕಿಂತಲೂ ಮಹತ್ತ್ವಪೂರ್ಣವಾದ ಕಾರ್ಯವು. ಅಗ್ನಿಷ್ಟೋಮಾದಿ ಯಾಗಗಳಿಂದಲೂ ದುರ್ಲಭವಾದ ಫಲವು ತೀರ್ಥಯಾತ್ರೆಯಿಂದ ಸಾಧ್ಯವಾಗುತ್ತದೆ. ತಿಳಿಯದೇ ತೀರ್ಥಯಾತ್ರೆ ಮಾಡಿದವನಿಗೂ ಸ್ವರ್ಗ ಧನಧಾನ್ಯಾದಿಗಳು ಭೋಗಸಂಪತ್ತು ಐಶ್ವರ್ಯ - ಜ್ಞಾನಾದಿಗಳು ಸಿಗುತ್ತವೆ. ಅವನ ಪಿತೃಪಿತಾಮಹರು ನರಕದಿಂದ ಉದ್ಧಾರ ಹೊಂದುತ್ತಾರೆ. ಯಾವನ ಕೈಕಾಲು ಮುಂತಾದ ಕರ್ಮೇಂದ್ರಿಯಗಳೂ ಮನಸ್ಸೂ ಸ್ವಾಧೀನವಾಗಿರುತ್ತವೆಯೋ, ಯಾವನು ವಿದ್ಯೆ, ತಪಸ್ಸು, ಮತ್ತು ಕೀರ್ತಿಯಿಂದ ಕೂಡಿರುತ್ತಾನೋ ಅವನಿಗೆ ಮಾತ್ರವೇ ತೀರ್ಥಯಾತ್ರೆಯ ಸಂಪೂರ್ಣ ಫಲವುಂಟಾಗುತ್ತದೆ. ಪ್ರತಿಗ್ರಹವನ್ನು ಮಾಡದೆ, ಅನಾಯಾಸವಾಗಿ ಸಿಕ್ಕಿದ್ದರಿಂದ ಸಂತೋಷ ಪಡುತ್ತ ಅಹಂಕಾರ ಹೀನನಾಗಿರುವವನಿಗೆ ಮಾತ್ರವೇ ತೀರ್ಥಯಾತ್ರೆಯ ಸಂಪೂರ್ಣ ಫಲವುಂಟಾಗುತ್ತದೆ. ಸಂಕಲ್ಪರಹಿತನಾಗಿ, ಲೌಕಿಕ ಪ್ರವೃತ್ತಿ ಶೂನ್ಯನಾಗಿ ಅಲ್ಪಾಹಾರಿಯೂ ಜಿತೇಂದ್ರಿಯನಾಗಿ, ಅನಾಸಕ್ತನಾಗಿರುವ ಸಾಧಕನು ಮಾತ್ರವೇ ತೀರ್ಥಯಾತ್ರೆಯ ಸಂಪೂರ್ಣಫಲಭಾಗಿಯಾಗುತ್ತಾನೆ. ಧೀರನಾದ ಸಾಧಕನು ಶ್ರದ್ಧೆ ಮತ್ತು ಏಕಾಗ್ರಚಿತ್ತದಿಂದ ತೀರ್ಥಗಳಲ್ಲಿ ಸಂಚಾರ ಮಾಡಿದರೆ, ತೀರ್ಥಗಳ ವಿಧಿಯನ್ನು ನಡೆಸಿದರೆ, ಅವನು ಪಾಪಿಯಾದರೂ ಪಾಪ ಮುಕ್ತನಾಗುತ್ತಾನೆ. ಮೊದಲೇ ಶುದ್ಧನಾದವನು ವಿಶೇಷ ಪುಣ್ಯ

ಪಡೆಯುತ್ತಾನೆಂದು ಹೇಳಬೇಕಾಗಿಯೇ ಇಲ್ಲ. ಶ್ರದ್ಧಾರಹಿತನು, ಪರಿಹಾರ ಮಾಡಲು ಅಶಕ್ಯವಾದ ಪಾಪಪೀಡಿತನೂ, ನಾಸ್ತಿಕನೂ, ಸಂಶಯ ಸ್ವಭಾವದವನೂ ಮತ್ತು ಕೇವಲಯುಕ್ತಿವಾದಿಯೂ ಆಗಿರುವ ಮಾನವರು ಎಂದೂ ತೀರ್ಥಯಾತ್ರೆಯ ಫಲವನ್ನು ಹೊಂದುವುದಿಲ್ಲ. ತೀರ್ಥಯಾತ್ರೆಯಿಂದ ಪಾಪಿಗಳ ಪಾಪ ತೊಳೆದು ಹೋಗುವುದಲ್ಲದೆ, ಶುದ್ಧಾಂತಃಕರಣರಾದ ಮಾನವರಿಗೆ ತೀರ್ಥಫಲಗಳೆಲ್ಲವು ಉಂಟಾಗುತ್ತವೆ. ಕಾಮಕ್ರೋಧ, ಲೋಭಗಳನ್ನು ಜಯಿಸಿ ತೀರ್ಥಾಟನ ಮಾಡುವವನಿಗೆ ಯಾವ ವಸ್ತುವೂ ದುರ್ಲಭವಲ್ಲ. ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿ ಯಥೋಕ್ತ ವಿಧಿಯಿಂದ ತೀರ್ಥಯಾತ್ರೆ ಮಾಡುವವರು ನಿಶ್ಚಯವಾಗಿಯೂ ಸ್ವರ್ಗವನ್ನು ಪಡೆಯುತ್ತಾರೆ. ಗಂಗೆಯಲ್ಲಿ ಮೀನುಗಳು ನಿರಂತರ ವಾಸ ಮಾಡುತ್ತವೆ. ಪಕ್ಷಿಗಳು ದೇವಾಲಯದಲ್ಲಿರುತ್ತವೆ. ಆದರೆ ಅವುಗಳ ಹೃದಯದಲ್ಲಿ ಭಕ್ತಿ ಭಾವವಿಲ್ಲದಿರುವುದ ರಿಂದ ಅಂತಹ ಉತ್ತಮ ಸ್ಥಳದಲ್ಲಿದ್ದರೂ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಹೃದಯಕಮಲದಲ್ಲಿ ಯಥೇಚ್ಛವಾಗಿ ಭಗವಂತನ ಭಕ್ತಿಮಕರಂದ ವನ್ನು ಸಂಗ್ರಹಿಸಿಟ್ಟು ಕೊಂಡು ತೀರ್ಥಯಾತ್ರೆಯನ್ನು ಮಾಡಬೇಕು.

ಮುನಿಶ್ರೇಷ್ಠರು ಕೃತ, ಪ್ರಯುಕ್ತ, ಅನುಮೋದಿತ ಎಂಬುದಾಗಿ ಮೂರು ವಿಧ ತೀರ್ಥಯಾತ್ರೆಯನ್ನು ಹೇಳಿರುತ್ತಾರೆ. ಬ್ರಹ್ಮಚಾರಿಯಾದ ಬಾಲಕನು ಇಂದ್ರಿಯಗಳನ್ನು ನಿಗ್ರಹಿಸಿಟ್ಟುಕೊಂಡು ಗುರುವಿನ ಆಜ್ಞೆಯನ್ನು ಪಾಲಿಸುತ್ತ ಇದ್ದರೆ ಅವನಿಗೆ ಮೂರು ವಿಧ ತೀರ್ಥಯಾತ್ರೆಯ ಫಲವೂ ಬರುತ್ತದೆ. ಅಂದರೆ ಬ್ರಹ್ಮಚರ್ಯ ಪಾಲನ, ಇಂದ್ರಿಯ ನಿಗ್ರಹ, ಗುರುಸೇವೆಗಳಿಂದ ಬ್ರಹ್ಮಚಾರಿಗೆ ಗುರುಕುಲದಲ್ಲಿಯೇ ಮೇಲೆ ಹೇಳಿದ ಮೂರು ವಿಧದ ತೀರ್ಥಯಾತ್ರೆಯ ಫಲವೂ ಸಿಗುತ್ತದೆ. ತೀರ್ಥಯಾತ್ರೆಗೆ ಹೊರಡುವವನು, ಮೊದಲು ಮನೆಯಲ್ಲಿಯೇ ಸಂಯಮ ಮತ್ತು ಭಕ್ತಿಭಾವಗಳನ್ನೂ ಬೆಳೆಸಿಕೊಂಡು, ಮೊದಲು ಗಣೇಶನ ಪೂಜೆಯನ್ನು ಮಾಡಬೇಕು. ಅನಂತರ ದೇವತೆಗಳು, ಪಿತೃಗಳು, ಬ್ರಾಹ್ಮಣರು, ಸಾಧುಸಂತರು ಇವರನ್ನು ತನ್ನ ವೈಭವಕ್ಕನುಸಾರವಾಗಿ ಪ್ರಯತ್ನ ಪೂರ್ವಕವಾಗಿ ಸತ್ಕರಿಸಬೇಕು. ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದಾಗಲೂ ದೇವತೆಗಳು ಪಿತೃಗಳು ಮತ್ತು ಬ್ರಾಹ್ಮಣರನ್ನೂ ಸತ್ಕರಿಸಬೇಕು. ಇದರಿಂದ ತೀರ್ಥಯಾತ್ರೆಯ ಸಂಪೂರ್ಣ ಫಲಪ್ರಾಪ್ತಿಯಾಗುತ್ತದೆ. ಪ್ರಯಾಣಕ್ಕೆ ಹೋದಾಗಲೂ ತನ್ನ ಮಾತಾಪಿತೃಗಳ ಮರಣ ಸಂದರ್ಭದಲ್ಲಿಯೂ ತಲೆಗೂದಲನ್ನೆಲ್ಲ ಕತ್ತರಿಸಬೇಕು, ಮುಂಡನ ಮಾಡಿಸಬೇಕು. ಈ ಕಾರಣಗಳಿಲ್ಲದೆ ವ್ಯರ್ಥವಾಗಿ ಶಿರಸ್ಸಿನ ಮುಂಡನ ಮಾಡಿಸಬಾರದು. ಗಯೆಗೆ ಹೋಗುವವನು ಮೊದಲು ವಿಧಿ ಪೂರ್ವಕವಾಗಿ ಶ್ರಾದ್ಧಮಾಡಿ ತೀರ್ಥಯಾತ್ರಿಕನ ವೇಷವನ್ನೂ ಧರಿಸಿ, ತನ್ನ ಹಳ್ಳಿಯ ಪ್ರದಕ್ಷಿಣೆ ಮಾಡಿ ಯಾರಿಂದಲೂ ಏನನ್ನೂ ಸ್ವೀಕರಿಸದೆ ಕಾಲ್ನಡಿಗೆಯಿಂದಲೇ ಯಾತ್ರೆಗೆ ಹೊರಡಬೇಕು. ಗಯಾಯಾತ್ರೆ ಮಾಡುವವನಿಗೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧಯಾಗದ ಫಲವುಂಟಾಗುತ್ತದೆ. ಐಶ್ವರ್ಯಾಭಿಮಾನದಿಂದ, ಅಥವಾ ಮತ್ತಾವುದೋ ವಿಧವಾದ ಲೋಭಮೋಹಗಳಿಂದ ಯಾನಗಳ ಮೂಲಕ ಯಾತ್ರೆ ಮಾಡುವವನ ತೀರ್ಥಯಾತ್ರೆಯು ನಿಷ್ಫಲವಾಗುತ್ತದೆ. (ಇಲ್ಲಿ ಯಾನವೆಂದರೆ ಜೀವವುಳ್ಳ ಪ್ರಾಣಿಗಳಿಂದ ನಡೆಸಲ್ಪಡುವ ವಾಹನವೆಂದು ಅರ್ಥ. ನರಯಾನ, ಹೋರಿ, ಅಶ್ವಯಾನ (ಜಟಕಾ) ಎತ್ತಿನ ಗಾಡಿ ಇತ್ಯಾದಿ. ರೈಲು ಬಸ್ಸು ಮುಂತಾದವುಗಳಿಗೆ ಈ ನಿಷೇಧವಿಲ್ಲ)

ಆದರೂ ಕಾಲ್ನಡಿಗೆಯಿಂದಲೇ ಯಾತ್ರೆ ಮಾಡುವುದು ಸರ್ವೋತ್ತಮ. ಆದ್ದರಿಂದ ನಾನಾ ವಿಧವಾದ ಪ್ರಾಣಿವಾಹನಗಳನ್ನೂ ಉಪಯೋಗಿಸದೆ ಯಾತ್ರೆ ಮಾಡುವುದು ಉತ್ತಮ. ಎತ್ತಿನಗಾಡಿಯಲ್ಲಿ ತೀರ್ಥಯಾತ್ರೆ ಮಾಡಿದರೆ ಗೋಹತ್ಯಾ ಪಾಪವು ಬರುತ್ತದೆ, ಕುದುರೆ ಗಾಡಿಯಿಂದ ಮಾಡಿದ ತೀರ್ಥ ಯಾತ್ರೆಯು ನಿಷ್ಫಲವಾಗುತ್ತದೆ. ಪಲ್ಲಕ್ಕಿ ಡೋಲಿ, ಮುಂತಾದ ನರಯಾನದಿಂದ ಮಾಡಿದ ತೀರ್ಥಯಾತ್ರೆಯು ಅರ್ಧಫಲವನ್ನು ಕೊಡುತ್ತದೆ. ಕಾಲ್ನಡಿಗೆಯಿಂದ ತೀರ್ಥಯಾತ್ರೆ ಮಾಡಿದರೆ ನಾಲ್ಕು ಪಟ್ಟು ಫಲವು ಸಿಗುತ್ತದೆ. ಮಳೆ ಮತ್ತು ಬಿಸಿಲಿನಿಂದ ರಕ್ಷಣೆಗಾಗಿ ಛತ್ರಿಯೂ, ಕೈಯಲ್ಲಿ ದಂಡವೂ, ಮೊನಚಾದ ಕಲ್ಲುಗಳು ಮುಳ್ಳುಗಳಿಂದ ರಕ್ಷಣೆಗಾಗಿ ಕಾಲುಗಳಿಗೆ ಪಾದುಕೆಗಳೂ (ಚಪ್ಪಲಿಗಳೂ) ಬೇಕು. ಇವುಗಳನ್ನು ಧರಿಸಿಯೇ ಯಾತ್ರೆ ಮಾಡಬೇಕು. ಇನ್ನೊಬ್ಬರ ಹಣದಿಂದ ತೀರ್ಥಯಾತ್ರೆ ಮಾಡುವವನಿಗೆ ಹದಿನಾರನೆಯ ಒಂದಂಶ ಫಲ. ಬೇರೆ ಕಾರ್ಯ ಪ್ರಸಂಗದಿಂದ ತೀರ್ಥಯಾತ್ರೆ ಮಾಡಿದವನಿಗೆ ಅರ್ಧಾಂಶ ಫಲವು ಸಿಗುತ್ತದೆ. ತೀರ್ಥದಲ್ಲಿ ಬ್ರಾಹ್ಮಣನ ಪರೀಕ್ಷೆ ಮಾಡಬಾರದು. ಮನುವು ಹೇಳಿದಂತೆ, ಅಲ್ಲಿ ಭಿಕ್ಷುಕನಾಗಿ ಬಂದ ಬ್ರಾಹ್ಮಣನಿಗೂ ಭೋಜನ ಮಾಡಿಸಬೇಕು. ತೀರ್ಥಶ್ರಾದ್ಧವು ಪಿತೃಗಳಿಗೆ ತೃಪ್ತಿಕರವಾದುದರಿಂದ ಯಾವ ಸಮಯದಲ್ಲಿ ತೀರ್ಥಯಾತ್ರೆ ಹೋದರೂ ತೀರ್ಥಶ್ರಾದ್ಧ ಮತ್ತು ಪಿತೃತರ್ಪಣಗಳನ್ನೂ ಅವಶ್ಯವಾಗಿ ಮಾಡಬೇಕು.

ಸಾಧಾರಣ ಸ್ಥಳಕ್ಕಿಂತ ತೀರ್ಥಸ್ಥಾನಗಳು ಹೆಚ್ಚು ಪುಣ್ಯಕರ. ಏಕೆ? ಈ ಪ್ರಶ್ನೆಯ ಉತ್ತರವನ್ನೂ ಕೇಳು. ಹೇಗೆ ದೇಹದ ಕೆಲವು ಅವಯವಗಳು ಹೆಚ್ಚು ಪವಿತ್ರ ಮತ್ತು ಪ್ರಧಾನವೋ ಅದರಂತೆ ಭೂಮಿ, ಜಲ ಮತ್ತು ತೇಜಸ್ಸಿನ ಪ್ರಭಾವದಿಂದ ಮತ್ತು ವಿಶೇಷತಃ ಮುನಿಗಳ ನಿವಾಸದಿಂದ ತೀರ್ಥಗಳು ಹೆಚ್ಚು ಪವಿತ್ರವಾಗಿವೆ. ಗಂಗೆಯ ಸಮೀಪಕ್ಕೆ ಹೋಗಿಯೂ ಮಂಡನ ಮಾಡಿಸಿಕೊಳ್ಳದವನು ಯಾವ ಪುಣ್ಯ ಫಲವನ್ನೂ ಪಡೆಯುವುದಿಲ್ಲ. ನದಿಗಳಲ್ಲಿ ಶ್ರೇಷ್ಠವಾದ ಗಂಗಾನದಿಯ ಬಳಿಗೆ ಹೋಗುವಾಗ ಯಾತ್ರೆ ಮಾಡುವ ಮಾನವನ ಪಾಪಗಳೆಲ್ಲವೂ ಅವನ ಕೇಶದಲ್ಲಿ(ಕೂದಲಿನಲ್ಲಿ) ಆಶ್ರಯವಿರುತ್ತವೆ. ಆದ್ದರಿಂದ ಪಾಪಗಳಿಗೆ ಆಶ್ರಯವಾದ ತಲೆಕೂದಲನ್ನು ತ್ಯಜಿಸಬೇಕು. ಮನುಷ್ಯನ ಎಷ್ಟು ಉಗುರು ಮತ್ತು ರೋಮಕೇಶಗಳು ಗಂಗೆಯಲ್ಲಿ ಬೀಳುತ್ತವೆಯೋ ಅಷ್ಟು ಸಾವಿರ ವರ್ಷಗಳ ವರೆಗೆ ಆ ಮಾನವನು ಸ್ವರ್ಗದಲ್ಲಿ ಸುಖವಾಗಿ ವಾಸಮಾಡುತ್ತಾನೆ. ಯಾತ್ರಿಯ ತಂದೆಯು ಜೀವಂತನಾಗಿದ್ದರೆ ಮೀಸೆಯನ್ನು ಬಿಟ್ಟು ತಲೆಯನ್ನು ಮಾತ್ರ ಮುಂಡನ ಮಾಡಿಸಬೇಕು.

## ಪ್ರಯಾಗದಲ್ಲಿ ಮಾಘ ಮಕರದ ಸ್ನಾನ

**ಪುರೋಹಿತ ವಸು:-** ಮೋಹಿನಿ ಕೇಳು, ನಾನೀಗ ಪ್ರಯಾಗದ ವೇದ ಸಮ್ಮತವಾದ ಮಹಿಮೆಯನ್ನು ಹೇಳುತ್ತೇನೆ. ಪ್ರಯಾಗದಲ್ಲಿ ಸ್ನಾನಮಾಡಿದ ಮಾನವನು ಸರ್ವಥಾ ಶುದ್ಧನಾಗುತ್ತಾನೆ. ಗಂಗೆಯಲ್ಲಿ ಎಲ್ಲಿ ಸ್ನಾನ ಮಾಡಿದರೂ ಕುರುಕ್ಷೇತ್ರಯಾತ್ರೆಗೆ ಸಮಾನವಾದ ಪುಣ್ಯವು ಬರುತ್ತದೆ. ವಿಂಧ್ಯ ಪರ್ವತದ ಸಂಬಂಧವುಳ್ಳ ಗಂಗೆಯ ಸ್ನಾನವು ಅದಕ್ಕಿಂತಲೂ ಹತ್ತು ಪಾಲು ಹೆಚ್ಚು ಪುಣ್ಯವನ್ನು ಕೊಡುತ್ತದೆ ಕಾಶಿಯಲ್ಲಿ ಉತ್ತರವಾಹಿನಿಯಾದ ಗಂಗೆಯಲ್ಲಿ ವಿಂಧ್ಯ ಸಂಯುಕ್ತಳಾದ ಗಂಗೆಗಿಂತಲೂ ನೂರು ಪಾಲು ಹೆಚ್ಚು ಪುಣ್ಯವು ಉಂಟಾಗುತ್ತದೆ. ಗಂಗಾ-ಯಮುನಾ ಸಂಗಮ ಸ್ಥಳವು ಕಾಶಿಗಿಂತಲೂ ನೂರು ಪಾಲು ಹೆಚ್ಚು ಪುಣ್ಯ ಪ್ರದವು.

ಪಶ್ಚಿಮಾಭಿಮುಖಿಯಾದ ಗಂಗೆಯು ಯಮುನೆಯೊಡನೆ ಸೇರುವ ಸ್ಥಳವು ನೂರು ಕಲ್ಪಗಳ ಪಾಪವನ್ನು ಪರಿಹರಿಸುತ್ತದೆ. ಪಶ್ಚಿಮಾಭಿಮುಖಿಯಾದ ಗಂಗೆಯ ದರ್ಶನವು ಬ್ರಹ್ಮಹತ್ಯಾದಿ ಪಾಪವನ್ನು ಪರಿಹರಿಸುತ್ತದೆ. ಭೂಮಿಯಲ್ಲಿರುವ ಅಮೃತವೆಂದೇ ಗಂಗೆಯ ಜಲವನ್ನು ತಿಳಿಯಬೇಕು. ಮಾಘಮಾಸದಲ್ಲಿಯಂತೂ ಗಂಗಾಯಮುನಾ ಸಂಗಮವು ಅತ್ಯಂತ ದುರ್ಲಭ. ಗಂಗಾಯಮುನಾ ಸಂಗಮಕ್ಕೆ 'ವೇಣಿ' ಎಂದು ಹೆಸರು. ಎರಡು ಘಳಿಗೆಯೊಳಗೆ ಅಲ್ಲಿಯ ಸ್ನಾನವು ದೇವತೆಗಳಿಗೂ ದುರ್ಲಭ. ಪೃಥ್ವಿಯಲ್ಲಿರುವ ಎಲ್ಲ ತೀರ್ಥಗಳೂ, ಪುಣ್ಯಪುರಾಣಗಳೂ ಮಾಘದಲ್ಲಿ ಮಕರರಾಶಿಯಲ್ಲಿ ಸೂರ್ಯನಿರುವಾಗ ತ್ರಿವೇಣಿಯಲ್ಲಿ ಸ್ನಾನ ಮಾಡಲು ಬರುತ್ತವೆ. ಬ್ರಹ್ಮ, ವಿಷ್ಣು, ಮಹಾರುದ್ರ, ಆದಿತ್ಯರು, ಮರುತ್ತಗಳು, ಗಂಧರ್ವರು ಲೋಕಪಾಲಕರು, ಯಕ್ಷರು, ಕಿನ್ನರರು, ಗುಹ್ಯಕರು, ಅಣಿಮಾದಿ ಅಷ್ಟೈಶ್ವರ್ಯಸಂಪನ್ನರಾದ ಇತರ ಸಿದ್ಧಪುರುಷರು. ಬ್ರಹ್ಮಾಣೀ, ಲಕ್ಷ್ಮೀ, ಪಾರ್ವತೀ, ಶಚೀ, ಮೇಧಾ, ಅದಿತಿ, ರತಿ, ಇನ್ನಿತರ ಎಲ್ಲ ದೇವ ಪತ್ನಿಯರು ನಾಗಪತ್ನಿಯರು ಎಲ್ಲ ಪಿತೃಗಳು ಎಲ್ಲರೂ ಮಾಘಮಾಸದಲ್ಲಿ ತ್ರಿವೇಣೀ ಸ್ನಾನಮಾಡಲು ಬರುತ್ತಾರೆ. ಕೃತಯುಗದಲ್ಲಿ ಈ ದೇವತೆಗಳು ಸಾಕ್ಷಾತ್ತಾಗಿ ಬರುತ್ತಿದ್ದರು. ಆದರೆ ಕಲಿಯುಗದಲ್ಲಿ ಅದೃಶ್ಯರಾಗಿ ಬರುತ್ತಾರೆ. ಪಾಪಿಗಳ ಪಾಪಗಳನ್ನು ಹೊತ್ತು ಕಪ್ಪಾದ ತೀರ್ಥಗಳು ಮಾಘಮಾಸದಲ್ಲಿ ತ್ರಿವೇಣಿಯಲ್ಲಿ ಸ್ನಾನ ಮಾಡಿದ್ದರಿಂದ ಬಿಳಿಯ ಬಣ್ಣಕ್ಕೆ ತಿರುಗುತ್ತವೆ.

ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ ।
ಸ್ನಾನೇನಾನೇನ ಮೇ ದೇವ ಯಥೋಕ್ತ ಫಲದೋ ಭವ

''ಗೋವಿಂದ ಅಚ್ಯುತ! ಮಾಧವ ದೇವ! ಮಕರರಾಶಿಯಲ್ಲಿ ಸೂರ್ಯನಿರುವಾಗ ಮಾಘಮಾಸದಲ್ಲಿ ತ್ರಿವೇಣಿ ಜಲದಲ್ಲಿ ನಾನು ಮಾಡಿದ ಸ್ನಾನದಿಂದ ನೀನು ಪ್ರಸನ್ನನಾಗಿ ನನಗೆ ಶಾಸ್ತ್ರೋಕ್ತವಾದ ಫಲವನ್ನು ಕೊಡುವವನಾಗು.''

ಈ ಮಂತ್ರೋಚ್ಚಾರಣೆಯನ್ನು ಮಾಡಿ ಮೌನದಿಂದ ಸ್ನಾನಮಾಡಬೇಕು. ವಾಸುದೇವ, ಹರಿ, ಕೃಷ್ಣ, ಮಾಧವ ಇತ್ಯಾದಿ ನಾಮಗಳನ್ನು ಪದೇ ಪದೇ ಸ್ಮರಿಸಬೇಕು. ಉಚ್ಚರಿಸಬೇಕು. ಮಾನವನು ತನ್ನ ಮನೆಯಲ್ಲಿ ೬೦ ವರ್ಷ ಬಿಸಿನೀರಿನಿಂದ ಸ್ನಾನ ಮಾಡಿದ ಫಲವು ಮಕರ ಸೂರ್ಯನ ಮಾಘಮಾಸದಲ್ಲಿ ಒಂದು ಬಾರಿ ಸ್ನಾನ ಮಾಡಿದರೆ ಉಂಟಾಗುತ್ತದೆ. ಕೆರೆ, ಇಳಿಯುವ ಬಾವಿಗಳಲ್ಲಿ ಹನ್ನೆರಡು ವರ್ಷ ಮಾಡಿದ ಸ್ನಾನಕ್ಕೆ ಒಂದು ಬಾರಿ ಪ್ರಯಾಗದಲ್ಲಿ ಮಾಡುವ ಸ್ನಾನವು ಸಮಾನವಾಗಿದೆ. ಪುಷ್ಕರಣಿ ಸ್ನಾನವು ಕೆರೆ ಸ್ನಾನಕ್ಕಿಂತ ದ್ವಿಗುಣ, ನದೀಸ್ನಾನವು ನಾಲ್ಕು ಪಾಲು ಫಲವನ್ನು ಕೊಡುತ್ತದೆ. ದೇವಕುಂಡದಲ್ಲಿ ಆ ಫಲವು ಹತ್ತುಪಾಲು ಹೆಚ್ಚಾದರೆ, ಮಹಾನದಿಯ ಸಂಗಮದಲ್ಲಿ ನೂರು ಪಾಲು ಹೆಚ್ಚಾಗುತ್ತದೆ. ಆದರೆ ಸೂರ್ಯನು ಮಕರ ರಾಶಿಯಲ್ಲಿರುವಾಗ ಗಂಗೆಯಲ್ಲಿ ಸ್ನಾನ ಮಾಡುವುದರಿಂದ ಆ ಫಲವು ಸಾವಿರಪಾಲು ಹೆಚ್ಚಾಗುತ್ತದೆ. ಈ ಪ್ರಯಾಗ ತೀರ್ಥವನ್ನು ಬ್ರಹ್ಮದೇವರೇ ಪ್ರಕಟಗೊಳಿಸಿದ್ದಾರೆ. ಪ್ರಯಾಗ ಸಂಗಮ ಗರ್ಭದಲ್ಲಿ ಬಿಳಿಯ ಬಣ್ಣದ ನೀರು ಅಡಗಿದೆ. ಅದು ಬ್ರಹ್ಮಲೋಕ ಪ್ರಾಪ್ತಿಯ ಸಂಕೇತವಾಗಿದೆ. ಹಿಮಾಲಯದಿಂದ ಹರಿಯುವ ನದಿಗಳಲ್ಲಿ ಮಾಘ ಸ್ನಾನವು ಅತ್ಯಂತ ಶ್ರೇಷ್ಠವಾಗಿದೆ. ಬದರೀ ವನದಲ್ಲಿ ಮಾಘಮಾಸದ ಸ್ನಾನವು ಮತ್ತಷ್ಟು ಉತ್ತಮ ಮತ್ತು ಪಾಪಹಾರಿಯಾಗಿದೆ. ಮೋಕ್ಷಪ್ರದವೂ ಆಗಿದೆ.

ನರ್ಮದಾ ನದಿಯಲ್ಲಿ ಮಾಘಸ್ನಾನವು ಪಾಪನಾಶಕ, ದುಃಖಾಪಹಾರಕ, ಮನೋಭೀಷ್ಟ ದಾಯಕ ಮತ್ತು ರುದ್ರಲೋಕದ ಪ್ರಾಪ್ತಿಗೆ ಕಾರಣವಾಗಿದೆ. ಸರಸ್ವತೀನದಿಯ ಜಲಸ್ನಾನವೂ ಹೀಗೆಯೇ ಫಲಗಳನ್ನು ಕೊಡುತ್ತದೆ. ಮಾಘಮಾಸದ ಗಂಗಾಸ್ನಾನವೂ ಪಾಪವೆಂಬ ಕಟ್ಟಿಗೆಗೆ ಕಾಡ್ಗಿಚ್ಚಿನಂತೆಯೂ, ಮೋಕ್ಷಮಾರ್ಗದ ಸೋಪಾನದಂತೆಯೂ ಇದೆ.

ಸರಯೂ, ಗಂಡಕೀ, ಸಿಂಧು, ಚಂದ್ರಭಾಗಾ, ಕೌಶಿಕೀ, ತಪತಿ, ಗೋದಾವರಿ, ಭೀಮಾ, ಪಯೋಷ್ಣೀ, ಕೃಷ್ಣವೇಣಿ, ಕಾವೇರಿ, ತುಂಗಭದ್ರಾ, ಮತ್ತಿತರ ಸಮುದ್ರ ಗಾಮಿಗಳಾದ ನದಿಗಳಲ್ಲಿ ಸ್ನಾನಮಾಡುವ ಮನುಷ್ಯನು ಪಾಪರಹಿತನಾಗಿ ಸ್ವರ್ಗ ಲೋಕವನ್ನು ಹೊಂದುತ್ತಾನೆ. ನೈಮಿಷಾರಣ್ಯದಲ್ಲಿ ಮಾಘಸ್ನಾನ ಮಾಡುವುದರಿಂದ ಭಗವಂತನಾದ ವಿಷ್ಣುವಿನ ಸಾರೂಪ್ಯವು ಲಭಿಸುತ್ತದೆ. ಬ್ರಹ್ಮಪುತ್ರ, ಗೋಮತೀ ನದಿಯಲ್ಲಿ ಮಾಘಸ್ನಾನ ಮಾಡುವುದರಿಂದ ಪುನಃ ಜನ್ಮವೇ ಉಂಟಾಗುವುದಿಲ್ಲ. ಹೇಮಕೂಟ, ಮಹಾಕಾಲ, ನೀಲಕಂಠ ಹಾಗೂ ಅರ್ಬುದ ತೀರ್ಥಗಳಲ್ಲಿ ಮಾಘ ಸ್ನಾನ ಮಾಡುವುದರಿಂದ ರುದ್ರಲೋಕ ಪ್ರಾಪ್ತಿಯಾಗುತ್ತದೆ. ನೈಮಿಷ, ಗೋತೀರ್ಥ, ಸಿಂಧು, ಸಾಗರಸಂಗಮ, ಧೇನುಕ ಮತ್ತು ಗಂಗಾಸಾಗರ ಸಂಗಮ, ಪುಷ್ಕರ ಇವುಗಳೂ ಇನ್ನಿತರ ಅನೇಕಾನೇಕ ಪುಣ್ಯಮಯವಾದ ಪರ್ವತ ತೀರ್ಥಗಳೂ, ನದೀ ತೀರ್ಥಗಳೂ, ಒಟ್ಟು ಸೇರಿ ಮೂರು ಕೋಟಿ ಹತ್ತು ಸಾವಿರ ತೀರ್ಥಗಳು ಪ್ರಯಾಗದಲ್ಲಿ ಸೇರುತ್ತವೆ. ಸೂರ್ಯಪುತ್ರಿಯಾದ, ಮೂರುಲೋಕದಲ್ಲಿಯೂ ವಿಖ್ಯಾತಳಾದ ಯಮುನೆಯು ಪ್ರಯಾಗದಲ್ಲಿ ಗಂಗೆಯೊಡನೆ ಸೇರುತ್ತಾಳೆ. ಗಂಗಾಯಮುನೆಗಳ ಮಧ್ಯದಲ್ಲಿರುವ ಭೂಭಾಗವು ಪರಮ ಪವಿತ್ರವೆಂದು ತಿಳಿಯಲ್ಪಟ್ಟಿದೆ. ಅಂಥ ಸರ್ವೋತ್ತಮ ಪ್ರಯಾಗಕ್ಕಿಂತ ಪರಮ ಪವಿತ್ರವಾದ ತೀರ್ಥವು ಮತ್ತಾವುದೂ ಇಲ್ಲ. ಪರಮಪದ ಸ್ವರೂಪವಾದ ಪ್ರಯಾಗದ ದರ್ಶನ ಮಾತ್ರದಿಂದ ಮನುಷ್ಯನು ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.

ಅಲ್ಲಿ ಪ್ರತಿಷ್ಠಾನಪುರ (ಝೂಂಸಿ) ಎಂಬಲ್ಲಿರುವ ಉತ್ತಮವಾದ ಅತ್ಯಂತ ಪ್ರಖ್ಯಾತವಾದ ಒಂದು ಕೂಪವಿದೆ. ಪ್ರತಿಷ್ಠಾನದ ಉತ್ತರದಲ್ಲಿ ಗಂಗೆಗಿಂತ ಪೂರ್ವದಲ್ಲಿ ಹಂಸ ಪ್ರತಪನವೆಂಬ ಲೋಕಪ್ರಖ್ಯಾತವಾದ ತೀರ್ಥವಿದೆ. ಅಲ್ಲಿಂದ ಮುಂದೆ ವಾಸಕಿನಾಗದ ಹತ್ತಿರ, ಭೋಗವತಿಯಿಂದ ಮುಂದೆ ದಶಾಶ್ವಮೇಧ ತೀರ್ಥವಿದೆ. ಸರ್ವಶ್ರೇಷ್ಠವಾದ ಆ ತೀರ್ಥದಲ್ಲಿ ಸ್ನಾನ ಮಾಡುವ ಭಕ್ತನು ಅಶ್ವಮೇಧಯಜ್ಞದ ಫಲವನ್ನು ಪಡೆದು ಇಹಲೋಕದಲ್ಲಿ ಧನಿಕನಾಗಿಯೂ, ಸುಂದರ ರೂಪವಂತನಾಗಿಯೂ ಚತುರ, ದಾನಿ, ಧಾರ್ಮಿಕನಾಗಿಯೂ ಸುಖವಾಗಿ ವಾಸಿಸುತ್ತಾನೆ. ಪ್ರಯಾಗದಲ್ಲಿ ಮುಂಡನ (ಕ್ಷೌರ) ಗಯೆಯಲ್ಲಿ ಪಿಂಡ ಪ್ರದಾನ, ಕುರುಕ್ಷೇತ್ರದಲ್ಲಿ ದಾನ, ಕಾಶಿಯಲ್ಲಿ ಶರೀರತ್ಯಾಗ, ಇವು ಉತ್ತಮ ಪುಣ್ಯಪ್ರದಗಳು. ಮನುಷ್ಯರ ಪಾಪಗಳು ತಲೆ ಕೂದಲಿನ ಬುಡವನ್ನು ಆಶ್ರಯಿಸಿ ಸ್ಥಿರವಾಗಿ ನಿಂತಿರುವುದರಿಂದ ತೀರ್ಥ ಸ್ನಾನ ಮಾಡುವುದಕ್ಕೆ ಮೊದಲು ಕೇಶ ಮುಂಡನವನ್ನು ಮಾಡಿಸಬೇಕು. ಪುಷ್ಯ ಮತ್ತು ಮಾಘ ಮಾಸಗಳ ಶ್ರವಣನಕ್ಷತ್ರ, ವ್ಯತೀಪಾತಯೋಗ, ರವಿವಾರ ಅಮಾವಾಸ್ಯಾ ತಿಥಿಯು ಬಂದರೆ ಅದನ್ನು ಅರ್ಧೋದಯ ಯೋಗ ಎಂದು ಹೇಳುತ್ತಾರೆ. ಇದು ನೂರು ಸೂರ್ಯ ಗ್ರಹಣಗಳಿಗಿಂತಲೂ ಶ್ರೇಷ್ಠವಾದುದು. ಮೋಹಿನಿ! ಇದರಲ್ಲಿ ಸ್ವಲ್ಪ ನ್ಯೂನತೆಯು ಬಂದರೆ ಅದನ್ನು ಮಹೋದಯವೆಂದು ಹೇಳುತ್ತಾರೆ. ಮೋಹಿನಿ! ಪ್ರಯಾಗ ತೀರ್ಥದಲ್ಲಿ ಮಾಘ ಶುಕ್ಲ

ಸಪ್ತಮಿ ಅರುಣೋದಯ ಸಮಯದಲ್ಲಿ ಪ್ರಾಪ್ತವಾದರೆ ಅದು ಒಂದು ಸಾವಿರ ಸೂರ್ಯಗ್ರಹಣಗಳಿಗೆ ಸಮಾನವಾಗಿದೆ. ಅಯನಾರಂಭದ ದಿನ ಪ್ರಯಾಗ ಸ್ನಾನವು ಕೋಟಿ ಪಾಲು ಪುಣ್ಯವನ್ನು ಕೊಡುತ್ತದೆ. ವಿಷುವ ಯೋಗದಲ್ಲಿ ಪ್ರಯಾಗ ಸ್ನಾನವು ಲಕ್ಷ ಪಾಲು ಹೆಚ್ಚು ಪುಣ್ಯವನ್ನು ಕೊಡುತ್ತದೆ. ಷಡಶೀತಿ (ಸಂಕ್ರಮಣ) ವಿಷ್ಣು ಪದೀ (ಸಂಕ್ರಮಣ) ಪರ್ವದಿನಗಳಲ್ಲಿ ಸಾವಿರ ಪಾಲು ಪುಣ್ಯವು ಪ್ರಾಪ್ತವಾಗುತ್ತದೆ. ವಿಧಿನಂದಿನಿ! ಪ್ರಯಾಗದಲ್ಲಿ ತನ್ನ ವೈಭವಕ್ಕೆ ಅನುಸಾರವಾಗಿ ದಾನವನ್ನು ಮಾಡಬೇಕು. ಇದರಿಂದ ತೀರ್ಥಸ್ನಾನದ ಫಲವು ಹೆಚ್ಚುತ್ತದೆ. ಸ್ವರ್ಗವನ್ನು ಪಡೆಯುತ್ತಾರೆ. ಯಾರು ಮರಣ ಹೊಂದುತ್ತಾರೋ ಅವರಿಗೆ ಪುನರ್ಜನ್ಮ ಉಂಟಾಗುವುದಿಲ್ಲ. ಸನ್ಮಾರ್ಗ ದಲ್ಲಿರುವ ಉತ್ತಮ ಯೋಗಿಗೆ ಸಿಗುವ ಗತಿಯು ಗಂಗಾ ಯಮುನೆಗಳ ಸಂಗಮದಲ್ಲಿ ಪ್ರಯಾಗದಲ್ಲಿ ದೇಹತ್ಯಾಗ ಮಾಡುವವರಿಗೂ ಲಭ್ಯವಾಗುತ್ತದೆ. ಪ್ರಯಾಗದ ದಕ್ಷಿಣದಲ್ಲಿ ಯಮುನೆಯ ದಡದಲ್ಲಿ ಪ್ರಖ್ಯಾತವಾದ ಅಗ್ನಿ ತೀರ್ಥವಿದೆ. ಅದರ ಪಶ್ಚಿಮದಲ್ಲಿ ಧರ್ಮರಾಜ ತೀರ್ಥವಿದೆ. ಅಲ್ಲಿ ಸ್ನಾನ ಮಾಡುವವರಿಗೆ ಸ್ವರ್ಗಲಾಭ, ದೇಹತ್ಯಾಗ ಮಾಡುವವರಿಗೆ ಪುನರ್ಜನ್ಮರಾಹಿತ್ಯ ಉಂಟಾಗುತ್ತದೆ. ಮೋಹಿನಿ! ಯಮುನೆಯ ಉತ್ತರ ದಡದಲ್ಲಿ ಮಹಾಮುನೀಶ್ವರರಿಂದ ಸೇವಿತವಾದ ಅನೇಕ ಉತ್ತಮ ತೀರ್ಥಗಳಿವೆ. ಅವುಗಳಲ್ಲಿ ಸ್ನಾನ ಮಾಡುವುದರಿಂದ ಸ್ವರ್ಗ ಪ್ರಾಪ್ತಿ, ಅಲ್ಲಿ ದೇಹತ್ಯಾಗ ಮಾಡುವುದರಿಂದ ಮೋಕ್ಷ ಪ್ರಾಪ್ತಿಯಾಗುತ್ತದೆ. ಗಂಗಾಯಮುನೆಗಳೆರಡರ ಸೇವನೆಯ ಫಲವು ಸಮಾನವಾಗಿದ್ದರೂ ಗಂಗೆಯ ಹಿರಿಯವಳಾದ್ದರಿಂದ ಅವಳಿಗೆ ಹೆಚ್ಚು ಗೌರವವನ್ನು ಕೊಡುವ ಸಂಪ್ರದಾಯವು ಬಂದಿದೆ.

## ಕುರುಕ್ಷೇತ್ರ ಮಹಿಮೆ

**ಮೋಹಿನಿ:-** ಪುರೋಹಿತವರ್ಯರೇ! ಕುರುಕ್ಷೇತ್ರದ ಮಹಿಮೆಯನ್ನು ತಾವು ದಯವಿಟ್ಟು ನನಗೆ ಹೇಳಬೇಕು.

**ಪುರೋಹಿತವಸು:-** ಕುರುಕ್ಷೇತ್ರದಲ್ಲಿ ಮುನೀಶ್ವರರಿಂದ ಸೇವಿತವಾದ ಅನೇಕ ತೀರ್ಥಗಳಿವೆ. ನಿನಗೆ ಅವುಗಳ ಪರಿಚಯವನ್ನು ಮಾಡಿಸಿಕೊಡುತ್ತೇನೆ. ಬ್ರಹ್ಮ ಜ್ಞಾನ, ಗಯಾಶ್ರಾದ್ಧ, ಗೋವನ್ನು ಕಾಪಾಡುವ ಸಮಯದಲ್ಲಿ ಮರಣ, ಕುರುಕ್ಷೇತ್ರ ನಿವಾಸ, ಈ ನಾಕರಿಂದಲೂ ಮೋಕ್ಷ ಪ್ರಾಪ್ತಿಯಾಗುತ್ತದೆ. ಸರಸ್ವತೀ, ದೃಷದ್ವತೀ ನದಿಗಳ, ಮಧ್ಯದಲ್ಲಿರುವ ದೇವತೆಗಳಿಂದ ಸೇವಿತವಾದ ಭೂಭಾಗವೇ ಬ್ರಹ್ಮಾವರ್ತ, ಕುರುಕ್ಷೇತ್ರ ಎಂಬುದಾಗಿ ಪ್ರಸಿದ್ಧವಾಗಿದೆ. ಕುರುಕ್ಷೇತ್ರದಲ್ಲಿ ಮೊಟ್ಟಮೊದಲು ಪುಣ್ಯಮಯವಾದ ಬ್ರಹ್ಮಸರೋವರವು ಪ್ರಕಟವಾಯಿತು. ಅನಂತರ ಅಲ್ಲಿ ಪರಶುರಾಮ ಕುಂಡವು ಪ್ರಕಟವಾಗಿ ಆ ಸ್ಥಳವು ಕುರುಕ್ಷೇತ್ರವೆಂದು ಪ್ರಸಿದ್ಧಿಯನ್ನು ಹೊಂದಿತು. ಹಿಂದೆ ಬ್ರಹ್ಮದೇವರು ನಿರ್ಮಾಣ ಮಾಡಿದ ಸರೋವರವು ಈಗಲೂ ಅಲ್ಲಿದೆ. ಬ್ರಹ್ಮದೇವರ ಯಜ್ಞವೇದಿಯು ಆ ಸರೋವರದ ಹೊರಭಾಗದಲ್ಲಿದೆ. ಅಲ್ಲಿಯೇ ಮಾರ್ಕಂಡೇಯ ಋಷಿಯು ತಪಸ್ಸು ಮಾಡಿದ ಸ್ಥಳದಲ್ಲಿ ಪ್ಲಕ್ಷ ವೃಕ್ಷದ ಮೂಲಕ ಸರಸ್ವತೀನದಿಯು ಪ್ರಕಟವಾಗಿದೆ. ಮಾರ್ಕಂಡೇಯ ಮುನಿಯು ಸರಸ್ವತಿಯನ್ನು ಪೂಜಿಸಿ ಸ್ತೋತ್ರ ಮಾಡಿದಾಗ ಆ ನದೀ ದೇವತೆಯು ಅಲ್ಲಿಯೇ ಸಮೀಪದಲ್ಲಿದ್ದ ಪುಷ್ಕರಿಣಿಯನ್ನು ತನ್ನ ಜಲದಿಂದ ತುಂಬಿಸಿ ಪಶ್ಚಿಮ ದಿಕ್ಕಿನ ಕಡೆಗೆ ಹರಿಯಿತು. ಅನಂತರ ಕಾಲದಲ್ಲಿ 'ಕುರು' ರಾಜನು ನಾಲ್ಕೂ

ಕಡೆಯಿಂದ ಆ ಕುರುಕ್ಷೇತ್ರವನ್ನೂ ನೇಗಿಲಿನಿಂದ ಉತ್ತನು. ಅವನು ಉತ್ತಸ್ಥಳವು ಐದು ಯೋಜನ ವಿಸ್ತಾರವಾದುದು. ಅಲ್ಲಿಯೇ ದಯಾ, ಸತ್ಯ, ಕ್ಷಮೆ, ಮುಂತಾದ ಉತ್ತಮ ಗುಣಗಳ ಬೆಳೆ ಬೆಳೆಯಿತು. ಕುರುರಾಜನು ಉತ್ತಕ್ಷೇತ್ರವು ಮೊದಲು ಸಮಂತಪಂಚಕ ವೆಂದು ಪ್ರಸಿದ್ಧವಾಗಿದ್ದರೂ ಅಂದಿನಿಂದ ಕುರುಕ್ಷೇತ್ರ ಎಂದೇ ಪ್ರಸಿದ್ಧವಾಯಿತು. ಇದರ ವನ, ತೀರ್ಥ, ನದಿ ಮುಂತಾದವುಗಳ ಯಾತ್ರೆ ಮಾಡಿದವರಿಗೆ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವ ಕೊರತೆಯು ಇರುವುದಿಲ್ಲ.

## ಕುರುಕ್ಷೇತ್ರದ ನದೀ ಮುಂತಾದವುಗಳು

**ಪುರೋಹಿತ ವಸು:-** ಪವಿತ್ರ ಕಾಮ್ಯಕವನ, ದೊಡ್ಡದಾದ ಅದಿತಿವನ ಪುಣ್ಯಕರವಾದ ಮಧುವನ, ಪ್ರಖ್ಯಾತವಾದ ಸೀತಾವನ, ವ್ಯಾಸವನ, ಫಲಕೀವನ, ಸೂರ್ಯವನ, ಎಂಬ ಏಳು ವನಗಳು ಅಲ್ಲಿವೆ. ಪವಿತ್ರ ಜಲಭರಿತಳಾದ ಸರಸ್ವತಿ, ವೈರಿಣೀ, ಮಂದಾಕಿನೀ, ಗಂಗಾ, ಮಧುಪ್ರಭಾ, ದೃಷ್ಟದ್ವತೀ, ಕೌಶಿಕೀ, ಹೈರಣ್ವತೀ ಎಂಬ ನದಿಗಳಿವೆ. ಇವುಗಳಲ್ಲಿ ಸರಸ್ವತಿಯನ್ನು ಬಿಟ್ಟು ಉಳಿದವುಗಳು ಮಳೆಗಾಲದಲ್ಲಿ ಮಾತ್ರ ಹರಿಯುತ್ತವೆ. ಈ ಎಲ್ಲ ನದಿಗಳ ನೀರು ಸ್ಪರ್ಶ, ಪಾನ, ಸ್ನಾನಗಳಿಗೆ ಯೋಗ್ಯವಾಗಿದೆ. ಪುಣ್ಯಕ್ಷೇತ್ರದ ಪ್ರಭಾವದಿಂದ ಇವುಗಳಿಗೆ ರಜಸ್ವಲಾ ದೋಷವೂ ಬರುವುದಿಲ್ಲ. ಮೊದಲು ಮಹಾಬಲಶಾಲಿಯಾದ ರಂತುಕನೆಂಬ ದ್ವಾರಪಾಲಕ ಯಕ್ಷನಲ್ಲಿಗೆ ಹೋಗಿ ನಮಸ್ಕರಿಸಿ ಕುರುಕ್ಷೇತ್ರದ ಯಾತ್ರೆಯನ್ನು ಪ್ರಾರಂಭಿಸಬೇಕು. ಅನಂತರ ಅದಿತಿ ವನಕ್ಕೆ ಹೋಗಬೇಕು. ನಾರಿಯೂ (ಹೆಂಗಸು) ಅಲ್ಲಿ ಸ್ನಾನಮಾಡಿ ದೇವಮಾತೆ ಅದಿತಿಯನ್ನು ಪೂಜಿಸಿದರೆ ಸಮಸ್ತ ಶುಭಲಕ್ಷಣಗಳಿಂದ ಕೂಡಿದ ಅತ್ಯಂತ ಶೂರನಾದ ಪುತ್ರನನ್ನು ಪಡೆಯುತ್ತಾಳೆ. ಅಲ್ಲಿಂದ ಶ್ರೀ ಹರಿಯ ನಿತ್ಯ ಸನ್ನಿಧಾನ ಪಾತ್ರನಾದ 'ವಿಮಲ' ಎಂಬ ತೀರ್ಥಸ್ನಾನಕ್ಕೆ ಹೋಗಬೇಕು. ವಿಮಲ ತೀರ್ಥದಲ್ಲಿ ಸ್ನಾನಮಾಡಿ ವಿಮಲೇಶ್ವರನ ದರ್ಶನ ಮಾಡಿದ ಮನುಷ್ಯನು ವಿಮಲನಾಗಿ ದೇವಾಧಿ ದೇವನಾದ ಸುದರ್ಶನ ಚಕ್ರಧಾರಿಯಾದ ವಿಷ್ಣುವಿನ ಲೋಕವನ್ನು ಸೇರುತ್ತಾನೆ. ಮೋಹಿನಿ! ಅಲ್ಲಿ ಶ್ರೀ ಕೃಷ್ಣ ಬಲರಾಮರು ಒಂದೇ ಆಸನದಲ್ಲಿ ಕುಳಿತಿರುತ್ತಾರೆ. ಅವರ ದರ್ಶನದಿಂದ ಮಾನವನು ತತ್ಕಾಲದಲ್ಲಿಯೇ ಸಮಸ್ತ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.

ಅಲ್ಲಿಂದ ಲೋಕ ಪ್ರಖ್ಯಾತವಾದ ಪಾರಿಪ್ಲವ ತೀರ್ಥಕ್ಕೆ ಹೋಗಬೇಕು. ಅಲ್ಲಿರುವ ಕೌಶಿಕ ನದಿಯ ಸಂಗಮವು ಪಾಪ ನಾಶಕವಾದುದು. ಅಲ್ಲಿ ಸ್ನಾನ ಮಾಡಿದ ಮನುಷ್ಯನಿಗೆ ಪ್ರಿಯಜನರ ಸಂಗಮವುಂಟಾಗುತ್ತದೆ. ಅನಂತರ ಪೃಥವೀತೀರ್ಥಕ್ಕೆ ಹೋಗಿ ಭಕ್ತಿಪೂರ್ವಕವಾಗಿ ಸ್ನಾನ ಮಾಡಿದವನಿಗೆ ಉತ್ತಮ ಗತಿಯುಂಟಾಗುತ್ತದೆ. ಅನಂತರ ಪರಮ ಪುಣ್ಯಕರವಾದ ದಕ್ಷಾಶ್ರಮಕ್ಕೆ ಹೋಗಿ ದಕ್ಷೇಶ್ವರನ ದರ್ಶನ ಮಾಡಿದ ಮಾನವನಿಗೆ ಅಶ್ವಮೇಧ ಯಜ್ಞದ ಫಲವು ಲಭಿಸುತ್ತದೆ. ಅನಂತರ ಶಾಲಕಿನೀ ತೀರ್ಥಕ್ಕೆ ಹೋಗಿ ಅಲ್ಲಿ ತನ್ನ ಮನೋರಥ ಸಿದ್ಧಿಗೋಸ್ಕರ ಶಿವನೊಡನಿರುವ ಶ್ರೀ ಹರಿಯನ್ನು ಪೂಜಿಸಬೇಕು. ಅನಂತರ ವಿಧಿಜ್ಞನಾದ ಮಾನವನು ನಾಗತೀರ್ಥಕ್ಕೆ ಹೋಗಿ ಸ್ನಾನ ಮಾಡಿ, ತುಪ್ಪ ಮತ್ತು ಮೊಸರನ್ನೂ ಸೇವಿಸಿ ನಾಗಗಳಿಂದ ಅಭಯವನ್ನು ಪಡೆಯಬೇಕು. ಅನಂತರ ತ್ರಿಭುವನ ಪ್ರಖ್ಯಾತವಾದ ಪಂಚನದೀ ತೀರ್ಥಕ್ಕೆ ಹೋಗಬೇಕು. ಅಲ್ಲಿ ಭಗವಂತನಾದ ಶಂಕರನು ಅಸುರರನ್ನು ಹೆದರಿಸುವದಕ್ಕಾಗಿ ಐದು ಬಾರಿ ಸಿಂಹನಾದವನ್ನು ಮಾಡಿದ್ದನು. ಆದ್ದರಿಂದ ಸಮಸ್ತ ಪಾಪನಾಶಕವಾದ ಆ ತೀರ್ಥಕ್ಕೆ ಪಂಚನಾದ ತೀರ್ಥವೆಂದು ಹೆಸರಾಗಿದೆ. ಅಲ್ಲಿ

ಸ್ನಾನ ದಾನ ಮಾಡಿದ ಮಾನವನು ನಿರ್ಭಯನಾಗುತ್ತಾನೆ. ಅನಂತರ ಈಶ್ವರನು ಕೋಟಿತೀರ್ಥಗಳನ್ನು ತಂದು ನಿರ್ಮಿಸಿರುವ ಕೋಟಿ ತೀರ್ಥಕ್ಕೆ ಹೋಗಿ ಸ್ನಾನ ಮಾಡಿ ಕೋಟೇಶ್ವರದ ಶಿವನ ದರ್ಶನ ಮಾಡಿದ ಮಾನವನಿಗೆ ಆಗಿನಿಂದ ಪಂಚಮಹಾ ಯಜ್ಞಗಳನ್ನು ಮಾಡಿದ ಪುಣ್ಯವು ಪ್ರತಿದಿನವೂ ಪ್ರಾಪ್ತಿಯಾಗುತ್ತದೆ. ಅಲ್ಲಿಯೇ ದೇವತೆಗಳು ಭಗವಂತನಾದ ವಾಮನನನ್ನು ಸ್ಥಾಪಿಸಿದ್ದಾರೆ. ಆ ವಾಮನನ ಪೂಜೆ ಮಾಡಿದ ಮಾನವನಿಗೆ ಅಗ್ನಿಷ್ಟೋಮ ಯಾಗದ ಫಲವು ಪ್ರಾಪ್ತವಾಗುತ್ತದೆ.

ಶ್ರದ್ಧಾಳುವಾದ ಯಾತ್ರಿಕನು ಅಲ್ಲಿಂದ ಅಶ್ವತೀರ್ಥ, ಚಂದ್ರನು ತಪಸ್ಸು ಮಾಡಿದ ಸೋಮ ತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿರುವ ಭೂತೇಶ್ವರ, ಜ್ವಾಲಾ ಮಾಲೇಶ್ವರ, ತಾಂಡವೇಶ್ವರ ಎಂಬ ಶಿವಲಿಂಗಗಳ ದರ್ಶನ ಮಾಡಿಕೊಳ್ಳಬೇಕು. ಅನಂತರ ಏಕಹಂಸ, ತೀರ್ಥ, ಕೃತಶೌಚ ತೀರ್ಥ, ಮುಂಜವಟ, ರಾಮಹ್ರದ. ಕಾಯಶೋಧನ ಶಾಲಿಗ್ರಾಮ ತೀರ್ಥ. ಕಪಿಲಾಹ್ರದ, ಸೂರ್ಯತೀರ್ಥ ಪೃಥ್ವೀವಿವರ, ದೇವೀತೀರ್ಥ, ಬ್ರಹ್ಮಾವರ್ತ, ಸಂತೀರ್ಥ, ಸೀತಾವನ, ದಶಾಶ್ವಮೇಧ ತೀರ್ಥ ಮುಂತಾದ ಪರಮ ಪವಿತ್ರತೀರ್ಥಗಳಲ್ಲಿ ಸ್ನಾನದಾನ ತರ್ಪಣ ಪೂಜಾದಿಗಳನ್ನು ಮಾಡುವವರು ಸ್ವರ್ಗಾಪವರ್ಗಗಳನ್ನು ಪಡೆಯುತ್ತಾರೆ.

ಅಲ್ಲಿಂದ ಮುಂದೆ ಒಂದು ಹರದಾರಿಯಲ್ಲಿ ಹರಿಯುವ ಆಪಗಾ ಎಂಬ ಮಹಾನದಿಯಲ್ಲಿ ಮಿಂದು ಪಿತೃಪಕ್ಷದಲ್ಲಿ ತರ್ಪಣ ಪಿಂಡ ಪ್ರದಾನಾದಿಗಳನ್ನು ಮಾಡುವವನು ಹರಿ ಪದವನ್ನು ಐದುತ್ತಾನೆ. ಅಲ್ಲಿಂದ ಮುಂದೆ ನಡೆದು ಬ್ರಾಹ್ಮೋದಂಬರಿಕಾ ತೀರ್ಥ, ಬ್ರಹ್ಮರ್ಷಿಕುಂಡ, ವೃದ್ಧಕೇದಾರ, ಕಲಶೀತೀರ್ಥ, ಸರಕ ತೀರ್ಥ, ಈಹಾಸ್ಪದ, ನಾಗಹ್ರದ, ತ್ರಿವಿಷ್ಟಪತೀರ್ಥ, ರಸಾವರ್ತ, ವಿಲೇಪಾಶ್ರಮವೇ ಮೊದಲಾದ ತೀರ್ಥಗಳಲ್ಲಿ ಮಿಂದು ಹರಿಯನ್ನೂ ಹರನನ್ನೂ ಅರ್ಚಿಸಬೇಕು. ಮುಂದಿರುವ ಫಲಶೀ ವನದಲ್ಲಿ ಪ್ರವಹಿಸುವ ದೃಷದ್ವತೀ ನದಿಯಲ್ಲಿ ಸ್ನಾನ ಪಿಂಡದಾನ ಮಾಡಿದವರಿಗೆ ಗಯಾ ಶ್ರಾದ್ಧಫಲ. ಇವುಗಳನಂತರ ಕಂಗೊಳಿಸುವ ಪಾಣಿಘಾತತೀರ್ಥ, ಮಿಶ್ರಕ, ಕೌಶಿಕೀ ಸಂಗಮ, ಕಿಂದುಶೂಕೂಪ, ವ್ಯಾಸಸ್ಥಲ, ಮೃಗಮುಚ್ಯ, ವಾಮನ ತೀರ್ಥ, ಜ್ಯೇಷ್ಠಾಶ್ರಮ, ಕುಲೋತ್ತರಣ, ಶಾಲಿಹೋತ್ರ, ಶ್ರೀಕುಂಭ, ನೈಮಿಷ, ತೀರ್ಥ, ವೇದಾವತೀ, ಬ್ರಹ್ಮತೀರ್ಥ, ಮತ್ತು ಸರಸ್ವತಿಯ ಏಳು ಕವಲುಗಳು ಬಂದು ಒಂದೆಡೆ ಸಂಗಮಿಸುವ ಸಪ್ತ ಸಾರಸ್ವತ ತೀರ್ಥಗಳಲ್ಲಿ ಸ್ನಾನ ಮಾಡಬೇಕು. ಸುಪ್ರಭಾ, ಕಾಂಚನಾಕ್ಷೀ, ಮನೋಹರೀ, ಸುನಂದಾ, ಸುವೇಣು, ವಿಮಲೋದಾ ಇವೇ ಸರಸ್ವತಿಯ ಏಳು ಶಾಖಾನದಿಗಳ ಪ್ರವಾಹ ಧಾರೆಗಳು. ಈ ಸಪ್ತಸಾರಸ್ವತ ತೀರ್ಥದಲ್ಲಿ ಮಿಂದವನ ಪುಣ್ಯಕ್ಕೆ ಎಣೆ ಇಲ್ಲ. ಅನಂತರ ಕಪಾಲ ಮೋಚನ, ವಿಶ್ವಾಮಿತ್ರ, ಪೃಥೂದಕ, ಅವಶೀರ್ಣ, ಮಧುಸ್ರಾವ, ಅರುಣಾ ಸಂಗಮ, ಪಂಚವಟ ತೀರ್ಥ, ಕುರುತೀರ್ಥ, ಸ್ವರ್ಗದ್ವಾರ, ಅನರಕ, ಯಜ್ಞೋಪವೀತಿಕಾ, ವಿಹಾರತೀರ್ಥ, ಪಿತೃತೀರ್ಥ, ಶುಕ್ರತೀರ್ಥ, ಬ್ರಹ್ಮತೀರ್ಥ, ಸ್ಥಾಣು ತೀರ್ಥಗಳಲ್ಲಿ ಸ್ನಾನ ಮಾಡಿ ಸ್ಥಾಣುವಟದ ದರ್ಶನ ಮಾಡಿಕೊಂಡರೆ ಈ ಎಲ್ಲ ಪುಣ್ಯ ತೀರ್ಥಗಳಲ್ಲಿ ದೇವಕಾರ್ಯ ಪಿತೃ ಕಾರ್ಯಗಳನ್ನು ಮಾಡಿದರೆ ಶ್ರೀ ಹರಿಯ ಪ್ರೀತಿ ಉಂಟಾಗಿ ಶಾಶ್ವತಲೋಕ ಪ್ರಾಪ್ತಿಯಾಗುವುದು. ಈ ಕುರುಕ್ಷೇತ್ರ ಪರಮ ಪವಿತ್ರ, ಗ್ರಹಣ, ಯುಗಾದಿ, ಸಂಕ್ರಮಣ ಪುಣ್ಯದಿನಗಳಲ್ಲಿ ಈ ಕುರುಕ್ಷೇತ್ರ ತೀರ್ಥಗಳಲ್ಲಿ ಸ್ನಾನದಾನ ಪಿಂಡಪ್ರದಾನಗಳು ಮೋಕ್ಷಕಾರಕ. ಭವತಾರಕ.

# ಗಂಗಾದ್ವಾರ (ಹರಿದ್ವಾರ) ಮತ್ತು ಅಲ್ಲಿಯ ತೀರ್ಥ ಮಹಿಮೆ

**ವಸು:-** ಭದ್ರೇ! ಭಗೀರಥ ಮಹಾರಾಜನ ರಥಚಕ್ರದ ಹಿಂದೆಯೇ ಬರುತ್ತಿದ್ದ ಅಲಕನಂದಾಗಂಗೆಯು ಸಾವಿರಾರು ಪರ್ವತಗಳನ್ನು ಸೀಳುತ್ತ ಭಾರತಭೂಮಿಯನ್ನು ಪ್ರವೇಶಿಸಿದ ಮತ್ತು ದಕ್ಷಪ್ರಜಾಪತಿಯು ವಿಷ್ಣುವನ್ನು ಉದ್ದೇಶಿಸಿ ಯಜ್ಞಮಾಡಿದ ಸ್ಥಳವೇ ಸಮಸ್ತ ಪಾಪನಾಶಕವಾದ ಗಂಗಾದ್ವಾರವು (ಹರಿದ್ವಾರವು). ದಕ್ಷ ಪ್ರಜಾಪತಿಯ ಆ ಯಜ್ಞಕ್ಕೆ ಆಹ್ವಾನಿಸಲ್ಪಟ್ಟ ದೇವತೆಗಳು, ತಮ್ಮ ಪರಿವಾರಸಹಿತರಾಗಿ ಅಲ್ಲಿಗೆ ಬಂದಿದ್ದರು. ಶಿಷ್ಯಪ್ರಶಿಷ್ಯಸಹಿತರಾದ ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ರಾಜರ್ಷಿಗಳೂ. ಅಲ್ಲಿಗೆ ಬಂದಿದ್ದರು. ಪಿನಾಕಪಾಣಿಯಾದ ಶಂಕರನ ಹೊರತು ಎಲ್ಲರಿಗೂ ಆಹ್ವಾನವಿತ್ತು. ದೇವತೆಗಳು ವಿಮಾನದಲ್ಲಿ ಕುಳಿತು ಪತ್ನಿಯರ ಜೊತೆಗೆ ಬಂದು ಆ ಯಜ್ಞದ ವೈಭವವನ್ನೂ ವರ್ಣಿಸುತ್ತಾ ಆನಂದ ಪಡುತ್ತಿದ್ದರು. ದೇವತೆಗಳು ವಿಮಾನಗಳಲ್ಲಿ ಕುಳಿತು ಬರುತ್ತಿರುವಾಗ ಕೈಲಾಸಪರ್ವತದಲ್ಲಿದ್ದ ಪಾರ್ವತಿಯು ಅವರ ಮಾತನ್ನು ಕೇಳಿದಳು. ತನ್ನ ತಂದೆಯ ಯಜ್ಞವನ್ನು ನೋಡಬೇಕೆಂಬ ಕೌತುಕ - ಉತ್ಸಾಹಗಳಿಂದ ಅವಳು ತನ್ನ ಪತಿಯಾದ ಮಹಾದೇವನೊಡನೆ ತನ್ನನ್ನು ಕರೆದುಕೊಂಡು ಅಲ್ಲಿಗೆ ಹೋಗಬೇಕೆಂದು ಕೇಳಿಕೊಂಡಳು. ಈಶ್ವರನು ''ದೇವಿ! ಅಲ್ಲಿಗೆ ಹೋಗುವುದು ಒಳ್ಳೆಯದಲ್ಲವೆಂದರೂ'' ಸತಿಯು ಅಲ್ಲಿಗೆ ಹೋಗಿ, ಅಲ್ಲಿ ತನ್ನನ್ನು ಯಾರೂ ಸತ್ಕರಿಸದೆ ಮಾತಾಡದೆ ಇರುವುದನ್ನು ನೋಡಿ ದುಃಖಿತಳಾಗಿ ಪ್ರಾಣತ್ಯಾಗ ಮಾಡಿದಳು. ಅದೇ ಒಂದು ಉತ್ತಮ ತೀರ್ಥಕ್ಷೇತ್ರವಾಯಿತು. ಅಲ್ಲಿ ಸ್ನಾನ ಮಾಡಿ ದೇವ ಪಿತೃ ತರ್ಪಣ ಮಾಡಿದವರು ದೇವಿಯ ಅನುಗ್ರಹದಿಂದ ಭೋಗ ಮೋಕ್ಷ ಭಾಗಿಗಳಾಗುತ್ತಾರೆ.

ದೇವರ್ಷಿ ನಾರದರಿಂದ ಸತೀದೇವಿಯ ಪ್ರಾಣತ್ಯಾಗದ ವಾರ್ತೆಯನ್ನು ಕೇಳಿ ಕ್ರುದ್ಧನಾದ ಶಂಕರನು ವೀರಭದ್ರನನ್ನು ಸೃಷ್ಟಿಸಿ ದಕ್ಷಯಜ್ಞ ನಾಶಕ್ಕಾಗಿ ಕಳುಹಿಸಿದನು. ವೀರಭದ್ರನು ಪ್ರಥಮ ಗಣಗಳ ಜೊತೆಗೆ ಹೋಗಿ ಯಜ್ಞವನ್ನು ನಾಶ ಮಾಡಿದನು. ಅನಂತರ ಬ್ರಹ್ಮದೇವರ ಪ್ರಾರ್ಥನೆಯಿಂದ ಶಂಕರನು ಯಜ್ಞವನ್ನು ಪೂರ್ತಿಯಾಗುವಂತೆ ಮಾಡಿದನು. ಅಂದಿನಿಂದ ಆ ಸ್ಥಳವು ಸರ್ವಪಾಪನಾಶಕವಾದ ತೀರ್ಥವಾಯಿತು. ಅಲ್ಲಿ ಯಾವ ಕಾಮನೆಯನ್ನಿಟ್ಟು ತೀರ್ಥಸ್ನಾನ ಮಾಡುತ್ತಾರೋ ಅದು ಅವಶ್ಯವಾಗಿ ನೇರವೇರುತ್ತದೆ. ದಕ್ಷ ಮುಂತಾದ ದೇವತೆಗಳು ಯಜ್ಞ ಸ್ವಾಮಿಯಾದ ಶ್ರೀಹರಿಯನ್ನು ಎಲ್ಲಿ ಸ್ತೋತ್ರ ಮಾಡಿದ್ದರೋ ಆ ಸ್ಥಳವು 'ಹರಿತೀರ್ಥ' ಎಂದು ಪ್ರಸಿದ್ಧವಾಯಿತು. ಮೋಹಿನಿ! ಆ ಹರಿಪದ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದವನು ಹರಿಪ್ರಿಯನಾಗುತ್ತಾನೆ. ಅಲ್ಲದೆ ಭೋಗ - ಮೋಕ್ಷಗಳೆರಡನ್ನೂ ಪಡೆಯುತ್ತಾನೆ. ಅಲ್ಲಿಂದ ಪೂರ್ವದಲ್ಲಿರುವ ತ್ರಿಗಂಗಾ ಕ್ಷೇತ್ರದಲ್ಲಿ ತ್ರಿಪಥಗಾ (ಮೂರು ಕವಲಾಗಿ ಹೋಗುವ) ಗಂಗೆಯ ದರ್ಶನವಾಗುತ್ತದೆ. ಅಲ್ಲಿ ಸ್ನಾನ ಮಾಡಿ ದೇವ, ಋಷಿ, ಪಿತೃ ಮತ್ತು ಮನುಷ್ಯ ಪಿತೃಗಳಿಗೆ ಶ್ರದ್ಧೆಯಿಂದ ತರ್ಪಣ ಮಾಡುವವನು ಸ್ವರ್ಗಲೋಕದಲ್ಲಿ ದೇವತೆಗಳಂತೆ ಆನಂದದಿಂದ ಇರುತ್ತಾನೆ. ಅಲ್ಲಿಂದ ದಕ್ಷಿಣದಲ್ಲಿರುವ ಕನಖಲತೀರ್ಥಕ್ಕೆ ಹೋಗಿ ಹಗಲೂ ರಾತ್ರಿ ಉಪವಾಸವಿದ್ದು ಸ್ನಾನ ಮಾಡುವ ಮನುಷ್ಯನು ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಅಲ್ಲಿಂದ ಪಶ್ಚಿಮ ದಿಕ್ಕಿನಲ್ಲಿರುವ ಕೋಟಿ ತೀರ್ಥದಲ್ಲಿ ಒಂದು ರಾತ್ರಿ

ವಾಸ ಮಾಡಿ, ತೀರ್ಥ ಸ್ನಾನ ಮಾಡಿ ಕೋಟೀಶ್ವರನ ದರ್ಶನ ಮಾಡಿದರೆ ಕೋಟಿ ಪಾಲು ಪುಣ್ಯ ಉಂಟಾಗುತ್ತದೆ. ಮತ್ತು ಪುಂಡರೀಕ ಯಜ್ಞದ ಫಲವು ಬರುತ್ತದೆ. ಅಲ್ಲಿಂದ ಉತ್ತರ ದಿಕ್ಕಿನಲ್ಲಿ ಸಪ್ತಗಂಗಾ (ಸಪ್ತ ಸರೋವರ) ಎಂಬ ಪ್ರಖ್ಯಾತ ತೀರ್ಥವಿದೆ. ಅಲ್ಲಿ ಸಪ್ತರ್ಷಿಗಳ ಪವಿತ್ರ ಆಶ್ರಮಗಳೂ ಇವೆ. ಸಮಸ್ತ ಪಾಪನಾಶಕವಾದ ಸಪ್ತರ್ಷಿಗಳ ಆಶ್ರಮದ ಸನ್ನಿಧಾನದಲ್ಲಿ ಸಪ್ತಗಂಗಾ ಸ್ನಾನಮಾಡಿ ದೇವತೆಗಳು ಮತ್ತು ಪಿತೃಗಳಿಗೆ ತರ್ಪಣ ಮಾಡುವ ಮನುಷ್ಯನು ಋಷಿಲೋಕವನ್ನು ಪಡೆಯುತ್ತಾನೆ. ಭಗೀರಥನು ಗಂಗೆಯನ್ನು ಭೂಲೋಕಕ್ಕೆ ಕರೆ ತರುತ್ತಿರುವಾಗ, ಆ ಸ್ಥಳದಲ್ಲಿ ದೇವನದಿಯು ಸಪ್ತರ್ಷಿಗಳ ಸಂತೋಷಕ್ಕಾಗಿ ಏಳು ಧಾರೆಯಾಗಿ ಹರಿದಳು. ಅಂದಿನಿಂದ ಆ ಸ್ಥಳವು ಸಪ್ತಗಂಗಾ ಎಂದು ಪ್ರಸಿದ್ಧವಾಯಿತು. ಅಲ್ಲಿಂದ ಮುಂದೆ ಕಪಿಲಾಹ್ರದವೆಂಬ ತೀರ್ಥಕ್ಷೇತ್ರಕ್ಕೆ ಹೋಗಿ ಉತ್ತಮ ಬ್ರಾಹ್ಮಣನಿಗೆ ಗೋದಾನ ಮಾಡಿದರೆ ಸಾವಿರ ಗೋದಾನದ ಫಲವು ಸಿಗುತ್ತದೆ. ಶಂತನುವಿನ ಲಲಿತ ಎಂಬ ತೀರ್ಥಕ್ಕೆ ಹೋಗಿ ವಿಧಿವತ್ತಾಗಿ ಸ್ನಾನ ದೇವತಾದಿ ತರ್ಪಣ ಮಾಡಿದರೆ ಉತ್ತಮ ಗತಿಯು ಲಭಿಸುತ್ತದೆ. ಶಂತನು ಮಹಾರಾಜನು ಇಲ್ಲಿಗೆ ಬಂದಿದ್ದಾಗ ಮನುಷ್ಯ ರೂಪದಿಂದ ಇದ್ದ ಗಂಗೆಯನ್ನು ಮದುವೆಯಾದನು. ಅನಂತರ ಗಂಗೆಯು ಪ್ರತಿವರ್ಷ ಒಬ್ಬೊಬ್ಬ ವಸುವನ್ನು ಪ್ರಸವಿಸಿ ತನ್ನ ಪ್ರವಾಹದಲ್ಲಿ ಆ (ವಸು) ಶಿಶುವನ್ನು ಎಸೆದಳು. ಆ ಶಿಶುಗಳ ಶರೀರವು ಬಿದ್ದ ಸ್ಥಳದಲ್ಲಿ ಒಂದೊಂದು ಮರವು ಬೆಳೆಯಿತು. ಅಲ್ಲಿ ಸ್ನಾನ ಮಾಡಿ ಔಷಧಿಯನ್ನು (ಆ ಮರದ ಎಲೆಯನ್ನು) ಸೇವಿಸಿದವನಿಗೆ ಎಂದೂ ದುರ್ಗತಿಯುಂಟಾಗುವುದಿಲ್ಲ. ಅಲ್ಲಿಂದ ಭೀಮಸ್ಥಲವೆಂಬ ಕ್ಷೇತ್ರಕ್ಕೆ ಹೋಗಿ ಸ್ನಾನ ಮಾಡುವ ಪುಣ್ಯಾತ್ಮನು ಇಹದಲ್ಲಿ ಉತ್ತಮ ಸುಖವನ್ನು ಭೋಗಿಸಿ, ಶರೀರ ತ್ಯಾಗಾನಂತರ ಸ್ವರ್ಗಕ್ಕೆ ಹೋಗುತ್ತಾನೆ. ಈ ರೀತಿ ಸಂಕ್ಷೇಪವಾಗಿ ಕೆಲವು ತೀರ್ಥಗಳ ಪರಿಚಯವನ್ನು ಮಾಡಿದ್ದಾಯಿತು.

**ಯೋಽಸ್ಮಿನ್ ಕ್ಷೇತ್ರೇ ನರಃ ಸ್ನಾಯಾತ್ ಗುರೌ ಕುಂಭೇಜಗೇ ರವೌ।**
**ಸ ತು ಸ್ಯಾತ್ ವಾಕ್ ಪತಿಃ ಸಾಕ್ಷಾತ್ ಪ್ರಭಾಕರ ಇವಾಪರಃ ॥**
**(ನಾ.ಉತ್ತರ ೬೬-೪೪-೪೫)**

"ಬೃಹಸ್ಪತಿಯು ಕುಂಭರಾಶಿಯಲ್ಲಿರುವಾಗ ಸೂರ್ಯನು ಮೇಷರಾಶಿ ಯಲ್ಲಿರುವಾಗ ಈ ಕ್ಷೇತ್ರದಲ್ಲಿ (ಹರಿದ್ವಾರ) ಯಾವನು ಸ್ನಾನ ಮಾಡುತ್ತಾನೋ, ಅವನು ಬೃಹಸ್ಪತಿಯಂತೆ ವಾಗ್ಮಿಯೂ ಸೂರ್ಯನಂತೆ ತೇಜಸ್ವಿಯೂ ಆಗುತ್ತಾನೆ.

## ಬದರಿಕಾಶ್ರಮ - ತೀರ್ಥ ಮಹಿಮೆ

**ಮೋಹಿನಿ:-** ತಮ್ಮಿಂದ ಹರಿದ್ವಾರ ಮಹಿಮೆಯನ್ನು ಕೇಳಿದ್ದಾಯಿತು. ಈಗ ತಾವು ಬದರೀಕಾಶ್ರಮದ ಮಹಿಮೆಯನ್ನು ಹೇಳಬೇಕು.

**ಪುರೋಹಿತ ವಸು:-** ಮೋಹಿನಿ! ಜೀವರಿಗೆ ಜನ್ಮಮೃತ್ಯು ಸಂಸಾರ ಬಂಧನವನ್ನು ಪರಿಹರಿಸುವ ಬದರಿಕಾಶ್ರಮ ಮಹಿಮೆಯನ್ನು ನಾನು ಈಗ ಹೇಳುತ್ತೇನೆ. ಕೇಳು. ಬದರಿಕ್ಷೇತ್ರವು ಕಲಿದೋಷ ಪರಿಹಾರಕ ಮತ್ತು ಮುಕ್ತಿದಾಯಕವಾದುದು. ಧರ್ಮ ಪ್ರಜಾಪತಿಯ ಪತ್ನಿಯಾದ ಮೂರ್ತಿದೇವಿಯ ಗರ್ಭದಿಂದ ಅವತರಿಸಿದ

ನರನಾರಾಯಣರು ತಪಸ್ಸು ಮಾಡಿದ ಗಂಧಮಾದನ ಪರ್ವತವು ಇರುವ ತಾಣವಿದು. ಇಲ್ಲಿ ಬಹಳವಾಗಿ ಸುವಾಸನೆಯಾದ ಬದರೀ ವೃಕ್ಷಗಳಿವೆ. ಈ ಇಬ್ಬರು ಮಹಾತ್ಮರೂ ಒಂದು ಕಲ್ಪಪರ್ಯಂತ ಅಲ್ಲಿಯೇ ತಪಸ್ಸು ಮಾಡುತ್ತಾ ಇರುತ್ತಾರೆ. ಕಲಾಪಗ್ರಾಮ ವಾಸಿಗಳಾದ ನಾರದಾದಿ ಮುನಿವರರೂ ಸಿದ್ಧರೂ ಅವರ ಹತ್ತಿರದಲ್ಲಿಯೇ ಇರುತ್ತಾರೆ. ಅವರಿಬ್ಬರ ತಪಸ್ಸು ಲೋಕರಕ್ಷಣೆಗಾಗಿ ಎಂದು ತಿಳಿ. ಅಲ್ಲಿರುವ ಸಮಸ್ತ ಸಿದ್ಧಿಪ್ರದವಾದ ಪ್ರಸಿದ್ಧವಾದ ಅಗ್ನಿತೀರ್ಥದಲ್ಲಿ ಸ್ನಾನ ಮಾಡಿದರೆ ಸಮಸ್ತ ಪಾಪಗಳೂ ನಾಶವಾಗುತ್ತವೆ. ಅಲ್ಲದೆ ಸಾವಿರಾರು ಚಾಂದ್ರಾಯಣ, ಕೋಟಿಗಟ್ಟಲೆ ಕೃಚ್ಛ್ರವ್ರತಗಳಿಂದ ಬರುವ ಫಲವು ಲಭಿಸುತ್ತದೆ. ಅಲ್ಲಿರುವ ಪಂಚ-ಶಿಲೆಗಳಲ್ಲಿ (ಐದು ಕಲ್ಲುಗಳಲ್ಲಿ) ನಾರದರು ಭಯಂಕರವಾದ ತಪಸ್ಸು ಮಾಡಿದ್ದರು. ಆ ಶಿಲೆಗಳಿಗೂ ''ನಾರದೀ'' ಎಂದೇ ಹೆಸರು. ಆ ನಾರದೀ ಶಿಲೆಗಳು ದರ್ಶನ ಮಾತ್ರದಿಂದ ಮುಕ್ತಿಪ್ರದವಾಗಿವೆ. ಅಲ್ಲಿ ಶ್ರೀಮನ್ನಾರಾಯಣನ ನಿತ್ಯ ಸನ್ನಿಧಾನವಿದೆ. ಅಲ್ಲಿರುವ ನಾರದ ಕುಂಡದಲ್ಲಿ ಸ್ನಾನಮಾಡಿ ಪವಿತ್ರನಾದ ಮಾನವನು ಭಕ್ತಿ, ಭೋಗ, ಮೋಕ್ಷ ಎಲ್ಲವನ್ನೂ ಪಡೆಯುತ್ತಾನೆ. ''ನಾರದೀ'' ಶಿಲೆಯ ಸಮೀಪದಲ್ಲಿ ಭಕ್ತಿಯಿಂದ ಮಾಡಿದ ಸ್ನಾನ, ಜಪ, ದಾನ, ದೇವಪೂಜಾ, ಹೋಮ ಇತ್ಯಾದಿ ಶುಭಕರ್ಮಗಳೆಲ್ಲವೂ ಅಕ್ಷಯವಾಗುತ್ತವೆ. ಅಲ್ಲಿಯೇ ಇರುವ ವೈನತೇಯ (ಗರುಡ) ಶಿಲೆಯಲ್ಲಿ ಗರುಡನು ಶ್ರೀ ಹರಿಯ ದರ್ಶನವನ್ನು ಅಪೇಕ್ಷಿಸಿ ಮೂವತ್ತು ಸಾವಿರ ವರ್ಷಗಳವರೆಗೆ ತಪಸ್ಸನ್ನು ಮಾಡಿದ್ದನು. ವಿಷ್ಣುವು ಪ್ರಸನ್ನನಾಗಿ ಗರುಡನಿಗೆ ವರ ಕೊಟ್ಟನು. ''ವತ್ಸ! ನೀನು ದೈತ್ಯರಿಂದ ಅಜೇಯನಾಗು. ನಾಗಳಿಗೆ ಭಯಂಕರನಾಗು, ನನ್ನ ವಾಹನನಾಗು. ಈ ಶಿಲೆಯು ಗರುಡ ಶಿಲೆಯೆಂದು ಪ್ರಸಿದ್ಧವಾಗಲಿ. ದರ್ಶನ ಮಾತ್ರದಿಂದ ಪುಣ್ಯದಾಯಕವಾಗಲಿ. ಇಲ್ಲಿ ಸ್ನಾನ ಮಾಡುವವರಿಗೆ ಗಂಗಾ ಪ್ರತ್ಯಕ್ಷವಾಗಲಿ. ಪಂಚಗಂಗೆಯಲ್ಲಿ ಸ್ನಾನಮಾಡಿ ದೇವತಾ ತರ್ಪಣಾದಿಗಳನ್ನು ಮಾಡಿದವನಿಗೆ ಬ್ರಹ್ಮಲೋಕ ಪ್ರಾಪ್ತಿಯುಂಟಾಗಿ ಪುನರಾವೃತ್ತಿಯಾಗದಿರಲಿ.'' ಈ ವರಗಳನ್ನು ಕೊಟ್ಟು ಭಗವಂತನು ಅಂತರ್ಧಾನ ಹೊಂದಿದನು. ಅವನ ವರದಂತೆ ಗರಡನು ವಿಷ್ಣುವಿನ ವಾಹನನಾದನು. ವಿಷ್ಣುವು ವರಾಹರೂಪವನ್ನು ತಾಳಿ ಭೂಮಿದೇವಿಯನ್ನು ಪಾತಾಳದಿಂದ ಮೇಲೆತ್ತಿ ಹಿರಣ್ಯಾಕ್ಷನನ್ನು ಹೊಡೆದು ಕೊಂದು ಅವನ ಮೇಲೆ ಶಿಲೆಯ ರೂಪದಲ್ಲಿ ನಿಂತನು. ಅದು ''ವಾರಾಹೀ ಶಿಲೆ'' ಎಂದು ಪ್ರಸಿದ್ಧವಾಗಿದೆ. ಅಲ್ಲಿ ಗಂಗೆಯ ನಿರ್ಮಲ ಜಲದಲ್ಲಿ ಸ್ನಾನಮಾಡಿ ಆ ಶಿಲೆಯ ಪೂಜೆ ಮಾಡಿದವನಿಗೆ ಎಂದೂ ದುರ್ಗತಿ ಉಂಟಾಗುವುದಿಲ್ಲ. ಹಿರಣ್ಯಕಶಿಪುವನ್ನು ಕೊಂದು ನರಸಿಂಹನು ವಿರಾಜಿಸುತ್ತಿರುವ ''ನರಸಿಂಹ ಶಿಲೆ''ಯಲ್ಲಿ ಅದರ ಹತ್ತಿರ ಸ್ನಾನ ಮತ್ತು ನರಸಿಂಹ ಶಿಲಾ ಪೂಜೆಯನ್ನು ಮಾಡುವವನು ವಿಷ್ಣುಲೋಕ ವನ್ನೇ ಪಡೆಯುತ್ತಾನೆ. ಅಲ್ಲಿರುವ ಐದನೆಯ ಶಿಲೆಯು 'ನರನಾರಾಯಣರ ಶಿಲೆ' ಕೃತಯುಗದಲ್ಲಿ ನಾರಾಯಣನು ಎಲ್ಲರಿಗೂ ಪ್ರತ್ಯಕ್ಷ ನಾಗಿದ್ದನು. ತ್ರೇತಾಯುಗದಲ್ಲಿ ಮುನಿಗಳು, ದೇವತೆಗಳು ಮತ್ತು ಯೋಗಿಗಳಿಗೆ ಮಾತ್ರವೇ ಕಾಣಿಸುತ್ತಿದ್ದನು. ದ್ವಾಪರದಲ್ಲಿ ಜ್ಞಾನಯೋಗದಿಂದ ಕೆಲವರಿಗೆ ಮಾತ್ರವೇ ದರ್ಶನವಾಗುತ್ತಿತ್ತು. ಆಗ ಬ್ರಹ್ಮಾದಿಗಳು ಆ ಭಗವಂತನನ್ನು ನಾನಾ ವಿಧವಾಗಿ ಸ್ತೋತ್ರಗಳಿಂದ ಪ್ರಸನ್ನನನ್ನಾಗಿ ಮಾಡಿದಾಗ ಅಶರೀರವಾಣಿಯಾಯಿತು- ''ದೇವತೆಗಳಿರಾ! ನಿಮಗೆ ನನ್ನ ಸ್ವರೂಪದ ದರ್ಶನಾಪೇಕ್ಷೆಯಿದ್ದರೆ ನಾರದ ಕುಂಡದಲ್ಲಿರುವ ಶಿಲೆಯನ್ನು

ಪೂಜಿಸಿರಿ'' ದೇವತೆಗಳು ನಾರದ ಕುಂಡದಿಂದ ಶಿಲೆಯನ್ನು ಮೇಲೆ ತಂದು ಪೂಜಿಸಿ ಹೊರಟು ಹೋದರು. ದೇವತೆಗಳು ಕಾರ್ತಿಕದಿಂದ ವೈಶಾಖದವರೆಗೆ ಹಿಮವಿರುವಾಗ ಬಂದು ಪೂಜೆ ಮಾಡಿ ವೈಶಾಖ ದಂದು ಹೊರಟು ಹೋಗುತ್ತಾರೆ. ವೈಶಾಖದಿಂದ ಕಾರ್ತಿಕದವರೆಗೆ ಮಂಜು ಹಿಮ ಕಡಿಮೆ ಯಾದಾಗ ಮಾನವರು ಅಲ್ಲಿ ಬಂದು ಪೂಜೆ ಮಾಡುತ್ತಾರೆ. ಹೀಗೆ ಆರು ತಿಂಗಳು ದೇವತೆಗಳ ಪೂಜೆ, ಆರು ತಿಂಗಳು ಮಾನವರ ಪೂಜೆಯ ವ್ಯವಸ್ಥೆಯು ಮುಂದುವರಿಯುತ್ತ ಇರುವಾಗ ಆ ಶಿಲೆಯಲ್ಲಿಯೇ ಭಗವಂತನ ವಿಗ್ರಹವು ಪ್ರಕಟವಾಯಿತು. ಶ್ರೀಮನ್ಮಹಾವಿಷ್ಣುವಿನ ಪ್ರತಿಮೆಯನ್ನು ಭಕ್ತಿಯಿಂದ ಪೂಜಿಸಿ, ಪ್ರಸಾದವನ್ನು ಸ್ವೀಕರಿಸುವವನು ನಿಶ್ಚಯವಾಗಿಯೂ ಮೋಕ್ಷವನ್ನೇ ಪಡೆಯುತ್ತಾನೆ. ದೇವತೆಗಳಿಗೂ ದುರ್ಲಭವಾದ ಭಗವಂತನ ನೈವೇದ್ಯದ ಒಂದು ಅಗುಳೂ ಸಹ ಪರಮ ಪವಿತ್ರ, ಪಾಪನಾಶಕವೆಂದು ತಿಳಿ.

ಮೋಹಿನಿ! ಅಲ್ಲಿ ಮತ್ತೊಂದು ಮಹಾತೀರ್ಥವಿದೆ. ಅದರ ಮಹಿಮೆಯನ್ನು ಕೇಳು. ಅಲ್ಲಿ ಭಕ್ತಿಪೂರ್ವಕವಾಗಿ ಸ್ನಾನ ಮಾಡುವ ಮಾನವನು ವೇದ ಪಾರಂಗತನಾಗುತ್ತಾನೆ. ಒಂದು ಬಾರಿ ಬ್ರಹ್ಮದೇವರು ಮಲಗಿದ್ದಾಗ ಹಯಗ್ರೀವನೆಂಬ ಅಸುರನು ವೇದಗಳನ್ನು ಕದ್ದುಕೊಂಡು ಹೋದನು. ದೇವತೆಗಳಿಗೂ ಭಯಂಕರನಾದ ಹಯಗ್ರೀವಾಸುರನನ್ನು ಸಂಹರಿಸೆಂದು ಬ್ರಹ್ಮದೇವರು ಶ್ರೀ ಹರಿಯನ್ನು ಪ್ರಾರ್ಥಿಸಿದಾಗ ಶ್ರೀ ಹರಿಯು ಮತ್ಸ್ಯ ರೂಪದಿಂದ ಆವಿರ್ಭವಿಸಿ ಹಯಗ್ರೀವಾಸುರನನ್ನು ಕೊಂದು ಬ್ರಹ್ಮದೇವರಿಗೆ ವೇದಗಳನ್ನು ಹಿಂತಿರುಗಿ ತಂದು ಕೊಟ್ಟನು. ಸರ್ವವಿದ್ಯಾ ಪ್ರಕಾಶಕವಾದ ಆ ಪುಣ್ಯ ತೀರ್ಥಕ್ಕೆ 'ತೈಮಿಂಗಲ' ತೀರ್ಥವೆಂದು ಹೆಸರು. ಅದು ದರ್ಶನ ಮಾತ್ರದಿಂದಲೇ ಸರ್ವಪಾಪನಾಶಕವೆಂದು ತಿಳಿ. ಹಿಂದೆ ಒಂದಾನೊಂದು ಸಮಯದಲ್ಲಿ ಮಧುಕೈಟಭ ರೆಂಬ ಅಸುರರು ವೇದವನ್ನು ಅಪಹರಿಸಿದಾಗ ನಾರಾಯಣನು ಹಯಗ್ರೀವ ರೂಪದಿಂದ ಅವರನ್ನು ಸಂಹರಿಸಿದನು. ಆ ಸ್ಥಳವೇ 'ಹಯಗ್ರೀವ ತೀರ್ಥವು'. ಹಿಂದೆ ಹೇಳಿದ 'ಮತ್ಸ್ಯತೀರ್ಥ' ಮತ್ತು 'ಹಯಗ್ರೀವ ತೀರ್ಥಗಳಲ್ಲಿ' ವೇದಗಳು ದ್ರವರೂಪದಿಂದ ಸನ್ನಿಹಿತವಾಗಿವೆ. ಇವೆರಡೂ ಸರ್ವಪಾಪ ನಾಶಕಗಳು, ಅಲ್ಲಿಯೇ ಇರುವ ಮಾನಸೋದ್ಭೇದ ತೀರ್ಥವು ಹೃದಯ ಗ್ರಂಥಿಗಳನ್ನೆಲ್ಲ ಭೇದಿಸಿ, ಸಮಸ್ತ ಸಂಶಯ ಮತ್ತು ಪಾಪಗಳನ್ನು ನಾಶ ಮಾಡಿ ಮೋಕ್ಷವನ್ನೇ ಕರುಣಿಸುತ್ತದೆ. ಅಲ್ಲಿರುವ ''ಕಾಮಾಕಾಮ'' ತೀರ್ಥವು ಸಕಾಮ ಪುರುಷರಿಗೆ 'ಕಾಮಿತ'ವನ್ನು ಕೊಡುತ್ತದೆ. ಅಕಾಮರಿಗೆ 'ಮೋಕ್ಷವನ್ನೇ' ಕೊಡುತ್ತದೆ. ಅಲ್ಲಿಗೆ ಪಶ್ಚಿಮದಲ್ಲಿರುವ 'ವಸುಧಾರಾ ತೀರ್ಥವು' ಭಕ್ತಿ ಪೂರ್ವಕ ಸ್ನಾನದಿಂದ ಇಚ್ಛೆಸಿದ ಫಲವನ್ನು ನೀಡುತ್ತದೆ.

'ವಸುಧಾರಾ ತೀರ್ಥದಲ್ಲಿ' ಮುಳುಗಿದಾಗ ಪುಣ್ಯಾತ್ಮರಿಗೆ ದಿವ್ಯ ಜ್ಯೋತಿಸ್ಸಿನ ದರ್ಶನ ವಾಗುತ್ತದೆ. ಅದನ್ನು ಕಂಡವರಿಗೆ ಪುನರ್ಜನ್ಮವಿಲ್ಲ. ಅಲ್ಲಿಂದ ನೈಋತ್ಯ ಕೋಣದಲ್ಲಿ 'ಪ್ರಭಾಸ', 'ಪುಷ್ಕರ', 'ಗಯಾ', 'ನೈಮಿಷಾರಣ್ಯ', 'ಕುರುಕ್ಷೇತ್ರ'ವೆಂಬ ಪಂಚಧಾರಾ ತೀರ್ಥವಿದೆ. ಅಲ್ಲಿ ಪ್ರತ್ಯೇಕವಾಗಿ ಸ್ನಾನ ಮಾಡಿದ ಮಾನವನು ಆಯಾ ತೀರ್ಥಗಳ ವಿಶಿಷ್ಟ ಫಲವನ್ನು ಪಡೆಯುತ್ತಾನೆ. 'ವಿಮಲ ತೀರ್ಥ' ಅಥವಾ 'ಸೋಮಕುಂಡ'ವೆಂದು ಪ್ರಖ್ಯಾತವಾದ ತೀರ್ಥದಲ್ಲಿ ಚಂದ್ರನು ಬಹುಕಾಲ ತಪಸ್ಸು ಮಾಡಿ ಗ್ರಹಾಧಿಪತಿಯಾದನು. ಆ ತೀರ್ಥ ಸ್ನಾನದಿಂದ ಮಾನವನು ಕಲಂಕರಹಿತನಾಗುತ್ತಾನೆ. ಸರ್ವಪಾಪ ಪರಿಹಾರಕವಾದ 'ದ್ವಾದಶಾದಿತ್ಯತೀರ್ಥ'ದಲ್ಲಿ ಸ್ನಾನ ಮಾಡುವ ಮಾನವನು ಸೂರ್ಯನಂತೆ

ತೇಜಸ್ವಿಯಾಗುತ್ತಾನೆ. 'ಚತುಸ್ರೋತ ತೀರ್ಥ'ದಲ್ಲಿ ಸ್ನಾನ ಮಾಡುವವನು ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನು ಪಡೆಯುತ್ತಾನೆ. 'ಸಪ್ತಪದ ತೀರ್ಥ'ದ ದರ್ಶನ ಮಾತ್ರದಿಂದ ಮಹಾಪಾತಕಗಳು ನಾಶವಾಗುತ್ತವೆ. ಅದರ ಸ್ನಾನದ ಫಲವನ್ನು ಹೇಳಬೇಕಾಗಿಯೇ ಇಲ್ಲ. ಈ ತೀರ್ಥಕುಂಡದ ಮೂರು ಮೂಲೆಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಇರುತ್ತಾರೆ.

ಅಲ್ಲಿ ಮೃತನಾದವನು ವಿಷ್ಣು ಸ್ಥಾನವನ್ನು ಪಡೆಯುತ್ತಾನೆ. ಅಲ್ಲಿಂದ ದಕ್ಷಿಣ ಭಾಗದಲ್ಲಿರುವ ಅಸ್ತ್ರ ತೀರ್ಥದಲ್ಲಿ ನರ-ನಾರಾಯಣರು ತಮ್ಮ ಅಸ್ತ್ರಗಳನ್ನು ಎಸೆದು ತಪಸ್ಸು ಮಾಡಲು ತೊಡಗಿದರು. ಆ ತೀರ್ಥದಲ್ಲಿ ಪುಣ್ಯಾತ್ಮರಾದ ಮಾನವರಿಗೆ ಶಂಖ ಚಕ್ರಾದಿದಿವ್ಯಾಯುಧಗಳು ಮೂರ್ತಿಮತ್ತಾಗಿ ಕಾಣಿಸುತ್ತವೆ. ಈ ತೀರ್ಥದ ಸ್ನಾನವು ಶತ್ರುಭಯ ನಾಶಕವು. ಅಲ್ಲಿಯೇ ಇರುವ ಮೇರು ತೀರ್ಥದ ಸ್ನಾನ ಮತ್ತು ಧನುರ್ಧರ ಶ್ರೀ ಹರಿಯ ದರ್ಶನ ಅಖಿಲ ಮನೋರಥಗಳನ್ನು ಕೊಡುತ್ತವೆ. ಅಲ್ಲಿಯೇ ಭಾಗೀರಥೀ ಅಲಕ ನಂದಾ ಸಂಗಮವಿದೆ. ದೇವ ಪ್ರಯಾಗವೆಂದು ಪ್ರಸಿದ್ಧವಾದ ಈ ಸರ್ವಶ್ರೇಷ್ಠ ತೀರ್ಥದ ಸ್ನಾನ, ದೇವತಾ ಪಿತೃತರ್ಪಣ, ಭಕ್ತಿಯಿಂದ ಭಗವಂತನ ಪೂಜನ ಇವೆಲ್ಲವೂ ವಿಷ್ಣುಲೋಕ ಸಾಧಕಗಳು. ಸಂಗಮದ ದಕ್ಷಿಣ ಭಾಗದಲ್ಲಿರುವ 'ಧರ್ಮಕ್ಷೇತ್ರವು' ಸಮಸ್ತ ತೀರ್ಥಗಳಲ್ಲಿ ಪ್ರಧಾನವು. ಅಲ್ಲಿಯೇ ಹತ್ತಿರವಿರುವ 'ಕರ್ಮೋದ್ಧಾರ ತೀರ್ಥ'ವು ಭಗವಂತನ ಭಕ್ತಿಗೆ ಸಾಧನವು. 'ಬ್ರಹ್ಮಾವರ್ತ ತೀರ್ಥ'ವು ಬ್ರಹ್ಮಲೋಕ ಪ್ರಾಪ್ತಿಗೆ ಮುಖ್ಯ ಸಾಧನವು. ಹೀಗೆ ಗಂಗೆಯಲ್ಲಿ ಬದರಿಕಾಶ್ರಮದಲ್ಲಿರುವ ಕೆಲಕೆಲವು ತೀರ್ಥಗಳನ್ನು ನಿನಗೆ ಹೇಳಿದ್ದಾಯಿತು. ಆದರೆ ಅಲ್ಲಿರುವ ಎಲ್ಲಾ ತೀರ್ಥಗಳನ್ನು ಬ್ರಹ್ಮದೇವರೂ ವರ್ಣಿಸಲಾರರು. ಭಕ್ತನಾದ ಬ್ರಹ್ಮಚರ್ಯ ವ್ರತನಿಷ್ಠನಾದ ಸಾಧಕನು ಒಂದು ತಿಂಗಳು ಅಲ್ಲಿದ್ದು ತೀರ್ಥ ಸ್ನಾನ ಮಾಡುತ್ತಾ ಇದ್ದರೆ, ನರನಾರಾಯಣರ ಸಾಕ್ಷಾತ್ ದರ್ಶನವು ಅವನಿಗೆ ಲಭ್ಯವಾಗುತ್ತದೆ.

## ಪ್ರಭಾಸಕ್ಷೇತ್ರ ಮಹಿಮಾ ಅಲ್ಲಿರುವ ತೀರ್ಥಗಳು

**ವಸು:-** ಪ್ರಭಾಸ ತೀರ್ಥವು ಸಮಸ್ತ ಪಾಪನಾಶಕ ಮತ್ತು ಭೋಗ ಮೋಕ್ಷಪ್ರದವಾಗಿದೆ. ಅಲ್ಲಿ ಅಸಂಖ್ಯ ತೀರ್ಥಗಳಿವೆ. ಅಲ್ಲಿಯೇ ಗಿರಿಜಾಪತಿಯಾದ ಶಿವನು ಸೋಮನಾಥ ಎಂಬ ಹೆಸರಿನಿಂದ ವಿರಾಜಿಸುತ್ತಿದ್ದಾನೆ. ಪ್ರಭಾಸತೀರ್ಥ ಸ್ನಾನ ಮತ್ತು ಸೋಮನಾಥ ದರ್ಶನದಿಂದ ಮಾನವನಿಗೆ ಮೋಕ್ಷ ಸಾಧನವಾಗುತ್ತದೆ. ಹನ್ನೆರಡು ಯೋಜನ ವಿಸ್ತಾರವಾದ ಪ್ರಭಾಸ ಮಂಡಲದ ಮಧ್ಯದಲ್ಲಿ ಈ ತೀರ್ಥದ ಪೀಠಿಕೆ (ಪೀಠ) ಯಿದೆ. ಅದು ಐದು ಯೋಜನ ವಿಸ್ತಾರವುಳ್ಳದ್ದು. ಅದರ ಮಧ್ಯ ಭಾಗದಲ್ಲಿ ಗೋಚರ್ಮ ವಿಸ್ತಾರದ ಸ್ಥಳದಲ್ಲಿ (೨,೦೦೦ ಮೊಳ ಉದ್ದಗಲದ ಸ್ಥಳ) ಒಂದುತೀರ್ಥವಿದೆ. ಅದು ಕೈಲಾಸಕ್ಕಿಂತಲೂ ಶ್ರೇಷ್ಠವು. ಅಲ್ಲಿಯೇ ಇರುವ ಅರ್ಕಸ್ಥಲ ತೀರ್ಥದಲ್ಲಿ ಸಿದ್ಧೇಶ್ವರಾದಿ ಸಾವಿರಾರು ಲಿಂಗಗಳಿವೆ. ಅಲ್ಲಿ ಸ್ನಾನ ಮಾಡಿ ಭಕ್ತಿಯಿಂದ ದೇವ ಪಿತೃ ತರ್ಪಣವನ್ನು ಶಿವಲಿಂಗಗಳ ಪೂಜೆಯನ್ನು ಮಾಡಿ ಮಾನವನು ರುದ್ರ ಲೋಕವನ್ನು ಪಡೆಯುತ್ತಾನೆ. ಸಮುದ್ರ ತೀರದಲ್ಲಿರುವ ಅಗ್ನಿತೀರ್ಥದಲ್ಲಿ ಸ್ನಾನ ಮಾಡಿದರೆ ಅಗ್ನಿಲೋಕ ಪ್ರಾಪ್ತಿಯಾಗುತ್ತದೆ. ಅಲ್ಲಿ ಉಪವಾಸವಾಗಿದ್ದು ಕಪರ್ದೀಶ್ವರನ ಪೂಜೆ ಮಾಡುವ ಮಾನವನು ಇಹದಲ್ಲಿ ಬಯಸಿದ ಬಯಕೆಗಳನ್ನುಂಡು ಕೊನೆಗೆ ಶಿವಲೋಕವನ್ನು ಸೇರುತ್ತಾನೆ. ವಿಧಿಪೂರ್ವಕವಾಗಿ ಅಲ್ಲಿಯೇ ಇರುವ ಕೇದಾರೇಶ್ವರನನ್ನು ಪೂಜಿಸಿದವನು

ದೇವಪೂಜಿತನಾಗಿ ವಿಮಾನದ ಮೂಲಕ ದೇವಲೋಕವನ್ನೈದುತ್ತಾನೆ. ಹೀಗೆ ಕಪರ್ದೀಶ್ವರ ಕೇದಾರೇಶ್ವರರು ಆದ ಮೇಲೆ ಕ್ರಮವಾಗಿ ಭೀಮೇಶ್ವರ ಭೈರವೇಶ್ವರ ಚಂಡೀಶ್ವರ, ಭಾಸ್ಕರೇಶ್ವರ, ಅಂಗಾರಕೇಶ್ವರ, ಗುರ್ವೀಶ್ವರ, ಸೋಮೇಶ್ವರ, ಭೃಗುಜೇಶ್ವರ, ಶನೀಶ್ವರ, ರಾಹ್ವೀಶ್ವರ, ಕೇತ್ವೀಶ್ವರ, ಒಟ್ಟು ಹದಿನಾಲ್ಕು ಲಿಂಗಗಳನ್ನು ಪ್ರತ್ಯೇಕವಾಗಿ ಭಕ್ತಿಯಿಂದ ಪೂಜಿಸಿದವನಿಗೆ ಶಿವಸಾಲೋಕ್ಯ, ಮತ್ತು ನಿಗ್ರಹಾನುಗ್ರಹ ಸಾಮರ್ಥ್ಯಗಳು ಉಂಟಾಗುತ್ತವೆ. ವರಾರೋಹಾ, ಅಜಪಾಲಾ, ಮಂಗಲಾ, ಲಲಿತೇಶ್ವರೀ ಎಂಬ ದೇವಿಯರನ್ನೂ ಕ್ರಮವಾಗಿ ಪೂಜಿಸಿದವನು ಪಾಪರಹಿತನಾಗುತ್ತಾನೆ. ಲಕ್ಷ್ಮೀಶ್ವರ, ಬಾಡಬೇಶ್ವರ, ಅರ್ಘೇಶ್ವರ, ಕಾಮಕೇಶ್ವರರನ್ನು ಭಕ್ತಿಯಿಂದ ಪೂಜಿಸಿದ ಮಾನವನು ಬ್ರಹ್ಮನ ಲೋಕವನ್ನು ಪಡೆಯುತ್ತಾನೆ. ಗೌರೀ ತಪೋವನದಲ್ಲಿರುವ ಗೌರೀಶ್ವರ, ವರುಣೇಶ್ವರ ಮತ್ತು ಉಷೇಶ್ವರರ ಪೂಜೆಯನ್ನು ಮಾಡುವ ಮಾನವನು ಸ್ವರ್ಗಲೋಕವನ್ನು ಪಡೆಯುತ್ತಾನೆ. ಗಣೇಶ, ಕುಮಾರೇಶ, ಸ್ವಾಕಕೇಶ, ಕುಲೇಶ್ವರ, ಉಪ್ತಂಕೇಶ, ವಹ್ನೀಶ, ಗೌತಮ, ದೈತ್ಯಸೂದನ ಈ ದೇವತೆಗಳ ವಿಧಿವತ್ತಾದ ಪೂಜೆಯನ್ನು ಮಾಡಿದವನು ದುರ್ಗತಿಯನ್ನು ಪಡೆಯುವುದಿಲ್ಲ. ಚಕ್ರತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಗೌರೀದೇವಿಯ ಪೂಜೆ ಮಾಡಿದ ಮಾನವನು ಇಷ್ಟಾರ್ಥಸಿದ್ಧಿಯನ್ನೇ ಪಡೆಯುತ್ತಾನೆ. ಸನ್ನಿಹಿತ ತೀರ್ಥದಲ್ಲಿ ಸ್ನಾನ, ದೇವತಾದಿತರ್ಪಣಗಳನ್ನು ಮಾಡಿದಾಗ ಗೌರೀದೇವಿಯ ಪೂಜೆಯ ಪೂರ್ಣ ಫಲವುಂಟಾಗುತ್ತದೆ. ಭೂತೇಶ್ವರಾದಿ ಹನ್ನೊಂದು ಲಿಂಗಗಳ ಪೂಜೆ ಮಾಡುವವನಿಗೆ ಇಹದಲ್ಲಿ ಉತ್ತಮ ಭೋಗ, ಪರದಲ್ಲಿ ಶಿವಸನ್ನಿಧಿಗಳು ಲಭ್ಯವಾಗುತ್ತವೆ. ಆದಿ ನಾರಾಯಣನ ಪೂಜೆ ಮಾಡುವವನು ಮೋಕ್ಷಭಾಗಿಯಾಗುತ್ತಾನೆ.

ಅನಂತರ ನಾರಾಯಣ ದೇವರ ಪೂಜೆ ಮಾಡಿದವನಿಗೆ ಮೋಕ್ಷ ಲಾಭವಾಗುತ್ತದೆ. ತಪ್ತಕುಂಡೋದಕದಲ್ಲಿ ಸ್ನಾನ ಮಾಡಿ ತೀರದಲ್ಲಿರುವ ಮೂಲ ಚಂಡೀಶ್ವರನ ಪೂಜೆ ಮಾಡುವುದರಿಂದ ಎಲ್ಲ ಪಾಪಗಳು ದೂರವಾಗುತ್ತವೆ. ಮತ್ತು ಇಷ್ಟ ವಸ್ತುಗಳ ಲಾಭವಾಗುತ್ತದೆ. ಚತುರ್ಮುಖ ವಿನಾಯಕನ ಪೂಜೆಯಿಂದ ಅಭೀಷ್ಟ ವಸ್ತುವಿನ ಪ್ರಾಪ್ತಿಯಾಗುತ್ತದೆ. ಕ್ಷೇಮಾದಿತ್ಯನ ಪೂಜೆಯಿಂದ ಕ್ಷೇಮ ಲಾಭ, ಮನೋರಥ, ಸಾಫಲ್ಯ, ಮತ್ತು ಅಭೀಷ್ಟ ವಸ್ತುಗಳ ಲಾಭ ಇವು ಉಂಟಾಗುತ್ತದೆ. ರುಕ್ಮಿಣೀ ದೇವಿಯು ತನ್ನ ಪೂಜಕರಿಗೆ ಅಭೀಷ್ಟ ವಸ್ತುಗಳನ್ನು ಕೊಡುತ್ತಾಳೆ. ದುರ್ವಾಸೇಶ್ವರ ಮತ್ತು ಪಿಂಗೇಶ್ವರರ ಪೂಜೆಯಿಂದ ಮಾನವನು ಪಾಪಮುಕ್ತನಾಗುತ್ತಾನೆ. ಭದ್ರಾ ಸಂಗಮದಲ್ಲಿ ಸ್ನಾನಮಾಡಿದವನು ನೂರಾರು ಮಂಗಳ ಸಮಾರಂಭಗಳನ್ನು ನೋಡುತ್ತಾನೆ. ಮೋಕ್ಷ ತೀರ್ಥದಲ್ಲಿ ಸ್ನಾನ ಮಾಡಿದವನು ಭವಸಾಗರದಿಂದ ಉತ್ತೀರ್ಣನಾಗುತ್ತಾನೆ. ನಾರಾಯಣ ಗೃಹ (ತೀರ್ಥ)ಕ್ಕೆ ಹೋದವನು ಪುನಃ ಎಂದೂ ಶೋಕಭಾಗಿ ಯಾಗುವುದಿಲ್ಲ. ಹುಂಕಾರ ತೀರ್ಥದಲ್ಲಿ ಸ್ನಾನ ಮಾಡಿದವನು ಪುನಃ ಗರ್ಭವಾಸದ ಕ್ಲೇಶವನ್ನು ಹೊಂದುವುದಿಲ್ಲ. ಚಂಡೀಶ್ವರನ ಪೂಜೆ ಮಾಡಿದವನಿಗೆ ಎಲ್ಲಾ ತೀರ್ಥಗಳ ಸ್ನಾನದ ಫಲವೂ ಪ್ರಾಪ್ತವಾಗುತ್ತದೆ. ಆಶಾಪುರ ನಿವಾಸಿಯಾದ ವಿಘ್ನೇಶ್ವರನ ಪೂಜೆಯಿಂದ ಎಲ್ಲಾ ತೀರ್ಥಗಳ ಫಲವೂ ಪ್ರಾಪ್ತವಾಗುತ್ತದೆ. ಕಲಾಕುಂಡದಲ್ಲಿ ಸ್ನಾನ ಮಾಡಿದವನು ನಿಸ್ಸಂದೇಹವಾಗಿ ಮೋಕ್ಷ ಭಾಗಿಯಾಗುತ್ತಾನೆ. ನಾರದೇಶ್ವರನ ಪೂಜೆ ಮಾಡಿದವನು ವಿಷ್ಣು ಶಂಕರರ ಭಕ್ತನಾಗುತ್ತಾನೆ. ಭಲ್ಲತೀರ್ಥದಲ್ಲಿ ಸ್ನಾನ ಮಾಡಿದ ಮಾನವನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.

ಕರ್ದಮಾಲ ತೀರ್ಥವೂ ಅದೇ ಫಲವನ್ನು ಕೊಡುತ್ತದೆ, ಗುಪ್ತ ಸೋಮನಾಥ ಮತ್ತು ಶೃಂಗೇಶ್ವರರ ಪೂಜೆಯಿಂದ ದುಃಖ ಪರಿಹಾರ, ನಾರಾಯಣ ತೀರ್ಥಸ್ನಾನದಿಂದ ಮಾನವನಿಗೆ ಮೋಕ್ಷ ಪ್ರಾಪ್ತಿಗಳೂ ಆಗುತ್ತವೆ. ಮಾರ್ಕಂಡೇಶ್ವರ ಪೂಜೆಯಿಂದ ದೀರ್ಘಾಯುಷ್ಯ, ಕೋಟಿಹ್ರದದ ಸ್ನಾನ ಮತ್ತು ಕೋಟೀಶ್ವರ ದರ್ಶನ ಪೂಜನದಿಂದ ಸರ್ವ ಸುಖಗಳೂ ಉಂಟಾಗುತ್ತವೆ. ಸಿದ್ಧ ಸ್ಥಾನದಲ್ಲಿ ಸ್ನಾನಮಾಡಿ ಅಲ್ಲಿರುವ ಅಸಂಖ್ಯ ಶಿವಲಿಂಗಗಳನ್ನು ಪೂಜಿಸುವವನು ಈ ಭೂಮಿಯಲ್ಲಿ ಸಿದ್ಧಪುರುಷನಾಗುತ್ತಾನೆ. ದಾಮೋದರ ಗೃಹದರ್ಶನದಿಂದ ಉತ್ತಮ ಸುಖ ಪ್ರಾಪ್ತಿಯಾಗುತ್ತದೆ. ಪ್ರಭಾಸದ ನಾಭಿಸ್ಥಾನದಲ್ಲಿ 'ವಸ್ತ್ರಾಪಥ ತೀರ್ಥ'ವಿದೆ. ಅಲ್ಲಿ ಶಂಕರನ ಆರಾಧನೆ ಮಾಡಿದವನು ಶಂಕರನ ಸಮಾನನಾಗುತ್ತಾನೆ. ದಾಮೋದರದಲ್ಲಿ 'ಸ್ವರ್ಣರೇಖಾತೀರ್ಥ', ರೈವತಕ ಪರ್ವತದಲ್ಲಿ 'ಬ್ರಹ್ಮಕುಂಡ', ಉಜ್ಜಯಂತ ತೀರ್ಥದಲ್ಲಿ 'ಕುಂತೀಶ್ವರ' ಮತ್ತು ಮಹಾತೇಜಸ್ವಿಯಾದ 'ಭೀಮೇಶ್ವರ', ವಸ್ತ್ರಾಪಥ ಕ್ಷೇತ್ರದಲ್ಲಿ 'ಮೃಗೀಕುಂಡ ತೀರ್ಥ'ಗಳೇ ತೀರ್ಥ ಸರ್ವಸ್ವವಾಗಿವೆ. ಇವುಗಳಲ್ಲಿ ಕ್ರಮವಾಗಿ ಸ್ನಾನ ಮಾಡಿದರೆ, ದೇವತಾ ಪೂಜಾ, ಮತ್ತು ಪಿತೃತರ್ಪಣ ಮಾಡಿದರೆ ಮಾನವನು ಎಲ್ಲ ತೀರ್ಥಗಳ ಫಲವನ್ನು ಪಡೆಯುತ್ತಾನೆ. ಗಂಗೇಶ್ವರ ಪೂಜೆಯಿಂದ 'ಗಂಗಾಸ್ನಾನ' ಫಲವು ಪ್ರಾಪ್ತವಾಗುತ್ತದೆ. ಅವುಗಳಲ್ಲಿ ಸ್ನಾನ ಮಾಡಿ ಭಕ್ತಿ ಪೂರ್ವಕವಾಗಿ ಬ್ರಹ್ಮ, ವಿಷ್ಣು, ಶಿವ ಮತ್ತು ಇಂದ್ರಾದಿ ಲೋಕ ಪಾಲಕರ ಪೂಜೆ ಮಾಡುವುದರಿಂದ ಮಾನವನಿಗೆ ಭೋಗ ಮೋಕ್ಷಗಳೆರಡೂ ಪ್ರಾಪ್ತವಾಗುತ್ತವೆ. ಮೋಹಿನಿ! ಸಂಕ್ಷೇಪವಾಗಿಯೇ ನಿನಗೆ ತೀರ್ಥಗಳನ್ನು ವರ್ಣಿಸಿದ್ದೇನೆ. ಈ ತೀರ್ಥಗಳ ಅವಾಂತರ ಭೇದಗಳು ಅನಂತವಾಗಿವೆ. ಅವುಗಳ ವರ್ಣನೆ ಮಾಡಲು ಸಾಧ್ಯವೇ ಇಲ್ಲ. ಮೂರು ಲೋಕಗಳಲ್ಲಿಯೂ ಪ್ರಭಾಸಕ್ಕೆ ಸಮಾನವಾದ ಕ್ಷೇತ್ರವಿಲ್ಲ.

## ಪುಷ್ಕರ ಮಹಿಮೆ

**ಮೋಹಿನಿ:-** ದ್ವಿಜಶ್ರೇಷ್ಠರೆ, ಪ್ರಭಾಸ ಕ್ಷೇತ್ರದ ಅತ್ಯಂತ ಪುಣ್ಯದಾಯಕವಾದ ಮಹಿಮೆಯನ್ನು ಕೇಳಿದ್ದಾಯಿತು. ಈಗ ನನ್ನ ತಂದೆಯ ಯಜ್ಞ ಕ್ಷೇತ್ರವಾದ ಪುಷ್ಕರದ ಮಹಿಮೆಯನ್ನು ವಿಸ್ತಾರವಾಗಿ ಹೇಳಿರಿ.

**ಪುರೋಹಿತ ವಸುಗಳು:-** ಮೋಹಿನಿ! ಮಾನವರಿಗೆ ಅಭೀಷ್ಟ ವಸ್ತುಗಳನ್ನು ಕೊಡುವ ಪವಿತ್ರವಾದ ಪುಷ್ಕರದ ಮಹಿಮೆಯನ್ನು ಹೇಳುತ್ತೇನೆ. ಕೇಳು. ಇದರಲ್ಲಿ ಇತರ ಅನೇಕ ತೀರ್ಥಗಳ ಮಹಿಮೆಯ ಸಮ್ಮಿಲಿತವಾಗಿದೆ. ವಿಷ್ಣುವಿನ ಜೊತೆಗೆ ಇಂದ್ರಾದಿ ದೇವತೆಗಳು ಗಣೇಶ, ರೈವತ ಮತ್ತು ಸೂರ್ಯರು ಶೋಭಿಸುತ್ತಿರುವ ಪುಷ್ಕರ ವನದಲ್ಲಿ ವಾಸ ಮಾಡುತ್ತಿದ್ದರೆ, ಇತರ ಯಾವ ತಪಸ್ಸೂ ಇಲ್ಲದೆ ಅಷ್ಟಾಂಗಯೋಗದ ಫಲವನ್ನು ಪಡೆಯುತ್ತಾನೆ. ಭೂಮಿಯಲ್ಲಿ ಪುಷ್ಕರಕ್ಕಿಂತ ಶ್ರೇಷ್ಠ ತೀರ್ಥವಿಲ್ಲ. ಆದ್ದರಿಂದ ಶ್ರೇಷ್ಠ ಮಾನವರು ಸರ್ವ ಪ್ರಯತ್ನದಿಂದಲೂ ಪುಷ್ಕರವನ್ನು ಸೇವಿಸಬೇಕು.

ಪುಷ್ಕರತೀರ್ಥದ ದಕ್ಷಿಣಭಾಗದ ಪರ್ವತಶಿಖರದಲ್ಲಿ ಸಾವಿತ್ರೀದೇವಿಯು ವಿರಾಜಿಸುತ್ತಿದ್ದಾಳೆ. ಆ ದೇವಿಯು ಪೂಜಕರಿಗೆ ವೇದ ತತ್ತ್ವಜ್ಞಾನವನ್ನು ಕರುಣಿಸುತ್ತಾಳೆ. ಅಲ್ಲಿ ಭಗವಂತನಾದ ವರಾಹ, ನರಸಿಂಹ, ಬ್ರಹ್ಮ, ವಿಷ್ಣು, ಶಿವ, ಸೂರ್ಯ, ಚಂದ್ರ, ಸುಬ್ರಹ್ಮಣ್ಯ, ಪಾರ್ವತಿ ಮತ್ತು ಅಗ್ನಿದೇವತೆಯ ಪ್ರತ್ಯೇಕವಾದ ತೀರ್ಥಗಳಿವೆ. ಮನುಷ್ಯನು

ಏಕಾಗ್ರಚಿತ್ತನಾಗಿ ಆ ತೀರ್ಥಗಳಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ದಾನ ಮಾಡಿದರೆ ಉತ್ತಮ ಗತಿಯನ್ನು ಪಡೆಯುತ್ತಾನೆ. ಪುಷ್ಕರ ಸ್ನಾನವೂ, ಪುಷ್ಕರದಲ್ಲಿ ತಪಸ್ಸು ಮಾಡುವ ಯೋಗವೂ, ಪುಷ್ಕರದಲ್ಲಿ ವಾಸಮಾಡುವ ಸಂಯೋಗವೂ ಅತ್ಯಂತ ದುರ್ಲಭ, ಪುಷ್ಕರದಲ್ಲಿ ದಾನಮಾಡುವ ಯೋಗವು ದುರ್ಲಭ, ನೂರು ಯೋಜನ ದೂರದಲ್ಲಿದ್ದರೂ ಸ್ನಾನಮಾಡುವ ಸಮಯದಲ್ಲಿ ಪುಷ್ಕರವನ್ನು ಸ್ಮರಿಸಿದರೆ, ಪುಷ್ಕರದಲ್ಲಿ ಸ್ನಾನಮಾಡಿದ ಫಲವು ಲಭ್ಯವಾಗುತ್ತದೆ.

## ಗೌತಮಾಶ್ರಮದ ಮಹಿಮೆ

**ಮೋಹಿನಿ:-** ವಸು ಮಹಾನುಭಾವರೇ! ನಾನು ಪಾಪನಾಶಕವಾದ ಪುಷ್ಕರ ಮಹಿಮೆಯನ್ನು ಕೇಳಿದೆನು. ಈಗ ತಾವು ಗೌತಮಾಶ್ರಮದ ಮಹತ್ವವನ್ನು ಹೇಳಿರಿ.

**ವಸು ಪುರೋಹಿತರು:-** ಮೋಹಿನಿ! ಗೌತಮ ಮಹರ್ಷಿಗಳ ಆಶ್ರಮವು ಪರಮ ಪವಿತ್ರವೂ ಮತ್ತು ದೇವರ್ಷಿಸೇವಿತವೂ ಆಗಿದೆ. ಎಲ್ಲ ಉಪದ್ರವಗಳನ್ನು ಪರಿಹರಿಸಿ, ಶಾಂತಿಯನ್ನುಂಟು ಮಾಡುವ ಗೌತಮಾಶ್ರಮವು ಅಸಾಧಾರಣವಾದುದು. ಮಾನವನು ಭಕ್ತಿಭಾವದಿಂದ ಹನ್ನೆರಡು ವರ್ಷ ಗೌತಮಾಶ್ರಮದಲ್ಲಿ ವಾಸಮಾಡುತ್ತ ಭಗವಂತನನ್ನು ಸೇವಿಸುತ್ತಿದ್ದರೆ ಶಿವಧಾಮವನ್ನು ಪಡೆಯುತ್ತಾನೆ. ಶೋಕಾನುಭವವು ಪುನಃ ಅವನಿಗೆಂದಿಗೂ ಉಂಟಾಗುವುದಿಲ್ಲ.

## ಗೋದಾವರಿಯು ಪ್ರಕಟಳಾದಳು

ಮಹರ್ಷಿಗೌತಮರು ಅಲ್ಲಿ ತಪಸ್ಸು ಮಾಡುತ್ತಿದ್ದಾಗ ಒಂದು ಬಾರಿ ಹನ್ನೆರಡು ವರ್ಷಗಳವರೆಗೆ ಭಯಂಕರವಾದ ಅನಾವೃಷ್ಟಿಯುಂಟಾಯಿತು. ಅನೇಕಾನೇಕ ಜೀವಜಂತುಗಳು, ನೀರು ಆಹಾರವಿಲ್ಲದೆ ಸತ್ತು ಹೋದವು. ಆ ಭಯಾನಕ ದುರ್ಭಿಕ್ಷ ಸಮಯದಲ್ಲಿ ಅನೇಕಾನೇಕ ಮುನಿಗಳು ಬೇರೆ ಬೇರೆ ದೇಶಗಳಿಂದ ಅಲ್ಲಿಗೆ ಬಂದರು. ಗೌತಮಾಶ್ರಮವನ್ನೇ ಸೇರಿದರು. ಅವರು ಗೌತಮರನ್ನು ಈ ರೀತಿ ಪ್ರಾರ್ಥಿಸಿದರು - ''ತಾವು ನಮಗೆ ಆಹಾರ ಕೊಟ್ಟರೆ ನಮ್ಮ ಪ್ರಾಣಗಳು ಈ ದೇಹದಲ್ಲಿರುತ್ತವೆ. ನಾವು ಸ್ವಲ್ಪವಾದರೂ ತಪಸ್ಸು ಮಾಡಲು ಸಾಧ್ಯವಾಗುತ್ತದೆ. ಇಲ್ಲವಾದರೆ ನಾವೆಲ್ಲರೂ ಮೃತರಾಗುತ್ತೇವೆ.'' ಮುನಿಗಳ ಪ್ರಾರ್ಥನೆಯನ್ನು ಕೇಳಿ ಗೌತಮರಿಗೆ ದಯೆಯುಂಟಾಯಿತು. ಅವರು ತನ್ನ ಮೇಲೆ ಅಷ್ಟು ವಿಶ್ವಾಸವಿಟ್ಟು ಮಾತಾಡುವ ಋಷಿಗಳಿಗೆ ತಮ್ಮ ತಪೋಬಲದ ಭರವಸೆಯಿಂದ ಈ ರೀತಿ ಹೇಳಿದರು.

**ಗೌತಮ:-** ''ಮುನಿಗಳೇ! ನೀವೆಲ್ಲರೂ ನನ್ನ ಆಶ್ರಮದಲ್ಲಿ ಮತ್ತು ಸಮೀಪದಲ್ಲಿಯೇ ಆಶ್ರಮಗಳನ್ನು ಕಟ್ಟಿಕೊಂಡು ವಾಸಮಾಡಿರಿ. ಈ ದುರ್ಭಿಕ್ಷವು ಮುಗಿಯುವವರೆಗೂ ನಾನು ನಿಮಗೆ ಭೋಜನವನ್ನು ಒದಗಿಸುತ್ತೇನೆ.'' ಹೀಗೆ ಹೇಳಿ ಗೌತಮರು ತಪೋಬಲದಿಂದ ಗಂಗಾದೇವಿಯ ಧ್ಯಾನ ಮಾಡಿದರು. ಅವರು ಸ್ಮರಿಸುತ್ತಲೇ ಗಂಗಾದೇವಿಯು ಭೂಮಿಯನ್ನು ಭೇದಿಸಿ ಪ್ರಕಟಳಾದಳು. ಗಂಗೆಯು ಪ್ರಕಟಳಾದುದನ್ನು ನೋಡಿ ಮಹರ್ಷಿಗಳು ಸಂತೋಷಪಟ್ಟರು. ಅವರು ಬೆಳಿಗ್ಗೆ ಸುಗ್ಗಿಯ (ಭತ್ತದ) ಬೀಜವನ್ನು ಬಿತ್ತಿದರು. ಮಧ್ಯಾಹ್ನವಾಗುತ್ತಲೇ ಧಾನ್ಯದ ಸಸಿಗಳು ಬೆಳೆದು ಅವುಗಳಲ್ಲಿ

ಕಾಳುಗಳು ಕಾಣಿಸಿದುವು. ಸ್ವಲ್ಪ ಹೊತ್ತಿಗೆ ಧಾನ್ಯವು ಬಲಿತು ಬೆಳೆಯು ಕೊಯ್ಲಿಗೆ ಸಿದ್ಧವಾಯಿತು. ಗೌತಮರು ಆ ಬೆಳೆಯನ್ನೆಲ್ಲ. ಕತ್ತರಿಸಿದರು. ಕೂಡಲೇ ಆ ಧಾನ್ಯದಿಂದ ಅಕ್ಕಿಯನ್ನು ಮಾಡಿ ಅಡಿಗೆ ತಯಾರು ಮಾಡಿಸಿದರು. ಅಲ್ಲಿರುವ ಋಷಿಗಳಿಗೆಲ್ಲ ಭೋಜನ ಮಾಡಿಸಿದರು. ಈ ರೀತಿ ಪ್ರತಿದಿನವೂ ಆ ದಿನವೇ ಬೆಳೆದ ಧಾನ್ಯದಿಂದ ಋಷಿಗಳಿಗೆ ಭಕ್ತಿಭಾವದಿಂದ ಅತಿಥಿ ಸತ್ಕಾರ ಮಾಡಿದರು. ಈ ರೀತಿ ಹನ್ನೆರಡು ವರ್ಷಗಳು ಕಳೆದುವು. ನಿತ್ಯವೂ ಒಂದೇ ರೀತಿ ಬ್ರಾಹ್ಮಣ ಭೋಜನವು ನಡೆಯುತ್ತ ಇತ್ತು. ಹನ್ನೆರಡು ವರ್ಷ ಕಳೆದಾಗ ದುರ್ಭಿಕ್ಷವೂ ಪರಿಹಾರವಾಯಿತು. ಆಗ ಎಲ್ಲ ಋಷಿಗಳು ಗೌತಮರನ್ನು ಬೀಳ್ಕೊಂಡು ತಮ್ಮ ತಮ್ಮ ದೇಶಗಳಿಗೆ ಹೋದರು. ಗೌತಮ ಋಷಿಗಳು ಅಲ್ಲಿಯೇ ಅನೇಕ ವರ್ಷಗಳ ತನಕ ವಾಸವಾಗಿದ್ದರು. ಅನಂತರ ಒಂದಾನೊಂದು ದಿನ ಅಂಬಿಕಾ ಪತಿಯಾದ ಶಿವನು ಋಷಿಗಳ ತಪಸ್ಸಿನಿಂದ ಸಂತುಷ್ಟನಾಗಿ ಪ್ರತ್ಯಕ್ಷನಾದನು. ಅವನ ಪರಿವಾರಗಣಗಳೂ ಜತೆಗೆ ಬಂದಿದ್ದುವು. ಪರಮೇಶ್ವರನು ಈ ರೀತಿ ಹೇಳಿದನು. ''ಗೌತಮನೇ! ಬೇಕಾದ ವರವನ್ನು ಕೇಳು'' ಆಗ ಮುನಿ ಶ್ರೇಷ್ಠರಾದ ಗೌತಮರು ಮೂರು ಕಣ್ಣುಗಳಿಂದ ವಿರಾಜಿಸುತ್ತಿರುವ ಭಗವಾನ್ ತ್ರ್ಯಂಬಕನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಪ್ರಾರ್ಥಿಸಿದರು. ''ಎಲ್ಲರಿಗೂ ಮಂಗಳಕರನಾದ ತ್ರ್ಯಂಬಕ ಮಹಾದೇವನೇ! ನಿನ್ನ ಚರಣಗಳಲ್ಲಿ ನನಗೆ ದೃಢವಾದ ಭಕ್ತಿಯಿರಲಿ. ನೀನು ನನ್ನ ಮೇಲೆ ಕೃಪೆ ಮಾಡಿ ಇಲ್ಲಿಯೇ ಪರ್ವತದಲ್ಲಿ ವಿರಾಜಿಸುತ್ತಿರಬೇಕು. ನಾನು ನಿನ್ನ ದರ್ಶನವನ್ನು ನಿತ್ಯವೂ ಮಾಡುತ್ತಿರಬೇಕು. ಇದೇ ನನಗೆ ಬೇಕಾದ ವರವು'' ಗೌತಮರು ಈ ರೀತಿ ಪ್ರಾರ್ಥಿಸಿದ ಕೂಡಲೇ ಆಶುತೋಷನಾದ ತ್ರ್ಯಂಬಕನು ಹಾಗೆಯೇ ಆಗಲೆಂದು ತನ್ನ ಭಕ್ತನ ಅಪೇಕ್ಷೆಯನ್ನು ಪೂರೈಸಿದನು. ಪಾರ್ವತೀವಲ್ಲಭನಾದ ಆ ಪರಶಿವನು ತನ್ನ ಸಾಮೀಪ್ಯವನ್ನು ಭಕ್ತನಿಗೆ ನಿರಂತರವಾಗಿರುವಂತೆ ಕರುಣಿಸಿದನು. ಭಗವಂತನಾದ ತ್ರ್ಯಂಬಕನು ಅದೇ ರೂಪದಿಂದ ಅಲ್ಲಿ ವಾಸ ಮಾಡಲು ಪ್ರಾರಂಭಿಸಿದನು. ಅಂದಿನಿಂದ ಆ ಪರ್ವತಕ್ಕೆ 'ತ್ರ್ಯಂಬಕ' ಪರ್ವತವೆಂದು ಹೆಸರಾಯಿತು. ಯಾವ ಮಾನವರು ಭಕ್ತಿ ಭಾವದಿಂದ ಅಲ್ಲಿ ಪ್ರಕಟಳಾದ ಗೋದಾವರೀ ಗಂಗೆಯಲ್ಲಿ ಸ್ನಾನಮಾಡಿ ಪರ್ವತದಲ್ಲಿ ವಿರಾಜಿಸುತ್ತಿರುವ ತ್ರ್ಯಂಬಕ ಮಹಾದೇವನ ದರ್ಶನಮಾಡಿ ವಿವಿಧೋಪಚಾರಗಳಿಂದ ಆ ಪರಮೇಶ್ವರನನ್ನು ಪೂಜಿಸುತ್ತಾರೋ ಅವರು ಪರಮೇಶ್ವರರೇ ಸರಿ. ಮೋಹಿನಿ, ಈ ತ್ರ್ಯಂಬಕ ಮಹಿಮೆಯನ್ನು ನಾನು ನಿನಗೆ ಸಂಕ್ಷೇಪವಾಗಿಯೇ ಹೇಳಿದ್ದೇನೆ.

## ಪಂಚವಟೀ ಮಹಿಮೆ

ಗೋದಾವರಿಯ ಸಾಕ್ಷಾತ್‌ದರ್ಶನವು ಎಲ್ಲಿಯವರೆಗೆ ಆಗುತ್ತದೆಯೋ ಅಲ್ಲಿಯವರೆಗೆ ಅನೇಕ ಪುಣ್ಯಾಶ್ರಮಗಳಿವೆ. ಅಲೆಲ್ಲಾ ವಿಧಿಪೂರ್ವಕವಾಗಿ ಸ್ನಾನಮಾಡಿ ದೇವತಾ ಪಿತೃತರ್ಪಣ ಮಾಡುವ ಮಾನವನು ಮನಸ್ಸಿನಲ್ಲಿ ಬಯಸಿದ ಅಭಿಲಾಷೆಗಳನ್ನು ಪಡೆಯುತ್ತಾನೆ. ಗೋದಾವರಿಯು ಕೆಲವು ಕಡೆ ಪ್ರಕಟಳಾಗಿಯೂ, ಕೆಲವು ಕಡೆ ಪ್ರಚ್ಛನ್ನಳಾಗಿಯೂ ಹರಿದುಹೋಗುತ್ತಾಳೆ. ಮುಂದೆಹೋಗುತ್ತ ಗೋದಾವರಿಯು ವಿಶಾಲವಾಗಿ ಹರಿದು ಭೂಮಿಯನ್ನು ಜಲದಿಂದ ತೋಯ್ದಿಸ್ದಾಳೆ. ಮಾನವರು ತೋರಿಸಿದ ಭಕ್ತಿಯಿಂದ ಆ ಮಹೇಶ್ವರೀ ದೇವಿಯು ಎಲ್ಲೆಲ್ಲಿ ಪ್ರಕಟಳಾಗಿದ್ದಾಳೋ ಅದೆಲ್ಲವೂ ಶ್ರೇಷ್ಠವಾದ

ತೀರ್ಥವು. ಸ್ನಾನ ಮಾತ್ರದಿಂದ ಪಾಪನಾಶಕವು. ಗೋದಾವರಿಯು ಪಂಚವಟಿಗೆ ಹೋದ ಮೇಲೆ ಸ್ಪಷ್ಟವಾಗಿ ಕಾಣಿಸುತ್ತಾಳೆ. ನಿಯಮ ವ್ರತಗಳ ಪಾಲ ಮಾಡುತ್ತ ಪಂಟವಟಿಯಲ್ಲಿ ಗೋದಾವರಿಯಲ್ಲಿ ಸ್ನಾನ ಮಾಡುವ ಮಾನವನು ಅಭೀಷ್ಟಕಾಮನೆಗಳನ್ನು ಪಡೆಯುತ್ತಾನೆ. ತ್ರೇತಾಯುಗದಲ್ಲಿ ಭಗವಂತನಾದ ಶ್ರೀ ರಾಮನು ಅವನ ಧರ್ಮಪತ್ನಿಯಾದ ಸೀತಾದೇವಿ ಮತ್ತು ತಮ್ಮನಾದ ಲಕ್ಷ್ಮಣನೊಡನೆ ಪಂಚವಟಿಯಲ್ಲಿ ವಾಸಮಾಡಿದ್ದರಿಂದ ಈ ಸ್ಥಳವು ಪರಮ ಪುಣ್ಯಕರವಾಯಿತು. ಮಂಗಳಕ ಸ್ವರೂಪಿಣಿಯಾದ ಮೋಹಿನಿಯೇ, ಈ ರೀತಿ ನಾನು ನಿನಗೆ ಗೌತಮಾಶ್ರಮಾದಿಗಳ ಮಹಿಮೆಯನ್ನು ನಿರೂಪಿಸಿದ್ದೇನೆ.

## ಪುಂಡರೀಕಪುರದ ಮಾಹಾತ್ಮ್ಯ. ಜೈಮಿನಿ ಕೃತ ಶಂಕರ ಸ್ತುತಿ

**ಮೋಹಿನಿ:-** ಗುರುದೇವ! ತಾವು ಹೇಳಿದ ಗೌತಮಾಶ್ರಮ ಮತ್ತು ಗೌತಮರ ಪವಿತ್ರವಾದ ಉಪಾಖ್ಯಾನವನ್ನೂ ನಾನು ಕೇಳಿದೆನು. ನಾನು ಈಗ ಪುಂಡರೀಕಪುರದ ಮಹಿಮೆಯನ್ನು ಕೇಳಲು ಬಯಸುತ್ತೇನೆ.

**ಪುರೋಹಿತ ವಸುಗಳು:-** ಮಹಾದೇವನು ಯಾವಾಗಲೂ ಭಕ್ತ ಪರಾಧೀನನು, ಮತ್ತು ಭಕ್ತರ ತಪಸ್ಸಿನಿಂದ ಬಹಳ ಬೇಗನೆ ಪ್ರಸನ್ನನಾಗಿ ಅವರು ಕೇಳಿದ ವರವನ್ನೂ ಕೊಡುತ್ತಾನೆ. ಅವನು ಭಕ್ತರ ಎದುರು ಪ್ರಕಟನಾಗಿ, ಅವರ ಇಚ್ಛೆಯನ್ನು ಪೂರೈಸುತ್ತಾನೆ. ಪುರಾತನ ವೃತ್ತಾಂತವೊಂದು ಹೀಗಿದೆ. ವ್ಯಾಸ ಶಿಷ್ಯರಾದ ಜೈಮಿನಿ ಋಷಿಗಳು ಅಗ್ನಿ ವೇಶ್ಯ ಮೊದಲಾದ ಶಿಷ್ಯರೊಡನೆ ತೀರ್ಥಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತ ಪುಂಡರೀಕಪುರಕ್ಕೆ ಹೋದರು. ಪುಂಡರೀಕಪುರವಾದರೋ ಸಾಧಾರಣವಾದುದಲ್ಲ. ದೇವರಾಜನಾದ ಇಂದ್ರನ ಅಮರಾವತಿಯಂತೆ ವೈಭವಪೂರ್ಣವಾದ ಮಹಾನಗರವು ಪುಂಡರೀಕಪುರ. ಜೈಮಿನಿಯು ಶಿಷ್ಯಸಹಿತನಾಗಿ ಅಲ್ಲಿಗೆ ಹೋಗಿ ಒಂದು ಉತ್ತಮವಾದ ಸರೋವರ ಬಳಿಗೆ ಹೋದನು. ಅಲ್ಲಿ ನೆರಳು ಕೊಡುವ ಅನೇಕ ವೃಕ್ಷಗಳಿದ್ದವು. ಜೈಮಿನಿಯು ಒಂದು ಮರದ ಕೆಳಗೆ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡು ಅನಂತರ ಸರೋವರದಲ್ಲಿ ಇಳಿದು ಸ್ನಾನಮಾಡಿದನು. ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಿ ದೇವ ಋಷಿ ಪಿತೃತರ್ಪಣವನ್ನು ಮಾಡಿದನು. ಅನಂತರ ಅವನು ಮಣ್ಣಿನಿಂದ ಒಂದು ಲಿಂಗವನ್ನು ಮಾಡಿ ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ಗಂಧ, ಪುಷ್ಪ, ಧೂಪ ದೀಪ ಮುಂತಾದ ನಾನಾ ಉಪಚಾರಗಳಿಂದ ಪೂಜಿಸಿ ಸ್ತೋತ್ರ ಮಾಡಿದನು. ಶಾಂತಚಿತ್ತನಾಗಿ ಯಾವ ವ್ಯಗ್ರತೆಯೂ ಇಲ್ಲದೆ ಭಕ್ತಿಯಿಂದ ಮಾಡಿದ ಆ ಉತ್ತಮ ಕಲ್ಪದ ಪೂಜೆಯಿಂದ ಸ್ಥಿರಚಿತ್ತನಾದ ಅವನ ಭಕ್ತಿಯನ್ನು ಮೆಚ್ಚಿ ಭಗವಂತನಾದ ಶಿವನು ಅವನ ಎದುರು ಆವಿರ್ಭೂತನಾದನು.

ಅನಂತರ ಜೈಮಿನಿ ಮಹರ್ಷಿಯು ಈಶ್ವರನ ಎದುರು ದಂಡ ಪ್ರಣಾಮವನ್ನು ಮಾಡಿದನು. ಕೂಡಲೇ ಎದ್ದು ಕೈಮುಗಿದು ಶರಣಾಗತರ ಪೀಡಾಪರಿಹಾರಕನಾದ ಹರಿಯನ್ನು ಅರ್ಧ ಶರೀರದಲ್ಲಿಟ್ಟುಕೊಂಡು ಹರರೂಪದಲ್ಲಿ ಪ್ರಕಟನಾದ ಶಿವನನ್ನು ಕುರಿತು ಹೀಗೆ ಹೇಳಿದನು. ''ದೇವ ದೇವ! ಜಗತ್ಪತೇ, ನಾನು ಧನ್ಯನು. ನಾನು ಕೃತಕೃತ್ಯನು. ದೇವತೆಗಳಿಂದ ಧ್ಯೇಯನಾದ ನೀನು ಸಾಕ್ಷಾತ್ ಪರಮೇಶ್ವರನು ನನ್ನೆದುರು ಪ್ರಕಟನಾಗಿ ಅನುಗ್ರಹ ಮಾಡುತ್ತಿದ್ದೀಯೇ. ಇದಕ್ಕಿಂತ ಹೆಚ್ಚಾದ ಅನುಗ್ರಹ ಇನ್ನೇನಿದೆ.'' ಆಗ ಪ್ರಸನ್ನನಾದ ಈಶ್ವರನು ಜೈಮಿನಿಯ ಶಿರಸ್ಸಿನ ಮೇಲೆ ತನ್ನ ಕೈಯನ್ನಿಟ್ಟು ಹೇಳಿದನು.

ಮಗೂ-''ಕೇಳು, ನಿನಗೇನು ಬೇಕು?'' ಭಗವಂತನಾದ ಶಿವನ ವಚನವನ್ನು ಕೇಳಿ ಜೈಮಿನಿಯು ಹೇಳಿದನು - ''ಭಗವಂತನೇ ನಾನು, ತಾಯಿಯಾದ ಪಾರ್ವತಿ, ವಿಘ್ನರಾಜ ಗಣೇಶ, ಕುಮಾರ ಕಾರ್ತಿಕೇಯ ಇವರೊಡನೆ ನಿನ್ನ ದರ್ಶನ ಮಾಡಲು ಬಯಸುತ್ತೇನೆ.'' ಆಗ ಕೂಡಲೆ ಶಂಕರನು ಪಾರ್ವತೀದೇವಿ ಮತ್ತು ತನ್ನ ಇಬ್ಬರು ಮಕ್ಕಳು, ಗಣೇಶ ಮತ್ತು ಸುಬ್ರಹ್ಮಣ್ಯರೊಡನೆ ಜೈಮಿನಿಮಹರ್ಷಿಗೆ ದರ್ಶನಕೊಟ್ಟನು. ಅನಂತರ ಪ್ರಸನ್ನಚಿತ್ತನಾದ ಶಿವನು ಪುನಃ ಕೇಳಿದನು. 'ವತ್ಸ ಕೇಳು, ಈಗ ನಿನಗೇನು ಬೇಕು?' ಜೈಮಿನಿಯು ಜಗದ್ಗುರುವಾದ ಶಂಕರನ ಈ ದಯಾಳುತೆಯನ್ನು ಕಂಡು ಆನಂದಪಟ್ಟನು. ಮಂದಹಾಸ ಮಾಡುತ್ತಾ ಹೇಳಿದನು - ''ನಾನು ನಿನ್ನ ತಾಂಡವ ನೃತ್ಯವನ್ನು ನೋಡಲು ಬಯಸುತ್ತೇನೆ' ಆಗ ಜೈಮಿನಿಯ ಆಶೆಯನ್ನು ಈಡೇರಿಸುವುದಕ್ಕಾಗಿ ಭಗವಂತನಾದ ಅಂಬಿಕಾರಮಣನು ಅನೇಕ ವಿಧ ಕ್ರೀಡೆಯಲ್ಲಿ ಕುಶಲರಾದ ಪ್ರಮಥ ಗಣಗಳ ಸ್ಮರಣೆಯನ್ನು ಮಾಡಿದನು. ಈಶ್ವರನು ಸ್ಮರಿಸುತ್ತಲೇ ನಂದೀ ಭೃಂಗಿ, ಮುಂತಾದವರೆಲ್ಲರೂ ಅತ್ಯಂತ ಕುತೂಹಲಭರಿತರಾಗಿ ಅಲ್ಲಿಗೆ ಬಂದರು. ಅವರೆಲ್ಲರೂ ಗಣೇಶ, ಸುಬ್ರಹ್ಮಣ್ಯ, ತಾಯಿಯಾದ ಪಾರ್ವತೀದೇವಿ ಇವರೆಲ್ಲರಿಗೂ ನಮಸ್ಕರಿಸಿ ಈಶ್ವರನ ಆಜ್ಞೆಯನ್ನು ಎದುರು ನೋಡುತ್ತಾ ಕೈ ಕಟ್ಟಿ ನಿಂತರು.

## ರುದ್ರ ತಾಂಡವ

**ತತೋ ಹರೋ ಹರಾಜ್ಞಯಾ ವಿಧಾಯರೂಪ ಮದ್ಭುತಂ ।**
**ಪ್ರನರ್ತುಮುದ್ಯತೋ ಬಭೌ ವಿಚಿತ್ರ ವೇಷಭೂಷಣಃ ॥**
**ವಿಲೋಲ ನಾಗವಲ್ಲರೀದ್ಧಕಕ್ಷ ಈಷದುತ್ಸ್ಮಿತಾನನೋ**
**ಲಲಾಟ ಶೋಭೀತೇಂದು ಲೇಖ ಊರ್ಧ್ವದೋರ್ಧ್ವಜಃ ॥**

ಅನಂತರ ಭಗವಂತನಾದ ರುದ್ರನು ಅದ್ಭುತವಾದ ರೂಪವನ್ನು ಸ್ವೀಕರಿಸಿ ತಾಂಡವ ನೃತ್ಯವನ್ನು ಮಾಡಲು ಉದ್ಯುಕ್ತನಾದನು. ಆ ಸಮಯದಲ್ಲಿ ಆ ಪರಮೇಶ್ವರನು ವಿಚಿತ್ರವಾದ ವೇಷಭೂಷಣಗಳಿಂದ ಅಲಂಕೃತನಾಗಿ ಅದ್ಭುತ ಶೋಭೆಯನ್ನು ಹೊಂದಿದ್ದನು. ಅವನು ಚಂಚಲವಾದ ಬಳ್ಳಿಗಳಂತಿರುವ ಹಾವುಗಳನ್ನು ಸೊಂಟಕ್ಕೆ ಕಟ್ಟಿಕೊಂಡನು. ಮುಖದಲ್ಲಿ ಮಂದಹಾಸವು ಮಿನುಗುತ್ತಿತ್ತು. ಹಣೆಯಲ್ಲಿ ಅರ್ಧಚಂದ್ರ ರೇಖೆಯು ಶೋಭಿಸುತ್ತಿತ್ತು. ಮೇಲಕ್ಕೆತ್ತಿದ ತೋಳುಗಳು ಧ್ವಜದಂತೆ ಶೋಭಿಸುತ್ತಿದ್ದುವು.

**ಸುದೃಗ್ ವಿಲಿಪ್ತ ಭಸ್ಮ ದೇಹರುಗಜಿತೇಂದು ಚಂದ್ರಿಕೋ**
**ಜಟಾ ಕಲಾಪ ನಿಸ್ಸರತ್ ಸುರಾಪಗಾರ್ದ್ರ ವಿಗ್ರಹಃ ॥**
**ಲಲಾಟ ಲೋಚನೋಜ್ವಲತ್ ಕೃಶಾನು ತಪ್ತ ಶೀತಗುಃ**
**ಸ್ರವತ್ ಸುಧಾನು ಜೀವಿತೈಣಭೂಪ ಕೃತ್ತಿ ಹುಂಕೃತಃ ॥ ೨ ॥**

ತಲೆಯ ಕೂದಲುಗಳು ಮೇಲ್ಮುಖವಾಗಿ ನಿಂತಿದ್ದವು. ಸುಂದರವಾದ ನೇತ್ರಗಳು ಶರೀರದಲ್ಲಿ ಹಚ್ಚಿದ ಭಸ್ಮದ ಉಜ್ವಲ ಪ್ರಭೆಯಿಂದ ಚಂದ್ರನ ಬೆಳದಿಂಗಳು ನಿಸ್ಸಾರವಾಗಿ ಕಾಣಿಸುತ್ತಿತ್ತು. ನರ್ತಿಸುವಾಗ ಜಟೆಯಿಂದ ಉಕ್ಕುತ್ತಿರುವ ಗಂಗೆಯ ಜಲದಿಂದ ಅವನ ಶರೀರವೆಲ್ಲವೂ ಒದ್ದೆಯಾಗುತ್ತಿತ್ತು. ಹಣೆಗಣ್ಣಿನ ಅಗ್ನಿಯಿಂದ ತಲೆಯಲ್ಲಿದ್ದ ಚಂದ್ರನು

ತೀರ್ಥವು. ಸ್ನಾನ ಮಾತ್ರದಿಂದ ಪಾಪನಾಶಕವು. ಗೋದಾವರಿಯು ಪಂಚವಟಿಗೆ ಹೋದ ಮೇಲೆ ಸ್ಪಷ್ಟವಾಗಿ ಕಾಣಿಸುತ್ತಾಳೆ. ನಿಯಮ ವ್ರತಗಳ ಪಾಲ ಮಾಡುತ್ತ ಪಂಟವಟಿಯಲ್ಲಿ ಗೋದಾವರಿಯಲ್ಲಿ ಸ್ನಾನ ಮಾಡುವ ಮಾನವನು ಅಭೀಷ್ಟಕಾಮನೆಗಳನ್ನು ಪಡೆಯುತ್ತಾನೆ. ತ್ರೇತಾಯುಗದಲ್ಲಿ ಭಗವಂತನಾದ ಶ್ರೀ ರಾಮನು ಅವನ ಧರ್ಮಪತ್ನಿಯಾದ ಸೀತಾದೇವಿ ಮತ್ತು ತಮ್ಮನಾದ ಲಕ್ಷ್ಮಣನೊಡನೆ ಪಂಚವಟಿಯಲ್ಲಿ ವಾಸಮಾಡಿದ್ದರಿಂದ ಈ ಸ್ಥಳವು ಪರಮ ಪುಣ್ಯಕರವಾಯಿತು. ಮಂಗಳಕ ಸ್ವರೂಪಿಣಿಯಾದ ಮೋಹಿನಿಯೇ, ಈ ರೀತಿ ನಾನು ನಿನಗೆ ಗೌತಮಾಶ್ರಮಾದಿಗಳ ಮಹಿಮೆಯನ್ನು ನಿರೂಪಿಸಿದ್ದೇನೆ.

## ಪುಂಡರೀಕಪುರದ ಮಾಹಾತ್ಮ್ಯ. ಜೈಮಿನಿ ಕೃತ ಶಂಕರ ಸ್ತುತಿ

**ಮೋಹಿನಿ:-** ಗುರುದೇವ! ತಾವು ಹೇಳಿದ ಗೌತಮಾಶ್ರಮ ಮತ್ತು ಗೌತಮರ ಪವಿತ್ರವಾದ ಉಪಾಖ್ಯಾನವನ್ನೂ ನಾನು ಕೇಳಿದೆನು. ನಾನು ಈಗ ಪುಂಡರೀಕಪುರದ ಮಹಿಮೆಯನ್ನು ಕೇಳಲು ಬಯಸುತ್ತೇನೆ.

**ಪುರೋಹಿತ ವಸುಗಳು:-** ಮಹಾದೇವನು ಯಾವಾಗಲೂ ಭಕ್ತ ಪರಾಧೀನನು, ಮತ್ತು ಭಕ್ತರ ತಪಸ್ಸಿನಿಂದ ಬಹಳ ಬೇಗನೆ ಪ್ರಸನ್ನನಾಗಿ ಅವರು ಕೇಳಿದ ವರವನ್ನೂ ಕೊಡುತ್ತಾನೆ. ಅವನು ಭಕ್ತರ ಎದುರು ಪ್ರಕಟನಾಗಿ, ಅವರ ಇಚ್ಛೆಯನ್ನು ಪೂರೈಸುತ್ತಾನೆ. ಪುರಾತನ ವೃತ್ತಾಂತವೊಂದು ಹೀಗಿದೆ. ವ್ಯಾಸ ಶಿಷ್ಯರಾದ ಜೈಮಿನಿ ಋಷಿಗಳು ಅಗ್ನಿ ವೇಶ್ಯ ಮೊದಲಾದ ಶಿಷ್ಯರೊಡನೆ ತೀರ್ಥಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತ ಪುಂಡರೀಕಪುರಕ್ಕೆ ಹೋದರು. ಪುಂಡರೀಕಪುರವಾದರೋ ಸಾಧಾರಣವಾದುದಲ್ಲ. ದೇವರಾಜನಾದ ಇಂದ್ರನ ಅಮರಾವತಿಯಂತೆ ವೈಭವಪೂರ್ಣವಾದ ಮಹಾನಗರವು ಪುಂಡರೀಕಪುರ. ಜೈಮಿನಿಯು ಶಿಷ್ಯಸಹಿತನಾಗಿ ಅಲ್ಲಿಗೆ ಹೋಗಿ ಒಂದು ಉತ್ತಮವಾದ ಸರೋವರ ಬಳಿಗೆ ಹೋದನು. ಅಲ್ಲಿ ನೆರಳು ಕೊಡುವ ಅನೇಕ ವೃಕ್ಷಗಳಿದ್ದವು. ಜೈಮಿನಿಯು ಒಂದು ಮರದ ಕೆಳಗೆ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡು ಅನಂತರ ಸರೋವರದಲ್ಲಿ ಇಳಿದು ಸ್ನಾನಮಾಡಿದನು. ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಿ ದೇವ ಋಷಿ ಪಿತೃತರ್ಪಣವನ್ನು ಮಾಡಿದನು. ಅನಂತರ ಅವನು ಮಣ್ಣಿನಿಂದ ಒಂದು ಲಿಂಗವನ್ನು ಮಾಡಿ ಪಾದ್ಯ. ಅರ್ಘ್ಯ, ಆಚಮನ, ಸ್ನಾನ, ಗಂಧ, ಪುಷ್ಪ, ಧೂಪ ದೀಪ ಮುಂತಾದ ನಾನಾ ಉಪಚಾರಗಳಿಂದ ಪೂಜಿಸಿ ಸ್ತೋತ್ರ ಮಾಡಿದನು. ಶಾಂತಚಿತ್ತನಾಗಿ ಯಾವ ವ್ಯಗ್ರತೆಯೂ ಇಲ್ಲದೆ ಭಕ್ತಿಯಿಂದ ಮಾಡಿದ ಆ ಉತ್ತಮ ಕಲ್ಪದ ಪೂಜೆಯಿಂದ ಸ್ಥಿರಚಿತ್ತನಾದ ಅವನ ಭಕ್ತಿಯನ್ನು ಮೆಚ್ಚಿ ಭಗವಂತನಾದ ಶಿವನು ಅವನ ಎದುರು ಆವಿರ್ಭೂತನಾದನು.

ಅನಂತರ ಜೈಮಿನಿ ಮಹರ್ಷಿಯು ಈಶ್ವರನ ಎದುರು ದಂಡ ಪ್ರಣಾಮವನ್ನು ಮಾಡಿದನು. ಕೂಡಲೇ ಎದ್ದು ಕೈಮುಗಿದು ಶರಣಾಗತರ ಪೀಡಾಪರಿಹಾರಕನಾದ ಹರಿಯನ್ನು ಅರ್ಧ ಶರೀರದಲ್ಲಿಟ್ಟುಕೊಂಡು ಹರರೂಪದಲ್ಲಿ ಪ್ರಕಟನಾದ ಶಿವನನ್ನು ಕುರಿತು ಹೀಗೆ ಹೇಳಿದನು. ''ದೇವ ದೇವ! ಜಗತ್ಪತೇ, ನಾನು ಧನ್ಯನು. ನಾನು ಕೃತಕೃತ್ಯನು. ದೇವತೆಗಳಿಂದ ಧ್ಯೇಯನಾದ ನೀನು ಸಾಕ್ಷಾತ್ ಪರಮೇಶ್ವರನು ನನ್ನೆದುರು ಪ್ರಕಟನಾಗಿ ಅನುಗ್ರಹ ಮಾಡುತ್ತಿದ್ದೀಯೇ. ಇದಕ್ಕಿಂತ ಹೆಚ್ಚಾದ ಅನುಗ್ರಹ ಇನ್ನೇನಿದೆ.'' ಆಗ ಪ್ರಸನ್ನನಾದ ಈಶ್ವರನು ಜೈಮಿನಿಯ ಶಿರಸ್ಸಿನ ಮೇಲೆ ತನ್ನ ಕೈಯನ್ನಿಟ್ಟು ಹೇಳಿದನು.

ಮಗೂ-"ಕೇಳು, ನಿನಗೇನು ಬೇಕು?" ಭಗವಂತನಾದ ಶಿವನ ವಚನವನ್ನು ಕೇಳಿ ಜೈಮಿನಿಯು ಹೇಳಿದನು - "ಭಗವಂತನೇ ನಾನು, ತಾಯಿಯಾದ ಪಾರ್ವತಿ, ವಿಘ್ನರಾಜ ಗಣೇಶ, ಕುಮಾರ ಕಾರ್ತಿಕೇಯ ಇವರೊಡನೆ ನಿನ್ನ ದರ್ಶನ ಮಾಡಲು ಬಯಸುತ್ತೇನೆ." ಆಗ ಕೂಡಲೆ ಶಂಕರನು ಪಾರ್ವತೀದೇವಿ ಮತ್ತು ತನ್ನ ಇಬ್ಬರು ಮಕ್ಕಳು, ಗಣೇಶ ಮತ್ತು ಸುಬ್ರಹ್ಮಣ್ಯರೊಡನೆ ಜೈಮಿನಿಮಹರ್ಷಿಗೆ ದರ್ಶನಕೊಟ್ಟನು. ಅನಂತರ ಪ್ರಸನ್ನಚಿತ್ತನಾದ ಶಿವನು ಪುನಃ ಕೇಳಿದನು. 'ವತ್ಸ ಕೇಳು, ಈಗ ನಿನಗೇನು ಬೇಕು?' ಜೈಮಿನಿಯು ಜಗದ್ಗುರುವಾದ ಶಂಕರನ ಈ ದಯಾಳುತೆಯನ್ನು ಕಂಡು ಆನಂದಪಟ್ಟನು. ಮಂದಹಾಸ ಮಾಡುತ್ತಾ ಹೇಳಿದನು - "ನಾನು ನಿನ್ನ ತಾಂಡವ ನೃತ್ಯವನ್ನು ನೋಡಲು ಬಯಸುತ್ತೇನೆ' ಆಗ ಜೈಮಿನಿಯ ಆಶೆಯನ್ನು ಈಡೇರಿಸುವುದಕ್ಕಾಗಿ ಭಗವಂತನಾದ ಅಂಬಿಕಾರಮಣನು ಅನೇಕ ವಿಧ ಕ್ರೀಡೆಯಲ್ಲಿ ಕುಶಲರಾದ ಪ್ರಮಥ ಗಣಗಳ ಸ್ಮರಣೆಯನ್ನು ಮಾಡಿದನು. ಈಶ್ವರನು ಸ್ಮರಿಸುತ್ತಲೇ ನಂದೀ ಭೃಂಗಿ, ಮುಂತಾದವರೆಲ್ಲರೂ ಅತ್ಯಂತ ಕುತೂಹಲಭರಿತರಾಗಿ ಅಲ್ಲಿಗೆ ಬಂದರು. ಅವರೆಲ್ಲರೂ ಗಣೇಶ, ಸುಬ್ರಹ್ಮಣ್ಯ, ತಾಯಿಯಾದ ಪಾರ್ವತೀದೇವಿ ಇವರೆಲ್ಲರಿಗೂ ನಮಸ್ಕರಿಸಿ ಈಶ್ವರನ ಆಜ್ಞೆಯನ್ನು ಎದುರು ನೋಡುತ್ತಾ ಕೈ ಕಟ್ಟಿ ನಿಂತರು.

## ರುದ್ರ ತಾಂಡವ

**ತತೋ ಹರೋ ಹರಾಜ್ಞಯಾ ವಿಧಾಯರೂಪ ಮದ್ಭುತಂ ।**
**ಪ್ರನರ್ತುಮುದ್ಯತೋ ಬಭೌ ವಿಚಿತ್ರ ವೇಷಭೂಷಣಃ ॥**
**ವಿಲೋಲ ನಾಗವಲ್ಲರೀದ್ಧಕಕ್ಷ ಈಷದುತ್ಸ್ಮಿತಾನನೋ**
**ಲಲಾಟ ಶೋಭೀತೇಂದು ಲೇಖ ಊರ್ಧ್ವದೋರ್ಧ್ವಜಃ ॥**

ಅನಂತರ ಭಗವಂತನಾದ ರುದ್ರನು ಅದ್ಭುತವಾದ ರೂಪವನ್ನು ಸ್ವೀಕರಿಸಿ ತಾಂಡವ ನೃತ್ಯವನ್ನು ಮಾಡಲು ಉದ್ಯುಕ್ತನಾದನು. ಆ ಸಮಯದಲ್ಲಿ ಆ ಪರಮೇಶ್ವರನು ವಿಚಿತ್ರ ವಾದ ವೇಷಭೂಷಣಗಳಿಂದ ಅಲಂಕೃತನಾಗಿ ಅದ್ಭುತ ಶೋಭೆಯನ್ನು ಹೊಂದಿದ್ದನು. ಅವನು ಚಂಚಲವಾದ ಬಳ್ಳಿಗಳಂತಿರುವ ಹಾವುಗಳನ್ನು ಸೊಂಟಕ್ಕೆ ಕಟ್ಟಿಕೊಂಡನು. ಮುಖದಲ್ಲಿ ಮಂದಹಾಸವು ಮಿನುಗುತ್ತಿತ್ತು. ಹಣೆಯಲ್ಲಿ ಅರ್ಧಚಂದ್ರ ರೇಖೆಯು ಶೋಭಿಸುತ್ತಿತ್ತು. ಮೇಲಕ್ಕೆತ್ತಿದ ತೋಳುಗಳು ಧ್ವಜದಂತೆ ಶೋಭಿಸುತ್ತಿದ್ದುವು.

**ಸುದೃಗ್ ವಿಲಿಪ್ತ ಭಸ್ಮ ದೇಹರುಗಜಿತೇಂದು ಚಂದ್ರಿಕೋ**
**ಜಟಾ ಕಲಾಪ ನಿಸ್ಸರತ್ ಸುರಾಪಗಾರ್ದ್ರ ವಿಗ್ರಹಃ ॥**
**ಲಲಾಟ ಲೋಚನೋಜ್ವಲತ್ ಕೃಶಾನು ತಪ್ತ ಶೀತಗುಃ**
**ಸ್ರವತ್ ಸುಧಾನು ಜೀವಿತೈಣಭೂಪ ಕೃತ್ತಿ ಹುಂಕೃತಃ ॥ ೨ ॥**

ತಲೆಯ ಕೂದಲುಗಳು ಮೇಲ್ಮುಖವಾಗಿ ನಿಂತಿದ್ದವು. ಸುಂದರವಾದ ನೇತ್ರಗಳು ಶರೀರದಲ್ಲಿ ಹಚ್ಚಿದ ಭಸ್ಮದ ಉಜ್ವಲ ಪ್ರಭೆಯಿಂದ ಚಂದ್ರನ ಬೆಳದಿಂಗಳು ನಿಸ್ಸಾರವಾಗಿ ಕಾಣಿಸುತ್ತಿತ್ತು. ನರ್ತಿಸುವಾಗ ಜಟೆಯಿಂದ ಉಕ್ಕುತ್ತಿರುವ ಗಂಗೆಯ ಜಲದಿಂದ ಅವನ ಶರೀರವೆಲ್ಲವೂ ಒದ್ದೆಯಾಗುತ್ತಿತ್ತು. ಹಣೆಗಣ್ಣಿನ ಅಗ್ನಿಯಿಂದ ತಲೆಯಲ್ಲಿದ್ದ ಚಂದ್ರನು

ಬಿಸಿಯಾಗುತ್ತಿದ್ದನು. ಶಿರಸ್ಸಿನಿಂದ ಅಮೃತವು ಸುರಿದು ಅದರಿಂದ ಹೊದ್ದ ಹುಲಿಯ ಚರ್ಮಕ್ಕೆ ಜೀವ ಬಂದು ಅದು ಹುಂಕರಿಸುತ್ತಿತ್ತು.

**ಕುಮಾರವಾಹ ಕೇಕಿ ಚಂಚು ಕೃಷ್ಣನಾಗ ಘಂಕೃತೋ**
**ಗಲತ್ಸುಧಾನು ಜೀವದಬ್ಜ ಯೋನಿ ತುಂಡ ತುಂಕೃತಃ ।**
**ಫಣಿ ಪ್ರಭೀತ ವಿಘ್ನರಾಜವಾಹನಾಖು ಚುಂಕೃತೋ**
**ಮೃಗೇಂದ್ರನಾದ ಭೀಷಿತಾಕ್ಷ ತನ್‌ಮಹೋಕ್ಷ ಭಾಂಕೃತಃ ॥ ३ ॥**

ಸುಬ್ರಹ್ಮಣ್ಯನ ವಾಹನವಾದ ನವಿಲು ತನ್ನ ಮೂತಿಯಿಂದ ಈಶ್ವರನ ಮೈ ಮೇಲಿನ ನಾಗಗಳನ್ನು ಎಳೆಯಲು ಬಂದಾಗ ಅವುಗಳು ಪೂತ್ಕಾರ ಮಾಡುತ್ತಿದ್ದುವು. ಸುರಿಯುತ್ತಿರುವ ಸುಧೆಯಿಂದ ಕೈಯಲ್ಲಿದ್ದ ಬ್ರಹ್ಮಶಿರಃಕಪಾಲವು ಉಜ್ಜೀವಿತವಾಗಿ 'ತ್ವಂ ನೀನು ತ್ವಂ ನೀ' ಎನ್ನುತ್ತಿತ್ತು. ಹಾವುಗಳಿಂದ ಹೆದರಿದ ಗಣೇಶನ ವಾಹನವಾದ ಇಲಿಯು 'ಚೂಂ ಚೂಂ' ಎಂದು ಕಿರುಚುತ್ತಿತ್ತು. ಪಾರ್ವತೀವಾಹನವಾದ ಸಿಂಹವು ಗರ್ಜಿಸಿದಾಗ ಹೆದರಿದ ಈಶ್ವರ ವಾಹನ ನಂದಿಯು 'ಹುಂಭಾ ಅಂಭಾ' ಎಂದು ಗುಟುರುಹಾಕುತ್ತಿತ್ತು.

**ಮುಹುಃ ಪದಾಂಬುಜ ಪ್ರಪಾತ ಕಂಪಿತಾವನೀತಲಃ**
**ಪ್ರಕೃಷ್ಟ ವಾದ್ಯ ಹೃಷ್ಟ ರೋಮರಾಜಿಕಂಟಕಃ ।**
**ಸುರಾಸುರೇಂದ್ರ ಮೌಲಿ ರತ್ನ ಭಾಸಿತಾಂಘ್ರಿ ಪಂಕಜೋ**
**ಗಣೇಶ ಕಾರ್ತಿಕೇಯ ಶೈಲಪುತ್ರಿ ವೀಕ್ಷಿತಾನನಃ ॥ ೪ ॥**

ಈಶ್ವರನು ತಾಂಡವ ನೃತ್ಯ ಕಾಲದಲ್ಲಿ ಪುನಃ ಪುನಃ ತನ್ನ ಚರಣಾರವಿಂದದ ಆಘಾತದಿಂದ ಸಮಸ್ತ ಭೂಮಿಯನ್ನು ನಡುಗಿಸುತ್ತಿದ್ದನು. ಉತ್ತಮವಾದ ವಾದ್ಯಗಳನ್ನು ಬಾರಿಸುತ್ತಿದ್ದನು. ಪರಮೇಶ್ವರನು ಮೈಯಲ್ಲಿ ಆನಂದಾತಿರೇಕದಿಂದ ರೋಮಾಂಚನ ಉಂಟಾಗುತ್ತಿತ್ತು. ದೇವಾಧಿಪತಿಗಳೂ ದೈತ್ಯಾಧಿಪತಿಗಳೂ ತಮ್ಮ ಶಿರಸ್ಸಿನ ಕಿರೀಟಗಳನ್ನು ಪರಮೇಶ್ವರನ ಪಾದಗಳಿಗೆ ತಗಲಿಸಿ ನಮಸ್ಕಾರ ಮಾಡುತ್ತಿದ್ದಾಗ ಆ ಕಿರೀಟ ರತ್ನಗಳಿಂದ ಪರಮೇಶ್ವರನ ಕಾಲುಗಳ ಶೋಭೆಯು ಹೆಚ್ಚುತ್ತಿತ್ತು. ಗಣೇಶ, ಸುಬ್ರಹ್ಮಣ್ಯ ಮತ್ತು ಪಾರ್ವತಿಯರ ಕಣ್ಣುಗಳು ಪರಮೇಶ್ವರನ ಮುಖದಲ್ಲಿಯೇ ನೆಟ್ಟಿದ್ದವು.

**ಪ್ರವೃದ್ಧ ಹರ್ಷ ಭಕ್ತವೃಂದ ಸಮ್ಯಗುಕ್ತ ಸಂಜಯಃ**
**ಪ್ರವೃತ್ತ ತಾಂಡವೈರ್ವಿಭುರ್ಬಭೌ ದಿಶೋಽವಭಾಸಯನ್ ॥ ೫ ॥**

ಭಕ್ತರ ಹೃದಯದಲ್ಲಿ ಹರ್ಷ ಪ್ರವಾಹವು ಉಕ್ಕುತ್ತಿತ್ತು. ಅವರು ಉತ್ಸಾಹದಿಂದ ಉಚ್ಚಸ್ವರದಿಂದ ಜಯ ಜಯಕಾರ ಮಾಡುತ್ತಿದ್ದರು. ಈ ರೀತಿ ಭಗವಂತನಾದ ಶಿವನು ತನ್ನ ತಾಂಡವ ನೃತ್ಯದಿಂದ ಎಲ್ಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತ ಅಭೂತಪೂರ್ವವಾದ ಶೋಭೆಯನ್ನು ಹೊಂದುತ್ತಿದ್ದನು. ಇಂತಹ ತಾಂಡವ ನೃತ್ಯವನ್ನು ನೋಡಿ ಜೈಮಿನಿ ಮಹರ್ಷಿಯು ಆನಂದಸಮುದ್ರಮಗ್ನನಾದನು. ಏಕಾಗ್ರಚಿತ್ತನಾಗಿ ವೇದಪಾದ ಸ್ತೋತ್ರದಿಂದ ಈಶ್ವರನ ಸ್ತೋತ್ರ ಮಾಡಲಾರಂಭಿಸಿದನು. (ಈ ಸ್ತೋತ್ರದ ಪ್ರತಿಯೊಂದು ಶ್ಲೋಕದ ಕೊನೆಯಲ್ಲಿ ವೇದ ಮಂತ್ರದ ಒಂದು ಪದವಿದೆ. ಆದ್ದರಿಂದ ಅವನು ವೇದಪಾದಸ್ತೋತ್ರವೆಂದು ಹೇಳುತ್ತಾರೆ).

**ಪುರೋಹಿತವಸುಗಳು:-** "ಮಹಾಮುನಿ ಜೈಮಿನಿಗಳು ಮೇಲೆ ಹೇಳಿದ ಸ್ತೋತ್ರದಿಂದ ಭಗವಂತನಾದ ಶಂಕರನ ಸ್ತೋತ್ರವನ್ನು ಹೊಗಳಿ ಪ್ರೇಮಾಶ್ರು ಪೂರ್ಣನಯನರಾಗಿ ತಾಂಡವ ನರ್ತನ ಸಭಾಪತಿಯಾದ ಪರಮೇಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ನಂತರ ಪರಮೇಶ್ವರನು ಮುಖವನ್ನು ನೋಡುತ್ತಾ ನಿಂತರು. ಜೈಮಿನಿಗಳು ಭಕ್ತಪರವಶನಾಗಿ ಪರಮೇಶ್ವರನು ನಡೆಸುತ್ತಿದ್ದ ತಾಂಡವ ನೃತ್ಯವನ್ನು ಪುನಃ ನೋಡಿದರು. ಆ ಮಂಗಳಮಯವಾದ ನೃತ್ಯಾಮೃತವನ್ನು ಕಣ್ಣುಗಳಿಂದ ಪಾನಮಾಡಿದರು. ಶ್ರವಣಗಳಿಂದ ಪಾನಮಾಡಿದರು. ಅವರ ಎಲ್ಲಾ ಕಾಮನೆಗಳೂ ಕೈಗೂಡಿದುವು. ಜೈಮಿನಿ ಮಹರ್ಷಿಗಳು ಕೊನೆಗೆ ಶಿವಗಣಗಳಲ್ಲಿ ಒಬ್ಬರಾದರು.

## ಪರಶುರಾಮದೇವರು ಗೋಕರ್ಣ ಕ್ಷೇತ್ರವನ್ನು ಉದ್ಧಾರ ಮಾಡಿದುದು

**ಮೋಹಿನಿಯೆಂದಳು:-** ಗುರುದೇವ! ನೀವು ಹೇಳಿದ ಪುಂಡರೀಕ ಪುರದ ಮಹಿಮೆಯನ್ನು ನಾನು ಕೇಳಿದ್ದಾಯಿತು. ತಾವು ಈಗ ದಯವಿಟ್ಟು ಗೋಕರ್ಣದ ಮಹಿಮೆಯನ್ನು ನನಗೆ ಹೇಳಬೇಕು.

**ಪುರೋಹಿತ ವಸುಮುನಿಗಳು:-** ಮೋಹಿನಿ! ಪಶ್ಚಿಮ ಸಮುದ್ರ ದಡದಲ್ಲಿ ಗೋಕರ್ಣತೀರ್ಥವಿದೆ. (ಎರಡು ಕ್ರೋಶ) ಎರಡು ಹರದಾರಿ ವಿಸ್ತಾರವಾದ ಆ ಕ್ಷೇತ್ರದ ದರ್ಶನ ಮಾತ್ರದಿಂದ ಮಾನವನಿಗೆ ಸಮಸ್ತ ಪಾಪಮೋಕ್ಷವುಂಟಾಗುತ್ತದೆ. ಮಂಗಳ ಸ್ವರೂಪಣಿಯಾದ ಮೋಹಿನಿ! ಸಗರನ ಮಕ್ಕಳು ಯಜ್ಞಾಶ್ವವನ್ನು ಹುಡುಕುತ್ತ ಕ್ರಮವಾಗಿ ಭೂಮಿಯ ಸುತ್ತಲೂ ಅಗೆದರು. ಗೋಕರ್ಣದ ಹತ್ತಿರದ ಸಮುದ್ರವು ಆ ಪ್ರದೇಶದಲ್ಲೆಲ್ಲಡೆ ಉಕ್ಕಿ ಸುತ್ತ ಮುತ್ತಲಿನ ಮೂರು ಯೋಜನ ವಿಸ್ತಾರವಾದ ತೀರ್ಥಕ್ಷೇತ್ರ ಕಾಡುಗುಡ್ಡವೆಲ್ಲವೂ ನೀರಿನಲ್ಲಿ ಮುಳುಗಿ ಹೋಯಿತು. ಆಗ ಅಲ್ಲಿದ್ದ ದೇವತೆಗಳು, ಅಸುರರು, ಋಷಿಗಳು, ಮನುಷ್ಯರು ಮುಂತಾದ ಎಲ್ಲರೂ ಸಹ್ಯ ಮುಂತಾದ ಪರ್ವತಗಳಲ್ಲಿ ಸೇರಿಕೊಂಡರು. ಅಲ್ಲಿಯೇ ವಾಸಮಾಡಲಾರಂಭಿಸಿದರು. ಆಗ ಗೋಕರ್ಣವೆಂಬ ಈ ಕ್ಷೇತ್ರವು ನೀರಿನಲ್ಲಿ ಮುಳುಗಿ ಹೋಯಿತು. ಅನಂತರ ಅನೇಕಾನೇಕ ಮುನಿಗಳು ಈ ಗೋಕರ್ಣ ಕ್ಷೇತ್ರವನ್ನು ಪುನಃ ಉದ್ಧಾರ ಮಾಡುವ ಬಗೆಯೆಂತು ಎಂದು ಮನಸ್ಸಿನಲ್ಲಿಯೇ ವಿಚಾರ ಮಾಡಲಾರಂಭಿಸಿದರು. ಸಹ್ಯ ಪರ್ವತ ನಿವಾಸಿಗಳಾದ ಆ ಮುನಿಗಳು ಪರಸ್ಪರ ವಿಚಾರಮಾಡಿ ಕೊನೆಗೆ ಈ ಕಾರ್ಯವನ್ನು ಸಾಧಿಸಲು ಪರಶುರಾಮನೇ ತಕ್ಕ ಮಹಾಪುರುಷನೆಂದು ನಿರ್ಧರಿಸಿ ಪರಶುರಾಮನ ನಿವಾಸಸ್ಥಾನವಾದ ಮಹೇಂದ್ರ ಪರ್ವತಕ್ಕೆ ಹೋದರು. ಗೋಕರ್ಣ ತೀರ್ಥದ ಉದ್ಧಾರದ ಇಚ್ಛೆಯಿಂದ ದೂರದ ಯಾತ್ರೆಯನ್ನು ಕೈಗೊಂಡ ಆ ಮುನಿಗಳೆಲ್ಲರೂ ನಡೆದು ಬಂದು ಮಹೇಂದ್ರ ಪರ್ವತವನ್ನು ಹತ್ತಿದರು. ದೂರದಲ್ಲಿ ಪರಶುರಾಮರ ಆಶ್ರಮವನ್ನು ನೋಡಿದರು, ವೇದ ಮಂತ್ರೋಚ್ಚಾರಣೆಯಿಂದ ಆ ಆಶ್ರಮವೆಲ್ಲವೂ ಪ್ರತಿಧ್ವನಿತವಾಗುತ್ತಿತ್ತು. ಮಹರ್ಷಿಗಳು ಪ್ರಸನ್ನಚಿತ್ತರಾಗಿ, ಬಹಳ ಭಯಭಕ್ತಿಯಿಂದ ಆಶ್ರಮವನ್ನು ಪ್ರವೇಶಿಸಿದರು. ಅಲ್ಲಿ ಪರಶುರಾಮದೇವರು ಧ್ಯಾನಸ್ಥಿತಿಯಲ್ಲಿ ಅವರ ಕಣ್ಣಿಗೆ ಬಿದ್ದರು. ಕೋಮಲವಾದ ಕಪ್ಪಾದ ಕೃಷ್ಣಾಜಿನದ ಮೇಲೆ ಸುಖಾಸೀನರಾಗಿ ಕುಳಿತು ಪರಶುರಾಮರು ಸ್ವಾತ್ಮಾನಂದದಲ್ಲಿ ತಲ್ಲೀನರಾಗಿದ್ದರು. ಮಹರ್ಷಿಗಳು ಸ್ವಲ್ಪವೂ ಕೋಲಾಹಲವಿಲ್ಲದೆ ಒಬ್ಬೊಬ್ಬರಾಗಿ ಹೋಗಿ

ಶಾಂತವಾಗಿ ಉರಿಯುತ್ತಿರುವ ಅಗ್ನಿಯಂತಿರುವ ಪರಶುರಾಮರ ಬಳಿಗೆ ಬಂದು ನಮಸ್ಕಾರ ಮಾಡಿದರು, ಅನಂತರ ವಿನಯಪೂರ್ವಕವಾಗಿ ಕೈ ಮುಗಿದು ನಿಂತುಕೊಂಡರು.

ಅನಂತರ ಭೃಗುವಂಶ ಶ್ರೇಷ್ಠರಾದ ಪರಶುರಾಮರು ಋಷಿಗಳು ಬಂದಿರುವುದನ್ನು ನೋಡಿ ಬಹಳ ಸಂತೋಷಪಟ್ಟು ಅವರಿಗೆ ಅರ್ಘ್ಯ, ಪಾದ್ಯಾದಿ ಉಪಚಾರಗಳನ್ನು ಮಾಡಿ ಬಹಳ ಆದರದಿಂದ ಸತ್ಕರಿಸಿದರು. ಆ ಋಷಿಗಳೆಲ್ಲರೂ ಆತಿಥ್ಯ ಸ್ವೀಕಾರಮಾಡಿ ಆಸನಗಳಲ್ಲಿ ಸುಖಾಸೀನರುದಾಗ ಭೃಗುನಂದನ ಪರಶುರಾಮರು ಆ ಋಷಿಗಳನ್ನು ಕುರಿತು ಹೀಗೆಂದರು - ''ಮಹಾ ತಪೋಭಾಗ್ಯ ಸಂಪನ್ನರಾದ ಋಷಿಗಳೇ! ನಿಮಗೆ ಸುಸ್ವಾಗತವು. ನೀವೆಲ್ಲರೂ ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುತ್ತೀರೋ ಅದನ್ನು ನಿರ್ಭಯವಾಗಿ ಹೇಳಿರಿ. ನಿಮ್ಮ ಅಭಿಲಾಷೆಯನ್ನು ನಾನು ಪೂರೈಸುವೆನು.'' ಆಗ ಋಷಿಗಳೆಲ್ಲರೂ ತಾವು ಬಂದಿರುವ ಉದ್ದೇಶವನ್ನು ಹೇಳಿದರು. ''ಭೃಗುಕುಲ ಶ್ರೇಷ್ಠರಾದ ಮಹಾ ತಪೋನಿಧಿಗಳಾದ ಪರಶುರಾಮರೇ! ನಾವೆಲ್ಲರೂ ಗೋಕರ್ಣ ತೀರ್ಥದಲ್ಲಿ ವಾಸ ಮಾಡುವ ಮುನಿಗಳೆಂದು ನಿಮಗೆ ತಿಳಿದಿರಬಹುದು. ಸಗರ ಮಹಾರಾಜನ ಮಕ್ಕಳು ಆ ಕ್ಷೇತ್ರದ ಸುತ್ತಮುತ್ತಲೂ ಭೂಮಿಯನ್ನು ಅಗೆದು ಆ ಪ್ರದೇಶವು ಜಲಮಯವಾಗುವಂತೆ ಮಾಡಿದ್ದರಿಂದ ನಾವು ಆ ತೀರ್ಥಕ್ಷೇತ್ರವನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕಾಯಿತು. ದ್ವಿಜಶ್ರೇಷ್ಠರೇ! ಮುನಿಶ್ರೇಷ್ಠರೇ! ನೀವು ನಿಮ್ಮ ತಪಸ್ಸಾಮರ್ಥ್ಯದಿಂದ ಅಲ್ಲಿನ ನೀರನ್ನು ಹಿಂದಕ್ಕೆ ಸರಿಸಿ ತಿರುಗಿ ಆ ಪ್ರದೇಶವು ನಮಗೆ ವಾಸಯೋಗ್ಯವಾಗುವಂತೆ ಮಾಡಬೇಕೆಂದು ತಮ್ಮಲ್ಲಿ ಅತ್ಯಂತ ದೈನ್ಯದಿಂದ ಕೇಳಿಕೊಳ್ಳುತ್ತೇವೆ. ಈ ಕಾರ್ಯವನ್ನು ಮಾಡಲು ತಮ್ಮ ಹೊರತು ತ್ರಿಭುವನದಲ್ಲಿ ಮತ್ತಾರೂ ಸಮರ್ಥರಿಲ್ಲ.'' ಪರಶುರಾಮರು ಮಹರ್ಷಿಗಳ ಮಾತನ್ನು ಕೇಳಿ ಮನಸ್ಸಿನಲ್ಲಿ ಆಲೋಚಿಸಿ ನಿರ್ಧರಿಸಿದರು. ''ಸಜ್ಜನರ ರಕ್ಷಣೆಯು ಮಹತ್ತಾದ ಪುಣ್ಯಕಾರ್ಯವಾಗಿದೆ. ನನ್ನ ಅವತಾರವೇ ಈ ಉದ್ದೇಶದಿಂದ ಆಗಿದೆ. ಆದ್ದರಿಂದ ಈ ಋಷಿಗಳಿಗೆ ತಿರುಗಿ ಗೋಕರ್ಣ ಕ್ಷೇತ್ರವನ್ನು ಹಿಂತಿರುಗಿಸಿ ಕೊಡಲೇಬೇಕು.''ಈ ರೀತಿ ನಿಶ್ಚಯಿಸಿ ಪರಶುರಾಮರು ತನ್ನ ಧನುಸ್ಸು ಮತ್ತು ಬಾಣಗಳನ್ನು ಕೈಗೆ ತೆಗೆದುಕೊಂಡು ಆ ಋಷಿಗಳನ್ನು ಜತೆಗೆ ಕರೆದುಕೊಂಡು ಹೊರಟರು. ಸಮುದ್ರದ ತೀರಕ್ಕೆ ಬಂದರು. ಅಲ್ಲಿಗೆ ಬಂದು ಸಮುದ್ರದ ಕಡೆಗೆ ನೋಡುತ್ತಾ ಉತ್ತಮ ವಾಗ್ಮಿಯಾದ ಪರಶುರಾಮರು ಮೇಘ ಗಂಭೀರ ಧ್ವನಿಯಿಂದ ಎಲ್ಲಾ ಜಲಚರ ಪ್ರಾಣಿಗಳಿಗೂ ಅಧಿಪತಿಯಾದ ಅಪಾರ ಜಲ ಸ್ವಾಮಿಯಾದ ವರುಣನನ್ನೂ ಸಂಬೋಧಿಸಿ ಹೀಗೆಂದರು ''ಪ್ರಚೇತಸನೇ, ವರುಣ ದೇವನೇ ! ನಾನು ಭೃಗುವಂಶೋತ್ಪನ್ನನಾದ ಪರಶುರಾಮನು.

ಈ ಮುನಿಗಳ ಜತೆಗೆ ನಿನ್ನಲ್ಲಿ ವಿಶೇಷ ಒಂದು ಕಾರ್ಯಕ್ಕಾಗಿ ಬಂದಿದ್ದೇನೆ. ನೀನು ನನಗೆ ದರ್ಶನ ಕೊಡಬೇಕಾಗಿ ಬೇಡಿಕೊಳ್ಳುತ್ತೇನೆ. ನಿನ್ನಲ್ಲಿ ನನಗೆ ಆವಶ್ಯಕವಾದ ಕಾರ್ಯವಿದೆ.'' ಪರಶುರಾಮರ ಮಾತನ್ನು ಕೇಳಿಯೂ ಕೂಡ ವರುಣನು ಅಹಂಕಾರದಿಂದಾಗಿ ಅಲ್ಲಿಗೆ ಬರಲೇ ಇಲ್ಲ. ಪರಶುರಾಮರು ಅನೇಕಬಾರಿ ಕೂಗಿ ಕರೆದರೂ ವರುಣನು ಬರಲಿಲ್ಲ. ಆಗ ಭಾರ್ಗವರಾಮರು ಅತ್ಯಂತ ಕುಪಿತರಾಗಿ ತನ್ನ ಬಿಲ್ಲನ್ನು ಎತ್ತಿಕೊಂಡು ಅದಕ್ಕೆ ಹೆದೆಯೇರಿಸಿ ಆಗ್ನೇಯ ಬಾಣವನ್ನು ಸಂಧಾನ ಮಾಡಿದರು. ಸಮುದ್ರವನ್ನು ಒಣಗಿಸಿ ಬಿಡುತ್ತೇನೆಂದು ಪ್ರತಿಜ್ಞೆ ಮಾಡಿದರು. ಮಹಾತ್ಮರಾದ ಪರಶುರಾಮರು ಆಗ್ನೇಯಾಸ್ತ್ರ ಸಂಧಾನ ಮಾಡಿದ ಕೂಡಲೇ ಜಲಜಂತುಗಳಿಂದ ತುಂಬಿದ್ದ

ಸಮುದ್ರವು ಕ್ಷೋಭೆಗೊಂಡಿತು. ಆ ಅಸ್ತ್ರದ ಜ್ವಾಲೆಯಿಂದ ವರುಣನಿಗೂ ಅಸಹ್ಯವಾದ ತಾಪವುಂಟಾಯಿತು. ವರುಣನು ಅತ್ಯಂತ ಭಯಭೀತನಾಗಿ ನಡುಗುತ್ತಾ ಪ್ರತ್ಯಕ್ಷವಾಗಿ ಅಲ್ಲಿಗೆ ಬಂದು, ಭಾರ್ಗವರಾಮರ ಎರಡು ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಪರಶುರಾಮರು ಕೂಡಲೇ ತನ್ನ ಅಸ್ತ್ರವನ್ನು ಹಿಂತೆಗೆದು ಕೊಂಡರು ಮತ್ತು ವರುಣನೊಡನೆ ಹೇಳಿದರು - ''ವರುಣನೇ! ನೀನು ನಿನ್ನ ಎಲ್ಲ ನೀರನ್ನೂ ಹಿಂತೆಗೆದುಕೋ. ನಿನ್ನ ಜಲದೊಳಗೆ ಅಡಗಿರುವ ಗೋಕರ್ಣೇಶ್ವರನ ದರ್ಶನವು ಎಲ್ಲರಿಗೂ ಆಗಲಿ. ನನಗೆ ಬೇಕಾಗಿರುವುದು ಅಷ್ಟೆ.'' ಪರಶುರಾಮರ ಅಪ್ಪಣೆಯಾದ ಕೂಡಲೇ ವರುಣನು ಗೋಕರ್ಣತೀರ್ಥವನ್ನು ಮುಳುಗಿಸಿದ್ದ ತನ್ನ ಜಲವನ್ನು ಹಿಂತೆಗೆದುಕೊಂಡನು. ಪರಶುರಾಮರು ಗೋಕರ್ಣೇಶ್ವರನ ಅರ್ಚನ ಮಾಡಿ ಮಹೇಂದ್ರ ಪರ್ವತಕ್ಕೆ ಹಿಂತಿರುಗಿದರು. ಅನಂತರ ಆ ಮಹಾತ್ಮರಾದ ಋಷಿಗಳು ಅಲ್ಲೇ ಇರತೊಡಗಿದರು. ಒಳ್ಳೆಯ ನಿಷ್ಠಾವಂತರಾಗಿ ಉತ್ತಮ ವ್ರತ ಪರರಾಗಿ ಆ ಋಷಿಗಳು ಗೋಕರ್ಣದಲ್ಲಿಯೇ ತಪಸ್ಸು ಮಾಡುತ್ತಾ ಇದ್ದರು. ಶಂಕರನ ಅನುಗ್ರಹದಿಂದ ಉತ್ತಮ ಜ್ಞಾನವನ್ನೂ ಪಡೆದು ಕೊನೆಗೆ ಮೋಕ್ಷವನ್ನೇ ಪಡೆದರು.

ಅವರೆಲ್ಲರಿಗೂ ನಿರ್ವಾಣ ಪದವೀರೂಪವಾದ ಮೋಕ್ಷವೇ ದೊರಕಿತು. ಆ ಕ್ಷೇತ್ರವು ಅತ್ಯುತ್ತಮವಾದುದು. ಆದುದರಿಂದಲೇ ಪಾರ್ವತೀದೇವಿಯೂ ಪ್ರಸನ್ನಳಾಗಿ ಅಲ್ಲಿಯೇ ಇರತೊಡಗಿದಳು. ಎಲ್ಲ ಭೂತಗಣಗಳು, ದೇವತೆಗಳ ಸಹಿತವಾಗಿ ಭಗವಾನ್ ಶಂಕರನೂ ಅಲ್ಲಿಯೇ ಇರತೊಡಗಿದನು. ಅದು ಈಶ್ವರನ ನಿತ್ಯ ನಿವಾಸ ಸ್ಥಾನವಾಯಿತು. ಗೋಕರ್ಣನಾಥನಾದ ಆ ಮಹಾದೇವನ ದರ್ಶನದಿಂದ ಎಲ್ಲ ಪಾಪಗಳೂ ಹೇಳ ಹೆಸರಿಲ್ಲದೆ ನಾಶವಾಗುತ್ತವೆ. ಗೋಕರ್ಣ ಕ್ಷೇತ್ರದ ಸ್ಮರಣೆಯಿಂದಲೇ ಮನುಷ್ಯರ ಪಾಪಗಳೆಲ್ಲವೂ ದೂರವಾಗುತ್ತವೆ. ಈ ಗೋಕರ್ಣ ಕ್ಷೇತ್ರವು ಕಾಮಕ್ರೋಧಾದಿ ಗಳುಳ್ಳವರಿಂದ ಪ್ರವೇಶಿಸಲು ಯೋಗ್ಯವಲ್ಲ. ಇಂತಹ ದೋಷಗಳಿಲ್ಲದವರು ಆ ಕ್ಷೇತ್ರದಲ್ಲಿ ಸ್ವಲ್ಪವೇ ಸಮಯಪರ್ಯಂತವಾಗಿ ತಪಸ್ಸು ಮಾಡಿದರೂ ಅವರು ಉತ್ತಮ ಸಿದ್ಧಿಯನ್ನು ಪಡೆಯುತ್ತಾರೆ. ಸತಿ ಮೋಹಿನಿ! ಆ ತೀರ್ಥದಲ್ಲಿ ಮಾಡಿದ ದಾನ, ಹೋಮ, ಜಪ, ಶ್ರಾದ್ಧ, ದೇವಪೂಜೆ, ಬ್ರಾಹ್ಮಣ ಸತ್ಕಾರ ಮೊದಲಾದ ಯಾವ ಪುಣ್ಯಕಾರ್ಯವೇ ಆಗಲಿ ಅದು ಬೇರೆ ತೀರ್ಥಗಳಿಗಿಂತ ಕೋಟಿ ಪಾಲು ಹೆಚ್ಚಾಗಿ ಫಲವನ್ನು ಕೊಡುತ್ತದೆ.

## ಶ್ರೀರಾಮ ಲಕ್ಷ್ಮಣರ ಸಂಕ್ಷಿಪ್ತ ಚರಿತ್ರೆ-ಲಕ್ಷ್ಮಣಾಚಲ ಮಹಿಮೆ

**ಮೋಹಿನಿ:-** ಪುರೋಹಿತವರ್ಯರೇ! ಗೋಕರ್ಣ ತೀರ್ಥದ ಪಾಪನಾಶಕವಾದ ಮಹಿಮೆಯನ್ನು ನಾನು ಕೇಳಿದ್ದಾಯಿತು. ಈಗ ತಾವು ದಯವಿಟ್ಟು ಲಕ್ಷ್ಮಣ ತೀರ್ಥದ ಮಹಿಮೆಯನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇನೆ.

**ಪುರೋಹಿತವಸುಗಳು:-** ಪ್ರಾಚೀನಕಾಲದಲ್ಲಿ ಬ್ರಹ್ಮಾದಿ ದೇವತೆಗಳ ಪ್ರಾರ್ಥನಾನುಸಾರವಾಗಿ ಲಕ್ಷ್ಮೀಪತಿಯಾದ ನಾರಾಯಣನು ತಾನು ಶ್ರೀರಾಮನೆಂಬ ಹೆಸರಿನಿಂದ ದಶರಥ ಮಹಾರಾಜನ ಮಗನಾಗಿ ಅವತರಿಸಿದನು. ನಾರಾಯಣನ ಶಯನನಾಗಿರುವ ಆದಿಶೇಷನು ನಾರಾಯಣನ ಅನುಗ್ರಹಾಂಶದಿಂದ ಕೂಡಿದವನಾಗಿ ಲಕ್ಷ್ಮಣನೆಂಬ ಹೆಸರಿನಿಂದ ಅವತರಿಸಿದನು. ಚಕ್ರಾಭಿಮಾನಿಯಾದ ಪ್ರದ್ಯುಮ್ನನು

ಭರತನಾಗಿಯೂ, ಪಾಂಚಜನ್ಯ ಶಂಖಾಭಿಮಾನಿಯಾದ ಅನಿರುದ್ಧನು ಶತ್ರುಘ್ನನಾಗಿಯೂ ಅವತರಿಸಿದರು. ಅವರೆಲ್ಲರೂ ಬೆಳೆದು ದೊಡ್ಡವರಾದರು.

ಅನಂತರ ರಾಮಾವತಾರದ ಕೊನೆಯಲ್ಲಿ ರಾಮನ ಆದೇಶದಂತೆ ಸತ್ಯಧರ್ಮರತ ನಾದ ಲಕ್ಷ್ಮಣನು ಶ್ರೀ ರಾಮಚಂದ್ರನಿಗೆ ನಮಸ್ಕಾರ ಮಾಡಿ ದಕ್ಷಿಣದಿಕ್ಕಿಗೆ ಹೋಗಿ ಅಲ್ಲಿ ಒಂದು ಉನ್ನತವಾದ ಪರ್ವತವನ್ನೇರಿ ತಪಸ್ಸು ಮಾಡಲು ತೊಡಗಿದನು. ಅನಂತರ ಶ್ರೀರಾಮಚಂದ್ರನು ಬ್ರಹ್ಮದೇವರ ಪ್ರಾರ್ಥನಾನುಸಾರವಾಗಿ ಅಯೋಧ್ಯೆಯ ಮತ್ತು ಕೋಸಲಪ್ರಾಂತದ ಎಲ್ಲ ಪ್ರಾಣಿಗಳೊಡನೆ ಸಹಿತನಾಗಿ ತನ್ನ ಪರಂಧಾಮಕ್ಕೆ (ವೈಕುಂಠಕ್ಕೆ) ತೆರಳಿದನು. ಆ ಸಮಯದಲ್ಲಿ ಸರಯೂ ನದಿಯು ಗೋಪತ್ರಾರ ಘಟ್ಟದ ತೀರ್ಥದಲ್ಲಿ ಮುಳುಗಿದ ಎಲ್ಲರೂ ದಿವ್ಯ ಶರೀರವನ್ನು ಧರಿಸಿ ಯೋಗಿಗಳಿಗೂ ದುರ್ಲಭವಾದ ದಿವ್ಯಲೋಕಕ್ಕೆ ಹೋದರು. ಇತ್ತ ಲಕ್ಷ್ಮಣನು ಕೆಲವು ಕಾಲ ತಪಸ್ಸು ಮಾಡುತ್ತಾ ಇದ್ದು ಕೊನೆಗೆ ತನ್ನ ತಪಸ್ಸು, ಯೋಗ ಮತ್ತು ಶ್ರೀರಾಮಾನುಗ್ರಹಗಳಿಂದ ತನ್ನ ಮೂಲರೂಪವನ್ನು ಹೊಂದಿ ಶ್ರೀರಾಮನ ಸನ್ನಿಧಿಯನ್ನೇ ಸೇರಿದನು. ಸುಮಿತ್ರಾ ನಂದನನಾದ ಲಕ್ಷ್ಮಣದೇವನು ತಾನು ತಪಸ್ಸು ಮಾಡುತ್ತಿದ್ದ ಪರ್ವತದಲ್ಲಿ ತನ್ನ ಸನ್ನಿಧಾನವಿರುವಂತೆ ವರವನ್ನು ಕೊಟ್ಟು ಆ ಪರ್ವತವನ್ನು ತನ್ನದನ್ನಾಗಿ ಮಾಡಿಕೊಂಡನು. ಆದುದರಿಂದ ಆ ಪರ್ವತವು ಲಕ್ಷ್ಮಣಕ್ಷೇತ್ರ ಎನಿಸಿಕೊಂಡಿತು. ಲಕ್ಷ್ಮಣ ಪರ್ವತದಲ್ಲಿ ಭಕ್ತಿ ಭಾವದಿಂದ ಲಕ್ಷ್ಮಣನ ದರ್ಶನ ಮಾಡಿದವರು ಶ್ರೀ ರಾಮಚಂದ್ರನಲ್ಲಿ ಭಕ್ತಿಯನ್ನು ಹೊಂದಿ ಧನ್ಯರಾಗುತ್ತಾರೆ. ಶ್ರೀ ರಾಮಚಂದ್ರನ ದಿವ್ಯ ಸನ್ನಿಧಿಯನ್ನೇ ಪಡೆಯುತ್ತಾರೆ. ಆ ತೀರ್ಥದಲ್ಲಿ ಮಾಡಿದ ಸುವರ್ಣ, ಗೋ, ಭೂಮಿ, ಅಶ್ವದಾನಗಳು, ಹೋಮ, ಜಪ, ಅಥವಾ ಮತ್ತಿತರ ಪುಣ್ಯಕರ್ಮಗಳು ಅಕ್ಷಯವಾಗುತ್ತವೆ.

## ಸೇತು ಕ್ಷೇತ್ರದಲ್ಲಿ ಇತರ ಸ್ಥಳಗಳ ಮಹಿಮೆಗಳು

**ಪುರೋಹಿತ ವಸುಗಳು:-** ದೇವಿ! ಕೇಳು, ದರ್ಶನಮಾತ್ರದಿಂದ ಮಾನವರನ್ನು ಸಂಸಾರಸಾಗರದಿಂದ ಉದ್ಧರಿಸುವ ಸೇತುವಿನ ದಿವ್ಯ ಮಹಿಮೆಯನ್ನು ನಿನಗೆ ನಾನೀಗ ವಿಸ್ತರಿಸಿ ಹೇಳುತ್ತೇನೆ. ರಾಮೇಶ್ವರನ ಸನ್ನಿಧಾನ ಪಾತ್ರವಾದ ಸೇತು ತೀರ್ಥವು ಪರಮಶ್ರೇಷ್ಠವಾದುದು. ದರ್ಶನ ಮಾತ್ರದಿಂದ ಮಾನವರಿಗೆ ಅಮರತ್ವ ಪ್ರದವಾದುದು. ಅಲ್ಲಿ ಮನಸ್ಸನ್ನು ವಶದಲ್ಲಿಟ್ಟುಕೊಂಡು ಶ್ರೀ ರಾಮೇಶ್ವರನ ಪೂಜೆ ಮಾಡಿದವನು ಎಲ್ಲ ವಿಧವಾದ ಐಶ್ವರ್ಯಗಳನ್ನು ಹೊಂದುತ್ತಾನೆ. ಶ್ರೀ ರಾಮೇಶ್ವರ ತೀರ್ಥದ ಬಳಿಯಲ್ಲಿಯೇ ಸಮಸ್ತಪಾತಕ ಪರಿಹಾರಕವಾದ ಚಕ್ರತೀರ್ಥವೆಂಬ ಮತ್ತೊಂದು ತೀರ್ಥವಿದೆ. ಅಲ್ಲಿ ಮಾಡಿದ ಸ್ನಾನ, ದಾನ, ಜಪ ಮತ್ತು ಹೋಮಗಳು ಅನಂತರ ಫಲಗಳನ್ನು ಕೊಡುತ್ತವೆ. ಅಲ್ಲಿಂದ ಪಾಪವಿನಾಶನ ತೀರ್ಥಕ್ಕೆ ಹೋಗಿ ಸ್ನಾನ ಮಾಡಿದ ಮಾನವನ ಎಲ್ಲಾ ಪಾಪಗಳೂ ತೊಳೆದು ಹೋಗುತ್ತವೆ ಮತ್ತು ಆ ಜೀವಾತ್ಮನು ಸ್ವರ್ಗವನ್ನು ಸೇರುತ್ತಾನೆ. ಅಲ್ಲಿಂದ ಸೀತಾಕುಂಡಕ್ಕೆ ಹೋಗಿ ಸ್ನಾನ ಮಾಡಿ ಭಕ್ತಿಯಿಂದ ದೇವತೆಗಳು ಮತ್ತು ಪಿತೃಗಳಿಗೆ ತರ್ಪಣ ಮಾಡಿದ ಮನುಷ್ಯನು ಸಮಸ್ತ ಕಾಮನೆಗಳನ್ನು ಪಡೆಯುತ್ತಾನೆ.

ಹತ್ತಿರದಲ್ಲಿಯೇ ಇರುವ ಮಂಗಳತೀರ್ಥವೂ ಸ್ನಾನದಿಂದ ಸಮಸ್ತ ಪಾತಕಗಳನ್ನು ಪರಿಹರಿಸುತ್ತದೆ. ಅಮೃತವಾಪೀ ತೀರ್ಥಸ್ನಾನದಿಂದ ಮರ್ತ್ಯನು (ಮರಣ ಸ್ವಭಾವದ

ಮಾನವನು) ಅಮರನಾಗುತ್ತಾನೆ. (ದೇವತ್ವವನ್ನು ಪಡೆಯುತ್ತಾನೆ). ಬ್ರಹ್ಮಕುಂಡದಲ್ಲಿ ಸ್ನಾನ ಮಾಡಿದವನು ಬ್ರಹ್ಮಲೋಕವನ್ನು ಪಡೆಯುತ್ತಾನೆ. ಲಕ್ಷ್ಮಣ ತೀರ್ಥ ಸ್ನಾನದಿಂದ ಯೋಗ (ತಪಸ್ಸಿದ್ಧಿ) ಪ್ರಾಪ್ತಿಯಾಗುತ್ತದೆ. ಹನುಮಂತನ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಮಾನವನು ಶತ್ರುಗಳಿಗೆ ದುರ್ಜಯನಾಗುತ್ತಾನೆ. ಶ್ರೀ ರಾಮ ಕುಂಡದಲ್ಲಿ ಸ್ನಾನ ಮಾಡಿದವನು ಶ್ರೀ ರಾಮನ ಸಾಲೋಕ್ಯವನ್ನು ಪಡೆಯುತ್ತಾನೆ. ಅಗ್ನಿ ತೀರ್ಥಸ್ನಾನದಿಂದ ಪಾಪಮುಕ್ತಿಯೂ, ಶಿವತೀರ್ಥಸ್ನಾನದಿಂದ ಶಿವಲೋಕಪ್ರಾಪ್ತಿಯೂ ಆಗುತ್ತದೆ. ಶಂಖತೀರ್ಥಸ್ನಾನದಿಂದ ದುರ್ಗತಿ ಪರಿಹಾರ, ಕೋಟಿ ತೀರ್ಥಸ್ನಾನದಿಂದ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವೂ ಉಂಟಾಗುತ್ತದೆ. ಧನುಷ್ಕೋಟಿ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿದವನು ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ. ಗಾಯತ್ರೀ ತೀರ್ಥ ಮತ್ತು ಸರಸ್ವತೀ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ಋಣಮೋಚನ ತೀರ್ಥದಲ್ಲಿ ಸ್ನಾನ ಮಾಡುವ ಮನುಷ್ಯನು ಋಣದ (ಸಾಲದ) ಪಾಪದಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಮಂಗಳಸ್ವರೂಪಿಣಿಯಾದ ಮೋಹಿನಿ! ಈ ರೀತಿ ನಾನು ನಿನಗೆ ಸೇತುಬಂಧ ರಾಮೇಶ್ವರದ ಪುಣ್ಯತೀರ್ಥಗಳ ಮಹಿಮೆಯನ್ನೆಲ್ಲಾ ಹೇಳಿದ್ದೇನೆ. ಈ ಮಹಿಮೆಯನ್ನು ಹೇಳುವುದೂ ಮತ್ತು ಕೇಳುವುದೂ ಕೂಡ ಸಮಸ್ತ ಪಾಪಗಳನ್ನು ನಾಶಮಾಡುತ್ತದೆ.

## ನರ್ಮದೆಯಲ್ಲಿರುವ ತೀರ್ಥಗಳ ದಿಗ್ ದರ್ಶನ

**ಪುರೋಹಿತ ವಸುಗಳು:-** ಮೋಹಿನಿ, ನಾನು ನರ್ಮದಾನದಿಯ ಎರಡೂ ದಡಗಳಲ್ಲಿರುವ ತೀರ್ಥಗಳನ್ನು ನಿನಗೋಸ್ಕರ ವಿವರಿಸಿ ಹೇಳುತ್ತೇನೆ ಕೇಳು.

ನರ್ಮದೆಯ ಉತ್ತರತೀರದಲ್ಲಿ ಹನ್ನೊಂದು ತೀರ್ಥಗಳೂ, ದಕ್ಷಿಣ ತೀರದಲ್ಲಿ ಇಪ್ಪತ್ತಮೂರು ತೀರ್ಥಗಳೂ ಇವೆ. ನರ್ಮದಾ ಮತ್ತು ಸಮುದ್ರ ಸಂಗಮವು ಮೂವತ್ತ ಐದನೆಯ ತೀರ್ಥವೆಂದು ಹೇಳಲಾಗುತ್ತದೆ. ಓಂಕಾರ ತೀರ್ಥದ ಎರಡೂ ಪಾರ್ಶ್ವಗಳಲ್ಲಿಯೂ ಅಮರಕಂಟಕ ಪರ್ವತದಿಂದ ಎರಡು ಹರದಾರಿ ದೂರದ ವರೆಗೆ ಎಲ್ಲ ದಿಕ್ಕುಗಳಲ್ಲಿಯೂ ಮೂರೂವರೆ ಕೋಟಿ ತೀರ್ಥಗಳಿವೆ. ಕಪಿಲಾಸಂಗಮ ಒಂದರಲ್ಲಿಯೇ ಒಂದುಕೋಟಿ ತೀರ್ಥಗಳಿವೆ. ಅಶೋಕವನದಲ್ಲಿ ಒಂದು ಲಕ್ಷ ತೀರ್ಥಗಳಿವೆ. ಅಂಗಾರಗರ್ತ ಎಂಬಲ್ಲಿ ಒಂದು ನೂರು ಕುಬ್ಜೆಗಳಲ್ಲಿ ಹತ್ತು ಸಾವಿರ ತೀರ್ಥಗಳಿವೆ. ವಾಯುಸಂಗಮದಲ್ಲಿ ಒಂದು ಸಾವಿರ ಮತ್ತು ಸರಸ್ವತೀ ಸಂಗಮದಲ್ಲಿ ನೂರು ಶುಕ್ಲತೀರ್ಥದಲ್ಲಿ ಎರಡುನೂರು ತೀರ್ಥಗಳೂ, ವಿಷ್ಣುತೀರ್ಥದಲ್ಲಿ ಒಂದು ಸಾವಿರ ತೀರ್ಥಗಳೂ ಇವೆ. ಮಾಹಿಷ್ಮತಿಯಲ್ಲಿ ಒಂದು ಸಾವಿರ ತೀರ್ಥಗಳೂ, ಶೂಲಭೇದ ತೀರ್ಥದಲ್ಲಿ ಹತ್ತುಸಾವಿರ ತೀರ್ಥಗಳೂ ಇವೆಯೆಂದು ಜ್ಞಾನಿಗಳ ಅಭಿಪ್ರಾಯವಾಗಿದೆ. ದೇವಗ್ರಾಮದಲ್ಲಿ ಒಂದು ಸಾವಿರ ತೀರ್ಥಗಳೂ, ಉಲೂಕ ತೀರ್ಥದಲ್ಲಿ ಏಳುನೂರು ತೀರ್ಥಗಳೂ ಇವೆ. ಮಣಿನದಿಯ ಸಂಗಮಸ್ಥಳದಲ್ಲಿ ಒಂದು ನೂರು ಎಂಟು ತೀರ್ಥಗಳಿವೆ. ವೈದ್ಯನಾಥ ಮತ್ತು ಘಟೇಶ್ವರದಲ್ಲಿ ಪ್ರತ್ಯೇಕವಾಗಿ ನೂರ ಎಂಟು ತೀರ್ಥಗಳಿವೆ. ನರ್ಮದಾ ಸಮುದ್ರ ಸಂಗಮದಲ್ಲಿ ಒಂದೂವರೆ ಲಕ್ಷ ತೀರ್ಥಗಳಿವೆಯೆಂದು ಜ್ಞಾನಿಗಳ ಅಭಿಪ್ರಾಯವಾಗಿದೆ. ವ್ಯಾಸದ್ವೀಪದಲ್ಲಿ ಎಂಬತ್ತ ಎಂಟು ಸಾವಿರದ ನೂರು ತೀರ್ಥಗಳೂ, ಕರಂಜಾ

ಸಂಗಮದಲ್ಲಿ ಹತ್ತು ಸಾವಿರದ ಎಂಟು ತೀರ್ಥಗಳೂ, ಏರಂಡೀ ಸಂಗಮದಲ್ಲಿ ಒಂದುನೂರ ಎಂಟು ತೀರ್ಥಗಳೂ, ಧೂತಪಾಪ ತೀರ್ಥದಲ್ಲಿ ಅರವತ್ತು ಎಂಟು ತೀರ್ಥಗಳೂ, ಕೋಕಿಲದಲ್ಲಿ ಒಂದೂವರೆ ಕೋಟಿ ತೀರ್ಥಗಳೂ ಇವೆ. ರಾಣಿಯಾದ ಮೋಹಿನಿಯೇ, ರೋಮಕೇಶದಲ್ಲಿ ಒಂದು ಸಾವಿರ, ದ್ವಾದಶಾರ್ಕದಲ್ಲಿ ಸಾವಿರ, ಶುಕ್ಲ ತೀರ್ಥದಲ್ಲಿ ಎಂಟು ಲಕ್ಷ ಎರಡು ಸಾವಿರ ತೀರ್ಥಗಳಿವೆ. ಪ್ರತಿಯೊಂದು ಸಂಗಮ ಸ್ಥಳದಲ್ಲಿಯೂ ಒಂದು ನೂರು ಎಂಟಕ್ಕೆ ಕಡಿಮೆ ಇಲ್ಲದೆ ತೀರ್ಥಗಳಿವೆಯೆಂದು ಜ್ಞಾನಿಗಳ ಅಭಿಪ್ರಾಯ. ಕಾವೇರಿ ಸಂಗಮ ಅರ್ಥಾತ್ ನಂದ ತೀರ್ಥದಲ್ಲಿ ಐದುನೂರು ಅವಾಂತರ ತೀರ್ಥಗಳು (ಅಲ್ಪತೀರ್ಥಗಳು) ಇವೆ. ಭೃಗುಕ್ಷೇತ್ರದಲ್ಲಿ ಒಂದು ಕೋಟಿ, ಭಾರಭೂತಿಯಲ್ಲಿ ಒಂದು ನೂರು ತೀರ್ಥಗಳು, ಅಕ್ರೂರೇಶ್ವರದಲ್ಲಿ ಒಂದು ನೂರ ಐವತ್ತು ಹಾಗೂ ವಿಮಲೇಶ್ವರದಲ್ಲಿ ಒಂದು ಲಕ್ಷ ತೀರ್ಥಗಳೂ ಇವೆ. ಮಂಗಳ ಮುಖಿಯೇ! ಸೂರ್ಯ ತೀರ್ಥಗಳು ಹತ್ತು, ಕಪಿಲ ತೀರ್ಥಗಳೂ ಒಂಭತ್ತು, ಚಂದ್ರತೀರ್ಥಗಳು ಎಂಟು, ನಂದಿತೀರ್ಥಗಳು ಒಂದು ಕೋಟಿಯ ಮೇಲೆ ಎಂಟು ಇವೆಯೆಂದು ಬಲ್ಲವರು ಹೇಳುತ್ತಾರೆ. ಸ್ತವಕದಲ್ಲಿ ಎರಡುನೂರ ಹದಿನಾಲ್ಕು ಶೈವತೀರ್ಥಗಳೂ, ಇಪ್ಪತ್ತು ಎರಡು ವೈಷ್ಣವ ತೀರ್ಥಗಳೂ ಇವೆ. ಇವೆಲ್ಲವೂ ಬ್ರಾಹ್ಮತೀರ್ಥವೆಂದೂ ವ್ಯವಹಾರವನ್ನು ಹೊಂದುತ್ತವೆ. ಅಲ್ಲಿಯೇ ಇರುವ ಇಪ್ಪತ್ತ ಎಂಟು ಶಾಕ್ತತೀರ್ಥಗಳಲ್ಲಿ, ಏಳು ಮಾತೃಕಾ ತೀರ್ಥಗಳು, ಮೂರು, ಬ್ರಾಹ್ಮತೀರ್ಥಗಳು, ಎರಡು ವೈಷ್ಣವ ತೀರ್ಥಗಳು, ಎರಡು ರುದ್ರತೀರ್ಥಗಳೂ ಇವೆ. ಬ್ರಾಹ್ಮ ಮತ್ತು ವೈಷ್ಣವಗಳ ಹೊರತು ಉಳಿದ ಸ್ಥಾನಗಳಲ್ಲಿ ರುದ್ರ ಶಕ್ತಿಗಳಿವೆ. ಸುಮುಖಿಯೇ! ಅಲ್ಲಿ ಕ್ಷೇತ್ರಪಾಲನ ಎಂಬ ತೀರ್ಥವೂ ಇದೆಯೆಂದು ಹೇಳುತ್ತಾರೆ. ಮೋಹಿನಿ! ಇವುಗಳಲ್ಲದೆ ನರ್ಮದಾ ನದಿಯಲ್ಲಿ ಗುಪ್ತವಾದ ಮತ್ತು ಪ್ರಕಟವಾದ ಅನೇಕಾನೇಕ ಅವಾಂತರತೀರ್ಥಗಳೂ ಇವೆ. ಭೂಮಿ, ಅಂತರಿಕ್ಷ ಮತ್ತು ದ್ಯುಲೋಕದಲ್ಲಿ ಸನ್ನಿಹಿತವಾಗಿವೆಯೆಂದು ವಾಯುದೇವನು ಹೇಳಿರುವ ಮೂರು ಕೋಟಿ ತೀರ್ಥಗಳೆಲ್ಲವೂ ನರ್ಮದಾ ನದಿಯಲ್ಲಿ ಸನ್ನಿಹಿತವಾಗಿವೆ ಯೆಂದು ತಿಳಿ. ಮಹಾಭಾಗ್ಯವತಿಯೇ! ಮಾನವನು ಈ ತೀರ್ಥಗಳಲ್ಲಿ ಎಲ್ಲಿಯೇ ಸ್ನಾನ ಮಾಡಲಿ, ಅವನು ಶುದ್ಧಾಂತಃ ಕರಣನಾಗಿ ಉತ್ತಮ ಗತಿಯನ್ನು ಹೊಂದುತ್ತಾನೆ. ನರ್ಮದಾ ನದಿಯ ತೀರದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ ಮತ್ತು ಪೂಜೆ ಎಲ್ಲವೂ ಅಕ್ಷಯವಾಗುತ್ತದೆ. ದೇವಿ! ಈ ರೀತಿಯಾಗಿ ನಾನು ನಿನಗೆ ನರ್ಮದಾ, ನದಿಯ ತೀರ್ಥ ಸಮುದಾಯವನ್ನು ವರ್ಣಿಸಿರುತ್ತೇನೆ. ಈ ವಿಷಯವನ್ನು ಸ್ಮರಿಸಿದರೂ ಮಾನವನ ಮಹಾಪಾತಕಗಳು ನಾಶವಾಗುತ್ತವೆ. ನರ್ಮದೆಯ ಈ ತೀರ್ಥ ಸಂಗ್ರಹವನ್ನು ಹೇಳುವ ಅಥವಾ ಕೇಳುವ ಮನುಷ್ಯನೂ ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ.

## ಆವಂತಿಯಲ್ಲಿರುವ ಮಹಾಕಾಲವನದ ತೀರ್ಥಗಳ ಮಹಿಮೆ

**ಪುರೋಹಿತ ವಸು:-** ಭದ್ರೇ! ಕೇಳು ನಾನೀಗ ಮಾನವರಿಗೆ ಪರಮ ಪುಣ್ಯಪ್ರದವಾದ ಆವಂತೀ ಮಹಿಮೆಯನ್ನು ಹೇಳುತ್ತೇನೆ. ಆವಂತೀ ಕ್ಷೇತ್ರದಲ್ಲಿರುವ ಮಹಾಕಾಲವನವು ಪರಮ ಪವಿತ್ರವಾದ ತಪೋ ಭೂಮಿಯಾಗಿದೆ. ಈ ಭೂಮಂಡಲದಲ್ಲಿ ಮಹಾಕಾಲವನಕ್ಕಿಂತ ಪವಿತ್ರವಾದ ಕ್ಷೇತ್ರವು ಮತ್ತೊಂದಿಲ್ಲ. ಅಲ್ಲಿರುವ ಕಪಾಲಮೋಚನ

ತೀರ್ಥದಲ್ಲಿ ಭಕ್ತಿಪೂರ್ವಕವಾಗಿ ಸ್ನಾನ ಮಾಡಿದ ಮಾನವನು ಬ್ರಹ್ಮಹತ್ಯಾಪಾಪದಿಂದಲೂ ಬಿಡುಗಡೆ ಹೊಂದುತ್ತಾನೆ. ರುದ್ರ ಸರೋವರದಲ್ಲಿ ಸ್ನಾನ ಮಾಡುವ ಮಾನವನು ರುದ್ರಲೋಕವನ್ನೇ ಪಡೆಯುತ್ತಾನೆ. ಸ್ವರ್ಗದ್ವಾರದಲ್ಲಿ ಸ್ನಾನ ಮಾಡಿ ಸದಾಶಿವನ ಪೂಜೆ ಮಾಡಿದ ಮಾನವನು ಎಂದೂ ದುರ್ಗತಿಯನ್ನು ಹೊಂದುವುದಿಲ್ಲ. ಅವನು ಸ್ವರ್ಗಲೋಕದಲ್ಲಿಯೂ ಪೂಜಿತನಾಗುತ್ತಾನೆ. ರಾಜಸ್ಥಳಕ್ಕೆ ಹೋಗಿ ಅಲ್ಲಿರುವ ಸಾಮುದ್ರಿಕ ತೀರ್ಥದಲ್ಲಿ ಸ್ನಾನ ಮಾಡುವ ಮಾನವನು ಎಲ್ಲಾ ತೀರ್ಥಗಳ ಸ್ನಾನ ಫಲವನ್ನು ಪಡೆಯುತ್ತಾನೆ. ಶಂಕರ ವಾಪೀ ತೀರ್ಥದಲ್ಲಿ ನಿಯಮ ಪೂರ್ವಕವಾಗಿ ಸ್ನಾನ ಮಾಡುವ ಮಾನವನು ಇಹಲೋಕದಲ್ಲಿ ಬಯಸಿದ ಭೋಗಗಳನ್ನು ಅನುಭವಿಸಿ ಕೊನೆಗೆ ರುದ್ರಲೋಕವನ್ನು ಪಡೆಯುತ್ತಾನೆ. ನೀಲಗಂಗೆಯಲ್ಲಿ ಸ್ನಾನ ಮಾಡಿ ಭಕ್ತಿಭಾವದಿಂದ ಗಂಧವತೀದೇವಿಯ ಪೂಜೆಯನ್ನು ಮಾಡುವ ಮಾನವನು ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ದಶಾಶ್ವಮೇಧಿಕ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲವು ಉಂಟಾಗುತ್ತದೆ. ಅಲ್ಲಿ ಸ್ನಾನ ಮಾಡಿದವನು ದೇವೇಶ್ವರಿಯಾದ ಏಕಾನಂಶಾದೇವಿಯ ಬಳಿಗೆ ಹೋಗಿ ಭಕ್ತಿಯಿಂದ ಗಂಧಪುಷ್ಪಾದಿಗಳ ಮೂಲಕವಾಗಿ ಪೂಜಿಸಬೇಕು. ಇದರಿಂದ ಎಲ್ಲ ಅಭಿಲಾಷೆಗಳೂ ನೆರವೇರುತ್ತವೆ. ರುದ್ರ ಸರೋವರದಲ್ಲಿ ಸ್ನಾನಮಾಡಿ ಶ್ರದ್ಧಾಪೂರ್ವಕವಾಗಿ ಹನುಮತ್ಕೇಶ್ವರನ ಪೂಜೆ ಮಾಡುವ ಮಾನವನು ಎಲ್ಲ ಸಂಪತ್ತುಗಳನ್ನು ಪಡೆಯುತ್ತಾನೆ.

ಬೇರೆ ಬೇರೆ ಕಲ್ಪದಲ್ಲಿ ಅವಂತಿಗೆ (ಉಜ್ಜಯನಿಗೆ) ಬೇರೆ ಬೇರೆ ಹೆಸರುಗಳಿವೆ. ಕನನ ಶೃಂಗಾ, ಕುಶಸ್ಥಲೀ, ಆವಂತಿಕಾ, ಪದ್ಮಾವತೀ ಕುಮುದ್ವತೀ, ಉಜ್ಜಯಿನೀ ವಿಶಾಲಾ ಮತ್ತು ಅಮರಾವತೀ ಇವೆಲ್ಲವೂ ಮಹಾಕಾಲವನದ ಬೇರೆ ಬೇರೆ ಹೆಸರುಗಳು. ಅಲ್ಲಿಯೇ ಶಿಪ್ರಾನದಿಯು ಹರಿಯುತ್ತದೆ. ಅಲ್ಲಿ ಸ್ನಾನಮಾಡಿ ಮಹಾಕಾಲೇಶ್ವರನ ಪೂಜೆ ಮಾಡಿದವನು, ಮಹಾದೇವ ಮತ್ತು ಮಹಾದೇವಿಯರ ಸಂಪೂರ್ಣ ಕೃಪೆಗೆ ಪಾತ್ರನಾಗಿ ತನ್ನ ಎಲ್ಲಾ ಅಭೀಷ್ಟಗಳನ್ನು ಪಡೆಯುತ್ತಾನೆ.

## ಮಥುರೆಯ ಬೇರೆ ಬೇರೆ ತೀರ್ಥಗಳ ಮಹಿಮೆ

**ಮೋಹಿನಿ:-** ಪುರೋಹಿತವರ್ಯರೇ! ಮಾನವರ ಸಮಸ್ತ ಪಾಪ ಪರಿಹಾರಕವಾದ ಅವಂತೀಪುರಿಯ ಮಹಿಮೆಯನ್ನು ನಿಮ್ಮಿಂದ ಕೇಳಿದ್ದಾಯಿತು. ಈಗ ನಾನು ಮಥುರೆಯ ಮಹಿಮೆಯನ್ನು ನಿಮ್ಮಿಂದ ಕೇಳಲು ಬಯಸುತ್ತೇನೆ.

**ಪುರೋಹಿತ ವಸು:-** ಮೋಹಿನಿ! ನೀನು ಮಥುರೆಯ ವಿಚಾರವನ್ನು ಕೇಳುತ್ತಿದ್ದೀಯಲ್ಲವೇ? ಬಹಳ ಸಂತೋಷ. ಬ್ರಹ್ಮದೇವರ ಪ್ರಾರ್ಥನೆಯಂತೆ ಸಾಕ್ಷಾತ್ ಭಗವಂತನಾದ ನಾರಾಯಣನು ಕೃಷ್ಣರೂಪದಿಂದ ಅವತರಿಸಿದ. ಮಥುರೆಯ ಪರಮ ಮಂಗಳಕರವಾದ ವೈಭವವನ್ನು ನಾನು ಈಗ ನಿನಗೆ ಸಂಕ್ಷೇಪದಿಂದ ಹೇಳುತ್ತೇನೆ ಕೇಳು. ಭಗವಂತನು ಅಲ್ಲಿ ಪ್ರಕಟನಾಗಿ ನಂದಗೋಕುಲಕ್ಕೆ ಹೋದನು. ಮತ್ತು ನಂದ ಗೋಕುಲದಲ್ಲಿ ಗೋಪಾಲಕರ ಜೊತೆಗೆ ವಿಧವಿಧವಾದ ಲೀಲೆಗಳನ್ನು ಮಾಡಿದನು. ವೃಂದಾವನದಲ್ಲಿ ಮತ್ತು ನಂದ ಗೋಕುಲದಲ್ಲಿರುವ ತೀರ್ಥಗಳನ್ನು ನಿನಗೀಗ ಹೇಳುತ್ತೇನೆ. ಮಥುರೆಯಲ್ಲಿ ಮಧು ವನವಿದೆ. ಅಲ್ಲಿ ಸ್ನಾನ ಮಾಡಿ ದೇವ ಋಷಿ

ಪಿತೃಗಳಿಗೆ ತರ್ಪಣ ಕೊಟ್ಟರೆ ಮಾನವನು ವಿಷ್ಣು ಲೋಕದಲ್ಲಿ ಸ್ಥಿರವಾದ ವಾಸವನ್ನು ಹೊಂದುತ್ತಾನೆ. ಎರಡೆಯದು ತಾಲವನ. ಅಲ್ಲಿ ಭಕ್ತಿ ಪೂರ್ವಕವಾಗಿ ಸ್ನಾನ ಮಾಡುವದರಿಂದಲೇ ಮಾನವನು ಕೃತಕೃತ್ಯನಾಗುತ್ತಾನೆ. ಮೂರನೆಯದು ಕುಮುದವನ, ಅಲ್ಲಿ ಸ್ನಾನ ಮಾಡುವ ಮಾನವನು ಮನಸ್ಸಿನಲ್ಲಿಯೇ ಆಲೋಚಿಸಿದ ಇಷ್ಟಗಳನ್ನು ಪಡೆಯುತ್ತಾನೆ ಮತ್ತು ಇಹಪರಗಳಲ್ಲಿ ಆನಂದವನ್ನು ಪಡೆಯುತ್ತಾನೆ. ನಾಲ್ಕನೆಯದು ಕಾಮ್ಯವನ. ಅಲ್ಲಿ ಬಹಳ ತೀರ್ಥಗಳಿವೆ. ಕಾಮ್ಯವನದಲ್ಲಿ ತೀರ್ಥಯಾತ್ರೆ ಮಾಡುವವನು ವಿಷ್ಣುಲೋಕಭಾಗಿಯೂ, ವಿಷ್ಣುಲೋಕ ಭೋಗಿಯೂ ಆಗುತ್ತಾನೆ. ಅಲ್ಲಿರುವ ವಿಮಲಕುಂಡ ವೆಂಬುದು ತೀರ್ಥಗಳಲ್ಲಿ ಉತ್ತಮ ತೀರ್ಥವಾಗಿದೆ. ಅಲ್ಲಿ ಸ್ನಾನ ದಾನ ಮಾಡುವ ಮಾನವನು ವಿಷ್ಣು ಲೋಕವನ್ನು ಪಡೆಯುತ್ತಾನೆ. ಐದನೆಯದು ಬಹುಲಾವನ. ಅದು ಸರ್ವ ಪಾಪ ಪರಿಹಾರಕವಾಗಿದೆ. ಅಲ್ಲಿ ಸ್ನಾನ ಮಾಡುವ ಮನುಷ್ಯನು ಎಲ್ಲ ಅಭಿಲಾಷೆಗಳನ್ನು ಪಡೆಯುತ್ತಾನೆ. ಆರನೆಯದು ಭದ್ರವನ. ಅಲ್ಲಿ ಸ್ನಾನ ಮಾಡುವ ಮನುಷ್ಯನು ಶ್ರೀ ಕೃಷ್ಣನ ಅನುಗ್ರಹದಿಂದ ಮಂಗಳದ ಮೇಲೆ ಮಂಗಳವನ್ನೇ ಅನುಭವಿಸುತ್ತಾನೆ. ಏಳನೆಯದು ಖದಿರವನ. ಅಲ್ಲಿ ಸ್ನಾನ ಮಾಡುವ ಮಾತ್ರದಿಂದ ಮಾನವನು ವಿಷ್ಣುವಿನ ಪರಮ ಪದವನ್ನು ಪಡೆಯುತ್ತಾನೆ. ಎಂಟನೆಯದು ಮಹಾವನ. ಇದು ಮಹಾವಿಷ್ಣುವಿಗೆ ಅತ್ಯಂತ ಪ್ರಿಯವಾದುದು. ಭಕ್ತಿಪೂರ್ವಕವಾಗಿ ಅದರ ದರ್ಶನ ಮಾಡುವ ಮಾನವನು ಇಂದ್ರಲೋಕದಲ್ಲಿ ಆದರವನ್ನು ಪಡೆಯುತ್ತಾನೆ. ಒಂಭತ್ತನೆಯದು ಲೋಕ ಜಂಘವನ. ಅಲ್ಲಿ ಭಕ್ತಿಯಿಂದ ಸ್ನಾನ ಮಾಡುವ ಮನುಷ್ಯನು ಮಹಾವಿಷ್ಣುವಿನ ಪ್ರಸಾದದಿಂದ ಭೋಗ ಮೋಕ್ಷಗಳೆರಡನ್ನೂ ಪಡೆಯುತ್ತಾನೆ. ಹತ್ತನೆಯದು ಬಿಲ್ವವನ. ಅಲ್ಲಿ ಸ್ನಾನ ಮಾಡುವ ಮಾನವನು ತನ್ನ ಇಚ್ಛೆಗನುಸಾರವಾಗಿ ಶಿವಲೋಕ ಅಥವಾ ವಿಷ್ಣು ಲೋಕವನ್ನು ಪಡೆಯುತ್ತಾನೆ. ಹನ್ನೊಂದನೆಯದು ಭಾಂಡೀರವನ. ಅದು ಯೋಗಿಗಳಿಗೆ ಅತ್ಯಂತ ಪ್ರಿಯವಾಗಿದೆ. ಅಲ್ಲಿ ಭಕ್ತಿಪೂರ್ವಕವಾಗಿ ಸ್ನಾನ ಮಾಡುವ ಮಾನವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಹನ್ನೆರಡನೆಯದು ವೃಂದಾವನ, ಅದು ಎಲ್ಲಾ ಪಾಪಗಳನ್ನು ನಾಶಮಾಡುತ್ತದೆ. ಸತಿ ಮೋಹಿನಿ! ಈ ಭೂಮಂಡಲದಲ್ಲಿ ವೃಂದಾವನಕ್ಕೆ ಸಮಾನವಾದ ಮತ್ತೊಂದು ತೀರ್ಥವಿಲ್ಲ. ವನವಿಲ್ಲ. ಅಲ್ಲಿ ಸ್ನಾನ ಮಾಡಿ ದೇವತೆಗಳಿಗೆ, ಋಷಿಗಳಿಗೆ ಮತ್ತು ಪಿತೃಗಳಿಗೆ ತರ್ಪಣಕೊಡುವ ಮಾನವನು ದೇವ ಋಷಿ ಪಿತೃ ಋಣಗಳಿಂದ ವಿಮುಕ್ತನಾಗಿ ವಿಷ್ಣುಲೋಕದಲ್ಲಿ ಸ್ಥಿರವಾದ ವಾಸವನ್ನು ಹೊಂದುತ್ತಾನೆ.

ಮಥುರಾ ಮಂಡಲದ ವಿಸ್ತಾರವು ಇಪ್ಪತ್ತು ಯೋಜನಗಳು. ಅಲ್ಲಿ ಯಾವ ಸ್ಥಳದಲ್ಲಿಯೇ ಸ್ನಾನ ಮಾಡಲಿ, ಮಾನವನು ವಿಷ್ಣುಭಕ್ತಿಯನ್ನು ಪಡೆಯುತ್ತಾನೆ. ಮಥುರಾ ಮಂಡಲದ ಮಧ್ಯಭಾಗದಲ್ಲಿ ಮಥುರಾಪುರಿಯಿದೆ. ಅದು ಲೋಕದಲ್ಲಿ ಉತ್ತಮೋತ್ತಮ ಪುರಿ ಎಂದು ಪ್ರಸಿದ್ಧವಾದ ಪುರಿಗಳಲ್ಲಿಯೂ, ಉತ್ತಮವಾದುದು. ಆ ನಗರಿಯ ದರ್ಶನ ಮಾತ್ರದಿಂದ ಮಾನವನು ವಿಷ್ಣು ಭಕ್ತಿಯನ್ನು ಪಡೆಯುತ್ತಾನೆ. ಮಥುರೆಯಲ್ಲಿ ವಿಶ್ರಾಂತಿ ತೀರ್ಥ (ವಿಶ್ರಾಮ ಘಾಟ್) ಎಂಬ ಉತ್ತಮವಾದ ತೀರ್ಥವಿದೆ. ಅದು ತೀರ್ಥರತ್ನವೆಂದು ಪ್ರಖ್ಯಾತವಾಗಿದೆ. ಅಲ್ಲಿ ಭಕ್ತಿಪೂರ್ವಕವಾಗಿ ಸ್ನಾನ ಮಾಡುವ ಮಾನವನು ವಿಷ್ಣುಲೋಕವನ್ನು ಪಡೆಯುತ್ತಾನೆ. ವಿಶ್ರಾಮ ಘಾಟ್ ತೀರ್ಥದ ದಕ್ಷಿಣದಲ್ಲಿ ಸ್ವಲ್ಪ ದೂರದಲ್ಲಿಯೇ ವಿಮುಕ್ತವೆಂಬ ಉತ್ತಮವಾದ ತೀರ್ಥವಿದೆ. ಅಲ್ಲಿ ಭಕ್ತಿಪೂರ್ವಕವಾಗಿ

ಸ್ನಾನ ಮಾಡುವವನು ನಿಶ್ಚಯವಾಗಿಯೂ ಮೋಕ್ಷವನ್ನೇ ಪಡೆಯುತ್ತಾನೆ. ಅಲ್ಲಿಂದ ಸ್ವಲ್ಪ ದೂರ ದಕ್ಷಿಣ ಭಾಗದಲ್ಲಿ ರಾಮತೀರ್ಥವಿದೆ. ಅಲ್ಲಿ ಸ್ನಾನ ಮಾಡುವ ಮಾನವನು ಅಜ್ಞಾನ ಬಂಧನದಿಂದ ವಿಮುಕ್ತನಾಗುತ್ತಾನೆ. ಅದರ ದಕ್ಷಿಣ ಪಾರ್ಶ್ವದಲ್ಲಿ ಸಂಸಾರ ಮೋಕ್ಷಣ ವೆಂಬ ಉತ್ತಮವಾದ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದ ಮಾನವನು ವಿಷ್ಣು ಲೋಕದಲ್ಲಿ ಸಮ್ಮಾನಿತನಾಗುತ್ತಾನೆ.

ಮೋಹಿನಿ! ಭಕ್ತರ ಸಮಸ್ತ ಕ್ಲೇಶ ಪರಿಹಾರಕನಾದ ಕೇಶವನೇ ಸಮಸ್ತ ಮಥುರಾ ಮಂಡಲದ ಅಧಿಪತಿಯಾಗಿದ್ದಾನೆ. ಪವಿತ್ರವಾದ ಮಥುರಾತೀರ್ಥ ಮಂಡಲದಲ್ಲಿ ಯಾವನು ಕೇಶವನ ದರ್ಶನವನ್ನು ಮಾಡುವುದಿಲ್ಲವೋ ಅವನ ಜನ್ಮವು ವ್ಯರ್ಥ. ಮಥುರೆಯಲ್ಲಿ ಇನ್ನೂ ಅಸಂಖ್ಯವಾದ ತೀರ್ಥಗಳಿವೆ. ಅವುಗಳಲ್ಲಿಯೂ ಯಥಾಶಕ್ತಿಯಾಗಿ ಸ್ನಾನಮಾಡಿ ಅಲ್ಲಿಯ ಪುರೋಹಿತ ಬ್ರಾಹ್ಮಣನಿಗೆ ಸ್ವಲ್ಪವಾದರೂ ದಾನ ದಕ್ಷಿಣೆಯನ್ನು ಕೊಡಬೇಕು. ಈ ರೀತಿ ತೀರ್ಥಯಾತ್ರಾನುಷ್ಠಾನ ಮಾಡಿದವನು ಎಂದೂ ದುರ್ಗತಿಯನ್ನು ಪಡೆಯುವುದಿಲ್ಲ.

## ವೃಂದಾವನದಲ್ಲಿರುವ ತೀರ್ಥಗಳು

''ಗುರುವರ್ಯರೇ, ತಮ್ಮ ಅನುಗ್ರಹದಿಂದ ನಾನು ಮಥುರೆ ಮತ್ತು ಅಲ್ಲಿಯ ದ್ವಾದಶ ದಶಕವನಗಳ ಮಹಿಮೆಯನ್ನು ಕೇಳಿದ್ದಾಯಿತು. ಈಗ ತಾವು ದಯವಿಟ್ಟು ವೃಂದಾವನದ ರಹಸ್ಯವನ್ನು ಸ್ವಲ್ಪವಾದರೂ ಹೇಳಬೇಕು'' ಮೋಹಿನಿಯ ಈ ಪ್ರಾರ್ಥನೆಯನ್ನು ಕೇಳಿ ಪುರೋಹಿತ ವಸುಗಳು ಹೇಳಲಾರಂಭಿಸಿದರು.

''ದೇವಿ! ಆಗಲಿ, ನನ್ನಿಂದ ನೀನೀಗ ವೃಂದಾವನದ ರಹಸ್ಯವನ್ನು ಕೇಳುವಿಯಂತೆ, ಮಥುರಾ ಮಂಡಲದಲ್ಲಿಯೇ ಇರುವ ಶ್ರೀ ವೃಂದಾವನವು ಜಾಗ್ರತ್ ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗಿಂತಲೂ ಬೇರೆಯಾದ ಚಿನ್ಮಯವಾದ ತುರೀಯಾವಸ್ಥೆಯ ಪರಿಣಾಮರೂಪವೆಂದು ತಿಳಿ. ಅದು ಗೋಪೀವಲ್ಲಭನಾದ ಶ್ಯಾಮಸುಂದರ ಗೋಪಾಲ ಕೃಷ್ಣನ ಏಕಾಂತ ಲೀಲೆಗಳ ನಿಗೂಢ ಸ್ಥಳವಾಗಿದೆ. ಅಲ್ಲಿಯೇ ಸಖೀ ಸ್ಥಳದ ಸಮೀಪದಲ್ಲಿ ಗಿರಿರಾಜ ಗೋವರ್ಧನವಿದೆ. ವೃಂದಾವನವು ವೃಂದಾದೇವಿಯ ತಪೋಭೂಮಿಯಾಗಿದೆ. ಅದು ನಂದಗ್ರಾಮದಿಂದ ಆರಂಭಿಸಿ ಯಮುನೆಯ ದಡದಲ್ಲಿ ಬಹುದೂರ ಹಬ್ಬಿದೆ. ಹೀಗೆ ಯಮುನೆಯ ಅತ್ಯಂತ ರಮ್ಯವಾದ ತಟದಲ್ಲಿ ರಮಣೀಯವಾದ ಮತ್ತು ಪವಿತ್ರವಾದ ವೃಂದಾವನವು ಶೋಭಿಸುತ್ತಿದೆ. ವೃಂದಾವನದಲ್ಲಿಯೂ ಕುಸುಮ ಸರೋವರವು ಪರಮಪವಿತ್ರ ಮತ್ತು ಅತ್ಯಂತ ಪುಣ್ಯಪ್ರದವಾದುದು. ಅದರ ಮನೋಹರವಾದ ದಡದಲ್ಲಿಯೇ ವೃಂದಾದೇವಿಯ ಆನಂದದಾಯಕವಾದ ಆಶ್ರಮವಿದೆ. ಅಲ್ಲಿ ಮಧ್ಯಾಹ್ನ ಕಾಲದಲ್ಲಿ ತನ್ನ ಗೆಳೆಯರೊಂದಿಗೆ ಶ್ಯಾಮಸುಂದರ ಶ್ರೀ ಕೃಷ್ಣನು ವಿಶ್ರಾಂತಿಯನ್ನು ಪಡೆಯುತ್ತಿದ್ದನು. ಮೋಹಿನಿ! ಭಗವಂತನಾದ ಶ್ರೀ ಕೃಷ್ಣನು ನಿನ್ನ ತಂದೆಯಾದ ಚತುರ್ಮುಖನಿಗೆ ನಿಜಸ್ವರೂಪ ತತ್ತ್ವಸಾಕ್ಷಾತ್ಕಾರ ಮಾಡಿಸಿದ ಸ್ಥಳವೇ ಬ್ರಹ್ಮಕುಂಡವೆಂದು ಪ್ರಸಿದ್ಧವಾಗಿದೆ. ಅಲ್ಲಿ ಮೂಲೇಶನಾರಾಯಣನ ಚಿಂತನ ಮಾಡುತ್ತ ಸ್ನಾನ ಮಾಡುವ ಮಾನವನಿಗೆ, ಅಲ್ಲಿಯೇ ನಿತ್ಯ ವಿಹಾರ ಮಾಡುತ್ತ ಸನ್ನಿಹಿತನಾಗಿರುವ ಶ್ಯಾಮಸುಂದರನ ವೈಭವದ ಚಮತ್ಕಾರವು ಒಂದಿಷ್ಟು ಗೋಚರವಾಗುತ್ತದೆ. ಶ್ರೀ ಕೃಷ್ಣನ ತತ್ತ್ವವನ್ನು ತಿಳಿದು

ಇಂದ್ರನು ಆ ಗೋವಿಂದದೇವನ ಚಿಂತನ ಮಾಡಿದ ಸ್ಥಳವು ಗೋವಿಂದಕುಂಡವೆಂದು ಪ್ರಸಿದ್ಧವಾಗಿದೆ. ಅಲ್ಲಿ ಸ್ನಾನ ಮಾಡುವ ಮಾನವನು ಗೋವಿಂದನನ್ನು ಪಡೆಯುತ್ತಾನೆ. ಶ್ರೀ ಕೃಷ್ಣನು ಒಬ್ಬನೇ ಆದರೂ ಅನೇಕಾನೇಕ ರೂಪಗಳನ್ನು ಧರಿಸಿ ಕುಂಜಕುಂಜಗಳಲ್ಲಿ ಅನೇಕಾನೇಕ ಗೋಪಾಂಗನೆಯರೊಡನೆ ವಿಹಾರಮಾಡಿದ ಸ್ಥಳವು ಉತ್ತಮ ಮಹಿಮೆಯುಳ್ಳದ್ದಾಗಿದೆ. ಶ್ಯಾಮಸುಂದರ ಬಾಲಗೋಪಾಲನ ಮಹಿಮೆಯು ಅಚಿಂತ್ಯ ಅದ್ಭುತ. ನಂದನೇ ಮೊದಲಾದ ಗೋಪಾಲಕರು ಶ್ರೀ ಕೃಷ್ಣನ ವೈಭವವನ್ನು ನೋಡಿದ ಸ್ಥಳವೇ ಯಮುನಾ ನದಿಯಲ್ಲಿರುವ ತತ್ತ್ವಪ್ರಕಾಶವೆಂಬ ತೀರ್ಥವು. ಗೋಪಾಲಕರು ಕೃಷ್ಣನು ಮಾಡಿದ ಕಾಳಿಯಮರ್ದನ ಲೀಲೆಯನ್ನು ನೋಡಿದ ಸ್ಥಳವೂ ಪರಮಪವಿತ್ರವಾದ ತೀರ್ಥವಾಗಿದೆ. ಅದು ಸರ್ವಪಾಪಪರಿಹಾರಕವಾಗಿದೆ. ಹೆಂಗಸರು, ಮಕ್ಕಳು, ಗೋವುಗಳು, ಕರುಗಳು, ಗೋಪಾಲಕರು ಎಲ್ಲರನ್ನೂ ಶ್ರೀ ಕೃಷ್ಣನು ಕಾಡ್ಗಿಚ್ಚಿನಿಂದ ಕಾಪಾಡಿದ ಸ್ಥಳವು ಒಂದು ಪುಣ್ಯತೀರ್ಥವೆನಿಸಿದೆ. ಅಲ್ಲಿ ಸ್ನಾನ ಮಾತ್ರದಿಂದ ಮಾನವನು ಸರ್ವವಿಧಪಾಪಗಳಿಂದ ದೂರನಾಗುತ್ತಾನೆ. ಕೇಶಿ ಎಂಬ ದೈತ್ಯನು ಕುದುರೆಯ ರೂಪವನ್ನು ಸ್ವೀಕರಿಸಿ ಬಂದು ಗೋವುಗೋಪರನ್ನೆಲ್ಲಾ ಹೆದರಿಸುತ್ತಿದ್ದಾಗ ಶ್ರೀ ಕೃಷ್ಣನು ಅವನನ್ನು ಸಂಹರಿಸಿದ್ದನು. ಶ್ರೀ ಕೃಷ್ಣನು ಲೀಲಾಮಾತ್ರದಿಂದ ಕೇಶಿಯನ್ನು ಸಂಹರಿಸಿದ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡುವ ಮಾನವನು ವಿಷ್ಣುಲೋಕವನ್ನು ಪಡೆಯುತ್ತಾನೆ. ವೃಷಭಾಸುರನೆಂಬವನು ಗೂಳಿಯ ರೂಪವನ್ನು ಧರಿಸಿ ಬಂದು ಎಲ್ಲರನ್ನೂ ಹೆದರಿಸುತ್ತಿದ್ದಾಗ ಶ್ರೀ ಕೃಷ್ಣನು ಲೀಲಾ ಮಾತ್ರದಿಂದ ಅವನನ್ನು ಸಂಹರಿಸಿದ ಸ್ಥಳವು ಅರಿಷ್ಟಕುಂಡವೆಂದು ಪ್ರಸಿದ್ಧವಾಗಿದೆ. ಅದು ಸ್ನಾನಮಾತ್ರದಿಂದ ಪಾಪಮುಕ್ತಿಯನ್ನುಂಟು ಮಾಡುತ್ತದೆ.

ಶ್ರೀ ಕೃಷ್ಣನು ಮಲಗಿದ ಸ್ಥಳ, ಊಟ ಮಾಡಿದ ಸ್ಥಳ, ಓಡಾಡಿದ ಸ್ಥಳ, ಜನರು ಶ್ರೀಕೃಷ್ಣನ ಮಾತನ್ನು ಕೇಳಿದ ಸ್ಥಳ, ಶ್ರೀ ಕೃಷ್ಣನು ಭಕ್ತರ ಮಾತನ್ನು ಕೇಳಿದ ಸ್ಥಳ, ಶ್ರೀಕೃಷ್ಣನನ್ನು ಭಕ್ತರು ನೋಡಿದ ಸ್ಥಳ. ಶ್ರಿ ಈಕೃಷ್ಣನು ಮಾಡಿದ ಅದ್ಭುತವಾದ ಲೀಲೆಗಳ ಸ್ಥಳವೆಲ್ಲವೂ ಪುಣ್ಯತೀರ್ಥಗಳಾಗಿವೆ. ಅವೆಲ್ಲವೂ ಸ್ನಾನ ಮಾತ್ರದಿಂದ ಉತ್ತಮಗತಿಯನ್ನು ಕೊಡುತ್ತವೆ. ಪುಣ್ಯಾತ್ಮರಾದ ಭಕ್ತ ಪುರುಷರು. ಮುನಿಗಳು ಎಲ್ಲಿ ಕುಳಿತು ಭಗವಂತನ ಶ್ರವಣ, ಮನನ, ಧ್ಯಾನ, ದರ್ಶನ ಮಾಡಿದ್ದಾರೋ ಮತ್ತು ಭಾಗ್ಯವಂತರಾದ ಅವರು ಎಲ್ಲಿ ಬಾಲಕೃಷ್ಣನಿಗೆ ಬಾಗಿ, ಅವನನ್ನು ಅಪ್ಪಿಕೊಂಡು ಸ್ತೋತ್ರ ಮಾಡಿ ಪ್ರಾರ್ಥನೆ ಮಾಡಿದ್ದಾರೋ, ಅದೆಲ್ಲವೂ ಉತ್ತಮಗತಿಯನ್ನು ಕೊಡುವ ತೀರ್ಥವೆಂದು ತಿಳಿಯಬೇಕು. ರಾಧಾದೇವಿಯು ಅತ್ಯಂತ ಕಠೋರವಾದ ತಪಸ್ಸು ಮಾಡಿದ ಸ್ಥಳವು ರಾಧಾ ಕುಂಡವೆಂದು ಪ್ರಸಿದ್ಧವಾಗಿದೆ. ಅದು ಸ್ನಾನ, ದಾನ, ಜಪಗಳಿಗೆ ಅತ್ಯುತ್ತಮವಾದ ತೀರ್ಥಕ್ಷೇತ್ರವೆಂದು ತಿಳಿಯಬೇಕು.

ಬಹಳ ಹಿಂದಿನ ಕಲ್ಪದ ಕಥೆಯೊಂದಿದೆ. ವೃಂದಾವನದಲ್ಲಿ ಗೋವರ್ಧನನೆಂಬ ಬ್ರಾಹ್ಮಣನು ಘೋರ ತಪಶ್ಚರ್ಯವನ್ನು ಮಾಡುತ್ತಿದ್ದನು. ಅವನು ಸಾಂಸಾರಿಕವಾದ ಎಲ್ಲ ಆಸಕ್ತಿಗಳನ್ನೂ ಬಿಟ್ಟಿದ್ದನು. ಅವನ ಈ ತಪಸ್ಸಿನಿಂದ ದೇವತಾಸ್ವಾಮಿಯಾದ ಅವಿನಾಶಿಯಾದ ಭಗವಂತನು ಪ್ರಸನ್ನನಾದನು. ಅವನಿಗೆ ವರ ಕೊಡುವುದಕ್ಕಾಗಿ ತನ್ನ ಲೀಲಾ ಭೂಮಿಯಾದ ಆ ಪ್ರದೇಶಕ್ಕೆ ಹೋದನು. ಬ್ರಾಹ್ಮಣನ ಎದುರು ಪರಮಾತ್ಮನು ಪ್ರತ್ಯಕ್ಷನಾದನು. ಆ ದೇವದೇವೇಶ್ವರನು ತನ್ನ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿದ್ದನು. ಎದೆಯಲ್ಲಿ ಸುಂದರ ಕೌಸ್ತುಭ ಮಣಿಯು ಪ್ರಕಾಶವನ್ನು

ಬೀರುತ್ತ ಅತ್ತ ಇತ್ತ ಓಲಾಡುತ್ತಿತ್ತು. ಕಿವಿಗಳಲ್ಲಿ ಮಕರಾಕೃತಿ ಕುಂಡಲಗಳು. ಪರಮಾತ್ಮನ ಇಂತಹ ದಿವ್ಯಾದ್ಭುತ ದರ್ಶನ ಪಡೆದ ಗೋವರ್ಧನ ಬ್ರಾಹ್ಮಣನು ಚಕ್ಕನೆ ಮೇಲೆದ್ದು ನಿಂತನು. ಕಣ್ತುಂಬ ಮತ್ತೊಮ್ಮೆ ದೇವ ದೇವೇಶನ ದರ್ಶನವನ್ನು ಮಾಡಿದನು. ಅನಂತರ ಸಹಸಾ ಭೂಮಿಯಲ್ಲಿ ಬಿದ್ದು ದಂಡ ಪ್ರಣಾಮವನ್ನೂ ಶಿರಸಾಷ್ಟಾಂಗ ಪ್ರಣಾಮವನ್ನೂ ಮಾಡಿದನು. ಎದ್ದು ನಿಂತು ಕೈಮುಗಿದನು. ಪರಮಾತ್ಮನು ಮಂದಹಾಸ ಮಾಡುತ್ತ ವರವನ್ನು ಕೇಳೆಂದು ಹೇಳಿದಾಗ ಗೋವರ್ಧನನು ಈ ರೀತಿ ಹೇಳಿದನು.

''ಪ್ರಭುವೇ! ನಾನು ಇಲ್ಲಿ ಬೋರಲಾಗಿ ಬಿದ್ದಿರುತ್ತೇನೆ. ನೀನು ನನ್ನ ಬೆನ್ನ ಮೇಲೆ ನಾನು ಮೇಲೇಳದಂತೆ ಎರಡೂ ಕಾಲುಗಳಿಂದ ಅದುಮಿ ಹಿಡಿದು ಇಲ್ಲಿಯೇ ನಿಂತಿರಬೇಕು. ಇದೇ ನಾನು ಕೇಳುವ ವರ.'' ಗೋವರ್ಧನನ ಈ ಮಾತನ್ನು ಕೇಳಿ ಭಕ್ತವತ್ಸಲನಾದ ಭಗವಂತನು ಪುನಃ ಪುನಃ ಅವರ ವರದ ಅಂತರಾರ್ಥವನ್ನು ವಿಚಾರ ಮಾಡಿದನು. ಅನಂತರ ಬೋರಲಾಗಿ ಬಿದ್ದಿದ್ದ ಗೋವರ್ಧನನ ಬೆನ್ನ ಮೇಲೇರಿ ನಿಂತುಕೊಂಡನು. ಆಗ ಬ್ರಾಹ್ಮಣನು ಪರಮಾತ್ಮನೊಡನೆ ಹೀಗೆ ಹೇಳಿದನು - ''ದೇವ ದೇವ, ಜಗತ್ಪತೇ, ವರದೇಶವರಪ್ರದ, ನನ್ನ ಬೆನ್ನ ಮೇಲೆ ನಿಂತಿರುವ ನಿನ್ನನ್ನು ಪುನಃ ನಾನು ಎದ್ದು ಪೂಜಿಸಲಾರೆನು. ನೀನು ಹೀಗೆಯೇ ನನ್ನ ಬೆನ್ನ ಮೇಲೆ ನಿಂತಿರು. ನಾನು ನಿನ್ನ ರೂಪವನ್ನು ಹೃದಯದಲ್ಲಿ ನೋಡುತ್ತ ಇಲ್ಲಿ ಬಿದ್ದಿರುತ್ತೇನೆ.''

ಆಗಿನಿಂದ ವಿಶ್ವವ್ಯಾಪ್ತನಾದ ಭಗವಂತನು ಪರ್ವತರೂಪಧಾರಿಯಾದ ಗೋವರ್ಧನನನ್ನು ಬಿಡಲಾರದೆ ಅಲ್ಲಿಯೇ ನಿಂತನು. ಬೇರೆ ರೂಪಗಳಿಂದ ಯೋಗಿವನ ಮುಂತಾದ ಸ್ಥಳಗಳಿಗೆ ಹೋಗುತ್ತಿದ್ದನು. 'ಗೋವರ್ಧನ' ಬ್ರಾಹ್ಮಣನು ಭಗವಂತನ ಸಾರೂಪ್ಯವನ್ನೇ ಪಡೆದನು. ಕೃಷ್ಣಾವತಾರದಲ್ಲಿ ಶ್ರೀ ಕೃಷ್ಣನು ತನ್ನ ಪರಮ ಭಕ್ತನಾದ ಗೋವರ್ಧನನನ್ನು ಗೋವರ್ಧನ ಗಿರಿಯೊಳಗೆ ಪ್ರವೇಶ ಮಾಡಿಸಿ ನಂದಾದಿ ಗೋಪಾಲಕರು ಮಾಡಿದ ಗೋವರ್ಧನಗಿರಿ ಪೂಜೆಯಿಂದ ಆನಂದವನ್ನುಂಟು ಮಾಡಿದನು, ಅವನಿಗೆ ದಿವ್ಯ ಭೋಜನವನ್ನು ಮಾಡಿಸಿದನು. ಅನ್ನ ರಾಶಿಗಳಿಂದಲೂ ಭಕ್ಷ್ಯಭೋಜನಗಳಿಂದಲೂ, ಘನರಸದ ಕ್ಷೀರ ಪಾಯಸದಿಂದಲೂ ಭಕ್ತೋತ್ತಮನಿಗೆ ತೃಪ್ತಿಯನ್ನುಂಟು ಮಾಡಿ ಅನಂತರ ಅವನ ಬಾಯಾರಿಕೆಯನ್ನು ಹೋಗಲಾಡಿಸಲು ನೂತನ ಮೇಘಗಳಿಂದ ಬಹಳವಾದ ಮಳೆಯನ್ನು ಸುರಿಸಿ ತೃಪ್ತಿಪಡಿಸಿದನು. ಭಗವಂತನಾದ ವಾಸುದೇವ ಶ್ರೀ ಕೃಷ್ಣನು ತನ್ನ ಭಕ್ತನನ್ನು ಈ ರೀತಿ ಮಿತ್ರಭಾವದಿಂದ ನೋಡಿಕೊಂಡು, ಆನಂದ ಪಡಿಸಿದನು. ಮಂಗಳಾತ್ಮಳೇ! ನೀನೇ ಹೇಳು - ಈ ಭೂಮಂಡಲದಲ್ಲಿ ಶ್ರೀ ಕೃಷ್ಣ ಬ್ರಹ್ಮನ ವಿವಿಧ ಲೀಲೆಗಳಿಂದ ಶೋಭಿತವಾದ ಅವನ ಪಾದಸ್ಪರ್ಶದಿಂದ ಪವಿತ್ರವಾದ ಮರಳಿನಿಂದ ಕೂಡಿದ ದಿನ್ನೆಗಳು, ಪ್ರದೇಶಗಳು ವೃಂದಾವನದ ಹೊರತು ಮತ್ತೆಲ್ಲಿವೆ? ಆದ್ದರಿಂದ ಸರ್ವ ವಿಧ ಪ್ರಯತ್ನವನ್ನು ಮಾಡಿಯಾದರೂ, ಬೇರೆಲ್ಲ ಪವಿತ್ರ ಪುಣ್ಯದಾಯಕವಾದ ವನ ಉಪವನ ನದೀ ತೀರ್ಥ ಪರ್ವತಗಳನ್ನು ಬಿಟ್ಟು ಮನುಷ್ಯರು ಯಾವಾಗಲೂ ವೃಂದಾವನವನ್ನು ಸೇವಿಸಬೇಕು. ಯಮುನೆಯಂತಹ ಪುಣ್ಯನದಿ, ಗೋವರ್ಧನ ಗಿರಿರಾಜನಂತರ ಪುಣ್ಯಮಯ ಪರ್ವತ, ಇವೆಲ್ಲವೂ ಇರುವ ವೃಂದಾವನಕ್ಕಿಂತಲೂ ಮಿಗಿಲಾದ ಪಾವನ ವನವು ಈ ಅವನಿಯಲ್ಲಿ ಅವರಿಗೆ ಎಲ್ಲಿ ದೊರಕೀತು! ಮೋಹಿನಿ! ನಿನಗೆ ನಾನೀಗ ವೃಂದಾವನದ ಮಹಿಮೆಯನ್ನು ಸಂಕ್ಷೇಪವಾಗಿ

ಹೇಳಿದ್ದೇನೆ. ಸಂಸಾರಭಯಭೀತನಾದ ಮಾನವನು, ಪಾಪವನ್ನು ಪಶ್ಚಾತ್ತಾಪದಿಂದ ತೊಳೆದು, ಶ್ರೀ ಕೃಷ್ಣನ ಪಾದಪದ್ಮಗಳನ್ನು ಕಣ್ಣೀರಿನಿಂದ ತೊಳೆದು ಅಭಿಷೇಕಿಸಲು ತವಕಿಸುವುದಾದರೆ ಅವನು ಕೂಡಲೇ ವೃಂದಾವನವನ್ನು ಸೇವಿಸಬೇಕು. ಶ್ರೀ ಕೃಷ್ಣನ ಶ್ರವಣ, ಕೀರ್ತನ, ಸ್ಮರಣ, ಧ್ಯಾನಗಳನ್ನು ಮಾಡಬೇಕು. ಯಾವ ಮಾನವನು ಪವಿತ್ರಾಂತಃಕರಣದಿಂದ ವೃಂದಾವನದ ಮಹಿಮೆಯನ್ನು ಕೇಳುತ್ತಾನೋ ಅವನು ನಿಸ್ಸಂದೇಹವಾಗಿ ಗೋವಿಂದನ ದಯಾಪಾತ್ರನಾಗುತ್ತಾನೆ.

## ಪುರೋಹಿತರು ವೃಂದಾವನದಲ್ಲಿ ವಾಸಿಸಿದರು

**ಪುರೋಹಿತ ವಸು:-** ದೇವಿ! ಮಹಾಭಾಗೇ! ಮೋಹಿನಿ! ನಾನು ಯಾವ ಯಾವ ತೀರ್ಥಗಳ ಮಹಿಮೆಗಳನ್ನು ಹೇಳಿದ್ದೇನೋ ಅದನ್ನು ನೀನು ಆಯಾ ತೀರ್ಥಗಳಿಗೆ ಹೋಗಿ ಸ್ನಾನಾದಿಗಳನ್ನು ಮಾಡಿ ನಿನ್ನ ಅನುಭವಕ್ಕೆ ತಂದುಕೋ.''

**ಸೂತರು:-** ಬ್ರಾಹ್ಮಣರೇ! ಪುರೋಹಿತ ವಸುಗಳು ಮೋಹಿನಿಯ ಹತ್ತಿರ ಹೀಗೆಂದು ಹೇಳಿ ಅವಳು ಪುನಃ ಪುನಃ ಮಾಡಿದ ಸತ್ಕಾರವನ್ನು ಪೂಜೆಯನ್ನು ಸ್ವೀಕರಿಸಿ ಬ್ರಹ್ಮಲೋಕಕ್ಕೆ ಹೊರಟು ಹೋದರು. ಅಲ್ಲಿ ಜಗತ್ ಸೃಷ್ಟಿಕರ್ತನಾದ ಬ್ರಹ್ಮದೇವನನ್ನು ಕಂಡು ನಮಸ್ಕರಿಸಿ ಮೋಹಿನಿಯ ಎಲ್ಲಾ ವೃತ್ತಾಂತವನ್ನು ಹೇಳಿದರು. ವಸುಬ್ರಾಹ್ಮಣನ ಮಾತನ್ನು ಕೇಳಿ ಬ್ರಹ್ಮದೇವರು ಸಂತುಷ್ಟರಾಗಿ ಹೇಳಿದರು - 'ವತ್ಸ! ನೀನು ಬಹಳ ದೊಡ್ಡದಾದ ಪುಣ್ಯಕಾರ್ಯವನ್ನು ಮಾಡಿದ್ದೀಯೇ. ನೀನು ಮೋಹಿನಿಯ ಸಮಾಚಾರವನ್ನು ನನಗೆ ತಿಳಿಸಿದೆ. ನಾನು ನಿನ್ನ ಎರಡು ಕಾರ್ಯಗಳಿಂದ ಪ್ರಸನ್ನನಾಗಿದ್ದೇನೆ. ನಾನು ನಿನಗಾಗಿ ಏನಾದರೊಂದು ವರವನ್ನು ಕೊಡಬೇಕೆಂದು ಅಪೇಕ್ಷಿಸಿದ್ದೇನೆ. ನಿನಗೆ ಬೇಕಾದ ಒಂದು ವರವನ್ನು ಬೇಡು. '' ಜಗದ್ವಿಧಾತರಾದ ಚತುರ್ಮುಖ ಬ್ರಹ್ಮದೇವರು ಹೀಗೆ ಹೇಳಿದ ಕೂಡಲೆ ವಿಪ್ರವರನಾದ ವಸುಬ್ರಾಹ್ಮಣನು ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ತನಗೆ ವೃಂದಾವನದಲ್ಲಿ ವಾಸವು ದೊರಕುವಂತೆ ಅನುಗ್ರಹಿಸಬೇಕೆಂದು ಬೇಡಿದನು. ಮುನೀಶ್ವರರೇ! ಇದನ್ನು ಕೇಳಿ ಜಗತ್ ಸೃಷ್ಟಿ ಕರ್ತನಾದ ಶರಣಾಗತರ ಎಲ್ಲಾ ಕ್ಲೇಶಗಳನ್ನೂ ಪರಿಹರಿಸುವ ಬ್ರಹ್ಮದೇವರು ನಾಲ್ಕೂ ಮುಖಗಳಿಂದ ನಗುತ್ತಾ ಹೇಳಿದರು. ''ತಥಾಸ್ತು ಹಾಗೆಯೇ ಆಗಲಿ'' ಪುರೋಹಿತ ವಸುವಿಗೆ ಬಹಳ ಆನಂದವಾಯಿತು. ಅವನು ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ವೃಂದಾವನಕ್ಕೆ ಹೊರಟು ಹೋದನು. ಅಲ್ಲಿ ಏಕಾಗ್ರಚಿತ್ತನಾಗಿ ತಪಸ್ಸು ಮಾಡಲಾರಂಭಿಸಿದನು. ವಸುಬ್ರಾಹ್ಮಣನು ತಪಸ್ಸು ಮಾಡುತ್ತಾ ಇದ್ದಂತೆ ಐದುಸಾವಿರ ವರ್ಷಗಳು ಕಳೆದು ಹೋದುವು. ಅವನ ತಪಸ್ಸಿನಿಂದ ಸಂತುಷ್ಟನಾಗಿ ಭಗವಾನ್ ಶ್ಯಾಮಸುಂದರ ಶ್ರೀ ಕೃಷ್ಣನು ತನ್ನ ಇಬ್ಬರು ಮೂವರು ಸ್ನೇಹಿತರ ಜೊತೆಗೆ ಅಲ್ಲಿಗೆ ಬಂದು ವಸುವಿನ ಹತ್ತಿರ ಹೇಳಿದನು - ''ವಿಪ್ರವರನೇ! ನಾನು ನಿನ್ನ ತಪಸ್ಸಿನಿಂದ ಸುಪ್ರೀತನಾಗಿದ್ದೇನೆ. ಹೇಳು ನಿನಗೇನು ಬೇಕೆಂದು ಕೇಳು.'' ಆಗ ವಸುವು ಎದ್ದು ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಮತ್ತೂ ಪುನಃ ಎದ್ದು ನಿಂತು ಕೈಮುಗಿದು ಹೇಳಿದನು-''ಭಗವನ್! ದೇವದೇವ! ನಾನು ಯಾವಾಗಲೂ ವೃಂದಾವನದಲ್ಲಿ ವಾಸಮಾಡುತ್ತಿರಬೇಕು. ಈ ಅನುಗ್ರಹವನ್ನು ನನ್ನ ಮೇಲೆ ಮಾಡಬೇಕು.'' ದ್ವಿಜವರರೇ! ಶ್ರೀಕೃಷ್ಣನು ವಸುಬ್ರಾಹ್ಮಣನ ಮನೋಭೀಷ್ಟವನ್ನು ಕರುಣಿಸಿದನು. ''ತಥಾಸ್ತು'' ಎಂದನು.

ವಸುವು ಪುನಃ ದೇವದೇವೋತ್ತಮನಿಗೆ ನಮಸ್ಕಾರಮಾಡಿದನು. ಕೂಡಲೇ ಭಗವಂತನು ಅಂತರ್ಧಾನ ಹೊಂದಿದನು. ಆಗಿನಿಂದ ಬ್ರಾಹ್ಮಣ ವಸುವು ತನ್ನ ಇಚ್ಛೆಗೆ ಬಂದಂತೆ ರೂಪಗಳನ್ನು ಸ್ವೀಕರಿಸಿ ವೃಂದಾವನದಲ್ಲಿ ಓಡಾಡುತ್ತ ಶ್ರೀ ಕೃಷ್ಣನ ಲೀಲಾವಿಭೂತಿಗಳನ್ನು ಚಿಂತಿಸುತ್ತ ಅಲ್ಲಿ ಯಾವಾಗಲೂ ವಾಸಮಾಡುತ್ತಾ ಇರುತ್ತಾನೆ.

## ವೃಂದಾವನದಲ್ಲಿ ಶ್ರೀ ಕೃಷ್ಣನು ಓಡಾಡುವನು

ಒಂದು ದಿನ ವಸುವು ಭಗವಂತನ ಲೀಲೆಗಳ ಚಿಂತನವನ್ನು ಮಾಡುತ್ತ ವೃಂದಾವನದ ಯಮುನಾ ನದಿಯ ದಡದಲ್ಲಿ ಕುಳಿತಿದ್ದನು. ಆಗ ದೂರದಲ್ಲಿ ದೇವರ್ಷಿಗಳಾದ ನಾರದರು ತನ್ನ ಕಡೆಗೆ ಬರುತ್ತಿರುವುದು ಅವನಿಗೆ ಕಂಡಿತು. ತನ್ನ ಪರಮಗುರುವಾದ ನಾರದರನ್ನು ನೋಡಿ ವಸುವಿಗೆ ಬಹಳ ಆನಂದವಾಯಿತು. ಎದುರುಗೊಂಡು ಕರೆತಂದು, ನಮಸ್ಕಾರ ಮಾಡಿ ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ಅವರನ್ನು ಕುರಿತು ಭಗವಂತನಲ್ಲಿ ಭಕ್ತಿ ಪ್ರಚೋದನೆಯನ್ನು ಮಾಡುವ ನಾನಾ ವಿಧವಾದ ಧರ್ಮಗಳನ್ನು ಕೇಳಿದನು. ಅವನ ಪ್ರಶ್ನೆಗೆ ಉತ್ತರವಾಗಿ ದೇವರ್ಷಿ ನಾರದರು ಮುಂದೆ ಅಲ್ಲಿಯೇ ಭಗವಂತನು ಮಾಡಲಿರುವ ಕೃಷ್ಣಾವತಾರದ ಚರಿತ್ರೆಯನ್ನು ವಸುವಿಗೆ ಸಂಪೂರ್ಣವಾಗಿ ಹೇಳಿದರು.

ವಸು ಬ್ರಾಹ್ಮಣನೇ! ಒಂದು ದಿನ ನಾನು ಕೈಲಾಸವಾಸಿಯಾದ ಪರಮೇಶ್ವರನ ದರ್ಶನಕ್ಕಾಗಿಯೂ, ಮತ್ತು ವೃಂದಾವನದಲ್ಲಿ ಮುಂದೆ ನಡೆಯುವ ಪರಮಾತ್ಮನ ಲೀಲಾ ರಹಸ್ಯಗಳನ್ನು ಕೇಳುವುದಕ್ಕಾಗಿಯೂ, ಮಹಾಮಹಿಮನಾದ ಪಾರ್ವತೀ ಪತಿಯ ಬಳಿಗೆಹೋದೆನು. ತನ್ನ ಮಹಿಮೆಯಿಂದ ಬ್ರಹ್ಮಾಂಡ ಮಂಡಲವನ್ನು ವ್ಯಾಪಿಸಿರುವ ಸಿದ್ಧಸಾಧ್ಯರ ಗುಂಪುಗಳಿಂದ ಸೇವಿತನಾದ ಪರಮೇಶ್ವರನನ್ನು ನೋಡಿ, ನಾನು ಆದೇವೇಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಕೇಳಬೇಕಾಗಿದ್ದ ಪ್ರಶ್ನೆಯನ್ನು ಮಾಡಿದೆನು. ಆಗ ಮಹಾದೇವನು ಮಂದಹಾಸ ಮಾಡುತ್ತ ನನ್ನೊಡನೆ ಹೇಳಿದನು ''ಬ್ರಹ್ಮಕುಮಾರನೇ! ನೀನು ಶ್ರೀ ಹರಿಯ ಭವಿಷ್ಯದ ಚರಿತ್ರೆಯ ವಿಷಯದಲ್ಲಿ ಪ್ರಶ್ನೆ ಕೇಳಿರುವೆ. ನಿನಗೆ ವಿಷಯವನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಒಮ್ಮೆ ನಾನು ಗೋಲೋಕದಲ್ಲಿರುವ ಸುರಭಿಯನ್ನು (ಕಾಮಧೇನು) ನೋಡಿ ಅವಳನ್ನು ಕುರಿತು ಶ್ರೀಹರಿಯ ವೃಂದಾವನದಲ್ಲಿ ಮುಂದೆ ಮಾಡಲಿರುವ ಅದ್ಭುತ ಲೀಲಾ ರಹಸ್ಯಗಳನ್ನು ಕುರಿತು ಪ್ರಶ್ನೆ ಮಾಡಿದೆನು. ಆಗ ಕಾಮಧೇನುವು ನನಗೆ ಶ್ರೀ ಕೃಷ್ಣ ಪರಮಾತ್ಮನ ಸಾಗ್ರ ಸಮಗ್ರ ಚರಿತ್ರೆಯನ್ನೆಲ್ಲ ತಿಳಿಸುತ್ತಾ ಹೀಗೆ ನುಡಿಯಿತು -

''ಮಹೇಶ್ವರನೇ, ಈಗ ಭಗವಾನ್ ಶ್ರೀ ಕೃಷ್ಣನು ಗೋಲೋಕದಲ್ಲಿ ರಾಧೆಯೊಂದಿಗೆ ವಿಹರಿಸುತ್ತ ಭಕ್ತರಿಗೆಲ್ಲ ಆನಂದವನ್ನು ಕೊಡುತ್ತಿದ್ದಾನೆ. ಮುಂದೆ ಬ್ರಹ್ಮದೇವರು ಭೂಭಾರಹರಣಕ್ಕಾಗಿ ದೇವತೆಗಳಿಂದ ಕೂಡಿಕೊಂಡು ಬಂದು ಪ್ರಾರ್ಥನೆ ಮಾಡುವರು. ಆಗ ಶ್ರೀ ಕೃಷ್ಣನು ಭೂಲೋಕದಲ್ಲಿ ಮಥುರಾ ಮಂಡಲದಲ್ಲಿ ವಾಸುದೇವನ ಮೂಲಕ ಪ್ರಕಟನಾಗಿ ವಾಸುದೇವ ಎಂಬ ಹೆಸರಿನಿಂದ ಅವತರಿಸುವನು. ವಾಸುದೇವನು ವಾಸ ಮಾಡುವ ಕಾರಾಗೃಹದಲ್ಲಿಯೇ ಜನ್ಮತಾಳಿ, ಅನಂತರ ಯಾದವ ನಂದನನಾದ ಶ್ರೀ ಕೃಷ್ಣನು ಕಂಸಾಸುರನ ಭಯದಿಂದ ನಂದಗೋಪನ ಗೋಕುಲಕ್ಕೆ ಹೋಗುವನು. ಅಲ್ಲಿ ತಾನು ಅತ್ಯಂತ ಚಿಕ್ಕ ಬಾಲರೂಪದಲ್ಲಿರುವಾಗಲೇ ತನ್ನನ್ನು ವಿಷಪೂರಿತವಾದ ಹಾಲುಣಿಸಿ

ಕೊಲ್ಲಲು ಬರುವ ಶಿಶುಘಾತಿನಿಯಾದ ಪೂತನೆಯನ್ನು ಸಂಹಾರ ಮಾಡುವನು. ಚಕ್ರವಾತ (ತೃಣಾವರ್ತ)ನೆಂಬ ದಾನವನನ್ನೂ, ದೇವಪೀಡಕನಾದ ಮಹಾಕಾಯನಾದ ವತ್ಸಾಸುರನನ್ನೂ ಕೊಲ್ಲುವನು. ಕಾಲಿಯನೆಂಬ ವಿಷಪೂರಿತವಾದ ಮಹಾಸರ್ಪನನ್ನು ಯಮುನಾ ಹ್ರದದಿಂದ ದೂರಕ್ಕೆ ಅಟ್ಟಿ ಬಿಡುವನು. ದುಸ್ಸಹನಾದ ಧೇನುಕಾಸುರನನ್ನು ಕೊಂದು, ಬಕಾಸುರ ಮತ್ತು ಅಘಾಸುರರ ಪ್ರಾಣಾಪಹರಣವನ್ನೂ ಮಾಡುವನು. ದಾವ, ಪ್ರದಾವ ಮತ್ತು ಪ್ರಲಂಬಾಸುರರ ವಧೆವನ್ನೂ ಮಾಡುವನು. ಬ್ರಹ್ಮ ಇಂದ್ರರ ವರುಣ ಮತ್ತು ಮತ್ತರಾದ ಕುಬೇರ ಪುತ್ರರ ಅಹಂಕಾರವನ್ನು ಮುರಿದು ಆ ಶ್ರೀ ಕೃಷ್ಣನು ವೃಷಭಾಸುರರನ್ನೂ ವಧಿಸುವನು. ಅನಂತರ ಮಥುರೆಗೆ ಹೋಗಿ ಕಂಸನ ಬಿಲ್ಲನ್ನು ಮುರಿದು ಕುವಲಯಾಪೀಡವೆಂಬ ಕಂಸನ ಆನೆಯನ್ನು ಕೊಲ್ಲುವನು. ನಂತರ ಚಾಣೂರಾದಿ ಮಲ್ಲರನ್ನೂ, ತನ್ನ ಸೋದರ ಮಾವನಾದ ಕಂಸನನ್ನೂ ಶ್ರೀ ಕೃಷ್ಣನು ಕೊಂದು ಕೆಡಹುವನು. ಅನಂತರ ಕಾರಾಗೃಹ ಬಂಧನದಲ್ಲಿರುವ ತನ್ನ ತಂದೆ ತಾಯಿಗಳನ್ನು ಬಿಡಿಸಿ ಕಾಲಯವನನನ್ನು ಕೊಂದು, ಅನೇಕಬಾರಿ ಜರಾಸಂಧನನ್ನು ಸೋಲಿಸಿ ಕೊನೆಗೆ ವ್ಯರ್ಥವಾಗಿ ಸೈನ್ಯ ನಾಶವಾಗುವುದನ್ನು ತಪ್ಪಿಸುವುದಕ್ಕಾಗಿ ಜರಾಸಂಧನ ಭಯದಿಂದಲೇ ಎಂಬಂತೆ ಮಥುರೆಯನ್ನು ಬಿಟ್ಟು ಸಮುದ್ರ ಮಧ್ಯದಲ್ಲಿ ದ್ವಾರಕಾಪುರಿಯನ್ನು ನಿರ್ಮಾಣ ಮಾಡಿಸಿ ಅಲ್ಲಿ ವಾಸಮಾಡುವನು. ಅನಂತರ ಭಗವಾನ್ ಶ್ರೀ ಹರಿಯು ರುಕ್ಮಿಣೀ, ಸತ್ಯಭಾಮಾ, ಸತ್ಯಾ (ನೀಲಾ) ಜಾಂಬವತೀ, ಭದ್ರಾ, ಲಕ್ಷ್ಮಣಾ, ಮಿತ್ರವಿಂದಾ, ಕಾಲಿಂದೀ ಎಂಬ ಎಂಟು ಮಂದಿಯನ್ನು ವಿವಾಹವಾಗಿ ಅವರನ್ನು ಪಟ್ಟ ಮಹಿಷಿಯರನ್ನಾಗಿ ಮಾಡಿಕೊಳ್ಳುವನು.

ಅನಂತರ ಭೂಮಿಪುತ್ರನಾದ ನರಕಾಸುರನ ಸಂಹಾರ ಮಾಡಿ, ಅವನು ಬಂಧನದಲ್ಲಿಟ್ಟಿರುವ ಹದಿನಾರು ಸಾವಿರ ಮಂದಿ ಕನ್ಯೆಯರನ್ನು ಮದುವೆ ಮಾಡಿಕೊಳ್ಳುವನು. ಅನಂತರ ಪೌಂಡ್ರಕ ವಾಸುದೇವ, ಶಿಶುಪಾಲ, ದಂತವಕ್ತ್ರ, ವಿಧೂರಥ, ಶಾಲ್ವರನ್ನು ಸಂಹರಿಸಿ, ಬಲರಾಮನಲ್ಲಿ ತಾನೇ ನಿಂತು, ದ್ವಿವಿದನೆಂಬ ವಾನರನನ್ನೂ ಬಲ್ವಲನನ್ನೂ ಸಂಹರಿಸುವನು. ಅನಂತರ ಷಟ್ ಪುರವಾಸಿಗಳಾದ ದೈತ್ಯರನ್ನು ಸಂಹರಿಸುತ್ತ ವಜ್ರನಾಭ, ಸುನಾಭ ಮತ್ತು ವರಬಲದಿಂದ ಕೊಬ್ಬಿದ ತ್ರಿಶರೀರನೆಂಬ ದೈತ್ಯನನ್ನೂ ಸಂಹರಿಸುವನು. ಮಹೇಶ್ವರನೇ! ಅನಂತರ ಭೂಭಾರ ಸಂಹಾರ ಮಾಡುವುದಕ್ಕಾಗಿಯೇ ಅವತರಿಸಿದ ಶ್ರೀ ಕೃಷ್ಣನು ಪಾಂಡವ ಕೌರವರ ಯುದ್ಧದಲ್ಲಿ ಪರಸ್ಪರ ಎರಡೂ ಪಕ್ಷದ ವೀರರನ್ನೂ ಸಂಹಾರ ಮಾಡಿಸುವನು. ಕೊನೆಗೆ ಯಾದವರನ್ನು ಪರಸ್ಪರ ಹೊಡೆದಾಟದಿಂದಲೇ ಸಂಹಾರ ಮಾಡಿಸಿ, ತನ್ನ ಅಣ್ಣನಾದ ಬಲರಾಮನನ್ನು ಮೊದಲು ಕಳುಹಿಸಿ ತಾನೂ ತನ್ನ ಮೂಲರೂಪವನ್ನು ಸೇರುವನು. ಈ ರೀತಿಯಾಗಿ ನಾನು ನಿನಗೆ ಶ್ರೀಹರಿಯ ಭವಿಷ್ಯ ಚರಿತ್ರೆಯನ್ನು ನಿರೂಪಿಸಿದ್ದೇನೆ. ಮಹೇಶ್ವರನೇ ಈಗ ಹೋಗು, ಶ್ರೀಕೃಷ್ಣನು ಭೂಲೋಕದಲ್ಲಿ ಅವತರಿಸಿದಾಗ ಈ ಲೀಲೆಗಳನ್ನೆಲ್ಲಾ ನೀನು (ಅದರಲ್ಲಿ ಭಾಗವಹಿಸಿ) ನೋಡುವಿಯಂತೆ.'' ಬ್ರಹ್ಮಕುಮಾರ ನಾರದನೇ! ಕಾಮಧೇನುವಿನ ಈ ಮಾತನ್ನು ಕೇಳಿ ನನಗೆ ಬಹಳ ಆನಂದವಾಯಿತು. ಅಲ್ಲಿಂದ ಹಿಂತಿರುಗಿ ನಾನು ನನ್ನ ಆವಾಸಸ್ಥಾನಕ್ಕೆ ಬಂದೆನು. ಸುರಭಿಯು ಹೇಳಿದ ಮಾತನ್ನೇ ನಿನಗೆ ನಾನು ಹೇಳಿದ್ದೇನೆ. ನಾರದನೇ! ಸಮಯ ಬಂದಾಗ ಶ್ರೀ ಕೃಷ್ಣನ ಅದ್ಭುತ ಲೀಲೆಗಳನ್ನು ನೀನು ನೋಡುವಿಯಂತೆ. ವಸುವೇ! ತ್ರಿಶೂಲಧಾರಿಯಾದ ಪರಮೇಶ್ವರನ ಈ ಮಾತನ್ನು ಕೇಳಿ ನನಗೆ ಆನಂದದಿಂದ ರೋಮಾಂಚ

ಉಂಟಾಯಿತು. ನಾನು ವೀಣೆಯನ್ನು ಬಾರಿಸುತ್ತ ಶ್ರೀಹರಿಯ ಗುಣಗಾನ ಮಾಡುತ್ತ, ಸಂಸಾರ ಪೀಡಿತವಾದ ಜಗತ್ತನ್ನು ಆನಂದಗೊಳಿಸುತ್ತ ಸಂಚರಿಸುತ್ತಿದ್ದೇನೆ. ದ್ವಿಜಶ್ರೇಷ್ಠನಾದ ವಸುವೇ! ಇದೇ ಮುಂದೆ ಭವಿಷ್ಯದಲ್ಲಿ ಆಗತಕ್ಕೆ ಶ್ರೀ ಕೃಷ್ಣನ ಲೀಲಾರಹಸ್ಯವು. ಇದೆಲ್ಲವನ್ನೂ ನಾನು ಬಹಳ ಪ್ರೀತಿಯಿಂದ ನಿನಗೆ ಹೇಳಿದ್ದೇನೆ.

**ಸೂತರು:-** ಬ್ರಾಹ್ಮಣ ಶ್ರೇಷ್ಠರೇ! ಪುರೋಹಿತ ಶ್ರೇಷ್ಠರಾದ ವಸು ಬ್ರಾಹ್ಮಣನಿಗೆ, ಹೀಗೆ ಉಪದೇಶ ಮಾಡಿ, ನಾರದರು ವೀಣೆಯನ್ನು ಬಾರಿಸುತ್ತ ಯದುನಂದನ ಶ್ರೀ ಕೃಷ್ಣನ ಗುಣಗಾನ ಮಾಡುತ್ತ, ಶ್ರೀ ಕೃಷ್ಣನನ್ನೇ ಧ್ಯಾನಿಸುತ್ತ ಅಲ್ಲಿಂದ ಮುಂದೆ ಹೊರಟು ಹೋದರು. ವಸುವು ತಾನು ಇರುವ ಸ್ಥಳದಲ್ಲಿಯೇ ಮುಂದೆ ನಡೆಯಲಿರುವ ಶ್ರೀ ಕೃಷ್ಣನ ಅದ್ಭುತ ಲೀಲೆಗಳನ್ನು ಮನಸ್ಸಿನಿಂದ ಭಾವಿಸುತ್ತಾ ವಸುವು ಪ್ರಸನ್ನನಾಗಿ ಶ್ರೀ ಕೃಷ್ಣನ ದರ್ಶನ ಮಾಡಬೇಕೆಂಬ ಉತ್ಕಂಠೆಯಿಂದ ಅಲ್ಲಿಯೇ ವಾಸಮಾಡುತ್ತಿದ್ದನು.

## ಮೋಹಿನಿಯು ಎಲ್ಲ ತೀರ್ಥಯಾತ್ರೆಯನ್ನು ಮಾಡಿದಳು

**ಋಷಿಗಳು:-** ಸೂತ ಪುರಾಣಿಕರೇ! ಸಾಧು ಸಾಧು! ಬಹಳ ಚೆನ್ನಾಗಿದೆ. ತಾವು ಭಗವಂತನಾದ ಶ್ರೀ ಕೃಷ್ಣನ ಅಮೃತಮಯವಾದ ಚರಿತ್ರೆಯನ್ನು ವರ್ಣಿಸಿ ಹೇಳಿದಿರಿ. ತಮ್ಮ ಕೃಪೆಯಿಂದ ನಾವೆಲ್ಲರೂ ಕೃತಾರ್ಥರಾದೆವು. ಪುರೋಹಿತ ವಸುಗಳು ಬ್ರಹ್ಮಲೋಕಕ್ಕೆ ಹೊರಟುಹೋದ ಮೇಲೆ ಬ್ರಹ್ಮಪುತ್ರಿಯಾದ ಮೋಹಿನಿಯು ಯಾವ ಯಾವ ಕಾರ್ಯಗಳನ್ನು ಮಾಡಿದಳು? ಇದನ್ನು ತಾವು ದಯವಿಟ್ಟು ತಿಳಿಸಬೇಕು.

**ಸೂತರು:-** ಮಹರ್ಷಿಗಳೇ! ನೀವೆಲ್ಲರೂ ಮೋಹಿನಿಯು ಮಾಡಿದ ಮಂಗಳಕರವಾದ ಮುಂದಿನ ಚರಿತ್ರೆಯನ್ನು ಕೇಳಿರಿ, ವಿಪ್ರವರ್ಯರಾದ ವಸುಪುರೋಹಿತರು ಹೇಗೆ ಉಪದೇಶ ಮಾಡಿದ್ದರೋ ಅದೇ ರೀತಿ ತೀರ್ಥಯಾತ್ರೆ ಮಾಡಬೇಕೆಂದು ಸಂಕಲ್ಪಿಸಿ ಮೋಹಿನಿಯು ಮೊದಲು ಗಂಗೆಯ ತೀರಕ್ಕೆ ಬಂದಳು. ಅಲ್ಲಿ ವಿಧಿಪೂರ್ವಕವಾಗಿ ಗಂಗೆಯಲ್ಲಿ ಸ್ನಾನಮಾಡಿ ಸಂತೋಷದಿಂದ ಇತರ ವಿಧಿಗಳನ್ನು ಪೂರೈಸಿದಳು. ಪುರೋಹಿತವಸುಗಳು ಯಾವ ತೀರ್ಥದಲ್ಲಿ ಯಾವ ವಿಧಿ ವಿಧಾನವನ್ನು ಅನುಸರಿಸಬೇಕೆಂದು ತಿಳಿಸಿದ್ದರೋ ಅದೇ ರೀತಿ ಮಾಡುತ್ತ ಅವಳು ಇತರ ಎಲ್ಲ ತೀರ್ಥದಲ್ಲಿ ಸಂಚಾರಮಾಡಿ ಸ್ನಾನ ದಾನ ದೇವಪೂಜೆಗಳನ್ನು ತಪ್ಪದೆ ಮಾಡಿದಳು. ಎಲ್ಲ ಕ್ಷೇತ್ರಗಳಲ್ಲಿ ಅವಳು ವಿಷ್ಣು ಮೊದಲಾದ ದೇವತೆಗಳನ್ನು ಪೂಜಿಸಿ ಬ್ರಾಹ್ಮಣರಿಗೆ ವಿವಿಧ ದಾನಗಳನ್ನು ಕೊಟ್ಟು ತನ್ನ ಎಲ್ಲ ಪಾಪಗಳನ್ನು ಪರಿಹರಿಸಿಗೊಂಡು ವಿಪುಲವಾಗಿ ಪುಣ್ಯವನ್ನು ಪಡೆದಳು. ಅನಂತರ ಆ ಮೋಹಿನಿಯು ಯಮುನಾ ನದಿಯ ದಡದಲ್ಲಿ ಹೋಗಿ ಕುಳಿತಳು.

## ಮೋಹಿನಿಯು ಜಲದಲ್ಲಿ ಅಂತರ್ಧಾನ ಹೊಂದಿದಳು

ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆಯಿಂದ ಮೋಹಿನಿಯ ಅಂತಃಕರಣ ಶುದ್ಧವಾಗಿತ್ತು. ಅವಳ ಹೃದಯದಲ್ಲಿ ವೈರಾಗ್ಯವು ಪರಿಪಕ್ವವಾಗಿತ್ತು. ಆದರಿಂದಲೂ ಸದೃಢವಾದ ಭಕ್ತಿಯು ಬೇರೂರಿ ಬೆಳೆದಿತ್ತು. ಅವಳು ಜ್ಞಾನವನ್ನು ಸಂಪಾದಿಸಿದ್ದಳು. ಧ್ಯಾನ ಮಾಡಲಾರಂಭಿಸಿ ಅವಳು ತನ್ಮಯ ಚಿತ್ತಳಾಗಿ ಶ್ರೀ ಕೃಷ್ಣನನ್ನೇ ಧ್ಯಾನಿಸುತ್ತ ಪಾಪನಾಶಕವಾದ ಯಮುನಾ

ನದಿಯ ಜಲದಲ್ಲಿ ಮುಳುಗಿದಳು. ಅಲ್ಲಿಯೇ ಕರಗಿ ಹೋದಂತಾದಳು. ಪುನಃ ಇಂದಿನವರೆಗೂ ಮೇಲೆದ್ದು ಬರಲಿಲ್ಲ.

## ಮೋಹಿನಿಯು ಎಲ್ಲಿದ್ದಾಳೆ?

ಮೋಹಿನಿಯು ದಶಮೀತಿಥಿಯ ಅಂತಿಮಭಾಗದಲ್ಲಿ ತಾನು ಸ್ಥಿರವಾಗಿ ನಿಂತಳು. ಸೂರ್ಯೋದಯ ಕಾಲದಲ್ಲಿ ಏಕಾದಶಿಗೆ ದಶಮಿಯಿಂದ ವೇಧವುಂಟಾದರೆ ಆ ಏಕಾದಶಿಯು ದೂಷಿತವಾಗುವುದು. ಇಂತಹ ದಶಮೀ ತಿಥಿಯಿಂದ ವಿದ್ಧವಾದ ಏಕಾದಶಿಯನ್ನು ಅನುಷ್ಠಾನ ಮಾಡುವಂತೆ ಅವಳು ಗೃಹಸ್ಥರ ಮನಸ್ಸಿನಲ್ಲಿ ಮೋಹವನ್ನುಂಟು ಮಾಡಿ ಅವರ ಪುಣ್ಯವನ್ನು ಅಪಹರಿಸುವಳು. ಇದೇ ರೀತಿ ಅರುಣೋದಯ ಕಾಲದಲ್ಲಿ ದಶಮೀ ವೇಧವಿದ್ದಾಗಲೂ ಮಧ್ಯರಾತ್ರಿಯ ಕಾಲದಲ್ಲಿ ದಶಮೀ ವೇಧವಿದ್ದಾಗಲೂ ಅವಳು ವೈದಿಕರ ಮತ್ತು ವೈಷ್ಣವರ ಮನಸ್ಸಿನಲ್ಲಿ ಸೇರಿ ಅವರ ವ್ರತವನ್ನು ಕೆಡಿಸುತ್ತಿದ್ದಳು. ಬ್ರಾಹ್ಮಣರೇ! ಆದ್ದರಿಂದ ಮೋಹಿನೀ ವೇಧರಹಿತವಾದ ಏಕಾದಶಿಯ ದಿನ ಉಪವಾಸ ಮಾಡಿ ಮರುದಿನ ದ್ವಾದಶೀ ಪಾರಣೆಯನ್ನು ವಿಷ್ಣು ಪೂಜಾ ಪುರಸ್ಸರವಾಗಿ ಮಾಡುವ ಭಕ್ತನು ನಿಶ್ಚಯವಾಗಿಯೂ ವೈಕುಂಠಕ್ಕೆ ಹೋಗುತ್ತಾನೆ. ಬ್ರಾಹ್ಮಣರೇ! ಈ ರೀತಿ ನಾನು ನಿಮಗೆಲ್ಲರಿಗೂ ಮೋಹಿನಿಯ ಚರಿತ್ರೆಯನ್ನು ಯಥಾವತ್ತಾಗಿ ನಿರೂಪಿಸಿದ್ದೇನೆ.

## ನಾರದೀಯ ಪುರಾಣದ ಪಾರಾಯಣ ಮತ್ತು ಶ್ರವಣ ಮಹಿಮೆ

ನಾರದೀಯ ಪುರಾಣದ ಈ ಉತ್ತರ ಭಾಗವು ಭೋಗಮೋಕ್ಷಪ್ರದವಾದುದು. ಇದನ್ನು ನಾನು ನಿನಗೆ ಹೇಳಿದ್ದಾಯಿತು. ಈ ಪುರಾಣದ ಪ್ರತಿಯೊಂದು ಪದದಲ್ಲಿಯೂ ಮಾನವನಿಗೆ ಶ್ರೀ ಹರಿಯ ಭಕ್ತಿಯ ಸಾಧನೆಗೆ ಅವಲಂಬನವು ಸಿಗುತ್ತದೆ. ಭಕ್ತಿಭಾವದಿಂದ ಈ ಪುರಾಣದ ಶ್ರವಣ ಮಾಡುವವನು ವೈಕುಂಠಲೋಕವನ್ನು ಪಡೆಯುತ್ತಾನೆ. ಈ ಪುರಾಣವು ಎಲ್ಲ ಪುರಾಣಗಳ ಸನಾತನ ಬೀಜವಾಗಿದೆ. ದ್ವಿಜವರ್ಯರೇ! ಪರಮಜ್ಞಾನಿಯಾದ ಪರಾಶರ ನಂದನರಾದ ವ್ಯಾಸಮಹರ್ಷಿಗಳು ಈ ಪುರಾಣದಲ್ಲಿ ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಎರಡು ವಿಧವಾದ ಧರ್ಮಗಳನ್ನು ನಿರೂಪಿಸಿದ್ದಾರೆ. ನಾರದೀಯ ಪುರಾಣವು ಅಲೌಕಿಕವಾದ ಚರಿತ್ರೆಗಳಿಂದ ತುಂಬಿದೆ. ವ್ಯಾಸರು ನನ್ನೊಡನೆ ಈ ಪುರಾಣವನ್ನು ಯಾವನಾದರೊಬ್ಬ ಸಾಧಾರಣ ಮನುಷ್ಯನಿಗೆ ಉಪದೇಶ ಮಾಡಬಾರದೆಂದು ಹೇಳಿದ್ದಾರೆ. ಪೂರ್ವಕಾಲದಲ್ಲಿ ಮಹಾತ್ಮರಾದ ಸನಕಾದಿ ಮುನಿಗಳು ನಾರದರ ಎದುರು ಈ ಪುರಾಣ ಸಂಹಿತೆಯನ್ನು ಪ್ರಕಾಶಪಡಿಸಿದ್ದರು. ಹಂಸಸ್ವರೂಪಿಯಾದ ಭಗವಂತನಾದ ಶ್ರೀಹರಿಯು ಚತುರ್ಮುಖ ಬ್ರಹ್ಮದೇವರಿಗೆ ಶಾಶ್ವತವಾದ ಅಪೌರುಷೇಯವಾದ ವೇದವನ್ನು ಉಪದೇಶಮಾಡುವಾಗಲೇ ಬ್ರಹ್ಮದೇವರಿಗೂ ಸನಕಾದಿಗಳಿಗೂ ವಿಸ್ಮೃತವಿಜ್ಞಾನ ಭರಿತವಾದ ಈ ಪುರಾಣವನ್ನು ಉಪದೇಶಿಸಿದ್ದನು. ಆಧ್ಯಾತ್ಮದರ್ಶಿಯಾದ ನಾರದರು ರಹಸ್ಯಸಹಿತವಾಗಿ ಈ ಪುರಾಣವನ್ನು ಮುನಿವರ್ಯರಾದ, ಪರಾಶರರಿಂದ ಆವಿರ್ಭವಿಸಿದ ವೇದವ್ಯಾಸರಲ್ಲಿ ಒಪ್ಪಿಸಿದರು. ವೇದವ್ಯಾಸರಿಂದ ಈ ಪುರಾಣೋಪದೇಶ ಪಡೆದಿರುವ ನಾನು ನಿಮ್ಮೆಲ್ಲರ ಎದುರು ಈ ಪುರಾಣವನ್ನು ಪ್ರಕಾಶಗೊಳಿಸಿದ್ದೇನೆ. ಈ ನಾರದೀಯ ಪುರಾಣವು ಭೂಮಂಡಲದಲ್ಲಿ ದುರ್ಲಭವಾದ ಮಹಾರತ್ನವು. ಇದನ್ನು

ಯಾವಾಗಲೂ ಓದುತ್ತಿರುವ ಅಥವಾ ಕೇಳುತ್ತಿರುವ ಭಕ್ತನಿಗೆ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳು ಸುಲಭವಾಗಿ ಪ್ರಾಪ್ತವಾಗುತ್ತವೆ. ಈ ಪುರಾಣ ಪರಾಯಣನಾದ ಬ್ರಾಹ್ಮಣನು ವೇದಗಳ ಅಕ್ಷಯಭಂಢಾರವಾಗುತ್ತಾನೆ. ಕ್ಷತ್ರಿಯನು ವಿಜಯವನ್ನು ಹೊಂದುತ್ತಾನೆ. ವೈಶ್ಯನು ಧನಧಾನ್ಯ ಸಂಪನ್ನನಾಗುತ್ತಾನೆ. ಶೂದ್ರನು ಎಲ್ಲ ದುಃಖಗಳಿಂದ ದೂರನಾಗುತ್ತಾನೆ. ಭಗವಾನ್ ಕೃಷ್ಣದ್ವೈಪಾಯನರು ಈ ಪುರಾಣವನ್ನು ಸಂಗ್ರಹಿಸಿ ಸಂಪಾದಿಸಿದ್ದಾರೆ. ಈ ಪುರಾಣವನ್ನು ಕೇಳುವ ಭಕ್ತರ ಎಲ್ಲ ಸಂದೇಹಗಳು ದೂರವಾಗುತ್ತವೆ. ಈ ಪುರಾಣವು ಸಕಾಮ ಭಕ್ತರಿಗೂ ನಿಷ್ಕಾಮ ಭಕ್ತರಿಗೂ ಮೋಕ್ಷವನ್ನು ದೊರಕಿಸಿ ಕೊಡುತ್ತವೆ. ಬ್ರಾಹ್ಮಣರೇ! ನೈಮಿಷಾರಣ್ಯ, ಪುಷ್ಕರ, ಗಯಾ, ಮಧುರಾ, ದ್ವಾರಕಾ, ನರನಾರಾಯಣಾಶ್ರಮ, ಕುರುಕ್ಷೇತ್ರ, ನರ್ಮದಾತೀರ, ಪುರುಷೋತ್ತಮ ಕ್ಷೇತ್ರ, ಇವುಗಳಲ್ಲಿ ಅಥವಾ ಇವುಗಳಂತೆ ಪವಿತ್ರವಾದ ಇತರ ಕ್ಷೇತ್ರಗಳಲ್ಲಿ ಹವಿಷ್ಯಾನ್ನ ಭೋಜನ ಮಾಡುತ್ತ ಭೂಮಿಶಯನ ವ್ರತವನ್ನು ಪಾಲಿಸುತ್ತ ಈ ಪುರಾಣವನ್ನು ಪಾರಾಯಣ ಮಾಡುವ ಮಾನವನು ಈ ಸಂಸಾರ ಸಮುದ್ರದಿಂದ ಮುಕ್ತನಾಗುತ್ತಾನೆ. ವ್ರತಗಳಲ್ಲಿ ಏಕಾದಶಿಯು, ನದಿಗಳಲ್ಲಿ ಗಂಗೆಯು, ವನಗಳಲ್ಲಿ ವೃಂದಾವನವು, ಕ್ಷೇತ್ರಗಳಲ್ಲಿ ಕುರುಕ್ಷೇತ್ರವು, ಪುರಿಗಳಲ್ಲಿ ಕಾಶೀಪುರಿಯು, ತೀರ್ಥಗಳಲ್ಲಿ ಮಥುರಾಪುರಿಯು, ಸರೋವರಗಳಲ್ಲಿ ಪುಷ್ಕರ ಸರೋವರವು ಹೇಗೆ ಶ್ರೇಷ್ಠವೋ ಅದರಂತೆ ಪುರಾಣಗಳಲ್ಲಿ ನಾರದೀಯ ಪುರಾಣವು . ಪರಮಶ್ರೇಷ್ಠವಾದುದು. ಗಣೇಶಭಕ್ತನೂ, ಸೂರ್ಯೋಪಾಸಕನೂ, ಶಕ್ತಿ ಅಥವಾ ಶಿವ ಭಗವಂತನ ಭಕ್ತನೂ, ನಿಷ್ಕಾಮ ಭಕ್ತನೂ ಈ ಪುರಾಣ ಶ್ರವಣಕ್ಕೆ ಅಧಿಕಾರಿಗಳು. ಈ ಪುರಾಣ ಶ್ರವಣದಿಂದ ಅವರೆಲ್ಲರೂ ವಿಷ್ಣುಭಕ್ತರಾಗಿ ಮೋಕ್ಷವನ್ನೇ ಪಡೆಯುತ್ತಾರೆ. ಸ್ತ್ರೀಯಾಗಲಿ, ಪುರುಷನಾಗಲಿ ಯಾವ ಯಾವ ಕಾಮನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಪುರಾಣವನ್ನು ಕೇಳುತ್ತಾರೋ ಅಥವಾ ಕೇಳಿಸುತ್ತಾರೋ ಅವರು ಅವಶ್ಯವಾಗಿ ಆ ಕಾಮನೆಯನ್ನು ಪಡೆದು ಕೃತಾರ್ಥರಾಗುತ್ತಾರೆ. ನಾರದೀಯ ಪುರಾಣದ ಅರ್ಥಪರಿಶೀಲನದಿಂದ ರೋಗಪೀಡಿತನಾದ ಮನುಷ್ಯನು ರೋಗ ಮುಕ್ತನಾಗುತ್ತಾನೆ. ಭಯಪೀಡಿತನು ನಿರ್ಭಯನಾಗುತ್ತಾನೆ. ವಿಜಯದ ಅಪೇಕ್ಷೆಯುಳ್ಳವನು ವಿಜಯವನ್ನು ಪಡೆಯುತ್ತಾನೆ.

ಶೌನಕಾದಿ ಮಹರ್ಷಿಗಳೇ, ನಾನೀಗ ಪರಬ್ರಹ್ಮ ಸ್ವರೂಪಿಯಾದ ವಿಷ್ಣುವಿಗೆ ನಮಸ್ಕಾರ ಮಾಡುತ್ತ ಪುರಾಣೋಪಸಂಹಾರ ಮಾಡುತ್ತಿದ್ದೇನೆ. ನಾನಾರೂಪಗಳು ನಾನಾಕ್ರಿಯೆಗಳಿಗೆ ಆಶ್ರಯವಾದ ಆ ಪರಬ್ರಹ್ಮಸ್ವರೂಪವನ್ನು ನಾನು ವಂದಿಸುತ್ತೇನೆ.

**ಶಿವಂ ಶೈವಾ ವದಂತ್ಯೇನಂ ಪ್ರಧಾನಂ ಸಾಂಖ್ಯವೇದಿನಃ ।**
**ಯೋಗಿನಃ ಪುರುಷಾ ವಿಪ್ರಾಃ ಕರ್ಮಮೀಂಮಾಂಸಕಾ ಜನಾಃ ॥**

**ವಿಭುಂ ವೈಶೇಷಿಕಾದ್ಯಾಶ್ಚ ಚಿಚ್ಛಕ್ತಿಂ ಶಕ್ತಿ ಚಿಂತಕಾಃ ।**
**ಬ್ರಹ್ಮಾ ದ್ವಿತೀಯಂ ತದ್ವಂದೇ ನಾನಾರೂಪಕ್ರಿಯಾಸ್ಪದಂ ॥**
**(ನಾರದೀಯ ಪುರಾಣ ಉತ್ತರಖಂಡ ಅಧ್ಯಾಯ ೮೨, ಶ್ಲೋಕ ೫೬, ೫೭)**

ಭಗವಂತನಲ್ಲಿ ಮಾಡುವ ನಿಶ್ಚಲವಾದ ಭಕ್ತಿಯು ಭಗವಂತನ ಸಾಮೀಪ್ಯವನ್ನೂ ಸಾರೂಪ್ಯವನ್ನೂ ಉಂಟುಮಾಡುತ್ತದೆ. ಪರಮಾತ್ಮನ ಸ್ವರೂಪವನ್ನು ತನ್ನಸ್ವರೂಪ ದಿಂದ

ಪಡೆದು ನೋಡಿ ಆನಂದಿಸುವ ಮನುಷ್ಯನಿಗಿಂತ ಧನ್ಯನು ಯಾವನಿದ್ದಾನೆ? ಇಂತಹ ದಿವ್ಯಲಾಭವನ್ನು ಪಡೆಯಲು ಸಾಧ್ಯವಿರುವ ಈ ಮನುಷ್ಯಜನ್ಮವನ್ನು ಪಡೆದಿದ್ದರೂ, ಬೇರೆ ಯಾವುದೋ ಮಹಾಲಾಭವಿದೆಯೆಂದು ಭ್ರಾಂತನಾಗಿ ಯಾವನು ತೋಳಲಾಡುತ್ತಾನೋ ಅಂತಹವನು ಮಾನವನಲ್ಲ. ಪಶುವೇ ಸರಿ. ಬ್ರಾಹ್ಮಣಶ್ರೇಷ್ಠರೇ! ಯಾವ ಮಾನವರು ಪರಮಾತ್ಮನಿಂದ ವಿಮುಖರಾಗಿ ಸಂಸಾರದಲ್ಲಿ ಆಸಕ್ತರಾಗಿರುತ್ತಾರೋ, ಅಂತಹವರು ಸಾಧುಪುರುಷರ ಸಹವಾಸವನ್ನು ಪ್ರಯತ್ನಪೂರ್ವಕವಾಗಿ, ಅತ್ಯಲ್ಪ ಕಾಲದಲ್ಲಿಯಾದರೂ ಮಾಡುತ್ತಿದ್ದರೆ ಕ್ರಮೇಣ ಅವರಿಗೆ ಸಾಧುಸಂಗದಲ್ಲಿ, ಭಗವಂತನ ಭಕ್ತರಲ್ಲಿ, ಹಾಗೂ ಯೋಗ್ಯ ಗುರುಗಳಲ್ಲಿ ಭಕ್ತಿ ಹುಟ್ಟುತ್ತದೆ. ಅವರಿಗೆ ಗುರುಗಳ ಮೂಲಕ ಭಗವಂತನ ಜ್ಞಾನ ಉಂಟಾಗಿ ಸಂಸಾರ ಸಾಗರವನ್ನು ದಾಟಲು ಸಾಧ್ಯವಾಗುತ್ತದೆ. ಸಜ್ಜನರ ಸಹವಾಸ ಮಾಡಿ ಅವರಿಂದ ಜ್ಞಾನವನ್ನು ಪಡೆಯದ ಹೊರತು ಬೇರೆ ಯಾವ ಉಪಾಯದಿಂದಲೂ ಈ ಸಂಸಾರದಿಂದ ಬಿಡುಗಡೆಯುಂಟಾಗುವುದಿಲ್ಲ. ಈ ಸಂಸಾರವೆಂಬ ಗಹನದಲ್ಲಿ ಅನೇಕ ಸಾಧುಪುರುಷರಿರುತ್ತಾರೆ. ಅವರು ಉತ್ತಮ ಆಚಾರವಂತರಾಗಿದ್ದು ಸರ್ವಲೋಕಹಿತೈಷಿಗಳಾಗಿಯೂ, ದೀನ ಜನವತ್ಸಲರಾಗಿಯೂ ಇರುತ್ತಾರೆ. ಅವರು ತಮ್ಮನ್ನು ಮೊರೆ ಹೊಕ್ಕವರನ್ನು ಉದ್ಧಾರ ಮಾಡುತ್ತಾರೆ. ಮುನಿಗಳೇ! ನೀವು ಕೂಡ ಸಜ್ಜನರಾಗಿದ್ದೀರಿ.ಸಾಧುಪುರುಷರಾಗಿದ್ದೀರಿ. ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿದ್ದೀರಿ, ಉತ್ತಮರಾದ ಸಾಧುಪುರುಷರಿಂದ ಗೌರವಿಸಲು ಯೋಗ್ಯರೂ ಆಗಿದ್ದೀರಿ, ನೀವೆಲ್ಲರೂ ಧನ್ಯರು. ನೀವು ಸ್ವತಃ ಸಂಸಾರ ಸಮುದ್ರದಿಂದ ಉದ್ಧಾರ ಹೊಂದಿದ್ದೀರಿ, ಭಗವಾನ್ ವಾಸುದೇವನು ಈ ಪುರಾಣ ಪ್ರತಿಪಾದ್ಯನಾಗಿದ್ದಾನೆ. ಅವನ ಕೀರ್ತಿಲತೆಯ ಪಲ್ಲವಗಳನ್ನು (ಚಿಗುರೆಲೆಗಳನ್ನು) ನೀವು ನಿರಂತರ ಸೇವಿಸಿದ್ದೀರಿ. ಭಗವಂತನ ಕೀರ್ತಿಲತೆಯು ನಿರಂತರವೂ ಹಸಿರಾಗಿರುತ್ತದೆ. ಬೆಳೆಯುತ್ತಿರುತ್ತದೆ. ಅದರಲ್ಲಿ ಹೊಸ ಹೊಸದಾದ ಕೋಮಲ ಪಲ್ಲವಗಳು ಚಿಗುರುತ್ತಿರುತ್ತವೆ. ಕೋಗಿಲೆಗಳು ಮಾವಿನ ಮರ ಚಿಗುರೆಲೆಗಳನ್ನು ಆಸ್ವಾದಿಸಿ ವಸಂತ ಋತುವಿನಲ್ಲಿ ಸಂತಸದಿಂದ ಹಾಡುವಂತೆ ನೀವೂ ಕೂಡ ಭಗವಂತನ ಕೀರ್ತಿಲತೆಯ ಪಲ್ಲವಗಳನ್ನು ಆಸ್ವಾದಿಸಿ, ನಿರಂತರ ಭಗವಂತನ ಗುಣಗಾನ ಮಾಡಿರಿ.

ಋಷಿಗಳಿರಾ! ನೀವು ನನಗೆ ಪರಮೋಪಕಾರ ಮಾಡಿದ್ದೀರಿ. ಸಮಸ್ತ ಕಾರಣನಾದ. ಜಗನ್ಮಂಗಳ ಮಂಗಳನಾದ ಭಗವಂತನಾದ ವಾಸುದೇವನ ಸ್ಮರಣೆ ಯುಂಟಾಗುವಂತೆ ಮಾಡಿದ್ದೀರಿ. ಆ ಪರಬ್ರಹ್ಮನ ಮಹಿಮೆ ಗುಣಗಳನ್ನು ಯಥಾಮತಿಯಾಗಿ ಹೇಳುವಂತೆ ಅವಕಾಶವನ್ನು ಮಾಡಿಕೊಟ್ಟಿದ್ದೀರಿ. ನಾನು ನಿಮ್ಮಿಂದಾಗಿ ಧನ್ಯನಾದೆನು. ಅನುಗೃಹೀತನಾದೆನು. ನಿಮಗೆಲ್ಲರಿಗೂ ವಂದನೆಗಳು. ಧನ್ಯವಾದಗಳು. ನಿಮ್ಮ ಮೇಲೆ ಭಗವಂತನ ಸಂಪೂರ್ಣವಾದ ಅನುಗ್ರಹವುಂಟಾಗಲಿ.

**ಧನ್ಯೋಽಸ್ಮ್ಯನುಗ್ರಹಿತೋಽಸ್ಮಿ ಭವದ್ಭಿರ್ಲೋಕ ಮಂಗಲ ।**
**ಯತ್ ಸ್ಮಾರಿತೋ ಹರಿಃ ಸಾಕ್ಷಾತ್ ಸರ್ವಕಾರಣ ಕಾರಣಂ ॥**

*ನಾರದ ಮಹಾಪುರಾಣದಲ್ಲಿ ಉತ್ತರಭಾಗದಲ್ಲಿ ಎಂಭತ್ತರಡೆಯ ಅಧ್ಯಾಯ ಮುಗಿದುದು.*

*ನಾರದೀಯ ಮಹಾಪುರಾಣವು ಸಮಾಪ್ತವಾಯಿತು. ಇತ್ಯಶೇಷ ಮತಿ ಮಂಗಲಂ*

—○—

## ಪರಿಶಿಷ್ಟ

ಈ ಸ್ತೋತ್ರದ ಪ್ರತಿಯೊಂದು ಶ್ಲೋಕದ ಕೊನೆಯಲ್ಲಿ ವೇದ ಮಂತ್ರದ ಒಂದು ಪಾದವಿದೆ. ಆದ್ದರಿಂದ ಇದನ್ನು ವೇದಪಾದ ಸ್ತೋತ್ರವೆಂದು ಹೇಳುತ್ತಾರೆ.

## ವೇದ ಪಾದ ಸ್ತೋತ್ರ

### ಮಹರ್ಷಿಜೈಮಿನಿ ಕೃತ

**ವಿರಿಂಚಿ ವಿಷ್ಣು ಗಿರಿಶ ಪ್ರಣತಾಂಘ್ರಿ ಸರೋರುಹೇ ।**
**ಜಗತ್ಸೂತೇ ನಮಸ್ತುಭ್ಯಂ ದೇವಿ ಕಾಂಪಿಲ್ಯ ವಾಸಿನಿ ॥೧॥**

ಬ್ರಹ್ಮರುದ್ರಾದಿಗಳಿಂದ ಗೌರವಿಸಲ್ಪಟ್ಟ ಪಾದಕಮಲವುಳ್ಳ ಜಗತ್ತಿನ ಉತ್ಪತ್ತಿಗೆ ಕಾರಣಳಾದ ಕಾಂಪಿಲ್ಯ ದೇಶವಾಸಿನಿಯಾದ ದೇವಿ, ನಿನಗೆ ನಮಸ್ಕಾರ.

**ವಿಘ್ನೇಶ ವಿಧಿ ಮಾರ್ತಂಡ ಚಂದ್ರೇಂದ್ರೋಪೇಂದ್ರ ವಂದಿತ**
**ನಮೋ ಗಣಪತೇ ತುಭ್ಯಂ ಬ್ರಹ್ಮಣಾಂ ಬ್ರಹ್ಮಣಸ್ಪತೇ ॥೨॥**

ವಿಘ್ನರಾಜ,! ಬ್ರಹ್ಮ, ಸೂರ್ಯ, ಚಂದ್ರ, ಇಂದ್ರ ಉಪೇಂದ್ರರೂ ಕೂಡ ವಿಘ್ನಪರಿಹಾರಕ್ಕಾಗಿ ನಿನ್ನನ್ನು ಸ್ತುತಿಸುತ್ತಾರೆ. ಬ್ರಾಹ್ಮಣರಿಗೂ ವೇದಕ್ಕೂ ಅಧಿಪತಿಯಾದ ಗಣೇಶ ನಿನಗೆ ನಮಸ್ಕಾರವು.

**ಉಮಾ ಕೋಮಲ ಹಸ್ತಾಬ್ಜ ಸಂಭಾವಿತ ಲಲಾಟಕಂ ।**
**ಹಿರಣ್ಯ ಕುಂಡಲಂ ವಂದೇ ಕುಮಾರಂ ಪುಷ್ಕರಸ್ರಜಂ ॥೩॥**

ಉಮಾದೇವಿಯು ತನ್ನ ಕೋಮಲಕರಕಮಲದಿಂದ ಯಾವನ ಹಣೆಯಲ್ಲಿ ತಿಲಕವನ್ನಿಡುತ್ತಾಳೋ, ಕಿವಿಗಳಲ್ಲಿ ಸುವರ್ಣ ಕುಂಡಲಗಳನ್ನು, ಕಂಠದಲ್ಲಿ ಪದ್ಮಮಾಲೆಯನ್ನು, ಧರಿಸಿದ ಸುಬ್ರಹ್ಮಣ್ಯನಿಗೆ ನಮಸ್ಕಾರ ಮಾಡುತ್ತೇನೆ.

**ಶಿವಂ ಬ್ರಹ್ಮಾದಿದುರ್ದರ್ಶಂ ನರ ಕಃ ಸ್ತೋತು ಮರ್ಹತಿ ।**
**ದರ್ಶನಾತ್ತೇ ಸ್ತುತಿರ್ಮೇ ಸಾ ಚಾಭ್ರಾದ್ ವೃಷ್ಟಿರಿವಾಜನಿ ॥೪॥**

ಬ್ರಹ್ಮಾದಿಗಳಿಗೂ ಯಾವನ ದರ್ಶನವು ಅತ್ಯಂತ ದುರ್ಲಭವೋ ಅಂತಹ ಶಿವನನ್ನು ಯಾರು ತಾನೇ ಸ್ತೋತ್ರ ಮಾಡಲು ಶಕ್ತರು! ಪ್ರಭುವೇ! ಆದರೂ ಮೋಡದಿಂದ ಸ್ವತಃ ಮಳೆ ಬರುವಂತೆ ನಿನ್ನ ದರ್ಶನದಿಂದ ನನ್ನ ಬಾಯಿಯಿಂದ ಸ್ವತಃ ಸ್ತೋತ್ರವು ಹೊರಡುತ್ತಿದೆ.

**ನಮಃ ಶಿವಾಯ ಸಾಂಬಾಯ ನಮಃ ಶರ್ವಾಯ ಶಂಭವೇ ।**
**ನಮೋ ನಟಾಯ ರುದ್ರಾಯ ಸದಸಸ್ಪತೇ ನಮಃ ॥೫॥**

ಯಾವನ ಪಾದಗಳ ಹೊಡೆತದಿಂದ ಎಲ್ಲ ಲೋಕಗಳೂ ಒಡೆದು ಹೋಗುತ್ತವೆಯೋ ಆ ತಲೆಯ ಆಘಾತದಿಂದ ಬ್ರಹ್ಮಾಂಡ ಭಿತ್ತಿ (ಗೋಡೆ)ಯು ಸೀಳಿ ಹೋಗುತ್ತಿದೆಯೋ, ಭುಜಗಳ ಆಘಾತದಿಂದ ದಿಗಂತಗಳು ವಿಭ್ರಾಂತವಾಗುತ್ತವೆಯೋ, ಅಂತಹ ಭೂತನಾಥನಾದ ಈಶ್ವರನಿಗೆ ನಮಸ್ಕಾರ.

**ಕ್ವಣನ್ನೂಪುರ ಯುಗ್ಮಾಯ ವಿಲಸತ್‌ಕೃತ್ತಿವಾಸಸೇ ।**
**ಫಣೀಂದ್ರ ಮೇಖಲಾಯಾಸ್ತು ಪಶೂನಾಂ ಪತಯೇ ನಮಃ ॥೭॥**

ತಾಂಡವ ಸಮಯದಲ್ಲಿ ಯಾವನ ಪಾದಯುಗ್ಮದಲ್ಲಿ ಕಾಲ್ಗೆಜ್ಜೆಗಳ 'ಝಣ್ ಝಣ್' ಶಬ್ದವು ಕೇಳಿಸುತ್ತದೆಯೋ, ಅಂಥ ಸೊಂಟದಲ್ಲಿ ಚರ್ಮ ವಸ್ತ್ರಧಾರಿಯಾದ, ನಾಗರಾಜನೇ ಉಡುದಾರವಾಗಿ ಉಳ್ಳ ಪಶುಪತಿಗೆ ನಮಸ್ಕಾರ.

**ಕಾಲಕಾಲಾಯ ಸೋಮಾಯ ಯೋಗಿನೇ ಶೂಲ ಪಾಣಯೇ ।**
**ಅಸ್ಥಿ ಭೂಷಾಯ ಶುದ್ಧಾಯ ಜಗತಾಂ ಪತಯೇ ನಮಃ ॥೯॥**

ಕಾಲನಿಗೂ ಕಾಲ, ಉಮಾಪತಿ, ಯೋಗಶಕ್ತಿ ಸಂಪನ್ನ, ಕೈಯಲ್ಲಿ ಶೂಲಧಾರಿ, ಇಂತಹ ಜಗತ್ಪತಿಯಾದ ಈಶ್ವರನಿಗೆ ನಮಸ್ಕಾರ.

**ಪಾತ್ರೇ ಸರ್ವಸ್ಯ ಜಗತೋ ನೇತ್ರೇ ಸರ್ವದಿವೌಕಸಾಂ ।**
**ಗೋತ್ರಾಣಾಂ ಪತಯೇ ತುಭ್ಯಂ ಕ್ಷೇತ್ರಾಣಾಂ ಪತಯೇ ನಮಃ ॥೧೦॥**

ಸಮಸ್ತ ಜಗತ್ತಿನ ಪಾಲಕ, ಎಲ್ಲಾ ದೇವತೆಗಳ ನಾಯಕ, ಪರ್ವತ ಮತ್ತು ಕ್ಷೇತ್ರಗಳ ಅಧಿಪತಿಯಾದ ನಿನಗೆ ನಮಸ್ಕಾರ.

**ಶಂಕರಾಯ ನಮಸ್ತುಭ್ಯಂ ಮಂಗಲಾಯ ನಮೋ ನಮಃ ।**
**ಧನಾನಾಂ ಪತಯೇ ತುಭ್ಯಂ ಅನ್ನಾನಾಂ ಪತಯೇ ನಮಃ ॥೧೧॥**

ಶಂಕರನಿಗೆ ನಮಸ್ಕಾರ. ಮಂಗಳ ಸ್ವರೂಪಿಯಾದ ಶಿವನಿಗೆ ನಮಸ್ಕಾರ. ಧನಪತಿಗೆ, ಅನ್ನಪತಿಗೆ ನಮಸ್ಕಾರ.

**ಆತ್ಮಾಧಿಪತಯೇ ತುಭ್ಯಂ ನಮೋ ಮೀಢುಷ್ಟದಾಯಿನೇ ।**
**ಅಷ್ಟಾಂಗಾಽಯಾತಿಹೃದ್ಯಾಯ ಕ್ಲಿಷ್ಟ ಭಕ್ತೇಷ್ಟದಾಯತೇ ॥೧೨॥**

ಆತ್ಮಾಧಿಪತಯೇ, ಭಕ್ತರ ಎಲ್ಲಾ ಕಾಮನೆಗಳನ್ನೂ ಸುರಿಸುವವನೇ, ಅಷ್ಟಾಂಗಗಳಿಂದ ಕೂಡಿದವನೇ, ಮನೋಹರ ಸ್ವರೂಪಿಯೇ, ಕಷ್ಟಪಡುತ್ತಿರುವ ಭಕ್ತರಿಗೆ ಇಷ್ಟಪ್ರದನೇ ನಿನಗೆ ನಮಸ್ಕಾರ.

**ಇಷ್ಟಿಘ್ನಾಯ ಸುತುಷ್ಟಾಯ ಪುಷ್ಟಾನಾಂ ಪತಯೇ ನಮಃ ।**
**ಪಂಚಭೂತಾದಿ ಪತಯೇ ಕಾಲಾಧಿ ಪತಯೇ ನಮಃ ॥೧೨॥**

ದಕ್ಷಯಜ್ಞನಾಶಕ, ಪರಮಸಂತುಷ್ಟ, ಪಶುಪತಿ, ಪಂಚಭೂತ, ನಿಯಾಮಕ ಕಾಲಾಧಿಪತಿ, ಪರಮೇಶ್ವರ ನಿನಗೆ ನಮಸ್ಕಾರ.

**ನಮ ಆತ್ಮಾಧಿಪತಯೇ ದಿಶಾಂ ಚ ಪತಯೇ ನಮಃ ।**
**ವಿಶ್ವಕರ್ತ್ರೇ ಮಹೇಶಾಯ ವಿಶ್ವಭರ್ತ್ರೇ ಪಿನಾಕಿನೇ ॥೧೪॥**

ಜೀವಾಧೀಶ್ವರ, ದಿಗಧೀಶ್ವರ, ಸಮಸ್ತಜಗದ ಉತ್ಪತ್ತಿ, ಪೋಷಣ ಕರ್ತ, ಪಿನಾಕಪಾಣಿ ಮಹೇಶ ನಿನಗೆ ನಮಸ್ಕಾರ.

**ವಾಮದೇವ ನಮಸ್ತೇಽಸ್ತು ಸದ್ಯೋಜಾತಾಯ ವೈ ನಮಃ ।**
**ಈಶಾನ ತೇ ತತ್ಪುರುಷ ನಮೋ ಘೋರಾಯ ವೈ ಸದಾ ॥೧೫॥**

ಪ್ರಪಂಚ ಸಂಹಾರ ಕರ್ತನೇ, ಅಗ್ನಿ ನೇತ್ರ, ವಿಶ್ವದಲ್ಲಿ ಸನ್ನಿಹಿತರೂಪ, ಈಶಾನ ತತ್ಪುರುಷ, ಅಘೋರ ನಿನಗೆ ಸರ್ವದಾ ನಮಸ್ಕಾರ.

**ವಾಮದೇವ ನಮಸ್ತೇಽಸ್ತು ಸದ್ಯೋಜಾತಾಯ ವೈ ನಮಃ ।**
**ಭೂತಿ ಭೂಷಾಯ ಭಕ್ತಾನಾಂ ಭೀತಿ ಭಂಗ ಪ್ರದಾಯಿನೇ ॥೧೬॥**

ವಾಮದೇವ, ಸದ್ಯೋದಾತ ನಿನಗೆ ನಮಸ್ಕಾರ. ಭಸ್ಮಾಲಂಕಾರ, ಭಕ್ತಭಯನಾಶಕ ನಿನಗೆ ನಮಸ್ಕಾರ.

**ನಮೋ ಭವಾಯ ಭರ್ಗಾಯ ನಮೋ ಭದ್ರಾಯ ಮೀಢುಷೇ ।**
**ಸಹಸ್ರಾಂಬಾಯ ಸಾಂಬಾಯ ಸಹಸ್ರಾಭೀಷವೇ ಬನಮಃ ॥೧೭॥**

ಭವನಿಗೆ, ಭದ್ರನಿಗೆ, ಭಕ್ತಾಭೀಷ್ಟ ಪ್ರದನಿಗೆ ಸಾವಿರಾರು ತಾಯಿಯರಿಗೆ ಸಮನಿಗೆ, ಅಂಭಾಭವಾನಿ ಸಹಿತನಿಗೆ ಸಹಸ್ರ ಸಂಖ್ಯೆಯ ಬಾಣಾದಿಗಳುಳ್ಳವನಿಗೆ ನಮಸ್ಕಾರ.

**ನಮಃ ಸಹಸ್ರಬಾಹವೇ ತುಭ್ಯಂ ಸಹಸ್ರಾಕ್ಷಾಯ ಮೀಢುಷೇ ।**
**ಸುಕಪೋಲಾಯ ಸೋಮಾಯ ಸುಲಲಾಟಾಯ ಸುಭ್ರುವೇ ॥೧೮॥**

ಸಾವಿರ ಕೈಗಳುಳ್ಳ, ಸಾವಿರ ಕಣ್ಣಿನ, ಸುಂದರ ಕಪೋಲದ, ಸುಂದರ ಹಣೆ ಮತ್ತು ಸುಂದರ ಹುಬ್ಬಿನ ಉಮಾಪತಿಗೆ ನಮಸ್ಕಾರ.

**ಸುದೇಹಾಯ ನಮಸ್ತುಭ್ಯಂ ಸುಹೃಷೀಕಾಯ ಮೀಢುಷೇ ।**
**ಭವ ಕ್ಲೇಶ ನಿಮಿತ್ತೋರು ಭಯಚ್ಛೇದ ಕೃತೇ ಸದಾ ॥೧೯॥**

ಸುಂದರ ದೇಹದ, ಭಕ್ತರನ್ನು ಸಂತೋಷಪಡಿಸುವ, ಭಕ್ತಾಭಿಲಷಿತಪ್ರದನಾದ ಸಾಂಸಾರಿಕ ಕ್ಲೇಶದಿಂದ ಉಂಟಾದ ಮಹಾ ಭಯವನ್ನು ಶಾಶ್ವತವಾಗಿ ಪರಿಹರಿಸುವ ಪರಮೇಶನಿಗೆ ನಮಸ್ಕಾರ.

**ನಮಸ್ತುಭ್ಯ ಮಪೋಢಾಯ ಸಹಮಾನಾಯ ಮೀಢುಷೇ ।**
**ವಂದೇಽಹಂ ದೇವ ಮಾನಂದ ಸಂದೋಹಂ ಲಾಸ್ಯ ಸುಂದರಂ ॥೨೦॥**

ಭಕ್ತರ ಮೇಲೆ ಕೃಪಾ ದೃಷ್ಟಿಯನ್ನು ಸುರಿಸುವ ಆನಂದ ರಾಶಿಯಾದ ತಾಂಡವ ನೃತ್ಯದಿಂದ ಸುಂದರನಾದ ಈಶ್ವರನಿಗೆ ನಮಸ್ಕಾರ.

**ಸಮಸ್ತ ಜಗತಾಂ ನಾಥಂ ಸದಸಸ್ಪತಿ ಮದ್ಭುತಂ ।**
**ಸುಜಂಘಂ ಸುಂದರಂ ಕ್ಷೌಮಂ ರಕ್ಷೋ ಭೂತ ಕ್ಷತಿ ಕ್ಷಮಂ ॥೨೧॥**

**ಯಕ್ಷಶ್ರೇಷ್ಠಂ ನಮಾಮೀಶ ಮಕ್ಷರಂ ಪರಮಂ ಪ್ರಭುಮ್ ।**
**ಅರ್ಧಾಲಕಮ ವಸ್ತ್ರಾರ್ಧಂ ಅಸ್ಥುತ್ಪಲದಸ್ರಜಂ ॥೨೨॥**

ಸಮಸ್ತ ಜಗದೊಡೆಯ, ಸಭಾಧಿಪತಿ, ಸುಂದರ ಜಂಘೆಯ, ಸುಂದರ, ನಾರು ಬಟ್ಟೆಯನ್ನುಟ್ಟುವ, ರಾಕ್ಷಸ ಭೂತಗಳನ್ನು ನಾಶಮಾಡಲು ಸಮರ್ಥ, ಕುಬೇರ ಪೂಜಿತ ಅಕ್ಷರ, ಪರಮ ಪ್ರಭು, ಅರ್ಧ ಭಾಗ ಗುಂಗುರು ಕೂದಲು (ಅರ್ಧಭಾಗ ಜಟೆ) ಅರ್ಧ ಭಾಗ ಸುಂದರ ವಸ್ತ್ರ, ಅರ್ಧಭಾಗ ದಿಗಂಬರ ಅರ್ಧಭಾಗ ಎಲುಬಿನ ಮಾಲೆ, ಅರ್ಧಭಾಗ ನೈದಿಲೆ ಹೂವಿನ ಹಾರವುಳ್ಳ ಈಶ್ವರನನ್ನು ನಮಸ್ಕರಿಸುತ್ತೇನೆ.

**ಅರ್ಧ ಪುಂಲಕ್ಷಣಂ ವಂದೇ ಪುರುಷಂ ಕೃಷ್ಣ ಪಿಂಗಲಂ ।**
**ಸಕೃತ್ ಪ್ರಣತ ಸಂಸಾರ ಮಹಾಸಾಗರ ತಾರಕಂ ॥೨೩॥**

ಅರ್ಧಗಂಡಿನ ಲಕ್ಷಣ ಅರ್ಧ ಹೆಣ್ಣಿನಂತೆ ಕಪ್ಪು ಕೆಂಚು ಬಣ್ಣದ. ಒಂದೇ ಬಾರಿ ನಮಿಸಿದವರಿಗೆ ಸಂಸಾರ ಮಹಾ ಸಾಗರವನ್ನು ದಾಟಿಸುವ ಪರಮೇಶ್ವರನನ್ನು ನಮಸ್ಕರಿಸುತ್ತೇನೆ.

**ಪ್ರಣಮಾಮಿ ತಮೀಶಾನಂ ಜಗತಸ್ತಸ್ಥುಷಸ್ಪತಿಂ ।**
**ಧಾತಾರಂ ಜಗತಾಮೀಶಂ ದಾತಾರಂ ಸರ್ವಸಂಪದಾಂ ॥೨೪॥**

ಸ್ಥಾವರ ಜಂಗಮಾಧಿಪತಿಯಾದ, ಲೋಕಸ್ವಾಮಿಯಾದ, ಜಗತ್ತಿನ ಧಾರಣ ಪೋಷಣಗಳನ್ನು ಮಾಡುವ ಸಮಸ್ತ ಸಂಪತ್ತುಗಳನ್ನು ಕೊಡುವ ಪರಮೇಶ್ವರನನ್ನು ನಾನು ವಂದಿಸುತ್ತೇನೆ.

**ನೇತಾರಂ ದ್ಯುಸದಾಂ ವಂದೇ ಜೇತಾರಮಪರಾಜಿತಂ ।**
**ತಂ ತ್ವಾಮಂತಕನೇತಾರಂ ವಂದೇ ಮಂದಾಕಿನೀಧರಂ ॥೨೫॥**

ದೇವತಾನಾಯಕನಾದ, ಜಯಶೀಲನಾದ, ಅಪರಾಜಿತನಾದ, ಯಮನಿಗೂ ನಾಯಕನಾದ ಗಂಗಾಧರ ಪರಮೇಶ್ವರನಿಗೆ ನಮಸ್ಕಾರ.

**ದಧಾತಿ ವಿದಧದ್ ಯೋ ಮಾಂ ಇಮಾನಿ ತ್ರೀಣಿ ವಿಷ್ಟಪಂ ।**
**ಸರ್ವಜ್ಞಂ ಸರ್ವಗಂ ಸರ್ವಂ ಕವಿಂ ವಂದೇ ತಮೀಶ್ವರಂ ॥೨೬॥**

ಯಾವನು ನನ್ನನೂ ಈ ಮೂರು ಲೋಕಗಳನ್ನೂ ರಚಿಸಿ ಧರಿಸಿ ಪೋಷಿಸಿದನೋ, ಸರ್ವಜ್ಞ, ಸರ್ವವ್ಯಾಪಕ, ಕವಿಯಾದ ಈಶ್ವರನನ್ನು ನಾನು ನಮಿಸುತ್ತೇನೆ.

**ಯತಶ್ಚ ಯುಜುಷಾ ಸಾರ್ಧಂ ಋಚಃ ಸಾಮಾನಿ ಜಜ್ಞಿರೇ ।**
**ಭವಂ ತಂ ಸುದೃಶಂ ವಂದೇ ಭೂತ ಭವ್ಯಾ ಭವಂತಿ ಚ ॥೨೭॥**

ಯಾವನಿಂದ ಯಜುರ್ವೇದದೊಡನೆ, ಋಗ್ವೇದ ಸಾಮವೇದಗಳೂ ಹುಟ್ಟಿದುವೋ ಒಳ್ಳೆಯ ದರ್ಶನ ಶಕ್ತಿಯುಳ್ಳ ಭೂತ, ಭವಿಷ್ಯ ವರ್ತಮಾನ ಕಾಲದ ಎಲ್ಲಕ್ಕೂ ಸೃಷ್ಟಿಕರ್ತನಾದ ಈಶ್ವರನನ್ನು ನಾನು ನಮಿಸುತ್ತೇನೆ.

**ತ್ಯಜಂತೀತರ ಕರ್ಮಾಣಿ ಯೋ ವಿಶ್ವಾನಿ ವಿಪಶ್ಯತಿ ।**
**ಹರಂ ಸುರನಿಯಂತಾರಂ ಹರಂತಮಹಮಾನತಃ ॥೨೮॥**

ಪಾಪಗಳು ಯಾವನಿಂದಾಗಿ ಜೀವರನ್ನು ಬಿಟ್ಟು ಹೋಗುತ್ತವೆಯೋ, ಎಲ್ಲರನ್ನೂ ಎಲ್ಲರ ಕರ್ಮಗಳನ್ನು ನೋಡುತ್ತಿರುವ, ದೇವಾಧಿಪತಿಯಾದ, ಪ್ರಳಯಕಾರಿಯಾದ ಹರನಿಗೆ ನಮಸ್ಕಾರ. ಉತ್ತಮ ಜ್ಞಾನಸಂಪನ್ನರಾದ, ಶಾಂತರಾದ ಸನ್ಯಾಸಿಗಳು, ತಮ್ಮ ಹೃದಯಕಮಲದಲ್ಲಿ ಯಾವ ಕಲ್ಯಾಣಮಯನಾದ ಈಶ್ವರನನ್ನು ಉಪಾಸಿಸುತ್ತಾರೋ ಅಂತಹ ಈಶಾನ ದೇವನಿಗೆ ನಮಸ್ಕಾರ.

ಈಶ ನಾನು ಅಜ್ಞಾನಿಯು, ಅಶಿಕ್ಷಿತನು, ಅಸಹಾಯನು, ಅನಾಥನು, ದೀನನು ಆಪದ್‌ಗ್ರಸ್ತನು ಮತ್ತು ದರಿದ್ರನೂ ಆಗಿದ್ದೇನೆ. ದಯೆದೋರಿ ನನ್ನನ್ನು ಕಾಪಾಡು. ನಿನ್ನ ಹೊರತು ಸಿದ್ಧಿಯನ್ನು ಕರುಣಿಸುವ ಮತ್ತಾವ ದೇವತೆಯನ್ನು ನಾನು ಕಾಣೆನು. ಶಂಭೋ!

ರಾಗದ್ವೇಷ ಮದಗಳೆಂಬ ಜ್ವಾಲೆಯಿಂದ ನಾನು ಸುಟ್ಟು ಹೋಗುತ್ತಿದ್ದೇನೆ. ನನ್ನನ್ನು ಕಾಪಾಡು. ಅನೇಕ ನಾಮಧಾರಕನೇ! ನಿನ್ನನ್ನು ಅನೇಕರು ಸ್ತೋತ್ರ ಮಾಡಿದ್ದಾರೆ. ಪರಸ್ತ್ರೀ, ಪರಗೃಹ, ಪರವಸ್ತ್ರ, ಪರಾನ್ನ, ಪರಾಶ್ರಯದಲ್ಲಿರುವ ನನ್ನನ್ನು ಕಾಪಾಡು, ಪ್ರಪಂಚವನ್ನು ಪೋಷಿಸಲು ಬೇಕಾಗುವ ಧನಸಂಪತ್ತನ್ನು ಕೊಟ್ಟು ನನಗೆ ಉತ್ತಮ ವಿದ್ಯೆಯನ್ನು ಕರುಣಿಸು, ದೇವೇಶ! ಅನಿಷ್ಟಗಳು ಸಾವಿರ ಸಂಖ್ಯೆಯಲ್ಲಿ ನನ್ನನ್ನು ಮುತ್ತುತ್ತಿವೆ. ಆದರೆ ಇಷ್ಟ ವಸ್ತುವು ಮಾತ್ರ ನನ್ನ ಹತ್ತಿರ ಸುಳಿಯುವುದೇ ಇಲ್ಲ. ಮಹಾದೇವನೆ! ನನ್ನ ಮಾನಸಿಕ ರೋಗವನ್ನು ನಾಶಮಾಡು. ನೀನೇ ನನ್ನ ಪಾಲಿನ ತಾಯಿ, ತಂದೆ, ತಾತ, ಆಯುಸ್ಸು, ಬುದ್ಧಿ, ಲಕ್ಷ್ಮಿ, ಸಹೋದರ, ಸ್ನೇಹಿತ ಎಲ್ಲವೂ ನೀನೇ, ದೇವೇಶ! ಎಲ್ಲ ಕಾರ್ಯಗಳನ್ನು ಮಾಡಿಸುವ ನೀನೇ ನನ್ನ ರಕ್ಷಕ. ನಾನು ಮಾಡಿದ ದುಷ್ಕರ್ಮಗಳನ್ನು ಕ್ಷಮಿಸಿ ನನ್ನನ್ನು ಕಾಪಾಡು, ಪ್ರಭುತ್ವದಲ್ಲಿ ನಿನಗೆ ಸಮಾನರಿಲ್ಲ. ನೀಚತೆಯಲ್ಲಿ ನನಗೆ ಸಮಾನರಿಲ್ಲ. ದೇವ ಆದರೂ ನಾನು ನಿನ್ನವನು. ನೀನು ನನ್ನವನು. ನನ್ನನ್ನು ಕಾಪಾಡು. ನಿನ್ನ ಸುಂದರ ಮುಖಾರವಿಂದದಲ್ಲಿ ಮಂದಹಾಸವು ಮಿನುಗುತ್ತದೆ. ಧವಳದೇಹಕ್ಕೆ ಹಚ್ಚಿದ ವಿಭೂತಿಯು (ಭಸ್ಮವು) ನಿನ್ನ ಧವಳವರ್ಣವನ್ನು ಮತ್ತಷ್ಟು ಹೆಚ್ಚಿಸುತ್ತಿದೆ.

ನಿನ್ನ ಸುಂದರವಾದ ಶರೀರವು ಬಾಲಸೂರ್ಯನಂತೆ ತೇಜಸ್ವಿಯಾಗಿದ್ದರೂ ಸೌಮ್ಯವಾಗಿದೆ. ನಿನ್ನ ಮುಖವು ಯಾವಾಗಲೂ ಪ್ರಸನ್ನವಾಗಿದೆ. ಮತ್ತು ಶಾಂತವಾಗಿದೆ. ನಾನು ಮನಃ ಪೂರ್ವಕವಾಗಿ ನನ್ನ ದುರ್ಬಲವಾಣಿಯಿಂದ ನಿನ್ನ ಗುಣಗಾನ ಮಾಡುತ್ತೇನೆ. ತಾಂಡವ ನೃತ್ಯವನ್ನು ಮಾಡುತ್ತ, ಭಕ್ತನಾದ ನನ್ನ ಕಡೆಗೆ ಮಂದಹಾಸಭರಿತವಾದ ಮುಖದಿಂದ ಕೃಪಾ ದೃಷ್ಟಿಯನ್ನು ಬೀರುತ್ತ ಇರುವ ಉಮಾಕಾಂತನಾದ ನಿನ್ನನ್ನು ನಾನು ಸಾವಿರಾರು ವರ್ಷ ನೋಡುತ್ತ ಇರಬೇಕು. ಇದೇ ನನಗೆ ಇಷ್ಟವಾದ ವರವು. ಮಹಾಭಾಗ್ಯಶಾಲಿಯಾದ, ಭಕ್ತರಿಗೆ ಭಾಗ್ಯ ಕೊಡುವ ಭಗವಂತನೇ! ನಿನ್ನ ಪ್ರಸಾದದಿಂದ ನಾನು ನೀರೋಗನಾಗಿಯೂ, ವಿದ್ವಾಂಸನಾಗಿಯೂ, ಅನೇಕ ವಿಧದ ಶಾಸ್ತ್ರಗಳನ್ನು ನಿರಂತರ ಶ್ರವಣಮಾಡುತ್ತ ನೂರಾರು ವರ್ಷ ಈ ಭೂಮಿಯಲ್ಲಿ ಬದುಕಿರುವಂತೆ ಅನುಗ್ರಹಿಸು. ಹೇ ಈಶಾನ ದೇವ! ನನ್ನ ಸಂಬಂಧಿಗಳಾದ ಸ್ತ್ರೀಯರು, ಸಹೋದರರು, ಬಂಧುಗಳು ಇವರೆಲ್ಲರೂ ನಿನ್ನ ಅನುಗ್ರಹಕ್ಕೆ ಪಾತ್ರರಾಗಲಿ. ನನ್ನ ಜೊತೆಗೆ ಅವರೆಲ್ಲರೂ ನಿನ್ನ ತಾಂಡವ ನೃತ್ಯವನ್ನು ನೋಡುತ್ತ, ಆ ನೃತ್ಯ ದರ್ಶನದ ಆನಂದಾಮೃತವನ್ನು ಪಾನ ಮಾಡುತ್ತ ನೂರಾರು ವರ್ಷ ಬದುಕಿರಲಿ. ದೇವದೇವ! ಮಹಾದೇವ!ನಾವೆಲ್ಲರೂ ನಮ್ಮ ಇಚ್ಛೆಯಂತೆ, ನಿನ್ನ ಚರಣಾರವಿಂದದಲ್ಲಿ ಭಕ್ತಿಯನ್ನು ಮಾಡುತ್ತ, ನಿನ್ನ ಚರಣಾರವಿಂದದ ಮಾಧುರ್ಯ ಭರಿತವಾದ ಮಕರಂದರಸಪಾನ ಮಾಡುತ್ತ ನೂರಾರು ವರ್ಷಗಳವರೆಗೆ ಬದುಕಿರುವಂತಾಗಲಿ, ಪುನಃ ಪುನಃ ನಾನು ಇದನ್ನೇ ಬೇಡುತ್ತೇನೆ. ಮಹಾದೇವ! ನಾವು ಬೇರೆ ಬೇರೆ ಜನ್ಮಗಳಲ್ಲಿ ಹುಳ, ಹಾವು, ಪಿಶಾಚಗಳಾಗಿ ಹುಟ್ಟಲಿ, ಅಥವಾ ಮತ್ತಿನ್ನಾವ ಜನ್ಮದಲ್ಲಿಯಾದರೂ ಹುಟ್ಟಲಿ, ನೂರಾರು ವರ್ಷಗಳವರೆಗೂ ನಿನ್ನನ್ನು ಮರೆಯದಿರುವಂತಾಗಲಿ. ಈಶ, ಪರಮೇಶ, ದೇವ, ಮಹಾದೇವ, ನಾವು ಸಭೆಯಲ್ಲಿ ನಮ್ಮ ಕಿವಿಗಳಿಂದ ನಿನ್ನ ನೃತ್ಯದ ಹೆಜ್ಜೆಯ ಸದ್ದುಗಳನ್ನೂ, ವಾದ್ಯ ಘೋಷಗಳನ್ನೂ, ನಿನ್ನ ಸುಮಧುರ ಕಂಠಧ್ವನಿಯನ್ನೂ, ನೂರಾರು ವರ್ಷಗಳವರೆಗೆ ನಿರಂತರ ಕೇಳುವಂತಾಗಲಿ. ಸ್ಮರಣ ಮಾತ್ರದಿಂದ ಸಂಸಾರ ಬಂಧನವನ್ನು ನಾಶಗೊಳಿಸುವ ನಿನ್ನ ದಿವ್ಯನಾಮವನ್ನು ನಾವು ನೂರಾರು ವರ್ಷ ಹಾಡುತ್ತ ಇರುವಂತೆ ಅನುಗ್ರಹಿಸು. ''ನಿತ್ಯ

ತರುಣನಾದ ವಿಶ್ವಾಧಿಪತಿಯಾದ, ತ್ರಿಕಾಲದರ್ಶಿಯಾದ, ಸರ್ವಜ್ಞನಾದ, ಭಗವಂತನಾದ ಶಿವನನ್ನು ನಾನು ಎಂದು ನೋಡಿಯೇನು? ನನ್ನಲ್ಲಿ ಅನಂತರ ಪಾಪಗಳು ತುಂಬಿಕೊಂಡಿವೆ. ನಾನು ಲೇಶ ಮಾತ್ರವೂ ಪುಣ್ಯಸಂಪಾದನೆ ಮಾಡಿಲ್ಲ. ನನ್ನ ಬುದ್ಧಿಯು ಅತ್ಯಂತ ನೀಚವಾಗಿದೆ. ಇಂತಹ ಅಧಮಾಧಮನಾದ ನನ್ನನ್ನು ಕೈಹಿಡಿದು ಪರಮದಯಾಮಯನಾದ ಮಹೇಶ್ವರನು ಅನುಗ್ರಹಿಸಿ ನನ್ನನ್ನು ತನ್ನ ಸೇವಕನನ್ನಾಗಿ ಎಂದಾದರೂ ಮಾಡಿಕೊಳ್ಳುವನೇ? ನನ್ನನ್ನು ಕೈ ಹಿಡಿದೆತ್ತಿ ಉದ್ಧರಿಸಿ ಸ್ವೀಕರಿಸುವನೇ?'' ಈ ಮನೋರಥಗಳಲ್ಲಿ ನಾನು ಎಂದೆಂದೂ ಮುಳುಗಿಯೇ ಇರುತ್ತೇನೆ. ಪರಮೇಶ್ವರನ ಪರಮಾದ್ಭುತವಾದ ತಾಂಡವ ನೃತ್ಯ ಸಮಯದಲ್ಲಿ ಗಾನ ಮಾಡುವ ಗಾಯಕರೇ! ನೀವು ಹಾಡಿರಿ. ಪರಮೇಶ್ವರನ ತಾಂಡವ ನೃತ್ಯಕ್ಕೆ ಸರಿಯಾದ ಗೀತವನ್ನು ಹೊಂದಿಸಿ ಹಾಡಿರಿ. ನಿಮಗೆ ರಾಗ, ತಾಳ, ಗೀತಗಳ ಪರಿಜ್ಞಾನವು ಬೇಕಾಗಿದ್ದರೆ, ಧನಪತಿ ಮಿತ್ರನಾದ, ಅನಿಮಿತ್ತ ಬಂಧುವಾದ ಉಮಾರಮಣನನ್ನೇ ಪ್ರಾರ್ಥಿಸಿರಿ. ಅವನು ಅನುಗ್ರಹಿಸಿದ ಕಲಾ ಪ್ರೌಢಿಮೆಯಿಂದ ಅವನ ಗುಣಗಾನವನ್ನೇ ಮಾಡಿರಿ. ನನ್ನ ಗೆಳತಿಯಾದ ಜಿಹ್ವೆಯೇ! ನಿನಗೆ ಮಂಗಳವಾಗಲಿ. ನೀನು ವಿದ್ಯಾಪತಿಯಾದ, ವಿದ್ಯಾದಾತೃವಾದ ಉಮಾರಮಣನ ಮಂಗಳ ಮಹಿಮೆಯನ್ನು ಉಚ್ಚಸ್ವರದಿಂದ ಸ್ತುತಿಸು.

ಪರಮೇಶ್ವರನಿಗೆ ನಮಸ್ಕಾರಗಳು. ದೇವತೆಗಳಿಗೆಲ್ಲಾ ಸ್ವಾಮಿಯಾದ, ದೇವತೆಗಳಿಗೆಲ್ಲಾ ಅಧಿಪತಿಯಾದ, ಇಂದ್ರನಿಗೂ ಸ್ವಾಮಿಯಾದ, ಅಂಬಿಕಾ ಪತಿಯಾದ, ಪರಮೇಶ್ವರನಿಗೆ ನಮಸ್ಕಾರ. ಪರಮೇಶ್ವರ! ನಿನಗೆ ಅತ್ಯಂತ ಪ್ರೀತಿಪಾತ್ರರಾದ ನಿನ್ನ ಪರಿವಾರವಾಗಿರುವ ಗಣೇಶಾದಿಗಳಿಗೂ ನಾನು ನಿರಂತರ ನಮಸ್ಕಾರ ಮಾಡುತ್ತಿರುತ್ತೇನೆ.

ಪ್ರಣತ ಜನ ಪೀಡಾ ಪರಿಹಾರಕ! ತ್ರಿಕಾಲದರ್ಶಿ, ಜ್ಞಾನಿಗಳಲ್ಲಿಯೂ, ಮಹಾಜ್ಞಾನಿ! ವಿದ್ವಾಂಸರಲ್ಲಿ ಮಹಾವಿದ್ವಾಂಸನಾದ ಸರ್ವಶ್ರೇಷ್ಠನಾದ ಉತ್ತಮ ಕೀರ್ತಿ ಸಂಪನ್ನನಾದ ಗಣೇಶನೆ, ನಾನು ನಿನ್ನನ್ನು ಸರ್ವದಾ ನಮಸ್ಕರಿಸುತ್ತೇನೆ. ದೇವತೆಗಳು ತಮ್ಮ ಶತ್ರುಗಳೊಡನೆ ಯುದ್ಧವು ಬಂದೊದಗಿದಾಗ ಯಾವ ಸುಬ್ರಹ್ಮಮಣ್ಯ ಸ್ವಾಮಿಯನ್ನು ಆಹ್ವಾನಿಸಿ, ತಮ್ಮ ಸೇನಾಪತಿಯನ್ನಾಗಿಟ್ಟುಕೊಂಡು ಶತ್ರುಗಳನ್ನು ಜಯಿಸಿ ವಿಜಯವನ್ನು ಪಡೆಯುತ್ತಾರೋ, ಅಂತಹ ಸಚ್ಚಿದಾನಂದ ಸ್ವರೂಪಿಯಾದ, ಸುಬ್ರಹ್ಮಮಣ್ಯಸ್ವಾಮಿಗೆ, ಸ್ಕಂದನಿಗೆ, ಕುಮಾರಸ್ವಾಮಿಗೆ ನನ್ನ ಅನಂತರ ನಮಸ್ಕಾರಗಳು. ಕಲ್ಯಾಣಮಯಿ ಜಗದಂಬಿಕೇ! ನಿನಗೆ ನಮಸ್ಕಾರಗಳು. ಶಿವನ ಅರ್ಧಾಂಗಿ,! ಶಿವ ಪ್ರಿಯೇ! ನಿನಗೆ ನಮಸ್ಕಾರಗಳು. ಗುಣರಾಶಿಸಂಪನ್ನಳೂ, ಪರಮಶಾಂತಿಮತಿಯೂ, ಯಾವಾಗಲೂ ಶಂಕರನ ವಾಮ ಭಾಗದಲ್ಲಿ ವಿರಾಜಿಸುತ್ತಿರುವವಳೂ ಆದ, ಎಲ್ಲಾ ಭೂವನಗಳನ್ನೂ ಯಾವಾಗಲೂ ಕರತಲಾಮಲಕದಂತೆ ನೋಡುತ್ತಿರುವ ಮಹಾಮಾತೆ ಪಾರ್ವತೀ ದೇವಿಯೇ ನಿನಗೆ ಅನಂತಾನಂತ ನಮನಗಳು. ದೀನ ಜನ ರಕ್ಷಣೆಯೇ ಮನೋರಂಜನ ಕಾರ್ಯವಾಗಿ ಉಳ್ಳ ಅಂಬಿಕಯೇ! ಮಾನಪ್ರದೇ! ಆನಂದಪ್ರದೇ! ವಿದ್ಯಾನಾಯಿಕೇ ವಾಣೇನಾಯಿಕೇ! ಸಿದ್ಧಿಸ್ವಾಮಿನಿ! ಪಾರ್ವತಿದೇವಿ! ನಿನಗೆ ನಮಸ್ಕಾರಗಳು. ಭವಾನಿ! ನೀನು ಸಂಸಾರಪಾಪ ನಿವಾರಕವಾದ ಮಹಾ ಔಷಧ ಸ್ವರೂಪಳು. ನಾವು ಅನುಭವಿಸುವ ಅನ್ನ, ವಸ್ತ್ರ, ಅಲಂಕಾರಗಳೆಲ್ಲ ನಿನ್ನ ಪ್ರಸಾದಗಳು. ನಿನ್ನ ಅನುಗ್ರಹದಿಂದ ಬಂದು ಒದಗಿದವುಗಳು. ಪರಮಶಿವೆ! ಸರ್ವದಾ ಅಕುಂಠಿತವಾದ ಶ್ರೇಷ್ಠವಾದ ಬುದ್ಧಿಯನ್ನು ನನಗೆ ಕರುಣಿಸು. ಯಾವ ಉತ್ತಮ ಬುದ್ಧಿಯಿಂದ ನಾನು ಸಮಸ್ತಪಾಪಗಳನ್ನು ದಾಟುವೆನೋ ಅಂತಹ

ಉತ್ತಮ ಬುದ್ಧಿಯನ್ನು ಕುರಣಿಸು. ಶಿವೇ! ಸರ್ವಾರ್ಥ ಸಾಧಿಕೇ! ನಿನ್ನನ್ನು ನಾನು ಹೇಗೆ ಹೊಗಳಲಿ? ನಿನ್ನನ್ನು ಯಾವುದಕ್ಕೆ ಹೋಲಿಸಲಿ? ಹೇಗೆ ಹೋಲಿಸಲಿ? ನೀನು ಉಮಾಪ್ರತೀತಳು. ಜಗತ್ತಿನ ಸೃಷ್ಟಿ ಸ್ಥಿತ್ಯಾದಿಗಳು ನಿನ್ನ ಅಧೀನದಲ್ಲಿವೆ. ಜಗತ್ತು ನಿನ್ನ ಆಟದ ಗೊಂಬೆಯಾಗಿದೆ. ಕಲ್ಯಾಣಮಯನಾದ ಸಮಸ್ತ ಶಕ್ತಿ ಸಂಪನ್ನನಾದ ಪರಮೇಶ್ವರನು ನಿನ್ನ ಪತಿಯಾಗಿದ್ದಾನೆ. ಭಗವಂತನಾದ ವಿಷ್ಣುವೂ ನಿನ್ನಲ್ಲಿ ಪರಮಸ್ನೇಹವನ್ನು ತೋರಿಸುತ್ತಾನೆ. ಲಕ್ಷ್ಮೀ ಸರಸ್ವತೀ ಶಚೀ ಮುಂತಾದವರು ನಿನ್ನ ಸಖಿಯರಾಗಿದ್ದಾರೆ. ಸ್ವಯಂ ಸುವರ್ಣ ಮುಕ್ತಾ ಮುಂತಾದ ಸಂಪದಭಿಮಾನಿಯಾದ ದೇವದೇವೇಶ್ವರಿ! ನಿನ್ನ ಪಾದಪದ್ಮಗಳಿಗೆ ನಿನ್ನ ಭಕ್ತನ ಅನಂತಾನಂತ ನಮಸ್ಕಾರಗಳು.

ಯಾವ ಭಕ್ತನು ಪ್ರತಿದಿನ ಪ್ರಾತಃಕಾಲದಲ್ಲಿ ಎದ್ದು ಈ ಸ್ತೋತ್ರದ ಒಂದು ಶ್ಲೋಕವನ್ನೋ ಅಥವಾ ಅರ್ಧಶ್ಲೋಕ, ಒಂದು ಪಾದ, (ಕಾಲು ಭಾಗ ಶ್ಲೋಕ)ವನ್ನಾಗಲೀ ಹೇಳಿ ಅದರ ಅರ್ಥಾನುಸಂಧಾನ ಮಾಡುತ್ತಾನೋ ಮನಸ್ಸಿನಲ್ಲಿ ಅದನ್ನು ಧರಿಸುತ್ತಾನೋ ಅವನು ಶಿವಲೋಕವನ್ನು ಪಡೆಯುತ್ತಾನೆ. ಮೋಹಿನಿಯೇ! ಭಗವಂತನಾದ ಶಿವನು ತಾಂಡವ ಮಾಡಿದ ಸ್ಥಳವು ಅತ್ಯಂತ ಪವಿತ್ರವಾಯಿತು. ಅಲ್ಲಿಯ ತೀರ್ಥದಲ್ಲಿ ಸ್ನಾನ ಮಾಡುವುದರಿಂದಲೇ ಮಾನವನು ಮುಕ್ತನಾಗುತ್ತಾನೆ. ಯಾವನು ಅಲ್ಲಿ ಪಿತೃಗಳಿಗೆ ಶ್ರಾದ್ಧ ಮಾಡುತ್ತಾನೋ ಅವನ ಪಿತೃಗಳೆಲ್ಲರೂ ಸ್ವರ್ಗವನ್ನು ಪಡೆಯುತ್ತಾರೆ. ಆ ತೀರ್ಥದಲ್ಲಿ ವೇದಜ್ಞರಾದ ಭಗವಂತನ ಭಕ್ತರಾದ ಬ್ರಾಹ್ಮಣರಿಗೆ ಗೋವು, ಸುವರ್ಣ, ಭೂಮಿ, ಶಯ್ಯಾ, ವಸ್ತ್ರ, ಛತ್ರಿ, ಅನ್ನ, ಪಾನೀಯ ಇವುಗಳಲ್ಲಿ ಯಾವುದಾದರೂ ಒಂದನ್ನಾದರೂ ಯಾವನು ಕೊಡುತ್ತಾನೋ ಅವನು ಕೊಟ್ಟ ದಾನವು ಅಕ್ಷಯವಾಗುತ್ತದೆ. ಆ ದಾನದ ಫಲವು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ.

## ನಾರದ ಪುರಾಣದಲ್ಲಿ ಬರುವ ಕೆಲವು ಅವಶ್ಯ ಪಠನೀಯವಾದ ಹಿತನುಡಿಗಳು - ಸುಭಾಷಿತ ಪದ್ಯಗಳು

**''ನಾಸ್ತಿ ಗಂಗಾ ಸಮಂ ತೀರ್ಥಂ ನಾಸ್ತಿ ಮಾತೃ ಸಮೋ ಗುರುಃ ।**
**ನಾಸ್ತಿ ವಿಷ್ಣು ಸಮಂ ದೈವಂ ನಾಸ್ತಿ ತತ್ವಂ ಗುರೋಸ್ಸಮಂ ॥**

ಗಂಗಾನದಿಗೆ ಸಮಾನವಾದ ತೀರ್ಥವು ಜಗತ್ತಿನಲ್ಲಿ ಬೇರೆ ಇಲ್ಲ. ತಾಯಿಗೆ ಸಮಾನವಾದ ಗುರು ಇಲ್ಲ. ವಿಷ್ಣುವಿಗೆ ಸಮನಾದ ಬೇರೆ ದೇವರಿಲ್ಲ. ಗುರುವಿಗೆ ಸಮವಾದ ತತ್ತ್ವವಿಲ್ಲ.

**''ನಾಸ್ತಿ ಶಾಂತಿ ಸಮೋ ಬಂಧು ರ್ನಾಸ್ತಿ ಸತ್ಯಾತ್ ಪರಂ ತಪಃ ।**
**ನಾಸ್ತಿ ಮೋಕ್ಷಾತ್ ಪರೋ ಲಾಭೋ ನಾಸ್ತಿ ಗಂಗಾ ಸಮಾ ನದೀ॥**

ಶಾಂತಿಯಂಥ ಬಾಂಧವನಿಲ್ಲ. ಸತ್ಯಕ್ಕಿಂತ ಮಿಗಿಲಾದ ತಪಸ್ಸಿಲ್ಲ. ಮೋಕ್ಷಕ್ಕಿಂತ ಹೆಚ್ಚಿನ ಲಾಭವಿಲ್ಲ. ಗಂಗೆಗೆ ಸಮವಾದ ನದಿಯಿಲ್ಲ.

**''ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।**
**ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಮ್ ॥**

ತಾರುಣ್ಯ, ಐಶ್ವರ್ಯ, ಅಧಿಕಾರ ಮತ್ತು ಅವಿವೇಕ ಈ ನಾಲ್ಕರಲ್ಲಿ ಒಂದೊಂದು ಅನರ್ಥವನ್ನು ಉಂಟು ಮಾಡುತ್ತವೆ. ನಾಲ್ಕೂ ಒಂದೆಡೆ ಕೂಡಿದರಂತೂ ಕೇಳುವುದೇನು!

''ನಾಪಕೀರ್ತಿ ಸಮೋ ಮೃತ್ಯು ರ್ನಾಸ್ತಿ ಕ್ರೋಧ ಸಮೋ ರಿಪುಃ ।
ನಾಸ್ತಿ ನಿಂದಾ ಸಮಂ ಪಾಪಂ ನಾಸ್ತಿ ಮೋಹ ಸಮೋ ಭಯಃ ॥

ಅಪಕೀರ್ತಿಗೆ ಸಮವಾದ ಸಾವುವಿಲ್ಲ. ಸಿಟ್ಟಿಗೆ ಸಮಾನವಾದ ವೈರಿ ಇಲ್ಲ. ಪರನಿಂದೆಯಂಥ ಪಾಪವಿಲ್ಲ. ಮೋಹಕ್ಕೆ ಸಮವಾದ ಭಯವಿಲ್ಲ.

''ನಾಸ್ತ್ಯಸೂಯಾ ಸಮಾಽಕೀರ್ತಿ ರ್ನಾಸ್ತಿ ಕಾಮ ಸಮೋಽನಲಃ
ನಾಸ್ತಿ ರಾಗ ಸಮಃ ಪಾಶೋ ನಾಸ್ತಿ ಸಂಗ ಸಮೋ ವಿಷಃ

ಅಸೂಯೆಗೆ ಸಮನಾದ ಅಪಕೀರ್ತಿ ಇಲ್ಲ. ಕಾಮಕ್ಕೆ ಸಮವಾದ ಬೆಂಕಿ ಇಲ್ಲ. ಪ್ರೇಮ ಅನುರಾಗಗಳಿಗೆ ಸಮವಾದ ಪಾಶವಿಲ್ಲ. ವಿಷಯಗಳಲ್ಲಿ ಸಂಗ ಅಥವಾ ಆಸಕ್ತಿಗೆ ಸಮವಾದ ವಿಷವಿಲ್ಲ.

''ಮಹಾ ಪಾತಕ ಯುಕ್ತಾ ವಾ ಯುಕ್ತಾ ವಾ ಚೋಪಪಾತಕೈಃ
ಪರಂ ಪದಂ ಪ್ರಯಾಂತ್ಯೇವ ಮಹದ್ಭಿರವಲೋಕಿತಾಃ ॥

ಮಹಾಪಾತಕ ಮತ್ತು ಉಪಪಾತಕಗಳಿಂದ ಕೂಡಿದ ಪಾಪಿಷ್ಠರೂ ಕೂಡ ದೊಡ್ಡವರು ಕಣ್ಣೆತ್ತಿ ನೋಡಿದರೆ ಉತ್ತಮವಾದ ಸದ್ಗತಿಯನ್ನು ಹೊಂದುತ್ತಾರೆ. ಸಾಧು ಸಜ್ಜನರ ದೃಷ್ಟಿ ಪಾತಮಾತ್ರದಿಂದಲೇ ಮನುಷ್ಯರ ಮಹಾಪಾಪಗಳೆಲ್ಲ ಪರಿಹಾರವಾಗುತ್ತವೆ.

''ಐಶ್ವರ್ಯ ಮದ ಮತ್ತಾನಾಂ ಕ್ಷುಧಿತಾನಾಂ ಚ ಕಾಮಿನಾಂ
ಅಹಂಕಾರ ವಿಮೂಢಾನಾಂ ವಿವೇಕೋ ನೈವ ಜಾಯತೇ ॥

ಸಂಪತ್ತಿನ ಗರ್ವದಿಂದ ಮತ್ತಾರಾದವರಿಗೂ, ಹಸಿವೆಯಿಂದ ಕಂಗಾಲಾದವರಿಗೂ, ಕಾಮಾಂಧರಾದವರಿಗೂ, ಅಹಂಕಾರದಿಂದ ಮೂಢರಾದವರಿಗೂ ವಿವೇಕವು ಉಳಿಯುವುದಿಲ್ಲ.

''ಚಂದ್ರ ಹೀನಾ ಯಥಾ ರಾತ್ರಿಃ ಪದ್ಮ ಹೀನಂ ಯಥಾ ಸರಃ
ಪತಿ ಹೀನಾ ಯಥಾ ನಾರೀ ಪಿತೃಹೀನ ಸ್ತಥಾ ಶಿಶುಃ ॥

ಚಂದ್ರನಿಲ್ಲದ ರಾತ್ರಿ, ಕಮಲವಿಲ್ಲದ ಸರೋವರ, ಗಂಡನಿಲ್ಲದ ಹೆಣ್ಣು ಹೇಗೆ ಶೋಭಿಸುವುದಿಲ್ಲವೋ ಹಾಗೆ, ತಂದೆಯಿಲ್ಲದೆ ಮಗನೂ ಶೋಭಿಸುವುದಿಲ್ಲ.

''ಸ್ವಾತ್ಮಜೇ ಚಾನ್ಯ ಪುತ್ರೇ ವಾ ಯ ಸ್ಸಮತ್ವೇನ ವರ್ತತೇ ।
ನ ತಸ್ಯ ಪುತ್ರಶೋಕಃ ಸ್ಯಾದೇಷ ಧರ್ಮಸ್ಸನಾತನಃ ॥

ತನ್ನ ಮಕ್ಕಳಂತೆಯೇ ಹೆರವರ ಮಕ್ಕಳನ್ನೂ ನೋಡುವ ಮನುಷ್ಯನಿಗೆ ಎಂದಿಗೂ ಪುತ್ರಶೋಕವು ಉಂಟಾಗುವುದ್ದಿಲ. ಎಲ್ಲ ಪುತ್ರರನ್ನೂ ತನ್ನ ಪುತ್ರರಂತೆ ಪ್ರೀತಿಯಿಂದ ಕಾಣುವುದೇ ಪರಮ ಶ್ರೇಷ್ಠವಾದ ಧರ್ಮ ಎನಿಸುತ್ತದೆ.

''ಹರಿರ್ಹರತಿ ಪಾಪಾನಿ ದುಷ್ಟ ಚಿತ್ತೈರಪಿ ಸ್ಮೃತಃ
ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ॥

ದುಷ್ಟವಾದ ಮನಸ್ಸುಳ್ಳ ಪಾಪಿಗಳು ಸ್ಮರಣ ಮಾಡಿದರೂ ಶ್ರೀ ಹರಿಯ ನಾಮವು ಪಾಪಗಳನ್ನೆಲ್ಲ ಪರಿಹರಿಸಿ ಬಿಡುತ್ತದೆ. ಇಚ್ಛೆಯಿಲ್ಲದೆ ಮುಟ್ಟಿದ್ದರೂ ಬೆಂಕಿಯು ಸುಡುವದಿಲ್ಲವೇ!

**"ಜಿಹ್ವಾಗ್ರೇ ವಸತೇ ಯಸ್ಯ ಹರಿರಿತ್ಯಕ್ಷರದ್ವಯಮ್ ।**
**ಸ ವಿಷ್ಣುಲೋಕಮಾಪ್ನೋತಿ ಪುನರಾವೃತ್ತಿ ದುರ್ಲಭಮ್ ।**

'ಹರಿ' ಎಂಬ ಎರಡು ಅಕ್ಷರಗಳು ಯಾವನ ನಾಲಿಗೆಯ ಮೇಲೆ ನಲಿದಾಡುತ್ತಿವೆಯೋ ಅವನು ವಿಷ್ಣುವಿನ ಲೋಕವನ್ನು ಹೊಂದುತ್ತಾನೆ. ಅಲ್ಲಿಂದ ತಿರುಗಿ ಈ ಸಂಸಾರಕ್ಕೆ ಎಂದೂ ಮರಳಿ ಬರುವದಿಲ್ಲ.

**"ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ**
**ಮಹಾಪಾತಕಿನಸ್ತ್ವೇತೇ ತತ್ಸಂಸರ್ಗೀ ಚ ಪಂಚಮಃ ॥**

ಬ್ರಹ್ಮಹತ್ಯೆ, ಸೆರೆ ಕುಡಿಯುವುದು, ಕಳವು, ಗುರುವಿನ ಹೆಂಡತಿಯ ಸಂಭೋಗ ಇವು ನಾಲ್ಕು ಮಹಾಪಾತಕಗಳು ಎನಿಸುತ್ತವೆ. ಈ ನಾಲ್ಕು ವಿಧ ಪಾಪಮಾಡಿದ ಮಹಾಪಾಪಿಷ್ಠರ ಜೊತೆಗೆ ಸ್ನೇಹ ಸಂಪರ್ಕ ಬೆಳೆಸಿದರೆ ಅದು ಐದನೆಯದಾದ ಪಂಚಮ ಮಹಾಪಾಪ ಎನಿಸುವದು.

**"ನ್ಯಾಯೇ ಚ ಧರ್ಮಶಿಕ್ಷಾಯಾಂ ಪಕ್ಷಪಾತಂ ಕರೋತಿ ಯಃ**
**ನ ತಸ್ಯ ನಿಷ್ಕೃತಿರ್ಭೂಯಃ ಪ್ರಾಯಶ್ಚಿತ್ತಾಯುತೈರಪಿ ॥**

ಯಾವನು ನ್ಯಾಯ ನೀತಿಗಳ ವಿಷಯದಲ್ಲಿ ಧರ್ಮದ ಅನುಶಾಸನವನ್ನು ತಿಳಿಸಿ ಹೇಳುವಲ್ಲಿಯೂ ಪಕ್ಷಪಾತ ಮಾಡುವನೋ ಅವನು ಹತ್ತು ಸಾವಿರ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೂ ಶುದ್ಧನಾಗಲಾರ.

**"ಯಚ್ಚಾನ್ಯಸ್ಯ ವಿನಾಶಾರ್ಥಂ ಭಜನಂ ಶ್ರೀಪತೇರ್ನೃಪ ।**
**ಸಾ ತಾಮಸ್ಯಧಮಾ ಭಕ್ತಿಃ ಖಲ ಭಾವ ಧರಾ ಯತಃ ॥**

ಇನ್ನೊಬ್ಬರನ್ನು ನಾಶಪಡಿಸಲಿಕ್ಕಾಗಿ ಯಾರು ಶ್ರೀ ಹರಿಯಲ್ಲಿ ಭಕ್ತಿ ಧ್ಯಾನ ಅಥವಾ ತಪಸ್ಸನ್ನು ಮಾಡುತ್ತಾನೋ ಅದು ತಾಮಸ ಭಕ್ತಿ. ಅಥವಾ ತಾಮಸ ತಪಸ್ಸು ಎನಿಸುತ್ತದೆ. ಅದು ಅಧಮ ಭಕ್ತಿ. ಅಧಮ ತಪಸ್ಸು. ಯಾಕೆಂದರೆ ಅದು ದುಷ್ಟ ಬುದ್ಧಿಯಿಂದ ಒಡಗೂಡಿರುತ್ತದೆ.

**"ಧರ್ಮಾಧರ್ಮ ವಿವೇಕೇನ ವೇದ ಮಾರ್ಗಾನುಸಾರಿಣಃ ।**
**ಸರ್ವಲೋಕ ಹಿತಾಸಕ್ತಾಃ ಸಾಧವಃ ಪರಿಕೀರ್ತಿತಾಃ ॥**

ಧರ್ಮ ಯಾವುದು ಅಧರ್ಮ ಯಾವುದು ಎಂಬುದನ್ನು ಚೆನ್ನಾಗಿ ಅರಿತುಕೊಂಡು ವೇದೋಕ್ತವಾದ ಧರ್ಮಮಾರ್ಗವನ್ನು ಅನುಸರಣ ಮಾಡುವವರೂ, ಮುಖ್ಯವಾಗಿ ಎಲ್ಲ ಜನರಿಗೂ ಹಿತವನ್ನು ಉಂಟು ಮಾಡುವಲ್ಲಿ ಆಸಕ್ತರಾದವರೂ ಸಜ್ಜನರೆಂದು ಕರೆಯಲ್ಪಡುತ್ತಾರೆ. ಮತ್ತು ಎಲ್ಲೆಡೆಯಲ್ಲಿಯೂ ಗೌರವಿಸಲ್ಪಡುತ್ತಾರೆ.

**"ನಾಸ್ತಿ ಕ್ಷಮಾಸಮಾ ಮಾತಾ ನಾಸ್ತಿ ಕೀರ್ತಿಸಮಂ ಧನಮ್ ।**
**ನಾಸ್ತಿ ಜ್ಞಾನಸಮೋ ಲಾಭೋ ನ ಚ ಧರ್ಮಸಮಃ ಪಿತಾ ॥**

ಕ್ಷಮಾಗುಣದಂಥ ತಾಯಿಯಿಲ್ಲ. ಕೀರ್ತಿಗೆ ಸಮನಾದ ಧನವಿಲ್ಲ. ಜ್ಞಾನಕ್ಕೆ ಸಮನಾದ ಲಾಭವಿಲ್ಲ. ಧರ್ಮಕ್ಕೆ ಸಮನಾದ ತಂದೆಯಿಲ್ಲ.

"ನಾಸ್ತಿ ಗಂಗಾಸಮಂ ತೀರ್ಥಂ ನಾಸ್ತಿ ಮಾತೃಸಮೋ ಗುರುಃ ।
ನ ವಿವೇಕ ಸಮೋ ಬಂಧು ರ್ನೈಕಾದಶ್ಯಾಃ ಪರಂ ವ್ರತಮ್ ॥

ಗಂಗೆಗೆ ಸಮವಾದ ತೀರ್ಥವಿಲ್ಲ. ತಾಯಿಗೆ ಸಮವಾದ ಗುರು ಇಲ್ಲ. ವಿವೇಕಕ್ಕೆ ಸಮವಾದ ಬಂಧು ಇಲ್ಲ. ಏಕಾದಶಿಗೆ ಮಿಗಿಲಾದ ವ್ರತವಿಲ್ಲ.

"ಶೌಚೇ ಯತ್ನಃ ಸದಾ ಕಾರ್ಯಃ ಶೌಚ ಮೂಲೋ ದ್ವಿಜಃ ಸ್ಮೃತಃ ।
ಶೌಚಾಚಾರ ವಿಹೀನಸ್ಯ ಸಮಸ್ತಂ ಕರ್ಮ ನಿಷ್ಫಲಮ್ ॥

ಶೌಚ ಎಂದರೆ ಮಡಿ, ಶುಚಿಯಾಗಿರುವುದು. ಅರ್ಥಾತ್ ಶುದ್ಧನಾಗಿರುವುದು. ಹೀಗೆ ಕಾಯಾ ವಾಚಾ ಮನಸಾ ಶುದ್ಧನಾಗಿರುವದೇ ಶುಚಿರ್ಭೂತತನ ಎನಿಸುವದು. ಇಂಥ ಆಚಾರ ಶುದ್ಧಿ ಇಲ್ಲದ ಅನಾಚಾರಿ ಮನುಷ್ಯನು ಮಾಡಿದ ಕರ್ಮಗಳೆಲ್ಲವೂ ನಿಷ್ಫಲವಾಗುತ್ತವೆ.

"ಯಸ್ತು ಸಂಧ್ಯಾದಿ ಕರ್ಮಾಣಿ ಕೂಟ ಯುಕ್ತಿ ವಿಶಾರದಃ
ಪರಿತ್ಯಜತಿ ತಂ ವಿದ್ಯಾತ್ ಮಹಾ ಪಾತಕಿನಾಂ ವರಮ್ ॥

ಯಾವನು ಕಪಟ ಯುಕ್ತಿ, ಕೂಟ ಸಾಕ್ಷಿ ಮುಂತಾದ ಲೌಕಿಕವಾದ ದುರ್ವ್ಯಾಪಾರ ಗಳಲ್ಲಿಯೇ ಆಸಕ್ತನಾಗಿ ಸ್ನಾನ ಸಂಧ್ಯಾ ದೇವ ಪೂಜಾದಿಗಳನ್ನು ಬಿಟ್ಟು ಬಿಡುವನೋ ಅವನು ಮಹಾ ಪಾಪಿಗಳಲ್ಲಿ ಅಗ್ರೇಸರನೆಂದು ತಿಳಿಯಬೇಕು.

"ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿ ನಿವರ್ತತೇ ।
ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯ ಮಾದಾಯ ಗಚ್ಛತಿ ॥

ಅತಿಥಿಯು ಯಾರ ಮನೆಗೆ ಬಂದು ನಿರಾಶನಾಗಿ ಮರಳಿ ಹೋಗುತ್ತಾನೋ ಅವನು ತನ್ನ ಪಾಪಗಳನ್ನೆಲ್ಲ ಆ ಮನೆಯ ಒಡೆಯನಿಗೆ ಕೊಟ್ಟು ಅವನ ಪುಣ್ಯವನ್ನೆಲ್ಲ, ತಾನು ಸೆಳೆದುಕೊಂಡು ಹೋಗುತ್ತಾನೆ. ಆದುದರಿಂದ ಮನೆಗೆ ಬಂದ ಅತಿಥಿಗಳನ್ನು ನಿರಾಶರನ್ನಾಗಿ ಮಾಡಿ ಬರಿಗೈಯಿಂದ ಎಂದೂ ತಿರುಗಿ ಕಳಿಸಬಾರದು.

ಅಜ್ಞಾತ ಗೋತ್ರನಾಮಾನಂ ಅನ್ಯ ಗ್ರಾಮಾದುಪಾಗತಂ ।
ವಿಪಶ್ಚಿತೋ ತಿಥಿಂ ಪ್ರಾಹು ರ್ವಿಷ್ಣುವತ್ ತಂ ಪ್ರಪೂಜಯೇತ್ ॥

ಹೆಸರು ಗೋತ್ರ ಗೊತ್ತಿಲ್ಲದೆ ಬೇರೆ ಊರಿನಿಂದ ಬಂದ ಅಪರಿಚಿತನಾದ ಅಭ್ಯರ್ಥಿಯನ್ನು ಅತಿಥಿ ಎಂದು ಕರೆಯುವರು. ಇಂಥ ಅತಿಥಿಯನ್ನು ಮನೆಗೆ ಬಂದ ಸಾಕ್ಷಾತ್ ವಿಷ್ಣು ಎಂದೇ ತಿಳಿದು ಪೂಜಿಸಬೇಕು.

"ಯಸ್ತು ರಾಗಾದಿ ನಿರ್ಮುಕ್ತೋ ಹ್ಯನುತಾಪಸಮನ್ವಿತಃ
ಸರ್ವಭೂತದಯಾಯುಕ್ತೋ ವಿಷ್ಣು ಸ್ಮರಣ ತತ್ಪರಃ ॥

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ವಿಮುಕ್ತ ಏವ ಪಾಪೇಭ್ಯೋ ಜ್ಞೇಯೋ ವಿಷ್ಣುಪರೋ ಯತಃ ॥

ಯಾವನು ರಾಗದ್ವೇಷಾದಿಗಳನ್ನು ಬಿಟ್ಟು ಎಲ್ಲ ಪ್ರಾಣಿಗಳ ಮೇಲೆ ದಯಾ ಯುಕ್ತನಾಗಿ ಶ್ರೀ ಹರಿಯ ಸ್ಮರಣೆಯಲ್ಲಿಯೇ ಆಸಕ್ತನಾಗಿರುವನೋ ಮತ್ತು ತನ್ನಿಂದ ಆಕಸ್ಮಾತ್ತಾಗಿ ಆದ ಪಾಪಗಳಿಗೆ ಪಶ್ಚಾತ್ತಾಪ ಪಟ್ಟು ಇನ್ನೆಂದೂ ಮಾಡುವದಿಲ್ಲವೆಂದು ಸಂಕಲ್ಪಿಸಿ ವಿಷ್ಣು ಧ್ಯಾನ

ಮಾಡುತ್ತಿರುವನೋ ಅವನು ಎಂಥ ಮಹಾಪಾತಕವನ್ನು ಮಾಡಿದ್ದರೂ ಮುಕ್ತನೇ ಸರಿ. ವಿಷ್ಣು ಭಕ್ತರಿಗೆ ಪಾಪವಿಲ್ಲ.

**"ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ ।**
**ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್**

ಮಾಡಿದ ಕರ್ಮವು ಭೋಗಿಸದೇ ಎಂದಿಗೂ ಸವೆಯಲಾರದು. ಅದನ್ನು ಅನುಭವಿಸಿಯೇ ತೀರಬೇಕು. ಒಳ್ಳೆಯದೇ ಇರಲಿ, ಕೆಟ್ಟದೇ ಇರಲಿ, ತಾ ಮಾಡಿದ ಕರ್ಮವನ್ನು ಅವಶ್ಯವಾಗಿ ತಾನೇ ಅನುಭವಿಸಲೇಬೇಕು.

**"ದುರ್ಲಭಂ ಮಾನುಷಂ ಜನ್ಮ ಪ್ರಾರ್ಥ್ಯತೇ ತ್ರಿದಶೈರಪಿ**
**ತಲ್ಲಬ್ಧ್ವಾ ಪರಲೋಕಾರ್ಥಂ ಯತ್ನಂ ಕುರ್ಯಾದ್ವಿಲಕ್ಷಣಃ ॥**

ಮನುಷ್ಯಜನ್ಮವು ಅತ್ಯಂತ ದುರ್ಲಭವಾಗಿದೆ. ದೇವತೆಗಳೂ ಕೂಡ ಇಂಥ ಮನಷ್ಯಜನ್ಮವನ್ನು ಬಯಸಿಬೇಡಿಪಡೆಯುತ್ತಾರೆ. ಇಂಥಅಪರೂಪವಾದಮಾನವಜನ್ಮವನ್ನು ಪಡೆದ ಬಳಿಕ ಬುದ್ಧಿವಂತನಾದ ಮನುಷ್ಯನು ಪರಲೋಕಹಿತಕ್ಕಾಗಿ ಪ್ರಯತ್ನಿಸಬೇಕು.

**"ಜ್ಞಾನ ಶೂನ್ಯಾ ನರಾ ಯೇ ತು ಪಶವಃ ಪರಿಕೀರ್ತಿತಾಃ ॥**
**ತಸ್ಮಾತ್ ಸಂಸಾರ ಮೋಕ್ಷಾಯ ಪರಂ ಜ್ಞಾನಂ ಸಮಭ್ಯಸೇತ್ ॥**

ಜ್ಞಾನ ಶೂನ್ಯರಾದ ಮಾನವರೆಂದರೆ ಪಶುಗಳೇ ಸರಿ. ಆದುದರಿಂದ ಸಂಸಾರದಿಂದ ಪಾರಾಗಿ ಮೋಕ್ಷವನ್ನು ಪಡೆಯಬೇಕಾದರೆ ಉತ್ತಮವಾದ ಜ್ಞಾನವನ್ನೇ ಅಭ್ಯಾಸ ಪೂರ್ವಕವಾಗಿ ಪಡೆಯಬೇಕು.

**"ಧಿಯಾ ಯದಕ್ಷರ ಶ್ರೇಣ್ಯಾಂ ತತ್ತದರ್ಥ ವಿಚಾರಣಮ್**
**ಸ ಜಪೋ ಮಾನಸಃ ಪ್ರೋಕ್ತೋ ಯೋಗ ಸಿದ್ಧಿ ಪ್ರದಾಯಕಃ ॥**

ಜಪ ಮಾಡುವ ಮಂತ್ರದಲ್ಲಿ ಇರುವ ಅಕ್ಷರಗಳ ಅರ್ಥವನ್ನು ಅನುಸಂಧಾನಕ್ಕೆ ತಂದುಕೊಂಡುಅದರಿಂದಪ್ರತಿಪಾದ್ಯವಾದಭಗವಂತನಗುಣಗಳನ್ನುಧ್ಯಾನಿಸುವದೇಮಾನಸ ಜಪಎನಿಸುವದು. ಇಂಥಮಾನಸಜಪವುಯೋಗಸಿದ್ಧಿಯನ್ನುತಂದುಕೊಡುವದು.

**"ಧ್ಯಾನಾತ್ಪಾಪಾನಿ ನಶ್ಯಂತಿ ಧ್ಯಾನಾತ್ ಮೋಕ್ಷಂ ಚ ವಿಂದತಿ**
**ಧ್ಯಾನಾತ್ ಪ್ರಸೀದತಿ ಹರಿ ರ್ಧ್ಯಾನಂ ಸರ್ವಾರ್ಥಸಾಧನಮ್ ॥**

ಶ್ರೀ ಹರಿಯ ಧ್ಯಾನದಿಂದ ಪಾಪಗಳೆಲ್ಲವೂ ನಾಶಹೊಂದುತ್ತವೆ. ಧ್ಯಾನದಿಂದ ಶ್ರೀಹರಿಯು ಪ್ರಸನ್ನನಾಗುತ್ತಾನೆ. ಹರಿ ಪ್ರಸಾದದಿಂದ ಮೋಕ್ಷವು ದೊರಕುತ್ತದೆ. ಹೀಗೆ ಧ್ಯಾನದಿಂದ ಸರ್ವಾರ್ಥಗಳೂ ಸಿದ್ಧಿಸುತ್ತವೆ.

**"ಅಹೋ ಚಿತ್ರಮಹೋ ಚಿತ್ರಂ ಅಹೋ ಚಿತ್ರಮಿದಂ ದ್ವಿಜ ।**
**ಹರಿನಾಮ್ನಿ ಸ್ಥಿತೇ ಲೋಕಃ ಸಂಸಾರೇ ಪರಿವರ್ತತೇ ॥**

ಅಹೋ! ಇದು ಆಶ್ಚರ್ಯ, ಅತ್ಯಾಶ್ಚರ್ಯ, ಅತ್ಯಂತ ಆಶ್ಚರ್ಯ, ಮೋಕ್ಷವನ್ನು ಕೊಡುವ ಹರಿಯನಾಮವುಸುಲಭವಾಗಿದ್ದರೂಮಾನವರುಅದರಭಜನೆಮಾಡಿಮುಕ್ತರಾಗದೆಇನ್ನೂ ಸಂಸಾರದಲ್ಲಿಯೇಒದ್ದಾಡುತ್ತಿದ್ದಾರೆ. ನಿಜವಾಗಿಯೂಇದುಅತ್ಯಾಶ್ಚರ್ಯ.

**"ಕಾಮ ಮೂಲ ಮಿದಂ ಜನ್ಮ ಕಾಮಃ ಪಾಪಸ್ಯ ಕಾರಣಮ್**
**ಯಶಃ ಕ್ಷಯಕರಃ ಕಾಮಃ ತಸ್ಮಾತ್ತಂ ಪರಿವರ್ಜಯೇತ್ ॥**

ಮನುಷ್ಯನು ಹುಟ್ಟಿದ್ದೇ ಕಾಮದಿಂದ. ಎಲ್ಲ ಪಾಪಗಳಿಗೂ ಕಾಮವೇ ಕಾರಣ. ಈ ಕಾಮದಿಂದ ಕೀರ್ತಿಯು ಹಾಳಾಗುತ್ತದೆ. ಆದುದರಿಂದ ಕಾಮವನ್ನು ಬಿಟ್ಟು ಬಿಡಬೇಕು.

**"ಸಮಸ್ತ ದುಃಖ ಜಾಲಾನಾಂ ಮಾತ್ಸರ್ಯಂ ಕಾರಣಂ ಸ್ಮೃತಮ್ ।**
**ನರಕಾಣಾಂ ಸಾಧನಂ ಚ ತಸ್ಮಾತ್ತದಪಿ ಸಂತ್ಯಜೇತ್ ॥**

ಎಲ್ಲ ವಿಧವಾದ ದುಃಖಗಳಿಗೂ ಅಸೂಯೆ ಅಥವಾ ಹೊಟ್ಟೆ ಕಿಚ್ಚು ಕಾರಣ. ಎಂದು ಬಲ್ಲವರು ಹೇಳುತ್ತಾರೆ. ಇಂಥ ಮತ್ಸರವು ನರಕಕ್ಕೂ ಸಾಧನವಾಗಿದೆ. ಆದುದರಿಂದ ಈ ಅಸೂಯೆ ಎಂಬ ದುರ್ಗುಣವನ್ನು ದೂರದಿಂಲೇ ತ್ಯಜಿಸಬೇಕು.

**"ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

ಅಚ್ಯುತ, ಅನಂತ, ಗೋವಿಂದ ಎಂಬ ಈ ಮೂರು ವಿಷ್ಣುವಿನ ನಾಮಗಳ ಉಚ್ಚಾರಣೆಯು ದಿವ್ಯ ಔಷಧ. ಇದರಿಂದ ಎಲ್ಲ ರೋಗಗಳೂ ಗುಣವಾಗುತ್ತವೆ. ಇದು ಸತ್ಯ, ಸತ್ಯ.

**"ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।**
**ಚಕ್ಷುಃ ಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತರುಣಾಯತೇ ॥**

ಮನುಷ್ಯನು ಮುಪ್ಪಾದಂತೆ ಕೂದಲು ಬೆಳ್ಳಗಾಗುತ್ತವೆ. ಹಲ್ಲು ಸಡಿಲಾಗುತ್ತವೆ. ಕಣ್ಣು ಕುರುಡಾಗುವುದು. ಕಿವಿ ಕಿವುಡಾಗುವದು. ಮುಪ್ಪಿನಲ್ಲಿ ಎಲ್ಲ ಇಂದ್ರಿಯಗಳೂ ಶಿಥಿಲವಾಗಿ ಮುಪ್ಪು ಹಿಡಿಯುತ್ತವೆ. ಆದರೆ ಆಶೆ ಮಾತ್ರ ಹರೆಯದಾಗುತ್ತ ಹೋಗುತ್ತದೆ.

**"ಆಶಾ ಭಯಂಕರೀ ಪುಂಸಾಮಜೇಯಾರಾತಿಸನ್ನಿಭಾ ।**
**ತಸ್ಮಾದಾಶಾಂ ತ್ಯಜೇತ್ಪ್ರಾಜ್ಞಃ ಯದೀಚ್ಛೇತ್ ಶಾಶ್ವತಂ ಸುಖಮ್ ॥**

ಆಶೆ ಎನ್ನುವದು ಮನುಷ್ಯರಿಗೆ ಎಂದಿಗೂ ಗೆಲ್ಲಲು ಶಕ್ಯವಿಲ್ಲದ ಒಂದು ಭಯಂಕರ ವೈರಿ ಇದ್ದಂತೆ. ಆದುದರಿಂದ ಬುದ್ಧಿವಂತನಾದ ಮಾನವನು ಶಾಶ್ವತವಾದ ಸುಖವನ್ನು ಬಯಸುವದಾದರೆ ಆಶೆಯನ್ನು ಬಿಟ್ಟು ಬಿಡಬೇಕು.

**"ಬಲಂ ತೇಜೋ ಯಶಶ್ಚೈವ ವಿದ್ಯಾಂ ಮಾನಂ ಚ ವೃದ್ಧತಾಮ್ ।**
**ತಥೈವ ಸತ್ಕುಲೇ ಜನ್ಮ ಆಶಾ ಹಂತ್ಯತಿ ವೇಗತಃ ॥**

ಮನುಷ್ಯರ ಬಲ ತೇಜಸ್ಸು ಕೀರ್ತಿ ವಿದ್ಯೆ ಗೌರವ ವಯಸ್ಸು ಕುಲೀನತೆ ಮುಂತಾದ ಎಲ್ಲ ಸದ್ಗುಣಗಳನ್ನೂ ಆಶೆಯು ಅತ್ಯಂತ ವೇಗದಿಂದ ನಾಶ ಮಾಡಿಬಿಡುತ್ತದೆ.

**"ಹರಿ ಪೂಜಾ ವಿಹೀನಾಶ್ಚ ವೇದ ವಿದ್ವೇಷಿಣಸ್ತಥಾ ।**
**ಗೋ ದ್ವಿಜ ದ್ವೇಷ ನಿರತಾ ರಾಕ್ಷಸಾಃ ಪರಿಕೀರ್ತಿತಾಃ ॥**

ಹರಿಯ ಪೂಜೆ ಮಾಡದೆ ವೇದ ಶಾಸ್ತ್ರಗಳನ್ನುದ್ವೇಷ ಮಾಡುತ್ತ ಹಸು ಹಾಗೂ ಜ್ಞಾನಿಗಳ ದ್ವೇಷ ಮಾಡುವ ದುರ್ಜನರಿಗೆ ರಾಕ್ಷಸರು ಎನ್ನುತ್ತಾರೆ. "ಸಂಗಾತ್ ಸಹವಾಸಗಳಿಂದಾಗಲಿ, ಭಕ್ತಿ ಭಯ ಆಶೆ ಅಜ್ಞಾನ ಯಾವದೇ ಕಾರಣದಿಂದಾಗಲಿ ವಿಷ್ಣುವಿನ ಉಪಾಸನೆಯನ್ನು ಮಾಡಬೇಕು. ಅದರಿಂದ ನರರಿಗೆ ಅಕ್ಷಯ ಫಲವು ದೊರಕುತ್ತದೆ.

"ಮೃಗಮೀನ ಸಜ್ಜನಾನಾಂ ತೃಣ ಜಲ ಸಂತೋಷ ವಿಹಿತ ವೃತ್ತೀನಾಮ್
ಲುಬ್ಧಕ ಧೀವರ ಪಿಶುನಾ ನಿಷ್ಕಾರಣ ವೈರಿಣೋ ಭವಂತಿ ॥

ಚಿಗರೆ ಮೀನ ಮತ್ತು ಸಜ್ಜನರು ಯಾರ ತಂಟೆಗೂ ಬರುವುದಿಲ್ಲ. ಚಿಗರೆಗಳು ಬರಿ ಹುಲ್ಲು ತಿಂದು ಬದುಕುತ್ತವೆ. ಮೀನುಗಳು ನೀರನ್ನು ಸ್ವಚ್ಛ ಮಾಡುತ್ತ ಜೀವಿಸುತ್ತವೆ. ಸಜ್ಜನರು ಯದೃಚ್ಛಾಲಾಭ ಸಂತುಷ್ಟರಾಗಿ ಇರುತ್ತಾರೆ. ಇಷ್ಟಾದರೂ ಜಿಂಕೆಗಳಿಗೆ ಬೇಡರೂ, ಮೀನಗಳಿಗೆ ಮೀನುಗಾರರೂ, ಸಜ್ಜನರಿಗೆ ದುಷ್ಟರೂ ಅಕಾರಣ ವೈರಿಗಳಾಗಿ ಅವರ ನಾಶಕ್ಕೆ ಪ್ರಯತ್ನಿಸುತ್ತಲಿರುತ್ತಾರೆ.

"ಅಕಾಲ ಮೃತ್ಯು ಶಮನಂ ಸರ್ವವ್ಯಾಧಿ ವಿನಾಶನಂ
ಸರ್ವ ದುಃಖೋಪಶಮನಂ ಹರಿ ಪಾದೋದಕಂ ಸ್ಮೃತಮ್ ॥

ಹರಿಯ ಪಾದೋದಕ ಅರ್ಥಾತ್ ತೀರ್ಥವು ಅಕಾಲ ಮರಣವನ್ನು ತಪ್ಪಿಸುತ್ತದೆ. ಎಲ್ಲ ರೋಗಗಳನ್ನು ಪರಿಹರಿಸುತ್ತದೆ. ಸರ್ವ ದುಃಖಗಳನ್ನು ಉಪಶಮನಗೊಳಿಸುತ್ತದೆ.

"ಹರೇ ರ್ನಾಮೈವ ನಾಮೈವ ನಾಮೈವ ಮಮ ಜೀವನಂ ।
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥

ಹರಿಯ ನಾಮವೊಂದೇ ನನಗೆ ಜೀವನ. ಕಲಿಯುಗದಲ್ಲಿ ಬೇರೆ ಗತಿಯೇ ಇಲ್ಲ. ಸರ್ವಥಾ ಇಲ್ಲ.

"ನ್ಯೂನಾತಿರಕ್ತ ದೋಷಾಣಾಂ ಕರ್ತಾ ವೇದೋಕ್ತ ಕರ್ಮಣಾಮ್
ಹರಿಸ್ಮರಣಮೇವಾತ್ರ, ಸಂಪೂರ್ಣತ್ವ ವಿಧಾಯ ಕಮ್ ॥

ವೇದದಲ್ಲಿ ಹೇಳಿದ ಕರ್ಮಗಳಲ್ಲಿ ಏನಾದರೂ ಲೋಪದೋಷಗಳಾದರೆ ಆ ಕರ್ಮಗಳು ಅಪೂರ್ಣವಾಗಿ ಬಿಡುತ್ತವೆ. ಆದರೆ ಶ್ರೀ ಹರಿಯ ನಾಮಸ್ಮರಣೆಯನ್ನು ಮಾಡುತ್ತಲಿದ್ದರೆ ಏನೇ ಹೆಚ್ಚು ಕಡಿಮೆ ಲೋಪದೋಷವಾದರೂ ಆ ಕಾರ್ಯಗಳು ಸಾಂಗವಾಗಿ ಸಂಪೂರ್ಣವಾದ ಫಲ ಪುಣ್ಯದಾಯಕವಾಗುತ್ತವೆ.

'ಅಭಯಂ ಸರ್ವಭೂತೇಭ್ಯಃ ದತ್ವಾ ಯಶ್ಚರತೇ ಮುನಿಃ ।
ನ ತಸ್ಯ ಸರ್ವಭೂತೇಭ್ಯಃ ಭಯಮುತ್ಪದ್ಯತೇ ಕ್ವಚಿತ್ ॥

ಎಲ್ಲ ಪ್ರಾಣಿಗಳಿಗೂ ಯಾವ ಮುನಿಯು ಅಭಯವನ್ನು ಕೊಟ್ಟು ಸ್ವಯಂ ನಿರುಪದ್ರವಿಯಾಗಿ ಚಲಿಸುತ್ತಾನೋ ಅವನಿಗೆ ಯಾವ ಪ್ರಾಣಿಯಿಂದಲೂ ಎಂದೂ ಭೀತಿ ಉಂಟಾಗುವದಿಲ್ಲ.

ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ ।
ಬಂಧಸ್ಯ ವಿಷಾಯಾಸಂಗಿ ಮುಕ್ತೇರ್ನಿರ್ವಿಷಯಂ ತಥಾ ॥

ಬಂಧ ಮೋಕ್ಷ ಎರಡಕ್ಕೂ ಮನುಷ್ಯರ ಮನಸ್ಸೇ ಕಾರಣ. ಮನಸ್ಸು ವಿಷಯಗಳಲ್ಲಿ ಆಸಕ್ತವಾದರೆ ಬಂಧಕ್ಕೆ ಕಾರಣವಾಗುತ್ತದೆ. ವಿಷಯ ವಿಮುಖವಾಗಿ ಭಗವಂತನಲ್ಲಿ ಆಸಕ್ತವಾದರೆ ಅದೇ ಮನಸ್ಸು ಮೋಕ್ಷಕ್ಕೆ ಕಾರಣವಾಗುತ್ತದೆ.

**"ಶ್ವಪಚೋಽಪಿ ಮಹೀಪಾಲ ವಿಷ್ಣುಭಕ್ತೋ ದ್ವಿಜಾಧಿಕಃ**
**ವಿಷ್ಣು ಭಕ್ತಿ ವಿಹೀನಸ್ತು ದ್ವಿಜೋಽಪಿ ಶ್ವಪಚಾಧಮಃ ॥**

ಹರಿಯಲ್ಲಿ ಭಕ್ತಿಮಾಡುವ ಹೊಲೆಯನು ಕೂಡ ಅಭಕ್ತ ಬ್ರಾಹ್ಮಣನಿಗಿಂತ ಶ್ರೇಷ್ಠ. ವಿಷ್ಣು ಭಕ್ತಿಯಿಲ್ಲದ ಬ್ರಾಹ್ಮಣ ಭಕ್ತ ಹೊಲೆಯನಿಗಿಂತ ಅಧಮ.

**ಯಾವದರ್ಜಯತಿ ದ್ರವ್ಯಂ ಬಾಂಧವಾಸ್ತಾವದೇವ ಹಿ**
**ಧರ್ಮಾಧರ್ಮೌ ಸಹೈವಾಸ್ತಾಮಿಹಾಮುತ್ರ ನ ಚಾಪರಃ**

ಎಲ್ಲಿಯವರೆಗೆ ನರನು ದ್ರವ್ಯವನ್ನು ಗಳಿಸುತ್ತ ಇರುವನೊ ಅಲ್ಲಿಯವರೆಗೆ ಬಂಧು ಬಾಂಧವರು ಅವನ ಜೊತೆಗೆ ಇರುವರು. ಹಣವಿಲ್ಲದಾಗ ಯಾವ ಬಂಧುವೂ ಹತ್ತಿರ ಸುಳಿಯುವುದಿಲ್ಲ. ಇಹದಲ್ಲಿಯೂ ಪರದಲ್ಲಿಯೂ ಮನುಷ್ಯನ ಜೊತೆಗೆ ಇರುವದು ಅವನು ಮಾಡಿದ ಧರ್ಮಾಧರ್ಮಗಳು ಮಾತ್ರ.

**ಯದ್ಭಾವಿ ತದ್ಭವತ್ಯೇವ ಯನ್ನಭಾವ್ಯಂ ನ ತದ್ಭವೇತ್ ।**
**ಇತಿ ನಿಶ್ಚಿತ ಬುದ್ಧೀನಾಂ ನ ಚಿಂತಾ ಬಾಧತೇ ಕ್ವಚಿತ್ ॥**

ಆಗುವದೇನಿದೆಯೋ ಅದು ಆಗಿಯೇ ತೀರುತ್ತದೆ. ಆಗಲಾರದ್ದು ಆಗುವುದೇ ಇಲ್ಲ. ಇಷ್ಟು ಬುದ್ಧಿಯಿಂದ ನಿಶ್ಚಯಪಡಿಸಿಕೊಂಡವರಿಗೆ ಎಂದೂ ಚಿಂತೆಯು ಬಾಧಿಸುವದಿಲ್ಲ.

**"ಅರ್ಜಿತಂ ಚ ಧನಂ ಸರ್ವಂ ಭುಂಜತೇ ಬಾಂಧವಾಃ ಸದಾ**
**ಸ್ವಯಮೇಕತಮೋ ಮೂಢಃ ತತ್ಪಾಪ ಫಲಮಶ್ನುತೇ ॥**

ಪಾಪಕರ್ಮದಿಂದ ಗಳಿಸಿದ ಹಣವನ್ನೂ ಅದರಿಂದಾಗುವ ಸುಖವನ್ನೂ ಬಂಧು ಬಳಗವರೆಲ್ಲರೂ ಅನುಭವಿಸುವರು, ಆದರೆ ಆ ದುಷ್ಕರ್ಮಗಳಿಂದ ಬರುವ ಆ ಪಾಪದ ದುರಂತ ಪರಿಣಾಮವನ್ನು ಮಾತ್ರ ಆ ಪಾಪ ಮಾಡಿದ ಮೂರ್ಖ ಮಾನವನೊಬ್ಬನೇ ಅನುಭವಿಸಬೇಕು.

*ಇತಿ ನಾರದ ಮಹಾಪುರಾಣ ಸಂಪೂರ್ಣವಾಗಿದೆ*

*ಸರ್ವೇಜನಾಃ ಸುಖಿನೋ ಭವಂತು*
*ಓಂ ಶಾಂತಿಃ ಶಾಂತಿಃ ಶಾಂತಿಃ*

